ಕನಕ ಸಾಹಿತ್ಯ
ದರ್ಶನ ಸಂಪುಟ ೧

# ಕನಕಾವಲೋಕನ

(ಕನಕದಾಸರ ಜೀವನ ಮತ್ತು ಕೃತಿಗಳನ್ನು ಕುರಿತ ಲೇಖನಗಳು)



ಕನ್ನಡ ಮತ್ತು ಸಂಸ್ಕೃತಿ ಇಲಾಖೆ

## ಕನಕ ಸಾಹಿತ್ಯ ದರ್ಶನ ಸಂಪುಟ ೧

# ಕನಕಾವಲೋಕನ

## (ಕನಕದಾಸರ ಜೀವನ ಮತ್ತು ಕೃತಿಗಳನ್ನು ಕುರಿತ ಲೇಖನಗಳು)

ಸಂಪಾದಕರು
**ಡಾ॥ ದೇ. ಜವರೇಗೌಡ**

ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು – ೫೬೦ ೦೦೨

**KANAKA SAHITYA DARSHANA Vol -1** : Kanakaavalokana Reprint of A Commemoration Volume on Kanakadasa and his works; Edited by **Prof. D. Javaregowda;** Published by **Dr. Manu Baligar**, Commissioner, Department of Kannada and Culture, Kannada Bhavan, J.C.Road, Bengaluru - 560 002.



ಮುದ್ರಿತ ವರ್ಷ : ೨೦೧೨
ಪ್ರತಿಗಳು : ೧೦೦೦
ಪುಟಗಳು : [illegible] + ೧೦೨೮
ಬೆಲೆ : ರೂ. ೧೮೦/–

ರಕ್ಷಾಪುಟ ವಿನ್ಯಾಸ : **ಯು.ಟಿ. ಸುರೇಶ್**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**
ನಂ. ೬೯, ಸುಬೇದಾರ್ ಛತ್ರಂ ರೋಡ್
ಬೆಂಗಳೂರು – ೫೬೦ ೦೨೦ ದೂ : ೨೩೩೪೨೭೨೪

## ಸಂಪಾದಕ ಮಂಡಲಿ

# ಪ್ರಕಾಶಕರ ಮಾತು

ಕನಕದಾಸರು ಕವಿ ವಿಶಿಷ್ಟವಾದ ಸಹಜ ಪ್ರತಿಭೆಯಿಂದ ಉದಾರತೆಯಿಂದ, ವಸ್ತುವೈವಿಧ್ಯ ಹಾಗೂ ಛಂದೋ ವೈವಿಧ್ಯತೆಯಿಂದ, ಸಮಕಾಲೀನ ಪ್ರಜ್ಞೆಯಿಂದ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ. ಕನಕದಾಸರು ದಾಸರಲ್ಲಿ ಕವಿಗಳು ಇದೇ ಅವರ ವೈಶಿಷ್ಟ್ಯ. ಕನಕದಾಸರು ಹಲವಾರು ಭಾವಪೂರ್ಣ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಸಾಹಿತ್ಯ ರಚನೆ ಕೇವಲ ಕೀರ್ತನೆಗಳಿಗೆ ಸೀಮಿತಗೊಳ್ಳದೆ, ಮೋಹನತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯಚರಿತ್ರೆ, ನೃಸಿಂಹಸ್ತವ ಎಂಬ ಕೃತಿಗಳನ್ನೂ ರಚಿಸಿದ್ದಾರೆ. ನೃಸಿಂಹಸ್ತವ ಉಪಲಬ್ಧವಿಲ್ಲ. ತತ್ತ್ವ–ನೀತಿ ಭಕ್ತಿಗಳಿಂದ ಮುಪ್ಪುರಿಗೊಂಡ ಹರಿಭಕ್ತಿಸಾರ, ನಳದಮಯಂತಿಯರ ಹೃದಯಸ್ಪರ್ಶಿಯಾದ ಪಾತ್ರ ಚಿತ್ರಣದ ನಳಚರಿತ್ರೆ, ಜನಾದರಣೀಯವಾಗಿದೆ. ಅಂದಿನ ಸಮಾಜದಲ್ಲಿ ನೆಲಸಿದ್ದ ವರ್ಗ, ವರ್ಣದ ಅಂತರವನ್ನು ವ್ಯಂಗ್ಯವಾಗಿ, ಮಾರ್ಮಿಕವಾಗಿ ಎತ್ತಿತೋರಿಸುವ ರಾಮಧಾನ್ಯಚರಿತ್ರೆಯು ವಿನೂತನವಾಗಿದ್ದು, ಕನ್ನಡ ಕಾವ್ಯಲೋಕದಲ್ಲಿ ಅನನ್ಯ ಕೃತಿಯೆನಿಸಿದೆ. ಕನಕದಾಸರು ತಮ್ಮ ಸ್ವೋಪಜ್ಞ ಸಾಧನೆ–ಸಿದ್ಧಿಗಳಿಂದ ದಾಸ ಪರಂಪರೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ.

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ದಾಸಶ್ರೇಷ್ಠರಲ್ಲಿ ಒಬ್ಬರಾದ ಕನಕದಾಸರ ೫೦೦ನೆಯ ಜಯಂತ್ಯುತ್ಸವದ ಅಂಗವಾಗಿ ಡಾ. ದೇ. ಜವರೇಗೌಡ ಅವರ ಅಧ್ಯಕ್ಷತೆಯಲ್ಲಿ ಡಾ. ಹೆಚ್.ಜೆ. ಲಕ್ಕಪ್ಪಗೌಡ, ಡಾ. ಬರಗೂರು ರಾಮಚಂದ್ರಪ್ಪ ಮತ್ತು ಡಾ. ಸಾ.ಶಿ. ಮರುಳಯ್ಯನವರ ನ್ನೊಳಗೊಂಡ ಸಂಪಾದಕ ಮಂಡಳಿಯನ್ನು ರಚಿಸಿ, ಕನಕದಾಸರ ಸಮಗ್ರ ಸಾಹಿತ್ಯವನ್ನು ಕನಕಸಾಹಿತ್ಯ ದರ್ಶನ ಎಂಬ ಹೆಸರಿನಲ್ಲಿ ನಾಲ್ಕು ಸಂಪುಟಗಳಲ್ಲಿ ಹೊರತಂದಿತ್ತು.

ಕನಕ ಸಾಹಿತ್ಯ ದರ್ಶನದ ನಾಲ್ಕು ಸಂಪುಟಗಳು ಅಲಭ್ಯವಾಗಿದ್ದು, ಅದಕ್ಕೆ ಸಾರ್ವಜನಿಕರಿಂದ ಅಪಾರ ಬೇಡಿಕೆಯಿರುವುದರಿಂದ ಪ್ರಸಕ್ತ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಮೂರು ಸಂಪುಟಗಳ ಶೀರ್ಷಿಕೆಯಲ್ಲಿ ಅಲ್ಪ ಬದಲಾವಣೆಯೊಂದಿಗೆ ಮರುಮುದ್ರಣ ಮಾಡಲಾಗುತ್ತಿದೆ. ಮತ್ತು ಹೊಸದಾಗಿ ಪ್ರೊ॥ ಸುಧಾಕರ ಅವರು ಸಂಪಾದಿಸಿರುವ ಮೋಹನ ತರಂಗಿಣಿ ಕೃತಿಯನ್ನು ಗದ್ಯಾನುವಾದದೊಂದಿಗೆ ಪ್ರಕಟಿಸಲಾಗುತ್ತಿದೆ.

ಕನಕದಾಸರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಮರುಮುದ್ರಿಸಲು ಸಹಕರಿಸಿದ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದವರಿಗೂ, ಈ ಸಂಪುಟದ ಸಂಪಾದಕರಾದ ಡಾ. ಸಾ.ಶಿ. ಮರುಳಯ್ಯ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಸದರಿ ಸಂಪುಟಗಳನ್ನು ಹೊರತರಲು ಒಪ್ಪಿಗೆ ನೀಡಿದ ಇಲಾಖೆಯ ಕಾರ್ಯದರ್ಶಿಗಳಾದ

ಶ್ರೀ ಬಸವರಾಜು ಅವರಿಗೂ, ಈ ಸಂಪುಟಗಳನ್ನು ಹೊರತರಲು ಸಹಕರಿಸಿದ ಶ್ರೀ ಕಾ.ತ. ಚಿಕ್ಕಣ್ಣ, ಜಂಟಿ ನಿರ್ದೇಶಕರು (ಆಡಳಿತ), ಶ್ರೀ ಬಲವಂತರಾವ್ ಪಾಟೀಲ್, ಜಂಟಿ ನಿರ್ದೇಶಕರು (ಸು.ಕ.), ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ, ಕಾರ್ಯಕ್ರಮ ಅಧಿಕಾರಿ ಮತ್ತು ಪ್ರಕಟಣಾ ಶಾಖೆಯ ಸಿಬ್ಬಂದಿಯವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಸಂಪುಟಗಳನ್ನು ಅಂದವಾಗಿ ಮುದ್ರಿಸಿಕೊಟ್ಟ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರು ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು.

ಕನ್ನಡ ಹರಿದಾಸ ಪರಂಪರೆಯಲ್ಲಿ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವವುಳ್ಳ ಕನಕದಾಸರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಕನ್ನಡಿಗರಿಗೆ ಒದಗಿಸುವುದು ನಮ್ಮ ಆಶಯವಾಗಿದೆ. ಈ ಸಂಪುಟಗಳ ಪ್ರಯೋಜನವನ್ನು ಓದುಗರು ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

೧೮.೦೧.೨೦೧೨

ಡಾ. ಮನು ಬಳಿಗಾರ್
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಮುನ್ನುಡಿ

ಪುರಂದರದಾಸರ ಪಂಚ ಶತಮಾನೋತ್ಸವ ಜರುಗಿದ ಐದಾರು ವರ್ಷಗಳ ಅಂತರದಲ್ಲಿಯೇ ಯುಗಪುರುಷ ಕನಕದಾಸರ ಐನೂರನೆಯ ವರ್ಷದ ಉತ್ಸವವನ್ನಾಚರಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡ ಸರ್ಕಾರದ ಧೋರಣೆ ಸ್ವಾಗತಾರ್ಹವಾದದ್ದು. ಕನಕದಾಸರನ್ನೂ, ಅವರ ಸಾಹಿತ್ಯವನ್ನೂ ಕುರಿತ ಪ್ರಶಸ್ತಿ ಗ್ರಂಥವನ್ನು ಪ್ರಕಟಿಸುವ ಯೋಜನೆ ಆ ಕಾರ್ಯಕ್ರಮದ ಒಂದು ಭಾಗವಾಗಿದೆ. ಮೂರುವರ್ಷಗಳ ಅವಧಿಯೊಳಗೆ ಸಾಹಿತ್ಯಕೃತಿಗಳನ್ನು ಹಾಗೂ ಪ್ರಶಸ್ತಿಗ್ರಂಥವನ್ನು ಸಂಪಾದಿಸಿ ಹೊರತರುವ ಹೊಣೆಯನ್ನು ಸರ್ಕಾರ ೨೮-೪-೧೯೮೯ನೆಯ ದಿನಾಂಕದ ತನ್ನ ನಿರೂಪದ ಮೂಲಕ ಕೆಳಗಿನ ಸಂಪಾದಕ ಮಂಡಲಿಗೆ ವಹಿಸಿತು.

೧. ಡಾ. ದೇ. ಜವರೇಗೌಡ, ಅಧ್ಯಕ್ಷರು
೨. ಡಾ. ಹೆಚ್. ಜೆ. ಲಕ್ಕಪ್ಪಗೌಡ, ಸದಸ್ಯರು
೩. ಶ್ರೀ ಬರಗೂರು ರಾಮಚಂದ್ರಪ್ಪ, ಸದಸ್ಯರು
೪. ಡಾ. ಸಾ. ಶಿ. ಮರುಳಯ್ಯ, ಸದಸ್ಯರು
೫. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಸದಸ್ಯ-ಕಾರ್ಯದರ್ಶಿ.

೬-೬-೧೯೮೯ರಂದು ಮಂಡಲಿಯ ಪ್ರಥಮ ಸಭೆಯು, ಸಂಪಾದನಾ ವಿಧಾನವನ್ನು ನಿರ್ಧರಿಸಿತು. ಆ ಪ್ರಕಾರ ನಿಶ್ಚಿತ ವೇಳೆಯೊಳಗೆ 'ಕನಕ ಸಾಹಿತ್ಯ ದರ್ಶನ' ಗ್ರಂಥ ಹೊರಬರುತ್ತಿರುವುದು ಸಂತೋಷದ ಸಂಗತಿ.

ಯಾರೇ ಸಂಪಾದಕರಿರಲಿ, ಅವನು ಎದುರಿಸಬೇಕಾದ ಕೆಲವು ಸಮಸ್ಯೆಗಳನ್ನು ಮುಂದಿನವರ ಅವಗಾಹನೆಗಾಗಿ ಇಲ್ಲಿ ನಿರೂಪಿಸಿದರೆ ಅಪ್ರಸ್ತುತವಾಗಲಾರದೆಂದು ಭಾವಿಸಿದ್ದೇನೆ. ವಿಷಯ ಹಾಗೂ ಲೇಖಕರ ಆಯ್ಕೆ ಮತ್ತು ಹೊಂದಾಣಿಕೆ ಮೊದಲ ಸಮಸ್ಯೆ. ಈ ಅಂಶದಲ್ಲಿ ಮಂಡಲಿಯ ಒಮ್ಮತ ಅಗತ್ಯವಾದ್ದರಿಂದ, ಪ್ರಸಕ್ತ ವಿಷಯದಲ್ಲಿ ಆಸಕ್ತಿ ಇಲ್ಲದ ಕೆಲವು ಹೆಸರುಗಳು ಪಟ್ಟಿಯಲ್ಲಿ ನುಸುಳಿಕೊಳ್ಳುವುದು ಸಹಜ. ಪ್ರತ್ಯುತ್ತರಕ್ಕೆಂದು ಸ್ಟಾಂಪು ಹಚ್ಚಿದ ಲಕೋಟೆ ಕಳಿಸಿದರೂ, ಅದರ ವಾಪಸಾತಿಗಾಗಿ ತಿಂಗಳುಗಟ್ಟಳೆ ಕಾಯಬೇಕಾಗುತ್ತದೆ ; ಕೆಲವರಂತು ಉತ್ತರಿಸುವುದೇ ಇಲ್ಲ. ಲೇಖನ ಬರೆಯಲೊಪ್ಪಿಕೊಂಡವರು 'ಅನಾನುಕೂಲ'ಗಳ ದೆಸೆಯಿಂದಾಗಿ ಹೆಚ್ಚು ಹೆಚ್ಚು ಸಮಯ ಕೇಳುತ್ತಾರೆ. ಮೂರ್ನಾಲ್ಕು ತಿಂಗಳಾದನಂತರ ತಮಗೆ ಪುರಸೊತ್ತಾಗಲಿಲ್ಲವೆಂದು ಕೆಲವರು ಬರೆದು ಕೈತೊಳೆದುಕೊಳ್ಳುತ್ತಾರೆ. ಅವರನ್ನು ಕೈಬಿಟ್ಟು, ಬೇರೆಯವರಿಗೆ ಪತ್ರ ಬರೆದಾಗಲೂ ಇದೇ ಕ್ರಮ ಪುನರಾವೃತ್ತವಾಗುತ್ತದೆ.

ಆ ಬೇರೆಯವರಲ್ಲಿ ಕೆಲವರು ಉತ್ತರಿಸುತ್ತಾರೆ, ಕೆಲವರು ಉತ್ತರಿಸುವುದಿಲ್ಲ. ಲೇಖನಕ್ಕೆ ಬೇಕಾದ ಮಾಹಿತಿಯನ್ನು ಸಂಗ್ರಹಿಸಿದ್ದಾಯಿತು. ಬರೆಯುವುದೊಂದೇ ಉಳಿದಿರುವ ಕೆಲಸವೆಂದು ಅಲ್ಪಮಂದಿ ಲೇಖಕರು ಬರೆದು ಮೂರುತಿಂಗಳಾದರೂ ಲೇಖನ ಹೊರಬರುವ ಸೂಚನೆ ಕಾಣುವುದಿಲ್ಲ. (ಪ್ರಾಯಶಃ ಕೆಲಸಕ್ಕಡ್ಡಿಯಾಗುವುದೇ ಆ ಹಿಡಿಮಂದಿಯ ಉದ್ದೇಶವಾಗಿರುವಂತೆ ತೋರುತ್ತದೆ.)

ಲೇಖನಗಳು ಕೈಸೇರಿದ ನಂತರ ಅವುಗಳನ್ನು ಸಂಪಾದಿಸುವ ಕಾರ್ಯ ಮತ್ತೂ ಜಟಿಲವಾದುದು. ಕೆಲವು ವಿಷಯಕ್ಕೆ ತಕ್ಕಂತೆ ಸಿದ್ಧಗೊಂಡ ಲೇಖನಗಳ ಜತೆಗೆ, ಅತಿವ್ಯಾಪ್ತಿ ಅಪೂರ್ಣತೆ ಅಸಮಗ್ರತೆಯಿಂದ ಕೂಡಿದ ಲೇಖನಗಳೂ ಸೇರಿಕೊಳ್ಳುತ್ತವೆ. ಎರಡನೆಯ ಗುಂಪಿಗೆ ಸೇರಿದ ಲೇಖನಗಳನ್ನು ಪುನರಾವರ್ತನೆಗಾಗಿ ಹಿಂದಿರುಗಿಸಿದರೆ, ಕೋಪಿಸಿಕೊಳ್ಳುವ ಮಿತ್ರರೂ ಉಂಟು. ಕೆಲವರು ಗೊಣಗಿಕೊಂಡು, ಕೆಲವರು ಹೃತ್ಪೂರ್ವಕವಾಗಿ ತಮ್ಮ ಲೇಖನಗಳನ್ನು ತಿದ್ದಿ, ತೀಡಿ ಹಿಂದಿರುಗಿಸುತ್ತಾರೆ; ಕೆಲವರು ಪುನರಾವರ್ತನೆ ಮಾಡದೆಯೇ ಹಳೆಯದನ್ನೆ ನಕಲುಮಾಡಿ ಕಳಿಸುತ್ತಾರೆ; ಪುನರಾವರ್ತನೆ ಸಾಧ್ಯವಿಲ್ಲ, ಅಗತ್ಯವೂ ಇಲ್ಲ, ತಾವು ಬರೆದದ್ದನ್ನೇ ಅಚ್ಚುಮಾಡಿಸಿರೆಂದು ಅಥವಾ ಹಿಂದಿರುಗಿಸಿರೆಂದು ಬರೆದವರೂ ಇದ್ದಾರೆ ; ಏನೂ ಬರೆಯದೆ, ಉತ್ತರವನ್ನು ಸಹ ಕೊಡದಿರುವವರೂ ಇದ್ದಾರೆ.

ಕೊನೆಗುಳಿಯುವುದು, ಕೆಲವು ಪ್ರಬಂಧಗಳಲ್ಲಿ ನಿರ್ಲಕ್ಷ್ಯದಿಂದಲೋ, ಅಜ್ಞಾನದಿಂದಲೋ ಉಳಿದಿರುವ ಕಾಗುಣಿತದ ತಪ್ಪುಗಳನ್ನು ತಿದ್ದುವ, ಅನಾವಶ್ಯಕವಾದ, ಪುನರಾವರ್ತನೆಯಾಗಬಹುದಾದ ಸಂಗತಿಗಳಿಗೆ ಕತ್ತರಿ ಪ್ರಯೋಗಮಾಡುವ ಕೆಲಸ. ಕತ್ತರಿ ಪ್ರಯೋಗ ಮಾಡಿದರೂ, ಪುನರಾವರ್ತನೆಗಳು ಇಂಥದೊಂದು ಸಂಕಲನ ಗ್ರಂಥದಲ್ಲಿ ಅನಿವಾರ್ಯವೆಂಬುದನ್ನು ವಿದ್ವಜ್ಜನರು ಬಲ್ಲರು. ಎಷ್ಟು ತಿಣುಕಿದರೂ ಕೈಬರಹದ ಮೋಡಿಯಿಂದಾಗಿ ಸಂಪಾದಕ ಗುರುತಿಸಲಾಗದ ಅಕ್ಷರಗಳು ಉಳಿದೇ ಉಳಿಯುತ್ತವೆ, ಗ್ರಂಥಗಳಿಂದ ಉದ್ಧೃತಗೊಳ್ಳುವ ಭಾಗಗಳಲ್ಲಿಯೂ ಅನೇಕ ತಪ್ಪುಗಳುಳಿಯುತ್ತವೆ. ಕ್ಷಿಪ್ರವಾಗಿ ಗ್ರಂಥ ಮುದ್ರಣ ಮಾಡಬೇಕಾದ ಸಂದರ್ಭದಲ್ಲಿ ಎಷ್ಟು ಎಚ್ಚರಿಕೆ ವಹಿಸಿದರು ಈ ಕೆಲವು ತಪ್ಪುಗಳು ನಿಂತು ಬಿಡುವ ಸಂಭವವುಂಟು. ತಪ್ಪುಗಳೇನಾದರೂ ನುಸುಳಿದ್ದರೆ ಲೇಖಕ, ಸಂಪಾದಕ, ಕರಡು ತಿದ್ದುಗಾರ ಮತ್ತು ಮುದ್ರಕರೆಲ್ಲರೂ ಹೊಣೆಗಾರರೆಂದು ಈ ಸಂದರ್ಭದಲ್ಲಿ ಹೇಳಬೇಕಾಗಿದೆ.

ಲೇಖನಗಳನ್ನು ಸಂಪಾದಿಸಿದ ಬಗ್ಗೆ ಒಂದೆರಡು ಮಾತು ಅತ್ಯವಶ್ಯ. ಸಮಿತಿಯ ಅಧ್ಯಕ್ಷರು ಲೇಖನಗಳನ್ನೊಮ್ಮೆ ಓದಿ, ತಮ್ಮ ಅಭಿಪ್ರಾಯದೊಡನೆ ಸಂಪಾದಕ ಮಂಡಲಿಯ ಮುಂದಿಡುತ್ತಾರೆ. ಅವರು ಅಧ್ಯಕ್ಷರಿಗೆ ಪೂರ್ಣ ಒಪ್ಪಿಗೆಯಾಗಿರುವ ಲೇಖನಗಳ ಮೇಲೆ ಕಣ್ಣಾಡಿಸಿ, ತಮ್ಮ ಸಮ್ಮತಿಯನ್ನು ಸೂಚಿಸುತ್ತಾರೆ. ಅಧ್ಯಕ್ಷರಿಗೆ ಪೂರ್ಣ ಒಪ್ಪಿಗೆಯಾಗದ ಪ್ರಬಂಧಗಳನ್ನು ಸದಸ್ಯರು ಮನೆಗೆ ಕೊಂಡೊಯ್ದು ಓದಿ, ಟಿಪ್ಪಣಿ ಮಾಡಿಕೊಂಡು ಬರುತ್ತಾರೆ. ಆ ಟಿಪ್ಪಣಿಗಳ ಹಿನ್ನೆಲೆಯಲ್ಲಿ ಅವುಗಳನ್ನು ಸಭೆಯಲ್ಲಿ ಪುನರ್ವಿಮರ್ಶಿಸಿ, ಅನಿವಾರ್ಯವೆಂದು ತೋರಿದಾಗ ಮಾತ್ರ,

ಪುನರಾವರ್ತನೆಗೆಂದು ಕೆಲವನ್ನು ಲೇಖಕರಿಗೆ ಹಿಂದಿರುಗಿಸಿರುವುದುಂಟು. ಹೀಗೆ ಹಿಂದಿರುಗಿಸುವಾಗ ಮಂಡಲಿಯ ಸದಸ್ಯರು ಬುದ್ಧಿವಂತರೆಂಬ ಭಾವನೆಯಾಗಲಿ, ಲೇಖಕರ ವಿದ್ವತ್ತಿನ ಬಗ್ಗೆ ಸಂಶಯವಾಗಲಿ ಇಲ್ಲ. ಮಂಡಲಿ ರೂಪಿಸಿಕೊಂಡ ಚೌಕಟ್ಟಿಗೆ ಹೊಂದಿಕೊಳ್ಳುವಂತೆ, ಒಟ್ಟು ಗ್ರಂಥದ ಹಿನ್ನೆಲೆಯಲ್ಲಿ ಸಾಧ್ಯವಾದಷ್ಟು ಸಮಗ್ರತೆಯನ್ನು ಸಾಧಿಸುವ ದೃಷ್ಟಿಯಿಂದ ಲೇಖನಗಳನ್ನು ಪುನರ್ವಿಮರ್ಶಿಸುವಂತೆ ಲೇಖಕರಿಗೆ ಕಳಿಸಿಕೊಡಲಾಗುತ್ತದೆ. ಹೀಗಿರುವಾಗ ಒಬ್ಬರು ಮಿತ್ರರು ಬರೆದರು : 'ನಾನು ಹಲವು ವರ್ಷಗಳಿಂದ ಅಧ್ಯಾಪನ ವೃತ್ತಿ ಕೈಗೊಂಡು. ಸಾಹಿತ್ಯಕ್ಷೇತ್ರದಲ್ಲಿ ಸಾಕಷ್ಟು ಕೃಷಿಮಾಡಿ, ವಿದ್ವಾಂಸರ ಮೆಚ್ಚುಗೆ ಪಡೆದಿದ್ದೇನೆ. ಪ್ರಸ್ತುತ ಲೇಖನವನ್ನು ವಿದ್ವಾಂಸರು ಪ್ರಶಂಸಿಸಿದ್ದಾರೆ. ನಾನು ತಿದ್ದುಪಡಿ ಮಾಡಬೇಕಾದದ್ದೇನೂ ಇಲ್ಲ' ಎಂದು. 'ಲೇಖನಗಳನ್ನು ಬಿಡಿಬಿಡಿಯಾಗಿ ನೋಡಿದಾಗ ಅವು ಸ್ವಯಂಪೂರ್ಣವಾಗಿ, ನ್ಯೂನತೆಗಳಿಂದ ಮುಕ್ತವಾಗಿ ತೋರುತ್ತವೆ ; ಆದರೆ ಇಡೀ ಗ್ರಂಥದ ಹಿನ್ನೆಲೆಯಲ್ಲಿ ನೋಡಿದಾಗ ಕೆಲವು ಅರೆಕೊರೆಗಳು ಕಾಣುತ್ತವೆ ; ದೋಷ ಶೋಧವಾಗಲಿ ಖಂಡನೆಯಾಗಲಿ ಸಮಿತಿಯ ಉದ್ದೇಶವಲ್ಲ. ಲೇಖಕರ ವಿದ್ವತ್ತನ್ನು ಅಭಿರುಚಿಯನ್ನು ಅನುಭವವನ್ನು ಗಮನದಲ್ಲಿರಿಸಿಕೊಂಡೇ ಸಮಿತಿ ಅವರನ್ನು ಆಯ್ಕೆ ಮಾಡಿದೆ. ಬಿಟ್ಟು ಹೋಗಿರುವ ಅಂಶಗಳನ್ನು ಸೇರಿಸಬೇಕೆಂಬುದು ಸಮಿತಿಯ ಅಭಿಪ್ರಾಯ. ವಿಷಯ ಪ್ರತಿಪಾದನೆಯ ಬಗ್ಗೆ. ವಾಕ್ಯರಚನೆಯ ಬಗ್ಗೆ, ಅಭಿಪ್ರಾಯ ಸಮರ್ಥನೆಯ ಬಗ್ಗೆ ಸಮಿತಿ ತಲೆಹಾಕುವುದಿಲ್ಲ, ನಿಮ್ಮ ವಿದ್ವತ್ತು ಸರಿಯಾಗಿ ಪ್ರಕಾಶಕ್ಕೆ ಬರಲೆಂದೇ ಈ ಕ್ರಮಕೈಗೊಂಡಿದೆ ಎಂದವರಿಗೆ ಸಮಿತಿಯ ಅಧ್ಯಕ್ಷರು ಪತ್ರ ಬರೆದಾಗ, ಕೆಲವರಿಗೆ ಸಮಾಧಾನವಾಗಿದೆಯೆಂದು ಅವರು ಬರೆದ ಉತ್ತರಗಳಿಂದ ಸ್ಪಷ್ಟವಾಗಿದೆ. ಅವರಿಗೆ ತೊಂದರೆಯಾದದ್ದಕ್ಕಾಗಿ ನಾನು ನನ್ನ ಮತ್ತು ಮಂಡಲಿಯು ಪರವಾಗಿ ಕ್ಷಮೆಯಾಚಿಸುತ್ತೇನೆ.

ಸಮಿತಿ ಯಾವೊಂದು ಲೇಖನವನ್ನು ತಿರಸ್ಕರಿಸಿಲ್ಲ. ಲೇಖಕರು ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಅವರೇ ಜವಾಬ್ದಾರರು. ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡಿದರೂ, ಹಸ್ತಪ್ರತಿಗಳಲ್ಲಿರುವ ದೋಷಗಳು ಅಚ್ಚಿನಲ್ಲಿಯೂ ಪುನರಾವರ್ತನೆಯಾಗಿವೆ. ಶ್ರೀ ಶಾರದಾಪ್ರಸಾದರು ಕರಡು ತಿದ್ದುವುದರಲ್ಲಿ ಜಾಣರು; ಕರಡಿನ ಬಹುಭಾಗದ ಮೇಲೆ ನಾನೂ ಕಣ್ಣಾಡಿಸಿದ್ದೇನೆ ; ಹ. ಕ. ರಾಜೇಗೌಡರು ಸಂತೋಷದಿಂದ ಕರಡು ತಿದ್ದಿದ್ದಾರೆ. ಆದರೂ ಕೆಲವು ದೋಷಗಳು ಉಳಿದಿರಲಾಗಿ ವಾಚಕರು ಕ್ಷಮಿಸುವರೆಂದು ನಂಬಿದ್ದೇನೆ.

ಸದ್ಯಕ್ಕೆ ಈ ಪ್ರಶಸ್ತಿ ಗ್ರಂಥ ಹೊರಬಂದಿದೆ. ಕನಕ ಸಾಹಿತ್ಯವನ್ನೊಳಗೊಂಡ ಎರಡು ಸಂಪುಟಗಳು ಈ ವರ್ಷ ತುಂಬುವುದರೊಳಗಾಗಿ ಮುದ್ರಣಗೊಂಡು ಹೊರ ಬರಲಿವೆಯೆಂದು ಮಂಡಲಿಯ ಪರವಾಗಿ ಆಶ್ವಾಸನೆ ನೀಡಬಯಸುತ್ತೇನೆ. ಈ ಪವಿತ್ರ ಕಾರ್ಯದಲ್ಲಿ ಸಹಾಯ ಹಸ್ತನೀಡಿ, ಸಂತೋಷದಿಂದ ಸಹಕರಿಸಿದ, ಕನ್ನಡನಾಡಿನ ಸಂಪತ್ತೆನ್ನಬಹುದಾದ ವಿದ್ವಜ್ಜನರು ಮನಸ್ಸು ಮಾಡದಿದ್ದರೆ

ಈ ಕೃತಿ ಇಷ್ಟು ಬೇಗ ಖಂಡಿತವಾಗಿಯೂ ಹೊರಗೆ ಬರುತ್ತಿರಲಿಲ್ಲವೆಂದು ವಿನಯಪೂರ್ವಕವಾಗಿ ಒಪ್ಪಿಕೊಳ್ಳುತ್ತೇನೆ.

ಕನಕದಾಸರು ನನ್ನ ಮೆಚ್ಚುಗೆಯ ಸಂತ ಕವಿಗಳಲ್ಲೊಬ್ಬರು. ಅವರಿಗೆ ಕೈಂಕರ್ಯ ಸಲ್ಲಿಸುವ ಅವಕಾಶವನ್ನು ಕಲ್ಪಿಸಿಕೊಟ್ಟದ್ದಕ್ಕಾಗಿ ಕರ್ನಾಟಕ ಸರ್ಕಾರದ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಸಂಪಾದಕಮಂಡಲಿಯ ಸದಸ್ಯ ಮಿತ್ರರು ತುಂಬ ಪ್ರೀತಿಯಿಂದ ಸೌಜನ್ಯದಿಂದ ನನ್ನೊಡನೆ ಸಹಕರಿಸಿದ್ದಾರೆ. ಅವರೆಲ್ಲರೂ ಕನ್ನಡನಾಡಿನ ಖ್ಯಾತ ವಿದ್ವಾಂಸರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾದ ಶ್ರೀ ಐ. ಎಂ. ವಿಠಲಮೂರ್ತಿಯವರು ತರುಣರು, ಉತ್ಸಾಹಶೀಲರು, ದಕ್ಷರು, ಸುಸಂಸ್ಕೃತರು ; ಈ ಇಲಾಖೆಗೆ ಹೇಳಿ ಮಾಡಿಸಿದಂಥವರು. ಈ ಗ್ರಂಥ ಆದಷ್ಟು ಬೇಗ ಬರಬೇಕೆನ್ನುವ ದೃಷ್ಟಿಯಿಂದ ಮಂಡಲಿಗೆ ಎಲ್ಲ ಸಹಕಾರ ನೀಡಿದರು. ಸಹಾಯಕ ನಿರ್ದೇಶಕರೂ ಸ್ವಯಂ ಸಾಹಿತಿಗಳೂ ವಿವೇಕಿಗಳೂ ಆದ ಶ್ರೀ ಕಾ. ತ. ಚಿಕ್ಕಣ್ಣನವರ ಸಹಾಯ ಸಹಕಾರಗಳಿಂದ ಮಂಡಲಿಯ ಕೆಲಸ ಸುಸೂತ್ರವಾಗಿ ನಡೆಯಿತು. ಜಂಟಿ ನಿರ್ದೇಶಕರಾದ ಶ್ರೀ ದೇವರಸಯ್ಯನವರ, ಉಪನಿರ್ದೇಶಕರಾದ ಶ್ರೀ ಎಸ್. ವಿಶ್ವನಾಥ್ ಅವರ ಸೌಜನ್ಯ ಕಾರ್ಯೋತ್ಸಾಹ ಯಾವಾಗಲೂ ನೆನಪಿನಲ್ಲುಳಿಯು ವಂಥವು, ನಿರ್ದೇಶಕರ ಆಪ್ತ ಸಹಾಯಕಿ ಮೊದಲುಗೊಂಡು, ನಿರ್ದೇಶನಾಲಯದ ಸಿಬ್ಬಂದಿವರ್ಗದ ಜನರ ಮನಃಪೂರ್ವಕವಾದ ಸಹಾಯವನ್ನು ನಾನೆಂದೂ ಮರೆಯಲಾರೆ.

ಇಂಥ ಬೃಹದ್ಗ್ರಂಥವನ್ನು ಒಂದು ತಿಂಗಳಲ್ಲಿ ಅಚ್ಚುಕಟ್ಟಾಗಿ ಮುದ್ರಿಸುವುದೊಂದು ಸಾಹಸವೇ ಸರಿ. ಶ್ರೀ ಮೀರಾ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಕೆ.ಪಿ. ಪುಟ್ಟಸ್ವಾಮಿಯವರು ಹಗಲಿರುಳು ದುಡಿದು ಈ ಅದ್ಭುತವನ್ನು ಸಾಧಿಸಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯ ಶ್ರೀ ಶಾರದಾಪ್ರಸಾದರು ಕರಡು ತಿದ್ದುವಲ್ಲಿ ತುಂಬ ಶ್ರಮ ವಹಿಸಿದ್ದಾರೆ. ಮಂಡಲಿಯ ಸದಸ್ಯರಲ್ಲದಿದ್ದರೂ, ನನ್ನ ಮೇಲಣ ಪ್ರೀತಿಯಿಂದ ಪ್ರಸಿದ್ಧ ಸಂಶೋಧಕರಾದ ಶ್ರೀ ಹ. ಕ. ರಾಜೇಗೌಡರು ನಾನಾ ರೀತಿಯಲ್ಲಿ ನನಗೆ ಸಹಾಯ ಮಾಡಿದ್ದಾರೆ. ಶ್ರೀ ಮೈ.ನಾ. ಶರ್ಮಾ ಅವರು ಸುಂದರವಾದ ಮುಖಪುಟವನ್ನು ರಚಿಸಿಕೊಟ್ಟಿದ್ದಾರೆ. ಈ ಎಲ್ಲ ಮಹನೀಯರಿಗೂ, ನಾನು ಹೃತ್ಪೂರ್ವಕ ಧನ್ಯವಾದಗಳನ್ನರ್ಪಿಸುತ್ತೇನೆ.

೨-೨-೧೯೯೦

ಮೈಸೂರು                                         ದೇ. ಜವರೇಗೌಡ

# ಅರಿಕೆ

ಕನಕದಾಸರು ಕನ್ನಡ ನಾಡು ನುಡಿ ಸಂಸ್ಕೃತಿಯಲ್ಲಿ ಬೆರೆತುಹೋಗಿರುವ ಒಬ್ಬ ಧೀಮಂತ ವ್ಯಕ್ತಿ. ದಾಸ ಸಾಹಿತ್ಯದಲ್ಲಿ ಅವರದು ವೈಶಿಷ್ಟ್ಯಪೂರ್ಣವಾದ ವರ್ಚಸ್ಸು. ಸಾಮಾನ್ಯ ಬದುಕಿನಿಂದ ಒಡಮೂಡಿ, ಕೀರ್ತನಕಾರರಾಗಿ, ಸಂತರಾಗಿ, ಸಮಾಜ ಸುಧಾರಕರಾಗಿ ಅವರು ಕನ್ನಡ ಸಾಂಸ್ಕೃತಿಕ ಜಗತ್ತಿಗೆ ನೀಡಿರುವ ಕೊಡುಗೆ ಅನನ್ಯವಾದದ್ದು. ಅವರು ಸಮಾಜದ ಅಂಕುಡೊಂಕುಗಳನ್ನು ತಿದ್ದಿ, ಮಾನವತೆಯನ್ನು ಮೆರೆದ ಕ್ರಾಂತಿಕಾರಿ ಕವಿ. ಅವರು ತಮ್ಮ ಬದುಕು ಮತ್ತು ಕೃತಿಗಳ ಮೂಲಕ ಪ್ರತಿಪಾದಿಸಿರುವ ಜೀವನದರ್ಶನ ಸಾರ್ವಕಾಲಿಕ ; ವಿಚಾರಪೂರ್ಣ. ತಮ್ಮ ಕೀರ್ತನೆ ಹಾಗೂ ಕಾವ್ಯಗಳಲ್ಲಿ ಕಾವ್ಯಗುಣದ ಜೊತೆಗೆ ಸಾಮಾಜಿಕ ಕಳಕಳಿಯನ್ನು, ದೇಸೀ ಸತ್ತ್ವವನ್ನು ಮೆರೆದಿದ್ದಾರೆ.

ಈ ಸಂತ ಶ್ರೇಷ್ಠ ಕವಿಯ ೫೦೦ನೆಯ ಜಯಂತ್ಯುತ್ಸವವನ್ನು ರಚನಾತ್ಮಕವಾಗಿ ಹಾಗೂ ಅರ್ಥವತ್ತಾಗಿ ಆಚರಿಸಲು ಸರ್ಕಾರವು ತೀರ್ಮಾನಿಸಿತು. ೧೯೮೮ರಲ್ಲಿ ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಸಲಹಾ ಸಮಿತಿಯನ್ನು ರಚಿಸಲಾಯಿತು. ವರ್ಷಾದ್ಯಂತ ನಾಡಿನ ಎಲ್ಲೆಡೆ ಕನಕದಾಸರ ಜಯಂತ್ಯುತ್ಸವವನ್ನು ಆಚರಿಸುವುದರ ಜೊತೆಗೆ ಕನಕದಾಸರ ಸಮಗ್ರ ಕೃತಿಗಳು ಕನ್ನಡಿಗರಿಗೆ ಲಭ್ಯವಾಗುವಂತೆ ಮಾಡುವ ದಿಸೆಯಲ್ಲಿ ಪ್ರಕಟನಾ ಯೋಜನೆಯೊಂದನ್ನು ಕೈಗೊಳ್ಳಲಾಯಿತು, ಸರ್ಕಾರವು ಡಾ. ದೇ. ಜವರೇಗೌಡ, ಪ್ರೊ. ಎಲ್.ಎಸ್. ಶೇಷಗಿರಿರಾವ್. ಪ್ರೊ. ಹೆಚ್.ಜೆ. ಲಕ್ಕಪ್ಪಗೌಡ ಹಾಗೂ ಡಾ. ದೇವೇಂದ್ರ ಕುಮಾರ್ ಹಕಾರಿ ಇವರನ್ನೊಳಗೊಂಡಂತೆ ಒಂದು ಸಂಪಾದಕ ಮಂಡಳಿಯನ್ನು ರಚಿಸಿತು. ಇವರು ಮೊದಲಿಗೆ ಸಂಪಾದಿಸಿಕೊಟ್ಟ "ಜನಪ್ರಿಯ ಕನಕ ಸಂಪುಟ'ವನ್ನು ಸುಲಭ ಬೆಲೆಯಲ್ಲಿ ಪ್ರಕಟಿಸಲಾಯಿತು, ಅದಕ್ಕೆ ದೊರೆತ ಅಪಾರ ಜನಪ್ರಿಯತೆಯನ್ನು ಪರಿಗಣಿಸಿ, ಅದರ ಎರಡನೆಯ ಮುದ್ರಣವನ್ನು ಹೊರತರಲಾಯಿತು.

ಪ್ರಸಕ್ತ, ಸಂಪಾದಕ ಮಂಡಳಿಯು ಸಂಪಾದಿಸಿ ಕೊಟ್ಟಿರುವ "ಕನಕ ಸಾಹಿತ್ಯ ದರ್ಶನ–ಸಂಪುಟ–೧" ಗ್ರಂಥ ಪ್ರಕಟವಾಗುತ್ತಿದೆ. ಇದು ಕನಕದಾಸರ ಸಮಗ್ರ ಸಾಹಿತ್ಯವನ್ನು ಕುರಿತು ಎಲ್ಲ ನಿಟ್ಟಿನಿಂದ ವಿವೇಚಿಸಿ, ಮೌಲ್ಯಮಾಪನ ಮಾಡಿರುವ ಲೇಖನಗಳ ಸಂಕಲನ. ನಾಡಿನ ಪ್ರತಿಭಾನ್ವಿತ ವಿದ್ವಾಂಸರು ತಮ್ಮ ಅಮೂಲ್ಯ ಲೇಖನಗಳಿಂದ ಈ ಗ್ರಂಥದ ಗೌರವವನ್ನು ಹೆಚ್ಚಿಸಿದ್ದಾರೆ. ಈ ಬೃಹತ್ ಕೃತಿ ಕನ್ನಡಿಗರಿಗೆ ಕನಕದಾಸರ ಜೀವನ ದರ್ಶನ ಹಾಗೂ ಸಾಹಿತ್ಯಿಕ ಕೊಡುಗೆಗಳ ಸಮಗ್ರ ಪರಿಚಯುವನ್ನು ಮಾಡಿಕೊಡುತ್ತದೆಂಬುದರಲ್ಲಿ ಸಂಶಯುವಿಲ್ಲ.

ಈ ಗ್ರಂಥವನ್ನು ಜಯಂತ್ಯುತ್ಸವದ ಮುಕ್ತಾಯ ಸಮಾರಂಭದಲ್ಲಿ ಬಿಡುಗಡೆ ಮಾಡಲು ನಿರ್ಧರಿಸಿ, ತ್ವರಿತವಾಗಿ ಮುದ್ರಣ ಕಾರ್ಯವನ್ನು ಕೈಗೊಳ್ಳಲಾಗಿದೆ, ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಲೇಖಕರಿಗೆ ನನ್ನ ಕೃತಜ್ಞತೆಗಳು. ಅತ್ಯಂತ ಶೀಘ್ರವಾಗಿ ಹಾಗೂ ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿರುವ ಶ್ರೀ ಮೀರಾ ಪ್ರಿಂಟರ್ಸ್‌ನ ಶ್ರೀ ಕೆ. ಪಿ. ಪುಟ್ಟಸ್ವಾಮಿ ಅವರಿಗೆ ನನ್ನ ಕೃತಜ್ಞತೆಗಳು.

ಸದ್ಯದಲ್ಲಿಯೇ ಕನಕದಾಸರ ಸಮಗ್ರ ಕೃತಿಗಳ ಸಂಕಲನವನ್ನು ಪ್ರಕಟಿಸಲು ಕ್ರಮಕೈಗೊಳ್ಳುತ್ತಿದೆ. ಈ ಗ್ರಂಥ ಕನಕದಾಸರ ಸಾಹಿತ್ಯ-ಜೀವನ ಸಂದೇಶವನ್ನು ಸಹೃದಯವಾಚಕರಿಗೆ ತಲುಪಿಸಿದರೆ ನಮ್ಮ ಶ್ರಮ ಸಾರ್ಥಕ.

೭.೩.೧೯೯೦ **ಐ.ಎಂ. ವಿಠಲಮೂರ್ತಿ**
ಬೆಂಗಳೂರು ನಿರ್ದೇಶಕರು

# ದರ್ಶನ ಸೂಚಿ

**ಮೌಲ್ಯದರ್ಶನ–ಭಾಗ ಮೂರು**

# ಕನಕದಾಸರ ಸಮಗ್ರ ಜೀವನ ಚರಿತ್ರೆ

**ಡಾ. ಸಾ. ಶಿ. ಮರುಳಯ್ಯ**

ಒಂದು

ಪರ್ಷಿಯಾ ದೇಶದ ಓರ್ವ ದಾರ್ಶನಿಕ ಕವಿ ಒಂದೆಡೆಯಲ್ಲಿ ಹೀಗೆ ಹೇಳಿದ್ದಾನೆ :

> ಮಾ ಜಿ ಅಫಜ್ ಓ ಜಿ
> ಅಂಜಾಮಿ ಜಹಾನ್ ಬಿ–ಖಬರ್–ಈಮಾ
> ಅವ್ವಾಲ್–ಓ–ಚಿಖರೀ ಇನ್
> ಕುಹ್ನಾ ಕಿಬಾತ್ ಉಷ್ತಾದ್ ಅಸ್ತ್.

ಎಂದು–ಅಂದರೆ,

> ಮೊದಲ ಹಾಗೂ ಕಡೆಯ ಪುಟಗಳನ್ನು ಕಳೆದುಕೊಂಡ
> ಪುಸ್ತಕ ಈ ವಿಶ್ವ. ಈ ಪುಸ್ತಕ ಹೇಗೆ ಪ್ರಾರಂಭ
> ವಾಯಿತು ಗೊತ್ತಿಲ್ಲ ; ಹೇಗೆ ಮುಕ್ತಾಯ ಆಗಿದೆ ತಿಳಿದಿಲ್ಲ.
> ಮಾನವ ತನಗೆ ಬುದ್ಧಿಬಂದಾಗಿನಿಂದಲೂ ಕಳೆದುಹೋದ
> ಆ ಪುಟಗಳನ್ನು ಹುಡುಕುತ್ತಿದ್ದಾನೆ, ಈ ಹುಡುಕುವಿಕೆ ಮತ್ತು ಅದರ ಪರಿಣಾಮ

ಇವುಗಳನ್ನು ತತ್ತ್ವ ಜಿಜ್ಞಾಸೆ ಎಂದು ಕರೆಯುತ್ತಾರೆ.

ಇಂಥದೇ ಅನ್ವೇಷಣೆ ಸಂತಕವಿ ಕನಕದಾಸರ ಬಗೆಗೆ ಇತ್ತೀಚಿನ ದಿನಗಳಲ್ಲಿ ನಡೆದಿದೆ. ಈ ಕಾರ್ಯ ಇನ್ನೂ ಮುಗಿದಿಲ್ಲ, ಮುಗಿಯುವಂತೆ ಕಾಣುವುದೂ ಇಲ್ಲ. ಹಾಗಂದುಕೊಂಡು ಕೈಚೆಲ್ಲಿ ಕೂರುವಂತೆಯೂ ಇಲ್ಲ. ಕನಕದಾಸರ ಜೀವನ ಚರಿತ್ರೆಯು ಮೊದಲ ಮತ್ತು ಕಡೆಯ ಪುಟಗಳನ್ನು ಕಳೆದುಕೊಂಡ ಸಂಪುಟವಾದರೂ ಅವರೇ ರಚಿಸಿದರೆನ್ನಲಾದ ಕೀರ್ತನೆಗಳು ಮತ್ತು ಕಾವ್ಯಗಳು ಎಂಬ ಪಠ್ಯಭಾಗ ಲಭ್ಯವಿದೆ. ಈ ಉಪಲಬ್ಧಿಯನ್ನು ಹೆಕ್ಕಿ ನೋಡಿ, ಇಲ್ಲವೆ ಹಲವು ಸ್ಥಳೀಯ ಐತಿಹ್ಯಗಳನ್ನು ಆಧರಿಸಿ, ಇಲ್ಲವೆ ಕೆಲವು ಉಲ್ಲೇಖ ಉದ್ಧರಣೆಗಳನ್ನು ಮಾನ್ಯಮಾಡಿ, ಕಳೆದುಹೋಗಿರುವ ಪುಟಗಳನ್ನು ಪುನಃ ರಚಿಸಬಹುದಾಗಿದೆ. ಪ್ರಸಕ್ತ ರಚನೆ ಆ ಸಂಬಂಧದ ಅಧಿಕೃತ ಮಾಹಿತಿ ದೊರೆಯುವವರೆಗೆ ಮಾನ್ಯ.

ಜನ ಹೇಳಿಕೆಗೆ ಬೆಲೆಕೊಡುವುದಾದರೆ ಕನಕ ಬಾಡನಾಡಿನ ದಣ್ಣಾಯಕ. ತಂದೆ ಬೀರಪ್ಪ, ತಾಯಿ ಬಚ್ಚಮ್ಮ. ತನ್ನ ಹುಟ್ಟು ಹೆಸರು ಕನಕದಾಸನೆಂದಲ್ಲ, ತಿಮ್ಮಪ್ಪನೆಂದು. ತಿಮ್ಮಪ್ಪ ಕನಕದಾಸನಾದದ್ದಕ್ಕೆ ಭೂಗರ್ಭದಲ್ಲಿದ್ದ ನಿಧಿ ದೊರೆತುದು ಕಾರಣವೆಂದು ಐತಿಹ್ಯ ಹೇಳಿದರೂ ತಿರುಪತಿ ತಿಮ್ಮಪ್ಪನಿಗೆ ಕನಕಗಿರಿವಾಸನೆಂಬ ಪರ್ಯಾಯ ನಾಮವೂ ಇದೆ ಎಂಬುದನ್ನು ಮರೆಯುವಂತಿಲ್ಲ. ಏನೇ ಇರಲಿ ಭೂತಿಯೊಂದು ವಿಭೂತಿತ್ವವನ್ನು ಪಡೆದದ್ದು ಇಲ್ಲಿನ ವೈಶಿಷ್ಟ್ಯ. ಭೂತಿ ಎಂದರೆ ಸಹಜಸ್ಥಿತಿಯಲ್ಲಿ ಇರುವುದು. ವಿಭೂತಿ ಎಂದರೆ ವಿಶೇಷ ರೀತಿಯಲ್ಲಿ ಆದದ್ದು. ಕಲ್ಲು ಭೂತಿ, ಅದರಿಂದಾದ ಕಲಾಕೃತಿ ವಿಭೂತಿ ; ಮಣ್ಣು ಭೂತಿ, ಅದರಿಂದ ಮಾಡಿದ ಗಣೇಶ ಪ್ರತಿಮೆ ವಿಭೂತಿ. ಅಂತೆಯೇ ಗದಾಧರ ಭೂತಿಯಾದರೆ, ಶ್ರೀರಾಮಕೃಷ್ಣ ಪರಮಹಂಸ ವಿಭೂತಿ : ನರೇಂದ್ರ ಭೂತಿಯಾದರೆ, ಸ್ವಾಮಿ ವಿವೇಕಾನಂದ ವಿಭೂತಿ ; ತಿಮ್ಮಪ್ಪ ಭೂತಿಯಾದರೆ, ಕನಕದಾಸ ಶ್ರೀಮದ್ವಿಭೂತಿ!

ಈ ವಿಭೂತಿ ಪುರುಷನು ಸಂತನಾಗುವ ಮುನ್ನ ಡಣ್ಣಾಯಕನಾಗಿದ್ದ. ಆತನದೇ ಒಂದುಕ್ತಿ ಹೇಳುತ್ತದೆ !

ದೊರೆತನವ ಬಿಡಿಸಿ, ಸುಸ್ಥಿರ ಮಾರ್ಗ ತೋರಿಸಿದೆ
ನರಮಾತ್ರದವನೆನದೆ ಹರಿಯೆ[1]

ಎಂದು. ಈ 'ದೊರೆತನ' ಬೇರಾವುದೂ ಅಲ್ಲ, ವಿಜಯನಗರ ಸಾಮ್ರಾಜ್ಯದ ಸಾಮಂತಾಧಿಕಾರ. ಬಾಡ ವಿಜಯನಗರ ಚಕ್ರಾಧಿಪತ್ಯದ ಉತ್ತರದ ಗಡಿನಾಡು; ಮೇಲಿಂದ ಮೇಲೆ ದಾಳಿ ಬರುತ್ತಿದ್ದ ಷಾಹೀ ರಾಜ್ಯವೊಂದರ ಮೇರೆ. ಸಾಮ್ರಾಜ್ಯದ ಕೀರ್ತಿಗೆ ಕಳಂಕ ತರದಂತಹ ಸಾಹಸಾಭರಣನಿದ್ದಿರಬೇಕು ಆತ. ಆದ್ದರಿಂದಲೇ ಹೇಳಿಕೊಂಡಿದ್ದಾನೆ :

ಕನಕ ದಳದಲಿ ಬಂದು ಕಲೆತನೆಂದರೆ ಪೌಜು
    ಕನಕು ಮನಕಾಗುವುದು ಹರಿಯೆ
ಧುರದಲ್ಲಿ ನಾಲ್ಕು ಸಾವಿರನಿಲ್ಲಲದನು ದೆಸೆಗೆ
    ಪರಿಹರಿಸುತಿಹೆ ಎಲೊ ಹರಿಯೆ
ಪರಬಲವ ನೋಡಿದರೆ ಉರಿದು ಬೀಳುವ ಮನ
    ಸೆರೆಹಾಕಿ ನಿಲಿಸಿದೆಯೊ ಹರಿಯೆ
ಮೊನೆಗಾರ ಧಣಿಯೆಂಬ ಧೈರ್ಯವ ಬಿಡಿಸಿ ಸೇವ
    ಕನ ಮಾಡಿದೆ ಹರಿಯೆ ![2]

ಎಂದು. ಈ ಮೊನೆಗಾರಧಣಿ ಸವಾರಿ ಹೋರಟರೆ ಛತ್ರ ಭೇರಿ ನಗಾರಿಗಳು

ಭೋರೆಂದು ಪೊಂಗಹಳೆ ವೊರೆಯುತ್ತಿದ್ದುವಂತೆ ! ಇವನ ಶಸ್ತ್ರ ಶಾಸ್ತ್ರಾಭ್ಯಾಸಗಳೆರಡೂ ಆನೆಗೊಂದಿಯಲ್ಲಿ ನಡೆದಿದ್ದಿರಬೇಕು. ಕ್ಷತ್ರಿಯೋಚಿತ ಶಸ್ತ್ರಾಭ್ಯಾಸದೆಡೆ ಗೊತ್ತಿಲ್ಲವಾದರೂ, ಶಾಸ್ತ್ರಾಧ್ಯಯನದ ನೆಲೆಗೊತ್ತಿದೆ. ಅದು ಶ್ರೀ ವೈಷ್ಣವ ಮಹಾಮತ ಸ್ಥಾಪನಾಚಾರ್ಯ ಶ್ರೀ ರಾಮಾನುಜರ ಶಿಷ್ಯಪರಂಪರೆಯ ಶ್ರೀ ತಾತಾಚಾರ್ಯರ ಶ್ರೀಮಠವಿದ್ದ ಆನೆಗೊಂದಿಯಲ್ಲಿ. ತಾತಾಚಾರ್ಯರು ಕನ್ನಡ ರಮಾರಮಣ ಶ್ರೀ ಕೃಷ್ಣದೇವರಾಯನ ಆಸ್ಥಾನದಲ್ಲಿದ್ದರೆಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳಿವೆ. ಆದರೆ ಕನಕದಾಸನಿಗೆ ದಾಸದೀಕ್ಷೆ ದೊರೆತದ್ದು, ಅವನ ದಾಸ ಜೀವನ ಸಾಗಿದ್ದು ಅದೇ ವಿಜಯನಗರದ ವ್ಯಾಸರಾಯರ ಶ್ರೀಮಠದಲ್ಲಿ. ದ್ವೈತಮತ ಸಂಸ್ಥಾಪಕರಾದ ಮಧ್ವಾಚಾರ್ಯರ ಶಿಷ್ಯ ಪ್ರಶಿಷ್ಯ ಪರಂಪರೆಯ ನರಹರಿ ತೀರ್ಥ, ಶ್ರೀಪಾದರಾಜ ಮತ್ತೆ ಅವನ, ಶಿಷ್ಯ ವ್ಯಾಸರಾಯ. ಈ ವ್ಯಾಸರಾಯರು 'ಶೇಷಾಶೇಷ ಪ್ರಹ್ಲಾದನ ಅವತಾರವೆಂದು ಪ್ರಸಿದ್ಧರಾಗಿದ್ದಾರೆ. ವಾದಿರಾಜ, ವಿಜಯೀಂದ್ರ, ಪುರಂದರದಾಸ, ವೈಕುಂಠದಾಸ ಈ ಮೊದಲಾದ ಅವರ ಶಿಷ್ಯರಲ್ಲಿ ಕನಕದಾಸನೂ ಒಬ್ಬ, ಆದ್ದರಿಂದಲೇ ಆತ್ಮ ಪರಮ ಪುರುಷೋತ್ತಮನ ಕೃಪಾಪಾತ್ರನಾದ ಪ್ರಹ್ಲಾದಕುಮಾರನನ್ನು ಕುರಿತ ಒಂದು ಪ್ರಶಂಸಾ ಪದ್ಯದಲ್ಲಿ– 'ಕೂಸನು ಕಂಡೀರಾ ಸುಪ್ರಹ್ಲಾದನ ಕಂಡೀರಾ ನಮ್ಮ ಕೂಸನು ಕಂಡೀರಾ' ಎಂಬ ಪಲ್ಲವಿ ಹಾಡಿ, ಎರಡು ಚರಣಗಳಲ್ಲಿ ಅವನು ಹಿರಣ್ಯಕಶಿಪುವಿನ ಮಗನಾಗಿ ಜನಿಸಿ, ನರಸಿಂಹನನ್ನು ಕಂಬದಲ್ಲಿ ತೋರಿದ ಮಹಾತ್ಮೆಯನ್ನು ಹೊಗಳಿ, ಮೂರನೆಯ ಹಾಗೂ ಕಡೆಯ ಚರಣದಲ್ಲಿ

ಪ್ರಸಿದ್ಧ ವ್ಯಾಸರಾಯರೆಂಬ ಕೂಸು
ಪ್ರವೀಣ ವಿದ್ಯೆಯೊಳ್ ಎನಿಸಿದ ಕೂಸು
ಪ್ರಹ್ಲಾದನೆಂಬ ಆಹ್ಲಾದದ ಕೂಸು
ಪ್ರಸನ್ನ ಕಾಗಿನೆಲೆಯಾದಿಕೇಶವನ ಕೂಸು[3]

ಎಂದು ಸ್ಪಷ್ಟವಾಗಿ ತನ್ನ ಗುರು ವ್ಯಾಸರಾಯರನ್ನು ಪ್ರಹ್ಲಾದನೊಡನೆ ಸಮೀಕರಿಸಿದ್ದಾನೆ ; ತನ್ನ ಗುರುಭಕ್ತಿಯನ್ನು ಆ ಮೂಲಕ ಪ್ರಕಟಿಸಿ ಧನ್ಯನಾಗಿದ್ದಾನೆ.

ವ್ಯಾಸರಾಯರದು ತುಂಬಾ ಉದಾತ್ತ ವ್ಯಕ್ತಿತ್ವ. ಅದಕ್ಕೆ ಕೀಳು ಕಿಲುಬು ತಿಳಿದಿರಲಿಲ್ಲ, ಸ್ವಾರ್ಥ–ಸಂಕುಚಿತತೆಗಳು ಗೊತ್ತಿರಲಿಲ್ಲ. ಜಾತಿಗಿಂತಲೂ ಮಿಗಿಲಾದ ಜ್ಯೋತಿ ಒಂದಿದೆ. ಆ ಜ್ಯೋತಿ ಇದ್ದೆಡೆಯಲ್ಲಿ ದೈವತ್ವವಿದೆ ಎಂದು ಎಲ್ಲರಲ್ಲೂ ದೇವನನ್ನು ಕಂಡ, ಎಲ್ಲೆಡೆಯೂ ಮಂಗಳವನ್ನೇ ಗುರುತಿಸಿದ ಋಜು ಬುದ್ಧಿ ಅವರದು. ತಮ್ಮ ಶ್ರೀ ಮಠದಲ್ಲಿ ಆಗಾಗ ನಡೆಯುತ್ತಿದ್ದ ವ್ಯಾಸಕೂಟ, ದಾಸಕೂಟಗಳ

ತಿಕ್ಕಾಟದಲ್ಲಿ ವ್ಯಾಸರಾಯರು ತುಂಬ ಎಚ್ಚರಿಕೆಯಿಂದ ತಮ್ಮ ಪಾತ್ರವನ್ನು ನಿರ್ವಹಿಸುತ್ತಿದ್ದುದುಂಟು.

ಒಂದು ನಿದರ್ಶನ :

ಕನಕದಾಸನ ಮೇಲೆ ದಯಮಾಡಲು ವ್ಯಾಸ ।
ಮುನಿ ಮಠದವರೆಲ್ಲ ದೂರಿಕೊಂಬುವರೊ ॥ಪ॥
ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ ॥
ಸಾರ್ಥಕವಾಯ್ತು ಇವರ ಸಂನ್ಯಾಸಿತನವೆಲ್ಲ
ಪೂರ್ತ್ಯಾಗಲೆಂತೆನಲು ಯತಿಯು ನಗುತಿದ್ದನು ॥೧॥
ಮರುದಿನ ಅವರವರ ಪರೀಕ್ಷಿಸಬೇಕೆಂದು
ಕರೆದು ವಿದ್ವಾಂಸರಾ ಕನಕ ಸಹಿತ
ಕರದಲ್ಲಿ ಕದಳಿಯ ಫಲಗಳನೆ ಕೊಟ್ಟು ಯಾ
ರಿರದ ಸ್ಥಳದಲ್ಲಿ ಮೆದ್ದು ಬನ್ನಿರೆನಲು ॥೨॥
ಊರ ಹೊರಗೆ ಹೋಗಿ ಬೇರೆ ಬೇರೆ ಕುಳಿತು
ತೋರದಲೆ ಎಲ್ಲರೂ ಮೆದ್ದು ಬರಲು
ತೋರಲಿಲ್ಲವು ನನಗೆ ಏಕಾಂತಸ್ಥಳವೆನುತ
ಸಾರಿ ಕದಳೀ ಫಲವ ತಂದು ಮುಂದಿಟ್ಟ ॥೩॥
ಡಿಂಭದೊಳು ಶಬ್ದ ವಾಗಾದಿ ಶ್ರೋತ್ರಗಳಲ್ಲಿ
ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರೊ
ತಿಂಬುವುದು ಹೇಗೆನುತ ವ್ಯಾಸರಾಯರ ಕೇಳೆ
ಸಂಭ್ರಮದಲವರೆಲ್ಲ ಕುಳಿತು ಕೇಳಿದರು ॥೪॥

ಆಗ ವ್ಯಾಸರಾಯರು–

ನೋಡಿದರೆ ಈ ಕನಕನಾಡುವ ಮಾತುಗಳ
ಮೂಢಜನರರಿಯಬಲ್ಲರೆ ಮಹಿಮೆಯ
ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಡಾರ ಕಾಣೆ ॥೫॥

ಎಂದು ಮುಕ್ತಕಂಠದಿಂದ ಹೊಗಳುತ್ತಾರೆ.[೪] ಪ್ರತಿಭೆಯನ್ನು ಗುರುತಿಸುವ ಗೌರವಿಸುವ ದೊಡ್ಡಗುಣ ಅವರದು.

ಪುರಂದರದಾಸರ ಈ ಹಾಡಿನ ಆಂತರ್ಯದಲ್ಲಿ ಅಡಗಿರುವ ಅಂಶ

ಕನಕದಾಸನ ಪವಾಡ ಅಲ್ಲ, ಅವನ ಮೇಧಾವಿತನವೂ ಅಲ್ಲ ; ಅಲ್ಲಿ ಸುವೇದ್ಯವಾಗುವುದು ಕನಕ ದರ್ಶನ ! ದೇವನು ಎಲ್ಲೆಡೆಯೂ ಇದ್ದಾನೆ, ಅವನು ಅಣುವಿನಲ್ಲಿ ಅಣುವಾಗಿದ್ದಾನೆ, ಘನದಲ್ಲಿ ಘನವಾಗಿದ್ದಾನೆ ; ನೀರಿನಲ್ಲಿ ತಂಪಾಗಿದ್ದಾನೆ, ಗಾಳಿಯಲ್ಲಿ ವೇಗವಾಗಿದ್ದಾನೆ, ಸೂರ್ಯನಲ್ಲಿ ತೇಜಸ್ಸಾಗಿದ್ದಾನೆ. ಚಂದ್ರನಲ್ಲಿ ಕಾಂತಿಯಾಗಿದ್ದಾನೆ, ನಕ್ಷತ್ರದಲ್ಲಿ ನಗೆಯಾಗಿದ್ದಾನೆ, ಹಕ್ಕಿಯ ಕಂಠದಲ್ಲಿ ಹಾಡಾಗಿದ್ದಾನೆ, ಹೂವಿನಲ್ಲಿ ಪರಿಮಳವಾಗಿದ್ದಾನೆ, ಕಲ್ಲಿನಲ್ಲಿ ಘನೀಭೂತವಾಗಿ ಕುಳಿತಿದ್ದಾನೆ. ಎಲ್ಲ ಸಚರಾಚರ ಚೇತನಗಳಲ್ಲೂ ಸುಪ್ತಶಕ್ತಿಯಾಗಿದ್ದು, ಗುಪ್ತಗಾಮಿಯಾಗಿ, ಸದಾ ಸ್ಪಂದಿಸುತ್ತಾ ವಿನೂತನ ಸೃಷ್ಟಿಯ ಕ್ರತುಶಕ್ತಿ ತಾನಾಗಿದ್ದಾನೆ. ಆ ಜಗತ್‌ಶಕ್ತಿ, ಆದಿಶಕ್ತಿ, ಪರಾತ್ಪರ ಶಕ್ತಿಯ ಅಸ್ತಿತ್ವವು ವ್ಯಾಸಕೂಟದ ಜಡರಿಗೆ ತಾತ್ವಿಕ ತಿಳಿವಾಗಿದ್ದರೆ, ಕನಕದಾಸನಿಗೆ ಅದೊಂದು ಸಹಜಾನುಭವವೇ ಆಗಿದ್ದಿತು. ಈ ಹಿರಿಮೆಯನ್ನು ಜಗಜ್ಜಾಹೀರು ಮಾಡಿದ ಕೀರ್ತಿ ವ್ಯಾಸರಾಯರದು. ಅವರ ಶ್ರೀ ಮಠದಲ್ಲಿ ಸಂಸ್ಕೃತವನ್ನಾಶ್ರಯಿಸಿದ ವ್ಯಾಸಕೂಟದವರೂ, ಕನ್ನಡವನ್ನು ದುಡಿಸಿಕೊಂಡ ದಾಸಕೂಟದವರೂ ಇದ್ದರಷ್ಟೆ. ಅವರು ಯಾರು ಏನೇ ಆಗಿರಲಿ; ವ್ಯಾಸರಾಯರ ದೃಷ್ಟಿಯಲ್ಲಿ ಪುರಂದರದಾಸ ಕನ್ನಡದ ಹೇಮಕೂಟ ; ಕನಕದಾಸ ಆ ಹೇಮಕೂಟದ ನೆತ್ತಿಯಮೇಲೆ ಹಾರಾಡುವ ಕನ್ನಡ ಬಾವುಟ ![5]

## ಎರಡು

ಮೇಲೆ ಉದ್ಧರಿಸಿದ ದಾಸವರೇಣ್ಯರ ಧ್ವನಿಪೂರ್ಣ, ಅರ್ಥಪೂರ್ಣ ಕೀರ್ತನೆ ಕನಕದಾಸನ ಕಾಲನಿರ್ಧಾರಕ್ಕೆ ತುಂಬಾ ಸಹಕಾರಿಯಾಗಿದೆ. ವ್ಯಾಸರಾಯ ಪುರಂದರ ದಾಸ ಮತ್ತು ಕನಕದಾಸ ಇವರು ಸಮಕಾಲೀನರು. ಈ ಮೂವರೂ ಜಗತ್ಪ್ರಸಿದ್ಧ ಚಕ್ರವರ್ತಿಗಳಲ್ಲೊಬ್ಬನಾದ ವಿಜಯನಗರದ ಶ್ರೀಕೃಷ್ಣದೇವರಾಯನ (ಕ್ರಿ.ಶ. ೧೫೦೯–೧೫೨೯) ವೈಭವದ ದಿನಗಳಲ್ಲಿ ಬದುಕು ಮಾಡಿದವರು. ಅವನ ಆಸ್ಥಾನದ ಭಕ್ತಿ, ಗೌರವ ಮನ್ನಣೆಗಳಿಗೆ ಪಾತ್ರರಾಗಿದ್ದವರು. ವ್ಯಾಸರಾಯರು ಅಂದು ಇದ್ದುದಕ್ಕೆ ಅವರಿಗೆ ಸಂಬಂಧಿಸಿದ ಅಂದರೆ ಆಳುವ ಪ್ರಭುವಿನಿಂದ ಅವರಿಗೆ ವ್ಯಾಸ ಸಮುದ್ರವನ್ನು ನಿರ್ಮಿಸುವುದಕ್ಕಾಗಿ ದೊರೆತ ಉಂಬಳಿ ವಿಷಯ ಹೊತ್ತ ೧೫೨೭ನೆಯ ಇಸವಿಯದೆಂದು ಹೇಳಲಾದ ಶಿವಮೊಗ್ಗೆಯ ಒಂದು ಶಾಸನ ಸಾಕ್ಷಿ ಹೇಳುತ್ತದೆ.[6] ಕನಕದಾಸನು ವಿಜಯನಗರದಲ್ಲಿದ್ದುದಕ್ಕೆ, ಅವನು ಶ್ರೀಕೃಷ್ಣದೇವರಾಯನ ಅಭಿಮಾನಿ ಆಶ್ರಿತನಾಗಿದ್ದುದಕ್ಕೆ, ಶ್ರೀ ಕೃಷ್ಣದೇವರಾಯನನ್ನೂ, ಅವನ ಆಸ್ಥಾನವೈಭವವನ್ನೂ ಕಂಡುಂಡುದಕ್ಕೆ ಮೋಹನ ತರಂಗಿಣಿಯ

ದ್ವಾರಕಾ ಪುರವರ್ಣನ ಹಾಗೂ ಶ್ರೀಕೃಷ್ಣನ ಗುಣಸಂಕೀರ್ತನಗಳು ಪುರಾವೆಯನ್ನೊದಗಿಸುತ್ತವೆ. 'ದಾಸರೆಂದರೆ ಪುರಂದರ ದಾಸರಯ್ಯಾ' ಎಂಬ ವ್ಯಾಸರಾಯರ ಪ್ರಶಂಸೆಗೆ ಪುರಂದರದಾಸರು ಪಾತ್ರರಾಗಿದ್ದರಷ್ಟೆ. ಹಾಗೆಯೇ ಶಿಷ್ಯರೆಂದರೆ ಕನಕದಾಸರಯ್ಯಾ ಎಂಬ ಪ್ರಶಸ್ತಿಗೆ ಕನಕದಾಸರು ಪಾತ್ರರಾಗಿದ್ದರೆ ಅತಿಶಯೋಕ್ತಿಯಲ್ಲ. ಕನಕಣ್ಣನ ಗುಣಗಳನ್ನು ಗಣಿಸಿದ ಆ ಮಹಾತ್ಮರು ಅದನ್ನು ಪ್ರಕಟಪಡಿಸಲು ಅನೇಕ ಯತ್ನಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಮೇಲೆ ಹಾಡಿದ ಅವರದೇ ರಚನೆ ಪ್ರತ್ಯಕ್ಷ ಸಾಕ್ಷಿಯಾಗಿದೆ. ಅದಕ್ಕೆ ಪ್ರತಿಯಾಗಿ ಕನಕದಾಸರೂ ಸಹ ಆನಂದತೀರ್ಥ ಮಧ್ವಾಚಾರ್ಯರನ್ನೂ ವ್ಯಾಸರಾಯರನ್ನೂ ತುಂಬು ಹೃದಯದಿಂದ ಸ್ಮರಿಸಿದ್ದಾರೆ. ಕನಕದಾಸರೂ ಪುರಂದರದಾಸರೂ ವ್ಯಾಸರಾಯರ ಸಮಕಾಲೀನರೂ ಶಿಷ್ಯರೂ ಆಗಿದ್ದುದಕ್ಕೆ ಸಾಕಷ್ಟು ಅನ್ಯಾಧಾರಗಳಿವೆ, ಪ್ರತೀತಿಯೂ ಇದೆ ; ಇರಲಿ. ಅಂತೆಯೇ ಕನಕದಾಸನ ಮೋಹನ ತರಂಗಿಣಿಯ ಒಂದು ಪದ ಹೀಗೆ ಹೇಳುತ್ತದೆ :

> ಉರಗಾಲಯದ ಪೆಸರ್ವಡೆದವನ ಮತ್ಸ್ಯೋ । ದರಜಾತೆಯಾತ್ಮ ಸಂಭವನ
> ವರಪುರಾಣಂಗಳ ಕನ್ನಡಿಸಿದ ಕವೀ । ಶ್ವರರ ಕೊಂಡಾಡುವೆ ಮುದದಿ ॥

ಮೋಹನ ತರಂಗಿಣಿ I–೧೭

ಅಂದರೆ, ಹುತ್ತದ ಹೆಸರು ಪಡೆದ ವಾಲ್ಮೀಕಿಯ ಮತ್ತು ಮತ್ಸ್ಯಗಂಧಿಯ ಮಗನಾದ ವ್ಯಾಸನ ಪ್ರಸಿದ್ಧ ಪುರಾಣಗಳನ್ನು ಕನ್ನಡಿಸಿದ ಕವಿಶ್ರೇಷ್ಠರಾದ ಕುಮಾರವಾಲ್ಮೀಕಿ (ಕ್ರಿ.ಶ.೧೫೦೦) ಮತ್ತು ಕುಮಾರವ್ಯಾಸ (ಕ್ರಿ.ಶ.೧೪೩೦) ಇವರನ್ನು ಅತ್ಯಾನಂದದಿಂದ ಕೊಂಡಾಡುತ್ತೇನೆ ಎಂದಿದ್ದಾನೆ. ಇದರಿಂದ ಕನಕ ಈ ಕವಿದ್ವಯರಿಗಿಂತ ಈಚಿನವನು. ಕಾಖಂಡಿಕಿ ಮಹೀಪತಿರಾಯನ ಮಗ ಕಾಖಂಡಿಕಿ ಕೃಷ್ಣರಾಯನು ಹರಿಪದವನಜಮಧುಪರಾದ ಶ್ರೀಪಾದರೇ ಮೊದಲಾದ ಅನೇಕ ಜನ ದಾಸಪುಂಗವರುಗಳನ್ನು ಅನುದಿನವೂ ಸ್ಮರಿಸುತ್ತೇನೆಂದು ಹೇಳುತ್ತಾ, 'ನೆರೆ ತಾಳಪಾಕರ ಸಂತಮತಿ ಕನಕರ ಹರಿಭಕ್ತಿ ಉಲ್ಹಾಸಕರ' ಎಂದು ಏಡುಕೊಂಡಲವಾಸ ತಿರುಪತಿಯ ವೆಂಕಟರಮಣನನ್ನು ಅಂಕಿತವಾಗುಳ್ಳ ಪ್ರಸಿದ್ಧ ತೆಲುಗು ಕೀರ್ತನಕಾರ, ವಾಗ್ಗೇಯನಿಧಿ ತಾಳಪಾಕ ಅನ್ನಮಾರ್ಯನನ್ನೂ, ಕಾಗಿನೆಲೆ ಆದಿಕೇಶವ ಅಂಕಿತವುಳ್ಳ ಕನ್ನಡದ ಕವಿ, ಕೀರ್ತನಾಚಾರ್ಯ ಕನಕದಾಸನನ್ನೂ ಜೊತೆ ಜೊತೆಯಲ್ಲಿಯೇ ಕೊಂಡಾಡಿದ್ದಾನೆ.[8] ಪುರಂದರದಾಸರು ವಿಶ್ವವಿಖ್ಯಾತ ಸಂಗೀತಗಾರ ತ್ಯಾಗರಾಜನಿಗೆ ಅಪ್ರತ್ಯಕ್ಷ ಗುರುವಾಗಿದ್ದರೆ, ಅನ್ನಮಾರ್ಯನಿಗೆ ಪ್ರತ್ಯಕ್ಷ ಸಂಗೀತ ಶಿಕ್ಷಾಗುರು ಆಗಿದ್ದರು. ಇಂತಹ ಪುರಂದರರ ಶಿಷ್ಯ ಅನ್ನ

ಮಾರ್ಯರನ್ನೂ ಪುರಂದರದಾಸರ ಆತ್ಮೀಯಗೆಳೆಯ ಕನಕದಾಸರನ್ನೂ ಅನನ್ಯ ಭಕ್ತಿಯಿಂದ ಸ್ಮರಿಸಿರುವ ಕಾಖಂಡಿಕಿ ಕೃಷ್ಣರಾಯ ಕ್ರಿಸ್ತಶಕ ಹದಿನೇಳನೆಯ ಶತಮಾನದವನು. ಆದ್ದರಿಂದ ಕನಕ ಕಾಖಂಡಿಕಿ ಕೃಷ್ಣರಾಯನಿಗಿಂತ ಹಿಂದಿನವನು. ಇದರ ಕೂಡೆ ಸಿಗುವ ಮತ್ತೊಂದು ಪೋಷಕಾಧಾರವೆಂದರೆ ಕನಕದಾಸನೇ ತನ್ನ ಮೋಹನ ತರಂಗಿಣಿಯಲ್ಲಿ ಬಳಸಿರುವ 'ಪೆಟಲಂಬಿನವರು' ಎಂಬ ಶಬ್ದ. ಪೆಟಲಂಬು ಎಂಬುದು ಪಿಸ್ತೂಲು, ತುಪಾಕಿ ಅಥವಾ ಬಂದೂಕ. ಈ ಪೆಟಲಂಬು ಅಥವಾ ಬಂದೂಕಧಾರಿಗಳ ದರ್ಶನ ಕನ್ನಡಿಗರಿಗಾದದ್ದು ೧೫೨೦ರಲ್ಲಿ ನಡೆದ ರಾಯಚೂರು ಯುದ್ಧದಲ್ಲಿ. ಆದ್ದರಿಂದ ಕನಕದಾಸನ ಜೀವಿತಾವಧಿಯನ್ನು ಕ್ರಿ. ಶ. ೧೫೦೦ ರಿಂದ ಕ್ರಿ. ಶ. ೧೬೦೦ ರವರೆಗೆ ಎಂದಿಟ್ಟುಕೊಳ್ಳಬಹುದು. ವ್ಯಾಸರಾಯರೂ (ಕ್ರಿ. ಶ. ೧೪೪೭–೧೫೩೯) ಪುರಂದರದಾಸರೂ (ಕ್ರಿ. ಶ. (೧೪೮೦–೧೫೪೦) ಬೃಂದಾವನಸ್ಥರಾದ ಮೇಲೂ ಕನಕದಾಸರು ಬದುಕಿದ್ದರೆಂದು ತಿಳಿಯುವುದರಿಂದ ಕ್ರಿಸ್ತಶಕ ಹದಿನಾರನೆಯ ಶತಮಾನದ ಮಧ್ಯಭಾಗವನ್ನು ಅಂದರೆ ಕ್ರಿ. ಶ. ೧೫೫೦ನ್ನು ಕನಕದಾಸರಿದ್ದ ಕಾಲವೆಂದು ನಿರ್ಧರಿಸಿ ಹೇಳಬಹುದು.

## ಮೂರು

ಕನಕದಾಸರ ಕುಲವನ್ನು ಗುರುತಿಸಲು ಅನೇಕ ವ್ಯರ್ಥಪ್ರಯತ್ನಗಳು ನಡೆದಿವೆ. ಅಂಥವುಗಳಲ್ಲಿ ನಮ್ಮದೂ ಒಂದು. ಮೊದಲನೆಯದು. ರಾ. ನರಸಿಂಹಾಚಾರ್ಯರು (ಕ್ರಿ. ಶ. ೧೯೧೯) ಇವನು ಬೇಡರವನೆಂದೂ, ಅಂಡೆಯ ಕುರುಬಜಾತಿಯವನೆಂದೂ ಅವರಿವರು ಹೇಳುತ್ತಾರೆ ಎಂದು ಜನಹೇಳಿಕೆಯನ್ನಿತ್ತಿದ್ದಾರೆ.[10] ಆದರೆ ಕನಕನ ಕುಲದ ಬಗೆಗೆ ಇವರದು ಯಾವ ವಿಧದ ಕಮಿಟ್‌ಮೆಂಟೂ ಇಲ್ಲ. ಎರಡನೆಯವರು ಕಟ್ಟಿ ಶೇಷಾಚಾರ್ಯರು. ಇವರು ಕನಕದಾಸನು ತನ್ನ ಮೋಹನ ತರಂಗಿಣಿಯ ಪೀಠಿಕಾ ಭಾಗದಲ್ಲಿ ಶ್ರೀ ರಾಮಾನುಜರನ್ನೂ, ಅವರ ಶಿಷ್ಯ ಪರಂಪರೆಯ ತಾತಾಚಾರ್ಯರನ್ನೂ ಸ್ಮರಿಸಿರುವುದರಿಂದ ಶ್ರೀ ವೈಷ್ಣವಮತದ ಬಗೆಗೆ ಒಲವುಳ್ಳವನೆಂತಲೂ, ಅದೇ ಕೃತಿಯಲ್ಲಿ ತ್ರಿವಿಕ್ರಮ ದಾಸಸ್ಯದಾಸರನ್ನು ಅಂದರೆ ವಾದಿರಾಜರನ್ನು ಸ್ಮರಿಸಿರುವುದರಿಂದ ಮತ್ತು ಹರಿಭಕ್ತಿಸಾರದ ಆಂತರಿಕ ಪ್ರಮಾಣಗಳಿಂದ ಕನಕದಾಸನು ಮಾಧ್ವಮತ ನಂಬಿಕೆಯವನೆಂದೂ, ಕೀರ್ತನೆಯೊಂದರಲ್ಲಿ 'ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ ಅಟ್ಟಿಬಿಡುವುತಲಿಹರೊ ಕೃಷ್ಣ'

ಎಂಬ ಸಾಲಿನ ಆಧಾರದ ಮೇಲೆ, 'ಕನಕದಾಸರು ಯಾವ ಕುಲದವರೆಂಬುದು ಗೊತ್ತಾಗುವುದಿಲ್ಲ, ಆದರೆ ಮುಟ್ಟಿಸಿಕೊಳ್ಳದಂತಹ ಒಂದು ಜಾತಿಯವರಾಗಿದ್ದರೆಂದು ಹೇಳಬಹುದು'[11] ಎಂತಲೂ ಹೇಳುತ್ತಾರೆ. ಅಂತೆಯೇ, 'ನಾವು ಕುರುಬರು ನಮ್ಮ ದೇವರೊ ಬೀರಯ್ಯ....' ಎಂಬ ಕೀರ್ತನೆಯ ಆಧಾರದ ಮೇಲೆ ಕನಕದಾಸರನ್ನು ಕುರುಬಕುಲದವರೆಂದು ನಿರ್ಧರಿಸಲಾಗದು ಎಂದು ಎಚ್ಚರಿಸಿದ್ದಾರೆ.[12] ಒಟ್ಟಿನಲ್ಲಿ ಕಟ್ಟಿಯವರ ದೃಷ್ಟಿಯಲ್ಲಿ ಕನಕದಾಸ ಓರ್ವ ಅಸ್ಪೃಶ್ಯ; ಆದರೆ ಯಾವ ಕುಲಜ ತಿಳಿಯದು.

ಮೂರನೆಯವರು, ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚುರಾವ್‌ರವರು. ಇವರು 'ಶ್ರೀಕನಕದಾಸರ ಭಕ್ತಿಗೀತೆಗಳು' ಎಂಬ ತಮ್ಮ ಸಂಪಾದನ ಕೃತಿಯ ಮುನ್ನುಡಿಯಲ್ಲಿ, 'ಕನಕದಾಸರು ಹುಟ್ಟಿದ ಜಾತಿ ಯಾವುದೆಂಬುದೂ ಒಂದು ಒಡೆಯಲಾರದ ಒಗಟೇ ಆಗಿದೆ. ಅವರನ್ನು ಕುರುಬಜಾತಿಯವರೆಂದು ಹೇಳುವ ಪರಂಪರೆಯೂ ಇದೆ. ನಾಯಕ (ಬೇಡ) ಜಾತಿಯವರೆಂದು ಹೇಳುವ ಪರಂಪರೆಯೂ ಇದೆ...' ಎಂದು ಹೇಳಿ ಎಲ್. ಜಿ. ಹಾವನೂರರ ಅಭಿಪ್ರಾಯವನ್ನು ಎತ್ತಿಹಿಡಿದಿದ್ದಾರೆ, 'ಹಾವನೂರರ ಪ್ರಕಾರ ಕನಕದಾಸರು 'ದಾಸಪಂಗಡ' ಎಂಬ ಒಂದು ದಾಸವರ್ಗಕ್ಕೆ ಸೇರಿದವರು. ಇವರ ವಂಶೀಕರು ಕಾಗಿನೆಲೆಯ ಸಮೀಪದ ಕುಮ್ಮೂರು ಗ್ರಾಮದಲ್ಲಿ ಈಗಲೂ ಇದ್ದಾರೆ. ಇವರಿಗೆ ೬೬ ಗ್ರಾಮಗಳ ವಾಲ್ಮೀಕಿ ಅಥವಾ ನಾಯಕರ ಜಗಳವನ್ನು ತೀರಿಸುವ ಹಕ್ಕು ಇದೆ. ಆ ಹಕ್ಕು ಆನೆಗೊಂದಿಯ ತಾತಾಚಾರ್ಯರು ಕೊಟ್ಟ 'ಶ್ರೀಮುಖ'ದಿಂದ ಪ್ರಾಪ್ತವಾದದ್ದು. ಕುರಿಸಾಕಣೆ ಈ ದಾಸರ ಕುಲಕಸುಬು. ಪ್ರತಿಯೊಬ್ಬನ ಮನೆಯಲ್ಲೂ ಡೊಳ್ಳು ಇದೆ–ಎಂಬಂಶಗಳನ್ನು ಆಧರಿಸಿ, ರಾಮಾನುಜರನ್ನೂ ತಾತಾಚಾರ್ಯ ಗುರುಗಳನ್ನೂ ಭಕ್ತಿಯಿಂದ ಕೊಂಡಾಡಿದ ಕನಕದಾಸರು ನಾಯಕಜಾತಿಯವರಾಗಿಯೇ ಇರಬಹುದೆಂದು ಹೇಳುವುದು ಯುಕ್ತಿಯುಕ್ತವೆನಿಸುತ್ತಿದೆ. ಕುರುಬರೆಂದು ಹೇಳುವುದಕ್ಕೆ ಯಾವ ಅನುಮಾನದ ಆಧಾರಗಳೂ ನಮಗೆಸಿಕ್ಕುವುದಿಲ್ಲ. ಏಕೆಂದರೆ ಬೀರಯ್ಯನ ಭಕ್ತರಾಗಿರುವ ನಮ್ಮ ಉತ್ತರ ಕರ್ನಾಟಕದ ಕುರುಬರೆಲ್ಲರೂ ಸಿದ್ಧರ ಉಪಾಸನಾ ಪರಂಪರೆಗೆ ಸೇರಿದವರಾಗಿದ್ದಾರೆ... ರಾಮಾನುಜೀಯ ವೈಷ್ಣವ ಮತದ ಸಂಬಂಧ ಅವರಿಗೆ ಸ್ವಲ್ಪವೂ ಇಲ್ಲ. 'ಒಡೆಯರು' ಎಂಬ ಹೆಸರು ಪುರೋಹಿತ ವರ್ಗದ ಕುರುಬರಲ್ಲಿದೆ. ಅವರಂತೂ ಸಂಪೂರ್ಣವಾಗಿ ವೀರಶೈವ ಆಚಾರಗಳ ಪ್ರಭಾವಕ್ಕೆ ಒಳಗಾಗಿರುವರು' ಎಂದಿದ್ದಾರೆ.[13]

ಇದು ವಿಚಾರಪ್ರಚೋದಕವೂ ಹೆಚ್ಚು ಅರ್ಥಪೂರ್ಣವೂ ಆದ ಹೇಳಿಕೆ. ಏಕೆಂದರೆ ಕುರುಬರು ಅಥವಾ ಹಾಲುಮತಸ್ಥರು ಕರ್ನಾಟಕದ ಮೂಲನಿವಾಸಿಗಳು. ಫಾದರ್ ಹೆರಾಸ್‌ರವರು ಹರಪ್ಪಾ ಮತ್ತು ಮೊಹೆಂಜದಾರೊ ಉತ್ಖನನದ ಸಂದರ್ಭದಲ್ಲಿ ದೊರೆತ ಚಿತ್ರಲಿಪಿಯ ಆಧಾರದ ಮೇಲೆ ಈ ಭೂಪ್ರದೇಶದ ಮೂಲನಿವಾಸಿಗಳು 'ಕಳ್‌ಅರು' ಅಂದರೆ ಹಾಲು. ಕಳ್ ಉತ್ಪಾದಕರು ಹಾಲುಮತಸ್ಥರು. ಕೃಷಿ ಮತ್ತು ಪಶುಪಾಲನೆ ಅವರ ಮೂಲ ಕಸಬು. ಈ ಕಳ್ ಅರ ನಾಡು > ಕನ್ನರ ನಾಡು > ಕನ್ನಡನಾಡು ಎಂದಾಯಿತು ಎಂದು, ಕನ್ನಡನಾಡು ಜನಾಂಗವಾಚಿ ಶಬ್ದವೆಂದು ಊಹಿಸುತ್ತಾರೆ.[14] ಆದರೆ ಹೆರಾಸ್‌ರವರನ್ನು ಒಪ್ಪದವರೂ ಇದ್ದಾರೆ. ಏನೇ ಇರಲಿ ಆರ್ಯರ ಆಗಮನಕ್ಕಿಂತಲೂ ಮುಂಚೆ ಈ ನಾಡಿನಲ್ಲಿದ್ದ ಮೂಲನಿವಾಸಿಗಳು ದ್ರಾವಿಡರು; ಅವರ ಔಪಾಸನಾ ದೇವತೆ ರುದ್ರ. ಈ ರುದ್ರನನ್ನು ಆರ್ಯರು ತಮ್ಮ ವೇದದಲ್ಲಿ ಸೇರಿಸಿಕೊಂಡು ಉಪಾಸಿಸುವಾಗ ಕಳ್‌ಆರು ಅನ್ನುವುದು ಕಳ್ಳರು (The Thieves) ಎಂಬ ತಪ್ಪು ಅರ್ಥದಲ್ಲಿ ಗ್ರಹಿಕೆಯಾದ್ದರಿಂದ ಋಗ್ವೇದದ ರುದ್ರಾಧ್ಯಾಯದಲ್ಲಿ ನಮಕ–ಚಮಕ ಸಂದರ್ಭದಲ್ಲಿ ರುದ್ರನನ್ನು ಕುರಿತ ಅನುವಾಕದ ಋಕ್ಕು 'ತಸ್ಕರಾಣಾಂ ತೇ ನಮೋ ನಮಃ' ಎಂದು ಪ್ರಯೋಗಗೊಂಡಿದೆ. ಇಲ್ಲಿ ಹಾಲು ಉತ್ಪಾದಕರ ಕುಲದೇವತೆಯೇ ನಿನಗೆ ನಮಸ್ಕಾರ ಎನ್ನುವುದರ ಬದಲು, ಕಳ್ಳನೇ ನಿನಗೆ ನಮಸ್ಕಾರ ಎಂದಾಗಿದೆ. ಅಂದಿನಿಂದಲೂ ಈ ಕುರುಬ ಜನಾಂಗದವರು ಶಿವಾರಾಧಕರು ಎಂದು ತಿಳಿಯುತ್ತದೆ. ಅಂತೆಯೆ ಇವರು ರೇವಣಸಿದ್ಧ ಸಂಪ್ರದಾಯದವರು. ವೀರಶೈವವನ್ನು ಒಪ್ಪಿಕೊಂಡ ಇಷ್ಟಲಿಂಗಧಾರಿ 'ಒಡೆಯ' ಕುಲದವರು. ಇವರು ಉತ್ತರ ಕರ್ನಾಟಕದಲ್ಲಿ ತುಮಕೂರು ಜಿಲ್ಲಾ ಚಿಕ್ಕನಾಯಕನಹಳ್ಳಿ ಮೊದಲಾದೆಡೆಗಳಲ್ಲಿ ಇಂದಿಗೂ ಇದ್ದಾರೆ. ಇವರೆಲ್ಲರೂ ಶಿವಾರಾಧಕರು. ಹನ್ನೆರಡನೆಯ ಶತಮಾನ ಒಂದು ಸಂಕ್ರಮಣ ಕಾಲವಷ್ಟೆ. ಅಂದು, ಬಹುಶಃ ಕೆಲವರು ರೇವಣಸಿದ್ಧ ಸಂಪ್ರದಾಯಕ್ಕೂ, ಮತ್ತೆ ಕೆಲವರು ವೈಷ್ಣವ ಸಂಪ್ರದಾಯಕ್ಕೂ ಸೇರಿದ್ದಿರಬಹುದು. ಈ ಹೇಳಿಕೆಗೆ ಬೇಲೂರು ಕೇಶವದಾಸರಲ್ಲಿ ಸಮರ್ಥನೆ ಹುಡುಕಬಹುದು. ಅವರು ಹೇಳುತ್ತಾರೆ 'ಕರ್ನಾಟಕದಲ್ಲಿ ಶೈವಮತವು ತಲೆಯೆತ್ತಿದಾಗಿನಿಂದ ಕುರುಬರು ಶಿವನನ್ನು ಕುಲದೈವವೆಂದು ಪೂಜಿಸುತ್ತಿದ್ದರು. ಮಹಾದೇವನನ್ನು ಬೀರಪ್ಪ (ವೀರಪ್ಪ)ನೆಂದು ಕರೆದಾಗಿನಿಂದ ಕುರುಬದೇವರಿಗೆ ಬೀರೇದೈವರೆಂದು ಹೆಸರಾಯಿತು. ರಾಮಾನುಜಾಚಾರ್ಯರು ಹೊಯ್ಸಳ ನಾಡಿನಲ್ಲಿ ನೆಲೆಸಿ ವಿಷ್ಣುಭಕ್ತಿಯನ್ನು

ಉಪದೇಶಿಸಿದ ಮೇಲೆ, ಕುರುಬರಲ್ಲಿ ಅನೇಕರು ತಿರುಪತಿಯ ವೆಂಕಟೇಶನನ್ನು ಪೂಜಿಸಲಾರಂಭಿಸಿದರು. ಭಸ್ಮಕ್ಕೆ ಬದಲಾಗಿ ಕುಂಕುಮ ತಿಲಕವು ಆ ಜನರ ಮತಚಿಹ್ನೆಯಾಯಿತು'[15] ಎಂದು. ಎಸ್.ಕೆ. ರಾಮಚಂದ್ರರಾಯರೂ, 'ಮೊದಲಿಗೆ ಇವರೆಲ್ಲ ಶೈವರು. ಕಾಳಹಸ್ತೀಶ್ವರನ (ತಿರುಕಾಳತ್ತಿ ದೇವರ) ಒಕ್ಕಲು... ಆದರೆ, ಒಂದುಕಾಲಕ್ಕೆ ಕುರುಬರೆಲ್ಲ ತಿರುಪತಿಯ ದೇವರ ಒಕ್ಕಲಾದರು' ಎನ್ನುತ್ತಾರೆ. ಇವರ ಮೊದಲ ಮಾತು ದಿಟವೆನಿಸಿದರೂ ಕುರುಬರೆಲ್ಲರೂ ಆದರು ಎಂಬ ಮಾತು ಪೂರ್ಣ ಸತ್ಯ ಅಲ್ಲ. ಕಾಳಹಸ್ತೀಶನಿಗೆ ನಡೆದುಕೊಳ್ಳುವ ಕುಲಗಳು ಇಂದಿಗೂ ಜೀವಂತವಿವೆ.

ಮತ್ತೊಂದು ನಿದರ್ಶನ : ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕು ಮೈಲಾರದಲ್ಲಿರುವ ಮೈಲಾರಲಿಂಗನು ಶಿವನ ಅವತಾರಿಯೆ. ಮಲ್ಲಾಸುರ ಮಣಿಕಾಸುರರನ್ನು ಕೊಂದು ಲೋಕಕಂಟಕ ನಿವಾರಣೆಮಾಡಿದನೆಂಬ ನಂಬಿಕೆ ಇದೆ. ತುಂಬಾ ಭಯಭಕ್ತಿಯಿಂದ ಪವಾಡರೂಪದಲ್ಲಿ ಇಂದಿಗೂ ಮೈಲಾರಲಿಂಗನ ಜಾತ್ರೆ ಪ್ರತಿ ವರ್ಷವೂ ನಡೆಯುತ್ತದೆ. ಬೆಂಗಳೂರು, ಕೋಲಾರ ಪ್ರದೇಶಗಳಲ್ಲಿರುವವರು ತಿರುಪತಿ ತಿಮ್ಮಪ್ಪನಿಗೆ ನಡೆದುಕೊಳ್ಳುತ್ತಿದ್ದರೂ ಇವರು ಶಿವೋಪಾಸಕರೆ. ಬಹುಶಃ ಕುರುಬ ಕುಲದ ಕನಕದಾಸನ ಪೂರ್ವಜರು ವೀರಶೈವಧರ್ಮೀಯರಾದ ವಿಜಯನಗರದ ಸಂಗಮ ವಂಶದವರ ಅವನತಿಯನಂತರ ಪ್ರಾಬಲ್ಯಕ್ಕೆ ಬಂದ ವೈಷ್ಣವ ಪಾರಮ್ಯವನೊಪ್ಪಿದ ತುಳುವ ಮನೆತನದ ಅರಸರ ಕಾಲದಲ್ಲಿ ವಿಷ್ಣು ಉಪಾಸಕರಾಗಿದ್ದಿರಬೇಕು. ರಾಜಕಾರಣ ಮತಧರ್ಮದ ಬೆನ್ನೆಲುಬು. ಯಾವುದೇ ಕಾಲದ ಯಾವುದೇ ದೇಶದ ಯಾವುದೇ ಮತಧರ್ಮವಿರಲಿ ಅದು ಆಳ್ವವನ ಮರ್ಜಿಯಿಂದ ಬದುಕುತ್ತದೆ ಎಂಬುದು ಕಟುವಾದರೂ ಸತ್ಯ. ಆದ್ದರಿಂದ ಕನಕದಾಸರು ಕಾಲಧರ್ಮಕ್ಕೆ ಮಣಿದು ನಡೆದಿದ್ದರೆ ಆಶ್ಚರ್ಯವೇನಲ್ಲ. ಅಲ್ಲದೆ ಕುರುಬರಲ್ಲಿ ನೂರಾರು ಬೆಡಗುಗಳು, ಕಟ್ಟುಗಳು ಇಂದಿಗೂ ಜೀವಂತ ಇವೆ. ಇವುಗಳಲ್ಲಿ ತಿರುಪತಿಗೆ ನಡೆದುಕೊಳ್ಳುವ ವರ್ಗವೂ ಇದೆ. ಅಂಥವುಗಳಲ್ಲಿ ಒಂದಾಗಿದ್ದಿರಬಹುದು ಕನಕದಾಸರ ಕುಲ. ಇಲ್ಲಿ ಹಾವನೂರರು ಒಡ್ಡುವ ಜಾನಾಂಗಿಕ ಆಧಾರ ನಿಜಕ್ಕೂ ವಿಚಾರಣೀಯ. ಇದಕ್ಕೆ ಪೋಷಕವಾಗಿ ಕನಕದಾಸನ ಹೆಸರಿಗೆ ಸಂಬಂಧಿಸಿದ ಮತ್ತೊಂದು ಅಂಶವನ್ನು ಇಲ್ಲಿ ಚರ್ಚಿಸಬಹುದು. ಕನಕದೀಕ್ಷೆ ಪಡೆದ ಮೇಲೆ 'ಕನಕದಾಸ' ಎಂದಾದ ಎಂದು ಕೆಲವರು ಹೇಳುತ್ತಾರೆ. ಇದು ವಾಸ್ತವ ಸತ್ಯ ಆಗಿರಲಾರದು. ಕಾಳಿದಾಸ, ದೇವದಾಸ ಇದ್ದ ಹಾಗೆ ಕನಕದಾಸ ಇದ್ದಾನೆ. ರಾಮಧಾನ್ಯ ಚರಿತ್ರೆ, ಹರಿಭಕ್ತಿಸಾರ,

ನಳಚರಿತ್ರೆಗಳಲ್ಲಿ ಅಂಕಿತ ಹೊರತು ಕನಕದಾಸನ ಹೆಸರಿಲ್ಲ. ಆದರೆ ಮೋಹನ ತರಂಗಿಣಿಯಲ್ಲಿ 'ನೆಟ್ಟನೆ ಕನಕದಾಸನ ಕಾವ್ಯದೋಳ್ ದೋಷ ತಟ್ಟದು', 'ಮೇಲ್ಗತೆ ಕೇಳು ಕನಕದಾಸೋತ್ತಮ ತನಗೆ', 'ಕೃತಿವೇಟ್ಟಿ ಕನಕ ದಾಸೋತ್ತಮ ಕೇಳ್ದವಳತಿ ಸುಜ್ಞಾನವಧೂಟಿ' ಎಂತಲೂ, ಕೀರ್ತನೆಗಳಲ್ಲಿ 'ಕ್ಷೋಣಿಯೊಳು ಕನಕದಾಸನ,' 'ತಪ್ಪದೆ ಕನಕಗೆ ವರಗಳ ಕೊಡುವಂಥ ಭೀಮರಾಯ', 'ಕಾಗಿನೆಲೆಯಾದಿ ನಿಲಯಾ ಕನಕಪ್ಪಗೊಲಿಯಾ', 'ಕನಕಪ್ರಿಯ ತಿರುಪತಿಯ ಗಿರಿಯಾದಿಕೇಶವನೆ ಒಲಿದು ನಿಲ್ಲಿಸಿದ' ಎಂತಲೂ, ಮುಂಡಿಗೆಗಳಲ್ಲಿ–'ಕನಕನಾಡಿದಗುಟ್ಟು ಆದಿಕೇಶವ ಬಲ್ಲ ಚಂದಮಾಮ', 'ಕಾಗಿನೆಲೆಯ ಕನಕದಾಸ ಹೇಳಿದಂಥ ಮುಂಡಿಗೆಯ ಬಲ್ಲನು ಆದಿಕೇಶವನೊಬ್ಬನು,' 'ಹರಿದಾಸರ ಕನಕ ಹಾಕಿದ ನುಡಿಕೆಯ ಆದಿಕೇಶವನಾಣೆ ಬಲ್ಲವರು ಹೇಳಿ,' 'ಬೆಡಗ ಬಲ್ಲರೆ ಪೇಳಿ' ದೇವ ಕನಕದಾಸ ಎನ್ನೊಡೆಯಾದಿ ಕೇಶವ ಬಲ್ಲನೀ ಬೆಡಗ', 'ಎಲ್ಲರು ಹೇಳಿರಿ ಕನಕ ಹೇಳಿದ ಮಾತ ಎಲ್ಲಾರೂ ಗ್ರಹಿಸಿಕೊಳ್ಳಿ,' 'ಕನಕನು ಹೇಳಿದ ಬೆಡಗು ಕಂಡವರು ನೀವ್ ಕೇಳಿ ತಿಳಿದು ನಿಮ್ಮ ಮನದಲ್ಲಿ ನೋಡಿ' ಎಂದೆಲ್ಲ ಇದೆ. ಕನಕ, ಕನಕಪ್ಪ, ಕನಕದಾಸೋತ್ತಮ ಎಂಬ ಹೆಸರಿನ ಉಲ್ಲೇಖಗಳಲ್ಲಿ 'ಕನಕ, ಕನಕಪ್ಪ' ಎಂಬವು ಕೇವಲ ಛಂದಸ್ಸಿನ ಸೌಕರ್ಯಕ್ಕಾಗಿ ಬಂದವುಗಳು. ಆದರೆ 'ಕನಕದಾಸ' ಎಂಬುದೇ ಬಹಳೆಡೆಗಳಲ್ಲಿ ಪ್ರಯೋಗಗೊಂಡಿದೆ. ಅಲ್ಲದೆ ನಾವು ಹಿಂದೆ ನೋಡಿದಂತೆ ಕನಕದಾಸ ದಾಸದೀಕ್ಷೆ ಪಡೆದು ದಾಸನಾಗುವ ಮುನ್ನ, ತನ್ನ ಅರಮನೆಯಲ್ಲಿದ್ದ ಆಮೋದದ ದಿನಗಳಲ್ಲಿ ಮೋಹನ ತರಂಗಿಣಿಯನ್ನು ಬರೆದಿದ್ದಾನೆ. ಅದರಲ್ಲಿ 'ಕನಕದಾಸ' ಎಂದಿದೆಯಾದ್ದರಿಂದ ಕನಕನಿಗೆ 'ದಾಸ' ಎಂಬುದು ಉಪವರ್ಗವಾಗಿ ಬಂದದ್ದಲ್ಲ ಜನ್ಮತಃ ಜೊತೆಗೂಡಿ ಬಂದ ಹೆಸರು ಎನ್ನಿಸುತ್ತದೆ. ಅಲ್ಲದೆ ಈ ದಾಸ ಪಂಗಡದವರು ಕುರುಬಕುಲದ ಒಂದು ವರ್ಗಕ್ಕೆ ಸೇರಿದವರೆಂದು ಇತ್ತೀಚಿನ ಅಧ್ಯಯನದಿಂದ ತಿಳಿದು ಬರುವುದರಿಂದ ಕನಕದಾಸರು ದಾಸವರ್ಗದ ಕುರುಬರವನೆಂದು ನಿರ್ಧರಿಸಿ ಹೇಳಬಹುದು.

'ಆತ್ಮ ಯಾವ ಕುಲ, ಜೀವ ಯಾವ ಕುಲ ಆತನೊಲಿದ ಮೇಲೆ ಯಾತರ ಕುಲವಯ್ಯ ಎಂದಾತನಿಗೆ ಕುಲವೆಂಬುದಿಲ್ಲ ಮಾನವ ಕುಲವಲ್ಲದೆ ! ಅದರಿಂದಲೆ ಕನಕದಾಸರು ತಮ್ಮನ್ನು ಪ್ರಶ್ನಿಸಿದವರಿಗೆ ಹೇಳಿದರು. 'ಯಾತರವನೆಂದುಸಿರಲಿ. ಜಗನ್ನಾಥ ಮಾಡಿದನೊಂದ ನರರೂಪವಯ್ಯ' ಎಂದು. ಅಂದರೆ, ಅವನು ಮಾಡಿದ ನರರೂಪಕ್ಕೆ ಜಾತಿಯಾವುದೆಂದು ಹೇಳಲಿ ? ಪ್ರತಿಯಾಗಿ ಪ್ರಶ್ನಿಸಿದರು ; 'ರಂಗನಾಥನೆ ನಿನ್ನ ಡಿಂಗರಿಗನೋ ನಾನು, ಡಂಗುರವ ಹೊಯಿಸಯ್ಯ

ದಾಸನೆಂದು'[19] ಎಂದು ಸೆರಗೊಡ್ಡಿ ಬೇಡಿದರು ; ಹರಿದಾಸರು ಎನ್ನ ಬಂಧು ಬಳಗಾದರು ಹರಿಯ ಶ್ರೀಮುದ್ರೆ ಆಭರಣವಾಯಿತು'[20] ಎಂದು ಸಾರಿ ಹೇಳಿದರು. 'ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ ?[21] ಎಂದು ಪ್ರಶ್ನಿಸಿ ನಕ್ಕಿದ್ದರು ಕೂಡ. ಇಷ್ಟಾದರೂ ಕುಲದ ವ್ಯಾಕುಲದಲ್ಲಿ ತೊಳಲಿ ಬಳಲುವ ಸಮಾಜಕ್ಕೆ ಅವನ ಹೃದಯದಾಶಯ ಹಿಡಿಸಲಿಲ್ಲ. ಬುದ್ಧ, ಬಸವ, ಕನಕ. ಕಬೀರ ಮೊದಲಾದವರು ವಿಶ್ವಮಾನವರು, ಅಂಥವರನ್ನು ಕುಲದ ಸಂಕುಚಿತ ಸಂಕೋಲೆಯಲ್ಲಿ ಸ್ಥಗಿತರಾಗುವಂತೆ ಮಾಡಬಾರದು. ಆದರೂ ಮೋಹಭರಿತ ಮಾನವ ಕುಲ ತನ್ನ ಕಕ್ಕುಲತೆಯನ್ನು ವ್ಯಕ್ತಪಡಿಸಿ, ಕನಕದಾಸರು 'ಹುಟ್ಟಿನಿಂದ ಶೂದ್ರರಾಗಿ, ನಿಷ್ಠೆಯಿಂದ ಬ್ರಾಹ್ಮಣರಾಗಿ, ಇಷ್ಟದಿಂದ ಭಾಗವತರಾಗಿ, ಕಟ್ಟಕಡೆಗೆ ದೇವರನ್ನು ಕಂಡವರಾಗಿ ಪುಣ್ಯಶ್ಲೋಕರೆನಿಸಿದರು.[22] ಎಂದಂದುಕೊಂಡು ತೃಪ್ತವಾಗುತ್ತದೆ.

## ನಾಲ್ಕು

ಕನಕದಾಸರ ಬಾಳು ವಿಕಾಸಗೊಂಡಿರುವುದು ಮೂರು ಮಜಲುಗಳಲ್ಲಿ: ಅವರ ಜನ್ಮಸ್ಥಳ ಬಾಡ, ವಿಹಾರಸ್ಥಳ ವಿಜಯನಗರ ಮತ್ತು ವಾಸಸ್ಥಳ ಕಾಗಿನೆಲೆ. ಅವರ ಕೃತಿಗಳನ್ನು ಅನುಲಕ್ಷಿಸಿಯೇ ಅದನ್ನು ಗುರುತಿಸಬೇಕಾಗುತ್ತದೆ. ಅವರ ಕೃತಿಗಳ ಸಂಖ್ಯೆ ಆರು ಎಂದಿದ್ದಾರಷ್ಟೆ. ಅವುಗಳಲ್ಲಿ ರಾಮಾಯಣ, ಮಹಾಭಾರತ ಮತ್ತು ಭಾಗವತಗಳಲ್ಲಿ ತಮ್ಮ ವಸ್ತುಗಳನ್ನು ಹುಡುಕಿಕೊಂಡ ರಾಮಧಾನ್ಯ ಚರಿತ್ರೆ, ನಳಚರಿತ್ರೆ ಮತ್ತು ಮೋಹನ ತರಂಗಿಣಿ ಕಾವ್ಯಗಳೂ, ನೃಸಿಂಹಸ್ತವ, ಹರಿಭಕ್ತಿಸಾರ ಎಂಬ ಭಕ್ತಿ ರಚನೆಗಳೂ, ಕೀರ್ತನೆಗಳೆಂಬ ಗೇಯಗೀತೆಗಳೂ, ಮೇಲಿನ ಮೂರು ಭೂಮಿಕೆಗಳಲ್ಲಿ ಅರಳಿವೆ ಎನ್ನಿಸುತ್ತದೆ.

ಕನಕದಾಸನ ಬಾಲ್ಯ ಮತ್ತು ಯೌವನದ ದಿನಗಳು ವಿಜಯನಗರ ಸಾಮ್ರಾಜ್ಯದ ಗಡಿನಾಡ ಕೋಟೆಯಾದ ಬಾಡದಲ್ಲಿ ಕಳೆದಿವೆ. ಶಿಕ್ಷಣ ಮಾತ್ರ ನಾವು ಹಿಂದೆಯೇ ಹೇಳಿದಂತೆ ಆನೆಗೊಂದಿಯಲ್ಲಿ, ತಾತಾಚಾರ್ಯರ ಶ್ರೀಮಠದಲ್ಲಿ. ಕೀಳುಕುಲದವನಾದರೂ ದಣಾಯಕನ ಪುತ್ರನಾದ ಕನಕನಿಗೆ ಶಿಷ್ಯಸ್ಥಾನ ಗಿಟ್ಟಿಸಿಕೊಳ್ಳುವುದು ಕಷ್ಟವಾಗಿದ್ದಿರಲಿಕ್ಕಿಲ್ಲ. ಅಂತೂ ಉತ್ತಮ ರೀತಿಯ ಆಧ್ಯಾತ್ಮ ಶಿಕ್ಷಣ ಅಲ್ಲಿ ಲಭಿಸಿದೆ. ಸ್ವಭಾವತಃ ಅಧ್ಯಾತ್ಮ ಚಿಂತಕನಾದ ಆತ ಅಲ್ಲಿ ಕಲಿತದ್ದನ್ನು ಬಾಡದಲ್ಲಿ ಬೆಳಗಿದ್ದಾನೆ. ನೃಸಿಂಹಸ್ತವ ಮತ್ತು ಮೋಹನ ತರಂಗಿಣಿ ಕಾವ್ಯಗಳನ್ನು ರಚಿಸುವ ಮೂಲಕ ಇವೆರಡೂ ಕೃತಿಗಳನ್ನು ಕವಿ ಕನಕದಾಸ ತಾನು

ನಾಡೊಡೆಯನಾಗಿದ್ದ ಅವಧಿಯಲ್ಲಿ ರಚಿಸಿದ್ದಿರಬೇಕು. ಈ ಸೂಕ್ಷ್ಮವನ್ನು ಅವನ ಕೃತಿಗಳಲ್ಲಿಯೇ ಹುಡುಕೋಣ. ಮೊದಲನೆಯದಾಗಿ ಈ ಎರಡೂ ಕೃತಿಗಳಲ್ಲಿ ಅನೇಕ ಅಂಶ ಸಾಮ್ಯತೆ ಇದೆ. ನೃಸಿಂಹಸ್ತವ ಎಂಬ ಒಂದು ಸಣ್ಣ ಸಾಂಗತ್ಯ ಗ್ರಂಥದಲ್ಲಿ (97 ಪದ್ಯ) ಮೊದಲು ಕಾಗಿನೆಲೆಯ ಮೇಲೆ ಮಂಗಳವೂ ಅನಂತರ ರಾಮಾನುಜ ಸ್ತುತಿಯೂ ಇರುವುದರಿಂದ ಇದೂ ಏತತ್ಕೃತವಾಗಿರಬಹುದೆಂದು ತೋರುತ್ತದೆ[23] ಎಂದಿದ್ದಾರೆ ರಾ. ನರಸಿಂಹಾಚಾರ್ಯರು. ಇವೆರಡೂ ಏತತ್ಕೃತವಷ್ಟೇ ಅಲ್ಲ, ಏಕಕರ್ತೃ ಕೃತಗಳು ಹೌದು, ಏಕಭಾವ ಪ್ರಕಾಶಗಳೂ ಹೌದು. ತರಂಗಿಣಿಯಲ್ಲಿ ಮುಂದುವರಿದ ಕನಕದಾಸರು ಶ್ರೀ ವೈಷ್ಣವಧರ್ಮ ಸಂಸ್ಥಾಪನಾಚಾರ್ಯ ವಿಶಿಷ್ಟಾದ್ವೈತದ್ಯುಮಣಿ ಶ್ರೀ ರಾಮಾನುಜಾಚಾರ್ಯರ ಶಿಷ್ಯಪರಂಪರೆಯಲ್ಲಿ ಬಂದ ತಮ್ಮ ಶಿಕ್ಷಾಗುರು ಶ್ರೀ ತಾತಾಚಾರ್ಯರನ್ನು ಸ್ಮರಿಸಿ, 'ಎಲ್ಲೈ ವಿಶಾಲಾಕ್ಷಿಯೆ, ಹರಿ ಶರಣರ ಪಾದಧೂಳಿಯನ್ನು ನೆತ್ತಿಯಲ್ಲಿ ಆಂತು ಶ್ರೀರಾಮಾನುಜರ ಸಿದ್ಧಾಂತವನ್ನು ನೆನೆದು, ಅತ್ಯಂತ ಪ್ರೀತಿಯಿಂದ ಕಥೆ ಹೇಳುತ್ತೇನೆ ಕೇಳು ಎಂದು ಶ್ರೀಕೃಷ್ಣನ ದ್ವಾರಕಾಪುರದ ಬ್ರಾಹ್ಮಣೋತ್ತಮರ ಮಂದಿರಗಳಲ್ಲಿ ನಿತ್ಯವೂ 'ರಾಮಾನುಜ ವ್ಯಾಖ್ಯಾನ'ದ ಒಳ್ಳೊಳ್ಳೆಯ ತತ್ತ್ವ, ಸಾಮವೇದ ಘೋಷಣೆ ಕೇಳುತ್ತಿದ್ದುವೆಂದು ಹೇಳುತ್ತಾರೆ.[24] ಇಲ್ಲಿ ಕಾಲವಿಪರ್ಯದ ಪರಿವೆ ಇಲ್ಲ ಕನಕದಾಸರಿಗೆ. ದ್ವಾಪರಯುಗದ ಕೃಷ್ಣನ ದ್ವಾರಕಾಪುರದಲ್ಲಿ, ಕಲಿಯುಗದ ಅದರಲ್ಲೂ ಕ್ರಿಸ್ತಶಕ ಹನ್ನೆರಡನೆಯ ಶತಮಾನದ ಶ್ರೀರಾಮಾನುಜರ ವ್ಯಾಖ್ಯಾನ ಪಠಣ ನಡೆಯುತ್ತಿತ್ತು ಎಂಬಲ್ಲಿ ಕವಿಯ ಗುರುಭಕ್ತಿ ವೇದ್ಯವಾಗುತ್ತದೆ ಅಥವಾ ಕವಿಯ ಸಮಕಾಲೀನ ಪ್ರಜ್ಞೆ ಹೇಗೆ ಜಾಗ್ರತವಾಗಿ ಕೃತಿಯಲ್ಲಿ ಅವತರಿಸಿದೆ ಎಂಬುದು ತಿಳಿಯುತ್ತದೆ.

ತರಂಗಿಣಿಯಲ್ಲಿ ಎಲ್ಲಿಯೂ ವ್ಯಾಸರಾಯರನ್ನಾಗಲಿ ಪುರಂದರದಾಸರನ್ನಾಗಲಿ ಕನಕದಾಸರು ಸ್ಮರಿಸದೆ ಇರುವುದರಿಂದ ತಮಗೆ ವ್ಯಾಸರಾಯರ ಸಾನ್ನಿಧ್ಯ, ಪುರಂದರರ ಸಖ್ಯ ದೊರೆಯುವ ಮೊದಲೇ ಇವುಗಳನ್ನು ರಚಿಸಿದ್ದಿರಬೇಕು ಎನ್ನಿಸುತ್ತದೆ. ರಚಿಸಿದ್ದರೂ ತಮ್ಮ ಶಿಕ್ಷಣ ಮುಗಿದ ಆನಂತರದಲ್ಲಿ, ಬಾಡದಕೋಟೆಯ ಡಣಾಯಕ ಪದವಿಯನ್ನು ಸ್ವೀಕರಿಸಿದ ತಮ್ಮ ತಾರುಣ್ಯದ ದಿನಗಳಲ್ಲಿ ಪ್ರಕಾಶಗೊಳಿಸಿದ್ದಿರಬೇಕು. ಕೃತಿಯಲ್ಲಿ ಬರುವ ಶೃಂಗಾರ, ಆಸ್ಥಾನ ವೈಭವ ಮತ್ತು ಪಾಂಡಿತ್ಯದ ಆರ್ಭಟ ಇವೇ ಮೊದಲಾದ ಆಂತರಿಕ ಪ್ರಮಾಣಗಳಿಂದ ನಿರ್ಧರಿಸಬಹುದು.

ಮೋಹನ ತರಂಗಿಣಿ ಒಂದು ಮಹಾಕಾವ್ಯ. ಶೃಂಗಾರ ಮತ್ತು ಸೌಂದರ್ಯಗಳು ಅದರ ಮೂಲದ್ರವ್ಯ. ಬಳುಕು ಛಂದಸ್ಸಾದ ಸಾಂಗತ್ಯದಲ್ಲಿ

ರಚಿಸಿದ್ದರೂ ಈ ಮಹಾ ಕವಿ ವೈವಿಧ್ಯವನ್ನು ಮೆರೆದಿದ್ದಾನೆ. ಅದು ಅವನ ಕವಿತಾಶಕ್ತಿಯ ಹೆಗ್ಗಳಿಕೆ. ಅವನೇ ಹೇಳುವಂತೆ, ಗೆಣ್ಣುಗೊಳ್ಳದ ಬೆಳ್ಳಬ್ಬಿನ ರಸದಂತೆ ಬಣ್ಣಿತವಾದ ಕಥಾಮೃತ !'[25] ಡಣಾಯಕ ಪದವಿಯನ್ನು ಸ್ವೀಕರಿಸಿದ ತರುಣದಲ್ಲಿ, ತನ್ನ ತುಂಬುತಾರುಣ್ಯದ ದಿನಗಳಲ್ಲಿ, ಮೋಹದ ಮಡದಿಯ ಪ್ರಣಯಪ್ರಪಂಚದಲ್ಲಿ ಮೋಹಕ ಸಾಮ್ರಾಟನಾಗಿ ಮೆರೆದಿದ್ದಾನೆ, ಅದರಿಂದಾಗಿ ತನ್ನ ಪ್ರೇಯಸಿಗೆ ಕಥೆ ಹೇಳಿದಂತೆ ಕಲ್ಪಿಸಿಕೊಂಡು, ಸರಸ ಸಂಭಾಷಣೆ, ರಸಿಕಸಂಬೋಧನೆ, ರಸ ಶೃಂಗಾರ ವರ್ಣನೆಗಳನ್ನು ತುಂಬಿ ಕಾವ್ಯ ರಚನೆ ಮಾಡಿದ್ದಾನೆ. ಅವನ ರಸಿಕತೆಯಲ್ಲಿ ತಾರುಣ್ಯದ ಒಗರು, ಹುಳಿ ತುಂಬಿವೆ. ಕಂಡು ಹಾಡಿದ, ಕೇಳಿ ಮೆಚ್ಚಿದ ಹೆಣ್ಣು ಅವನ ಮೋಹಮದಿರೆ 'ಸುಜ್ಞಾನ ವಧೂಟಿ'. ಅವಳು ಕಾಮಶಾಸ್ತ್ರದ 'ಶ್ರೀ'ಕಾರವೆಂಬ ಅಕ್ಷರದ ಆಕಾರದಂತೆ ಮುದ್ದಾಗಿ ಮುರುಟಿಕೊಂಡಿರುವ ಕಿವಿಯುಳ್ಳವಳು, ಬಡನಡುವಿನ ಬೆಡಗಿ, ಭಾಮಿನಿಯರನ್ನೆ, ಕೊಡಮೊಲೆಯ ಹೆಣ್ಣು, ವಿಶಾಲನೇತ್ರೆ ಏನೆಲ್ಲ ಆಗಿದ್ದಾಳೆ ! ಕನಕದಾಸನ ರಸಿಕತೆ ಇಲ್ಲಿ ಓತಪ್ರೋತವಾಗಿದೆ. ರುಕ್ಮಿಣಿ ಕೃಷ್ಣನನ್ನು ಕುರಿತು ತನಗೊಂದು ಮಗುಬೇಕು ಎಂದಳಂತೆ. ಆಗ

> ನಕ್ಕನು ಕೃಷ್ಣ ನಲ್ಲೆಯ ಮಾತ ಕೇಳ್ದು ನೀ । ಮಕ್ಕಳ ಪಡೆದ ಮಾತ್ರದಲಿ
> ಕಕ್ಕಸಮೊಲೆ ಜಜೆದಪುದೆಂದು ಕಟಕಿಯ । ನೊಕ್ಕಣಿಸಿದನು ವಲ್ಲಭೆಯ ॥[26]

ಈ ರಸಿಕ ಚಕ್ರಿಗೆ–

> ಮಗುವುಂಡು ಬಲ್ಮೊಲೆ ತೊರೆದರೆ ಮತ್ತಿಷ್ಟು । ಬಿಗುಹುದೋಱುವುದುರಸ್ಥಳದಿ
> ಲಗುಗೆಯ್ಯದೆನ್ನ ಬಿನ್ನಪವ ಲಾಲಿಪುದೆಂದು । ಸುಗುಣಂಗೆ ಬಿನ್ನವಿಸಿದಳು.[27]

ಇಂತಹ ಸಂಭೋಗಶೃಂಗಾರದ ಪೂರ್ಣಾನುಭವಿ ಎಂದಿಗೂ ದಾಸದೀಕ್ಷೆಯನ್ನು ಪಡೆದ ಸಂತನಾಗಿದ್ದಿರಲಾರ ಆಗ.

ಮತ್ತೊಂದು ಮಾತು : ವಿಜಯನಗರದ ಅರಸು, ತನ್ನ ಸ್ವಾಮಿ, ಒಡೆಯ, ಸಾರ್ವಭೌಮ, ಶ್ರೀಕೃಷ್ಣದೇವರಾಯನನ್ನು ತನ್ನ ಕಾವ್ಯನಾಯಕ ಶ್ರೀ ಕೃಷ್ಣನೊಡನೆ ಸಮೀಕರಿಸಿ ಹೇಳುವುದು, ಪಂಪ ರನ್ನರಂತೆ ಸಮೀಕರಣ ನೇರವಾಗಿಲ್ಲದಿದ್ದರೂ ಕೃಷ್ಣನ ವ್ಯಾಜದಲ್ಲಿ ಕೃಷ್ಣದೇವರಾಯನ ಬಹುವಿಧ ಬಣ್ಣನೆ ಬಿತ್ತರಗೊಂಡಿರುವುದು ಸತ್ಯ 'ಸುಖಾಢ್ಯಪಾಲಕ ಕೃಷ್ಣ ಸುಖ ಸಾಮ್ರಾಜ್ಯವಾಳಿದ ಮುದದೆ' ಎನ್ನುವೆಡೆಯಲ್ಲಿ ನಮ್ಮ ಕಣ್ಣೆದುರು ಧುತ್ತನೆ ಬಂದು ನಿಲ್ಲುತ್ತಾನೆ ವಿಜಯನಗರದರಸು ಶ್ರೀಕೃಷ್ಣದೇವರಾಯ. ಇಂಥೆಡೆಗಳಲ್ಲಿ ಶ್ರೀಹರಿಯ ಅನನ್ಯಸ್ಮರಣೆಗಿಂತ, ಮನುಕುಲತಿಲಕ ಶೀಕೃಷ್ಣದೇವರಾಯನ ವೈಭವೀಕರಣ ಎದ್ದುಕಾಣುತ್ತದೆ. ದೈವಭಕ್ತಿಗೆ ಮಿಗಿಲಾದ ರಾಜಭಕ್ತಿ ಸ್ಫುಟಗೊಳ್ಳುತ್ತದೆ. ಇದನ್ನೆಲ್ಲ ಗಮನಿಸಿದರೆ

ಲೌಕಿಕಾಪೇಕ್ಷೆಯನ್ನೊಲ್ಲದ ಯಾವನೇ ಅಪರೋಕ್ಷ ಜ್ಞಾನಿ, ಆಧ್ಯಾತ್ಮಶುಕಿ ಇಂದಿದ್ದು ನಾಳೆ ಅಳಿಯುವ ಹುಲುಮಾನವನ ಹೊಗಳಿಕೆಗಾಗಿ ತನ್ನ ತಪ್ಪನ್ನು ವ್ಯಯಮಾಡಲಾರ. ಅವನಿಗೆ ನರಸ್ತುತಿಗಿಂತ ಹರಸ್ತುತಿ ಮಿಗಿಲಾಗುತ್ತದೆ. ಆತ ಆತ್ಮರತನಾಗುತ್ತಾನೆ, ಇಲ್ಲವೆ ಆತ್ಮಾನಂದ ಸಾಧಕ ಚೈತನ್ಯ ಚಿಂತಕನಾಗುತ್ತಾನೆ. ಮಾನವ ಮಟ್ಟದಿಂದ ಮೇಲೆ ನಿಂತ ಆತ ಮಾನವನಿಗಿಂತಲೂ ಕೆಳಗಿಳಿದು ಅವನ ಬಣ್ಣನೆಗೆ ತೊಡಗಲಾರ. ಲೋಕಕವಿಯಾಗಿದ್ದರೆ ಆ ಮಾತು ಬೇರೆ, ಆದರೆ ಕನಕದಾಸನಂಥ ಸಿದ್ಧ ಪುರುಷನನ್ನು, ಋಷಿಕವಿಯನ್ನು ರಾಜನಾದವನಿಂದ ಪೂರ್ಣಗೊಳಿಸಿಕೊಳ್ಳಬೇಕಾದ ಲೌಕಿಕಾಪೇಕ್ಷೆಗಳು ಯಾವುವೂ ಕಾಡುವುದಿಲ್ಲ ; ಕಾಡಬಾರದು. ಕಾಡಿದರೆ ಅವನು ಕವಿಯಾಗಬಹುದು, ಋಷಿಯಾಗಲಾರ. ಆದ್ದರಿಂದ ಕನಕದಾಸನು ತನ್ನಾಳ್ದವನನ್ನು ಅಂತೆಲ್ಲ ಬಣ್ಣಿಸಬೇಕಾಗಿದ್ದರೆ ಅವನಿನ್ನೂ ಕೃಷ್ಣದೇವರಾಯನ ಅಧೀನರಾಜನಾಗಿ, ಆಸ್ಥಾನಿಕನಾಗಿ, ಗಡಿರಕ್ಷಣೆಯ ದಣಾಯಕನಾಗಿ, ಇಲ್ಲವೆ ನೆಚ್ಚಿನ ಸೇನಾನಿಯಾಗಿ ಬದುಕು ಮಾಡುತ್ತಿದ್ದಿರಬೇಕು. ಆ ಜೋಳವಾಳಿಯ ಕಾರಣದಿಂದಾಗಿ ತನ್ನ ಕೃತಜ್ಞತೆಯ ಸಮೀಕರಣ ಸಾಧ್ಯವಾಗಿದೆ ಎನ್ನಿಸುತ್ತದೆ. ಒಟ್ಟಿನಲ್ಲಿ, ಮೋಹನ ತರಂಗಿಣಿ ಕನಕದಾಸನ ಚೊಚ್ಚಲ ಕೃತಿಯಾಗಿದ್ದು, ತನ್ನ ಅಧೀನ ಆಡಳಿತಾಧಿಕಾರದ ಅವಧಿಯಲ್ಲಿ ತನ್ನ ಭೋಗಭೂಮಿ ಬಾಡದಲ್ಲಿ ರಚಿತವಾದದ್ದು ಎಂದು ಹೇಳಬಹುದು.

ಕನಕದಾಸರ ಬದುಕಿಗೊಂದು ತಿರುವುಕೊಟ್ಟ ಸ್ಥಳ ವಿಜಯನಗರದ ವ್ಯಾಸರಾಯರ ಶ್ರೀಮಠ. ಅವರು ದಾಸದೀಕ್ಷೆಯನ್ನು ಪಡೆದದ್ದು ಅಲ್ಲಿಯೇ. ಅಲ್ಲಿ ಪುರಂದರದಾಸರ ಸಖ್ಯ ವ್ಯಾಸರಾಯರ ವಾತ್ಸಲ್ಯಗಳು ಲಭಿಸಿದುವು. ಕುಲದ ಕಹಿ ಉಣಿಸು ದೊರೆತದ್ದು ಅಲ್ಲಿಯೇ ಆಶುಕವಿಯಾಗಿ ಅನೇಕ ಕೀರ್ತನೆಗಳನ್ನು ಕರ್ನಾಟಕ ಸಂಗೀತ ಪದ್ಧತಿಯಲ್ಲಿ ಹಾಡಿದರು. ಉಪಲಬ್ಧವಿರುವ ನೂರಾರು ಕೀರ್ತನೆಗಳು ಜನ್ಮ ತಳೆದದ್ದೂ ಹಂಪೆಯಲ್ಲಿ, ರಾಯರ ಆಶ್ರಯದಲ್ಲಿ, ತುಂಗಭದ್ರಾ ತರಂಗಿಣಿಯ ತೀರದಲ್ಲಿ, ನಿಸರ್ಗದ ಪರಿಶುದ್ಧ ಹಾಗೂ ಪ್ರಶಾಂತ ಪರಿಸರದಲ್ಲಿ. ಒಟ್ಟಿನಲ್ಲಿ ಅವರ ಕೀರ್ತನೆಗಳ ಕಂಡರಣೆ ವ್ಯಾಸದೇಗುಲದಲ್ಲಿ.

ನಳಚರಿತ್ರೆ, ಹರಿಭಕ್ತಿಸಾರ ಮತ್ತು ರಾಮಧಾನ್ಯ ಚರಿತ್ರೆಗಳನ್ನು ದಾಸರು ಬಹುಶಃ ಎಲ್ಲಾ ತ್ಯಾಗ ಭೋಗಗಳನ್ನೂ ಮುಗಿಸಿ ಕಾವ್ಯಯೋಗದಲ್ಲಿ ಮಗ್ನರಾದಾಗ; ಕಾಗಿನೆಲೆಯಲ್ಲಿ ಅಂತಿಮ ಕರೆಯ ಆಗಮನ ನಿರೀಕ್ಷೆಯಲ್ಲಿದ್ದಾಗ ರಚಿಸಿದ್ದಿರಬಹುದು. ಈ ಕೃತಿಗಳಲ್ಲಿ ಶ್ರೀವೈಷ್ಣವ ಅಥವಾ ಮಾಧ್ವ ಪಂಥಗಳ ಪ್ರಸ್ತಾವವಿಲ್ಲ ; ಆಗಿಹೋದ ಗುರುಗಳ ಸ್ಮರಣವಿಲ್ಲ ; ಆಳಿ ಬಾಳಿದ ಪ್ರಭುವಿನ

ಪ್ರಶಂಸೆ ಪ್ರಶಸ್ತಿಗಳಿಲ್ಲ. ಇಲ್ಲಿರುವುದು ಪ್ರಾಂಜಲ ಮನಸ್ಸಿನ ಶುದ್ಧಸಾಹಿತ್ಯ. ಇಲ್ಲಿನದು ಅಪ್ರತಿಹತ ಶಕ್ತಿಯೆನಿಸಿದ ದೈವದ ಪ್ರಭಾವ ಪ್ರಾಚುರ್ಯಗಳ ಬಿತ್ತರಣೆ. ಈ ಮೂರೂ ಕೃತಿಗಳಲ್ಲಿ ಆದಿಕೇಶವನ ಅಂಕಿತ ಸಾಮಾನ್ಯವಿದೆ. ಆದರೆ ನಳಚರಿತ್ರೆ ಮತ್ತು ರಾಮಧಾನ್ಯ ಚರಿತ್ರೆಗಳಲ್ಲಿ ವರಪುರದರಸ, ವರಪುರದರಸ ಚೆನ್ನಿಗರಾಯ, ವರಪುರದಚೆನ್ನಿಗ, ಚೆನ್ನಿಗರಾಯ. ವರಪೌರ ಚೆನ್ನಿಗರಾಯ, ವರಪುರಾಭಿತ ಚೆನ್ನಕೇಶವ ಎಂದಿದ್ದರೆ, ಹರಿಭಕ್ತಿಸಾರದಲ್ಲಿ 'ಸುರಪುರ ನಿಲಯ ಚೆನ್ನಿಗರಾಯ' ಎಂದಿದೆ. ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ಹರಿಭಕ್ತಿ ಸಾರಕ್ಕೆ ಸರಳಭಾವ ವಿವರಣೆ ಇತ್ತ ಎನ್. ರಂಗನಾಥಶರ್ಮರು ಇದಕ್ಕೆ 'ಬೇಲೂರು ನಿವಾಸ ಚೆನ್ನಕೇಶವ' ಎಂದು ಅರ್ಥೈಸಿದ್ದಾರೆ[28]. ಆದರೆ 'ಸುರಪುರ' ಎಂಬುದಕ್ಕೆ 'ಬೇಲೂರು' ಎಂಬರ್ಥ ಹೇಗೆ ಬಂತೋ ತಿಳಿಯದು. ಬಹುಶಃ ಇಲ್ಲಿನ 'ಸುರಪುರ' 'ವರಪುರ' ಎಂದೇ ಇದ್ದಿರಬೇಕು. ಆದ್ದರಿಂದ 'ವರಪುರನಿಲಯ ಚೆನ್ನಿಗರಾಯ' ಎಂದರೆ, ಕನಕನ ಕುಲದೇವತೆ ಬಾಡದ ಚೆನ್ನಕೇಶವನಲ್ಲದೆ ಬೇರಲ್ಲ. ಹರಿಭಕ್ತಿಸಾರದ ಒಂದು ಪದ್ಯ ಹೀಗಿದೆ :

ಬಾದರಾಯಣ ಪೇಳ್ದ ಭಾರತ । ಕಾದಿ ಕರ್ತನುದಾರ ಶ್ರೀಪುರ
ದಾದಿ ಕೇಶವ ಮೂರ್ತಿ ಅಂಕಿತವಾದ ಚರಿತೆಯನು ॥
ಮೇದಿನಿಯೊಳಿದನಾರು । ಹೃದಯದೊಳಾದರಿಸಿ ಕೇಳ್ದಪರು ಮುದದಲಿ
ಯಾದಿ ಮೂರುತಿವರಪುರಾಧಿಪನೊಲಿವನನವರತ ॥[29]

ಇಲ್ಲಿ 'ಪುರದಾದಿಕೇಶವ', 'ವರಪುರದಾದಿಕೇಶವ' ಎಂಬ ಇಬ್ಬರು ಕೇಶವರಿದ್ದಾರೆ. ಇವರಲ್ಲಿ ಮೊದಲನೆಯವನು ಕಾಗಿನೆಲೆಯ ಆದಿಕೇಶವ ಸ್ವಾಮಿ, ಎರಡನೆಯವನು ಬಾಡದ ಆದಿಕೇಶವ ಸ್ವಾಮಿ. ಇದಕ್ಕೆ ಪೂರಕವಾಗಿ :

ಲೋಕದೊಳಗತ್ಯಧಿಕನೆನಿಸುವ । ಕಾಗಿನೆಲೆ ಸಿರಿಯಾದಿಕೇಶವ
ತಾಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು ॥
ಜೋಕೆಯಲಿ ಬರೆದೋದಿ ಕೇಳ್ದರ । ನಾಕುಲದಿ ಮಾಧವನು ಕರುಣಿಪ ।
ಶ್ರೀಕಮಲವಲ್ಲಭನು ಮಿಗೆ ಬಿಡದಾದಿಕೇಶವನು ॥[30]

ಎಂಬ ಪದ್ಯದಲ್ಲಿ ಈ ಕೃತಿಯನ್ನು ನುಡಿಸಿದವನು ಕಾಗಿನೆಲೆಯ ಶ್ರೀ ಅಥವಾ ಸಿರಿಯಾದಿ ಕೇಶವ, ಇದನ್ನು ಶ್ರದ್ಧಾಭಕ್ತಿಯಿಂದ ಬರೆದು ಓದಿ, ಕೇಳಿದವರನ್ನು ಅನಾಕುಲದಿಂದ ಕರುಣಿಸುವವನು ಬಾಡದಾದಿ ಕೇಶವ ! ಬಾಡ ಅಥವಾ ವಾಡ ಎಂಬುದಕ್ಕೆ 'ಪುರ' ಎಂದರ್ಥ, ರಂಗನಾಥಶರ್ಮ ಹೇಳುವ 'ಬೇಲೂರು' ಎಂದಲ್ಲ. ಬೇಲೂರು ಚೆನ್ನಕೇಶವನಿಗೂ ಇಲ್ಲಿನ ಬಾಡದಾದಿಕೇಶವನಿಗೂ ಯಾವ ಸಂಬಂಧವೂ ಇಲ್ಲ.

ಇಲ್ಲಿ ಗಮನಿಸಬೇಕಾದ ಮತ್ತೊಂದು ಮಾತಿದೆ :

ಹರಿಭಕ್ತಿಸಾರ ಪೂರ್ಣಗೊಂಡ ಮೇಲೆ ಭಿನ್ನ ಛಂದಸ್ಸಿನ ಹೊಸದೊಂದು 'ಮಂಗಳ ಪದ' ಇದೆ. ಇದು ಬಹುಶಃ ಕನಕದಾಸರ ರಚನೆ ಆಗಿರಲಾರದು. ಒಂದು ವೇಳೆ ಆಗಿದ್ದರೆ 'ಹರಿಭಕ್ತಿಸಾರ'ಕ್ಕಾಗಿ, ಅದರ ರಚನಾಸಂದರ್ಭದಲ್ಲಿ ಬರೆದದ್ದಲ್ಲ. ಬೇರೆಡೆ ಹಾಡಿಕೊಂಡದ್ದನ್ನು ಇಲ್ಲಿ ತಂದು ಸೇರಿಸಿದ್ದಾರೆ. ಇಷ್ಟಾದರೂ ಇದು ಪ್ರಕ್ಷಿಪ್ತವೆಂಬ ಗುಮಾನಿ ಪ್ರಬಲವಾಗಿ ಉಳಿಯುತ್ತದೆ.

ಏಕೋ ಏನೊ ಕೆಲವರಿಗೆ 'ವರಪುರ ನಿಲಯ ಚೆನ್ನಿಗರಾಯ', 'ವರಪೌರ ಚೆನ್ನಿಗರಾಯ' ಎಂದ ಕೂಡಲೆ ಥಟ್ಟನೆ ಬೇಲೂರ ಚೆನ್ನಕೇಶವ ಅವರ ಕಣ್ಣೆದುರಲ್ಲಿ ಬಂದು ನಿಲ್ಲುತ್ತಾನೆ. ಆದರೆ ಬೇಲೂರ ವಿಜಯನಾರಾಯಣನು ಚೆನ್ನಕೇಶವ ಎಂದು ಕರೆಸಿಕೊಂಡದ್ದು ಇತ್ತೀಚೆಗೆ. ವಿಷ್ಣುವರ್ಧನನು ಚೋಳರಿಂದ ತಲಕಾಡನ್ನು ಗೆದ್ದುದರ ಅಗ್ಗಳಿಕೆಗಾಗಿ, 'ತಲಕಾಡು ಗೊಂಡ' ಎಂಬ ಬಿರುದನ್ನಾಂತುದಲ್ಲದೆ, ತಾನು ಸಾಧಿಸಿದ ವಿಜಯದ ಸಂಕೇತವಾಗಿ ಬೇಲೂರು, ತಲಕಾಡು, ಮೇಲುಕೋಟೆ, ತೊಣ್ಣೂರು ಮತ್ತು ಗದಗ–ಈ ಐದೆಡೆಗಳಲ್ಲಿ ಹೇವಿಳಂಬಿ ಚೈತ್ರ ಶುದ್ಧ ಪಂಚಮೀ ಶನಿವಾರ (20 ಮಾರ್ಚ್ 1117) ದಂದು ವಿಜಯನಾರಾಯಣರನ್ನು ಸಂಸ್ಥಾಪಿಸಿದನೆಂದು ಅವನೇ ಹಾಕಿಸಿದ ಶಾಸನವು ಸಾರುತ್ತಿದೆ. ಆದ್ದರಿಂದ ಬೇಲೂರಲ್ಲಿರುವಾತ 'ವಿಜಯ ನಾರಾಯಣ' 'ಚೆನ್ನಕೇಶವ' ಅಲ್ಲ ; ಕಾಗಿನೆಲೆ ಮತ್ತು ಬಾಡಗಳಲ್ಲಿರುವಾತ 'ಆದಿಕೇಶವ !.

ಇಂತಿಷ್ಟು ವಿಚಾರಮಂಥನದ ಅಂತ್ಯದಲ್ಲಿ ಕನಕದಾಸರ ಕೃತಿಗಳ (ಕಾವ್ಯವಾಗಲಿ, ಕೀರ್ತನೆ ಆಗಲಿ) ಅಂಕಿತ 'ಆದಿಕೇಶವ' ಎಂದುಳಿಯುತ್ತದೆ. ಮಿಕ್ಕಂತೆ ಬೇರೆ ಯಾವುದೇ ಅಂಕಿತವಿದ್ದರೂ ಅದು ಕನಕದಾಸರದ್ದಲ್ಲ ಎಂಬ ಸ್ಪಷ್ಟೀಕರಣ ನೀಡಬೇಕಾಗುತ್ತದೆ. ಏಕೆಂದರೆ "ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಪುಸ್ತಕಾಲಯದಲ್ಲಿ 'ದಾಸರ ಪದಗಳು ಅಥವಾ ದಾಸರ ಹಾಡುಗಳು' ಎಂಬ ಕಟ್ಟುಗಳಿವೆ. ಅದರಲ್ಲಿ ಎಲ್ಲ ದಾಸರ ಹಾಡುಗಳೂ ಇವೆ. ಕನಕದಾಸರ ಹಾಡುಗಳು ಪ್ರತ್ಯೇಕ ಇದ್ದಂತೆ ಕಾಣುವುದಿಲ್ಲ. ಕಾಲಕ್ರಮದಲ್ಲಿ ಕನಕದಾಸರ ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿದಂತೆ ತೋರುತ್ತದೆ. ಇತರರ ಕೃತಿಗಳೂ ಇವರ ಹಾಡುಗಳೊಂದಿಗೆ ಬೆರೆತಿರುವುದೂ ಉಂಟು. ಉದಾಹರಣೆಗೆ ಮುಪ್ಪಿನ ಷಡಕ್ಷರಿಯ 'ತಿರುಕನೋರ್ವನೂರಮುಂದೆ' ಎಂಬುದು ಕನಕದಾಸರ ಹಾಡುಗಳಲ್ಲಿ ಸೇರಿಹೋಗಿದೆ. ಕನಕದಾಸರ ವಾಕ್ಚಿತ್ರದಲ್ಲಿ ಕೂಡ ಬಳಕೆಯಾಗಿದೆ. ಹಾಗೆಯೇ ಕನಕದಾಸರ ಕೃತಿಯೊಂದು ಪುರಂದರದಾಸರ ಕೃತಿಗಳಲ್ಲಿ (ದ್ರೌಪದಿ ವಸ್ತ್ರಾಪಹರಣ)

ಸೇರಿಹೋದುದೂ ಉಂಟು. ಕನಕದಾಸರ ಕೃತಿಗಳ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ ಎನ್ನಿಸುತ್ತದೆ."[33] ಅದಕ್ಕೆ ಮೊದಲು ಸಮಗ್ರ ಸಂಕಲನ, ಶುದ್ಧ ಸಂಪಾದನ, ಪ್ರಬುದ್ಧ ಪರಿಷ್ಕರಣಗಳ ಅಗತ್ಯ ಇದೆ. ಕಾಗದದ ಮೇಲಿರುವ– ಓಲೆ ಗರಿಗಳ ಮೇಲಲ್ಲ–ಕೀರ್ತನೆ ತೊಳಸಂಬಟ್ಟೆಯನ್ನು ತೊಡೆದು ಹಾಕಿ, ಕೂಲಂಕಷವಾಗಿ ಪರಿಶೀಲಿಸಿ ಶುದ್ಧಪಾಠಾಂತರಗಳೊಡನೆ ಶುದ್ಧಪ್ರತಿಯನ್ನು 'ಹೊರತರುವ ಅಗತ್ಯ ಇದೆ ಎಂಬುದಕ್ಕೆ ಯಾವ ವಿರೋಧವೂ ಇರಲಾರದು !

ಐದು

ಕನಕದಾಸರು ತಮ್ಮ ಕಡೆಯದಿನಗಳನ್ನು ಕಾಗಿನೆಲೆಯಲ್ಲಿ ಕಳೆದಿರಬಹುದು. ಮೇಲಿನ ಕೃತಿತ್ರಯಗಳು ಆ ವೇಳೆಯಲ್ಲಿ ರಚಿತವಾದುವೆಂದು ಗುರುತಿಸಿದ್ದಾಯಿತು. ಆದರೆ ಅವರ ಬದುಕಿನಲ್ಲಾದ ಬದಲಾವಣೆಗೆ ಅವರ ಮನಃಪರಿವರ್ತನೆಗೆ, ವೀರ ವೈರಾಗ್ಯಕ್ಕೆ ಒದಗಿಬಂದ ಸಂದರ್ಭ ಸ್ಪಷ್ಟವಾಗಿ ತಿಳಿಯುತ್ತಿಲ್ಲ. ಕಲಿ ಇದ್ದವನು ಕವಿ ಆಗಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಅದು ಸಹಜ. ಅದಕ್ಕೆ ಸಂಪಾದಿಗಳು ಪ್ರಮಾಣಭೂತರಾಗಿದ್ದಾರೆ. ಆದರೆ ಸಾಮಂತನು ಸಂತನಾದದ್ದು ಸುದ್ದಿ ! ಬಹುಶಃ 'ನೀನು ನನ್ನ ದಾಸನಾಗು........ ದಾಸನಾಗು' ಎಂಬ ಯಾವುದೋ ಅವ್ಯಕ್ತದ ಕರೆ ಅಥವಾ 'ಚಿಕ್ಕಂದು ಮೊದಲೆ ನಾನು ರಂಗಯ್ಯ ನೀನೇ ದಿಕ್ಕೆಂದು ನಂಬಿದೆನೊ ರಂಗಯ್ಯ'[34] ಎಂಬ ಅಂತರಂಗದ ಅಚಲ ನಂಬಿಕೆ ಇದ್ದಿರಬೇಕು. ಇವೆರಡಕ್ಕೂ ಮಿಗಿಲಾದ ಕಾರಣ ತನಗಾದ ರಣರಂಗದ ಸೋಲು ಎನ್ನಿಸುತ್ತದೆ. ಕನಕದಾಸರೇ ಬರೆದ ಕೀರ್ತನೆಯೊಂದು ಇದಕ್ಕೆ ಸಾಕಷ್ಟು ಮಾಹಿತಿ ಒದಗಿಸುತ್ತದೆ.[35] ಆರಂಭದ ಪಲ್ಲವಿ, ಅನುಪಲ್ಲವಿ ಹಾಗೂ ಮೊದಲ ಚರಣಗಳಲ್ಲಿ ಶ್ರೀ ಹರಿಯ ವಾತ್ಸಲ್ಯ ಅಭಿವ್ಯಕ್ತವಾಗಿದೆ ;

ಶ್ರೀಹರಿಯೆ, ಮೂಲ ಸದ್ಗುರು ನೀನಾಗಿ ನನಗೆ ಮಂತ್ರೋಪದೇಶ ಮಾಡಿದೆ. ನಿನ್ನ ಸೇವಾ ಸಾನ್ನಿಧ್ಯ ದೊರೆತದ್ದೂ ನಿನ್ನ ಕಾರುಣ್ಯದಿಂದ. ಮೊದಮೊದಲು ನಿನ್ನ ಉಪದೇಶವನ್ನು ಪ್ರತಿಭಟಿಸಿ ಮೆರೆದೆ. ಅದನ್ನೆಲ್ಲ ನೀನು ಕ್ಷಮಿಸಿಬಿಟ್ಟೆ ಎಂದು ಅವನ ಗುಣಗಾನಗೈದು, 'ಸುದತಿ ಮಕ್ಕಳ ಮೋಹ ಮದವೇರಿ ನಾನಿರಲು ಪದುಮಾಕ್ಷ ನೀ ಬಂದು ಪದೇ ಪದೇ ಸಾರಿದೆಯೊ' ಎಂದು ಅವನ ಔದಾರ್ಯವನ್ನು ಹೊಗಳುತ್ತದೆ. ಇಲ್ಲಿ ಕನಕದಾಸ ಹುಟ್ಟು ಸಂನ್ಯಾಸಿಯೊ ಸಂತನೊ ಆಗಿರಲಿಲ್ಲ, ಎಲ್ಲರಂತೆ ಓರ್ವ ಸಂಸಾರಿಯಾಗಿದ್ದ. ತನ್ನ ಹೆಂಡತಿ ಮಕ್ಕಳಲ್ಲಿ ವಿಶೇಷ ಪ್ರೇಮ ಪ್ರೀತಿ ಉಳ್ಳವನೂ ಆಗಿದ್ದ ಎಂಬುದು ವೇದ್ಯವಾಗುತ್ತದೆ.

ಆದರೆ ಅವನ ಮಡದಿ ಮಕ್ಕಳ ಬಗೆಗೆ ಹೆಚ್ಚು ಮಾಹಿತಿ ಇಲ್ಲ, ಇರಲಿ. ಕನಕದಾಸನು ತನ್ನ ಯೌವನದ ದಿನಗಳಲ್ಲಿ ಮೋಹಕ್ಕೆ ವಶನಾಗಿ, ಮದವೇರಿ ಮೆರೆಯುತ್ತಿದ್ದಾಗ ಪದೇಪದೇ ಹತ್ತಿರ ಬಂದು 'ಇದು ಸಲ್ಲ, ಇದು ಸಲ್ಲ' ಎಂದು ಉಸುರುತ್ತಿದ್ದುದುಂಟಂತೆ ! ಆದರೂ ಅದು ಅವನ ಕಾಮಭರಿತ ಕಿವಿಗಳನ್ನು ಪ್ರವೇಶಿಸಲೇ ಇಲ್ಲ. ಬಯಸಿದ ಕಾಮವನ್ನು ತಣಿಸುವುದರಲ್ಲೆ ದಿನಗಳು ಕಳೆದದ್ದಾಯಿತು. ಉಂಡಷ್ಟೂ ಹಸಿವು, ಕುಡಿದಷ್ಟೂ ದಾಹ ಎಂಬಂತಹ ಕಾಮ ಕಡೆಯವರೆಗೂ ತೃಪ್ತಿಗೊಳ್ಳಲಿಲ್ಲ. ಆಗ ಭಕ್ತೋದ್ಧಾರಕ ಮತ್ತೆ ಮಾರ್ಗ ಹುಡುಕಿದ. ಅಂದರೆ ವಿಜಯನಗರದ ಸಾಮ್ರಾಟನ ಪರವಾಗಿ, ಗಡಿಪ್ರದೇಶದಲ್ಲಿದ್ದ ತನ್ನ ಆಡಳಿತ ವ್ಯಾಪ್ತಿಯ ವಲಯಕ್ಕೆ ದಾಳಿ ಬಂದ ಶತ್ರುಗಳನ್ನು ಪ್ರತಿಭಟಿಸಿ ಕನಕದಾಸನು ಯುದ್ಧಮಾಡುವಂತೆ ಮಾಡಿ, ಆ ಘೋರ ಸಂಗ್ರಾಮದಲ್ಲಿ ಸೋಲು ಸಂಭವಿಸುವಂತೆಸಗಿ, ಕಡೆಗೆ ರಣಾಂಗಣದಲ್ಲಿ ತನ್ನ ಬೆನ್ನು ಹತ್ತಿ ಬಂದ ವೀರರಾಹುತರ ಬಲವಾದ ಹೊಡೆತಕ್ಕೆ ಪ್ರಜ್ಞಾಶೂನ್ಯನಾಗಿ ಬೀಳುವಂತೆ ಮಾಡಿದನಂತೆ ! ಹೇಳುತ್ತಾನೆ–

> ಅರಿಗಳು ದಂಡೆತ್ತಿ ಬರಲು ನಾನವರೊಡನೆ
> ಪರಿಪರೀ ಹೋರುತಿರಲು
> ದುರುಳರೆನ್ನನು ಜೈಸಿ ಹರಿದಟ್ಟಿ ಬಂದೆನ್ನ
> ಧರೆಗುರುಳಿಸಿದರೊ ಹರಿಯೆ

ಎಂದು.

ಆ ಮಹತ್ವದ ಘಟನೆ ಅವನ ಬದುಕಿಗೊಂದು ಹೊಸ ತಿರುವು ಕೊಟ್ಟಿತು. ಅವನ ವೀರತ್ವ ವೈರಾಗ್ಯಕ್ಕೆ ಒಲಿಯಿತು ; ಮಣಿಯಿತು. ಆಗ–

> ಸಾರಿ ಹೊರಡುವ ಛತ್ರ ಭೇರಿ ತಮ್ಮಟೆಗಳು
> ಭೋರೆಂಬ ವಾದ್ಯಗಳು ಹರಿಯೆ
> ವೀರ ರಾಹುತ ಬಲದ ಭಾರವನು ತರಿದಹಂ
> ಕಾರವನು ಮುರಿದೆ ಹರಿಯೆ !

ಎಂದು ಅವನ ಒಳಗಿನೊಳಗು ನುಡಿಯಿತು ! ಆ ನುಡಿಗೆ ಮಣಿದು ಮಹಾತ್ಮನಾದ. 'ನಾನು ಇಲ್ಲ, ನೀನೆ ಎಲ್ಲ' ಎಂಬುದನ್ನು ಸಾರಿ ಸಂತನಾದ. ಅಂದಾದ ಅರಿವು ಇದು–

> ದೊರೆತನವ ಬಿಡಿಸಿ ಸುಸ್ಥಿರ ಮಾರ್ಗವನೆ ತೋರಿ
> ಪರಿಪಾಲಿಸಿದೆಯೆನ್ನ ಹರಿಯೆ

ದುರುಳತನದಲಿ ಜನರ ಪರಿಪರೀ ಬಾಧಿಸಿ
ಸೂರೆಗೊಂಬುದು ಪರಿಹಾರವಾಯಿತು ಹರಿಯೆ

ರಾಜನೆಂಬವನೊಬ್ಬ ಹಗಲು ದರೋಡೆಕೋರ. ಕಳ್ಳನ ಮನೆಯನ್ನೆ ಕೊಳ್ಳೆ ಹೊಡೆಯುವ ಬಹುದೊಡ್ಡ ಕಳ್ಳ. ಅವನೆಂತು ಪ್ರಜಾಪಾಲಕನೊ ಅಂತೆಯೇ ಪ್ರಜಾಪೀಡಕನೂ ಆಗಿದ್ದಾನೆ. ಸಿಕ್ಕಿದ ಶತ್ರುವರ್ಗವನ್ನು ಸುಲಿದು, ಸೂರೆಗೈವ ಲೂಟಿಕಾರ, ಕಗ್ಗೊಲೆಯ ಕಟುಕ. ಇಂತಹ ಕಲುಷಿತವಾದ ದೊರೆತನದಿಂದ ದೂರಮಾಡಿ, ಶ್ರೀಹರಿಯ ಪದಭಕ್ತನೆನಿಸುವ ಭಾಗ್ಯವನ್ನು ಕರುಣಿಸಿದನಂತೆ ಆ ಕಾಗಿನೆಲೆಯಾದಿಕೇಶವ. ಆಗ ಭಕ್ತ ಬೇಡುತ್ತಾನೆ–

ನೀರು ಮುಕ್ತಿಯ ಸೇರಿ ತೋರ ಮುತ್ತಾದ ಪರಿ
ಸೇರಿಸೊ ನಿನ್ನಂಘ್ರಿಯ ಹರಿಯೆ
ಆರಿಗಂಜುವನಲ್ಲ ಅಧಿಕಪುರಿ ಕಾಗಿ
ನೆಲೆಯಾದಿಕೇಶವನಾದ ಶ್ರೀಹರಿಯೆ

ಎಂದು.

ಅಂದರೆ ಕಪ್ಪೆಚಿಪ್ಪಿನಲ್ಲಿ ಬಿದ್ದ ಸ್ವಾತಿಮಳೆಯ ಒಂದುಹನಿ ತೋರ ಮುತ್ತಾದಂತೆ ಪರಮಾತ್ಮನ ಪದಶುಕ್ತಿ ಸೇರಿದ ಜೀವಾತ್ಮ ಮೌಲಿಕದ ಮುತ್ತಾಗುತ್ತದೆ; ಬೆಳಕು ಬೆಳಗಲಿ ಬೆರೆದು ವಿಶ್ವಜ್ಯೋತಿಯಾಗುತ್ತದೆ. ಸಾಗರವನ್ನು ಸೇರಿದ ಹನಿ ಸಾಗರದ ಸಾಮರ್ಥ್ಯ ಪಡೆದಂತೆ ಸಾಗರವೆ ತಾನಾದಂತೆ ಅಮರತ್ವವನ್ನು ಪಡೆಯುತ್ತದೆ. ಆಗ ಅದರಲ್ಲಿ ರವಿಯ ತಾಪವೂ ಇಲ್ಲ, ಶಶಿಯ ಶೈತ್ಯವೂ ಇಲ್ಲ. ಯಾವುದೇ ಬಗೆಯ ತಿರೋಹಿತತ್ವವಿಲ್ಲದ ತೀರ್ಥವಾಗುತ್ತದೆ, ಕನಕದಾಸ ಅಂತಾದವನು, ಕನ್ನಡಾಂಬೆಯ ಕೀರ್ತಿಗೆ ಕುಡಿಯಾಗಿ ಮೂಡಿದವನು.

ಕನಕದಾಸ ಋಷಿಕವಿ, ಸಂತಕವಿ, ಮಹಾಕವಿ ; ಖ್ಯಾತಕೀರ್ತನಕಾರನೂ ಅಹುದು. ಗಂಗೆಯಂತೆ ನಿರ್ಮಲ, ಅಗ್ನಿಯಂತೆ ಪರಿಶುದ್ಧ ಆದ ಆತನ ಪ್ರಾಂಜಲ ಮನಸ್ಸು ಆನಂದದಿಂದ ಹಾಡಿಕೊಂಡಿತು :

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು ॥ ಪ ॥[36]
ಪದುಮನಾಭನ ಪಾದದೊಲುಮೆ ಎನಗಾಯಿತು ॥ ಅನು. ಪ ॥
ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು
ಹರಿಯ ನಾಮಾಮೃತ ಕಿವಿಗೊದಗಿತು
ಹರಿಯ ದಾಸರು ಎನ್ನ ಬಂಧುಬಳಗಾದರು
ಹರಿಯ ಶ್ರೀಮುದ್ರೆ ಆಭರಣವಾಯಿತು. ॥೧॥

ಮುಕುತರಾದರು ಎನ್ನ ನೂರೊಂದು ಕುಲದವರು
ಮುಕುತಿ ಮಾರ್ಗಕ್ಕೆ ಯೋಗ್ಯ ನಾನಾದೆನೊ
ಅಕಳಂಕ ಶ್ರೀಹರಿ ಭಕುತಿಗೆ ಮನ ಬೆಳೆದು
ರುಕುಮಿಣಿಯರಸ ಕೈವಶನಾದನೆನಗೆ ॥೨॥
ಇಂದೆನ್ನ ಜೀವಕ್ಕು ಸಕಲ ಸಂಪದವಾಯ್ತು
ಮುಂದೆನ್ನ ಜನ್ಮ ಸಫಲವಾಯಿತು
ತಂದೆ ಶ್ರೀಕಾಗಿನೆಲೆಯಾದಿಕೇಶವರಾಯ
ಬಂದೆನ್ನ ಹೃದಯದ ನೆಲೆಯಾಗಿ ನಿಂತ ॥೩॥

## ಟಿಪ್ಪಣಿಗಳು

೧. ಬೆಟಗೇರಿ ಕೃಷ್ಣಶರ್ಮ, ಕನಕದಾಸರ ಹಾಡುಗಳು (೧೯೬೫), ಪು. ೨೦೧.
೨. ಅದೇ.
೩. ಕನಕದಾಸರ ಪದಗಳು, ಪದ ೫೧, ಕೂಸನು ಕಂಡೀರಾ, ಲಲಿತ ಪ್ರಕಾಶನ, ಹುಬ್ಬಳ್ಳಿ.
೪. ಪುರಂದರದಾಸರ ಕೀರ್ತನೆ, ಮೊದಲನೆಯ ಭಾಗ, ಪದ ೨೧೫, ಉಡುಪಿ ಪಾವಂಜೆ ಗುರುರಾವ್ ಅಂಡ್ ಸನ್ಸ್ ಪ್ರಕಟಣೆ.
೫. ಸಾ. ಶಿ. ಮರುಳಯ್ಯ, ಹೇಮಕೂಟ (ಕಾದಂಬರಿ), ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೬೬.
೬. ಶಿವಮೊಗ್ಗ ೮೫ನೆಯ ಶಾಸನ, ರೈಸ್ ಸಂಗ್ರಹಣೆ.
೭. ಕನಕದಾಸರ ಪದಗಳು, ಪದ ೫೦ ಮುತ್ತು ಬಂದಿದೆ ಕೇರಿಗೆ ಮತ್ತು ಪದ ೫೧ ಕೂಸನು ಕಂಡೀರಾ.
೮. ಜಿ. ವರದರಾಜರಾವ್, ಕನಕದಾಸರ ಕಾಲ, ದೇಶ ಮತ್ತು ಜೀವನ, ಕನಕಕಿರಣ, ಪು. ೩, (ಸಂ.) ಕಾ.ತ. ಚಿಕ್ಕಣ್ಣ.
೯. ಮೋಹನ ತರಂಗಿಣಿ, ಗರುಡನ ಸಂಧಿ (೩೬) ಪದ್ಯ ೪೨, (ಸಂ.) ಎಸ್. ಎಸ್. ಕೋತಿನ.
೧೦. ರಾ. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ, ದ್ವಿತೀಯ ಸಂಪುಟ (1919) ಪು. 237-38.

೧೧. ಕಟ್ಟಿಶೇಷಾಚಾರ್ಯ, ಕವಿ ಕನಕದಾಸರು (1938).
೧೨. ಅದೇ. ಪು. ೨೩೨–೩೩.
೧೩. ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚುರಾವ್, ಶ್ರೀ ಕನಕದಾಸರ ಭಕ್ತಿಗೀತೆಗಳು. ಪು. ೨೬೭–೬೮.
೧೪. ಡಾ. ಸಾ. ಶಿ. ಮರುಳಯ್ಯ, ನಮ್ಮ ನಾಡಿಗೆ ನಾಮಕರಣ ಮಾಡಿದವರು ಯಾರು? (ಲೇಖನ).
೧೫. ಕರ್ನಾಟಕ ಭಕ್ತಿವಿಜಯ (1963), ಪು. ೨೬೯–೭೦.
೧೬. ಸುಧಾ, ಸಂಪುಟ 1, ಸಂಚಿಕೆ 15. (18.4.1965), ಪು. 9.
೧೭. ಜನಪ್ರಿಯ ಕನಕ ಸಂಪುಟ, ಕುಲಕುಲವೆನ್ನುತಿಹರು, ಪು. ೨೫. (ಸಂ.) ದೇ. ಜವರೇಗೌಡ, ಎಲ್. ಎಸ್. ಶೇಷಗಿರಿರಾವ್, ದೇವೇಂದ್ರಕುಮಾರ ಹಕಾರಿ, ಎಚ್. ಜೆ. ಲಕ್ಕಪ್ಪಗೌಡ.
೧೮. ಅದೇ. ಯಾತರವನೆಂದುಸಿರಲಿ. ಪು. ೫೫.
೧೯. ಅದೇ. ಹೂವತರುವವರ ಮನೆಗೆ, ಪು. ೧೯.
೨೦. ಅದೇ. ಬದುಕಿದೆನು ಬದುಕಿದೆನು, ಪು. ೮೧.
೨೧. ಅದೇ. ಕುಲಕುಲವೆಂದು ಹೊಡೆದಾಡದಿರಿ, ಪು. ೨೬.
೨೨. ಬಿ. ಶಿವಮೂರ್ತಿಶಾಸ್ತ್ರೀ, ಕನಕದಾಸರ ಕೀರ್ತನೆಗಳು, ಪು. XIII
೨೩. ರಾ. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ (1919), ಪು. 237-38.
೨೪. ಮೋಹನ ತರಂಗಿಣಿ, ದ್ವಾರಕಾಪುರ ವರ್ಣನೆ, ಪದ್ಯ ೩೬ (ಸಂ.) ಎಸ್. ಎಸ್. ಕೋತಿನ.
೨೫. ಅದೇ. IV ಕಂದರ್ಪ ಜನನ, ಪದ್ಯ ೨.
೨೬. ಅದೇ. ಪದ್ಯ ೨೨.
೨೭. ಅದೇ. ಪದ್ಯ ೨೩.
೨೮. ಹರಿಭಕ್ತಿಸಾರ (೧೯೭೨) ಪದ್ಯ ೧, ಪು. ೩.
೨೯. ಅದೇ. ಪದ್ಯ ೧೦೪, ಪದ್ಯ ೫೨.
೩೦. ಅದೇ. ಪದ್ಯ ೧೦೮, ಪು. ೫೪.
೩೧. ಬಿ. ಶಿವಮೂರ್ತಿ ಶಾಸ್ತ್ರೀ, ಕನಕದಾಸರ ಕೀರ್ತನೆಗಳು, ಪು. XVI-XVII
೩೨. ಅದೇ. ಪದ ೮೩, ಪು. ೭೨.
೩೩. ಅದೇ. ಪದ ೯೨, ಪು. ೨೯.
೩೪. ಅದೇ. ಪದ ೯೭, ಪು. ೮೩.

~~೨೫~~

# ಕನಕದಾಸರ ಮೂಲ ಸ್ಥಳ?

**ಹ.ಕ. ರಾಜೇಗೌಡ**

ಕನಕದಾಸರು ಕನ್ನಡನಾಡಿನ ಒಬ್ಬ ಪ್ರತಿಭಾನ್ವಿತ ಕವಿ, ಕಲಿ, ಸಂತ ಎಂದು ಈವರೆಗೆ ಅವರ ಬಗ್ಗೆ ಬರೆದ ವಿದ್ವಾಂಸರೆಲ್ಲರೂ ಅಭಿಪ್ರಾಯಪಟ್ಟಿದ್ದಾರೆ. ಈ ಬಗೆಗೆ ಕವಿಚರಿತೆಕಾರರು "ಕನಕದಾಸ ಸು. ೧೫೫೦ : ಈತನು ಮೋಹನ ತರಂಗಿಣಿ, ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿಭಕ್ತಿಸಾರ ಈ ಗ್ರಂಥಗಳನ್ನು ಬರೆದಿದ್ದಾನೆ. ಅಲ್ಲದೆ ವಿಷ್ಣುಸ್ತುತಿರೂಪವಾದ ಹಲವು ಹಾಡುಗಳನ್ನು ಬರೆದಿದ್ದಾನೆ. ಇವನು ಪ್ರಾಯಿಕವಾಗಿ ಕಾಗಿನೆಲೆಯ ಆದಿಕೇಶವ ದೇವರ ಅಂಕಿತದಲ್ಲಿ ತನ್ನ ಗ್ರಂಥಗಳನ್ನು ಬರೆದಿರುವುದರಿಂದ ಧಾರವಾಡ ಜಿಲ್ಲೆಯ ಕಾಗಿನೆಲೆ ಈತನ ಸ್ಥಳವೆಂದು ತೋರುತ್ತದೆ. ಇವನು ಬೇಡರವನೆಂದೂ ಧಾರವಾಡ ಜಿಲ್ಲೆಯ ಕೋಡ ತಾಲ್ಲೂಕು ಬಾಡಗ್ರಾಮದಲ್ಲಿ ಹುಟ್ಟಿ ಕಾಗಿನೆಲೆಯ ಆದಿಕೇಶವ ದೇವಸ್ಥಾನದಲ್ಲಿ ಸತ್ತನೆಂದು ಹೇಳುತ್ತಾರೆ. ಈತನು ಅಂಡೇಕುರುಬರ ಜಾತಿಯವನೆಂದೂ ವ್ಯಾಸರಾಯನ ಸೇವೆಯನ್ನು ಮಾಡಿ ಜ್ಞಾನಿಯಾದನೆಂದೂ ಕೆಲವರು ಹೇಳುತ್ತಾರೆ"[೧] ಎಂದು ಅಭಿಪ್ರಾಯಪಟ್ಟಿದ್ದಾರೆ. ಅನಂತರ ಕನಕದಾಸರ ಬಗ್ಗೆ ಬರೆದ ವಿದ್ವಾಂಸರೆಲ್ಲರೂ ಅವರು ಹುಟ್ಟಿದ ಸ್ಥಳದ ಬಗೆಗೆ ಕವಿಚರಿತೆಕಾರರ ಅಭಿಪ್ರಾಯವನ್ನೆ ಒಪ್ಪಿ ಪ್ರತಿಪಾದಿಸಿಕೊಂಡು ಬಂದಿದ್ದಾರೆ. ಕನಕದಾಸರ ಜಾತಿಯ ಬಗ್ಗೆ ಸ್ವಲ್ಪಮಟ್ಟಿನ ಚರ್ಚೆ ನಡೆದಿದ್ದರೂ ಅವರು ಕುರುಬರು ಎಂದು ಬಹುತೇಕ ವಿದ್ವಾಂಸರು ಒಪ್ಪಿದ್ದಾರೆ. ಆದರೆ ಕನಕದಾಸರ ಸಮಗ್ರ ಸಾಹಿತ್ಯವನ್ನು ಪರಿಶೀಲಿಸಿದ ಯಾರಿಗಾದರೂ ಇವರು ಧಾರವಾಡ ಜಿಲ್ಲೆಯ ಬಾಡದಲ್ಲಾಗಲಿ ಕಾಗಿನೆಲೆಯಲ್ಲಾಗಲಿ ಹುಟ್ಟಿ ಬೆಳೆದವರಲ್ಲವೆಂದು ಖಚಿತವಾಗಿಯೇ ತಿಳಿಯುತ್ತದೆ.

ತಮ್ಮ ಕಾವ್ಯಗಳಲ್ಲಿಯಾಗಲಿ, ಕೀರ್ತನೆಗಳಲ್ಲಿಯಾಗಲಿ ಕನಕದಾಸರು ತಮ್ಮ ಸ್ವವಿಷಯಗಳನ್ನು ಹೇಳಿಕೊಂಡಿಲ್ಲ. ಪೂರ್ವಕವಿಸ್ಮರಣೆಯನ್ನೂ ಮಾಡಿಲ್ಲ.

---

೧. ರಾ. ನರಸಿಂಹಾಚಾರ್, 'ಕರ್ನಾಟಕ ಕವಿ ಚರಿತೆ', ಸಂ. ೨. ಪುಟ ೧೮೭

ಆದುದರಿಂದ "ಕನಕದಾಸರ ವಿಷಯವಾಗಿ ತಾಮ್ರಪಟಗಳಲ್ಲಿ, ಶಿಲಾಶಾಸನಗಳಲ್ಲಿ ಏನೂ ದೊರೆಯುವುದಿಲ್ಲ. ಆ ಕಾಲದ ಗ್ರಂಥಗಳಲ್ಲಿ ಅವರ ಹೆಸರಿನ ಸದ್ದು ಕೇಳಿ ಬರುವುದಿಲ್ಲ."[೨] ಈ ಹಿನ್ನೆಲೆಯಲ್ಲಿ ಕನಕದಾಸರ ಕಾವ್ಯಗಳು ಮತ್ತು ಕೀರ್ತನೆಗಳಲ್ಲಿ ದೊರೆಯುವಂಥ ಸ್ಥಳಗಳು ಮತ್ತು ಅವುಗಳ ವರ್ಣನೆ, ಕನಕದಾಸರ ಸಾಹಿತ್ಯದ ಭಾಷೆ. ಅವರು ತಮ್ಮ ಸಾಹಿತ್ಯದಲ್ಲಿ ಪ್ರಯೋಗಿಸಿರುವ ಪದಪುಂಜಾದಿಗಳೂ, ಆಗಿನ ಕಾಲದ ಜನಜೀವನ ಮುಂತಾದುವುಗಳ ಆಧಾರದಿಂದ ಕನಕದಾಸರು ಹುಟ್ಟಿ ಬೆಳೆದ ಸ್ಥಳ ಯಾವುದು? ಯಾವ ಕಾರಣದಿಂದ ಅವರು ತಮ್ಮ ಹುಟ್ಟೂರಿನಿಂದ ಬೇರೆ ಬೇರೆ ಕಡೆ ಅಲೆದಾಡಿದರೆಂಬುದನ್ನು ಇಲ್ಲಿ ವಿವೇಚಿಸಲಾಗಿದೆ.

ಮನುಷ್ಯನ ಜೀವನದ ಮೇಲೆ ಅಗಾಧವಾದ ಪ್ರಭಾವ ಮತ್ತು ಪರಿಣಾಮ ಬೀರುವುದು ಅವನ ಬಾಲ್ಯದ ದಿನಗಳು. ಆ ದಿನಗಳಲ್ಲಿ ಅವನು ಕಂಡುಂಡ ಅವನ ಪರಿಸರ, ಜನಜೀವನ, ಗಿಡ ಮರ, ಹಳ್ಳಕೊಳ್ಳ ಬೆಟ್ಟಗುಡ್ಡ ಪ್ರಾಣಿಪಕ್ಷಿ, ಊಟತಿಂಡಿ, ಒಡವೆವಸ್ತ್ರಗಳು ಕೊನೆಯವರೆಗೆ ಅವನ ಮನಃಪಟಲದಲ್ಲಿ ಅಚ್ಚೊತ್ತಿ ಉಳಿಯುತ್ತವೆ. ಅಂತಹವನು ಸಾಹಿತಿಯೋ, ಕಲಾವಿದನೋ ಆದರೆ ಈ ಅನುಭವಗಳು ಅವನ ಕೃತಿಗಳಲ್ಲಿ ಅನಿವಾರ್ಯವಾಗಿ ಮೂಡಿಬರುತ್ತವೆ. ಬಾಲ್ಯದ ಈ ಪ್ರಭಾವಗಳಿಂದ ಯಾವ ವ್ಯಕ್ತಿಯೂ ಅಷ್ಟು ಸುಲಭವಾಗಿ ಮುಕ್ತನಾಗುವುದು ಅಸಂಭವವೆಂದೇ ಮಾನವಶಾಸ್ತ್ರಜ್ಞರ ಅಭಿಪ್ರಾಯ. ಜಗತ್ತಿನ ಯಾವನೆ ಕವಿ, ಸಂತ, ಕಲಾವಿದನನ್ನು ತೆಗೆದುಕೊಂಡರೂ ಅಂತಹವರನ್ನು ರಾಜ ಮಹಾರಾಜರು, ಚಕ್ರವರ್ತಿಗಳು ಅತುಲೈಶ್ವರ್ಯದಲ್ಲಿ ಮುಳುಗಿಸಿದ್ದರೂ ಅವರು ತಮ್ಮ ತಾಯಿನೆಲವನ್ನು ಹಂಬಲಿಸಿರುವುದನ್ನು ಕಾಣಬಹುದು. ಕನ್ನಡ ಸಾಹಿತ್ಯವನ್ನೆ ತೆಗೆದುಕೊಂಡರೂ ಆದಿಕವಿ ಪಂಪನಿಂದ ಕುವೆಂಪುವರೆಗೆ ಈ ತಾಯ್ನೆಲದ ಪ್ರೇಮವನ್ನು ಕಾಣಬಹುದು. ಇದರಿಂದ ಬಾಲ್ಯ ಮತ್ತು ಆ ಪರಿಸರ ವ್ಯಕ್ತಿಯ ಮೇಲೆ ಅಮಿತ ಪ್ರಭಾವ ಬೀರುತ್ತದೆಂಬುದು ಸ್ಪಷ್ಟವಾಗುತ್ತದೆ.

ಕನಕದಾಸರ ಸಮಗ್ರ ಸಾಹಿತ್ಯವನ್ನು ಈ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಅವರ ಜೀವನದ ಅನೇಕ ಸಂಗತಿಗಳು ಬೆಳಕಿಗೆ ಬರುತ್ತವೆ. ಮೊದಲನೆಯದಾಗಿ ಕನಕದಾಸರ ಹುಟ್ಟು ಮತ್ತು ಬಾಲ್ಯ ಜೀವನ ಕುರಿತು ಪರಿಶೀಲಿಸಬಹುದು. ಉದಾಹರಣೆಗೆ ಈ ಪದ್ಯಗಳನ್ನು ನೋಡಬಹುದು.

---

೨. ಕಟ್ಟಿ ಶೇಷಾಚಾರ್ಯ, 'ಕವಿ ಕನಕದಾಸರು', ಪೀಠಿಕೆ, ೧೯೩೮.

ತರಳತನದಲಿ ಕೆಲವು ದಿನದುರು
ಭರದ ಗರ್ವದಿ ಕೆಲವು ದಿನ ಮೈ
ಮರೆದು ನಿಮ್ಮಡಿಗೆರಗದಾದೆನು ವಿಷಯ ಕೇಳಿಯಲಿ
ನರಕ ಬಾಜನನಾಗಿ ಕಾಮಾ
ತುರದಿ ಪರಧನ ಪರಸತಿಗೆ ಮನ
ಹರಿದೆ ಪಾಪವ ಕಳೆದು ರಕ್ಷಿಸು ನಮ್ಮನನವರತ.
ಸತ್ತವರಿಗಳಲೇಕೆ ತನ್ನನು
ಹೊತ್ತವರು ಪೆತ್ತವರುಗಳುತಾ
ಸತ್ತು ಹೋಗುವವರಲ್ಲುಳಿದವರೆ ಮರುಗಲೇಕಿನ್ನು
ವೇದ ಶಾಸ್ತ್ರ ಪುರಾಣ ಪುಣ್ಯದ
ಹಾದಿಯನು ನಾನರಿಯೆ ತರ್ಕದ
ವಾದದಲಿ ಗುರು ಹಿರಿಯರರಿಯದ ಮೂಢಮತಿಯೆನಗೆ

ಮೇಲಿನ ಪದ್ಯಗಳು ಕನಕದಾಸರ ಬಾಲ್ಯ ಜೀವನ ಅಷ್ಟೇನೂ ಒಳ್ಳೆಯದಾಗಿರಲಿಲ್ಲವೆಂಬುದನ್ನು ತಿಳಿಸುತ್ತವೆ. ಚಿಕ್ಕಂದಿನಲ್ಲಿಯೇ ಇವರು ತಂದೆ–ತಾಯಿಗಳನ್ನು ಕಳೆದುಕೊಂಡುದರಿಂದ ತಮ್ಮ ಯೌವನದ ಕೆಲವು ದಿನಗಳ ಮಟ್ಟಿಗಾದರೂ ದಿಕ್ಕೆಟ್ಟ ಜೀವನ ನಡೆಸಿರುವ ಸಾಧ್ಯತೆಗಳಿವೆ. ಇದರಿಂದಾಗಿ ಸಮಾಜದಲ್ಲಿ ನಿಂದನೆಗೆ ಗುರಿಯಾಗಿ ಜೀವನ ನಿರ್ವಹಣೆ ಕಷ್ಟವಾಗಿರಬೇಕು. ಈ ಕಾರಣದಿಂದಾಗಿ ಅವರು ಸೇನೆಯನ್ನು ಸೇರಿರುವ ಸಾಧ್ಯತೆ ಕಂಡುಬರುತ್ತದೆ.

ಕಾಸಿನ ಆಸೆಯಲಿ ಬಯಸಿ ಬಹುದಿನದಿಂದ
ಘಾಸಿಪಟ್ಟೆನು ನಾನು ಕೃಷ್ಣ
ಈ ಶರೀರವನಾಂತು ಕಷ್ಟಪಟ್ಟೆನು ಬಿಡದೆ
ನೀ ಸಲಹಬೇಕಯ್ಯ ಕೃಷ್ಣಾ
ಚಂಡ ಭಟನಾಗಿ ನಡೆದು ಕತ್ತಿಢಾಲು ಕೈಲಿ ಹಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಮಾಳಿಗೆಯ ಮನೆ, ತುರುವು, ಧನ ಧಾನ್ಯ ಭೂಮಿ ತನ್ನಲ್ಲಿದ್ದೂ ಅದನ್ನು ಅನುಭವಿಸಲಾಗಲಿಲ್ಲ ಎಂಬಂತಹ ಅನೇಕ ಮಾತುಗಳು ಕನಕದಾಸರ ಸಾಹಿತ್ಯದಲ್ಲಿ ಬರುತ್ತವೆ. ಇದರಿಂದ ಕನಕದಾಸರು ತಮ್ಮ ಬಾಲ್ಯದ ದಿನಗಳಲ್ಲಿ ಪ್ರಾಯಃ ತಂದೆತಾಯಿಯರ ಮಾತು ಕೇಳದೆ ಅಡ್ಡದಾರಿಹಿಡಿದಿರಬೇಕು. ಆ ನೋವಿನಿಂದಾಗಿ ಅವರ ತಂದೆ ತಾಯಿಯರು ಕೊರಗಿ ತೀರಿಕೊಂಡಿರಬೇಕು.

ಈ ಕಾರಣದಿಂದಾಗಿ ಅವರು ಮತ್ತೆ ತಮ್ಮ ಹುಟ್ಟೂರಿಗೆ ಹೋಗದೆ ಜೀವನ ನಿರ್ವಹಣೆಗಾಗಿ ಸೇನೆಯನ್ನು ಸೇರಿರುವ ಸಾಧ್ಯತೆಗಳು ಕಂಡು ಬರುತ್ತವೆ.

ಕನಕದಾಸರು ತಮ್ಮ ಬಾಲ್ಯದ ದಿನಗಳಲ್ಲಿ ದಾರಿತಪ್ಪಿದುದರಿಂದ ಓದು ಬರಹ ಕಲಿತಂತೆ ಕಾಣುವುದಿಲ್ಲ. ಅವರು ಮೋಹನ ತರಂಗಿಣಿಯ ಒಂದು ಪದ್ಯದಲ್ಲಿ

ಬರಹವ ತಿಳಿಯ ಬೇಡೆನುತೆನ್ನ ನೊಸಲೊಳು
ಬರೆದು ನಿರ್ಮಿಸಲದರಿಂದ
ಬರಹವರಿಯೆನಾ ಪದವಿಟ್ಟು ಕಡತದೊಳ್
ಬರೆದು ಮಾಡಿದ ಕೃತಿಯಲ್ಲಿ

–ಎಂದು ಹೇಳಿಕೊಂಡಿದ್ದಾರೆ. ಇದರಿಂದ ಕನಕದಾಸರು ಒಬ್ಬ ಜನಪದ ಕವಿಯಾಗಿದ್ದಿರಬಹುದೆಂದು ಊಹಿಸಲವಕಾಶವಿದೆ. ಕನಕದಾಸರು ಇತರ ದಾಸರಿಗಿಂತ ಹೆಚ್ಚಾಗಿ ಜಾನಪದ ಧಾಟಿಯ ಮಟ್ಟುಗಳನ್ನು ಬಳಸಿಕೊಂಡು ಹೆಚ್ಚು ಶಕ್ತಿಯುತವಾಗಿ ಆಡುನುಡಿಗಳನ್ನು ಬಳಸಿದ್ದಾರೆ ! ಇಂದಿಗೂ ನಮ್ಮಲ್ಲಿ ಅನೇಕ ಜನಪದ ಕವಿಗಳು, ಗಾಯಕರು ಓದು ಬರಹ ಬರದಿದ್ದರೂ ಸಹ ಸಾವಿರಾರು ಪುಟಗಳಷ್ಟು ಸಾಹಿತ್ಯವನ್ನು ಕಂಠಸ್ಥವಾಗಿಯೇ ಹಾಡುವುದನ್ನು ಕಾಣಬಹುದು. ಈ ದಿಸೆಯಲ್ಲಿ ಮಂಟೇಸ್ವಾಮಿ ಕಾವ್ಯ ಜುಂಜಪ್ಪನ ಕಾವ್ಯ, ಮಲೆಮಾದೇಶ್ವರನ ಕಾವ್ಯ, ಕೆಂಪೇಗೌಡನ ಚರಿತ್ರೆ ಮುಂತಾದುವುಗಳನ್ನು ನೋಡಬಹುದು. ಕನಕದಾಸರ ಮೇಲಿನ ಪದ್ಯದಲ್ಲಿ ತಾವು ಅಕ್ಷರ ಕಲಿಯದಿದ್ದ ಬಗ್ಗೆ ಅತ್ಯಂತ ನೋವಿನಿಂದ ಹೇಳಿಕೊಂಡಿದ್ದಾರೆ ಅನ್ನಿಸುತ್ತದೆ. ಅನೇಕ ಸಂದರ್ಭದಲ್ಲಿ ಕವಿಗಳು ತಾವೇನೂ ಅಂತಹ ಪಂಡಿತರಲ್ಲವೆಂದೂ ವ್ಯಾಕರಣ ಛಂದಸ್ಸು ತಿಳಿಯದವರೆಂದೂ ತಮ್ಮ ಕಾವ್ಯದಲ್ಲಿರಬಹುದಾದ ತಪ್ಪನ್ನು ಬುಧರು ತಿದ್ದಿಕೊಳ್ಳಬೇಕೆಂದು ವಿನಯಕ್ಕಾಗಿ ಹೇಳಿಕೊಳ್ಳುವ ಸಂಪ್ರದಾಯವಿದೆ. ಆದರೆ ಕನಕದಾಸರ ಮೇಲಿನ ಪದ್ಯ ತಮಗೆ ಓದು ಬರಹ ಬರದೆಂಬುದನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ.

ಕಾವ್ಯಗಳನ್ನು ಓದುಬರಹ ಬರದವರು ಕೂಡ ಕಂಠಸ್ಥವಾಗಿ ಕಟ್ಟಿ ಹಾಡುತ್ತಿದ್ದ, ಹಾಡುತ್ತಿರುವ ಉದಾಹರಣೆಗಳು ನಮ್ಮಲ್ಲಿ ಹೇರಳವಾಗಿವೆ. ರಾಮಾಯಣ, ಮಹಾಭಾರತಗಳಿಗೆ ಈ ಹೇಳಿಕೆಯನ್ನು ಅನ್ವಯಿಸಲಾಗುತ್ತದೆ. ಬಸವಣ್ಣ ಸರ್ವಜ್ಞ ಮುಂತಾದವರು ವಚನಗಳನ್ನು ಕಟ್ಟಿ ಹಾಡಿದುದು ಹೀಗೆಯೇ ಎಂಬ ಅಭಿಪ್ರಾಯವುಂಟು. ಕಾಲಕ್ರಮೇಣ ಅವುಗಳನ್ನು ಬರೆದಿಡಲಾಯಿತೆಂದು

ಹೇಳುತ್ತಾರೆ. ಕನಕದಾಸರ ಕೃತಿಗಳು ಸಹ ಹೀಗೆಯೇ ಕಂಠಸ್ಥವಾಗಿದ್ದು ಅನಂತರ ಬರಹ ರೂಪ ಪಡೆದವೆಂದು ಊಹಿಸಲವಕಾಶವಿದೆ.

ಕನಕದಾಸರು ಆರಂಭದಲ್ಲಿ ಒಬ್ಬ ಜನಪದ ಕವಿ. ಗಾಯಕ, ಕಲಾವಿದ ಆಗಿದ್ದ ಸಾಧ್ಯತೆಯಿದೆ. ಅವರ ಕಾವ್ಯಗಳಲ್ಲಿಯೇ ಈ ಬಗೆಗೆ ಅನೇಕ ಉದಾಹರಣೆಗಳು ದೊರೆಯುತ್ತವೆ. ತಾಳಮದ್ದಳೆ, ಯಕ್ಷಗಾನ ಗೊಂಬೆಯಾಟ, ತೊಗಲುಗೊಂಬೆಯಾಟ ರಾಗಿಬೀಸುವ ಪದ ಮುಂತಾದ ಗ್ರಾಮಕಲೆಗಳನ್ನು ಕುರಿತು ಕನಕದಾಸರ ಅತ್ಯಂತ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.

ಒಂದು ಕಡೆಯಲ್ಲಿ ತಾಳಮದ್ದಳೆ
ಯೊಂದು ಕಡೆಯಲಿ ಸರಸನೃತ್ಯಗ
ಳೊಂದು ಕಡೆಯಲಿ ಸಾರತರ ಸಂಗೀತ ಸಾಹಿತ್ಯ
ಒಂದು ಕಡೆಯಲಿ ಗದ್ಯ ಪದ್ಯಗ
ಳೊಂದು ಕಡೆಯಲಿ ತರ್ಕ ಶಾಸ್ತ್ರಗ
ಳೊಂದು ಕಡೆಯಲಿ ಹಾಸ್ಯದಿಂದಿರುತಿರ್ದುದಾಸ್ಥಾನ
ಕೀಲು ಜಡಿದ ತೊಗಲು ಗೊಂಬೆ ನಿನ್ನದೇನೆಲೊ
ಆದಿನಾರಾಯಣ ದಾಸಯ್ಯ ನೀ
ಬೆಳ್ಳಿ ಬಂಗಾರ ಇಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು
ಅಳ್ಳಾಚಾರಿಯಗೊಂಬೆಯಂತೆ.
ವೇಷಧಾರಿಗಳು ಸನ್ಯಾಸಿಯಹುದೆ ?
ನಾನಾ ಜನ್ಮದಿ ಬಂದ ನಾಟಕದ ಬೊಂಬೆಯಿದು
ಕಾಲು ಗೆಜ್ಜೆಯ ಕಟ್ಟಿ ಮೇಲೆ ಕರಪಾಲ ಪಿಡಿದು.

ಮೇಲಿನ ಉದಾಹರಣೆಗಳು ಕನಕದಾಸರು ತಮ್ಮ ಸುತ್ತಿನಲ್ಲಿ ಪ್ರಚಲಿತವಿದ್ದ ವಿವಿಧ ಗ್ರಾಮಕಲೆಗಳನ್ನೂ ಬಲ್ಲವರೆಂಬುದು ಶ್ರುತಪಡಿಸುತ್ತವೆ. ಆದುದರಿಂದಲೇ ಅವರು ಸಂದರ್ಭ ದೊರೆತಾಗಲೆಲ್ಲಾ ಇವುಗಳನ್ನು ಉಲ್ಲೇಖಿಸುತ್ತಾರೆ. ಇದರೊಂದಿಗೆ ಕನಕದಾಸರ ಬಹುತೇಕ ಕೀರ್ತನೆಗಳು ಜನಪದಗೀತೆಗಳಂತಿರುವುದನ್ನು ಕಾಣಬಹುದು, ಉದಾಹರಣೆಗೆ ಈ ಕೆಲವನ್ನು ನೋಡಬಹುದು :

ಶಿವ ಶಿವ ಎನ್ನಿರೊ ಮೂಜಗದವರೆಲ್ಲ
ಶಿವ ಶಿವ ಎನ್ನಿರೊ.
ವರವ ಕೊಡೆ ಎನಗೆ ವಾಗ್ದೇವಿ ನಿಮ್ಮ

ಚರಣ ಕಮಲಗಳ ದಯಮಾಡು ದೇವಿ.
ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನ್ಯಾರಮ್ಮ.
ಎನ್ನಕಂದ ಹಳ್ಳಿಯ ಹನುಮ
ಚನ್ನಾಗಿ ತಹರೆ ಲಕ್ಷ್ಮಣದೇವರು.
ಅಡುಗೆಯ ಮಾಡಬೇಕಣ್ಣ ನಾನೀಗ
ಅಡಿಗೆಯ ಮಾಡಬೇಕಣ್ಣ.
ದೇವಿ. ನಮ್ಮ ದ್ಯಾವರು ಬಂದರು ಬನ್ನಿರೆ
ಡೊಂಕು ಬಾಲದ ನಾಯಕರೇ
ನೀವೇನನೂಟ ಮಾಡಿದಿರಿ.

ಮೇಲಿನ ಉದಾಹರಣೆಗಳು ಕನಕದಾಸರು ಒಳ್ಳೆಯ ಜನಪದ ಗೀತರಚಕರೂ ಗಾಯಕರೂ ಆಗಿದ್ದರೆಂಬುದನ್ನು ಶ್ರುತಪಡಿಸುತ್ತವೆ. ಆದುದರಿಂದ ಮೊದಮೊದಲಿಗೆ ಜನಪದ ಕವಿ ಗಾಯಕರಾಗಿದ್ದ ಕನಕದಾಸರು ಸೇನೆಗೆ ಸೇರಿ ಅಧಿಕಾರದಲ್ಲಿ ಮುಂದೆ ಬಂದು ರಾಜಾಸ್ಥಾನ ಮತ್ತು ಅಲ್ಲಿನ ಶಿಷ್ಟರ ಸಂಪರ್ಕವನ್ನು ಪಡೆದರು. ಅದರ ಪ್ರಭಾವವನ್ನೂ ಅವರ ಸಾಹಿತ್ಯದಲ್ಲಿ ಗುರುತಿಸಬಹುದಾಗಿದೆ. ಈ ಆಧಾರಗಳಿಂದ ಕನಕದಾಸರು ಹಳ್ಳಿಯ ಕುರುಬ ಕುಟುಂಬದಲ್ಲಿ ಹುಟ್ಟಿ ಎಳವೆಯಲ್ಲಿಯೇ ಪ್ರಾಯಃ ಕಲೆ ಮತ್ತು ಸಾಹಿತ್ಯದತ್ತ ಆಕರ್ಷಿತರಾಗಿ ಹುಡುಗ ದಾರಿ ತಪ್ಪಿದನೆಂಬ ಟೀಕೆಗೆ ಒಳಗಾಗಿ, ಆ ಕಲೆಯ ಕ್ಷೇತ್ರದ ವ್ಯಾಮೋಹಗಳಿಗೂ ಬಲಿಯಾಗಿ, ಜೀವನ ನಿರ್ವಹಣೆಗೆ ಸೇನೆಯನ್ನು ಸೇರಿ ಅಧಿಕಾರಗದ್ದುಗೆ, ಆಸ್ಥಾನದ ವೈಭೋಗಗಳನ್ನು ಅನುಭವಿಸಿ ಹಣ್ಣಾಗಿ ದಾಸರಾದರೆಂಬುದರಲ್ಲಿ ಅನುಮಾನವಿಲ್ಲ. ಜನಪದ ಮತ್ತು ಶಿಷ್ಟ ಎರಡರ ರಸವನ್ನೂ ಹೀರಿಬೆಳೆದರು. "ಪಂಪನಂತೆ ಕನಕನಾಯಕ ಕವಿಯೂ ಅಹುದು, ಕಲಿಯೂ ಅಹುದು. ಕಲಿತನ ಕವಿತನಗಳೆರಡೂ ಅವನ ಹುಟ್ಟುಗುಣ. ಸಂತತನವೂ ಅಷ್ಟೇ ಅವನು ಲೌಕಿಕಾಭ್ಯುದಯದ ಶಿಖರವನ್ನೇರುತ್ತಿರುವಾಗಲೇ ಅವನ ಕಾವ್ಯಶಕ್ತಿ ಗಿಡದ ಮೊಗ್ಗಿನಂತೆ, ಸ್ವಾತಿಯ ಮುತ್ತಿನಂತೆ ಹೊರಹೊಮ್ಮುತ್ತದೆ. ನೃಸಿಂಹಸ್ತವ ಉದ್ಭವಗೊಂಡು ಹಾಡುಗಬ್ಬದ ರೂಪದಲ್ಲಿ ದೇವರಿಗೆ ನಿವೇದನೆಗೊಂಡಿರಬೇಕೆಂದು ತೋರುತ್ತದೆ. ಬಂಧನವನ್ನು ತೆಗೆದಕೂಡಲೇ ನಿರಂತರವಾಗಿ ತಂತಿಯಲ್ಲಿ ವಿದ್ಯುತ್, ಚಿಲುಮೆಯಲ್ಲಿ ನೀರು ಪ್ರವಹಿಸುವಂತೆ ಅವನ ಕಾವ್ಯಧಾರೆ ಅವಿಚ್ಛಿನ್ನವಾಗಿ ಉಕ್ಕುತ್ತದೆ."[೩]

೩. ಡಾ. ದೇ. ಜವರೇಗೌಡ, 'ಜನಪ್ರಿಯ ಕನಕ ಸಂಪುಟ', ಪೀಠಿಕೆ, ಪುಟ vi.

ಮನುಷ್ಯ ತಾಯಿನೆಲವನ್ನೂ ಮರಗಿಡಗಳು ತಾಯಿಬೇರನ್ನೂ ಮರೆಯುವುದಿಲ್ಲವೆಂಬುದು ನಂಬಿಕೆ. ತಾನು ಬದುಕಿದ ಸತ್ವವನ್ನು ಹೀರಿ ಬೆಳೆಯುವ ಮರಗಳಂತೆಯೇ ಮನುಷ್ಯ ಕೂಡ ತನ್ನ ತಾಯಿ ನೆಲದ ಸತ್ವದಿಂದ ಪರಿಪುಷ್ಟನಾದಾಗ ಮಾತ್ರ ಅವನಿಗೆ ಶಕ್ತಿ ಬರುತ್ತದೆ. ಕನಕದಾಸರು ಸಹ ತಮ್ಮ ಹುಟ್ಟೂರಿನ ಪರಿಸರವನ್ನೇ ತಮ್ಮ ಸಾಹಿತ್ಯದಲ್ಲಿ ತಂದಿದ್ದಾರೆ. ಆದರೆ ಅವರು ಅನೇಕ ಸ್ಥಳದ ಆದಿಕೇಶವರನ್ನು ಕುರಿತು ಕೀರ್ತನೆಗಳನ್ನು ರಚಿಸಿರುವುದರಿಂದ ಮತ್ತು ಈಗಾಗಲೇ ಅವರು ಬಾಡದಲ್ಲಿ ಹುಟ್ಟಿ ಬೆಳೆದವರು ಎಂದು ನಿರ್ಧಾರವಾಗಿರುವುದರಿಂದ ಈ ಬಗ್ಗೆ ಯಾರೂ ಅಷ್ಟಾಗಿ ಗಮನ ಹರಿಸಿದಂತೆ ಕಾಣುವುದಿಲ್ಲ. ಕನಕದಾಸರ ಒಟ್ಟುಸಾಹಿತ್ಯದಲ್ಲಿ ಮೂಡಿ ಬಂದಿರುವ ಪರಿಸರವನ್ನು ಗಮನಿಸಿ ಹೇಳುವುದಾದರೆ ಅದು ಬಾಡದ ಅಥವಾ ಕಾಗಿನೆಲೆಯ ಪರಿಸರಕಿಂತ ಭಿನ್ನವಾಗಿರುವುದನ್ನು ಕಾಣಬಹುದಾಗಿದೆ. ಈ ದೃಷ್ಟಿಯಿಂದ ಕನಕದಾಸರು ತಮ್ಮ ಕೃತಿಗಳಲ್ಲಿ ಹೆಸರಿಸಿರುವ ಎಲ್ಲಾ ಸ್ಥಳಗಳನ್ನು ಪರಿಶೀಲಿಸುವುದು ಅಗತ್ಯ. ಆಗ ಮಾತ್ರ ಅವರ ನಿಜವಾದ ಸ್ಥಳವನ್ನು ಗುರುತಿಸಲು ಸಹಾಯವಾಗಬಹುದೆಂದು ತೋರುತ್ತದೆ.

ಈಗ ಹಾಸನ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿರುವ ಬೇಲೂರು ಒಂದು ಕಾಲದಲ್ಲಿ ಕನ್ನಡನಾಡಿನ ಪ್ರಖ್ಯಾತ ರಾಜವಂಶಗಳಲ್ಲೊಂದಾದ ಹೊಯ್ಸಳ ವಂಶದವರ ರಾಜಧಾನಿಯಾಗಿತ್ತು. ಕಲೆ, ಸಂಸ್ಕೃತಿ ಸಾಹಿತ್ಯಗಳ ನೆಲೆಯಾಗಿತ್ತು. ಬೊಪ್ಪಲೆ ಬೊಮ್ಮಲೆ, ಪದುಮಲೆ, ಶಾಂತಲೆಯರಂತಹ ಕಲಾರಾಧಕರೂ ಕಲಾವಿದರೂ ಆದ ರಾಣಿಯರ ನೆಲೆವೀಡಾಗಿತ್ತು. ಧಾರ್ಮಿಕ ಆಂದೋಲನದ ರಂಗವೂ ಆಗಿತ್ತು. ಈ ಊರಿಗೆ ಸುರಪುರ, ವರಪುರ, ಶ್ರೀಪುರ, ವೇಲಾಪುರ, ಸೌಭಾಗ್ಯಪುರ ಎಂದೆಲ್ಲಾ ಹೆಸರುಗಳಿದ್ದ ಬಗ್ಗೆ ಶಾಸನಾಧಾರಗಳೂ ದೊರೆಯುತ್ತವೆ. ಅನೇಕ ಹೆಸರಾಂತ ರಾಜರು, ಪ್ರಧಾನಿ ದಂಡನಾಯಕ, ಕವಿ, ಕಲಾವಿದರಿಗೆ ಅದು ಆಶ್ರಯಸ್ಥಾನವಾಗಿತ್ತು. ಇಂದಿಗೂ ಲೋಕವಿಖ್ಯಾತವಾದ ದೇವಾಲಯಗಳನ್ನು ಹೊಂದಿ ಜನಾಕರ್ಷಣೆ ಮತ್ತು ಆದರಣೆಯನ್ನು ಗಳಿಸಿಕೊಂಡಿದೆ. ಆ ಊರನ್ನು ಕುರಿತು ಅನೇಕ ಕವಿಗಳು ಹಾಡಿ ಹೊಗಳಿದ್ದಾರೆ. ಕನಕದಾಸರ ಸಾಹಿತ್ಯವನ್ನು ಪರಿಶೀಲಿಸಿದ ಮೇಲೆ ಅದರ ಬಹುಪಾಲು ಬೇಲೂರಿನಲ್ಲಿ ರಚಿತವಾಗಿದೆಯೆಂದು ಹೇಳಲು ಬೇಕಾದಷ್ಟು ಆಧಾರಗಳು ದೊರೆಯುತ್ತವೆ.

ಕನಕದಾಸರ ನಳಚರಿತ್ರೆ, ರಾಮಧಾನ್ಯ ಚರಿತ್ರೆ ಮತ್ತು ಹರಿಭಕ್ತಿಸಾರ

ಕಾವ್ಯಗಳು ಬೇಲೂರಿನ ಚನ್ನಕೇಶವನಿಗೆ ಅಂಕಿತವಾಗಿವೆ. ನಳಚರಿತೆಯ ಮೊದಲ ಮೂರು ಪದ್ಯಗಳಲ್ಲಿ ಕವಿ ವರಪುರದ ಚನ್ನಿಗರಾಯನನ್ನು ಸ್ತುತಿಸಿದ್ದಾನೆ. ಪ್ರತಿ ಸಂಧಿಯ ಕೊನೆಯ ಪದ್ಯದಲ್ಲಿ ಮತ್ತೆ ಚನ್ನಿಗರಾಯನನ್ನು ಸ್ಮರಿಸುತ್ತಾನೆ. ಈ ಕಥೆಯನ್ನು ರಚಿಸಲು ಕಾರಣವನ್ನು ಹೇಳುತ್ತಾ

ರಾಯರೊಳಗ್ಗಳೆಯನಾಕೌಂ
ತೇಯನಿಗೆ ರೋಮಷಮಹಾಮುನಿ
ರಾಯ ವಿಸ್ತರಿಸಿದಮನಳಭೂವರನ ಚರಿತೆಯನು
ಶ್ರೀಯರಸವರಪುರದ ಚೆನ್ನಿಗ
ರಾಯನಂಕಿತಮಾಗಿ ಪೇಳುವೆ
ಪ್ರೀಯದಿಂದಾಲಿಸುವ ಸುಜನರಿಗೀ ಮಹಾಕಥೆಯ.

ನಳಚರಿತೆಯನ್ನು ರಚಿಸಿದ ಕಾಲದಲ್ಲಿ ಕನಕದಾಸರಿಗೆ ಉತ್ತರ ಕರ್ನಾಟಕದ ಅಂದರೆ ತುಂಗಭದ್ರಾನದಿಯಿಂದ ಆಚೆಗಿನ ಯಾವ ಸ್ಥಳಗಳ ಪರಿಚಯವೂ ಇರಲಿಲ್ಲವೆಂಬುದು ಈ ಕಾವ್ಯವನ್ನು ಅಭ್ಯಸಿಸಿದ ಯಾರಿಗಾದರೂ ಅರಿವಾಗುತ್ತದೆ. ಈ ಕಾರಣದಿಂದಾಗಿಯೇ ನಳಚರಿತ್ರೆ ಕನಕದಾಸರ ಮೊದಲನೆಯ ಕಾವ್ಯ ಎಂದು ಹೇಳಬಹುದಾಗಿದೆ.

ರಾಮಧಾನ್ಯ ಚರಿತೆ ಕನಕದಾಸರ ಮತ್ತೊಂದು ಜನಪ್ರಿಯ ಕೃತಿ. ಇದು ರಾಗಿ ಮತ್ತು ಭತ್ತಗಳ ಮಧ್ಯೆ ನಡೆದ ವಾಗ್ವಾದ ರೂಪದಲ್ಲಿದೆ : ಇದು ವರ್ಗ ಜಾತಿಗಳ ಹೋರಾಟದ ಕತೆಯಾಗಿದ್ದು, ಆ ಕಾಲದ ಸಾಮಾಜಿಕ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ತಾನು ಹುಟ್ಟಿದ ಜಾತಿಯೇ ಕಾರಣವಾಗಿ ತಾನನುಭವಿಸಿದ ಮಾನಸಯಾತನೆಗಿಲ್ಲಿ ಇಂಬು ದೊರೆತಿದೆ. ಈ ಕಾವ್ಯ ನಳಚರಿತ್ರೆಯ ಬಗೆಗಿನ ಟೀಕೆಗೆ ಅವಹೇಳನಕ್ಕೆ ಉತ್ತರ ಎಂದು ಭಾವಿಸಬಹುದಾಗಿದೆ. ಶೂದ್ರನೊಬ್ಬ ಕಾವ್ಯ ರಚಿಸಿದುದು ಮೇಲು ವರ್ಗದವರಲ್ಲಿ ಮತ್ಸರ ಉಂಟುಮಾಡಿರಬಹುದು. ಅವರು ಈ ಕವಿಯನ್ನು ಇವನಲ್ಲೇನು ಶಕ್ತಿಯಿದೆ ಎಂದು ಹೀಯಾಳಿಸಿರಬಹುದು.

ಲೋಕದಲಧಿಕ ಭೋಜನವಿದೆಂ
ದಾಕೆವಾಳರು ಬುಧರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ–ಎಂದು ಹಂಗಿಸಿದಾಗ

ರಾಗಿ ಅನಿವಾರ್ಯವಾಗಿ ತನ್ನ ಶಕ್ತಿಯ ಬಗ್ಗೆ ಉತ್ತರ ಕೊಡಬೇಕಾಯಿತು. ಈ ಕೃತಿಯೂ ಬೇಲೂರಿನಲ್ಲಿಯೇ ರಚಿತವಾಗಿದೆ.

ಶ್ರೀ ರಮಾಪತಿ ಸಿಂಧುಶಯನ ಮು

ರಾರಿ ಮುನಿಕುಲ ಪೂಜಿತಾಂಘ್ರಿಸ
ರೋರುಹಾಕ್ಷ ಸುದರ್ಶನಾಂಕಿತ ದೇವ ಭವದೂರ
ಮಾರಪಿತ ಕೌಸಲಾದೇವಿಕು
ಮಾರ ರಘುಕುಲ ರಾಮನೃಪವರ
ಪೌರ ಚನ್ನಿಗರಾಯ ಪಾಲಿಸು ಸಕಲಸಜ್ಜನರ
ಗಿರಿಜೆಯರಸನಭಜಿಸಿ ಲಕ್ಷ್ಮೀ
ವರನ ಪಾದಾಂಬುಜಕೆ ವಂದಿಸಿ
ಕರಿಮುಖನ ಬಲಗೊಂಡು ಗೀರ್ವಾಣಿಗೆ ನಮಸ್ಕರಿಸಿ
ಗುರುವಿನಂಘ್ರಿಗೆ ನಮಿಸಿ ಸತ್ಕವಿ
ವರರ ಮನದಲಿ ನೆನೆದು ವರಪುರ
ದರಸನನು ಕೊಂಡಾಡಿ ಪೇಳುವೆನೀ ಮಹಾಕಥೆಯ

ಮೇಲಿನ ಪದ್ಯಗಳು ರಾಮಧಾನ್ಯ ಚರಿತೆ ಬೇಲೂರಿನಲ್ಲಿಯೇ ರಚಿತವಾಗಿದೆಯೆಂಬುದನ್ನು ದೃಢಪಡಿಸುತ್ತವೆ. ಕವಿ ಈ ಕಾವ್ಯದ ಕೊನೆ ಪದ್ಯದಲ್ಲಿ ಸಹ

ಶರಧಿಶಯನ ಮುಕುಂದ ಸಚರಾ
ಚರಭರಿತ ನಿರ್ಗುಣನಿರಾಮಯ
ಸುರ ನರೋರಗವಂದ್ಯ ವರಪುರದಾದಿಕೇಶವನ
ಚರಣದಂಕಿತಮಾಗಿ ಪೇಳಿದ
ಪರಮಧಾನ್ಯದ ಚರಿತೆ ಸಂತತ
ಧರೆಯೊಳೊಪ್ಪಿಹುದು ಆಚಂದ್ರಾರ್ಕ ಪರಿಯಂತ

ಹರಿಭಕ್ತಿಸಾರ ಬೇಲೂರಿನಲ್ಲಿ ರಚಿತವಾದ ಕನಕದಾಸರ ಮೂರನೆಯ ಕಾವ್ಯ. ಈ ಹೊತ್ತಿಗೆ ಕನಕದಾಸರ ಮನಸ್ಸು, ಹೃದಯ ಸಾಕಷ್ಟು ಮಾಗಿ ಬರುವ ಟೀಕೆ ಟಿಪ್ಪಣಿಗಳನ್ನು ಸಹಿಸುವ ಶಕ್ತಿಯನ್ನು ಪಡೆದುಕೊಂಡಿತ್ತು. ಆದುದರಿಂದಲೇ ಕವಿ ಎಲ್ಲವನ್ನೂ ಮರೆತು ತನ್ನೊಳಗನ್ನು ಪರಾಮರ್ಶೆಗೆ ಒಳಪಡಿಸಿ ಹರಿಭಕ್ತಿಯ ಪ್ರವಾಹದಲ್ಲಿ ತೇಲಿ ಹೋಗಿರುವುದು ಕಂಡು ಬರುತ್ತದೆ.

ಶ್ರೀಯರಸ ಗಾಂಗೇಯನುತ ಕೌಂ
ತೇಯವಂದಿತ ಚರಣ ಕಮಲದ
ಛಾಯತಾಂಬಕರೂಪ ಚಿನ್ಮಯ ದೇವಕೀತನಯ
ರಾಯರಘು ಕುಲವರ್ಯ ಭೂಸುರ

ಪ್ರೀಯ ಸುರಪುರನಿಲಯ ಚೆನ್ನಿಗ

ರಾಯ ಚತುರೋಪಾಯ ರಕ್ಷಿಸು ನಮ್ಮನನವರತ

ಹರಿಭಕ್ತಿಸಾರ ಸಂಪೂರ್ಣವಾಗಿ ಕವಿ ತನ್ನ ಅಂತರಂಗವನ್ನು ವರಪುರದ ಚೆನ್ನಿಗರಾಯನಿಗೆ ತೆರೆದು ತನ್ನನ್ನು ಕಾಪಾಡುವಂತೆ ಪ್ರಾರ್ಥಿಸುವ ಕೃತಿ. ಸುರಪುರ, ವರಪುರ, ಬೇಲೂರು ಈ ಮೂರೂ ಹೆಸರುಗಳನ್ನು ಈ ಕೃತಿಯಲ್ಲಿ ಕಾಣಬಹುದಾಗಿದೆ. ಕಾವ್ಯದ ಕಡೆಯ ಮಂಗಳಾಚರಣೆಯ ಸಮಯದಲ್ಲಿ

ಮಂಗಳಂ ಸಿರಿಗೊಡೆಯ ಚೆನ್ನಿಗರಾಯ ಕೇಶವಗೆ

ಮಂಗಳಂ ಬೇಲೂರ ಚೆನ್ನಿಗರಾಯ ಕೇಶವಗೆ

–ಎಂದು ಹೇಳುವುದರ ಮೂಲಕ "ಸುರಪುರ ಅಥವಾ ವರಪುರದ ಚೆನ್ನಿಗರಾಯನಸ್ತುತಿ ನಳಚರಿತ್ರೆ, ರಾಮಧಾನ್ಯಚರಿತ್ರೆ ಮತ್ತು ಹರಿಭಕ್ತಿಸಾರ ಇವುಗಳಲ್ಲಿ ಬಂದಿದೆ. ಸುರಪುರ ಅಥವಾ ವರಪುರ ಎಂದರೆ ಬೇಲೂರು ಎಂದೂ ಕನಕದಾಸನು ಬೇಲೂರಿನಲ್ಲಿ ನೆಲಸಿದಾಗ ಈ ಕೃತಿಗಳನ್ನು ರಚಿಸಿರಬೇಕೆಂದೂ ತಿಳಿಯಲಾಗಿದೆ. ಅವಲ್ಲಿಗೆ ಜನಗಳಲ್ಲಿರುವ ಪ್ರತೀತಿಯಿಂದ ಈ ಗ್ರಂಥಗಳು ಕನಕದಾಸನವೇ ಎಂದು ಭಾವಿಸಲಾಗಿದೆ. ಕನಕದಾಸನು ಸ್ತುತಿಸಿದದು ಬೇಲೂರು ಚನ್ನಕೇಶವನಾಗಿರದೆ ಕಾಗಿನೆಲೆಯ ಬಳಿಯಲ್ಲಿಯೇ ಇರುವ ಇಂಗಳಗುಂಡಿಯ ಚೆನ್ನಕೇಶವನಿರಬಹುದೆಂದು ತರ್ಕಿಸಲಾಗಿದೆ. ಈ ಚೆನ್ನಕೇಶವ ಕನಕದಾಸನ ಉಪಾಸ್ಯದೈವತನಾಗಿದ್ದನೆಂದು ಜನವಾರ್ತೆಯಿದೆ. ಅಲ್ಲದೆ ಬೇಲೂರನ್ನು ವೇಲಾಪುರ ಎಂದು ಕರೆಯುವ ಪದ್ಧತಿ ಇರುವುದೇ ಹೊರತು ವರಪುರ ಎಂದು ಕರೆಯಲಾರರು ಎಂಬ ಅಭಿಪ್ರಾಯವಿದೆ. ಆದರೆ ಇಂಗಳಗುಂಡಿಗೆ ವರಪುರವೆಂದು ಕರೆಯುಬಹುದೇ ಎಂಬುದನ್ನು ಪರಿಶೀಲಿಸಬೇಕು. ಈ ವಿಷಯದಲ್ಲಿ ನಡೆಸುವ ಸತ್ಯಶೋಧನೆ ಕನಕದಾಸನು ರಚಿಸಿದ ಕೃತಿಗಳ ಸ್ಥಳಗಳ ವಿಷಯದಲ್ಲಿ ಹೊಸಬೆಳಕನ್ನು ಬೀರಬಹುದು"[೪] ಎಂಬ ಅನುಮಾನಗಳನ್ನು ಕನಕದಾಸರೆ ಪರಿಹರಿಸಿಬಿಟ್ಟಿದ್ದಾರೆ.

ಕಾವ್ಯಗಳಲ್ಲಿಯಲ್ಲದೆ ತಮ್ಮ ಅನೇಕ ಕೀರ್ತನೆಗಳನ್ನು ಕೂಡ ಕನಕದಾಸರು ವರಪುರ, ಸುರಪುರ, ಸೌಭಾಗ್ಯಪುರದ ಚೆನ್ನಕೇಶವನಿಗೆ ಅಂಕಿತ ಮಾಡಿದ್ದಾರೆ. ಕೆಲವು ಉದಾಹರಣೆಗಳನ್ನು ನೋಡಬಹುದು.

---

೪. 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ', ಬೆಂಗಳೂರು ವಿಶ್ವವಿದ್ಯಾನಿಲಯ, ಸಂ. ೭, ಪು. ೪೮೧.

ಮುನ್ನ ಕೊಟ್ಟು ಪಡೆಯದಿನ್ನು ಬಯಸಲ್ಯಾತಕೆ
ಚೆನ್ನ ಆದಿಕೇಶವನಲ್ಲದ ದೈವವ್ಯಾತಕೆ.
ವರ ವೇಲಾಪುರದಾದಿ ಕೇಶವನ
ಸ್ಮರಿಸುವವನಿಗೆ ಮೋಕ್ಷತಪ್ಪೀತೆ.
ಅನ್ನ ತುಪ್ಪವಿರಲಿಕ್ಕೆ ಮದ್ಯಪಾನಗಳೇಕೆ
ಚೆನ್ನಾದಿಕೇಶವನಿರೆ ಬಿನುಗು ದೈವಗಳೇಕೆ
ಬಂಟಲ ಬಾಗಿಲ ಕಾಯ್ವೆಹರಿಯೆ
ಸಿರಿಪುರನೆಲೆಯಾದಿ ಕೇಶವರಾಯ.
ದೇವ ಕನಕದಾಸನೊಡೆಯ
ಬೇಲೂರ ಚನ್ನಿಗರಾಯ

ಕನಕದಾಸರ ಕೀರ್ತನೆಗಳಲ್ಲಿ ಬರುವ ವರಪುರ ಅಥವಾ ಬೇಲೂರು ಚೆನ್ನಕೇಶವನ ಅಂಕಿತದಲ್ಲಿ ರಚನೆಗೊಂಡಿರುವ ಕೀರ್ತನೆಗಳು ಅವರ ಮೊದಮೊದಲ ರಚನೆಗಳೆಂದು ಊಹಿಸಲೂ ಅವಕಾಶವಿದೆ. ಅಷ್ಟೇ ಅಲ್ಲ ಎಷ್ಟೋ ಕೀರ್ತನೆಗಳಲ್ಲಿ ಯಾವ ಊರನ್ನೂ ಹೆಸರಿಸದೆ ಕೇವಲ ಆದಿಕೇಶವನೆಂದು ಅಂಕಿತ ಮಾಡಿರುವುದೂ ಉಂಟು. ಈ ಎಲ್ಲ ಆಧಾರಗಳಿಂದ ಕನಕದಾಸರು ತಮ್ಮ ಜೀವಿತದ ಯೌವ್ವನದ ಕಾಲದಲ್ಲಿ ಬೇಲೂರಿನಲ್ಲಿದ್ದವರೆಂದು ಸ್ಪಷ್ಟವಾಗುತ್ತದೆ.

ಬೇಲೂರು, ಕಾಗಿನೆಲೆ, ಬಾಡಗಳಲ್ಲದೆ ಕನಕದಾಸರು ಇನ್ನು ಅನೇಕ ಊರುಗಳ ಆದಿಕೇಶವರಿಗೆ ಅಂಕಿತ ಮಾಡಿ ಕೀರ್ತನೆಗಳನ್ನು ರಚಿಸಿರುವುದು ಕಂಡುಬರುತ್ತದೆ. ಈ ಕೀರ್ತನೆಗಳು ಆಯಾ ದೇವತೆಗಳನ್ನು ಪ್ರತ್ಯಕ್ಷಕಂಡಾಗ ರಚಿತವಾದವೆಂಬುದರಲ್ಲಿ ಯಾವ ಅನುಮಾನವೂ ಕಂಡುಬರುವುದಿಲ್ಲ.

ಹಾಗಾದರೆ ಕನಕದಾಸರು ಈ ಊರುಗಳಿಗೆ ಯಾಕಾಗಿ ಯಾವಾಗ ಹೋಗಿದ್ದರೆಂಬ ಸಮಸ್ಯೆಯು ತಲೆಎತ್ತುತ್ತದೆ. ಅವರು ದಾಸರಾದುದರಿಂದ ಈ ಎಲ್ಲಾ ಸ್ಥಳಗಳಿಗೆ ತೀರ್ಥಯಾತ್ರೆಗೆ ಹೋಗಿದ್ದರೆಂದು ಈ ಸಮಸ್ಯೆಯನ್ನು ಪರಿಹರಿಸಿಬಿಡಬಹುದು. ಆದರೆ ಅವರು ಸೇನೆಯಲ್ಲಿದ್ದು ತಮ್ಮ ಜೀವಿತದ ಕಡೆಗಾಲದಲ್ಲಿ ಸರ್ವಸಂಗ ಪರಿತ್ಯಾಗ ಮಾಡಿದರೆಂದು ತಿಳಿಯುವುದರಿಂದ ಪ್ರಾಯಃ ಅವರು ಸೇನೆಯೊಂದಿಗೆ ಈ ಊರುಗಳಿಗೆ ಹೋಗಿ ಬಂದಿರಬೇಕೆಂದು ತರ್ಕಿಸಲು ಚಾರಿತ್ರಿಕ ಆಧಾರಗಳು ಇಂಬುಕೊಡುತ್ತವೆ.

ಶ್ರೀರಂಗಪಟ್ಟಣದ ರಂಗನಾಥನ ಅಂಕಿತದಲ್ಲಿ ಕನಕದಾಸರು ಕೀರ್ತನೆ

ರಚಿಸಿದ್ದಾರೆ. ಶ್ರೀರಂಗಪಟ್ಟಣ ಕಾವೇರಿ ದ್ವೀಪದಲ್ಲಿರುವ ಪಶ್ಚಿಮ ರಂಗಕ್ಷೇತ್ರ. ಇದು ಗೌತಮ ಮುನಿ ತಪಸ್ಸು ಮಾಡಿದ ಸ್ಥಳ. ಗೌತಮ ಕ್ಷೇತ್ರವೆಂದೂ ಪುರಾಣ ಪ್ರಸಿದ್ಧವಾದ ಸ್ಥಳ. ಸುಮಾರು ಹದಿನೈದನೆಯ ಶತಮಾನದ ಆದಿಭಾಗದಲ್ಲಿ ನಾಗಮಂಗಲದಿಂದ ಆಳುತ್ತಿದ್ದ ವಿಜಯನಗರದ ಸಾಮಂತ ತಿಮ್ಮಣ್ಣ ಈ ಸ್ಥಳದಲ್ಲಿ ಕೋಟೆಯನ್ನು ಕಟ್ಟಿ ನಗರವೊಂದನ್ನು ನಿರ್ಮಿಸಿದ. ಈ ಕಡೆಯ ಆಡಳಿತ ನೋಡಿಕೊಳ್ಳಲು ವಿಜಯನಗರ ಅರಸರು ಇಲ್ಲಿ ಒಬ್ಬ ರಾಜಪ್ರತಿನಿಧಿಯನ್ನು ಇಟ್ಟಿದ್ದರು, ಕನಕದಾಸರು ಶ್ರೀರಂಗಪಟ್ಟಣದಲ್ಲಿ ಕೆಲವು ಕಾಲವಾದರೂ ಇದ್ದಿರಬೇಕೆಂಬ ಆಧಾರಗಳಿವೆ. ಶ್ರೀರಂಗಪಟ್ಟಣದ ಹತ್ತಿರದ ಮಾದೇಶ್ವರ ಪುರದ ಬಳಿ ಕಾವೇರಿತೀರದಲ್ಲಿ ಕನಕನಕಲ್ಲು ಎಂಬ ಸ್ಥಳವಿದೆ ಕನಕದಾಸರು ಅಲ್ಲಿ ಕುಳಿತು ಧ್ಯಾನ ಮಾಡುತ್ತಿದ್ದರೆಂಬ ಪ್ರತೀತಿಯೂ ಜನರಲ್ಲಿದೆ. ಶ್ರೀರಂಗಪಟ್ಟಣದ ರಂಗನಾಥನ ಅಂಕಿತದಲ್ಲಿ,

ನಾಲ್ಕು ಯುಗದಾಧಾರಿ ಕಡೆಗೆ ತುರಗವನೇರಿ
ಸಾಕಾಗಿ ದಣಿದು ನೀನಿಲ್ಲಿ ಮಲಗಿದೆಯೊ
ಸಾಕಾರಿಯಾಗಿ ಗೌತಮ ಮುನೀಶ್ವರನಿಗೆ
ಬೇಕೆಂದು ನೀ ಕೊಟ್ಟ ವರಕೆ ನೀ ಮಲಗಿದೆಯೊ
ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ
ನಿನ್ನನೆಬ್ಬಿಸುವರೊಬ್ಬರನು ಕಾಣೆ...
ಶ್ರೀರಂಗಪಟ್ಟಣದ ರಂಗನಾಥ

–ಎಂದು ಕೀರ್ತಿಸಿರುವುದನ್ನು ಕಾಣಬಹುದಾಗಿದೆ.

ಉಮ್ಮತ್ತೂರು ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನಲ್ಲಿದೆ. ಒಂದು ಕಾಲದಲ್ಲಿ ಶಿವನಸಮುದ್ರ ಸೀಮೆಯೆಂದು ಹೆಸರಾದ ಪ್ರಾಂತ್ಯವೊಂದರ ರಾಜಧಾನಿಯಾಗಿತ್ತು. ತಲಕಾಡಿನ ಗಂಗವಂಶದ ಗಂಗರಾಜನೆಂಬುವನು ಈ ಪ್ರಾಂತ್ಯದ ಸಾಮಂತನಾಗಿ ಆಳುತ್ತಿದ್ದ. ಹೊಯ್ಸಳರ ಸಾಮಂತರಾಗಿದ್ದ ಇವನು ವಿಜಯನಗರದ ಸಂಘಟನೆಯಲ್ಲಿ ಸೇರಿದವನಾದರೂ ತಾನು ಗಂಗವಂಶದವನು ಸ್ವತಂತ್ರರಾಜ ಎಂಬ ಹಮ್ಮು ಇದ್ದೇ ಇದ್ದಿತು. ೧೫೦೯ರಲ್ಲಿ "ಕೃಷ್ಣದೇವರಾಯನು ಪಟ್ಟಕ್ಕೆ ಬಂದಾಗ ಅವನ ಪಟ್ಟಾರೋಹಣ ಕಾಲದಲ್ಲಿ ಸಾಮ್ರಾಜ್ಯದ ಸ್ಥಿತಿ ತೃಪ್ತಿಕರವಾಗಿರಲಿಲ್ಲ."[೧] ದಕ್ಷಿಣದ ಅನೇಕ ಸಾಮಂತರು

೧. ಡಾ. ಎಂ. ವಿ. ಕೃಷ್ಣರಾವ್, 'ಕರ್ನಾಟಕ ಇತಿಹಾಸ ದರ್ಶನ', ಪು ೩೭೯

ತಾವು ಸ್ವತಂತ್ರರೆಂದು ಘೋಷಿಸಿಕೊಂಡರು. "ಇದೇ ಕಾಲಕ್ಕೆ ಮಲೆತು ನಿಂತಿದ್ದ ಉಮ್ಮತ್ತೂರಿನ ನಾಯಕ ಗಂಗರಾಯನೊಡನೆ ಕೃಷ್ಣದೇವರಾಯನು ಯುದ್ಧನಿರತನಾದನು. ಗಂಗರಾಯನು ವೀರನರಸಿಂಹರಾಯನ ಆಳ್ವಿಕೆಯ ಕೊನೆಗಾಲದಿಂದಲೇ ವಿಜಯನಗರದ ವಿರುದ್ಧ ಕತ್ತಿಕಟ್ಟಿದ್ದನು. ಕೃಷ್ಣದೇವರಾಯನು ಗಂಗರಾಯನ ಮೇಲೆ ಯುದ್ಧ ಪ್ರಾರಂಭಿಸಿದನು. ಈ ಯುದ್ಧಾಚರಣೆ ಸುಮಾರು ೧೫೧೦ ರಿಂದ ೧೫೧೨ ರವರೆಗೂ ಮುಂದುವರಿದಿರಬೇಕು. ಕೃಷ್ಣದೇವರಾಯನು ಉಮ್ಮತ್ತೂರನ್ನು ಗಂಗರಾಯನ ಮುಖ್ಯಕಾರ್ಯಸ್ಥಾನವಾದ ಶಿವನಸಮುದ್ರ ಸೀಮೆಯನ್ನೂ ಆಕ್ರಮಿಸಿದನು. ಶಿವನಸಮುದ್ರವನ್ನು ಹಿಡಿಯಲು ಸುಮಾರು ಒಂದು ವರ್ಷಕಾಲ ಹೋರಾಡಬೇಕಾಯಿತು. ಈ ಸಮರದಲ್ಲಿ ಗಂಗರಾಯನು ಸೋತು ಪಲಾಯನ ಮಾಡಿ ಕಾವೇರಿ ನದಿಯಲ್ಲಿ ಮುಳುಗಿ ಮೃತನಾದನು. ಕೃಷ್ಣದೇವರಾಯನು ಜಯಿಸಿದ ಈ ನೂತನ ರಾಜ್ಯವು ವಿಜಯನಗರ ಸಾಮ್ರಾಜ್ಯದ ನೂತನ ಪ್ರಾಂತವಾಯಿತು. ಶ್ರೀರಂಗಪಟ್ಟಣ ಅದರ ರಾಜಧಾನಿಯಾಯಿತು. ಸ್ಥಳೀಯ ಆಡಳಿತವು ಮೂರು ಮಂದಿ ಸ್ಥಾನೀಕ ನಾಯಕರಲ್ಲಿ ನಿಯುಕ್ತವಾಯಿತು. ಬೆಂಗಳೂರಿನ ಕೆಂಪೇಗೌಡನೂ ಅವರಲ್ಲೊಬ್ಬ."[೧] ಕನಕದಾಸರು ಉಮ್ಮತ್ತೂರಿನ ರಂಗನಾಥನ ಅಂಕಿತದಲ್ಲಿ 'ಕನಕಪುರದಾದಿ ಕೇಶವರಾಯ' ಎಂದು ಕೀರ್ತನೆಗಳನ್ನು ರಚಿಸಿರುವುದರಿಂದ ಅವರು ಉಮ್ಮತ್ತೂರಿಗೆ ಬಂದಿದ್ದರೆಂಬುದು ಖಚಿತವಾಗುತ್ತದೆ.

ವಿಜಯನಗರದ ಸೇನೆಯು ಉಮ್ಮತ್ತೂರಿನಿಂದ ಕೊಡಗಿನ ನಂಜರಾಜಪಟ್ಟಣದಿಂದ ಆಳುತ್ತಿದ್ದ ನಂಜರಾಜನ ಮೇಲೆ ದಂಡೆತ್ತಿ ಹೋದುವೆಂದು ಚಾರಿತ್ರಿಕ ಆಧಾರಗಳು ಹೇಳುತ್ತವೆ. ವಿಜಯನಗರದ ವಿರುದ್ಧ ತಿರುಗಿಬಿದ್ದವರಲ್ಲಿ ನಂಜರಾಜನೂ ಒಬ್ಬ. ಕಲ್ಲಹಳ್ಳಿಯ ಮೂರನೆಯ ಮಂಗರಸನ ತಂದೆ ಈ ಯುದ್ಧದಲ್ಲಿ ಪಾಲುಗೊಂಡು ಸತ್ತುದನ್ನು ಕುಮಾರರಾಮ ಸಾಂಗತ್ಯ ಬರೆದ ನಂಜುಂಡ ಕವಿ ಉಲ್ಲೇಖಿಸುತ್ತಾನೆ.

ರಾಯದಳವ ಕಾಣುವ ತನ್ನ ಪತಿನಂಜ
ರಾಯನ ಮುಂದೆ ಕುದುರೆಯ
ರಾಯರಾವುತರ ಮೇಲೇರಿ ತಿವಿದು ಸುರ
ರಾಯನಗರಿಗೆಯ್ದಿದನು

–ಎಂದು ಹೇಳಿದ್ದಾನೆ. ರಾಯದಳ, ರಾಯರಾವುತರು ಎಂದರೆ ಕೃಷ್ಣದೇವರಾಯನ ಸೇನೆ ಎಂದು ಈಗಾಗಲೇ ಚರಿತ್ರಕಾರರು, ವಿದ್ವಾಂಸರು

ಒಪ್ಪಿದ್ದಾರೆ. ಈ ಸೇನೆಯಲ್ಲಿ ಕನಕದಾಸರೂ ಇದ್ದು ಕೊಡಗಿನ ಭಾಗದಲ್ಲಿ ಸಂಚಾರ ಮಾಡಿರುವುದರಿಂದಲೇ ಅವರಿಗೆ ತಮ್ಮ ನಳಚರಿತ್ರೆಯ ಕಾಡಿನ ವರ್ಣನೆಯನ್ನು ವಿಶೇಷವಾಗಿ ಕಾಡಿಗೆ ಬೆಂಕಿ ಬೀಳುವುದನ್ನು, ಆನೆಗಳು ಹಿಂಡು ಹಿಂಡಾಗಿ ನುಗ್ಗುವುದನ್ನು ನೈಜವಾಗಿ ಚಿತ್ರಿಸಲು ಸಾಧ್ಯವಾಯಿತೆಂದು ಹೇಳಬಹುದು. ಕನಕದಾಸರ ನಳಚರಿತ್ರೆಯಲ್ಲಿ ರಾಯರಾವುತ ದಳದ ಉಲ್ಲೇಖ ದೊರೆಯುತ್ತದೆ :

ಗಾಳಿ ಮುರಿದೌಕಿದೊಡೆ ಘನಮೇ
ಘಾಳಿ ನಿಲುವುದೆ ನಿಷದಪತಿಶರ
ಜಾಳದಲಿ ಕಡಿವಡೆದು ಬಿದ್ದರು ರಾಯರಾವುತರು
ಆಳು ಮುರಿದುದು ಕಂಡಮುಖದಲಿ
ಹೇಳಲೇ ನಾನವರ ವಿಧಿಯನು
ಸೋಲದಲಿ ಮನಗುಂದಿ ಹಾಯ್ದರು ಬಿಟ್ಟಮಂಡೆಯಲಿ.

ನಂಜರಾಜಪಟ್ಟಣದ ಯುದ್ಧದೊಂದಿಗೆ ವಿಜಯನಗರವು ದಕ್ಷಿಣದಲ್ಲಿ ನೀಲಗಿರಿಯವರೆಗೆ ತನ್ನ ಹಿಡಿತವನ್ನು ಭದ್ರಗೊಳಿಸಿತು. ಈ ಹೊತ್ತಿಗೆ ಕೃಷ್ಣದೇವರಾಯ ಅತ್ಯಂತ ಸಮರ್ಥನೆಂಬುದೂ ಮುಸಲ್ಮಾನರ ದಾಳಿಯನ್ನು ತಡೆಯಬಲ್ಲ ಶಕ್ತನೆಂಬುದೂ ಖಚಿತವಾಗಿತ್ತು. ಸಾಮ್ರಾಜ್ಯದಲ್ಲಿ ಶಾಂತಿನೆಲೆಸಿತು. ಹೀಗಾಗಿ ಉಮ್ಮತ್ತೂರು, ನಂಜರಾಜಪಟ್ಟಣದ ಕಡೆಗೆ ಹೋಗಿದ್ದ ವಿಜಯನಗರದ ಸೇನೆಯು ಮುಂದೆ ಬಹಳಕಾಲದವರೆಗೆ ಬೇಲೂರಿನಲ್ಲಿಯೇ ನೆಲೆನಿಂತ ಬಗ್ಗೆ ಚಾರಿತ್ರಿಕ ಆಧಾರಗಳಿವೆ. ಈ ಶಾಂತಿ ಸಮಯದಲ್ಲಿ ಬೇಲೂರಿನಲ್ಲಿ ನಿಂತ ಕನಕದಾಸ ತನ್ನ ಮೂರು ಕಾವ್ಯಗಳು ನಳಚರಿತ್ರೆ, ರಾಮಧಾನ್ಯಚರಿತ್ರೆ ಮತ್ತು ಹರಿಭಕ್ತಿಸಾರಗಳನ್ನು ರಚಿಸಿರುವ ಸಾಧ್ಯತೆಯೂ ಇದೆ.

ವಿಜಯನಗರ ತನ್ನ ಅಭ್ಯುದಯದ ಹಮ್ಮಿನಲ್ಲಿ ಮೈಮರೆತಿರುವಾಗ ಅತ್ತ ಬಹಮನಿಸುಲ್ತಾನರು ಗರಿಗಟ್ಟಿಕೊಂಡು ಯುದ್ಧಸನ್ನದ್ಧರಾಗತೊಡಗಿದರು. ಕೃಷ್ಣದೇವರಾಯ ತನ್ನ ಆರು ವರ್ಷದ ಮಗನಿಗೆ ಪಟ್ಟ ಕಟ್ಟಿದ. ಅವನನ್ನು ವಿಷ ಹಾಕಿ ಕೊಲ್ಲಲಾಯಿತು. ಮುಂದೆ "ಕೃಷ್ಣದೇವರಾಯನ ಅನಂತರ ವಿಜಯನಗರ ಸಾಮ್ರಾಜ್ಯದಲ್ಲಿ ಯಾದವೀಕಲಹಗಳು ತಾಂಡವವಾಡ ತೊಡಗಿದವು." ಈ ಸಂದರ್ಭವನ್ನು ಉಪಯೋಗಿಸಿಕೊಂಡ "ಸುಲ್ತಾನನ ಮಿತ್ರಕೂಟದ ಸೇನೆಗಳು ದಕ್ಷಿಣಾಭಿಮುಖವಾಗಿ ಹೊರಟು ಸಾಮ್ರಾಜ್ಯವನ್ನು ಪಾಳುಗೆಡವಿದವು." ಈ ಮುಂಚೆಯೇ ಕೃಷ್ಣದೇವರಾಯನ ಅಂತಿಮ

ದಿನಗಳಲ್ಲಿಯೇ ಬಹಮನಿಸುಲ್ತಾನರ ಸೇನೆ ವಿಜಯನಗರದ ಮೇಲೆ ದಾಳಿ ಮಾಡಿ ರಾಯಚೂರನ್ನು ವಶಪಡಿಸಿಕೊಂಡವು. ವಿಜಯನಗರದ ಇತರ ಕೇಂದ್ರಗಳಲ್ಲಿದ್ದ ಸೇನೆ ರಾಯಚೂರಿನತ್ತ ಧಾವಿಸಿತು. ಬೇಲೂರಿನಲ್ಲಿದ್ದ ಕನಕದಾಸರ ಸೇನೆಯೂ ರಾಯಚೂರಿನತ್ತ ಧಾವಿಸಿತು. ರಾಯಚೂರಿನ ಕನಕಗಿರಿ, ಕನಕನಕಟ್ಟೆಯ ಹತ್ತಿರ ನಡೆದ ಈ ಯುದ್ಧದ ವರ್ಣನೆಯನ್ನು ಪ್ರವಾಸಿ ನ್ಯೂನಿಜ್ ವಿವರಿಸುತ್ತಾನೆ. ಕನಕದಾಸರು ಈ ಸ್ಥಳಗಳಿಗೆ ಹೋಗಿದ್ದರೆಂಬುದನ್ನು ಅವರು ಇಲ್ಲಿನ ಆದಿಕೇಶವನ ಅಂಕಿತದಲ್ಲಿ ರಚಿಸಿರುವ ಕೀರ್ತನೆಗಳು ಪ್ರತಿಪಾದಿಸುತ್ತವೆ.

ಜನನ ಸೊಂಡಿಗೆ ಹುರಿಯಬೇಕಣ್ಣ । ನಿಜವಾಗಿ ನಿಂತು
ತನುವು ತುಪ್ಪವ ಕಾಸಬೇಕಣ್ಣ
ಕನಕಗಿರಿ ನೆಲೆಯಾದಿಕೇಶವದಾಸ
ಕನಕನಕಟ್ಟೆಯೊಳು ನಿಂತು ಸುಖದ ಪಾಕವನು
ಚಂದದಿಂ ಸವಿದುಣ್ಣಲಿಕ್ಕೆ.

ಈ ವಿಜಯನಗರದ ಸೇನೆ ಆ ಭಾಗದಲ್ಲಿ ಅನೇಕ ದಿನಗಳ ಕಾಲ ನಿಂತಿತು. ಈ ಯುದ್ಧದಲ್ಲಿ ಕೃಷ್ಣದೇವರಾಯನಿಗೆ ಜಯವೂ ದೊರೆಯಿತು. ಆದುದರಿಂದಲೇ ಈ ವಿಜಯದ ತರುವಾಯ ಕೃಷ್ಣದೇವರಾಯ ರಾಯಚೂರಿಗೆ ಧಾವಿಸಿ ಅದನ್ನು ಪುನಃ ವಶಪಡಿಸಿಕೊಂಡನು. ಕನಕದಾಸರು ತಮ್ಮ ಸೇನೆಯೊಂದಿಗೆ ಅಲ್ಲಿಯೇ ನಿಂತರು.

ಕೃಷ್ಣದೇವರಾಯನ ಮಗನ ಮರಣಾನಂತರ ವಿಜಯನಗರದ ಸಿಂಹಾಸನಕ್ಕೆ ಕಿತ್ತಾಟ ಆರಂಭವಾಯಿತು. ಪ್ರವಾಸಿಗಳ ಹೇಳಿಕೆಯನ್ನು ಗಮನಿಸಿ ಹೇಳುವುದಾದರೆ ಯಾವ ಹಿಂದೂ ಧರ್ಮ ರಕ್ಷಣೆ ಮತ್ತು ಸಂಘಟನೆಯ ಧ್ಯೇಯದಿಂದ ಅದು ಅಸ್ತಿತ್ವಕ್ಕೆ ಬಂದಿತ್ತೋ ಅದನ್ನು ಮರೆತು ತಮ್ಮ ಸ್ವಾರ್ಥ ಅಧಿಕಾರಲಾಲಸೆಯ ಬೆನ್ನು ಹತ್ತಿದ ರಾಜವಂಶದದವರು, ಸಾಮಂತರು ಅದರ ಅವನತಿಗೂ ಕಾರಣರಾದರು. ಈ ಸುಸಂದರ್ಭವನ್ನು ಉಪಯೋಗಿಸಿಕೊಂಡ ಬಹಮನಿಸುಲ್ತಾನರು ದಕ್ಷಿಣದತ್ತ ತಮ್ಮ ಸೇನೆಯನ್ನು ನುಗ್ಗಿಸಿ ಹಿಂದೂ ದೇವಾಲಯಗಳನ್ನು ಧ್ವಂಸ ಮಾಡಲಾರಂಭಿಸಿದರು, ಛಿದ್ರಛಿದ್ರವಾಗಿದ್ದ ವಿಜಯನಗರದ ಸೇನೆ ಏನೂ ಮಾಡುವ ಸ್ಥಿತಿಯಲ್ಲಿರಲಿಲ್ಲ. ಆದರೂ ಎಚ್ಚಮನಾಯಕ, ಕನಕದಾಸರಂಥವರು ತಮ್ಮ ಶಕ್ತಿಮೀರಿ ಆ ಸಾಮ್ರಾಜ್ಯದ ರಕ್ಷಣೆಗೆ ಶ್ರಮಿಸಿದರು. ಅಂಥ ಒಂದು ಸಂದರ್ಭದಲ್ಲಿ ಕನಕದಾಸರ ಸೇನೆ ಬಿಜಾಪುರದ ಸುಲ್ತಾನರ ಸೇನೆಯನ್ನು ಬಾಡ ಹತ್ತಿರ ಎದುರಿಸಿದ ಆಧಾರಗಳು

ದೊರೆಯುತ್ತವೆ. ಈ ಊರು ಆ ಯುದ್ಧದಲ್ಲಿ ಸಂಪೂರ್ಣವಾಗಿ ನಾಶವಾಯಿತೆಂದೂ ಸ್ಥಳಗತೆಗಳು ಹೇಳುತ್ತವೆ. ಈ ಸಮಯದಲ್ಲಿ ಕನಕದಾಸರು ಬಾಡದ ಆದಿಕೇಶವನ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿರಬೇಕು. ಈ ಯುದ್ಧಗಳೊಂದಿಗೆ ವಿಜಯನಗರ ಸಾಮ್ರಾಜ್ಯ ಸಂಪೂರ್ಣವಾಗಿ ನಾಶವಾಯಿತೆಂದು ಹೇಳಬಹುದು.

ಬಾಡದ ಯುದ್ಧದಲ್ಲಿ ಸೋತನಂತರ, ವಿಜಯನಗರ ಸಾಮ್ರಾಜ್ಯದ ಅಭ್ಯುದಯ ಪತನ ಎರಡನ್ನೂ ಕಂಡ ಕನಕದಾಸರಿಗೆ ವೈರಾಗ್ಯವುಂಟಾಗಿದ್ದರೆ ಆಶ್ಚರ್ಯವಿಲ್ಲ. ಈ ಹೊತ್ತಿಗೆ ಅವರ ಸೇನೆಯೂ ನಾಶವಾಗಿತ್ತು. ಆದುದರಿಂದ ಕನಕನಾಯಕ ಕನಕದಾಸರಾಗಿ ಕಾಗಿನೆಲೆಯಲ್ಲಿ ನೆಲೆ ನಿಂತರೆಂದು ಹೇಳಲು ಸಾಕಷ್ಟು ಆಧಾರಗಳು ದೊರೆಯುತ್ತವೆ. ಕನಕದಾಸರು ತಮ್ಮ ಕಾವ್ಯ ಮತ್ತು ಕೀರ್ತನೆಗಳಲ್ಲಿ ಉಲ್ಲೇಖಿಸಿರುವ ಸ್ಥಳಗಳಲ್ಲಿ ಬೇಲೂರಿಗೆ ಮೊದಲ ಸ್ಥಾನವೂ ಕಾಗಿನೆಲೆಗೆ ಎರಡನೆಯ ಸ್ಥಾನವೂ ದೊರೆತಿದೆ. ಮಿಕ್ಕ ಊರುಗಳಲ್ಲಿ ಅವರು ಕೆಲಕಾಲ ಮಾತ್ರ ತಂಗಿರಬೇಕು. ಆದುದರಿಂದ ಕನಕದಾಸರು ಬೇಲೂರು ಮತ್ತು ಕಾಗಿನೆಲೆಯಲ್ಲಿ ತಮ್ಮ ಜೀವಿತದ ಹೆಚ್ಚು ಕಾಲವನ್ನು ಕಳೆದಿರುವರೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಆಹಾರ ಪದ್ಧತಿ ಮನುಷ್ಯನ ಮೂಲನೆಲೆಯನ್ನು ಕಂಡುಹಿಡಿಯುವಲ್ಲಿ ಮಹತ್ವದ ದಾಖಲೆಯಾಗುತ್ತದೆ. ಮನುಷ್ಯ ತನ್ನ ಎಳವೆಯ ಊಟೋಪಚಾರಗಳನ್ನು ಮುಂದೆ ಅವನು ಎಂಥದೇ ಸ್ಥಾನಮಾನಗಳಿಸಿದರೂ ಮರೆಯಲಾರ. ಈ ಹಿನ್ನೆಲೆಯಲ್ಲಿ ಕನಕದಾಸರ ರಾಮಧಾನ್ಯ ಚರಿತ್ರೆ ಕನಕದಾಸರ ಆಹಾರ ರಾಗಿ ಎಂಬುದನ್ನು ಪ್ರತಿಪಾದಿಸುತ್ತದೆ. ಋಷ್ಯಾಶ್ರಮಕ್ಕೆ ಲಂಕೆಯಿಂದ ಹಿಂತಿರುಗಿದ ರಾಮಸೇನೆಗೆ ಅಲ್ಲಿನ ಋಷಿಗಳು "ತರಿಸಿದರಖಿಳವಸ್ತುವ ಬೆಲ್ಲ, ಸಕ್ಕರೆ, ಜೇನುತುಪ್ಪ ರಸಾಯನಂಗಳ," ಈ ಸೇನೆಯಲ್ಲಿ ವಿಭಿನ್ನ ಆಹಾರ ಪದ್ಧತಿಯ ಲಂಕೆಯವರು, ಸುಗ್ರೀವನ ಕಡೆಯವರು ಇದ್ದರು. ಋಷಿಗಳು ಹೆಡಗೆಗಳಲ್ಲಿ ಹೊರಿಸಿ ತರಿಸಿದ ಭಕ್ಷ್ಯ ಭೋಜ್ಯಗಳು ಈ ಸೈನಿಕರಿಗೆ ರುಚಿಸಿದವೋ ಇಲ್ಲವೋ ಎಂದುಕೊಂಡ ರಾಮ ಆಂಜನೇಯನನ್ನು "ಅನಿಲಸುತ ಬಾರೆಂದು ಕರೆದು ಕರುಣದೊಳಿವರ ರುಚಿಯೆಂತು ಪೇಳೆಂದು" ಕೇಳಿದ. ಆಗ ಆಂಜನೇಯ ರಾಗಿಯನ್ನು ತನಿಯಾದ ಭಕ್ಷ್ಯ ಎಂದು ರಾಮನಿಗೆ ಹೇಳಿದ. ಆಗ ರಾಮ ಎಲ್ಲಾ ಆಹಾರ ಧಾನ್ಯಗಳನ್ನು ತರಿಸಿದ.

ನರೆದಲಗನಿದು ನೆಲ್ಲು ಹಾರಕ
ಬರಗು ಜೋಳವು ಕಂಬು ಸಾಮೆಯು

ಉರುತರದ ನವಣೆಯಿದು ನವಧಾನ್ಯವೆಂದೆನಲು.

ಅಲ್ಲಿ ಸೇರಿದ್ದ ಮುನಿಗಳೆಲ್ಲರೂ ತಮತಮಗೆ ಪ್ರಿಯವಾದ ಧಾನ್ಯವನ್ನು ಎತ್ತಿಹಿಡಿದರು.

ಕೆಲರು ಗೋಧಿಯ ಸಾಮೆಯನು ಕೆಲ
ಕೆಲರು ನವಣೆಯ ಕಂಬು ಜೋಳವ
ಕೆಲರು ಹಾರಕನೆಂದು ಕೆಲರು ನೆಲ್ಲನತಿಶಯವ
ಕೆಲರು ನರೆದಲಗನನು ಪತಿಕರಿಸಿದರು

ಇದರಿಂದ ರಾಮನಿಗೆ ಗೊಂದಲವಾಯಿತು. ಅವನು ಗೌತಮ ಋಷಿಯನ್ನು "ಹಲವು ಮತವೇಕೊಂದನೇ ಪೇಳೆಂದು" ಕೇಳಿದ. ಅದಕ್ಕುತ್ತರವಾಗಿ ಗೌತಮಮುನಿ

ದಾಶರಥಿ ಚಿತ್ತೈಸುನಮ್ಮಯ
ದೇಶಕತಿಶಯ ನರೆದಲಗನೇ
ವಾಸಿಯುಳ್ಳವನೀತ ಮಿಕ್ಕಿನಧಾನ್ಯವೇಕೆನಲು.

ಮೇಲಿನ ಎಲ್ಲ ಪದ್ಯಗಳು ಕನಕದಾಸರು ರಾಗಿ ಮುಖ್ಯ ಆಹಾರವಾಗುಳ್ಳ ಪ್ರದೇಶದವರೆಂಬುದನ್ನು ಸಾಬೀತು ಪಡಿಸುತ್ತವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ರಾಗಿಯೇ ನಮ್ಮ ದೇಶಕ್ಕೆ ಅತಿಶಯ ಆಹಾರ ಎಂದು ಹೇಳುವವನು ಗೌತಮಮುನಿ. ಗೌತಮಕ್ಷೇತ್ರ ಅಪ್ಪಟ ರಾಗಿಯ ಪ್ರದೇಶವೆಂಬುದನ್ನೂ ಗಮನಿಸಬೇಕು.

ಕನ್ನಡನಾಡಿನ ರಾಗಿ ಬೆಳೆಯುವ ಪ್ರದೇಶವಾದ ಹಳೇ ಮೈಸೂರು ಭಾಗದಲ್ಲಿ ಅನೇಕ ರಾಗಿಯ ಪ್ರಾಚೀನ ತಳಿಗಳನ್ನು ಗ್ರಾಮಸ್ಥರು ಈಗಲೂ ಬೆಳೆಯುತ್ತಾರೆ. ಅವುಗಳೆಂದರೆ ನರೆದಲಗ, ಬುಂಡಿಗ, ಕೆದರಿಗ, ಹೆಬ್ಬಳಿಗ ಇತ್ಯಾದಿ. ಇವುಗಳ ತೆನೆಯ ಮುಂದೆ ಈಗಿನ ಇಂಡಾಫ್ ಇತ್ಯಾದಿ ರಾಗಿಯ ತಳಿಗಳು ಏನೇನೂ ಪ್ರಯೋಜನವಿಲ್ಲವೆಂದು ಹಳಬರು ಹೇಳುವುದುಂಟು. ಈ ಪ್ರಾಚೀನ ರಾಗಿಯ ತಳಿಗಳಲ್ಲಿ ನರೆದಲಗ ಜಾತಿಯನ್ನು ವಿಶೇಷವಾಗಿ ಹಾಸನ ಜಿಲ್ಲೆಯಲ್ಲಿ ಬೆಳೆಯುತ್ತಾರೆ. ಈಗಲೂ ಅಲ್ಲಿ ಬೇಲೂರು, ಹಾಸನ ಮತ್ತು ಹೊಳೆನರಸೀಪುರ ಪ್ರದೇಶದಲ್ಲಿ ಈ ಜಾತಿಯ ರಾಗಿಯನ್ನು ಪ್ರಧಾನವಾಗಿ ಬೆಳೆಯುತ್ತಾರೆ. ಈ ಆಧಾರಗಳಿಂದ ಕನಕದಾಸರು ನರೆದಲಗನನ್ನು ಧಾನ್ಯಗಳ ಪಟ್ಟಿಯಲ್ಲಿ ಕೊಡುತ್ತಾರೆ. ಆದುದರಿಂದ ಅವರು ಈ ಸ್ಥಳಕ್ಕೆ ಸಂಬಂಧಿಸಿದವರೆಂದು ಹೇಳಲವಕಾಶವಿದೆ.

ಧಾರ್ಮಿಕ ಪರಿಸರ ಮತ್ತು ರೀತಿನೀತಿಗಳು ಒಬ್ಬ ವ್ಯಕ್ತಿಯ ಮೂಲ ಸ್ಥಳವನ್ನು ಗುರುತಿಸುವಲ್ಲಿ ಸಹಾಯಕವಾಗುತ್ತವೆ. ಕನಕದಾಸರ ಧಾರ್ಮಿಕ ನಿಲುವು ಅವರ ಮೋಹನತರಂಗಿಣಿ ಕಾವ್ಯದಲ್ಲಿ ಯಾವ ಸಂದಿಗ್ಧಕ್ಕೂ ಎಡೆಯಿಲ್ಲದಂತೆ ನಿರೂಪಿತವಾಗಿದೆ.

ಶ್ರೀಮದ್ಗುರುರಾಯದುರಿತ ವಿಜೇಯದು
ಷ್ಕಾಮವಿಚ್ಛೇದವಾಹ್ಲಾದ
ತಾಮರಸಗುಣ ನಾಶ ಸಾತ್ವಿಕೋಲ್ಲಾಸಶ್ರೀ
ರಾಮಾನುಜ ಮುನಿಶರಣು.
ಅರ್ಕನೊಳಾಟವೆ ತಮಕೆ ತಾರ್ಕ್ಷ್ಯನಕೂಡೆ
ಕಾರ್ಕೋಟಕ ಮೇಳವಿಪುದೆ
ತರ್ಕಕೆ ರಾಮಾನುಜರೊಳು ವಾದಿಸಂ
ಪರ್ಕನಿಲ್ವುದೆ ನಿಲ್ಲಲರಿದು.

ಕನಕದಾಸರ ಮೇಲಿನ ಹೇಳಿಕೆ ಅವರು ರಾಮಾನುಜ ಪಂಥದ ವೈಷ್ಣವ ಧರ್ಮಾನುಯಾಯಿಗಳೆಂಬುದನ್ನು ಖಚಿತವಾಗಿಯೇ ಪ್ರತಿಪಾದಿಸುತ್ತದೆ. ಅವರು ಬೇರಾವ ಧಾರ್ಮಿಕ ಮುಖಂಡರನ್ನೂ ಸ್ಮರಿಸಿರುವುದು ಅವರ ಸಾಹಿತ್ಯದಲ್ಲಿ ಕಂಡು ಬರುವುದಿಲ್ಲ.

ಕನ್ನಡನಾಡಿನಲ್ಲಿ ಪ್ರಧಾನವಾಗಿ ಈಗಿನ ಹಳೆಯ ಮೈಸೂರು ಭಾಗದಲ್ಲಿ ಈ ಧರ್ಮ ಇಂದಿಗೂ ಪ್ರಬಲವಾಗಿರುವುದನ್ನು ಕಾಣಬಹುದು. ಧಾರ್ಮಿಕ ಮತ್ತು ರಾಜಕೀಯ ಒತ್ತಡಗಳಿಂದಾಗಿ ತಮಿಳುನಾಡಿನಿಂದ ಓಡಿಬಂದ ರಾಮಾನುಜಾಚಾರ್ಯ ಮೊದಲು ನೆಲೆ ನಿಂತುದು ನಾಗಮಂಗಲ ತಾಲ್ಲೂಕಿನ ಪಡುವಲ ಪಟ್ಟಣದ ಹತ್ತಿರವಿರುವ ಬಸವನ ಬೆಟ್ಟದ ಪಾಂಡವರ ಗುಹೆಯಲ್ಲಿ. ಮುಂದೆ ತೊಂಡನೂರಿನಿಂದ ಆಳುತ್ತಿದ್ದ ಹೊಯ್ಸಳ ಯುವರಾಜ ಬಿಟ್ಟಿದೇವನ ಪರಿಚಯವಾಗಿ ಅಲ್ಲಿಗೆ ಹೋದರು. ಒಂದನೆಯ ಬಲ್ಲಾಳನ ಅಕಾಲ ಮರಣದಿಂದಾಗಿ ಅಧಿಕಾರಕ್ಕೆ ಬಂದ ಬಿಟ್ಟಿದೇವ ನಾನಾ ಕಾರಣಗಳಿಗಾಗಿ ಶ್ರೀವೈಷ್ಣವ ಧರ್ಮ ಸ್ವೀಕರಿಸಿ ವಿಷ್ಣುವರ್ಧನನಾದ. ಆಗ ರಾಮಾನುಜರ ನೆಲೆ ಹೊಯ್ಸಳರ ರಾಜಧಾನಿಯಾದ ಬೇಲೂರಿಗೆ ಸ್ಥಳಾಂತರವಾಯಿತು. ರಾಜ ಒಪ್ಪಿದ ಧರ್ಮ ಆ ರಾಜ್ಯದಲ್ಲಿ ಪ್ರಚಾರವಾಗಿಯೇ ಆಗುತ್ತದೆ. ಗ್ರಾಮಾಂತರ ಜನರು ಕೂಡ ಈ ಧರ್ಮವನ್ನು ಆಚರಿಸಿದರು ಮತಾಂತರವಾಗದೆ. ಈಗಲೂ ಬೇಲೂರ ಚನ್ನಕೇಶವನಿಗಾಗಲಿ, ಮೇಲುಕೋಟೆಯ ಚಲುವರಾಯನಿಗಾಗಲಿ ಗ್ರಾಮಾಂತರದ

ಭಕ್ತರೆ ಹೆಚ್ಚು. ಈ ಜನರಲ್ಲಿ ಶಿವ ವಿಷ್ಣುಗಳಲ್ಲಿ ಯಾವ ಭೇದವೂ ಇಲ್ಲ. ಕನಕದಾಸರೂ ಕೂಡ ಈ ಸಂಪ್ರದಾಯದ ಗ್ರಾಮಾಂತರ ಧಾರ್ಮಿಕ ಸಂಸ್ಕೃತಿಗೆ ಸೇರಿದವರು. ಆದುದರಿಂದಲೇ

ಗಿರಿಜೆಯರಸನಭಜಿಸಿ ಲಕ್ಷ್ಮೀ
ವರನಪಾದಾಂಬುಜಕೆ ವಂದಿಸಿ
ಕರಿಮುಖನ ಬಲಗೊಂಡು ಗೀರ್ವಾಣಿಗೆ ನಮಸ್ಕರಿಸಿ
ಗುರುವಿನಂಘ್ರಿಗೆ ನಮಿಸಿ ಸತ್ಕವಿ
ವರರ ಮನದಲಿ ನೆನೆದು ವರಪುರ
ದರಸನನು ಕೊಂಡಾಡಿ ಪೇಳುವೆನೀ ಮಹಾಕಥೆಯ.
ಶಿವ ಶಿವ ಎನ್ನಿರೊ ಮೂಜಗದವರೆಲ್ಲ
ಶಿವ ಶಿವ ಎನ್ನಿರೊ.
ವಿನಯದಿಂದ ವಿಭೂತಿಯನು ವರಕಾಲಭೈರವನು

ಎಂದು ಸಮನ್ವಯವನ್ನು ಸಾರಿದ್ದಾರೆ. ಹರಿಯ ಮಹಿಮೆಯನ್ನು ಹೇಳುವ ಕಾವ್ಯದ ಮೊದಲನೆಯ ಪದ್ಯದಲ್ಲಿಯೇ ಗಿರಿಜೆಯರಸನನ್ನು ನೆನೆಯುತ್ತಾರೆ. ಆದುದರಿಂದ "ಕನಕದಾಸರು ಮಾಧ್ವರೋ ರಾಮಾನುಜೀಯರೊ ಎಂಬ ಬಗ್ಗೆ ವಾದ ವಿವಾದ ನಡೆದಿದೆ. ಅವರ ಕಾವ್ಯಗಳಲ್ಲಿ ಕ್ವಚಿತ್ತಾಗಿ ಗೋಚರಿಸುವ ಕೆಲವು ಶಿಥಿಲ ಕಾರಣಗಳಿಂದ ಅವರನ್ನು ಆ, ಈ ಪಂಗಡಕ್ಕೆ ಸೇರಿಸುವುದುಂಟು. ಆದರೆ ಅವರು ಯಾವ ಮತವನ್ನೂ ತಿರಸ್ಕರಿಸದೆ, ಯಾವ ದೇವರನ್ನೂ ಬಹಿಷ್ಕರಿಸದೆ ವಿಷ್ಣು ಶಿವರಲ್ಲಿ ಭೇದವೆಣಿಸದೆ ಆತ್ಮಸಾಕ್ಷಾತ್ಕಾರ ಮಾಡಿಕೊಂಡು ಕಾವ್ಯಕ್ಷೇತ್ರ ಆಧ್ಯಾತ್ಮಿಕ ಕ್ಷೇತ್ರಗಳೆರಡರಲ್ಲಿಯೂ ಸಮಾನ ಖ್ಯಾತಿಯನ್ನು ಗಳಿಸಿದ ಮಹಾನುಭಾವರು."[೧]

ಪರಿಸರ, ಆ ಪರಿಸರದ ಮರಗಿಡ, ಪ್ರಾಣಿಪಕ್ಷಿ ಮಳೆಬೆಳೆಗಳು ಒಬ್ಬ ವ್ಯಕ್ತಿಯ ಮೂಲಸ್ಥಳವನ್ನು ಗುರುತಿಸುವಲ್ಲಿ ಸಹಾಯಕವಾಗುತ್ತವೆ. ಕನಕದಾಸರ ಕಾವ್ಯಗಳಲ್ಲಿ ಬರುವ ಈ ಪರಿಸರಪ್ರಜ್ಞೆಯನ್ನು ಗಮನಿಸಿದ ಯಾರಿಗಾದರೂ ಈ ಕವಿಗೆ ಗ್ರಾಮಾಂತರ ಬದುಕಿನ ದಟ್ಟವಾದ ಅನುಭವವಿರುವುದು ಕಂಡುಬರುತ್ತದೆ. ಈ ಬಗೆಗಿನ ಕೆಲವು ಉದಾಹರಣೆಗಳು.

---

೧. ಡಾ. ದೇ ಜವರೇಗೌಡ. 'ನಳಚರಿತ್ರೆ' ಪೀಠಿಕೆ, ೨೯, ೧೯೮೫.

ಒಂದು ಕಡೆಯಲಿ ತಾಳಮದ್ದಳೆ.
ನಾನಾ ಜನ್ಮದಿ ಬಂದ ನಾಟಕದ ಬೊಂಬೆಯಿದು
ತೊಗಲಗೊಂಬೆಯ ಕುಣಿಸಿದ ತೆರದಲಿ.
ನನ್ನವ್ವ ರಾಗಿಯ ಕಲ್ಲ ಬಿಡೆ–

–ಇಂಥವೆಲ್ಲ ಕನಕದಾಸರು ತಮ್ಮ ಎಳವೆಯಲ್ಲಿ ಕಂಡು ಕೇಳಿದ, ಯೌವ್ವನದಲ್ಲಿ ಪಾಲುಗೊಂಡ ಗ್ರಾಮಕಲೆಗಳನ್ನು ಧ್ವನಿಸುತ್ತವೆ.

ಮುರಿದು ನೋಡಿದನಲ್ಲಿ ತೆಂಗಿನಮರಗಳ
ಮುಂದೆ ಕಂಡನು ಬರುತಲಡವಿಯೊ
ಳೊಂದ ತಾರೆಯಮರವ.
ತನಿರುಚಿಯ ಹಲಸು ಮಾವಿನ–

–ಮುಂತಾದವು ಕನಕದಾಸರು ಕಂಡುಂಡ ಮರಗಿಡಗಳು. ಹಲಸು ಮತ್ತು ಮಾವು ಈಗಲೂ ಬೇಲೂರ ಸುತ್ತ ಹೆಸರುವಾಸಿ.

ಕವಿದು ಕಾಡಾನೆಗಳು ಮಡುವಿಗೆ
ತವಕದಿಂನೀರಡಸಿ ಬಂದುದು.
ಮುರಿದು ತರುಗಳ ನಿಡುತ ಮೆಳೆಗಳ
ನೊರಸಿ ಮೆಟ್ಟುತ ಕೋಡಿನಲಿ.
ನವಿಲು ಜಿಲಿಬಿಲಿಗ ಗೀಜುಗ
ಬಕ ಹಸುಬ ಗೊರವಂಕ ಟಿಟ್ಟಿಭ
ಪಿಕ ಚಕೋರ ಮೀನ್ಬುಲಿಗ–

–ಕನಕದಾಸರು ತಾವು ತಮ್ಮ ಬಾಲ್ಯ ಮತ್ತು ಯೌವ್ವನಗಳಲ್ಲಿ ಕಂಡ ಪ್ರಾಣಿಪಕ್ಷಿಗಳ ಚಿತ್ರ ಇಲ್ಲಿ ಧ್ವನಿತಗೊಂಡಿದೆ. ಮೇಲಿನ ಎಲ್ಲ ಪರಿಸರಕ್ಕೆ ಸಂಬಂಧಿಸಿದ ಉದಾಹರಣೆಗಳು ಕನಕದಾಸರು ಒಂದು ಕಡೆ ಮಲೆನಾಡನ್ನೂ ಒಂದು ಕಡೆ ಬಯಲುನಾಡನ್ನೂ ಕೂಡಿಸುವ ಸ್ಥಳದವರೆಂಬುದನ್ನು ಧ್ವನಿಸುತ್ತವೆ.

ಭಾಷೆ ಮನುಷ್ಯನ ಮೂಲ ಸ್ಥಳವನ್ನು ಗುರುತಿಸುವಲ್ಲಿ ಅಂತಿಮ ತೀರ್ಮಾನ ಎಂದು ಅಭಿಪ್ರಾಯವಿದೆ. ಪ್ರತಿಭಾನ್ವಿತ ಕವಿ, ಗಾಯಕರ ರಚನೆಗಳಲ್ಲಿ ಅವನ ಪರಿಸರದ ಭಾಷೆ ನುಡಿಗಟ್ಟು, ಗಾದೆ ಮುಂತಾದುವುಗಳು ಒಂದಲ್ಲ ಒಂದು ರೀತಿಯಲ್ಲಿ ಅಭಿವ್ಯಕ್ತವಾಗುತ್ತವೆ. ಕನಕದಾಸರ ಸಾಹಿತ್ಯದಲ್ಲಿ ಇಂತಹ ಲೆಕ್ಕವಿಲ್ಲದಷ್ಟು ಭಾಷಾಪ್ರಯೋಗಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಲವು,

ಓಡೋಗೊ ಬಡ್ಡಿ ಹೆಪ್ಪಕ್ಹಾಳೆ.
ಕಂತೆಗೆ ತಕ್ಕ ಬೊಂತೆ.
ತಲೆ ಗಟ್ಟಿ ಅಂತ ಕಲ್ಲು ಗುದ್ದೋಕಾದೀತೆ.
ಅಂಗೈ ಹುಣ್ಣಿಗೆ ಕನ್ನಡಿ ಯಾಕೆ
ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗೆ
ತಾಯಿ ಸತ್ತ ಮೇಲೆ ತವರಾಸೆ ಯಾಕೆ.
ಶಾಸ್ತ್ರ ಓದೋಕೆ ಬದನೆಕಾಯಿ ತಿನ್ನೋಕೆ.
ತಾನುಣ್ಣ ಪರರಿಗಿಕ್ಕ
ಹೆಂಡ್ರಿಲ್ಲ ಮಕ್ಳಿಲ್ಲ ಮನೆ ತುಂಬ ಬಂಧುಬಳಗ
ಮಕ್ಕಳಿಲ್ಲದವಳ ಸಿರಿ ಕೊಳೆತ ತೆಂಗಿನ ತುರಿ
ಒಕ್ಕಲಿಲ್ಲದ ಊರು ಕೊಳೆತು ನಾರುವ ನೀರು
ದಂಡಿಗಂಜುವ ಬಂಟ ಒಡಕು ಹರವಿಯ ಕಂಟ
ಉಂಡ ಮನೆಗೆ ಎರಡೆಣಿಸುವನು.

ಕನಕದಾಸರ ಸಾಹಿತ್ಯದಲ್ಲಿ ದೊರೆಯುವ ಗ್ರಾಮ್ಯ ಪದಗಳನ್ನು ಕಾಣಬಹುದು–ಕಂಡಿ, ಕೊಂಪೆ, ಹೊಲ, ಬೀಜ, ನೇಗಿಲು, ಎತ್ತು, ಹೂಡು, ಹಗ್ಗ, ಗಿಡ, ಮರ, ಗೊಂಬೆ, ನಾಟಕ, ಬಾಡು, ನೆಂಟ, ಹೆಂಟೆ, ಮೂಡೆ, ವಾಡೆ, ಬೀಡು, ಹಾದಿ, ಬೀದಿ, ರಾಗಿ, ಭತ್ತ, ತಂದೆ, ಅಣ್ಣ, ತಮ್ಮ, ಅಕ್ಕ, ಅತ್ತೆ, ಮಾವ, ಹೆಂಡ್ತಿ, ಮಕ್ಳು, ಎಳ್ಳು, ಹೊತ್ತಾರೆ, ರಾಗಿಕಲ್ಲು, ಉಂಡ, ಹಟ್ಟಿ, ಕೊಟ್ಟಿಗೆ, ಪೆಟ್ಟಿಗೆ, ಬಚ್ಚಲು ಇತ್ಯಾದಿ ಇತ್ಯಾದಿ= ಈ ಎಲ್ಲವೂ ಕನಕದಾಸರು ಭಾಷೆಯ ದೃಷ್ಟಿಯಿಂದ ಕೂಡ ದಕ್ಷಿಣ ಕರ್ನಾಟಕದ ಗ್ರಾಮಾಂತರ ಪ್ರದೇಶಕ್ಕೆ ಸೇರಿದವರೆಂಬುದನ್ನು ಖಚಿತವಾಗಿಯೆ ಸಾಬೀತು ಪಡಿಸುತ್ತವೆ.

ಕನಕದಾಸರ ಜಾತಿಯ ಬಗೆಗೂ ಸ್ವಲ್ಪ ಮಟ್ಟಿನ ವಿವಾದವಿದೆಯಷ್ಟೆ. ಈ ಸಮಸ್ಯೆಯನ್ನು ಅವರ ಸಾಹಿತ್ಯವೇ ಅತ್ಯಂತ ಸುಲಭವಾಗಿ ಪರಿಹರಿಸುತ್ತದೆ, ನಾಯಕ ಎಂಬುದರಿಂದ ಕೆಲವರು ಇವರನ್ನು ಜಾತಿಯಲ್ಲಿ ಬೇಡರೆಂದು ಊಹಿಸಲವಕಾಶವಾಗಿರಬಹುದು. ಆದರೆ ಇಲ್ಲಿ ನಾಯಕ ಎಂಬುದು ಸೇನೆಯ ಒಂದು ಹಂತ ಈಗಲೂ ಭಾರತೀಯ ಸೇನೆಯಲ್ಲಿ ನಾಯಕ್‌ಸುಬೇದಾರ್ ಎಂಬ ಒಂದು ಹುದ್ದೆಯಿದೆ, ಅಲ್ಲದೆ ಈ ರೀತಿ ಸೇವೆಯಲ್ಲಿ ಪಾಲುಗೊಂಡ ಬೇಲೂರು ಸುತ್ತಿನ ಅನೇಕ ಒಕ್ಕಲಿಗರು, ಕುರುಬರು ಇತ್ಯಾದಿಯವರು ಸಗನ ನಾಯಕ, ಚಿಕ್ಕನಾಯಕ, ಅಣ್ಣಯ್ಯ ನಾಯಕ ಎಂದು ಹೆಸರಿಟ್ಟುಕೊಂಡಿರುವ

ಸಂಪ್ರದಾಯ ಈಗಲೂ ಪ್ರಚಲಿತವಿದೆ. ಕನಕನಾಯಕ ಎಂಬುದು ಸೇನೆಯ ಹುದ್ದೆಯ ಸೂಚಕವೇ ವಿನಹ ಜಾತಿಯ ಸೂಚಕವಲ್ಲ. ಕನಕದಾಸರು ಹುಟ್ಟಿ ಬಂದ ಜಾತಿಯ ಬಗ್ಗೆ ಅವರದೇ ಉದಾಹರಣೆಗಳನ್ನು ನೋಡಬಹುದು.

ಡೋಳಿನ ಮೇಲ್ ಕೈ ಬರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ಹಾಕ್ಯಾನು
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪಾ ಕುಣಿದಾನು.
ಕಲಿಯುಗಕೆ ಗೌಡನಿವ ಸಂಗಾತಿ ಮಂತ್ರಿಸುತ
ಕಲಿಯುಗಂಗಳನೆಲ್ಲ ಮರೆತನೀತ
ಜಲಜಾಕ್ಷಕಾಗಿನೆಲೆಯಾದಿ ಕೇಶವನ ಮನ
ವೊಲಿಸಿ ಭಜಿಸಿದವನು ಹುಚ್ಚು ಕುರುಬ.
ನಾವು ಕುರುಬರು ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿಯ ಹಿಂಡುಗಳ.
ಅಷ್ಟಮದ ಮತ್ಸರಂಗಳೆಂಬ ಟಗರುಗಳು
ದೃಷ್ಟಿ ಜೀವಾತ್ಮವೆಂಬೋ ಆಡು
ಸೃಷ್ಟಿ ಪ್ರಸಿದ್ಧವೆಂತೆಂಬುವಾ ಹೋತಗಳು
ಕಟ್ಟಿ ಕೋಲಿನಲಿ ಇರುತಿರುವ ನಮ್ಮಜ್ಜ

ಕನಕದಾಸರು ಯಾವುದಕ್ಕೆ ಬೇಕಾದರೂ ಈ ಪ್ರತಿಮೆಗಳನ್ನು ಹಿಡಿದಿರಲಿ ಕೋಲು ಹಿಡಿದು ಆಡು, ಕುರಿಗಳನ್ನು ಕಾಯ್ದವನಿಗಲ್ಲದೆ ಬೇರೆಯವರಿಗೆ ಈ ಚಿತ್ರಗಳನ್ನು ಕೊಡಲು ಸಾಧ್ಯವೇ ಇಲ್ಲ. ಅಲ್ಲದೆ ತಾನು ಕಾಗಿನೆಲೆಯಾದಿಕೇಶವನನ್ನು ಭಜಿಸುವ ಹುಚ್ಚು ಕುರುಬ ಎಂದು ಕವಿಯೇ ಹೇಳಿಕೊಂಡಿರುವುದರಿಂದ ಕನಕದಾಸರ ಜಾತಿಯ ಬಗೆಗೆ ಸಂಶಯಗಳು ಉಳಿಯುವುದಿಲ್ಲ.

ಕನಕದಾಸರು ಯೋಧರು, ಯುದ್ಧಗಳಲ್ಲಿ ಪಾಲುಗೊಂಡವರು ಎಂಬುದಕ್ಕೆ ಕೂಡ ಅವರ ಸಾಹಿತ್ಯದಲ್ಲಿ ವಿಪುಲವಾದ ಉದಾಹರಣೆಗಳು ದೊರೆಯುತ್ತವೆ.

"ಆ ಮಹಾರವದೊಳಗೆ ಸುಭಟ
ಸ್ತೋಮವಿಳಿದುದು ಪಾಳೆಯದ ಸಂ
ಗ್ರಾಮದಿದಿರಲಿ ಗುಡಿಗುಡಾರಂಗಳು ವಿರಾಜಿಸಿತು.
ಹೊಡೆವ ತಮ್ಮಟೆ ಭೇರಿ ಢಮರುಗ

ಗಿಡಿಬಿಡಿ ಡೌಡೆ ಡಿಂಡಿಮ ಢಕ್ಕೆ
ನುಡಿವ ಶಂಖ ಮೃದಂಗ ಘನ ನಿಸ್ಸಾಳ ಮೊದಲಾದ
ನೆಗಳಿದವು ಬೊಂಬಾಳದೀವಿಗೆ
ಝಗ ಝಗಿಸುವವರ ರತ್ನದೊಡುಗೆಯ
ಹೊಗರೊಗುವ ಕೈದುಗಳ ಸುಭಟರು ಮುಂದೆ ಸಂದಣಿಸೆ
ನೆಗಹಿಕರಗಳ ಪಾಠಕರು ಬಿರು
ದುಗಳ ಹೊಗಳಲು ಚೀರಿದವು ಕಹ
ಳೆಗಳು ರಭಸದಿ ಬಂದು ಹೊಕ್ಕರು ನೃಪತಿಯರಮನೆಯ.
ಗಗನ ಮಣಿ ಗಿದುತಟವಸಾರಲು
ಜನರು ನಿದ್ರಾಂಗನೆಯ ಕೇಳಿಯಲಿ
ತಲ್ಲಣಿಸಿ ದಶದಿಕ್ಕುಗಳ ಬಲವೆಲ್ಲ ನೆರೆದುದು
ವಾರಣದ ಬೀದಿಗಳ ಘನ ಶೃಂಗಾರದಿಂ
ಬರೆಸಿದರು ವಾಲೆಗಳ ದಶದಿಕ್ಕಿನರಸುಗಳ ಬರಹೇಳಿ
ಮಣಿರಥಂಗಳ ನಡುವೆ ಸುಳಿವಂ
ದಣದ ರಾಯರ ಮಧ್ಯದಲಿ ಯುರ
ವಣಿಪ ಮತ್ತಗಜಂಗಳಲಿ ಮಾವುತರ ಕಳಕಳದ
ಕುಣಿವರಾವುತರ ತೇಜಿಯ ಸಂ
ದಣಿಗಳಲಿ ಚತುರಂಗ ಬಲವಿ
ಟ್ಟಣಿಸಿ ನಡೆದುದು ಸಾಲು ಸತ್ತಿಗೆಗಳ ವಿಡಾಯಿಯಲಿ

ವಿಜಯನಗರದ ಸೇನೆಯ ಬಾಹುಳ್ಯವನ್ನು ಕುರಿತು ಅನೇಕ ವಿದೇಶಿ ಪ್ರವಾಸಿಗರು ವಿವರಿಸಿದ್ದಾರೆ. ನ್ಯೂನಿಜ್ ಎಂಬ ಪ್ರವಾಸಿ "ಕೃಷ್ಣದೇವರಾಯನ ಸೇನೆಯು ಹತ್ತು ಲಕ್ಷ ಪದಾತಿಗಳಿಂದಲೂ ಐದು ಸಾವಿರ ಗಜಗಳಿಂದಲೂ ಕೂಡಿತ್ತು" ಎಂದು ವರ್ಣಿಸಿದ್ದಾನೆ. ಈ ಹಿನ್ನೆಲೆಯಲ್ಲಿ ಕನಕದಾಸರು ವಿಜಯನಗರ ಸೇನೆಯಲ್ಲಿದ್ದರೆಂಬುದು ನಿಸ್ಸಂಶಯವಾಗಿದೆ.

ಕನಕದಾಸರ ಕಾಲದಲ್ಲಿ ಚಾತುರ್ವರ್ಣ್ಯ ಪದ್ಧತಿ ಪ್ರಬಲವಾಗಿಯೇ ಜಾರಿಯಲ್ಲಿದ್ದಿತು. ಅದರ ಬಿಸಿಯನ್ನು ಕನಕದಾಸರು ಅಪಾರವಾಗಿಯೇ ಅನುಭವಿಸಿರಬೇಕು. ಉತ್ತಮ ಕುಲದವರ ಹೀಯಾಳಿಕೆಗೆ ಗುರಿಯಾಗಿರಬೇಕು. ಈ ನೋವು ಅವರ ಸಾಹಿತ್ಯದಲ್ಲಿ ವಿಪುಲವಾಗಿಯೇ ಕಂಡುಬರುತ್ತದೆ. ವರ್ಣಪದ್ಧತಿ ಜಾರಿಯಲ್ಲಿತ್ತು ಎಂಬುದಕ್ಕೆ ಉದಾಹರಣೆಗಳು.

ವಸುಧೆಯಮರರು ಕ್ಷತ್ರಿಯರುರಂ
ಜಿಸುವ ವೈಶ್ಯ ಚತುರ್ಥರುನ್ನತ
ಕುಶಲ ವಿದ್ಯಾಧಿಕರು ಕವಿಗಳು ಮಲ್ಲನಾಯಕರು
ಲೋಕದಲಧಿಕ ಭೋಜನವಿದೆಂ
ದಾಕೆವಾಳರು ಬುಧರು ಜರೆದು ನಿ
ರಾಕರಿಸಿ ಬಿಡಲಂತು ಶೂದ್ರಾನ್ನವಾದೆಯಲ

ಇಂತಹ ವಾತಾವರಣದಲ್ಲಿ ಕವಿಯಾದ ಕನಕದಾಸರು ಈ ವರ್ಣದ ಕಹಿಯನ್ನು ಉಂಡವರು. ಪ್ರಾಯಃ ಯಾವುದೋ ಒಂದು ಸಂದರ್ಭದಲ್ಲಿ ಕನಕದಾಸರು ಹಂಪೆಯಲ್ಲಿ ವ್ಯಾಸರಾಯರನ್ನು ಕಂಡಿರಬಹುದು. ಆಗ ಕನಕದಾಸರ ಪ್ರತಿಭೆಯನ್ನು ಗುರುತಿಸಿ ಗೌರವಿಸಿರಬೇಕು. ಇದನ್ನು ಸಹಿಸದ ವ್ಯಾಸರಾಯರ ಶಿಷ್ಯರು ಹಂಗಿಸಿರಬೇಕು. ಆದುದರಿಂದಲೇ ಕನಕದಾಸರು "ಕನಕದಾಸರ ಮೇಲೆ ದಯೆ ಮಾಡಲು ವ್ಯಾಸಮುನಿ ಮಠದವರೆಲ್ಲ ದೂರಿಕೊಂಬರೊ" ಎಂದಿರುವುದಷ್ಟೇ ಅಲ್ಲ ಈ ಮತಾಂಧರಿಗೆ ಸೂಕ್ತ ಉತ್ತರವನ್ನು ನೀಡಿದ್ದಾರೆ.

ಕೆಸರೊಳು ತಾವರೆ ಹುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣಲಿಲ್ಲವೆ.
ಕುಲಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದನೆಲೆಯನೇನಾದರೂ ಬಲ್ಲಿರಾ.
ವೇದ ಶಾಸ್ತ್ರ ಪುರಾಣ ಪುಣ್ಯದ
ಹಾದಿಯನು ನಾನರಿಯೆ.

ಮೇಲಿನ ಮಾತುಗಳು ಕನಕದಾಸರು ಅನುಭವಿಸಿದ ಮತೀಯ ವರ್ತನೆಗಳ ಕಹಿ ಅನುಭವದಿಂದ ಮೂಡಿದ ನೋವಿನ ಸವಿಯಾಗಿವೆ. ಹೀಗೆ ಅವರ ಒಟ್ಟು ಜೀವನವನ್ನು ಪರಿಶೀಲಿಸಿದಾಗ ಒಬ್ಬ ಸಾಮಾನ್ಯ ಹಳ್ಳಿಯ ಹುಡುಗ ತನ್ನ ಸ್ವಪ್ರತಿಭೆ ಮತ್ತು ಸ್ವಶಕ್ತಿಯಿಂದ ಅಧ್ಯಾತ್ಮದ ಉತ್ತುಂಗಕ್ಕೇರಿದ ಪವಾಡದ ಕಥನವಾಗುತ್ತದೆ.

ಕನಕದಾಸರ ಬಗೆಗಿನ ಈ ಎಲ್ಲ ಆಧಾರಗಳು ಅವರು ದಕ್ಷಿಣ ಕರ್ನಾಟಕ ಭಾಗದವರು, ವಿಶೇಷವಾಗಿ ಹಾಸನ ಜಿಲ್ಲೆಯ ಯಾವುದೋ ಹಳ್ಳಿಯಲ್ಲಿ

ಹುಟ್ಟಿದವರೆಂಬುದನ್ನು ನಿಸ್ಸಂದಿಗ್ಧವಾಗಿ ಪ್ರತಿಪಾದಿಸುತ್ತವೆ. ಆದುದರಿಂದ ಕನಕದಾಸರು ಹಾಸನ ಜಿಲ್ಲೆಯ ಒಂದು ಹಳ್ಳಿಯ ಕುರುಬ ಮನೆತನದಲ್ಲಿ ಹುಟ್ಟಿದವರು. ಎಳವೆಯಲ್ಲಿಯೇ ಕಾರಣಾಂತರದಿಂದ ಮನೆಬಿಟ್ಟ ಇವರು ಮುಂದೆ ವಿಜಯನಗರದ ಸೇನೆಯನ್ನು ಸೇರಿದರು. ಸೇನೆಯಲ್ಲಿ ಅವರು ತೋರಿದ ಕಾರ್ಯ ಸಾಹಸಗಳಿಂದಾಗಿ ಅವರಿಗೆ ನಾಯಕ ಪದವಿ ದೊರೆಯಿತು. ಕೃಷ್ಣದೇವರಾಯನ ಸೇನೆ ಉಮ್ಮತ್ತೂರು, ಶ್ರೀರಂಗಪಟ್ಟಣ, ನಂಜರಾಜಪಟ್ಟಣಗಳ ಮೇಲೆ ದಂಡೆತ್ತಿ ಬಂದಾಗ ಕನಕದಾಸರೂ ಅದರಲ್ಲಿದ್ದರು. ಆದುದರಿಂದಲೇ ಅವರು ಆ ಊರುಗಳ ಆದಿಕೇಶವರ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದರು. ಸಾಮ್ರಾಜ್ಯದಲ್ಲಿ ಶಾಂತಿ ನೆಲಸಿದುದರಿಂದ ಸೇನೆ ಬೇಲೂರಿನಲ್ಲಿ ನಿಂತಿತು. ಅಲ್ಲಿ ಸೇನೆ ನಿಲ್ಲಲು ತಮ್ಮ ತಾಯಿನೆಲದ ದೃಷ್ಟಿಯಿಂದ ಕನಕದಾಸರೇ ಕಾರಣರೂ ಆಗಿರಬಹುದು. ಆ ಬಿಡುವಿನ ಸಮಯದಲ್ಲಿ ಚಿಕ್ಕಂದಿನಿಂದ ಅವರನ್ನು ತಾಳೆಮದ್ದಳೆ ಮತ್ತು ಯಕ್ಷಗಾನ ರೂಪದಲ್ಲಿ ಆಕರ್ಷಿಸಿದ್ದ ನಳಚರಿತ್ರೆಯನ್ನು ಭಾಮಿನಿಯಲ್ಲಿ ರಚಿಸಿ ಹಾಡಿದರು. ಇದನ್ನು ಕೇಳಿದ ಉತ್ತಮವರ್ಗದವರು, ಶೂದ್ರನಿಗೆ ಕಾವ್ಯರಚನೆ ಸಾಧ್ಯವೆ ? ಎಂದರು. ಅದಕ್ಕೆ ಉತ್ತರವಾಗಿ ಕನಕದಾರು ರಾಮಧಾನ್ಯಚರಿತೆ ರಚಿಸಿ ಅವರಿಗೆ ಉತ್ತರ ಕೊಟ್ಟರು.* ಮುಂದೆ ಹರಿಭಕ್ತಿಸಾರ ಮತ್ತು ಅನೇಕ ಕೀರ್ತನೆಗಳನ್ನು ಬೇಲೂರು ಚೆನ್ನಕೇಶವನ ಅಂಕಿತದಲ್ಲಿ ರಚಿಸಿ ಹಾಡಿದರು.

ಕೃಷ್ಣದೇವರಾಯನ ಆಡಳಿತದ ಕೊನೆಯ ದಿನಗಳಲ್ಲಿಯೇ ವಿಜಯನಗರದ ಶಾಂತಿಯ ದಿನಗಳು ಮುಗಿದವು. ಬಹಮನಿ ಸುಲ್ತಾನರು ಮತ್ತೆ ವಿಜಯನಗರದ ಮೇಲೆ ತಮ್ಮ ದಾಳಿಯನ್ನು ಆರಂಭಿಸಿದರು. ರಾಯಚೂರಿನ ಕನಕಗಿರಿಯ ಹತ್ತಿರ ಎರಡೂ ಸೇನೆಗಳಿಗೂ ಘೋರ ಯುದ್ಧ ನಡೆಯಿತು. ಕನಕದಾಸರ ಸೇನೆಯೂ ಈ ಯುದ್ಧದಲ್ಲಿ ಪಾಲುಗೊಂಡಿತು. ಆಗ ಕನಕದಾಸರು ಕನಕಗಿರಿಯ ಆದಿಕೇಶವನ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದರು. ಈ ಯುದ್ಧದಲ್ಲಿ ವಿಜಯನಗರಕ್ಕೆ ಜಯ ದೊರೆಯಿತು. ರಾಯಚೂರನ್ನು ವಿಜಯನಗರ ಮತ್ತೆ ವಶಪಡಿಸಿಕೊಂಡಿತು. ಕನಕದಾಸರ ಸೇನೆ ಅಲ್ಲಿಯೇ ಕೆಲವು ಕಾಲ ಬೀಡುಬಿಟ್ಟಿತು.

---

* ಈಗ ಆಧುನಿಕ ಯುಗದಲ್ಲೂ ಈ ಪದ್ಧತಿ ಇದೆ. ಶ್ರೀ ಕುವೆಂಪು ಅವರ ಶೂದ್ರತಪಸ್ವಿ ಕುರಿತು ಮಾಸ್ತಿ ಮುಂತಾದ ಉತ್ತಮ ಕುಲದವರು ಟೀಕೆ ಮಾಡಿದಾಗ ಕುವೆಂಪು ಮಾರ್ನುಡಿ ಬರೆದರು.

ಆಗ ಕನಕದಾಸರು ಆ ಭಾಗದಲ್ಲೆಲ್ಲಾ ಸುತ್ತಾಡಿದರೆಂಬುದಕ್ಕೆ ಅವರ ಸಾಹಿತ್ಯದಲ್ಲಿ ಆಧಾರಗಳು ದೊರೆಯುತ್ತವೆ.

ಕೃಷ್ಣದೇವರಾಯನ ಸಾವಿನೊಂದಿಗೆ ವಿಜಯನಗರದ ಅರಸರಲ್ಲಿ ಅನೈಕ್ಯತೆ ಉಂಟಾಯಿತು. ಇದನ್ನು ಅರಿತ ಬಹಮನಿ ಸುಲ್ತಾನರು ಸಂಘಟಿತರಾಗಿ ಮತ್ತೆ ವಿಜಯನಗರದ ಮೇಲೆ ಎಲ್ಲಾ ಕಡೆಯಿಂದಲೂ ದಾಳಿಯನ್ನು ಆರಂಭಿಸಿದರು. ಗುಲ್ಬರ್ಗಾ ಸುಲ್ತಾನರು ರಾಯಚೂರು ಕಡೆಯಿಂದಲೂ, ಬಿಜಾಪುರ ಸುಲ್ತಾನರು ಧಾರವಾಡದ ಕಡೆಯಿಂದಲೂ ತಮ್ಮ ದಾಳಿಯನ್ನು ಆರಂಭಿಸಿದರು. ಸುಲ್ತಾನರ ಈ ದಾಳಿಯನ್ನು ಒಂದು ಕಡೆ ಎಚ್ಚಮನಾಯಕ, ಮತ್ತೊಂದು ಕಡೆ ಕನಕನಾಯಕ ಎದುರಿಸಿ ಹಿಂದೂ ಸಾಮ್ರಾಜ್ಯವನ್ನು ರಕ್ಷಿಸಲು ಸರ್ವ ಪ್ರಯತ್ನವನ್ನೂ ಮಾಡಿದರು.

ವಿಜಾಪುರದ ಸೇನೆ ಮತ್ತು ವಿಜಯನಗರದ ಸೇನೆಗಳು ಈಗಿನ ರಾಣಿಬೆನ್ನೂರಿನ ಸುತ್ತ ಮುತ್ತ ಅಹರ್ನಿಶಿ ಹೋರಾಡಿದ ಆಧಾರಗಳಿವೆ. ವಿಜಯನಗರದ ಈ ಸೇನೆಯ ನಾಯಕರಾಗಿದ್ದವರು ಕನಕದಾಸರು ಎಂದು ತಿಳಿಯಬಹುದಾಗಿದೆ. ಆಗ ಬಾಡ ಒಂದು ಮುಖ್ಯಸ್ಥಳವಾಗಿದ್ದು ಸುಲ್ತಾನನ ಸೇನೆ ಅದನ್ನು ಮುತ್ತಿತು. ವಿಜಯನಗರ ಸೇನೆ ಜೀವನದ ಹಂಗು ತೊರೆದು ಹೋರಾಡಿತು. ಆದರೆ ಅವರಿಗೆ ಅಪಜಯ ಕಾದಿತ್ತು. ಗುಡಿಗೋಪುರಗಳೂ, ಮನೆಮಠಗಳು ಮುಸಲ್ಮಾನರ ದಾಳಿಗೆ ತುತ್ತಾಗಿ ನೆಲಕಚ್ಚಿದವು, ಕನಕದಾಸರು ಈ ಭಿನ್ನಾವಶೇಷಗಳಲ್ಲಿ ಅಲೆದಾಡಿದರು. ಅವರು ತಮ್ಮ ಜೀವಿತ ಕಾಲದಲ್ಲಿಯೇ ಆ ಸಾಮ್ರಾಜ್ಯದ ಉತ್ತುಂಗತೆ ಮತ್ತು ಅವನತಿಯನ್ನು ಕಂಡರು. ಹರಿಸಿದ ರಕ್ತಪಾತ ಆದ ಸಾವು ನೋವು ಆಧ್ಯಾತ್ಮಿಯಾದ ಅವರ ಮನಕಲಕಿ ವಿರಾಗದ ಕಡೆ ಎಳೆದವು. ಮತ್ತೆ ತಮ್ಮ ತಾಯ್ನಾಡಿಗೆ ಹೋಗುವ ಆಸೆಯೂ ಉಳಿಯಲಿಲ್ಲ. ಅವರ ಪ್ರೀತಿಯ ಬೇಲೂರು ಹಳೆಬೀಡುಗಳೂ ಮುಸಲರ ದಾಳಿಗೆ ತುತ್ತಾಗಿ ಹಾಳಾಗಿದ್ದವು, ಕನಕದಾಸರ ಮನಸು ಇದರಿಂದ ರೋಸಿಹೋಯಿತು. ಅವರು ಈ ಎಲ್ಲಾ ಲೌಕಿಕವನ್ನು ತೊರೆದು ವಿರಾಗಿಯಾದರು.

ಬಾಡದಿಂದ ಕಾಗಿನೆಲೆಗೆ ಹೋದರು. ಅದು ಈ ದಾಳಿಗೆ ತುತ್ತಾಗಿರಲಿಲ್ಲ. ಅಲ್ಲಿ ಅವರು ನಿಂತರು. ತಮ್ಮ ಆರಾಧ್ಯದೈವ ಆದಿಕೇಶವನ ಒಂದು ಚಿಕ್ಕ ಗುಡಿಯನ್ನು ಕಟ್ಟಿಸಿಕೊಂಡರು. ತಾವು ಕಂಡ ವಿಜಯನಗರದ ವೈಭವವನ್ನು, ತಾವು ಮೆಚ್ಚಿದ ಕೃಷ್ಣದೇವರಾಯನನ್ನು ಮೋಹನ ತರಂಗಿಣಿ ಕಾವ್ಯರಚಿಸಿ ಹಾಡಿ ಚಿರಂತನಗೊಳಿಸಿದರು. ಮತ್ತೆ ಯಾವುದೇ ಆಸೆ ಉಳಿಯಲಿಲ್ಲ. ಆದಿಕೇಶವನನ್ನು

ಕುರಿತು ಹಾಡಿದರು. ಹಾಡು ಹಾಡುತ್ತಲೇ ಇಹವನ್ನು ತೊರೆದರು. ಅವೇ ಇಂದು ಕಾಗಿನೆಲೆಯಾದಿಕೇಶವನ ಅಂಕಿತದಲ್ಲಿ ಇರುವ ಕನಕದಾಸರ ಕೀರ್ತನೆಗಳು. ಕನಕದಾಸರು ಹೀಗೆ ಹಾಸನ ಜಿಲ್ಲೆಯ ಹಳ್ಳಿಯ ಒಂದು ಕುರುಬ ಮನೆತನದಲ್ಲಿ ಹುಟ್ಟಿ ಕವಿಯಾಗಿ, ಕಲಿಯಾಗಿ, ಸಂತರಾಗಿ ಕಾಗಿನೆಲೆಯ ಆದಿಕೇಶವನಲ್ಲಿ ಐಕ್ಯಗೊಂಡರು.

## ಆಧಾರಗ್ರಂಥಗಳು


೧ ಜನಪ್ರಿಯ ಕನಕ ಸಂಪುಟ : ಸಂ. ದೇ. ಜವರೇಗೌಡ

೨ ಮೋಹನ ತರಂಗಿಣಿ : ಸಂ. ಆರ್. ಸಿ. ಹಿರೇಮಠ

೩ ನಳಚರಿತ್ರೆ : ಸಂ. ದೇ. ಜವರೇಗೌಡ

೪ ಕರ್ನಾಟಕ ಇತಿಹಾಸದರ್ಶನ : ಡಾ. ಎಂ. ವಿ. ಕೃಷ್ಣರಾವ್

೫ ಕನಕ ಸುಧೆ : ಸಂ. ಪರಮೇಶ

೬ ಕರ್ನಾಟಕ ಕವಿಚರಿತೆ : ಸಂ. ೧, ೨, ೩ ರಾ. ನರಸಿಂಹಾಚಾರ್

೭ ಕನಕದಾಸರು : ಕಟ್ಟಿಶೇಷಾಚಾರ್ಯ

೮ ಪ್ರವಾಸಿ ಕಂಡ ಇಂಡಿಯಾ, ಸಂ. ೫ : ಎಚ್. ಎಲ್. ನಾಗೇಗೌಡ.

೯ ಕನಕದಾಸರ ಮಾರುಕಟ್ಟೆಯ ಕೀರ್ತನೆಯ ಪುಸ್ತಕಗಳು


ವಿ.ಸೂ. : ಈ ಲೇಖನದಲ್ಲಿ ಉದಾಹರಿಸಿರುವ ಪದ್ಯಗಳು ಕೀರ್ತನೆಯ ಸಾಲುಗಳು ಕನಕದಾಸರ ಕೃತಿಗಳಿಂದ ಆಯ್ದುಕೊಂಡವು.

# ಐತಿಹ್ಯಗಳ ನಡುವೆ ಕನಕದಾಸರು

ಪಂಡಿತ ಚನ್ನಪ್ಪ ಎರೇಸೀಮೆ

ಶ್ರೀಮನ್ಮಧ್ವಾಚಾರ್ಯರ, ರಾಮಾನುಜಾಚಾರ್ಯರ, ಶಂಕರಾಚಾರ್ಯರ ಹಾಗೂ ವೀರಶೈವ ದಾರ್ಶನಿಕರ ದ್ವೈತ–ವಿಶಿಷ್ಟಾದ್ವೈತ–ಅದ್ವೈತ–ಶಕ್ತಿ ವಿಶಿಷ್ಟಾದ್ವೈತ–ಸಿದ್ಧಾಂತ–ಪ್ರಮೇಯಗಳ ಆಧಾರದಮೇಲೆ ರೂಪುಗೊಂಡ ಭಕ್ತಿಪಂಥಗಳು ಕರ್ನಾಟಕದಲ್ಲಿ ೧೪–೧೫–೧೬ನೆಯ ಶತಮಾನಗಳುದ್ದಗಲಕ್ಕೂ ವಿಜೃಂಭಿಸಿವೆ. ಬಸವಣ್ಣನವರ ಷಟ್‌ಸ್ಥಲ ಸಿದ್ಧಾಂತದ ಷಡ್ವಿಧಭಕ್ತಿಪಂಥ ಶರಣಮಾರ್ಗವಾಗಿ ಕರ್ನಾಟಕಾಂಧ್ರಾದಿ ಭಾಗಗಳಲ್ಲಿ ಏತತ್ಪೂರ್ವದಲ್ಲೆಲ್ಲ ಪ್ರಸಾರಗೊಂಡಿತ್ತು. ಜನಾಂಗವನ್ನು ಕಟ್ಟಲು ಆರ್ಯ ಸಂಸ್ಕೃತಿಯನ್ನು ರಕ್ಷಿಸಲು ಇಂಥ ಭಕ್ತಿಮಾರ್ಗಕ್ಕಿಂತ ಪ್ರೌಢತಮ ವೇದಾಗಮೋಪನಿಷತ್ ಜ್ಞಾನಮಾರ್ಗಗಳು ಆಗ ಸಾಮಾನ್ಯ ಜನಜಾಗೃತಿಗೆ ಪ್ರಶಸ್ತವಾಗಿರಲಿಲ್ಲ. ಜನ ಜಾಗೃತಿಗೆ ಅದು ಅತ್ಯಂತ ಮಹತ್ವದ ಕಾಲವಾಗಿತ್ತು. ಕಾರಣ : ಹಿಂದೂಸಂಸ್ಕೃತಿಯ ವಿನಾಶಕ್ಕೆ ಒದಗಿದ್ದ ಪರಕೀಯರ ರಕ್ತವನ್ನೇ ಹೆಪ್ಪುಗಟ್ಟಿಸುವಂತಹ ಕರಾಳ ಕೃತ್ಯಗಳು. ಆಗಿನ ಭಾರತೀಯರಿಗೆ ತಮ್ಮ ಉಳಿವಿಗಾಗಿ ಭಕ್ತಿಪಂಥದ ಮಾರ್ಗವನ್ನನುಸರಿಸಿ ನೆಮ್ಮದಿಗೊಳ್ಳುವುದಕ್ಕಿಂತ ಬೇರೆ ಮಾರ್ಗಗಳು ಅನುಕೂಲಕರವಾಗಿ ಪರಿಣಮಿಸಲಿಲ್ಲ. ಇದಕ್ಕೆಲ್ಲ ಭಾರತದಲ್ಲಿ ಆಗ ಕ್ಷಾತ್ರಶಕ್ತಿಗೆ ಕವಿದಿದ್ದ ಕತ್ತಲು ಕಾರಣ ಎನ್ನಬಹುದು. ಸುಸಂಸ್ಕೃತರು ಆತ್ಮಶಕ್ತಿಯ ಬೆಳವಣಿಗೆಯನ್ನು ಬದಿಗಿರಿಸಿ, ಸರ್ವಜ್ಞನೂ, ಸರ್ವ ಕರ್ತೃವೂ, ಸರ್ವವ್ಯಾಪಕನೂ ಆದ ಪರಮಾತ್ಮನೇ ನಮಗೆ ದಾತಾರ–ಕರ್ತಾರ–ಭರ್ತಾರ–ಹರ್ತಾರ ; ಎಲ್ಲವನ್ನೂ ಅವನಿಂದಲೇ ಬೇಡಿ ಪಡೆದು ಸುಖಿಸಬೇಕು–ಇತ್ಯಾದಿ ನಂಬಿಕೆಗಳನ್ನು ಪುರಾಣ ಪ್ರಜ್ಞೆಯಿಂದ ಜನತೆಯಲ್ಲಿ ಬಿತ್ತಿ ಅವರಲ್ಲಿ ಸ್ಥೈರ್ಯ–ಧೈರ್ಯ–ನೆಮ್ಮದಿ–ಮನರಂಜನೆ–ಆಧ್ಯಾತ್ಮಿಕ ನಿಲವು ಸಾಮಾಜಿಕ ಪ್ರಜ್ಞೆಯನ್ನುಂಟುಮಾಡುವುದು ಅನಿವಾರ್ಯವೂ ಆಯಿತೆಂದು ತೋರುತ್ತದೆ. ಗೀತೆಯಲ್ಲಿ ಹೇಳುವ "ಅನ್ಯಥಾ ಶರಣಂ ನಾಸ್ತಿ ತ್ವಮೇವಂ ಶರಣಂ ಮಮ" – ಈ ಭಾವನೆಗಳಿಗೆ ಆಧಾರವಾಯಿತು. ಇಂಥ ಭಕ್ತಿಮಾರ್ಗ ಜೀವನ

ರಾಷ್ಟ್ರಸಂಘಟನೆಗೆ ಆ ಕಾಲದಲ್ಲಿ ಯತ್ಕಿಂಚಿತ್ ಸಹಾಯವಾಯಿತೆನ್ನಬಹುದು. ಇಂಥ ಭಕ್ತಿಪಂಥದ ಗಾಳಿ ಕೇವಲ ಕರ್ನಾಟಕದಲ್ಲಿ ಬೀಸಿತೆಂದಲ್ಲ ; ಸಮಕಾಲೀನ ಭಾರತದ ಉದ್ದಗಲಕ್ಕೂ ಮುಖ್ಯವಾಗಿ ದಕ್ಷಿಣ ಭಾರತದಲ್ಲಿ ಬೀಸಿರುವುದನ್ನು ಕಾಣುತ್ತೇವೆ.[೧]

ಕರ್ನಾಟಕದಲ್ಲಿ ಶ್ರೀಮನ್ಮಧ್ವಾಚಾರ್ಯರ ಪ್ರಮೇಯುಗಳ ಮೂಲಕ ರೂಪುಗೊಂಡ ಭಕ್ತಿಪಂಥದ ಹರಿಕಾರರಾಗಿ ಹಿಂದೂ ಸಮಾಜದಲ್ಲಿ ಜಾಗೃತಿ ಮೂಡಿಸುವ ಕಾರ್ಯದಲ್ಲಿ ಸೋಸಲೆ ಮಠದ ವ್ಯಾಸರಾಯರು, ಸೋದೆಮಠದ ವಾದಿರಾಜರು, ಮುಳಬಾಗಿನಲಿನ ಶ್ರೀಪಾದರಾಯರು, ವಿಜಯದಾಸರು, ಪ್ರಸನ್ನ ವೆಂಕಟದಾಸರು, ಜಗನ್ನಾಥ ದಾಸರು, ಪುರಂದರದಾಸರು, ಕನಕದಾಸರುಗಳು ಮಾಡಿದ ಕ್ರಾಂತಿ ಸ್ಮರಣೀಯ. ಈ ಪಂಥದವರಿಗೆ ದಕ್ಷಿಣ ಭಾರತದ ವೈಷ್ಣವ ಕೇಂದ್ರಗಳೆನಿಸಿದ್ದ ಉಡುಪಿ–ಬೇಲೂರು–ತಿರುಪತಿ–ಪಶ್ಚಿಮರಂಗ–ಮಧ್ಯರಂಗ–ಪೂರ್ವರಂಗ, ಪಂಢರಪುರ, ಮುಳುಬಾಗಿಲು, ಸೋದೆ, ಸೋಸಲೆ–ಮಂತ್ರಾಲಯ–ಹಂಪೆ (ಆನೆಗುಂದಿ)–ಅಹೋಬಲ–ಬಾಡ, ಬಂಕಾಪುರ ಇತ್ಯಾದಿ ಸ್ಥಾನಗಳು ತಾವು ಕಂಡುಂಡ ಭಕ್ತಿಜೀವನ ಸಿದ್ಧಾಂತ ಪ್ರಸಾರ ಕೇಂದ್ರಗಳೆನಿಸಿದುವು.

ಮೇಲೆ ಹೇಳಿದ ದಾರ್ಶನಿಕರ, ಶಾಸ್ತ್ರಜ್ಞರ, ಸಾಧಕರ, ತತ್ತ್ವಾರ್ಥ ಚಿಂತಕರ, ಶ್ರೋತ್ರೀಯರ ಮಧ್ಯದಲ್ಲಿ ಎಲ್ಲರ ಗಮನವನ್ನು ಸೆಳೆದ ಅತ್ಯಂತ ಮಹತ್ವದ, ಸಾಹಸದ ವ್ಯಕ್ತಿ ದಾಸವರ್ಯ ಕನಕದಾಸ. ಅಜ್ಞಸಮಾಜವೊಂದರ ಮಧ್ಯದಲ್ಲಿ

---

೧. ಕರ್ನಾಟಕದಲ್ಲಿ ವ್ಯಾಸರಾಯರು. ಶ್ರೀಪಾದರಾಯರು, ವಾದಿರಾಜರು, ಪುರಂದರ ಕನಕದಾಸಾದಿಗಳು ಭಕ್ತಿಮಾರ್ಗಪ್ರಸಾರ ಮಾಡುತ್ತಿದ್ದ ಹಿಂಚು ಮುಂಚಿನ ಕಾಲದಲ್ಲಿ ಮಹಾರಾಷ್ಟ್ರದಲ್ಲೂ ವೈಷ್ಣವ ಭಕ್ತಿಪಂಥಗಳು ತಲೆಯೆತ್ತಿದ್ದವು. ಇವಕ್ಕೆ ಕನ್ನಡನಾಡಿನಲ್ಲಿ ಆಗ ಇದ್ದ ಪಂಢರಾಪುರ ಕೇಂದ್ರವಾಗಿತ್ತು. ಆ ಪಂಥಗಳು ಜನಪ್ರಿಯವಾಗಿದ್ದವು. ಅವುಗಳಲ್ಲಿ ನಾಥಪಂಥಕ್ಕೆ ಸೇರಿದ ಮುಕುಂದರಾಜ, ಮಹಾನುಭಾವ ಪಂಥದ ಚಕ್ರಧರ ಮತ್ತು ಕೇಶವಾನಂದ ಹಾಗೂ ಮಹದಂಬೆಯರು, ವಾರಕರೀಪಂಥದ ಜ್ಞಾನೇಶ್ವರ ಮತ್ತು ಆತನ ಶಿಷ್ಯ ನಾಮದೇವ–ಮುಂತಾದವರನ್ನು ಹೆಸರಿಸಬಹುದು. ಬಂಗಾಳದಲ್ಲಿ ಚೈತನ್ಯಪಂಥದ ಅನುಯಾಯಿಗಳ ಪ್ರಭಾವ ಅತ್ಯಧಿಕವಾಗಿತ್ತು. ತಮಿಳುನಾಡು ಆಂಧ್ರಪ್ರದೇಶಗಳಲ್ಲೂ ಭಕ್ತಿಪಂಥದವರು ಹುಟ್ಟಿಕೊಂಡಿದ್ದರು. ಬಸವಣ್ಣನ ಕಾಲದ ಶೂನ್ಯಸಿಂಹಾಸನವು ರಾಜಕೀಯ ವಿಪ್ಲವ ಕಾರಣವಾಗಿ ಮೂಲೆಗುಂಪಾದ ನಂತರ ಹರದನಹಳ್ಳಿ (ಈಗಿನ ಚಾಮರಾಜನಗರ ತಾಲ್ಲೂಕು)ಯಲ್ಲಿ ೧೪ನೆಯ ಶತಮಾನದಲ್ಲಿ ಪುನಃ ಸ್ಥಾಪನೆಯಾದ ಮೇಲೆ, ಆ ಕೇಂದ್ರದಿಂದ ವೀರಶೈವ ಭಕ್ತಿಪಂಥವು ತಲೆಯೆತ್ತಿ ಅನೇಕ ಮಠ ಮಾನ್ಯ ಸ್ಥಾಪನೆ ಮಾಡಿದುದೂ, ಆ ಕೇಂದ್ರಗಳಿಂದ ಭಕ್ತಿವಾಹಿನಿ ಹಲವು ಹನ್ನೊಂದು ಮುಖವಾಗಿ ಹರಿದುದೂ ಇಲ್ಲಿ ಜ್ಞಾಪಿಸಿಕೊಳ್ಳಬೇಕಾದ ಅಂಶ. ಇವೆಲ್ಲ ಆಗ ಜನಾಂಗವನ್ನು ಕಟ್ಟುವ ಕಾರ್ಯಮಾಡಿದವು.

ಹುಟ್ಟಾಶೂದ್ರತ್ವದ ಹಣೆಪಟ್ಟಿಯನ್ನು ಬಿಗಿದುಕೊಂಡೇ ಉದಯಗೊಂಡು ತನ್ನ ಅಸಾಧಾರಣ ಭಕ್ತಿಭಾವ, ಸಂಸ್ಕಾರ, ವಿದ್ವತ್ತು, ಸಿದ್ಧಿಸಾಧನೆಗಳಿಂದ ಎಲ್ಲಕ್ಕೂ ಮಿಗಿಲಾಗಿ ವೈರಾಗ್ಯ ಪ್ರವೃತ್ತಿಯಿಂದ ಶ್ರೋತ್ರಿಯ ವರ್ಗವೆಲ್ಲ ಇವನು ನಮ್ಮವನೆಂದು ಗುರುತಿಸಿ ಆದರಿಸುವಂತಹ ವ್ಯಕ್ತಿತ್ವ ರೂಪಿಸಿಕೊಂಡ ಕನಕದಾಸ ನಿಜವಾಗಿ ಓರ್ವ ಆಶ್ಚರ್ಯಜನಕ ವ್ಯಕ್ತಿ. ಧಾರ್ಮಿಕ ಶ್ರದ್ಧಾಭಕ್ತಿ ವಿಶೇಷಗಳು ಸಾಮಾಜಿಕ ವಿಧಿವಿಧಾನಗಳಾಗಿ ಜಾತಿ ಜಾತಿಗಳ, ಧರ್ಮಧರ್ಮಗಳ ಅನೇಕ ಕಟ್ಟು ಕಟ್ಟಳೆಗಳಿಂದ ಕೂಡಿ, ಭಿನ್ನಭಿನ್ನ ಸಿದ್ಧಾಂತಗಳಡಿಯಲ್ಲಿ ಭಿನ್ನಭಿನ್ನವಾಗಿಯೇ ಆಚಾರ ವಿಚಾರ ವಿಶಿಷ್ಟವಾದ ಜನಜೀವನ ಸಾಗುತ್ತಿದ್ದ ಆ ಕಾಲದಲ್ಲಿ ಶೂದ್ರವರ್ಗದ ಕನಕದಾಸ ಶ್ರೋತ್ರಿಯ ವರ್ಗದ ಮಧ್ಯದಲ್ಲಿ ಸ್ಥಾನಮಾನ ದೊರಕಿಸಿಕೊಳ್ಳುವುದಾಗಲಿ, ಪ್ರಶಂಸೆಗೆ ಪಾತ್ರವಾಗುವುದಾಗಲಿ ಊಹೆಗೂ ನಿಲುಕದ ಒಂದು ಮಹತ್ತರ ಸಾಧನೆಯೇ ಅನ್ನಬೇಕು.

ಶ್ರೋತ್ರಿಯ ವರ್ಗ ಇವನ ಭಕ್ತಿ ಜೀವನದ ಔನ್ನತ್ಯಕ್ಕೆ, ತರ್ಕಬುದ್ಧಿಗೆ, ಸಿದ್ಧಿ ಸಾಧನೆಗಳಿಗೆ ಒಪ್ಪಿ, ತಮ್ಮ ಸೈದ್ಧಾಂತಿಕ ನಿಲುವಿನ ಉನ್ನತ ವ್ಯಕ್ತಿತ್ವ ಮುದ್ರೆಯನ್ನೇನೋ ಒತ್ತಿತ್ತು ನಿಜ, ಆದರೆ ಧಾರ್ಮಿಕ ನಿತ್ಯ ನೈಮಿತ್ತಿಕ ಆಚರಣೆಯ ವಿಧಿ ವಿಧಾನಗಳಿಂದ ಮತ್ತು ತಮ್ಮ ಅರ್ಚಾಮೂರ್ತಿಗಳ ಪೂಜಾದಿ ಪ್ರತ್ಯಕ್ಷ ವ್ಯವಹಾರಗಳಿಂದ ದೂರವಿರಿಸಿದ್ದಂತೂ ನಿಜ. ಇದೊಂದು ಕೊರತೆಯೆಂದು ಕನಕದಾಸನೂ ಬಹುಶಃ ಭಾವಿಸಲಿಲ್ಲವೊ ಏನೊ ! ವಶಿಷ್ಠನಿಂದ ಬಲವಂತವಾಗಿ ಮಹಾಬ್ರಾಹ್ಮಣತ್ವದ ಮುದ್ರೆಯನ್ನು ಸೆಳೆದುಕೊಂಡ ಕ್ಷತ್ರಿಯ ವಿಶ್ವಾಮಿತ್ರನಂತೆ ಇವನೇನೂ ಮಾಡಲಿಲ್ಲ ; ಹಾಗೆ ಮಾಡುವ ಶಕ್ತಿ ಕನಕದಾಸನಲ್ಲಿತ್ತೋ ಇಲ್ಲವೊ ಆ ಮಾತು ಬೇರೆ. ಅವನು ಚತುರ್ವರ್ಣ ವ್ಯವಸ್ಥೆಯನ್ನು ಒಪ್ಪಿ, ಶೂದ್ರನಾಗಿದ್ದುಕೊಂಡು, ಬ್ರಹ್ಮಬಂಧುವಾಗಿಯೇ ತಾನು ಪಡೆಯಬೇಕಾದ ಸಾಧನ ಸಂಪತ್ತನ್ನೂ ಅನುಭವದಾಳವನ್ನೂ ಕಂಡುಂಡು ತೃಪ್ತಭಾವದಿಂದ ಕರ್ನಾಟಕಾಂಧ್ರ ತಮಿಳುನಾಡುಗಳ ವೈಷ್ಣವ ಕ್ಷೇತ್ರಗಳನ್ನು ಗಾಳಿಯಂತೆ ಸುಳಿದು ಸುತ್ತಿ ಸಂದರ್ಶಿಸಿ ಅಲ್ಲಲ್ಲಿನ ಅರ್ಚಾಮೂರ್ತಿಗಳನ್ನು ಕಂಡಾಗ ಆದ ಅಪೂರ್ವಾನುಭವಗಳನ್ನು ಸುಲಭ ಭಾಷೆಯ ನೇರ ನುಡಿಮಾಲೆಯ ಹಾಡುಗಳಿಂದ ಕೊಂಡಾಡಿದ್ದಾನೆ. ಛಂದೋಬದ್ಧ ಕಾವ್ಯಗಳಲ್ಲಿ ಅಭಿವ್ಯಕ್ತಿಗಳನ್ನು ಕ್ರೋಢೀಕರಿಸಿದ್ದಾನೆ. ಭಕ್ತಿಯ ಹೊನಲು ಹರಿಸಿದ್ದಾನೆ. ಅವನ ಅಭಿವ್ಯಕ್ತಿಗಳೆಲ್ಲ ಕ್ಷೇತ್ರವರ್ಣನೆ, ಪುರಾಣಪ್ರಸಕ್ತಿ, ಅರ್ಚಾಮೂರ್ತಿ ವೈಭವ, ಅವುಗಳ ಸ್ವರೂಪವನ್ನು ಲೌಕಿಕ ಪಾರಮಾರ್ಥಿಕ ದೃಷ್ಟಿಯಿಂದ ವರ್ಣಿಸುವಿಕೆ, ಬಾಳಿನ ಬರಡುತನದ ಅಳಲು, ಭಕ್ತ ಜೀವನದ

ಕಾತರ, ದೈವಸಾಕ್ಷಾತ್ಕಾರದ ಹಾದಿ ಈಶ್ವರಾನುಗ್ರಹದಿಂದುಂಟಾದ ಆನಂದ, ಆ ಮಹಾನಂದ ಸಾಗರದಲ್ಲಿ ಮುಳುಗಿಹೋದ ತನ್ಮಯತೆಗಳಲ್ಲಿ ಪರ್ಯವಸಾನಗೊಂಡಿವೆ. ಆಡುಮಾತುಗಳ ಸೊಗಸಿನ ದೇಶಿಯಿಂದ, ಗೇಯಗುಣದ ಗಂಭೀರತೆಯಿಂದ ಭಾವ ಪುಷ್ಟಿತುಷ್ಟಿಗಳಿಂದ, ಅನಂತ ಜೀವನಾನುಭವಸಾರವೇ ಸಾಕಾರಗೊಂಡು ಜನಮನೋಭೂಮಿಕೆಯಲ್ಲಿ ನೇರವಾಗಿ ಪ್ರವೇಶಿಸಿ ಚಿಂತನಶೀಲರನ್ನಾಗಿಸುವ ಸತ್ವಭೂಯಿಷ್ಠವಾಗಿವೆ ಎನ್ನಬಹುದು. ಒಗಟು–ಮುಂಡಿಗೆ–ಪ್ರಚ್ಛನ್ನಾರ್ಥ–ಬೆಡಗು ಬಿನ್ನಾಣಗಳ ಕಸರತ್ತನ್ನೂ ಅಲ್ಪಸ್ವಲ್ಪ ಮೆರೆದಿದ್ದರೂ ಅತ್ಯಂತ ಗೌಣ. ಮಾನವಸಮುದಾಯ ಸಾಮಾನ್ಯಕ್ಕೆಲ್ಲ ಹೊಂದಿಕೊಳ್ಳಬಲ್ಲ ಕನಕದಾಸರ ಈ ಅನುಭವದಾಳವೇ ಪುರಂದರಾದಿ ದಾಸಕೂಟದವರ ಮತ್ತು ವ್ಯಾಸರಾಯಾದಿ ವ್ಯಾಸಕೂಟದವರ ಮಧ್ಯದಲ್ಲಿ ತನ್ನ ವೈಶಿಷ್ಟ್ಯಪೂರ್ಣ ಸ್ಥಾನಮಾನಗಳನ್ನು ಭದ್ರಪಡಿಸಿಕೊಳ್ಳಲು ಸಾಧ್ಯವಾಯಿತು. ಇಷ್ಟೊಂದು ಮೇಲ್ಮಟ್ಟದ ವ್ಯಕ್ತಿತ್ವ ಸಂಪಾದಿಸಿದ್ದರೂ ತಾನು ನಂಬಿದ್ದ ತನ್ನ ಇಷ್ಟ ದೈವಗಳನ್ನು ತಾನೇ ತನ್ನ ಕೈಯಿಂದ ಪೂಜಿಸಿ ತೃಪ್ತಿಪಡುವ ಅವಕಾಶ ಕೊನೆಯವರೆಗೆ ದೊರೆಯದಿದ್ದಾಗ ತಾನಿದ್ದ ತಾಣದಲ್ಲೆ ಆ ಎಲ್ಲ ದೇವತೆಗಳನ್ನು ಆದಿಕೇಶವ, ಚೆನ್ನಕೇಶವ, ತಿಮ್ಮಕೇಶವ–ಎಂದು ಹೆಸರಿಸಿ, ಗುಡಿಗುಂಡಾರ ನಿರ್ಮಿಸಿ ಅವುಗಳಲ್ಲಿ ಪ್ರತಿಷ್ಠಾಪಿಸಿಕೊಂಡ ಕೈಯಾರ ಮುಟ್ಟಿ ಪೂಜಿಸಿ, ಮನಮುಟ್ಟಿ ಧ್ಯಾನಿಸಿ, ಉತ್ಸಾಹದಿಂದ ಮಹೋತ್ಸವಾದಿಗಳನ್ನಾಚರಿಸಿ "ಅನ್ಯಮಿಂದ್ರಂ ಕರಿಷ್ಯಾಮಿ" ಎನ್ನುವಂತಹ ಧೈರ್ಯ ಸಾಹಸಗಳನ್ನು ಮೆರೆದು ತೃಪ್ತಭಾವದಿಂದ ಕೊನೆಯುಸಿರೆಳೆದ ಬಹುದೊಡ್ಡ ಇನ್ನೊಬ್ಬ ಶೂದ್ರ ತಪಸ್ವಿ ಕನಕದಾಸ.[೨]

---

೨. ವಿಗ್ರಹಾರಾಧನೆಯನ್ನು ತತ್ತ್ವಶಾಸ್ತ್ರಜ್ಞರನೇಕರು ತಳ್ಳಿಹಾಕಬಹುದು ; ವಿಜ್ಞಾನ ಯುಗ ಆ ಬಗೆಯ ಚಿಂತನೆಯನ್ನೂ ಅಲ್ಲಗಳೆಯಬಹುದು. ಆದರೆ ಮಧ್ವಮತ ಸಂಪ್ರದಾಯದಲ್ಲಿ ಆಧೇಯ ಶಕ್ತಿ ಒಪ್ಪಿತವಾಗಿದೆ. 'ಅನ್ಯಾಹಿತ ಶಕ್ತಿರಾಧೇಯ ಶಕ್ತಿ:" ಎನ್ನುತ್ತಾರೆ, ಮಧ್ವಾಚಾರ್ಯರು. ವಿಧಿವತ್ತಾಗಿ ಪ್ರತಿಷ್ಠಾಪಿಸಲ್ಪಟ್ಟ ಪ್ರತಿಮೆಯಲ್ಲಿ ಆಧೇಯ ಶಕ್ತಿಯಿಂದ ದೇವತೆಯ ಶಕ್ತಿ ಉತ್ಪನ್ನವಾಗುತ್ತದೆ–ಎಂಬುದೇ ಅವರ ತೀರ್ಮಾನ. ಆ ಸಂಪ್ರದಾಯ ಮತ್ತು ರಾಮಾನುಜ ಸಂಪ್ರಯ ಸಂಪ್ರದಾಯಗಳೆರಡರಲ್ಲೂ ವಿಶ್ವಾಸ ತಳೆದಿದ್ದ ಕನಕದಾಸರು, ಆ ಎರಡೂ ಸಂಪ್ರದಾಯದ ವಿಗ್ರಹಾರಾಧನೆಯಲ್ಲಿ ಕೊನೆಯವರೆಗೂ ಶ್ರದ್ಧಾಸಕ್ತಿ ಹೊಂದಿ ತಾನು ಕಾಣಬೇಕಾದುದನ್ನು ಕಂಡುಂಡ ವ್ಯಕ್ತಿ.

ಇಂಥ ಓರ್ವ ಸಾಹಸ ಜೀವನದ ದ್ರಷ್ಟಾರನ ಬಗೆಗೆ ವಸ್ತುನಿಷ್ಠ ಸುಸ್ಪಷ್ಟ ಚರಿತ್ರೆಯಿಲ್ಲದಿರುವುದು ಬಹುದೊಡ್ಡ ಕೊರತೆಯೆನಿಸಿದೆ. ಸುಮಾರು ೯೮ ವರ್ಷಗಳ ನಿಡುಬಾಳು ಸವೆಸಿದ[೩] ಈ ಮಹಾಸಾಹಸಿಯ ಉಜ್ವಲ ಬದುಕಿನ ಹೋರಾಟದ ಚರಿತ್ರೆ ಕಾರ್ಯಕಾರಣ ಸಂಬಂಧರಹಿತ ಪರಂಪರಾಗತ ಅನೇಕ ಕಡೆಗಳಿಂದಲೂ, ತರ್ಕ ಬದ್ಧವಲ್ಲದ ಹಾಗೂ ಅವೈಜ್ಞಾನಿಕವೆನ್ನಿಸಬಹುದಾದ, ಅನುಭವದ ಕಕ್ಷೆಗೆ ಬಾರದ, ಅತಿರಂಜಿತವೆನಿಸಬಹುದಾದಂತಹ ಐತಿಹ್ಯಗಳಿಂದ ಹಾಸುಹೊಕ್ಕಾಗಿದೆ. ಈ ಕಥಾನಕಗಳಲ್ಲಿ ಟೊಳ್ಳುಗಟ್ಟಿಗಳೆಷ್ಟೆಂಬುದನ್ನು ತರ್ಕಬದ್ಧವಾಗಿ ಯೋಚಿಸಿ ಯೌಗಿಕವಾಗಿ, ವೈಜ್ಞಾನಿಕ ಸ್ಥೂಲ ನಿಯಮವ್ಯಾಪ್ತಿಗೆ ಅಳವಡದ ಮನೋವಿಜ್ಞಾನ ದೃಷ್ಟಿಯಿಂದ, ಐತಿಹಾಸಿಕ ಸಾಕ್ಷ್ಯಾಧಾರಗಳಿಂದ ವಿಚಾರಿಸಬೇಕಾಗಿದೆ.

ನಮ್ಮ ದೇಶದಲ್ಲಿ ಪ್ರಾಚೀನಕಾಲದಿಂದಲೂ ಧಾರ್ಮಿಕ ಮಹಾಪುರುಷರೆಲ್ಲರನ್ನೂ ಲೋಕಕ್ಕೆ ಪರಿಚಯಿಸುವಾಗಲೆಲ್ಲ ಈ ಅಘಟಿತ ಘಟನೆಗಳ ತಂತ್ರದ ಬಣ್ಣಬರೆಗಳನ್ನು ಅವರ ಜೀವನದುದ್ದಕ್ಕೂ ಮೆತ್ತಿ ಅತಿರಂಜನೆಗೊಳಿಸಿ ಹೇಳುತ್ತಲೇ ಬಂದಿದ್ದಾರೆ. ಈ ತಂತ್ರಕ್ಕೆ ರಾಮಾಯಣ ಮಹಾಭಾರತ ಕಾಲದಿಂದಲೂ ಅಷ್ಟೆ ಏಕೆ ಪುರಾಣ ಯುಗದಿಂದಲೂ ಸಾಮಾನ್ಯ ಜನಮನ ಒಗ್ಗಿಹೋಗಿದೆ. ಅಂಥ ಘಟನಾವಳಿಗಳೇ ನಮಗೆ ನೈಜ ಚರಿತ್ರೆಗಳೆನಿಸಿಬಿಟ್ಟಿವೆ. ಮಹಾಚೇತನಗಳ ಬಗೆಗೆ ಈ ತಂತ್ರಕ್ಕಂಟಿಕೊಂಡು ಹೇಳದಿದ್ದರೆ ನಾವು ಅವರನ್ನು ದೊಡ್ಡವರೆಂದು ಒಪ್ಪಿಕೊಳ್ಳುವುದಕ್ಕೆ ಸಾಧ್ಯವಿಲ್ಲದಷ್ಟು ಪವಾಡಕಥೆಗಳ ಮೋಡಿ ನಮ್ಮನ್ನು ಮರುಳುಗೊಳಿಸಿಬಿಟ್ಟಿದೆ. ಜನತೆಯ ಈ ಅಭಿರುಚಿಗನುಗುಣವಾಗಿಯೇ ಪ್ರತೀತಿಗಳು, ಕತೆಗಳು, ಐತಿಹ್ಯಗಳೂ ಕಾಳಕಳೆದಂತೆಲ್ಲ ಮೈದುಂಬಿ ನೈಜ ಇತಿಹಾಸವನ್ನೇ ಮರೆಮಾಚುವಷ್ಟು ಹುಲುಸಾಗಿ ಬೆಳೆದಿವೆ. ಇದರಿಂದ ಮಹಾಸಾಹಸಿಗಳಾದವರ ಸಾಹಸಜೀವನದ ನೈಜತೆಗೆ ಅಪಚಾರವಾಗಿಬಿಡುವುದುಂಟು. ಪ್ರಾಚೀನ ಭಾರತೀಯರಲ್ಲಿ ಇತಿಹಾಸಪ್ರಜ್ಞೆ ಬೆಳೆದುದೇ ಈ ಜಾಡಿನಲ್ಲಿ.[೪]

---

೩. ಈಗ ಅನೇಕರು ಕನಕದಾಸರು ಕ್ರಿ.ಶ. ಸು. ೧೫೦೮ರಲ್ಲಿ ಜನಿಸಿ ೧೬೦೬ರಲ್ಲಿ ಕಾಗಿನೆಲ್ಲಿಯಲ್ಲಿ ದೇಹಬಿಟ್ಟರೆಂದು ಅಭಿಪ್ರಾಯಪಡುತ್ತಾರೆ.

೪. 'ಇತಿಹಾಸ'–ಎಂದು ಇಂದು ನಾವು ಯಾವುದನ್ನು ಕರೆಯುತ್ತೇವೆಯೋ ಈ ನಂಬಿಕೆ ನಮ್ಮ ಹಿಂದಿನವರಿಗಿರಲಿಲ್ಲ. 'ಇತಿಹಾಸ'–ಎಂಬುದಕ್ಕೆ ಚಾಣಕ್ಯ ತನ್ನ ಅರ್ಥಶಾಸ್ತ್ರದಲ್ಲಿ "ಪುರಾಣಂ ಇತಿವೃತ್ತಂ, ಆಖ್ಯಾಯಿಕೋದಾಹರಣಂ, ಧರ್ಮಶಾಸ್ತ್ರಂ ಅರ್ಥಶಾಸ್ತ್ರಂಚೇತಿ ಇತಿಹಾಸಃ"–

ಅಪೂರ್ವ ಪ್ರಜ್ಞಾಶೀಲರನ್ನು, ಧರ್ಮಾತ್ಮರನ್ನು, ತಪಸ್ವಿಗಳನ್ನು ಅಷ್ಟೇ ಏಕೆ ಐತಿಹಾಸಿಕ ಮಹಾಪುರುಷರನ್ನೂ ಕೂಡ ಭಾರತೀಯರು ಕಂಡದ್ದು ಪೌರಾಣಿಕ ಪ್ರಜ್ಞೆಯ ಹಿನ್ನೆಲೆಯಿಂದಲೇ. ಶಂಕರಾಚಾರ್ಯ, ಮಧ್ವಾಚಾರ್ಯ, ರಾಮಾನುಜಾಚಾರ್ಯ, ಬಸವಣ್ಣ, ಪ್ರಭುದೇವ, ಸಿದ್ಧರಾಮ, ಬುದ್ಧ, ಮಹಾವೀರಾದಿ ಐತಿಹಾಸಿಕ ಮಹಾಪುರುಷರ ಜೀವನದುದ್ದಕ್ಕೂ ಇಂಥ ಅನೇಕ ಐತಿಹ್ಯಗಳ ಪವಾಡಕಥೆಗಳ ದಂದುಗವನ್ನು ಕಾಣುತ್ತಲೇ ಇದ್ದೇವೆ. ಕನಕದಾಸನ ಸಮಕಾಲೀನರೇ ಆಗಿರುವ ವ್ಯಾಸರಾಯ, ವಾದಿರಾಜ ಪುರಂದರ ದಾಸರುಗಳ ಚರಿತ್ರೆಯುದ್ದಕ್ಕೂ ಇವು ಹಾಸುಹೊಕ್ಕಾಗಿವೆ. ಅವನ್ನು ಸುಳ್ಳೆಂದು ತರ್ಕಬದ್ಧವಲ್ಲೆಂದು ಬೆರಳು ತೋರಿಸುವುದಕ್ಕೂ ನಮಗೆ ಹೆದರಿಕೆ. ಏಕೆಂದರೆ, ಅವರನ್ನು ಒಂದಾನೊಂದು ದೇವತೆಯ ಅವತಾರವೆಂದು ಅವರ ಹುಟ್ಟಿನೊಡನೆಯೇ ಹೆಣೆಯಲ್ಪಟ್ಟ ದೈವೀಭಾವನೆಯ ಕಥೆಯನ್ನು ಒಪ್ಪಿಕೊಂಡೇ ಅವರ ಚರಿತ್ರೆಯನ್ನು ತಿಳಿಯಲು ಪ್ರಯತ್ನಿಸುತ್ತೇವೆ. ವೈಜ್ಞಾನಿಕ ಪ್ರಜ್ಞೆಯಿಂದ ಎಚ್ಚತ್ತಿರುವ ಇಂದೂ ಕೂಡ ಜನತೆಯನ್ನು ಈ ದೇವರುಗಳು ದೈವಗಳು–ಇವುಗಳ ಸುತ್ತಲಿನ ಹೇಳಿಕೆ ಕೇಳಿಕೆಗಳೇ ಮೊದಲಾದ ಘಟನಾವಳಿಗಳ ಭ್ರಮಾತ್ಮಕ ಜಗತ್ತಿನಿಂದ ವಾಸ್ತವ ಪ್ರಪಂಚಕ್ಕೆ ತಂದು ತತ್ತ್ವಶಾಸ್ತ್ರದ ಶಾಸ್ತ್ರೀಯತೆಯಲ್ಲಿ ಮಗ್ನರನ್ನಾಗಿಸುವುದೇ ಕಷ್ಟದ ಕೆಲಸವಾಗಿ ಬಿಟ್ಟಿದೆ. ಜನತೆಯನ್ನು ಕೆಲವು ಮೂಲಭೂತ ನಂಬುಗೆಗಳ ಆಧಾರದ ಮೇಲೆ ಕಟ್ಟುವ ಕಾರ್ಯ ಜಟಿಲಗೊಂಡಿದೆ. ಯಾವುದು ತರ್ಕಬದ್ಧವೆಂಬುದರಲ್ಲಿ ಸಂಶಯವುಂಟಾಗಿ ಎಲ್ಲ ಮೂಲಗಳನ್ನೂ ಗಾಳಿಗೆ

---

ಎಂದಿದ್ದಾನೆ. ಅದರಲ್ಲಿ ಪುರಾಣ ಎಂದರೆ ಹಿಂದೆನಡೆದುಹೋದ ಕಥೆ, ಅಡ್ಡಕಥೆಗಳು (ಆಖ್ಯಾಯಿಕೆಗಳು) ದೃಷ್ಟಾಂತಗಳು, ಧರ್ಮಶಾಸ್ತ್ರ ಮತ್ತು ಅರ್ಥಶಾಸ್ತ್ರ–ಎಲ್ಲವೂ ಇರಬೇಕು. ಈ ಲಕ್ಷಣ ಸಾಮಾನ್ಯವಾಗಿ ರಾಮಾಯಣ ಮಹಾಭಾರತಗಳಿಗೆ ಅನ್ವಯಿಸುತ್ತದೆ. ಇವುಗಳಲ್ಲಿ ಇತಿಹಾಸ ಇದೆ. ಅದು ವಸ್ತುನಿಷ್ಠವಲ್ಲ. ಆದುದರಿಂದ ಇಂದಿನ ಇತಿಹಾಸ ಪ್ರಜ್ಞೆಗೆ ಇವು ಆಧಾರಗ್ರಂಥಗಳೆನಿಸುವುದಿಲ್ಲ. ಇಲ್ಲಿ ಅವಾಸ್ತವದೊಡನೆ ವಾಸ್ತವವನ್ನು ಹೆಣೆದಿರುವುದೇ ಅಧಿಕ. ಇಷ್ಟರಿಂದಲೇ ಇವು ಅಪ್ರಯೋಜಕವೆಂದಲ್ಲ. ಸಮಗ್ರ ಭಾರತೀಯರ ಭಾವೈಕ್ಯಕ್ಕೆ ಅಂಶಿಕವಾಗಿ ಪರೋಕ್ಷದಲ್ಲಿ ಕೆಲಸ ಮಾಡಿವೆ. ಅಷ್ಟೇ ಸತ್ಯವಾಗಿ ಭ್ರಮಾತ್ಮಕ ಐತಿಹಾಸಿಕ ಪ್ರಜ್ಞೆಯನ್ನುಂಟುಮಾಡಿವೆ. ಅವಾಸ್ತವವಾದ ಸ್ವರ್ಗಲೋಕವನ್ನು ವಾಸ್ತವವಾದ ಜಗತ್ತಿನೊಡನೆ ಬೆಸೆದು ಭೂ–ಸ್ವರ್ಗಲೋಕ ಸಂಬಂಧದ ಕತೆಗಳನ್ನು ತುಂಬಿಕೊಂಡು ನಿಂತಿವೆ. ಮುಂದೆ ಹುಟ್ಟಿದ ನಮ್ಮ ಸಾಹಿತ್ಯರಾಶಿಯೆಲ್ಲ ಈ ಎರಡು ಮಹಾಗ್ರಂಥಗಳ ಕಥನ ಸಂವಿಧಾನದಲ್ಲಿಯೇ ಹುಟ್ಟಿ ಬೆಳೆದು ವಸ್ತುನಿಷ್ಠ ಇತಿಹಾಸ ಗ್ರಂಥಗಳ ಅಭಾವವಾಗಿ ಭಾರತೀಯ ಜನಾಂಗ ಇತಿಹಾಸ ಪ್ರಜ್ಞೆಯಿಂದಲೇ ದೂರವಾಗಿ ಉಳಿದುಬಿಟ್ಟಿತು. ಇಲ್ಲದ ಸ್ವರ್ಗಲೋಕದಲ್ಲಿ ಸಾಮ್ರಾಜ್ಯ ಕಟ್ಟಿ ಅದರಲ್ಲಿ ಮೈಮರೆತರು. ಈ ಕಾರಣದಿಂದ ಇವರು ಅನುಭವಿಸಿದ ಭಾವನೆ ಅನೂಹ್ಯವಾದುದು.

ತೂರಿ ಬಿಡುವ ಪ್ರವೃತ್ತಿ ಇಂದು ಅಧಿಕಗೊಂಡುಬಿಟ್ಟಿದೆ. ಇತ್ತೀಚೆಗೆ ಇತಿಹಾಸ ಪ್ರಜ್ಞೆಯಿಂದ, ಕಾರ್ಯಕಾರಣ ಸಂಬಂಧದ ಪ್ರಜ್ಞೆಯಿಂದ ಎಲ್ಲವನ್ನೂ ವಿಚಾರಿಸುವ ಮನೋಭಾವ ಬೆಳೆಯತೊಡಗಿರುವುದು ಸಂತೋಷದ ಸಂಗತಿ.[೫] ಅವಾಸ್ತವವನ್ನು ವಾಸ್ತವದೊಡನೆ ಹೆಣೆಯುವ ಪ್ರವೃತ್ತಿ ಕಡಿಮೆಯಾಗಿದೆ. ವಾಸ್ತವವನ್ನು ಯಥಾರ್ಥರೀತಿಯಲ್ಲಿ ವಿಶ್ಲೇಷಣೆಗೊಳಗುಮಾಡುವಲ್ಲಿ ಶ್ರದ್ಧೆ ತಳೆಯುತ್ತಿರುವುದು ಶುಭಸೂಚನೆಯೇ ಅನ್ನಬೇಕು. ಈ ದಿಸೆಯಲ್ಲಿ ಕನಕದಾಸರ ಅಸಾಧಾರಣ ವ್ಯಕ್ತಿತ್ವದ ಸುತ್ತ ಮೆತ್ತಿಕೊಂಡಿರುವ ಪ್ರಚಲಿತ ನಂಬಿಕೆ, ಪ್ರತೀತಿ, ಕಲ್ಪನೆಗಳಲ್ಲಿ ಟೊಳ್ಳೆಷ್ಟು ಗಟ್ಟಿಯೆಷ್ಟು ಎಂಬುದರ ಬಗೆಗೆ ಪ್ರಕೃತ ಸ್ವಲ್ಪ ವಿಚಾರ ಮಾಡುವುದೇ ನನ್ನ ಲೇಖನದ ಗುರಿಯಾಗಿದೆ.

ಕನಕದಾಸರಿಂದ ನಡೆದುವು ಎಂದು ಹೇಳಲಾಗುತ್ತಿರುವ ಅನೇಕ ಪವಾಡದ ಕಥೆಗಳಲ್ಲಿ ಉಡುಪಿ ಕ್ಷೇತ್ರದ ಶ್ರೀಕೃಷ್ಣದೇವಾಲಯದಲ್ಲಿ ತನಗೆ ಪ್ರವೇಶ ಪ್ರತಿಬಂಧಕವಾದಾಗ, ಶ್ರೀಕೃಷ್ಣನಲ್ಲಿ ದರ್ಶನಕೊಡೆಂದು ಮಾಡಿಕೊಂಡ ಪ್ರಾರ್ಥನೆಯನ್ನು ಮನ್ನಿಸಿ, ಪೂರ್ವಕ್ಕೆ ಮುಖಮಾಡಿಕೊಂಡು ನಿಂತ ಆ ವಿಗ್ರಹವು ಪಶ್ಚಿಮದ ಕಡೆಯಲ್ಲಿ ಗುಡಿಯ ಹೊರಗಡೆ ನಿಂತಂಥ ಕನಕದಾಸನತ್ತ ಮೊಗದಿರುಹಿ ದೇವಾಲಯದ ಗೋಡೆಯಲ್ಲಿ ತೂತುಂಟಾಗುವಂತೆ ಮಾಡಿ, ದರ್ಶನಕೊಟ್ಟ ಪ್ರಸಂಗ ಮತ್ತು ವ್ಯಾಸರಾಯರು ಕೆರೆ ಕಟ್ಟಿಸುವ ಸಮಯದಲ್ಲಿ ಕೆರೆಯ ತೂಬಿನ ಬಾಯಿ ಹತ್ತಿರ ನೀರು ಸರಾಗವಾಗಿ ಹರಿದು ಹೋಗಲು ಪ್ರತಿಬಂಧಕವಾದ ಬಂಡೆಯೊಂದನ್ನು ಸೀಳಲು ಕನಕದಾಸರ ಪ್ರಭಾವದಿಂದ ರೂಪಗೊಂಡು ನಿಂತ ಯಮನ ಕೋಣವೇ ತನ್ನ ಕೋಡುಗಳಿಂದ ಬಂಡೆಯನ್ನು ಸೀಳಿ ನೀರು ಸರಾಗವಾಗಿ ಹರಿದುಹೋಗುವಂತೆ ಮಾಡಿದ ಪ್ರಸಂಗ–ಇವೆರಡೂ

---

೫. ಭಾರತೀಯರಲ್ಲಿ ಇತಿಹಾಸ ಪ್ರಜ್ಞೆ ಚುರುಕುಗೊಂಡಿರುವುದು ಬ್ರಿಟಿಷರು ಇಲ್ಲಿ ತಮ್ಮ ಸುವ್ಯಸ್ಥಿತ ರಾಜಸತ್ತೆಯನ್ನು ಪ್ರಾರಂಭಿಸಿದ ಮೇಲೆ. ಅವರೇ ನಮಗೆ ನಮ್ಮ ಇತಿಹಾಸ ಸಂಗ್ರಹಣೆ ಪ್ರಚೋದಕರು. ನಮ್ಮ ಸಮಗ್ರ ಮತ್ತು ನೇರ ಇತಿಹಾಸವಿಲ್ಲದ್ದರಿಂದ ಪರಕೀಯರು ನಮ್ಮ ಬಗೆಗೆ ಬರೆದ ಬರವಣಿಗೆಗಳು, ಅಷ್ಟಿಷ್ಟು ನಮ್ಮವರ ತಾಮ್ರಪಟ–ಶಾಸನ–ಕಾವ್ಯ–ಬಖೈರು ಮುಂತಾದವುಗಳಲ್ಲಿನ ವಸ್ತುನಿಷ್ಠಾಂಶಗಳ ಸಂಗ್ರಹಣೆಗಳು ಮುಂತಾದವುಗಳಿಂದ ವ್ಯವಸ್ಥಿತ ಇತಿಹಾಸ ರೂಪುಗೊಳ್ಳುತ್ತಿರುವುದು ಸಂತೋಷದ ಸಂಗತಿಯೇ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ನಮ್ಮ ಬಗೆಗೆ ನಮಗೆ ಗೊತ್ತಾಗಿರುವುದು ತೀರ ಅತ್ಯಲ್ಪ. ಅನೇಕ ಚಕ್ರಾಧಿಪತ್ಯಗಳು ಹುಟ್ಟಿ ಬೆಳೆದ ಈ ನಾಡಿನ ಸಹಸ್ರ ಸಹಸ್ರ ವರ್ಷಗಳ ಉಜ್ವಲ ಚರಿತ್ರೆಯ ಬಗೆಗೆ ಆಗಬೇಕಾದ ಸಂಶೋಧನೆ ಗುಡ್ಡದಷ್ಟು.

ಬಹು ಜಿಜ್ಞಾಸೆಗೊಳಗು ಮಾಡಿದವುಗಳಾಗಿವೆ. ಇನ್ನುಳಿದ ಐತಿಹ್ಯಗಳಲ್ಲಿ ಕೆಲವು ಯುಕ್ತಿ ಯುಕ್ತವಾದವುಗಳು. ಕೆಲವು ಅವರು ಸಾಧಿಸಿದ್ದ ಭಕ್ತಿಯೋಗಜನ್ಯ ಅಪರೋಕ್ಷ ಜ್ಞಾನಾನುಭವಗಳಿಗೆ ಸಂಬಂಧಿಸಿದವುಗಳು. ಇತರ ಕೆಲವು ಪ್ರಸಂಗಗಳು ಭಕ್ತಿ ಯೋಗಾನಂದದಲ್ಲಿ ತನ್ನ ಹೃದಯ ಗುಹೆಯಲ್ಲೇ ಕಂಡ ಖಂಡಸಾಕ್ಷಾತ್ಕಾರಗಳು. ಉಳಿದ ಕೆಲವು ತಳಬುಡವಿಲ್ಲದೆ ಕಾಲಕಾಲಕ್ಕೆ ಕೈಕಾಲು ಮೂಡಿ ಬೆಳೆದು ನಿಂತ ಹೇಳಿಕೆ ಕೇಳಿಕೆಗಳು. ಇಂಥ ಕಥೆಗಳು ಕನಕದಾಸಾದಿ ಹರಿದಾಸ ಪರಂಪರೆಯಲ್ಲೇ ಬೆಳೆದುಬಂದಿವೆಯೆಂದೇನೂ ಅಲ್ಲ. ಕರ್ನಾಟಕಾಂಧ್ರ ತಮಿಳುನಾಡಿನ ಭಕ್ತಿಪಂಥದ ಶೈವಾಚಾರ್ಯರಲ್ಲೂ, ಶಿವಶರಣರಲ್ಲೂ, ಮಹಾರಾಷ್ಟ್ರ ಮತ್ತು ಉತ್ತರಭಾರತದಲ್ಲಿ ಪ್ರಸಿದ್ಧರಾದ ಭಕ್ತಿ ಪಂಥದ ರಮಾನಂದ–ಕಬೀರ–ನಾನಕ–ಚೈತನ್ಯ–ಮೀರಾಬಾಯಿ–ಜ್ಞಾನದೇವ–ನಾಮದೇವ–ತುಕಾರಾಮ – ಏಕನಾಥ–ಗೋರಾಕುಂಬಾರಾದಿಗಳ ಜೀವನದಲ್ಲೂ–ಅಂಟಿ ಬಂದಿವೆ. ಇಂಥ ಹಿರಿಯ ಭಕ್ತಿಪಂಥದ ಮಹಾಪುರುಷರು ಎರಡುಮೂರು ಶತಮಾನಗಳ ಕಾಲವಿಸ್ತಾರದಲ್ಲಿ ಭಾರತದ ಉದ್ದಗಲಕ್ಕೂ ಉದಯುಗೊಂಡುದಕ್ಕೆ ಈ ಪೂರ್ವದಲ್ಲಿ ಹೇಳಿರುವಂತೆ ಸಮಾಜಜೀವನ ರಾಜಕೀಯ ಗೊಂದಲಗಳ ಕಾರಣವಾಗಿ ಅನೇಕ ಸಂಕೀರ್ಣತೆಗೊಳಗಾದುದು, ಹಿಂದೂಸಮಾಜ ಮತ್ತು ಧರ್ಮಗಳಿಗೆ ಪರಕೀಯರ ಪದಾಕ್ರಾಂತಕಾರಣವಾಗಿ ಬಂದೊದಗಿದ ಕುತ್ತು–ಮೊದಲಾದುವು ಕಾರಣವಾಗಿದ್ದವು. ಇಂಥ ಭಗವದ್ಭಕ್ತರ ಬಗೆಗೆ ಅಂದಿನ ಜನತೆಗೆ ಅಪಾರ ಶ್ರದ್ಧಾಸಕ್ತಿ ಬೆಳೆದು ಅವರ ಜೀವನ ಘಟನೆಗಳು ದೈವೀಪ್ರೇರಣೆಗಳೆಂಬ ಭಾವನೆ ನಲಿಯಿತು. ಆ ಭಾವನೆಗಳೇ ಕಾಲಕಾಲಕ್ಕೆ ಬೆಳೆದು ಹೇಳಿಕೆ ಕೇಳಿಕೆಗಳಾಗಿ ವಿಸ್ತಾರಗೊಂಡು ಹೋದುವು. ಪವಾಡಕಥೆ, ಪ್ರತೀತಿ, ನಂಬಿಕೆಗಳನ್ನು ಪೌರಾಣಿಕರು–ಪುರೋಹಿತರು–ಪ್ರವಚನಕಾರರು–ಹರಿಕಥಾ ವಿದ್ವಾಂಸರು ರಂಜನೆಗೊಳಿಸಿ, ಜನಮನವನ್ನು ಅವುಗಳಿಗೆ ಒಗ್ಗಿಸಿಬಿಟ್ಟರು. ಇಂಥ ಕಥೆಗಳನ್ನು ಅಲ್ಪಸ್ವಲ್ಪ ಬದಲಾವಣೆಯಿಂದ ಒಂದು ಸಂಪ್ರದಾಯದವರು ಮತ್ತೊಂದು ಸಂಪ್ರದಾಯದವರಿಂದ ಪಡೆದು ತಾವೂ ತಮ್ಮವರಿಗೆ ಸಂಬಂಧಿಸಿಕೊಂಡು ಕೈಕಾಲು ಮೂಡಿಸಿದರು. ಅಂದಿನ ಸಾಮಾನ್ಯ ಜನತೆಯ ಅಜ್ಞತೆಯನ್ನು ಈ ಘಟನೆಗಳು ಪ್ರತಿಬಿಂಬಿಸುತ್ತವೆ, ಎನ್ನಬಹುದು.

**ಕನಕನ ಕಿಂಡಿಯ ಐತಿಹ್ಯ**

ಕನಕದಾಸರು (೧೫೦೮–೧೬೦೬) ಸೋಸಲೆ ಮಠದ

ವ್ಯಾಸರಾಯರಿಂದಲೇ (೧೪೪೭–೧೫೩೯) ಅನುಗ್ರಹ ಪಡೆದವರೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಯಾವಾಗ ಅನುಗ್ರಹ ಪಡೆದರು ? ಎಲ್ಲಿ ? ಎಂಬ ಬಗೆಗೆ ಖಚಿತತೆ ಇದ್ದಂತಿಲ್ಲ. ವಿಜಯನಗರದ ವಿಶೇಷ ಸಂಪರ್ಕವಿದ್ದ ಇವರಿಗೆ ಬಹುಶಃ ವಿಜಯನಗರಲ್ಲೆ ಅನುಗ್ರಹವಾಗಿರಬೇಕು ಎಂದು ಹೇಳುವುದು ಸರಿಯಾಗಲಿಕ್ಕಿಲ್ಲ. ವ್ಯಾಸರಾಯರು ವಿಜಯನಗರಕ್ಕೆ ಬಂದದ್ದು ಕೃಷ್ಣದೇವರಾಯನ ಆಳ್ವಿಕೆಯ ಕಾಲ (೧೫೦೯–೧೫೩೦) ದಲ್ಲಿಯೇ ಎನ್ನಲಾಗುತ್ತಿದೆ. ಅದಕ್ಕೂ ಮೊದಲು ಇವರು ಸಾಳ್ವನರಸಿಂಹನ ಕಾಲದಲ್ಲಿ ಕ್ರಿ. ಶ. ೧೪೭೬ರ ಸುಮಾರಿಗೆ ಚಂದ್ರಗಿರಿಗೆ ಬಂದು ತಿರುಪತಿಯಲ್ಲಿ ಅನೇಕ ವರ್ಷಕಾಲ ಕಳೆದು ಅಲ್ಲಿನ ಪರಿಸ್ಥಿತಿಯನ್ನು ಸುಧಾರಿಸಿ, ಅನಂತರ ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ಬಂದು ೧೫೨೧ ರಲ್ಲಿ ರಾಜನಿಗೆ ಒದಗಿದ ಕುಹಯೋಗ ಪೀಡೆಯನ್ನು ಪರಿಹರಿಸಿದರೆಂದು ನಂಬಲಾಗುತ್ತಿದೆ. ಈ ಅವಧಿಯಲ್ಲಿ ಕನಕದಾಸರು ಇನ್ನೂ ಚಿಕ್ಕವರಾಗಿದ್ದರು. ಬಾಡ–ಬಂಕಾಪುರಗಳಲ್ಲೇ ಬಹುಶಃ ಇವರ ವಾಸ್ತವ್ಯವಿತ್ತು ಎನ್ನಬಹುದು. ಕನಕದಾಸರು ಸಾಕಷ್ಟು ಪ್ರೌಢರಾದ ಮೇಲೆಯೇ ಅಂದರೆ ೧೫೨೫ರ ನಂತರವೇ ವ್ಯಾಸರಾಯರ ವೃದ್ಧಾಪ್ಯ ಕಾಲದಲ್ಲಿ ಸೋಸಲೆಯ ಅವರ ಮಠದಲ್ಲಿಯೋ ಅಥವಾ ಇನ್ನೆಲ್ಲೋ ಇವರನ್ನು ಕಂಡು ಹರಿದಾಸದೀಕ್ಷೆ ಪಡೆದಿರಬಹುದು. ಪುರಂದರದಾಸರಿಗೂ, ಸೋದೆಮಠದ ವಾದಿರಾಜರಿಗೂ ವ್ಯಾಸರಾಯರೇ ಗುರುಗಳಾದ್ದರಿಂದ ಪುರಂದರದಾಸರು–ವಾದಿರಾಜರು–ಕನಕದಾಸರು–ಈ ಮೂವರೂ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಬಾಳಿದವರೆಂಬುದರಲ್ಲಿ ಏನೂ ಅನುಮಾನವಿಲ್ಲ. ಕನಕದಾಸರ ವಿದ್ಯಾವೈದುಷ್ಯ, ದಾಸತ್ವ, ಸಿದ್ಧಿಸಾಧನೆ ವಿಪುಲ ವೈರಾಗ್ಯಾದಿಗಳಿಗೆ ಮಾರುಹೋದ ಪುರಂದರದಾಸರು ದಾಸಕೂಟದಲ್ಲಿ ಇವರಿಗೆ ಗೌರವ ಸ್ಥಾನವಿತ್ತು ಯಾವಜ್ಜೀವವೂ ಅಂದರೆ ೧೫೬೫ರಲ್ಲಿ ಅವರು ಸಾಯುವವರೆಗೂ ಇವರೊಡನೆ ಸಂಪರ್ಕವಿಟ್ಟುಕೊಂಡಿದ್ದರು.

ಉಡುಪಿಕ್ಷೇತ್ರದಲ್ಲಿ ಆ ಕಾಲಕ್ಕಾಗಲೆ ೧೮ನೆಯ ಪೀಠಾಚಾರ್ಯರಾಗಿ ಸೋದೆಮಠದ ಸ್ವಾಮಿತ್ವವನ್ನು ವಹಿಸಿಕೊಂಡ ವಾದಿರಾಜರ ಕಾರಣವಾಗಿ ಉಡುಪಿಯಲ್ಲಿ ಕನಕದಾಸರ ಕೀರ್ತಿವಾರ್ತೆ ಹಬ್ಬಿದ್ದುವೆಂದೂ ಊಹಿಸಬಹುದು. ದೇವಾಲಯದ ಕಟ್ಟುಕಟ್ಟಳೆಗಳನ್ನು ಮಿಕ್ಕಿ ತನಗೆ ಪ್ರವೇಶಾಧಿಕಾರ, ಸ್ವಾಮಿಯ ದರ್ಶನಾನುಕೂಲ್ಯಬೇಕೆಂದು ಕೇಳಿರಲೂಆರ. ಈ ಬಗೆಗಿರುವ ಐತಿಹ್ಯ ಪ್ರಕಾರ ತಾನು ಸ್ವಾಮಿಯದರ್ಶನ ಮಾಡಬೇಕೆಂದು ಕೇಳಿದ. ಮಠದೊಳಗೆ

ಶೂದ್ರತ್ವಕಾರಣವಾಗಿ ಪ್ರವೇಶಾಧಿಕಾರ ಸಿಗಲಿಲ್ಲ. ಆಗ ಹುರುಡಿನಿಂದ ಮಠದ ಹೊರಗೇ ನಿಂತುಕೊಂಡು ದೇವರಲ್ಲಿ ಮೊರೆಯಿಟ್ಟು ಹಾಡತೊಡಗಿದ. ಸ್ವಾಮಿ ಭಕ್ತನ ಈ ಪ್ರಾರ್ಥನೆಯನ್ನು ಮನ್ನಿಸಿ ಪೂರ್ವದಿಂದ ಪಶ್ಚಿಮಕ್ಕೆ ಮುಖ ತಿರುವುವುದರ ಜೊತೆಗೇ ಭಕ್ತನ ನೋಟಕ್ಕಾಗಿ ಒಂದು ಚಿಕ್ಕ ಕಿಂಡಿಯನ್ನೂ ಮಾಡಿಬಿಟ್ಟ.

ಈ ಪ್ರಸಂಗಕ್ಕೆ ಸಾಕ್ಷಿಯಾಗಿ "ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ । ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೆ..." ಈ ಪದ್ಯವನ್ನೂ ಮತ್ತು ಕೆಲವರು "ತೊರೆದು ಜೀವಿಸಬಹುದೆ ಹರಿ ನಿನ್ನ ಚರಣಗಳ.........." ಎಂದು ಮೊದಲಾಗುವ ಪದ್ಯವನ್ನು ಹೇಳುತ್ತಿರುವುದರ ಔಚಿತ್ಯವೇನೊ ತಿಳಿಯದು. (ಈ ಪದ್ಯ ಸಂದರ್ಭವನ್ನು ವಾಚ್ಯವಾಗಿ ಸೂಚಿಸುವುದಿಲ್ಲ : ಅಥವಾ ಲಕ್ಷ್ಯಾರ್ಥವಾಗಿಯೂ ಸುಳುಹು ಕೊಡುತ್ತಿಲ್ಲ.) ಕನಕದಾಸ ಸ್ವಾಮಿಯನ್ನು ಕಂಡು ಸ್ವಾಮಿಯಿಂದಲೇ ತನ್ನ ವಿಜಯ ಪತ್ರ ಪಡೆದುಬಿಟ್ಟ. ಈ ಕಥೆ ಕೇಳಿದ ನಮಗೆ ಕನಕದಾಸರ ಭಕ್ತಿಜೀವನದ ಮಹತ್ತು ಬೃಹತ್ತಿನ ಬಗೆಗೆ ಅಪಾರ ವಿಶ್ವಾಸದ ಜೊತೆಗೆ ದೇವಾಲಯ ವ್ಯವಸ್ಥೆಯ ಬಗೆಗೆ ತಿರಸ್ಕಾರವೂ ಮೂಡುವುದುಂಟು. ಈ ಒಂದು ಪ್ರಯೋಜನ ಸಾಧಿಸಲೋಸುಗವೇ ಇಂಥ ಕಥೆಗಳು ಮೈದಾಳುತ್ತಿದ್ದವು[೬]. ಆದರೆ ಇತಿಹಾಸದಲ್ಲಿ ಈ ಕಥೆಗೆ ಪುರಸ್ಕಾರ ಸಿಕ್ಕಂತಿಲ್ಲ.

---

೬) ಇಂಥ ಕಥೆಗಳು ಮಧ್ವಾದಿ ಆಚಾರ್ಯರ ಬಗೆಗೂ ಪುರಂದರದಾಸಾದಿಗಳ ಬಗೆಗೂ ಹುಟ್ಟಿರುವ ಬಗೆಗೆ ಗಮನಿಸಿ :

(೧) ಮಧ್ವಾಚಾರ್ಯರು : ಬಿರುಗಾಳಿಗೆ ಸಿಕ್ಕು ಮುಳುಗುತ್ತಿದ್ದ ಹಡಗನ್ನು ತಮ್ಮ ಕಾವಿಶಾಟಿಯನ್ನು ಬೀಸಿ ಮುಳುಗದಂತೆ ಮಾಡಿದುದು, ಇನ್ನೂ ಇವರು ಬಾಲಕರಾಗಿರುವಾಗಲೇ ತಮ್ಮ ತಂದೆ ಮಡಿದ ಸಾಲದ ತೀರ್ವೆಗಾಗಿ ಹುಣಸೇ ಬೀಜಗಳನ್ನೇ ನಾಣ್ಯಗಳನ್ನಾಗಿ ಮಾಡಿ ಸಾಲ ತೀರಿಸಿದುದು. ಬಾಲ್ಯದಲ್ಲಿ ಇವರು ಬಹುದೂರದಲ್ಲಿದ್ದರೂ ತಾಯಿ ಕರೆದ ಧ್ವನಿಯನ್ನು ಕೇಳಿ ಇದ್ದಕ್ಕಿದ್ದಂತೆ ಅವರ ಮುಂದೆ ಪ್ರತ್ಯಕ್ಷರಾದದ್ದು, ಹೊಸಮತವೊಂದನ್ನು ಹುಟ್ಟು ಹಾಕುತ್ತೇನೆಂಬುದನ್ನು ಹೇಳುತ್ತ ತಂದೆಗೆ ನಂಬುಗೆ ಹುಟ್ಟುವುದಕ್ಕೋಸುಗ ಒಣ ಕಟ್ಟಿಗೆಯೊಂದನ್ನು ಭೂಮಿಯಲ್ಲಿ ನೆಟ್ಟು ಚಿಗುರುವಂತೆ ಮಾಡಿದುದು ಇವೇ ಮೊದಲಾದುವನ್ನು ಜ್ಞಾಪಿಸಬಹುದು. ಕೊನೆಯಲ್ಲಿ ಪ್ರವಚನ ಮಾಡುತ್ತಿದ್ದಂತೆಯೇ ಅದೃಶ್ಯರಾಗಿ ಬದರಿಕಾಶ್ರಮಕ್ಕೆ ತೆರಳಿದುದು. ಇದನ್ನೂ ಪರಿಗಣಿಸಬಹುದು.

(೨) ಪುರಂದರದಾಸರು : ಇವರ ಬಗೆಗೆ ಹುಟ್ಟಿರುವ ಐತಿಹ್ಯಗಳಲ್ಲಿ ಮೂಗುತಿಯ ಪ್ರಸಂಗವೇ ಅತ್ಯಂತ ಕುತೂಹಲಕರ ಅಂಶ. ವ್ಯಾಸತೀರ್ಥರು ತಮ್ಮ ಆಸನದಲ್ಲಿ ಕುಳಿತಿದ್ದಾಗ ಒಮ್ಮೆ ಅವರ ಮುಂದಿನ ವ್ಯಾಸಪೀಠದ ಮೇಲೆ ಪುರಂದರದಾಸರ ಪದ್ಯಗಳ ಕಡತವಿತ್ತು. ಅದನ್ನು ಕಂಡ ಓರ್ವ ಶಿಷ್ಯ ತಿರಸ್ಕಾರದಿಂದ ಅದನ್ನು ಕಿತ್ತು ಬಿಸಾಡಿದ. ಬಿಸಾಡಿದ ಆ ಕಡತ

ವಾಸ್ತವಾಂಶವೇ ಬೇರೆ ಇರಬೇಕು. ಇಂಥ ಒಂದು ಅತ್ಯದ್ಭುತ ಮಹಿಮೆಯನ್ನು ತೋರಿಸಿದರೂ ಕನಕದಾಸರಿಗೆ ದೇವಾಲಯ ಪ್ರವೇಶ ಮಾತ್ರ ಸಾಧ್ಯವಾಗಲೇ ಇಲ್ಲ ಎನ್ನುವುದು ಇನ್ನೂ ಆಶ್ಚರ್ಯಜನಕ ವಿಷಯವೇ. ಇದು ಉಭಯ ಪಕ್ಷಕ್ಕೂ ಶೋಭೆ ತರುವ ಘಟನೆಯಂತೂ ಅಲ್ಲ ಅನ್ನಿಸುತ್ತದೆ, ವಿಚಾರ ಮಾಡುವವರಿಗೆ. ಭಕ್ತರ, ಭಾವುಕರ, ಧರ್ಮದ್ರಷ್ಟಾರರ ಬಗೆಗೆ ಇಂಥ ಹೇಳಿಕೆ. ಕೇಳಿಕೆ, ಕಥೆ, ಕಲ್ಪನೆಗಳನ್ನು ಅನುಯಾಯಿಗಳು, ಪಂಡ ಪುರೋಹಿತರು ಹುರುಡಿನಿಂದ ಕಟ್ಟಿ, ಕೇಳುವವರಿಗೆ ಆಶ್ಚರ್ಯಹುಟ್ಟುವಂತೆ ಹೇಳಿ, ಬೇರೆ ಬೇರೆ ಸಂಪ್ರದಾಯವರಿಗೆ ನಾವೇನು ಕಡಿಮೆಯಲ್ಲವೆಂದು ತೋರಿಸಿಕೊಳ್ಳುತ್ತಿದ್ದ ಕಾಲ ಅದು. ರಾಜಕೀಯವಾಗಿ ಗೆಲುವು ಸಾಧಿಸಲಾರದ ಅಂದಿನ ಜನ ಸಾಮಯಿಕವಾಗಿ ಇಂಥ ಗೆಲವುಗಳಿಂದ ತೃಪ್ತರಾಗುತ್ತಿದ್ದ ಕಾಲ.

ಕನಕದಾಸರ ಯೋಗ್ಯತೆಯನ್ನು ಈ ಪ್ರಸಂಗದಿಂದ ಅಳೆಯಬೇಕಾದುದೇನೂ ಇಲ್ಲ. ಅವರು ಬಿಟ್ಟುಹೋದ ಸಾಹಿತ್ಯರಾಶಿ, ಸಮಕಾಲೀನ ಬರವಣಿಗೆಗಳು, ಅವರು ಮಾಡಿಸಿಟ್ಟಿರುವ ಪಳೆಯುಳಿಕೆಗಳೇ ಇವರ ಮಹಿಮಾತಿಶಯಗಳಿಗೆ ಒರೆಗಲ್ಲುಗಳಾಗಿ ನಿಲ್ಲಬಲ್ಲುವು.

---

ಹಾರಿ ಬಂದು ಪುನಃ ವ್ಯಾಸಪೀಠದ ಮೇಲೆ ಬಂದು ಕುಳಿತಿತು. ಹೀಗೆ ಅನೇಕ ಸಲ ಬಿಸಾಡಿದರೂ ಕಡತ ಹಾರಿ ಹಾರಿ ಬಂದು ಕೂಡುತ್ತಲೇ ಇತ್ತಂತೆ. ಆಗ ವ್ಯಾಸರು ಶಿಷ್ಯರಿಗೆ ಇದು ಸಾಮಾನ್ಯ ಕಡತವಲ್ಲ ನಾಲ್ಕು ವೇದಗಳ ಸಾರವೆಂದು ತಿಳಿಸಿ ಸುಮ್ಮನಾಗಿಸಿದರಂತೆ. ಮತ್ತೊಂದು ಸಮಯದಲ್ಲಿ ದಾಸರು ತಮ್ಮ ಮಂಟಪದಲ್ಲಿ ವ್ಯಾಸರಾಯರ ಎದುರು ಕುಳಿತಾಗ ಎದ್ದುನಿಂತು ಕೈತಿಕ್ಕಿಬಿಟ್ಟರು ಗಾಬರಿಯಿಂದ, "ಏಕೆ ಹೀಗೆ ಮಾಡಿದೆ?" ಎಂದು ಕೇಳಿದ ವ್ಯಾಸರಾಯರಿಗೆ "ವಿಜಯವಿಠ್ಠಲನ ಮುಂದಿನ ಪರದೆಗೆ ಬೆಂಕಿ ಹತ್ತಿತ್ತು. ಅದನ್ನು ಆರಿಸಿದೆ" ಎಂದರಂತೆ. (ಇದು, ಹರಿಹರ ಹಳೇಬೀಡಿನಲ್ಲಿ ಕುಳಿತು ಹಂಪೆಯ ವಿರೂಪಾಕ್ಷದೇವರ ಮುಂದಿನ ತೆರೆಗೆ ಹತ್ತಿದ ಬೆಂಕಿಯನ್ನು ಕೈತಿಕ್ಕಿ ಅಲ್ಲಿಂದಲೇ ಆರಿಸಿದ ಕತೆಯ ನಕಲು.)

(೩) ವಾದಿರಾಜರು : ಶ್ರೀಮಂತನ ಮಗನೋರ್ವನು ವಿವಾಹ ಸಮಯದಲ್ಲಿ ಹಾವು ಕಚ್ಚಿ ಸಾಯಲು "ಲಕ್ಷ್ಮೀ ಸೋಬಾನೆ" ಪದ್ಯ ರಚಿಸಿ ಹಾಡಿ, ಅವನನ್ನು ಬದುಕಿಸಿದ್ದು. ಸೋದೆ ಅರಸನ ಮೇಲೆ ಪರರಾಜರು ದಂಡೆತ್ತಿ ಬಂದಾಗ ಹಯಗ್ರೀವನ ಬಲದಿಂದ ಅಶ್ವಸೇನೆಯನ್ನೇ ನಿರ್ಮಿಸಿ, ಶತ್ರುಗಳನ್ನು ಓಡಿಸಿ ರಾಜನಿಂದ ಪೂಜಿತನಾದುದು. ಭೂತರಾಜನನ್ನು ವಶಪಡಿಸಿಕೊಂಡು ತಮ್ಮ ಪಲ್ಲಕ್ಕಿಯನ್ನು ಹೊತ್ತು ತಿರುಗುವ ಭಟನನ್ನಾಗಿಸಿಕೊಂಡದ್ದು, ಉಡುಪಿಯ ರಥೋತ್ಸವ ಕಾಲದಲ್ಲಿ ವಿಷ್ಣುದೂತರು ಬಂದು ಕರೆಯಲು ಉತ್ಸವ ಮುಗಿಯುವರೆಗೆ ಬರುವುದಿಲ್ಲವೆಂದು ಅವರನ್ನು ಹಿಂದಕ್ಕೆ ಅಟ್ಟಿದುದು—ಹೀಗೆ ಅನೇಕ ನಂಬಿಕೆಗಳು, ಐತಿಹ್ಯಗಳು ರೂಢವಾಗಿವೆ.

ಉಡುಪಿಯಲ್ಲಿನ ಶ್ರೀಕೃಷ್ಣ ದೇವಾಲಯ ಆಗಮಾದಿಗಳಲಿ ಹೇಳಿರುವ ವಾಸ್ತುಶಿಲ್ಪಕ್ರಮವಿಡಿದು ಕಟ್ಟಿದ ದೇವಾಲಯಗಳ ಮಾದರಿಯದಲ್ಲ. ಅಲ್ಲಿ "ಬಲಿಕಲ್ಲು, ಧ್ವಜಸ್ತಂಭ, ಅಂತರಾಳ, ಅರ್ಧಮಂಟಪ, ಪ್ರದಕ್ಷಿಣಾಪಥ" ಮುಂತಾದ ವಿವರಗಳು ಕಾಣಬರುವುದಿಲ್ಲ. "ದೇವತೆಯ ಪ್ರತಿಷ್ಠಾಪನೆಯ ವಿಷಯವೂ ಸ್ವಲ್ಪಮಟ್ಟಿಗೆ ಭಿನ್ನವೇ." ಭರತಖಂಡದಲ್ಲಿ ಹಿಂದೂದೇವತಾಮೂರ್ತಿಗಳೆಲ್ಲ ಸಾಮಾನ್ಯವಾಗಿ ಪೂರ್ವಕ್ಕೆ ಮುಖಮಾಡಿರುವುದೇ ಹೆಚ್ಚು. ಕೆಲವು ಸಂದರ್ಭಗಳಲ್ಲಿ ಉತ್ತರಾಭಿಮುಖವಾಗಿರುವುದೂ ಉಂಟು (ಉದಾ : ಕನ್ಯಾಕುಮಾರಿ). ಶಿವನ ಒಂದು ಲೀಲೆಯೆಂದು ಕರೆಯಲಾಗುವ ದಕ್ಷಿಣಾಮೂರ್ತಿ ಮಾತ್ರ ದಕ್ಷಿಣಕ್ಕೆ ಮುಖಮಾಡಿ ಪ್ರತಿಷ್ಠಾಪಿಸಲ್ಪಡುತ್ತದೆಂದು ಹೇಳಲಾಗುತ್ತಿದೆ. ಉಡುಪಿಯ ಶ್ರೀಕೃಷ್ಣ ವಿಗ್ರಹವನ್ನು ಮಧ್ವಾಚಾರ್ಯರು ಕ್ರಿ. ಶ. ೧೨೩೮ರಲ್ಲಿ (ಶ. ಕ. ೧೧೬೦ರ ಹೇವಿಲಂಬಿ ಸಂವತ್ಸರ ಮಾಘ–ಶುದ್ಧ ತದಿಗೆಯಂದು) ಪಶ್ಚಿಮಾಭಿಮುಖವಾಗಿ ಪ್ರತಿಷ್ಠಾಪನೆ ಮಾಡಿದ್ದಾರಾಗಲಿ, ಪೂರ್ವಮುಖವಾಗಿದ್ದ ಮೂರ್ತಿ ಕನಕದಾಸರಿಗಾಗಿ ಪಶ್ಚಿಮಾಭಿಮುಖವಾಗಿ ನಿಂತಿತೆಂಬ ವಾದ ತರ್ಕ ಬದ್ಧವಾಗಲಾರದು. ಈ ದೇವಾಲಯದ (ಮಠದ) ಮಹಾದ್ವಾರ ದಕ್ಷಿಣಾಭಿಮುಖವಾಗಿದ್ದು, ಮಹಾದ್ವಾರ ದಾಟಿದೊಡನೆ ಬಲಗಡೆ ಮಧ್ವ ಸರೋವರವೆಂಬ ಬೃಹತ್ ಕಲ್ಯಾಣಿಯೂ ಎಡಗಡೆ ಪೂರ್ವಾಭಿಮುಖವಾಗಿರುವ ಮಠದ ಪ್ರವೇಶದ್ವಾರವೂ ಇದ್ದು, ಮಠದೊಳಗಡೆ ಗರ್ಭಗುಡಿಯ ಮೂರನೆಯ ಒಂದು ಭಾಗದಲ್ಲಿ ಸಾಕ್ಷಾತ್ ಮಧ್ವಾಚಾರ್ಯರೇ ತಾವು ಸಂನ್ಯಾಸಿಗಳಾದರೂ ಶ್ರೀಕೃಷ್ಣ ಪಾದಾಂಬುಜಾರ್ಚಕರಾಗಿ ತಮ್ಮ ಹಾಗೂ ತಮ್ಮ ಎಂಟು ಜನ ಶಿಷ್ಯರ ಮತ್ತು ಅವರ ಪರಂಪರೆಯವರ ನಿತ್ಯಾರ್ಚನೆಗಾಗಿ ಸ್ಥಾಪಿಸಲ್ಪಟ್ಟ ಮೂರ್ತಿ ಇದು. ಸಾರ್ವಜನಿಕರಿಗಾಗಿ ಪ್ರತ್ಯೇಕ ಮಂದಿರವನ್ನು ನಿರ್ಮಿಸಿ ಪ್ರತಿಷ್ಠಿಸಿದ್ದಿಲ್ಲ ; ಆದ್ದರಿಂದ ಇದು ಕೇವಲ ಆ ಮಠದ ಆಸ್ತಿ ; ಮಠದ ಪರಂಪರೆಯವರ ನಿತ್ಯಾರ್ಚನೆಯ ಆಸ್ತಿ. ಈ ಪೂರ್ವದಲ್ಲಿ ಹೇಳಿದಂತೆ ವಿಧಿವತ್ತಾಗಿ ಪ್ರತಿಷ್ಠಾಪಿಸಲ್ಪಟ್ಟ ಪ್ರತಿಮೆಗಳಲ್ಲಿ ಆಧೇಯ ಶಕ್ತಿಯಿಂದ ದೇವತಾ ಸಾನ್ನಿಧ್ಯವುಂಟಾಗುತ್ತದೆಂಬ ನಂಬಿಕೆವಿಡಿದೇ ಆಚಾರ್ಯರು ತಾವು ಇರುವವರೆಗೆ ಈ ಮೂರ್ತಿಯನ್ನು ಕೈ ಮುಟ್ಟಿ ಅರ್ಚಿಸಿ ಸತ್ಯದರ್ಶನ ಮಾಡಿಕೊಂಡವರು. ತಮಗೆ ಸಮುದ್ರದಿಂದ ಲಭ್ಯವಾದ ಈ ಮೂರ್ತಿಯನ್ನು ಪಶ್ಚಿಮಕ್ಕೇ ಮುಖ ಮಾಡಿ ಪ್ರತಿಷ್ಠಾಪಿಸಿ 'ಪಶ್ಚಿಮ ಸಮುದ್ರಾಧೀಶ್ವರ'ನನ್ನಾಗಿ ಮಾಡಿದರೆನ್ನುವುದೇ ಸಮೀಚೀನ ವಿಚಾರವೆಂದು ತೀರ್ಮಾನಿಸಬಹುದು. ದರ್ಶನಾಪೇಕ್ಷಿಗಳಾದ ಲೋಕದ

ಜನಕ್ಕಾಗಿ ಪಶ್ಚಿಮ ಭಾಗದಲ್ಲಿ ಒಂದು ಕಿಂಡಿಯನ್ನು ಮಾಡಿಸಿ, ಅದನ್ನು ಧೂಳಿದರ್ಶನ ಕಿಂಡಿಯೆಂದು ಮೊದಲೇ ಹೆಸರಿಸಿದ್ದರೆನ್ನುವುದು ಹೆಚ್ಚು ಸಮಂಜಸ. ಈ ಕಿಂಡಿಗೆ 'ಕನಕನ ಕಿಂಡಿ' ಎಂದು ಹೆಸರು ಬಂದುದು, ಈ ಮಠದ ಪರಂಪರೆಯಲ್ಲಿ ಕ್ರಾಂತಿಕಾರಕ ಸುಧಾರಣೆಯನ್ನು ಮಾಡಿದ, ಪರಮತಗಳ ವಿಷಯದಲ್ಲಿ ಅತ್ಯಂತ ಔದಾರ್ಯದಿಂದ ವರ್ತಿಸಿದ, ಗುಣಗ್ರಾಹಿಗಳಾದ ವಾದಿರಾಜರ (೧೪೮೦-೧೬೦೦) ಕಾಲದಲ್ಲೆಂದು ಹೇಳಬಹುದು.

**ಉಡುಪಿಯ ಮಠದಲ್ಲಿ ಕನಕದಾಸರಿಗೆ ಗೌರವಸ್ಥಾನ**

ಉಡುಪಿಯ ಮಾಧ್ವಮಠದ ಪರಂಪರೆಯಲ್ಲಿ ಮಧ್ವಾಚಾರ್ಯರ ನಂತರ ೧೮ನೆಯ ಪೀಠಾಧಿಪತಿಗಳಾಗಿ 'ಸೋದೆ'ಮಠದ ಅಧಿಕಾರ ವಹಿಸಿಕೊಂಡ ವಾದಿರಾಜರು ದ್ವಿತೀಯ ಮಧ್ವಾಚಾರ್ಯರೇ ಎಂಬ ಖ್ಯಾತಿಗೆ ಪಾತ್ರರಾಗಿದ್ದಾರೆ. ಕ್ರಿ.ಶ. ೧೬೧೪ರ ಕಾಲದ ಈ ಮಠಕ್ಕೆ ಸಂಬಂಧಿಸಿದ ಒಂದು ಶಾಸನದಲ್ಲಿ "........ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀ ಹಯಗ್ರೀವ ದೇವ ಪಾದಪದ್ಮಾರಾಧಕ ಶ್ರೀ ಮದ್ವಾದಿರಾಜ ತೀರ್ಥಪಾದಂಗಳು....."[೭] ಎಂದು ಹೇಳಲಾಗಿದೆ. ಶ್ರೀಮನ್ಮಧ್ವಾಚಾರ್ಯರಿಗೆ ಹೇಳಬೇಕಾದ "ಶ್ರಿಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ....." ಎಂಬ ಮಾತನ್ನು ಲೇಖನದಲ್ಲಿ ಜನಪ್ರಿಯಗೊಳಿಸಿದುದರ ಸ್ಪಷ್ಟಉಲ್ಲೇಖವೇ ಆಗಿದೆ. ಈ ಪೂರ್ವದಲ್ಲಿ ಉಲ್ಲೇಖಿಸಿದಂತೆ ಕ್ರಿ.ಶ. ೧೪೮೦ರಲ್ಲಿ ಜನಿಸಿ ೧೬೦೦ರ ಹೊತ್ತಿಗೆ ವೃಂದಾವನಸ್ಥರಾದ ಇವರು ೧೨೦ ವರ್ಷಗಳಷ್ಟು ದೀರ್ಘಕಾಲ ಬದುಕಿದವರು. ಇವರು ಉಡುಪಿ ಶ್ರೀಸೋದೆ ಮಠದ ಪರಂಪರೆಯ ಗುರುಗಳಾಗಿದ್ದ ದೀರ್ಘಕಾಲದ ಅವಧಿಯಲ್ಲಿ ಮಡಿವಂತಿಕೆಯನ್ನು ಪೂರ್ಣ ತೆಗೆದು ಹಾಕಲಾಗದಿದ್ದರೂ, ಆ ವಿಷಯದಲ್ಲಿ ಅತ್ಯಂತ ಔದಾರ್ಯದಿಂದಲೂ, ಸ್ವತಂತ್ರಪ್ರವೃತ್ತಿಯಿಂದಲೂ ನಡೆದು ಮಠದ ಕೀರ್ತಿಯನ್ನು ದಿಗಂತ ವಿಶ್ರಾಂತಗೊಳಿಸಿದರೆಂದು ಹೇಳಲಾಗುತ್ತಿದೆ. "ಮೊಗೇರರಾಗಿದ್ದ ಮಟ್ಟುಗ್ರಾಮದವರನ್ನು ಬ್ರಾಹ್ಮಣರೆಂದೇ ಸ್ವೀಕರಿಸಿ ಪರಿವರ್ತನೆ ಮಾಡಿದ ಮಹಾಸಾಹಸಿಗಳು ; ಸ್ವರ್ಣಕಾರರ ಸಾಮಾಜಿಕನೆಲೆಯನ್ನು ಉದ್ಧರಿಸಿದ

---

೭. ಉಡುಪಿಯ ಶ್ರೀಕೃಷ್ಣದೇವಾಲಯವನ್ನು ವಿಜಯನಗರದ ವೀರವೆಂಕಟಪತಿ ದೇವ ಮಹಾರಾಜರು ಮತ್ತು ಇವರ ಅಧೀನರಾಗಿ ತುಳು ರಾಜ್ಯವನ್ನಾಳುತ್ತಿದ್ದ ವೆಂಕಟಪ್ಪನಾಯಕರೂ ಜೀರ್ಣೋದ್ಧಾರ ಮಾಡಿಸಿದಾಗಿನ ಕಾಲದಲ್ಲಿ ಕೆತ್ತಿಸಿದ ಶಾಸನ.

-ಪ್ರೊ॥ ಎಸ್. ಕೆ. ರಾಮಚಂದ್ರರಾವ್ : ಉಡುಪಿ ಪರ್ಯಾಯ ಸ್ಮರಣ ಸಂಪುಟ. ೧೯೬೮ ಪು. ೪೫.

ಸಮಾಜ ಸುಧಾರಕರು"....[7]a) ಶೈವ–ವೈಷ್ಣವ ಸಾಮರಸ್ಯಕ್ಕಾಗಿ ಪ್ರಯತ್ನ ಪಟ್ಟವರು. ಧರ್ಮಸ್ಥಳದಲ್ಲಿ ಶಿವಲಿಂಗ ಪ್ರತಿಷ್ಠೆ ಮಾಡಿಸಿ ಆ ಭಾಗದಲ್ಲಿ ವಿಶೇಷವಾಗಿದ್ದ ಜೈನ–ಮಾಧ್ವ–ಶೈವ ಸಮಾಜಗಳಲ್ಲಿ ಮೈತ್ರಿ ಅಧಿಕಗೊಳ್ಳುವಂತೆ ಮಾಡಿದರು. ಇಂಥ ಅದ್ಭುತ ವ್ಯಕ್ತಿತ್ವ ಗಳಿಸಿದ್ದ ವಾದಿರಾಜರಲ್ಲಿ ಕನಕದಾಸರಿಗೆ ಅತ್ಯಂತ ಸಲಿಗೆ ಇದ್ದುದು ಕಂಡು ಬರುತ್ತದೆ. ವಾದಿರಾಜರು, ತಮ್ಮ ಗುರುವರ್ಯರಾದ ವ್ಯಾಸರಾಯರ ಸಂಕಲ್ಪಾನುಗ್ರಹಕ್ಕೆ ಪಾತ್ರರಾದರೆಂಬ ವಾತ್ಸಲ್ಯವನ್ನಿಟ್ಟುಕೊಂಡಿದ್ದರು, ಕನಕದಾಸರಲ್ಲಿ. ಇವರ ಹಿರಿಮೆಯನ್ನು ಅರ್ಥಮಾಡಿಕೊಂಡಿದ್ದು ಇವರ ಅಪರೋಕ್ಷಜ್ಞಾನದ ಔನ್ನತ್ಯವನ್ನು ಅರಿತವರಾಗಿದ್ದರು. ಇವರೊಡನೆ ಅನೇಕ ಕಡೆ ಸಂಚಾರವನ್ನು ವಾದಿರಾಜರು ಮಾಡಿದ್ದರು.

ಒಮ್ಮೆ ಬೇಲೂರಿನ ಚನ್ನಕೇಶವಸ್ವಾಮಿಯ ಸನ್ನಿಧಿಯಲ್ಲಿ ಇಬ್ಬರೂ ಇದ್ದಾಗ ಕನಕದಾಸರು ಬಹಳ ಹೊತ್ತು ಚನ್ನಕೇಶವನ ಭಜನೆ ಮಾಡಿ ಆನಂದದಲ್ಲಿ ಓಲಾಡುತ್ತ ಸ್ವಾಮಿಯು ಬಾಲಕೇಶವನಾಗಿ ಮುದ್ದುಕೇಶವನಾಗಿ ತನ್ನೆದುರಿಗೆ ಗೋಚರಿಸಬೇಕೆಂಬ ಬಯಕೆಗೂಡಿ, ಭಕ್ತಿಯ ಪರಾಕಾಷ್ಠಭಾವಕ್ಕೇರಿ ಲೋಕವನ್ನೇ ಮರೆತು ಧ್ಯಾನಾಸಕ್ತರಾದರು. ಪಂಚಪ್ರಾಣಗಳು ಕಳೆಯೇರಿದವು, ಕಣ್ಗಳು ಆನಂದ ಬಾಷ್ಪ ಸುರಿಸಿದವು. ಮೈಯೆಲ್ಲ ಪುಳಕವೇರಿ ಗದ್ಗದಿತ ಕಂಠನಾಗಿದ್ದಂತೆ ತನ್ನ ಹೃದಯಗದ್ದುಗೆಯ ಮೇಲೆ ಚನ್ನಕೇಶವ ಬಾಲಕೇಶವನಾಗಿ ಕುಣಿದಾಡಿದಾಗ ಸಂತೋಷಭರಿತನಾದ ಕನಕದಾಸ ವಾದಿರಾಜರಿಗೆ–(ಏಕತಾಳದ ಪೂರ್ವಿರಾಗದಲ್ಲಿ ಹಾಡುವ–)

ಮಗುವು ಕಾಣಿರಣ್ಣ । ಮಾಯದ । ಮಗುವು ಕಾಣಿರಣ್ಣ ॥ಪ॥
ಸುಗುಣ ವಾದಿರಾಜರೇ ಮೂ । ಜಗವನು ತನ್ನುದರದೊಳಿಟ್ಟ ॥ಅ.ಪ॥

..........................................................................................

ಶ್ರುತಿತತಿಗೆ ಗೋಚರಿಸದ ಅಚ್ಯುತನು ಭುವನಾದಿ ಮೂರ್ತಿ ।
ರತಿಪತಿಪಿತನು ಶೇಷಾದ್ಯಾರಾಧ್ಯನು ॥
ಕ್ಷಿತಿಗಧಿಕ ವೇಲಾಪುರದ ಪತಿ ವೈಕುಂಠ ಕೇಶವನು ।
ಯತಿಯೆ ನೀನೋಡಯ್ಯ ಶರಣಾಗತನ ತೊಡೆಯಿಂ ಮಾಯವಾದ ॥೫॥
॥–ಮಗುವು ಕಾಣಿರಣ್ಣ ॥[೮]

---

7a. ಅದೇ.

8. ಈ ಪದ್ಯ ಕೆಲವು ಪ್ರತಿಗಳಲ್ಲಿ ಇಲ್ಲ. ಸಂತೇನಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿಗಳೆಂಬುವರು ೧೯೬೮ರಲ್ಲಿ ಪ್ರಕಟಿಸಿದ ಕನಕದಾಸರು ಜೀವನ ಮತ್ತು ಪದಗಳು–ಎಂಬ ಪ್ರತಿಯಲ್ಲಿದೆ. ಮಾಧ್ವ

–ಈ ಪದ್ಯವನ್ನು ಹಾಡಿ ತೋರಿಸುತ್ತಾನೆ. ಅದೇ ಎತ್ತರಕ್ಕೇರಿದ್ದ ವಾದಿರಾಜರು ತಾವೂ ತಮ್ಮ ಹೃದಯಗುಹೆಯಲ್ಲಿ ಕಂಡು ಆನಂದಿಸಿದರೆಂಬ ಆಖ್ಯಾಯಿಕೆಯುಂಟು. ಈ ಪ್ರಸಂಗ ಪವಾಡದ ಕಕ್ಷೆಗೆ ಬರುವುದಿಲ್ಲ.[೯] ಇದು ಕೇವಲ ಭಕ್ತಿಯ ಹುಚ್ಚು ನೆತ್ತಿಗೇರಿ ತನ್ಮಯತೆಯುಂಟಾದಾಗ ಭಕ್ತನಾದವನ ಭಾವನೆಯಲ್ಲಿ ಮೂಡಿನಿಲ್ಲುವ ಖಂಡ ಸಾಕ್ಷಾತ್ಕಾರದ ಒಂದು ಹಂತ. ಮುಕ್ತ ಮನಸ್ಸಿನ ಮಾನಸಪೂಜಾಸಂಭ್ರಮದಲ್ಲಿ ಮುಳುಗಿ ಹೋದ ಉಪಾಸಕರ ಮನಸ್ಸೆಲ್ಲ ಕಣ್ಣಾಗುತ್ತದೆ. ಶ್ರದ್ಧೆಯಿಂದ ತಾನು ಉಪಾಸನೆ ಮಾಡುತ್ತಿದ್ದ ಅರ್ಚಾಮೂರ್ತಿ ಭಕ್ತನ ಭಾವನೆಗನುಗುಣವಾಗಿಯೇ ಮೂರ್ತೀಭವಿಸಿ ಭಾವಕೋಶದುದ್ದಗಲಕ್ಕೂ ತುಂಬಿ ನಿಲ್ಲುವ ಸ್ಥಿತಿ. ಇದೂ ಒಂದು ರೀತಿಯಲ್ಲಿ ಪೂಜೆಯೇ. ಇಲ್ಲಿ ಷೋಡಶೋಪಚಾರಗಳಿಲ್ಲ. ಅಷ್ಟವಿಧಾರ್ಚನೆಯಿಲ್ಲ. ಶರೀರವೇ ದೇಗುಲ ; ಹೃದಯವೇ ಮಂಟಪ ; ಜೀವ ಚೈತನ್ಯವೇ ಅರ್ಚಾಮೂರ್ತಿ ; ಅಲ್ಲಿ ಸನ್ನಿಹಿತಗೊಂಡುದೇ ಪರಮಾತ್ಮನ ಬಿಂಬ ; ಭಕ್ತನಾದವನ ಅಖಂಡ ಸ್ಮೃತಿಯೇ ಧ್ಯಾನ ಸಾಮಾನ್ಯವಾಗಿ ದಾಸಕೂಟದ ಪ್ರಧಾನರೆನಿಸಿದ ಪುರಂದರದಾಸರು ಕನಕದಾಸರ ಭಕ್ತಿ ಜೀವನ ಚರ್ಯೆಯಲ್ಲಿ ಇಂಥ ದೃಷ್ಟಾಂತಗಳನ್ನು ಹೆಚ್ಚಾಗಿ ಕಾಣುತ್ತೇವೆ.[೧೦]

---

ಸಂಪ್ರದಾಯದಲ್ಲಿ ಮಧ್ವಾಚಾರ್ಯರು ಮತ್ತು ವಾದಿರಾಜರನ್ನುಳಿದು ಯಾರನ್ನೂ ತಮ್ಮ ಪದ್ಯಗಳಲ್ಲಿ ಹೆಸರಿಸಿರುವುದು ಕಂಡು ಬರುತ್ತಿಲ್ಲ.

೯. ಇದು ಅಖಂಡ ಸಾಕ್ಷಾತ್ಕಾರವೂ ಅಲ್ಲ ; ಭೂಮದರ್ಶನವೂ ಅಲ್ಲ. ಕೇವಲ ಖಂಡ ಸಾಕ್ಷಾತ್ಕಾರವೆಂದು ಕರೆಯಿಸಿಕೊಳ್ಳುತ್ತದೆ. ಗೀತೆಯಲ್ಲಿ ಹೇಳುವ ಕೆಳಗಿನ ಮಾತಿಗೊಂದು ದೃಷ್ಟಾಂತವೆನ್ನಬಹುದು.

೧೦. (i) ಪುರಂದರದಾಸರ "ಬಾರಯ್ಯ ವೆಂಕಟಕೃಷ್ಣ! ಬಾರಯ್ಯ ವೆಂಕಟಕೃಷ್ಣ ನೀನೆನಗೆ। ಧಾರುಣಿಯೊಳು ನಿನ್ನ ಮೂರುತಿ ತೋರುತ..." ಎಂದು ಮೊದಲಾಗುವ ಪದ್ಯದಲ್ಲೂ, "ಕೂಸಿನ ಕಂಡಿರಾ ಗೋಪಾಲಕೃಷ್ಣನ ಕಂಡಿರಾ...." ಪದ್ಯದಲ್ಲೂ, "ಹರಿಕುಣಿದಾ ನಮ್ಮ ಹರಿ ಕುಣಿದಾ...." ಪದ್ಯದಲ್ಲೂ "ಕಂಡೆನಾಕನಸಿನಲ್ಲಿ ಗೋವಿಂದನ..." ಎಂಬುದರಲ್ಲೂ ಈ ಭಕ್ತಿ ಪ್ರಕಟವಾಗಿದೆ. ಭಾವ ಕಣ್ಣಿಂದ ಕಂಡ ದೇವಸೌಂದರ್ಯದ ಅನುಭೂತಿಯೇ ಇದು.

(ii) ಹರಿಹರ ಮಹಾಕವಿಯ ಕುಂಬಾರ ಗುಂಡಯ್ಯನ ರಗಳೆಯಲ್ಲಿ "ಆಡಿದನಾ ಗುಂಡನ ಮುಂದೀಶ್ವರ..." ಎಂದು ಹೇಳಿರುವುದೂ ಇದೇ. ಅಲ್ಲಿ ಈಶ್ವರ ಆಡಿದ್ದು ಗುಂಡಯ್ಯನ ಹೃದಯ ಮಂಟಪದಲ್ಲಿ; ಬಾಹ್ಯಜಗತ್ತಿನಲ್ಲಿ ಅಲ್ಲ. ಅಥವಾ ಭಕ್ತಕವಿಯ ಭಾವಸಾಮ್ರಾಜ್ಯದಲ್ಲಿ ಯಾದರೂ ಆದೀತು; ಲೋಕದ ಪ್ರದರ್ಶನಕ್ಕೆ ದೇವರನ್ನು ಭಕ್ತ ಕಾಣಿಸಿದನೆಂದು ತಿಳಿಯಬಾರದು,

ಮಹಾದಾರ್ಶನಿಕರಾದ ವಾದಿರಾಜರು ಕನಕದಾಸರ ಭಕ್ತಿಭಾವದ ಔನ್ನತ್ಯವನ್ನು ವ್ಯಾಸರಾಯರಲ್ಲಿ ತಾವು ವಿದ್ಯಾಭ್ಯಾಸ ಮಾಡುತ್ತಿದ್ದ ಕಾಲದಿಂದಲೂ ಕಂಡವರು. ಅಂದಿನಿಂದಲೂ ಇವರ ಬಗೆಗೆ ಗೌರವಾದರಗಳನ್ನಿಟ್ಟುಕೊಂಡವರು. ತಾವು ಮುಂದೆ ಉಡುಪಿಯ ಅಷ್ಟಮಠಗಳಲ್ಲೊಂದಾದ ಸೋದೆಮಠದ ಸ್ವಾಮಿತ್ವ ಸ್ವೀಕರಿಸಿದ ಮೇಲೆ ಉಡುಪಿಕ್ಷೇತ್ರದ ಚರಿತ್ರೆಯಲ್ಲಿ ಕನಕದಾಸರಿಗೂ ಒಂದು ಸ್ಥಾನವಿಶೇಷವನ್ನು ಕಲ್ಪಿಸಲು ಇವರಿಗಾಗಿ ಧೂಳಿದರ್ಶನ ಕಿಂಡಿಯ ಎದುರುಗಡೆಯಲ್ಲಿಯೇ ಒಂದು ಮಂಟಪವನ್ನು ನಿರ್ಮಾಣ ಮಾಡಿಸಿ, ಅವರು ಉಡುಪಿಗೆ ಬಂದಾಗಲೆಲ್ಲ ಆ ಮಂಟಪದಲ್ಲಿ ವಾಸಿಸುವುದಕ್ಕೆ ಅನುಕೂಲ ಕಲ್ಪಿಸಿದರು. ತಾನು ಇಚ್ಛೆಸಿದಾಗಲೆಲ್ಲ ಶ್ರೀಕೃಷ್ಣಸ್ವಾಮಿಯನ್ನು ಧೂಳಿದರ್ಶನ ಕಿಂಡಿಯಿಂದ ನೋಡಬಹುದೆಂದು ತಿಳಿಸಿ. ಅದಕ್ಕೆ ಕನಕನ ಕಿಂಡಿಯೆಂದೇ ನಾಮಕರಣ ಮಾಡಿದರು. ಆದರೆ ಸಂಪ್ರದಾಯದ ಕಟ್ಟುಪಾಡುಗಳನ್ನು ಸಡಿಲಿಸುವುದಕ್ಕೆ ಅವರೂ ಇಚ್ಛೆಸಲಿಲ್ಲ; ಅದು ಸುಲಭವೂ ಆಗಿರಲಿಲ್ಲ. ಆ ಬಗೆಗೆ ಕನಕದಾಸರು ಚಳುವಳಿ ಹೂಡಲಿಲ್ಲ. ಇದೇ ಕನಕನ ಕಿಂಡಿಯ ಬಗೆಗಿನ ಸ್ವಾರಸ್ಯ.ಚತುರ್ವರ್ಣವ್ಯವಸ್ಥೆಯನ್ನು ಕನಕದಾಸರು ಒಪ್ಪಿಕೊಂಡದ್ದರಿಂದ ಇವರಿಗೆ ಚಳುವಳಿ ಮಾಡುವ ಅವಶ್ಯಕತೆಯಾದರೂ ಏನು? ಶೂದ್ರನಾಗಿದ್ದುಕೊಂಡೇ ತನಗೆ ಬೇಕಾದುದನ್ನು ಪಡೆದುಕೊಂಡು ತೃಪ್ತನಾದ ಎನ್ನುವುದೇ ಇಲ್ಲಿ ಗ್ರಾಹ್ಯಾಂಶ.

ಮಧ್ವಮತ ಪ್ರಮೇಯದಲ್ಲಿ ಕರ್ಮ–ಪುಣ್ಯ–ಪಾಪ–ಉಪಾಸನೆ ಸ್ವರೂಪ– ಯೋಗ್ಯತೆ ಇತ್ಯಾದಿಗಳನ್ನನುಸರಿಸಿ ಜೀವಗಣವಲ್ಲಿ ಭೇದ ಉಂಟಲ್ಲವೆ! ಕೃಷ್ಣ ದೇವರ ಪೂಜೆ ಇಂದಿಗೂ ಅಲ್ಲಿರುವ ಮಾಧ್ವಪರಂಪರೆಯ ಎಂಟು ಸನ್ಯಾಸಿಗಳ ಪರಂಪರೆಯ ಸೊತ್ತಾಗಿಯೇ ಉಳಿದಿರುವುದಲ್ಲದೆ ಪೂಜಾರಿ – ಪುರೋಹಿತ – ತಂತ್ರಿ – ಪಾಠಾಳಿ ಮೊದಲಾದ ಯಾವ ಗೋಜೂ ಅದಕ್ಕಿಲ್ಲ. ಈ ಯತಿಗಳಲ್ಲದೆ ಬೇರೆ ಯಾರೂ 'ತಳಂಗಲ್ಲಿಗೆ' ಇಳಿಯುವಂತೆಯೇ ಇಲ್ಲ, ವಿಗ್ರಹದ 'ಧ್ರುವಬೇರನ್ನು' ಸ್ಪರ್ಶಿಸುವಂತಿಲ್ಲ. ಪೂಜಾಕಾರ್ಯಕ್ರಮದಲ್ಲಿ ನೇರವಾಗಿ ಪಾಲ್ಗೊಳ್ಳುವಂತಿಲ್ಲ. ಒಟ್ಟಿನಲ್ಲಿ ಗುಡಿಯ ಸರ್ವಾಧಿಕಾರವೂ ಪರ್ಯಾಯ ಸ್ವಾಮಿಗಳದೇ ಆಗಿ ಇಂದಿಗೂ ಅದು ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಿದೆ ; ಮಡಿವಂತಿಕೆಯನ್ನು ಕಾಪಾಡಿಕೊಂಡು ಬಂದಿದೆ. ಇಂಥ ಸ್ಥಿತಿಯಲ್ಲಿ ವಾದಿರಾಜರೇ ಆಗಲಿ ಇನ್ನಾರೇ ಆಗಲಿ ಕನಕದಾಸರಿಗೆ ಇದಕ್ಕೂ ಹೆಚ್ಚಿನ ಸೌಲತ್ತುಗಳನ್ನು ಆ ಸ್ಥಾನದಲ್ಲಿ ಉಂಟುಮಾಡುವುದು ಸಾಧ್ಯವೇ ಇಲ್ಲದ ಮಾತು.

ಕನಕದಾಸರ ಭಕ್ತಿ ಕಾರಣವಾಗಿ ವಿಗ್ರಹವು ತಿರುಗಿನಿಂತ ಘಟನೆ ನಡೆದಿದ್ದರೆ ದಾಸಕೂಟ ಸುಮ್ಮನಿದ್ದೀತೇ ? ಆ ಘಟನೆಗೆ ಕುರಿತಂತೆ ಹಾಡುಗಳ ಮೇಲೆ ಹಾಡು ರಚಿಸಿ ಜಯದುಂದುಭಿ ಬಾರಿಸುತ್ತಿದ್ದರು. ಆದರೆ ಯಾರೂ ಈ ಬಗೆಗೆ ಚಕಾರ ಶಬ್ದವೆತ್ತಿದ್ದು ಕಂಡುಬರುತ್ತಿಲ್ಲ. ಉಡುಪಿ ಮಠದವರಿಂದ ಪ್ರಕಟಿಸಿದ ಗ್ರಂಥಗಳಲ್ಲಿ ಈ ಪ್ರಸಕ್ತಿಯೇ ಇಲ್ಲ. ಕನಕದಾಸರ ಪದ್ಯಗಳಲ್ಲೂ ಉಲ್ಲೇಖವಿಲ್ಲ. ಆದ್ದರಿಂದ ಇದು ಕನಕದಾಸರ ಶ್ರೀಕೃಷ್ಣನಿಷ್ಠ ಭಕ್ತಿಯ ಅಸೀಮ ನಿಲುವಿನ ಬಗೆಗೆ ಜನತೆ ಕಲ್ಪಿಸಿಕೊಂಡ ಐತಿಹ್ಯವಾಗಿರಬಹುದು.

**ಕೋಣಮಂತ್ರ : ಯಮನ ಅವತಾರ**

ಕನಕದಾಸರು ಸಾಕ್ಷಾತ್ ಯಮನ ಅವತಾರವೆಂದೂ, ಅವರು ಕೋಣಮಂತ್ರವನ್ನು ಜಪಿಸಿ ಕೋಣವನ್ನು ಬರಮಾಡಿಕೊಂಡು ಅದರಿಂದ ವ್ಯಾಸರಾಯರು ಕಟ್ಟಿಸುತ್ತಿದ್ದ ಕೆರೆಯೊಳಗಿನ ದೊಡ್ಡದೊಂದು ಬಂಡೆಗಲ್ಲನ್ನು ಸೀಳಿಸಿ ತೂಬಿನ ನೀರು ಸರಾಗವಾಗಿ ಹರಿದು ಹೋಗುವಂತೆ ಮಾಡಿ ವ್ಯಾಸರಾಯರ ಮನಸ್ಸಿಗೆ ಸಂತೋಷವನ್ನು ಉಂಟು ಮಾಡಿದ ಕಥೆ ಪ್ರಚಲಿತದಲ್ಲಿದೆ. ಇದು ಎಷ್ಟರಮಟ್ಟಿಗೆ ಸತ್ಯಸಂಗತಿ ಎಂಬುದು ವಿಚಾರಾರ್ಹವಾದುದು.

ವ್ಯಾಸರಾಯರ ಬಗೆಗೆ ಅಪಾರ ಭಕ್ತಿವಿಶ್ವಾಸಗಳನ್ನಿಟ್ಟುಕೊಂಡಿದ್ದ ಶ್ರೀಕೃಷ್ಣ ದೇವರಾಯ ಮಹಾರಾಜನು ಅವರಿಗೆ ಈಗ ಆಂಧ್ರದಲ್ಲಿರುವ ಬೆಟ್ಟಕೊಂಡ (ವ್ಯಾಸಸಮುದ್ರವೆಂದು ಈಗ ಕರೆಯುತ್ತಿರುವ) ಗ್ರಾಮವನ್ನು ಸರ್ವಮಾನ್ಯ ಏಕ ಭೋಗ್ಯ ದತ್ತಿಯನ್ನಾಗಿ ಕ್ರಿ. ಶ. ೧೫೨೬ ನೆಯ ಫೆಬ್ರವರಿ ೨೪ ನೆಯ ತಾರೀಖಿನಂದು ಶಾಸನ ಬರೆಸಿಕೊಟ್ಟರು.[೧೧] ರಾಯರು ಅದನ್ನು ಮೂರುನೂರ

---

೧೧. ಪುರಂದರದಾಸರನ್ನು ಮೊಟ್ಟಮೊದಲು ಹೆಸರಿಸಿರುವ ಬಳ್ಳಾರಿಜಿಲ್ಲಾ ಕಮಲಾಪುರದ ಶಾಸನ. ಈ ಶಾಸನ ಶ್ರೀ ಪಾಂಡುರಂಗರಾವ್ ದೇಸಾಯಿಯವರಿಂದ ಪತ್ತೆಮಾಡಲ್ಪಟ್ಟಿದ್ದು, ಎಪಿಗ್ರಾಫಿಯ ಇಂಡಿಕಾದಲ್ಲಿ (ಸಂ–೨೧, ಪು. ೧೪೯ರ ಮುಂದೆ) ಪ್ರಕಟಗೊಂಡಿದೆ. ಇದು ಶಾ. ಶಕ ೧೪೪೭ನೆಯ ಪಾರ್ಥಿವನಾಮ ಸಂವತ್ಸರ ಫಾಲ್ಗುಣ ಶುದ್ಧ ದ್ವಾದಶಿ (ಕ್ರಿ. ಶ. ೨೪–೨–೧೫೨೬) ರಂದು ಕೃಷ್ಣದೇವರಾಯ ವ್ಯಾಸರಾಯರಿಗೆ ಬೆಟ್ಟಕೊಂಡ ಗ್ರಾಮವನ್ನು ಸರ್ವಮಾನ್ಯವಾಗಿ ಕೊಟ್ಟ ದಾನ ವಿಷಯಕ್ಕೆ ಸಂಬಂಧಿಸಿದ್ದು.

ಪ್ರೊ॥ ಎಸ್. ಕೆ. ರಾಮಚಂದ್ರರಾವ್ (ಪ್ರ. ಸಂ) ಪುರಂದರ ಸಾಹಿತ್ಯದರ್ಶನ ಭಾಗ–೧, ಪ್ರಸ್ತಾವನೆ ಪು. ೫ ನೋಡಿ.

ಎಂಟು ಜನ ವಿದ್ವಾಂಸರಿಗೆ ವಿದ್ಯಾದಾನವಾಗಿ ಹಂಚಿಕೊಟ್ಟರು. ಮುಂದೆ ಅಲ್ಲಿ ಒಂದು ಕೆರೆಯನ್ನು ಕಟ್ಟಿಸಬೇಕೆಂದು ಸಂಕಲ್ಪ ಮಾಡಿ ಆ ಕಾರ್ಯಕ್ಕೆ ಪ್ರವೃತ್ತರಾಗಿದ್ದ ಕಾಲದಲ್ಲಿ ಕನಕದಾಸರಿಗೆ ಸಂಬಂಧಿಸಿದ ಆ ಅಘಟಿತ ಘಟನೆಯ ಒಂದು ಕಥೆ ಹೆಣೆದುಕೊಂಡಿದೆ. ಕಥೆ ಇಷ್ಟು : ರಾಯರ ಕೆರೆ ಕಟ್ಟಿಸುವಾಗ ಕೆರೆಯ ತೂಬಿನ ಬಳಿ ಒಂದು ದೊಡ್ಡ ಬಂಡೆಗಲ್ಲು ಅಡ್ಡಲಾಗಿ ನಿಂತುಕೊಂಡಿತ್ತು. ಅದನ್ನು ನಿವಾರಿಸುವುದು ಕೆಲಸಗಾರರಿಗೆ ಒಂದು ದೊಡ್ಡ ಸಮಸ್ಯೆಯಾಯಿತು. ಅದನ್ನು ತೆಗೆದು ಹಾಕದಿದ್ದರೆ ನೀರು ತೂಬಿನಿಂದ ಸರಾಗವಾಗಿ ಹರಿದು ಹೋಗುವಂತಿರಲಿಲ್ಲ. ಇದು ರಾಯರಿಗೂ ಕಿರಿಕಿರಿಯನ್ನುಂಟುಮಾಡಿತು. (ಕೆಲವರು ಕಾಲುವೆ ತೋಡುವಾಗ ಅಲ್ಲಿ ಒಂದು ದೊಡ್ಡ ಬಂಡೆ ಅಡ್ಡಬಂದಿತೆಂದು ಹೇಳುತ್ತಾರೆ.) ಕಥೆಯ ಹರವು ಹೇಗೇ ಇರಲಿ : ಕೆರೆಯ ಕೆಲಸಕ್ಕೆ ಅಡ್ಡಿಯಾಗಿ ಒಂದು ದೊಡ್ಡ ಬಂಡೆ ಅಡ್ಡಬಂದಿತ್ತೆಂಬುದು ಮುಖ್ಯ ವಿಷಯ. ಇದರ ನಿವಾರಣೋಪಾಯವನ್ನು ಕುರಿತು ರಾಯರು ಚಿಂತಿಸುತ್ತಿದ್ದ ಸಮಯಕ್ಕೆ ಸರಿಯಾಗಿ ಕನಕದಾಸ ವ್ಯಾಸರಾಯರನ್ನು ಹುಡುಕಿಕೊಂಡು ಅಲ್ಲಿಗೆ ಬಂದು, ತನಗೆ ಮಂತ್ರೋಪದೇಶವಾಗಬೇಕೆಂದು ಬೇಡಿಕೊಂಡನಂತೆ. ಆಗ ರಾಯರು "ಕುರುಬನಿಗೆಂಥ ಮಂತ್ರವೋ ಕೋಣಮಂತ್ರ" ಎಂಬ ಮಾತೇ ಮಂತ್ರವಾಗಿ 'ಕೋಣ' 'ಕೋಣ' ಎಂದು ಜಪಿಸುತ್ತ ಕುಳಿತು ಬಿಟ್ಟರಂತೆ. ಆ ಕೂಡಲೆ ಯಮಧರ್ಮರಾಯನ ವಾಹನವಾದ ಕೋಣ ಪ್ರತ್ಯಕ್ಷವಾಗಿ ನಿಂತು ಬಿಟ್ಟಿತಂತೆ. ಆಗ ಕನಕದಾಸ "ಸ್ವಾಮಿ, ಕೋಣ ಬಂತು ಅಪ್ಪಣೆಯಾಗಲಿ" ಎಂದು ಕೇಳಿಕೊಂಡ. ಅದಕ್ಕೆ ರಾಯರು ತಮಗೊಂದು ಸಮಸ್ಯೆ ತಂದೊಡ್ಡಿದ್ದ ಬಂಡೆಯನ್ನು ಸೀಳಿ ಹಾಕುವಂತೆ (ಇನ್ನೊಂದು ಹೇಳಿಕೆ ಪ್ರಕಾರ ಬಂಡೆಯನ್ನು ಎಳೆದು ಹಾಕುವಂತೆ) ತಿಳಿಸಿದರಂತೆ. ಕೋಣ ಕನಕದಾಸರ ಅಪ್ಪಣೆಯಂತೆ ಬಂಡೆಯನ್ನು ಸೀಳಿ ಹಾಕುವದೋ ಅಥವಾ ಕಿತ್ತುಬಿಸಾಡುವುದೋ ಇನ್ನೊಂದೋ ಆ ಕಾರ್ಯವನ್ನು ಸಮರ್ಪಕವಾಗಿ ಮಾಡಿ, ಇದ್ದಕ್ಕಿದ್ದಂತೆ ಮಾಯವಾಗಿ ಬಿಟ್ಟಿತಂತೆ[೧೨] ಈ ಘಟನೆಯ ಫಲವಾಗಿ ವ್ಯಾಸರಾಯರಿಗೆ ಕನಕದಾಸರ ಬಗೆಗೆ ಅಪಾರ ಗೌರವಾದರಗಳುಂಟಾಗಿಬಿಟ್ಟವು.

---

೧೨. ಇದೇ ಮಾದರಿಯ ಕಥೆಯೊಂದು ಅದೃಶ್ಯಕವಿ (ಕ್ರಿ.ಶ. ಸು ೧೫೨೫) ವಿರಚಿತ ಪ್ರೌಢರಾಯನ ಕಾವ್ಯದಲ್ಲಿ ಬರುತ್ತದೆ. ಇಂಥ ಆಶ್ಚರ್ಯಾದ್ಭುತ ಕಥೆಗಳೂ, ಒಬ್ಬರಿಂದೊಬ್ಬರಿಗೆ ಹರಡಿ ಹೇಗೆ ಅನುಕರಣೆ ಯೋಗ್ಯವಾಗುತ್ತಿದ್ದುವೆಂಬುದಕ್ಕೆ ಒಳ್ಳೆಯ ಉದಾಹರಣೆಯಾಗುವುದೆಂದು ಭಾವಿಸಿ ಆ ಕಥೆಯನ್ನು ಕೊಡಲಾಗಿದೆ. ಇದು ವೀರಶೈವ ಶರಣರಿಗೆ ಸಂಬಂಧಿಸಿದ್ದು. ಒಂದು

ಅವರನ್ನು ಹತ್ತಿರಕ್ಕೆ ಕರೆದು ಕುಳ್ಳಿರಿಸಿಕೊಂಡು ನೀನು ಸಾಮಾನ್ಯನಲ್ಲ; ಯಮನ ಅವತಾರ (ಅಥವಾ ಯಮಾಂಶಸಂಭೂತ)[೧೩] ಕೋಣ ಸಾಕ್ಷಾತ್ ಯಮವಾಹನವಾದ ಕೋಣವೇ ವಿನಾ ಬೇರೆ ಅಲ್ಲ ಎಂದು ಉದ್ಘಾಟಿಸಿ ಬಿಟ್ಟರಂತೆ. ಈ ಕಥೆ ಮಹಾಜ್ಞಾನಿಗಳಾದ ವ್ಯಾಸರಾಯರ ವ್ಯಕ್ತಿತ್ವಕ್ಕೂ, ಕನಕದಾಸನಂಥ ವಿಚಾರಮತಿಯ ವ್ಯಕ್ತಿತ್ವಕ್ಕೂ ಘನತೆಯನ್ನುಂಟು ಮಾಡುವುದಕ್ಕಿಂತ ಹೆಚ್ಚಾಗಿ ಕುಂದಕವನ್ನುಂಟುಮಾಡುವುದೆಂದೇ ಹೇಳಬಹುದು. ವ್ಯಾಸರಾಯರು ಕೆರೆ ಕಟ್ಟಿಸುವಲ್ಲಿಗೆ ಕನಕದಾಸ ಬಂದಿದ್ದಾನು; ಪರಸ್ಪರ ಮಾತನಾಡಿದ್ದಾರು; ಅದು ಮಹತ್ವದ್ದಲ್ಲ. ಮಂತ್ರೋಪದೇಶವಾಗಬೇಕೆಂದು ಕೇಳುವುದಕ್ಕೆ ಈ ಸಮಯವನ್ನೇ ಆರಿಸಬೇಕೆ? ಗುರುಗಳೂ ಕೂಡ ಕುರುಬನಿಗೆಂಥ ಮಂತ್ರವೋ ಕೋಣಮಂತ್ರ"–ಎನ್ನಬೇಕೆ? 'ಕೋಣ' ಎಂಬ ಮಂತ್ರ ಕನಕದಾಸರಿಗೆ ಆ ಕೂಡಲೇ ಸಿದ್ಧಿಸಬೇಕೆ? ಸಿದ್ಧಿಸಿದ್ದೇತಡ ಭಯಂಕರ ಕೋಣ ಪ್ರತ್ಯಕ್ಷವಾಗಬೇಕೆ? ಒಬ್ಬರು ಬಹುದೊಡ್ಡ ದಾರ್ಶನಿಕರು; ಶಾಸ್ತ್ರಜ್ಞಾನ

---

ಸಂಪ್ರದಾಯದವರು ಹುಟ್ಟಿಸಿಕೊಂಡು ಹೇಳಿದ ಕಥೆಯನ್ನು ಇನ್ನೊಂದು ಸಂಪ್ರದಾಯದವರು ಹೇಗೆ ಬಳಸಿಕೊಳ್ಳುತ್ತಿದ್ದರೆಂಬುದೂ ಈ ಕಥೆಯಿಂದ ವೇದ್ಯವಾಗುವುದು. ಆ ಕಥೆ ಹೀಗೆ :

ಕಂದಾಪುರ (ಈಗ ಮಹಾರಾಷ್ಟ್ರದಲ್ಲಿರುವ ಒಂದು ಊರು) ದಲ್ಲಿದ್ದ ಉರಿಲಿಂಗದೇವನೆಂಬುವನ ಮನೆಯ ಕಳವಿಗೆ ಪೆದ್ದಣ್ಣನೆಂಬ ಕಳ್ಳ ರಾತ್ರಿ ಬಂದು ಮಾಳಿಗೆಯನ್ನೇರಿ ಕುಳಿತು ಸಮಯವನ್ನು ಕಾಯುತ್ತಿದ್ದ. ಆ ರಾತ್ರಿ ಉರಿಲಿಂಗದೇವ ಸೂರಸೇನನೆಂಬ ಭಕ್ತನಿಗೆ ಶಿವಲಿಂಗ ದೀಕ್ಷೆಯನ್ನು ಕೊಡುತ್ತಿದ್ದ. ಬಹಳ ಹೊತ್ತಾದರೂ ಮಲಗದೆ ಇದ್ದುದನ್ನು ಗಮನಿಸುತ್ತಿದ್ದ ಪೆದ್ದಣ್ಣ ಬೆಳಕಿಂಡಿಯಿಂದ ಒಳಗೆ ಏನು ನಡೆಯುತ್ತದೆಂಬುದನ್ನು ನೋಡಿದ. ಲಿಂಗದೀಕ್ಷೆಯನ್ನು ಕೊಡುತ್ತಿದ್ದ ಆ ನೋಟವನ್ನು ಕಂಡ. ನೋಡುನೋಡುತ್ತಿದ್ದಂತೆ, ತಾನು ಬಂದ ಕಾರ್ಯದ ಮರೆವುಂಟಾಗಿ ಸಂಸ್ಕಾರ ಉದ್ಬುದ್ಧಗೊಂಡು, ನಾನೂ ಈ ಗುರುಗಳಿಂದ ದೀಕ್ಷೆಪಡೆಯಬೇಕೆಂಬ ಹಂಬಲವುಂಟಾಗಿ ಮರುದಿನ ಆ ಗುರುವನ್ನು ಅಡ್ಡಗಟ್ಟಿ ನನಗೂ ಲಿಂಗದೀಕ್ಷೆ ಕೊಡೆಂದು ಪೀಡಿಸತೊಡಗಿದ. ಗುರುವು ಇವನ ಕಾಟ ತಪ್ಪಿಸಿಕೊಳ್ಳಲು ಕಲ್ಲೊಂದನ್ನು ಹಿಡಿದು "ಘೇ ದಗಡಿ ಜಾ" ಎಂದು ಆ ಕಲ್ಲುಕೊಟ್ಟ. ಅವನಿಗೆ ಕಲ್ಲೇ ಲಿಂಗವಾಯಿತು. "ಘೇ ದಗಡಿ ಜಾ" ಎಂಬುದೇ ಮಂತ್ರವಾಯಿತು. ಹೀಗಿರುವಾಗ ಆ ಊರಿನ ಅರಸು ಕೆರೆತೋಡಿಸುವಾಗ ದೊಡ್ಡ ಬಂಡೆ ಅಡ್ಡಬಂದು ತೆಗೆಸುವುದು ಅಸಾಧ್ಯವಾದಾಗ ಉರಿಲಿಂಗದೇವನ ಬೆನ್ನುಬಿದ್ದ ಉರಿಲಿಂಗದೇವ ಈ ಶಿಷ್ಯನೊಡನೆ ಕೆರೆಯ ಹತ್ತಿರ ಬಂದು ಪೆದ್ದಣ್ಣನ ಮುಖನೋಡಿದ. ಪೆದ್ದಣ್ಣ ಗುರು ಕೊಟ್ಟ ತನ್ನ ಲಿಂಗ ಮತ್ತು "ಘೇ ದಡಿಗ ಜಾ"–ಎಂಬ ಮಂತ್ರದಿಂದ ಕಲ್ಲನ್ನು ಎಳೆಸಿ ಹಾಕಿಬಿಟ್ಟ. ಲಿಂಗವೇ ಹೋಗಿ ಕಲ್ಲನ್ನೆಳೆದದ್ದು–ಇದೇ ಮಾದರಿಯದು ಕನಕನ ಕೋಣನ ಕಥೆ.

೧೩. ಮಾಧ್ವಸಿದ್ಧಾಂತ ಪ್ರಮೇಯದಲ್ಲಿ ಯಮ ಹನ್ನೆರಡನೆಯ ಕಕ್ಷೆಯಲ್ಲಿ ಬರುವ ತತ್ತ್ವಾಭಿಮಾನಿದೇವತೆ. ಈ ಕಕ್ಷೆಯಲ್ಲಿಬರುವ ಇತರ ದೇವತೆಗಳೆಂದರೆ, ಸೂರ್ಯ (ಚಕ್ಷುರಿಂದ್ರಿಯ), ಚಂದ್ರ (ಶ್ರೋತೇಂದ್ರಿಯ). ಶತರೂಪಾ.

ವಿಶಿಷ್ಟರು ; ಪರಮ ಯತೀಶ್ವರರು. ಇನ್ನೊಬ್ಬರು ಲೋಕ ಲೌಕಿಕ ವ್ಯಾಪಾರವನ್ನರಿತವರು ; ಪರಮ ಭಾಗವತರು ; ಕವಿಹೃದಯದವರು ; ಜ್ಞಾನ ವಿಜ್ಞಾನ ಚತುರರು. ಈ ಪ್ರಸಂಗವನ್ನು ನಿಜವೆಂದು ನಂಬುವುದಾದರೆ ಇಬ್ಬರೂ ಔಚಿತ್ಯಜ್ಞಾನ ಶೂನ್ಯರೆಂದೇ ತೀರ್ಮಾನ ಮಾಡಿದಂತಾಗುವುದಿಲ್ಲವೆ! ಐತಿಹ್ಯದಂತೆ ಘಟನೆ ಜರುಗಿದ್ದರೆ ಸಾಕ್ಷಾತ್ ಕೃಷ್ಣದೇವರಾಯನೇ ವಿಜಯನಗರಿಯಿಂದ ಓಡಿ ಬರುತ್ತಿದ್ದನೇನೊ, ನೋಡಲಿಕ್ಕೆ. ಇಷ್ಟು ಮಾತ್ರ ನಿಜ. ತತ್ತ್ವಶಾಸ್ತ್ರ ದೃಷ್ಟಿಯಿಂದ ಇಂಥ ಘಟನೆಗಳಿಗೆ ಬೆಲೆಯಿಲ್ಲ. ಚರಿತ್ರೆಯಲ್ಲೆಲ್ಲೂ ಈ ಘಟನೆಯ ಪ್ರಸಕ್ತಿಯಿಲ್ಲ ; ಶಾಸನಗಳಿಲ್ಲ. ವ್ಯಾಸರಾಯರ ಚರಿತ್ರೆಯನ್ನು ಸಂಸ್ಕೃತದ ಚಂಪೂರೂಪದಲ್ಲಿ ಬರೆದಿರುವ, ವ್ಯಾಸರಾಯರ ಸಮಕಾಲೀನನೇ ಆಗಿದ್ದ ಸೋಮನಾಥನೆಂಬುವನ ಕಾವ್ಯದಲ್ಲಿ ಕೆರೆ ಕಟ್ಟಿಸುತ್ತಿದ್ದುದರ ಪ್ರಸ್ತಾಪ ಮಾಡಿದ್ದಾನೆ. ಆದರೆ 'ಕೋಣಮಂತ್ರ'ದ ಪ್ರಸಕ್ತಿಯಿಲ್ಲ ; ಪವಾಡ ಪ್ರಸ್ತಾಪವಿಲ್ಲ. ಶೂದ್ರವರ್ಗದ ಕನಕದಾಸರ ಸಿದ್ಧಿ ಸಾಧನೆಗಳಿಗೆ ಒಂದು ಸ್ಥಾನವನ್ನು ಕೊಡಲು ದಾಸಕೂಟದಲ್ಲಿ ಮಹಾಮಹಿಮರಿದ್ದಾರೆಂಬುದನ್ನು ತೋರಿಸಲು ಕೆಲವು ಬೂಟಾಟಿಕೆಯ ದಾಸರುಗಳು ಚಾರಿತ್ರಿಕ ಅಂಶದ ಜೊತೆಗೆ ಈ ಕಥೆ ತಗುಲಿಸಿ, ಉಪಕಾರಕ್ಕಿಂತ ಅಪಕಾರವನ್ನೇ ಮಾಡಿದ್ದಾರೆಂದು ಹೇಳಬಹುದು. ದಾಸಕೂಟದಲ್ಲಿ ಎಲ್ಲರೂ ಕನಕ, ಪುರಂದರದಾಸರಂಥವರೇ ಇದ್ದರೆಂದೂ ವ್ಯಾಸಕೂಟದಲ್ಲಿ ವ್ಯಾಸರಾಯರು, ವಾದಿರಾಜರು, ಶ್ರೀಪಾದರಾಯರಂತಹ ದಾರ್ಶನಿಕರೇ ಇದ್ದರೆಂದೇನೂ ಅಲ್ಲ. ಗೊಡ್ಡುದಾಸರೂ ಇದ್ದರು ; ಶುಷ್ಕಪಂಡಿತರೂ ಇದ್ದರೆನ್ನಬಹುದು. ಈ ಕಥೆ ಹೇಳಿ ಸಾಮಾನ್ಯ ಜನಕ್ಕೆ ಏನೋ ಒಂದು ಬಗೆಯ ಹೆಮ್ಮೆಯುಂಟಾದೀತು ; ವಿಚಾರಪರರಾದವರಿಗೆ ಹೆಮ್ಮೆಗೆ ಬದಲಾಗಿ ಕಿರಿಕಿರಿಯುಂಟಾಗುವುದಂತೂ ನಿಜ. ಈ ಪ್ರಸಂಗದ ಬಗೆಗೆ ನಾವು ಹೀಗೆ ಊಹಿಸಿ ಒಂದು ಸಮಾಧಾನ ಹೇಳಬಹುದೆಂದು ತೋರುತ್ತದೆ :

ಕನಕದಾಸರು ತಮ್ಮ ಗುರುಗಳು ಕೆರೆ ಕಟ್ಟಿಸುವಲ್ಲಿಗೆ ಬಂದರೂ ಬಂದಿರಬಹುದು. ಒಂದು ಕಲ್ಲು ಅಡ್ಡಬಂದರೂ ಬಂದಿರಬಹುದು. ಆಗ ವ್ಯವಸಾಯ ನಿಪುಣ ಕನಕದಾಸ ಕೆಲವು ಕೋಣಗಳನ್ನು ತರಿಸಿ ಮಿಣಿ ಹೊರಜಿಗಳಿಂದ ಹೂಟಿಯನ್ನು ಬಿಗಿದು, ಕಲ್ಲನ್ನು ಎಳೆಸಿ ಹಾಕಿ ಗುರುವಿನಿಂದ "ಭಲೇ ! ನೀನು ಯಮನಿದ್ದ ಹಾಗೆ" – ಎಂಬ ಸಂತಸದ ಉದ್ಗಾರಕ್ಕೆ ಪಾತ್ರನಾಗಿರಬಹುದು ಅಷ್ಟೇ, ಇದೇ ವಿಷಯ ಕೈ ಕಾಲು ಹೊಟ್ಟೆ ಮುಖ ಹಚ್ಚಿಕೊಂಡು ಅಡ್ಡತಿಡ್ಡ ವಿವೇಕವಿಲ್ಲದೆ ಬೆಳೆದಿರಬಹುದು.

**ಪ್ರಮುಖವಾದ ಕೆಲವು ಐತಿಹ್ಯಗಳು**

ವ್ಯಾಸರಾಯರು ತಮ್ಮ ಸೋಸಲೆ ಮಠದಲ್ಲಿ ವಾಸ್ತವ್ಯ ಮಾಡಿದ್ದ ಸಮಯದಲ್ಲೋ ಇನ್ನಾವುದೋ ಸ್ಥಳದಲ್ಲೊ ಇದ್ದಾಗ ವ್ಯಾಸಕೂಟ–ದಾಸಕೂಟದವರಲ್ಲಿ ಪರಸ್ಪರ ತಾತ್ವಿಕವೋ ವ್ಯಾವಹಾರಿಕವೋ ಆದ ಅನೇಕ ಘರ್ಷಣೆಗಳುಂಟಾಗುತ್ತಿದ್ದ ಸಮಯದಲ್ಲಿ ದಾಸಕೂಟದವರ ಅದರಲ್ಲೂ ಮುಖ್ಯವಾಗಿ ಕನಕದಾಸರ ಯಥಾರ್ಥ ಜ್ಞಾನದ ಪರಿಚಯ ಮಾಡಿಕೊಡುವ ಕೆಲವು ಪ್ರಸಂಗಗಳನ್ನು ಬಿಂಬಿಸುವ ಐತಿಹ್ಯಗಳು ಕೇಳಿಬರುತ್ತಿವೆ. ಅವುಗಳಲ್ಲಿ (೧) ಶಿಷ್ಯವರ್ಗದವರಿಗೆಲ್ಲ ಬಾಳೆ ಹಣ್ಣುಕೊಟ್ಟು ಯಾರೂ ಇಲ್ಲದ ಸ್ಥಳದಲ್ಲಿ ತಿಂದು ಬರಲು ಹೇಳಿದುದು (೨) ದಾಸ–ವ್ಯಾಸಕೂಟದವರೆಲ್ಲರ ಮಧ್ಯದಲ್ಲಿ ಮುಷ್ಟಿಯಲ್ಲಿ ಯಾರಿಗೂ ಗೊತ್ತಾಗದಂತೆ ಹಿಡಿದುಕೊಂಡು ಬಂದ ಸಾಲಿಗ್ರಾಮ ಶಿಲೆಯ ಬಗೆಗೆ "ನನ್ನ ಕೈಲ್ಲೇನಿದೆ" ಎಂದು ಕೇಳಿದ ಪ್ರಶ್ನೆ. ಇದೆರಡು ಮುಖ್ಯವಾದುವು. ಈ ಪ್ರಸಂಗಗಳ ಬಗೆಗೆ ಆಗ ಸಾಕ್ಷಾತ್ ವ್ಯಾಸರಾಯರಲ್ಲಿ ಶಿಷ್ಯವೃತ್ತಿಯಲ್ಲಿದ್ದ ಪುರಂದರದಾಸರು–ಕಣ್ಮುಟ್ಟ ಎರಡು ಪ್ರಸಂಗಗಳನ್ನು ಕಂಡು–

ಕನಕದಾಸನ ಮೇಲೆ ದಯಮಾಡಿಸಲು ವ್ಯಾಸ–।
ಮುನಿ ಮಠದಜನರೆಲ್ಲ ದೂರಿಕೊಂಬುವರೊ ॥ ಪ ॥
ತೀರ್ಥವನು ಕೊಡುವಾಗ ಕನಕನು ಕರೆಯೆನಲು ॥
ಧೂರ್ತರಾಗಿದ್ದ ವಿದ್ವಾಂಸರೆಲ್ಲ ।
ಸಾರ್ಥಕಾಯಿತು ಇವರ ಸಂನ್ಯಾಸಿತನವೆಲ್ಲ
ಪೂರ್ತ್ಯಾಗಲೆಂತೆನಲು ಯತಿಯು ನಗುತಿಹನು ॥ ೧ ॥
...............................................................................[೧೪]

–ಹೀಗೆ ಪ್ರಾರಂಭವಾಗುವ ಏಳುನುಡಿಗಳ ತಮ್ಮ ಪದ್ಯವೊಂದರಲ್ಲಿ ದಾಖಲಿಸಿ ಬಿಟ್ಟಿರುವುದರಿಂದ ಘಟನೆಗಳು ನಡೆದ ಬಗೆಗೆ ಸಂಶಯವೇ ಇಲ್ಲವಾಗಿ ಈ ಎರಡೂ ಪ್ರಸಂಗಗಳು ವಿಚಾರಯೋಗ್ಯವಾದುವುಗಳು, ಇಲ್ಲಿ ಬಾಳೆ ಹಣ್ಣಿನ ಪ್ರಸಂಗದಲ್ಲಿ ಯಾವ ಪವಾಡ ಕಥೆಯ ಅವಾಂತರ ಕಾಣದು. ಇದು ಕೇವಲ ಯುಕ್ತವಾದವೇ. ಶುಷ್ಕ ಶಾಸ್ತ್ರಜ್ಞಾನ ಮತ್ತು ಕ್ರಿಯೆಯಲ್ಲಿ ಪ್ರಸಾರಗೊಂಡ ಜ್ಞಾನಾನುಭಾವ–ಇವೆರಡರ ವ್ಯತ್ಯಾಸವನ್ನು ಪಂಡಿತರಿಗೆ

---

೧೪. ಪುರಂದರಸಾಹಿತ್ಯದರ್ಶನ : (ಪ್ರ. ಸಂ.) ಪ್ರೊ. ಎಸ್. ಕೆ. ರಾಮಚಂದ್ರರಾವ್; ಭಾಗ–೧, ಪು. ೧೭೦.

ಮನದಟ್ಟುಮಾಡಿಕೊಡುವುದೇ ಈ ಪ್ರಸಂಗವನ್ನು ವ್ಯಾಸ ಕೂಟದವರ ಮೇಲೆ ವ್ಯಾಸರಾಯರು ಹೇರಿದುದರ ಮುಖ್ಯೋದ್ದೇಶವಾಗಿದೆ.[೧೫] ಈಶ್ವರನ ಸರ್ವವ್ಯಾಪಕತ್ವ, ಸರ್ವಜ್ಞತ್ವ, ಸರ್ವಕರ್ತೃತ್ವಾದಿಗಳನ್ನು ಶಾಸ್ತ್ರ ಪಂಕ್ತಿಯನ್ನು ಹಿಡಿದು ಪ್ರತಿಪಾದಿಸಿ ಪಾಂಡಿತ್ಯ ಪ್ರದರ್ಶಿಸಬಹುದು. ಆದರೆ ವ್ಯವಹಾರದಲ್ಲಿ ಆ ಜ್ಞಾನ ಅನುಭವಕ್ಕೆ ಬರದಿದ್ದರೆ ಅದರಿಂದ ಪ್ರಯೋಜನವೇನು? ಶಾಸ್ತ್ರಕ್ಕೊಂದು ಬಟ್ಟೆ, ಜೀವನಕ್ಕೊಂದು ಬಟ್ಟೆ ಎಂದರೆ ಹೇಗೆ? ಯಾರೂ ಇಲ್ಲದ ಸ್ಥಳವೇ ನನಗೆ ಸಿಗಲಿಲ್ಲ ವೆಂದು ಕನಕದಾಸ ಹೇಳಿದುದೇ ಸರಿ. ಪಂಚಮಹಾಭೂತ ತತ್ವೇಶ್ವರರು ತತ್ತ್ವಾಭಿಮಾನಿಗಳೂ ದೇಹದೊಳಗೂ ಹೊರಗೂ ಪರಿಪೂರ್ಣರಾಗಿ ನಿಂತಿಲ್ಲವೆ ? "ಈಶಾವಾಸ್ಯಮಿದು ಸರ್ವಂ ಯತ್ಕಿಂಚಜಗತ್ಯಾಂ ಜಗತ್" ಎಂಬ ವೇದಾಂತ ನುಡಿಯ ಗತಿಯೇನು?– ಇತ್ಯಾದಿಯಾಗಿ ವ್ಯಾಸರಾಯರು ವ್ಯಾವಹಾರಿಕ ಸತ್ಯವೇ ಶಾಸ್ತ್ರಸತ್ಯವೂ ಆಗಬೇಕು. ಆಂತರಿಕ ಸತ್ಯ ಕ್ರಿಯೆಯಲ್ಲಿ ಪ್ರಸಾರಗೊಳ್ಳಬೇಕು– ಎಂದು ತಿಳಿಸುತ್ತ ಕನಕದಾಸರ ಆಂತರಿಕಜ್ಞಾನ ಬಾಹ್ಯದ ಕ್ರಿಯೆಯಲ್ಲಿ ಪರ್ಯವಸಾನಗೊಂಡಿದೆ. ಜ್ಞಾನಕ್ಕೆ, ಈಶ್ವರ ಸಾಕ್ಷಾತ್ಕಾರಕ್ಕೆ ಜಾತಿ–ಕುಲಗೋತ್ರಗಳು ಅಡ್ಡ ಬರುವುದಿಲ್ಲವೆಂಬ ತ್ರಿಕಾಲಾಬಾಧಿತಸತ್ಯವನ್ನು ವ್ಯಾಸಕೂಟದವರಿಗೆ ಪರಿಚಯ ಮಾಡಿಕೊಡುವುದಕ್ಕಾಗಿ ಈ ಪ್ರಸಂಗವನ್ನುಂಟುಮಾಡಿದರು. ಇದರಲ್ಲಿ ಪವಾಡವೇನೂ ಇಲ್ಲ.

---

೧೫. ವ್ಯಾಸಕೂಟ–ದಾಸಕೂಟ : ವ್ಯಾಸಕೂಟವೆಂಬ ಮಾತು ವೇದವ್ಯಾಸರನ್ನು ಪ್ರತಿನಿಧಿಸುವ ಶಬ್ದ ; ದಾಸಕೂಟವೆಂಬುವು ಪುರಂದರ ಕನಕ ವಿಜಯ ಜಗನ್ನಾಥ ಮೊದಲಾದ ದಾಸ ವರೇಣ್ಯರನ್ನು ಪ್ರತಿನಿಧಿಸುವ ಶಬ್ದ. ವ್ಯಾಸರ ಬ್ರಹ್ಮಸೂತ್ರ ಪಂಡಿತರಿಗೆ ಪರಮಪ್ರಮಾಣ. ಇವರು ಶಾಸ್ತ್ರಾಧ್ಯಯನ–ತರ್ಕ–ವ್ಯಾಕರಣಾದಿ ವಿಶಿಷ್ಟ ಜ್ಞಾನಸಂಪನ್ನರಾಗಿ ಶಬ್ದಶಬ್ದ ಹಿಡಿದು ಹಿಂಜಿ ವಾಕ್ಯಾರ್ಥಮಾಡಿ ಸಿದ್ಧಾಂತ ಪ್ರಮೇಯಗಳನ್ನು ಮಂಡಿಸುವವರು. ಮಧ್ವಮತ ಪ್ರಮೇಯಗಳನ್ನು ಈ ಮೂಲಕ ಪ್ರತಿಪಾದಿಸುವ ಈ ಪಂಡಿತವರ್ಗವೆಲ್ಲ ವ್ಯಾಸಕೂಟವೆನಿತು. ಸಾಮಾನ್ಯವಾಗಿ ಇವರೆಲ್ಲ ಮಾಧ್ವಸಂಪ್ರದಾಯದ ಬ್ರಾಹ್ಮಣರೇ. ದಾಸಕೂಟದಲ್ಲಿ ಜಾತಿಗೀತಿಗಳ ಕಟ್ಟುಪಾಡು ಇಲ್ಲ. ಇವರೂ ಮಾಧ್ವಮತ ಪ್ರಮೇಯದಂತೆ ಜೀವಿಸುವವರು. ಶಾಸ್ತ್ರಜ್ಞಾನವೊಂದೇ ಮುಕ್ತಿಗೆ ಸಾಧನವಲ್ಲ, ವೇದಾಂತಾದಿ ಪ್ರಮೇಯಗಳನ್ನು ಅರಿತುಕೊಳ್ಳಲು ಸಂಸ್ಕೃತ ಜ್ಞಾನವೇ ಗತಿ ಎಂದು ನಂಬುವುದಿಲ್ಲ. ಅನುಭಾವದಾಳದಿಂದ ಹೊರಹೊಮ್ಮುವ ಭಕ್ತಿಭಾವನೆಗಳನ್ನು ತಾಯ್ನುಡಿಯಲ್ಲಿ ಹಾಡಿ ಲೋಕಕ್ಕೆ ಮಾರ್ಗದರ್ಶನವನ್ನೂ, ಆತ್ಮೋನ್ನತಿಯನ್ನೂ ಮಾಡಬೇಕೆನ್ನುವವರು. ಈ ದಾಸ ಪಂಥವನ್ನು ಮಧ್ವಮತದಲ್ಲಿ ಪ್ರಸಿದ್ಧರಾದ ವ್ಯಾಸರಾಯರು–ವಾದಿರಾಜರು ಹುಟ್ಟುಹಾಕಿ ಪೋಷಿಸಿ ಬೆಳೆಸಿದರು.

**ಇನ್ನು ಕೈಯಡಕದಲ್ಲಿ ಹಿಡಿದುಕೊಂಡು ಬಂದ ಸಾಲಿಗ್ರಾಮ ಶಿಲೆಯ ವಿಚಾರ :** ಇದು ಸ್ವಲ್ಪ ಭಿನ್ನವಾದುದು. ಅಪರೋಕ್ಷಜ್ಞಾನಕ್ಕೆ ಸಂಬಂಧಪಟ್ಟ ಅಂಶ ಇಲ್ಲಿದೆ. ಅಪರೋಕ್ಷಜ್ಞಾನವೆಂದರೆ ಬಾಹ್ಯೇಂದ್ರಿಯಗಳ ಮೂಲಕ ಅನುಭವಕ್ಕೆ ಬಾರದುದನ್ನು ಯೋಗಜನ್ಯ ಮನಸ್ಸಿನ ಕಣ್ಣಿನಿಂದ ಅನುಭವಕ್ಕೆ ತಂದುಕೊಳ್ಳುವುದು. ಕನಕದಾಸರು ವಿದ್ವಾಂಸರಂತೆ ತತ್ತ್ವಾರ್ಥವನ್ನು ಶಬ್ದಶಬ್ದಹಿಡಿದು ವಿವರಿಸುವ ಸಾಮರ್ಥ್ಯವಿಲ್ಲದವರಾಗಿರಬಹುದು ಶೂದ್ರವರ್ಗದವರಾಗಿರಬಹುದು – ಆದರೆ ತತ್ತ್ವವೇ ಮೈಯುಂಡ ಮಹಾನುಭಾವಿಗಳಾಗಿದ್ದಾರೆ; ಅಪರೋಕ್ಷಜ್ಞಾನ ಸಂಪತ್ತನ್ನು ಗಳಿಸಿಕೊಂಡಿದ್ದಾರೆನ್ನುವುದನ್ನು ವ್ಯಾಸಕೂಟಕ್ಕೆ ಪರಿಚಯಿಸುವುದೇ ಈ ಪ್ರಸಂಗದ ಉದ್ದೇಶವಾಗಿದೆ. ವ್ಯಾಸ–ದಾಸ ಕೂಟದವರಿಗೆ ಪದೇಪದೇ ಘರ್ಷಣೆಗಳೂ ಆಗುತ್ತಲೇ ಇರುತ್ತಿದ್ದವು. ಪರಸ್ಪರರು ನಿಂದೆಪ್ರತಿನಿಂದೆಗಳಿಂದ ವೈಮನಸ್ಸನ್ನೂ ಬೆಳಸಿಕೊಳ್ಳುತ್ತಿದ್ದರು.[೧೬] ಮಾಧ್ವಮತ ಪ್ರಮೇಯಗಳು ಸಾಮಾನ್ಯ ಜನತೆಯಲ್ಲಿ ಪ್ರಸಾರಗೊಳ್ಳುವುದಕ್ಕೆ ದಾಸಕೂಟದ ಪಾತ್ರ ಬಹಳ ದೊಡ್ಡದೆಂದು ಅರಿತು ಅದನ್ನು ಪೋಷಿಸುತ್ತ ಬಂದಿದ್ದವರೇ ವ್ಯಾಸರಾಯರು. ಅವರು ಪುರಂದರ–ಕನಕದಾಸರಂಥವರನ್ನು ಬಹುದೊಡ್ಡ ಸಂಪತ್ತೆಂದು ತಿಳಿದಿದ್ದರು. ವ್ಯಾಸ ದಾಸಕೂಟಗಳಿಗೆ ಪದೇ ಪದೇ ಉಂಟಾಗುತ್ತಿದ್ದ ಅಭಿಪ್ರಾಯ ಭೇದದ ವೈಮನಸ್ಯ

---

೧೬. ದಾಸಕೂಟ ವ್ಯಾಸಕೂಟದವರಲ್ಲಿನ ಘರ್ಷಣೆಗಳ ಬಗೆ ಕನಕ ಪುರಂದರದಾಸರ ಪದಗಳಲ್ಲಿ ಸ್ಪಷ್ಟ ಉಲ್ಲೇಖಗಳೇ ಇವೆ. ಆಸಕ್ತರು ಅವನ್ನು ನೋಡಬಹುದು.

(i) ಕನಕದಾಸರು : (೧) "ಜಪವಮಾಡಿದರೇನು ತಪವಮಾಡಿದರೇನು ವಿಪರೀತ ಕಪಟಗುಣ ಕಲುಷವಿದ್ದವರು..." ಎಂದು ಮೊದಲಾಗುವ ಪದ್ಯ. (೨) "ಕುಲಕುಲಕುಲವೆಂದು ಹೊಡೆದಾಡದಿರಿ..." ಎಂದು ಮೊದಲಾಗುವ ಪದ್ಯ (೩) "ಕುಲಕುಲಕುಲವೆನ್ನುತಿಹರು ಕುಲವಾವುದು ಸತ್ಯ ಸುಖವುಳ್ಳ ಜನರಿಗೆ..." ಎಂದು ಮೊದಲಾಗುವ ಪದ್ಯ (೪) "ತೀರ್ಥವನು ಪಡಿದವರು ತಿರುನಾಮಧಾರಿಗಳೆ ಜನ್ಮಸಾರ್ಥಕವಿರದವರು ಭಾಗವತರಹುದೇ...." ಎಂದು ಮೊದಲಾಗುವ ಪದ್ಯ.

(ii) ಪುರಂದರದಾಸರು : (೧) "ಆವಕುಲವಾದರೇನು ಆವನಾದರೇನು ಆತ್ಮಭಾವವರಿತ ಮೇಲೆ..." ಎಂದು ಮೊದಲಾಗುವ ಪದ್ಯ. (೨) "....... ಇಂಥ ತುಡುಗ ಮುಂಡೇಗಂಡರಿಗಿನ್ನು ವೈಷ್ಣವಸಲ್ಲುವುದೇ ? ಗಡ್ಡಮೀಸೆ ಬೋಳಿಸಿಕೊಂಡು ಗೊಡ್ಡುನಾಮವ ತೀಡಿಕೊಂಡು । ಅಡ್ಡಾದಿಡ್ಡಿ ಮುದ್ರೆಗಳ ಬಡಿದುಕೊಂಡಿನ್ನು । ದೊಡ್ಡದೊಡ್ಡ ಮಾತುಗಳಾಡಿ ದೊಡ್ಡವರೆಂದ್ಹೇಳಿಸಿಕೊಂಬ । ಬಡ್ಡಿದಗಡೀ ಮಕ್ಕಳಿಗಿನ್ನು ವೈಷ್ಣವ ಸಲ್ಲುವುದೇ..." ಇತ್ಯಾದಿ.

(ಈ ಪದ್ಯಕ್ಕಾಗಿ ಪುರಂದರ ಸಾಹಿತ್ಯದರ್ಶನ : (ಪ್ರ. ಸಂ) ಪ್ರೊ. ಎಸ್. ಕೆ. ರಾಮಚಂದ್ರ ರಾವ್ : ಸಂ. ೨. ಪುಟ ೧೦–ನೋಡಿ).

ಅವರಿಗೆ ಇಷ್ಟವಿಲ್ಲದ್ದಾಗಿತ್ತು, ಹರಿದಾಸರನ್ನು ಜ್ಞಾನಿಗಳೆಂದು ಒಪ್ಪಿಕೊಳ್ಳಲು ಪಂಡಿತರುಗಳು ಸಿದ್ಧರಿರಲಿಲ್ಲ. ಜಾತಿ–ಮತ–ಕುಲ–ಆಚಾರಾದಿಗಳಿಲ್ಲದ ಕನಕದಾಸರಂಥವರನ್ನು ಅವರು ಸುಲಭವಾಗಿ ಒಪ್ಪದಿದ್ದಾಗ ಅಂಥವರ ಉನ್ನತಜ್ಞಾನ ಸ್ವರೂಪವನ್ನೂ, ಅಪರೋಕ್ಷಜ್ಞಾನ ಸಾಧನೆಯನ್ನು ಪ್ರತ್ಯಕ್ಷೀಕರಣ ಮಾಡಿ ತೋರಿಸಿ ಪಂಡಿತ ವರ್ಗವನ್ನು ದಾರಿಗೆ ತರಲು ಪ್ರಯತ್ನಪಡುತ್ತಿದ್ದುದಕ್ಕೆ ಈ 'ಸಾಲಿಗ್ರಾಮ'ದ ಪ್ರಸಂಗವೊಂದು ದೃಷ್ಟಾಂತವೆನಿಸಿದೆ. ಪುರಂದರದಾಸರೇ ಹೇಳಿದ ಬಳಿಕ ನಾವು ಇದು ನಡೆದ ಘಟನೆಯೆಂದು ಒಪ್ಪಲೇಬೇಕು. ಪುರಂದರದಾಸರು ಹೀಗೆ ಹೇಳಿರಬಹುದೆಂದು ವಾದಿಸಿ ಅವರನ್ನು ಅಪ್ರಾಮಾಣಿಕರೆಂದು ಹೇಳಲು ನಮಗೆ ಶಕ್ತಿಯಿಲ್ಲ ; ಪದ್ಯವೇ ಪ್ರಕ್ಷಿಪ್ತವೆನ್ನುವ ಸಾಹಸಮಾಡಲಾರೆವು. ಆದ್ದರಿಂದ ಈ ಘಟನೆ ವಿಚಾರಣೀಯವೇ.

ಕನಕದಾಸ ಬಹುಶಃ ಜನ್ಮತಃ ಯೌಗಿಕ ಪುರುಷನೇ ಆಗಿದ್ದ ಬಗೆಗೆ ಅವನ ಪದ್ಯಗಳೇ ಸಾಕ್ಷಿ ನುಡಿಯುತ್ತಿವೆ. ಯೋಗ ಪ್ರಕ್ರಿಯೆಯ ಬಗೆಗೂ ಇವನು ಹೇಳುತ್ತಾನೆ.[೧೭] ಈ ನುಡಿಗಳು ಅಭ್ಯಾಸಜನ್ಯ ಅನುಭವನುಡಿಗಳಲ್ಲದೆ, ವೃಥಾಲಾಪಗಳಲ್ಲವೆನಿಸುತ್ತದೆ.

---

೧೭. ಪ್ರಾಚೀನ ಭಾರತೀಯರ ಮನೋವಿಜ್ಞಾನಶಾಸ್ತ್ರವೇ ಯೋಗಶಾಸ್ತ್ರ. ಇದನ್ನು ಒಂದು ದರ್ಶನವೆಂದೇ ಹೇಳಲಾಗುತ್ತಿದೆ. ಈ ಯೋಗದರ್ಶನವನ್ನು ಭಾರತದ ಜನಾಂಗ ಅವರು ಯಾವ ಧರ್ಮ–ಪಂಥ–ವ್ಯವಸ್ಥೆಯವರೇ ಆಗಿರಲಿ ಭಿನ್ನಭೇದವಿಲ್ಲದೆ ಅರಿದು ಆಚರಿಸಿ, ದೇಹವನ್ನೇ ಸಂಶೋಧನಾವಸ್ತುವನ್ನಾಗಿ ಮಾಡಿಕೊಂಡು ದೃಷ್ಟಿ–ಮನ–ಬುದ್ಧಿ–ಚಿತ್ತ–ಅಹಂಕಾರಾದಿ ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಂಡು ಅನೇಕ ಸಿದ್ಧಿಗಳನ್ನು ಪಡೆದುಕೊಂಡು 'ಸಿದ್ಧಪುರುಷ'ರಾದ ಬಗೆಗೆ ಹೇಳಿಕೆ ಕೇಳಿಕೆಗಳುಂಟು. ಇದು ಭಕ್ತಿ ಮತ್ತು ಜ್ಞಾನಗಳ ಪ್ರಧಾನ ಸಹಾಯಕವೆನ್ನಲಾಗುತ್ತಿದೆ. ದಾರ್ಶನಿಕರು ಯೋಗದ ಶ್ರೇಷ್ಠ ಉಪಯೋಗವನ್ನು ಸ್ವೀಕರಿಸುತ್ತಾರೆ. ಜೈನ ಬೌದ್ಧರೂ ಇದಕ್ಕೆ ಹೊರತಲ್ಲ. ತಂತ್ರಗಳಲ್ಲಿ ಯೋಗಕ್ಕೆ ಮಹತ್ವದ ಸ್ಥಾನವಿದೆ. ನಾಥಸಂಪ್ರದಾಯದವರಂತೂ ಯೋಗದಲ್ಲಿ ಎತ್ತಿದ ಕೈ. ಈ ಸಂಪ್ರದಾಯಕ್ಕೆ ಯೋಗೀ ಸಂಪ್ರದಾಯವೆಂದೇ ಕರೆಯಲಾಗುತ್ತಿದೆ. ಸಂಹಿತೆ–ಬ್ರಾಹ್ಮಣ–ಉಪನಿಷತ್ತುಗಳಲ್ಲಿ ಇದರ ವಿವೇಚನೆಯಿದೆ. ಇದು ಪ್ರಾಚೀನ ದರ್ಶನವಾದರೂ ಇದರ ಬಗೆಗೆ ಕ್ರಿ.ಪೂ. ೨ನೆಯ ಶತಮಾನದಲ್ಲಿದ್ದ ಪತಂಜಲಿಮಹರ್ಷಿಯು ಭಾರತೀಯ ಸಂಪ್ರದಾಯಕ್ಕನುಗುಣವಾಗಿ ನಾಲ್ಕು ಪಾದಗಳಲ್ಲಿ ಕೇವಲ ೧೯೫ ಸೂತ್ರಗಳ ವ್ಯಾಪ್ತಿಯಲ್ಲಿ 'ಯೋಗ ಸೂತ್ರಗಳು' 'ಯೋಗದರ್ಶನ' ಇತ್ಯಾದಿ ಹೆಸರುಗಳಿಂದ ಕರೆಸಿಕೊಳ್ಳುವ ಈ ದರ್ಶನಗ್ರಂಥ ಬರೆದಿದ್ದಾನೆ. ಈ ಗ್ರಂಥಕ್ಕೆ ಅನೇಕ ವ್ಯಾಖ್ಯಾನಗಳುಂಟು.

'ಯೋಗ' ಶಬ್ದಕ್ಕೆ ಅನೇಕ ಅರ್ಥಗಳಿದ್ದರೂ ಇವರೂ 'ಯೋಗಶ್ಚಿತ್ತವೃತ್ತಿ ನಿರೋಧಃ' ಎಂದು ಹೇಳಿದ್ದಾರೆ. ಮನುಷ್ಯ ಪ್ರಕೃತಿ ರಾಜ್ಯದಿಂದ ಪಾರಾಗಿ ಆತ್ಮರಾಜ್ಯದಲ್ಲಿ ಪ್ರವೇಶಿಸುವುದಕ್ಕೆ ಇದಕ್ಕಿಂತ ಸುಲಭೋಪಾಯವಾವುದೂ ಇಲ್ಲವೆಂದು ಹೇಳಲಾಗುತ್ತಿದೆ. ಕ್ರಮಬದ್ಧವಾಗಿ ಇದನ್ನು

ಪ್ರೌಢವಯಸ್ಸಿನಲ್ಲಿ ಅಧಿಕಾರ–ಸುಖ–ಸಂಪತ್ತು–ಏನೆಲ್ಲವನ್ನು ತ್ಯಾಗಮಾಡಿ ದಾಸತ್ವ ಸ್ವೀಕರಿಸುವುದಕ್ಕೆ 'ಜನ್ಮಜಾಸಿದ್ಧಿ'ಯೇ ಕಾರಣವಾಗಿರಬಹುದು. ಪುರಂದರ ದಾಸರೂ ಕೂಡ ಇದೇ ಕಕ್ಷೆಗೊಳಪಡುವವರೇ ಆಗಿದ್ದಾರೆ. ಬಾಡ–ಬಂಕಾಪುರದ ತಿಮ್ಮಪ್ಪ ಕನಕದಾಸನಾಗಿ ಸ್ಥಿತ್ಯಂತರಗೊಂಡಮೇಲೆ ಬೇರೆ ಬೇರೆ ಮೂಲಗಳಿಂದ ಯೋಗರಹಸ್ಯಗಳನ್ನು ಪಡೆದಿರಬಹುದು. ಇದೂ ಅಲ್ಲದೆ ತಪಸ್ವಿಗಳೂ, ಜ್ಞಾನಿಗಳೂ, ಗುರು ಹಿರಿಯರು ಮೊದಲಾದವರುಗಳ ಸೇವೆಯಿಂದ ಲಭ್ಯವಾಗುವ 'ದಾನಸಿದ್ಧಿ', ಗುರು ಮೂಲಕ ಒಮ್ಮೆ ಶ್ರವಣಮಾಡಿದ ಮಾತ್ರದಿಂದ ಅದಕ್ಕಿಂತ ಅತಿಶಯ ಜ್ಞನಪಡೆಯುವ 'ಅಧ್ಯಯನಸಿದ್ಧಿ', ಗುರೂಪದೇಶವಿಲ್ಲದೆ ಊಹೆಯಿಂದ ವಾಸ್ತವಾಂಶ ಗ್ರಹಿಸುವ 'ಊಹಾಸಿದ್ಧಿ'–ಮೊದಲಾದುವನ್ನು ಇವರು ಸ್ವಪ್ರಯತ್ನದಿಂದ ಪಡೆದಿರುವುದು ಸಾಧ್ಯವೆಂಬಂಶ ಅವನ ಸಾಹಸಮಯ ಜೀವನಾನುಭವಗಳಿಂದ ಊಹಿಸಲು ಶಕ್ಯವಿದೆ. ಹರಿದಾಸನಾಗಲು ಬೇಕಾಗುವ ಅರ್ಹತೆಗಳೇನೆಂಬ ಬಗೆಗೆ ೨೧ ನುಡಿಗಳ ತಮ್ಮ ಪದ್ಯದಲ್ಲಿ

(೧) ಹೇಗೆ ದಾಸನಾದೆ–ಹೇ ಪ್ರಾಣಿ
ಹೇಗೆ ನೀ ದಾಸನಾದೆ ? ॥ ಪ ॥
ಹೇಗೆ ನೀ ದಾಸನಾದೆ–ಹೀಗೆ ಸಂಸಾರದೊಳು ।

---

ಅರಿದು ಆಚರಿಸಿದರೆ ಕೆಲವು ಸಿದ್ಧಿಗಳುಂಟಾಗುತ್ತವೆಂದು ಹೇಳಲಾಗುತ್ತಿದೆ. ಸಿದ್ಧಿಗಳ ಬಗೆಗೆ ಅವರು "ಜನ್ಮಾಷಧಿಮಂತ್ರ ತಪಸ್ಸಮಾಧಿನೌ ಸಿದ್ಧಯಃ" – ಎಂದು ಸಿದ್ಧಿಪ್ರಕಾರಗಳನ್ನು ಹೇಳುತ್ತಾರೆ. ಹೀಗೆ ಉಂಟಾದ ಸಿದ್ಧಿಗಳನ್ನು ಪ್ರಕಟಿಸಕೂಡದೆಂದೂ ಆತ್ಮತತ್ತ್ವಾನುಭೂತಿ ಪಡೆದು ಮುಕ್ತಿಲಾಭಕ್ಕಾಗಿ ಮಾತ್ರ ಆಚರಿಸಬೇಕೆಂದೂ ಎಚ್ಚರಿಸುತ್ತಾರೆ. ಆತ್ಮಸಾಕ್ಷಾತ್ಕಾರ ಗುರಿಸಾಧಿಸಿಕೊಡುವ ಯೋಗಗಳಲ್ಲಿ ಮಂತ್ರ–ಲಯ–ಹಠ–ರಾಜ–ಶಿವಯೋಗಗಳು ಪ್ರಮುಖವಾದುವು.

ಈ ಯೋಗಜನ್ಯ ಅದ್ಭುತಗಳು ಬಾಹ್ಯ ವಿಜ್ಞಾನದ ಸ್ಥೂಲನಿಯಮಗಳ ವ್ಯಾಪ್ತಿಗೆ ಒಳಪಡುವುದಿಲ್ಲ. ಅವು ಪದರು–ಪದರಾದ ಮನಸ್ಸಿನ ಸೂಕ್ಷ್ಮಶಕ್ತಿಯ ನಿಯಂತ್ರಣಕ್ಕೊಳಪಟ್ಟವುಗಳು. ಇದು ಸೃಷ್ಟಿಯನ್ನು ನುಂಗಿದ ದೃಷ್ಟಿಯನ್ನು ಮನುಷ್ಯನಿಗುಂಟುಮಾಡಿಕೊಡುತ್ತದೆ. ಸೃಷ್ಟಿಯಲ್ಲಿ ದೃಷ್ಟಿಕರಗುವುದೇ ಅಜ್ಞಾನ ; ದೃಷ್ಟಿಯಲ್ಲಿ ಸೃಷ್ಟಿಯಡಗುವುದೇ ಸಮ್ಯಕ್ ಜ್ಞಾನ. ಇಂಥ ಸ್ಥಿತಿಯಲ್ಲಿ ಪ್ರಾಕೃತಕ್ಕೇರಿದ (ಮೂಲಭುತಗುಣಗಳನ್ನಳಿದ) ಮನಸ್ಸು 'ಉನ್ಮನ'ವಾಗಿ ಪರಿಣಮಿಸಿ ಮನಸ್ಸೇ ಕಣ್ಣಾಗುವುದು. ಇದೇ ಅಪರೋಕ್ಷಜ್ಞಾನವೆಂದು ಹೇಳುವುದು. ಈ ಸ್ಥಿತಿ ಮೇಲಿನ ಸೂತ್ರದಲ್ಲಿ ಹೇಳಿದ 'ಜನ್ಮಜಾ' ಸಿದ್ಧಿಯಿಂದ ಕನಕದಾಸರಿಗೆ ಉಂಟಾಗಿರಬಹುದು.

ಬುದ್ಧ–ಶಂಕರ–ರಾಮಾನುಜ–ಮಧ್ವ–ಬಸವಣ್ಣ–ಮಹಾವೀರಾದಿ–ಮಹಾಪುರುಷರು ಬಾಲ್ಯದಲ್ಲಿ ಅಲೋಕ ಸಾಮಾನ್ಯ ಪ್ರತಿಭಾಶಕ್ತಿ ಪ್ರದರ್ಶಿಸಿದುದು ಕಂಡುಬರುತ್ತದೆ. ಇದು ಮನುಷ್ಯಸಹಜ ಶಕ್ತಿ ಸಂಜನಿತವೆಂದು ಹೇಳಲಾಗುವುದಿಲ್ಲ ; ಆದ್ದರಿಂದ ಇಂಥವರನ್ನು 'ಜನ್ಮಜಾಸಿದ್ಧಪುರುಷ'ರ ಪಟ್ಟಿಗೆ ಸೇರಸಬಹುದೆಂದು ತೋರುತ್ತದೆ.

ಮಂಗನಂತೆ ಭಂಗಪಡುವವ ॥ ಅ. ಪ. ॥
.................................................॥ ೧–೭ ॥
ಕುಣಿ ಕುಣಿದು ಮನದಣಿದು । ಮಣಿದು ಸಜ್ಜನ ಪದಕೆ
ಅಣಿಮಾದಿ ಅಷ್ಟಸಿದ್ಧಿಯ ಕೈಕೊಳ್ಳದಲೆ ನೀ ॥ ೮ ॥

ಅನೇಕ ಸದ್ಗುಣ, ಸದ್ವೃತ್ತಿ, ಸಚ್ಚಾರಿತ್ರ್ಯಗಳ ಜೊತೆಗೆ ಅಣಿಮಾದಿ ಅಷ್ಟ ಸಿದ್ಧಿಗಳೂ ಕೈಗೂಡಿ ಬರಬೇಕೆಂದು ಹೇಳುವಲ್ಲಿ ಯಮನಿಯಮಾದಿ ಅಷ್ಟಾಂಗ ಯೋಗಜನ್ಯಸಿದ್ಧಿಗಳಾದ ಅಣಿಮಾದಿ ಸಿದ್ಧಿಗಳ ಬಗೆಗೆ ಇವರಿಗೆ ಕಾತರವಿದ್ದಿತೆಂದು ಸ್ಪಷ್ಟವಾಗುತ್ತದೆ, ಬಹುಶಃ ಮುಂದೆ ಬೇರೆ ಬೇರೆ ಮೂಲಗಳಿಂದ ಕೆಲವು ಸಿದ್ಧಿಗಳನ್ನಾದರೂ ಪಡೆದು ಅಪರೋಕ್ಷಜ್ಞಾನ ಸಂಪಾದಿಸಿರಬಹುದು. ಅಲ್ಲದೆ ನಿರಂತರ ಹರಿಚರಣ ಸ್ಮರಣದೀಪ್ತಭಾವಾನುಭೂತಿಯಿಂದಲೂ ಇವರು ಅಪರೋಕ್ಷ ಜ್ಞಾನ ಸಂಪಾದಿಸಿರಬಹುದೆಂಬುದಕ್ಕೆ ದರ್ಶನಜ್ಞಾನಾನುಭವ ವಿಶಿಷ್ಟರಾದ ವ್ಯಾಸರಾಯ ವಾದಿರಾಜರುಗಳ ಕೃಪೆಗೆ ಪಾತ್ರರಾದುದೂ, ಪುರಂದರದಾಸರ ನಿಕಟವರ್ತಿಗಳಾಗಿದ್ದುದೂ ಯೋಗ್ಯ ನಿದರ್ಶನಗಳೆನ್ನಬಹುದು.

ಇವರ ಇನ್ನೊಂದು "ದಾಸನಾಗಬೇಕು ಸದಾಶಿವನ, ದಾಸನಾಗಬೇಕು" ಎಂಬ ಪದ್ಯದಲ್ಲಿ ೩ನೆಯ ನುಡಿಯಲ್ಲಿ

ಆರು ಚಕ್ರದಿ ಮೆರೆದ ಅಖಂಡನ
ಮೂರು ಗುಣವ ತಿಳಿದು
ಆರುಮೂರು ಹದಿನಾರು ತತ್ತ್ವ ಮೀರಿ
ತೋರುವ ಕಾಗಿನೆಲೆಯಾದಿಕೇಶವನಡಿ ॥ ದಾಸನಾಗಬೇಕು ॥

–ಕನಕದಾಸರು ಇಲ್ಲಿ ಶಿವಯೋಗ–ವೈಷ್ಣವಯೋಗಗಳೆರಡಕ್ಕೂ ಅನ್ವಯವಾಗುವ ಅಭಿಪ್ರಾಯ ವ್ಯಕ್ತಪಡಿಸಿರುವುದೂ ಕಂಡುಬರುವುದು. ಮೂಲಾಧಾರ–ಸ್ವಾದಿಷ್ಠಾನ–ಮಣಿಪೂರಕ, ಅನಾಹತ–ವಿಶುದ್ಧಿ–ಆಜ್ಞಾ–ಎಂಬ ಆರು ಚಕ್ರಸ್ಥಾನದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿ ಕ್ರಮವಾಗಿ ಧ್ಯಾನಾಭಿಮುಖವಾಗಿ ಮೇಲಕ್ಕೇರಿ ಇಪ್ಪತ್ತೈದು ತತ್ತ್ವವ ಮೀರಿ ಶಿವಯೋಗ ಸಿದ್ಧಿಯನ್ನು ಪಡೆಯಬೇಕೆನ್ನುವರು. ಈ ಹಂತದ ಶಿವಯೋಗವೂ ಒಂದೇ ; ಕಾಗಿನೆಲೆಯಾದಿಕೇಶವ ಯೋಗವೆಂದರೂ ಒಂದೇ.[೧೮] ಚಕ್ರಸ್ಥಾನಗಳಲ್ಲಿ ಲಿಂಗಲಕ್ಷ್ಯವನ್ನು ಪ್ರತಿಷ್ಠಾಪಿಸುವಲ್ಲಿ ಆದಿಕೇಶವ ಪ್ರತಿಷ್ಠಾಪನೆ ಮಾಡಿದರಾಯಿತು. ಎರಡರಿಂದ ಸಿದ್ಧಿಸುವ ಸಿದ್ಧಿ

೧೮. ಪೃಥ್ವಿ ಆದಿ ಶಿವನವರೆಗಿನ ೨೫ ತತ್ತ್ವಗಳು ಭಾರತೀಯ ಸಿದ್ಧಾಂತಗಳಲ್ಲೆಲ್ಲ ಸಾಮಾನ್ಯವಾದುವುಗಳಾದರೂ ಕಾಶ್ಮೀರ ಪ್ರತ್ಯಭಿಜ್ಞಾದಿ ಶೈವಸಾಮಾನ್ಯರೆಲ್ಲ ಜೊತೆಗೆ ಇನ್ನೂ ಹನ್ನೊಂದು ತತ್ತ್ವಗಳನ್ನು ಸೇರಿಸಿ ಮೂವತ್ತಾರು ತತ್ತ್ವಗಳನ್ನು ಹೇಳುತ್ತಾರೆ. ದಾಸರು ಇಲ್ಲಿ

ಒಂದೇ. ಲಕ್ಷ್ಯರಹಿತ ತಪಸ್ಸು ಯೋಗದಲ್ಲಿ ಒಪ್ಪಿತವಾಗಿಲ್ಲ. ನಿರಂತರ ಉಪಾಸನಾಮೂರ್ತಿ ಯಾವುದೋ ಅದು ಬೇಕೇಬೇಕು ಎನ್ನುವುದು ಇಲ್ಲಿ ಮುಖ್ಯ.

ಇವರ ಇನ್ನೊಂದು "ತೀರ್ಥವಪಿಡಿದವರು ತಿರುನಾಮಧಾರಿಗಳೇ– ಜನ್ಮಸಾರ್ಥಕವಿರದವರು ಭಾಗವತರಹುದೇ....." ಎಂದು ಮೊದಲಾಗುವ ಪದ್ಯದ ಆರನೆಯ ನುಡಿಯಲ್ಲಿ–

ಆರು ಚಕ್ರದ ನೆಲೆಯು ಅಷ್ಟಾಂಗಯೋಗದೊಳು ।
ಮೂರುಮೂರ್ತಿಯ ಮೂರುಕಡೆ ನಿಲಿಸಿ
ಕಾರುಣ್ಯನಿಧಿ ಕಾಗಿನೆಲೆಯಾದಿಕೇಶವನ ।
ಸೇರಿ ಭಜಿಸಿದವರಿಗೆ ಯಮನ ಕೊಲೆಯುಂಟೇ ॥

–ಹೀಗೆ ಹೇಳಿರುವುದನ್ನು ನೋಡಿದರೆ ಅಷ್ಟಾಂಗಯೋಗ ಸಾಧನೆಯ ಬಗ್ಗೆ ಇವರ ಒಲವಿನ ಅದಮ್ಯ ಇಚ್ಛೆಯನ್ನು ಕಾಣುತ್ತೇವೆ. ದಾಸಕೂಟದವರಲ್ಲೆಲ್ಲ ಈ ಯೋಗಾಭ್ಯಾಸದ ಪರಿಪಾಠವಿತ್ತೆಂದು ಊಹಿಸಬಹುದಾಗಿದೆ.[೧೯] ಬಹುಶಃ ಪುರಂದರದಾಸರ ಸಹಯೋಗದಿಂದ ಯೋಗಾಭ್ಯಾಸ ರಹಸ್ಯ

---

ಆರು + ಮೂರು + ಹದಿನಾರು (ಇಪ್ಪತ್ತೈದು ತತ್ತ್ವಗಳೆಂದು) ಎಂದು ಹೇಳಿರುವುದು ಸಾಮಾನ್ಯತತ್ತ್ವಗಳೆಂದು ತಿಳಿಯಬೇಕು.

೧೯. ಪುರಂದರದಾಸರೂ ಕೂಡ ತಮ್ಮ ಪದ್ಯಗಳಲ್ಲಿ ಅಷ್ಟಾಂಗ ಯೋಗಕ್ಕೆ ಸಂಬಂಧಿಸಿದ ಅನೇಕ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. "ಕಣ್ಣಿನಿಂದ ನೋಡೋ ಹರಿಯ ಒಳಗಣ್ಣಿನಿಂದ ನೋಡೋ..." ಎಂದು ಮೊದಲಾಗುವ ಪದ್ಯದಲ್ಲಿ "ಆಧಾರ ಮೊದಲಾದ ಆರು ಚಕ್ರವ ಶೋಧಿಸಿ. ಬಿಡಬೇಕು ಈ ಕ್ಷಣ ಮೂರು ಸಾಧಿಸಿ, ಸುಷುನ್ನು ಏರು, ಅಲ್ಲಿ ಭೇದಿಸಿ ನೀ ಪರಬ್ರಹ್ಮವ ಸೇರು. ಎವೆಹಾಕದೆ ಮೇಲೆ ನೋಡು ; ಮುಂದೆ ತವಕದಿಂದಲಿ ವಾಯುಬಂಧನ ಮಾಡು; ಸವಿದು ನಾದವ ಪಾನಮಾಡು ; ಅಲ್ಲಿ ನವವಿಧ ಭಕ್ತಿಯಲಿ ನಲಿದಾಡು. ಅಂಡದೊಳಗೆ ಆಡುತಾನೆ ಭಾನುಮಂಡಲ ನಾರಾಯಣನೆಂಬುವನೆ ಕುಂಡಲಿನಿ ತುದಿಯೊಳಗಿದ್ದಾನೆ, ನಮ್ಮ ಪುರಂದರ ವಿಠಲನು ಪಾಲಿಸುತಾನೆ. ಹೀಗೆ ಹೇಳಿರುವ ಮಾತುಗಳೆಲ್ಲ ಅಷ್ಟಾಂಗಯೋಗಸಾಧನೆಯ ಸಾರಸರ್ವಸ್ವಗಳೇ ಆಗಿವೆ. ಇದರಂತೆ "ಪಿಂಡಾಂಡದೊಳಗಿನ ಗಂಡನ ಕಾಣದೆ ಮುಂಡೆಯರಾದರು ಪಂಡಿತರೆಲ್ಲ..." ಎಂದು ಮೊದಲಾಗುವ ಪದ್ಯವಂತೂ ಪೂರ್ಣವಾಗಿ ಯೋಗಪರವಾದುದೇ. ಈ ಯೋಗಜನ್ಯ ಶಕ್ತಿಗಳು ದೇಹ–ಮನ–ಬುದ್ಧಿ–ಚಿತ್ತ–ಅಹಂಕಾರಾದಿಗಳ ಪದರು ಪದರುಗಳ ವಿಶ್ಲೇಷಣೆಗಳೇ. ದೇಹದಲ್ಲಿರುವ ಒಟ್ಟು ಒಂಬತ್ತು ಚಕ್ರಸ್ಥಾನಗಳ ಸಂಶೋಧನೆಯ ಫಲಗಳ ಸಿದ್ಧಿಗಳನ್ನೊಳಗೊಂಡವರೇ ಸಿದ್ಧರು. ಈ ಸಿದ್ಧಸ್ಥಿತಿಯಲ್ಲಿಯೇ ಮನುಷ್ಯನಿಗೆ ಮನಸ್ಸೆಲ್ಲ ಕಣ್ಣಾಗಿ ಅಪರೋಕ್ಷ ಜ್ಞಾನ ಲಭಿಸುವುದೆಂದು ಹೇಳಲಾಗುತ್ತದೆ. ದಾಸವರ್ಗವೆಲ್ಲ ಮಾನಸ ಪೂಜಾ ವಿಧಿಯಲ್ಲಿ ಪರಮಾಸಕ್ತರು. ಆ ನಿಷ್ಠೆಯಲ್ಲಿ ಮೇಲೇರಿದವರು ಅಪರೋಕ್ಷ ಜ್ಞಾನಿಗಳೆನಿಸುತ್ತಾರೆ.

ಪಡೆದಿರಬಹುದೋ ಅಥವಾ ಇನ್ನಾವ ಮೂಲದಿಂದಾದರೂ ಪಡೆದಿರಬಹುದೋ ಗೊತ್ತಿಲ್ಲ. ಜ್ಞಾನವೆಂಬುದು ಯಾವುಯಾವುದುಂಟೋ ಅದನ್ನು ಪ್ರಾಂಜಲ ಮನಸ್ಸಿನಿಂದ ಸ್ವೀಕರಿಸುವ ಸಹೃದಯತೆಯನ್ನು ಹೊಂದಿದ್ದ ಕನಕದಾಸರು ತಾವು ಜನ್ಮಧರಿಸಿ ಬೆಳೆದು ಬಾಳಿದ ಬಾಡ-ಬಂಕಾಪುರ-ಕಾಗಿನೆಲೆಗಳಲ್ಲಿ ಆಗ ವ್ಯಾಪಕವಾಗಿ ಪ್ರಚಾರದಲ್ಲಿದ್ದ ವೀರಶೈವ ಧರ್ಮದವರ ಶಿವಯೋಗದ ಜ್ಞಾನಾನುಭವಗಳ ಪರಿಚಯವನ್ನು ಪಡೆದಿದ್ದರೆಂಬ ಬಗೆಗೆ ಈ ಪೂರ್ವದಲ್ಲಿ ಹೇಳಿರುವ ಯೋಗಪರವಾದ ಪದ್ಯಗಳ ಮೂಲಕ ಊಹಿಸಲು ಶಕ್ಯವಿದೆ. ಆದರೆ ಇದಮಿತ್ಥ ಎಂದು ನಿರ್ಣಯಿಸಲು ಆಧಾರಗಳು ಸಾಲವೆಂಬುದನ್ನು ಮಾತ್ರ ಒಪ್ಪಿಕೊಳ್ಳಬೇಕಾಗಿದೆ. ಇದೇನೇ ಇರಲಿ. ವ್ಯಾಸರಾಯರ ಮುಷ್ಟಿಯಲ್ಲಿರುವುದು 'ಸಾಲಿಗ್ರಾಮ'ವೆಂದು ಹೇಳಿದುದು ಅಪರೋಕ್ಷ ಜ್ಞಾನದಿಂದ ಎಂಬುದೇ ಸತ್ಯಸಂಗತಿ. ಈ ಘಟನೆಯ ಬಗೆಗೆ "ಈತನೀಗ ವಾಸುದೇವನು । ಈತನೀಗ ವಾಸುದೇವ । ಈ ಸಮಸ್ತ ಭುವನದೊಡೆಯ ...." ಎಂದು ಮೊದಲಾಗುವ ಅವರ ಪದ್ಯವನ್ನು ಹೊಂದಿಸಿ ಹೇಳುವುದು ಎಷ್ಟರಮಟ್ಟಿಗೆ ಸಮಂಜಸವೋ ಏನೊ ! ಪದ್ಯದ ಸಂದರ್ಭ ಬೇರೆ ಇರಬಹುದೆಂದು ನಮಗನಿಸುತ್ತದೆ. ಪದ್ಯವನ್ನು ಘಟನೆಗೆ ಹೊಂದಿಸಿ ಕಥೆಯನ್ನು ರಂಜನೆಗೊಳಿಸಲು ಪ್ರವಚನಕಾರರು ಹರಿದಾಸರು ಕಲ್ಪಿಸಿಕೊಂಡಿದ್ದಾರಾದೀತು.

ಇನ್ನೊಂದು ಮುಖ್ಯವಿಷಯುವನ್ನು ಇಲ್ಲಿ ಜ್ಞಾಪಿಸುವುದು ಅಪ್ರಕೃತವೆನಿಸಲಾರದು. ಕನಕದಾಸರು ಯಾವುದೇ ಒಂದು ವ್ಯವಸ್ಥಿತ ಸಿದ್ಧಾಂತಾನುವರ್ತಿಗಳ ಸಮಾಜದಲ್ಲಿ ಹುಟ್ಟಿಬಂದವನಲ್ಲ.[೨೦] ಮಾಧ್ವ, ರಾಮಾನುಜೀಯ, ಭಾಗವತಾದಿ ಪ್ರಮೇಯಗಳ ಸಂಬಂಧವನ್ನು ಪರಿಸರ

---

೨೦. ಭಾರತದಲ್ಲಿ ಯಾವುದೇ ಒಂದು ಧರ್ಮ ತರ್ಕಬದ್ಧವೆಂದು ಹೇಳುವುದಕ್ಕೆ ಕೆಲವು ಮಾನದಂಡಗಳುಂಟು : ಧರ್ಮವ್ಯವಸ್ಥೆಯಲ್ಲಿ ಜೀವ-ಜಗತ್-ಈಶ್ವರ-ಈ ಮೂರರ ಬಗೆಗೆ ಯುಕ್ತಿ ಯುಕ್ತ ವಿಚಾರಪೂರ್ಣ ಧರ್ಮಗ್ರಂಥಗಳಿರಬೇಕು. ಆ ತತ್ತ್ವಗಳನ್ನು ಆಚರಿಸಿ ಬ್ರಹ್ಮಾಂಡ ವ್ಯಾಪಾರದೊಡನೆ ಸಾಮಂಜಸ್ಯಗೊಳ್ಳಲು ಮಾರ್ಗದರ್ಶನ ಮಾಡುವ ವಿಧಿನಿಯಮಗಳ ಶಾಸ್ತ್ರಗ್ರಂಥಗಳಿರಬೇಕು. ವ್ಯಾವಹಾರಿಕ ಜಗತ್ತಿನಲ್ಲಿ ಪರಸ್ಪರ ಪೂರಕವಾಗಿ ಬಾಳಬೇಕಾದ ಅರ್ಥಪೂರ್ಣ ಮಾರ್ಗದರ್ಶನ ಗ್ರಂಥಗಳಿರಬೇಕು. ಅದೇ ತರ್ಕಬದ್ಧ ಧರ್ಮವೆನ್ನಲಾಗುತ್ತಿದೆ. ವೈದಿಕಗಳೆಂದು ಹೇಳಲಾಗುವ ದ್ವೈತಾದ್ವೈತ ವಿಶಿಷ್ಟಾದ್ವೈತ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಗಳು ಪ್ರಸ್ಥಾನತ್ರಯ ಭಾಷ್ಯ (ಗೀತೆ-ಬೃಹದ್ದಶೋಪನಿಷತ್ತುಗಳು-ಬ್ರಹ್ಮಸೂತ್ರ ಭಾಷ್ಯಗಳು)ಗಳನ್ನು ಬರೆದು ಈ ವ್ಯವಸ್ಥೆಯಲ್ಲಿ

ಪ್ರಭಾವದಿಂದ ಇವರ ಸಾಹಿತ್ಯದಿಂದ ಊಹಿಸಬಹುದು. ಆದರೂ ಮಾಧ್ವ ಸಿದ್ಧಾಂತ ಪ್ರಮೇಯದಲ್ಲಿ ಪೂರ್ಣನಂಬಿಕೆ ಇಟ್ಟುದಂತೂ ನಿಜವೇ. ಕಾರಣ : ಇವರು ಜ್ಞಾನದಾಹದಿಂದ ಅತ್ತಿತ್ತ ಸುತ್ತುತ್ತಿದ್ದ ಸಮಯದಲ್ಲಿ ಬಹು ಜನಪ್ರಿಯವಾಗಿ ಭಕ್ತಿಮಾರ್ಗವನ್ನು ಜಾತಿಮತ ತಾರತಮ್ಯವಿಲ್ಲದೆ ಪ್ರಚಾರಗೊಳಿಸುತ್ತಿದ್ದ

---

ಮುಂದುವರಿದು ಬಂದಿದ್ದಾರೆ. ಜೈನ ಬೌದ್ಧಗಳು ತಮ್ಮವೇ ಆದ ಸಿದ್ಧಾಂತ ಗ್ರಂಥಗಳನ್ನು ಬರೆದು ತಮ್ಮ ಧರ್ಮವ್ಯವಸ್ಥೆ ಮಾಡಿಕೊಂಡಿದ್ದಾರೆ.

ಈ ಮೇಲೆ ಹೇಳಿದ ಧರ್ಮವ್ಯವಸ್ಥೆಯ ಒಂದು ನಿರ್ದಿಷ್ಟ ಕಟ್ಟಿಗೊಳಪಡದ ಹಿಂದೂ ಜನಾಂಗಗಳು ಭಾರತ (ಕರ್ನಾಟಕ)ದಲ್ಲಿವೆ. ಎಂದಿನಿಂದಲೂ ವೃತ್ತಿಯಿಂದ ಬಂದ ಹೆಸರಿನ ಹಣೆಪಟ್ಟಿಯೊಡನೆ 'ಶೂದ್ರ' ವರ್ಗಪ್ರಭೇದಗಳಾಗಿ ಜಾತಿಗಳು, ಕುಲಗಳು ಎಂದು ಕರೆಸಿಕೊಳ್ಳುತ್ತ ಬಂದಿವೆ. ಅವು–ಕುರುಬ–ತಳವಾರ–ಒಕ್ಕಲಿಗ–ಬೇಡ–ಅಂಬಿಗ–ಕಬ್ಬಿಲ–ಜಾತಿಗ–ವಡ್ಡ–ತಿಗುಳ–ಅಗಸ–ಗೊಲ್ಲ...ಇತ್ಯಾದಿ ಇತ್ಯಾದಿ ಹೆಸರುಗೊಂಡಿವೆ. ಇವರು ತಮ್ಮ ಪರಿಸರದಲ್ಲಿನ ತಮಗೊಪ್ಪಿತವಾದ ಧರ್ಮವೊಂದರ ಅನುಯಾಯಿಗಳಾಗಿ ಅವರ ಆಚರಣೆಗಳನ್ನು ಅನುಸರಿಸುವುದಲ್ಲದೆ ತಮವೇ ಆದ ಕೆಲವು ನಂಬುಕೆಗಳನ್ನೂ ಮುಂದುವರಿಸಿಕೊಂಡು ಬಂದಿದ್ದಾರೆ. ಕನಕದಾಸ ಕುರುಬರೆಂದು ಹೇಳಿಸಿಕೊಳ್ಳುವ ಜನಾಂಗದಲ್ಲಿ ಜನಿಸಿದವನು. 'ಕುರುಬ' ಎನ್ನುವುದು ಕುರಿಕಾಯುವಿಕೆಯಿಂದ ಬಂದ ವೃತ್ತಿವಾಚಕವಲ್ಲ. 'ಕುರುವ' ಎಂಬ ಶಬ್ದ ಸ್ವಲ್ಪ ವ್ಯತ್ಯಾಸಗೊಂಡು ಆದ ರೂಪವೆಂದು ಇತಿಹಾಸಜ್ಞರಮತ.

'ಕುರುವ' ಎಂಬುದೊಂದು ಪ್ರಾಚೀನ ಕರ್ನಾಟಕದ ದೊಡ್ಡ ಜನಾಂಗ. ಈ ಜನಾಂಗದವರು ರೇವಣಸಿದ್ಧ, ಸಿದ್ಧರಾಮ ಬಸವಣ್ಣನವರ ಕಾಲದಲ್ಲಿ ವೀರಶೈವದಲ್ಲಿ ಅಂತರ್ಭಾವಗೊಂಡರು. ಇನ್ನು ಕೆಲವರು ರಾಮಾನುಜ–ಮಧ್ವರುಗಳ ಪ್ರಭಾವಕ್ಕೊಳಗಾಗಿ ಅವರನ್ನೂ, ವೀರಶೈವರನ್ನೂ ಅನುಸರಿಸುತ್ತ ಬಂದಿದ್ದಾರೆ. ಹಿಂದಿನಿಂದಲೂ ಈ ಜನಾಂಗದಲ್ಲಿ ತಿರುಪತಿಯ ತಿಮ್ಮಪ್ಪನ ಭಕ್ತರೇ ಹೆಚ್ಚು. ತಿರುಮಲೆ ಎಂದರೆ–ಶ್ರೀಮಲೆ–ಶ್ರೀಶೈಲ–ವೇಂಗಡ–ಸಪ್ತಗಿರಿ ಇತ್ಯಾದಿ ಹೆಸರಿನ ತಿರುಪತಿ ಬೆಟ್ಟ. ತಿರುಮಲೆಯ ಅಪ್ಪ–ತಿರುಲಪ್ಪ–ತಿಮ್ಮಪ್ಪ–ತಿಮ್ಮಕೇಶವ–ವೇಂಗಡದೊಡೆಯ ಇತ್ಯಾದಿ ಆ ದೇವತೆಯ ಹೆಸರು. ಕರ್ನಾಟಕದ ಮಹಾಸಾಹಸದ ಜನಾಂಗದ ಈ ಕುರುವರು ಅರಣ್ಯದಲ್ಲಿದ್ದುಕೊಂಡು ಪಶುಪಾಲನ–ವ್ಯವಸಾಯ–ಆನೆಗಳನ್ನು ಹಿಡಿದು ಪಳಗಿಸುವುದು–ಹೈನುಗಾರಿಕೆ–ಅರಣ್ಯೋತ್ಪನ್ನಗಳ ಸಂಗ್ರಹ ಮುಂತಾದ ವೃತ್ತಿಗಳಿಂದ ಸಮೃದ್ಧರಾಗಿಯೋ ಬಾಳುತ್ತ ತಿರುಪತಿ–ತಿರುಮಲೆಗಳವರೆಗೂ ವ್ಯಾಪಿಸಿದ್ದರು. ತಿರುಮಲೆಯಲ್ಲಿ ಇನ್ನೂ ಗುಡಿಗುಂಡಾರಗಳಿಲ್ಲದೆ ಬಯಲಿನಲ್ಲಿಯೇ ಇದ್ದ ವೇಂಗಡದೊಡೆಯನ ಭಕ್ತರಾದರು. ಮುಂದೆ ತಮ್ಮಲ್ಲಿಯೇ ಒಡೆಯನನ್ನಾಗಿ ಮಾಡಿಕೊಂಡು ಜನಾಂಗ ವ್ಯವಸ್ಥೆ ಮಾಡಿ ಪಾಳೆಪಟ್ಟುಗಳನ್ನು ಕಟ್ಟಿದರು. ಅನಂತರ ಈ ಸಾಹಸೀ ಜನಾಂಗವೇ ಯಾದವ ಕುಲವೆನಿಸಿ ರಾಜ್ಯಾದಿಗಳನ್ನು ಕಟ್ಟಿದರು. (ಇವರನ್ನು 'ಪಲ್ಲವ'ರೆಂದೂ ಕೆಲವರು ಹೇಳುವರಂತೆ.) ಈ ವಿಷಯವನ್ನು ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರು ತಮ್ಮ ತಿರುಪತಿ ತಿಮ್ಮಪ್ಪ ಪುಸ್ತಕದಲ್ಲಿ ವಿವರಿಸಿರುವುದು ವಿಚಾರಯೋಗ್ಯವೂ ಸಂಶೋಧನೆಯ ವಿಷಯವೂ ಆಗಿದೆ. ವಿಜಯನಗರ ಸ್ಥಾಪಕರಾದ ಹಕ್ಕಬುಕ್ಕರು ಕುರುಬ(ಕುರುವ)ರೆಂದೇ ಅನೇಕ ಹೇಳಿಕೆ ಕೇಳಿಕೆಗಳುಂಟು.

'ದಾಸಕೂಟ'ದ ಆದರ್ಶ ಇವರನ್ನು ಆಕರ್ಷಿಸಿದ್ದು ಎನ್ನಬೇಕು. ಅದನ್ನು ಹುಟ್ಟು ಹಾಕಿ ಪೋಷಿಸುತ್ತಿದ್ದವರು ಸೋಸಲೆ ಮಠದ ವ್ಯಾಸರಾಯರು. ಆ ಕಾಲದಲ್ಲಿ ಅವರ ಕೀರ್ತಿಗೌರವಗಳು ಮುಗಿಲೆತ್ತರಕ್ಕೇರಿದ್ದವು. ಕರ್ನಾಟಕ ರಮಾರಮಣರೆನಿಸಿದ್ದ ಚಕ್ರವರ್ತಿಗಳ ಮಟ್ಟದಲ್ಲಿ ಅನುರಣಿತಗೊಂಡಿತ್ತು. ಸಾಕ್ಷಾತ್ ಕೃಷ್ಣದೇವರಾಯನೇ ಇವರನ್ನು ಬಹುದೊಡ್ಡ ಸಂನ್ಯಾಸಿಗಳೆಂದು ಗುರುತಿಸಿದ್ದನು. ವಿಜಯನಗರದ ಸಂಪರ್ಕವನ್ನು ವಿಶೇಷವಾಗಿ ಇಟ್ಟುಕೊಂಡಿದ್ದ ಕನಕದಾಸರಿಗೂ ಇದು ಗೊತ್ತಿತ್ತು. ಆದುದರಿಂದ ದಾಸಕೂಟದ ಅನುಯಾಯಿಯಾಗಿ ಮುಂದೆ ಪುರಂದರಾದಿ ಪ್ರಭಾವೀ ದಾಸವರೇಣ್ಯರ ಮತ್ತು ವಾದಿರಾಜಾದಿ ದಾರ್ಶನಿಕ ಸಂನ್ಯಾಸಿಗಳ ಮಧ್ಯದಲ್ಲಿ ರಾರಾಜಿಸುತ್ತ ಸಾರಾಸಗಟಾಗಿ ಆಗ ಪ್ರಚಲಿತವಿದ್ದ ಭಕ್ತಿಸಂಪ್ರದಾಯಗಳಲ್ಲಿನ ಮೌಢ್ಯವನ್ನೂ ಅರ್ಥವಿಲ್ಲದ ಆಚಾರವ್ಯವಹಾರಗಳನ್ನೂ ವ್ಯಾಸ-ದಾಸ ಕೂಟಗಳಲ್ಲಿನ ಅಂಕುಡೊಂಕನ್ನೂ ನಿರ್ದಾಕ್ಷಿಣ್ಯವಾಗಿ ಖಂಡಿಸಿ ಕರ್ನಾಟಕದ ಇನ್ನೊಬ್ಬ ಸರ್ವಜ್ಞನೆನ್ನಿಸಿಕೊಂಡಿದ್ದಾನೆನ್ನಬಹುದು. ಇಂಥ ಬಹುಶ್ರುತ ಕನಕದಾಸ ಯೌಗಿಕ ಪರಂಪರೆಯವರ ಸಂಪರ್ಕದಿಂದ ಕೆಲವು ಸಾಮಾನ್ಯ ಶಕ್ತಿಯನ್ನು ಪಡೆದಿರಬಹುದು. ವ್ಯಾಸರಾಯರೊಡನೆ ಇವನ ವ್ಯವಹಾರಗಳಿಗೆ ಸಂಬಂಧಿಸಿದ ಇಂಥ ಕಥೆಗಳೇ ಹೆಚ್ಚಾಗಿವೆ. ಪ್ರಥಮತಃ ಕನಕದಾಸನನ್ನು ಗುರುತಿಸಿ, ಗೌರವಿಸಿದವರೂ, ಗುರುಗಳೂ ಇವರೇ ಆದುದು ಕಾರಣವಿರಬಹುದು.

## ಇನ್ನುಳಿದ ಕೆಲವು ಐತಿಹ್ಯಗಳು

### (೧) ತಮಗೂ ದೈವಸಾಕ್ಷಾತ್ಕಾರ ಮಾಡಿಸಿ ಎಂದ ಕಥೆ

ಕನಕದಾಸ ಸೋಸಲೆ ಮಠದಲ್ಲಿ ವ್ಯಾಸರಾಯರ ಕೃಪಾಪೇಕ್ಷೆಯಿಂದ ಹೋಗಿ ವಾಸ್ತವ್ಯ ಮಾಡಿ ಅವರಿಂದ ಧರ್ಮಬೋಧೆ ಪಡೆಯುತ್ತಿದ್ದ ಸಮಯದಲ್ಲಿ ಅಲ್ಲಿನ ಪಂಡಿತ ವರ್ಗ (ವ್ಯಾಸಕೂಟ)ದವರು ಇವರನ್ನು ತಿರಸ್ಕಾರಭಾವದಿಂದ ಕಾಣುವಾಗ ಪಂಡಿತವರ್ಗಕ್ಕೆ ಕನಕದಾಸರು ಜ್ಞಾನಮಾರ್ಗದಲ್ಲಿ ಏರಿದ ಎತ್ತರದ

---

ಹಕ್ಕಬುಕ್ಕರು ಮೊದಲ್ಗೊಂಡು ಎಲ್ಲ ರಾಜರೂ ಒಂದಿಲ್ಲೊಂದು ರೀತಿಯಲ್ಲಿ ತಿರುಪತಿಯ ಭಕ್ತರೇ ಆಗಿದ್ದರು. ಈ ದೃಷ್ಟಿಯಿಂದ ವಿಚಾರಿಸಿದಾಗ ಕನಕದಾಸನ ಪೂರ್ವಜರೂ ಪರಿಸರ ಪ್ರಭಾವ ಏನೇ ಇರಲಿ ತಿರುಪತಿ ತಿಮ್ಮಪ್ಪನ ಭಕ್ತರೇ. ಕನಕದಾಸನ ಹೆಸರೂ 'ತಿಮ್ಮಪ್ಪ' ಎಂದೇ! ಈ ಜನಾಂಗದಲ್ಲಿ ಶೈವ-ಮಾಧ್ವ-ರಾಮಾನುಜೀಯ ಪಂಥಾನ್ವಯದವರೆಲ್ಲ ಇದ್ದಾರೆನ್ನಬಹುದು. ವೃತ್ತಿಯಿಂದ ಈ ಜನಾಂಗವೇ ಹಾಲುಗುರುಬ-ಜೇನುಗುರುಬ-ಕಾಡುಗುರುಬ-ಗೊಲ್ಲ (ಗೋವಳ)- ಇತ್ಯಾದಿ ಪ್ರಭೇದ ಮಾಡಿಕೊಂಡಿದೆ.

ಪರಿಚಯ ಮಾಡಿಕೊಡಬೇಕೆಂದು ಯೋಚಿಸಿ. ಒಂದು ದಿನ "ಅಯ್ಯ ಕನಕದಾಸ, ನೀನು ದೈವ ಸಾಕ್ಷಾತ್ಕಾರ ಪಡೆದವನೆಂದು ಕೇಳಿದ್ದೇವೆ. ನಾಳೆಯ ದಿನ ನಮ್ಮ ಪೂಜಾಸಮಯದಲ್ಲಿ ನಮಗೂ ದೈವ ಸಾಕ್ಷಾತ್ಕಾರ ಮಾಡಿಸುವಿರಾ"–ಎಂಬುದಕ್ಕೆ ದಾಸರು 'ಆಗಲಿ' ಎಂದರಂತೆ, ಮರುದಿನ ಮಠವು ಪಂಡಿತರ ಭಕ್ತರ ಸಮುದಾಯದಿಂದ ಕಿಕ್ಕಿರಿದು ತುಂಬಿ ಹೋದ ಸಮಯದಲ್ಲಿ ನಾಯಿಯೊಂದು ಮಠದ ಆವರಣ ಪ್ರವೇಶ ಮಾಡಿತು. ಅಲ್ಲಿನ ಭಕ್ತರೂ ಈ ಪಂಡಿತರೂ ಅದನ್ನು "ಹಚಹಚ"–ಎಂದು ಬೆದರಿಸಿ ಹೊಡೆದು ಅಟ್ಟಿದರೆಂದು ಅತಿರಂಜನೆಗೊಳಗಾದ ಕಥೆ. ಇದು ಕೇವಲ ಧರ್ಮಸೂಕ್ಷ್ಮಪ್ರಶ್ನೆಯಲ್ಲದೆ ಅಘಟಿತ ಘಟನೆ ಇಲ್ಲಿ ಏನೂ ಕಾಣದು. ಈ ಪ್ರಸಂಗವನ್ನು ತತ್ತ್ವಶಾಸ್ತ್ರದ ಒರೆಗಲ್ಲಿಗೆ ತಿಕ್ಕಿ ಉಜ್ಜಿ ನೋಡುವ ಒಂದು ಕಸರತ್ತಿನ ವರಸೆ. ಸ್ವತಃ ಮಧ್ವಾಚಾರ್ಯರೇ ಹೇಳುವ ಹತ್ತು ರೀತಿಯ ಹರಿಯ ವಿಭೂತಿತ್ವದ ಮನನ ಕ್ರಿಯೆಯ ಸ್ವಾರಸ್ಯವೂ ಅಲ್ಲಿ ಉಂಟು. ಅವುಗಳಲ್ಲಿ "ಸಮಸ್ತಸರ್ವೇಷು ಭೂತೇಷು"–ಎಂಬುದೊಂದು ಮನನ ಕ್ರಿಯೆ. ಪಂಡಿತವರ್ಗಕ್ಕೆ ಈ ಮಾತಿನ ಅರ್ಥಗೊತ್ತಿರಬಹುದು ; ಆ ಮಾತಿನ ವಾಕ್ಯಾರ್ಥವನ್ನು ದಿನಗಟ್ಟಲೆ ಮಾಡಿ ಭಾಷಣ ಮಾಡಬಹುದು, ಬರೆಯಲೂಬಹುದು ಹತ್ತಾರು ಪುಟ. ಗೀತೆಯಲ್ಲೂ "ಅಹಮಾತ್ಮಾ ಗುಡಾಕೇಶ, ಸರ್ವ ಭೂತಾಶಯ ಸ್ಥಿತಃ" ಎಂದು ಹೇಳಿರುವುದರ ಪರಿವೆಯೂ ಇರಬಹುದು. ಈ ವಿಷಯದ ಆತ್ಮಜ್ಞಾನದ ಪರಿಧಿ ಅಪರಿಮಿತ, ನಿಜ. ಇದು ಪಂಡಿತರಿಗೆಲ್ಲ ಗೊತ್ತಿದೆ. ಗೊತ್ತಿರುವುದು ಜ್ಞಾನವಾಯಿತು. ಈ ಜ್ಞಾನ ಕ್ರಿಯೆಯಲ್ಲಿ ಪ್ರಸಾರವಾಗದಿದ್ದರೆ ಅದಕ್ಕೇನು ಬೆಲೆ? ನಾಯಿ ಬಂದಿದ್ದೀತು, ಅದನ್ನು ಹಿಂಸಿಸಿ ಓಡಿಸುವುದು ತತ್ವಜ್ಞಾನ ಹೇಗಾಗುತ್ತದೆ? ತಾರತಮ್ಯ ಜ್ಞಾನ ಶಾಸ್ತ್ರಜ್ಞರಿಗೆ ಸಲ್ಲದಲ್ಲವೆ. ಈ ಒಂದು ಪ್ರಮೇಯವನ್ನು ವಿಶ್ಲೇಷಣೆಗೆ ಒಳಪಡಿಸುವುದೇ ಈ ನಾಯಿಯ ಪ್ರಸಂಗಕ್ಕೆ ಸೊಗಸಾದ ಒಂದು ಉದಾಹರಣೆಯಾಗಿದೆ. ಇಲ್ಲಿ ಪರಮಾತ್ಮನೇ ನಾಯಿಯ ರೂಪ ಧರಿಸಿ ಬಂದನೆಂದು ಅಲ್ಲ ; ನಾಯಿಯಲ್ಲಿರುವ ಪರಮಾತ್ಮತತ್ತ್ವವನ್ನರಿಯುವ 'ಸಮಸ್ತಸರ್ವೇಷು ಭೂತೇಷು' ಮಾತಿನ ಅರ್ಥ ಕೃತಿಯಲ್ಲಿಳಿಯಲಿಲ್ಲವಲ್ಲ ! ಎಂಬುದು ; ಇಷ್ಟೇ ಇಲ್ಲಿನ ಸ್ವಾರಸ್ಯ. ಕಥೆ ಹೇಳುವವರ ಜಾಣ್ಮೆ. ಕೇಳುವವರ ಉತ್ಸಾಹಕ್ಕನುಗುಣವಾಗಿ ಮರುದಿನದ ಪೂಜಾಸಮಯಕ್ಕೆ ಹಾವೊಂದು ಬರುತ್ತದೆ. ಆಗ ಅದನ್ನು ಯಾರೂ ಹೊಡೆಯಲಿಲ್ಲ, ನಿಜ. ಪೂಜೆಗೀಜೆ ಬಿಟ್ಟು ಪಂಡಿತರೆಲ್ಲ ಮಠ ಬಿಟ್ಟು ಓಡಿದವರೆಂಬ ಸ್ವಾರಸ್ಯದೊಡನೆ ಈ ಎರಡೂ ಕಥೆಗಳು ಬೆಳೆದು ಬಂದಿವೆ.

ಇದೂ ಅಲ್ಲದೆ ನಾಯಿಯ ಸ್ವಾರಸ್ಯದ ಈ ಪ್ರಸಂಗಕ್ಕೆ (ಹಾವಿನ ಪ್ರಸಂಗಕ್ಕಲ್ಲ) ಕನಕದಾಸರ "ಡೊಂಕು ಬಾಲದ ನಾಯಕರೇ ನೀವೇನೂಟವ ಮಾಡಿದಿರಿ..." ಎಂಬ ಪದ್ಯವನ್ನು ಬೇರೆ ಜೋಡಿಸಿಕೊಂಡು ಬಿಟ್ಟಿದ್ದಾರೆ.[೨೧] ಈ ಪದ್ಯಕ್ಕೂ ಈ ಘಟನೆಗೂ ಏನೂ ಸಂಬಂಧವಿಲ್ಲ. ಒಂದು ಕಟ್ಟುಕಥೆಯನ್ನು ರಂಜನೆಗೊಳಿಸಲು ಹುಟ್ಟು ಹಾಕಿದ ಇನ್ನೊಂದು ಕಟ್ಟುಕಥೆ ಅಷ್ಟೆ ! ಇದರಲ್ಲಿ ದಿನ ದಿನವೂ ಉದರ ನಿಮಿತ್ತವಾಗಿ ಭಿಕ್ಷಾಟನೆಗೆ ಹೋಗುವ ಡಾಂಭಿಕದಾಸನ ವಿಡಂಬನೆ ಇರಬೇಕೆಂದು ತೋರುತ್ತದೆ. ಅನ್ನಕ್ಕಾಗಿ ಮನೆ ಮನೆ ಅಲೆದಾಡುವ ನಾಯಿಯ ಪಾಡು ಮತ್ತು ಅದು ಎದುರಿಸುವ ಅಪಾಯಗಳನ್ನು ಸೂಚ್ಯವಾಗಿ ಹೇಳುವ ಪದ್ಯ ಇದಾಗಿದೆ. ಇಲ್ಲಿ ಡೊಂಕು ಬಾಲ–ನಾಯಕ–ಈ ಎರಡು ಪದಗಳನ್ನು ನಾಯಿಗೆ ಅನ್ವಯಿಸಿಕೊಂಡು ಕಥೆಯ ಸ್ವಾರಸ್ಯ ಹೆಚ್ಚಿಸಿಕೊಳ್ಳಲು ಯಾರೋ ದಾಸರು ಜೋಡಿಸಿಕೊಂಡು ಬಿಟ್ಟರು. ಎಷ್ಟೇ ತಿದ್ದಿದರೂ ದಾರಿಗೆ ಬರದ ಮನುಷ್ಯನ ಬುದ್ಧಿಯನ್ನು ನಾಯಿಯ ಬಾಲಕ್ಕೆ ಹೋಲಿಸುವುದುಂಟು. ಹೀಗೆ ದ್ವಂದ್ವಾರ್ಥವುಳ್ಳ ಈ ಪದ್ಯದ ಪ್ರಸಂಗವೇ ಬೇರೆ ; ಅರ್ಥವೇ ಬೇರೆ. ನಾಯಿಯ ಕಥೆಗೆ ಜೋಡಿಸಿ ಅದಕ್ಕೆ ಮಾಡುವ ಅರ್ಥವೇ ಬೇರೆ. ಕಥೆ ಇಷ್ಟಕ್ಕೆ ನಿಲ್ಲಲಿಲ್ಲ. ನಾಯಿ ಕನಕದಾಸನ ಗುಡಿಸಲಿಗೆ ಹೋಗಿ– "ಕನಕಾ, ನನ್ನನ್ನು ಬಡಗಿಯಿಂದ ಹೊಡಿಸಲು ಎಷ್ಟು ದಿನಗಳಿಂದ ಪ್ರತಿಜ್ಞೆ ಮಾಡಿದ್ದೆಯಯ್ಯಾ"– ಎಂದು ಕೇಳಿದ್ದಕ್ಕೆ "ದೇವಾ, ಹಿಂದೆ ನಾನು ರಾಜನಾಗಿದ್ದಾಗ ಕಾಳಗದಲ್ಲಿ ಮರಣಾಂತಿಕ ಪೆಟ್ಟು ಕೊಡಿಸಿರಲಿಲ್ಲವೆ ! ಅಂದಿನಿಂದ"–ಎಂದನಂತೆ. ಸ್ವಲ್ಪ ಹೊತ್ತು ಭಕ್ತನೊಡನೆ ಹೀಗೆ ಸರಸ ಸಲ್ಲಾಪಮಾಡಿ, ನಾಯಿವೇಷದ ಕಾಗಿನೆಲೆಯ

---

೨೧. ಈ ಪದ್ಯ ಕನಕದಾಸರ ಪದ್ಯವೇ ಅಲ್ಲ. ಇದು ಪುರಂದರದಾಸರ ಪದ್ಯ. ಮೂರು ನುಡಿಗಳ ಈ ಪದ್ಯದಲ್ಲಿ ಮೂರನೆಯ ನುಡಿಯ "ಹಿರೇ ಬೀದಿಯಲಿ ಓಡುವಿರಿ, ಕರೇಬೂದಿಯಲಿ ಹೊರಳುವಿರಿ, ಪುರಂದರ ವಿಠಲ ರಾಯನ ಈ ಪರಿ ಮರೆತು ಸದಾ ನೀವ್ ಚರಿಸುವಿರಿ" ಈ ಚರಣಗಳನ್ನು "ಹಿರಿಯ ಹಾದಿಲಿ ಓಡುವಿರಿ, ಕರೀಭೂಮಿಯಲಿ ಹೊರಳುವಿರಿ, ಸಿರಿ ಕಾಗಿನೆಲೆ ಆದಿಕೇಶವನ ಸ್ಮರಿಸಿದವರ ಗತಿ ತೋರುವಿರಿ" ಎಂದು ತಿದ್ದಿಕೊಂಡು ಫೋರ್ಜರಿ ಮಾಡಿ ಕನಕದಾಸರ ಹಾಡಿನ ಜೊತೆಗೆ ಸೇರಿಸಿಬಿಟ್ಟರು, ಹರಿಕಥೆದಾಸರು. ನಮ್ಮ ಸಾಹಿತ್ಯದಲ್ಲಿ ಇಂಥ ಕೆಲಸವೂ ಅಲ್ಲಲ್ಲಿ ನಡೆದಿರುವುದುಂಟು. ಸಾಹಿತ್ಯಲೋಕದಲ್ಲಿ ಎಂದಿನಿಂದಲೂ ಇದು ಇದ್ದೇ ಇದೆ, ಎಂದು ನಾವು ಸಮಾಧಾನಪಟ್ಟುಕೊಳ್ಳಬೇಕು ಅಷ್ಟೆ ! ಪುರಂದರದಾಸರ ಸಾಹಿತ್ಯ ವ್ಯವಸ್ಥೆಯನ್ನೂ ಅನೇಕ ರೀತಿಯಲ್ಲಿ ಸಂಪಾದಿಸಿ ಕ್ರಮಗೊಳಿಸಿದಂತೆ, ಕನಕದಾಸ ಸಾಹಿತ್ಯಸಂಪಾದನೆಯ ಕಾರ್ಯವ್ಯವಸ್ಥಾಬದ್ಧವಾಗಿ ಆಗಿಲ್ಲ. ಅಲ್ಲದೆ ಅವರ ಜೀವನಚರಿತ್ರೆಯ ಬಗೆಗೂ ಒಂದು ಪ್ರಾಮಾಣಿಕವಾದ ಗ್ರಂಥ ರಚನೆ ಆಗಿಲ್ಲ. ಇದೊಂದು ಕೊರತೆ ಎನ್ನಬಹುದು.

ಆದಿಕೇಶವ ಮಾಯವಾಗಿಬಿಟ್ಟ. ಕಥೆ ಸ್ವಾರಸ್ಯವಾಗಿಲ್ಲವೆ ? ಹಾವಿನ ಪ್ರಸಕ್ತಿ ಅಷ್ಟಕ್ಕೇ ನಿಂತುಹೋಗಿಬಿಟ್ಟಿತು. ಅದಕ್ಕೆ ಸಂಬಂಧ ಪಡುವ ಹಾಡು ಹರಿಕಥೆ ದಾಸರಿಗೆ ಸಿಕ್ಕಲಿಲ್ಲವೆಂದು ತೋರುತ್ತದೆ.

**(೨) ತಿರುಪತಿಯಲ್ಲಿ ಸ್ತೋತ್ರಮಾಡಿ ಭೂಕಂಪ ನಿಲ್ಲಿಸಿದ್ದು ಮತ್ತು ಮುಂದಕ್ಕೆ ಚಲಿಸದ ತೇರನ್ನು ಚಲಿಸುವಂತೆ ಮಾಡಿದ ಐತಿಹ್ಯಗಳು**

ಒಮ್ಮೆ ಕನಕದಾಸರು ತಿರುಪತಿಯಲ್ಲಿ ವಾಸ್ತವ್ಯ ಮಾಡಿದಾಗ ನಡುರಾತ್ರಿಯಲ್ಲಿ ಭೂಕಂಪವಾಯಿತೆಂದು ತೋರುತ್ತದೆ. (ಇದಕ್ಕೆ ತಿಥಿ–ವಾರ–ನಕ್ಷತ್ರಗಳೇನೇನೂ ಗೊತ್ತಿಲ್ಲ.) ಆ ಭೂಮಿಯ ಘನಘೋರ ಕೋಲಾಹಲಕಾರಕ ಭೂಕಂಪವನ್ನು ವೆಂಕಟೇಶ್ವರಸೋತ್ರ ಮಾಡಿ ನಿಲ್ಲಿಸಿಬಿಟ್ಟನೆಂದು ಐತಿಹ್ಯವೊಂದು ಪ್ರಚಲಿತದಲ್ಲಿದೆ.

ಈ ಘಟನೆಗೆ ಐದುನುಡಿಗಳ ಈ ಕೆಳಗಿನ ಹಾಡೊಂದನ್ನು ಜೋಡಿಸಲಾಗುತ್ತಿದೆ. ಕೊನೆಯಲ್ಲಿ ಹೇಳುವ “ಕನಕಪ್ರಿಯ ತಿರುಪತಿಯ ಗಿರಿಯಾದಿಕೇಶವನೆ”–ಎಂಬ ಮಾತಿನಿಂದ ಇದು ತಿರುಪತಿಯಲ್ಲಿ ನಡೆದ ಘಟನೆಯೆಂದು ಹೇಳಲಾಗುತ್ತಿದೆ.

ಏಕೆನಡುಗಿದೆ ತಾಯೆ ಭೂಮಿ ನಡುರಾತ್ರಿಯೊಳು ॥ ಪ ॥[೨೨]
ಪೊಡವಿಗೊಡೆಯನ ರಾಣಿ ಪರಮ ಕಲ್ಯಾಣಿ ॥ ಅ. ಪ ॥
...................................................................... ॥ ೧ ॥
ಉತ್ತಮರ ಹೊಟ್ಟೆಯಲಿ ಬೊಗಳೊ ಶ್ವಾನನು ಹುಟ್ಟಿ ।
ಹೆತ್ತವರ ನಿರ್ಬಂಧಕೊಳಗುಮಾಡಿ ॥
ಅತ್ತೆಮಾವನ ಕೀರ್ತಿಯನು ಕೊಂಡಾಡದಧಮರ ।
ಹೊತ್ತು ಇರಲಾರೆನೆಂದು ಮತ್ತೆ ನಡುಗಿದೆಯಾ ॥ ೨ ॥
...................................................................... ॥ ೩–೪ ॥
ಧರೆಯೊಳಗೆ ಕುಕರ್ಮಿಗಳು ಹೆಚ್ಚಿ ಕವಿತ್ವ ಕಲಿತು ।
ನರಕುರಿಗಳೆಲ್ಲ ನಡೆಗೆಟ್ಟರೆಂದು ॥
ಗುರುವೆ ಕೇಳಯ್ಯ ಕನಕಪ್ರಿಯ ತಿರುಪತಿಯ ।
ಗಿರಿಯಾದಿಕೇಶವನೆ ಒಲಿದು ನಿಲ್ಲಿಸಿದ ॥ ೫ ॥

---

೨೨. ಈ ಪದ್ಯ ಈಗ ಪ್ರಕಟವಾಗಿರುವ “ಕನಕದಾಸರ ಪದ”ಗಳೆಂಬ ಎಷ್ಟೋ ಗ್ರಂಥಗಳಲ್ಲಿ ಲಭ್ಯವಾಗುವುದಿಲ್ಲ. ಭಾಷೆ–ಶೈಲಿ–ರೀತಿಗಳ ದೃಷ್ಟಿಯಿಂದ ಇದು ಅನ್ಯಕೃತವಾಗಿರಲಾರದೆನ್ನಿಸುತ್ತದೆ. ಬಹುಶಃ ಕನಕದಾಸರ ಸಮಗ್ರ ಪದ್ಯಗಳ ಸಂಗ್ರಹಕಾರ್ಯ ವ್ಯವಸ್ಥಿತ ರೀತಿಯಲ್ಲಿ ನಡೆಯದಿರುವ ಕೊರತೆಯಾಗಿರಬಹುದು.

ಪವಾಡ ಕಲ್ಪನೆಯ ವ್ಯಾಪ್ತಿಗೆ ಬರದ ಪ್ರಕೃತಿ ವ್ಯವಸ್ಥೆಯ ಒಂದು ಸಹಜ ಕ್ರಿಯೆಗೆ ದೈವೀಭಾವನೆಯ ಕಂಚುಕ ತೊಡಿಸಿ, ಭಾವುಕರು ಹೇಳುವ ನೀತಿಸಂಹಿತೆಯನ್ನು ಜನತೆಯಲ್ಲಿ ಈ ಪದ್ಯ ಪ್ರಚುರಪಡಿಸಿದೆ, ಎನ್ನಬಹುದು. ಭೌಗೋಳಿಕ ವಿಜ್ಞಾನದ ಪ್ರಕೃತಿ ವ್ಯಾಪಾರಗಳಿಗೆಲ್ಲ ಈಶ್ವರನೇ ಕಾರಣನೆಂದೂ, ಅವನ ಕೃಪೆಯಿದ್ದಲ್ಲಿ ಇಂಥ ರೌದ್ರಗಳುಂಟಾಗುವುದಿಲ್ಲವೆಂದೂ ಪರಂಪರೆಯಿಂದ ನಂಬಿಕೊಂಡು ಬಂದಿರುವ ಜನತೆಯ ಭಾವನೆಗಳ ಕ್ರೋಢೀಕರಣ ಪದ್ಯದುದ್ದಕ್ಕೂ ಅಭಿವ್ಯಕ್ತ. ಇಂಥ ನಂಬಿಕೆಗಳಿಗೆ ತಾತ್ತ್ವಿಕ ದೃಷ್ಟಿಯಿಂದ, ವೈಜ್ಞಾನಿಕ ಸತ್ಯದಿಂದ ಸಮರ್ಥನೆ ದೊರೆಯದಿದ್ದರೂ, ಈ ನಂಬಿಕೆಗಳಿಂದ ಸಾಮಾಜಿಕ ನೀತಿ ಸಂಹಿತೆಗೆ ಕೆಲಮಟ್ಟಿಗೆ ಸಹಾಯಕವಾದರೂ ಸತ್ಯವೇನೆಂಬುದು ಗೊತ್ತಾದ ಮೇಲೆಯೂ ಇಂಥ ಕೆಲವು ತರ್ಕಬದ್ಧವಲ್ಲದ ವಿಷಯದಲ್ಲಿ ಶ್ರದ್ಧೆತಾಳಬೇಕೆ ? ನಾವು ನಂಬಿದ್ದ ಅನೇಕ ಹಳೆಯ ಮೌಲ್ಯಗಳಿಗೆ ಅರ್ಥವಿಲ್ಲದಂತಾಗಿಲ್ಲವೇ ? ಈ ಹಳೆಯ ಮೌಲ್ಯಗಳಿಗೇ ನಾವು ಅಂಟಿಕೊಂಡು ಹೋಗಬೇಕೆ ? ಮುಂದೆ ಮುಂದೆ ಹೋಗುವ ವಿಶ್ವದ ಜ್ಞಾನಪ್ರವಾಹದೊಡನೆ ನಾವೂ ಮುಂದುವರಿಯದಿದ್ದರೆ ಮುಂದೆ ನಮ್ಮ ಗತಿಯೇನು ? ಎಂಬ ಒಂದು ವಿಚಾರ ಇತ್ತೀಚೆಗೆ ನಮ್ಮ ತರುಣ ಜನಾಂಗದ ತಲೆತಿನ್ನುವ ಸಮಸ್ಯೆಯಾಗಿ ಅವರು ಸಾರಾಸಗಟಾಗಿ ತರ್ಕಬದ್ಧವಾದ ಮತ್ತು ವೈಜ್ಞಾನಿಕ ಸತ್ಯಕ್ಕೆ ಒಪ್ಪಿಗೆಯಾಗುವ ಹಳೆಯ ಮೌಲ್ಯಗಳನ್ನೂ ತಳ್ಳಿ ಹಾಕುವುದರಲ್ಲಿ ಆಸಕ್ತಿವಹಿಸುತ್ತಿದ್ದಾರೆ. ಪ್ರಕೃತಿಯ ರೌದ್ರಗಳನ್ನು ಪರಿಹರಿಸುವ ಶಕ್ತಿಶಾಲಿಯೇ ಪ್ರಪಂಚದಲ್ಲಿ ಹುಟ್ಟಿಲ್ಲ. ಈ ಹಿಂದಿನ ಚರಿತ್ರೆಯಲ್ಲಿ ಭೂಕಂಪ, ಬಿರುಗಾಳಿ, ಸಮುದ್ರದ ರೌದ್ರ, ಸಿಡಿಲು ಹೊಡೆತ ಮುಂತಾದವನ್ನು ತಡೆಗಟ್ಟುವಲ್ಲಿ ಯಾವ ದೇವತೆ–ಯಾವ ಯೋಗಿ ಪ್ರಭಾವ ಬೀರಿದ್ದಾನೆ ? ಏನೇ ಆದರೂ ಮನುಷ್ಯ ಪ್ರಕೃತಿಯ, ಬ್ರಹ್ಮಾಂಡದ ಶಿಶುವೇ ಅಲ್ಲವೆ ! ಏನೂ ಗೊತ್ತಿಲ್ಲದಾಗ ಅಸತ್ಯವನ್ನು ಸತ್ಯವೆಂಬ ಭ್ರಮೆಯಿಂದ ಮನುಷ್ಯ ಹೇಗೆ ಹೇಗೋ ಶ್ರದ್ಧೆಯಿಟ್ಟು ಬದುಕಿದ ನಿಜ. ಈಗಲೂ ಅದೇ ಶ್ರದ್ಧೆ ಮುಂದುವರಿಯಬೇಕೇನು ? ತಿಳಿದವರು ನಮ್ಮ ಅಂಧಶ್ರದ್ಧೆಯ ಬಗ್ಗೆ ಏನೆಂದಾರು ? ಎಂದು ಅವರು ಕೇಳುತ್ತಿದ್ದಾರೆ. ಇದು ಮುಕ್ತ ಮನಸ್ಸಿನ ಸತ್ಯ ವಿಚಾರವೇ. ಆದರೂ ಈ ಮೂಲ್ಯಗಳನ್ನಿಟ್ಟುಕೊಂಡೇ ಸತ್ಯವೆಂದು ಕಂಡದ್ದರಲ್ಲಿ ಕಾಣಬಹುದಾದ್ದರಲ್ಲಿ ಹೊಸದಾಗಿ ಶ್ರದ್ಧೆ ಬೆಳಸಬೇಕೆಂಬುದಷ್ಟೆ, ಇಂದಿನ ವಿಚಾರವಾದಿಗಳಿಗಿರುವ ಸಮಸ್ಯಾ ಪರಿಹಾರ ಮಾರ್ಗ.

## ತೇರು ಎಳೆದ ವಿಚಾರ

ತಿರುಪತಿಯಲ್ಲಿ ಕನಕದಾಸರಿಂದಲೇ ತೇರು ಮುಂದೆ ಸಾಗಿತು ಎಂಬ ವಿಚಾರ : ಇದೊಂದು ವ್ಯಕ್ತಿನಿಷ್ಠ ಶ್ರದ್ಧಾಭಕ್ತಿ ವಿಚಾರವೇ. ವಿಜಯದಶಮಿಯಲ್ಲಿ ನಡೆಯುವ ತಿರುಪತಿಯ ರಥೋತ್ಸವಕ್ಕೆ ಕನಕದಾಸರು ಒಮ್ಮೆ ಹೋದಾಗ ತೇರು ಅಸಂಖ್ಯಾತ ಜನಗಳು ಹೊರಜಿಗೆ ಕೈಹಾಕಿ ಎಳೆದರೂ ಮುಂದೆ ಸಾಗಲೇ ಇಲ್ಲವಂತೆ. ಅಷ್ಟು ಹೊತ್ತಿಗೆ ಕನಕದಾಸರು ಆ ಜನಗಳ ಮಧ್ಯಕ್ಕೆ ಬಂದು ಸ್ವಾಮಿಗೆ ಕೈಮುಗಿದು "ಸ್ವಾಮಿ, ನಿನ್ನ ಮಕ್ಕಳ ಮೇಲೇಕೆ ಕೋಪ !" – ಎಂದು ಹೇಳುತ್ತ.

ಬಾರೊ ಭಾಗ್ಯದ ನಿಧಿಯೇ ದಯಾಂಬುಧೇ ।
ಸಾರಿದರ್ಗಿತ್ತೆ ಸುಧೆ ವಾರಿಜಾದಿಕ ಮೋದಿ ॥ ಅ ॥
ವಾರಿಜಾಧರ ಮುದದಿ ಸಾರ ಹೃದಯದಿ ಕೇರಿ – ।
ಕೇರಿಯಲಿ ಶೃಂಗಾರದಿ ಮೆರೆಯುವ ಅಪಾರ ದಯಾನಿಧಿ ॥ ಅ. ಪ ॥
ವಿಜಯ ನಿಮ್ಮಯ ಪಾದಭಜಕರಿಗೆ ಕೊಡಲಿ ।
ವಿಜಯದಶಮಿಯಲ್ಲಿ ವಿಜಯ ರಥದಲ್ಲಿ ಕೂತು
ವಿಜಯಳ ಸಹಿತದಿ ವಿಜಯಮಾಡುಬಾರೋ ॥
ವಿಜಯಸಾರಥಿ ಆದಿ । ವಿಜಯರಥದಿ ಪರರವಿಜನ ನೀ ಸೋಲಿಸಿ ।
ತ್ರಿಜಗ ವಿಜಯವೇಷ ವಿಜಯಗಿತ್ತು ಮೆರೆದೆ
ಮೂರುತಿಯೇ ॥ ಬಾರೊ ಭಾಗ್ಯದ ನಿಧಿಯೇ ........... ॥

–ಹೀಗೆ ಇಪ್ಪತ್ತೆಂಟು ಚರಣಗಳುಳ್ಳ ಪದ್ಯವನ್ನು ಎತ್ತರ ಸ್ವರದಿಂದ ಹಾಡುತ್ತ ತೇರಿನ ಹೊರಜಿಗೆ ಕೈ ಹಾಕಿದುದೇ ತಡ ತೇರು ದಡದಡ ಮುಂದೆ ಹರಿದುಬಂತು. ಇದನ್ನು ಕಂಡ ಜನತೆಯೆಲ್ಲ ಕನಕದಾಸನನ್ನು ದೈವೀಮಹಾಪುರುಷನೆಂದು ಕೊಂಡಾಡಿತು. ಅಂದಿನ ರಾತ್ರಿ ದೇವರು (ವೆಂಕಟೇಶ್ವರನು) ಭಕ್ತರೆಲ್ಲರ ಕನಸಿನಲ್ಲಿ ಕಾಣಿಸಿಕೊಂಡು "ನನಗೆ ಕೊಡುವ ಕಾಣಿಕೆಗಳನ್ನೆಲ್ಲ ಕನಕದಾಸರಿಗೇ ಕೊಡಿ ಅದೆಲ್ಲವೂ ತಪ್ಪದೆ ನನಗೇ ಅರ್ಪಿತವಾಗುವುದು" ಎಂದು ಹೇಳಿಬಿಟ್ಟ. ಜನ ಹಾಗೇ ಮಾಡಿತು. ತನ್ನ ಮುಂದೆ ರಾಶಿರಾಶಿಯಾಗಿ ಧನ ಕನಕದ ರಾಶಿ ಬೀಳತೊಡಗಿದ್ದನ್ನು ಕನಕದಾಸ ಕಂಡು ಅದು ತಿರುಮಲೇಶನ ಸೊತ್ತೆಂದು ಕೈಯಿಂದಲೂ ಮುಟ್ಟದೆ, ಮಾನಸಪೂಜಾನಿರತನಾಗಿ ಮನಸ್ಸಿನಿಂದಲೇ ದೇವರಿಗೆ ಅರ್ಪಿಸಲು ಅದು ಇದ್ದಕ್ಕಿದ್ದಂತೆ ಮಾಯವಾಗಿ ದೇವರ ಮುಂದೆ ರಾಶಿರಾಶಿಯಾಗಿ ಒಟ್ಟಿತು.

ಶ್ರದ್ಧಾವಂತರಾದ ಕೆಲವು ದಾಸಕೂಟದವರು ಕಲ್ಪಿಸಿದ ಈ ಕಥೆಗೂ ಈ ರೀತಿ ಕೈಕಾಲು ಮೂಡಿಸಿರುವುದು ಭಕ್ತನ ಭಕ್ತಿಯ ಮಹಿಮೆಯನ್ನು ಅತಾರ್ಕಿಕವಾಗಿ ಪ್ರಚಾರಗೊಳಿಸಿದ್ದೆಂದು ಸುಲಭವಾಗಿ ಹೇಲಬಹುದು. ಕನಕದಾಸರು ರಥೋತ್ಸವಕ್ಕೆ ತಿರುಪತಿಗೆ ಹೋಗಿರಬಹುದು. ಆ ಪದ್ಯವನ್ನೂ ಹಾಡಿರಬಹುದು. ತೇರೆಳೆಯುವಾಗ ಜನ ಕಡಿಮೆಯಲ್ಲಿರಬಹುದು ; ಭಾರವಾದ ತೇರು ಮುಂದೆ ಬಂದಿರಲಿಕ್ಕಿಲ್ಲ. ಕನಕದಾಸ ಬರುವಹೊತ್ತಿಗೆ ಜನ ಇನ್ನಷ್ಟು ಸೇರಿರಬಹುದು. ಆಗ ಮುಂದೆ ತೇರು ಸಾಗಿರಬಹುದು. ಈ ಒಂದು ಕ್ರಿಯೆಯ ಯಶಸ್ಸನ್ನು ಕನಕದಾಸರ ಮಹಿಮಾತಿಶಯಗಳ ಗುಂಪಿಗೆ ಸೇರಿಸಿರಬಹುದು. ಕಾಣಿಕೆಯ ವಿಚಾರವೂ ಅಷ್ಟೆ–ಇಂಥ ಕಥೆಗಳೆಲ್ಲ ಸಾಮಾನ್ಯವಾಗಿ ಪ್ರಖ್ಯಾತರಾದ ಭಕ್ತಿಜೀವನದ ವ್ಯಕ್ತಿಗಳ ತಲೆಗೆ ಕಟ್ಟಿ ಕೈತೊಳೆದುಕೊಳ್ಳುವುದು ಒಂದು ಪರಿಪಾಠ. ಇವೆಲ್ಲ ತರ್ಕಬುದ್ಧಿಯ ಕಕ್ಷೆಯಲ್ಲಿ ಬೆಲೆ ಕಾಣತಕ್ಕವುಗಳೇ ಅಲ್ಲ. ಒಂದು ವಾಸ್ತವಿಕಾಂಶವನ್ನು ಮಹಿಮೆಯ ಚೌಕಟ್ಟಿನಲ್ಲಿ ಅಳವಡಿಸಿರುವ ವ್ಯಕ್ತಿನಿಷ್ಠ ಶ್ರದ್ಧೆಯ ಕತೆಗಳು. ಬಸವಣ್ಣನವರ ಮನೆಯಲ್ಲಿ ಪ್ರಭುದೇವರು ಊಟಮಾಡುವಾಗ, ನೀಡಿದ ಪ್ರಸಾದವೆಲ್ಲ ನೋಡುನೋಡುತ್ತಲೇ ಮಾಯವಾಗುತ್ತಿದ್ದ ಪ್ರಭುಲಿಂಗಲೀಲೆಯಲ್ಲಿನ ಪ್ರಭುದೇವರ ಆರೋಗಣೆಯ ಪ್ರಸಂಗವನ್ನಿಲ್ಲಿ ಜ್ಞಾಪಿಸಿಕೊಳ್ಳಬಹುದು. ಆದರೆ ಅಲ್ಲಿನ ತತ್ತ್ವವೇ ಬೇರೆ ; ಇಲ್ಲಿನ ಸಂದರ್ಭವೇ ಬೇರೆ. ವಸ್ತುಗಳು ಪರಮಾತ್ಮನಿಗೆ ದೃಷ್ಟಿಯಿಂದಲೇ ಅರ್ಪಿತವಾಗುತ್ತಿದ್ದಿತೆಂಬುದಿಲ್ಲಿ ಮುಖ್ಯ ; ಅದೇ ಗ್ರಾಹ್ಯ.

**(೩) ಮದಿಸಿದ ಆನೆಯೊಂದು ಕನಕದಾಸರನ್ನು ಹೊತ್ತು ನಂಜನಗೂಡಿಗೆ ಹೋದ ಕತೆ**

ದಾಸರು ನಂಜನಗೂಡಿನ ಶ್ರೀಕಂಠೇಶ್ವರ ದರ್ಶನಕ್ಕೆಂದು ಅರಣ್ಯಮಾರ್ಗದಲ್ಲಿ ಸಂಚಾರಕ್ಕೈಕೊಂಡ ಸಂದರ್ಭ : ಆ ಅರಣ್ಯದಲ್ಲಿ ಮದೋನ್ಮತ್ತವಾದ ಭಯಂಕರ ಆನೆಯೊಂದು ಇತ್ತು. ಅದು ಆ ಮಾರ್ಗದಲ್ಲಿ ಬರುತ್ತಿದ್ದ ಜನಗಳನ್ನು ಹಿಡಿದು ಜಿಗಿದು ಕೊಂದುಬಿಡುತ್ತಿತ್ತಂತೆ. ಅದೇ ಮಾರ್ಗದಲ್ಲಿ ಹೊರಟಿದ್ದ ಕನಕದಾಸರಿಗೆ ಸುತ್ತಮುತ್ತಲಿನ ಜನ ಆನೆಯ ಅಪಾಯದ ವಿಷಯ ತಿಳಿಸಿದರೂ ಅವರು ಅದಕ್ಕೆ ಹೆದರದೆ, ಅವರಿಗೆ ಗಜೇಂದ್ರಮೋಕ್ಷದ ಕಥೆಯನ್ನು ಪದ್ಯಮಾಡಿ ಹೇಳಿ, "ನಾನೂ ವಿಷ್ಣು ಭಕ್ತನೇ ಆನೆಯೂ ವಿಷ್ಣುಭಕ್ತನೇ ಆದ್ದರಿಂದ ನಾವಿಬ್ಬರೂ ಅಣ್ಣತಮ್ಮಂದಿರಿದ್ದ ಹಾಗೆಯೇ

ನಮ್ಮಂಥ ದಾಸರನ್ನು ಅದೇಕೆ ಕೊಂದೀತು !"[೨೩] ಎನ್ನುತ್ತಿದ್ದಂತೆ ಆನೆ ಕಾಣಿಸಿಕೊಂಡುಬಿಟ್ಟಿತು. ಕೂಡಿದ ಜನವೆಲ್ಲ ಚಲ್ಲಾಪಿಲ್ಲಿಗೊಂಡು ದಾರಿಸಿಕ್ಕತ್ತ ಓಡಿಹೋದರು. ಆನೆ ನೇರವಾಗಿ ಸೊಂಡಿಲನ್ನೆತ್ತಿ ಘೀಳಿಡುತ್ತ ಕನಕದಾಸರ ಎದುರಿಗೇ ಬಂತು. ಅವರು ಎದೆಗುಂದಲಿಲ್ಲ. ನಗುನಗುತ್ತ ಎದುರಾಗಿ ನಾಲ್ಕಾರು ಹೆಜ್ಜೆ ಮುಂದಕ್ಕೆ ಹೋಗಿ ಮನುಷ್ಯರನ್ನು ಮಾತನಾಡಿಸಿದಂತೆ "ಗಜರಾಜ, ಮನುಷ್ಯರಿಗೆ ಏಕಪ್ಪಾ ಪೀಡೆಕೊಡುತ್ತೀಯೆ. ಸಾಕು ; ಇನ್ನು ಮುಂದೆ ಯಾರಿಗೂ ಪೀಡೆಕೊಡಬೇಡ. ನಡೆ ನಂಜನಗೂಡಿನ ಶ್ರೀಕಂಠೇಶ್ವರನ ಸೇವೆಮಾಡಿ ಜನ್ಮ ಸಾರ್ಥಕಪಡಿಸಿಕೋ" –ಎಂದು ಮೈಮೇಲೆ ಕಯ್ಯಾಡಿಸುತ್ತಿದ್ದಂತೆ ಆನೆ ನೆಲದ ಮೇಲೆ ಮಲಗಿ ಸೊಂಡಿಲಿನಿಂದ ಕನಕದಾಸನನ್ನು ತನ್ನ ಮೈಮೇಲೆ ಎಳೆದು ಹತ್ತಿಸಿಕೊಂಡುಬಿಟ್ಟಿತು. ಅನಂತರ ಮೇಲೆದ್ದು ನಂಜನಗೂಡ ಕಡೆಗೆ ತೆರಳಿತು. ಕನಕದಾಸ ದೇವಾಲಯಕ್ಕೆ ಆನೆಯನ್ನೊಪ್ಪಿಸಿದ. ಅದು ಕೊನೆವರೆಗೆ ಶ್ರೀಕಂಠೇಶ್ವರನ ಸೇವೆಮಾಡಿತಂತೆ. ಈ ಕಥೆಯ ಹರವಿನ ತಥ್ಯಾಂಶ ಏನೇ ಇರಲಿ ಘಟನೆಯಲ್ಲಿ ಏನೋ ಒಂದು ಸ್ವಾರಸ್ಯವಿರುವಂತೆ ತೋರುತ್ತದೆ.

ಕನಕದಾಸರು ತಮ್ಮ ಪದ ಪದ್ಯಗಳಲ್ಲಿ ಆನೆಯ ಬಗೆಗೆ ವಿಶೇಷಾಸಕ್ತಿ ತೋರಿಸಿದ ಅನೇಕ ದೃಷ್ಟಾಂತಗಳು ಲಭ್ಯವಾಗುತ್ತಿವೆ. ಆನೆ ಇವರ ಪ್ರೀತಿಯ ಪ್ರಾಣಿಯೆಂದು ತೋರಿಸಿಕೊಂಡಿದ್ದಾರೆ. ಇವರ ಸಮಕಾಲೀನ ಜೀವನದಲ್ಲಿ ಆನೆ ಮತ್ತು ಕುದುರೆಗಳು ರಾಜಮಹಾರಾಜರ ಶಕ್ತಿಪ್ರದರ್ಶನದ ಸಂಪತ್ತಾಗಿದ್ದವು. ಇವಿಲ್ಲದೆ ಅವರ ರಕ್ಷಣಾ ಕಾರ್ಯದ ರಥವೇ ಮುಂದೆ ಸಾಗುತ್ತಿದ್ದಿಲ್ಲ. ಆದ್ದರಿಂದ

---

೨೩. ಇಂದ್ರದ್ಯುಮ್ನನೆಂಬುವನು ಪಾಂಡ್ಯದೇಶದ ದೊರೆ. ಇವನು ಮಹಾವಿಷ್ಣು ಭಕ್ತ. ಈತ ಅಗಸ್ತ್ಯಋಷಿಗಳ ವಿಷಯದಲ್ಲಿ ತೋರಿಸಿದ ಒಂದಾನೊಂದು ಅವಿನಯಕಾರಣದಿಂದ ಶಾಪಕ್ಕೊಳಗಾಗಿ ಆನೆಯಾಗಿ ಹುಟ್ಟಿದನಂತೆ. ಆನೆಯ ಜನ್ಮದಲ್ಲಿದ್ದಾಗ ಒಮ್ಮೆ ಸರೋವರವೊಂದರಲ್ಲಿ ನೀರುಕುಡಿಯಲು ಹೋದ ಸಮಯದಲ್ಲಿ ಅಲ್ಲಿದ್ದ ಮೊಸಳೆ ಇದರ ಕಾಲನ್ನು ಬಲವಾಗಿ ಹಿಡಿದು ಎಳೆಯತೊಡಗಿತು. ಪೂರ್ವಜನ್ಮಸಂಸ್ಕಾರ ಕಾರಣದಿಂದ ಗಂಡಾಂತರದ ಆ ಸಮಯದಲ್ಲಿ ವಿಷ್ಣುದೇವನ ನೆನಪಿಗಾಗಿ ಪ್ರಾರ್ಥನೆ ಮಾಡಲುದ್ಯುಕ್ತವಾಯಿತು. ಆಗ ವಿಷ್ಣು ಪ್ರತ್ಯಕ್ಷನಾಗಿ ಅದರ ತೊಂದರೆಯನ್ನು ಪರಿಹಾರ ಮಾಡಿದನೆಂಬುದೊಂದು ಪುರಾಣಕಥೆ. ಈ ಪ್ರಸಂಗವನ್ನಾಧರಿಸಿ ಕನಕದಾಸರು ತಮ್ಮ ಪದಗಳಲ್ಲಿ ಹತ್ತಾರು ಕಡೆ ಹೇಳಿರುವುದನ್ನು ನೋಡಬಹುದು. "ಬಾಗಿಲನು ತೆರೆದು ಸೇವೆಯನು...." ಎಂಬ ಪದ್ಯದಲ್ಲಿ– "ಕರಿರಾಜ ಕಷ್ಟದಲಿ ಆದಿಮೂಲಾ ಎಂದು ಕರೆಯಲಾಕ್ಷಣ ಬಂದು ಒದಗಿದೆಯೋ ನರಹರಿಯೇ"– ಎಂದು ಬಂದಿರುವುದನ್ನು ಜ್ಞಾಪಿಸಿಕೊಳ್ಳಬಹುದು. ಇದೇ ಗಜೇಂದ್ರಮೋಕ್ಷದ ಕಥೆ. ಈ ಕಥೆಗೆ ಇವರು ಬಹಳಷ್ಟು ಕಡೆ ಒಲವು ತೋರಿಸಿದ್ದಂತೂ ನಿಜ.

ಮನುಷ್ಯ ಜೀವನಕ್ಕೆ ಇವು ಅತ್ಯಂತ ಸಮೀಪದ ಪ್ರಾಣಿಗಳಾಗಿದ್ದವು. ಇವುಗಳ ಹೃದಯವನ್ನು ಅರಿಯುವುದಕ್ಕೆ ಅಶ್ವಶಾಸ್ತ್ರ ಗಜಶಾಸ್ತ್ರಗಳನ್ನು ಮನುಷ್ಯ ತಿಳಿಯಬೇಕಾಗಿತ್ತು. ಅಶ್ವಹೃದಯ, ಗಜಹೃದಯವನ್ನು ಅರಿತು ಅವುಗಳೊಡನೆ ವ್ಯವಹರಿಸುವ ಮನುಷ್ಯನ ಮಾತನ್ನು ಇವು ಕೇಳುತ್ತಿದ್ದುವೆಂಬುದಕ್ಕೆ ಪುರಾಣೇತಿಹಾಸಗಳಲ್ಲಿ ಅನೇಕ ಉದಾಹರಣೆಗಳು ಕಾಣಸಿಗುತ್ತವೆ. ಆ ರಹಸ್ಯವನ್ನರಿಯದವರ ಮಾತನ್ನು ಇವು ಕೇಳುತ್ತಿದ್ದಿಲ್ಲವಂತೆ. ಕನಕದಾಸರು ಬಾಡ-ಬಂಕಾಪುರಗಳ ನಾಳ್ಪ್ರಭುವಾಗಿದ್ದ ಕಾಲದಲ್ಲಿ ಆನೆಗಳ ಸಂಪರ್ಕವನ್ನು ವಿಶೇಷವಾಗಿ ಪಡೆದಿರಬಹುದು. ಇವರ ಚಕ್ರವರ್ತಿಗಳ ಸ್ಥಾನವಾದ ವಿಜಯ ನಗರದ ಅರಸುಗಳ ಆನೆಗಳ ಸೈನ್ಯ ಜಗತ್ಪ್ರಸಿದ್ಧ ತಾನೆ. ಆದ್ದರಿಂದ ಇವನಿಗೆ ಆನೆಗಳ ಹೃದಯಪ್ರವೃತ್ತಿಯ ಅರಿವು ಸಾಕಷ್ಟು ಇತ್ತು ಎಂದು ಊಹಿಸಲು ಶಕ್ಯವಿದೆ. ಅವುಗಳ ಸೂಕ್ಷ್ಮಬುದ್ಧಿ, ಮಾನವಸ್ನೇಹ, ದೈವೀಶಕ್ತಿಗಳ ಮರ್ಮವನ್ನರಿತ ಇವನು ತನ್ನ ಸಾತ್ವಿಕ ದೃಷ್ಟಿಯಿಂದಲೇ ಅರಣ್ಯ ಮಧ್ಯದಲ್ಲಿ ತನಗೆದುರಾಗಿ ಬಂದ ಆನೆಯಲ್ಲಿ ಸಾತ್ವಿಕತೆ ಹುಟ್ಟಿಬರುವಂತೆ ಮಾಡಿದ್ದಾನಾದೀತು. ಸಾತ್ವಿಕಪ್ರವೃತ್ತಿಯ, ಯೋಗ ಮಾರ್ಗನಿರತರಾದವರ ಕಕ್ಷೆಗೊಳಗಾದ ಎಂಥ ಪ್ರಾಣಿಯಾದರೂ ಅದು ಬಾಧೆಯನ್ನುಂಟು ಮಾಡುವುದಿಲ್ಲವೆಂದು ಪಾತಂಜಲಿ ಯೋಗಶಾಸ್ತ್ರದಲ್ಲಿ ಹೇಳಲಾಗುತ್ತಿದೆ. ಇದಕ್ಕೆ ಮೃಗಬಾಧಾನಿವಾರಣೆ ಎನ್ನಲಾಗುತ್ತದೆ. ಅದನ್ನು "ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರಾಗ್ಯತಃ" (೨-೨೫) ಎಂಬ ಸೂತ್ರದಿಂದ ವಿವರಿಸಿದ್ದಾನೆನ್ನಲಾಗುತ್ತದೆ. ಆದ್ದರಿಂದ ಸ್ವತಃ ವೈಷ್ಣವ ಯೋಗಿಯೇ ಆಗಿದ್ದ ಇವನ ಕಕ್ಷೆಗೊಳಪಟ್ಟ ಆನೆಯಲ್ಲಿ ಸಾತ್ವಿಕ ಉದ್ಬುದ್ಧಗೊಂಡು ಆನೆ ಇವನ ವಶಕ್ಕೊಳಪಟ್ಟಿರಬೇಕು. ಮಹಾಭಕ್ತನಾದ್ದರಿಂದ ಇವನ ದೃಷ್ಟಿ ಸೃಷ್ಟಿಯನ್ನು ಗೆದ್ದ ದೃಷ್ಟಿಯೇ. ಇಂಥ ದೃಷ್ಟಿ ಸಮ್ಯಗ್ ದೃಷ್ಟಿಯೆನಿಸುತ್ತದೆ. ಸಮ್ಯಗ್ ದೃಷ್ಟಿಗೆ ಇಚ್ಛಾಶಕ್ತಿಯನ್ನು ಪ್ರಕಟಿಸುವ ಶಕ್ತಿ ಬರುತ್ತದೆಂದೇ ಯೋಗದ ತೀರ್ಮಾನ. ಕನಕದಾಸರ ಈ ಸಮ್ಯಗ್ ದೃಷ್ಟಿಯ ಕಕ್ಷೆಗೊಳಗಾಗಿ ತನ್ನ ಮೇಲೆ ಹತ್ತಿಕೂಡುವುದಕ್ಕೆ ಅವರಿಗೆ ಅನುಮತಿ ಕೊಟ್ಟಿದ್ದೀತು. ಈ ಕಥೆಯ ಬಗೆಗೆ ಪವಾಡದೃಷ್ಟಿಗಿಂತ ವಾಸ್ತವ ದೃಷ್ಟಿಗೆ ಹೆಚ್ಚು ಒತ್ತು ಕೊಡಬೇಕೆನಿಸುತ್ತದೆ. ಆನೆಯೊಡನೆ ಅಭೇದ ರೂಪಕದಿಂದ ಹಾಡಿದ ಇವರ ಪ್ರಸಿದ್ಧವಾದ ಹಾಡೊಂದಿದೆ. ಈ ಹಾಡು ಪ್ರಕೃತ ಈ ಸಂದರ್ಭಕ್ಕೆ ಹೊಂದಿಕೆಯಾಗುವಂತೆಯೇ ಮೇಲ್ನೋಟಕ್ಕೆ ಕಾಣುತ್ತದೆ. ಆದರೆ ಇದಮಿತ್ಥಂ ಎಂದು ನಿರ್ಣಯಮಾಡಲಿಕ್ಕಾಗದು. ಆ ಪದ್ಯ ಹೀಗಿದೆ :

ಆನೆಯ ನೋಡಿರಯ್ಯ–ನೀವೆಲ್ಲರು
ಆನಂದ ಪಡೆಯಿರಯ್ಯ.......... ॥ ಪ ॥
ತಾನು ತನ್ನವರೆಂಬ ಮಾನವರ ಸಲಹಿದ॥ ಅ. ಪ ॥
ಪಾಂಡು ಚಕ್ರೇಶನ ಸುತಗೆ ಒಲಿದ ಆನೆ ।
ಕಡುಗಲಿ ಮಾಗಧನ ಒರಸಿದಾನೆ ॥
ಹಿಂಡುಗೋವಳರೊಳು ಹಿರಿಯನ ಕಳೆಯದಾನೆ ॥
ಲಂಡರಿಗೆ ಎದೆಗೊಡುವ ಪುಂಡ ಆನೆ ॥ ೧ ॥
ಬಾಲಕನ ನುಡಿಗೇಳಿ ಖಳನ ಸೀಳಿದಾನೆ ।
ಪಾಲುಂಡು ವಿದುರನ ಸಲಹಿದಾನೆ ॥
ಲೋಲಾಕ್ಷಿಯ ಮಾನಭಂಗಕ್ಕೊದಗಿದಾನೆ
ಖೂಳ ಶಿಶುಪಾಲನ ಸೀಳಿದಾನೆ ॥ ೨ ॥
ಅಜಮಿಳನಿಗೆ ನಿಜಪದವಿಯ ಕೊಟ್ಟಾನೆ ।
ಕುಜನರೆಲ್ಲರನು ವರ್ಜಿಸಿದಾನೆ ॥
ಅಜಪಿತ ಕಾಗಿನೆಲೆಯಾದಿ ಕೇಶವನೆ ।
ತ್ರಿಜಗವಲ್ಲಭ ತಾನು ಭಜಕರ ವಶವಾನೆ ॥ ೩ ॥
॥ ಆನೆಯ ನೋಡಿರಯ್ಯ ॥

–ಆನೆಯ ಗುಣಸ್ವಭಾವಗಳಲ್ಲಿ ಏನೋ ಒಂದು ವಿಶೇಷವನ್ನು ಕನಕದಾಸರು ಕಂಡುಂಡವರೆಂಬುದನ್ನು ಅವರ ಪದ್ಯಗಳೇ ನಮಗೆ ಮನವರಿಕೆ ಮಾಡಿಕೊಡುತ್ತವೆ.[೨೪]

---

೨೪. ಕೆಲವು ಪ್ರತಿಗಳಲ್ಲಿ ಸಿಗುವ ಇನ್ನೊಂದು ಆನೆಯನ್ನು ತನ್ನ ಆರಾಧ್ಯಮೂರ್ತಿ ಆರೋಪಿಸಿ ಹೇಳುವ ಪದ್ಯ ಹೀಗಿದೆ (ಸಂತೇಕಲ್ಲಳ್ಳಿ ಲಕ್ಷ್ಮೀನರಸಿಂಹ ಶಾಸ್ತ್ರಿಗಳ ಸಂಗ್ರಹ–೧೯೫೨).

ಆನೆ ಬರುತಾದೆ ನೋಡಮ್ಮ । ಮುದ್ದಾನೆಬರುತಾದೆ ನೋಡಮ್ಮ ॥ ಪ ॥
ಆನೆ ಬರುತಾದೆ ಎಲ್ಲರು ನೋಡಿರಿ ಒಂದಾನೆಯಕೊಂದ ಮದ್ದಾನೆ
ಏನಂತ ಪೇಳಲಿ ಎಲ್ಲದಿಕ್ಕುಗಳಲ್ಲಿ ತಾನೆ ತಾನಾಗಿ ಮದ ಸೊಕ್ಕಿದಾನೆ ॥ಅ.ಪ.॥
ನೀರೊಳು ಮುಳುಗಿ ಖಳನಕೊಂದು । ವೇದವತಂದು ಬ್ರಹ್ಮದೇವಗೆ ಕೊಟ್ಟ ಮದ್ದಾನೆ॥
ಚಿತ್ರಗುಪ್ತರಲ್ಲಿ ವ್ಯಾಪಾರದೊಳಗಿದ್ದ । ಮುದ್ದುಕೃಷ್ಣನೆಂಬ ಮದಸೊಕ್ಕಿದಾನೆ ॥ ೧ ॥
ದಶದಿಕ್ಕಿನೊಳು ಘಂಟೆ ಢಣಿರೆಂದು ಬರುತಿದೆ । ಕುಸುಮಶರನ ಪೆತ್ತಮದ್ದಾನೆ ॥
ದಶಕಂಠನಕೊಂದು ಅನುಜಗೆಪಟ್ಟಕಟ್ಟಿದ । ದಶರಥಸುತನೆಂಬೊ ಮದಸೊಕ್ಕಿದಾನೆ ॥೨॥
..........................................................................................(೩–೫)

–ಹೀಗೆ ಐದುನುಡಿಗಳಿಂದ ಕೂಡಿದ ಈ ಪದ್ಯ ಪ್ರಕೃತ ಪ್ರಸಂಗವನ್ನು ಧ್ವನಿಸುತ್ತದೆಂದು ಊಹಿಸಲು ಶಕ್ಯವಿದೆ.

ಮೇಲೆ ಹೇಳಿದ ಆನೆ ಸಂಬಂಧದಲ್ಲಿನ ಅವರ ಹಾಡುಗಳಂತೂ ಆನೆಯ ಬಗೆಗೆ ಆನೆಯ ಸಂಬಂಧದ ಪುರಾಣದ ಕಥೆಗಳಿಗೆ ತೋರಿಸಿರುವ ವಿಶೇಷಾಸಕ್ತಿಯನ್ನು ತೋರಿಸುವುದಂತೂ ನಿಜ. ಈ ಆಸಕ್ತಿಯನ್ನು ಕಂಡೇ ದಾಸಕೂಟದವರೋ ಅಥವಾ ಪುರಾಣ ಪ್ರವಚನಕಾರರೋ ಹೊತ್ತುಕೊಂಡು ನಂಜನಗೂಡಿಗೆ ಹೋದ ಆನೆಯ ಕಥೆ ಸೃಷ್ಟಿಸಿದರೋ, ಆ ಕಥೆಯ ಐತಿಹಾಸಿಕತೆ ಧ್ವನಿತವಾಗುವಂತೆ ದಾಸರು ಹಾಡುಹಾಡಿದರೋ ಹೇಳಲಾಗದು. ಒಟ್ಟಿನಲ್ಲಿ ಇದೇನೂ ನಡೆದಿರಲಾರದ ಅಘಟಿತ ಘಟನೆಯ ಕಥೆಯೆಂದು ಹೇಳಲಾಗುವುದಿಲ್ಲ. ಪುರಾಣದ ವಿಷಯ ಒತ್ತಟ್ಟಿಗಿರಲಿ. ಇತಿಹಾಸದಲ್ಲಿ ಆನೆಗಳ ಸೂಕ್ಷ್ಮಹೃದಯದ ಬಗೆಗೆ ಗಾಂಭೀರ್ಯ-ರೌದ್ರಗಳ ರೀತಿನೀತಿಗಳಿಗೆ ಅನೇಕ ನಿದರ್ಶನಗಳು ಸಿಕ್ಕುತ್ತವೆ.

**ಇತರ ಕೆಲವು ಐತಿಹ್ಯಗಳು**

(೧) ಕನಕದಾಸ ಬಾಡ-ಬಂಕಾಪುರದಲ್ಲಿನ ಅಧಿಕಾರಾದಿಗಳನ್ನು ತ್ಯಾಗಮಾಡಿ ದಾಸದೀಕ್ಷೆ ಪಡೆದಮೇಲೆ ಬಾಡದ ಆದಿಕೇಶವಸ್ವಾಮಿಯು ಕನಸಿನಲ್ಲಿ ಕಾಣಿಸಿಕೊಂಡು 'ಕಾಗಿನೆಲೆಗೆ ಹೋಗೋಣ ನಡೆ' ಎಂದು ಹೇಳಿದಂತಾಯಿತಂತೆ. 'ನೀನೇ ಹೋಗೋಣವೆಂದಾಗ ತಡವೇಕೆ ದೇವಾ' ಎಂದು ವಿಗ್ರಹವನ್ನು ಕಿತ್ತು ಹೆಗಲಮೇಲೆ ಹೊತ್ತುಕೊಂಡು ನಡೆದೇಬಿಟ್ಟ. ನಾಲ್ಕಾರು ಜನ ಆಯಾಸದಿಂದ ಕಿತ್ತು ಹೊರಬೇಕಾದ ಆ ವಿಗ್ರಹವನ್ನು ತಾನೊಬ್ಬನೇ ಕಿತ್ತು ಹೆಗಲೇರಿಸಿದ್ದು ಪರಮಾಶ್ಚರ್ಯವೇ. ಬಾಡ ಬಿಟ್ಟು ಸ್ವಲ್ಪ ದೂರ ಇವರು ಬರುವ ಹೊತ್ತಿಗೆ ಈ ವಿಷಯ ತಿಳಿದ ಊರ ಜನ ಪ್ರತಿಭಟಿಸಲು ಬೆನ್ನಟ್ಟಿಬಂದರಂತೆ. ಅಷ್ಟರಲ್ಲಿ 'ಕಂದೂರು'[೨೫] ಸನಿಹಕ್ಕೆ ಕನಕದಾಸ ಬಂದಿದ್ದನಂತೆ. ಜನ ಅಲ್ಲಿಗೆ ಓಡಿಬಂದು ಅಡ್ಡಗಟ್ಟಿ ತರುಬಿನಿಲ್ಲಿಸಿಬಿಟ್ಟರು. ಈ ಸಮಯದಲ್ಲಿ ಅತ್ತ ಬಾಡ-ಬಂಕಾಪುರಗಳಿಗೆ ಬೆಂಕಿಹತ್ತಿದಂತೆ ಕಾಣುವ ಭಯಂಕರ ದೃಶ್ಯ ಕಾಣತೊಡಗಿತು. ಪ್ರತಿಭಟಿಸಲು

---

೨೫. ಬಾಡ-ಬಂಕಾಪುರ-ಸಂಗೂರು-ಹಾವೇರಿಗಳ ಭಾಗದಲ್ಲಿ ಈ ಕಥೆ ಪ್ರಚಲಿತವಿದೆ. ಕಂದೂರು ಬಂಕಾಪುರದಿಂದ ದಕ್ಷಿಣಕ್ಕೆ ಸುಮಾರು ಮೂರು ಮೈಲು ದೂರದಲ್ಲಿರುವ ಊರು. ಇಲ್ಲಿ ಕುರುಬ ಜನಾಂಗದವರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅವರೆಲ್ಲ ಕನಕದಾಸನ ಭಕ್ತರು. ಬಂಕಾಪುರದಿಂದ ಕಾಗಿನೆಲೆಗೆ ಈ ಊರ ಮೂಲಕವೇ ಹೋಗಿ ಧರ್ಮಾ-ವರದಾ ನದಿಗಳ ಸಂಗಮಸ್ಥಾನ ದಾಟಿ ನಾಗನೂರು ಮೂಲಕ ಹಾವೇರಿಯನ್ನು ಸೇರಿ ಅಲ್ಲಿಂದ ಒಂಬತ್ತು ಮೈಲು ದೂರವಿರುವ ಕಾಗಿನೆಲೆ ತಲುಪಬೇಕು, ಬಂಕಾಪುರದಿಂದ ಕಾಗಿನೆಲೆ ಈ ಮಾರ್ಗದಿಂದ ೨೨-೨೩ ಮೈಲು ದೂರವಾಗಬಹುದು.

ಬಂದ ಜನ ತಮ್ಮೂರತ್ತ ಬೆಂಕಿಬಿದ್ದುದನ್ನು ಕಂಡು ಪ್ರತಿಭಟನೆಯನ್ನೇ ಬಿಟ್ಟು ಊರಕಡೆ ಓಡುವುದಕ್ಕೆ ಪ್ರಾರಂಭವಾಯಿತು. ಕನಕದಾಸನಿಗೆ ಇದೊಂದೂ ಗೊತ್ತಾಗಲೇ ಇಲ್ಲ. ಅವನು "ಬದುಕಿದೆನು ಬದುಕಿದೆನು ಭವಹಿಂಗಿತು. ಪದುಮನಾಭನ ಪಾದದೊಲುಮೆಯೆನಗಾಯಿತು" ಎನ್ನುತ್ತ ಮುನ್ನಡೆಯುತ್ತಲಿದ್ದ. ಬಡ ಬಂಕಾಪುರದ ಜನ ತಮ್ಮೂರಿಗೆ ಬಂದು ನೋಡುತ್ತಾರೆ ! ಬೆಂಕಿಯೂ ಇಲ್ಲ ಹೊಗೆಯೂ ಇಲ್ಲ ! ಇದು ಕನಕದಾಸನ ಮಹಿಮೆಯೆಂದು ಅವನಲ್ಲಿಗೆ ಪುನಃ ಓಡಿಬಂದು ಕ್ಷಮೆ ಕೇಳಿದರಂತೆ.

ಕನಕದಾಸನೋರ್ವನೇ ಈ ವಿಗ್ರಹವನ್ನು ಕಿತ್ತು ಹೊತ್ತುಕೊಂಡು ದೂರದ ಕಾಗಿನೆಲೆಗೆ ಹೋದನೆನ್ನುವುದೂ, ಪ್ರತಿಭಟಿಸ ಬಂದ ಜನಗಳಿಗೆ ತಮ್ಮೂರಿಗೆ ಬೆಂಕಿ ಬಿದ್ದಿರುವಂತೆ ಕಂಡಿತೆನ್ನುವದೂ ಒಂದು ರೀತಿಯಿಂದ ತಳ್ಳಿಹಾಕಬೇಕಾದ ಪ್ರಸಂಗಗಳೇ. ಈ ಘಟನೆಗಳನ್ನು ಸಮರ್ಥಿಸಲು ಯಾವ ರೀತಿಯಿಂದ ಯೋಚನೆಮಾಡಿದರೂ ಸಂಭವವೆಂದು ಹೇಳಲಿಕ್ಕಾಗುವುದಿಲ್ಲ. ಆದ್ದರಿಂದ ಇದು ಭಗವದ್ಭಕ್ತನೊಬ್ಬನನ್ನು ಪವಾಡ ಕಲ್ಪನೆಯ ಜಾಡಿನಲ್ಲಿ ಲೋಕಕ್ಕೆ ತೋರಿಸಿ, ಪ್ರಚಾರಗಿಟ್ಟಿಸುವ ಹಳೆಗಾಲದ ಸಂಪ್ರದಾಯವೆಂದು ಹೇಳಬಹುದು. ವಿಗ್ರಹ ದೊಡ್ಡದು, ಒಂದು ಸೀಮಿತ ಶಕ್ತಿಯ ಮನುಷ್ಯ ಸುಮಾರು ೨೨–೨೩ ಮೈಲು ದೂರದವರೆಗೆ ಈ ವಿಗ್ರಹ ಹೊತ್ತುಕೊಂಡು ಹೋಗುವುದು ಅಸಂಭವವೇ ಎಂದು ಯಾರಿಗಾದರೂ ಅನ್ನಿಸದಿರದು. (ದೈವೀಘಟನೆಯೆಂದು ವಾದ ವಿವಾದ ಮಾಡದಿದ್ದರೆ).

(೨) ಕನಕದಾಸರು ಒಮ್ಮೆ ಉಡುಪಿಗೆ ಹೋದರು. ಬಹಳ ಹಸಿವಾಯಿತು. ಪ್ರಸಾದ ಸಿಗಲಿಲ್ಲ. ದೇವಾಲಯ ಪರಿಸರದಲ್ಲಿ ಎಲ್ಲೋ ಒಂದು ಕಡೆ ಮಲಗಿಬಿಟ್ಟರು. ಕನಸಿನಲ್ಲಿ ಬಾಲಕನ ವೇಷದಿಂದ ಶ್ರೀಕೃಷ್ಣ ಕಾಣಿಸಿಕೊಂಡು "ಕನಕದಾಸಾ ಬಹಳ ಹಸಿವಾಗಿದೆ ನನಗೇನಾದರೂ ತಿನ್ನಲಿಕ್ಕೆ ಕೊಡು" ಎಂದ. ತನ್ನ ಗೋಪಾಲಬುಟ್ಟಿಗೆ ಕೈಹಾಕಿದ, ಸ್ವಲ್ಪ ಹಿಟ್ಟು ಸಿಕ್ಕಿತು. ಅದನ್ನೇ ರೊಟ್ಟಿಯನ್ನಾಗಿ ಮಾಡಿ ದೇವರಿಗೆ ಅರ್ಪಿಸಿದ. ದೇವರು ತಿಂದು ತೃಪ್ತಿಗೊಂಡು "ಕನಕದಾಸ, ನೀನು ಹಸಿದಿದ್ದರೂ ಮೊದಲು ನನಗೆ ಊಟಮಾಡಿಸಿಬಿಟ್ಟೆ. ಇಗೋ ತೆಗೆದುಕೋ ಈ ಆಭರಣವನ್ನು ಮೊದಲು ಊಟಮಾಡಿ ಬಾ"–ಎಂದು ಹೇಳಿ ಬೆಲೆಯುಳ್ಳ ಆಭರಣವನ್ನೇ ದಾಸರ ಕೈಗೆ ಕೊಡಲು ಅದನ್ನು ಉಡುಪಿಯ ವರ್ತಕರೊಬ್ಬರಲ್ಲಿ ಒಂಬತ್ತು 'ದಮ್ಮಡಿ'ಗಳಿಗೆ ಒತ್ತೆಯಿಟ್ಟು ಊಟಮಾಡಿ ತೃಪ್ತನಾದ. ಮುಂದೆ ಆಭರಣದ ಹಗರಣ ನಡೆಯಿತು. ಕನಕದಾಸನ ಮೇಲೆ

ಕಳ್ಳತನದ ಆರೋಪ ಬಂತು. ಸೋದೆಯಲ್ಲಿದ್ದ ವಾದಿರಾಜ ಸ್ವಾಮಿಗಳಿಗೂ ಸುದ್ದಿ ಮುಟ್ಟಿತು. ಈ ಪ್ರಸಂಗವನ್ನು ನಾವೇ ಬಂದು ವಿಚಾರಿಸುತ್ತೇವೆಂದು ವಾದಿರಾಜರೂ ಬಂದರು. ಅವರು ಕನಕದಾಸನ ಮಹಿಮೆಯನ್ನರಿತವರಾದ್ದರಿಂದ ಇದು ಭಕ್ತನಾದವನಿಗೆ ಸ್ವಾಮಿ ಮಾಡಿದ ಸಾಲವೆಂದು ಎಲ್ಲರಿಗೂ ಹೇಳಿ ಬಿಡಿಸಿ, ಆರೋಪದಿಂದ ಕನಕದಾಸನನ್ನು ವಿಮುಕ್ತಿಗೊಳಿಸಿದರು.

ಇದೊಂದು ಪ್ರವಚನಕಾರರಿಗೆ ಶ್ರೋತೃಗಳನ್ನು ತಲೆದೂಗಿಸುವಂತೆ ಮಾಡಲು ಅತ್ಯಂತ ರೋಚಕವಾದ ಕಥೆ. ಪರಮಾತ್ಮನು ತನ್ನನ್ನು ನಂಬಿದ ಭಕ್ತರಿಗಾಗಿ ಏನೇನು ಆಟವಾಡುತ್ತಾನೆ ; ಎಂಥೆಂಥ ಸಂದಿಗ್ಧಕ್ಕೆ ಸಿಲುಕಿಸುತ್ತಾನೆ ; ಕೊನೆಗೆ ಎಲ್ಲ ಕಷ್ಟಕೋಟಲೆಗಳಿಂದ ಹೇಗೆ ವಿಮುಕ್ತಿಗೊಳಿಸಿ ಮೋಕ್ಷ ಕೊಡುತ್ತಾನೆಂಬುದಕ್ಕೆ ಸೊಗಸಾದ ಅಡ್ಡ ಕಥೆ. ಇಂಥ ಕಥೆಗಳಿಗೆ ಪುರಾಣಾದಿಗಳಲ್ಲಿ ಕೊರತೆಯೇನಿಲ್ಲ. ಪರಮಭಾಗವತನೂ, ಅಷ್ಟೇ ದರಿದ್ರನೂ ಆದ ಕುಚೇಲ ಕೃಷ್ಣನಲ್ಲಿಗೆ ಹೋದಾಗ ಕೃಷ್ಣ– "ನನಗೆ ತಿನ್ನಲಿಕ್ಕೆ ಏನು ತಂದಿದ್ದೀಯೆ" ಎಂದು ಕೇಳಿದ್ದಕ್ಕೆ ಒಣ ಅವಲಕ್ಕಿಯನ್ನು ಅವನಿಗೆ ಕೊಟ್ಟು ತೃಪ್ತಿಪಡಿಸಿದುದು ಈ ಕಥೆ ಬೆಳೆಯಲು ಪೋಷಕ ಸಾಮಗ್ರಿಯಾಗಿದ್ದೀತು. ದೇವರು ಭಕ್ತರಿಗೆ ತನ್ನಲ್ಲಿರುವ ಬೆಲೆಯುಳ್ಳ ಆಭರಣ ಕೊಟ್ಟನೆಂಬ, ದುಡ್ಡುಕಾಸು ಕೊಟ್ಟನೆಂಬ ಕಥೆ ಅಲ್ಲಲ್ಲಿ ಬರುತ್ತವೆ. ಪ್ರಸಿದ್ಧ ಶೈವಭಕ್ತನಾದ ನಂಬಿಯಣ್ಣನಿಗೆ ದೇವರು ದಿನವೂ ದುಡ್ಡನ್ನೇ ಕೊಡುತ್ತಿದ್ದ. ಅವನ ಶೃಂಗಾರ ಪ್ರಸಂಗದಲ್ಲಿ ಕುಂಟಣಿಯೂ ಆದ, ಚೋಳಿಯಕ್ಕನೆಂಬ ಸೂಳೆ ಶಿವನಿಗೆ ಸೊಗಸಾದ ಪಾಯಸ ಕಳಿಸಿದಳು. ಸಾಮಾನ್ಯ ಪಾತ್ರೆಯಲ್ಲಿ ಕಳಿಸಿದ್ದರೂ ಅದನ್ನಿಟ್ಟುಕೊಂಡು ಬೆಲೆಯುಳ್ಳ ಬಂಗಾರದ ಪಾತ್ರೆಯನ್ನೇ ಕಳಿಸಿಬಿಟ್ಟ. ಅವಳಿಗೆ ಕಳುವಿನ ಆರೋಪ ಬಂದು ಹಿಂಸೆಗೊಳಗಾದಳು. ಶಿವಪ್ರತ್ಯಕ್ಷವಾಗಿ ಅವಳ ಕೋಟಲೆ ತಪ್ಪಿಸಿ ಮುಕ್ತಿಕೊಟ್ಟ. ಯಾವುಯಾವುದೋ ಮೂಲೆಗಳಿಂದ ಇಂಥ ಕಥೆಗಳನ್ನು ಹೆಣೆದು ಭಕ್ತರ ಭಕ್ತಿಯನ್ನು ದೊಡ್ಡದುಮಾಡಿ ತೋರಿಸುವ ತಂತ್ರವನ್ನು ಒಬ್ಬರನ್ನು ನೋಡಿ ಒಬ್ಬರು ಅನುಸರಿಸುತ್ತ ಪುರಾಣಗಳ ಪುಟಸಂಖ್ಯೆಯನ್ನು ಹೆಚ್ಚು ಮಾಡುತ್ತಲೇ ಬಂದಿದ್ದಾರೆ. ಮೊನ್ನೆಮೊನ್ನೆ ಆಗಿಹೋದ ಮಹಮ್ಮದೀಯ ಸಂತ ಶಿಶುನಾಳ ಶರೀಫನು ಹಸಿದುಬಂದು ಒಂದೂರಿನ ದೇವಿಯನ್ನು ಪ್ರಾರ್ಥಿಸಿದಾಗ ತನ್ನ ಮುತ್ತಿನ ನತ್ತನ್ನೇ (ಮೂಗಿನ ಒಂದು ಆಭರಣ) ಕೊಟ್ಟುಬಿಟ್ಟಳಂತೆ. ಇಂಥ ಕಥೆಗಳಿಂದ ಸಾಮಾನ್ಯ ಜನಜೀವನದಲ್ಲಿ ನೀತಿಸಂಹಿತೆಯನ್ನು ಪ್ರಸಾರಗೊಳಿಸಲು ಯತ್ಕಿಂಚಿತ್ ಸಹಾಯವಾದೀತು. ಇವನ್ನು ಐತಿಹಾಸಿಕ ಒರೆಗಲ್ಲಿಗೆ ತಿಕ್ಕಿ ಬೆಲೆಕಟ್ಟ

ಹೋಗಬಾರದೆನ್ನುವುದು ಇಲ್ಲಿ ಮುಖ್ಯ. ಇವೆಲ್ಲ ತತ್ತ್ವಶಾಸ್ತ್ರ. ತರ್ಕಬುದ್ಧಿಗಳಿಗೆ ನಿಲುಕುವಂಥವುಗಳೆ? ಇದರಿಂದ ಅಂಧಶ್ರದ್ಧೆಯ ಅಪಾಯವೂ ಹೆಚ್ಚು. ಹೊಗಳುವ ಭರದಲ್ಲಿ ಅತಿರಂಜನೆಯ ಶುಷ್ಕವಿಚಾರಗಳಾಗುತ್ತವೆ. ಹೊಗಳಿ ಹೊಗಳಿ ಹೊನ್ನ ಶೂಲಕ್ಕೇರಿಸುವ ಅವಿವೇಕದಂಥ ಈ ಪೌರಾಣಿಕ ಮನ್ನಣೆಯೇ ಹೊಗಳಿಸಿಕೊಳ್ಳುವವರಿಗೆ ಮಸೆದಲಗಾದೀತಲ್ಲವೇ? ಕನಕದಾಸರು ಜೀವಂತವಾಗಿದ್ದಿದ್ದರೆ ಉಡುಪಿ ಕೃಷ್ಣನಲ್ಲಿ "ದೇವಾ, ನನ್ನ ಈ ಹೊಗಳಿಕೆಗೆ ಅಡ್ಡಬಾರಾ" ಎಂದಾರು.

(೩) ಕನಕದಾಸರಿಗೆ ವೃದ್ಧಾಪ್ಯ ಸಮೀಪಿಸಿದಾಗ ತಿರುಪತಿ–ಉಡುಪಿ–ಬೇಲೂರುಗಳ ತಿರುಗಾಟ ಸಾಧ್ಯವಿಲ್ಲದಾಯಿತು. ತಾನಿದ್ದ ಕಾಗಿನೆಲೆಯ ಪ್ರದೇಶದಲ್ಲಿಯೇ ತನ್ನ ಕೈಯಡಕಕ್ಕೆ ಸಿಗುವಂತೆಯೇ ತಾನು ನಂಬಿಕೊಂಡಿದ್ದ ತಿಮ್ಮಕೇಶವ, ಉಡುಪಿ ಕೃಷ್ಣ, ಬೇಲೂರು ಚೆನ್ನಕೇಶವ ದೇವರ ಪ್ರತಿಷ್ಠೆ ಮಾಡುವ ಹಂಬಲ ಹೆಚ್ಚಾಯಿತು, ಈ ಬಗೆಗೆ ಒಂದೆರಡು ಕಥೆ ಪ್ರಚಲಿತದಲ್ಲಿವೆ. ಅವು ಹೀಗೆ :

ದಾಸರು ಒಂದು ದಿನ ಸ್ನಾನಕ್ಕಾಗಿ ಕೆರೆಗೆ ಹೋದರು. ಸ್ನಾನಮಾಡಿ ಬಟ್ಟೆಗಳನ್ನು ಮಡಿಮಾಡಿಕೊಳ್ಳುವ ಸಮಯದಲ್ಲಿ ಅಸ್ಫುಟವಾಗಿ "ದಾಸವರೇಣ್ಯ, ನಾನೂ ಬರುತ್ತೇನೆ" ಎಂಬ ಧ್ವನಿಕೇಳಬರತೊಡಗಿತು. ಅತ್ತಿತ್ತ ಹುಡುಕಿದ. ಧ್ವನಿ ಬರಬರುತ್ತ ಹೆಚ್ಚಾಗಿ ತಾನು ಬಟ್ಟೆ ಒಗೆಯುತ್ತಿದ್ದ ಕಲ್ಲಿನ ತಳ ಭಾಗದಿಂದಲೇ ಬರುವುದನ್ನು ಪತ್ತೆ ಹಚ್ಚಿದ. ಕಲ್ಲುಕಿತ್ತ. ಸೊಗಸಾದ ಚೆನ್ನಕೇಶವ ಮೂರ್ತಿ ಕಾಣಿಸಿಕೊಂಡಿತು. ಅದನ್ನೆತ್ತಿ ತಂದು ಕಾಗಿನೆಲೆಯ ಪಕ್ಕದ ಇಂಗಳಗೊಂದಿಯಲ್ಲಿ ಪ್ರತಿಷ್ಠಾಪಿಸಿದ. ತಿರುಪತಿಯ ತಿಮ್ಮಕೇಶವನೂ ಕೂಡ "ನೀನಿದ್ದಲ್ಲಿಯೇ ಇರುತ್ತೇನೆ" ಎಂದು ಬಂದಂಥವನೇ. ಅದಕ್ಕೂ ಒಂದು ಕಥೆ ಬೇರೆರೂಪದಲ್ಲಿ ಸೃಷ್ಟಿಗೊಂಡಿದೆ. ಆ ಕಥೆ ಹೀಗೆ : ತಿರುಪತಿಯ ಕಡೆಯಿಂದ ಕಾಗಿನೆಲೆಯ ಕಡೆಗೆ ಪ್ರಕಾಶಮಾನವಾದ ಜ್ಯೋತಿಯೊಂದು ಬಂತು. ಕನಕದಾಸರು, ಊರಜನರು–ಎಲ್ಲರೂ ಸೇರಿ ಆ ಜ್ಯೋತಿಯ ಬೆನ್ನು ಹತ್ತಿದರು. ಅದೇ ವೆಂಕಟೇಶ್ವರ ಜ್ಯೋತಿ. ಅದು ಕಾಗಿನೆಲೆಯ ಪಕ್ಕದಲ್ಲಿ ಕುಮ್ಮೂರಿನ ಗುಡ್ಡವನ್ನೇರಿತು. ಅಲ್ಲಿ ಹೋಗಿ ನಿಂತಿತು. ಈ ಗುಡ್ಡದ ಮೇಲೆ ನಾನಿರುತ್ತೇನೆಂದು ದೇವರ ಸಂಕಲ್ಪ ಇದು. ಘನಘೋರ ಪರ್ವತ ಪ್ರಾಂತದಲ್ಲಿ ಎಂದಿನಿಂದಲೂ ವಾಸಮಾಡಿದ ಅಭ್ಯಾಸವಾಗಿದ್ದ ವೇಂಗಡದೊಡೆಯನಿಗೆ ಸಮತಲ ಭೂಮಿಯ ಮೇಲೆ ವಾಸಿಸುವುದು ಹೇಗೆ ಸರಿಹೋದೀತು. ಮುಂದೆ ಕನಕದಾಸ

ತಿರುಮಲೆಯೊಡೆಯನನ್ನು ಆ ಗುಡ್ಡದ ಮೇಲೆಯೇ ಪ್ರತಿಷ್ಠಾಪಿಸಿದ. ತಾನು ವಾಸಿಸುವ ಕಾಗಿನೆಲೆಯ ಪರಿಸರದಲ್ಲಿಯೇ ಬೇಲೂರು ಚೆನ್ನಕೇಶವ, ತಿಮ್ಮಕೇಶವ, ಆದಿಕೇಶವ–ಇತ್ಯಾದಿ ತನ್ನ ನಚ್ಚಿನ ಅರ್ಚಾಮೂರ್ತಿಗಳನ್ನು ಪ್ರತಿಷ್ಠಾಪಿಸಿಕೊಂಡು ಒಂದು ಪುಟ್ಟ ವೈಷ್ಣವ ಲೋಕವನ್ನೇ ಸೃಷ್ಟಿಸಿಕೊಂಡು ಕೊನೆಯುಸಿರೆಳೆದುಕೊಂಡ ಸಾಹಸದ ಬದುಕು. ಇಲ್ಲಿನ ಕಥೆಗಳು ಮಾತ್ರ ಐತಿಹಾಸಿಕ ಪ್ರಜ್ಞೆಗೆ, ತಾತ್ತ್ವಿಕ ನಿಲುವಿಗೆ, ತರ್ಕ ಬುದ್ಧಿಗೆ ಹೊಂದಿಕೆಯಾಗದವುಗಳು.

**ಪುರಾಣಪ್ರಜ್ಞೆಯ ಫಲ**

ಹೀಗೆ ಯಾವುದೇ ಒಂದು ವಿಚಾರವನ್ನು ಅಲೌಕಿಕಕಥೆಗಳ ತಳಬುಡವಿಲ್ಲದ ಕಲ್ಪನೆಗಳ ಆಧಾರದ ಮೇಲೆ ಹೆಣೆಯುತ್ತ ಅದರಲ್ಲಿಯೇ ಜನತೆಯ ಶ್ರದ್ಧೆಯನ್ನು ಬೆಳೆಸುತ್ತ ಹೋಗುವುದು ತತ್ತ್ವ ಶಾಸ್ತ್ರದ ದೃಷ್ಟಿಯಿಂದ ತುಂಬಾ ಅಪಾಯಕಾರಿ. ಉತ್ತಮವಾದ ತರ್ಕಬುದ್ಧಿಯ ಅನುಭಾವಕ್ಕೆ ಹೊಂದಿಕೆಯಾಗುವ ತತ್ತ್ವಶಾಸ್ತ್ರದೊಡನೆ ಸಾಮಂಜಸ್ಯಗೊಳಿಸಲು ಯೋಗ್ಯವಾದ ವಿಚಾರಗಳಲ್ಲಿ ಶ್ರದ್ಧೆ ಬೆಳೆಸುತ್ತ ಬರುವುದೇ ವಿಚಾರ ವಿಶಿಷ್ಟ ಸದೃಢ ಜನಾಂಗ ಕಟ್ಟುವಕ್ರಮ. ಭಾರತದಲ್ಲಿ ಬೆಳೆದು ಬಂದ ಸಾಧಕರ ಕ್ರಾಂತಿಕಾರರಾದ ಅದ್ಭುತ ತೇಜೋವಿಶಿಷ್ಟರ ತತ್ತ್ವ ಶಾಸ್ತ್ರ ಸಂಶೋಧಕರ ಜೀವನವನ್ನೆಲ್ಲ ಅನೇಕ ಅತಾರ್ಕಿಕ ಕಲ್ಪನೆಯ ಘಟನೆಗಳಿಂದ ಮುಚ್ಚುತ್ತ ಬಂದರೆ ಅವರ ಸಾಧನೆಗೆ, ವೈಚಾರಿಕ ಪ್ರಜ್ಞೆಗೆ, ಗಳಿಸಿದ ಜ್ಞಾನಕ್ಕೆ, ಬೆಳೆಸಿಕೊಂಡಿದ್ದ ವ್ಯಕ್ತಿತ್ವಕ್ಕೆ, ಮಾಡಿದ ಹೋರಾಟಕ್ಕೆ ಅಪಕಾರವೇ ಹೆಚ್ಚು. ಒಂದಾನೊಂದು ಪುರಾಣ ಕಲ್ಪನೆಯ ದೇವರ ಅವತಾರವೇ ಆಗಿರುವ ಅವರು ಸಾಧಿಸಿದ ಸಾಧನೆಯನ್ನು ಸಾಮಾನ್ಯರಾದ ನಾವು ಸಾಧಿಸಲು ಸಾಧ್ಯವಿಲ್ಲವೆಂಬ ಕೀಳರಿಮೆಯ ಹೇಡಿತನ ಆಲಸ್ಯಗಳು ಜನತೆಯಲ್ಲಿ ಮನೆಮಾಡುವುದುಂಟು. ಸಾಹಸಜೀವನದಿಂದ ಅವರು ದೂರ ದೂರ ಸರಿಯುತ್ತಾರೆ. ಮೂಢಭಾವನೆ ಅಧಿಕಗೊಂಡು ಎಲ್ಲದಕ್ಕೂ ದೇವರನ್ನೇ ಹೊಣೆಮಾಡುತ್ತ ಕೊನೆಗೆ ತಮ್ಮ ಎಲ್ಲ ಬಗೆಯ ರಕ್ಷಣೆಯನ್ನು ಅವನೇ ಬಂದು ಮಾಡಬೇಕೆಂದು ಕೈ ಕಟ್ಟಿ ಕೂತು ಹಾಳಾಗುವುದೂ ಉಂಟು. ಪೌರುಷಪ್ರಧಾನ ಸಮಾಜ ಕಟ್ಟಲು ಈ ಮನೋಭಾವ ಆತಂಕಕಾರಿ. ಇದೇ ಪುರಾಣ ಪ್ರಜ್ಞೆಯ ಫಲ. ಪುರಾಣಗಳೇ ನಮಗೆ ಚರಿತ್ರೆಗಳಾಗಬಾರದು. ಅದೊಂದು ಕಥನ ಸಾಹಿತ್ಯ. ಅಲ್ಲಿನ ಧರ್ಮಾಧರ್ಮ ವಿಚಾರ, ಕರ್ತವ್ಯಾ–ಕರ್ತವ್ಯ ಪ್ರಜ್ಞೆ ಮೊದಲಾದ ಜೀವನಕ್ಕೆ ಹೊಂದಿಕೆಯಾಗುವ ಅಂಶಗಳನ್ನು ಸ್ವೀಕರಿಸುವಷ್ಟರ ಮಟ್ಟಿಗೆ ಅವು ನಮಗೆ

ಆದರ್ಶವಾಗಬೇಕು. ತ್ರಿಮೂರ್ತಿಗಳ ಕಲ್ಪನೆಯನ್ನು ಪುರಾಣಕಾರರು ಮಾಡಿದ್ದರ ಬಗೆಗೆ ಯಥಾರ್ಥ ಕಲ್ಪನೆಯನ್ನು ಮಾಡಿಕೊಳ್ಳದ ಹಿಂದೂ ಸಮಾಜಗಳು ಅವೆರಡೂ ದೇವತೆಗಳನ್ನೇ ಆಧಾರವಾಗಿಟ್ಟುಕೊಂಡು ಶೈವ–ವೈಷ್ಣವ ಪ್ರಭೇದ ಕಲ್ಪಿಸಿ ಸೆಣೆಸಿ ಪರಸ್ಪರ ಹಾಳಾಗಿ ಹೋದ ಇತಿಹಾಸವನ್ನು ಕಾಣುತ್ತೇವೆ. ಪುರಾಣಕಾರರು ಬ್ರಹ್ಮ ವಿಷ್ಣು ಮಹೇಶ್ವರರನ್ನು ಗುಣತ್ರಯ (ತಮ–ರಜ–ಸತ್ವ) ವಿಭಾಗ ಕಲ್ಪನೆಯ ಅರ್ಥದಲ್ಲಿ ಮಾಡಿದುದೇ ತಪ್ಪಾಗಿ ಹೋಯಿತೇ ? ಎನ್ನುವಷ್ಟರ ಮಟ್ಟಿಗೆ ಭೇದಭಾವವನ್ನು ಜನತೆ ಕಲ್ಪಿಸಿಕೊಂಡು ಬಿಟ್ಟಿತು. ಉಪನಿಷತ್ತುಗಳಲ್ಲಿ ಹೇಳಿದ 'ಪರಬ್ರಹ್ಮ' ಅನ್ನುವ ಒಂದೇ ಒಂದು ದೇವತೆಯನ್ನೇ ಇಟ್ಟುಕೊಂಡು, ಸತ್ಯವನ್ನು ಮರೆಮಾಚದೆ ಎಲ್ಲರಿಗು ಮುಕ್ತಕಂಠದಿಂದಲೇ ಹೇಳುತ್ತ ಬಂದಿದ್ದರೆ, ಹಿಂದೂಗಳಲ್ಲಿರುವ ಹಿಂದೂ ಸಮಾಜವನ್ನು ಪಾರುಮಾಡಿ ಸಾರ್ವಕಾಲಿಕ ಸತ್ಯ ತತ್ತ್ವದತ್ತ ಮರಳಿಸುವ ಕೆಲಸ ಅಸಾಧ್ಯವೆನ್ನುವಷ್ಟರ ಮಟ್ಟಿಗೆ ಇಂದು ಗೋಜಲುಗೊಂಡಿವೆ. ತರ್ಕಬದ್ಧವಾದ ಧರ್ಮವ್ಯವಸ್ಥೆ ಹಿಂದೂ ಸಮಾಜದಲ್ಲಿ ಯಾವುದು? ಎಂದು ಹುಡುಕಬೇಕಾಗಿದೆ. ಧಾರ್ಮಿಕ ಸ್ವಾತಂತ್ರ್ಯವನ್ನು ಹಿಂದಿನವರು ಜನತೆಗೆ ಬಿಟ್ಟಿದ್ದೇ ತಪ್ಪಾಯಿತೇನೋ ಎನ್ನುವಂತಾಗಿದೆ. ಈ ಸ್ವಾತಂತ್ರ್ಯದ ಫಲವಾಗಿ ಭಿನ್ನ ಭಿನ್ನ ಸಿದ್ಧಾಂತಗಳು–ಹೇಳಿಕೆಗಳು–ಕೇಳಿಕೆಗಳು ಶಾಸ್ತ್ರ ಪುರಾಣಗಳ ರಾಶಿ ನಮ್ಮನ್ನೇ ತಬ್ಬಿಬ್ಬುಗೊಳಿಸಿ ಉತ್ತಮ ವ್ಯವಸ್ಥೆಯನ್ನು ಆರಿಸಿಕೊಳ್ಳುವ ಕೆಲಸ ಅತ್ಯಂತ ಕಠಿಣವಾಗಿ ಹೋಗಿದೆ ಎಂಬುದಂತೂ 'ಸತ್ಯಸ್ಯಸತ್ಯ' ಎನ್ನದೆ ಬೇರೇನು ಹೇಳಬೇಕು?

**ಆಧಾರ ಗ್ರಂಥಗಳು**

'ಹರಿದಾಸ ಕೀರ್ತನ ತರಂಗಿಣಿ' (ಭಾಗ–೩)ಸುಬೋಧ ರಾಮರಾವ್ ಬೆಂಗಳೂರು ೧೯೨೮.

'ಭಕ್ತ ಕನಕದಾಸರು' ಸಂತೇಕಲ್ಲಳ್ಳಿ ವೇ॥ ಲಕ್ಷ್ಮೀನರಸಿಂಹ ಶಾಸ್ತ್ರಿ ೧೯೬೮.

'ಕನಕದಾಸರ ಭಕ್ತಿಗೀತಗಳೂ' (ಸಂ) ಬೆಟಗೇರಿ ಕೃಷ್ಣಶರ್ಮ–ಬೆಂಗೇರಿ ಹುಚ್ಚರಾಯ ೧೯೬೫.

'ಕನಕದಾಸರ ಜೀವನ ಚರಿತ್ರೆ' (ಹಸ್ತಪ್ರತಿ) ಪಂಡಿತ ಚನ್ನಪ್ಪ ಎರೇಸೀಮೆ.

'ಕನಕ ಕಿರಣ' (ಸಂ) ಕಾ. ತ. ಚಿಕ್ಕಣ್ಣ ೧೯೮೨.

'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟ ೪, ಭಾಗ ೨, ಬೆಂಗಳೂರು ವಿ. ವಿ. ೧೯೭೮.

'ಹರಿದಾಸ ಸಾಹಿತ್ಯ' ಶ್ರೀ ಆರ್. ಎಸ್ ಪಂಚಮುಖಿ

'ಮೋಹನತರಂಗಿಣಿ ಸಂಗ್ರಹ' (ಸಂ) ಶ್ರೀ ಬಿ.ಎಸ್. ಸಣ್ಣಯ್ಯ ೧೯೭೨.

'ಮಹಾತ್ಮಾ ಕನಕದಾಸ' ಶ್ರೀ ಕರಿಯಪ್ಪ ಹುಚ್ಚಣ್ಣವರ ೧೯೭೨.

'ಉಡುಪಿ ಕ್ಷೇತ್ರ ಪರಿಚಯ' ಕೃಷ್ಣಾಮಠದ ಪ್ರಕಟನೆ, ೧೯೬೯.

'ಉಡುಪಿಕ್ಷೇತ್ರ ಪರಿಚಯ' ಕೃಷ್ಣಮಠದ ಪ್ರಕಟನೆ, ೧೯೬೯.

'ಉಡುಪಿಕ್ಷೇತ್ರ' (ಸಚಿತ್ರ ಕೈಪಿಡಿ) ಬಿ. ರಾಮಕೃಷ್ಣಾಚಾರ್ ೧೯೫೩.

'ಪುರಂದರ ಸಾಹಿತ್ಯ ದರ್ಶನ' (ಭಾಗ ೧-೨-೩-೪) ಪ್ರ. ಸಂಪಾದಕರು ಪ್ರೊ. ಎಸ್. ಕೆ. ರಾಮಚಂದ್ರರಾವ್ ೧೯೮೫.

'ಭಾಗವತ ಸಂಪ್ರದಾಯ' ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರು ೧೯೭೦.

'ತಿರುಪತಿ ತಿಮ್ಮಪ್ಪ' ಪ್ರೊ. ಎಸ್. ಕೆ. ರಾಮಚಂದ್ರ ರಾವ್.

'ಉಡುಪಿ ಪರ್ಯಾಯ ಸ್ಮೃತಿ ಸಂಪುಟ' ೧೯೬೮ ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರ ಲೇಖನ.

'ವಿವೇಕಚಿಂತಾಮಣಿ' ನಿಜಗುಣಶಿವಯೋಗಿ (ಸಂ) ಉಮಾಪತಿ ಶಾಸ್ತ್ರಿ ಬಾಗಲಕೋಟೆ.

'ಶ್ರೀವ್ಯಾಸಯೋಗಿಚರಿತೆ' ಸೋಮನಾಥ ಪ್ರಣೀತ ಸಂಸ್ಕೃತ ಚಂಪೂಗ್ರಂಥದ ಕನ್ನಡ ಅನುವಾದ ಬಿ. ಅನಂತಕೃಷ್ಣಾಚಾರ್ಯ ೧೯೩೯.

'ಋಕ್ ಸಂಹಿತಾಚಾರ' ಜಿ. ಎನ್. ಚಕ್ರವರ್ತಿ ೧೯೬೫.

'ಭಾರತೀಯದರ್ಶನ' ಬಲದೇವ ಉಪಾಧ್ಯಾಯ (ಹಿಂದಿ). ಅನುವಾದ ಎಸ್. ರಾಮಚಂದ್ರ ಶಾಸ್ತ್ರಿ, ಮೈಸೂರು ವಿ.ವಿ., ೧೯೭೦.

'ದ್ವೈತವೇದಾಂತ' ಹೆಚ್.ಎನ್. ರಾಘವೇಂದ್ರಾಚಾರ್ಯರು ೧೯೫೮.

# ಕನಕದಾಸರ ಕೆಲವು ಐತಿಹ್ಯಗಳ ಅರ್ಥವ್ಯಾಪ್ತಿ

ಡಾ. ಅರವಿಂದ ಮಾಲಗತ್ತಿ

ಕನಕದಾಸರ ಕಾಲದಲ್ಲಿ, ಧಾರ್ಮಿಕವಾದ ತಿಕ್ಕಾಟ ತ್ರಿಕೋನಾಕಾರದಲ್ಲಿ ನಡೆದಿತ್ತು ಎಂದು ತೋರುತ್ತದೆ. ಈ ತಿಕ್ಕಾಟ ಕನಕದಾಸರ ಹಿಂದೆ ವ್ಯಕ್ತವಾಗುವದು, ಹಿಂದೂ ಧರ್ಮದ ಒಳಮತಗಳಲ್ಲಿ. ಅದು ಶೈವ ಮತ್ತು ವೈದಿಕ ಮತಗಳೊಡನೆ ಒಂದು ಬಗೆಯದ್ದಾದರೆ ಇನ್ನೊಂದು ಬಗೆ ದ್ವೈತ ಮತ್ತು ವಿಶಿಷ್ಟಾದ್ವೈತದ ನಡುವೆ ನಡೆದ ಆಂತರಿಕ ದ್ವಂದ್ವ. ಶೈವ ಮತದ ಪ್ರಭಾವ ನಿಷ್ಠುರತೆಯಿಂದ ವ್ಯಕ್ತವಾಗಿರುವುದು ಕಂಡುಬರುವುದಿಲ್ಲ. ಆದರೆ ದ್ವೈತ ಮತ್ತು ವಿಶಿಷ್ಟಾದ್ವೈತದ ಮಧ್ಯದಲ್ಲೆ ಬಿರುಸಿನ ಭಿನ್ನಾಭಿಪ್ರಾಯಗಳು ವ್ಯಕ್ತವಾಗುವುದರ ಜೊತೆಗೆ ಈ ಎರಡೂ ತಾತ್ವಿಕ ವಿಚಾರದವರೂ ಕನಕದಾಸರನ್ನು ತಮ್ಮ ಹಿಡಿತದಲ್ಲಿ ಹಿಡಿಯಲು ಪ್ರಯತ್ನಿಸಿದ್ದಾರೆ. ಕನಕದಾಸರು ಅಡಕೊತ್ತಿನಲ್ಲಿ ಸಿಕ್ಕ ಅಡಕೆಯಂತಾಗಿದ್ದಾರೆ. ಹೀಗಾಗಿ ಕನಕದಾಸರ ಅಭಿವ್ಯಕ್ತಿಯ ಸಾಧ್ಯತೆಯಲ್ಲಿ ಹೊಯ್ದಾಟವನ್ನು ಕಾಣುತ್ತೇವೆ. ಶೈವ ಮತ, ವೈಷ್ಣವ ಮತ (ವಿಶಿಷ್ಟಾದ್ವೈತ), ಮಾಧ್ವ ಮತ (ದ್ವೈತ)–ಈ ಮೂರರ ಕುರಿತೂ ಒಲವಿರುವುದನ್ನು ಕಂಡರೂ ಈ ಮೂರು ತಾತ್ವಿಕತೆಗಳನ್ನು ಅಲ್ಲಲ್ಲಿ ತೆಗಳಿರುವುದು ಕಂಡು ಬರುತ್ತದೆ. ಕನಕದಾಸರ ನಿಂದಾಸ್ತುತಿಗಳು ಇದಕ್ಕೆ ಕೈಗನ್ನಡಿಯಾಗುತ್ತವೆ. ಹೀಗಾಗಿ ಕನಕದಾಸರು ಯಾವುದೋ ಒಂದು ಏರಾಟದ ತಾತ್ವಿಕತೆಗೆ ಸಿಕ್ಕು ಒದ್ದಾಡದೆ, ಮಹಾ ಮಾನವತವಾದಿಯಾಗಿ ಎಲ್ಲರ ಗಮನವನ್ನು ಸೆಳೆಯುತ್ತಾರೆ. ಆದರೆ

---

ವಿ. ಸೂ. : ಪ್ರಬಂಧದಲ್ಲಿ 'ಕಥನಗಳು' ಎಂದು ಹೇಳಿದರೂ ಇಲ್ಲಿ ಹೆಚ್ಚಾಗಿ 'ಐತಿಹ್ಯ'ಗಳನ್ನೇ ಬಳಸಿಕೊಳ್ಳಲಾಗಿದೆ. ಇದರೊಂದಿಗೆ ಪುರಾಣದ ಕಥಾನಕಗಳೂ ಸೇರಿಕೊಂಡಿದ್ದರಿಂದ ಐತಿಹ್ಯ ಎಂದು ಮಿತಿಗೊಳಿಸದೆ ಎರಡನ್ನೂ ಸೇರಿಸಿ ಬಳಸಿಕೊಳ್ಳಲಾಗಿದೆ. ಹೀಗಾಗಿ ಈ ಎರಡರ ಸಮಾನ ಪದವಾಗಿ 'ಕಥನಗಳು' ಎಂಬ ಅರ್ಥವ್ಯಾಪ್ತಿಯಲ್ಲೇ ಬಳಸಿದೆ.

ಇದು, ಸಿರ್ಸಿಯಲ್ಲಿ ನಡೆದ ಕನಕದಾಸರ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ. ದಿ. ೧೫–೧೬ ಅಕ್ಟೋಬರ ೧೯೮೯.

ಒಂದೊಂದು ತಾತ್ವಿಕತೆಯ ಮತದವರ ಒಡನಾಟ, ಕನಕದಾಸರಿಗೆ ಬಂದಿರುವುದರಿಂದ ಅವರವರ ತಾತ್ವಿಕತೆಯ ಹೇರಿಕೆಯನ್ನು ಕನಕದಾಸರಲ್ಲಿ ಕಾಣುತ್ತೇವೆ. ಇದು ಮೇಲುನೋಟಕ್ಕೆ ಹೇರಿಕೆ ಎಂದು ಎನಿಸದಿದ್ದರೂ ಅವರ ತಾತ್ವಿಕತೆಯಲ್ಲೆ ಇರುವ ಒಳ್ಳೆಯ ವಿಚಾರಗಳನ್ನು ಒಪ್ಪಿ ಇನ್ನುಳಿದವುಗಳನ್ನು ಟೀಕಿಸಿದ್ದಾರೆ.

ಕನಕದಾಸರ ಸಾಹಿತ್ಯದಲ್ಲಿ ವ್ಯಕ್ತವಾಗುವ ವೈಷ್ಣವ ಪಂಥದ ಪ್ರಭಾವ ಹಾಗೂ ಮಾಧ್ವಪಂಥದ ಪ್ರಭಾವ ಈಗಾಗಲೇ ಅಧ್ಯಯನಕಾರರು ಗುರುತಿಸಿದ್ದಾರೆ.[೧] ಮೂಲತಃ ಶೈವ ಸಂಸಾರಗಳಿಂದ ಬಂದ ಕನಕದಾಸರಿಗೆ ಈ ಎರಡೂ ಪಂಥದಿಂದ ದೀಕ್ಷೆಗಳಾಗಲಿ, ನಾಮಾಂಕಿತಗಳಾಗಲಿ ಸಿಗಲಿಲ್ಲ. ಇದಕ್ಕೆ ಬಹುಶಃ ಕನಕದಾಸರು 'ಶೂದ್ರ' (ಕುರುಬರು) ಎನ್ನುವದೇ ಪ್ರಮುಖ ಕಾರಣವಾಗಿರಬೇಕು. ಈ ಎರಡೂ ಪಂಥಗಳು ಕನಕನನ್ನು ತಮ್ಮ ಕಪಿಮುಷ್ಟಿಯಲ್ಲಿ ಹಿಡಿಯಲು ಪ್ರಯತ್ನಿಸಿವೆ. ಆದರೆ ಸಂಸ್ಕಾರವನ್ನು ಕೊಡುವ ಗೋಜಿಗೆ ಹೋಗಿಲ್ಲ. ತಾತ್ವಿಕತೆಯ ಹೇರಿಕೆಯಂತೆ ದೀಕ್ಷೆಯ ಮತ್ತು ಶಿಷ್ಯತ್ವವನ್ನೊಳಗೊಂಡ ನಾಮಾಂಕಿತತೆಯ[೨] ಹೇರಿಕೆಯಾಗಿಲ್ಲ. ಬಹುಶಃ ಈ ಕೆಲಸ ಮಾಡದಿರುವುದು ಅವರ ವಿಚಾರದ ಕಟ್ಟುನಿಟ್ಟುತೆಯನ್ನು ಸ್ಪಷ್ಟಪಡಿಸುತ್ತವೆ. ಆದರೆ ಈ ಎರಡು ಪಂಥಗಳು ಕನಕದಾಸರ ಪ್ರತಿಭೆಯನ್ನು ಸಮರ್ಥವಾಗಿ ದುಡಿಸಿಕೊಂಡಿವೆ. ಈ ಪಂಥಗಳು ತಾತ್ವಿಕತೆಯನ್ನು ಹೇರಿದಂತೆ ದೀಕ್ಷಾ ವಿಧಿಯನ್ನೂ, ಶಿಷ್ಯತ್ವದ ನಾಮಾಂಕಿತ ವಿಧಿಯನ್ನೂ ಹೇರಿದ್ದರೆ ಕನಕದಾಸರೇನೂ ಅಲ್ಲಗಳೆಯುವ ಪ್ರವೃತ್ತಿಯವರಾಗಿದ್ದರೆಂದು ಹೇಳಲು ಬರುವುದಿಲ್ಲ. ಏಕೆಂದರೆ ಆ ಕಾಲದ ಗಣ್ಯರುಗಳಾದ ಇವರ ವ್ಯಕ್ತಿತ್ವಕ್ಕೆ ಕನಕದಾಸರೂ ಮಾರುಹೋಗಿದ್ದರು ಎನ್ನುವದರಲ್ಲಿ ಸಂದೇಹವಿಲ್ಲ. ಆದರೆ ತಾತ್ವಿಕತೆಗೆ ಮಾರುಹೋಗಿದ್ದರು ಎಂದು ಹೇಳಲಾಗದು. ಏಕೆಂದರೆ ಅವುಗಳನ್ನು ಟೀಕಿಸುವ ಆರೋಪಿಸುವ ಮನೋಭಾವ

---

೧. ನೋಡಿ :

ಅ) ದಾಸ ಸಾಹಿತ್ಯ ದರ್ಶನ : ಸಂ–ಎಚ್ಚೆಸ್ಕೆ

ಬ) ಮುತ್ತು ಬಂದಿದೆ ಕೇರಿಗೆ–ಡಾ. ವರದರಾಜ ಹುಯಿಲಗೋಳ

ಕನಕದಾಸರ ಸ್ಮರಣ ಸಂಚಿಕೆ

ಕ) ಕನಕಕಿರಣ : ಕಾ. ತ. ಚಿಕ್ಕಣ್ಣ

೨. ದಾಸ ಸಾಹಿತ್ಯದರ್ಶನ ಕೃತಿಯಲ್ಲಿಯ ವ್ಯಾಸಕೂಟ ಮತ್ತು ದಾಸಕೂಟ ಲೇಖನವನ್ನು ಗಮನಿಸಿ.

ಇವರಲ್ಲಿ ಕಂಡುಬರುತ್ತದೆ. ಹೀಗಾಗಿ ಕನಕದಾಸರು ಈ ತತ್ವಗಳ ತಾರತಮ್ಯತೆಗೆ ಒಗ್ಗಿರಲಿಲ್ಲ. ಏನಿದ್ದರೂ ಇವು ಕಾಲಿಕವಾದವುಗಳೆಂದು ದೂರಿಟ್ಟಿರಬೇಕು. ಏಕೆಂದರೆ ಮಾನವತಾವಾದಕ್ಕೆ ಒಗ್ಗುವ ಕನಕದಾಸರು 'ಶಾಶ್ವತ' ಎಂದು ಬಗೆದ ಭಕ್ತಿಯ ಮಾರ್ಗದಿಂದ, ಇದೇ ಕಡೆಜನ್ಮವಾಗಿಸಿಕೊಳ್ಳಲು ಹವಣಿಸುತ್ತಿರುವುದು ಕಂಡು ಬರುತ್ತದೆ. ಇದಕ್ಕೆ ಪ್ರಮುಖವಾದ ಕಾರಣ ಅವರು ಶೂದ್ರ ಸಂತಾನದವರಾಗಿರುವುದಾಗಿದೆ.

ಶಿವನ ಹೇಳಿಕೆಯ ಕುರಿತು ಕನಕದಾಸರ ಕೀರ್ತನೆಗಳೂ[೧] ಬರುವಂತೆ, ಕೃಷ್ಣ ಕುಡಿದ ಗಂಜಿಯ ಕಥೆಯಲ್ಲೂ[೨] ಶಿವನ ಹೊಗಳಿಕೆಯೊಂದಿಗೇ ಆರಂಭವಾಗುತ್ತದೆ. ಈ ಕಥೆಯಲ್ಲಿ ಉಡುಪಿಗೆ ಬಂದ ಕನಕದಾಸರಿಗೆ ದರ್ಶನ ಸಿಕ್ಕದೆ ಹೋದಾಗ ಚಿಂತೆಯಲ್ಲಿ ಕೊರಗುತ್ತ ಭಕ್ತಿಯಲ್ಲಿ ಮೈ ಮರೆತರು. ನೀಗದ ಹಸಿವು ಆವರಿಸಿದರೂ ಕನಕದಾಸರು ಶ್ರೀಕೃಷ್ಣರಿಗೆ ಅರ್ಪಿಸದೆ ಏನನ್ನೂ ಸ್ವೀಕರಿಸುವಂತಿಲಿಲ್ಲ. ಅಂದಿನ ಹಸಿವು ತಡೆಯುವಂತಿರಲಿಲ್ಲ. ಬ್ರಾಹ್ಮಣರು ಸಮಾರಾಧನೆಗಾಗಿ ಅನ್ನವನ್ನು ಮಾಡುವಾಗ ಗಂಜಿ ಕಾಲುವೆಯಾಗಿ ಹರಿದು ಅಲ್ಲೊಂದು ಕಡೆ ನಿಂತಿತ್ತು. ಮೃಷ್ಟಾನ್ನ ಕಂಡಂತೆ ಕನಕದಾಸರು ಅದನ್ನೇ ನಿವೇದಿಸುತ್ತ 'ಗೋಪೀವಲ್ಲಭಂ, ನಿನಗೆ ಈ ಗಂಜಿ ? ಮಧುಸೂದನಾ ಇದನ್ನು ಹೇಗೆ ತಿನ್ನುವೆ, ಕಂಸಾರೀ ಇದು ನಿನಗೆ ಪಂಚಭಕ್ಷ್ಯವಾಯಿತೆ' ಎಂದು ಹಾಕುತ್ತ ಹೋದರು. ಕನಕದಾಸರು ಗಂಜಿಯುನ್ನು ಹಾಕುತ್ತ ಹೋದಂತೆ ಗರ್ಭಗುಡಿಯಲ್ಲಿದ್ದ ಶ್ರೀಕೃಷ್ಣನ ಬಾಯಿಂದ ಗಂಜಿ ಕೆಳಕ್ಕೆ ಸುರಿಯುತ್ತಲೇ

---

೧. ಅ) ಜನಪ್ರಿಯ ಕನಕ ಸಂಪುಟ : ದೇ ಜವರೇಗೌಡ ಇತರರು : ಶಿವನ ಕುರಿತ ಕೀರ್ತನೆಗೆ ನೋಡಿ–ಪು. ೪
–ಶೈವ–ವೈಷ್ಣವ ಸಮನ್ವತೆಯ ಕೀರ್ತನೆಗಳು, ಪು. ೭
–ಪ್ರಹ್ಲಾದನ ಭಕ್ತಿಯ ಹೊಗಳಿಕೆ ೪೫

ಬ) ಶ್ರೀ ಕನಕದಾಸರ ಭಕ್ತಿಗಿತೆಗಳು : ಬೆಂಗೇರಿ ಕೃಷ್ಣಶರ್ಮ–ಪು. ಕೀರ್ತನೆಗಳು, ೨–೩, ೨೮–೨೯ (ಶಿವ ಮಹಿಮೆ ಕುರಿತ ಕೀರ್ತನೆಗಳು) ೯೨–೮೨, ೧೯೧–೧೬೭ (ಹರಿಹರ ಇಬ್ಬರನ್ನು ಸಮಭಾವದಿಂದ ಕಾಣುವ ಕೀರ್ತನೆಗಳು)

೨. ಭಕ್ತಕನಕದಾಸರು : ಲಕ್ಷ್ಮೀನರಸಿಂಹ ಶಾಸ್ತ್ರಿಗಳು : ೪೮–೫೦

ಹೋಗುತ್ತಿತ್ತು. ಬ್ರಾಹ್ಮಣರ ಪಂಚಭಕ್ಷ್ಯಗಳೆಲ್ಲ ನಿಷ್ಪ್ರಯೋಜಕವಾಗಿದ್ದವು. ನಂತರ ಯತಿಗಳು ಬಂದು ಅವನನ್ನು ಸಮೀಪಕ್ಕೆ ಕರೆದು ಪೂಜೆ ಮಾಡಿದರು.[೩]

ಈ ರೀತಿ ಭಕ್ತನೊಂದಿಗೆ ದೇವರು ಊಟ ಮಾಡುವಂತಹ 'ಆಶಯ'ದ ಕಥೆ ಕನಕದಾಸರ ಸುತ್ತ ಮಾತ್ರ ಸಿಗುತ್ತದೆ ಎಂದೇನಿಲ್ಲ.[೪] ಇದೇ 'ಆಶಯ' ನಮಗೆ ವೀರಶೈವ ಸಾಹಿತ್ಯದಲ್ಲಿ ಮಾದರ ಚನ್ನಯ್ಯನೊಂದಿಗೂ ಸಿಗುತ್ತದೆ[೧]. ಇಲ್ಲಿ ಕನಕದಾಸರು ಮತ್ತು ಮಾದರ ಚನ್ನಯ್ಯ ಇಬ್ಬರೂ ಅಸ್ಪೃಶ್ಯರು ಎನ್ನುವದು ಗಮನಿಸಬೇಕು. ಕನಕದಾಸರೊಂದಿಗೆ 'ಕೃಷ್ಣ' ಗಂಜಿಯನ್ನು ಕುಡಿದರೆ, ಮಾದರ ಚನ್ನಯ್ಯನೊಂದಿಗೆ 'ಶಿವ' ಅಂಬಲಿಯನ್ನು ಕುಡಿಯುತ್ತಾನೆ. ಈ ಆಶಯದಲ್ಲಿ ದೇವರು-ಭಕ್ತ-ಸೇವಿಸುವ ಪದಾರ್ಥದಲ್ಲಿ ಮಾತ್ರ ವ್ಯತ್ಯಾಸವಿದೆ. ಆದರೆ ಇವುಗಳ ಮೂಲ ಆಶಯ ಮಾತ್ರ ಒಂದೇ ಆಗಿದೆ. (ಸಂತ ತುಕಾರಾಮ ಮತ್ತು ಸುಧಾಮ ಆಶಯದ ಹಿನ್ನೆಲೆಯಲ್ಲಿ ಇರುವ ಉದ್ದೇಶ ಬೇರೆ ಆಗಿದೆ.) ಆದರೆ ಈ ಆಶಯದ ಹಿಂದಿರುವ ಉದ್ದೇಶ ಮಾತ್ರ ಗುರುತರವಾದದ್ದು.

ಶೈವರು ತಮ್ಮ ವೀರಶೈವದ ತತ್ವಗಳನ್ನು ಪ್ರಚಾರ ಮಾಡುವದಕ್ಕಾಗಿ, ಮಾದರ ಚನ್ನಯ್ಯನನ್ನು ಬಳಸಿಕೊಂಡಿದ್ದಾರೆ, ಚನ್ನಯ್ಯನ ದಲಿತ ಪ್ರಪಂಚವನ್ನು ತನ್ನ ಮತಕ್ಕೆ ತುಂಬಿಕೊಳ್ಳಲು ಮಾಡಿದ ತಂತ್ರವನ್ನು ಈ ಕತೆಯಲ್ಲಿ ಕಾಣುತ್ತೇವೆ. ಇದರ ಸ್ವರೂಪವೇ ಕನಕದಾಸರ ಕಥೆಯಲ್ಲಿದೆ. ಆದರೆ ಇಲ್ಲಿ ಕನಕದಾಸರನ್ನು ವೈಷ್ಣವ ಮತದ ಪ್ರಚಾರಕ್ಕಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ಕನಕದಾಸರ

---

೩. ದೇವಾಲಯದ ಬಳಿಗೆ ಯತಿಗಳು ಕರೆತಂದರು ಎಂದಿದೆ. ನಂತರ ಕೃಷ್ಣನನ್ನು ಬಾಲಕನ ಪ್ರತಿರೂಪದಲ್ಲಿ ಕಾಣುವ ಪ್ರಸಂಗ ಕಥೆಯಲ್ಲಿ ಬರುತ್ತದೆ. ಹೀಗಾಗಿ ಕನಕನಿಗೆ ಕೊನೆಯವರೆಗೆ ದೇವಾಲಯದಲ್ಲಿ ಪ್ರವೇಶ ಸಿಗಲಿಲ್ಲ ಎಂದು ಸ್ಪಷ್ಟವಾಗುತ್ತದೆ.

೪. ಅ. ಸಂತ ತುಕಾರಾಮನೊಂದಿಗೂ ಶ್ರೀ ಕೃಷ್ಣ ಪರಮಾತ್ಮನೂ 'ರೊಟ್ಟಿ'ಯನ್ನು ಉಂಡದ್ದರ ಕುರಿತು ಕಥೆಯೂ ದೊರೆಯುತ್ತದೆ. ನೋಡಿ : ಭಕ್ತ ಕನಕದಾಸರು-ಸಂತೇ ಕಲ್ಲಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿ-೫೬

ಬ. ಸುದಾಮನ ಹಿಂದೆಯೂ ಇಂತಹ ಕಥೆ ಇದೆ. ಅಲ್ಲಿ ಕೃಷ್ಣ ಇವನಲ್ಲಿಯ 'ಅವಲಕ್ಕಿ' ಯನ್ನು ತಿಂದದ್ದರ ಕುರಿತು ಬರುವುದು ಸ್ಮರಿಸಿಕೊಳ್ಳಬಹುದು.

ಕ. ಅಸ್ಪೃಶ್ಯರ ಹಿನ್ನೆಲೆಯಲ್ಲಿ ದೊರೆಯುವ ಕಥೆ ಮಾದರ ಚನ್ನಯ್ಯನದು. ಅಸ್ಪೃಶ್ಯರಿಗೆ ಅನ್ವಯಿಸಿರುವುದು ಇದು ಮೊದಲನೆಯ ಕಥೆ.

೧. ಹಂಪೆಯ ಹರಿಹರದೇವರ ಶರಣ ಚರಿತ ಮಾನಸಂ : ಸಂ. ಎಚ್. ದೇವೀರಪ್ಪ: ೩೧೬-೩೩೧

ಮೂಲಕ ಕನಕದಾಸರ ದಲಿತ ಜಗತ್ತನ್ನು ತನ್ನೊಡಲಿಗೆ ಹಾಕಿಕೊಳ್ಳುವ ಪ್ರಯತ್ನ ನಡೆದಿರುವುದು ಈ ಕಥೆ ಹೇಳುತ್ತದೆ. 'ಅಂಬಲಿ' ಕುಡಿದ ಎನ್ನುವದಾಗಲಿ ಅಥವಾ ಗಂಜಿಯನ್ನು ಕುಡಿದ ಎನ್ನುವದಾಗಲಿ, ಆಯಾ ದೇವತೆಗಳು ತಮ್ಮ ಮೂಲದ ಉತ್ತುಂಗ ಸ್ಥಾನವನ್ನು ಬಿಟ್ಟು ಕೆಳಕ್ಕೆ ಬಾಗಿವೆ ಎನ್ನುವದು ಸ್ಪಷ್ಟಪಡಿಸುತ್ತವೆ. ಹೀಗೆ ಕೆಳಕ್ಕೆ ಬಾಗಿಸುವುದರ ಮೂಲಕ ಅಂದರೆ ತಮ್ಮ ದೇವರುಗಳ ಮೂಲಕ ತಮ್ಮ ತಾತ್ವಿಕ ಮತದ ಕಡೆಗೆ ಒಲಿಸಿಕೊಳ್ಳುವದು ಮತ್ತು ತಮ್ಮ ದೇವರನ್ನು ಈ ಅಸ್ಪೃಶ್ಯರು ಆರಾಧಿಸುವಂತೆ ಮಾಡುವುದೂ ಆಯಾ ಮತದವರ ಉದ್ದೇಶವಾಗಿದೆ. ಸೂಕ್ಷ್ಮವಾಗಿ ಗಮನಿಸಿದರೆ ಎರಡೂ ಮತಗಳಲ್ಲಿಯ ಸ್ಪರ್ಧೆ ವ್ಯಕ್ತವಾಗುತ್ತದೆ. ಹೀಗೆ ಅಸ್ಪೃಶ್ಯರು ನಾಯಕರನ್ನು ಬಳಸಿಕೊಂಡು, ಅಸ್ಪೃಶ್ಯರಲ್ಲಿ ತಮ್ಮತನವನ್ನು ಹೇರುವ ತಂತ್ರ ಇಲ್ಲಿ ಬಹಳ ಯಶಸ್ವಿಯಾಗಿ ಕಥೆಗಳ ಮೂಲಕ ಮತ್ತು ನಾಯಕರುಗಳ ಮೂಲಕ ಸಾಧಿಸಿದ್ದಾರೆ ಎಂದು ಹೇಳಲೇಬೇಕಾಗುತ್ತದೆ.

ಇದೇ ಬಗೆಯ ವಿಚಾರ, ಉದ್ದೇಶ ಮತ್ತು ತಂತ್ರವನ್ನು ಸಾರಿ ಹೇಳುವಂತಹದು. 'ಕನಕನ ಕಿಂಡಿಯ ಕಥೆ'[೧] ಈ ಕಥೆ ಅಮಿಬಾದಂತೆ ವಿಚಿತ್ರವಾಗಿ ಬೆಳೆದು ನಿಂತಿದೆ.[೨] ಈ ಕಥೆಯ ಬೆಳವಣಿಗೆಯ ಜೊತೆಗೆ, ಮನೋಭಾವ ಮತ್ತು ಅದರ ಇಂಗಿತತೆ ಸ್ಪಷ್ಟವಾಗುತ್ತವೆ. ಈ ಕಥೆಯಿಂದ ಶ್ರೀ ಕೃಷ್ಣನಿಗೆ ಪ್ರಚಾರ ಸಿಕ್ಕಿದೆ ಹೊರತು ಕನಕದಾಸರಿಗೆ ಪ್ರಚಾರ ಸಿಕ್ಕಿದೆ ಎಂದಿಲ್ಲ. ಇದರಿಂದ ಲೌಕಿಕದಲ್ಲಿ ಶ್ರೀಕೃಷ್ಣನನ್ನು ಕನಕದಾಸರ ಮೂಲಕ ಸಮಗ್ರಜನತೆಗೂ, ಶೂದ್ರ ಜನಾಂಗಕ್ಕೂ ತಲುಪಿಸುವ ಸಂದೇಶದ ತಂತ್ರವಿದು.

ಈ ಕಥೆಯಲ್ಲಿ ಸುಳ್ಳಿನ ಕಂತೆಗಳೇ ಅಧಿಕವಾಗಿದೆ. ಈ ಕಥೆಯ ಪಾಠಾಂತರದ ಕೆಲವು ಕಥೆಗಳಲ್ಲಿ ಗೋಡೆ ಬಿದ್ದದ್ದರ ಕುರಿತು, ಕೃಷ್ಣನ ವಿಗ್ರಹ ತಿರುಗಿದ್ದರ ಕುರಿತು ಹೇಳುವದಿದೆ.[೩] ಕಥೆಗೆ ಅನುಗುಣವಾಗಿ ತೋರಿಸಲಾಗುವ ಕನಕನ ಕಿಂಡಿ ; ಅದೊಂದು ಬೆಳಕಿನ ಕಿಂಡಿ ಎನ್ನುವುದು ಸ್ಪಷ್ಟ. ಏಕೆಂದರೆ

---

೧. ಅ. ಭಕ್ತಕನಕದಾಸರು : ಸಂತೇಕಲ್ಲಹಳ್ಳಿ ಲಕ್ಷ್ಮೀನರಸಿಂಹ ಶಾಸ್ತ್ರಿ–೪೭
ಬ. ಹರಿದಾಸರ ಕಥೆಗಳು–ಕಲಮದಾನಿ ಗುರುರಾಯರು–೦೫

೨. ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ : ಕನಕದಾಸರ ಈ ಕೀರ್ತನೆಯನ್ನು ಮೇಲಿನ ಕಥೆಗೆ ತಳುಕು ಹಾಕುವದಿದೆ. ಇದರಲ್ಲಿ ಅಸ್ಪೃಶ್ಯತೆಯ ಪ್ರಸ್ತಾವನೆ ಇಲ್ಲ. 'ಸಮಯಾ ಸಮಯವುಂಟೆ ಭಕ್ತವತ್ಸಲ ನಿನಗೆ' ಎಂದು ಕೇಳುವುದು ದೂರಕ್ಕೆ ಸರಿಸಿರುವ ಕಾರಣ ಸಿಗುತ್ತದೆ. ಇದು ಕೇವಲ ನೆಪವೆಂದು ಹೇಳಬಹುದು.

ಸುಮಾರು ಹತ್ತು ಗಜದ ಅಂತರದಲ್ಲಿ ಅಂತಹದೇ ಇನ್ನೊಂದು ಕಿಂಡಿ ಇದೆ. ಅದು 'ಗವಾಕ್ಷ' (ಕಿಟಕಿ) ಎನ್ನುವುದು ಸ್ಪಷ್ಟವಾಗಿದೆ. ಹೀಗಾಗಿ ಅವೆರಡೂ ಬೆಳಕಿನ ಕಿಂಡಿಗಳಾಗಿವೆ. ಕೃಷ್ಣನ ಮೂರ್ತಿ ತಿರುಗಿ ದರ್ಶನವನ್ನು ಕೊಟ್ಟಿತು ಎನ್ನುವ ಕಥೆಗೆ ಅನುಗುಣವಾಗಿ, ಕೃಷ್ಣನ ಮೂರ್ತಿಯನ್ನು ಪುನರ್ ಪ್ರತಿಷ್ಠಾಪಿಸುವಾಗ ಕಥೆಗೆ ಅನುಗುಣವಾಗಿ ನಿಲ್ಲಿಸುವಲ್ಲಿ ಸ್ವಲ್ಪ ಬದಲಾವಣೆ ಮಾಡಲಾಗಿದೆ ಎಂದು ಹೇಳಲಾಗುತ್ತದೆ.[೪]

ಕನಕದಾಸರಿಗೆ ಶ್ರೀಕೃಷ್ಣನ ದರ್ಶನ ಸಿಕ್ಕದೇ ಹೋದಾಗ ಗರ್ಭಗುಡಿಯ ಹಿಂದಿರುವ ಕಿಟಕಿಯಿಂದ ಬಹುಶಃ ಕದ್ದು ನೋಡಿರಬೇಕು ಎನಿಸುತ್ತದೆ. ಇಲ್ಲದೆ ಹೋದಲ್ಲಿ ಇದು ಅನ್ವಯಿಕ ಗುಣದಿಂದ ಬಂದಿರಬೇಕು ಎನ್ನುವ ಸಂದೇಹಗಳು ಬರುತ್ತವೆ.

ಧಾರವಾಡ, ಚಿತ್ರದುರ್ಗ, ಬೆಳಗಾಂವ–ಈ ಕಡೆಗಳ ಕೆಲವು ಭಾಗದಲ್ಲಿ ದಲಿತರು 'ಬೆನ್ನುದೇವರು'ಗಳನ್ನು ಇಂದಿಗೂ ಆರಾಧಿಸುವುದು ಕಂಡು ಬರುತ್ತದೆ. ಬೆನ್ನ ದೇವರು ಎಂದರೆ ಸಾಮಾನ್ಯವಾಗಿ ದೇವರಮೂರ್ತಿಯನ್ನು ಗೋಡೆಯಲ್ಲಿ ಹಾಕಿ ಕಟ್ಟಲ್ಪಟ್ಟಿದ್ದು ಅದರ ಮುಖದ ಭಾಗ ಗರ್ಭಗುಡಿಯಲ್ಲಿ ಕಂಡರೆ ಬೆನ್ನು ಭಾಗ ದೇವಾಲಯದ ಹೊರಭಾಗಕ್ಕೆ ಕಾಣುತ್ತಿರುತ್ತದೆ. (ಇಲ್ಲವೆ ಸೂಚ್ಯವಾಗಿ ಗುರುತಿಸಿ ಅಲ್ಲಿ ಎಣ್ಣೆಯನ್ನು ಹಾಕಿ ಕಪ್ಪಗಾಗಿರಿಸಿರುತ್ತಾರೆ). ಹೊರ ಭಾಗದ ಈ ಬೆನ್ನು ಭಾಗವನ್ನು ದಲಿತರು ಮಾತ್ರ ಮೂಲದಲ್ಲಿ ಪೂಜಿಸುತ್ತಿದ್ದರು ಎಂದು ಹೇಳಲಾಗುತ್ತಿದೆ.[೧] ಇಂತಹದ್ದರ ಅನುಕರಣಭಾವದಿಂದಲೂ ಈ ಕಥೆ ಹಬ್ಬಿಕೊಂಡಿರುವ ಸಾಧ್ಯತೆಗಳು ಇವೆ.

---

೩. ಈ ವಿಷಯದ ಕುರಿತು ಡಾ. ಆರ್. ಕೆ. ಮಣಿಪಾಲ ಅವರು ಒಂದು ದೀರ್ಘವಾದ ಪ್ರಬಂಧವನ್ನು ಬರೆದಿದ್ದಾರೆ–ಗಮನಿಸಿರಿ.

೪. ಭಕ್ತ ಕನಕನದಾಸರು : ಸಂತೇಕಲ್ಲಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿ–೪೭

೧. ಅ. ಧಾರವಾಡದ ಮೆದಿಕಿಗಳ ಗ್ರಾಮದಲ್ಲಿ ಇಂತಹ ಗುಡಿಯ 'ಬೆನ್ನು ದೇವರು' ಎನ್ನುವ ದೇವಸ್ಥಾನವನ್ನು ನೀವು ಕಾಣಬಹುದು. ಈಗಲೂ ಇಲ್ಲಿ ದಲಿತರಷ್ಟೇ ಇದನ್ನು ಪೂಜಿಸುತ್ತಾರೆ.

ಬ. ನೋಡಿ : ಬೆಟಗೇರಿ ಕೃಷ್ಣಶರ್ಮ ಇವರು ಬೆನ್ನು ದೇವರ ಒಂದು ಸ್ಥಳವನ್ನು ಗುರುತಿಸುತ್ತಾರೆ. ಶಿವಮೊಗ್ಗೆಯ ಸಾಗರ ತಾಲೂಕಿನಲ್ಲಿ ಇರುವ ಬೆನ್ನು ದೇವರು.

ಕ. ಕನಕದಾಸರ ಭಕ್ತಿಗೀತೆಗಳು–ಬೆಟಗೇರಿ ಕೃಷ್ಣಶರ್ಮ : ೨೭೨

–ಈ ಕಥೆಯಿಂದ ವ್ಯಕ್ತವಾಗುವ ಕೆಲ ಮಹತ್ವದ ವಿಚಾರಗಳು :

* ಅರ್ಚಕರು ನಿಮಗೆ ದೇವರ ದರ್ಶನ ಕೊಡಲು ವಿರೋಧಿಸಿದರೂ ನೀವು ಹರಿಯನ್ನು ಆರಾಧಿಸಿರಿ. ಹರಿ ನಿಮಗೆ ದರ್ಶನ ಕೊಡುತ್ತಾನೆ.

* ಅಸ್ಪೃಶ್ಯನಾದರೂ ಅಪ್ಪಟ ಭಕ್ತನಾಗಿರಬೇಕು. ಆ ಭಕ್ತನಿಗೆ ಅಪಮಾನ ಕರವಾದ ಪರೀಕ್ಷೆಗಳು ತಾರ್ಕಿಕದಲ್ಲಿ ಅನಿವಾರ್ಯ. ಪರೀಕ್ಷೆಗಳನ್ನು ಹರಿಯೇ ತನ್ನ ಹತ್ತಿರದ ಭಕ್ತರಾದ ಅರ್ಚಕರ ಮೂಲಕ ನಡೆಯಿಸುತ್ತಾನೆ. ಅರ್ಚಕರು ಅವರಾಗಿಯೇ ದೂರುವ ಕೆಲಸ ಮಾಡುವದಲ್ಲ.

ಇಂತಹದೇ ವಿಚಾರಗಳನ್ನು 'ಕನಕ–ರಾಘವೇಂದ್ರ ದರ್ಶನದ ಕಥೆ'[೨] ಹೇಳುತ್ತದೆ. ಅಸ್ಪೃಶ್ಯರ ಭಕ್ತಿಯನ್ನು ರಾಯರು ಎಂದೂ ನಿರಾಕರಿಸಲಾರರು. ಅವರು ದಿವ್ಯದೃಷ್ಟಿಯಿಂದ ನೋಡುತ್ತಿರುತ್ತಾರೆ. ಜನ ನಿಮ್ಮನ್ನು ದೂರಿದರೂ ರಾಘವೇಂದ್ರ ನಿಮ್ಮನ್ನು ದೂರಲಾರ. ಹೀಗಾಗಿ ನೀವು ರಾಘವೇಂದ್ರನ ಭಕ್ತಿಯನ್ನು ಮಾಡಿರಿ ; ಎನ್ನುವ ಹೆಚ್ಚಿನ ವಿಷಯ ಅರುಹುವ ಕಥೆಯಾಗಿದೆ.

ಒಣಗಿದ ಪೊರಟೆ, ತೆಂಗಿನಕಾಯಿಯ ನೀರು ಪ್ರಸಾದ ಮಾಡಿದ ಕಥೆ,[೩] ಕದರ ಮಂಡಲಗಿ ದೇವಸ್ಥಾನದಲ್ಲಿ ಮಲಗಿದ ಕಥೆ[೪] ಮುಷ್ಠಿಯಲ್ಲಿ ಸಾಲಿಗ್ರಾಮವನ್ನು ಗೌಪ್ಯೀಕರಿಸಿದ ಕಥೆ[೧] ಈ ಎಲ್ಲ ಕಥೆಗಳು ಕನಕದಾಸರು ಶ್ರೇಷ್ಠತ್ವ ಮತ್ತು ನೀತಿಯನ್ನು ಸಾರುವುದಕ್ಕಾಗಿಯೇ ಬಂದಿವೆ ಎಂದು ಮೇಲುನೋಟಕ್ಕೆ ತೋರುತ್ತವೆ. ಆದರ ಆಂತರ್ಯದಲ್ಲಿ ಮತ್ತೊಂದು ಗುಟ್ಟನ್ನು ಹೊಂದಿವೆ. ಉದಾಹರಣೆಗಾಗಿ ಅತ್ಯಂತ ಪ್ರಚಾರದಲ್ಲಿರುವ 'ಕನಕದಾಸರ ಬಾಳೆಹಣ್ಣಿನ ಕಥೆ'ಯನ್ನೇ ಎತ್ತಿಕೊಳ್ಳಬಹುದು. ಇದು ನೇರವಾಗಿ ಕನಕದಾಸರ ಭಕ್ತಿ, ಹಾಗೂ ಜಾಣ್ಮೆಯನ್ನೂ ಮತ್ತು ಭೂಸುರರಿಗೆ ಬುದ್ಧಿವಾದವನ್ನು

---

೨. ಕನಕದಾಸರ ಜೀವನ ಮತ್ತು ಕೃತಿಗಳು–ಒಡೆಯರ ಡಿ. ಹೆಗಡೆ ; ಮಂಗಳೂರು ವಿ. ವಿ. ಯ ಕನಕದಾಸರ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ. ಕೈಬರಹದಲ್ಲಿ ಇರುವ ಪ್ರಬಂಧ ಬಳಸಿಕೊಳ್ಳಲಾಗಿದೆ.

೩. ಹರಿದಾಸರ ಕಥೆಗಳು : ಕಮಲದಾನಿ ಗುರುರಾಯರು–೫೮

೪. –ಅದೇ–

೫. ಅ. ಭಕ್ತ ಕನಕದಾಸರು ಸಂತೇಕಲ್ಲಹಳ್ಳಿ ಲಕ್ಷ್ಮೀನರಸಿಂಹ ಶಾಸ್ತ್ರಿ–೬೨

ಬ. ಜನಪ್ರಿಯ ಕನಕ ಸಂಪುಟ : ದೇ ಜವರೇಗೌಡ ಇತರರು–೬೭

ಕ. ಹರಿದಾಸರ ಕಥೆಗಳು : ಕಲಮದಾನಿ ಗುರುರಾಯರು–೫೭

ಡ. ಹರಿದಾಸ ಬೋಧ–ಎ ಎಂ. ಅಣ್ಣೀಗೇರಿ–೯೨

೧. ಹರಿದಾಸರ ಕಥೆಗಳು : ಕಲಮದಾನಿ ಗುರುರಾಯರು–೫೭

ಹೇಳುವದಕ್ಕಾಗಿ ಬಂದ ಕಥೆ ಎಂದು ಅರ್ಥೈಸುತ್ತಾರೆ. ಆದರೆ ಈ ಕಥೆ ಇದಷ್ಟೇ ಹೇಳುತ್ತದೆ ಎನ್ನಲಾಗದು. ದಾಸಕೂಟದಲ್ಲಿ ಪುರಂದರದಾಸರಂಥವರೂ ಇದ್ದರು ಎಂಬುದು ಮರೆಯಲಾಗದು. 'ಹರಿಸರ್ವಾಂತರಯಾಮಿ' ಎನ್ನುವುದು ಬಿಚ್ಚಿಟ್ಟಿರಬೇಕಾದರೆ ಅಥವಾ ಭೂಸುರರು ಇದನ್ನು ಗುರುತಿಸಲಾಗದಷ್ಟರ ಮಟ್ಟಿಗೆ ಮಂದಮತಿಗಳಾಗಿರಲು ಸಾಧ್ಯವಿರಲಿಕ್ಕಿಲ್ಲ. ಇಲ್ಲೇನೂ ದೈವಿಕದ ಕಥೆಯೊಟ್ಟಿಗೆ ದೈವೀಕವಲ್ಲದ ಕೆಲಸ ನಡೆದಿರುವಂತಿದೆ. ಇಲ್ಲಿ ಕನಕದಾಸರನ್ನು ಮೇಲಕ್ಕೆ ಎತ್ತಿ ಹಿಡಿಯಬೇಕು ಎನ್ನುವದೇ ವ್ಯಾಸರಾಯರ ಉದ್ದೇಶ. ಆದರೆ ಈ ಉದ್ದೇಶಕ್ಕೆ ಹಿನ್ನೆಲೆ ಇದೆ. ಈ ಹಿನ್ನೆಲೆಯಿಂದಲೇ ಘಟನೆಯ ಸಾಧನೆಯಲ್ಲಿ ಕನಕರಿಗೆ ಜಯ ಲಭಿಸಿದೆ.

ಹನ್ನೆರಡನೆಯ ಶತಮಾನದಲ್ಲಿ ಬರುವ ಬಸವಣ್ಣನವರ ಸುತ್ತಿನ ಕಥೆಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಬಸವಣ್ಣನವರು ಅಸ್ಪೃಶ್ಯರನ್ನು ಎತ್ತಿ ಹಿಡಿಯುವದಕ್ಕಾಗಿ ತಾನು ದಾಸಿಯ ಮಗ ಎಂದು ಹೇಳಿಕೊಳ್ಳುವುದು, 'ತೊತ್ತಿನ ತೊತ್ತಿನ ಮಗ' ಎಂದೂ, ತಾನೂ ಕೀಳು ಜಾತಿಗೆ ಇಳಿದು ಹೇಳಿಕೊಳ್ಳುವ ತಂತ್ರದಿಂದ ದಲಿತರನ್ನು ವೀರಶೈವ ಮತಕ್ಕೆ ಸೆಳೆದದ್ದನ್ನು ಕಾಣುತ್ತೇವೆ. ಇದು ಒಂದು ರೀತಿಯಲ್ಲಿ 'ಕಾಲು ಬಿದ್ದು ಕಾಲುಂಗರ ಬಿಚ್ಚಿಕೊಳ್ಳುವ' ತಂತ್ರ. ಹೀಗೆಯೇ ಈ ದಾಸ ಕೂಟದಲ್ಲಿ ನಡೆದಿದೆ. ಮೇಲಿನ ಕಥೆಯಲ್ಲಿ ಭೂಸುರರು ನಾವು ದಡ್ಡರು ಕನಕನೊಬ್ಬನೇ ಜಾಣ ಎಂದು ಹೇಳಿ ಅವನನ್ನು ಮತ್ತು ಅವನ ಜನತೆಯ ಮೇಲೆ ತಮ್ಮ ತಾತ್ವಿಕತೆಗೆ ಒಗ್ಗಿಸಿಕೊಳ್ಳಲು ಹೂಡಿದ ಹೂಟದ ಪ್ರಾರಂಭಿಕ ಹೆಜ್ಜೆಗಳಾಗಿವೆ.[೨] ಸಣ್ಣಪುಟ್ಟ ಸಂದರ್ಭಗಳನ್ನು ಕೂಡಾ ಬಳಸಿ ಕನಕದಾಸರಿಗೆ ಒಲಿಸಿಕೊಳ್ಳುವುದಕ್ಕಾಗಿ ಹುರಿದುಂಬಿಸುವ ಕೆಲಸ ಮಾಡಲಾಗಿದೆ. ಮುಷ್ಟಿಯಲ್ಲಿಯ ಸಾಲಿಗ್ರಾಮದ ಕಥೆಯನ್ನು ತೆಗೆದುಕೊಂಡರೆ ಅದೊಂದು ಸಣ್ಣ ಪ್ರಸಂಗ, ಅಂತಹದ್ದೇನೂ ಘನ ಸಾಧನೆಯ ಪ್ರಸಂಗವಲ್ಲ. ಅಂಥಲ್ಲಿಯೂ ಕನಕನ ಜಾಣ್ಮೆ ಎತ್ತಿ ಹಿಡಿದು ತಮ್ಮನ್ನು ತಾವೇ ಕುಗ್ಗಿಸಿಕೊಳ್ಳುವ, ಕನಕದಾಸರನ್ನು ಮಾತ್ರ ಎತ್ತುವ ನೀತಿಯನ್ನು ನೋಡಿದರೆ ಇಂಥ ಒಳವಿಚಾರಗಳು ಅರ್ಥವಾಗದಿರಲಾರವು.

---

೨. ಕನಕದಾಸರು ತಮ್ಮ ಕೀರ್ತನೆಯಲ್ಲಿ ಕದಳಿಯ ಕಥಾ ಪ್ರಸಂಗವನ್ನು ಹೇಳಿಕೊಂಡಿದ್ದಾರೆ. ಕನಕದಾಸರ ಮೇಲೆ ಪ್ರಯೋಗಿಸಿದ ಈ ತಂತ್ರದ ಅಸ್ತ್ರದಿಂದಾಗಿ ಕನಕದಾಸರಿಗೆ ಅವರ ಆಟದ ಬುಗುರೆಯಂತೆ ತಿರುಗಿರಬಹುದಾದ ಸಾಧ್ಯತೆಗಳ ಹಿನ್ನೆಲೆಯಲ್ಲಿ ಗ್ರಹಿಸಿಕೊಳ್ಳಬಹುದು.

ಬಾಳೆಹಣ್ಣಿನ ಕಥೆಯಲ್ಲಿ ವ್ಯಾಸರಾಯರಿಗಿದ್ದ ಉದ್ದೇಶದ ಹಿನ್ನೆಲೆ ಎಂದರೆ; ಹರಿಸರ್ವಾಂತರಯಾಮಿ ಎನ್ನುವುದನ್ನು ಸಾರುವುದು. ಈ ನಂಬಿಕೆಯ ಕ್ರಿಯೆ, ಈಗಾಗಲೇ ಜನಸಾಮಾನ್ಯರಲ್ಲಿ ಯಾರು ಹೆಚ್ಚು ಪ್ರಚಾರದಲ್ಲಿ ಇರುವರೋ ಅಂಥವರಿಂದ ಅದನ್ನು ಹೇಳಿದರೆ ಸುಲಭವಾಗಿ ಜನತೆಗೆ ತಲುಪಲು ಸಾಧ್ಯ ಎನ್ನುವುದು. ಹೀಗೆ ಹೇಳುವದು ಕಥಾನಕಗಳ ಮೂಲಕ ಹಬ್ಬಿಸುವುದರಿಂದ ಸಾಮಾನ್ಯರು ಸರಳವಾಗಿ ಗ್ರಹಿಸಲು ಸಾಧ್ಯ. ಹೀಗೆ ಕಥೆಯ ಮೂಲಕ ನೀತಿ, ತತ್ವಗಳನ್ನು ಸಾರುವಂತಹ ತಂತ್ರವೇನು ಕನ್ನಡಕ್ಕೆ ಹೊಸದಲ್ಲ.

ಭಕ್ತಿಗೆ ಬೆನ್ನೆಲುಬಾಗಿ ಬರುವ ಕರ್ಮಸಿದ್ಧಾಂತವನ್ನು ಬಿಡಿಸಿದರೆ ಭಕ್ತಿಗೆ ಮೌಲ್ಯವೇ ಇಲ್ಲದಂತಾಗುತ್ತದೆ. ಆದರೆ ಈ ಕರ್ಮಸಿದ್ಧಾಂತದ ಬೇರುಗಳು ವ್ಯಕ್ತಿಯನ್ನು ಹಿಂಸಿಸುವುದಕ್ಕೆ ಪ್ರತೀಕಗಳಾಗಿವೆ. ಒಬ್ಬ ವ್ಯಕ್ತಿ ಎಷ್ಟೇ ಪ್ರತಿಭಾವಂತನಾದರೂ ಆತನ ಪ್ರತಿಭೆಗೆ ಸೃಜನಶೀಲವಲ್ಲದು ಎಂಬುದನ್ನು ಸಾಬೀತುಪಡಿಸುವುದಕ್ಕಾಗಿ ಹೋರಾಡುತ್ತದೆ. ಮೇಲ್ವರ್ಗದ ಜನತೆ ಅದಕ್ಕೆ ಕೊಡುವ ಪುರಸ್ಕಾರ ನಿಕೃಷ್ಟವಾದದ್ದು. ಆದರೆ ಪ್ರತಿಭಾನ್ವಿತ ವ್ಯಕ್ತಿ ತನ್ನ ಸೃಜನಶೀಲತೆಯಿಂದ ಮೇಲೆದ್ದು ಬಂದಾಗ ಮೇಲ್ವರ್ಗದ ಜನತೆ ಅದಕ್ಕೆ ತಮ್ಮದೇ ಆದ ಸಂಸ್ಕಾರವನ್ನು ಕೊಟ್ಟು ಸಮರ್ಥಿಸಿಕೊಳ್ಳುವ ಬಗೆ ಕಂಡು ಬರುತ್ತದೆ. ಅಂದರೆ ದೇವಗಣದವರೆ ಪ್ರಾಯಶ್ಚಿತ್ತಕ್ಕಾಗಿ ಪಂಚಮರಾಗಿ ಶೂದ್ರರಾಗಿ ಜನ್ಮವೆತ್ತುತ್ತಾರೆ–ಎಂದು ಅರ್ಥೈಸಲಾಗುತ್ತದೆ, ಅಂದರೆ ಅಸ್ಪರಶ್ಯರು ಅಸ್ಪೃಶ್ಯರೇ. ಅವರಿಗೆ ಸ್ವಂತಿಕೆ ಎನ್ನುವುದು ಇಲ್ಲ. ಅದೇನೇ ಸ್ವಂತಿಕೆ ಇದ್ದದ್ದಾದರೂ ಕೂಡ ತಮ್ಮ ಮೂಲದ ಬೇರು ಕಾರಣ ಎಂದು ವಾಸಿಸುವ ರೀತಿ ಒಡೆದು ಕಾಣುತ್ತದೆ. ಇಂತಹ ಈ ಎಲ್ಲ ಬಗೆಯ ಪ್ರಯೋಗ ಕನಕದಾಸರ ಹಿಂದೆ ನಡೆದಿದೆ.

ಕನಕನನ್ನು 'ದಾಸಕೂಟ'ಕ್ಕೆ ಸೇರಲು ವ್ಯಾಸರೆ ಕೇಳಿಕೊಂಡರು ಎನ್ನುವುದಕ್ಕೆ ಒಂದು ಕಥೆ ಸಿಕ್ಕರೆ[೧] ಇನ್ನೊಂದು ಕಥೆಯಲ್ಲಿ 'ದಾಸಕೂಟಕ್ಕೆ ನನ್ನನ್ನು ಸೇರಿಸಿಕೊಳ್ಳಿ" ಎಂದು ಕನಕನೇ ಅಂಗಲಾಚಿಕೊಂಡ ಕುರಿತು ಕಥೆಯೂ ದೊರೆಯುತ್ತದೆ.[೨] ಈ ಎರಡೂ ಕಥೆಗಳು ವಿರೋಧಾಭಾಸವನ್ನು ಸೂಚಿಸುತ್ತವೆ. ಈ ವಿರೋಧಾಭಾಸ ಯಾವುದೋ ಒಂದು ಗೌಪ್ಯತೆಯನ್ನು ಹೊಂದಿದೆ

---

೧. ಭಕ್ತಕನಕದಾಸರು : ಸಂತೇಕಲ್ಲಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿ–೬೦
೨. ಹರಿದಾಸರ ಕಥೆಗಳು : ಕಲಮದಾನಿ ಗುರುರಾಯರು–೫೧

ಎಂಬುದು ಹೇಳುತ್ತದೆ. ಹೀಗಾಗಿ ಯಾವುದೂ ಖಚಿತವಾಗಿ ಹೇಳಲು ಆಧಾರಗಳು ಸಾಲವು. ಇಂತಹದೇ ನಿಲುವಿಗೆ ಬರುವ ಬೆಟಗೇರಿ ಕೃಷ್ಣಶರ್ಮ "ಇವರು 'ಹರಿದಾಸ ಕೂಟ'ದ ಸಂಬಂಧವನ್ನು ತಮ್ಮ (ಕನಕದಾಸರು) ಸಾಧನೆಯ ಪ್ರಗತಿಗಾಗಿ ತಂದುಕೊಂಡಿರಬಹುದು"[೧] ಎಂದು ಹೇಳುತ್ತಾರೆ. ಆದರೆ ವ್ಯಾಸಕೂಟದೊಂದಿಗೆ ಇರುವ ಸಂಬಂಧದ ಕತೆಗಳನ್ನು ಗಮನಿಸಲಾಗಿ ಕನಕದಾಸರಿಂದ ದಾಸಕೂಟದ ಹೆಗ್ಗಳಿಕೆಯಾಗಲಿ ಹಿರಿಮೆಯಾಗಲಿ ಹೆಚ್ಚಿದೆ ಎಂದೇ ಹೇಳಬೇಕಾಗುತ್ತದೆ. ವ್ಯಾಸರಾಯರು ಮತ್ತು ಕನಕರ ಕುರಿತು ಬರುವ ಕಥೆಗಳೆಲ್ಲ ಪರಸ್ಪರ ಕನಕರೊಂದಿಗಿನ ತಾರ್ಕಿಕ ಮಥನದಿಂದ ವ್ಯಾಸರಾಯರು ಸಾಕಷ್ಟು ಪಡೆದುಕೊಂಡಿದ್ದಾರೆ ಎಂಬುದು ಸಾಬೀತಾಗುತ್ತದೆ.

ಉದಾಹರಣೆಗೆ 'ನಾನು ಹೋದರೆ ಇದೇ ಜನ್ಮ'[೨] ಅಥವಾ 'ನಾ ಸತ್ತರೆ' ಕಥೆ[೨] ಕದಳಿಯ ಕಥೆ[೪] ಸಾಲಿಗ್ರಾಮದ ಕಥೆ[೫] ಇಂಥವೆಲ್ಲ ಮೇಲಿನ ವಿಚಾರವನ್ನು ಸ್ಪಷ್ಟಪಡಿಸುತ್ತವೆ. 'ನಾ ಸತ್ತೆ' ಕಥೆ ವ್ಯಾಸರಾಯರ 'ಅಹಂಬ್ರಹ್ಮಾಸ್ಮಿ' ತತ್ವದ ತರ್ಕದ್ದು.[೬] ಈ ಬಗೆಯ ತಾರ್ಕಿಕ ನೆಲೆಗಟ್ಟನ್ನು ಒದಗಿಸುವಲ್ಲಿ ಕನಕರದು ಸಿದ್ಧಹಸ್ತವಾಗಿತ್ತು ಎನ್ನುವುದು ತಿಳಿದು ಬರುತ್ತದೆ.

ಕರ್ಮಸಿದ್ಧಾಂತದ ಮೂಲಕ ಅಸ್ಪೃಶ್ಯರನ್ನು ಹತ್ತಿಕ್ಕುವ ನೀತಿ ಆಶ್ಚರ್ಯಕರವಾದುದು. ಅದರೊಂದಿಗೆ ಹೆಣೆದುಕೊಂಡು ಬರುವ ಜನ್ಮಾಂತರದ ಕಲ್ಪನೆ ಭಕ್ತಿಗೆ ಹೇಗೆ ಮೂಲ ಬೇರಾಗಿದೆ ಎನ್ನುವದು ಈ ಹಿಂದೆಯೇ ಹೇಳಲಾಗಿದೆ. ಕನಕನಿಗೆ ಶ್ರೀ ವ್ಯಾಸರಾಯರ ಉಪದೇಶದ ಹಿನ್ನೆಲೆಯಲ್ಲಿ ಕಂಡು ಬರುವ ಕಥಾನಕಗಳು ಅಷ್ಟೇ ವಿಶಿಷ್ಟ ಮತ್ತು ಆಶ್ಚರ್ಯವನ್ನು ಹುಟ್ಟಿಸುವಂಥವುಗಳಾಗಿವೆ.

---

೧. ಕನಕದಾಸರ ಭಕ್ತಿಗೀತೆಗಳು : ಬೆಟಗೇರಿ ಕೃಷ್ಣಶರ್ಮ–೧೦

೨. ಭಕ್ತಕನಕದಾಸರು : ಸಂತೇಕಲ್ಲಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿ–೫೬–೬೭. ಈ ಕೃತಿಯ ಕಥೆಯಲ್ಲಿ ಕೈಗಂಟಿನ ಭಾಗ ಸೇರಿದಂತಿದೆ. ಕೆಳಗಿನ ಕೃತಿಯ ಕಥೆಗೆ ಹೋಲಿಸಿರಿ.

೩. ಹರಿದಾಸರ ಕಥೆಗಳು : ಕಲಮದಾನಿ ಗುರುರಾಯರು–೫೫–೫೬

೪. ಜನಪ್ರಿಯ ಕನಕ ಸಂಪುಟ : ದೇ. ಜವರೇಗೌಡ ಇತರರು–೬೭

ಭಕ್ತ ಕನಕದಾಸರು : ಸಂತೇಕಲ್ಲಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿ–೬೨

೫. ಹರಿದಾಸರ ಕಥೆಗಳು : ಕಲಮದಾನಿ ಗುರುರಾಯರು–೫೭

೬. ಅಹಂಬ್ರಹ್ಮಾಸ್ಮಿ 'ತತ್ವದ ವಿಚಾರಕ್ಕೆ ನೋಡಿ : (ನಾನು ಬ್ರಹ್ಮನಾದೆ) ಕನಕದಾಸರು ಸಂತೇಕಲ್ಲಹಳ್ಳಿ ಲಕ್ಷ್ಮೀನರಸಿಂಹಶಾಸ್ತ್ರಿ–೫೯. ಕನಕದಾಸರ ವಿಚಾರಕ್ಕೂ ಮತ್ತು ವ್ಯಾಸರಾಯರ ತತ್ವಕ್ಕೂ ಸೂಕ್ಷ್ಮವಾಗಿ ಗಮನಿಸಿದರೆ ದ್ವಂದ್ವವಿರುವುದು ಕಂಡುಬರುತ್ತದೆ ಗಮನಿಸಿ.

ಕನಕನ ಮೊದಲ ಭೇಟಿ ವ್ಯಾಸರಾಯರಿಗಾದಾಗ 'ಕುರುಬನಿಗೇನು ಕೋಣನ ಮಂತ್ರವೇ?' ಎಂಬ ಕೊಂಕು ನುಡಿ ಪ್ರಾಪ್ತವಾಯಿತು. ಇದನ್ನೇ ಹಿಡಿದು ಕನಕ ಧ್ಯಾನ ಮಾಡಲಾಗಿ ಸಾಕ್ಷಾತ್ ಯಮಧರ್ಮರಾಯರ ಕೋಣವೇ ಕನಕನೆದುರು ಪ್ರತ್ಯಕ್ಷವಾಯಿತು. ಆಗ ಆ ಕೋಣನ ಸಹಾಯದಿಂದ ವ್ಯಾಸ ಸಮುದ್ರ ನಿರ್ಮಾಣದ ಕಾಲದಲ್ಲಿ ತೂಬಿಗೆ ಅಡ್ಡಬಿದ್ದ ಬೃಹತ್ ಬಂಡೆಗಲ್ಲಿನ ತೊಂದರೆಯನ್ನು ನಿವಾರಿಸಲಾಯಿತು. ಕನಕ ಈ ಘನಕಾಯಕದಿಂದ ವ್ಯಾಸರಾಯರು ಕನಕದಾಸರಿಗೆ ತಿರಸ್ಕಾರ ತೊರೆದು ಗುಂಪಿನೊಂದಿಗೆ ಒಂದಾಗಿರಲು ಅವಕಾಶ ಕೊಟ್ಟರು ಎಂಬುದಾಗಿ ಕಥೆ ಬರುತ್ತದೆ.[೧]

ಈ ಕಥೆಯಲ್ಲಿ ಕನಕನ ಕುರಿತಾಗಿ ಮೊದಲಿಗೆ ವ್ಯಾಸರಲ್ಲಿ ಒಳ್ಳೆಯ ಅಭಿಪ್ರಾಯ ಇಲ್ಲದಿರುವುದು ತಮ್ಮ ತಾತ್ವಿಕತೆಯಲ್ಲಿ ಇದ್ದ ಬಂಡೆಗಲ್ಲಿನಂತಹ ಸಮಸ್ಯೆಗಳಿಗೂ (ಸಾಂಕೇತಿಕವಾಗಿ ಸಮಸ್ಯೆಯನ್ನು ಗುರುತಿಸುವ ರೀತಿ) ಪರಿಹಾರ ಮಾಡಿಕೊಂಡ ವ್ಯಾಸರೂ ಕನಕನ ವಿದ್ವತ್ತಿಗೆ ಮಾರುಹೋದರು ಎಂಬುದನ್ನು ಅರುಹುತ್ತದೆ.

ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ಕನಕದಾರನ್ನು ಅರ್ಥೈಸುವ ಬಗೆ ಇನ್ನೂ ವಿಶಿಷ್ಟವಾದುದು. ಕನಕ ಯಮಧರ್ಮನ ಅಂಶಸಂಭೂತನೆನ್ನುತ್ತಾರೆ. ಇದಕ್ಕೆ ಕಥೆ ಹೀಗಿದೆ.[೨]

ಅಣುಮಾಂಡವ್ಯ ಋಷಿ ಚಿಕ್ಕ ವಯಸ್ಸಿನಲ್ಲಿ ಅರಿಯದೆ ನೊಣಕ್ಕೆ ಹಿಂಸೆಯನ್ನು ಮಾಡಿದ್ದ. ಈತ ಸತ್ತನಂತರ ಆ ಹಿಂಸೆಯ ಕಾರಣದಿಂದಾಗಿ ಯಮಧರ್ಮ ಇವನಿಗೆ ಸ್ವರ್ಗವನ್ನು ಕೊಡದೆ ಅಂತಹದೆ ಶಿಕ್ಷೆಯನ್ನು ಅನುಭವಿಸಿ ಬರಲಿ ಎಂದ. ಅಣುಮಾಂಡವ್ಯ ಋಷಿ ಕೋಪಗೊಂಡು ಯಮಧರ್ಮನಿಗೆ

---

೧. ಅ. ಕನಕದಾಸರ ಜೀವನ ಮತ್ತು ಕೃತಿಗಳು–ಒಡೆಯರ ಡಿ. ಹೆಗಡೆ.
ಬ. ಹರಿದಾಸರ ಕಥೆಗಳು–ಕಮಲದಾನಿ ಗುರುರಾಯರು – ೬೧
ಕ. ಶ್ರೀ ವ್ಯಾಸರಾಯರ ಚರಿತೆ–(ಮೇಲಿನ ಕೃತಿಯ ಉದ್ಧರಣೆ)

ಈ ಕೃತಿಯಲ್ಲಿ ಕೋಣನ ಧ್ಯಾನದ ಕುರಿತು ಪ್ರಸ್ತಾಪಿಸಲಾಗಿದೆಯಂತೆ. ಶ್ರೀಗುರು ಕೇ (? ರೇ–ಸಂ) ವಣ್ಯರು–ಕನಕನ ಮೂಲದೇವತಾಂಶದ 'ಯಮರಾಜ' (!) ಸ್ವರೂಪವನ್ನು ತಿಳಿದು ಯಮರಾಜನ ವಾಹನವಾದ ಕೋಣನ ಧ್ಯಾನದ ಕುರಿತು ಹೇಳಲಾಗಿದೆಯಂತೆ.

(ಈ ಪ್ರಬಂಧ ಸಿದ್ಧಪಡಿಸುವಾಗ ಕೃತಿ ಲಭ್ಯವಾಗಿಲ್ಲ.)

೨. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಸಂ. ಜಿ. ಎಸ್. ಶಿವರುದ್ರಪ್ಪ ಸಂ. ಭಾಗ ೪೮೬.

'ಪಾಪ ಪ್ರಾಯಶ್ಚಿತ್ತಾರ್ಥಕ್ಕೆ ನೀನು ಮೂರು ಜನ್ಮ ಶೂದ್ರ ಯೋನಿಯೊಳಗೆ ಹುಟ್ಟು' ಎಂದು ಶಾಪಕೊಟ್ಟನು. ಅದೇ ರೀತಿ ಕನಕ ಮಹಾಭಾರತದ ವಿದುರನಾಗಿ 'ದಾಸಿಯೋನಿ'ಯಲ್ಲಿ ಹುಟ್ಟಿದ. ಕನಕದಾಸನಾಗಿ 'ಶೂದ್ರಯೋನಿ' (ಕುರುಬ) ಯಲ್ಲಿ ಹುಟ್ಟಿದ. 'ಕನಕ'ನಾಗಿ 'ಅಂತ್ಯಜ ಯೋನಿ'ಯಲ್ಲಿ ಹುಟ್ಟಿದ.

ಭಾಗವತ ಪಂಥದ ಪರಿಕಲ್ಪನೆಯ ಪ್ರಕಾರ ಹಿಂದೂ ಧರ್ಮದ ಪ್ರಥಮ ಭಾಗವತ ಹಿರಣ್ಯಕಶ್ಯಪನ ಮಗ ಭಕ್ತ ಪ್ರಹ್ಲಾದ. ಈತನೇ ಮುಂದೆ ವ್ಯಾಸರಾಯರಾಗಿ ಜನ್ಮವೆತ್ತಿದರು. ಆನಂತರ ರಾಘವೇಂದ್ರ ರಾಯರಾಗಿ ಜನ್ಮವೆತ್ತಿದರು. ಮಂತ್ರಾಲಯದ ಯತಿ ರಾಘವೇಂದ್ರಸ್ವಾಮಿಯವರ ಕಾಲಕ್ಕೆ ಕನಕದಾಸರು 'ಕನಕ'ನಾಗಿ ಅಂತ್ಯ ಯೋನಿಯಲ್ಲಿ ಹುಟ್ಟಿ ಬಂದಿದ್ದರು ಎಂದು ಹೇಳಲಾಗುತ್ತದೆ.

ಈ ಕಥೆಯಲ್ಲಿ ಜನ್ಮಾಂತರದ ಅಥವಾ ರೂಪಾಂತರದ ಕಲ್ಪನೆಯ ತತ್ವವನ್ನು ಬಳಸಿಕೊಳ್ಳುವದು ಆಶ್ಚರ್ಯಕರ ರೀತಿಯದು. ವಿದುರನಂತಹ ಕೃತಿನಿಷ್ಠನಾದ ವ್ಯಕ್ತಿಯೂ ಹೇಗೆ ಜೀವಂತಿಕೆಯನ್ನು ಪಡೆದುಕೊಳ್ಳುತ್ತಾನೆ ಎನ್ನುವದು ಒಂದು ಬಗೆಯಾದರೆ ಜೀವವೇ ಇಲ್ಲದ ಕಲ್ಪನಾತ್ಮಕವಾದ ವ್ಯಕ್ತಿಯನ್ನು ಸೃಷ್ಟಿಸಿ ರಾಘವೇಂದ್ರನ ಕಾಲಕ್ಕೆ ಅತಿ ಶೂದ್ರನಾಗಿ 'ಕನಕ' ಎಂಬ ಹೆಸರಿನಲ್ಲಿ ಹುಟ್ಟಿದ ಎನ್ನುವದು ಹಾಸ್ಯಾಸ್ಪದವಾಗಿ ಕಾಣುವ ಸಂಗತಿಯಾದರೂ, ಒಬ್ಬ ಪ್ರತಿಭಾನ್ವಿತ ಶೂದ್ರ ವ್ಯಕ್ತಿಯನ್ನು ತಮ್ಮ ಸಿದ್ಧಾಂತ ಚೌಕಟ್ಟಿನ ಪ್ರತಿಪಾದನೆಗಾಗಿ ಹೇಗೆ ಬೇಕೋ ಹಾಗೆ 'ಅಳ್ಳೆಳ್ಳಾಯಿ ಆಟ'ವನ್ನು ಆಡಿಸಿದ್ದು ಯಾರಿಗೂ ಅಚ್ಚರಿಪಡಿಸಬಹುದಾದುದು.

ಇದೇ ಕಥೆಯಲ್ಲಿ ಜನ್ಮಾಂತರದ ಹಿಂದೆ ವ್ಯಕ್ತವಾಗುವ ಇನ್ನೊಂದು ಮಹತ್ವದ ಅಂಶವೆಂದರೆ ಒಬ್ಬ ಹಿಂಸಾಕುಲದಿಂದ ಬಂದ ವ್ಯಕ್ತಿ, ಹಿಂಸಾತ್ಮಕ ಪುರಾಣ ಕಲ್ಪನೆಯ ವ್ಯಕ್ತಿಯಾಗಿಯೇ ಹುಟ್ಟುವದು. (ಯಮ=ಕಾಲ್ಪನಿಕ ಪುರಾಣ ವ್ಯಕ್ತಿ, ಕನಕ=ತಾರ್ಕಿಕ ವ್ಯಕ್ತಿ. ಯಮ, ಕನಕನಾಗಿ ಹುಟ್ಟಿದ ಎನ್ನುವದು) ಮತ್ತು ಸುರ ವಂಶ ಸಂಭೂತನಾದ ವ್ಯಕ್ತಿ ಮತ್ತೊಂದು ದೇವತಾ ಸ್ವರೂಪವಾಗಿಯೇ ಹುಟ್ಟುವದು. (ವ್ಯಾಸರು=ರಾಘವೇಂದ್ರಸ್ವಾಮಿಯಾಗಿ ಹುಟ್ಟುವದು) ಈ ಕಲ್ಪನೆಗಳ ಪ್ರಕಾರ ಕನಕದಾಸರು ರಾಘವೇಂದ್ರ ಸ್ವಾಮಿಯಾಗಿ ಹುಟ್ಟಲಾರರು. ಏಕೆಂದರೆ ಆತ ಅಸ್ಪೃಶ್ಯನಾಗಿರುವುದರಿಂದ ಯಮಾಂಶ ಸಂಭೂತನಾಗುತ್ತಾನೆ. ಕೋಣನ ಪ್ರತಿರೂಪವಾಗುತ್ತಾನೆ. ದಾಸಿ, ಶೂದ್ರ, ಪಂಚಮರ ಯೋನಿಯಲ್ಲಿ ಹುಟ್ಟುವ ವ್ಯಕ್ತಿಯಾಗುತ್ತಾನೆ. ಇದು ಕನಕದಾಸರಿಗೆ ಜನ್ಮಾಂತರದಿಂದ ಸಿಕ್ಕ ದೊಡ್ಡ ಕೊಡುಗೆ

ಎಂದೇ ಹೇಳಬೇಕಾಗುತ್ತದೆ. 'ನಾ ಸತ್ತರೆ' ಕಥೆಯಲ್ಲಿ ವಿಷಯ ಎಷ್ಟರಮಟ್ಟಿಗೆ ಬೆಳೆಯುತ್ತದೆಂದರೆ ಕನಕದಾಸರಿಗೆ 'ಮುಕ್ತಿ' ಸಾಧ್ಯವೇ ? ಎನ್ನುವ ಪ್ರಶ್ನೆ ಏಳುತ್ತದೆ. ಅಸ್ಪೃಶ್ಯನಿಗೆ ಇದೂ ಕೂಡಾ ದಕ್ಕದು ಎಂಬ ಕಲ್ಪನೆಯ ಮೇಲಿನ ಕಲ್ಪನೆಗಳು ಹೀಗೆ ಸಿದ್ಧವಾಗುತ್ತವೆ ಎಂಬುದನ್ನು ನಿರೂಪಿಸುತ್ತವೆ.

ಕನಕದಾಸರು ತಮ್ಮ ವಿದ್ವಾಂಸರ ಪರಿಸರದಲ್ಲಿಯೇ ಹೆಚ್ಚಿನ ಅಸ್ಪೃಶ್ಯತನದ ನೋವನ್ನು ಅನುಭವಿಸಿದ್ದಾರೆ. ಅವರು ಕೊಡುವ ಸಾದೃಶ್ಯಗಳಲ್ಲಿಯೇ ಮೆರೆಯುವದಕ್ಕೆ ಪ್ರಯತ್ನಿಸುವ ಹಟಮಾರಿತನವೂ ಕನಕದಾಸರಿಗೆ ಇದ್ದದ್ದು ಎದ್ದುಕಾಣುತ್ತದೆ. ಹೀಗಾಗಿಯೇ ವೈಷ್ಣವರು ಯಾವುದೇ ಅನ್ವಯಿಕತೆ ಕೊಟ್ಟರೂ ಕನಕದಾಸರು ಅದರಲ್ಲಿ ಶ್ರೇಷ್ಠರಾಗಿ ಎದ್ದು ನಿಂತುಬಿಡುತ್ತಾರೆ. ಆದರೆ ಅಧ್ಯಯನಕಾರರು ಇಂತಹ ವಿಷಯವನ್ನು ಬೇರೆ ರೀತಿಯ ಬಣ್ಣಕೊಟ್ಟು ಹೇಳುವದು ಕಂಡು ಬರುತ್ತದೆ.

ದಂಡನಾಯಕರಾಗಿದ್ದ ಕನಕದಾಸರಿಗೆ ಕೋಣ ಮತ್ತು ಯಮನಿಗೆ ಹೋಲಿಸುವುದನ್ನು ನೋಡಿದರೆ ಕನಕದಾಸರೂ ಬಲಿಷ್ಠವಾದ ಶರೀರವನ್ನು ಹೊಂದಿದ್ದರು ಎಂದು ತೋರುತ್ತದೆ. ಈಗಲೂ ಆಡುಮಾತಿನಲ್ಲಿ ಬಲಿಷ್ಠ ಕಾಯದವರಿಗೆ 'ಕೋಣ ಇದ್ದಾಂಗ ಇದ್ದಾನ' ಎಂದು ಹೇಳುವದಿಲ್ಲವೆ ? ಹೀಗೆಯೇ ಬಲಿಷ್ಠಕಾಯದ ಕನಕದಾಸರಿಗೆ ವ್ಯಂಗ್ಯವಾಗಿ ಹಾಗೆ ಅನ್ವಯಿಸಿರಬೇಕು ಎನಿಸುತ್ತದೆ. ಬಲಿಷ್ಠಕಾಯದವರು ದಾಸರಾಗುವರೆಂದರೆ ಅಣಕದ ಮಾತಾಗಿರಬೇಕು. ಆದ್ದರಿಂದಲೇ ದಾಸಕೂಟದ ದರ್ಶನದ ಪ್ರಾರಂಭಿಕ ಹಂತದಲ್ಲಿ ಕನಕದಾಸರ ಸುತ್ತ ಅಣಕದ ಮಾತಿನ ಕಥೆಗಳು ಸಿಗುತ್ತವೆ. ಅನಂತರದಲ್ಲಿ ಕನಕದಾಸರ ಪಾಂಡಿತ್ಯದ ದರ್ಶನವಾದ ನಂತರ ಅಲ್ಲಿಯ ಮನೋಸ್ಥಿತಿ ಬದಲಾದಂತಿದೆ. ವಾಕ್‌ಚಾತುರ್ಯದಲ್ಲಿಯೂ ಕನಕದಾಸರು ಅಷ್ಟೇ ಬಲಿಷ್ಠರಾಗಿದ್ದವೆನ್ನುವದನ್ನು 'ನಾ ಸತ್ತರೆ' ಅಥವಾ 'ಹಿಂದೆ ಹೋಗುವರ ಮುಂದೆ; ಮುಂದೆ ಹೋಗುವ ಹಿಂದೆ'[೧] ಇಂತಹ ಕಥನಗಳಿಂದ ಸ್ಪಷ್ಟವಾಗುತ್ತದೆ.

ಕನಕದಾಸರ ಬದುಕಿನಲ್ಲಿ ಬಂದ ಈ ಅವಾಂತರಗಳು ಅವರ ಅಸ್ತಿತ್ವದ ಬಗ್ಗೆ ಸಂದೇಹಗಳು ಹುಟ್ಟಿಸುವುದು ಸಹಜ. ಆದರೆ ಈ ಸಹಜತೆಗೆ ಕನಕದಾಸರ ಬೆಳೆದ ಪರಿಸರ ಹೆಚ್ಚು ಹೊಣೆಯಾಗುತ್ತದೆ. ಅನಂತರದಲ್ಲಿ ಅವರ ಪರಿಸರದಲ್ಲಿ ಬಂದ ತಾತ್ವಿಕದ ಗಣ್ಯ ವ್ಯಕ್ತಿಗಳು ವ್ಯಕ್ತಿತ್ವಕ್ಕೆ ಮಾರುಹೋಗಿದ್ದು ಒಂದು

---

೧. ಹರಿದಾಸರ ಕಥೆಗಳು : ಕಲಮದಾನಿ ಗುರುರಾಯರು–೬೨

ಹಂತವಾದರೆ, ಆ ಗಣ್ಯವ್ಯಕ್ತಿಗಳು ತಮ್ಮತನವನ್ನು ಕನಕದಾಸರ ಮೇಲೆ ಹೇರಿದ್ದು ಮುಂದಿನ ಹಂತವಾಗಿ ನಿಲ್ಲುತ್ತದೆ. ಈ ಘಟ್ಟಗಳ ಮಧ್ಯದಲ್ಲಿ ಕನಕದಾಸರ ಸ್ವಂತಿಕೆ ಎನ್ನುವದು ಸಂಪೂರ್ಣವಾಗಿ ಮಾಸದೆ ಅಲ್ಲಲ್ಲಿ ಮಿಂಚಿರುವುದು ಕಂಡುಬರುತ್ತದೆ. ಜಾತಿ ಎನ್ನುವದು ಹೆಜ್ಜೆ ಹೆಜ್ಜೆಗೂ ಕಾಡಿದೆ. ಮನಸ್ಸು ಮಾಡಿದ್ದರೆ ಯಾತ್ರಿಕರಾದ ಕನಕದಾಸರು ಅದನ್ನು ಮುಚ್ಚಿಡಬಹುದಿತ್ತು. ಹಾಗೆ ಮಾಡದೆ ದಿಟ್ಟತನದಿಂದ ಹೇಳಿಕೊಳ್ಳುವ ಪ್ರಾಮಾಣಿಕ ಪ್ರಯತ್ನದ ಪರಿಣಾಮವಾಗಿ ಅವರ ಸ್ವಂತಿಕೆ ಅಲ್ಲಲ್ಲಿ ಬೆಳಗುವುದಕ್ಕೆ ಸಹಾಯಕವಾಗಿದೆ.

ದಂಡನಾಯಕನಾಗಿದ್ದ ಕನಕದಾಸರಿಗೆ ಕಳ್ಳತನದ ಆರೋಪ ಹೊರಿಸುವ ಕಥೆಗಳು ಸಿಗುತ್ತವೆ. ಒಂದು ಒಳ್ಳೆಯ ವಸ್ತು ಅವನಲ್ಲಿ ಇದ್ದಾಗ ಅದು ಆತ ಕದ್ದದ್ದೇ ಇರಬೇಕು ಎಂದು ಹೊಡೆಯುವದು, ಬೈಯುವುದರ ಕುರಿತು ಘಟನಾ ಕಥಾನಕಗಳು ಅವು. ನಂತರದಲ್ಲಿ ಘಟನೆ ಪವಾಡಕ್ಕೆ ತಿರುಗುವುದು ಕಂಡುಬರುತ್ತದೆ. ಉದಾಹರಣೆಗೆ 'ಕೃಷ್ಣ ತನ್ನ ಕೊರಳ ಹಾರವನ್ನು ಕೊಟ್ಟಿದ್ದು',[೧] ಕನಕ ತಿರುಮಲೆ ಬೆಟ್ಟದಲ್ಲಿ ಚಳಿಗೆ ನಡುಗುವಾಗ ತಿಮ್ಮಪ್ಪ ಶಾಲನ್ನು ಹೊದಿಸಿದ ಕಥೆ[೨] ಇಂಥವು ಇದನ್ನು ಸ್ಪಷ್ಟಪಡಿಸುತ್ತವೆ. ಕಳ್ಳತನದ ಆರೋಪಗಳು ಆತನ ತೇಜೋವಧೆಗಾಗಿ ಪ್ರಯತ್ನಿಸುತ್ತಿರುವುದನ್ನು ತಿಳಿಸುತ್ತವೆ. ಉಡುಪಿಗೆ ಸಂಬಂಧಿಸಿದ ಕಥೆ ಮತ್ತು ತಿಮ್ಮಪ್ಪನಿಗೆ ಸಂಬಂಧಿಸಿದ ಕಥೆಗಳನ್ನು ಗಮನಿಸಿದರೆ ದೇವರ ದರ್ಶನ ಆಗದೇ ಇರುವುದರಿಂದ ನೊಂದುದರ ಫಲವಾಗಿ ಕದ್ದು ದೇವರ ದರ್ಶನ ಮಾಡಿಕೊಂಡಿದ್ದರ ಪ್ರಭಾವ ಇಂತಹ ಆರೋಪಗಳಿಗೆ ಪ್ರೇರಣೆ ದೊರಕಿರಬೇಕು.

ಏರಾಟದ ತಾತ್ವಿಕತೆಗಿಂತ ಭಕ್ತಿಗೆ ಪ್ರಾಧಾನ್ಯತೆ ನೀಡಿ ಮಹಾಮಾನವತಾವಾದಿಯಾಗಿ ಕನಕದಾಸರು ಪುರಂದರದಾಸರಿಗಿಂತ ಒಂದು ಹೆಜ್ಜೆ ಮುಂದೆ ಬಂದು ನಿಲ್ಲುತ್ತಾರೆ. ಹನ್ನೆರಡನೆಯ ಶತಮಾನದ ಬಸವಣ್ಣನ ಶೋಧನೆಯ ಪರಿ ಒಂದು ಬಗೆಯದ್ದಾದರೆ, ಕನಕದಾಸರದು ಇನ್ನೊಂದು ನಿಟ್ಟಿನಲ್ಲಿ ಆತ್ಮಶೋಧನೆಯ ಶೋಧದ ಉತ್ತುಂಗ ಶಿಖರವನ್ನು ಏರುತ್ತದೆ. ಈ ಪರಿಯ ಆತ್ಮ ಜಿಜ್ಞಾಸೆಯ ಮಟ್ಟವು ದಾಸರಲ್ಲಿ ಕನಕದಾಸರಿಂದ ಮಾತ್ರ ಸಾಧ್ಯವಾಗಿದೆ. ಇದಕ್ಕೆ ಮುಖ್ಯ ಕಾರಣ ಆತ ಶೂದ್ರನೆನ್ನುವದು ಹಾಗೂ ಆತನ ಸುತ್ತಲಿನ ಪರಿಸರವೇ ಆಗಿದೆ.

---

೧. ಕನಕದಾಸರ ಜೀವನ ಮತ್ತು ವ್ಯಕ್ತಿತ್ವ : ಒಡೆಯರ ಡಿ. ಹೆಗ್ಗಡೆ

೨. –ಅದೇ–

# ಗ್ರಂಥಸೂಚಿ


| | |
|---|---|
| ೧. ಶ್ರೀ ಕನಕದಾಸರ ಭಕ್ತಿ ಗೀತೆಗಳು | ಸಂ. ಬೆಟಗೇರಿ ಕೃಷ್ಣ ಶರ್ಮ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೫ |
| ೨. ಹರಿದಾಸ ಬೋಧೆ | ಎ. ಎಂ. ಅಣ್ಣೀಗೇರಿ, ಚಾಲುಕ್ಯ ಪ್ರಕಾಶನ, ಧಾರವಾಡ, ೧೯೬೩ |
| ೩. ಹರಿದಾಸರ ಕಥೆಗಳು | ಕಲಮದಾನಿ ಗುರುರಾಯರು ಸಿಟಿಬುಕ್ ಸ್ಟಾಲ್, ಹುಬ್ಬಳ್ಳಿ, ೧೯೬೩ |
| ೪. ಭಕ್ತಕನಕದಾಸರು ಜೀವನ ಮತ್ತು ಪದಗಳು | ಸಂತೇಕಲ್ಲಹಳ್ಳಿ ಲಕ್ಷ್ಮಿನರಸಿಂಹಶಾಸ್ತ್ರಿ ಟಿ. ಎನ್. ಕೃಷ್ಣಯ್ಯ ಶೆಟ್ಟಿ ಅಂಡ್ ಸನ್ಸ್ ಬುಕ್ ಡಿಪೊ, ಚಿಕ್ಕಪೇಟೆ, ಬೆಂಗಳೂರು, ೧೯೬೮ |
| ೫. ಜನಪ್ರಿಯ ಕನಕ ಸಂಪುಟ | ಸಂ. ದೇ ಜವರೇಗೌಡ–ಇತರರು ಕನ್ನಡ ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ೧೯೮೯ |
| ೬. ಮುತ್ತು ಬಂದಿದೆ | ಕನಕದಾಸ ಸ್ಮರಣ ಸಂಚಿಕೆ ಕಾಳಿದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು, ೧೯೮೧ |
| ೭. ಮುತ್ತು ಬಂದಿದೆ ಕೇರಿಗೆ | ಕನಕದಾಸ ಸ್ಮರಣ ಸಂಚಿಕೆ ಕಾಳಿದಾಸ ಸಾಂಸ್ಕೃತಿಕ ಸಂಘ ಬೆಂಗಳೂರು, ೧೯೮೧ |
| ೮. ಕನಕ ಕಿರಣ | ಸಂ. ಕಾ. ತ. ಚಿಕ್ಕಣ್ಣ, ಕನಕದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು. ೧೯೮೨ |
| ೯. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ | ಸಂ. ಜಿ. ಎಸ್. ಶಿವರುದ್ರಪ್ಪ ಸಂ. ೪ ಭಾಗ ೨, ಬೆಂಗಳೂರು ವಿ. ವಿ. ಬೆಂಗಳೂರು |

| | |
|---|---|
| ೧೦. ಹಂಪೆಯ ಹರಿಹರದೇವರ ಶರಣ ಚರಿತ ಮಾನಸಂ | ಸಂ. ಎಚ್. ದೇವಿರಪ್ಪ, ಶ್ರೀ ಗೌರಿ ಶಂಕರ ಬುಕ್ ಡಿಪೋ, ಮೈಸೂರು, ೧೯೬೮ |

# ಜನಪದದ ಕಣ್ಣಲ್ಲಿ ಶ್ರೀ ಕನಕದಾಸರು

**ಡಾ. ನಿಂಗಣ್ಣ ಸಣ್ಣಕ್ಕಿ**

ಕರ್ನಾಟಕ ರಾಜ್ಯದ ಧಾರವಾಡ ಜಿಲ್ಲೆಯ ಶಿಗ್ಗಾಂವ ತಾಲೂಕು ಸಾಧು–ಸಂತರು, ಸತ್ಪುರುಷರು, ಜೈನಯತಿಗಳು ಬಾಳಿ ಬೆಳಕಾದ ಪುಣ್ಯಭೂಮಿಯ ವಿಭಾಗವಾಗಿ ಕಂಗೊಳಿಸುವುದು. ಶಿಗ್ಗಾಂವ ತಾಲೂಕಿನ ಬಂಕಾಪೂರ ಮತ್ತು ಬಾಡಗ್ರಾಮಗಳು ಧಾರ್ಮಿಕತೆಗೆ ಇತಿಹಾಸವನ್ನೆ ತೆರೆದಿಟ್ಟಿವೆ. ದಾಸಶ್ರೇಷ್ಠರಲ್ಲಿ ಶ್ರೀ ಪುರಂದರದಾಸರ ಸಮಕಾಲೀನರೂ, ಮಹಾನ್‌ಭಕ್ತರೂ, ಸಂತರೂ, ಕವಿಗಳೂ, ದಾರ್ಶನಿಕರೂ ಆದ ಶ್ರೀ ಕನಕದಾಸರು ಬಾಡಗ್ರಾಮದ ಹೆಸರನ್ನು ಚಿರಸ್ಥಾಯಿಗೊಳಿಸಿದ್ದಾರೆ.

ಇಪ್ಪತ್ತನೆಯ ಶತಮಾನಕ್ಕೆ ಮುಕ್ತಾಯಕ್ಕೆ ಐದುನೂರು ವರುಷಗಳನ್ನು ದಾಟುವ ಶ್ರೀ ಕನಕದಾಸರ ಜೀವನ ಮತ್ತು ಅವರ ಸಾಹಿತ್ಯ ಮನುಕುಲಕ್ಕೆ ಆದರ್ಶವಾಗಿದೆ. ಇವರ ವಿಚಾರಗಳು ಮಾನವರು ಮಾನವರಾಗಿ ಉಳಿಯುವುದಕ್ಕೆ ಬಹು ಉಪಯುಕ್ತವಾಗಿವೆ. ಇವರು ರಚಿಸಿದ ಸಾಹಿತ್ಯಕೃತಿಗಳು, ಕೀರ್ತನೆಗಳು, ಮುಂಡಿಗೆಗಳು ಕನ್ನಡ ಸಾಹಿತ್ಯದಲ್ಲಿ ಅಮರವಾಗಿ ಕಂಗೊಳಿಸುತ್ತಿವೆ.

ಇಂತಹ ಕವಿ ಕನಕದಾಸರ ತಂದೆಯ ಹೆಸರು ಬೀರಪ್ಪ ; ತಾಯಿ ಹೆಸರು ಬಚ್ಚಮ್ಮ. ಹಾಲು ಮತದ ಪರಂಪರೆಯವರು. ಕುರುಬ ಜನಾಂಗದವರು ಬೀರದೇವನ ಭಕ್ತರು. ಈ ಎಲ್ಲ ವಿಚಾರಗಳನ್ನು ಜನಪದ ಹಾಡುಗಳಲ್ಲೂ ಕೇಳುತ್ತೇವೆ, ಐತಿಹಾಸಿಕ ದಾಖಲೆಗಳಲ್ಲಿ ಐತಿಹ್ಯಗಳಲ್ಲಿ ತಿಳಿಯುತ್ತೇವೆ.

ಬೀರಪ್ಪ–ಬಚ್ಚಮ್ಮ ದಂಪತಿಗಳಿಗೆ ಬಹುದಿನಗಳವರೆಗೆ ಸಂತಾನವಾಗದೇ ಇದ್ದಾಗ, ಹಲವು ದೇವರಿಗೆ ಹರಕೆ ಹೊತ್ತರು. ಆ ದೇವರುಗಳ ಸಾಲಿನಲ್ಲಿ ತಿರುಪತಿಯ ತಿಮ್ಮಪ್ಪನೂ ಸೇರಿದ್ದನು. ಕೃಷಿಕನೂ, ಊರಿನ ಗೌಡನೂ, ಅನೇಕ ಗ್ರಾಮಗಳ ಒಡೆಯನೂ ಆಗಿ ಹೆಸರುವಾಸಿಯಾದ ಬೀರಗೌಡನಿಗೆ ವಿಜಯನಗರ ಅರಸರ ಪಾಳೆಯಗಾರಿಕೆಯೂ ದೊರೆತಿತ್ತು.

ಶ್ರೀ, ರಾಜಶ್ರೀ, ಸಂತಾನಶ್ರೀ ಹೊಂದಿದ ಬೀರಗೌಡನು ಮಗನಿಗೆ ತಿಮ್ಮಪ್ಪನೆಂಬ ಹೆಸರನ್ನು ಇಟ್ಟನು. ಬಿದಿಗೆಯ ಚಂದ್ರನಂತೆ ಬೆಳೆಯುತ್ತ ನಡೆದ ಮಗನನ್ನು ಗುರುಗಳಲ್ಲಿ ವಿದ್ಯಾಭ್ಯಾಸಕ್ಕೆ ಕಳಿಸಿದನು. ಗರಡಿಯಲ್ಲಿ ಪಳಗಿಸಿದನು. ಕತ್ತಿವರಸೆ, ದೊಣ್ಣೆವರಸೆಗಳಲ್ಲೂ ಬಲ್ಲಿದವನಾದನು. ತನ್ನ ಮಗನ ಶಕ್ತಿಶ್ರೀಯನ್ನು ಕಂಡ ಬೀರಪ್ಪಗೌಡನು ಮಗ ಪಾಳೆಗಾರಿಕೆಯಿಂದ ಮಾಂಡಲಿಕನಾಗುವ ಕನಸುಕಂಡನು. ಈ ವಿಚಾರಗಳಿಗೆಲ್ಲ ಜನಪದ ಹಾಡುಗಳಲ್ಲಿ ಹಿರಿಮೆಯನ್ನು ಸಾಧಿಸಿದ ಡೊಳ್ಳಿನ ಹಾಡು ಪುಷ್ಟಿಯನ್ನು ನೀಡುತ್ತದೆ.

ಬೀರಪ್ಪ ಬಚ್ಚಮ್ಮಗ ದೇವ ಒಲಿದಾನೊ
ಬೀರಪ್ಪ ಬಚ್ಚಮ್ಮಗ ದೇವ ಒಲಿದಾನಯ್ಯಾ
ಬಕುತರಿಗೆ ತಿಮ್ಮಪ್ಪ ಫಲವನು ನೀಡ್ಯಾನೊ
ಬಕುತರಿಗೆ ತಿಮ್ಮಪ್ಪ ಫಲವನು ನೀಡ್ಯಾನಯ್ಯಾ ॥

ನವಮಾಸ ತುಂಬಿ ಬಚ್ಚಮ್ಮ ಹಡದಾಳೋ
ನವಮಾಸ ತುಂಬಿ ಬಚ್ಚಮ್ಮ ಹಡದಾಳಯ್ಯಾ
ಕಂದಗ ತಿಮ್ಮಪ್ಪನೆಂದು ಕರೆದಾರೋ
ಕಂದಗ ತಿಮ್ಮಪ್ಪನೆಂದು ಕರೆದಾರಯ್ಯಾ ॥

ಬಿದಿಗೆಯ ಚಂದ್ರಮನೆಂದು ಬಗೆದಾರೋ
ಬಿದಿಗೆಯ ಚಂದ್ರಮನೆಂದು ಬಗೆದಾರಯ್ಯಾ
ಸಾಲಿಯ ಮನಿಗವನ ಕಳಿಸ್ಯಾರೋ
ಸಾಲಿಯ ಮನಿಗವನ ಕಳಿಸ್ಯಾರಯ್ಯಾ ॥

ಗುರುಗಳ ಕಂಡು ಹಿರಿಹಿರಿ ಹಿಗ್ಯಾನೋ
ಗುರುಗಳ ಕಂಡು ಹಿರಿಹಿರಿ ಹಿಗ್ಯಾನಯ್ಯಾ
ಅಕ್ಷರವಿದ್ಯಾ ಸರಸರ ಕಲಿತಾನೋ
ಅಕ್ಷರವಿದ್ಯಾ ಸರಸರ ಕಲಿತಾನಯ್ಯಾ ॥

ಗರಡಿಯ ಮನಿಗಳಕಡೆ ನಡೆದಾನೋ
ಗರಡಿಯ ಮನಿಗಳ ಕಡೆ ನಡೆದಾನಯ್ಯಾ ॥

ಕತ್ತಿವರಸೆ ಡೊನ್ನಿವರಸೆಗಳ ಕಲಿತಾನೋ
ಕತ್ತಿವರಸೆ ಡೊನ್ನಿವರಸೆಗಳ ಕಲಿತಾನಯ್ಯಾ
ಗುರುಗಳ ಸೇವಾ ಮನಮುಟ್ಟಿ ಮಾಡ್ಯಾನೋ
ಗುರುಗಳ ಸೇವಾ ಮನಮುಟ್ಟಿ ಮಾಡ್ಯಾನಯ್ಯಾ ॥

ತಂದೆ ತಾಯಿಗಳಿಗೆ ತಿಮ್ಮಪ್ಪ ನಮಿಸ್ಯಾನೋ
ತಂದೆ ತಾಯಿಗಳಿಗೆ ತಿಮ್ಮಪ್ಪ ನಮಿಸ್ಯಾನಯ್ಯಾ
ಕಮತದ ಕಡೆಗೆ ತಾನು ನೋಡ್ಯಾನೋ
ಕಮತದ ಕಡೆಗೆ ತಾನು ನೋಡ್ಯಾನಯ್ಯಾ ॥

ಮಗಾ ಮಾಂಡಲಿಕನಾಗುವ ಕನಸು ಕಂಡಾರೋ
ಮಗಾ ಮಾಂಡಲಿಕನಾಗುವ ಕನಸು ಕಂಡಾರಯ್ಯಾ
ತಿಮ್ಮಪ್ಪನ ವರಾ ಅವರಿಗಿದೆ ಎಂದಾರೋ
ತಿಮ್ಮಪ್ಪನ ವರಾ ಅವರಿಗಿದೆ ಎಂದಾರಯ್ಯಾ ॥

ಹರಕೆಯ ಭಕ್ತಿಯಲಿ ಅವರು ನಲಿದಾರೋ
ಹರಕೆಯ ಭಕ್ತಿಯಲಿ ಅವರು ನಲಿದಾರಯ್ಯಾ
ನಲಿಯುತ ನಲಿಯುತ ದೇವನ ನೆನದಾರೋ
ನಲಿಯುತ ನಲಿಯುತ ದೇವನ ನೆನದಾರಯ್ಯಾ ॥

ಅಲ್ಲಿಗಿಲ್ಲಿಗೆ ಇದೊಂದು ಸಂಧ್ಯೊ
ಸಂಧಿಗೆ ಏಳು ಬಳ್ ಮುಂಧ್ಹೇಳೋ ॥

ತಿಮ್ಮಪ್ಪನು ತಿಮ್ಮಪ್ಪಗೌಡನಾಗಿ, ಸುಂದರ ಸತಿಗೆ ಪತಿಯಾಗಿ, ಒಂದು ಗಂಡು ಮಗುವಿನ ತಂದೆಯೂ ಆದನು. ಆದರೆ ತನ್ನ ಸಾಧನೆಗಳಾದ ಯುದ್ಧನೀತಿ, ಧರ್ಮ ವಿಚಾರ. ತನಗಿರುವ ಪಾಳೆಗಾರಿಕೆ, ಜೊತೆ ಶಾಸ್ತ್ರ–ಪುರಾಣಗಳ ಆದರ, ಸಂಗೀತ ಸಭೆಗಳು ಮುಂತಾದವುಗಳೆಲ್ಲ ನಡೆದೇ ಇದ್ದವು. ಕಮತಿಗನಾದ ತಿಮ್ಮಪ್ಪನಿಗೆ ಹೊಲದಲ್ಲಿ ಉಳುವಾಗ ಏಳು ಕೊಪ್ಪರಿಗೆ ಹೊನ್ನು ದೊರಕಿತು. ಆ ಹೊನ್ನಿನ (ಕನಕ) ರಾಶಿಯನ್ನೆಲ್ಲ ತನ್ನ ಯಜಮಾನಿಕೆಯಲ್ಲಿ ಜನೋಪಯೋಗಿಯಾಗಿ ಬಳಸಿದನು. ನಂತರ ಜನತೆ ವಾತ್ಸಲ್ಯದಿಂದ ತಿಮ್ಮಪ್ಪನಿಗೆ

ಕನಕಪ್ಪನೆಂದೂ ಕನಕನಾಯಕನೆಂದೂ ಕರೆಯತೊಡಗಿದರು. ಗುರು ಹಿರಿಯರ ಮಾರ್ಗದಲ್ಲಿ ಜನತೆಯ ಕಲ್ಯಾಣದ ಕಾರ್ಯಗಳನ್ನು ಮಾಡುತ್ತ ನಡೆದನು. ತಂದೆಯಕ್ಕಿಂತ ಒಂದು ಹೆಜ್ಜೆ ಮುಂದೊರೆದನು. ಕನಕನಾಯಕನಾಗಿ ಸಾಗಿದನು. ಕನಕನಾಯಕನಲ್ಲಿ ಜೀವನದ ಅನುಭವಗಳ ಜೊತೆ ಕಾವ್ಯಾನುಭವವೂ ಬೆಳೆಯತೊಡಗಿತು. ತನ್ನ ಪಾಳೆಯಗಾರಿಕೆಯ ಕ್ಷೇತ್ರದಲ್ಲಿ ಹಲವೆಡೆಗೆ ಸಂಗೀತ, ಕಾವ್ಯ, ಶಾಸ್ತ್ರ, ಪುರಾಣ ಇತ್ಯಾದಿಗಳ ಚರ್ಚಾಗೋಷ್ಠಿಗಳು ಪಂಡಿತರಿಂದ ಪಾಮರರಿಂದ ಸಾಗಿದವು–ಎಂಬುದಕ್ಕೆ ಅನೇಕ ನಿದರ್ಶನಗಳು ಜನಪದ ಹಾಡುಗಳಲ್ಲಿವೆ.

**ಡೊಳ್ಳಿನ ಪದಗಳಲ್ಲಿ ಶ್ರೀ ಕನಕದಾಸರು**

ವೇದಾಭ್ಯಾಸವನ್ನೂ, ಸಂಗೀತವನ್ನೂ, ವ್ಯಾಕರಣವನ್ನೂ, ಕಾವ್ಯರಚನಾ ಕಲೆಯನ್ನೂ ಕನಕನಾಯಕನು ಕಲಿತನು. ಸ್ವಂತ ಕಾವ್ಯರಚನೆ ಮಾಡುವ ಶಕ್ತಿಯೂ ಮೂಡಿನಿಂತಿತು. ಸುತ್ತ ಮುತ್ತ ಇವರ ಕೀರ್ತಿ ಹರಡಿತು. ಆಡುಗಳ ತುಡುಗರು ಆವುಗಳ ತುಡುಗರು ನೆರೆ ರಾಜ್ಯಗಳಿಂದ ಪೀಡೆಯನ್ನು ಕೊಡತೊಡಗಿದರು. ಎಲ್ಲರನ್ನೂ ಎಲ್ಲಕಡೆಗಳಿಂದ ಓಡಿಸಿದನು. ತನ್ನ ದಳವನ್ನೂ ಕೂಡಿಸುತ್ತಾನೆ. ಕದನದ ಸೂಚನೆಗಳು ನೆರೆಯವರಿಂದ ಬಂದಾಗ, ದಳದೊಂದಿಗೆ ಸಜ್ಜಾಗುತ್ತಾನೆ. ಕದನ ನಡೆಯುತ್ತದೆ. ಅದೇ ವೇಳೆಗೆ ಮಗ ಮತ್ತು ಮಡದಿ ಮಡಿದ ಸಂದೇಶ ಕನಕನಾಯಕನಿಗೆ ತಲುಪುತ್ತದೆ.

ಹಾಡಿಗೆ ಹಾಡು ಕನಕನು ಕಟ್ಯಾನೋ
ಹಾಡಿಗೆ ಹಾಡು ಕನಕನು ಕಟ್ಯಾನಯ್ಯಾ
ವೇದಕ ಹಾದಿ ತಾನು ಹುಡುಕ್ಯಾನೋ
ವೇದಕ ಹಾದಿ ತಾನು ಹುಡುಕ್ಯಾನಯ್ಯಾ ॥

ಅರಸೊತ್ತಿಗೆಯ ಕಡೆ ಹೊರಳ್ಯಾನೋ
ಆಡುದುಡುಗರ ದಂಡು ತಂದಾರೋ
ಆಡುದುಡುಗರ ದಂಡು ತಂದಾರಯ್ಯಾ
ಕನಕನ ಹೊಡೆತಕ್ಕಂಜಿ ಓಡ್ಯಾರೋ ॥

ಆವು ದುಡುಗರ ದಂಡು ಬಂದಾವೋ
ಆವು ದುಡುಗರ ದಂಡು ಬಂದಾವಯ್ಯಾ
ಕನಕನ ದಂಡಿಗಂಜಿ ನಿಲ್ಲದೆ ಓಡ್ಯಾರೋ
ಕನಕನ ದಂಡಿಗಂಜಿ ನಿಲ್ಲದೆ ಓಡ್ಯಾರಯ್ಯಾ ॥

ಹಗೆಗಳು ಸುತ್ತಮುತ್ತ ಸೇರ್‍ಯಾರೋ
ಹಗೆಗಳು ಸುತ್ತಮುತ್ತ ಸೇರ್‍ಯಾರಯ್ಯಾ
ಸತಿ ಮಡಿದ ಸುದ್ದಿ ಕನಕಗ ತಿಳದಾವೋ
ಮಗಾ ಮಡದ ಸಂಗತಿ ಹಬ್ಬ್ಯಾವೋ ॥

ಹತ್ತು ದಿನಗಳವರೆಗೆ ಹಗೆಗಳ ದಂಡನ್ನು ವಿವಿಧ ಬಗೆಯಾಗಿ ಹಿಮ್ಮೆಟ್ಟಿಸಿದನು. ಮೋಸತನದಿಂದ ವೈರಿಯು ಹಿಂದೆ ಬಂದು ತಿವಿದಾಗ, ಯುದ್ಧಭೂಮಿಯಲ್ಲಿ ಕನಕ ನಾಯಕನು ಬಿದ್ದನು. ಸಂಕಟದ ಸಮಯದಲ್ಲಿ ವೆಂಕಟಪ್ಪ(ತಿಮ್ಮಪ್ಪ)ನ ನೆನಪಾಗಿ ಎಚ್ಚತ್ತನು. ಸಂಸಾರದಲ್ಲಿ ವಿರಕ್ತಿ ಮೂಡಿ ವೈರಾಗ್ಯದ ಮನಸ್ಸು ಹೆಚ್ಚಿತು.

ದಳದ ಕಡೆಗೆ ಕತ್ತಿವರಸೆಯ ತಿರುವ್ಯಾನೋ
ದಳದ ಕಡೆಗೆ ಕತ್ತಿವರಸೆಯ ತಿರುವ್ಯಾನಯ್ಯಾ
ಮತ್ತ ಮತ್ತ ಸೈನ್ಯ ಅಲ್ಲಿಗೆ ಬಂದಿತೋ
ಮತ್ತ ಮತ್ತ ಸೈನ್ಯ ಅಲ್ಲಿಗೆ ಬಂದೀತಯ್ಯಾ ॥

ಹತ್ತುದಿನಗಳ ನಡೆದ ಯುದ್ದೇನೋ
ಸತ್ತದಳದ ಕಳವಳ ತಾನು ಕಂಡಾನೋ
ಸತ್ತದಳದ ಕಳವಳ ಕಂಡಾನಯ್ಯಾ
ಹೊತ್ತ ಮುಳಗುವತನಕ ಹೊಡದಾನೋ ॥

ವೈರಿಯು ಹಿಂದಬಂದ ಇರದಾನೋ
ವೈರಿಯು ಹಿಂದಬಂದ ಇರದಾನಯ್ಯಾ
ರಕ್ತದ ಮಡದಲಿ ಕನಕನಾಯಕ ಬಿದ್ದಾನೋ
ರಕ್ತದ ಮಡದಲಿ ಕನಕನಾಯಕ ಬಿದ್ದಾನಯ್ಯಾ ॥

ಸಂಕಟ ಸಂಕಟವೆಂದು ವೆಂಕಟನ ನೆನದಾನೋ
ಸಂಕಟ ಸಂಕಟವೆಂದು ವೆಂಕಟನ ನೆನದಾನಯ್ಯಾ
ಕನಕನಾಯಕನೇಳೋ ನನ್ನ ಸೇವಕನೆಂದಾನೋ
ಕನಕನಾಯಕನೇಳೋ ನನ್ನ ಸೇವಕನೆಂದಾನಯ್ಯಾ ॥

ಕನಕನಾಯಕನೆದ್ದು ತಾನು ಕಂಡಾನೇನೇನೋ
ಕನಕನಾಯಕನೆದ್ದು ತಾನು ಕಂಡಾನೇನೇನಯ್ಯಾ
ಕಾಗಿನೆಲೆಯ ಆದಿಕೇಶವನ ಮೂರತಿಯನೋ
ಕಾಗಿನೆಲೆಯ ಆದಿಕೇಶವನ ಮೂರತಿನಯ್ಯಾ ॥

ಕನಕದಾಸನಾಗುವ ಗುಣ ಮನದಲಿ ಮೂಡಿತೋ
ಕನಕದಾಸನಾಗುವ ಗುಣ ಮನದಲಿ ಮೂಡಿತಯ್ಯಾ
ಕಾಗಿನೆಲೆಯ ಕಡೆಗೊಮ್ಮೆ ನೋಡ್ಯಾನೋ
ಕಾಗಿನೆಲೆಯ ಕಡೆಗೊಮ್ಮೆ ನೋಡ್ಯಾನಯ್ಯಾ ॥

ಅರಸೊತ್ತಿಗೆಯ ಕಡೆಗೊಮ್ಮೆ ಹೊರಳ್ಯಾನೋ
ಅರಸೊತ್ತಿಗೆಯ ಕಡೆಗೊಮ್ಮೆ ಹೊರಳ್ಯಾನಯ್ಯಾ
ವೇದಕಹಾದಿ ಕಂಡಾನವನೋ
ಅಲ್ಲಿಗಿಲ್ಲಿಗೆ ಇದೊಂದ ಸಂಧಿ ಸಂಧಿಗೇಳಬಳ್ ಮುಂದ್ಹೇಳೋ ॥[೧]

ಕನಕನಾಯಕನು ಕಾಗಿನೆಲೆಯ ಆದಿಕೇಶವನನ್ನು ನೆನೆಸುತ್ತ, ವೈರಾಗ್ಯತಾಳಿ, ಕಾಗಿನೆಲೆಗೆ ಬಂದು ಕೆಲದಿನಗಳನ್ನು ಅಲ್ಲಿಯೇ ಕಳೆದನು. ಮುಂದೆ ತಾನು ದಾಸ(ಭಕ್ತ)ನಾಗುವ ಮಾರ್ಗವೇ ಮನದಲ್ಲಿ ಮನದಲ್ಲಿ ಗಟ್ಟಿಯಾಗಿ ನಿಂತಿತು. ವಿಜಯನಗರ ಸಾಮ್ರಾಜ್ಯದಲ್ಲಿ ವ್ಯಾಸರಾಯರ ಕೀರ್ತಿ ಹಬ್ಬಿತ್ತು. ವ್ಯಾಸರಾಯರಲ್ಲಿ ಬರುವ ತವಕ ಹೆಚ್ಚಾಯಿತು. ವ್ಯಾಸರಾಯರಲ್ಲಿ ಬಂದು ಕನಕನಾಯಕನು ಕನಕದಾಸನಾದನು.

೧. ಹಾಡ ಹೇಳಿದವರು ಶ್ರೀ ಮಾಯಪ್ಪ ಕೆಂಚಪ್ಪಕುರಿ (ಯಕ್ಸಂಬಾ), ಊರು, ಯಕ್ಸಂಬಾ, ತಾಲ್ಲೂಕ ಚಿಕ್ಕೋಡಿ, ಜಿಲ್ಲೆ ಬೆಳಗಾವಿ.

ಹೋಗಹೋಗುತ ಕನಕ ನಕ್ಕಾನೋ
ಹೋಗಹೋಗುತ ಕನಕ ನಕ್ಕಾನಯ್ಯಾ
ಹಾಡಹಾಡುತ ಕನಕ ನಲಿದಾನೋ
ಹಾಡಹಾಡುತ ಕನಕ ನಲಿದಾನಯ್ಯಾ ॥

ಹಾಡಿನ ಹಾದಿಗುಂಟ ನಡದಾನೋ
ಹಾಡಿನ ಹಾದಿಗುಂಟ ನಡದಾನಯ್ಯಾ
ಹರಿದಾಸರ ಗುರುವರನ ಹುಡಿಕ್ಯಾನೋ
ಹರಿದಾಸರ ಗುರುವರನ ಹುಡಿಕ್ಯಾನಯ್ಯಾ ॥

ವ್ಯಾಸರಾಯರನ ಕಂಡ ನಮ್ಮಿಸ್ಯಾನೋ
ವ್ಯಾಸರಾಯರನ ಕಂಡ ನಮ್ಮಿಸ್ಯಾನಯ್ಯಾ
ತಾಳ–ತಂಬೂರಿಗಳ ನಾದ ಮಾಡ್ಯಾನೋ
ತಾಳ–ತಂಬೂರಿಗಳ ನಾದ ಮಾಡ್ಯಾನಯ್ಯಾ ॥

ಪಾವನ ಬದುಕ ತನಗರಿ ಎಂದಾನೋ
ಪಾವನ ಬದುಕು ತನಗರಿ ಎಂದಾನಯ್ಯಾ
ಕುರುಬನೆಂದು ತಾ ಕರೆಯಿಸಿಕೊಂಡಾನೋ
ಕುರುಬನೆಂದು ತಾ ಕರೆಯಿಸಿಕೊಂಡಾನಯ್ಯಾ ॥

ಕುರುಬನೆಂದರೆ ಬರಿ ಕುರುಬನಲ್ಲೋ
ನರಕುರಿಗಳ ಕಾಯುವ ಕುರುಬನಯ್ಯಾ
ಕಂಬಳಿ ಮಹಿಮಾ ತಿಳಿದವನೋ
ಕಂಬಳಿ ಮಹಿಮಾ ತಿಳಿದವನಯ್ಯಾ ॥

ಸಾವಿರ ಕವನಗಳ ಕಟ್ಟಿದ ಕುರುಬನೋ
ಸಾವಿರ ಕವನಗಳ ಕಟ್ಟಿದ ಕುರುಬನಯ್ಯಾ
ಕನಕಗಿರಿಯ ಹೆಸರು ಸ್ಥಿರ ಮಾಡಿದನೋ
ಕನಕಗಿರಿಯ ಹೆಸರು ಸ್ಥಿರ ಮಾಡಿದನಯ್ಯಾ ॥

ಕಂಡು ಕಂಡುದನು ತಾ ತಿಳಿದವನೋ
ಕಂಡು ಕಂಡುದನು ತಾ ತಿಳಿದನಯ್ಯಾ
ಕಾಗಿನೆಲೆಯ ಆದಿಕೇಶವನ ನೆನದಾನೋ
ಕಾಗಿನೆಲೆಯ ಆದಿಕೇಶವನ ನೆನದಾನಯ್ಯಾ ॥

ಕವನ ಕೀರ್ತನೆಗಳ ರಚಿಸ್ಯಾನೋ
ಕವನ ಕೀರ್ತನೆಗಳ ರಚಿಸ್ಯಾನಯ್ಯಾ
ಕಡಲ ದಂಡಿಗೆ ತಾ ತಿರುಗ್ಯಾನೋ
ಕಡಲ ದಂಡಿಗೆ ತಾ ತಿರುಗ್ಯಾನಯ್ಯಾ ॥

ಕುರುಬನ ಮಹಿಮಾ ತಿಳಿಸ್ಯಾನೋ
ಕುರುಬನ ಮಹಿಮಾ ತಿಳಿಸ್ಯಾನಯ್ಯಾ
ತಾಳ–ತಂಬೂರಿ ಬಾರಿಸುತ ತಿರಿಗ್ಯಾನೋ
ಅಲ್ಲಿಗಿಲ್ಲಿಗೆ ಇದೊಂದು ಸಂಧಿ, ಸಂಧಿಗೇಳಬಳ್ ಮುಂದ್ಹೇಳೋ ॥

ಈ ಹಾಡಿನ ಸಂಧಿಯನ್ನು ಸರಾಗವಾಗಿ ಹಾಡಿದ ಜನಪದ ಕವಿಯ ಭಾವವು ಶ್ರೀ ಕನಕದಾಸರ ಜೀವನದ ಇನ್ನೊಂದು ಮಜಲನ್ನು ಮುಂದೂಡಿಕೊಂಡು ಹೋಗುತ್ತದೆ. ಶ್ರೀ ಕನಕದಾಸರಲ್ಲಿ ಮೂಡಿನಿಂತ ಜ್ಞಾನ ಸಂಗ್ರಹವು ಕೀರ್ತನೆಗಳಲ್ಲಿ ಕಾವ್ಯಗಳಲ್ಲಿ ಹಾಸುಹೊಕ್ಕಾಗಿದೆ. ಕನಕರು ನಿಂತ ಸ್ಥಳ ಕನಕಗಿರಿಯಾಯಿತೆಂಬುದಕ್ಕೆ ಜನಪದ ಕವಿ ಐತಿಹ್ಯವನ್ನು ತಿಳಿಸುತ್ತಾನೆ.

**ತ್ರಿಪದಿಗಳಲ್ಲಿ ಶ್ರೀ ಕನಕದಾಸರು**

ಶ್ರೀ ಕನಕದಾಸರ ಜೀವನದ ವಿವರಗಳು ಪರಂಪರೆಯಾಗಿ ಸಾಗಿ ಬಂದ ಅನೇಕ ಜನಪದ ಹಾಡುಗಳಲ್ಲಿ ದೊರಯುತ್ತಲಿವೆ. ಗರತಿಯರ ಹಾಡುಗಳಲ್ಲಿ ದೊರಕಿದ ವಿವರಗಳನ್ನು ಇಲ್ಲಿ ಕಾಣುವಾ.

ಬಾಡ ಊರನ್ನು ಬಿಟ್ಟು ಹೊರಟಂತಹ ಸಮಯದಲ್ಲಿ ಕನಕದಾಸರು ಗರತಿಯ ಕನಸಿನಲ್ಲಿ ಕಾಣುವರು. ಆ ಚಿತ್ರಣ ಇಲ್ಲಿದೆ.

ಹರೆಯ ಹೊತ್ತಿನ ಕನಸ ಹಡದವ್ವ ನೀಕೇಳ
ಹೆಗಲ ಮ್ಯಾಲವನ ಗೊಂಗಡಿ* । ಬಾಡದ
ಸಿರಿ ಕನಕದಾಸ ಬಂದಿದ್ದ ಸಪನಾಗ ॥

* ಗೊಂಗಡಿ=ಕಂಬಳಿ

ಈ ಕನಸುಕಂಡ ಗರತಿಯು ಸಿರಿಕನಕದಾಸರಿಗೆ ಆರತಿಯನ್ನು ಬೆಳಗುವ ಬಾಡಗ್ರಾಮದ ಪಲ್ಲಕ್ಕಿಯನು ಕುರಿತು ತಿಳಿಸಿರುವ ಚಿತ್ರಣವೂ ಇದೆ.

ಬಾಡದ ಊರಾಗ ಬೆಳ್ಳಿಯ ಪಲ್ಲಕ್ಕಿ
ತಾಳಿನ ದೊರೆಯು ಮನೆಯಾಗ । ಕನಕಪ್ಪನ
ತಾಳಿಗೆ ಆರುತಿ ಬೆಳಗೀನ ॥

ಕನಕಪ್ಪನು ಶ್ರೀ ಕನಕದಾಸರಾದ ಬಳಿಕ ಓಣಿಗಳಲ್ಲಿ ನಿಂತು ಹಾಡುಗಳನ್ನು ಹಾಡುವ ಸಜ್ಜನಿಕೆಯನ್ನು ಇನ್ನೊಂದು ತ್ರಿಪದಿಯಲ್ಲಿ ಕಾಣುತ್ತೇವೆ.

ಸಾಲ ಓಣಿಯೊಳಗ ಸಾರುತ ನಿಂತಾನ
ಸಾವಿರ ಹಾಡು ನಾಲಿಗೆಗೆ । ಕನಕಪ್ಪ
ಸಾಧುರ ಮಾತ ಸುರಿಸ್ಯಾನ ॥

ವೈರಾಗ್ಯ ಹೊಂದಿದ ಶ್ರೀ ಕನಕದಾಸರು ಸಂಚರಿಸುತ್ತ ಹೊರಟು, ದೇವಧ್ಯಾನದಿಂದ ಹರಿಯ ಸಮನಾಗಿ, ಅಲ್ಲದೆ ಇನ್ನೂ ಒಂದು ಗುಂಜಿ ತೂಕ ಮಿಗಿಲಾದ ಎಂಬ ಭಾವವನ್ನು ಕಾಣುತ್ತೇವೆ.

ಸಂಸಾರ ಸರಿಸ್ಯಾನ ಸುಖದಾಗ ಇಳಿದಾನ
ಸಾವಿರ ಗಾವುದ ನಡೆದಾನ । ಕನಕಪ್ಪ
ಉಡುಪಿಯ ಹರಿಗೆ ತಾ ಮಿಗಿಲಾದ ॥

ಕೀರುತಿ ತುಂಬ್ಯಾನ ಕೀರುತಿ ಬರದಾನ
ಕಳವಳದ ಸ್ವಾಮಿ ಕನಕಪ್ಪ । ಬಂದಾನ
ಸಾವಿರ ಹರದಾರಿ ನಡೆಯೂತ ॥

ಶ್ರೀ ಕನಕದಾಸರ ಬದುಕು ಜನಪದರ ನಾಲಿಗೆ ಮೇಲೆ ಮಿಂಚಿನಂತೆ ಸಂಚಾರ ಮಾಡುತ್ತಿದೆ.

ಇದೇ ರೀತಿ ಗಂಡಸರು ಹಂತಿಯ ಹಾಡುಗಳಲ್ಲಿ ಭಕ್ತ ಕನಕದಾಸರ ಬದುಕನ್ನು ಹಾಡಿಕೊಂಡಿದ್ದಾರೆ.

## ಹಂತಿಯ ಹಾಡಿನಲ್ಲಿ ಭಕ್ತ ಕನಕದಾಸರು

ಕೋರಿಕೆಗಳಿಂದ ಸುರುವಾಗುವ ಹಂತಿಯ ಹಾಡುಗಳನ್ನು ಇಲ್ಲಿ ತಿಳಿಯುವಾ. ತಮ್ಮ ರಾಶಿ ಕನಕದಂತೆ ಹಸನಾಗಬೇಕೆಂಬ ನಿಲುವು ಹಾಡುಕಾರರದಾಗಿದೆ.

ಹಂತಿಯ ಹೊಡೆಯುತ ನಾವ್ಯಾರ ನೆನೆಬೇಕ
ಕನಕದಾಸರ ಆದಿಕೇಶವನೋ ।

ಗರತಿಯ ಹಾಡುಗಳನ್ನು ಹಾಡಿದವರು : ೧) ಶ್ರೀಮತಿ ಬಂಗಾರೆವ್ವ ಯಲ್ಲಪ್ಪ ಬಾಡದ ಹಾಗೂ ೨) ಶ್ರೀಮತಿ ರೇಣುಕಾ ಯಲ್ಲಪ್ಪ ಬಾಡದ, ಚೌಡಕಿಮೇಳ ; ಹಳೇ ಹುಬ್ಬಳ್ಳಿ, (ಜಿ : ಧಾರವಾಡ).

ಕನಕದಾಸರ ಆದಿಕೇಶವನ ನೆನದರ
ಕನಕದ ರಾಶಿ ಹಸನಗ್ಯೋ ॥

ತಮ್ಮ ಭಾವನೆಗಳು ಕಲಾತ್ಮಕವಾಗಿ ಹೊರಸೂಸಿ ಬರುವ ಬಾಡ ಗ್ರಾಮದ ಶ್ರೀ ಕನಕದಾಸರ ಸಂಬಂಧವನ್ನು ಹಾಡಿನಲ್ಲಿ ನೀಡುತ್ತಾರೆ.

ಊರ ಬಾಡದೊಳಗ ಗುಗ್ಗಳ ಹೊಗಿನ್ಯಾಕ
ದರಮಕ್ಕಿಳಿದಾರ ಹರಿ ಬಕುತರ ಬಕುತರೋ ।
ದರಮಕ್ಕಿಳಿದಾರ ಹರಿ ಬಕುತರ ಬಾಡದ
ಕನಕದಾಸರ ಸರಮಾಲ್ಯೋ ॥

ಶ್ರೀ ಕನಕದಾಸರು ವೈರಾಗ್ಯನಿಧಿಯಾಗಿ ತೋರಿದರು. ಅವರು ತಿಮ್ಮಪ್ಪನಾಯಕನೆಂದು ಹೆಸರುವಾಸಿಯಾದಾಗ ನೇಗಿಲಯೋಗಿ, ಯೋಧನಾಗಿ, ಕೋಟೆ ಕಟ್ಟಿದ ನಾಯಕನಾಗಿ ಬದುಕು ಸಾಗಿಸಿದ್ದನ್ನು ಚರಿತ್ರೆಯಲ್ಲಿ ಕಾಣುತ್ತೇವೆ. ಒಮ್ಮೆಲೆ ಎಲ್ಲವನ್ನು ಸರಿಸಿ, ಸಂಸಾರದಿಂದ ಸಸಾರ ಜೀವನ ಸಾಗಿಸಲು ಲೋಕೋಪಜೀವಿಯಾದ ಪ್ರಸಂಗವನ್ನು ಹಂತಿಯ ಹಾಡುಗಳಲ್ಲಿ ಕಾಣುತ್ತೇವೆ.

ಮೇಟಿಯ ಸರಿಸ್ಯಾನ ಕ್ವಾಟಿಕ ಬಿಟ್ಟಾನ
ಕಾಗಿ ನೆಲೆಯ ಹಾದಿ ಹಿಡದಾನ ।
ಕಾಗಿ ನೆಲೆಯ ಹಾದಿ ಹಿಡದಾನ ಕನಕಯ್ಯ
ಲೋಕದ ಮಾನ ಬೆಳಗ್ಯಾನ ॥

ಕಂಚಿನ ಕೈತಾಳ ತಂತಿಯ ಏಕತಾರಿ
ಕಾಗಿನೆಲೆಯ ಗುಡಿಮುಂದೋ ।
ಕಾಗಿನೆಲೆಯ ಗುಡಿಮುಂದ ಕನಕಯ್ಯ
ಬಕುತಿಯ ಹಾಡ ಬರದಾನೋ ॥

ಪಾದುಕ ಮೆಟ್ಯಾನ ಕಂಬಳಿಯ ಹೊತ್ತಾನ
ಮಾತಿಗೆ ಮಾತು ಬೆಳೆಸ್ಯಾನೋ ।
ಮಾತಿಗೆ ಮಾತು ಬೆಳೆಸ್ಯಾನೋ ಕನಕಯ್ಯ
ಸೂರ್‍ಯಾನ ಬೆಳಕಾ ತೋರ್‍ಯಾನೋ ॥

ಹಂತಿಯ ಹಾಡಿನ ಪರಂಪರೆಯಲ್ಲಿ ಶ್ರೀ ಕನಕದಾಸರನ್ನು ವರ್ಣಿಸಿ ಹೇಳುವ ಹಾಡುಗಳು ಶಿಗ್ಗಾಂವದ ಸುತ್ತಮುತ್ತಲಿನ ಕೃಷಿ ಕುಟುಂಬಗಳಲ್ಲಿ ಇವೆ. ಅವರು ಹಂತಿಯ ಕಟ್ಟಿದಾಗ ಮಾತ್ರ ಹಾಡುಗಳನ್ನು ಹೇಳುತ್ತಾರೆಂಬುದಾಗಿ ಉಪ್ಪಿನ ಬೆಟಗೇರಿಯ ಕೆಲವು ಹಾಡುಕಾರರು ತಿಳಿಸಿದ್ದಾರೆ.

**ಏಕತಾರಿ ಹಾಡಿನಲ್ಲಿ ಶ್ರೀ ಕನಕದಾಸರು**

ಉತ್ತರ ಕರ್ನಾಟಕದಲ್ಲಿ ವೃತ್ತಿಗಾಯಕರಾದ ಸಂಚಾರಿ ಜನಾಂಗದ ದಾಸಪಂಗಡದವರು ಪುರಂದರದಾಸರ ಬಗೆಗೂ, ಭಕ್ತಿಪಂಥದ ಬಗೆಗೂ ಹಾಡುಗಳನ್ನು ಹಾಡುತ್ತ ಬಂದಿದ್ದಾರೆ. ವೃತ್ತಿಗಾಯಕರಾದ ಇವರು ಏಕತಾರಿಯನ್ನು ಹಿಡಿದು, ಬಾರಿಸಿ, ಚಿಟ್‌ತಾಳ ಹೊಡೆದು ನಾದ ತೆಗೆಯುತ್ತಾರೆ. ಜನಪದ ಧಾಟಿಗಳಲ್ಲಿ ಪದಗಳನ್ನು ವಿವರಿಸುತ್ತಾರೆ.

ಎಲ್ಲ ಮತಗಳು ಸಮಾನವಾದವುಗಳು. ಅವು ಮಾನವನನ್ನು ತಿದ್ದಲು ಉಂಟಾದ ತತ್ವಗಳಾಗಿವೆ. ಹೀಗಾಗಿ ಒಟ್ಟು, ಮಾನವ ಮತ ಅಂದರೆ ಮನುಜಮತ 'ಒಂದೇ ಒಂದು' ಎಂಬ ಸಂದೇಶವನ್ನು ನೀಡುತ್ತವೆ.

ಹಾಡು

ನೀವೇನು ಬಲ್ಲಿರಿ ನೀವೇನು ಬಲ್ಲಿರಿ
ಕನಕದಾಸರನು ನೀವೇನು ಬಲ್ಲಿರಿ ॥ಪಲ್ಲ॥

ಹಾಲುಮತದ ಕನಕದಾಸನೂ
ಸಾಲು ಮತಗಳ ತಿಳಿದವನೂ
ಸಾಲು ಮತಗಳ ತಿಳಿದ್ಹೇಳಿದನ
ಸಾಕು ಮಾಡಬೇಕು ಜಾತಿಗಳನೂ ॥ ೧ ॥

---

ಹಂತಿಯ ಹಾಡುಗಳನ್ನು ಹೇಳಿದವರು : ಶ್ರೀ ಶಿವರಾಯ ದ್ಯಾಮಣ್ಣ ಗೊರವ, ಊರು : ಉಪ್ಪಿನ ಬೆಟಗೇರಿ, ಧಾರವಾಡ ಜಿಲ್ಲೆ.

ಒಂದು ಮತ ಹಿಡಿದ್ಹೇಳಿದನೂ
ಮಾನವ ಮತವ ತಿಳಿದವನೂ
ಮಾನವ ಮತ ತಿಳಿದ್ಹೇಳಿದನ
ಬೆಳಕಿಗೆ ಇಲ್ಲ ಜಾತಿಯನೂ ॥ ೨ ॥

ಒಂದು ಮತ ಅರಿತ್ಹೇಳಿದನೂ
ಮಾನವ ಮತ ಅರಿತವನೂ
ಮಾನವ ಮತ ಅರಿತ್ಹೇಳಿದನ
ನೀರಿಗೆ ಇಲ್ಲ ಜಾತಿಯನೂ ॥ ೩ ॥

ಹಲವು ಮತ ತಿಳಿದವನವನೂ
ಒಂದೇ ಒಂದು ಮತ ಎಂದವನೂ
ಒಂದೇ ಮತ ತಿಳಿದ್ಹೇಳಿದನ
ಭೂಮಿಗೆ ಇಲ್ಲ ಜಾತಿಯನೂ॥ ೪ ॥

ಉಡುಪಿಯ ಶ್ರೀ ಕೃಷ್ಣನನ್ನು ಶ್ರೀ ಕನಕದಾಸರು ಗೆಲ್ಲುತ್ತಾರೆಂಬುದನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಮತ ಧರ್ಮಗಳ ಸರ್ವ ಸಿದ್ಧಾಂತಗಳನ್ನು ಬಲ್ಲವನಾಗಿದ್ದ ಶ್ರೀ ಕನಕದಾಸ, ಹಾಗೇ ಹಾಡು ಮುಂದುವರೆಯುತ್ತದೆ.

ಹರಿಗೆ ಹರಿಯ ತಿಳಿದವನೂ
ಉಡುಪಿಯ ಹರಿಯ ಗೆದ್ದವನೂ
ದರಮನ ತಿಳಿದ್ಹೇಳಿದನ
ಸರವವೂ ಒಂದೆಂದ ಕನಕದಾಸನೂ ॥ ೫ ॥

ಭೂಮಿಯ ಮೇಲೆ ತಿರಗುತಾನೂ
ತಾಳ ತಂಬೂರಿಯ ಜೋಡವನೂ
ತಿರುಪತಿ ತಿಮ್ಮಪ್ಪನ ಮಾತಾಡಿಸಿದನು
ಉಡುಪಿಯ ಕೃಷ್ಣನ ದರುಶನ ಪಡೆದವನೂ ॥ 6 ॥

ಗುರು ವ್ಯಾಸರಾಯನ ಹರಕೆ ಪಡೆದವನೂ
ದಾಸ ಮತದಲಿ ಮೊದಲಿಗನೂ
ಬಕುತಿ ಭಾವದಲಿ ಬಲ್ಲಿದವನು
ದಾಸರಲಿ ಸರವ ಹೆಚ್ಚಿನ ಬಕುತನೂ ॥ ೭ ॥

ಸಂಸಾರ ಸಸಾರ ಮಾಡಿದವನೂ
ವೈರಾಗ್ಯನಿಧಿ ಕನಕದಾಸನೂ
ಕಾವ್ಯ ಕಥೆಗೊಳ ಬರೆದವನು
ಜ್ಞಾನ ಹರಡಿ ಮುಕುತಿ ಪಡೆದವನೂ ॥ ೮ ॥

............................................................
ನೀವೇನು ಬಲ್ಲಿರಿ ಕನಕದಾಸರನೂ ॥

ಗದ್ಯದ ಲಯವನ್ನು ಹೊಂದಿರುವ ಏಕತಾರಿ ಪದಗಳು ಹಾಡುವವರ ನಾಲಗೆಯಲ್ಲಿ ರಸವಾಗಿ ಸೂಸುತ್ತಿವೆ. ಗೋಕಾಕ ತಾಲೂಕಿನ ಬಿಲಕುಂದಿ ಗ್ರಾಮದಲ್ಲಿ ವಾಸವಾಗಿದ್ದ ದಾಸರ ಯಮನವ್ವ ಎಂಬ ಮಹಿಳೆ ಈ ಪದವನ್ನು ಹೇಳಿಕೊಟ್ಟಿರುವುದಾಗಿ ತಿಳಿಸಿದ್ದಾನೆ. ಶ್ರೀ ಕನಕದಾಸರ ಬಗೆಗೆ ಮತ್ತು ಶ್ರೀ ಪುರಂದರದಾಸರ ಬಗೆಗೆ ಹಾಡುವ ಜನಪದ ಹಾಡುಗಳು ಇವೆ ಎಂಬುದಾಗಿ ಶ್ರೀ ಮಾಳಪ್ಪ ಗಂಗಪ್ಪ ದಾಸರ ತಿಳಿಸಿದ್ದಾನೆ. ಆದರೆ ಆ ಮಹಿಳೆ ಈಗಿಲ್ಲ. ಇನ್ನಾರಿಗಾದರೂ ಹಾಡುಗಳನ್ನು ದಾನವಾಗಿ ನೀಡಿದ್ದಾಳೆಂಬುದನ್ನು ಶೋಧಿಸಬೇಕು. ಇಂತಹ ಹಾಡುಗಳು ಹೊರಬಂದಾಗ ಭಕ್ತ ಕನಕದಾಸರ ಜೀವನ ಮತ್ತು ಸಾಹಿತ್ಯದಲ್ಲಿ ಹೆಚ್ಚಿನ ಕ್ಷಿತಿಜ ಕಾಣುತ್ತದೆ.

**ಗೀಗೀ ಪದಗಳಲ್ಲಿ ಮಹಾತ್ಮಾ ಕನಕದಾಸ**

ಕನ್ನಡದಲ್ಲಿ ಗೀಗೀ ಪದಗಳು ರಚನೆಯಾದ ಮೊದಲ ಹಂತದಲ್ಲಿಯೇ ಕನ್ನಡ ನಾಡಿನಲ್ಲಿ ಲಾವಣಿ ಸಖಿಪದವನ್ನೂ ಗೀಗೀ ರೂಪದಲ್ಲಿ ಹಾಡುವುದು ಸುರುವಾಯಿತು.

ಆ ವೇಳೆಗೆ ರಚನೆಯಾದ ಮಹಾತ್ಮಾ ಕನಕದಾಸರ ಬಗೆಗಿರುವ ಸಖಿಪದವನ್ನು ಇಲ್ಲಿ ತಿಳಿಯೋಣ. ಶ್ರೀ ಬಸವಣ್ಣನವರೂ ಅಲ್ಲಮಪ್ರಭುಗಳೂ

ಹಾಡು ಹಾಡಿದವನು : ಶ್ರೀ ಮಾಳಪ್ಪ ಗಂಗಪ್ಪ ದಾಸರ ಊರು : ಸಾಲಹಳ್ಳಿ : ತಾ : ರಾಮದುರ್ಗ, ಜಿಲ್ಲೆ : ಬೆಳಗಾವಿ.

ಗತಿಸಿದನಂತರ ದಾಸ ಪಂಕ್ತಿಯಲ್ಲಿ ಶ್ರೀ ಪುರಂದರದಾಸರೂ ಕನಕದಾಸರೂ ಕನ್ನಡ ಸಾಹಿತ್ಯಕ್ಕೆ ಬಹು ದೊಡ್ಡ ಕಾಣಿಕೆಗಳನ್ನು ನೀಡಿದ್ದಾರೆ. ಅವರಿಬ್ಬರಲ್ಲಿ ಶ್ರೀ ಕನಕದಾಸರು ಮಹಾತ್ಮರೆಂದು ತಾವು ಬಾಳಿಬದುಕಿದ ಅವಧಿಯಲ್ಲಿಯೇ ಕರೆಯಿಸಿಕೊಂಡರು. ಹೀಗೆಂದು ತಿಳಿಸುವ ಗೀಗೀ ಪದವನ್ನು ತಿಳಿಯೋಣ.

## ಮಹಾತ್ಮಾ ಕನಕದಾಸರ ಸಖಿಪದ

ಪುಣ್ಯಭೂಮಿ ಭರತಖಂಡದಾಗ
ಕನ್ನಡನಾಡಿದು ಬಹು ಮಿಗಿಲಾ । ಗೀಯ ಗೀಯ ಗೀಯಗಾ ॥ಪಲ್ಲ॥

ಹುಟ್ಟತಾರ ಮೇಲಿಂದ ಮೇಲೆ ಮಹಾತ್ಮರಾ
ಆಗಿ ಹೋಗಿದಾರ ದೇವದೂತರಾ ॥೧॥

ಬಸವಣ್ಣ ಅಲ್ಲಮ ಪ್ರಭುವರಾ ಹರಾ
ತಿಳಿಸಿದಾ ಮಾನವರಿಗೆಲ್ಲ ಜೀವಧಾರಾ ॥೨॥

ಕೂಡಿಸಿದಾರ ಶರಣರ ದೊಡ್ಡ ದೊಡ್ಡ ಮೇಳಾ
ಮಾಡಿದಾರ ಶರಣರು ಬದುಕುವಕಳಾ ॥೩॥

ಮುಂದಿನ ಕಾಲಿದಾಗ ಬಂದಾರ ದಾಸವರಾ
ಪರಂಪರಾ ನಡಸಿದಾರ ಪುಣ್ಯದ ಭಾರಾ ॥೪॥

ವ್ಯಾಸರಾಯ ತಿಳಿಸಿದಾ ಬಕುತಿಯ ಧಾರಾ
ಓಡಿ ಬಂದಾರ ಬಕುತ ಮಹಿಮರಾ ॥೫॥

ಪುರಂದರದಾಸ–ಕನಕದಾಸ ಮತ್ತು ಮಹಿಮರಾ
ಕನಕದಾಸ ನಿಂತಿದಾರ ಕಠಿಣನೀಗಿಸಾರಾ ॥೬॥

---

ಗೀಗೀ ಹಾಡಿದವನು : ದಿವಂಗತ ಶ್ರೀ ತಮ್ಮಣ್ಣ ಮಲ್ಲಪ್ಪ ಹೊಸಕೋಟೆ, ಊರು ; ರಾಮದುರ್ಗಂ.

ಕುರುಬನೆಂದರೂ ಕನಕದಾಸ ಮಹಾಬಹಾದೂರಾ
ತಿಳಿಸಿದಾನ ಸರವರಿಗೆಲ್ಲ ದೇವರಿರುವ ಕಳಾ ॥೭॥

ಉಡುಪಿಯ ಹರಿನ ತಿರಿಗಾಸ್ಯಾನೋ ಹಿಂದಕಾ
ತಿರುಪತಿ ತಿಮ್ಮಪ್ಪ ಮಾತಾಡ್ಯಾನೋ ಮುಂದಕಾ ॥೮॥

ಜ್ಞಾನದ ಬಾಗಿಲು ತೆರದಾನೋ ಮುಂದಮುಂದಾ
ಸಾಹಿತ್ಯ ರಚನೆ ಮಾಡ್ಯಾನೋ ಚಂದ ಚಂದಾ ॥೯॥

ಮಾನವರಿಗೆಲ್ಲರಿಗೂ ತಿಳಿಸ್ಯಾರೋ ಕುಲ ಒಂದೆಂದಾ
ತಾವು ಆಗಿ ನಿಂತಾರೊ ಸರವರಲ್ಲಿ ಮಹಾತ್ಮರಿಂದಾ ॥೧೦॥

ಮಹಾತ್ಮರ ಹಾದಿ ಕೇಳಿರೋ ನೀವು ನಮ್ಮಿಂದಾ
ನಮಸ್ಕಾರ ಮಾಡತೇವ ನಿಮಗ ಹೊನ್ನ ಹಳ್ಳಿಯಿಂದಾ ॥೧೧॥

## ಸಂಪ್ರದಾಯದ ಆಚರಣೆಗಳಲ್ಲಿ ಶ್ರಿ ಕನಕದಾಸರು

ಧಾರವಾಡ ಜಿಲ್ಲೆಯಲ್ಲಿ ಒಕ್ಕಲಿಗರು ಹಂತಿಯ ನೈವೇದ್ಯವನ್ನು ಮಾಡುವಾಗ ಪಾಂಡವರಿಗೆ ಎಡೆ ಮಾಡುವಂತೆ, ಬಾಳಿಯ ಎಲೆಯನ್ನು ತಂದು ಶ್ರೀ ಕನಕದಾಸರ ಎಡೆ ಎಂದು ಬೇರೊಂದು ಎಡೆಯನ್ನು ಮಾಡಿ ; ಮೇಟಿಯ ಸುತ್ತಲಿನ ರಾಶಿಗೆ ಎಡೆ ತೋರಿಸಿ, ಬೆಳಿಗ್ಗೆ ಆ ಎಡೆಯನ್ನು ಸಾಕುಪ್ರಾಣಿಗಳ ಮುಂದಿಟ್ಟು ಕೈ ಮುಗಿಯುವ ಪರಂಪರೆ ಈಗಲೂ ಇದೆ ಎಂಬುದಾಗಿ ತಿಳಿದುಬರುತ್ತದೆ.

ಬಾಡ ಗ್ರಾಮದಲ್ಲಿ ಮಹಾತ್ಮಾ ಕನಕದಾಸ ಗುಡಿ ಎಂದು ಈಗ ನಿರ್ಮಿಸಲಾಗಿದೆ. ಈ ಸ್ಥಳ ಮೊದಲು ಗದ್ದಿಗೆ ಎಂಬುದಾಗಿತ್ತು. ಇಲ್ಲಿ ವಿಜಯದಶಮಿಯ ದಿನ ಮತ್ತು ದೀಪಾವಳಿಯ ಪಾಡ್ಯದ ದಿನ ಕುರುಬ ಸಮಾಜದವರು ಹಾಗೂ ಇತರ ಸಮಾಜದವರು ಬಂದು ಕಂಬಳಿಯನ್ನು ಹಾಸಿ ಕುಳಿತುಕೊಂಡು ಶ್ರೀ ಕನಕದಾಸರ ಹೆಸರಿನಿಂದ ಕಂಕಣಗಳನ್ನು ತಯಾರಿಸಿಕೊಂಡು ಅಲ್ಲಿಂದ ಹೊರಡುವ ಸಂಪ್ರದಾಯವಿತ್ತು.

ಈ ಕಂಕಣಗಳನ್ನು ಕುರಿಯ ಉಣ್ಣೆಯಿಂದ ತಯಾರುಮಾಡುತ್ತಿದ್ದರು.

ಈ ಕಂಕಣಗಳನ್ನು ಮನೆಯಲ್ಲಿ ದೇವರ ಮಾಡ ಅಥವಾ ಜಗಲಿಯಲ್ಲಿಟ್ಟು ಹುಟ್ಟಿದ ಕೂಸಿಗೆ, ಒಂದು ತಿಂಗಳಾದ ಬಳಿಕ ಎರಡೂ ಕೈಗಳಿಗೆ ತೊಡಿಸುವ ಸಂಪ್ರದಾಯವಿದೆ.

ಮೇಲಿನ ಸಂಪ್ರದಾಯಗಳನ್ನು ಜನ ಇನ್ನೂ ಪಾಲಿಸುತ್ತಿದ್ದಾರೆ. ಶ್ರೀ ಕನಕದಾಸರು ತಮ್ಮ ಇಷ್ಟಾರ್ಥಗಳನ್ನು ಪೂರೈಸುವರೆಂಬ ಬಲವಾದ ನಂಬುಗೆ ಜನಪದರಲ್ಲಿ ಮೂಡಿ ನಿಂತಿದೆ.

**ಗಾದೆಗಳಲ್ಲಿ ಶ್ರೀ ಕನಕದಾಸರು**

ಜನಪದರು ಭಕ್ತ ಕನಕದಾಸರನ್ನು ಅನೇಕ ಬಗೆಯಾಗಿ ಹೊಗಳುವ ಗಾದೆಯ ಮಾತುಗಳನ್ನು ಚಲಾಯಿಸಿದ್ದಾರೆ. 'ಕನಕನ ತಾಳಾಗು ಇಲ್ಲದಿದ್ದರೆ ಹಾಳಾಗು' ತಾಳವು ಭಕ್ತಿಯ ನಾದವನ್ನು ನೀಡುತ್ತದೆ ಎಂಬುದಾಗಿ ನಂಬಿದವರಾಗಿದ್ದಾರೆ. 'ತಾಳಿದವನು ಬಾಳಿಯಾನು' ಎಂಬ ಗಾದೆಗೂ 'ತಾಳು' ಎಂಬ ಒಳ ಅರ್ಥಕ್ಕೂ ಸಂಬಂಧ ಇದ್ದೇ ಇದೆ. ಕೈ ತಾಳಿಗೂ ತಾಳುವುದಕ್ಕೂ ಸಮಾನಾರ್ಥವನ್ನು ಹೊಂದಿಸಿ ಹೇಳುವ ರೂಢಿಯೂ ಇದೆ.

'ಕಂಡ ಕಂಡಂತೆ ಹೇಳಾಕ ಕನಕದಾಸನೇನು?' ಎಂಬ ಮಾತು ಹಲವು ಕಡೆಗೆ ಪ್ರಯೋಗದಲ್ಲಿದೆ. 'ಕನಕನಾಗಿ ಬದುಕಿ ಸಂತನಾಗಿ ಸಾಯಬೇಕು' ಎಂಬುವ ಮಾತು ಸಂತ ಕನಕದಾಸರ ಜೀವನವನ್ನು ಕರಿಯು ಕನ್ನಡಿಯಲ್ಲಿ ತೋರಿದಂತಿದೆ. ಸಂತ ಕನಕದಾಸರು ಸಂಚಾರಿಯಾಗಿ ಜನರಿಗೆಲ್ಲ ತಿರುಗುವ ಸಂತನೆಂದೇ ಕರೆದದ್ದುಂಟು. ಸಂತರ ಜೀವನವು ಮಾನವರ ಕಲ್ಯಾಣಕ್ಕಾಗಿಯೇ ಇದೆ.

'ರಾಗಿಯ ಉಂಡು ರಾಗಾ ಮಾಡು' ಎಂಬ ಗಾದೆಯೂ ಇದೆ. ರಾಗಿಯ ಮಹಿಮೆಯನ್ನು 'ರಾಮಧಾನ್ಯ' ಚರಿತ್ರೆಯಲ್ಲಿ ಸಂತ ಕನಕದಾಸರು ವಿವರಗಳನ್ನು ಕಾವ್ಯ ಮುಖಾಂತರ ನೀಡಿರುವರು. ರಾಗಿ-ಬತ್ತದ ಬೆಳೆಗಳನ್ನು ಬೆಳೆದ ಕನಕಪ್ಪನು ತಾನು ಕಂಡಂತೆ ನುಡಿದು ಸಾಹಿತ್ಯ ಚರಿತ್ರೆಯಲ್ಲಿ ಬಂಡಾಯದ ಧ್ವನಿಯನ್ನು ಎತ್ತಿ ತೋರಿಸಿದ್ದಾನೆ.

ರಾಗಿಯ ಅಂಬಲಿಯು ಬಹುರೋಗಗಳ ನಿವಾರಿ ಎಂಬುದಾಗಿ ಗರತಿಯರು ತಿಳಿದದ್ದುಂಟು. ಬೇಸಿಗೆಯ ಕಾಲದಲ್ಲಿ ರಾಗಿಯ ಅಂಬಲಿಯನ್ನು ತಯಾರಿಸಿ ಈಗಲೂ ಕುಡಿಯುತ್ತಾರೆ. ಉತ್ತರ ಕರ್ನಾಟಕದ ಮಠಗಳಲ್ಲಿ ಈಗಲೂ ಇದೆ. ಗೋಕಾಕ ತಾಲೂಕಿನ ತವಗಮಠ ಹಾಗೂ ಅಂಕಲಗಿ

ಮಠಗಳಲ್ಲಿ ರಾಗಿಯ ಅಂಬಲಿಯು ಹರಿಯದಂಬಲಿಯಾಗಿ ಸಾಗಿಯೇ ಇದೆ.

'ಕನಕನನ್ನು ಕೆಣಕಬೇಡ, ಕೆಣಕಿ ತಿಣಕಬೇಡ' ಎಂಬ ಮಾತು ಕನಕದಾಸರ ಸಮಕಾಲೀನ ಗಾದೆಯಾಗಿ ಸಾಗಿ ಬಂದಿದೆ. ಕುಂತರೆ ಕುಂಬಾರನಾಗು, ತಿರುಗಿದರೆ ತಿಮ್ಮಪ್ಪನಾಗು ಎಂಬ ಗಾದೆಯ ಮಾತು ಭಕ್ತ ಕುಂಬಾರನನ್ನೂ ಮತ್ತು ಭಕ್ತ ಕನಕದಾಸರನ್ನೂ ಕುರಿತೇ ಹೇಳಿದ ಮಾತಾಗಿದೆ. ಎಲ್ಲಿದ್ದರೂ ಹೇಗಿದ್ದರೂ ಭಕ್ತನಾಗಲು ಸಾಧ್ಯ : ಕುಂತರೂ ನಿಂತರೂ, ಚಲಿಸಿದರೂ ಭಕ್ತರಾಗಲಿಕ್ಕೆ ಸಾಧ್ಯ ಎಂಬುದಕ್ಕೆ ಭಕ್ತ ಗೋರಾ ಕುಂಬಾರನ ಜೀವನವನ್ನೂ, ಭಕ್ತ ಕನಕದಾಸರ ಜೀವನವನ್ನೂ ಈ ಗಾದೆಯು ತಿಳಿಸುತ್ತಿದೆ.

ಈ ರೀತಿ ಹಲವು ಗಾದೆಯ ಮಾತುಗಳಿಂದ ಜನಪದರು ತಮ್ಮ ಒಳಗಣ್ಣುಗಳಿಂದ ಕಂಡಿದ್ದಾರೆ. ಉತ್ತರ ಕರ್ನಾಟಕದಲ್ಲಿ ಮಕ್ಕಳು ಆಡುವಾಗ ತಮ್ಮ ಮಾತುಗಳಲ್ಲಿ (ಚಿಕ್ಕೋಳ ಪದಗಳಲ್ಲಿ) ಕನಕರನ್ನು ನೆನೆಸುವುದುಂಟು.

ದಾಸರು ಬಂದರು ದಾಸರು
ಪುರಂದರದಾಸರು
ದಾಸರು ಬಂದರು ದಾಸರು
ಕನಕದಾಸರು
ಕನಕ ತಂದಾನು ಒಣಕಿ
ಅದರಿಂದ ಹೊಡೆದರೆ ತಿಣಕಿ

ಕನಕದಾಸರ ಒಣಕಿ ಎಂತಹದು ಎಂಬುದನ್ನು ಸಂಕೇತದ ಮೂಲಕ ತಿಳಿಯಬಹುದು.

ಭಕ್ತ ಕನಕದಾಸರು ತಿಳಿಸಿದರುವ ಅವರ ಕೀರ್ತನೆಗಳಲ್ಲಿಯೇ ಅವರ ಜೀವನ ದರ್ಶನವಿದೆ.

ಸಾಕು ಸಾಕು ಮನುಜ ಸೇವೆ ರಂಗಯ್ಯಾ
ಸಾಕು ಸಾಕು ಮನುಜ ಸೇವೆಮಾಡಿ
ದಣಿದು ಹೋದೆನು ನಾನು
ಹೊತ್ತಾರೆ ಎದ್ದು ಹೋಗಿ
ಪರರ ಚಿತ್ತವೃತ್ತಿಯನು ತಿಳಿದು
ಹತ್ತರಿದ್ದು ಹಲವು ಕೆಲಸ
ಬೃತ್ತನಂತೆ ಮಾಡಿ ರಿಕ್ತ
ಹಸ್ತದಿಂದ ಮನೆಯ ಸೇರುವ ಆಶೆಗಾಗಿ.

ಭಕ್ತಕನಕದಾಸರು ಮನುಜರಿಗಾಗಿ, ಸಂಚಾರಮಾಡಿ, ತಮ್ಮ ಜ್ಞಾನವನ್ನು ಸಂಚಾರದಲ್ಲಿ ಹಂಚಿದ್ದಾರೆ. ಬರಿಗೈಯಿಂದ ಮನೆ ಸೇರಿದ್ದಾರೆ. ತನ್ನ ದೇವನನ್ನು ನೆನೆದಿದ್ದಾರೆ.

ಹೀಗೆ ಮನುಜರಿಗಾಗಿ ಅವರಲ್ಲಿ ಜ್ಞಾನ ಬಿತ್ತುವ ಕಾರ್ಯವನ್ನು ಕನಕದಾಸರು ಮಾಡಿದರು. ಇಂತಹ ಕವಿ ಕನಕದಾಸರು ಹಾಲು ಮತದಲ್ಲಿ ಜನಿಸಿ. ಮನುಜ ಮತ ಬೆಳೆಸಲು ಸಾಕ್ಷಿಯಾಗಿದ್ದಾರೆಂದು ಜನಪದರು ಹೇಳಿ, ಹಾಡಿ, ಹರಸಿದ್ದಾರೆ.

# ಕನಕದಾಸರ ಭೌಗೋಳಿಕ ದರ್ಶನ

**ಡಾ. ಕಮಲಾ ಹಂಪನಾ**

'ಕನಕದಾಸರ ಭೌಗೋಳಿಕ ದರ್ಶನ' ಪ್ರಬಂಧದಲ್ಲಿ ಮುಖ್ಯವಾಗಿ ಕವಿ ದರ್ಶಿಸಿದ ಕ್ಷೇತ್ರಗಳ, ಸಾಂಸ್ಕೃತಿಕ ವಿಚಾರಗಳನ್ನು ಅನುಲಕ್ಷಿಸಿದ, ಅವರ ಯಾತ್ರಾದರ್ಶನವನ್ನು ಪರಿಚಯಿಸುವ ಪ್ರಯತ್ನ ಮಾಡಲಾಗಿದೆ. ತೀರ್ಥಕ್ಷೇತ್ರಗಳು ಕೇವಲ ಧಾರ್ಮಿಕ ಪ್ರಭಾವದ ಕೇಂದ್ರಗಳಾಗಿರದೆ ಸಾಂಸ್ಕೃತಿಕ ಉಗಮ ಸ್ಥಳಗಳೂ ಹೌದು. ಅವು ವಿಭಿನ್ನ ಸಂಸ್ಕಾರದ ವಿವಿಧ ಸ್ತರದ, ಬಡವ ಬಲ್ಲಿದರ ಸಂಗಮಕ್ಷೇತ್ರಗಳೂ ಹೌದು. ವರ್ಷದ ಎಲ್ಲ ಕಾಲದಲ್ಲೂ ಹರಿಯುವ ಜೀವನದಿಯಂತೆ ತೀರ್ಥಕ್ಷೇತ್ರಗಳು ಎಲ್ಲ ಋತುಗಳಲ್ಲಿಯೂ ಜನಸಮುದಾಯದಿಂದ ಕೂಡಿದ್ದು ಜೇನುಗೂಡುಗಳಂತೆ ಚಟುವಟಿಕೆಯ ತಾಣಗಳಾಗಿರುತ್ತವೆ. ಅಲ್ಲಿ ಜನರು ಕಲೆಯುತ್ತಾರೆ, ಸಂವಾದ ಏರ್ಪಡುತ್ತದೆ, ಜ್ಞಾನ ಪಿಪಾಸುಗಳಿಗೂ, ಸಾಧು ಸಂತರಿಗೂ ಯಾತ್ರಾಸ್ಥಳಗಳು ತೌರುಮನೆಯಂತೆ ಮಾನಸಿಕ ನೆಮ್ಮದಿ ನೀಡುವ ಸನ್ನಿಧಿಗಳಾಗಿವೆ. ಒಂದು ಕಡೆ ಪವಿತ್ರ ದೈವ ಸಾನ್ನಿಧ್ಯ, ಇನ್ನೊಂದು ಕಡೆ ಭಕ್ತರ ಸ್ಫೂರ್ತಿ. ಇದರಿಂದ ಸಾಧು ಸಂತರಿಗೆ, ದಾಸಸಮೂಹಕ್ಕೆ ಹೊಸ ಚೈತನ್ಯ ಮೂಡುವುದಲ್ಲದೆ ಆತ್ಮಶಾಂತಿಯೂ ದೊರೆಯುತ್ತದೆ.

ಇಂದು ಈ ಕ್ಷೇತ್ರಗಳಲ್ಲಿ ಮೇಲಿನ ಚಿತ್ರ ಸ್ವಲ್ಪ ಮಸುಕಾದರೂ ಕನಕದಾಸ, ಪುರಂದರದಾಸರ ಕಾಲದಲ್ಲಿ ಮೇಲೆ ಹೇಳಿದ ಎಲ್ಲ ಅಂಶಗಳಿಗೂ ಈ ಸ್ಥಳಗಳು ಕಾರಣೀಭೂತವಾಗಿದ್ದವು. ಕನಕದಾಸರು, ಕಿರಿಯರಾಗಿದ್ದಾಗ ರಾಜಕೀಯವಾಗಿ ಕೆಲವು ಕ್ಷೇತ್ರಗಳ ಪ್ರವಾಸ ಪರ್ಯಟನ ಕೈಗೊಂಡರು. ದಾಸರ ಪ್ರಮುಖ ಕರ್ತವ್ಯಗಳಲ್ಲಿ ಪುಣ್ಯಕ್ಷೇತ್ರ ಸಂದರ್ಶನವೂ ಒಂದು. ಕನಕದಾಸ ಪುರಂದರದಾಸರನ್ನೂ ಒಳಗೊಂಡಂತೆ ಈ ದಾಸಸಮೂಹ ಊರುಮನೆ ತೊರೆದರೂ ಜನಜಂಗುಳಿಯಿಂದ ದೂರನಿಲ್ಲಲಿಲ್ಲ. ಅವರ ಕೆಲಸ ಎಲ್ಲ ಜನರ ನಡುವೆಯೆ. 'ಬೇರೆ ಬೇರೆ ವೃತ್ತಿಗಳ ಪ್ರವೃತ್ತಿಗಳ ಜನರೊಂದಿಗೆ ಬೆರೆತು

ಊರೂರು ತಿರುಗಿ ಜನರಲ್ಲಿ ಒಂದಾಗಿ ಅವರವರ ಹವ್ಯಾಸಗಳಲ್ಲಿ ತೊಡಗುತ್ತಲೇ ಅವರಿಗೆ ಭಕ್ತಿಯ ಸ್ವಾರಸ್ಯವನ್ನು ಮನಗಾಣಿಸುವುದು ದಾಸರ ಕೆಲಸ. ಜನರ ನಿತ್ಯಜೀವನದಲ್ಲಿ ಕಷ್ಟಕಾರ್ಪಣ್ಯಗಳು ಬಂದಾಗ, ಬದುಕಿನ ಸ್ಥಿತಿಗತಿಗಳನ್ನು ಕುರಿತು ಸಂಶಯವೊದಗಿದಾಗ ಭಕ್ತಿಯ ಊರುಗೋಲನ್ನು ಪಡೆದುಕೊಂಡು ಜನರು ನೆಮ್ಮದಿಯಿಂದಿರಲಿ, ಬಾಳುವೆಗೊಂದು ಪ್ರಯೋಜನವನ್ನು ಪಡೆದುಕೊಳ್ಳಲಿ' ಎನ್ನುವುದೇ ದಾಸರ ಮುಖ್ಯಧ್ಯೇಯಗಳಲ್ಲಿ ಕೆಲವು. ಈ ಉದ್ದೇಶದಿಂದಲೇ ದಾಸರು ಊರೂರು ತಿರುಗಿದರು. ಕೇರಿ ಕೇರಿಗಳಲ್ಲಿ ಅಲೆದಾಡಿದರು. ಮನೆ ಮನೆಗಳ ಮುಂದೆ ನಿಂತು ದೇವರ ಹಿರಿಮೆ ಹಾಡಿದರು. ದಾರಿತಪ್ಪಿದ ಜನರನ್ನು ಎಚ್ಚರಿಸಿದರು. ತಿದ್ದಿದರು, ದಾರಿಕಾಣದ ವರಿಗೆ ದಾರಿ ತೋರಿದರು. ದಾರಿಕಂಡವರಿಗೆ ಹುರಿದುಂಬಿಸಿದರು. ಇತರರಿಗೆ ಆದರ್ಶವಾಗಿ ಸರಳ ಜೀವನಕ್ಕೆ ಮಾದರಿಯಾಗಿ ವಿರಕ್ತಿಯೂ, ಪ್ರವೃತ್ತಿಯೂ ಕಲೆತಿರುವಂತೆ ಬಾಳಿದರು. ಕನಕದಾಸರೂ ಈ ಪವಿತ್ರ ಉದ್ದೇಶದಿಂದಲೇ ತಮ್ಮ ಬದುಕಿನ ತುಂಬು ಅವಧಿಯಲ್ಲಿ ಅನೇಕ ಸ್ಥಳಗಳನ್ನು ಸಂದರ್ಶಿಸಿದರು.

ಕನಕದಾಸರು ಹುಟ್ಟಿಬೆಳೆದ, ಬದುಕಿ ಬಾಳಿದ, ಭವಸಂಸಾರದ ಬವಣೆಗೆ ಸಿಕ್ಕಿ ಬಂಗಾರವಾದ ಅನೇಕ ಸ್ಥಳಗಳೂ ಅವರ ಜೀವನದುದ್ದಕ್ಕೂ ತೆಕ್ಕೆಹಾಕಿಕೊಂಡಿವೆ. ಕೆಲವು ಸ್ಥಳಗಳು ಕನಕದಾಸರ ಸಂಪರ್ಕದಿಂದಲೇ ಐತಿಹಾಸಿಕ ಸಾಂಸ್ಕೃತಿಕ ಸ್ಥಳಗಳಾಗಿ ಪರಿವರ್ತನೆಗೊಂಡರೆ, ಮತ್ತೆ ಕೆಲವು ಅವರ ಸಂದರ್ಶನದಿಂದ ತಮಗಿದ್ದ ಹಿರಿಮೆಯನ್ನು ಉನ್ನತಗೊಳಿಸಿಕೊಂಡಿವೆ.

ಕನಕದಾಸರು ಜನಿಸಿದ ಬಾಡಗ್ರಾಮ, ವಾಸಿಸಿದ ಕದರಮಂಡಲಗಿ, ಅವರ ಸಮಾಧಿ ಇರುವ ಕಾಗಿನೆಲೆ, ರಾಜಕೀಯ ಆಡಳಿತಕ್ಕೆ ಒಳಪಟ್ಟ ಬಂಕಾಪುರ ಇಂದು ಮಂಗಳಕ್ಷೇತ್ರಗಳಾಗಿವೆ. ಬಂಕಾಪುರ ಇತರ ಕಾರಣಗಳಿಗೂ ಒಂಬತ್ತನೆಯ ಶತಮಾನದಿಂದಲೇ ಪ್ರಸಿದ್ಧಿ ಪಡೆದ ಸ್ಥಳ. ಕನಕದಾಸರು ಸಂಚರಿಸಿದ ಬೇಲೂರು, ಸೋಸಲೆ, ಮಳೂರು, ಶ್ರೀರಂಗಪಟ್ಟಣ, ಮದನಪಲ್ಲಿ, ಮೇಲುಕೋಟೆ, ವಿಜಯನಗರ, ಉಡುಪಿ ಹಾಗೂ ತಿರುಪತಿಗಳಲ್ಲಿ ಅವರ ಸ್ಮಾರಕಗಳು ಅಥವಾ ಸವಿನೆನಪುಗಳಿದ್ದು ಕನಕದಾಸರನ್ನು ಚಿರಂಜೀವರನ್ನಾಗಿಸಿವೆ.

ಯೌವನಾವಸ್ಥೆ ಹೊಂದಿದ ತಿಮ್ಮಪ್ಪನಿಗೆ ದಣಾಯಕ ಪದವಿ ದೊರೆಯಿತು. ಆದರೂ ಆತನಲ್ಲಿ ಮನೆಮಾಡಿದ್ದ ಸಂತ ಹೃದಯ, ಒಳಗೆ ಅಡಗಿದ್ದ ಕವಿ ಪ್ರತಿಭೆ ಆಗಾಗ ಆತನನ್ನು ಎತ್ತಲೋ ಕೂಗಿ ಕರೆಯುತ್ತಿದ್ದವು. ವರ್ಷಗಳುರುಳಿದಂತೆ ತಂದೆ–ತಾಯಿಯರ ಮರಣ, ಪತ್ನಿಯ ಅಕಾಲಿಕ ಮೃತ್ಯು,

ಯುದ್ಧದಲ್ಲಿ ಉಂಟಾದ ಪರಾಭವ–ಎಲ್ಲವೂ ಜೊತೆಗೂಡಿ ದಾಸಪರಂಪರೆಗೆ ಒಬ್ಬ ಮಹಾನ್ ದಾಸಶ್ರೇಷ್ಠನನ್ನು, ಸಾಹಿತಿಗಳ ಪಂಕ್ತಿಗೆ ಒಬ್ಬ ಒಳ್ಳೆಯ ಕವಿಯನ್ನೂ ದೊರಕಿಸಿಕೊಟ್ಟವು. ತಿಮ್ಮಪ್ಪ ಕನಕನಾಯಕನಾದುದು, ಕನಕನಾಯಕ ಕನಕದಾಸರಾದುದು ಬಹಿರಂಗ ಸಂಗತಿ.

ಕನಕದಾಸರ ಅಂಕಿತನಾಮಗಳು ಎರಡು. ಒಂದು ಬಾಡದಾದಿ ಕೇಶವ, ಮತ್ತೊಂದು ಕಾಗಿನೆಲೆ ಆದಿಕೇಶವ. ಈ ಎರಡೂ ಸ್ಥಳಗಳು ಕನಕದಾಸರಿಗೆ ಅತ್ಯಂತ ಆತ್ಮೀಯ ಪವಿತ್ರಕ್ಷೇತ್ರಗಳು. ಒಂದು ಹುಟ್ಟೂರು ಬಾಡ, ಮತ್ತೊಂದು ಬೆಳೆದ ಊರು ಕಾಗಿನೆಲೆ. ಓಡಾಡಿದ ಸ್ಥಳವೂ ಒಂದುಂಟು, ಅದು ಬಂಕಾಪುರ. ಕಾಗಿನೆಲೆಯಲ್ಲಿನ ನರಸಿಂಹಸ್ವಾಮಿಯನ್ನು ಭಕ್ತಿಭರದಿಂದ ಸ್ತುತಿಸಿದ್ದಾರೆ. ಬಾಡ, ಕಾಗಿನೆಲೆ– ಈ ಎರಡು ಊರುಗಳಲ್ಲಿಯೂ ಕನಕದಾಸರು ಕೇಶವ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದ್ದಲ್ಲದೆ ಇಲ್ಲಿನ ದೇವರುಗಳ ಪುಣ್ಯನಾಮಗಳನ್ನೇ ತಮ್ಮ ಅಂಕಿತವಾಗಿ ಸ್ವೀಕರಿಸಿದರು. ಈಗಲೂ ಕಾಗಿನೆಲೆಗೆ ಕೊಂಚ ದೂರದಲ್ಲಿರುವ ಕುಮ್ಮೂರು ಎಂಬ ಗ್ರಾಮದಲ್ಲಿ ಕನಕದಾಸರ ವಂಶಸ್ಥರಿದ್ದಾರೆಂದು ತಿಳಿದು ಬರುತ್ತದೆ.

ಕಾಗಿನೆಲೆ ಧಾರವಾಡ ಜಿಲ್ಲೆಯ ಹಾವೇರಿಯಿಂದ ೯ ಮೈಲಿ ದೂರದಲ್ಲಿದೆ. ಹಿಂದೆ ಇದು ಒಂದು ಪರಗಣೆಯಾಗಿ ಅನೇಕ ಗ್ರಾಮಗಳನ್ನು ಒಳಗೊಂಡಿತ್ತು. ಸುಮಾರು ೧೫ ಶಿಲಾಶಾಸನಗಳೂ, ೧೦ ಪುರಾತನ ದೇವಾಲಯಗಳೂ ಇವೆ. ಒಮ್ಮೆ ಬನವಾಸಿ ಕದಂಬರ, ಮತ್ತೊಮ್ಮೆ ಬನವಾಸಿ ಚಾಳುಕ್ಯರ ಮಗದೊಮ್ಮೆ ದೇವಗಿರಿಯ ಯಾದವರ ಆಡಳಿತಕ್ಕೆ ಒಳಪಟ್ಟಿತ್ತು. ಚಾಳುಕ್ಯರ ಭುವನೈಕಮಲ್ಲ, ದೇವಗಿರಿಯ ಯಾದವರು ಇಲ್ಲಿನ ದೇವಾಲಯಗಳಿಗೆ ದತ್ತಿ–ದಾನಗಳನ್ನು ಕೊಟ್ಟಿದ್ದಾರೆ. ಅನಂತರ ವಿಜಯನಗರ ಕೃಷ್ಣದೇವರಾಯನ ಕಾಲದಲ್ಲಿ ಕನಕನಾಯಕ ಇದರ ದಣಾಯಕರಾಗಿ ವಿಜಯನಗರದ ಮಾಂಡಲಿಕರಾಗಿದ್ದರು. ಮಲೆನಾಡಿನ ಅಂಚಿನಲ್ಲಿರುವ ಇದರ ಪ್ರಕೃತಿ ಸೌಂದರ್ಯವನ್ನು ಆಂಡಯ್ಯ ಮತ್ತು ಕನಕದಾಸರು ಬಣ್ಣಿಸಿದ್ದಾರೆ. ಈ ವರ್ಣನೆಯನ್ನು ಚಾಳುಕ್ಯರ ಮತ್ತು ಯಾದವರ ಶಾಸನಗಳಲ್ಲಿಯೂ ಕಾಣಬಹುದು.

ಪ್ರಾಚೀನ ಕಾಲದಿಂದಲೂ ಇದು ಧಾರ್ಮಿಕ ಕೇಂದ್ರವಾಗಿ ಬೆಳೆದು ಬಂದಿದೆ. ಜೈನ, ವೈಷ್ಣವ, ಶೈವ–ವೀರಶೈವ ಸಂಸ್ಕೃತಿಗಳ ಸಂಗಮ ಇದಾಗಿತ್ತು. ಲಕ್ಷ್ಮೀನರಸಿಂಹ ಆದಿಕೇಶವ, ಕಾಳಹಸ್ತೀಶ್ವರ, ವೀರಭದ್ರ, ಸೋಮೇಶ್ವರ, ಬ್ರಹ್ಮೇಶ್ವರ,

ಸಂಗಮೇಶ್ವರ, ಬಸವಣ್ಣ, ಆದಿಶಕ್ತಿ–ಇವು ಇಲ್ಲಿನ ಪ್ರಮುಖ ದೇವಾಲಯಗಳು. ಇಲ್ಲಿನ ಮುಖ್ಯ ದೇವಾಲಯಗಳು ಆದಿಕೇಶವ, ನರಸಿಂಹ. ೧೬ನೆಯ ಶತಮಾನದಲ್ಲಿ ಆದಿಕೇಶವನ ಮೂರ್ತಿಯನ್ನು ಕನಕದಾಸರು ಬಾಡ ಗ್ರಾಮದಿಂದ ತಂದು ಪ್ರತಿಷ್ಠಾಪಿಸಿದರೆಂಬ ಐತಿಹ್ಯವಿದೆ. ಆದಿಕೇಶವನ ಮೂರ್ತಿ ಒಂದೂವರೆ ಅಡಿ ಎತ್ತರವಾಗಿದೆ. ಇಲ್ಲಿಯ ಕೆರೆಯದಂಡೆಯ ಮೇಲೆ ಕನಕದಾಸರ ಸಮಾಧಿಯಿದೆ. ಸುಮಾರು ೯ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ಧಾರ್ಮಿಕ, ಸಾಂಸ್ಕೃತಿಕ ಕೇಂದ್ರವಾಗಿದ್ದ ಇದು ಅನಂತರ ಮುಸ್ಲಿಂ ಆಳ್ವಿಕೆಗೆ ಒಳಪಟ್ಟು ಅದರ ಚಟುವಟಿಕೆಗಳೆಲ್ಲಾ ನಿಂತು ಹೋದುವು.

ಬಂಕಾಪುರ ಕನಕನಾಯಕರ ನಾಡಗೌಡಿಕೆಗೆ ಒಳಪಟ್ಟ ಊರಾಗಿತ್ತು. ಇಲ್ಲಿ ಹಳೇಕೋಟೆಯೂ, ಎರಡು ಹಳೇ ದೇವಸ್ಥಾನಗಳೂ ಇವೆ. ನಗರೇಶ್ವರ ಸಿದ್ದೇಶ್ವರ ದೇವಾಲಯಗಳಲ್ಲಿ ನಗರೇಶ್ವರ ದೇವಾಲಯ ೬೦ ಕಂಬಗಳನ್ನು ಹೊಂದಿದೆ. ಈ ದೇವಾಲಯದಲ್ಲಿ ಅನೇಕ ಹಳೆಯ ಶಾಸನಗಳಿವೆ. ಈ ಊರು ಹಿಂದೆ ಜೈನ ವಿದ್ಯಾ ಕೇಂದ್ರವಾಗಿದ್ದು ಅನಂತರ ಶೈವ ವಿದ್ಯಾಕೇಂದ್ರವಾಯಿತೆಂದು ತಿಳಿದು ಬರುತ್ತದೆ. ರಾಷ್ಟ್ರಕೂಟ ಒಂದನೇ ಅಮೋಘವರ್ಷನ ಸಾಮಂತ ಬಂಕೆಯರಸನ ಹೆಸರೇ ಈ ಊರಿಗೆ ಬಂದಿದೆ ಎಂದು ತಿಳಿದುಬರುತ್ತದೆ.

ವಿರಕ್ತಿ ಹೊಂದಿ, ದೇವ ಸಂಕೀರ್ತನೆ ಹಾಡುತ್ತಾ ಹೊರಟ ಕನಕನಾಯಕರು ತಿರುಮಲಕೂಡಲು ನರಸೀಪುರದ ಸೋಸಲೆಯನ್ನು ತಲುಪಿದರು. ಇದು ಮಾಧ್ವರ ಸುಪ್ರಸಿದ್ಧ ಧಾರ್ಮಿಕ ಕ್ಷೇತ್ರ. ವ್ಯಾಸರಾಯ ಸಂಸ್ಥಾನ ಮಠವಿದ್ದು ಸಾಂಸ್ಕೃತಿಕ ಕೇಂದ್ರವೂ ಆಗಿದ್ದ ಈ ಮಠದಲ್ಲಿ ತಮಿಳು, ತೆಲುಗು, ನಾಗರಿ, ಕನ್ನಡ ಲಿಪಿಗಳಲ್ಲಿ ಬರೆದ ಅನೇಕ ತಾಮ್ರಶಾಸನಗಳು ಇವೆ. ವಿಜಯನಗರದ ದೊರೆಗಳು, ಮಧುರೆಯ ನಾಯಕರು ಈ ತಾಮ್ರಶಾಸನಗಳನ್ನು ಬರೆಯಿಸಿ ಕೊಟ್ಟಿದ್ದಾರೆ. ಈ ಮಠದ ಗುರು ಪರಂಪರೆ ಇಂದಿಗೂ ಪ್ರತಿವರ್ಷವೂ ವಿದ್ವತ್‌ಸಭೆಗಳನ್ನು ಏರ್ಪಡಿಸಿ ವಿದ್ವಾಂಸರನ್ನು ಗೌರವಿಸುತ್ತದೆ. ಕನಕದಾಸರ ನೆನಪಿಗಾಗಿ ಸ್ಮಾರಕವನ್ನು ಪ್ರತಿಷ್ಠಾಪಿಸಿರುವುದು ಸೋಸಲೆಯ ಹಿರಿಮೆಯನ್ನು ದ್ವಿಗುಣಗೊಳಿಸಿದೆ. ಸೋಸಲೆ ವ್ಯಾಸರಾಯರ ಮಹತ್ವಕ್ಕೆ ಹೆಸರಾದಂತೆ ಕನಕದಾಸರ ಹಿರಿಮೆಗೂ ಪ್ರಸಿದ್ಧವಾಗಿದೆ.

ತನ್ನ ದರ್ಶನಾಕಾಂಕ್ಷಿಯಾಗಿ ಬಂದು ಬದ್ಧಾಂಜಲಿಯಾಗಿ ನಿಂತ ಕನಕನಾಯಕನ ಸಾತ್ವಿಕ ಸ್ವಭಾವ, ನಿರ್ಭರ ಭಕ್ತಿ, ತೀಕ್ಷ್ಣಪ್ರತಿಭೆಯನ್ನು ಗುರುತಿಸಿದ ವ್ಯಾಸರಾಯರು ಕನಕನಾಯಕನನ್ನು ಪ್ರೀತ್ಯಾದರಗಳಿಂದ ಮಾತನಾಡಿಸಿ ತಮ್ಮ

ಶಿಷ್ಯನನ್ನಾಗಿ ಸ್ವೀಕರಿಸಿದರು. ಕನಕನಾಯಕ ತನ್ಮೂಲಕ ಕನಕದಾಸರಾದರು. ವ್ಯಾಸರಾಯರು ಕನಕದಾಸರಿಗೆ ತಮ್ಮ ಮಠದಲ್ಲಿಯೇ ಇದ್ದು ತಮ್ಮೊಡನೆ ಆಗಾಗ ವಿವಿಧ ಪ್ರಮುಖ ಸ್ಥಳಗಳಿಗೆ ಸಂಚಾರ ಕೈಗೊಳ್ಳಬೇಕೆಂದು ಆದೇಶಿಸಿದರು. ವೇದ, ಇತಿಹಾಸ, ಪುರಾಣಗಳ ಸಾರವನ್ನು ವ್ಯಾಸರಾಯರಿಂದ ಪಡೆಯುವುದರ ಮೂಲಕ ಕನಕದಾಸರ ಸದ್ಗುಣಗಳು ಪುಟಕ್ಕಿಟ್ಟ ಬಂಗಾರವಾಯಿತು, ಕನಕ ಅಪರಂಜಿಯಾಯಿತು, ಮಹಾತತ್ವಜ್ಞಾನಿಯಾಗಿ, ಪಂಡಿತನಾಗಿ, ವಿರಕ್ತ ಶಿಖಾಮಣಿಯಾಗಿ, ಕವಿಯಾಗಿ ಕನಕದಾಸರು ತ್ರಿವಿಕ್ರಮನಂತೆ ಬೆಳೆದರು.

ವ್ಯಾಸರಾಯರ ಅಪೇಕ್ಷೆಯಂತೆ ಅವರ ಜೊತೆಯಲ್ಲಿ ಕನಕದಾಸರು ಚಿತ್ತೂರು ಜಿಲ್ಲೆ ಮದನಪಲ್ಲಿಗೆ ಪ್ರಯಾಣ ಬೆಳೆಸಿದರು. ಮದನಪಲ್ಲಿಯ ಸಮೀಪ ಕುಂದಕೂರು ಎಂಬ ಊರಿನ ಶ್ರೀಮಠದ ಸಮೀಪದಲ್ಲಿ 'ವ್ಯಾಸಸಮುದ್ರ'ವೆಂಬ ಹೆಸರಿನ ಕೆರೆಯೊಂದು ಇಂದಿಗೂ ಪ್ರಸಿದ್ಧವಾಗಿದೆ. ಇದು ವ್ಯಾಸರಾಯರ ಮೇಲ್ವಿಚಾರಣೆಯಲ್ಲಿ ನಿರ್ಮಾಣಗೊಂಡ ನೀರ್ದಾಣವಾಗಿದೆ. ಕೆರೆಯ ನಿರ್ಮಾಣದ ಹಂತದಲ್ಲಿ ಕನಕದಾಸರ ಸಹಾಯ ವಿಶೇಷವಾಗಿ ದೊರೆತದ್ದು ಐತಿಹಾಸಿಕ ದಾಖಲೆಯಾಗಿದೆ. 'ಕುರುಬನಿಗೆ ಕೋಣ ಮಂತ್ರ'–ಎನ್ನುವ ವ್ಯಂಗ್ಯ ಬೆರೆತ ಧ್ವನಿಯಲ್ಲಿ ಭಕ್ತಿ ಪಾರಮ್ಯದ ಮಹತ್ವವೂ ಅಡಗಿರುವುದನ್ನು ಗುರುತಿಸಬಹುದು. ಕನಕದಾಸರು ಜಪಿಸಿದ ಕೋಣಮಂತ್ರದಿಂದ ಕೋಣಬಂದು, ಬಂಡೆಸರಿದು ನಿರ್ಮಾಣಗೊಂಡ ತೂಬು ಇಂದಿಗೂ 'ಕೋಣನತೂಬು' ಎಂದು ಪ್ರಸಿದ್ಧಿ ಪಡೆದು ಜನ ಭಕ್ತಿಭಾವದಿಂದ ಗುರುತಿಸುವುದನ್ನು ಕಾಣಬಹುದು. ಈ ವಿಚಾರವನ್ನು ಶ್ರೀ ವ್ಯಾಸರಾಜಮಠದ ಪೀಠಸ್ಥರಾಗಿದ್ದ, ಶ್ರೀ ವಿದ್ಯಾರತ್ನಾಕರ ತೀರ್ಥಸ್ವಾಮಿಗಳು ತಮ್ಮಿಂದ ರಚಿತವಾದ 'ಶ್ರೀವ್ಯಾಸರಾಜ ಚರಿತೆ'ಯಲ್ಲಿ ಈ ರೀತಿ ನುಡಿದಿದ್ದಾರೆ :

> ನಿರ್ಮಾಯಾತ್ರ ತಟಾಕ ಮೇಷಯತಿರಾಟ್
> ಪ್ರತ್ಯೂಹ ಮಾಭಃಸೃತೌ ।
> ಭೂದ್ರಂ ಕಂಚನ ಕಾಲವಾಹನ ಬೃಹ ।
> ಚ್ಛಂಗಾಗ್ರತೋಭೀಭಿದತ್
> ಏವಂ ಸ್ವಂ ಮಹಿಮಾನಮದ್ಭುತಮಿಳಾದೇವೇಷು ಸಂದರ್ಶಯನ್
> ಅಧ್ಯಸ್ತಾವನಿಮಾವಿಳಂಬಿಶರದಂ ತ್ರ್ಯಷ್ಟ್ಯಾದಶಾಹಂ ಸುಧೀಃ ।

ಕನಕದಾಸರು ತಮ್ಮ ಪ್ರವಾಸ ಪರ್ಯಟನ ಸಂದರ್ಭದಲ್ಲಿ ಸಂದರ್ಶಿಸಿದ ಅನೇಕ ಕ್ಷೇತ್ರಗಳಲ್ಲಿ ಮಳೂರು ಒಂದು. ಚನ್ನಪಟ್ಟಣದ ಸಮೀಪದ ಕಣ್ವನದಿಯ ದಂಡೆಯಲ್ಲಿರುವ ಮಳೂರು ಈಗ ಒಂದು ಕುಗ್ರಾಮವಾಗಿದೆ. ಆದರೆ

ಕನಕದಾಸರ ಕಾಲದಲ್ಲಿ ಅದೊಂದು ಪಟ್ಟಣವಾಗಿತ್ತು. ಈ ಊರನ್ನು 'ರಾಜೇಂದ್ರಸಿಂಹ ನಗರ' ಎಂದು ಕರೆಯುವುದೂ ಉಂಟು. ಇಲ್ಲಿ ಚೋಳರ ಶಾಸನಗಳೂ, ಜೀರ್ಣವಾದ ದೇವಸ್ಥಾನಗಳೂ ಇವೆ. ಯಾಜ್ಞವಲ್ಕ್ಯ ಸ್ಮೃತಿಯ ಮೇಲೆ 'ಮಿತಾಕ್ಷರಾ' ಎಂಬ ಭಾಷ್ಯ ಗ್ರಂಥವನ್ನು ಬರೆದ ವಿಜ್ಞಾನೇಶ್ವರ ಯೋಗಿಯು ತನ್ನ ಗ್ರಂಥವನ್ನು ಇಲ್ಲೇ ರಚಿಸಿದನು. ಊರಿನ ನಡುವೆ ಇರುವ ವಿಷ್ಣು ದೇವಾಲಯ ಭವ್ಯವಾದುದು, ಅದರ ಸನ್ನಿಧಿಯ ಸ್ವಾಮಿಗೆ ಅಪ್ರಮೇಯ ಸ್ವಾಮಿಯೆಂದು ಹೆಸರು. ದೇಗುಲದ ಹಿರಿಮೆ ಎಂದರೆ ಇಲ್ಲಿರುವ ಅಂಬೆಗಾಲು ಕೃಷ್ಣನ ಸುಂದರ ವಿಗ್ರಹ. ಇದು ತುಂಬಾ ಅಪರೂಪದ ಮೂರ್ತಿ. ಇದನ್ನು ಕಂಡೇ ಕನಕದಾರು ಹೀಗೆ ಹಾಡಿರಬೇಕು. ;

ನೆನಯೊ । ಎಲೆ ನವನೀತ ಕೃಷ್ಣನ ॥ ಪ ॥
ನೆನೆಯೊ । ಗೋಪಿತನಯ । ಕಂಸನ ಮನೆಯ ಕೊಂಡಾತನ ॥ ಅ ॥
ತರಳ । ಚೆಲುವ ಮುಂಗುರಳ ।
ಹುಲಿಯುಗರ ಕೊರಳ ॥
ಉಂಗುರಗಳ ಬೆರಳ ।
ಕಾಳಿಗಿ ಕಟ್ಟಣಗಳ
ನಿಲುಹುತಿಹ ದುರುಳ ।
ತನದಲಿ ತುರುಗಳ ಕಾಯ್ದವನ... ॥ ೧ ॥

ಈ ಹಾಡು ಅಪ್ರಮೇಯನ ಚಿತ್ರವನ್ನು ಕಣ್ಣಿಗೆ ಕಟ್ಟಿದೆ.

ಕದರಮಂಡಲಗಿ ಕನಕದಾಸರ ಬಾಲ್ಯದ ಬೀಡು. ಕೆಲವರು ಕನಕದಾಸರ ಸಮಾಧಿ ಕದರಮಂಡಲಗಿಯಲ್ಲಿ ಆಗಿದೆ ಎನ್ನುವರು. ಕದರಮಂಡಲಗಿಯ ಹನುಮರಾಯ ಕನಕದಾಸರ ಭಕ್ತಿಭಾವಕ್ಕೆ ಒಂದು ಸ್ಫೂರ್ತಿದೈವ. ಹನುಮಂತನ ಅನಂತ ಗುಣಗಳನ್ನು ಸಾರುವ ಕನಕರ ಕೀರ್ತನೆ ಹೀಗಿದೆ :

ಕದರಮಂಡಲಗಿ ಕರುಣಿ ಹನುಮರಾಯ ।
ಸದುಗುಣವಂತನೆ । ಗುಣವಂತನೆ ।
ಅಂಜನೆಯ ವರಸೂನು । ಆಶ್ರಿತ ಕಾಮಧೇನು
ಮಂಜುಳ ಸುಗಾನ ಗೀತ । ಪರಮ ವಿಖ್ಯಾತ
ಸಂಜೀವನವ ತಂದನು । ವೀರ ಹನುಮನು
ಸದುಗುಣವಂತನೆ । ಗುಣವಂತನೆ ॥
.......................................................
ಶ್ರೀನಿಧೇ ಆದಿಕೇಶವ ಎನ್ನ ಜನಕ ॥

ಮುಂದೆ ಕನಕದಾಸರು ಕನಕಗಿರಿಯ ಲಕ್ಷ್ಮೀನರಸಿಂಹನ ದರ್ಶನ ಪಡೆದಂತೆ ತಿಳಿಯುತ್ತದೆ.

ಎಂತಹುದೋ ನಿನ್ನ ಭಕುತಿ ಎನಗೆ ಶ್ರೀ
ಕಾಂತ ನಿನ್ನಯ ಒಲುಮೆಯಿಲ್ಲದ ಮೂಢಾತ್ಮನಿಗೆ ॥ಪ॥

........................................................

ಇನಿತು ಪರಿಯಲಿ ನಾನು ಹಲುಬಿದಡೆ ।
ನೀನು ಸುಮ್ಮನಿದ್ದಡೆ ಬಹು ಅಪಕೀರ್ತಿಯು ॥
ನಿನ್ನ ದಾಸಗೊಲಿದು ಸಲಿಸಯ್ಯ ಮನದಿಷ್ಟ
ಕನಕಾದ್ರಿಯೊಳು ನೆಲಸಿದಾದಿ ಕೇಶವರಾಯ ॥

ಸ್ಕಾಂದಪುರಾಣದ ಪ್ರಕಾರ ಹಂಪೆಯಿಂದ ಉತ್ತರಕ್ಕೆ ಸುಮಾರು ಇಪ್ಪತ್ತು ಮೈಲಿ ದೂರದಲ್ಲಿ ಸುವರ್ಣಗಿರಿಯೆಂಬ ಕ್ಷೇತ್ರ, ಪುಷ್ಪಾ ಮತ್ತು ಜಯಂತಿ ನದಿಗಳ ನಡುವೆ ಇದ್ದಿತು. ಇದೇ ಈಗ ರಾಯಚೂರು ಜಿಲ್ಲೆ ಗಂಗಾವತಿ ತಾಲ್ಲೂಕಿಗೆ ಸೇರಿದ ಕನಕಗಿರಿ ಅಥವಾ ಕನಕಾಚಲ. ವಿಜಯನಗರದ ಅರಸನಾಗಿದ್ದ ಇಮ್ಮಡಿ ದೇವರಾಯನ ಸಾಮಂತನಾಗಿದ್ದ ಪರಸಪ್ಪ ಉಡಿಚನಾಯಕನು ಇಲ್ಲಿ ಲಕ್ಷ್ಮೀನರಸಿಂಹ ದೇವಾಲಯವನ್ನು ಕಟ್ಟಿಸಿದ್ದಾನೆ. ಕ್ರಿ. ಶ. ೧೪೩೬–೩೭ ರಲ್ಲಿ ವಿಜಯನಗರದ ಅರಸರು ಈ ದೇವಾಲಯದ ಅಭಿವೃದ್ಧಿಗೆ ಕಾರಣರಾದರು ಪರಸಪ್ಪನ ಮಗ ನವಾಬ ಉಡಿಚನಾಯಕನು ಕೃಷ್ಣದೇವರಾಯನ ಮಾಂಡಲಿಕನಾಗಿದ್ದನು. ಕೃಷ್ಣದೇವರಾಯನ 'ಆಮುಕ್ತಮೌಲ್ಯದ' ಎಂಬ ಕಾವ್ಯದಲ್ಲಿ ಕನಕಗಿರಿಯ ಉಲ್ಲೇಖವಿದೆ. ಇಲ್ಲಿಯ ಮುಖ್ಯ ದೇವಾಲಯದ ದೈವವಾದ ನರಸಿಂಹನಿಗೆ 'ಕನಕಗಿರಿನಾಥಸ್ವಾಮಿ' ಎಂಬ ಹೆಸರಿದ್ದಿತು. ಇದಲ್ಲದೆ ಇಲ್ಲಿ ನೂರಾರು ದೇವಾಲಯಗಳಿದ್ದುವೆಂಬ ಪ್ರತೀತಿಯಿದೆ. ಇಲ್ಲಿಯ ಲಕ್ಷ್ಮೀನರಸಿಂಹ ಕನಕದಾಸರಿಗೆ ಅವತಾರಪುರುಷನಾಗಿ ಕಂಡಿದ್ದರೆ ಆಶ್ಚರ್ಯವಿಲ್ಲ ಭವಸಂಸಾರ ಬಂಧನದಿಂದ ತನ್ನನ್ನು ವಿಮುಕ್ತಗೊಳಿಸೆಂದು ಆತನನ್ನು ಸ್ತುತಿಸಿದ್ದಾರೆ.

ರಂಗನಾಥನ ಪುಣ್ಯ ಸ್ಥಳಗಳಲ್ಲಿ ಒಂದಾದ ಶ್ರೀರಂಗಪಟ್ಟಣಕ್ಕೆ ಕನಕದಾಸರ ಸಂದರ್ಶನ ವಿಶೇಷವೆನಿಸಿದೆ. ಹತ್ತಾರು ಕೀರ್ತನೆಗಳಲ್ಲಿ ರಂಗನಾಥನ ಅಪೂರ್ವಗುಣಗಳನ್ನು ಹಾಡಿ ವಿಶೇಷ ಮಹಿಮೆಗಳನ್ನು ಕೊಂಡಾಡಿದ್ದಾರೆ.

ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ । ಜಗ ॥ಪ॥
ದೇಕ (ಶ)ವಿಖ್ಯಾತ ಪಶ್ಚಿಮ ರಂಗನಾಥ ॥ಅ॥

.............................................................

ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ ।
ನಿನ್ನನೆಬ್ಬಿಸುವರೊಬ್ಬರನು ಕಾಣೆ ॥
ಉನ್ನತ ಕಾಗಿನೆಲೆಯಾದಿ ಕೇಶವರಾಯ ।
ಚೆನ್ನ ಶ್ರೀರಂಗಪಟ್ಟಣದ ರಂಗಧಾಮ ॥೫॥

ಮಲಗಿದ ರಂಗ ಇಲ್ಲಿ ಯಾರೂ ಅಲ್ಲ. ತುಳಿಯಲ್ಪಟ್ಟ ಜನತೆಯ ಸಂಕೇತ–ಅವರಾಗಿ ಅವರೇ ಮೇಲೇಳಬೇಕೇ ಹೊರತು, ಎದ್ದಿರುವವರು ಅವರನ್ನು ಎಬ್ಬಿಸುವುದಿಲ್ಲ ಎನ್ನುವ ಎಚ್ಚರಿಕೆಯ ಧ್ವನಿಯೂ ಇಲ್ಲಿ ಅಡಗಿದೆ.

ನಿನ್ನ ನಾನೇನೆಂದೆನೊ । ರಂಗಯ್ಯ ರಂಗ । ಎನ್ನ ನೀ ಕಾಯಬೇಕೊ ॥ಪ॥
ನಿನ್ನ ನಾನೇನೆಂದೆ ನಿಗಮಗೋಚರ ಸ್ವಾಮಿ ।
ಪನ್ನಂಗಶಯನ ಪಾಲ್ಗಡಲೊಡೆಯನೆ ರಂಗ ॥
'ಶೇಷಶಯನ ನಿನ್ನ ಪರಮ ಭಾಗವತರ ಸಹ ।
ವಾಸದೊಳಿರಿಸು ಕಂಡ್ಯ ಎನ್ನನು'

ರಂಗನಾಥನನ್ನು ಕುರಿತು ಇಂಥ ಇನ್ನೂ ಹತ್ತಾರು ಕೀರ್ತನೆಗಳು ಅನುಭಾವ ಸಾಹಿತ್ಯಕ್ಕೆ ತೀರಾ ಹತ್ತಿರವಾಗಿವೆ.

ಕನಕದಾಸರನ್ನು ಮುಗ್ಧಗೊಳಿಸಿದ ಶ್ರೀರಂಗನಾಥ ಇರುವ ಶ್ರೀರಂಗಪಟ್ಟಣ ಸಾಹಿತ್ಯಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಐತಿಹಾಸಿಕ ಸ್ಥಳವಾಗಿದೆ. ಮೈಸೂರಿನಿಂದ ಒಂಬತ್ತು ಮೈಲಿ ದೂರದಲ್ಲಿರುವ ಶ್ರೀರಂಗಪಟ್ಟಣ ಆದಿರಂಗವೆಂದು ಪ್ರತೀತಿ ಪಡೆದಿದೆ. ಕಾವೇರಿನದಿ ಇಲ್ಲಿ ಇಬ್ಭಾಗವಾಗಿ ಹರಿದು ಮತ್ತೆ ಸೇರಿಕೊಳ್ಳುತ್ತದೆ. ಶ್ರೀರಂಗವು ಪೂರ್ವರಂಗವಾದರೆ ಶ್ರೀರಂಗಪಟ್ಟಣವು ಪಶ್ಚಿಮರಂಗ, ಇಲ್ಲಿನ ರಂಗನಾಥಸ್ವಾಮಿಯನ್ನು ಗೌತಮ ಋಷಿಯು ಪ್ರತಿಷ್ಠೆ ಮಾಡಿದನಾಗಿ ಇದು ಗೌತಮ ಕ್ಷೇತ್ರವೆಂದು ಹೆಸರಾಗಿದೆ. ರಂಗನಾಥನ ಆಲಯವನ್ನು ಮೊದಲು ಕಟ್ಟಿಸಿದವಳು ಹಂಬಿ ಎಂಬ ದೇವದಾಸಿ. ೮೧೭ರಲ್ಲಿ, ಮುಂದೆ ೮೯೪ರಲ್ಲಿ ತಲಕಾಡು ಗಂಗವಂಶದ ತಿರುಮಲಯ್ಯ (ತಿಮ್ಮರಾಯ) ಎಂಬ ಅರಸನು ಈ ದೇವಾಲಯವನ್ನು ವಿಸ್ತರಿಸಿದನು. ಇದು ಈಗಿನ ಸ್ವರೂಪವನ್ನು ತಳೆದದ್ದು ೧೨೦೦ರ ಸುಮಾರಿಗೆ ; ಹೊಯ್ಸಳ ರಾಜನಾದ ಉದಯಾದಿತ್ಯನ ಆಸಕ್ತಿಯಿಂದ. ರಂಗನಾಥನ ಪಾದದ ಬಳಿ ಕಾವೇರಿಯ ಮೂರ್ತಿಯಿದೆ. ಈ ಗುಡಿಯಲ್ಲಿರುವ ಶ್ರೀನಿವಾಸನ ಸನ್ನಿಧಿಯನ್ನು ವ್ಯಾಸರಾಯ ಸ್ವಾಮಿಗಳೇ ಏರ್ಪಡಿಸಿದರೆಂದು ತಿಳಿದು ಬರುತ್ತದೆ. ವ್ಯಾಸರಾಯರ ಜೊತೆಗೂಡಿ

ಸಂದರ್ಶಿಸಿದ ಕನಕದಾಸರ ಕ್ಷೇತ್ರಗಳಲ್ಲಿ ಶ್ರೀರಂಗಪಟ್ಟಣವೂ ಸೇರಿದೆ.

ಶ್ರೀರಂಗಪಟ್ಟಣದ ಸಮೀಪವೇ ಇರುವ ಮೇಲುಕೋಟೆ, ಚೆಲುವರಾಯ ಸನ್ನಿಧಿಯಿಂದ ಅಧ್ಯಾತ್ಮಕವಿ ಕನಕದಾಸರನ್ನು ಸಹಜವಾಗಿಯೇ ಸೆಳೆದಿದೆ

ಯಾದವಗಿರಿ ವಾಸನಹುದೊ ಶ್ರೀನಾರಸಿಂಹ ।
ಆದಿನಾರಾಯಣ ಅಚ್ಯುತನಹುದೋ ॥ಪ॥

ಈ ಕೀರ್ತನೆಯಲ್ಲಿ ಭಗವಂತನ ದಶಾವತಾರದ ವರ್ಣನೆಯಿದೆ. 'ನಳಿನೋದ್ಭವನಯ್ಯ ಅಮರ ಚೆನ್ನಿಗರಾಯ, ಕರುಳಗಳ ಬಗೆಯುತ ತುಳಿದರದಟಗಳ ಸಂಹರಿಸಿದ ಚೆಲುವರಾಯ', 'ಚಂದ್ರನೆರೆಯಪೋಲ್ವ.... ಇಂದಿರೇಶನೆಲೆಯಾದಿ ಕೇಶವರಾಯ' ಇವೆಲ್ಲ ಭಗವಂತನ ಅನಂತ ಲೀಲೆಯನ್ನು ಕೊಂಡಾಡುವ ಕೃತಿಗಳಾಗಿವೆ. ಕನಕದಾಸರು ಸಂದರ್ಶನಗೊಂಡ ಮೇಲುಕೋಟೆ ಪಾಂಡವಪುರ ತಾಲ್ಲೂಕಿನ ಒಂದು ಪ್ರಸಿದ್ಧ ಯಾತ್ರಾಸ್ಥಳ. ಈ ಊರಿಗೆ ಯಾದವಗಿರಿ, ಯದುಗಿರಿ ಎಂಬ ಹೆಸರೂ ಇದೆ. ಯದುಗಿರಿ ಇದೊಂದು ಬೆಟ್ಟ. ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ರಾಮಾನುಜಾಚಾರ್ಯರು ತಮಿಳುನಾಡಿನಿಂದ ಇಲ್ಲಿಗೆ ಬಂದು ನೆಲೆಸಿ ವೈಷ್ಣವಧರ್ಮವನ್ನು ಪ್ರಸಾರ ಮಾಡಿದರು. ಹನ್ನೆರಡನೆಯ ಶತಮಾನದಿಂದ ಪ್ರಸಿದ್ಧಿ ಪಡೆದ ಈ ಊರು ಶ್ರೀ ವೈಷ್ಣವರಿಗೆ ತುಂಬಾ ಆತ್ಮೀಯ ಭಕ್ತಕ್ಷೇತ್ರವಾಗಿದೆ. ಇಲ್ಲಿಯ ದೇವರನ್ನು ಚೆಲುವನಾರಾಯಣನೆಂದೂ, ಚೆಲುವ ಚೆನ್ನಿಗನೆಂದೂ, ಶೆಲ್ವಪಿಳ್ಳೆ ಎಂದೂ ಕರೆಯುತ್ತಾರೆ. ಮೇಲುಕೋಟೆಯ ಬೆಟ್ಟದ ಮೇಲೆ ತುಂಬ ಪ್ರಾಚೀನವಾದ ನರಸಿಂಹಸ್ವಾಮಿಯ ಒಂದು ದೇವಾಲಯವಿದೆ. ಆದರೆ ಇಲ್ಲಿಯ ಜನಪ್ರಿಯ ದೈವ ಚೆಲುವನಾರಾಯಣಸ್ವಾಮಿಯೇ. ಈ ದೇವಾಲಯಕ್ಕೆ ಮೈಸೂರಿನ ರಾಜಮನೆತನದವರು ಹೆಚ್ಚಿನ ಸೇವೆ ಸಲ್ಲಿಸಿದ್ದಾರೆ. ಇಲ್ಲಿ ನಡೆಯುವ ರಾಜಮುಡಿ, ವೈರಮುಡಿ ಉತ್ಸವಗಳು ತುಂಬ ಪ್ರಸಿದ್ಧಿ ಪಡೆದ ಉತ್ಸವಗಳು. ಬೆಟ್ಟದ ಮೇಲೆ ಶ್ರೀ ವೈಷ್ಣವ ಸಂಪ್ರದಾಯದ ಯತಿರಾಜ ಸ್ವಾಮಿಗಳ ಮಠವೂ ಒಂದಿದೆ. ಕೆಳಗಡೆ ದೂರದಲ್ಲಿ ತೊಣ್ಣೂರಿನಲ್ಲಿ ಮೋತಿತಾಲಾಬ್ ಎಂಬ ಹೆಸರಿನ ರಮಣೀಯ ಕೊಳವಿದೆ. ಚೆಲುವ ಚೆನ್ನಿಗರಾಯ, ಚಲುವರಾಯ, ನಾರಸಿಂಹ ಎನ್ನುವ ಹೆಸರುಗಳಿಂದ ಇಲ್ಲಿನ ದೈವಗಳನ್ನು ಅನನ್ಯ ಭಕ್ತಿಯಿಂದ ಕನಕದಾಸರು ಕೊಂಡಾಡಿದ್ದಾರೆ.

ಮುಂದೆ ಸಂತ ಕನಕದಾಸರು ಬೇಲೂರನ್ನು ಸಂದರ್ಶಿಸಿದರು. ಹರಿಭಕ್ತಿಸಾರ, ನಳಚರಿತೆ ಹಾಗೂ ರಾಮಧಾನ್ಯಚರಿತೆಯನ್ನು ಇವರು ಇಲ್ಲಿಯೇ

ರಚಿಸಿರಬೇಕೆಂಬ ಅಭಿಪ್ರಾಯವಿದೆ. ಹರಿಭಕ್ತಿಸಾರದ ಅನೇಕ ಪದ್ಯಗಳು "ಭೂಸುರಪ್ರಿಯ ಸುರಪುರ ನಿಲಯ ಚೆನ್ನಿಗರಾಯ ಚತುರೋಪಾಯ ರಕ್ಷಿಸು ನಮ್ಮನನವರತ' ಎಂದು ಅಂತ್ಯಗೊಳ್ಳುತ್ತವೆ. ಹರಿಭಕ್ತಿಸಾರದ ಮೊದಲ ಹದಿನೇಳು ಪದ್ಯಗಳಲ್ಲಿ ಶ್ರೀ ಹರಿಯ ಅನಂತ ಗುಣಗಳ ದರ್ಶನವಾಗುತ್ತದೆ. 'ಮಂಗಳಾ ಬೇಲೂರು ಚೆಲುವರಾಯ ಕೇಶವಗೆ' ಎಂದು ಸ್ಪಷ್ಟವಾಗಿ ನುಡಿದಿದ್ದಾರೆ ಕನಕದಾಸರು.

ರಾಮಧಾನ್ಯ ಚರಿತೆಯ ಪ್ರಾರಂಭದ ಪ್ರಾರ್ಥನಾ ಪದ್ಯದ ಕಡೆಯ ಪಾದ 'ವರಪೌರ ಚೆನ್ನಿಗರಾಯ ಪಾಲಿಸು ಸಕಲ ಸಜ್ಜನರ', 'ವರಪುರದರಸನನು ಕೊಂಡಾಡಿ ಪೇಳುವೆನು ಮಹಾಕಥೆಯ'–ಇಲ್ಲೆಲ್ಲ ಕವಿ ಕನಕದಾಸರು ಬೇಲೂರಿನ ಚೆನ್ನಕೇಶವನನ್ನು ಕಣ್ತುಂಬ ತುಂಬಿಕೊಂಡು ಮನದಣಿಯ ಕೊಂಡಾಡಿದ್ದಾರೆ. ಅವರ ಅನೇಕ ಕೀರ್ತನೆಗಳೂ ಇದಕ್ಕೆ ಸಾಕ್ಷಿಯಾಗಿವೆ. 'ಬಲಗೊಂಬೆ ಚೆನ್ನರಾಯ, ಭಕಿತರ ಪ್ರಿಯ', 'ಮನ್ನಿಸಿ ಸಲಹುವ ಚೆನ್ನಾದಿಕೇಶವ । ಚಿನ್ನನ ತಂದು ತೋರೆ ರಮಣಿ' ಎಂದು ಸ್ತುತಿಸಿದ್ದಾರೆ.

ಹಾಸನ ಜಿಲ್ಲೆಯಲ್ಲಿ ಹಾಸನದಿಂದ ಇಪ್ಪತ್ನಾಲ್ಕು ಮೈಲಿ ದೂರದಲ್ಲಿ, ಯಗಚಿ ನದಿಯ ಬಲದಂಡೆಯ ಮೇಲೆ ಇರುವ ಊರೇ ಬೇಲೂರು. ಇದು ಇತಿಹಾಸ ಪ್ರಸಿದ್ಧವಾಗಿದ್ದು ಶಾಸನಗಳಲ್ಲಿ ಇದನ್ನು ವೇಲಾಪುರ, ವೇಲೂರು, ಬೆಲಹೂರು ಎಂದು ಕರೆದಿದ್ದಾರೆ. ಹೊಯ್ಸಳ ವಿಷ್ಣುವರ್ಧನ (ಬಿಟ್ಟಿದೇವ) ಕ್ರಿ. ಶ. ೧೧೧೭ ರಲ್ಲಿ ಕಟ್ಟಿಸಿದ ಚೆನ್ನಕೇಶವನ ಗುಡಿ ಇಂದಿಗೂ ಲೋಕವಿಖ್ಯಾತವಾಗಿದೆ. ಈ ದೇವರಿಗೆ ಶಾಸನೋಕ್ತವಾದ ಹೆಸರು ವಿಜಯನಾರಾಯಣನೆಂದು. ವಿಷ್ಣುವರ್ಧನನು ಪ್ರತಿಷ್ಠೆ ಮಾಡಿಸಿದ ಪಂಚ ನಾರಾಯಣ ಮೂರ್ತಿಗಳಲ್ಲಿ ಇದು ಮುಖ್ಯವಾದುದು. ಈ ನಾರಾಯಣ ವಿಗ್ರಹ ತುಂಬ ಲಾವಣ್ಯದಿಂದ ಕೂಡಿರುವುದರಿಂದಲೂ, ಮೋಹಿನಿ ಅವತಾರದ ಸಂಕೇತವಾಗಿರುವುದರಿಂದಲೂ 'ಚೆನ್ನಿಗರಾಯ' 'ಚೆಲುವ ಚೆನ್ನ' ಎಂದು ಕರೆಯುವ ವಾಡಿಕೆ ಹೆಚ್ಚಾಗಿ ಇದೆ. ಚೆನ್ನಕೇಶವ ದೇವಾಲಯದ ಶಿಲ್ಪಕಲೆ ಅದ್ಭುತವಾದುದು. ಇದು ಪ್ರಾಚೀನವಾದ ದೇವಾಲಯವಾದರೂ ಇಂದಿಗೂ ತಪ್ಪದೆ ಪೂಜೆ ನಡೆಯುತ್ತಾ ಬಂದಿದೆ. ಇಲ್ಲಿದ್ದ ವೈಕುಂಠದಾಸರೆಂಬ ಹರಿದಾಸರು ವ್ಯಾಸರಾಯಸ್ವಾಮಿಗಳ ಶಿಷ್ಯರೇ ; ಪುರಂದರ–ಕನಕದಾಸರ ಒಡನಾಡಿಗಳೇ. ಇವರು ಆಗಾಗ ಪುರಂದರರನ್ನೂ ಕನಕದಾಸರನ್ನೂ ಬೇಲೂರಿಗೆ ಕರೆದುಕೊಂಡು ಬರುತ್ತಿದ್ದರೆಂದು ಹೇಳುತ್ತಾರೆ. ಇಲ್ಲಿ ಹೊಯ್ಸಳರ ಮಂತ್ರಿಯೂ,

ಸಾಹಿತಿಯೂ ಆದ ಕೆರೆಯ ಪದ್ಮರಸರು ಕಟ್ಟಿಸಿದ ಕೆರೆಯೂ, ಕವಿ ರಾಘವಾಂಕನ ಸಮಾಧಿಯೂ ಇದೆ.

ಕನಕದಾಸರು ತಾತಾಚಾರ್ಯ ವ್ಯಾಸರಾಯ ಮತ್ತು ವಾದಿರಾಜರನ್ನು ಗುರು ಸ್ಥಾನದಲ್ಲಿಟ್ಟು ಆರಾಧಿಸಿದ್ದಾರೆ. ಪ್ರಸಿದ್ಧ ಯಾತ್ರಾಕ್ಷೇತ್ರ ಉಡುಪಿ ವಾದಿರಾಜರ ಧರ್ಮಪೀಠವಾಗಿತ್ತು. ಆ ಸಂದರ್ಭದಲ್ಲಿ ಕನಕದಾಸರು ಉಡುಪಿಯ ಶ್ರೀಕೃಷ್ಣ ಆಲಯಕ್ಕೆ ಬಂದು ಪರಮಾತ್ಮನ ದರ್ಶನ ಬೇಡಿದಾಗ ನಡೆದ ಘಟನೆ ಒಂದು ಚರಿತ್ರಾರ್ಹ ದಾಖಲೆಯಾಗಿದೆ. ಉಡುಪಿಯಲ್ಲಿ ದೊರೆತ ಒಂದು ತಾಳೆಯೋಲೆಯ ಪುಸ್ತಕದ ಒಂದು ಓಲೆಯಲ್ಲಿ ಕನಕದಾಸರು ಉಡುಪಿಗೆ ಹೋದ ವಿಚಾರವನ್ನೂ ಶ್ರೀಕೃಷ್ಣಸ್ವಾಮಿಯು ಪಶ್ಚಿಮಕ್ಕೆ ತಿರುಗಿದ ವಿಷಯವನ್ನೂ ತಿಳಿಸುತ್ತದೆ.

ಉಡುಪಿ ಕನಕದಾಸರ ಬದುಕಿಗೆ ಒಂದು ಭದ್ರನೆಲೆಯನ್ನು ತಂದುಕೊಟ್ಟು ಪುಣ್ಯಕ್ಷೇತ್ರವಾಗಿದೆ. ಉಡುಪಿಯ ಶ್ರೀಕೃಷ್ಣನನ್ನು ಮನಸಾರೆ ತುಂಬು ಹೃದಯದಿಂದ ಹಾಡಿದ ಕೀರ್ತನೆಗಳು ಅಪಾರಸಂಖ್ಯೆಯಲ್ಲಿವೆ. 'ಬಂಟನಾಗಿ ಬಾಗಿಲು ಕಾಯ್ವ ಹರಿಯೆ । ವೈಕುಂಠದ ಸೊಂಪಿನ ದಾಸರ ಮನೆಯ', 'ವನಜ ಮುಖಿಯರ ಮನದಿಷ್ಟಾರ್ಥವೀವ । ಶ್ರೀ ಕೃಷ್ಣ ಎನ್ನಿರೊ ॥ಪ॥ ತನ್ನ ಮನದೊಳು ಧ್ಯಾನಿಸುವಳ ತಂದಾತನ । ಶ್ರೀ ಕೃಷ್ಣ ಎನ್ನಿರೋ ॥ಅ॥

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರಜತಪುರ (ಉಡುಪಿ), ಕುಮಾರಾದ್ರಿ (ಸುಬ್ರಹ್ಮಣ್ಯ), ಕುಂಭಾಸಿ, ಕೋಟೇಶ್ವರ, ಕ್ರೋಡ (ಶಂಕರನಾರಾಯಣ), ಕೊಲ್ಲೂರು ಮತ್ತು ಗೋಕರ್ಣ ಎಂಬ ಸಪ್ತಕ್ಷೇತ್ರಗಳಿವೆ. ಅವುಗಳಲ್ಲಿ ಉಡುಪಿಗೇ ಅಗ್ರಸ್ಥಾನ. ಮೊದಲಿಗೆ ಶಿವಳ್ಳಿ ಎಂಬ ಗ್ರಾಮದ ಭಾಗವಾಗಿ ಈಗಿನ ಅನಂತೇಶ್ವರನ ಗುಡಿ ಹಾಗೂ ಕೃಷ್ಣಮಠಗಳು ಸೇರಿ ಭಾಗ 'ಉಡುಪು' ಆಗಿತ್ತು. ಅದೇ ಈಗ ಉಡುಪಿಯಾಗಿದೆ. ಕ್ಷೇತ್ರದ ಪಾವಿತ್ರ್ಯ ಮೊದಲಿಗೆ ಅನಂತೇಶ್ವರನ ಗುಡಿಯಿಂದಲೇ. ಇಲ್ಲಿಂದ ಈಶಾನ್ಯ ದಿಕ್ಕಿಗೆ ಅನಂತರ ಪ್ರತಿಷ್ಠೆಗೊಂಡ ಕೃಷ್ಣನ ಗುಡಿಯಿಂದ ಉಡುಪಿ ಹೆಚ್ಚು ಪ್ರಸಿದ್ಧಿಗೆ ಬಂದಿತು. ಇಲ್ಲಿಯೆ ಹುಟ್ಟಿ ಬೆಳೆದ ಮಧ್ವಾಚಾರ್ಯರು ದ್ವೈತವೇದಾಂತದ ಪ್ರಚಾರಕರಾಗಿ ನಾಡಿನಲ್ಲೆಲ್ಲಾ ಪ್ರಸಿದ್ಧರಾದರು. ಉಡುಪಿಯೂ ತನ್ನ ಪ್ರತಿಷ್ಠೆಯನ್ನು ಹೆಚ್ಚಿಸಿಕೊಂಡಿತು. ಗುಡಿಗೆ ಸೇರಿಕೊಂಡಿರುವ ಕೊಳ ಮಧ್ವಸರೋವರವೆಂದೇ ಹೆಸರಾಗಿದೆ. ಇಲ್ಲಿ ಪ್ರತಿವರ್ಷವೂ ನಡೆಯುವ ಲಕ್ಷದೀಪೋತ್ಸವ, ಸಂಕ್ರಮಣೋತ್ಸವ, ಎರಡು ವರ್ಷಗಳಿಗೊಮ್ಮೆ ನಡೆಯುವ ಪರ್ಯಾಯೋತ್ಸವ ಬಹು ವೈಭವದಿಂದ

ಆಚರಣೆಗೊಳ್ಳುತ್ತವೆ. ಉಡುಪಿಯ ಕೃಷ್ಣ ಹರಿದಾಸರಿಗೆ ಅಚ್ಚುಮೆಚ್ಚಿನ ದೇವರು. ಉಡುಪಿಯು ದಾಸರಿಗೆ ಹೆಚ್ಚು ಪ್ರಿಯವಾದುದು ವಾದಿರಾಜಸ್ವಾಮಿಗಳ ಕಾಲದಿಂದ ಎಂದು ತೋರುತ್ತದೆ.

ಪಂಪನಂತೆ ಕಲಿಯೂ, ಕವಿಯೂ, ರಸಿಕರೂ ಅಗಿದ್ದ ಕನಕದಾಸರು ಮೋಹನ ತರಂಗಿಣಿ ಕಾವ್ಯವನ್ನು ಶೃಂಗಾರ ರಸಕ್ಕೆ ಮೀಸಲಿರಿಸಿದರು ; ವೀರರಸ ಹಾಗೂ ಇತರ ರಸಗಳು ಈ ಕಾವ್ಯದಲ್ಲಿ ಪ್ರಾಸಂಗಿಕವಾಗಿವೆ. ತಮ್ಮ ದಣಾಯಕತನದ ಕಾಲದ ಆಡಳಿತ ವ್ಯವಹಾರಗಳು ಆತನನ್ನು ಆಗಾಗ ವಿಜಯನಗರಕ್ಕೆ ಕರೆದೊಯ್ಯುತ್ತಿದ್ದವು. ಅಲ್ಲಿ ಶ್ರೀಕೃಷ್ಣದೇವರಾಯನ ರಾಜವೈಭವವನ್ನು ಕಣ್ಣಾರೆ ಕಂಡು ಆನಂದಿಸಿದರು. ಅಲ್ಲಿ ಅವರ ರಾಜಗುರು ವ್ಯಾಸರಾಯರ ವ್ಯಕ್ತಿತ್ವಕ್ಕೆ ಮಾರುಹೋದರು. ವಿಜಯನಗರ ಸಾಮ್ರಾಜ್ಯದ ವೈಭವದ ವರ್ಣನೆಯೆಲ್ಲಾ ಮೋಹನತರಂಗಿಣಿಯಲ್ಲಿ ಮಡುಗಟ್ಟಿ ನಿಂತಿದೆ. ವಿಜಯನಗರದ ಶೃಂಗಾರ ಜೀವನ, ರಾಜ, ರಾಜಸಭೆ, ಅಲ್ಲಿಯ ಜನಜೀವನ ಈ ಕಾವ್ಯದಲ್ಲಿ ಸಜೀವತೆಯನ್ನು ಪಡೆದಿವೆ. ನೃತ್ಯ, ಸಂಗೀತ, ಅಲಂಕಾರ, ಸರಸ, ಸುಮ್ಮಾನ, ಓಕುಳಿಯಾಟ, ಜಲಕ್ರೀಡೆ, ವೇಶ್ಯಾವಾಟಿ, ಸ್ನಾನಗೃಹ, ನವರಾತ್ರಿ, ಪುರ ರಚನೆ, ಬೀದಿಗಳು, ವೇಷಭೂಷಣ, ಬದುಕು, ಯುದ್ಧವಿಧಾನ, ಉದ್ಯಾನವನ–ಹೀಗೆ ಹಲವು ಹತ್ತೆಂಟು ವಿಷಯಗಳು ವಿಜೃಂಭಣೆಯಿಂದ ವರ್ಣನೆಗೊಂಡು ಒಂದು ಸಾಮ್ರಾಜ್ಯದ ಅತ್ಯುನ್ನತ ಅವಧಿಯ ಪರಿಚಯ ಮಾಡಿಕೊಡುತ್ತವೆ. ವಿಜಯನಗರದ ಸಂಪತ್ತಿನ ಅಗಾಧತೆಯ ಅರಿವು ಇರುವವರಿಗೆ, ಇತಿಹಾಸ ಬಲ್ಲವರಿಗೆ ಮುಂದಿನ ಪದ್ಯಗಳು ಯಾವ ನಗರದ ರಾಜ್ಯದ ವರ್ಣನೆಯೆಂಬುದು ತಾನಾಗಿಯೇ ತಿಳಿಯುತ್ತದೆ.

ಸೋಮಸೂರಿಯ ವೀಧಿಯಿಕ್ಕೆಲದಲ್ಲಿ
ಹೇಮ ನಿರ್ಮಿತ ಸೌಧದೋಳಿ
ರಾಮಣೀಯತೆವೆತ್ತ ಕಳಸದಂಗಡಿಯಿರ್ದು
ವಾ ಮಹಾದ್ವಾರಕಾಪುರದೆ ॥ –(೨–೧೧)
ಭೋಜಿಪ ಕರ್ಪೂರ ಕಸ್ತೂರಿ ಜೀರ್ಣ ಜ । ವಾಜಿ ಪುಣಗು ಬಹುತೈಲ
ಸೋಜಿಗವಡೆದ ಸುಗಂಧದಂಗಡಿಗಳು । ರಾಜಿಸುತಿರ್ದುವಿಕ್ಕೆಲದಿ ॥ (೩–೧೮)
ಚಪ್ಪನ್ನದೇಶದ ನಾಣೆಯಂಗಳ ನೋಟ । ತಪ್ಪದ ಚಪಲ ಸೆಟ್ಟಿಗಳು
ಒಪ್ಪವಡೆದು ಕುಳಿತಿರ್ದರು ಹಣಹೊನ್ನ । ಕುಪ್ಪೆಯ ಮುಂದಿಟ್ಟುಕೊಂಡು ॥ (೩–೨೭)

ಒರೆಗಲ್ಲ ರಜವ ಮೇಣದೊಳೊತ್ತಿ ತೆಗೆದದ । ಕರಗಿ ಸುವರ್ಣಖಂಡುಗವ
ನೆರೆದ ಯಾಚಕರಿಗೆ ಹಂಚಿ ಕೊಡುವ ಚಿನ್ನ । ವರದರೊಪ್ಪಿದರು ಕಟ್ಟೆಯಲಿ ॥
(೩–೨೮)

ಓರಂತೆ ಮರಕಾಲರು ಹಡಗಿನ ವ್ಯವ । ಹಾರದಿ ಗಳಿಸಿದ ಹಣವ ।
ಭಾರಸಂಖ್ಯೆಯಲಿ ತೂಗುವರು ಬೇಡಿದರೆ ಕು । ಬೇರಂಗೆ ಕಡವ ಕುಡುವರು ॥

ವಿಜಯನಗರವನ್ನು ದ್ವಾರಕೆಗೂ, ಕೃಷ್ಣದೇವರಾಯನನ್ನು ಶ್ರೀಕೃಷ್ಣ ಪರಮಾತ್ಮನಿಗೂ ಹೋಲಿಸಿ ಅಭೇದಭಾವದಿಂದ ಅನನ್ಯತೆಯಿಂದ ಕನಕದಾಸರು ವರ್ಣಿಸಿದ್ದಾರೆ.

ಬಳ್ಳಾರಿಜಿಲ್ಲೆಯಲ್ಲಿ ಹೊಸಪೇಟೆಯಿಂದ ಏಳು ಮೈಲಿ ದೂರದಲ್ಲಿರುವ ತುಂಗಭದ್ರಾ ನದಿಯ ದಕ್ಷಿಣದಂಡೆಯ ಮೇಲಿರುವ ಊರೇ ಹಂಪೆ. ೧೩೩೬ ರಿಂದ ೧೫೬೫ರವರೆಗೆ ವೈಭವದಿಂದ ಮೆರೆದ ವಿಜಯನಗರದ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಊರು ಈ ಹಂಪೆ, ಇದಕ್ಕೆ ಪಂಪಾಕ್ಷೇತ್ರವೆಂದೂ, ರಾಮಾಯಣದ ಋಷ್ಯಮೂಕ ಪರ್ವತವಿದ್ದುದು ಇಲ್ಲೇ ಎಂದೂ, ಈಗಿನ ತುಂಗಭದ್ರಾ ನದಿಯನ್ನೆ ಆಗ ಪಂಪಾನದಿಯೆಂದು ಕರೆಯುತ್ತಿದ್ದರೆಂದೂ, ರಾಮನು ಸುಗ್ರೀವನ ಸಖ್ಯವನ್ನು ಬಯಸಿದ್ದು ಇಲ್ಲೆ ಎಂದೂ, ಹತ್ತಿರವಿರುವ ಮಾಲ್ಯವಂತ ಬೆಟ್ಟದಲ್ಲಿ ಹನುಮಂತನು ಸೀತಾ ದರ್ಶನವನ್ನು ಮಾಡಿ ಲಂಕೆಯಿಂದ ಹಿಂದಿರುಗಿದ ಮೇಲೆ ರಾಮನನ್ನು ಕಂಡು ಸೀತಾವಾರ್ತೆಯನ್ನು ಇಲ್ಲೇ ಹೇಳಿದನೆಂದೂ ವಿವರಗಳಿವೆ.

ವಿಜಯನಗರದ ಅರಸರಿಗೆ ಕುಲದೈವವಾದ ಪಂಪಾಪತಿಯ ದೇವಾಲಯ ಇಲ್ಲಿದೆ. ಕೃಷ್ಣದೇವರಾಯನು ಸಿಂಗನಾಯಕನ ಹಳ್ಳಿಯನ್ನು ಈ ಗುಡಿಗೆ ದಾನವಾಗಿ ಕೊಟ್ಟು ರಂಗಮಂಟಪವನ್ನು ಕಟ್ಟಿಸಿದ ಉಲ್ಲೇಖವಿದೆ. ಪಂಪಾಪತಿಯ ದೇವಸ್ಥಾನವಲ್ಲದೆ ಅದರ ಸಮೀಪದಲ್ಲಿರುವ ಹೇಮಕೂಟ ಪರ್ವತವೂ ಕೃಷ್ಣಸ್ವಾಮಿ ದೇವಾಲಯವೂ ವಿಜಯವಿಟ್ಠಲ ದೇವಾಲಯವೂ ಪ್ರಸಿದ್ಧವಾದುವು. ಪುರಂದರದಾಸರು ಹಂಪೆಯಲ್ಲಿ ತೀರಿಕೊಂಡರೆಂಬ ಪ್ರತೀತಿಯಿದೆ. **'ಪುರಂದರದಾಸರ'** ಮಂಟಪವೆಂದು ಒಂದು ಮಂಟಪವೂ ಇದೆ. ಹಂಪೆ ರಾಜಧಾನಿಯ ವರ್ಣನೆಯನ್ನು ಅನೇಕ ವಿದೇಶೀಯರೂ ವರ್ಣಿಸಿದ್ದಾರೆ. ಇಟಲಿ ದೇಶದ ನಿಕಲೊ ಕಾಂಟಿ ಅವರು ಕ್ರಿ. ಶ. ೧೪೨೦ರಲ್ಲೂ, ಪರ್ಶಿಯಾ ದೇಶದ ಅಬ್ದುಲ್ ರಸಾಕ್ ಅವರು ಕ್ರಿ.ಶ. ೧೪೪೨ರಲ್ಲೂ, ಪೋರ್ಚುಗಲ್ಲಿನ ಡಾರ್ಟೆ

ಬಾರ್ಬೋಸ ಅವರು ಕ್ರಿ. ಶ. ೧೫೦೪ ರಿಂದ ೧೫೧೪ರವರೆಗೂ, ಪೋರ್ಚುಗಲ್ಲಿನ ಮತ್ತೊಬ್ಬ ಪ್ರವಾಸಿ ಡೊಮಿಂಗೋ ಪಯಸ್ ಅವರು ಕ್ರಿ.ಶ. ೧೫೨೦ರಲ್ಲೂ ವಿಜಯನಗರಕ್ಕೆ ಬಂದಿದ್ದು ವಿಜಯನಗರದ ವೈಭವವನ್ನು ಕಣ್ಣಿಗೆ ಚಿತ್ರಕಟ್ಟುವಂತೆ ವರ್ಣಿಸಿದ್ದಾರೆ.

ಕನಕದಾಸರು ತಮ್ಮ ೯೮ ವರುಷಗಳ ತುಂಬು ಜೀವನದಲ್ಲಿ ಅವರು ಹೆಚ್ಚು ಸಂದರ್ಶಿಸಿರಬಹುದಾದ ಸ್ಥಳವೆಂದರೆ ತಿರುಪತಿ. ತಮ್ಮ ಮನೆತನದ ಇಷ್ಟದೈವವಾದ, ತನಗೂ ಪ್ರಿಯವಾದ ತಿರುಪತಿ ತಿಮ್ಮಪ್ಪನ ದರ್ಶನಕ್ಕೆ ಆಗಾಗ ಹೋಗುವುದು ಕನಕದಾಸರ ಬದುಕಿನ ಬಹು ಮುಖ್ಯ ಅಂಗವಾಗಿತ್ತು. ಅಲ್ಲಿಯೇ ಅವರಿಗೆ ರಾಮಾನುಜರ ಪರಂಪರೆಯ ತಾತಾಚಾರ್ಯರ ಪರಿಚಯ, ಪ್ರಭಾವವಾದದ್ದು. ಕ್ರಿ. ಶ. ೧೫೬೫ರಲ್ಲಿ ಪುರಂದರದಾಸರು ದೇಹತ್ಯಾಗ ಮಾಡಿದರು. ಆನಂತರ ಅವರ ತಂಬೂರಿಯುನ್ನು ಕನಕದಾಸರು, ಪುರಂದರದಾಸರ ಕೋರಿಕೆಯ ಮೇರೆಗೆ ತಿರುಪತಿ ತಿಮ್ಮಪ್ಪನಿಗೆ ಮುಟ್ಟಿಸಿ ಬಂದರೆಂದು ಐತಿಹ್ಯವಿದೆ ಮತ್ತು ಪುರಂದರದಾಸರ ಮರಣಾನಂತರ ಸುಮಾರು ೧೦–೧೨ ವರುಷಗಳ ತನಕ ಕನಕದಾಸರು ಬದುಕಿದ್ದರೆಂಬ ಪರಂಪರೆಯ ಹೇಳಿಕೆಗಳಿವೆ. ಅವರಿಬ್ಬರೂ ನಾಲ್ಕೈದು ವರುಷ ಸ್ವಲ್ಪ ಹೆಚ್ಚು ಕಡಿಮೆ ಸಮವಯಸ್ಕರೆಂದೂ ವದಂತಿಯಿದೆ.

ಕನಕದಾಸರ ಮೊದಲ ಆಧ್ಯಾತ್ಮಕ್ಷೇತ್ರಗಳಾದ ಬಾಡ, ಕಾಗಿನೆಲೆಯಷ್ಟೆ ಮುಖ್ಯವಾದುದು ತಿರುಪತಿ. ತಿರುಪತಿ ತಿಮ್ಮಪ್ಪ ಕನಕದಾಸರ ಜೀವನಾಡಿಯಂತೆ; ಆತನನ್ನು ಎಷ್ಟು ಕೊಂಡಾಡಿದರೂ ಕನಕದಾಸರಿಗೆ ತೃಪ್ತಿಯಿಲ್ಲ ;

ಏನೆಂದು ಕೊಂಡಾಡಿ ತುತಿಸಲೊ ದೇವ
..............................................................
ತಿರುಪತಿಯ ವಾಸ ಶ್ರೀ ವೆಂಕಟೇಶನು ನೀನು ॥

ಬಂದೆವಯ್ಯ ಗೋವಿಂದ ಸೆಟ್ಟಿ । ನಿನ್ನ
ಹರಿವಾಣ ತೀರ್ಥ ಪ್ರಸಾದ ಉಂಟೆನಲಾಗಿ ॥ಪ॥
........................................................
ಶೇಷಗಿರಿಯಲ್ಲಿ ವಾಸಮಾಡಿಕೊಂಡು ।
ದೇಶದೇಶಕ್ಕೆ ಹೆಸರಾದ ಸೆಟ್ಟಿ ।
ಕಾಸು ಕಾಸಿಗೆ ಬಡ್ಡಿಗಳಿಸಿಕೊಂಬ ಆದಿ ।
ಕೇಶವನಾರಾಯಣ ತಿಮ್ಮಸೆಟ್ಟಿ ॥೩॥

ಆಸೆ ಬಿಟ್ಟು ಪೂಜಿಸುವವರ ಮಾಧವ ।
ದಾಸನೆಂದು ವೆಂಕಟೇಶ ನೀನೊಲಿದು ಬಂದಿದ್ದೀಯಾ
ಗೋವಿಂದಾ ಎನ್ನಿರೊ, ನಂದನಕಂದ ಮುಕುಂದಾಬ್ಧಿಶಯನನ
ಗೋವಿಂದಾ ಎನ್ನಿರೊ
ಗೋವಿಂದಾ ಗೋವಿಂದಾ ಎನ್ನಲರಿಯದೇ ।
ನೋವಿನ ಭಂಗವು ಪಡುವುದುಚಿತವೆ ಗೋವಿಂದ ।
ಪರಮ ಪುರುಷ ಹರಿ ಗೋವಿಂದ ॥ಪ॥
ಕರಿವದನ ನಾರಾಯಣ ಗೋವಿಂದ ॥ಅ॥

ಮುಂತಾದ ಹತ್ತಾರು ಕೀರ್ತನೆಗಳು ಕನಕದಾಸರ ಜಿಹ್ವೆಯಲ್ಲಿ ನಲಿದಾಡಿವೆ.

ಇಂದು ತಿರುಪತಿ ಜಗತ್ಪ್ರಸಿದ್ಧವಾದ ಕ್ಷೇತ್ರವಾಗಿದೆ. ಈಗ ಆಂಧ್ರಪ್ರದೇಶಕ್ಕೆ ಸೇರಿದ ಚಿತ್ತೂರು ಜಿಲ್ಲೆಯಲ್ಲಿ ಪೂರ್ವಘಟ್ಟಗಳ ಸಾಲಿನಲ್ಲಿದೆ. ಕೃತಯುಗದಲ್ಲಿ ವೃಷಭಾದ್ರಿಯೆಂದೂ, ತ್ರೇತಾಯುಗದಲ್ಲಿ ಅಂಜನಾದ್ರಿಯೆಂದೂ, ದವಾಪರಯುಗದಲ್ಲಿ ಶೇಷಾಚಲವೆಂದೂ, ಕಲಿಯುಗದಲ್ಲಿ ವೆಂಕಟಾಚಲವೆಂದು ಈ ಕ್ಷೇತ್ರಕ್ಕೆ ಪುರಾಣ ಪ್ರಸಿದ್ಧಿಯಿದೆ. ಇಲ್ಲಿ ಏಳು ಬೆಟ್ಟಗಳ ಸಾಲಿದ್ದು ಇದನ್ನು ಸಪ್ತಗಿರಿಯೆಂದು ಕರೆಯುತ್ತಾರೆ. ಈ ಬೆಟ್ಟಸಾಲು ಏಳು ಹೆಡೆಗಳ ಆದಿಶೇಷನೆಂದೇ ನಂಬಿಕೆ. ಬೆಟ್ಟದ ಕೆಳಗಿನ ಊರು ತಿರುಪತಿ. ಬೆಟ್ಟದ ಹೆಸರು ವೇಂಗಡ (ವೇಂಕಟ) ಅದೇ ತಿರು–ಮಲೆ (ಶ್ರೀಪರ್ವತ). ಇದರ ಅಧಿದೈವವೇ ವೆಂಕಟೇಶ್ವರ. ಈ ದೈವವನ್ನು ಶ್ರೀನಿವಾಸನೆಂದೂ, ಮಹಾರಾಷ್ಟ್ರದ ಕಡೆ ಬಾಲಾಜಿಯೆಂದೂ ಕರೆಯುತ್ತಾರೆ. ತುಂಬ ಪ್ರಾಚೀನವಾದ ಬೆಟ್ಟದ ಗುಡಿಯನ್ನು, ಕ್ರಿಸ್ತಾಬ್ದದ ಮೊದಲ ಶತಕಗಳಲ್ಲಿದ್ದ ಆಳ್ವಾರರು ಸಂದರ್ಶಿಸಿ ತಮ್ಮ ಪಾಶುರಗಳಲ್ಲಿ ಹಾಡಿ ಹೊಗಳಿದ್ದಾರೆ. ರಾಮಾನುಜಾಚಾರ್ಯರು ಇಲ್ಲಿಗೆ ಬಂದಿದ್ದು ದೇವಾಲಯದ ನಡಾವಳಿಯನ್ನು ವ್ಯವಸ್ಥೆಗೊಳಿಸಿದರು. ಕನಕದಾಸ, ಪುರಂದರದಾಸರ ಗುರುಗಳಾದ ವ್ಯಾಸತೀರ್ಥರು ಬೆಟ್ಟದ ಮೇಲೆ ಹನ್ನೆರಡು ವರುಷಗಳಿದ್ದು ದೇವರ ನಿತ್ಯಾರ್ಚನೆಯನ್ನು ತಾವೇ ನಡೆಸುತ್ತಿದ್ದರೆಂದು ಮಾಧ್ವರಲ್ಲಿ ಪ್ರತೀತಿಯಿದೆ.

ವಿಜಯನಗರದ ಅರಸರಿಗೆ ಇದು ತುಂಬ ಆದರದ ಗುಡಿಯಾಗಿತ್ತು. ಕೃಷ್ಣದೇವರಾಯ ಇಲ್ಲಿಗೆ ಆಗಾಗ್ಗೆ ಬರುತ್ತಿದ್ದು ದೇವರಿಗೆ ಹಲವಾರು ಸೇವೆ ಸಲ್ಲಿಸಿದ ಶಾಸನಗಳಿವೆ. ಹರಿದಾಸರಿಗೂ ಇದು ಅತ್ಯಂತ ಪುಣ್ಯಸ್ಥಳ. ತಿರುಪತಿಯ ತಿಮ್ಮಪ್ಪನೆಂದರೆ ಅವರ ಅಭಿಮಾನದ ದೈವ. ಎಲ್ಲ ಹರಿದಾಸರು ತಿರುಪತಿಯ

ಹೆಗ್ಗಳಿಕೆಯನ್ನೂ, ಇಲ್ಲಿಯ ದೇವರ ಸೊಬಗನ್ನು ತಮ್ಮ ಕೃತಿಗಳಲ್ಲಿ ಮನಸಾರೆ ಕೊಂಡಾಡಿದ್ದಾರೆ.

ಕವಿ, ಸಂತ, ದಾರ್ಶನಿಕರ ಯಾತ್ರಾಸ್ಥಳಗಳು ನಾಡಿನ ಬಹು ಜನತೆಯ ಸಾಂಸ್ಕೃತಿಕ ಕೇಂದ್ರಗಳಾಗಿರುತ್ತವೆ. ಭಕ್ತರಿಗೆ ಪುಣ್ಯಕ್ಷೇತ್ರಗಳಾದರೆ, ಕವಿಗೆ ಕಾವ್ಯಕ್ಷೇತ್ರ, ದಾರ್ಶನಿಕನಿಗೆ ಆಧ್ಯಾತ್ಮಕೇಂದ್ರ, ಪ್ರವಾಸಿಗೆ ರಮಣೀಯ ಸ್ಥಳ, ಇತಿಹಾಸಕಾರನಿಗೆ ಐತಿಹಾಸಿಕ ಕೇಂದ್ರ, ಶಿಲ್ಪಿಗೆ ಕಲೆಗಳ ನಾಡು, ವಾಸ್ತುಶಿಲ್ಪಿಗೆ ಸವಾಲಿನ ಮಾಡು, ಪ್ರಣಯಿಗಳಿಗೆ ಸೌಂದರ್ಯದ ಬೀಡು. ಎಲ್ಲ ಎಡರು ತೊಡರು, ನೋವಿನ ಘರ್ಷಣೆಯ ಮಧ್ಯದಲ್ಲಿಯೂ ಬದುಕನ್ನು ಆಪ್ಯಾಯಮಾನ ಮಾಡಿಕೊಂಡಂಥ ಸಂತ ಕವಿ ಕನಕದಾಸರಂಥವರಿಗೆ ಈ ಕ್ಷೇತ್ರಗಳು ಮೇಲೆ ಹೇಳಿದ ಎಲ್ಲವೂ ಆಗಿರುತ್ತವೆ. ಕವಿಗಳು, ದಾರ್ಶನಿಕರು ದರ್ಶಿಸಿದ್ದರಿಂದ ಇಂಥ ಕ್ಷೇತ್ರಗಳು ಪುಣ್ಯಕ್ಷೇತ್ರ, ಯಾತ್ರಾಸ್ಥಳ, ಸಾಂಸ್ಕೃತಿಕ ಕೇಂದ್ರಗಳಾದುವೊ, ಅವು ಅಂಥ ಕೇಂದ್ರಗಳಾಗಿದ್ದುದರಿಂದಲೇ ಕವಿ, ಸಂತರು ಸಂದರ್ಶಿಸಿದರೊ ! ಬಹುಶಃ ಎರಡೂ ಸತ್ಯ ಇರಬಹುದು. ಕನಕದಾಸರ ಬದುಕಿನಲ್ಲಂತೂ ಈ ಎರಡು ಅಂಶಗಳು ನಿಜವಾಗಿವೆ.

## ಆಧಾರಗ್ರಂಥಗಳು


೧) ಕನಕದಾಸರ ಕೀರ್ತನೆಗಳು
೨) ಹರಿಭಕ್ತಿಸಾರ
೩) ನಳಚರಿತೆ
೪) ರಾಮಧಾನ್ಯಚರಿತೆ
೫) ಮೋಹನತರಂಗಿಣಿ
೬) ವಿಶ್ವಕೋಶ : ಸಂಪುಟ ೨, ೪,
೭) ಕರ್ನಾಟಕದ ಯಾತ್ರೆ : ಜೀರಿಗೆ–ಕಟ್ಟೆ ಬಸಪ್ಪ
೮) ಪುರಂದರ ಸಾಹಿತ್ಯದರ್ಶನ:ಸಂಪುಟ ೧, ೨, ೩, ೪,
೯) ತಿರುಪತಿ ತಿಮ್ಮಪ್ಪ : ಪ್ರೊ॥ ಎಸ್. ಕೆ. ರಾಮಚಂದ್ರರಾವ್
೧೦) ದಾಸಸಾಹಿತ್ಯ ದರ್ಶನ : (ಸಂ) ಎಚ್ಚೆಸ್ಕೆ
೧೧) ಕನಕಕಿರಣ : (ಸಂ) ಕಾ. ತ. ಚಿಕ್ಕಣ್ಣ
೧೨) ಕನ್ನಡ ಸಾಹಿತ್ಯ ಚರಿತ್ರೆ : ಡಾ॥ ರಂ.ಶ್ರೀ.ಮುಗಳಿ
೧೩) ಕವಿಚರಿತೆ : ರಾ. ನರಸಿಂಹಾಚಾರ್
೧೪) ಜನಪ್ರಿಯ ಕನಕ ಸಂಪುಟ
೧೫) ಬಕುಳ : ಡಾ॥ ಕಮಲಾ ಹಂಪನಾ

# ಭಾರತೀಯ ಭಕ್ತಿಪಂಥ ಮತ್ತು ಕನಕದಾಸರು

**ಡಾ. ಎಚ್. ತಿಪ್ಪೇರುದ್ರಸ್ವಾಮಿ**

ಅಂತರಂಗದ ವಿಕಾಸವನ್ನು ಕುರಿತ ಸಾಧನೆಗೆ, ವಿಶಾಲವಾದ ಅರ್ಥದಲ್ಲಿ 'ಭಕ್ತಿ' ಎಂಬುದು ತಳಹದಿಯಾಗಿ ಬೆಳೆದು ಬಂದಿರುವುದು ಧಾರ್ಮಿಕ ಇತಿಹಾಸದ ಉದ್ದಕ್ಕೂ ಕಂಡು ಬರುತ್ತದೆ. ಧರ್ಮದ ಉಗಮವೇ ಭಕ್ತಿಯಿಂದ ಎಂದು ಬೇಕಾದರೂ ಹೇಳಬಹುದು. ಸೃಷ್ಟಿವಿನ್ಯಾಸದಲ್ಲಿ ತನಗಿಂತ ಮಿಗಿಲಾದ ಅಲೌಕಿಕ ಶಕ್ತಿಯೊಂದರ ಪ್ರಭಾವವನ್ನು ಕಂಡ ಆದಿಮಾನವ, ನಿಸ್ಸಹಾಯಕತೆಯಿಂದಲೋ ಭೀತಿಯಿಂದಲೋ, ಅವಲಂಬನೆಯ ನೆರವಿಗೆ ಶ್ರದ್ಧೆಯಿಂದಲೋ, ಆ ಶಕ್ತಿಗೆ ಶರಣಾಗತನಾಗಿ ಕೈಕೊಂಡ ಧಾರ್ಮಿಕ ಉಪಾಸನೆಯಲ್ಲಿಯೇ ಭಕ್ತಿಯ ಮೂಲಬೇರುಗಳೂ ಕಂಡು ಬರುತ್ತವೆ. ಮುಂದೆ ಆತನ ಅನುಭವ ಆಕಾಂಕ್ಷೆ ಅಭೀಪ್ಸೆಗಳು ಬೆಳೆದಂತೆ ಉಪಾಸನೆಯ ಸ್ವರೂಪವೂ ಬದಲಾಗುತ್ತಾ ವಿಕಾಸಗೊಳುತ್ತಾ ಬಂದಿತು. ಕೇವಲ ಬಹಿರ್ಮುಖವಾಗಿದ್ದ ಸಕಾಮ ಆರಾಧನೆ, ಅಂತರ್ಮುಖವಾದ ನಿಷ್ಕಾಮ ಉಪಾಸನೆಯ ಮಟ್ಟಕ್ಕೇರಿದುದು ಈ ಮಾರ್ಗದ ಒಂದು ಮಹತ್ತರ ಸಾಧನೆ. ಈ ಸಾಧನೆಯ ಸಾಹಸದಲ್ಲಿ ಭಕ್ತಿಯ ಸ್ವರೂಪವೂ ಬೆಳೆಯುತ್ತಾ ಬಂದುದನ್ನು ಗುರುತಿಸಬಹುದು. ಅಂತರಂಗದ ಪರಿಭಾವನೆ ಪರಿಶೀಲನೆಗಳು ಗಟ್ಟಿಗೊಳ್ಳುತ್ತಾ ಬಂದಂತೆಲ್ಲಾ ಧರ್ಮ ವಿಚಾರ ಸಮನ್ವಿತವಾಗಿ ಭಕ್ತಿಯ ಜೊತೆಗೆ ಜ್ಞಾನ ಕರ್ಮಗಳೂ ಬೆಳೆದುಬಂದುವು. ಅಂತರಂಗದ ಆತ್ಮಶಕ್ತಿ, ಬಹಿರಂಗದ ಪರಮಾತ್ಮ ಶಕ್ತಿಯೊಡನೆ ಬೆರೆಯುವ ಸಮಾಯೋಗದ ಪರಿಕಲ್ಪನೆ ಈ ವಿಕಾಸದ ಒಂದು ಪ್ರಮುಖ ಘಟ್ಟ. ಅಲ್ಲಿ ಭಕ್ತಿ ಜ್ಞಾನ ಕರ್ಮಗಳೂ ಈ ಯೋಗದ ವಿವಿಧ ಮಾರ್ಗಗಳಾದುವು. ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ-ಈ ಎಲ್ಲ ಮಾರ್ಗಗಳಿಗೂ ವ್ಯಾಪಕವಾದ ಅರ್ಥದಲ್ಲಿ ಭಕ್ತಿಯೇ ತಳಹದಿಯೆಂಬುದನ್ನು ಗಮನಿಸಬೇಕು.

ಭಕ್ತಿಯ ಈ ವ್ಯಾಪಕ ಸ್ವರೂಪ, ನಾರದ ಶಾಂಡಿಲ್ಯ ಮೊದಲಾದವರ ಸೂಕ್ಷ್ಮ ವಿವೇಚನೆಯಿಂದ ಅತಿ ಪ್ರಾಚೀನದಲ್ಲಿಯೇ ಸ್ಪಷ್ಟರೂಪವನ್ನು ಪಡೆಯಿತು.

ನಾರದ ಭಕ್ತಿಸೂತ್ರದಲ್ಲಿ ಭಕ್ತಿಯ ಆಂತರಿಕ ಪರಿಭಾವನೆ ಕಂಡುಬರುತ್ತದೆ. ಸರ್ವಾರ್ಪಣೆ ಮತ್ತು ಸರ್ವಪ್ರೇಮವೇ ಭಕ್ತಿಯ ಸಾರಸರ್ವಸ್ವವೆಂಬದು ಅಲ್ಲಿ ಪ್ರತಿಪಾದಿತವಾಗಿದೆ. 'ಭಕ್ತಿಯೆಂಬುದು ಪರಮಪ್ರೇಮರೂಪವಾದುದು' ಎಂದು ನಾರದ ಭಕ್ತಿಸೂತ್ರ ಅರ್ಥವತ್ತಾಗಿ ಹೇಳಿದೆ. ಅದು ಸರ್ವವ್ಯಾಪಿಯಾದ ಶಕ್ತಿಗೆ ಸಂಪೂರ್ಣವಾಗಿ ಅರ್ಪಿಸಿಕೊಳ್ಳುವುದರಿಂದ ಉಂಟಾಗುವ ಅನಿರ್ವಚನೀಯ ಅನುಭವವೆಂಬುದನ್ನು "ಮೂಕಂ ಸ್ವಾದನವತ್" ಎಂದು ಧ್ವನಿಪೂರ್ಣವಾಗಿ ಅಲ್ಲಿ ಸೂತ್ರೀಕರಿಸಲಾಗಿದೆ. ಮುಂದೆ ಧರ್ಮ ವಿಕಾಸಗೊಂಡಂತೆಲ್ಲಾ ಅದರ ತಾತ್ವಿಕ ಸಿದ್ಧಾಂತಗಳೂ, ಆಚರಣೆಯ ಮಾರ್ಗಗಳೂ, ವಿಭಿನ್ನವಾದರೂ ಸಹ ಅದಕ್ಕೆ ಹಿನ್ನೆಲೆಯಾಗಿ ಒಂದಲ್ಲ ಒಂದು ರೀತಿಯಲ್ಲಿ ಭಕ್ತಿ ಬೆಳೆದು ಬಂದಿರುವುದನ್ನು ಗುರುತಿಸಬಹುದು.

ವೇದಗಳಲ್ಲಿ ಭಕ್ತಿ, ಇಷ್ಟದೇವತೆಗಳನ್ನು ಪ್ರಾಕೃತಿಕ ಶಕ್ತಿಗಳನ್ನು ಕುರಿತ ಪ್ರಾರ್ಥನೆಯ ರೂಪದಲ್ಲಿ ಅಭಿವ್ಯಕ್ತಿಗೊಂಡಿದೆ. ಉಪನಿಷತ್ತುಗಳಲ್ಲಿ ಅದು ಪರಿಭಾವನೆ ಜಿಜ್ಞಾಸೆಗಳನ್ನು ಅವಲಂಬಿಸಿ ಜ್ಞಾನ ಕರ್ಮ ಸಮನ್ವಿತವಾಗುತ್ತದೆ. ಭಗವದ್ಗೀತೆ ಜ್ಞಾನ ಕರ್ಮಗಳಂತೆ ಭಕ್ತಿಯನ್ನೂ ಒಂದು ಯೋಗವೆಂದು ಪರಿಗಣಿಸುವುದಲ್ಲದೆ ಅವೆಲ್ಲವನ್ನು ಒಳಗೊಳ್ಳುವ ವ್ಯಾಪಕತೆಯನ್ನು ಅದಕ್ಕೆ ತಂದುಕೊಡುತ್ತದೆ. ಗೀತೆಯ ೧೨ನೇ ಅಧ್ಯಾಯದಲ್ಲಿ ಭಕ್ತಿಯೋಗದ ಸಾರವನ್ನೆಲ್ಲಾ ಸಂಗ್ರಹವಾಗಿ ನಿರೂಪಿಸಲಾಗಿದೆ. ನಿಜವಾದ ಭಕ್ತಿ ಕರ್ಮಗಳನ್ನು ಒಳಗೊಂಡು ಅದನ್ನು ಮೀರಿದ ಸರ್ವಾರ್ಪಣೆಯಲ್ಲಿ ಪರ್ಯವಸಾನವಾಗುತ್ತದೆ.

'ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತ ಮನೋಬುದ್ಧಿರ್ಯೋ ಮೇ ಭಕ್ತಃ ಸ ಮೇ ಪ್ರಿಯಃ (೧೨-೧೪)

ಯಾರು ಸದಾಸಂತುಷ್ಟನೂ, ಯೋಗಿಯೂ, ಸಂಯಮಿಯೂ, ದೃಢನಿಶ್ಚಯಿಯೂ, ನನಗೆ ಮನಬುದ್ಧಿಗಳನ್ನರ್ಪಿಸಿದವನೂ ಆಗಿರುವನೋ ಅಂತಹ ಭಕ್ತನೇ ನನಗೆ ಪ್ರಿಯನು–ಎಂದು ಕೃಷ್ಣನು ಹೇಳುವ ಮಾತಿನಲ್ಲಿ ಭಕ್ತಿಯ ವ್ಯಾಪಕತೆ ವ್ಯಕ್ತವಾಗುತ್ತದೆ. ಭಕ್ತಿಯೆಂದರೆ ಕೇವಲ ಭಾವುಕತೆಯಲ್ಲ ; ಸಾಧನೆಯ ಎಲ್ಲ ಮಾರ್ಗಗಳನ್ನೂ ಅದು ಒಳಗೊಳ್ಳುತ್ತದೆ. ಅಂತೆಯೇ ಸಾಧನೆಯ ಎಲ್ಲ ಮಾರ್ಗಗಳೂ ಕೊನೆಗೆ ಭಕ್ತಿಯಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಎಂದು ಹೇಳಿರುವ ಮಾತು ತುಂಬಾ ಅರ್ಥವತ್ತಾಗಿ ಕಾಣುತ್ತದೆ. ಎಲ್ಲ ಸಾಧನೆಗಳೂ ಸಾರ್ಥಕವಾಗುವುದು ಅಹಂಕಾರ ನಿರಸನದ ಸರ್ವಾರ್ಪಣೆಯಲ್ಲಿ. ಈ ಸರ್ವಾರ್ಪಣೆಯನ್ನು ಕೈಗೂಡಿಸಿ ಕೊಡುವುದೇ ಭಕ್ತಿ

ಈ ಅರ್ಥದಲ್ಲಿ ಜ್ಞಾನ ಕರ್ಮಗಳೂ ಇದರಲ್ಲಿ ಸಮಾವೇಶಗೊಳ್ಳುತ್ತವೆ.

ಹೀಗೆ ಭಕ್ತಿಯೆಂಬುದು ಒಂದು ಕಡೆಯಲ್ಲಿ ಎಲ್ಲ ಮಾರ್ಗಗಳನ್ನು ಒಳಗೊಳ್ಳುವ ವ್ಯಾಪಕವಾದ ಅರ್ಥವನ್ನು ಪಡೆದಂತೆ ಇನ್ನೊಂದು ಕಡೆಯಲ್ಲಿ ಜ್ಞಾನ ಕರ್ಮಗಳಿಂದ ಬೇರೆಯಾಗಿ ಪರಮಪ್ರೇಮರೂಪವಾದ ಭಾವುಕತೆಯನ್ನು ಪ್ರಧಾನವಾಗಿ ಉಳ್ಳ ಸಾಕಾರ ಆರಾಧನೆಯ ಮಾರ್ಗವಾಗಿಯೂ ಬೆಳೆದು ಬಂದಿತು. ಇದನ್ನೇ 'ಭಕ್ತಿಪಂಥ' ಎಂದು ಕರೆಯಬಹುದು. ಭಾರತೀಯ ಭಕ್ತಿಪಂಥ ಕಾಲಕಾಲಗಳಲ್ಲಿ ಅನೇಕ ಸಾಧಕರಿಂದ ವಿವಿಧಸ್ತರಗಳನ್ನು ನಿರ್ಮಿಸಿದೆ ; ವಿವಿಧ ಛಾಯೆಗಳನ್ನು ಪಡೆದು ಮುನ್ನಡೆದು ಬಂದಿದೆ. ಆ ಹಿನ್ನೆಲೆಯಲ್ಲಿ ಭಕ್ತಿಯ ವಿವಿಧ ರೂಪ ಸ್ವರೂಪಗಳನ್ನು ಕುರಿತ ವಿವೇಚನೆ ದೀರ್ಘವಾಗಿಯೇ ನಡೆದಿದೆ. ಅದನ್ನು ಸಂಗ್ರಹವಾಗಿ ಕೆಲವು ಘಟ್ಟಗಳನ್ನು ಗುರುತಿಸುವುದರ ಮೂಲಕ ಇಲ್ಲಿ ನೋಡಬಹುದು.

ನಾರದಭಕ್ತಿಸೂತ್ರ "ಸಾತ್ವಸ್ಮಿತ್ ಪರಮಪ್ರೇಮರೂಪಾ" ಎಂದು ಭಕ್ತಿಯ ಸ್ವರೂಪವನ್ನು ಸೂತ್ರೀಕರಿಸಿದರೆ, ಶಾಂಡಿಲ್ಯನು "ಸಾಪದಾನುರಕ್ತಿರೀಶ್ವರೇ" ಎಂದು ಹೇಳಿದ್ದಾರೆ. ಈ ಎರಡರ ಅಭಿಪ್ರಾಯವೂ ಒಂದೇ. ಭಕ್ತಿ ಎನ್ನುವುದು ಭಗವಂತನಲ್ಲಿ ಇಟ್ಟಿರುವ ಅನುರಕ್ತಿ ಇಲ್ಲವೇ ಪ್ರೇಮ–ಎಂದು ಈ ಸೂತ್ರಕಾರರಿಬ್ಬರೂ ಹೇಳುತ್ತಾರೆ. ಈ ಸೂತ್ರಕಾರರಿಬ್ಬರು ಭಕ್ತಿಯ ಬಗೆಗೆ ಕೈಕೊಂಡಿರುವ ವಿವೇಚನೆ ಮಹತ್ವಪೂರ್ಣವಾಗಿದೆ. ನಾರದರು ಹೇಳಿರುವ ಏಕಾದಶ ವಿಧಾನಗಳನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದು. ಇಲ್ಲಿ 'ಆಸಕ್ತಿ' ಎಂಬ ಮಾತನ್ನು ಬಹಳ ಅರ್ಥವತ್ತಾಗಿ ಅವರು ಬಳಸುತ್ತಾರೆ. ಭಕ್ತರ ಮನೋಧರ್ಮಕ್ಕೆ ಅನುಗುಣವಾಗಿ, ಅವರು ಭಗವಂತನಲ್ಲಿ ಇಡುವ ಆಸಕ್ತಿ ವಿವಿಧ ಛಾಯೆಗಳನ್ನು ಪಡೆಯುತ್ತದೆ. ಇದನ್ನು ಹನ್ನೊಂದು ರೀತಿಯಲ್ಲಿ ನಾರದರು ಗುರುತಿಸಿದ್ದಾರೆ. ಆ ಸೂತ್ರ ಹೀಗಿದೆ.

> "ಗುಣಮಹಾತ್ಮ್ಯಾಸಕ್ತಿ–ರೂಪಾಸಕ್ತಿ–ಪೂಜಾಶಕ್ತಿ–ಸ್ಮರಣಾಸಕ್ತಿ–ದಾಸ್ಯಾಸಕ್ತಿ–ಸಖ್ಯಾಸಕ್ತಿ
> ವಾತ್ಸಲ್ಯಾಸಕ್ತಿ–ಕಾಂತ್ಯಾಸಕ್ತಿ–ಆತ್ಮನಿವೇದನಾಸಕ್ತಿ–ತನ್ಮಯಾಸಕ್ತಿ–ಪರಮ
> ವಿರಹಾಸಕ್ತಿ–ರೂಪಾ ಏಕಧಾಪಿ ಏಕದಶಧಾ ಭವತಿ" (ಸೂತ್ರ ೮೨).

ಹೀಗೆ ಈ ಹನ್ನೊಂದು ಆಸಕ್ತಿಗಳಿಂದ ಭಕ್ತನ ಆರಾಧನೆ ಅನುಸಂಧಾನ ರೂಪವಾದ ಭಕ್ತಿ ಬೆಳೆಯುತ್ತದೆ.

ಇದನ್ನೆ ಭಾಗವತ ಇನ್ನೂ ಅಡಕವಾಗಿ ಬೇರೊಂದು ರೀತಿಯಲ್ಲಿ ನವವಿಧ ಭಕ್ತಿಗಳನ್ನು ಹೇಳುತ್ತದೆ.

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನಂ ॥

ಈ ಒಂಬತ್ತು ವಿಧಾನಗಳನ್ನು ಭಕ್ತಿಯಲ್ಲಿ ಹೇಳಲಾಗಿದೆ. ಇವುಗಳಲ್ಲಿ ಮೊದಲನೆಯ ಆರು ಅಂದರೆ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ–ಇವುಗಳನ್ನು ಭಕ್ತಿ ಮಾರ್ಗದ ಸಾಧನ ಕ್ರಿಯೆಗಳೆಂದು ಹೇಳಬಹುದು. ಭಕ್ತಿಯ ಅನುಸಂಧಾನದಲ್ಲಿ ಇವು ಒಂದು ರೀತಿಯ ಪೂರ್ವಸಿದ್ಧತೆಗಳು. ದಾಸ್ಯ, ಸಖ್ಯ, ಆತ್ಮನಿವೇದನ–ಈ ಕೊನೆಯ ಮೂರು ವಿಶಿಷ್ಟವಾದ ಭಕ್ತಿಭಾವಗಳು. ಭಗವಂತ ಸರ್ವಶಕ್ತನಾದ ಒಡೆಯನೆಂದೂ ಭಕ್ತ ಅವನಿಗೆ ಅಧೀನವಾಗಿ ನಡೆಯುವ ದಾಸನೆಂದೂ ಭಾವಿಸಿ ಸಾಧನೆಯನ್ನು ಕೈಕೊಳ್ಳುವ ಅಹಂಕಾರ ನಿರಸನಸ್ಥಿತಿ ದಾಸ್ಯಭಕ್ತಿಯಲ್ಲಿ ಪ್ರಧಾನವಾಗಿ ಕಾಣುತ್ತದೆ. ಆಂಜನೇಯ ಭಕ್ತಿಯನ್ನು ಇದಕ್ಕೆ ಉದಾಹರಣೆಯಾಗಿ ಕೊಡುವುದುಂಟು. ಸಖ್ಯಭಕ್ತಿ, ಭಗವಂತನನ್ನು ತನ್ನ ಸ್ನೇಹಿತನಂತೆ ಕಾಣುತ್ತದೆ. ಆತನೊಡನೆ ಆತ್ಮೀಯ ಸಂಬಂಧವನ್ನು ಕಲ್ಪಿಸಿಕೊಳ್ಳುತ್ತದೆ. ಅರ್ಜುನ ಕೃಷ್ಣರ ಸಂಬಂಧದಲ್ಲಿ ಈ ಭಾವವನ್ನು ಗುರುತಿಸಲಾಗಿದೆ. ಈ ಎರಡು ಭಾವಗಳೂ ಮುಂದುವರಿದಂತೆ ಕೊನೆಯಲ್ಲಿ ಸಂಪೂರ್ಣ ಆತ್ಮನಿವೇದನೆಯಲ್ಲಿ ಪರ್ಯವಸಾನವಾಗುತ್ತದೆ. ಈ ಒಂಬತ್ತು ವಿಧ ಭಕ್ತಿಗಳಲ್ಲಿ ಧ್ಯಾನಕ್ರಿಯೆ ಶರಣಾಗತಿಗಳ ಸಮನ್ವಯವನ್ನು ಕಂಡವರೂ ಇದ್ದಾರೆ. ಇವು ಭಕ್ತಿಮಾರ್ಗದಲ್ಲಿ ಸಾಧಕನನ್ನು ಮುನ್ನಡೆಸುವ ವಿವಿಧ ಹಂತಗಳೆಂದು ಒಟ್ಟಿನಲ್ಲಿ ಪರಿಗಣಿಸಬಹುದಾಗಿದೆ.

ಹೀಗೆ ವೇದೋಪನಿಷತ್ತುಗಳ ಕಾಲದಿಂದಲೂ ಭಕ್ತಿ ಪ್ರತಿಪಾದಿತವಾಗುತ್ತ ಬಂದಿದ್ದರೂ ಅದನ್ನೇ ಒಂದು ಪ್ರಧಾನಮಾರ್ಗವಾಗಿ ಪರಿಗಣಿಸಿ ಭಕ್ತಿಪಂಥಗಳನ್ನು ಬಳಸಿಕೊಂಡು ಬಂದದ್ದು ಅದನ್ನು ಸಾಮೂಹಿಕ ಆಂದೋಳನವಾಗಿಸಿ ಕ್ರಿಯಾಶಾಲಿಯನ್ನಾಗಿ ಮಾಡಿದುದು ದಕ್ಷಿಣ ಭಾರತವೆಂಬುದು ಐತಿಹಾಸಿಕ ಸತ್ಯ. ಅದರಲ್ಲೂ ಕರ್ನಾಟಕ ಇದರ ಕೇಂದ್ರವಾಗಿ ಪರಿಣಮಿಸಿತು. ಈ ಬಗೆಗೆ ಒಂದು ಪ್ರಸಿದ್ಧವಾದ ಹೇಳಿಕೆಯೇ ಇದೆ : 'ಉತ್ಪನ್ನಾ ದ್ರಾವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ ಕ್ವಚಿತ್ ಕ್ವಚಿತ್ ಮಹಾರಾಷ್ಟ್ರೇ ಗೂರ್ಜರೇ ಜೀರ್ಣತಾಂ ಗತ" (ಪದ್ಮಪುರಾಣ, ಉತ್ತರಕಾಂಡ ೧–೪೮). ದ್ರಾವಿಡ ದೇಶದಲ್ಲಿ ಹುಟ್ಟಿ ಕರ್ನಾಟಕದಲ್ಲಿ ವೃದ್ಧಿಯನ್ನು ಪಡೆಯಿತು–ಎಂಬ ಮಾತನ್ನು ಮುಖ್ಯವಾಗಿ ಗಮನಿಸಬೇಕು. ತಮಿಳುನಾಡಿನಲ್ಲಿ ಕ್ರಿ.ಶ. ೧೦ನೇ ಶತಮಾನದ ಹೊತ್ತಿಗಾಗಲೇ ಶೈವಭಕ್ತರಾದ ನಾಯನಾರರು ವೈಷ್ಣವ ಭಕ್ತರಾದ

ಆಳ್ವಾರರು ಭಕ್ತಿಯ ಮಹಾಪೂರವನ್ನೇ ನಿರ್ಮಿಸಿದ್ದರು. ಜಾತಿ ಮತ ಲಿಂಗಭೇದಗಳಿಲ್ಲದ ಭಕ್ತರು ತಮ್ಮ ಆಂತರಿಕ ವಿಕಾಸದಲ್ಲಿ ಭಕ್ತಿಗೆ ತಮ್ಮನ್ನು ಸಮರ್ಪಿಸಿಕೊಂಡಿದ್ದರು. ನಾಯನಾರರ 'ತೇವಾರಂ', ಆಳ್ವಾರರ ತಮಿಳು ಪ್ರಬಂಧಗಳು ಭಕ್ತಿಪಂಥದ ಪ್ರಮುಖ ಘಟ್ಟಗಳಾಗಿ ಪರಿಣಮಿಸಿವೆ. ಆಳ್ವಾರರ ಪ್ರಬಂಧಗಳನ್ನು ರಾಮಾನುಜಾಚಾರ್ಯರು ದ್ರಾವಿಡ ವೇದಗಳೆಂದು ಕರೆದು ಸಂಸ್ಕೃತಗ್ರಂಥಗಳಿಗಿತ್ತ ಮಹತ್ವವನ್ನೇ ಇವುಗಳಿಗೂ ಕೊಟ್ಟರು.

ಮುಂದೆ ಹನ್ನೆರಡನೇ ಶತಮಾನದಲ್ಲಿ ಕರ್ನಾಟಕ ಆಧ್ಯಾತ್ಮಿಕ ಆಂದೋಳನದ ಕೇಂದ್ರವಾಯಿತು. ಬಸವಣ್ಣನವರ ನೇತೃತ್ವದಲ್ಲಿ ರೂಪುಗೊಂಡ ಚಳುವಳಿ ಆಧ್ಯಾತ್ಮಿಕ ತಳಹದಿಯ ಮೇಲೆ ಸಾಮಾಜಿಕ ಕ್ರಾಂತಿಯನ್ನು ಕೈಗೆತ್ತಿಕೊಂಡಿತು. ಅದಕ್ಕೆ ಹಿನ್ನೆಲೆಯಾಗಿ ಷಟ್‌ಸ್ಥಲದ ಮೇಲೆ ಆಧಾರಿತವಾದ ಭಕ್ತಿಪಂಥ ಒಂದು ಹೊಸ ಆಯಾಮವನ್ನೇ ಪಡೆಯಿತು. ಭಕ್ತಿಯೆಂಬುದು ಕೇವಲ ಭಾವುಕವಾದ ಆರಾಧನೆ ಅಥವಾ ಸಮರ್ಪಣೆಯಾಗದೆ ವೈಚಾರಿಕ ನಿಲುವಿನಲ್ಲಿ ಆಂತರಿಕ ವಿಕಾಸದ ಎಲ್ಲ ಹಂತಗಳನ್ನು ಒಳಗೊಳ್ಳುವ ಪೂರ್ಣದೃಷ್ಟಿಯನ್ನು ಪಡೆಯಿತು. ದೇವರನ್ನು ಗುಡಿಗುಂಡಾರಗಳಲ್ಲಿ ಹುಡುಕುವ ಸಾಕಾರ ಶ್ರದ್ಧೆಯನ್ನು, ತನ್ನಲ್ಲಿಯೇ ದೇವರನ್ನು ಕಾಣುವ ಅಂತರ್ಮುಖತತೆಯ ಕಡೆಗೆ ತಿರುಗಿಸಿದರು ಶರಣರು. ಸಾಕಾರವಾದರೂ ನಿರಾಕಾರ ಸ್ವರೂಪದ ಅರುಹಿನ ಕುರುಹು ಇಷ್ಟಲಿಂಗದ ಸುತ್ತ ಅವರ ಭಕ್ತಿ ಬೆಳೆಯಿತು. ಇಲ್ಲಿ ಗಮನಿಸಬೇಕಾದ ಬಹಳ ಮುಖ್ಯವಾದ ಅಂಶವೆಂದರೆ ಇಷ್ಟಲಿಂಗ ಮತ್ತು ಅದನ್ನು ಅವಲಂಬಿಸಿ ಬೆಳೆಯುವ ಭಕ್ತಿಯೂ ಸಹ ಚಲನಶೀಲವಾದುದು ಎಂಬುದನ್ನು ಶರಣರು ಸಾಧಿಸಿ ತೋರಿಸಿದರು. ಷಟ್‌ಸ್ಥಲಮಾರ್ಗದ ವಿಶಿಷ್ಟತೆಯನ್ನು ಕಾಣುವುದು ಈ ಭಕ್ತಿವಿಕಾಸದಲ್ಲಿಯೇ. ಭಕ್ತಸ್ಥಲದಿಂದ ಐಕ್ಯಸ್ಥಲದವರೆಗೆ ಷಟ್‌ಸ್ಥಲ ಮಾರ್ಗದಲ್ಲಿ ಸಾಧಕ ಬೆಳೆದಂತೆಲ್ಲಾ ಅವನ ಉಪಾಸನೆಯ ಲಿಂಗವೂ ಬೆಳೆಯುತ್ತದೆ ; ಅದನ್ನು ಆಶ್ರಯಿಸಿದ ಭಕ್ತಿಯೂ ಬೆಳೆಯುತ್ತದೆ. ವಿವರಣೆಗೆ ಹೋಗದೆ ಒಂದು ಮಾತಿನಲ್ಲಿ ಆ ಸಾಧನೆಯ ವಿಕಾಸದ ಚಿತ್ರವನ್ನು ಇಲ್ಲಿ ನೋಡಬಹುದು.

ಗುರುವಿನಿಂದ ತನ್ನ ಚೈತನ್ಯದ ಸಾಕಾರಸ್ವರೂಪವಾದ ಇಷ್ಟಲಿಂಗವನ್ನು ಪಡೆದು ಉಪಾಸನೆಯಲ್ಲಿ ತೊಡಗಿದ ಸಾಧಕನ ಪ್ರಾರಂಭದ ಹಂತವನ್ನು 'ಭಕ್ತಸ್ಥಲ' ಎಂದು ಕರೆಯಲಾಗಿದೆ. ಇಲ್ಲಿ ಶ್ರದ್ಧಾಭಕ್ತಿಯನ್ನು ಅವಲಂಬಿಸಿ ಇಷ್ಟಲಿಂಗದ ದೃಷ್ಟಿ ಯೋಗ ಬೆಳೆಯುತ್ತದೆ. ಇಲ್ಲಿಂದ ಮಹೇಶ ಸ್ಥಲಕ್ಕೆ ಬಂದಾಗ

ಶ್ರದ್ಧಾಭಕ್ತಿ, ನೈಷ್ಠಿಕ ಭಕ್ತಿಯಾಗಿ ಬೆಳೆಯುತ್ತದೆ. ಅದು ಪ್ರಸಾದಿಸ್ಥಲದಲ್ಲಿ 'ಅವಧಾನ ಭಕ್ತಿ' ಯಾಗಿಯೂ, ಪ್ರಾಣಲಿಂಗಿ ಸ್ಥಲದಲ್ಲಿ 'ಅನುಭಾವ ಭಕ್ತಿ'ಯಾಗಿಯೂ ವಿಕಾಸಗೊಳ್ಳುತ್ತದೆ. ಈ ಹೆಸರುಗಳೇ ಅರ್ಥವಾಗಿದ್ದು ಆಯಾ ಹಂತದ ಭಕ್ತಿಯ ಸ್ವರೂಪವನ್ನೂ ಧ್ವನಿಸುತ್ತವೆ. ಹಾಗೆಯೇ ಮುಂದೆ ಶರಣಸ್ಥಲದಲ್ಲಿ 'ಆನಂದಭಕ್ತಿ'ಯಾಗಿ, ಐಕ್ಯಸ್ಥಲದಲ್ಲಿ 'ಸಮರಸ ಭಕ್ತಿ' ಯಾಗುತ್ತದೆ. ಇದರ ಜೊತೆಯಲ್ಲಿಯೇ ಉಪಾಸನೆಯು ಇಷ್ಟಲಿಂಗವೂ ಷಟ್‌ಸ್ಥಲಗಳಲ್ಲಿ ಮೇಲೇರಿದಂತೆಲ್ಲಾ ಬೆಳೆಯುತ್ತಾ ಬರುತ್ತದೆ. ಮೇಲೆ ಹೇಳಿದ ಆರು ಸ್ಥಲಗಳಲ್ಲಿ ಅದು ಕ್ರಮವಾಗಿ, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗವಾಗುತ್ತದೆ. ಉಪಾಸನೆಯ ಲಿಂಗ ಮತ್ತು ಉಪಾಸನೆಯ ಮಾಧ್ಯಮವಾದ ಭಕ್ತಿ – ಈ ಎರಡೂ ಬೆಳೆಯುತ್ತಾ ಹೋಗುತ್ತವೆನ್ನುವುದು ಬಹಳ ಅರ್ಥವತ್ತಾದ ಪರಿಕಲ್ಪನೆ. ಇದರ ಅರ್ಥ ಉಪಾಸಕ ಹಂತಹಂತವಾಗಿ ಮೇಲೇರಿದಂತೆಲ್ಲಾ ಎತ್ತರದ ನಿಲವನ್ನು ಪಡೆಯುತ್ತಾ ಕೊನೆಯಲ್ಲಿ ಸಮರಸವನ್ನು ಸಾಧಿಸುತ್ತಾನೆಂಬುದು. ಹೀಗೆ ಷಟ್‌ಸ್ಥಲದಲ್ಲಿ ಭಕ್ತಿಮಾರ್ಗ ನಿರಂತರ ಚಲನಶೀಲವಾದ ಒಂದು ತತ್ವವಾದುದಲ್ಲದೆ, ಆ ಯುಗದಲ್ಲಿ ಇದನ್ನು ಸಾಧಿಸಿ ತೋರಿಸಿದ ನೂರಾರು ಶರಣರನ್ನು ಏಕಕಾಲದಲ್ಲಿ ಸೃಷ್ಟಿಸಿದ ಜೀವಂತಶಕ್ತಿಯೂ ಆಗಿ ಪರಿಣಮಿಸಿತು. ವಿವರಗಳನ್ನು ಕಂಡು ಕೊಂಡಂತೆಲ್ಲಾ ಅದರ ಮಹತ್ವ ಇನ್ನೂ ಹೆಚ್ಚು ಮನದಟ್ಟಾಗುತ್ತದೆ. ಇಲ್ಲಿ ಅದು ಪ್ರಸ್ತುತವಲ್ಲ. ಭಕ್ತಿಪಂಥಕ್ಕೆ ಇದು ಕನ್ನಡನಾಡಿನ ವಿಶಿಷ್ಟ ಕೊಡುಗೆ–ಎಂಬುದನ್ನು ಇಲ್ಲಿ ಗಮನಿಸಿದರೆ ಸಾಕು.

ಮಹಾರಾಷ್ಟ್ರದಲ್ಲಿ ಭಕ್ತಿಪಂಥ ಹದಿಮೂರನೇ ಶತಮಾನದಲ್ಲಿ ಕುಡಿಯೊಡೆದು ಬೆಳೆಯತೊಡಗಿತು. ಜ್ಞಾನದೇವ (ಕ್ರಿ. ಶ. ೧೨೭೫–೧೨೯೬) ಅದರ ಪ್ರಾರಂಭದ ಬಹುದೊಡ್ಡ ಶಕ್ತಿಯಾಗಿ ಪರಿಣಮಿಸಿದ. ಅನಂತರ ಬೇರೆ ಬೇರೆ ವರ್ಗದವರು ವೃತ್ತಿಯವರು ಇದನ್ನು ಅಲ್ಲಿ ಕೈಗೆತ್ತಿಕೊಂಡರು. ಚಿಪ್ಪಿಗ ನಾಮದೇವ, ಅಕ್ಕಸಾಲಿಗ ನರಹರಿ ಅಸ್ಪೃಶ್ಯ ಛೋಕ, ನಾಯಿಂದ ಸೇನಾ, ನರ್ತಕಿ ಕನ್ಹೋಪಾತ್ರ–ಈ ಮೊದಲಾದವರು ಭಕ್ತರಾಗಿ ಆ ಮಾರ್ಗದಲ್ಲಿ ನಡೆದರು. ಮುಂದೆ ೧೬ನೇ ಶತಮಾನದಲ್ಲಿ ಏಕನಾಥ (೧೫೩೩–೧೫೯೯) ಮತ್ತು ತುಕಾರಾಮ (೧೫೯೮–೧೬೫೦)–ಇವರ ಕಾಲದಲ್ಲಿ ವಿಠ್ಠಲಭಕ್ತಿ ತುತ್ತತುದಿಯನ್ನು ಮುಟ್ಟಿತು. ೧೭ನೇ ಶತಮಾನದ ರಾಮದಾಸರು (೧೬೦೮–೧೬೮೧) ಈ ಸಂತ ಪರಂಪರೆಯಲ್ಲಿ ಕೊನೆಯವರೆನ್ನಬಹುದು. ಹೀಗೆ ಮಹಾರಾಷ್ಟ್ರದಲ್ಲಿ

ಕಾಲಕಾಲಕ್ಕೆ ಭಕ್ತಿಪಂಥ ಅನೇಕ ಜನ ಭಕ್ತರನ್ನು ರೂಪಿಸುತ್ತಾ ಬಂದಿರುವುದನ್ನು ಕಾಣಬಹುದು.

ಇನ್ನು, ಉತ್ತರ ಭಾರತದ ಭಕ್ತಿಪಂಥದಲ್ಲಿ ಶ್ರೀ ವಲ್ಲಭಾಚಾರ್ಯರ ಹೆಸರನ್ನು ಮೊದಲು ಸ್ಮರಿಸಿಕೊಳ್ಳಬೇಕು. ಮೂಲತಃ ಆಂಧ್ರದವರಾದ ಇವರು ಕಾಶಿಯಲ್ಲಿಯೇ ನೆಲಸಿ ತಮ್ಮದೇ ಆದ ಭಕ್ತಿಪಂಥದ ಪ್ರವರ್ತಕರಾದರು. ವೈಷ್ಣವ ತತ್ವವನ್ನು ಅವಲಂಬಿಸಿ ಅಲ್ಲಿನ ಸರ್ವಾರ್ಪಣೆಯ ಪ್ರಪತ್ತಿಮಾರ್ಗಕ್ಕೆ ಹೆಚ್ಚಿನ ಒತ್ತನ್ನು ಇವರು ಕೊಟ್ಟರು. ಆದರೆ ವೈದಿಕ ಕರ್ಮಾನುಷ್ಠಾನಗಳನ್ನು ಸಡಿಲಗೊಳಿಸಿ ಅನನ್ಯ ಶರಣಾಗತಿಯನ್ನು ಎತ್ತಿಹಿಡಿದುದು ಇವರ ಹಿರಿಮೆ. ಈ ಕೃಷ್ಣಭಕ್ತಿಯ ಸಾಧನೆಯಲ್ಲಿ ಏಳು ಹಂತಗಳನ್ನು ಇವರು ಪ್ರತಿಪಾದಿಸಿದರು, ಭಾವ, ಪ್ರೇಮ ಪ್ರಣಯ, ಸ್ನೇಹ, ದಾನ, ಅನುರಾಗ ಮತ್ತು ವ್ಯಸನ–ಇವುಗಳಿಂದ ಕೃಷ್ಣಭಕ್ತಿ ಬೆಳೆದು ಪುಷ್ಟಿಯಾಗುತ್ತಾ ಹೋಗಬೇಕೆಂಬ ಈ ಮಾರ್ಗವನ್ನು 'ಪುಷ್ಟಿಮಾರ್ಗ' ಎಂದೇ ಕರೆಯಲಾಗಿದೆ. ವೈದಿಕ ಕರ್ಮದ ನಿಯಮಗಳನ್ನು ಹಿಂದೆ ತಳ್ಳಿ ಮಾನವೀಯ ಭಾವನೆಗಳಿಗೆ ಮಹತ್ವ ಕೊಟ್ಟುದರಿಂದ ಸಹಜವಾಗಿಯೇ ಈ ಮಾರ್ಗ ಹೆಚ್ಚು ಜನಪ್ರಿಯವಾಯಿತು. ಭಾಗವತ ಧರ್ಮವನ್ನು ಹೆಚ್ಚು ಪ್ರಚಲಿತಗೊಳಿಸಿತು. ಮುಂದೆ ಕೃಷ್ಣನೊಡನೆ ರಾಧೆಯ ಉಪಾಸನೆಯೂ ಸೇರಿ ಇದು ಇನ್ನೂ ಹೆಚ್ಚು ಆಕರ್ಷಕವಾಯಿತು.

ವಲ್ಲಭಾಚಾರ್ಯರ ಭಕ್ತಿಯ ಏಳು ಹಂತಗಳಲ್ಲಿ ಒಂದಾದ 'ಅನುರಾಗ' ಮಾರ್ಗ ಬಂಗಾಳದ ಚೈತನ್ಯ ಭಕ್ತಿ ಪಂಥದಲ್ಲಿ ಇನ್ನೂ ಹೆಚ್ಚಿನ ಸ್ಥಾನವನ್ನು ಪಡೆಯಿತು. ಚೈತನ್ಯಪ್ರಭು (೧೪೮೫–೧೫೩೩) ಮೊದಲು ಮಹಾಪಂಡಿತನೂ ತರ್ಕ ನ್ಯಾಯ ಶಾಸ್ತ್ರ ನಿಪುಣನೂ ಆಗಿದ್ದು ಇದ್ದಕ್ಕಿದ್ದಂತೆ ಮಹಾಪರಿವರ್ತನೆಗೆ ಒಳಗಾಗಿ ಭಕ್ತಿಪಂಥವೊಂದರ ಪ್ರವರ್ತಕನಾಗಿ ಪರಿಣಮಿಸಿದರು. ಕೃಷ್ಣಭಕ್ತಿಯ ಪರಾಕಾಷ್ಠೆಯನ್ನು ಇಲ್ಲಿ ಕಾಣಬಹುದು. ಅದರಲ್ಲೂ ರಾಧಾಕೃಷ್ಣರ ಪ್ರೇಮಕ್ಕೆ ಅತಿ ಹೆಚ್ಚಿನ ಪ್ರಶಸ್ತ್ಯ ಈತನಲ್ಲಿ ದೊರೆಯಿತು. ಬಾಹ್ಯಪ್ರಜ್ಞೆಯನ್ನೆ ಕಳೆದುಕೊಳ್ಳುವಂತಹ ಅತ್ಯಂತ ತನ್ಮಯತೆಯಿಂದ ಕುಣಿಯುತ್ತಿದ್ದ ಈತನ ಭಕ್ತಿಯ ಆವೇಶ ಅನೇಕ ಭಕ್ತರನ್ನು ಈತನ ಬಳಿಗೆ ಆಕರ್ಷಿಸಿತು. ಚೈತನ್ಯ ಪಂಥ ಪ್ರಭಾವಶಾಲಿಯಾಗಿ ಬೆಳೆಯಿತು. ತನ್ನ ಪಂಥ ಪ್ರತಿಪಾದನೆಗಾಗಿ ಈತ ಯಾವ ಗ್ರಂಥವನ್ನೂ ರಚಿಸಲಿಲ್ಲ. ಆದರೆ ಆತನ ಅನುಯಾಯಿಗಳಲ್ಲಿ ಪ್ರಮುಖರಾದ ರೂಪಗೋಸ್ವಾಮಿ, ಸನಾತನ ಗೋಸ್ವಾಮಿ, ಜೀವಗೋಸ್ವಾಮಿ ಮೊದಲಾದವರು ತಮ್ಮ ಗುರುವಿನ ತತ್ವಗಳನ್ನು ವಿಶ್ಲೇಷಿಸಿ ಕೃತಿಗಳನ್ನು ರಚಿಸಿದ್ದಾರೆ. ಭಕ್ತಿಯ

ಪಂಚ ಪ್ರಭೇದಗಳನ್ನು ಇಲ್ಲಿ ಮುಖ್ಯವಾಗಿ ಕಾಣಬಹುದು. ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ, ಶಾಂತ– ಈ ಪಂಚವಿಧ ಭಕ್ತಿಗಳನ್ನು ಸಮರ್ಥವಾಗಿ ಪ್ರತಿಪಾದಿಸಿದುದಲ್ಲದೆ ಭಕ್ತಿಯನ್ನೂ ಒಂದು ರಸವೆಂದು ಇಲ್ಲಿ ಪರಿಗಣಿಸಲಾಗಿದೆ. ರಾಮಾನುಜಾಚಾರ್ಯರ ಸಿದ್ಧಾಂತದ ಪ್ರಭಾವವೂ ಇವರ ಮೇಲಾಗಿರುವುದನ್ನು ಗುರುತಿಸಬಹುದಾಗಿದೆ.

ಉತ್ತರಭಾರತದ ಸಂತರಲ್ಲಿ ಪ್ರಮುಖರಾದ ಕಬೀರದಾಸ್, ಸೂರದಾಸ್, ಮೀರಾ, ತುಲಸೀದಾಸ್ ಇವರನ್ನೂ ಈ ಸಂದರ್ಭದಲ್ಲಿ ಗಮನಿಸಬೇಕು. ನಿರ್ಗುಣ ಪಂಥದಲ್ಲಿ ಪ್ರಮುಖನೆಂದು ಹೇಳಬಹುದಾದ ಕಬೀರದಾಸರ ಸಾಧನೆ ವಿಶಿಷ್ಟವಾದುದು. ಆತನ ಸ್ಥಾನ ಬಹಳ ಹಿರಿದಾದುದು. ಈತನ ಗುರು ರಾಮಾನಂದ (೧೪೦೦–೧೪೭೦) ಸಂಪ್ರದಾಯಗಳಿಗೆ ಕಟ್ಟುಬೀಳದೆ ಉದಾತ್ತವಾದ ಆಶಯಗಳನ್ನುಳ್ಳವರಾಗಿ ಜಾತಿಮತಕುಲಗಳನ್ನು ತೊಡೆದುಹಾಕಿ ಎಲ್ಲ ವರ್ಗಗಳವರನ್ನೂ ಶಿಷ್ಯರನ್ನಾಗಿ ಅಂಗೀಕರಿಸಿದವರು. ಸೇನಾ ಎಂಬ ಕ್ಷೌರಿಕ, ರವಿದಾಸ ಎಂಬ ಚಮ್ಮಾರ, ಅಂತೆಯೇ ನೆಯ್ಗೆಯ ಕಬೀರ–ಈ ಮೊದಲಾದವರು ಈತನ ಶಿಷ್ಯರಾಗಿದ್ದರು. ಕಬೀರನಂತೂ ಹಿಂದೂ ಮುಸ್ಲಿಮರಿಬ್ಬರ ಗೌರವಕ್ಕೂ ಪಾತ್ರವಾಗಿ ತಮ್ಮ ಸಾಧನೆಯಿಂದ ಮಹೋನ್ನತ ಸ್ಥಾನವನ್ನು ಪಡೆದಿರುವವರು. ಸೂರದಾಸರ ಸಾಧನೆಯೂ ಕಡಮೆಯಾದುದಲ್ಲ. ಪುಷ್ಟಿ ಮಾರ್ಗದ ಅನುಯಾಯಿಯಾದ ಆತನ ಭಕ್ತಿಗೀತೆಗಳು ಜನಮನವನ್ನು ಸೂರೆಗೊಂಡುವು. ಮಧುರ ಭಕ್ತಿಯಲ್ಲಿ ಉತ್ತುಂಗಶಿಖರವನ್ನು ಮುಟ್ಟಿದ ಮೀರಾಬಾಯಿಯ ಸಾಧನೆಯಂತೂ ಆ ಭಕ್ತಿ ಪಂಥದಲ್ಲಿ ಒಂದು ವಿಶಿಷ್ಟವಾದ ಘಟ್ಟವಾಗಿ ಪರಿಣಮಿಸಿತು. ಹಿಂದೀ ಸಾಹಿತ್ಯದಲ್ಲಿ ಮನೆಮಾತಾದ 'ರಾಮಚರಿತ ಮಾನಸ'ದ ಕರ್ತೃ ತುಲಸೀದಾಸರದು ಅತ್ಯಂತ ನಿಷ್ಠವಾದ ರಾಮಭಕ್ತಿ. ೧೪ ರಿಂದ ೧೬ನೇ ಶತಮಾನದ ಅವಧಿಯಲ್ಲಿ ಆಗಿ ಹೋದ ಈ ಮಹಾಭಕ್ತರಿಂದ ಉತ್ತರ ಭಾರತದ ಭಕ್ತಿಪಂಥ ಪ್ರಕಾಶಮಾನವಾಗಿ ಬೆಳಗುತ್ತಿರುವುದನ್ನು ಕಾಣಬಹುದು.

ಸ್ವಲ್ಪ ಹೆಚ್ಚು ಕಡಮೆ ಇದೇ ಕಾಲದಲ್ಲಿಯೇ ದಕ್ಷಿಣ ಭಾರತದಲ್ಲಿ, ಅದರಲ್ಲೂ ಮುಖ್ಯವಾಗಿ ಕರ್ನಾಟಕದಲ್ಲಿ ಹರಿದಾಸರ ಭಕ್ತಿಸಾಧನೆ ಸಮೃದ್ಧವಾಗಿ ಬೆಳೆಯಿತು. ೧೨–೧೩ನೆ ಶತಮಾನದಲ್ಲಿ ಆಗಿ ಹೋದ ಮಧ್ವಾಚಾರ್ಯರ ದ್ವೈತಸಿದ್ಧಾಂತದ ತಳಹದಿಯ ಮೇಲೆ ರೂಪುಗೊಂಡದ್ದು ದಾಸಭಕ್ತಿ. ಈ ಸಿದ್ಧಾಂತದ ಸಾರಸರ್ವಸ್ವವನ್ನೂ ಶ್ರೀಪಾದರಾಯರು ಸಂಗ್ರಹಿಸಿದ್ದಾರೆ :

"ಶ್ರೀಮನ್ಮಧ್ವಮತೇ ಹರಿಃ ಪರಿತರಃ ಸತ್ಯಂ ಜಗತ್ತತ್ತ್ವತೋ ।
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂ ಗತಾಃ ॥
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ।
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋ ಹರಿಃ ॥

ಅಂದರೆ ಮಧ್ವಮತದಲ್ಲಿ ಹರಿಯೇ ಸರ್ವೋತ್ತಮ ; ಜಗತ್ತು ಪಾರಮಾರ್ಥಿಕ ಸತ್ಯ. ಜೀವಗಣಗಳಲ್ಲಿ ಭೇದವೂ ಸಹ ಪಾರಮಾರ್ಥಿಕ ಸತ್ಯ ಮತ್ತು ನಿತ್ಯ. ಜೀವಗಳು ಹರಿಯು ಅನುಚರರು ; ಮತ್ತು ನಿತ್ಯ ತಾರತಮ್ಯವುಳ್ಳವರು. ಸ್ವರೂಪ ಸುಖಾನುಭವವೇ ಮುಕ್ತಿ. ನಿರ್ಮಲ ಭಕ್ತಿಯೇ ಮುಕ್ತಿಗೆ ಸಾಧನ. ಪ್ರತ್ಯಕ್ಷ ಅನುಮಾನ, ಆಗಮಗಳು ಸಾಧಕ ಪ್ರಮಾಣಗಳು, ಹರಿಯು ಆಗಮಮಾತ್ರ ವೇದ್ಯನು – ಹೀಗೆ ಮಧ್ವಾಚಾರ್ಯರ ಸಿದ್ಧಾಂತವನ್ನು ಸಂಗ್ರಹಿಸಲಾಗಿದೆ. ಈ ತಾತ್ವಿಕ ಸಿದ್ಧಾಂತವೇ ಹರಿದಾಸರಿಗೆ ಹಿನ್ನೆಲೆಯಾಯಿತು ಶರಣರಿಗೆ ಷಟ್‌ಸ್ಥಲವಿದ್ದಂತೆ.

ಈ ಹರಿದಾಸ ಭಕ್ತಿಪಂಥದಲ್ಲಿ ನಾಲ್ಕು ಹಂತಗಳನ್ನು ಮಾಡಬಹುದೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಶ್ರೀ ಮಧ್ವಾಚಾರ್ಯರು ಮತ್ತು ಅವರ ಶಿಷ್ಯರಾದ ನರಹರಿತೀರ್ಥರು ಜಯತೀರ್ಥರು ೧೨–೧೩ನೇ ಶತಮಾನಗಳಲ್ಲಿ ಬೋಧಿಸಿದುದು ಮೊದಲನೆಯ ಘಟ್ಟ. ಎರಡನೆಯ ಘಟ್ಟ ಪುರಂದರದಾಸ, ಕನಕದಾಸರನ್ನು ಕೇಂದ್ರವಾಗಿ ಉಳ್ಳದ್ದು (೧೫–೧೬ನೇ ಶತಮಾನ). ಅನಂತರ ೧೭–೧೮ನೇ ಶತಮಾನಗಳಲ್ಲಿ ವಿಜಯದಾಸ ಮೊದಲಾದವರ ನೇತೃತ್ವದಲ್ಲಿ ನಡೆದುದು ಮೂರನೆಯ ಹಂತ. ಇನ್ನೂ ಈಚೆಗಿನ ಪ್ರಾಣೇಶದಾಸರು ಮೊದಲಾದವರನ್ನು ಸೇರಿಸಿ ನಾಲ್ಕನೆ ಘಟ್ಟ ಎಂದು ಕರೆದಿದ್ದಾರೆ ಶ್ರೀ ಪಂಚಮುಖಿ ಅವರು. ವಿಭಾಗದ ದೃಷ್ಟಿಯಿಂದ ಹೀಗೆ ನಾಲ್ಕು ಘಟ್ಟಗಳನ್ನು ಗುರುತಿಸಬಹುದಾದರೂ ವಿಶಿಷ್ಟಶಕ್ತಿ ಮತ್ತು ಸಾಂಸ್ಕೃತಿಕ ಪ್ರಭಾವದ ದೃಷ್ಟಿಯಿಂದ ನೋಡಬಹುದಾದುದು ಒಂದೇ ಘಟ್ಟ ; ಅದು ಪುರಂದರದಾಸ, ಕನಕದಾಸರ ಯುಗ.

ಒಂದು ದೃಷ್ಟಿಯಿಂದ ಶ್ರೀಪಾದರಾಜರೇ ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರೆನ್ನಬಹುದು. ಅವರು ನೆಟ್ಟ ಹರಿದಾಸ ಸಾಹಿತ್ಯದ ಬೀಜ ಶ್ರೀ ವ್ಯಾಸರಾಯರ ಆರೈಕೆಯಿಂದ ಮೊಳಕೆಯೊಡೆದು, ಶ್ರೀ ವಾದಿರಾಜರ ಸಾಧನೆಯಿಂದ ಶಾಖೋಪಶಾಖೆಗಳಾಗಿ ಬೆಳೆಯಿತು. ಇವರನ್ನು ಹರಿದಾಸ ಸಾಹಿತ್ಯದ ಬೆಳವಣಿಗೆಗೆ ಕಾರಣರಾದ ರತ್ನತ್ರಯರೆಂದು ಡಾ. ಜಿ.

ವರದರಾಜರಾಯರು ಕರೆದಿದ್ದಾರೆ ('ಹರಿದಾಸ ಸಾಹಿತ್ಯ ಸಾರ'). ಹೀಗೆ ಹರಿದಾಸ ಸಾಹಿತ್ಯ ಬೆಳವಣಿಗೆಯ ಹಾದಿಯಲ್ಲಿರುವಾಗ ಪ್ರತಿಭಾಶಾಲಿಗಳಾದ ಪುರಂದರದಾಸ, ಕನಕದಾಸರ ಆಗಮನದಿಂದ ಹೊಸಸುಗ್ಗಿಯ ಸುವರ್ಣಯುಗ ಆರಂಭವಾಯಿತು. ಪುರಂದರದಾಸರಂತೂ ತಮ್ಮ ಅಗಾಧವಾದ ಲೋಕಾನುಭವದಿಂದ ಕೂಡಿದ ಅಸಂಖ್ಯಾತ ಕೀರ್ತನೆಗಳಲ್ಲಿ ತಮ್ಮ ಭಕ್ತಿಸಾಧನೆಯ ವಿವಿಧ ಮುಖಗಳನ್ನು ಪ್ರತಿಭಾಪೂರ್ಣವಾಗಿ ಹರಿಯಬಿಟ್ಟಿದ್ದಾರೆ. ಈ ಕ್ಷೇತ್ರದಲ್ಲಿ ಕನಕದಾಸರ ಸಾಧನೆಯೂ ಕಡಮೆಯಾದುದೇನಲ್ಲ. ಪುರಂದರ ದಾಸರಿಗೆ ಹೊಯ್‌ಕಯ್ಯಾಗಿ ನಿಲ್ಲಬಲ್ಲವರೆಂದರೆ ಕನಕದಾಸರೊಬ್ಬರೇ. ಭಾರತೀಯ ಭಕ್ತಿಪಂಥದ ಈ ಹಿನ್ನೆಲೆಯಲ್ಲಿ ಅವರ ಭಕ್ತಿ ಸಾಧನೆಯನ್ನು ಸಂಗ್ರಹವಾಗಿ ಈಗ ನೋಡಬಹುದಾಗಿದೆ.

ಇಡೀ ಹರಿದಾಸ ಪರಂಪರೆಯಲ್ಲಿ ಕನಕದಾಸರ ಸ್ಥಾನ ಅನೇಕ ಕಾರಣಗಳಿಂದ ವಿಶಿಷ್ಟವಾದುದು. ಅಂದು ಸಮಾಜದ ಕೆಳವರ್ಗದವರೆಂದು ಪರಿಗಣಿಸಲ್ಪಟ್ಟ ಕುರುಬರಲ್ಲಿ ಜನ್ಮವೆತ್ತ, ವಿಜಯನಗರದ ಸಾಮ್ರಾಜ್ಯಕ್ಕೆ ನಿಷ್ಠೆಯನ್ನುಳ್ಳ ಮಹಾಶೂರನಾದ ನಾಯಕನಾಗಿದ್ದು ಲೌಕಿಕ ಅಧಿಕಾರವನ್ನು ಪಡೆದಿದ್ದರೂ ಅಂತರಂಗದಲ್ಲಿ ನಿರಂತರವಾಗಿ ಮೊರೆಯುತ್ತಿದ್ದ ಆಧ್ಯಾತ್ಮಿಕ ಅಭೀಪ್ಸೆಗೆ ಓಗೊಟ್ಟು ಲೌಕಿಕವನ್ನು ತ್ಯಜಿಸಿ ದಾಸಪಂಥದ ಕಡೆಗೆ ಆಕರ್ಷಿತವಾದುದು ದಾಸಪರಂಪರೆಗೇ ಒಂದು ಗೌರವವನ್ನು ತಂದುಕೊಡುವುದಕ್ಕೆ ಕಾರಣವಾಯಿತು. ಶ್ರೀ ವ್ಯಾಸರಾಯರ ಸರ್ವಸಮತಾಭಾವದ ಉದಾರದೃಷ್ಟಿ ಆತನನ್ನು ಆ ಕಡೆಗೆ ಸೆಳೆಯಿತು. ವ್ಯಾಸರಾಯರ ಇತರ ಮೇಲುವರ್ಗದ ಶಿಷ್ಯರ ಕೀಳು ವರ್ತನೆಯ ಮಧ್ಯದಲ್ಲಿಯೂ ಈತ ತನ್ನ ಆಧ್ಯಾತ್ಮಿಕ ಔನ್ನತ್ಯವನ್ನೂ ಮೆರೆದು ಗುರು ಕೃಪೆಯನ್ನು ಪಡೆಯಲು ಸಾಧ್ಯವಾಯಿತು. ಈ ಸಂದರ್ಭದಲ್ಲಿ ಕೆಲಕಾಲ ಜೊತೆಯಲ್ಲಿದ್ದ ಪುರಂದರದಾಸರೂ ಇವರ ಮಹತ್ವವನ್ನು ಗುರುತಿಸಿ ಮೆಚ್ಚಿ ನುಡಿದಿರುವುದರ ಸೂಚನೆ ಅವರ ಒಂದು ಕೀರ್ತನೆಯಲ್ಲಿಯೂ ಕಂಡುಬರುತ್ತದೆ. ಸಹಜವಾಗಿಯೇ ಕಾವ್ಯಪ್ರತಿಭೆಯನ್ನು ಪಡೆದಿದ್ದ ತಿಮ್ಮಪ್ಪನಾಯಕ ವೈರಾಗ್ಯಪರನಾಗಿ ಗುರುಕೃಪೆಯನ್ನು ಪಡೆದು ಹರಿದಾಸ ಕನಕದಾಸರಾಗಿ ಕೀರ್ತನೆಗಳನ್ನು ಜನಮನಕ್ಕೆ ಮುಟ್ಟಿಸುತ್ತಾ ಸಂಚಾರವನ್ನು ಕೈಕೊಂಡುದು ಒಂದು ಪ್ರಧಾನ ಘಟ್ಟವಾಗಿ ಪರಿಣಮಿಸಿತು.

ಕೀರ್ತನೆಗಳಲ್ಲದೆ ಕೆಲವು ಕಾವ್ಯಗಳನ್ನೂ ರಚಿಸಿರುವುದು ಕನಕದಾಸರ ಇನ್ನೊಂದು ವಿಶಿಷ್ಟತೆ. ಮೋಹನ ತರಂಗಿಣಿ, ನಳಚರಿತ್ರೆ, ರಾಮಧಾನ್ಯ ಚರಿತೆ, ಹರಿಭಕ್ತಿಸಾರ– ಈ ನಾಲ್ಕು ಕೃತಿಗಳನ್ನು ಕನಕದಾಸರು ರಚಿಸಿದ್ದಾರೆ. ಭಾಗವತದ

ಕಥಾವಸ್ತುವನ್ನುಳ್ಳ ದೀರ್ಘವಾದ ಈ ಸಾಂಗತ್ಯಕಾವ್ಯ ಬಹುಶಃ ಅವರ ಮೊದಲನೆಯ ಕೃತಿ. ಮುಂದೆ ಮಧ್ವಸಿದ್ಧಾಂತದ ಪ್ರಭಾವಕ್ಕೆ ಒಳಗಾಗಿ ಹರಿದಾಸರಾಗುವುದಕ್ಕೆ ಮುನ್ನ ಅವರು ರಾಮಾನುಜರ ಶ್ರೀ ವೈಷ್ಣವ ಪಂಥದಿಂದ ಪ್ರಭಾವಿತರಾಗಿದ್ದರೆಂಬುದಕ್ಕೆ ಇದು ಸಾಕ್ಷಿಯಾಗಿದೆ. ಈ ಕಾವ್ಯದ ಪ್ರಾರಂಭದಲ್ಲಿ ರಾಮಾನುಜಾಚಾರ್ಯರನ್ನೂ ಆ ಪರಂಪರೆಯಲ್ಲಿ ಖ್ಯಾತರಾದ ಗುರು ತಾತಾಚಾರ್ಯರನ್ನು ಭಕ್ತಿಯಿಂದ ಸ್ಮರಿಸಿಕೊಳ್ಳುತ್ತಾರೆ. ಆ ವೇಳೆಗೆ ಶ್ರೀವೈಷ್ಣವ ಸಿದ್ಧಾಂತದ ಪರಿಚಯ ಅವರಿಗಾಗಿದ್ದರೂ ಕಾವ್ಯದಲ್ಲಿ ಅದರ ಪ್ರಭಾವವಿಲ್ಲ. ಶೃಂಗಾರಪ್ರಧಾನವಾದ ಈ ಕಾವ್ಯ. ಅಲ್ಲಲ್ಲಿ ಭಕ್ತಿಸ್ಪರ್ಶವನ್ನು ಪಡೆದು ಸುಂದರವಾದ ವರ್ಣನೆಗಳಿಂದ ಆದರಣೀಯವಾಗಿದೆ. ಎರಡನೆಯದು ಅವರ ಅತ್ಯಂತ ಜನಪ್ರಿಯವಾದ ಷಟ್ಪದಿಕಾವ್ಯ ನಳಚರಿತ್ರೆ, ರೋಮಶ ಮಹಾಮುನಿಯು ಕೌಂತೇಯನಿಗೆ ಹೇಳಿದಂತೆ ನಳ ಚಕ್ರವರ್ತಿಯ ಕಥೆಯನ್ನು ಆಕರ್ಷಕವಾಗಿ ನಿರೂಪಿಸಿದ್ದಾರೆ. 'ರಾಮಧಾನ್ಯ ಚರಿತ್ರೆ' ಇಡೀ ಕನ್ನಡ ಸಾಹಿತ್ಯದಲ್ಲಿಯೇ ಒಂದು ವಿಶಿಷ್ಟವಾದ ಕೃತಿ. ವಿವಿಧ ಧಾನ್ಯಗಳ ತರತಮವನ್ನೇ ವಸ್ತುವಾಗಿಟ್ಟುಕೊಂಡು ಒಂದು ರೀತಿಯ ಅಣಕುವಾಡಿನಂತೆ ಕಾಣುವ ಈ ಪುಟ್ಟ ಕೃತಿ ನರೆದಲೆಗ ಮತ್ತು ನೆಲ್ಲುಗಳ ಪರಸ್ಪರ ಮೂದಲಿಕೆಯ ಸಂವಾದದಲ್ಲಿ ಸಾಮಾಜಿಕ ವರ್ಗವಿಭೇದಗಳ ಏರುಪೇರನ್ನು ಸೂಚಿಸುವ ಸಾಂಕೇತಿಕತೆಯುನ್ನು ಪಡೆದುಕೊಂಡು ಅರ್ಥಪೂರ್ಣವಾಗುತ್ತದೆ. ಕೊನೆಯಲ್ಲಿ ಸಾಮಾನ್ಯರಿಗೆ ಆಹಾರವಾಗುವ ನರೆದಲಗನೇ ಗೆದ್ದು ರಾಘವನಿಂದ ಮೆಚ್ಚುಗೆಯನ್ನಲ್ಲದೆ ಆತನ ಹೆಸರನ್ನು ಪಡೆದು ಅದೇ ಮುಂದೆ ರಾಗಿಯಾಗಿ ಪರಿಣಮಿಸುವ ಇಂತಹ ಇನ್ನೊಂದು ಕೃತಿ ಕನ್ನಡದಲ್ಲಿಲ್ಲ.

ಕನಕದಾಸರ ಭಕ್ತಿಸಾಧನೆಯ ದೃಷ್ಟಿಯಿಂದ 'ಹರಿಭಕ್ತಿಸಾರ' ಬಹಳ ಮುಖ್ಯವಾದ ಕೃತಿ ಮತ್ತು ಜನಪ್ರಿಯವಾದುದೂ ಹೌದು. 'ರಕ್ಷಿಸು ನಮ್ಮನನವರತ' ಎಂಬ ಸಾಲಿನೊಡನೆ ಮುಗಿಯುವ ೧೦೮ ಭಾಮಿನೀ ಷಟ್ಪದಿಗಳನ್ನೂ ಅನಂತರ ಕೆಲವು ಪದ್ಯಗಳಲ್ಲಿ ಫಲಶ್ರುತಿಯನ್ನೂ ಒಳಗೊಂಡ ಈ ಚಿಕ್ಕ ಕೃತಿ ಶತಕ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನವನ್ನು ಪಡೆದಿದೆ. ಪೌರಾಣಿಕ ಕಥಾ ಸಂದರ್ಭಗಳೂ ಅಲ್ಲಲ್ಲಿ ತಾತ್ವಿಕ ಚಿಂತನಗಳು, ಇವುಗಳ ಹಿನ್ನೆಲೆಯಲ್ಲಿ ಮೂಡಿ ಬಂದ ಅನನ್ಯ ಶರಣಾಗತಿಯ ಭಕ್ತಿ ಪ್ರವಾಹ ಇಲ್ಲಿ ನಿರರ್ಗಳವಾಗಿ ಹರಿಯುತ್ತದೆ. ಪ್ರಪತ್ತಿ ಮಾರ್ಗದ ಸಂಪೂರ್ಣ ಶರಣಾಗತಿಯನ್ನು ಇಲ್ಲಿನ ಭಕ್ತಿಮಾರ್ಗದಲ್ಲಿ ಕಾಣಬಹುದಾಗಿದೆ :

"ನೀರ ಮೇಲಿನ ಗುಳ್ಳೆಯಂದದಿ
ತೋರಿಯಡಗುವ ದೇಹವೀ ಸಂ
ಸಾರ ಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ ।
ತೋರಿಸಚಾಲನಂದ ಪದವಿಯ
ಸೇರಿಸಕಟಾ ನಿನ್ನವೊಲ್ ನಮ
ಗಾರುಂಟು ಬಾಂಧವರು ರಕ್ಷಿಸು ನಮ್ಮನನವರತ ॥ (೭೫)

ಇಂತಹ ಅನೇಕ ಮಾತುಗಳು ಇಲ್ಲಿ ಬರುತ್ತವೆ. ಹಿಂದೆ ಹೇಳಿದ ಸ್ಮರಣಾದಿ ನವವಿಧ ಭಕ್ತಿಗಳ ವಿವಿಧ ಸ್ವರೂಪಗಳು ವ್ಯಕ್ತವಾಗುತ್ತಾ ಭಕ್ತಿಯನ್ನು ಪೋಷಿಸುತ್ತವೆ. ವಿಷ್ಣುಪಾರಮ್ಯವನ್ನೂ, ಅವನ ಲೀಲಾವತಾರಗಳ ಪೌರಾಣಿಕ ಕಥಾನಕಗಳನ್ನೂ ಬಳಸಿಕೊಂಡು ಭಕ್ತನ ಹೃದಯದ ಮೊರೆ ಹೊರಹೊಮ್ಮುತ್ತದೆ. ಸಹಜವಾಗಿ ಉಕ್ಕಿ ಹರಿಯುವ ಈ ಭಕ್ತಿ ಹೊನಲು ಭಾವುಕರ ಮನವನ್ನು ಮುಟ್ಟಿ ಆರ್ದ್ರಗೊಳಿಸುವಂತಿದೆ. "ದೀನ ನಾನು, ಸಮಸ್ತಲೋಕಕೆ ದಾನಿ ನೀನು"– ಎಂಬ ಪ್ರಸಿದ್ಧವಾದ ಪದ್ಯ ತುಂಬಾ ಜನಪ್ರಿಯವಾಗಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಇನ್ನು ಕನಕದಾಸರ ಸಾಧಕ ಜೀವನದ ಸ್ಪಷ್ಟ ಚಿತ್ರವನ್ನು ನಾವು ಕಂಡುಕೊಳ್ಳುವುದು ಅವರ ಕೀರ್ತನೆಗಳಲ್ಲಿಯೇ. ಪುರಂದರದಾಸರಿಗೆ ಹೋಲಿಸಿದರೆ ಅವರ ಕೀರ್ತನೆಗಳ ಸಂಖ್ಯೆ ಕಡಮೆಯೆಂದೇ ಹೇಳಬೇಕು. ಆದರೂ ಅವುಗಳು ದಾಸ ಸಾಹಿತ್ಯದಲ್ಲಿ ವಿಶಿಷ್ಟವಾದ ಒಂದು ಸುವರ್ಣ ಸಂಪುಟವಾಗಿ ಪರಿಣಮಿಸಿವೆ. ನೇರವಾದ ನಿಷ್ಕಪಟ ಮನೋಧರ್ಮದ ಸಾಧಕರಾಗಿ ಬೆಳೆದ ಅವರ ಆಧ್ಯಾತ್ಮಿಕ ಯಾತ್ರೆಯ ವಿವಿಧ ಹಂತಗಳನ್ನು ಅವರ ಕೀರ್ತನೆಗಳು ಪ್ರತಿಬಿಂಬಿಸುತ್ತವೆ. ತಮ್ಮ ಸುತ್ತಲಿನ ಪರಿಸರವನ್ನು ಕಣ್ತೆರೆದು ನೋಡಿದ ಅವರು ಜಾತಿಮತಗಳ ತಾರತಮ್ಯಗಳನ್ನೂ, ಧರ್ಮದ ಆಚರಣೆಯ ಹಿನ್ನೆಲೆಯಲ್ಲಿರುವ ಕುಟಿಲ ಕುಹಕಗಳನ್ನೂ, ಆಧ್ಯಾತ್ಮಿಕ ಬೂಟಾಟಿಕೆಗಳನ್ನೂ ಶೋಷಣೆಯ ಜಾಣ್ಮೆಯನ್ನೂ ಕಂಡು ಕೆರಳುತ್ತಾರೆ, ಸಿಡಿದು ನಿಲ್ಲುತ್ತಾರೆ, ಅನೇಕ ಕೀರ್ತನೆಗಳಲ್ಲಿ ಕಂಡು ಬರುವ ಅವರ ಕಟುವಾದ ಮಾತುಗಳ ಹಿಂದೆ ಅವರ ವೈಚಾರಿಕ ಮನೋಧರ್ಮ ಮಿಂಚುತ್ತದೆ. ಸಾಂಪ್ರದಾಯಿಕ ಚೌಕಟ್ಟಿನೊಳಗಿದ್ದೂ ಅದನ್ನು ಮೀರುವ ಈ ಮನೋಧರ್ಮದ ಹಿಂದೆ ಅಪಾರವಾದ ಮಾನವೀಯ ಅನುಕಂಪ, ಸಾಮಾಜಿಕ ಕಳಕಳಿ ಕಂಡುಬರುತ್ತದೆ. ಅಂತಹ ಕೀರ್ತನೆಗಳಲ್ಲಿ ಕಂಡು ಬರುವ ಮಾನವೀಯ ಮಿಡಿತವನ್ನೂ, ಸಾಮಾಜಿಕ ಪ್ರಜ್ಞೆಯನ್ನೂ,

ಕಾವ್ಯ ಮೌಲ್ಯಾದಿಗಳನ್ನೂ ಇಲ್ಲಿ ವಿವೇಚಿಸಲು ಹೋಗದೆ ಅವರ ಭಕ್ತಿಸಾಧನೆಯ ವಿವಿಧ ಹಂತಗಳನ್ನು ಗುರುತಿಸಲು ಇಲ್ಲಿ ಉದ್ದೇಶಿಸಲಾಗಿದೆ.

ಕನಕದಾಸರ ಭಕ್ತಿಗೆ ಹಿನ್ನೆಲೆಯಾಗಿ ನಿಂತದ್ದು ಮಧ್ವಸಿದ್ಧಾಂತದ ಹರಿದಾಸ ಭಕ್ತಿ ಎಂಬುದು ನಿಜವಾದರೂ ಅದಕ್ಕಿಂತ ಮೊದಲೇ ಅವರ ಮೇಲೆ ಪ್ರಭಾವವನ್ನು ಬೀರಿದ ಶ್ರೀವೈಷ್ಣವ ಪ್ರಪತ್ತಿಭವವೂ ಪ್ರಧಾನವಾಗಿ ಅವರ ಕೀರ್ತನೆಗಳಲ್ಲಿ ಕಂಡುಬರುತ್ತದೆ. ಸಾಂಪ್ರದಾಯಿಕವಾದ ಪೌರಾಣಿಕ ನಂಬಿಕೆಗಳೂ ಕಲ್ಪನೆಗಳೂ ಕಥಾನಕಗಳೂ ಅವರ ಸಾಧನೆಯ ಮಾರ್ಗದಲ್ಲಿ ಇಣುಕು ಹಾಕುತ್ತಿದ್ದರೂ ಅವುಗಳನ್ನು ಮೀರಿ ಆಂತರಿಕ ವಿಕಾಸದ ಅಂತರ್ ದೃಷ್ಟಿಯನ್ನು ಅವಲಂಬಿಸಿ ಅವರ ಭಕ್ತಿ ಬೆಳೆಯುತ್ತಾ ಊರ್ಧ್ವಗಾಮಿಯಾಗಿದೆ. ಸಿದ್ಧಾಂತ ಯಾವುದೇ ಇದ್ದರೂ ಭಕ್ತಿಯ ಸಹಜವಾದ ವಿಕಾಸ ಮಾರ್ಗದಲ್ಲಿ ಕೆಲವು ಮೂಲಭೂತವಾದ ಭಾವನೆಗಳ ಅಭಿವ್ಯಕ್ತಿಯನ್ನೂ ಅನುಭವದ ಅನ್ವೇಷಣೆಯನ್ನೂ ಕಾಣುತ್ತೇವೆ. ಭಾರತೀಯ ಭಕ್ತಿ ಪಂಥಗಳ ವಿವಿಧತೆಯಲ್ಲಿ ಕಾಣುವ ಏಕಸೂತ್ರ ಈ ಆಂತರಿಕ ಅಭೀಪ್ಸೆಯ ಮುನ್ನಡೆ. ಇದಕ್ಕೆ ಸಾಧಕವಾಗುವಂತೆ ಕೆಲವು ಪಂಥಗಳು ನವವಿಧ ಭಕ್ತಿಯನ್ನು ಹೇಳಬಹುದು; ಇನ್ನು ಕೆಲವು, ಪಂಚವಿಧಗಳನ್ನು ಎತ್ತಿಹಿಡಿಯಬಹುದು ; ಕೆಲವು ಪ್ರಪತ್ತಿಮಾರ್ಗದಲ್ಲಿ ವೈಮರೆಯಬಹುದು ; ಇಲ್ಲವೆ ದ್ವೈತವನ್ನು ಅಳಿದು ಸಮರಸದ ಸಾಕ್ಷಾತ್ಕಾರವನ್ನು ಪಡೆಯಬಹುದು. ಇವುಗಳ ಹಿಂದಿರುವ ಆಶಯ ಒಂದೇ ; ಆಶ್ರಯ ಒಂದೇ.

ಈ ಲೌಕಿಕವನ್ನು ಕುರಿತ ಅತೃಪ್ತಿ ಯಾವುದೇ ಸಾಧನೆಯ ಮೊದಲ ಮೆಟ್ಟಿಲು, ಈ ಲೌಕಿಕ ಭೋಗಭಾಗ್ಯಗಳಲ್ಲಿ ಸರ್ವಸುಖವನ್ನು ಕಾಣುವ ವಿಷಯತೃಪ್ತ ಜೀವನಕ್ಕೆ ಇದರಾಚೆಯ ಆನಂದದ ಅಭೀಪ್ಸೆಯೇ ಮೂಡುವುದಿಲ್ಲ. ಹೊರಗಡೆಯಲ್ಲಿ ಕಾಣುವ ಈ ಲೋಕಸುಖದ ಪರಿಮಿತಿಯ ಪರಿಭಾವನೆಯಿಂದ ಉಂಟಾಗುವ ಅತೃಪ್ತಿಯೇ ಇದರಾಚೆಯ ಸುಖದ ಅನ್ವೇಷಣೆಗೆ ನಾಂದಿಯಾಗುತ್ತದೆ. ಆದುದರಿಂದ ಭಕ್ತಿಸಾಧನೆಯ ಮೊದಲ ಮೆಟ್ಟಿಲು ಈ ಸಂಸಾರವನ್ನು ಕುರಿತ ನಶ್ವರತೆಯ ಅರಿವು, ಶಾಶ್ವತತೆಯ ಹಂಬಲ. ಕನಕದಾಸರ ಅನೇಕ ಕೀರ್ತನೆಗಳಲ್ಲಿ ಈ ಆಂತರಿಕ ಅತೃಪ್ತಿ ತಳಮಳ ಹೋರಾಟಗಳನ್ನು ಕಾಣುತ್ತೇವೆ.

"ನೆಚ್ಚದಿರು ಸಂಸಾರ ನೆಲೆಯಲ್ಲವೀ ಕಾಯ
ಅಚ್ಯುತನ ನಾಮವನು ನೆನೆದು ಸುಖಿಯಾಗೊ ॥"

ಎಂಬ ಈ ಭಾವ, ಸಂಸಾರದ ನೆಲೆಯಿಂದ ಮೇಲೇರುವ ನಿಲವಿಗೆ ನಾಂದಿಯಾಗುತ್ತದೆ. ಈ ಜಗತ್ತನ್ನು ಬಿಟ್ಟು ಹೋಗುವಾಗ ನಾವು ಅತ್ಯಂತ ಪ್ರಿಯವೆಂದು ತಿಳಿದು ಆರಾಧಿಸಿದುದಾವುದೂ ನಮ್ಮ ಹಿಂದೆ ಬರುವುದಿಲ್ಲ. "ಏನು ಬರುವುದೋ, ಸಂಗಡೇನು ಬರುವುದೋ" ಎಂಬ ಕೀರ್ತನೆಯಲ್ಲಿ ಇದನ್ನು ಪರಿಪರಿಯಾಗಿ ಮನಮುಟ್ಟುವಂತೆ ಹೇಳಿ "ಪೊಂದಿಕೊಂಡು ಬರುವ ವಸ್ತು, ಕೀರ್ತಿ ಅಪಕೀರ್ತಿ ಎರಡೆ" ಎಂಬುದನ್ನು ಮತ್ತೆ ಮತ್ತೆ ಮೆಲುಕು ಹಾಕುವಂತೆ ಮಾಡುತ್ತಾರೆ.

"ಆರು ಹಿತವರು ಎಂದು ನಂಬಬೇಡ ।
ಯಾರಿಗ್ಯಾರಿಲ್ಲ ಆಪತ್ತು ಬಂದೊದಗಿದಡೆ ॥"

ಎಂಬಂತಹ ಇನ್ನು ಕೆಲವು ಕೀರ್ತನೆಗಳಲಿ ಆ ಭಾವವೇ ಪರಿಣಾಮಕಾರಿಯಾಗಿ ಪ್ರತಿಪಾದಿತವಾಗಿದೆ.

ಈ ಭಾವ ಗಟ್ಟಿಗೊಂಡಂತೆಲ್ಲಾ ಈ ಲೋಕದಿಂದ ಸ್ವಲ್ಪ ದೂರನಿಂತು ಇದರಾಚೆಯಿರುವ ಸತ್ಯವನ್ನು ಕಾಣುವ ಹಂಬಲಕ್ಕೆ ಇದು ಬೆಂಬಲವಾಗುತ್ತದೆ. ಆತನ ಕೃಪೆಯನ್ನು ಹಾರೈಸುವ ಆರ್ತಭಾವ, ಅಹಂಕಾರ ನಿರಸನದಿಂದ ಆತನಿಗೆ ತನ್ನನ್ನು ಅರ್ಪಿಸಿಕೊಳ್ಳುವ ಆತ್ಮಸಮರ್ಪಣೆಯಲ್ಲಿ ತನ್ನ ನೆಲೆಯನ್ನು ಪಡೆಯುತ್ತದೆ.

"ಏನೆಂದು ಕೊಂಡಾಡಿ ತುತಿಸಲೋ ದೇವ
ನಾನೇನು ಬಲ್ಲೆ ನಿನ್ನಯ ಮಹಿಮೆ ಘನವ ॥"

ಎಂದು ಆತನ ಕರುಣೆಯನ್ನು ಹಾರೈಸುತ್ತ ತಮ್ಮ ಪರಿಮಿತಿಯನ್ನು ಎತ್ತಿ ಹೇಳುತ್ತಾರೆ, "ಹರಿ ಮುಕುಂದನು ನೀನು, ನರಜನ್ಮ ಹುಳ ನಾನು" ಎಂದು ಮುಂದುವರಿಯುವ ಮಾತುಗಳಲ್ಲಿ ಕಾಣುವುದು ಆತ್ಮತಿರಸ್ಕೃತಿಯ ಕೀಳರಿಮೆಯಲ್ಲ, ವಿಸ್ಮೃತಿಗೊಂಡ ಆತ್ಮದ ಎಚ್ಚರಿಕೆಯ ಅನುಸಂಧಾನ.

"ದಾಸದಾಸರ ಮನೆಯ ದಾಸಿಯರ ಮಗ ನಾನು ।
ಸಾಸಿರ ನಾಮದೊಡೆಯ ರಂಗಯ್ಯನ ಮನೆಯ ॥"

ಎಂದು ತಮ್ಮನ್ನು ಹರಿದಾಸರ ಮನೆಯ ದಾಸನ ದಾಸಿಯ ಮಗನೆಂದು ಕರೆದುಕೊಳ್ಳುವುದಾಗಲೀ "ಶಂಕುದಾಸರ ಮನೆಯ ಮಂಕುದಾಸನು ನಾನು..." ಎಂಬಂತಹ ಮಾತುಗಳಾಗಲೀ, ಇದೇ ಭಾವವನ್ನು ಮುಂದುವರೆಸಿ ಅಹಂಕಾರವನ್ನು ನಿರಸಗೊಳಿಸಿಕೊಳ್ಳುವ ಜಾಗೃತ ಮನಸ್ಸಿನ ಪ್ರಯತ್ನವಾಗಿ ಕಾಣುತ್ತದೆ. ಈ ಅಹಂಕಾರ ನಿರಸನದ ಮುಂದಿನ ಹೆಜ್ಜೆಯೇ ಸರ್ವಾರ್ಪಣೆ.

"ತನು ನಿನ್ನದು ಜೀವನ ನಿನ್ನದೊ
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯಾ ।"

ಎಂಬಂತಹ ಅನೇಕ ಕೀರ್ತನೆಗಳಲ್ಲಿ ಆತ್ಮನಿವೇದನೆಯ ಹಲವು ಛಾಯೆಗಳನ್ನು ಕನಕದಾಸರು ವ್ಯಕ್ತಪಡಿಸಿದ್ದಾರೆ. "ಸಾಕು ಸಾಕು ಮನುಜ ಸೇವೆಯ ರಂಗಯ್ಯ ಇನ್ನು" ಎಂಬ ಕೀರ್ತನೆಯಲ್ಲಿ ಹಲವು ಹತ್ತುಕಡೆಗೆ ಅಲೆದಾಡಿ ಲೌಕಿಕ ಆಶೆ ಆಮಿಷಗಳಿಂದ ಪರಸೇವೆಯಲ್ಲಿ ವ್ಯರ್ಥವಾದ ತಮ್ಮ ಶಕ್ತಿಯನ್ನು ಭೂಲೋಕದೊಡೆಯನಿಗೆ ಸಮರ್ಪಿಸಿ ಸಾರ್ಥಕತೆಯನ್ನು ಪಡೆಯಲು ಹಂಬಲಿಸುತ್ತಾರೆ.

ಈ ಹಂಬಲವೇ ಭಕ್ತಿ ಸಾಧನೆಯ ವಿವಿಧ ಹಂತಗಳಲ್ಲಿ ಕನಕದಾಸರನ್ನು ಮುನ್ನಡೆಸುತ್ತದೆ. ಹಿಂದೆ ಭಕ್ತಿಪಂಥದಲ್ಲಿ ನೋಡಿದ ಶ್ರವಣ ಕೀರ್ತನ ಸ್ಮರಣ ಮೊದಲಾದ ನವವಿಧಗಳೂ, ಗುಣ ರೂಪ, ಪೂಜಾ ಮೊದಲಾದ ಹನ್ನೊಂದು ಆಸಕ್ತಿಗಳೂ, ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ, ಶಾಂತ ಈ ಪಂಚವಿಧಗಳೂ ಆಯಾಕಾಲದ ಮನೋಧರ್ಮಕ್ಕನುಗುಣವಾಗಿ ಸಹಜವಾಗಿ ಬೆಳೆದುಬಂದಿವೆ, ಅವರ ಕೀರ್ತನೆಗಳಲ್ಲಿ ಅಭಿವ್ಯಕ್ತಿಯನ್ನು ಪಡೆದಿವೆ. ಭಗವಂತನಿಗೆ ತನ್ನನ್ನು ಅರ್ಪಿಸಿಕೊಂಡ ಭಕ್ತನಲ್ಲಿ ಪ್ರಧಾನವಾಗಿ ಎದ್ದು ಕಾಣುವ ಮತ್ತು ಬಹುಮಟ್ಟಿಗೆ ಸ್ಥಾಯಿಯಾಗಿರುವ ಭಾವಗಳೆಂದರೆ ಆ ಭಗವಂತನ ಮಹಿಮೆಯನ್ನು ಕೀರ್ತಿಸುವುದು, ಆತನ ನಾಮಸ್ಮರಣೆಯಲ್ಲಿ ತಲ್ಲೀನನಾಗುವುದು, ಕನಕದಾಸರಲ್ಲಿಯೂ ಇಂತಹ ಅನೇಕ ಕೀರ್ತನೆಗಳನ್ನು ಕಾಣುತ್ತೇವೆ.

"ಆರು ಬಾಳಿದರೇನು ಆರು ಬದುಕಿದರೇನು
ನಾರಾಯಣನ ಸ್ಮರಣೆ ನಮಗಿಲ್ಲದನಕ ?"

ಎಂಬ ಈ ಕೀರ್ತನೆಯ ಭಾವವೇ ಬಗೆಬಗೆಯಾಗಿ ಅನೇಕ ಕೀರ್ತನೆಗಳಲ್ಲಿ ಅಭಿವ್ಯಕ್ತಗೊಂಡಿದೆ. "ನಾರಾಯಣ ನಿನ್ನ ನಾಮವೊಂದಿರುತಿರೆ ಬೇರೊಂದು ನಾಮವಿನ್ನೇತಕಯ್ಯ?" ಎನ್ನುವಂತಹ ಅನೇಕ ಮಾತುಗಳು ಅವರ ಏಕದೇವತಾನಿಷ್ಠೆಯನ್ನು ಎತ್ತಿ ಹಿಡಿಯುತ್ತವೆ. ದುರ್ಗಿ ಚೌಡಿ ಮೊದಲಾದ ಕ್ಷುದ್ರದೇವತೆಗಳ ಉಪಾಸನೆಯನ್ನು ಅವರು ಮೆಚ್ಚುವುದಿಲ್ಲ. ದೈವಶಕ್ತಿಯ ಉದಾತ್ತಕಲ್ಪನೆಯ ಸಾಕಾರಮೂರ್ತಿಗಳಾದ ಹರಿಹರರನ್ನು ಮಾತ್ರ ಅವರು ಎತ್ತಿ ಹಿಡಿದು ಒಂದುರೀತಿಯಲ್ಲಿ ಹರಿಹರಾತ್ಮಕವಾದ ಏಕದೇವತಾ ಉಪಾಸನೆಯನ್ನು ಪ್ರತಿಪಾದಿಸುತ್ತಾರೆ. ತಮ್ಮ ನಿಷ್ಠೆಯನ್ನು ಹರಿಯ ಮೇಲೆ ಕೇಂದ್ರೀಕರಿಸುತ್ತಾರೆ. ಅವನ ನಾಮಸ್ಮರಣೆಯನ್ನು ಎಷ್ಟುಮಾಡಿದರೂ ಅವನಿಗೆ

ತೃಪ್ತಿಯಿಲ್ಲ. "ಮರೆಯದಿರು ಮರೆಯದಿರು ಮರುಳು ಮನುಜಾ" ಎಂಬ ಕೀರ್ತನೆಯಲ್ಲಿ ನಾರಾಯಣನ ಹೊರತಾಗಿ ಇತರ "ಜಂಗುಳಿ ದೈವಗಳೇಕೆ?" ಎಂಬುದನ್ನು ಪರಿಪರಿಯಲ್ಲಿ ಹೇಳಿದ್ದಾರೆ. "ಸಂಸಾರ ಸಾಗರವನುತ್ತರಿಸುವೊಡೆ ಕಂಸಾರಿ ನಾಮವೊಂದೇ ಸಾಕು ಮನವೇ" ಎಂದು ಹೇಳುತ್ತಾ :

"ಯತಿಯಾಗಬೇಡ ನೀ ವೈರಾಗ್ಯವನೆ ಪಿಡಿದು,
ಸತತ ವ್ರತವ ಮಾಡಿದೆನೆಂಬ ಹಮ್ಮು ಬೇಡ ।
ಶ್ರುತಿ ಸ್ಮೃತಿಗಳನರಿತು ನಡೆವೆನೆನಬೇಡ
ರತಿಪತಿಯ ಶ್ರೀನಾಮವೊಂದೇ ಸಾಕು ॥"

ಎಂದು ಎಲ್ಲ ಸಾಧನೆಗಿಂತ ನಾಮಸ್ಮರಣೆಯೇ ಮಿಗಿಲಾದುದೆಂದು ಸಾರುತ್ತಾರೆ. ತನುವ ದಂಡಿಸುವ ತಪಸ್ಸು, ನೀರೊಳಗೆ ಮುಳುಗುವ ಕರ್ಮದ ಆಚಾರಗಳು, ತೀರ್ಥಯಾತ್ರೆ ಇವೆಲ್ಲವುಗಳಿಗಿಂತ "ಕಾಗಿನೆಲೆಯಾದಿಕೇಶವನ ಕೀರ್ತನೆಯ ಮಾಡಿ ಸುಖಿಯಾಗೊ ಮನವೇ" ಎಂದು ಬೋಧಿಸುತ್ತಾರೆ. ಈ ನಾಮಸ್ಮರಣೆ ಎನ್ನುವುದು ಕನಕದಾಸರಿಗೆ ಕೇವಲ ಯಾಂತ್ರಿಕವಾದ ಉಚ್ಚಾರವಲ್ಲ. ಅದು ಅಂತರಂಗವನ್ನು ಬೆಳಗುವ ಯೌಗಿಕ ಮಾರ್ಗವಾಗಿರುವುದನ್ನು ಒಂದು ಕೀರ್ತನೆಯಲ್ಲಿ ಬಹಳ ಅರ್ಥವತ್ತಾಗಿ ಹಾಡಿದ್ದಾರೆ. ಆ ಕೀರ್ತನೆಯನ್ನು ನೋಡಬಹುದು :

"ನಾರಾಯಣ ಎಂಬ ನಾಮದ ಬೀಜವನು ನಾಲಿಗೆಯಾ
ಕೂರಿಗೆಯ ಮಾಡಿ ಬಿತ್ತಿರಯ್ಯಾ ॥ ಪ ॥
ಹೃದಯ ಹೊಲವನು ಮಾಡಿ ತನುವ ನೇಗಿಲ ಮಾಡಿ
ತನ್ವಿರಾ ಎಂಬ ಎರಡೆತ್ತ ಹೂಡಿ ।
ಜ್ಞಾನವೆಂಬೊ ಮಿಣಿಯ ಕಣ್ಣಿ ಹಗ್ಗವ ಮಾಡಿ
ಮನವೆಂಬ ಧಾನ್ಯವ ನೋಡಿ ಬಿತ್ತಿರಯ್ಯ ॥ ೧ ॥
ಕಾಮ ಕ್ರೋಧಗಳೆಂಬ ಗಿಡವನು ತರಿಯಿರಯ್ಯ
ಮದ ಮತ್ಸರವೆಂಬ ಪೊದೆಯ ಇರಿಯಿರಯ್ಯ ।
ಪಂಚೇಂದ್ರಿಯಗಳೆಂಬ ಮಂಚಿಕೆಯ ಹಾಕಿರಯ್ಯ
ಚಂಚಲವೆಂಬ ಹಕ್ಕಿಯ ಓಡಿಸಿರಯ್ಯ ॥ ೨ ॥
ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ
ಆಯುಷದ ರಾಸಿಯನು ಅಳೆಯಿರಯ್ಯ ।

ಇದು ಕಾರಣ ಕಾಗಿನೆಲೆಯಾದಿ ಕೇಶವನ
ಮುದದಿಂದ ನೆನೆನೆನೆದು ಸುಖಿಯಾಗಿರಯ್ಯ ॥ ೩ ॥

ದೇವರ ನಾಮವೆಂಬುದು ಅಂತರಂಗದಲ್ಲಿ ಬಿತ್ತಿ ಬೆಳೆಯಬೇಕಾದ ಬೆಳೆ–ಎಂಬುದನ್ನು ದೇಹವೆಂಬ ಕ್ಷೇತ್ರದ ಅರ್ಥವತ್ತಾದ ಪ್ರತೀಕದಿಂದ ಪ್ರತಿಮಿಸಿದ್ದಾರೆ. ಇಂತಹ ಕಡೆಗಳಲ್ಲಿ ಕನಕದಾಸರ ವೈಶಿಷ್ಟ್ಯ ಎದ್ದುಕಾಣುತ್ತದೆ. ನಾಮಸ್ಮರಣೆಯ ಭಕ್ತಿ ಅನುಭಾವದ ಹಂತಕ್ಕೆ ಏರುವಂತಾಗಿರುವುದು ಇದರ ವಿಶಿಷ್ಟತೆ.

ಇಂತಹ ನಾಮಸ್ಮರಣೆಯಿಂದ ಹರಿಕರುಣೆಯ ಹಾರೈಕೆಯನ್ನು ಅವರ ಮನಸ್ಸು ನಿರಂತರವಾಗಿ ಪ್ರಾರ್ಥಿಸುತ್ತ ಆತನ ದರ್ಶನವನ್ನು ಪಡೆಯಲು ಹಾತೊರೆಯುತ್ತದೆ :

"ಹೂವ ತರುವರ ಮನೆಗೆ ಹುಲ್ಲ ತರುವೆ
ಆವ ಪರಿಯಲಿ ಸಲಹೊ ದೇವ ಚಿನ್ಮಯನೆ ॥"

ಎಂಬ ಕೀರ್ತನೆಯಲ್ಲಿ ಹಲವಾರು ಜನುಮಗಳಿಂದ ಆತನ ದಾಸನಾಗಿರುವುದನ್ನು ಮತ್ತೆ ಮತ್ತೆ ಹೇಳುತ್ತ "ಘೋರ ದುರಿತಗಳೆಂಬ ವಾರಿಧಿಯ ಬತ್ತಿಸಿ, ನಾರಸಿಂಹನೆ ದಯದಿ ಸಲಹೆನ್ನ ಸ್ವಾಮಿ" ಎಂದು ಆರ್ತರಾಗಿ ಪ್ರಾರ್ಥಿಸುತ್ತಾರೆ. "ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವ, ಬರಿದೆ ಮಾತೇಕಿನ್ನು ಅರಿತು ಪೇಳುವೆನಯ್ಯ, ಕರಪಿಡಿದೆನ್ನನು ಕಾಯೊ ಕರುಣಾನಿಧೆ" ಎಂಬ ಮುಂತಾದ ಮಾತುಗಳಲ್ಲಿ ಈ ಭಾವ ಕನಕದಾಸರ ಅನೇಕ ಕೀರ್ತನೆಗಳಲ್ಲಿ ಹೊರಹೊಮ್ಮಿದೆ.

ಭಕ್ತಿ ಸಾಧನೆಯಲ್ಲಿ ಮುಂದುವರಿದಂತೆ ಪ್ರಾರಂಭದ ಈ ಆರ್ತಭಾವ. ಆತ್ಮಶೋಧನೆ ಆತ್ಮೀಯತೆಗಳ ಕಡೆಗೆ ತಿರುಗಿ ಆತನ ಅಪಾರವಾದ ಕರುಣೆಯಲ್ಲಿ ದೃಢವಿಶ್ವಾಸವನ್ನು ತಳೆಯುತ್ತದೆ. ಅದಕ್ಕೆ ಸಾಧಕವಾದ ಅಂತರಂಗ ಶುದ್ಧಿ, ಸಜ್ಜನ ಸಹವಾಸ, ಮೊದಲಾದ ನೈತಿಕ ನಿಷ್ಠೆಯನ್ನು ರೂಢಿಸಿಕೊಳ್ಳಬೇಕಾದುದನ್ನು ಹಲವಾರು ಕೀರ್ತನೆಗಳಲ್ಲಿ ಪರಿಣಾಮಕಾರಿಯಾಗಿ ಹೇಳಿದ್ದಾರೆ. ಈ ಮಾರ್ಗದಲ್ಲಿ ಅವರು ಬೆಳೆಯುತ್ತಾ ಹೋದಂತೆ ಬಹಳ ದೂರದಲ್ಲಿದೆಯೆಂದು ತಳಮಳಿಸುತ್ತಿದ್ದ ದೈವಕೃಪೆ ಬಳಿಯಲ್ಲಿಯೇ ಗೋಚರಿಸುತ್ತದೆ. "ಇಷ್ಟು ದಿನ ವೈಕುಂಠ ಎಷ್ಟು ದೂರವೊ ಎನ್ನುತಲಿದ್ದೆ" ಎಂದು ಹಾಡುತ್ತಾ ಇಲ್ಲಿಯೇ ಭಗವಂತನ ದರ್ಶನವಾದುದರ ಉದ್ಗಾರವನ್ನು ಎತ್ತುತ್ತಾರೆ "ತಲ್ಲಣಿಸದಿರು ಕಂಡ್ಯ ತಾಳು ಮನವೇ, ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ" ಎಂಬಂತಹ

ಆಶ್ವಾಸನೆಯ ಧ್ವನಿಯೂ ಇಂತಹ ಒಂದು ಸಂದರ್ಭದಲ್ಲಿಯೇ ಹೊರ ಹೊಮ್ಮಿದುದು.

ಕನಕದಾಸರ ಭಕ್ತಿಗೀತೆಗಳಲ್ಲಿ ದಾಸ್ಯಭಾವವನ್ನು ಬಿಟ್ಟರೆ ಪ್ರಧಾನವಾಗಿ ಕಾಣುವ ಭಾವ ಆತ್ಮೀಯತೆಯ ಸಖ್ಯಭಕ್ತಿ ; "ಆರು ಬದುಕಿದರಯ್ಯ ಹರಿ ನಿನ್ನ ನಂಬಿ; ತೋರು ಧರೆಯೊಳಗೆ ಒಬ್ಬರನು ಕಾಣೆ ಕೃಷ್ಣ" ಎಂಬ ಕೀರ್ತನೆಯಲ್ಲಿ ಆತ್ಮೀಯತೆಯಿಂದ ಆತನನ್ನು ನಿಂದಿಸುತ್ತಲೇ ಆತನ ಮಹಿಮಾನ್ವಿತ ಗುಣಗಳನ್ನು ಎತ್ತಿ ತೋರುವ ರೀತಿ ಆಕರ್ಷಕವಾಗಿದೆ, ಇನ್ನೊಂದು ಕೀರ್ತನೆ ಬಹಳ ಚಮತ್ಕಾರವಾಗಿ, ಲಕ್ಷ್ಮಿಯ ಮಹತ್ವವನ್ನು ಎತ್ತಿ ಹಿಡಿಯುತ್ತದೆ : "ನಿನಗಿಂತ ಕುಂದೇನೋ ನಮ್ಮಮ್ಮ ಜಯಲಕ್ಷ್ಮಿ, ನಿನಗಿಂತ ಕುಂದೇನೋ ಸನಕಾದಿಗಳ ಸ್ವಾಮಿ, ಮನಸಿಜನೊಡೆಯನೇ ಕನಕಗರ್ಭನ ಜನಕ" ಎಂದು ಆತನಿಗೆ ಸವಾಲು ಹಾಕುತ್ತಾರೆ. "ನೀನು ಮತ್ಸ್ಯಾವತಾರನಾದರೆ ಆಕೆ ಮತ್ಸ್ಯಕಂಗಳನ್ನು ಪಡೆದವಳು" ಎಂದು ಮುಂತಾಗಿ ಚಮತ್ಕಾರದ ಮಾತುಗಳಿಂದ ಗೀತೆ ಮುಂದುವರಿದರೂ ಅದರ ಹಿಂದಿರುವ ಧ್ವನಿ ಅರ್ಥವತ್ತಾಗಿದೆ.

"ಆವ ಸಿರಿಯಲಿ ನೀನು ಎನ್ನ ಮರೆತೆ ?
ದೇವ ಜಾನಕೀರಮಣ ಪೇಳು ರಘುಪತಿಯೆ ?"

ಎಂಬ ಕೀರ್ತನೆಯನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು. ಆತನು ಮಾಡಿದ ಒಂದೊಂದು ಮಹಿಮೆಯನ್ನು ಉಲ್ಲೇಖಿಸಿ, ಆ ಸಂಪತ್ತಿನ ಹಿರಿಮೆಯಲ್ಲಿ ನನ್ನನ್ನು ಮರೆತೆಯಾ ಎಂದು ಕೇಳುವ ಆತ್ಮೀಯತೆಯ ಸಲುಗೆ, ಆತನೊಡನೆ ಪಡೆಯುವ ಆತ್ಮಾನುಸಂಧಾನಕ್ಕೆ ಸಾಕ್ಷಿಯಾಗುತ್ತದೆ.

ಇಂತಹ ಆತ್ಮೀಯತೆ ಆತ್ಮಾನುಸಂಧಾನ ಆತ್ಮ ಸಮರ್ಪಣೆಗಳಿಂದ ಅವರ ಭಕ್ತಿ ದಾಸ್ಯ, ಸಖ್ಯ ಮೊದಲಾದ ಭಾವಗಳಲ್ಲಿ ಬೆಳೆದು, ಸ್ಮರಣ ವಂದನ ಕೀರ್ತನಾದಿಗಳಿಂದ ಪರಿಪುಷ್ಟಗೊಂಡು ದೈವ ಸಾಕ್ಷಾತ್ಕಾರ ಶಾಂತಭಾವದ ಕಡೆಗೆ ತಿರುಗುತ್ತದೆ. ಆತನನ್ನು ಅರಸುವ ತಳಮಳದಿಂದ ಪ್ರಾರಂಭವಾದ ಭಕ್ತಿ ಎಲ್ಲೆಲ್ಲಿಯೂ ಆತನನ್ನು ಕಾಣುವ ಶಾಂತ ಭಾವದಲ್ಲಿ ಪರ್ಯವಸಾನವಾಗುತ್ತದೆ. "ಯಾತಕೆ ದಯಮಾಡಲೊಲ್ಲೆ ರಂಗಯ್ಯ, ಜಗನ್ನಾಥ ನಿನ್ನ ನಂಬಿದೆನಲ್ಲೊ" ಎಂಬ ದೈನ್ಯದಿಂದ ಮೇಲೇರಿ ಕೊನೆಯಲ್ಲಿ ಆತನನ್ನು ಅಂತರಂಗದಲ್ಲಿ ಕಂಡ ಧನ್ಯತೆಯ ಉದ್ಗಾರದಲ್ಲಿ ಗುರಿಸೇರುತ್ತದೆ :

"ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು,
ಪದುಮನಾಭನ ಪಾದದೊಲುಮೆ ಎನಗಾಯಿತು ॥"

ಎಂಬವೇ ಮಾತುಗಳು ಆ ಸಂತೃಪ್ತಿಯಿಂದ ಮೂಡಿಬಂದುವು. ಈ ಆಂತರಿಕ ಅನುಭವಕ್ಕೆ ಕಿಟಕಿಯನ್ನುತರುವಂತಹ ಅವರ ಅನೇಕ ಕೀರ್ತನೆಗಳು ಭಕ್ತಿಯ ಪರಮ ಫಲವಾದ, ಅನುಭಾವದ ನಿಲವನ್ನು ಬಹಳ ಪರಿಣಾಮಕಾರಿಯಾಗಿ ಪ್ರಕಾಶಗೊಳಿಸಿವೆ. ಹಿಂದಾಗಲೇ ನೋಡಿದ : "ನಾರಾಯಣ ಎಂಬ ನಾಮದ ಬೀಜವನ್ನು ನಾಲಗೆಯ ಕೂರಿಗೆಯ ಮಾಡಿ ಬಿತ್ತಿ ಬೆಳೆಯಿರಯ್ಯ" ಎಂಬ ಕೀರ್ತನೆಯನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಅಲ್ಲಿ ಬಿತ್ತಿ ಬೆಳೆದುದನ್ನು ಅಟ್ಟುಣ್ಣುವ ಅನುಭಾವದ ಪಾಕವನ್ನು ಇನ್ನೊಂದು ಗೀತೆಯಲ್ಲಿ ಕಾಣುತ್ತೇವೆ.

ಅಡುಗೆಯನು ಮಾಡಬೇಕಣ್ಣ । ನಾನೀಗ ಜ್ಞಾನ
ದಡುಗೆಯನು ಮಾಡಬೇಕಣ್ಣ ॥ ಪ ॥
ಅಡುಗೆಯನು ಮಾಡಬೇಕು । ಮಡಿಸಬೇಕು ಮದಗಳನ್ನು ।
ಒಡೆಯನಾಜ್ಞೆಯಿಂದ ಒಳ್ಳೆ । ಸಡಗರದಿ ಈ ಮನೆಯ ಸಾರಿಸಿ ॥ ಅ. ಪ.॥

ಎಂಬ ಈ ಅನುಭಾವಗೀತೆ ಭಕ್ತಿ ಜ್ಞಾನಗಳ ಸಮನ್ವಯದ ಸಾಧನೆಗೆ ಸಾಕ್ಷಿಯಾಗಿದೆ. ಗುರುಸ್ಮರಣೆಯಿಂದ ತನುಭಾವವೆಂಬ ಕಲ್ಮಷವನ್ನು ತೊಳೆದು, ಅರಿಷಡ್ವರ್ಗಗಳನ್ನು ತೂರಿ ಕೇರಿ ಹದಮಾಡಿಕೊಳ್ಳಬೇಕು. ತತ್ವಭಾಂಡವನ್ನು ತೊಳೆದು, ಸತ್ಯಾತ್ಮನಾಗಿ ಪ್ರೇಮವೆಂಬ ಅಕ್ಕಿಯನ್ನು ಮಥಿಸಿ, ಮಮತೆಯೆಂಬ ಬೆಂಕಿಯಿಂದ ಬೇಯಿಸಿ ಅಡುಗೆ ಮಾಡಬೇಕೆನ್ನುತ್ತಾರೆ. ಈ ಅಡುಗೆ ಊಟ ಪೂರ್ಣವಾಗಲು ಸಂಡಿಗೆ ತುಪ್ಪಗಳೂ ಬೇಕು :

"ಜನನ ಸೊಂಡಿಗೆ ಹುರಿಯ ಬೇಕಣ್ಣ । ನಿಜವಾಗಿ ನಿಂತು
ತನುವು ತುಪ್ಪವ ಕಾಸಬೇಕಣ್ಣ ॥
ಕನಕಗಿರಿನೆಲೆಯಾದಿ ಕೇಶವದಾಸ
ಕನಕನ ಕಟ್ಟಳೆಯೊಳು ನಿಂತು ಸುಖದ ಪಾಕವನು
ಚಂದದಿಂ ಸವಿದುಣ್ಣಲಿಕ್ಕೆ"

–ಹೀಗೆ ಅನುಭವ ಅಡುಗೆ ಪೂರ್ಣತೆಗೊಳ್ಳುತ್ತದೆ. ಆ ಸುಖದ ಪಾಕವನ್ನು ಸವಿದುಣ್ಣುವುದೇ ಈ ಶ್ರಮದ ಸಾರ್ಥಕತೆ.

ಇಂತಹ ಕೆಲವು ಗೀತೆಗಳು ಅಂತರಂಗದ ಸಾಧನೆಯನ್ನು ನೇರವಾಗಿ ಪ್ರತಿಬಿಂಬಿಸಿದರೆ, ಇನ್ನು ಕೆಲವು ಕೀರ್ತನೆಗಳಲ್ಲಿ ಸಾಂಕೇತಿಕ ಪ್ರತಿಮೆಗಳ ಮೂಲಕ ಆ ರತ್ನಗಳನ್ನು ಪ್ರಕಾಶಪಡಿಸುತ್ತಾರೆ. ಅಂತಹ ಒಂದು ಹಾಡನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಮುತ್ತು ಬಂದಿದೆ ಕೇರಿಗೆ, ಜನರು ಕೇಳಿ
ಮುತ್ತು ಬಂದಿದೆ ಕೇರಿಗೆ ಭಕ್ತಿಯುಳ್ಳವರೆಲ್ಲ
ಕಟ್ಟಿಕೊಳ್ಳಿ ಸೆರಗಿನಲ್ಲಿ ॥ ಪ ॥

ಎಂದು ಅಚ್ಯುತನೆಂಬ ಅಚ್ಚಳಿಯದ ಮುತ್ತನ್ನು ಜನರ ಬಳಿಗೆ ತರುತ್ತಾರೆ. ಆ ಮುತ್ತಿನ ವರ್ಣನೆ ತುಂಬಾ ಅರ್ಥವತ್ತಾಗಿ ಈ ಗೀತೆಯಲ್ಲಿ ಮೂಡಿಬಂದಿದೆ. ಇನ್ನೊಂದು ಗೀತೆಯಲ್ಲಿ ಅದು ಆನೆಯಾಗಿದೆ : "ಆನೆಯ ನೋಡಿರಯ್ಯ ನೀವೆಲ್ಲರು, ಆನಂದ ಪಡೆಯಿರಯ್ಯ "ಎಂಬ ಪಲ್ಲವಿಯೊಡನೆ ಆ ಭಾವವನ್ನೇ ಒಂದು ಕೀರ್ತನೆಯಾಗಿ ಬೆಳೆಸಿದ್ದಾರೆ. ಇನ್ನೊಂದು ಕಡೆ ಹಣ್ಣಿನ ರೂಪದಲ್ಲಿ ಅದನ್ನು ಕಂಡು ಹಾಡುತ್ತಾರೆ :

ಹಣ್ಣು ಕೊಂಬುವ ಬನ್ನಿರಿ, ಹರಿದಾಸರು
ಹಣ್ಣು ಕೊಂಬುವ ಬನ್ನಿರಿ ।
ಚೆನ್ನಬಾಲಕೃಷ್ಣನೆಂಬ
ಕನ್ನೆಗೊನೆ ಬಾಳೆಹಣ್ಣು ॥ ಪ ॥

ಎಂದು ಪ್ರಾರಂಭವಾಗಿ ಮುಂದೆ ಆದಿಕೇಶವನ ಮಹಿಮೆಗಳನ್ನೆಲ್ಲಾ ಸ್ಮರಿಸಿಕೊಳ್ಳುತ್ತಾ ಹೋಗುತ್ತದೆ ಈ ಗೀತೆ. "ನಾವು ಕುರುಬರು" ಎನ್ನುವ ಹಾಡಂತೂ ಕುಲಕಸುಬನ್ನೇ ಆಧ್ಯಾತ್ಮಿಕ ಸಾಧನೆಯ ನಿರಂತರ ಜಾಗ್ರತಿಗೆ ಸಂಕೇತವನ್ನಾಗಿ ಮಾಡಿದ ಅಪೂರ್ವ ಕಲಾಕೃತಿಯಾಗಿದೆ.

"ನಾವು ಕುರುಬರೊ ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿ ಹಿಂಡುಗಳ ॥ ಪ ॥

ಎಂಬ ಪಲ್ಲವಿಯಲ್ಲಿಯೇ ಇದು ಹೊಸ ಆಯಾಮವನ್ನು ಪಡೆಯುತ್ತದೆ, ಇದು ನರಕುರಿ ಹಿಂಡುಗಳನ್ನೆಲ್ಲಾ ಕಾಯುವ ಆಧ್ಯಾತ್ಮಕಾಯಕ. ದೇಹದಲ್ಲಿಯೇ ಟಗರುಗಳೂ ಆಡುಗಳೂ ಇವೆ. ಅವುಗಳನ್ನೆಲ್ಲಾ ಕಾಯುವುದು ಹೇಗೆಂಬುದನ್ನು ದೀರ್ಘವಾದ ಈ ಸಾಂಕೇತಿಕತೆ ನಿರೂಪಿಸುತ್ತದೆ. ಹಾಗೆಯೇ "ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ" ಮೊದಲಾದ ಅನೇಕ ಗೀತೆಗಳನ್ನು ಉದಾಹರಿಸಬಹುದು.

"ಸದರವಲ್ಲದೆ ನಿಜಯೋಗ, ಸಚ್ಚಿದಾನಂದ
ಗುರು ದಿಗಂಬರ ಸಂಯೋಗ ॥ ಪ ॥"

ಎಂಬ ಗೀತೆಯುಂತೂ ಪರಮ ಸತ್ಯದೊಡನೆ ಸಂಗತವಾಗಿ ಪೂರ್ಣತೆಯನ್ನು ಪಡೆದ ಅವರ ಯೌಗಿಕ ನಿಲವನ್ನು ನಿರೂಪಿಸುತ್ತದೆ.

ಹೀಗೆ ಕನಕದಾಸರ ಕೀರ್ತನೆಗಳಲ್ಲಿ ಭಕ್ತಿ ಸಾಧನೆಯ ಕೆಲವು ಹಂತಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಹರಿದಾಸ ಪಂಥವನ್ನೇ ಇವರು ಅವಲಂಬಿಸಿದ್ದರೂ ಆಚರಣೆಯಲ್ಲಿ ಅವರು ಯಾವ ಪರಿಮಿತಿಗೂ ಸಿಕ್ಕದೇ ಭಾರತೀಯ ಭಕ್ತಿಪಂಥದ ಸಮಗ್ರ ದರ್ಶನವನ್ನು ಅರಗಿಸಿಕೊಂಡು ಬೆಳೆದರು. ಅವರ ಆಂತರಿಕ ಸಾಧನೆ ಕೇವಲ ನೈತಿಕ ನಿಯಮಗಳ ಪರಿಪಾಲನೆಯಲ್ಲಷ್ಟೇ ಪರ್ಯವಸಾನವಾಗದೆ, ಪರಮ ಸತ್ಯದೊಡನೆ ಸಂಗತವಾಗಿ ಅನುಭಾವದ ತುತ್ತತುದಿಗೇರಿತು. ದಾಸರ ಭಕ್ತಿಮಾರ್ಗದಲ್ಲಿ ಕೊನೆಯ ಹಂತದಲ್ಲಿಯೂ ದ್ವೈತವೇ ಪ್ರಧಾನವಾಗಿ ಉಳಿಯುತ್ತದೆ. ಆದರೆ ಕೆಲವು ದಾಸರಲ್ಲಿ ಮಾತ್ರ ತತ್ತ್ವ ಸಿದ್ಧಾಂತಕ್ಕಿಂತ ಅನುಭವದ ಕೈಮೇಲಾದಾಗ ಸಮರಸದ ಮಾತುಗಳು ಆಗಾಗ ಬರುವುದುಂಟು. ಕನಕದಾಸರಲ್ಲಿ ಇದು ಇನ್ನೂ ಹೆಚ್ಚು. ಸಂಪ್ರದಾಯದಲ್ಲಿದ್ದು ಸ್ವತಂತ್ರ ವೈಚಾರಿಕ ನಿಲವನ್ನು ಅವರ ಅನೇಕ ಕೀರ್ತನೆಗಳೂ ಸಾಧಿಸುತ್ತವೆ. ಜ್ಞಾನ ಮಾರ್ಗದ ಹಿನ್ನೆಲೆಯನ್ನುಳ್ಳ ಸಾಮರಸ್ಯದ ಕಡೆಗೆ ಅವರ ಒಲವು ಹೆಚ್ಚು. ಈ ದೃಷ್ಟಿಯಿಂದ ಇಡೀ ದಾಸ ಸಾಹಿತ್ಯದಲ್ಲಿಯೇ ಕನಕದಾಸರು ವಿಶಿಷ್ಟವಾಗಿ ನಿಲ್ಲುತ್ತಾರೆ. ಅಷ್ಟೇಅಲ್ಲ ಭಾರತೀಯ ಭಕ್ತಿ ಪಂಥದಲ್ಲೇ ಅವರ ಕೆಲವು ಕೀರ್ತನೆಗಳೂ ವಿಶಿಷ್ಟವಾಗಿ ಉಳಿಯುತ್ತವೆ.

# ಕನಕದಾಸರು ಮತ್ತು ಹರಿದಾಸ ಪರಂಪರೆ

**ಡಾ. ಟಿ. ಎನ್. ನಾಗರತ್ನ**

ಪುರಂದರ ಹಾಗೂ ಕನಕದಾಸರ ಹೆಸರುಗಳು ಕರ್ನಾಟಕದಲ್ಲಿ ಮನೆಮಾತು. ಹರಿದಾಸಸಾಹಿತ್ಯದ ಅಶ್ವಿನೀದೇವತೆಗಳೆಂದು ಪ್ರಸಿದ್ಧರಾಗಿರುವ ಈ ಹರಿಭಕ್ತರು ಕನ್ನಡದಲ್ಲಿ ಸಾವಿರಾರು ಸಂಖ್ಯೆಯಲ್ಲಿ ಕೃತಿಗಳನ್ನು ರಚಿಸುವ ಮೂಲಕ ಶ್ರೀಹರಿಯ ಭಕ್ತಿಯನ್ನು ಮನೆಮನೆಗೂ ಬಿತ್ತಿದ್ದಲ್ಲದೆ ತಮ್ಮ ಉಪದೇಶಗಳಿಂದ ಜನಸಾಮಾನ್ಯರನ್ನು ಸನ್ಮಾರ್ಗದತ್ತ ನಡೆಸುತ್ತ ಇಂದಿಗೂ ಜನಮನದಲ್ಲಿ ಜೀವಂತರಾಗಿದ್ದಾರೆ. ದಾಸದ್ವಯರ ಈ ಮುನ್ನಡೆಗೆ ಪರಂಪರೆಯ ಒಂದು ಹಿನ್ನೆಲೆಯೇ ಇದೆ. ಸು. ೭೦೦ ವರ್ಷಗಳ ಹಿಂದೆ ಕರ್ನಾಟಕದಲ್ಲಿಯೇ ಹುಟ್ಟಿ ತಮ್ಮ ದ್ವೈತತತ್ವದಿಂದ ಪ್ರಖ್ಯಾತರಾದ ಶ್ರೀಮನ್ಮಧ್ವಾಚಾರ್ಯರ ತಾತ್ವಿಕ ನೆಲೆಯೇ ಹರಿದಾಸರ ಹಿನ್ನೆಲೆಯೂ ಹೌದು. ಆಚಾರ್ಯರ ಶಿಷ್ಯ ಪ್ರಶಿಷ್ಯರು ದ್ವೈತಮತತತ್ವಗಳನ್ನು ಪ್ರಸಾರಮಾಡಲು ಕಂಕಣಬದ್ಧರಾಗಿ ಹೊರಟಾಗ ಶ್ರೀಮಧ್ವಾಚಾರ್ಯರ ನೇರಶಿಷ್ಯರಾದ ಪದ್ಮನಾಭತೀರ್ಥರ ಪೀಳಿಗೆಯಲ್ಲಿ ಒಂಬತ್ತನೆಯ ಪೀಠಾಧಿಪತಿಗಳಾದ ಶ್ರೀ ಶ್ರೀಪಾದರಾಯರು ಮುಳುಬಾಗಿಲಿನಲ್ಲಿ ತಮ್ಮ ಮಠವನ್ನು ಸ್ಥಾಪಿಸಿದ್ದಲ್ಲದೆ ಪೂಜಾಕಾಲದಲ್ಲಿ ಕನ್ನಡ ಕೃತಿಗಳನ್ನು ರಚಿಸಿ ಹಾಡುವ ಮೂಲಕ ಅಲ್ಲಿಯ ಜನರ ಆಡುಮಾತಿನಲ್ಲಿಯೇ ದ್ವೈತತತ್ವ ಪ್ರಚಾರ ಮಾಡುವ ಪರಿಣಾಮಕಾರೀ ಮಾರ್ಗವೊಂದನ್ನು ಅನುಸರಿಸಿದರು. ಮಠಾಧಿಪತಿಗಳೂ ಹರಿದಾಸಸಾಹಿತ್ಯದ ಆದ್ಯಪ್ರವರ್ತಕರೂ ಆದ ಶ್ರೀಪಾದರಾಯರು ಚನ್ನಪಟ್ಟಣದ ಬಳಿಯ ಅಬ್ಬೂರಿನಲ್ಲಿ ಜನಿಸಿ, ಅಸಾಮಾನ್ಯ ಪಾಂಡಿತ್ಯವನ್ನು ಗಳಿಸಿ 'ರಂಗವಿಠಲ' ಅಂಕಿತದಲ್ಲಿ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸುವ ಮೂಲಕ ಒಂದು ಪರಂಪರೆಯನ್ನೇ ನಿರ್ಮಿಸಿದರು. ಸ್ವರ್ಣವರ್ಣತೀರ್ಥರು ಇವರ ವಿದ್ಯಾಗುರುಗಳು, ಕನ್ನಡದ 'ವೇಣುಗೀತೆ' 'ಭ್ರಮರಗೀತ' 'ಶ್ರೀ ಲಕ್ಷ್ಮೀನೃಸಿಂಹ ಪ್ರಾದುರ್ಭಾವದಂಡಕ'ಗಳು ಇವರ ವಿಶಿಷ್ಟ ರಚನೆಗಳೂ. ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ, ಶಾಂತ–ಈ

ಪಂಚವಿಧ ಭಾವಗಳಲ್ಲೂ ಶ್ರೀಪಾದರಾಯರ ಭಕ್ತಿಭಾವ ಹೊನಲಿಟ್ಟಿದೆ. ಹರಿಯ ದಶಾವತಾರಗಳ ಚಿತ್ರಣ, ರಾಮಾಯಣ, ಭಾರತ, ಭಾಗವತಾದಿ ಪುರಾಣಗಳ ಪಾತ್ರ, ಪ್ರಸಂಗಗಳ ಬಳಕೆ, ಮಧ್ವಮತತತ್ವಗಳ ನಿರೂಪಣೆ–ಈ ಎಲ್ಲ ದೃಷ್ಟಿಗಳಿಂದಲೂ ಹರಿದಾಸ ಸಾಹಿತ್ಯವನ್ನು ಒಂದು ಸಾಂಪ್ರದಾಯಿಕ ರೀತಿಯಲ್ಲಿ ಬೆಳೆಸಿದ ಯಶಸ್ಸು ಇವರದು. ಆಳ್ವಾರರ ತಮಿಳು ಕೃತಿಗಳು, ಶಿವಶರಣರ ಕನ್ನಡ ಕೃತಿಗಳು ಜನಸಾಮಾನ್ಯರ ಮೇಲೆ ಬೀರಿದ್ದ ಪರಿಣಾಮ ಎಂಥದೆಂಬುದು ಶ್ರೀಪಾದರಾಯರಿಗೆ ಮನದಟ್ಟಾಗಿತ್ತು. ಆದ್ದರಿಂದಲೇ ಅವರು ಪೂಜಾಕಾಲದಲ್ಲಿ ತಮ್ಮ ಕನ್ನಡ ರಚನೆಗಳನ್ನು ಹಾಡಲಾರಂಭಿಸಿದರು. ಈ ಕ್ರಮ ಅವರ ಶಿಷ್ಯರಾದ ವ್ಯಾಸರಾಯರ ಕಾಲದಲ್ಲೂ, ವಾದಿರಾಜರ ಕಾಲದಲ್ಲೂ ಮುಂದುವರಿಯಿತು. ಅವರುಗಳಿಂದಲೂ ನೂರಾರು ಸಂಖ್ಯೆಯಲ್ಲಿ ಕನ್ನಡ ಕೃತಿಗಳು ರಚನೆಯಾಗಿ ವೈಷ್ಣವಭಕ್ತಿಪರವಾದ ಭಕ್ತಿಸಾಹಿತ್ಯ ಕನ್ನಡದಲ್ಲಿ ರೂಪುಗೊಂಡಿತು.

ಶ್ರೀಪಾದರಾಯರಲ್ಲಿ ಕಂಡುಬರುವ ದೃಷ್ಟಿ, ಭಾವಾದಿಗಳು ಅವರ ಶಿಷ್ಯರಾದ ವ್ಯಾಸರಾಯರಲ್ಲಿ ಇನ್ನೂ ಬೆಳವಣಿಗೆಯನ್ನು ಹೊಂದಿವೆ. ಅವರು ತಮ್ಮ ಗುರುಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಉಗಾಭೋಗಗಳನ್ನು ರಚಿಸಿಕೊಟ್ಟಿದ್ದಾರೆ. ಇವರ ಉಡುಪಿಯ ಕೃಷ್ಣನ ಮೋಹಿನೀ ಅಲಂಕಾರದ ವರ್ಣನೆ ಶ್ರೀಪಾದರಾಯರ ದಂಡಕವನ್ನು ನೆನಪಿಗೆ ತರುತ್ತದೆ. 'ಶ್ರೀಕೃಷ್ಣ' ಇವರ ಅಂಕಿತ. ಶ್ರೀಪಾದರಾಯರು ಮಠದ ಪರಿಸರದಲ್ಲಿ ಕನ್ನಡದ ಬಳಕೆಯನ್ನು ತಂದು ಕೀರ್ತಿಭಾಜನರಾದರೆ ಇವರು ಹರಿದಾಸರ ಒಂದು ಗುಂಪನ್ನೇ ತಯಾರು ಮಾಡುವ ಮೂಲಕ ಹರಿದಾಸ ಪಂಥದ ರಚನೆಗೂ ಒಂದು ನಿರ್ದಿಷ್ಟ ಸ್ವರೂಪವನ್ನು ತಂದುಕೊಟ್ಟಿದ್ದಾರೆ. ವಾದಿರಾಜರು, ಪುರಂದರರು, ಕನಕರಂತಹ ಶಿಷ್ಯೋತ್ತಮರನ್ನು ಕನ್ನಡಿಗರಿಗೆ ಕೊಟ್ಟವರಿವರು. ಮಠಾಧಿಪತಿಗಳಾಗಿದ್ದರೂ ಅವರ ಕಾರ್ಯಭಾರ ಕೇವಲ ದೇವಪೂಜೆಗಷ್ಟೇ ಸೀಮಿತವಾಗದೆ ವಿಜಯನಗರದ ಅರಸ ಕೃಷ್ಣದೇವರಾಯನ ರಾಜಗುರುಗಳಾಗಿದ್ದು, ಅವನ ಕುಹೂಯೋಗವನ್ನು ನಿವಾರಿಸುವವರೆಗೂ ವ್ಯಾಪಿಸಿತ್ತು. ನೂರಾರು ಕೃತಿಗಳನ್ನು ರಚಿಸಿ ತಮ್ಮ ಗುರುಗಳು ಹಾಕಿದ ಪರಂಪರೆಯನ್ನು ಸಮರ್ಥವಾಗಿ ಮುನ್ನಡೆಸಿದ ಕೀರ್ತಿ ಇವರದು.

ಮುಂದೆ ಈ ವ್ಯವಸ್ಥೆ ಅವರ ಶಿಷ್ಯರಾದ ವಾದಿರಾಜರ ಕಾಲದಲ್ಲೂ ಅಬಾಧಿತವಾಗಿ ಮುಂದುವರಿಯಿತು. ಕನ್ನಡ ಸಂಸ್ಕೃತಗಳೆಡರಲ್ಲೂ ಅಗಾಧ ಪಾಂಡಿತ್ಯವನ್ನು ಗಳಿಸಿ, ಹೆಸರಿಗೆ ತಕ್ಕಂತೆಯೇ ವಾದದಲ್ಲಿ ನಿಸ್ಸೀಮರೆನಿಸಿದ್ದ

ಸೋದೆಮಠದ ವಾದಿರಾಜ ಸ್ವಾಮಿಗಳು ವ್ಯಾಸರಾಯರ ಪ್ರಮುಖ ಶಿಷ್ಯರಲ್ಲೊಬ್ಬರು. ಇವರು ೧೪೮೦ರಲ್ಲಿ ಹೂವಿನಕೆರೆಯೆಂಬಲ್ಲಿ ರಾಮಾಚಾರ್ಯ–ಸರಸ್ವತಿ ದಂಪತಿಗಳಿಗೆ ಮಗನಾಗಿ ಜನಿಸಿದರು. ಅವರ ಇಷ್ಟದೈವವಾದ 'ಹಯವದನ' ಅಂಕಿತದಲ್ಲಿ ನೂರಾರು ಕೀರ್ತನೆ, ಉಗಾಭೋಗ, ಸುಳಾದಿಗಳನ್ನು ರಚಿಸಿ ಹರಿದಾಸಸಾಹಿತ್ಯವನ್ನು ಸಮೃದ್ಧಗೊಳಿಸಿದ್ದಾರೆ. ಸಂಭಾಷಣೆಯ ತಂತ್ರ ಇವರ ಕೃತಿಗಳಲ್ಲಿ ವಿಶೇಷವಾಗಿದೆ. ಕೀಚಕವಧಾ ಪ್ರಸಂಗ, ಗುಂಡಕ್ರಿಯೆ, ಲಕ್ಷ್ಮೀಶೋಭಾನೆ, ವೈಕುಂಠವರ್ಣನೆ, ಸ್ವಪ್ನಪದ–ಇವು ಅವರ ತತ್ವಗರ್ಭಿತವಾದ ಆದರೂ ಸರಳನಿರೂಪಣೆಯಿರುವ ಕನ್ನಡ ಕೃತಿಗಳು. ಇವರ ಕೃತಿಗಳಿಂದ ಹರಿದಾಸ ಸಾಹಿತ್ಯದ ವ್ಯಾಪ್ತಿ–ಮಧ್ವಮತ ಪ್ರಚಾರದ ದೃಷ್ಟಿಯಿಂದ–ವಿಸ್ತರಿಸಿತು. ಈ ಯತಿತ್ರಯರಿಂದ–ಶ್ರೀಪಾದರಾಯರು, ವ್ಯಾಸರಾಯರು ಮತ್ತು ವಾದಿರಾಜರು–ಪುಷ್ಟಿಗೊಂಡ ಹರಿದಾಸ ಸಾಹಿತ್ಯ ಅನಂತರದ ನೂರು ವರ್ಷಗಳಲ್ಲಿ ತುಂಬುಹೊಳೆಯಾಗಿ ಪ್ರವಹಿಸಲಾರಂಭಿಸಿತು.

ವಿಜಯನಗರ ಸಾಮ್ರಾಜ್ಯದ ಉನ್ನತಿಯ ಕಾಲದಲ್ಲಿ ಶ್ರೀ ವ್ಯಾಸರಾಯರು ಕೃಷ್ಣದೇವರಾಯನ ಆಸ್ಥಾನಗುರುಗಳಾಗಿದ್ದಾಗ ಅವರ ಬಳಿ ಹತ್ತಾರು ಶಿಷ್ಯರು ದೀಕ್ಷೆಪಡೆದು ಮಧ್ವಮತ ಪ್ರಚಾರಕಾರ್ಯದಲ್ಲಿ ತೊಡಗಿದ್ದರು. ಆ ಸಂದರ್ಭದಲ್ಲಿ ಯೋಗಾಯೋಗ ಸಂಯೋಗದಿಂದ ಕನಕ ಪುರಂದರರೂ ಅವರಿಗೆ ಶಿಷ್ಯರಾಗಿ ದೊರೆತರು.

ಸು. ೧೪೮೪ರಲ್ಲಿ ಪುರಂದರಗಡ ಎಂಬಲ್ಲಿ ಜನಿಸಿದ ಪುರಂದರರು ತಮ್ಮ ಅಪಾರ ಕೃತಿರಾಶಿಯ ಮೂಲಕ ಜನಮನವನ್ನು ಹೊಕ್ಕಿದ್ದಾರೆ. ದಾಸದೀಕ್ಷೆಯನ್ನು ಹೊಂದುವ ಮೊದಲು ಶ್ರೀಮಂತಿಕೆಯ ವೈಭವದಿಂದ ಮೆರೆದಿದ್ದವರು ಅವರು. ಬಹುಶಃ ಮಗನ ಸಾವಿನಿಂದ ಘಾಸಿಗೊಂಡು ವೈರಾಗ್ಯದತ್ತ ತಿರುಗಿದ್ದ ಅವರ ಮನಸ್ಸನ್ನು ಅವರ ಪತ್ನಿ ದೈವದತ್ತ ತಿರುಗಿಸಿದರೆಂದು ಕಾಣುತ್ತದೆ. 'ಹೆಂಡತಿ ಸಂತತಿ ಸಾವಿರವಾಗಲಿ' ಎಂದು ಹೆಂಡತಿಗೆ ಕೃತಜ್ಞತೆಗಳನ್ನು ಸಲ್ಲಿಸಿದ್ದಾರೆ. ಪರಂಪರೆಯ ಮೂಗುತಿಯ ಕತೆಯೂ ಇದಕ್ಕೆ ಪೋಷಕವಾಗಿದೆ. ಬಳಿಕ ವ್ಯಾಸರಾಯರಿಂದ 'ಪುರಂದರವಿಠಲ' ಅಂಕಿತವನ್ನು ಪಡೆದು ಸಾವಿರ ಸಂಖ್ಯೆಯಲ್ಲಿ ಕೃತಿರಚನೆ ಮಾಡಿದ್ದಾರೆ. ಕೀರ್ತನೆಗಳ ಸಂಖ್ಯೆ, ವಸ್ತುವೈವಿಧ್ಯ ಹಾಗೂ ಭಾವವೈವಿಧ್ಯಗಳ ದೃಷ್ಟಿಯಿಂದ ಹರಿದಾಸಸಾಹಿತ್ಯದ ಇತಿಹಾಸದಲ್ಲಿ ಪುರಂದರದಾಸರಿಗೆ ಒಂದು ವಿಶಿಷ್ಟಸ್ಥಾನವಿದೆ. ಸ್ವತಃ ಅವರ ಗುರುಗಳಿಂದಲೇ 'ದಾಸರೆಂದರೆ ಪುರಂದರ ದಾಸರಯ್ಯ' ಎಂದು

ಹೊಗಳಿಸಿಕೊಂಡ ಶಿಷ್ಯೋತ್ತಮರಿವರು. ಜನಸಾಮಾನ್ಯರ ಬದುಕನ್ನು ಅನಂತರೀತಿಯಲ್ಲಿ ನೋಡುವ ಇವರದು ವಿಶೇಷ ದೃಷ್ಟಿ. ಸಾರ್ವಜನಿಕ, ಸಾರ್ವಕಾಲಿಕ ಮೌಲ್ಯಗಳನ್ನು ಎತ್ತಿಹಿಡಿದು ಆತ್ಮೋನ್ನತಿಯ ಜೊತೆಗೆ ಸಮಾಜದ ಉನ್ನತಿಗೂ ಶ್ರಮಿಸಿದ್ದಾರೆ, ಪುರಂದರದಾಸರು.

ಈ ಗಂಗಾವಾಹಿನಿಯೊಂದಿಗೆ ಕನಕದಾಸರ ಕಾವ್ಯವಾಹಿನಿ ಯಮುನೆಯಾಗಿ ಪ್ರವಹಿಸಿ ಸಂಗಮಿಸಿದೆ. ಧಾರವಾಡ ಜಿಲ್ಲೆಯ ಬಂಕಾಪುರದ ಬಳಿಯ 'ಬಾಡ' ಗ್ರಾಮದಲ್ಲಿ ಹುಟ್ಟಿದ ಕನಕದಾಸರು ಬಾಲ್ಯದಲ್ಲೇ ತಂದೆತಾಯಿಗಳನ್ನು ಕಳೆದುಕೊಂಡರು. ಅನೇಕ ಗ್ರಾಮಗಳ ದಣಾಯಕರೂ ಆಗಿದ್ದ ಅವರಿಗೆ ರಣರಂಗದಲ್ಲಿ ಮನಃಪರಿವರ್ತನೆಯಾಗಿ ಕೇಶವನ ಭಕ್ತರಾದರು. ವ್ಯಾಸರಾಯರಲ್ಲಿ ಶಿಷ್ಯತ್ವ ವಹಿಸಿ, 'ಆದಿಕೇಶವ' ಅಂಕಿತದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕೃತಿರಚನೆಮಾಡಿದ್ದಾರೆ. ಕೀರ್ತನೆಗಳೇ ಅಲ್ಲದೆ ನಳಚರಿತ್ರೆ, ರಾಮಧಾನ್ಯ ಚರಿತ್ರೆ, ಮೋಹನತರಂಗಿಣಿ, ಹರಿಭಕ್ತಿಸಾರ–ಈ ಕಾವ್ಯಗಳನ್ನು ರಚಿಸುವ ಮೂಲಕ ಕವಿಗಳೂ ಆಗಿದ್ದಾರೆ, ಕನಕದಾಸರು, ಹರಿದಾಸರಲ್ಲಿ ಕ್ರಾಂತಿಕಾರಕ ಮನೋಭಾವವುಳ್ಳವರೆಂದು ಪ್ರಸಿದ್ಧರಾಗಿದ್ದಾರೆ.

ಪುರಂದರ–ಕನಕರ ಕೃತಿಗಳ ಸೇರ್ಪಡೆಯಿಂದ ಕನ್ನಡ ವೈಷ್ಣವ ಭಕ್ತಿಸಾಹಿತ್ಯ ಗಾತ್ರ ಹಾಗೂ ಸತ್ವಗಳಿಂದ ದಷ್ಟಪುಷ್ಟವಾಯಿತು. ವೈಷ್ಣವ ಭಕ್ತಿಸಾಹಿತ್ಯ ಹುಚ್ಚು ಹೊಳೆಯಾಗಿ ವಿಜೃಂಭಿಸಿತು. ಸಾಮಾನ್ಯ ಜನತೆಯ ದೈನಂದಿನ ಕೆಲಸಕಾರ್ಯಗಳಿಗೂ ಭಕ್ತಿಯ ಲೇಪಬಂತು. ಕಾಗೆಕೋಳಿಗಳ ಕೂಗು, ನಗಾರಿಯ ಬಡಿತ, ಕಾಗದ ಹಂಚುವಿಕೆ, ಡೊಳ್ಳುಬಡಿತ, ಭೂಕಂಪ–ಈ ಎಲ್ಲ ಚಟುವಟಿಕೆಗಳಲ್ಲೂ ಹರಿಯ, ಹರಿಭಕ್ತಿಯ ಸಂದೇಶಗಳನ್ನು ಗುರುತಿಸಿದ ಪುರಂದರ ಕನಕರು ಅವನ್ನು ತಮ್ಮ ಕೃತಿಗಳ ಮೂಲಕ ಹೇಳಿ ಇಡೀ ವಾತಾವರಣವನ್ನೇ ಹರಿಮಯವನ್ನಾಗಿ ಮಾಡಿದರು. ಅನಂತರ, ವಿಜಯನಗರ ಸಾಮ್ರಾಜ್ಯದ ಪತನದೊಂದಿಗೆ ಹರಿದಾಸ ಸಾಹಿತ್ಯದ ಭರತವೂ ತಗ್ಗಿತು.

ಮುಸಲ್ಮಾನರ ಆಕ್ರಮಣದಿಂದ ವಿಜಯನಗರದ ಪರಿಸ್ಥಿತಿ ವಿಷಮಿಸಿದಾಗ ಅಲ್ಲಿದ್ದ ಪಂಡಿತರು, ಭಕ್ತರು, ಮಹಾಜನರು ದಿಕ್ಕಾಪಾಲಾಗಿ ಚೆದುರಿದರು ; ಹರಿದಾಸ ಸಾಹಿತ್ಯದ ಸೊಲ್ಲೇ ಕೇಳದಂತಾಯಿತು.

ಮುಂದೆ ಒಂದುನೂರು ವರ್ಷಗಳ ನಂತರ, ದಕ್ಷಿಣದಲ್ಲಿ ವಿಜಯನಗರವು ಹರಿದಾಸ ಸಾಹಿತ್ಯದ ಕೇಂದ್ರವಾಗಿದ್ದಂತೆ ಉತ್ತರ ಕರ್ನಾಟಕದ ರಾಯಚೂರು ಜಿಲ್ಲೆಯು ಹರಿದಾಸ ಸಾಹಿತ್ಯದ ಕೇಂದ್ರವಾಯಿತು. ಈ ನಡುವಿನ ಕಾಲದಲ್ಲಿ

ಕಾಖಂಡಕಿಯ ಮಹಿಪತಿರಾಯರು ಹಾಗೂ ಅವರ ಮಗ ಕೃಷ್ಣರಾಯರು ಸಾವಿರಾರು ಸಂಖ್ಯೆಯಲ್ಲಿ ಕೃತಿರಚನೆ ಮಾಡುವ ಮೂಲಕ ಹರಿದಾಸಸಾಹಿತ್ಯ ಸ್ರೋತವನ್ನು ಜೀವಂತವಾಗಿಟ್ಟಿದ್ದರು. ಆ ವೇಳೆಗಾಗಲೇ ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳು ತಮ್ಮ ಗ್ರಂಥಗಳ ಮೂಲಕ, ಸಂಚಾರ ಸಂಪರ್ಕಗಳ ಮೂಲಕ ದ್ವೈತತತ್ವವನ್ನು ಜನರಿಗೆ ಸಮರ್ಪಕವಾಗಿ ಮುಟ್ಟಿಸಿದ್ದರು. ಅವರ ಪ್ರಭಾವ ಆದವಾನಿಯ ಸುತ್ತಮುತ್ತ ದಟ್ಟವಾಗಿದ್ದ ಕಾಲ. ಅನ್ಯಧರ್ಮೀಯರ ದಬ್ಬಾಳಿಕೆಯ ನಡುವೆ ಸ್ವಂತಿಕೆಯನ್ನು ಉಳಿಸಿಕೊಳ್ಳುವ ಅನಿವಾರ್ಯತೆಯ ಕಾಲವಾಗಿದ್ದುದರಿಂದ ಆ ಕಾಲದಲ್ಲಿ, ಆ ಪರಿಸರದಲ್ಲಿ ಹುಟ್ಟಿಕೊಂಡ ಹರಿದಾಸರು ತಮ್ಮ ಭಕ್ತಿಸಾಧನೆಯ ಜೊತೆಗೆ ಮತಪ್ರಚಾರದ ಕರ್ತವ್ಯವನ್ನೂ ನಿರ್ವಹಿಸಬೇಕಾಯಿತು. ಹಾಗಾಗಿ ಅದುವರೆವಿಗೆ ಹೆಚ್ಚು ಕಾವ್ಯಮಯವಾಗಿದ್ದ ಹರಿದಾಸಸಾಹಿತ್ಯ ಆ ಪರಂಪರೆಯನ್ನು ಮುಂದುವರೆಸಿದ ವಿಜಯದಾಸರ ಕಾಲಕ್ಕೆ ಹೆಚ್ಚು ಹೆಚ್ಚು ತತ್ವದತ್ತ, ಶಾಸ್ತ್ರದತ್ತ ವಾಲಿತು. ವಾದಿರಾಜದಿಂದ ವಿಸ್ತಾರವಾಗಿದ್ದ ತತ್ತ್ವಪ್ರತಿಪಾದನೆಯ ಪರಂಪರೆಯ ಜಾಡು ವಿಜಯದಾಸರಿಂದ ಜ್ವಲಿಸಿತು. ಇದು ಹರಿದಾಸ ಸಾಹಿತ್ಯದ ಒಂದು ಮುಖ್ಯ ತಿರುವು.

ಕ್ರಿ. ಶ. ಹದಿನೆಂಟನೆಯ ಶತಮಾನದಲ್ಲಿ ಚೀಕಲಪರಿವೆ ಗ್ರಾಮದ ಶ್ರೀನಿವಾಸ ಕೂಸಮ್ಮ ದಂಪತಿಗಳಿಗೆ ಮಗನಾಗಿ ಹುಟ್ಟಿದ ದಾಸಪ್ಪ ಕಡುಬಡತನದಲ್ಲಿ ಬೆಳೆದು, ಪುರಂದರದಾಸರಿಂದ ಸ್ವಪ್ನದ್ವಾರಾ ಅಂಕಿತ ಪಡೆದು ವಿಜಯದಾಸರೆಂದು ಖ್ಯಾತನಾದ. ಹರಿನಾಮಮಹಿಮೆ, ಹರಿಸರ್ವೋತ್ತಮತ್ವ, ಬಿಂಬರೂಪೀ ಪರಮಾತ್ಮನನ್ನೊಲಿಸಿಕೊಳ್ಳುವ ಬಗೆ, ಜ್ಞಾನ ಭಕ್ತಿ ವೈರಾಗ್ಯಗಳ, ಗುರುಕರುಣೆಯ ಸಂಪಾದನೆ–ಹೀಗೆ ಅನೇಕ ತತ್ತ್ವಗಳು ಅವರ ಕೃತಿಗಳಲ್ಲಿ–ಮುಖ್ಯವಾಗಿ ಸುಳಾದಿಗಳಲ್ಲಿ–ನಿರೂಪಿತವಾಗಿವೆ. 'ಹರಿಕರುಣವೆಂಬ ಕೀಲಿಕೈ' 'ಗುರುಕರುಣವೆಂಬ ಶಕ್ತಿ'ಗಳ ಸಹಾಯದಿಂದ ಹರಿನಾಮದ ಮೂಲಕ ದೇವಾಲಯದ ಕದವನ್ನು ತೆಗೆದಿದ್ದಾರೆ. ವಿಜಯದಾಸರು. ವ್ಯಾಸರಾಯರಂತೆಯೇ ಇವರಿಗೂ ಶಿಷ್ಯಪರಂಪರೆ ದೊಡ್ಡದು. ಮಾಧ್ವಸಂಪ್ರದಾಯದ ಗುರುನಮನದ ಸಂದರ್ಭದಲ್ಲಿ ಶ್ರೀಪಾದರಾಜರು, ವ್ಯಾಸರಾಯರು, ಪುರಂದರದಾಸರು 'ವಿಜಯಾರ್ಯತೇ ನಮಃ' ಎಂದು ಇವರನ್ನೂ ಸ್ತುತಿಸುವ ಪರಿಪಾಠವಿದೆ.

ವಿಜಯದಾಸರ ತತ್ತ್ವಪ್ರತಿಪಾದನೆಯ ಒಲವನ್ನು ಅವರ ಮುಖ್ಯ ಶಿಷ್ಯರ ಲ್ಲೊಬ್ಬರಾದ ಗೋಪಾಲದಾಸರು ಮುಂದುವರಿಸಿದರು. ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮೊಸರುಕಲ್ಲು ಎಂಬ ಹಳ್ಳಿಯಲ್ಲಿ ಹುಟ್ಟಿದ ಇವರ

ಹುಟ್ಟು ಹೆಸರು ಭಾಗಣ್ಣ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡು ವಿಧವೆ ತಾಯಿಯೊಡನೆ ಬಡತನದ ಬಾಳನ್ನು ಹಂಚಿಕೊಂಡವರು. ಭಗವದ್ಭಕ್ತಿಯಿಂದ ಸಂಸ್ಕಾರಗೊಂಡ ಮನಸ್ಸು ತಮ್ಮ ಶಿಷ್ಯ ಜಗನ್ನಾಥದಾಸರಿಗೆ ಆಯುರ್ದಾನ ಮಾಡಲೂ ಹಿಂಜರಿಯಲಿಲ್ಲ. ಅವರ ಈ ತ್ಯಾಗಬುದ್ಧಿ ವೈರಾಗ್ಯದ ನಿಜವಾದ ಅರ್ಥವನ್ನು ಕಂಡುಕೊಳ್ಳುವಲ್ಲಿ ಸಫಲವಾಗಿದೆ (ಉದಾ : ಗೋಪಾಲದಾಸರ ವೈರಾಗ್ಯಸುಳಾದಿ). ಗೋಪಾಲದಾಸರ ಕೃತಿಗಳು ಇತರ ದಾಸರ ಕೃತಿಗಳಂತೆಯೇ ಇದ್ದರೂ ವಿಜಯದಾಸರ ಪ್ರಭಾವದಿಂದ ತತ್ತ್ವಭೂಯಿಷ್ಠವಾಗಿವೆ.

ಗೋಪಾಲದಾಸರ ಅನಂತರ ಹರಿದಾಸಸಾಹಿತ್ಯ ಪರಂಪರೆಯನ್ನು ಮುಂದುವರಿಸಿದವರಲ್ಲಿ ಜಗನ್ನಾಥದಾಸರು ಮುಖ್ಯರು. ಕ್ರಿ. ಶ. ೧೭೨೭ರಲ್ಲಿ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಬ್ಯಾಗವಟ್ಟದಲ್ಲಿ ಹುಟ್ಟಿದ ಇವರ ಅಂಕಿತ 'ಜಗನ್ನಾಥವಿಠಲ.' ನೂರಾರು ಕೃತಿಗಳನ್ನು ರಚಿಸಿ ಹರಿದಾಸ ವಾಙ್ಮಯವನ್ನು ಶ್ರೀಮಂತಗೊಳಿಸಿದ್ದಾರೆ. ತತ್ತ್ವಸುವಾಲಿಗಳೆಂಬ ತ್ರಿಪದಿಧಾಟಿಯ ರಚನೆಗಳು ಇವರ ವೈಶಿಷ್ಟ್ಯ. ವಿಜಯದಾಸರಿಂದ ಶಾಸ್ತ್ರದತ್ತ ತಿರುಗಿದ ಹರಿದಾಸಸಾಹಿತ್ಯವಾಹಿನಿ ಜಗನ್ನಾಥದಾಸರಲ್ಲಿ 'ಹರಿಕಥಾಮೃತಸಾರ'ವೆಂಬ ಮಾಧ್ವತತ್ತ್ವ ಕೈಪಿಡಿಯಾಗಿ ಮೈದಾಳಿದೆ. ಇವರ ಕೃತಿಗಳೂ ಸಹ ತತ್ತ್ವಪ್ರಧಾನವಾದವುಗಳೇ.

ಹರಿದಾಸರ ಈ ಪರಂಪರೆಯಲ್ಲಿ ಕೊನೆಯ ಅಪರೋಕ್ಷಜ್ಞಾನಿಗಳೆಂದು ಕರೆಸಿಕೊಳ್ಳುವವರು ಪ್ರಸನ್ನವೆಂಕಟದಾಸರು. ಜಗನ್ನಾಥದಾಸರ ಸಮಕಾಲೀನರಾದ ಇವರು ಬಾಗಲಕೋಟೆಯ ಕಾಖಂಡಕಿಯವರು. ಬಡತನವನ್ನನುಭವಿಸಿ ತಿರುಪತಿ ತಿಮ್ಮಪ್ಪನ ಪ್ರಸಾದದಿಂದ 'ಪ್ರಸನ್ವೆಂಕಟ' ಅಂಕಿತದಲ್ಲಿ ಕೃತಿರಚನೆ ಮಾಡಿದ್ದಾರೆ. ಭಾಗವತದ ದಶಮಸ್ಕಂಧದ ಪೂರ್ವಾರ್ಧವನ್ನು ಕನ್ನಡಿಸಿರುವುದು ಇವರ ಹಿರಿಮೆ. ಬಾಲಭಾಷೆಯಲ್ಲೇ ಕೃತಿರಚನೆ ಮಾಡಿರುವುದು ('ಯತೋದೆಯಮ್ಮ ನಂಗನ್ನೆತ್ತಿಕೊಳ್ಳಮ್ಮಾ') ಇವರ ವೈಶಿಷ್ಟ್ಯ.

ಹೀಗೆ ಶ್ರೀಪಾದರಾಜರಿಂದ ಪ್ರಾರಂಭವಾಗಿ ಪುರಂದರ–ಕನಕರವರೆಗೆ ಬೆಳೆದು ಬಂದಿರುವ ಹರಿದಾಸಸಾಹಿತ್ಯವನ್ನು 'ದಾಸಸಾಹಿತ್ಯದ ಪ್ರಥಮಘಟ್ಟ'ವೆಂದೂ ವಿಜಯದಾಸರಿಂದ ಪ್ರಸನ್ನವೆಂಕಟದಾಸರವರೆಗೆ 'ದಾಸಸಾಹಿತ್ಯದ ದ್ವಿತೀಯಘಟ್ಟ'ವೆಂದೂ ಗುರುತಿಸಲಾಗಿದೆ. ಪ್ರಥಮಘಟ್ಟದಲ್ಲಿನ ಕಾವ್ಯಮಯತೆ, ಪಂಚಭಾವಗಳ ವಿಸ್ತೃತಿ, ಜೀವನಾನುಭವ, ಸಾಮಾಜಿಕ ಕಳಕಳಿ, ಕೃತಿಗಳ ಸಂಖ್ಯಾಬಾಹುಳ್ಯಗಳು ಎರಡನೆಯ ಘಟ್ಟದಲ್ಲಿ ಅಷ್ಟಾಗಿ

ಕಂಡುಬರುವುದಿಲ್ಲ. ಭಾವವೈವಿಧ್ಯ, ಛಂದೋವೈವಿಧ್ಯ, ಭಕ್ತಿವೈವಿಧ್ಯಗಳನ್ನುಳಿಸಿಕೊಂಡರೂ ಎರಡನೆಯ ಹಂತದ ಹರಿದಾಸಸಾಹಿತ್ಯ ಮತೀಯ ಸಾಹಿತ್ಯವಾಗಿ ಬೆಳೆದು ಬಂದಿರುವುದು ಗಮನಾರ್ಹ.

ಈ ಗುರುಶಿಷ್ಯ ಪರಂಪರೆ ಅಲ್ಲಿಗೇ ನಿಲ್ಲದೆ ಪ್ರಾಣೇಶದಾಸರು, ಹೆಳವನಕಟ್ಟೆ ಗಿರಿಯಮ್ಮ, ಸುರಪುರದ ಆನಂದದಾಸರು, ಮೊದಲುಕಲ್ಲು ಶೇಷದಾಸರು, ಅಡವೀ ರಾಮದಾಸರು, ಹೀಗೆ–ಬೇಲೂರು ಕೇಶವದಾಸರು ಸೂಚಿಸಿರುವಂತೆ ಆಧುನಿಕ ಕಾಲದವರೆಗೂ ಪರಂಪರೆಯನ್ನು ಗುರುತಿಸಬಹುದು. ಈ ಎಲ್ಲ ಮಹನೀಯರೂ ತಮ್ಮ ತಮ್ಮ ಆತ್ಮೋದ್ಧಾರ ಮಾಡಿಕೊಂಡುದಲ್ಲದೆ ಭಾಗವತ ಧರ್ಮ ಪ್ರಚಾರವನ್ನೂ ಮಾಡಿದ್ದಾರೆ, ಮಾಡುತ್ತಿದ್ದಾರೆ. (ಉದಾ : ದಿ॥ ಗುರುಗೋವಿಂದವಿಠಲದಾಸರು ಮತ್ತು ಅವರ ನೂರಾರು ಜನ ಶಿಷ್ಯರು.)

ಹೀಗೆ ಸು. ೬೦೦ ವರ್ಷಗಳ ಇತಿಹಾಸವಿರುವ ಹರಿದಾಸಸಾಹಿತ್ಯ ಪರಂಪರೆಗೆ ಕನಕದಾಸರ ಕೊಡುಗೆ ಏನೆಂಬುದು ಅವರ ಕೃತಿಗಳನ್ನು ಇತರ ಹರಿದಾಸರ ಕೃತಿಗಳೊಂದಿಗೆ ಹೋಲಿಸಿ ಅಭ್ಯಾಸ ಮಾಡಿದಾಗ ತಿಳಿಯುತ್ತದೆ. ಪರಂಪರೆಗೆ ಕನಕದಾಸರ ಮೊತ್ತಮೊದಲ ಕೊಡುಗೆಯೆಂದರೆ ಇತರ ಹರಿದಾಸರಂತೆ ಇವರೂ ಮಾಧ್ವತತ್ತ್ವ ಪರವಾಗಿ ಭಕ್ತಿಸಾಧನೆ ಮಾಡಿರುವುದು. ಮಾಧ್ವಮತತತ್ತ್ವಗಳನ್ನು ಅನುಸರಿಸಿದ ಹರಿದಾಸರು ಸಗುಣಭಕ್ತರು. ಅವರ ಪ್ರಕಾರ ಶ್ರೀಹರಿ ಸರ್ವೋತ್ತಮ, ಸ್ವತಂತ್ರ ; ಗುಣಾತೀತ ; ಹೇಯಗುಣರಹಿತ ; ಸರ್ವವ್ಯಾಪ್ತ ; ಸರ್ವಶಕ್ತ ; ಪ್ರಾಕೃತದೇಹರಹಿತ. ಈ ಜಗತ್ತು ಸತ್ಯ. ಪಂಚಭೇದಗಳು (ಜೀವ–ಜೀವ, ಜೀವ–ಜಡ, ಜೀವ–ಈಶ, ಜಡ–ಈಶ, ಜಡ–ಜಡಗಳಿಗೆ ಇರುವ ಭೇದಗಳು) ಸತ್ಯ. ತಾರತಮ್ಯಾನುಸಾರವಾಗಿ ಸೃಷ್ಟಿಯನ್ನು ಪರಿಭಾವಿಸಬೇಕು. ಜೀವರಿಗೆ ದತ್ತಸ್ವಾತಂತ್ರ್ಯಮಾತ್ರ. ಶ್ರೀಹರಿ ಬಿಂಬರೂಪಿ ; ಜೀವರು ಪ್ರತಿಬಿಂಬರೂಪಿಗಳು. ವಾಯುದೇವರು ಪರಮಗುರುಗಳು. ಪ್ರತಿಯೊಬ್ಬ ಜೀವಿಯ ಉಪಾಸನೆಯೂ ಗುರುಮುಖೇನವೇ ಶ್ರೀಹರಿಗೆ ಸಲ್ಲತಕ್ಕದ್ದು. ಮುಕ್ತಿಗೆ ಶ್ರೀಹರಿಯ ಪ್ರಸಾದ, ಗುರುಕರುಣೆಗಳು ಅತ್ಯಗತ್ಯ. ಹರಿದಾಸರೆಲ್ಲರ ಕೃತಿಗಳಲ್ಲೂ ಈ ತತ್ತ್ವಗಳು ಹಾಸುಹೊಕ್ಕಾಗಿವೆ. ಈ ಮತತತ್ತ್ವಗಳ ಹಿನ್ನೆಲೆಯಲ್ಲಿ ಕನಕದಾಸರ ಕೃತಿಗಳನ್ನು ಪರಿಶೀಲಿಸಿದಾಗ ಅವರ ಕಾವ್ಯಗಳಲ್ಲೊಂದಾದ ಮೋಹನ ತರಂಗಿಣಿಯಲ್ಲಿ ಶ್ರೀವೈಷ್ಣವ ಆಚಾರ್ಯರಾದ ಶ್ರೀ ರಾಮಾನುಜರ ಸ್ತುತಿಯಿರುವುದು ಕಂಡುಬರುತ್ತದೆ. ಕೀರ್ತನೆಗಳಲ್ಲೂ 'ತಿರುಮಣಿ' 'ತಿರುಚೂರ್ಣ'ಗಳ ಪ್ರಸ್ತಾಪವಿದೆ. ಶ್ರೀರಾಮಾನುಜರ ಹೆಸರೂ

ಬರುತ್ತದೆ. (ಉದಾ : 'ಮುಟ್ಟಬೇಡ ಮುಟ್ಟಬೇಡ.....' 'ರಾಮಾನುಜಮತೋದ್ಧಾರಕ...') ಬಹುಶಃ ಮೊದಲು ಕನಕದಾಸರು ಶ್ರೀವೈಷ್ಣವ ತತ್ತ್ವಗಳನ್ನು ಒಪ್ಪಿಕೊಂಡಿದ್ದು, ಕ್ರಮೇಣ ಶ್ರೀ ವ್ಯಾಸತೀರ್ಥರ ಸಂಪರ್ಕಕ್ಕೆ ಬಂದ ಬಳಿಕ ಅವರಿಂದ ಪ್ರಭಾವಿತರಾಗಿ ಅಂಕಿತ, ದೀಕ್ಷೆಗಳನ್ನು ಪಡೆದು ಮಾಧ್ವತತ್ತ್ವಗಳನ್ನೂ ಸ್ವೀಕರಿಸಿರುವ ಸಾಧ್ಯತೆಯಿದೆ. 'ಕದರಮಂಡಲಗಿಯ ಹನುಮರಾಯ....'. 'ಭಜರೇ ಹನುಮಂತಂ'–ಹೀಗೆ ಅವರ ಅನೇಕ ಕೃತಿಗಳಲ್ಲಿ ಗುರುಸ್ತುತಿಯನ್ನು ಕಾಣಬಹುದು. ಹನುಮ–ಭೀಮ–ಮಧ್ವ–ಅವತಾರತ್ರಯದ ಈ ಮಾಧ್ವಮತದ ಪರಿಕಲ್ಪನೆ ಕನಕದಾಸರಲ್ಲಿ 'ಪರಮಪದವೀವಗುರು ಮುಖ್ಯಪ್ರಾಣ', 'ಎಷ್ಟು ಪೊಗಳಲಿ ನಾನು' ಕೃತಿಗಳಲ್ಲಿ ಮೂಡಿಬಂದಿದೆ, 'ತನು ನಿನ್ನದು ಜೀವನ ನಿನ್ನದೋ.. ನೀನಲ್ಲದೆ ನರರು ಸ್ವತಂತ್ರರೇ'–ಎನ್ನುವಲ್ಲಿ ಜೀವರ ದತ್ತಸ್ವಾತಂತ್ರ ತತ್ತ್ವ ಮೈವೆತ್ತಿದೆ. 'ನನ್ನಿಂದ ನಾನೇ ಜನಿಸಿ ಬಂದೆನೆ ಕೃಷ್ಣ ಎನ್ನ ಸ್ವತಂತ್ರ್ಯವು ಲೇಶವಿದ್ದರು ತೋರು'–ಎಂದು ಹರಿಯು ಸರ್ವಸ್ವತಂತ್ರನೆಂಬುದನ್ನು ಸ್ಮರಿಸಿದ್ದಾರೆ. ಶ್ರೀಹರಿ ಸರ್ವವ್ಯಾಪ್ತನೆಂಬ ತತ್ತ್ವ : 'ಎಲ್ಲಿರುವನೋ ರಂಗ ಎಂಬ ಸಂಶಯ ಬೇಡ ಎಲ್ಲಿ ಭಕ್ತರು ಕರೆಯೆ ಅಲ್ಲಿ ಬಂದೊದಗುವನು' ; 'ವಿಶ್ವಲೋಕೇಶ ವಿಶ್ವಲೋಕೇಶ ವಿಮಲೈಕ ತೇಜೋಮೂರ್ತಿ' ಇತ್ಯಾದಿ ಕೀರ್ತನೆಗಳಲ್ಲಿ ಪ್ರತಿಪಾದಿತವಾಗಿದೆ. 'ಜಗದಂತರ್ಯಾಮಿಯೆಂತೆಂದು ನಿನ್ನ....'; 'ಆರು ಸಮಯಕ್ಕೊದಗಲಿಲ್ಲ...'–ಇತ್ಯಾದಿ ಕೀರ್ತನೆಗಳಲ್ಲಿ ತಾರತಮ್ಯ ತತ್ತ್ವದ ಹೊಳಹನ್ನು ಕಾಣಬಹುದು. ಅಂತೆಯೇ ಹರಿನಾಮ ಮಹಿಮೆ, ಹರಿಯ ಸ್ಮರಣೆ, ಹರಿಕೀರ್ತನೆ, ವಂದನೆ, ಆತ್ಮನಿವೇದನೆಗಳೂ ಕನಕದಾಸರ ಕೀರ್ತನೆಗಳಲ್ಲಿ ಯಥೇಚ್ಛವಾಗಿ ಕಾಣಸಿಗುತ್ತವೆ. ಹರಿಸರ್ವೋತ್ತಮನೆಂಬುದನ್ನು ಸ್ವತಃ ಕನಕದಾಸರೇ ಕೊರವಂಜಿಯಾಗಿ 'ಕಣಿಯ ಹೇಳಬಂದೆ ನಾರಾಯಣನಲ್ಲದಿಲ್ಲವೆಂದು' ಎಂದು ಸಾರಿದ್ದಾರೆ. ಅಂತೆಯೇ ಅವರ ಹರಿದಾಸ್ಯದ ಅಪೇಕ್ಷೆಯ ತೀವ್ರತೆ 'ಈಶ ನಿನ್ನ ಚರಣ ಭಜನೆ ಆಸೆಯಿಂದ ಮಾಡುವೆನು ; 'ದಾಸಾರ್ಯರ ದಾಸರದಾಸ ನಾನು'–ಎನ್ನುವಲ್ಲಿನ ನೈಚ್ಯಾನುಸಂಧಾನದಲ್ಲಿ ಕಾಣಬಹುದು. ಹರಿಯ ದಶಾವತಾರ ವರ್ಣನೆಯೂ ಕೂಡ ಹರಿದಾಸರಲ್ಲಿ ಒಂದು ಸಂಪ್ರದಾಯವಾಗಿಯೇ ಬೆಳೆದು ಬಂದಿದೆ. ಕನಕದಾಸರ 'ನಾರಾಯಣನೇ ಈತ ನಾರಿ', 'ತಾಳಲಲ್ಲಲ್ಲಲ್ಲಲ್ಲೋ ಮೈಸುತ್ತಳಲಲ್ಲಲ್ಲಲ್ಲಲ್ಲೋ' 'ನಿನ್ನ ನಾನೇನೆಂದೆನೋ ರಂಗಯ್ಯ... 'ಮುಂತಾದ ಕೀರ್ತನೆಗಳಲ್ಲಿ ಹರಿಯ ದಶಾವತಾರಗಳ ವರ್ಣನೆ ಸೊಗಸಾಗಿ ಮೂಡಿದೆ.

ಹೀಗೆ ಮಾಧ್ವಮತತತ್ತ್ವಗಳನ್ನನುಸರಿಸಿ, ಹರಿದಾಸ್ಯವನ್ನು ಬಯಸಿದ ಕನಕದಾಸರು ಇತರ ಹರಿದಾಸರಂತೆಯೇ ಹರಿಗೆ ಶರಣಾಗಿ, ತಮ್ಮೊಳಗನ್ನು ಅವನೆದುರಿನಲ್ಲಿ ತೋಡಿಕೊಂಡು ಅವನ ಆಶ್ರಯ, ಪ್ರಸಾದ, ಕರುಣೆಗಳನ್ನು ಬೇಡಿದ್ದಾರೆ. ಹರಿಯನ್ನು ಪಂಚಭಾವಗಳಿಂದ (–ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ, ಶಾಂತ) ಒಡೆಯ, ಗೆಳೆಯ, ಇನಿಯ, ಎಳೆಯ ಹಾಗೂ ಕೇವಲ ಭಗವಂತ ಎಂಬ ದೃಷ್ಟಿಕೋನಗಳಿಂದ–ಕಂಡು ಸ್ತುತಿಸಿದ್ದಾರೆ. ಉದಾ : 'ದಾಸದಾಸರ ಮನೆಯ ದಾಸಿಯರ ಮಗ ನಾನು' ಎನ್ನುವಲ್ಲಿ ಶ್ರೀಹರಿ ತಮ್ಮ ಧಣಿ ; ತಾವು ಅವನ ಸೇವಕ ಎಂಬ ದಾಸ್ಯಭಾವ ಜಾಗೃತವಾಗಿದ್ದರೆ 'ನಿನ್ನ ನಾನೇನೆಂದೆನೋ ರಂಗಯ್ಯ ರಂಗ' ಎಂದು ಕೇಳುವಲ್ಲಿ ಸಖ್ಯಭಾವದ ಸಲುಗೆಯಿದೆ. 'ಮುಟ್ಟದಿರೋ ಎನ್ನನು ರಂಗಯ್ಯ' ಎಂದು ಕೇಳಿಕೊಳ್ಳುವಲ್ಲಿ ಹರಿ ತಮ್ಮ ಇನಿಯನೆಂದು ಭಾವಿಸುವ ತಾದಾತ್ಮ್ಯವಿದೆ. 'ಇಂದು ಸೈರಿಸಿರಿ ಶ್ರೀಕೃಷ್ಣನ ತಪ್ಪ' ಎಂದು ಯಶೋದೆಯಾಗಿ ಗೋಪಿಯನ್ನು ಕೇಳಿಕೊಳ್ಳುವಲ್ಲಿ ತಾಯ್ತನದ ಆವಿರ್ಭಾವವಿದೆ. ಈ ಎಲ್ಲ ಸಂಬಂಧಗಳ ವ್ಯಾಮೋಹವನ್ನು ಕಳಚಿ ಅವನ ರೂಪ ಗುಣ ಮಹಿಮಾದಿಗಳನ್ನು ವರ್ಣಿಸುವಲ್ಲಿ ಕೇವಲ ಭಕ್ತನ ಮನಃಪರಿಪಾಕವಿದೆ. ಆ ಹಂತದಲ್ಲಿ ಶ್ರೀಹರಿ ಅವರಿಗೆ 'ಅಣೋರಣೀಯ'ನಾಗಿ 'ಮಹತೋಮಹೀಯ'ನಾಗಿ ಕಂಡಿದ್ದಾನೆ. ಹೀಗೆ 'ಬಾ ರಂಗ ಎನ್ನ ಮನಕೆ', 'ಬಾರೋ ಬಾರಯ್ಯ ಮನೆಗೆ'–ಎಂದು ಮಾತಾಗಿ ಶ್ರೀಹರಿಯನ್ನು ತಮ್ಮ ಹೃದಯ ಸದನಕ್ಕೆ ಆಹ್ವಾನಿಸಿ, ಬಗೆ ಬಗೆಯಾಗಿ ಹಾಡಿ ಕಾಡಿ ಅವನನ್ನು ಒಲಿಸಿಕೊಂಡ ಕನಕದಾಸರಿಗೆ ಒಂದು ಹಂತದಲ್ಲಿ ಅವನು ಬಂದು ತಮ್ಮ ಹೃದಯದಲ್ಲಿ ನೆಲೆನಿಂತ ಅನುಭವವಾಗಿದೆ. ಒಳಗಣ್ಣಿನಿಂದ ಅವನನ್ನು ಕಂಡಿದ್ದಾರೆ : 'ಕಂಡೆ ನಾ ತಂಡ ತಂಡದ ಹಿಂಡುದೈವ ಪ್ರಚಂಡ ರಿಪು ಗಂಡ ಉದ್ದಂಡ ನರಸಿಂಹನ' ಎಂದು ಹಾಡಿ ಹಿಗ್ಗಿದ್ದಾರೆ. 'ಇದ್ದೀಯಾ ಶ್ರೀಹರಿ ನೀನೊಲಿದು ಬಂದಿದ್ದೀಯಾ...' ಎಂದು ಅವನ ಇರುವಿಕೆಯನ್ನು ಖಚಿತಪಡಿಸಿಕೊಳ್ಳುತ್ತಾರೆ. ಅನಂತರ ಅವರಿಗೆ ಎಲ್ಲೆಲ್ಲೂ ಅವನ ದರ್ಶನವೇ ದರ್ಶನ. 'ಎಲ್ಲಿ ನೋಡಿದರಲ್ಲಿ ರಾಮ' 'ಎಲ್ಲಿರುವನೋ ರಂಗ ಎಂಬ ಸಂಶಯ' ಪರಿಹಾರ. ಕನಕದಾಸರ ಭಕ್ತಿಯ ಕಣ್ಣಿಗೆ ಉಗ್ರನರಸಿಂಹನೂ ಚೆಲ್ವಕಂಗಳ ಚೆಲ್ವಕಾರ'ನಾಗಿ ಕಂಡಿದ್ದಾನೆ. ಹರಿಯನ್ನು ಕಂಡ ಅನುಭವವಾದ ಬಳಿಕ ಅವರ ಪ್ರಕ್ಷುಬ್ಧಮನ ತಿಳಿಯಾಗತೊಡಗಿದೆ. 'ಬದುಕಿದೆನು ಬದುಕಿದೆನು ಭವಎನಗೆ ಹಿಂಗಿತು । ಪದುಮನಾಭನ ಪಾದದೊಲಿಮೆ ಎನಗಾಯಿತು' ಎಂದು ದಾಸರು ಸಂತೃಪ್ತರಾಗಿದ್ದಾರೆ, 'ಲಾಲಿ

ಪಾವನಚರಣ ಲಾಲಿ' ಎಂದು ಹಾಡಿ ಹರಿಯನ್ನು ತೂಗಿದ್ದಾರೆ ; 'ವಿಶ್ವಲೋಕೇಶ ನಮೋ' ಎಂದು ವಂದಿಸಿದ್ದಾರೆ; 'ಅಣು ಮಹತ್ತಾದಿದೇವ' ಎಂದು ತಲೆಬಾಗಿದ್ದಾರೆ. ಒಂದು ಹಂತದಲ್ಲಿ ತಮ್ಮನ್ನು ತಾವೇ 'ದಾಸದಾಸರ ಮನೆಯ ದಾಸಿಯರಮಗ', 'ಮಂಕುದಾಸ', 'ಮರುಳುದಾಸ', 'ನರಜನ್ಮ ಹುಳು', 'ಪರಮಪಾಪಿ'–ಇತ್ಯಾದಿಯಾಗಿ ಕರೆದುಕೊಂಡು ನೈಚ್ಯಾನುಸಂಧಾನ ಮಾಡಿಕೊಂಡಿದ್ದ ಕನಕದಾಸರು ಈ ಹಂತದಲ್ಲಿ 'ಆತನೊಲಿದಮೇಲಿನ್ಯಾತರ ಕುಲವಯ್ಯ' ; 'ಒಡವೆ ಹೋಯಿತು ಮನ ದೃಢವಾಯಿತು' ಎಂದು ಮುಂತಾಗಿ ಬೀಗುವಂತಾಗಿದ್ದಾರೆ. ಈ ಒಂದು ಕೆಚ್ಚು, ನೈತಿಕಧೈರ್ಯ ಕನಕದಾಸರ ಭಕ್ತಿ ಸಾಧನೆಯಲ್ಲಿ ಅವನ ಮಾನಸಿಕ ಬೆಳವಣಿಗೆಯನ್ನೂ, ಅವರ ಸಿದ್ಧಿಯ ಮಟ್ಟವನ್ನೂ ತೋರಿಸುತ್ತದೆ. ಇದು ಕನಕದಾಸರ ವ್ಯಕ್ತಿತ್ವದ ಬಹುಮುಖ್ಯವಾದ ಮುಖ. ಅವರಿಗೆ ಈ ಧೈರ್ಯ ಬಂದ ಬಳಿಕ ಸಮಾಜದ ಇತರರನ್ನೂ ತಮ್ಮೊಂದಿಗೆ ಕರೆದೊಯ್ಯುವ ಪ್ರಯತ್ನ ಮಾಡಿದ್ದಾರೆ. ಸಂಸಾರ ಕ್ಷಣಿಕತೆ, ದೇಹದ ನಶ್ವರತೆಗಳನ್ನು ಮತ್ತೆ ಮತ್ತೆ ಒತ್ತಿಹೇಳಿ ('ಇರಬಂದದಿಲ್ಲ ಸಂಸಾರ...'. 'ಎಲ್ಲಿಂದ ಬಂದೆ ಮುಂದೆತ್ತ ಪಯಣ', 'ಏನು ಇಲ್ಲದ ಎರಡುದಿನದ ಸಂಸಾರ' ಇತ್ಯಾದಿ ಕೀರ್ತನೆಗಳು.) ಅವುಗಳಿಂದ ಮುಕ್ತಿ ಪಡೆಯುವ ಏಕೈಕಮಾರ್ಗ ಹರಿಭಕ್ತಿ ; ಮುಕ್ತಿಗೊಯ್ಯುವ ಶಕ್ತಿ ಶ್ರೀಹರಿಯೊಬ್ಬನೇ ; ಆತನಿಗೆ ಶರಣಾಗಿರಿ ಎಂದು ಮಾರ್ಗದರ್ಶನ ಮಾಡಿದ್ದಾರೆ.

ಹೀಗೆ ಜಗತ್ತನ್ನೇ ವೈಷ್ಣವಮಯವನ್ನಾಗಿ ಮಾಡಲು ಹೊರಟ ಹರಿದಾಸರ ಜಾಡನ್ನೇ ಹಿಡಿದರೂ ಕನಕದಾಸರು ತಮ್ಮ ಹರಿಹರ ಸಾಮರಸ್ಯ ದೃಷ್ಟಿಯಿಂದ ಉಳಿದ ಹರಿದಾಸರಿಗಿಂತ ವಿಭಿನ್ನ ನೆಲೆಯಲ್ಲಿ ನಿಲ್ಲುತ್ತಾರೆ. ತಾರತಮ್ಯದ ಪ್ರಕಾರ ಹರ (ರುದ್ರ) ಶ್ರೀಹರಿಯ ಮೊಮ್ಮಗ. ಆದರೆ ಕನಕದಾಸರ ದೃಷ್ಟಿಯಲ್ಲಿ ಹರಿಹರರು 'ಏಕಸ್ಥರು', 'ಪುಂಡರೀಕಾಕ್ಷ', 'ಭಾಳಾಕ್ಷ'ರಿಬ್ಬರೂ ಪೂಜಾರ್ಹರು. ತಮ್ಮ ಮೋಹನತರಂಗಿಣಿಯಲ್ಲಿ ನಾಯಿಕೆ ನಾಯಕರಾದ ಉಷಾ–ಅನಿರುದ್ಧರಿಬ್ಬರನ್ನೂ ಒಂದೇ ಪೀಠದಲ್ಲಿ ಕೂಡಿಸಿ ಬಿಲ್ವಪತ್ರೆ, ತುಳಸಿಗಳಿಂದ ಹರ–ಹರಿ–ಇಬ್ಬರ ಪೂಜೆಯನ್ನೂ ಮಾಡಿಸಿದ್ದಾರೆ. ಕೊನೆಗೆ 'ಕೇಶವನೆಡೆಗೆನ್ನೆಡೆ ಗಾವನೋರ್ವನು ದ್ವೇಷಬುದ್ಧಿಯ ಮಾಡಿದಡೆ ದೋಷ ಸಂಭವಿಪು'ದೆಂದು ಹರನ ಬಾಯಲ್ಲಿ ಹೇಳಿಸಿಯೂ ಬಿಟ್ಟಿದ್ದಾರೆ. ಈ ದೃಷ್ಟಿ ಕನಕದಾಸರ ಭಾಗವತ ಮನೋಧರ್ಮಕ್ಕೆ ಸಾಕ್ಷಿಯಾಗಿದೆ ; ಮತವನ್ನೂ ಮೀರಿದ ಭಕ್ತರಾಗಿ ಕಾಣಿಸಿ ಕೊಂಡಿದ್ದಾರೆ ಕನಕದಾಸರು.

ಇತರ ಹರಿದಾಸರಂತೆ ಕನಕದಾಸರೂ ತಮ್ಮ ಭಕ್ತಿಸಾಧನೆಗೆ ರಾಮಾಯಣ, ಮಹಾಭಾರತ, ಭಾಗವತಗಳ ಕಥಾಪ್ರಸಂಗಗಳನ್ನು ಬಳಸಿಕೊಂಡರೂ ಅವುಗಳಿಗೆ ಒಂದು ಹೊಸ ಅರ್ಥವನ್ನು ಕಲ್ಪಿಸಿ, ಜನ ಮೆಚ್ಚಿ ಹೌದೆನ್ನುವಂತೆ ಹೇಳಿರುವುದು ಕನಕದಾಸರ ವೈಶಿಷ್ಟ್ಯ. (ಉದಾ : 'ಬೊಂಬೆಯಾಟವನಾಡಿದೆ ಮಹಾಭಾರತದ') ಈ ದೃಷ್ಟಿಯಿಂದ ಕನಕದಾಸರು ಒಳ್ಳೆಯ ವಾಗ್ಮಿಯಗಳು, ತಾರ್ಕಿಕರು. ಎಲ್ಲಕ್ಕಿಂತ ಹೆಚ್ಚಾಗಿ ಶ್ರೀಕೃಷ್ಣನನ್ನೇ ಅಪರಾಧಿಯ ಸ್ಥಾನದಲ್ಲಿ ನಿಲ್ಲಿಸಿರುವುದು, ತಾರ್ಕಿಕವಾಗಿ ಆ ನಿಲುವಿಗೆ ಬಂದಿರುವುದು ಭಕ್ತಿಸಾಹಿತ್ಯದಲ್ಲಿನ 'ನಿಂದಾಸ್ತುತಿ' ಅಲಂಕಾರಕ್ಕೆ ಒಂದು ಉತ್ತಮ ಉದಾಹರಣೆ.

ಕನಕದಾಸರೂ ಅನೇಕ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಿಯ ಕ್ಷೇತ್ರಮೂರ್ತಿಗಳನ್ನು ಸ್ತುತಿಸಿದ್ದಾರೆ. ಹರಿದಾಸ ಸಾಹಿತ್ಯದಲ್ಲಿ ಈ ಕ್ಷೇತ್ರ–ಕ್ಷೇತ್ರಮೂರ್ತಿಗಳ ವರ್ಣನೆಯೂ ಒಂದು ಸಂಪ್ರದಾಯವೇ ಆಗಿದೆ. ತಿರುಪತಿ, ಬೇಲೂರು, ಮೇಲುಕೋಟೆ, ಶ್ರೀರಂಗಪಟ್ಟಣ, ಉಡುಪಿ–ಇವು ಕನಕದಾಸರು ಸಂದರ್ಶಿಸಿದ ತೀರ್ಥಕ್ಷೇತ್ರಗಳಲ್ಲಿ ಮುಖ್ಯವಾದುವು. ಇವುಗಳಲ್ಲಿ ಉಡುಪಿಕ್ಷೇತ್ರಕ್ಕೂ ಕನಕದಾಸರ ಭಕ್ತಜೀವನಕ್ಕೂ ವಿಶೇಷವಾದ ಸಂಬಂಧವಿದೆ. ಕನಕದಾಸರು ತಮ್ಮ ಜೀವಿತಕಾಲದಲ್ಲಿ ಅನೇಕ ವರ್ಷಗಳನ್ನು ಉಡುಪಿಯ ಕೃಷ್ಣನ ಸನ್ನಿಧಿಯಲ್ಲಿ ಕಳೆದರೆಂದೂ, ಕೃಷ್ಣ ಅವರ ಭಕ್ತಿಗೊಲಿದು ಗೋಡೆಯನ್ನು ಸೀಳಿಕೊಂಡು ದರ್ಶನವಿತ್ತನೆಂದೂ ನಂಬಲಾಗಿದೆ. 'ವಾದಿರಾಜರು ಗೋಡೆ ಬಿದ್ದಕಡೆ ಒಂದು ಕಿಟಕಿಯನ್ನಿರಿಸಿದರು. ಅದು "ಕನಕನ ಕಿಂಡಿ"ಯೆಂದು ಪ್ರಸಿದ್ಧವಾಯಿತು'–ಎಂಬ ಮಾತಿದೆ. ಇದು ಐತಿಹಾಸಿಕ ಸತ್ಯವೆಂದೇ ಆದರಣೀಯವಾಗಿದ್ದರೂ ಸದ್ಯಕ್ಕೆ ಬೇರೆ ಪುರಾವೆಗಳೇನೂ ದೊರೆತಿಲ್ಲ. ಸ್ವತಃ ಕನಕದಾಸರ ಕೃತಿಗಳಲ್ಲಾಗಲೀ, ಇತರ ಹರಿದಾಸರ ಕೃತಿಗಳಲ್ಲಾಗಲೀ ಮೇಲಿನ ಸಂದರ್ಭದ ಪ್ರಸ್ತಾಪವಿಲ್ಲ. ಮಠದ ದಾಖಲೆಗಳಲ್ಲಾಗಲೀ ಚರಿತ್ರೆಯ ಪುಟಗಳಲ್ಲಾಗಲೀ, ಶಾಸನಗಳ ಕೆತ್ತನೆಗಳಲ್ಲಾಗಲೀ ಈ ವಿಷಯದ ಪ್ರಸ್ತಾಪವಿರುವುದು ನನ್ನ ಗಮನಕ್ಕೆ ಬಂದಿಲ್ಲ.

ವಾದಿರಾಜರು 'ವೈಕುಂಠವರ್ಣನೆ', 'ಲಕ್ಷ್ಮೀಶೋಭಾನೆ', 'ಗುಂಡಕ್ರಿಯೆ' ಇತ್ಯಾದಿ ಖಂಡಕಾವ್ಯಗಳನ್ನು ರಚಿಸಿದ್ದರೆ ಕನಕದಾಸರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ಮೋಹನತರಂಗಿಣಿ', 'ರಾಮಧಾನ್ಯಚರಿತ್ರೆ', 'ನಳಚರಿತ್ರೆ', 'ಹರಿಭಕ್ತಿಸಾರ'ಗಳನ್ನು ರಚಿಸುವ ಮೂಲಕ ಹರಿದಾಸರು ಎತ್ತಿಹಿಡಿದ ಭಕ್ತಿ, ಮೌಲ್ಯಗಳನ್ನು 'ದರ್ಶನ'ದ ಮಟ್ಟಕ್ಕೆ ಕೊಂಡೊಯ್ದಿದ್ದಾರೆ. ದ್ವಾಪರಯುಗದ ಕಥಾವಸ್ತುವನ್ನೆತ್ತಿಕೊಂಡು ಪುರಾಣ ಪಾತ್ರಗಳ ಮೂಲಕ ತಾವು ಬಾಳಿದ

ದೇಶಕಾಲಗಳ ಇರಸರಿಕೆಯನ್ನು ದಾಖಲಿಸಿರುವುದು ಮೋಹನತರಂಗಿಣಿಯ ವೈಶಿಷ್ಟ್ಯ. ಬಾಣಾಸುರನ ಶಿವಭಕ್ತಿ, ಉಷಾನಿರುದ್ಧರ ಪ್ರಣಯ, ದ್ವಾರಕೆ ಹಾಗೂ ಶೋಣಿತಪುರಗಳ ವರ್ಣನೆಯಲ್ಲಿ ಅವರ ಭಕ್ತಿಭಾವ ಮಡುಗಟ್ಟಿದೆ. ರಾಮಧಾನ್ಯಚರಿತ್ರೆಯಲ್ಲಿ ಕವಿಯ ಅಂತರಂಗವನ್ನು ಮಥಿಸುತ್ತಿದ್ದ ಕ್ರಾಂತಿಕಾರಕ ಮನೋಭಾವ ಉಕ್ಕಿಹರಿದಿದೆ. ಉಳಿದ ಹರಿದಾಸರಲ್ಲಿ ಅಲ್ಲಲ್ಲಿ ಹಣಿಕುವ ಈ ಭಾವ ಕನಕದಾಸರಲ್ಲಿ ರಾಗಿರಾಮಾಯಣವಾಗಿ ಮೂಡಿದೆ. ನಳ–ದಮಯಂತಿಯರ ಪರಿಶುದ್ಧಪ್ರೇಮದ ಪರಾಕಾಷ್ಠೆ, ವಿಧಿಯ ಕೈವಾಡದ ತೀವ್ರತೆಗಳನ್ನು ನಳಚರಿತ್ರೆ ಸಾರುತ್ತದೆ. ಕನಕದಾಸರ ಕೀರ್ತನೆಗಳ ವಸ್ತು, ಹಾಸು–ಬೀಸುಗಳೆಲ್ಲ ಅವರ ಹರಿಭಕ್ತಿಸಾರದಲ್ಲಿ ಭಟ್ಟಿಯಿಳಿದಿದೆ. ಪತ್ರಲೇಖನ ತಂತ್ರ ಈ ಶತಕಕೃತಿಯ ಮತ್ತೊಂದು ವೈಶಿಷ್ಟ್ಯ.

ಕೀರ್ತನೆಗಳಲ್ಲಿಯೂ ಕನಕದಾಸರ ಈ ಕವಿಮನೋಭಾವ ಕೆಲಸಮಾಡಿದೆ. ಅವರ ಆಂತರಿಕ ಅನುಭವಗಳು ಸಶಕ್ತವಾಗಿ, ನೇರವಾಗಿ, ಕಾವ್ಯವಾಗಿ ಅಭಿವ್ಯಕ್ತಿ ಪಡೆದಿರುವುದನ್ನು ಗಮನಿಸಬಹುದು. (ಉದಾ : 'ಬದುಕಿದೆನು ಭವ ಎನಗೆ ಹಿಂಗಿತು') 'ಅಡಿಗೆಯನು ಮಾಡಬೇಕಣ್ಣ ನಾನೀಗ ಜ್ಞಾನದಡಿಗೆಯನು', 'ನನ್ನವ್ವ ಕಲ್ಲಬಿಡೆ ಈ ಧೋತ್ರವ ಚೆನ್ನಾಗಿ ಒಗೆಯಬೇಕು', 'ಇಕ್ಕಲಾರೆ ಕೈ ಎಂಜಲು', 'ಕೆಟ್ಟು ನೆಂಟರ ಸೇರುವುದು ಬಲು ಕಠಿಣ'–ಇತ್ಯಾದಿ ಪ್ರತಿಮೆಗಳು, ಗಾದೆಮಾತುಗಳು ಸ್ಫುರಿಸುವ ಅರ್ಥವೈಶಾಲ್ಯ, ಅನುಭವದಾಳಗಳು ಮನನೀಯವಾದವು. 'ಎಲ್ಲರು ಮಾಡುವುದು ಹೊಟ್ಟೆಗಾಗಿ', 'ತಾಯಿ ತೀರಿದಮೇಲೆ ತೌರಾಸೆಯೆ', 'ತಲ್ಲಣಿಸದಿರುಕಂಡ್ಯ ತಾಳು ಮನವೆ'–ಇತ್ಯಾದಿ ಪಲ್ಲವಿಗಳು ಅವರ ಕವಿ ಮನೋಭಾವಕ್ಕೆ ಹಿಡಿದ ಕನ್ನಡಿಗಳು.

ಅಬ್ರಾಹ್ಮಣರಾದುದರಿಂದ ಸಮಾಜದ ಕೆಳವರ್ಗದ ಜನರೊಂದಿಗೆ ನೇರಸಂಪರ್ಕವಿದ್ದುದರಿಂದ ಕನಕದಾಸರ ಸಾಮಾಜಿಕ ಅನುಭವಗಳ ಪರಿಧಿ ಉಳಿದ ಹರಿದಾಸರುಗಳ ಅನುಭವ ಪರಿಧಿಗಿಂತ ವಿಸ್ತೃತವಾದದ್ದು. ಸಮಾಜದ ಕೆಳವರ್ಗದವರ ಆಚಾರ ವಿಚಾರಗಳು, ನಡಾವಳಿಕೆಗಳನ್ನು ತಿದ್ದುವಲ್ಲಿ; ದೇವದಾಸಿ ಪದ್ಧತಿ, ಪ್ರಾಣಿವಧೆ ಮದ್ಯಪಾನಾದಿಗಳನ್ನು ಅವರ ಪ್ರಯತ್ನ ಕಳಕಳಿಗಳು ಕನಕದಾಸರನ್ನು ಖಂಡಿತವಾದಿಗಳನ್ನಾಗಿ ಮಾಡಿವೆ. (ಉದಾ : 'ತೀರ್ಥವನು ಪಿಡಿದವರೆಲ್ಲ...') ಜಾತಿ ಕುಲಗಳ ಮಾತು ಬಂದಾಗಲಂತೂ ಕನಕದಾಸರು ಸ್ವತಃ ರುದ್ರರಾಗಿ ಬಿಟ್ಟಿದ್ದಾರೆ ('ಆತ್ಮ ಯಾವ ಕುಲ ?' 'ಜೀವ ಯಾವ ಕುಲ?'–ಇತ್ಯಾದಿ ಮಾತುಗಳು) ಬಹುಶಃ ಸಾಮಾಜಿಕವಾಗಿ ನೊಂದ ಮನಸ್ಸು ಈ

ರೀತಿಯ ಪ್ರತಿಕ್ರಿಯೆಯಲ್ಲಿ ಸಾಂತ್ವನ ಪಡೆದಿರಬಹುದು. ಈ ವಲಯದಲ್ಲಿನ ಕನಕದಾಸರ ಅನುಭವ ಸಂಪತ್ತು ಕೃತಿಗಳ ಮೂಲಕ ಹೊರಹೊಮ್ಮಿ ಹರಿದಾಸ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನು ತಂದುಕೊಟ್ಟಿದೆ. ಅವರ ಖಂಡಿತವಾದ, ಕೆಚ್ಚು ಹರಿದಾಸ ಸಾಹಿತ್ಯದಲ್ಲಿ ಅವರಿಗೆ ಒಂದು ವಿಶಿಷ್ಟ ಪ್ರಭಾವಲಯವನ್ನು ಸೃಷ್ಟಿಸಿ ಕೊಟ್ಟಿದೆ. ಸ್ವತಃ ಢಣಾಯಕರಾಗಿದ್ದ ಕನಕದಾಸರು ಶ್ರೀಹರಿಯ ರೂಪ, ಗುಣ ಶಕ್ತಿಗಳನ್ನು ಮೆರೆಸುವಲ್ಲಿಯೂ, ಜನರ ಅಜ್ಞಾನ ಸಣ್ಣತನಗಳನ್ನು ಖಂಡಿಸಿ ವಿಡಂಬಿಸುವಲ್ಲಿಯೂ ಬಳಸಿಕೊಂಡಿರುವುದು ಗಮನಾರ್ಹ.

ಒಂದು ಹಂತದಲ್ಲಿ 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ', 'ತಾನ್ಯಾರೋ ತನ್ನ ದೇಹವ್ಯಾರೋ' ಎಂದು ಮುಂತಾಗಿ ದೇಹ, ಆತ್ಮ, ಪರಮಾತ್ಮರ ಪರಸ್ಪರ ಸಂಬಂಧವನ್ನು ಪೃಥಕ್ಕರಿಸಿ ನೋಡುವ ಮೂಲಕ ಚಿಂತನಶೀಲರಾಗಿ ಕಂಡಿದ್ದಾರೆ ಕನಕದಾಸರು. ಹುಟ್ಟು-ಸಾವುಗಳಂತಹ ಮೂಲಭೂತ ತತ್ವಗಳ ಚಿಂತನೆಯಿಂದ ತತ್ವಜ್ಞಾನಿಗಳಾಗಿ ಪರಿಣಮಿಸಿದ್ದಾರೆ. 'ಸತ್ಯನೊಬ್ಬ ಮಗ, ಶಾಂತನೊಬ್ಬ ಮಗ, ದುರ್ವೃತ್ತಿ ನಿಗ್ರಹನೊಬ್ಬ ಸಮಚಿತ್ತನೊಬ್ಬನು'-ಈ ನಾಲ್ಕೂ ಜನ ಮಕ್ಕಳಿದ್ದ ಮೇಲೆ ಇನ್ನೊಬ್ಬ ಲೌಕಿಕ ಮಗನ ಅಗತ್ಯವೇ ಇಲ್ಲ ಎಂಬ ತಾತ್ವಿಕ ನಿಲುವು ಅವರದು. ಆದರೆ ವಿಧಿಯ ವಿಚಾರ ಬಂದಾಗ ಮಾತ್ರ ಅವರು ಪ್ರಶ್ನಾತೀತರು ; ಸಂಪ್ರದಾಯಶರಣರು. 'ಪ್ರಾಚೀನ ಕರ್ಮ ಬಿಡಲರಿಯದು....', 'ಬ್ರಹ್ಮಲಿಖಿತವ ಮೀರಿ ಬಾಳ್ವರುಂಟೆ?'- ಇದು ಅವರ ನಿಷ್ಠೆ. ಕನಕದಾಸರಲ್ಲಿನ ಈ ದ್ವಂದ್ವ ನಿಜಕ್ಕೂ ಆಶ್ಚರ್ಯವನ್ನುಂಟುಮಾಡುವಂಥದು.

ಸಾಮಾನ್ಯವಾಗಿ ಹರಿದಾಸ ಪಂಥದಲ್ಲಿ 'ಭಕ್ತಿಗೆ ಪುರಂದರದಾಸರು, ಜ್ಞಾನಕ್ಕೆ ಜಗನ್ನಾಥದಾಸರು, ವೈರಾಗ್ಯಕ್ಕೆ ಕನಕದಾಸರು'-ಎಂಬ ಮಾತಿದೆ. ಆದರೆ ಕನಕದಾಸರ ಕೃತಿಗಳಲ್ಲಿ ಭಕ್ತಿ ಜ್ಞಾನ ವೈರಾಗ್ಯಗಳು ಮುಪ್ಪುರಿಗೊಂಡಿವೆ. ಭಕ್ತಿಗೆ 'ತೊರೆದು ಜೀವಿಸಬಹುದೆ ಹರಿ ನಿಮ್ಮ ಚರಣಗಳ' ಮುಂತಾದ ಕೃತಿಗಳೂ 'ಕನಕನ ಕಿಂಡಿ'ಯ ಪ್ರಸ್ತಾಪವೂ ಸಾಕ್ಷಿ. ಜ್ಞಾನಕ್ಕೆ ಅವರ ಜೀವನದೊಂದಿಗೆ ಬೆರೆತಿರುವ ಪವಾಡಗಳೂ, 'ಒಳಗಣ್ಣಿನಿಂದಲೆ ದೇವರ ನೋಡಣ್ಣ', 'ತಾನ್ಯಾರೊ ತನ್ನ ದೇಹವ್ಯಾರೋ ದಿವ್ಯಜ್ಞಾನದಿಂದ ತಿಳಿದವನೆ ಯೋಗಿ'-ಇತ್ಯಾದಿ ಮಾತುಗಳು ನಿದರ್ಶನ. ಅವರ ವೈರಾಗ್ಯ ಅವರ ಜೀವನದಲ್ಲೇ ಪಕ್ವಗೊಂಡ ವೈರಾಗ್ಯ, ಕೊಪ್ಪರಿಗೆಯನ್ನು ದೇವಾಲಯಕ್ಕೆ ಧಾರೆಯೆರೆದ ಕೊಡುಗೈ ವೈರಾಗ್ಯ,

ಹೆಂಡತಿ, ತಾಯಿಯರ ವಿಯೋಗದಿಂದ ದಟ್ಟೈಸಿದ ವೈರಾಗ್ಯ, ರಣರಂಗದಲ್ಲಿ ಖಂಡತುಂಡವಾದ ಮಾಂಸರಕ್ತಗಳ ಮಡುವಿನಿಂದ ಮೂಡಿ ಮೊಳೆತ ವೈರಾಗ್ಯವದು. 'ಬಂದದ್ದು ಮೂತ್ರಕುಳಿ, ತಿಂದದ್ದು ಮೊಲೆ ಮಾಂಸ । ಹಿಂದೆ ಹೀಗಿರಲದಿನ್ನೇತರ ಕುಲವಯ್ಯಾ' ಎಂಬ ಮಾತುಗಳಂತೂ ಎಂತಹ ಕಾಮಸನ್ನಿ ಪೀಡಿತನಿಗೂ ಒಂದು ಕ್ಷಣ ವೈರಾಗ್ಯಭಾವವನ್ನು ತಾರದಿರದು. ಕನಕದಾಸರ ಜ್ಞಾನ ಭಕ್ತಿ ವೈರಾಗ್ಯಗಳಿಗೆ ಅವರ 'ಹರಿಭಕ್ತಿಸಾರ'ವೇ ಜ್ವಲಂತ ಸಾಕ್ಷಿ.

ಕನಕದಾಸರು ಬಳಸಿರುವ ಭಾಷೆಯ ಬನಿ, ಆಡುಮಾತಿನ ಸೊಗಡು, ಹರಿದಾಸ ಸಾಹಿತ್ಯಕ್ಕೇ ಒಂದು ಬನಿಯನ್ನೊದಗಿಸಿದೆ. 'ಸಾರಿ ದೂರಿ ಹೇಳತೀನಿ ಕೆಟ್ಟೀ ಕಂಡ್ಯಾ ಬಡ್ಡಿಮನವೆ', 'ದೇವಿ ನಮ್ಮ ದ್ಯಾವರು ಬಂದಾರೆ ಬನ್ನಿರೇ ನೋಡ ಬನ್ನಿರೇ' 'ನಿನಗಿಂತ ಕುಂದೇನೊ ನಮ್ಮಮ್ಮ ಜಯಲಕ್ಷ್ಮಿ', 'ಎನ್ನ ಕಂದ ಹಳ್ಳೀಯ ಹನುಮ ಚೆನ್ನಾಗಿದ್ದಾರೆ ಲಕ್ಷ್ಮಣ ದೇವರು', 'ದಾಸನಾಗಬೇಕು ಸದಾಶಿವನ ದಾಸನಾಗಬೇಕು'–ಇತ್ಯಾದಿ ಕೀರ್ತನೆಗಳಲ್ಲಿ ಆಡುಮಾತಿನ ಸೊಗಡು ಮಡುಗಟ್ಟಿದೆ. ಸಾಮಾನ್ಯ ಕುಲವೊಂದರಲ್ಲಿ ಹುಟ್ಟಿದ ಕನಕದಾಸರು ಸ್ವಸಾಮರ್ಥ್ಯ ಹಾಗೂ ಹರಿಗುರುಗಳ ಕರುಣೆಯಿಂದ ಅಸಾಮಾನ್ಯರಾಗಿ, ಆದರ್ಶಪ್ರಾಯರಾಗಿ ಪರಿಣಮಿಸಿ, ನೂರಾರು ಸಂಖ್ಯೆಯಲ್ಲಿ ಕೃತಿರಚನೆ ಮಾಡಿದ್ದೇ ಒಂದು ಹಿರಿಮೆ. ಅದರಲ್ಲೂ ಕವಿಗಳಾಗಿ ಸತ್ವಪೂರ್ಣ ಕಾವ್ಯ ರಚನೆ ಮಾಡಿದ್ದು ಕೇವಲ ಹರಿದಾಸ ಸಾಹಿತ್ಯಕ್ಕೆ ಮಾತ್ರವಲ್ಲ ; ಕನ್ನಡ ಸಾಹಿತ್ಯಕ್ಕೇ ಒಂದು ಕೊಡುಗೆ. ಅಷ್ಟೇ ಏಕೆ ತಮ್ಮ ತೀಕ್ಷ್ಣವಾದ ವಿಚಾರಸರಣಿಯಿಂದ, ವಿಶಾಲ ಭಾವನೆಗಳ, ಮೌಲ್ಯಗಳ ನಿರೂಪಣೆಯಿಂದ, ಸಾತ್ವಿಕಜೀವನದಿಂದ ಕನಕದಾಸರು ಮಾನವಕುಲಕ್ಕೇ ಆದರ್ಶಪ್ರಾಯರಾಗಿದ್ದಾರೆ ; ಅನುಕರಣೀಯರಾಗಿದ್ದಾರೆ. ಆದುದರಿಂದಲೇ ವ್ಯಾಸರಾಯರಂತಹ ಯತಿಗಳು, ಮಠಾಧಿಪತಿಗಳು ಆ ಕಾಲದಲ್ಲಿ ಕನಕದಾಸರನ್ನು ಆದರಿಸಿದ್ದಾರೆ ; ಗೌರವಿಸಿದ್ದಾರೆ. ಪುರಂದರದಾಸರು 'ಇವಗೆ ನಾಡೆಲ್ಲ ಹುಡುಕಿದರೂ ಈಡಾರ ಕಾಣೆ'–ಎಂದು ಮೆಚ್ಚಿ ನುಡಿದಿದ್ದಾರೆ. ಹೀಗೆ ಒಬ್ಬ ವ್ಯಕ್ತಿಯಾಗಿ ತಾವೂ ಬೆಳೆದು ಒಂದು ಪರಂಪರೆಯನ್ನೂ ಉಳಿಸಿ ಬೆಳೆಸಿದ ಕನಕದಾಸರು ತಮ್ಮ ಕಾವ್ಯಶಕ್ತಿಯಿಂದ ಅದನ್ನು ದಾಖಲಿಸಿಯೂ ಇದ್ದಾರೆ.

# ಕನಕದಾಸರ ಅಧ್ಯಾತ್ಮಸಾಧನೆ ಮತ್ತು ಆತ್ಮಶೋಧನೆ

ಎಂ. ವಿ. ಸೀತಾರಾಮಯ್ಯ

ಆತ್ಮಶೋಧ' ಎಂದರೆ ಆತ್ಮಪರೀಕ್ಷಣ, ಆತ್ಮನಿರೀಕ್ಷಣ ; ಅಂತರ್ಮುಖಿಯಾಗಿ ತನ್ನಲ್ಲಿರುವ–ಎಂದರೆ ತನ್ನ ತನುಭಾಂಡಕ್ಕೆ ಸದ್ಯದ ಜನ್ಮದಲ್ಲಿಯೂ ಜನ್ಮಜನ್ಮಾಂತರಗಳಲ್ಲೂ ಅಂಟಿಕೊಂಡು ಬಂದಿರುವ ಐಹಿಕ ಕಲ್ಮಷಗಳನ್ನು ತೊಳೆದುಕೊಂಡು–ಎಂದರೆ, ತನುಭಾಂಡವನ್ನು ಪರಿಶುದ್ಧಮಾಡಿಕೊಂಡು–ಆಮುಷ್ಮಿಕಸಾಧನೆಯನ್ನು ಸುಗಮ ಮಾಡಿಕೊಳ್ಳುವುದು. ಆತ್ಮಶೋಧದ ಗುರಿ ಪ್ರೇಯಸ್ಸನ್ನು ಮೆಟ್ಟಿ ಶ್ರೇಯಸ್ಸನ್ನು ಸಾಧಿಸುವುದು. ಶ್ರೇಯಸ್ಸು ಆಯಾ ಸಾಧಕನ 'ದರ್ಶನ'ಕ್ಕೆ, ಧಾರ್ಮಿಕ ನಂಬಿಕೆಗಳಿಗೆ, ಅನುಗುಣವಾಗಿ ಬೇರೆಯಾಗಿರುತ್ತದೆ. ನಮ್ಮ ಭಾರತೀಯ ದರ್ಶನ ಶಾಸ್ತ್ರಗಳನ್ನು ಅಥವಾ ಸಿದ್ಧಾಂತಗಳನ್ನು ಪ್ರಧಾನವಾಗಿ ಮೂರು ಎಂದು ಗುರುತಿಸಬಹುದು : ಅದ್ವೈತ, ವಿಶಿಷ್ಟಾದ್ವೈತ, ದ್ವೈತ ; ಅದ್ವೈತದ ಪ್ರಭೇದಗಳು ಹಲಕೆಲವು ಇದ್ದು ಅವನ್ನು ಗೌಣವಾಗಿ ಪರಿಗಣಿಸಬಹುದು. ಈ ದರ್ಶನಗಳ ಪರಸ್ಪರ ಭೇದ ಲಕ್ಷಣಗಳನ್ನು ಸ್ಥೂಲವಾಗಿಯಾದರೂ ನಿರ್ದೇಶಿಸುವುದಕ್ಕೆ ಇಲ್ಲಿ ಅಗತ್ಯವೂ ಇಲ್ಲ, ಅವಕಾಶವೂ ಇಲ್ಲ. ಆದರೆ, ಕನಕದಾಸರು ವ್ಯಾಸರಾಯರನ್ನು ಗುರುವೆಂದು ಸ್ವೀಕರಿಸಿ ದ್ವೈತಮತ ಸಂಪ್ರದಾಯವನ್ನು ಅಂಗೀಕರಿಸುವ ಮುನ್ನ ಅವರು ವಿಶಿಷ್ಟಾದ್ವೈತ ಸಂಪ್ರದಾಯಕ್ಕೆ ಒಲಿದವರು ಎಂದು ಸರ್ವಸಾಮಾನ್ಯವಾಗಿ ಅಂಗೀಕೃತವಾಗಿದೆ. ಮೋಹನತರಂಗಿಣಿಯಲ್ಲೂ ನೃಸಿಂಹಸ್ತವದಲ್ಲೂ ಕನಕದಾಸರ ಶ್ರೀರಾಮಾನುಜ ಭಕ್ತಿ ಹಾಗೂ ಶ್ರೀವೈಷ್ಣವ (ವಿಶಿಷ್ಟಾದ್ವೈತ)ತತ್ತ್ವ ಪ್ರವಣತೆ ಸ್ಪಷ್ಟಗೋಚರವಾಗಿವೆ. ಒಂದು ಕಾಲದಲ್ಲಿ ರಾಮಾನುಜ ತತ್ವಕ್ಕೆ ನಿಷ್ಠೆತೋರಿ ಮುಂದೆ ಇನ್ನೊಂದು ಕಾಲದಲ್ಲಿ ಪುರಂದರದಾಸರ ಪರಿಚಯವಾಗಿ, ಅದರ ಫಲವಾಗಿ ಶ್ರೀವ್ಯಾಸರಾಯ ಗುರುಗಳಲ್ಲಿ ಶಿಷ್ಯತ್ವ ಪ್ರಾಪ್ತವಾಗಿ ಮಾಧ್ವ ಸಂಪ್ರದಾಯದ ಪ್ರಮೇಯಗಳಲ್ಲಿ ನಿಷ್ಠೆ ತೋರಿದ್ದರಿಂದ, ಒಂದು ಮತವನ್ನು ಕೈಬಿಟ್ಟು ಇನ್ನೊಂದು ಮತವನ್ನು ಸ್ವೀಕಾರಮಾಡಿದರೆಂದು ಕನಕದಾಸರ ವಿಷಯದಲ್ಲಿ ಹೇಳಲು ಸಾಧ್ಯವೇ ಇಲ್ಲ.

ಪುರಂದರದಾಸರು ಬ್ರಾಹ್ಮಣ ಕುಲಜರಾದ್ದರಿಂದ ಅವರಿಗೆ ಗುರುವಿನಿಂದ ದಾಸದೀಕ್ಷೆಯ ಜೊತೆಗೆ 'ವಿಠಲಾಂಕಿತ'ವೂ ಪ್ರಾಪ್ತವಾಯಿತು. ಕನಕದಾಸರು ಕುರುಬರ ಕುಲದವರಾದ್ದರಿಂದ ಅವರಿಗೆ ದೀಕ್ಷೆಯೂ ಇಲ್ಲ, 'ವಿಠಲಾಂಕಿತ'ವೂ ಇಲ್ಲ. ಇವರು ತಮ್ಮ ರಚನೆಗಳಿಗೆ ಕಾಗಿನೆಲೆಯ ಆದಿಕೇಶವ, ನೃಸಿಂಹ, ವೆಂಕಟೇಶ, ಇತ್ಯಾದಿ ಪರ್ಯಾಯ ನಾಮಗಳನ್ನು ಇಟ್ಟುಕೊಂಡಿದ್ದಾರೆ. ಬಹುಶಃ ಈ ಕಾರಣದಿಂದ, ಪುರಂದರದಾಸರಂತೆ ತಮ್ಮ ರಚನೆಗಳಲ್ಲಿ–ಮುಖ್ಯವಾಗಿ ಕೀರ್ತನೆಗಳು ಹಾಗೂ 'ಹರಿಭಕ್ತಿಸಾರ'ದಲ್ಲಿ–ಮಧ್ವ ಸಿದ್ಧಾಂತದ ಪ್ರಮೇಯಗಳನ್ನು ಸಮಗ್ರವಾಗಿ ಅಳವಡಿಸಿಕೊಂಡಿರುವುದು ಕಂಡುಬರುವುದಿಲ್ಲ. ವಿಶಿಷ್ಟಾದ್ವೈತಕ್ಕೂ ದ್ವೈತಕ್ಕೂ ಸರಿಸಮಾನ ಎನ್ನಬಹುದಾದ ನಿಚ್ಚಳವಾದ ಹರಿಭಕ್ತಿಗೇ ಇವರ ಪೂರ್ವೋಕ್ತಕೃತಿಗಳಲ್ಲಿ ಪ್ರಾಧಾನ್ಯ.

ಮಧ್ವಸಿದ್ಧಾಂತದಲ್ಲಿ ಮಾಯೆಯ* ಪ್ರಸಕ್ತಿಯೇ ಇಲ್ಲ. ಮಾಯೆಯ ಪ್ರಸಕ್ತಿ ಪ್ರಮುಖವಾಗಿ ಅದ್ವೈತಸಿದ್ಧಾಂತದಲ್ಲಿ ಮಾತ್ರ ಕಂಡುಬರುತ್ತದೆ ; ಸ್ವಲ್ಪ ಭಿನ್ನರೀತಿಯಲ್ಲಿ ವಿಶಿಷ್ಟಾದ್ವೈತದಲ್ಲೂ ಮಾಯೆಯ ಪ್ರಸಕ್ತಿ ಉಂಟು. 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ' ಎಂಬ ಕೀರ್ತನೆ ಮಧ್ವಸಿದ್ಧಾಂತಕ್ಕೆ ವಿರುದ್ಧವಾಗಿಯೇ ಇದೆ ; 'ಹರಿಭಕ್ತಿಸಾರ'ದಲ್ಲಿ ಬರುವ ಈ ಉಕ್ತಿಯನ್ನು ನೋಡಬೇಕು :

"ಶಕ್ತಿಯೆಂಬುದು ಮಾಯೆ ; ಮಾಯಾ–
ಶಕ್ತಿಯದು, ತನುವಿನಲಿ ನೀ ನಿಜ
ಮುಕ್ತಿದಾಯಕನಿರಲು ಸುಖದುಃಖಗಳಿಗೆ, ಆರು ;
ಯುಕ್ತಿಯೊಳಗಿದನರಿತು ಮನದ ವಿ–
ರಕ್ತಿಯಲಿ ಭಜಿಸುವಗೆ ಮುಕ್ತಿಗೆ
ಭಕ್ತಿಯೇ ಕಾರಣವು ರಕ್ಷಿಸು ನಮ್ಮನನವರತ ॥" (೭೩)

---

* ಅದ್ವೈತದಲ್ಲಿ 'ಮಾಯೆ' ಎಂದರೆ 'ಅವಿದ್ಯೆ', ಆತ್ಮಜ್ಞಾನದ, ಸ್ವ ಸ್ವರೂಪಜ್ಞಾನದ ಅಭಾವ. ಪುರಂದರದಾಸ ಕೆಲಕೃತಿಗಳಲ್ಲಿ 'ಮಾಯೆ' ಎಂದರೆ 'ಅಜ್ಞಾನ' ಎಂಬ ಅರ್ಥವಷ್ಟೆ. ಇಲ್ಲಿ ಮಾಯಾ ಶಬ್ದ ಪ್ರಯೋಗದಲ್ಲಿ ಸತ್ಯವಾಗಿ ಕಾಣುವ ಪ್ರಕೃತಿ ಪ್ರಪಂಚ ಕೇವಲ ಭ್ರಾಂತಿ, ನಶ್ವರ ಎಂಬ ಧ್ವನಿ ಇದೆ. ಈ ಮಾಯೆಯನ್ನು ಸೃಷ್ಟಿಸಿದವನೂ ನೀನೆ. ಪ್ರಕೃತಿಯನ್ನೂ ನಿನ್ನನ್ನೂ ಬೇರ್ಪಡಿಸಲು ಸಾಧ್ಯವಿಲ್ಲ. ಶ್ರೀಹರಿಯ ಸರ್ವಾಂತರ್ಯಾಮಿತ್ವ ಇಲ್ಲಿ ಧ್ವನಿತವಾಗಿದೆ. ಆದ್ದರಿಂದ, ಜಗತ್ತು ಸತ್ಯವೇ. ಈ ಮಾಯೆ ಅದ್ವೈತದ 'ಮಿಥ್ಯೆ' ಅಲ್ಲ ಎಂಬುದು ಸ್ಪಷ್ಟ.

ಇಲ್ಲಿ ಶಕ್ತಿ ಎಂದರೆ ಪ್ರಕೃತಿ. ಮುಕ್ತಿಸಾಧನೆಗೆ ಭಕ್ತಿಮಾರ್ಗ ಏಕೈಕ ಉಪಾಯ ಮತ್ತು ವೈರಾಗ್ಯದ ಅಗತ್ಯವನ್ನೂ ಹೇಳಿದೆ.

ಪ್ರತಿಪದ್ಯವೂ ರಕ್ಷಿಸು ನಮ್ಮನನವರತ ಎಂದು ಕೊನೆಗೊಳ್ಳುತ್ತ ವಿಶಿಷ್ಟಾದ್ವೈತದ ಶರಣಾಗತಿ ಮತ್ತು ಪ್ರಪತ್ತಿ ತತ್ವಗಳನ್ನು ಸೂಚಿಸುತ್ತದೆ.

ಮಾಧ್ವಸಿದ್ಧಾಂತದಲ್ಲಿ, ಸೃಷ್ಟಿಗೂ ಮೊದಲಲ್ಲಿ ಶ್ರೀಮನ್ನಾರಾಯಣನೇ ಇದ್ದವನು ಅವನೇ ಸೃಷ್ಟಿಕರ್ತ ಎಂಬ ಪ್ರಮೇಯುವಿದೆ. "ಮೂರು ಗುಣವೊಳೆದೋರಿತದರೊಳು, ಮೂರು ಮೂರ್ತಿಗಳಾಗಿ ರಂಜಿಸಿ ಸೃಷ್ಟಿಸ್ಥಿತಿಲಯಂಗಳ ರಚಿಸಿ" ಎಂಬ ಕಲ್ಪನೆಯೂ (ಪ. ೭೪), "ಐದು ತತ್ತ್ವಗಳಾದವೊಂದಕ್ಕೈದು ಕಡೆಯಲಿ ತತ್ತ್ವವಿಪ್ಪತ್ತೈದು ಕೂಡಿದ ತನುವಿನಲಿ ನೀನಿರಲು" ಎಂಬ ಯೋಗಶಾಸ್ತ್ರದ ನಿಲವನ್ನು ಅದ್ವೈತ ಸ್ವೀಕರಿಸಿದೆ. ಅದ್ವೈತ ಬ್ರಹ್ಮ ವಸ್ತು ಎನ್ನುವುದನ್ನು ಸಾಂಖ್ಯದಲ್ಲಿ ಪ್ರಧಾನ ತತ್ತ್ವ ಅಥವಾ ಪುರುಷ ಎಂದಿದೆ. ಅದ್ವೈತದ ನಿರ್ಗುಣಬ್ರಹ್ಮ ತ್ರಿಗುಣಾತ್ಮಕವಾದ ಪರಾಪ್ರಕೃತಿ (ಆದಿಶಕ್ತಿ, ಆದಿಮಾಯೆ) ಮೈದೋರುವುದಕ್ಕೆ ಕಾರಣ. ಈ ತ್ರಿಗುಣಗಳ (ಸತ್ವ, ರಜಸ್, ತಮಸ್) ಮೂರ್ತಸ್ವರೂಪಗಳೇ ತ್ರಿಮೂರ್ತಿಗಳಾದ ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮ, ಸ್ಥಿತಿಪಾಲಕನಾದ ವಿಷ್ಣು, ಲಯಕರ್ತನಾದ ಶಿವ.

ಕನಕದಾಸರು ಶ್ರೀ ಕೃಷ್ಣದೇವರಾಯನ ಕಾಲದ ಶ್ರೀವೈಷ್ಣವ-ವೈಷ್ಣವ ಪ್ರಭಾವದಿಂದ ಒಂದು ಕಾಲದಲ್ಲಿ ಶ್ರೀವೈಷ್ಣವ ಪ್ರವಣತೆಯನ್ನು ತೋರಿ, ತದನಂತರ ಪುರಂದರದಾಸರ ಸಹವಾಸ-ಸಾಹಚರ್ಯ ಕಾರಣದಿಂದ ವ್ಯಾಸರಾಯರನ್ನು ಗುರುವೆಂದು ಅಂಗೀಕರಿಸಿ, ತಮ್ಮ ರಚನೆಗಳಲ್ಲಿ ಹರಿಭಕ್ತಿಯನ್ನೇ ಪ್ರಧಾನವಾಗಿ ಎತ್ತಿಹಿಡಿದಿದ್ದರೂ ಶೈವವಿರೋಧಿಯಾಗಿರಲಿಲ್ಲ. ಇದಕ್ಕೆ ಕಾರಣ, ಶೈವಪರಂಪರೆಯ ಬೀರೇದೇವರನ್ನು ಕುಲದೈವವಾಗಿ ಅಂಗೀಕರಿಸಿದ್ದ ಕುರುಬ ಮನೆತನದಲ್ಲಿ ಜನ್ಮಧಾರಣ ಮಾಡಿದ್ದು. ಶ್ರೀ ವೈಷ್ಣವರು ಶಿವನ ಹೆಸರನ್ನೂ ಎತ್ತರು ; ಶಿವದೇವಾಲಯಕ್ಕೆ ಪ್ರವೇಶವನ್ನೂ ಮಾಡರು, ಕಟ್ಟಾ ವೈಷ್ಣವರು. ಮಾಧ್ವವೈಷ್ಣವರಾದರೋ ದೇವತಾಕಕ್ಷೆಯಲ್ಲಿ ಶಿವನಿಗೆ ಪ್ರಮುಖಸ್ಥಾನವನ್ನು ನೀಡಿದ್ದಾರೆ ; ಮಾತ್ರವಲ್ಲ, ಹರಿಭಕ್ತಿಯ ವರ್ಧನೆಗೆ ಶಿವನ ಕೃಪೆ ಬೇಕೆಂದು ಶಿವನನ್ನು ಬೇಡಿಕೊಳ್ಳುವ ಹರಿದಾಸರ ಕೀರ್ತನೆಗಳು ಹಲವು ಉಂಟು. ಆದರೂ ಮಾಧ್ವಸಂಪ್ರದಾಯದಲ್ಲಿ ಹರಿ-ಹರ ಸಮಾನತೆಗೆ ಎಡೆಯಿಲ್ಲವೇ ಇಲ್ಲ. ಆದರೆ, ಕನಕದಾಸರು ತಮ್ಮ ರಚನೆಗಳಲ್ಲಿ ಶಿವಸ್ತುತಿಯುನ್ನೂ ಶಿವಶಿವೋದ್ಗಾರಗಳನ್ನೂ ಮಾಡಿರುವದಲ್ಲದೆ

'ಮೋಹನತರಂಗಿಣಿ'ಯಲ್ಲಿ ಹರಿಹರ ಸಮಾನತೆಯನ್ನು ಎತ್ತಿಹಿಡಿದಿರುವರು.

ಈ ಮೇಲಿನ ಸಂಕ್ಷೇಪ ಮತಸಂಬಂಧದ ಚರ್ಚೆಯಿಂದ, ಕನಕದಾಸರು ಸಾಂಪ್ರದಾಯಿಕ ಕುಮಾರವ್ಯಾಸನಂತೆ ಭಾಗವತ ಧರ್ಮದ ಅನುಯಾಯಿ ಅಲ್ಲದಿದ್ದರೂ ಅದರ ಸಮನ್ವಯದೃಷ್ಟಿಯನ್ನು ಮೈಗೂಡಿಸಿಕೊಂಡವರು. ಪುರಂದರ ದಾಸರು ಕೂಡ ವ್ಯಾಸರಾಯರಲ್ಲಿ ಮಾಧ್ವಮತದೀಕ್ಷೆ ಪಡೆಯುವ ಮುನ್ನ ಭಾಗವತ ಸಂಪ್ರದಾಯದವರಾಗಿದ್ದರು ಎನ್ನುವುದಕ್ಕೆ ಅವರ(ಕೆಲವು)ಕೀರ್ತನೆಗಳಲ್ಲಿಯೇ ಸಾಕ್ಷ್ಯಾಧಾರವಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಶ್ರೀವೈಷ್ಣವ ಅಥವಾ ಮಾಧ್ವ ವೈಷ್ಣವ ಕ್ರಮಬದ್ಧ ದೀಕ್ಷೆ ಪಡೆಯದ ಕನಕದಾಸರು ಕೇವಲ ಭಾಗವತೋತ್ತಮರಾಗಿ, ಹರಿಭಕ್ತಿಗೆ ಪ್ರಾಧಾನ್ಯ ಕೊಟ್ಟು ಸ್ವತಂತ್ರ ವ್ಯಕ್ತಿತ್ವದ ಆಧ್ಯಾತ್ಮಿಕ ಸಾಧಕರಾಗಿದ್ದರು ಎಂಬ ತೀರ್ಮಾನಕ್ಕೆ ಬರಲೇಬೇಕಾಗಿದೆ. ಕನಕದಾಸರ ಮತಧರ್ಮದ ಒಲವು ನಿಲುವುಗಳ ಈ ಪೂರ್ವಪೀಠಿಕೆ, ಅವರ ಆತ್ಮಶೋಧದ ಆಧ್ಯಾತ್ಮಿಕ ಪ್ರವೃತ್ತಿಯ ಸಮೀಕ್ಷೆಗೆ ಅಗತ್ಯ ಎಂದು ನಾನು ಭಾವಿಸಿದ್ದೇನೆ. ಇತರ ಹರಿದಾಸರಲ್ಲಿ ಅಷ್ಟಾಗಿ ಕಂಡುಬರದ ಈ ಪ್ರವೃತ್ತಿಯನ್ನು ಪುರಂದರದಾಸರಲ್ಲಿಯೂ ಗುರುತಿಸಬಹುದು; ಇದಕ್ಕೆ ಕಾರಣ, ಅವರ ದೀಕ್ಷಾಪೂರ್ವದ ಭಾಗವತ ಸಂಪ್ರದಾಯ ನಿಷ್ಠೆಯ ವಿಶಾಲಮನೋಧರ್ಮ, ಸಮನ್ವಯ ದೃಷ್ಟಿಗಳೇ ಕಾರಣ.

ಕನಕದಾಸರು ವಿಶಾಲ ಮನೋಭಾವದ ಭಾಗವತರಾಗಿದ್ದರೂ ಅದ್ವೈತನಿಷ್ಠ ಭಾಗವತ ಸಂಪ್ರದಾಯಕ್ಕೆ ಸೇರಿದವರಲ್ಲ ಎಂಬುದನ್ನು ನೆನಪಿಡಬೇಕು. ಮಧ್ವ ಸಿದ್ಧಾಂತದ ಪ್ರಮೇಯಗಳನ್ನು ಬಹುಶಃ ಚೆನ್ನಾಗಿಯೇ ಬಲ್ಲವರಾಗಿದ್ದರೂ ಪುರಂದರ ದಾಸರಂತೆ "ಆ ಸಿದ್ಧಾಂತದ ಕೈವಾರಿ" ಯಾಗಲಿಲ್ಲ. ಒಂದು ಕೀರ್ತನೆಯಲ್ಲಿ, "ತುರೀಯಾಶ್ರಮವನೆ ಧರಿಸಿ ಕಲುಷದ ಮಾಯಿಗಳನು ಸೋಲಿಸಿ ಖಿಲವಾದ ಮಧ್ವ ಮತವನೆ ನಿಲಿಸಿ"ದ ಶ್ರೀಮಧ್ವಾಚಾರ್ಯರನ್ನು ಮುಖ್ಯಪ್ರಾಣ ಕಲಿಯುಗದ ಅವತಾರ ಎಂದು ಬಣ್ಣಿಸುವ ಕೀರ್ತನೆಯಲ್ಲಿ ಕೂಡ 'ಮಾಯಿ' (ಅದ್ವೈತದ ಮಾಯಾವಾದಿ)ಗಳನ್ನು ಗುರುತಿಸುವ 'ಕಲುಷದ' ಎಂಬ ನಿಂದಾತ್ಮಕ ಪದಕೂಡ ಅನುದ್ದಿಷ್ಟವಾಗಿ ಪ್ರಾಸಸ್ಥಾನದಲ್ಲಿ ಬಂದಿದೆ ಎಂದು ನನಗೆ ತೋರುತ್ತದೆ. ಹಾಗೆ ನೋಡಿದರೆ, ಅಂತರಂಗದಲ್ಲಿ ದೃಢಶಕ್ತಿಯಿಲ್ಲದೆ ಸ್ನಾನ ಜಪತಪಾದಿ ಆಚಾರಕ್ಕೇ ಕಟ್ಟುಬಿದ್ದು ಲೋಭಿಗಳಾದ ಮಧ್ವಮತಾನುಯಾಯಿಗಳನ್ನು "ಹಲವೆಂಟುವಾದತರ್ಕದೊಳಗಿದ್ದ ಭೇದ

ವಾದಿಗಳನ್ನು"* ಟೀಕಿಸಿರುವುದನ್ನು ಗಮನಿಸಿದಾಗ ಆಶ್ಚರ್ಯವಾಗುತ್ತದೆ ಯಾವುದೇ ಒಂದು ಮತಕ್ಕೆ ಸರ್ವಾತ್ಮನಾ ಕಟ್ಟುಬಿದ್ದವರು (committed) ಸಾಮಾನ್ಯವಾಗಿ ಅಂಧಶ್ರದ್ಧೆಯನ್ನು ಬೆಳಸಿಕೊಂಡು ತಮ್ಮ ಮತದ ಅಗ್ಗಳಿಕೆಯನ್ನು ಹೊಗಳಿಕೊಳ್ಳುವುದರಲ್ಲಿಯೇ ಮಗ್ನರಾಗಿರುತ್ತಾರೆ. ಪರಮತ ಸಹಿಷ್ಣುತೆ, ಸರ್ವಮತ ಸಮನ್ವಯ ದೃಷ್ಟಿ, ಇವರಲ್ಲಿ ಇಲ್ಲವಾಗುತ್ತದೆ. ಪುರಂದರದಾಸರಂಥವರೇ ಪರಮತಖಂಡನಕ್ಕೆ ಅಲ್ಲಲ್ಲಿ ಮನಸೋತಿರುವುದನ್ನು ಗಮನಿಸಿದಾಗ ಕನಕದಾಸರ ಪರಮತ ಸಹಿಷ್ಣುತೆ ಹಾಗೂ ಧರ್ಮಸಮನ್ವಯದೃಷ್ಟಿ ನಮ್ಮ ಮೆಚ್ಚುಗೆಗೆ ಪಾತ್ರವಾಗುತ್ತದೆ. ತಮ್ಮ ಮತದ ತಿರುಳನ್ನರಿಯದೆ ಬಾಹ್ಯಾಚರಣೆ ಡಂಭಾಚಾರಗಳಲ್ಲೇ ನಿರತರಾಗಿರುವ ಪರಮ ವೈಷ್ಣವರನ್ನೂ ಮುಸಲ್ಮಾನರನ್ನೂ ಲಿಂಗವಂತರನ್ನೂ ಒಂದು ಹಾಡಿನಲ್ಲಿ ಟೀಕಿಸಿರುವ ರೀತಿಯಲ್ಲಿ ಕನಕದಾಸರು ಈ ಮೂರು ಮತದವರ ನಿರರ್ಥಕ ಕರ್ಮಾಚರಣೆಯನ್ನು ವಿಡಂಬಿಸಿರುವುದು ಕಂಡುಬರುತ್ತದೆಯೇ ಹೊರತು ಆಯಾ ಮತಗಳನ್ನೇ ಹೀಯಾಳಿಸುವುದು ಕಂಡುಬರುವುದಿಲ್ಲ.

ಉದಾಹರಣೆಗೆ ಹಾಡಿನ ಒಂದು ನುಡಿ :

ಲಿಂಗಾಂಗದೊಳಗಿರುವ ಅನುಭವವ ತಿಳಿಯದೆ
ಅಂಗಲಿಂಗದ ನೆಲೆಯ ಗುರುತರಿಯದೆ
ಜಂಗಮಸ್ಥಾವರದ ಹೊಲಬನರಿಯದ ಇಂಥ
ಭಂಗಿಮುಕ್ಕುಗಳೆಲ್ಲ ಲಿಂಗವಂತರಹುದೆ ?

ಕನಕದಾಸರ ಈ ನುಡಿಯಲ್ಲಿಯ ಅನುಭವ, ನೆಲೆ, ಹೊಲಬು ಎಂಬ ಶಬ್ದಗಳ ಪ್ರಯೋಗಗಳನ್ನು ಅವರು ಬಾಯಮಾತಾಗಿ ಪ್ರಯೋಗಿಸಿದ್ದಾರೆ ಎಂದು ಹೇಳಲಾಗದು. ತಾವು ನಂಬಿದ ಮತ ಸಿದ್ಧಾಂತಗಳ ತತ್ತ್ವಾರ್ಥವನ್ನು ಅರಿತು, ಅನುಷ್ಠಾನಕ್ಕೆ ತಂದುಕೊಂಡು, ಆಧ್ಯಾತ್ಮಿಕ ಅನುಭವವನ್ನು ಪಡೆದ ತಮ್ಮ ಪಕ್ವಾವಸ್ಥೆಯಲ್ಲಿ ಈ ಮಾತು ಆಡಿದ್ದಾರೆ ಎನ್ನುವುದರಲ್ಲಿ ಸಂಶಯವಿಲ್ಲ. ಇದೇ ಹಾಡಿನ ಕಡೆಯ (ಆರನೆಯ) ನುಡಿ ವಿಶೇಷವಾಗಿ ಗಮನಾರ್ಹ :

ಆರುಚಕ್ರದ ನೆಲೆಯು ಅಷ್ಟಾಂಗಯೋಗದೊಳು
ಮೂರುಮೂರ್ತಿಯ ಮೂರುಕಡೆಗೆ ನಿಲಿಸಿ

---

*ಈಶ್ವರ–ಜೀವ–ಜಗತ್ತುಗಳ ನಡುವಣ ಪಂಚಭೇದಗಳು ದ್ವೈತಸಿದ್ಧಾಂತದ ಮೂಲತತ್ತ್ವ, ಪ್ರತ್ಯಕ್ಷ ಜಗತ್ತು ಮಿಥ್ಯವಲ್ಲ, ಸತ್ಯ ಎನ್ನುವುದು ದ್ವೈತ ಮುಖ್ಯ ಪ್ರಮೇಯ.

ಕಾರುಣ್ಯನಿಧಿ ಕಾಗಿನೆಲೆಯಾದಿ ಕೇಶವನ
ಸೇರಿಭಜಿಸಿದವರಿಗೆ ಯಮನ ಕೊಲೆಯುಂಟೆ ?

ಯೋಗಚಕ್ರದ ಆರು ನೆಲೆ ಅಥವಾ ಚಕ್ರಗಳು : ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧಿ, ಆಜ್ಞಾ, ಇವು ಸುಷುಮ್ನಾ ನಾಡಿಯ ಆರುಚಕ್ರಗಳು. ಈ ಆರಕ್ಕೆ ಮೋಕ್ಷಸ್ಥಾನವಾದ ಸಹಸ್ರಾರ ಚಕ್ರವೂ ಸೇರಿ ಚಕ್ರಸಪ್ತಕ ಎನಿಸುತ್ತದೆ. ಯೋಗಸಾಧನೆಯ ಅಷ್ಟಾಂಗಗಳು : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ. 'ಮೂರು ಕಡೆಗೆ ಮೂರು ಮೂರ್ತಿಯ ನಿಲಿಸಿ' ಎಂದರೆ–ಸ್ವಾಧಿಷ್ಠಾನ ಚಕ್ರದಲ್ಲಿ ಬ್ರಹ್ಮನನ್ನೂ, ಮಣಿಪೂರ ಚಕ್ರದಲ್ಲಿ ವಿಷ್ಣುವನ್ನೂ, ಅನಾಹತ ಚಕ್ರದಲ್ಲಿ ಸದಾಶಿವನನ್ನೂ ಧ್ಯಾನಧಾರಣ ಮೂಲಕ ಅನುಭವಕ್ಕೆ ತಂದುಕೊಳ್ಳುವುದು. ಸಮಾಧಿಸ್ಥಿತಿಯಲ್ಲಿ ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡು ಪರಮಾತ್ಮನಲ್ಲಿ ಐಕ್ಯಹೊಂದುವುದು ಜೀವನ್ಮುಕ್ತಿ, ದೇಹತ್ಯಾಗಾನಂತರ ಪರಮಾತ್ಮನ (ವಿಷ್ಣುವಿನ) ಸನ್ನಿಧಿಯನ್ನು ಸೇರುವುದು ಮೋಕ್ಷ. (ಯಮನ ಕೊಲೆ ಎಂದರೆ, ಜನ್ಮಾಂತರಕ್ಕೆ ಕಾರಣವಾದ ಮೃತ್ಯು.) ಇದೇ ಯೋಗಸಿದ್ಧಿ.

ಮೇಲ್ಕಂಡ ಚರಣದಲ್ಲಿ ಕನಕದಾಸರ ಸ್ವಾನುಭವದ ವಿಚಾರವೇ ವ್ಯಕ್ತವಾಗಿದೆ ಎಂದು ನಮಗೆ ತೋರುತ್ತದೆ. ಯೋಗಸಿದ್ಧಿಯ ಅನುಭವದ ಅಭಿವ್ಯಕ್ತಿ ಈ ಕೆಳಗಿನ ಕೀರ್ತನೆಯಲ್ಲಿ ಹರಳುಗಟ್ಟಿ ಪ್ರಕಾಶಿಸುತ್ತಿದೆ :

ಆರಿಗಳವಲ್ಲಾತ್ಮಯೋಗಸಿದ್ಧಿ
ಸೇರಿ ಸುಜ್ಞಾನದಲಿ ಸವಿದುಂಬಗಲ್ಲದೆ ॥ ಪ ॥
ರಜಸು ತಾಮಸವೆಂಬ ರಯದನೆಲ್ಲವ ಕಳೆದು
ಗಜಬಜಿಸುವ ಪಂಚಭೂತಗಳ
ರಜನಿಗೆ ಸಿಲ್ಕದೆ ಪರಬ್ರಹ್ಮನ ಬಲು
ನಿಜವ ತಿಳಿಯಬಲ್ಲ ನಿರ್ವಾಣಗಲ್ಲದೆ ॥ ೧ ॥
ಭಿನ್ನಭೇದಗಳೆಂಬ ಬಲು ಸಂಶಯ ಕಳೆದು
ತನ್ನೊಳಗೆ ತಾ ತಿಳಿದು ತಾರಕಬ್ರಹ್ಮನ
ಚೆನ್ನಾಗಿ ನೀ ನೋಡು ಚೆಲುವ ಕಂಗಳಿಂದ
ತನ್ನಗ್ನಿಯೊಳಗಿರುವ ಪ್ರೌಢರಿಗಲ್ಲದೆ ॥ ೨ ॥
ಅಕಾರ ಉಕಾರ ಮಕಾರ ಎಂತೆಂಬ
ಓಂಕಾರಕೆ ಕೂಡಿ ಎರಡಿಲ್ಲದೆ

ಸಾಕಾರ ಕಾಗಿನೆಲೆಯಾದಿಕೇಶವನ
ಆಕಾರದೊಡನಾಡುವರಿಗಲ್ಲದೆ ॥ ೩ ॥

ಈ ಕೀರ್ತನೆಯಲ್ಲಿ, ಕನಕದಾಸರು ಯೋಗಮಾರ್ಗದಲ್ಲಿ ನಿರ್ಗುಣಬ್ರಹ್ಮ ಸಗುಣಬ್ರಹ್ಮ ಸಾಕ್ಷಾತ್ಕಾರ ಎಂಥವರಿಗಾಗುತ್ತದೆ ಎಂಬುದನ್ನು ವಿವರಿಸಿದ್ದಾರೆ. ಈ ಎರಡೂ ಬಗೆಯ ಯೋಗಸಿದ್ಧಿ ರಾಮಕೃಷ್ಣಪರಮಹಂಸರಿಗೆ ಲಭ್ಯವಾಗಿತ್ತು ಎಂಬುದನ್ನು ಇಲ್ಲಿ ಸ್ಮರಿಸಬಹುದು. ಕನಕದಾಸರು ಅಂತಹ ಸಿದ್ಧಿಯನ್ನು ಪಡೆದಿದ್ದರು ಎಂದು ಈ ಒಂದು ಕೀರ್ತನೆಯ ಆಧಾರದ ಮೇಲೆಯೆ ತೀರ್ಮಾನಿಸುವುದು ಸಾಧ್ಯವಿಲ್ಲ. ಆದರೆ, ಆ ಯೋಗಮಾರ್ಗವನ್ನು ಬಲ್ಲವರಾಗಿದ್ದರು, ಅದರ ಸಾಧನೆಯಲ್ಲಿ ತೊಡಗಿದ್ದರು ಎಂದು ಹೇಳಲು ಅಡ್ಡಿಯಿರದು.

ಯೋಗಸಿದ್ಧಿಯನ್ನು ಪಡೆದವನೇ ಯೋಗಿ, "ತಾನಾರು ದೇಹವಾರು ದಿವ್ಯಜ್ಞಾನದಲಿ ತಿಳಿದಾತ ಪರಮಯೋಗಿ" ಎಂಬ ಪಲ್ಲವಿಯಿಂದ ಮೊದಲಾಗುವ ಕೀರ್ತನೆಯಲ್ಲಿ ಪ್ರತಿಪಾದಿತವಾಗಿರುವ ದೇಹಾತ್ಮವಿವೇಕ ಕನಕದಾಸರ ಅಧ್ಯಾತ್ಮ ಪ್ರವೃತ್ತಿಯನ್ನೆ ಎತ್ತಿಹಿಡಿಯುತ್ತದೆ.

ಅಧ್ಯಾತ್ಮಸಾಧಕನಿಗೆ ಆತ್ಮಶೋಧ ಅಥವಾ ಆತ್ಮಪರೀಕ್ಷೆ ಸಾಧನ ಸೋಪಾನದ ಮೊದಲ ಮೆಟ್ಟಲು. ತನ್ನ ಅರಿವಿಲ್ಲದೆ, ಬುದ್ಧಿಪೂರ್ವಕವಾಗಿಯಲ್ಲದೆ, ತಾನು ಎಸಗಿರಬಹುದಾದ ಪಾಪಕಾರ್ಯಗಳು ಜನ್ಮಾಂತರದ ಕರ್ಮಫಲ ಎಂದು ಸಾಧಕ ನಂಬುತ್ತಾನೆ. "ಹಲವು ಜನ್ಮದ ಪಾಪವೆನಿಪ ಸೊಕ್ಕಾನೆ ಸೊಂಡಿಲು ಸುತ್ತಿ ಬಂದು ಸೀವರಿಸುತಿದೆಕೊ ; ಮಲೆವ ದುಷ್ಕೃತವೆಂಬ ಗಜಕೆ ಕೇಸರಿಯೆಂಬ ಛಲ ಬಿರುದು ತಾಳ್ದ ದೇವರದೇವ ನೀನೆನ್ನ ಕಡಹಾಯಿಸೋ ತಡಿಯ ಸೇರಿಸೊ" ಎಂದು ಆರ್ತರಾಗಿ ಆದಿಕೇಶವನನ್ನು ಕನಕರು ಬೇಡಿಕೊಂಡಿದ್ದಾರೆ.

ವ್ಯಾಸರಾಯರ ಸಂದರ್ಶನ ಆಗುವುದಕ್ಕೂ ಮುನ್ನವೇ ಕನಕರು ವೇದ ಪುರಾಣ ಶಾಸ್ತ್ರಾದಿಗಳನ್ನು ವ್ಯಾಸಂಗಮಾಡಿ ವಿದ್ಯಾಸಂಪನ್ನನಾಗಿರಬೇಕು. ರಾಮಾನುಜ ಮತ ಸ್ವೀಕಾರ ಕಾಲದಲ್ಲಿಯೇ ದಾಸರ ವಿದ್ಯಾವ್ಯಾಸಂಗ ಸಾಗಿರಬೇಕು. ಅವರು ತಮ್ಮ 'ಮೋಹನ ತರಂಗಿಣಿ' ಕಾವ್ಯದಲ್ಲಿ ಕುಮಾರವ್ಯಾಸಾದಿ ಪ್ರಮುಖ ಕವಿಗಳನ್ನು ಸ್ಮರಿಸಿರುವುದರಿಂದಲೂ, "ಬುಧರಾಮ್ನಾಯ ಶಾಸ್ತ್ರವ ತಿಳಿದು । ನಾನಿದ ಪೇಳ್ವೆ ಕೇಳಾಯತಾಕ್ಷಿ" ಎಂದು ಹೇಳಿಕೊಂಡಿರುವುದರಿಂದಲೂ ಆತ ಮೇಲು ಜಾತಿಯ ವರ್ಗದವರಿಗೆ ಮೀಸಲಾಗಿದ್ದ ವೇದಪುರಾಣಾದಿ ಶಾಸ್ತ್ರಗ್ರಂಥಗಳನ್ನೂ ಕನ್ನಡ ಸಂಸ್ಕೃತ ಕವಿ ಕೃತಿಗಳನ್ನೂ, ವ್ಯಾಸಂಗ ಮಾಡಿದ್ದರು

ಎಂದು ತಿಳಿಯಬೇಕು. ಈ ವಿದ್ಯಾಸಂಪನ್ನತೆ ಮೇಲ್ಜಾತಿಯವರ ಅಸೂಯೆಗೂ ಆಡಿಕೆಗೂ ಅವಹೇಳನಕ್ಕೂ ಕಾರಣವಾಗಿರಬೇಕು. ಈ ಸನ್ನಿವೇಶದಲ್ಲಿಯೇ ಅವರು ತಮ್ಮ ಕುಲದ ಬಗ್ಗೆ ಚಿಂತಿಸತೊಡಗಿದ್ದು. ಮೇಲು ವರ್ಗದವರಿಗೆ ಅಂದಿನ ದಿನಗಳಲ್ಲಿ ಕುಲ ಎನ್ನುವುದು ಪ್ರತಿಷ್ಠೆಯ ವಿಷಯವಾಗಿತ್ತು. ಕನಕದಾಸರು ಕುಲಪ್ರಸಕ್ತಿಯನ್ನು ಒಂದು ಸವಾಲಾಗಿ ಸ್ವೀಕರಿಸಿದಂತೆ ಕಾಣುತ್ತದೆ. ಹಾಗಿರದಿದ್ದರೆ, ತಮ್ಮ ಕುರುಬ ಕುಲದ ಬಗ್ಗೆ ಸೊಲ್ಲೆತ್ತುತ್ತಿರಲಿಲ್ಲ. ವ್ಯಕ್ತಿಯ ಉತ್ತಮ ಗುಣಶೀಲ, ಭಗವದ್‌ಭಕ್ತಿ, ವಿದ್ಯೆ, ಇವು ಇರುವಾಗ ಕುಲದ ಪ್ರಶ್ನೆ ಅಪ್ರಸಕ್ತ ಎಂಬುದು ಅವರ ವಿಚಾರಪೂರ್ವಕ ನಂಬುಗೆಯಾಗಿತ್ತು. ಹಾಗಿರದೆ ಹೋಗಿದ್ದರೆ, “ಕುಲ ಕುಲ ಕುಲವೆನ್ನುತಿಹರೂ । ಕುಲವಾವುದು ಸತ್ಯ ಸುಜನರಿಗೆ”, “ಕುಲ ಕುಲ ಕುಲವೆಂದು ಹೋರಾಡದಿರಿ ನಿಮ್ಮ । ಕುಲದ ನೆಲೆಯನೇನಾದರೂ ಬಲ್ಲಿರಾ” ಎಂಬ ಸವಾಲನ್ನು ಹಾಡಿನ ಮೂಲಕ ಪ್ರಕಟವಾಗಿ ಜನದ ಮುಂದೆ ಇಡುತ್ತಿರಲಿಲ್ಲ. “ಸಿರಿಕಾಗಿನೆಲೆಯಾದಿ ಕೇಶವರಾಯನ । ಚರಣ ಕಮಲವನು ಕೀರ್ತಿಸುವನೆ ಕುಲಜ” ಎಂಬ ಆತ್ಮವಿಶ್ವಾಸದ ಹಿನ್ನೆಲೆಯಲ್ಲಿ, ತಮ್ಮ ಹುಟ್ಟಿಗೂ ನಡೆನುಡಿಗಳ ತಪ್ಪುನೆಪ್ಪುಗಳಿಗೂ ಕೇಶವನನ್ನೆ ಹೊಣೆಗಾರನನ್ನಾಗಿ ಮಾಡುತ್ತಾರೆ: “ನನ್ನಿಂದ ನಾನೇ ಜನಿಸಿ ಬಂದೆನೆ ದೇವ? ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ ನಿನ್ನದು ತಪ್ಪೊ ಎನ್ನದು ತಪ್ಪೊ?” ಎಂದು ದೇವರಿಗೇ ಸವಾಲು ಒಡ್ಡುತ್ತಾರೆ, ಕನಕದಾಸರು. “ನಾರಿಮಕ್ಕಳು ತನು–ಮನ ನಿನ್ನವಯ್ಯ” ಎಂದು ತಮ್ಮ ಜೀವಿತ ಸರ್ವಸ್ವದ ಭಾರವನ್ನೂ ತಮ್ಮ ಕುಲದೈವದ ಮೇಲೆ ಹಾಕಿಯೂ, “ಹೇರನೊಪ್ಪಿಸಿದ ಮೇಲೆ ಸುಂಕವೇತಕೆ?” ಎಂಬ ನ್ಯಾಯವಾದ ಪ್ರಶ್ನೆಯನ್ನು ಹಾಕಿಯೂ, ಕೈಕೊಡವಿಕೊಂಡು ನೆಮ್ಮದಿಯಾಗಿರುವುದಿಲ್ಲ. ಪ್ರಯತ್ನ ಪೂರ್ವಕವಾಗಿ ತಮ್ಮ ಬಹಿರಂಗ ಅಂತರಂಗ ಶೋಧನೆಗೆ ತೊಡಗಿ, ತಮ್ಮ ಬದುಕನ್ನು ಅಧ್ಯಾತ್ಮ ಸಾಧನೆಗೆ ಯೋಗ್ಯವನ್ನಾಗಿ ಮಾಡಿಕೊಳ್ಳುವ ಚಿಂತನೆ ನಡಸುತ್ತಾರೆ ; ಈ ಪ್ರಯತ್ನದಲ್ಲಿ ಪರಮಾತ್ಮನ ನೆರವನ್ನು ಬೇಡುತ್ತಾರೆ. ಪರಮಾತ್ಮ ಧೈರ್ಯಸ್ಥೈರ್ಯಗಳನ್ನು ನೀಡಬಹುದು, ಮನಶ್ಶಾಂತಿಯನ್ನು ಕೊಡಬಹುದು ; ತನ್ನ ದರ್ಶನವನ್ನೂ ನೀಡಿಯಾನು. ದಿನದಿನದ ಹೊಟ್ಟೆಬಟ್ಟೆಗೂ ವ್ಯವಸ್ಥೆ ಮಾಡುತ್ತಾನೆಯೆ? ಪರಮಾತ್ಮನಿಗೆ ಇದು ಚಿಲ್ಲರೆ ವಿಷಯ. ಎಂಥ ಸಾಧುಸಂತನಾದರೂ ಉದರಭರಣಕ್ಕೆ ಯಾಯಿವಾರಕ್ಕೆ ಹೋಗಬೇಕು. ಕನಕದಾಸರು ದಾಸನಾದ ಮೇಲೆ ಯಾಯಿವಾರಕ್ಕೆ ಹೋದಾಗಲೂ ಬಹುಶಃ ಸರಿಯಾಗಿ ಭಿಕ್ಷೆ ಹುಟ್ಟುತ್ತಿರಲಿಲ್ಲ ಎಂದು ಕಾಣುತ್ತದೆ. ಅವರು ಮಡದಿ ಮಕ್ಕಳನ್ನು

ತೊರೆದವರಲ್ಲ; ಅವರ ಪೋಷಣೆಯೂ ನಡೆಯಬೇಕು. ಮನಸ್ಸು ತಲ್ಲಣಗೊಂಡಿದೆ. ಇಂಥ ಮನಸ್ಥಿತಿಯಲ್ಲಿ ಅವರು–"ತಲ್ಲಣಿಸದಿರು ಕಂಡ್ಯ ತಾಳು ಮನವೆ, ಸ್ವಾಮಿ ನಿಲ್ಲದೆಲೆ ರಕ್ಷಿಸುವ ಸಂದೇಹ ಬೇಡ ; ಹುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ ಕೊಟ್ಟು ರಕ್ಷಿಸುವನು. ಇದಕೆ ಸಂದೇಹ ಬೇಡ" ಎಂದು ಅಶನ ಚಿಂತೆಯನ್ನು ಬಿಡುತ್ತಾರೆ.

ಹೊಟ್ಟೆಬಟ್ಟೆಯ ಚಿಂತೆಯನ್ನು ಬಿಟ್ಟು ಅದರ ಹೊಣೆಯನ್ನು ಕೇಶವನ ಮೇಲೆ ಹಾಕುವುದು ಕನಕರಿಗೆ ಸುಲಭವಾಯಿತು. ಆದರೆ, ಇಂದ್ರಿಯ ಚಾಪಲ್ಯವನ್ನು ತಡೆಯುವುದು ಅವರಿಗೆ ಕಡುಕಷ್ಟವೆನಿಸಿರಬೇಕು. "ಬೆಳ್ಳಿ ಬಂಗಾರದಲಿ ಮೆರೆವ ಧೂರ್ತೆಯರ ನೋಡುವ ಚಕ್ಷುರಿಂದ್ರಿಯಕೆ", "ಸಿಂಧುರಗಮನೆಯರ ಸಿರಿಮುಡಿಯೊಳಿಪ್ಪ ಪೂಗಂಧವಾಸಿಸುವ ನಾಸಿಕದಿಂದ್ರಿಯಕೆ", "ಏಣಾಕ್ಷಿಯರ ಚೆಂದುಟಿಯ ಸುಧೆಯ ಸವಿದು ಜಾಣತನದಲಿ ನಲಿದ ಜಿಹ್ವೇಂದ್ರಿಯಕೆ", "ರಮಣಿಯರ ರಂಜಕದ ನುಡಿಯನು ಕೇಳಿ ಪ್ರಣಮ (=ಪ್ರಣವ, ಓಂಕಾರ)ವೆಂದು ತೋಷಿಸುವ ಕರ್ಣೇಂದ್ರಿಯಕೆ" ಬಯಲಾಸೆ ಬಿಡದು ಎಂದು ಕನಕದಾಸರು ಇಂದ್ರಿಯನಿಗ್ರಹಕ್ಕಾಗಿ ಪಾಡು ಪಟ್ಟು, ಕಡೆಗೆ ನೀನೇ ಗತಿಯೆಂದು ಕೇಶವನ ಮರೆಹೊಗುತ್ತಾರೆ :

> "ತ್ವಕ್ಕು ಮೊದಲಾದ ಪಂಚೇಂದ್ರಿಯ
> ದೊಳು ಸಿಲುಕಿ । ಕಕ್ಕುಲಿತೆಗೊಂಬುದಿದ ನೀನು ಬಿಡಿ
> ಸೈಯ । ಸಿಕ್ಕುಮಾಡದೆ ಕಾಗಿನೆಲೆಯಾದಿಕೇಶವನೆ ।
> ದಿಕ್ಕಾಗಿ ಎನ್ನ ನಿನ್ನಂಘ್ರಿಯೊಳಿರಿಸೊ ॥"

ಪಂಚೇಂದ್ರಿಯಗಳ ಬಯಲಾಸೆಗೆ ದುರ್ಜನರ ಸಹವಾಸ ಎಂದೂ ಒತ್ತಾಸೆಕೊಡುವಂಥದು. ಆದ್ದರಿಂದ, "ಸಜ್ಜನರಸಂಗದೊಳಗಿರಿಸೆನ್ನ ರಂಗ" ಎಂದು ಕೇಶವನನ್ನು ಬೇಡಿಕೊಳ್ಳುತ್ತಾರೆ.

ಜೀವನದ ನಶ್ವರತೆ, ಹೆಣ್ಣುಮಣ್ಣುಹೊನ್ನಿಗೆ ಆಸೆಪಡದಿರುವ ಸಮಚಿತ್ತದ ಅಗತ್ಯ, ಬದುಕಿನ ಪಯಣವನ್ನು ಮುಗಿಸಿ ಕಟ್ಟಕಡೆಯ ತಾಣವಾದ ಮುಕ್ತಿ ಸ್ಥಾನವನ್ನು ತಲಪಲು ಭಗವತ್ ಕೃಪೆಯ ಅಗತ್ಯ, ಭಗವದ್ ಭಕ್ತಿಯ ಮೂಲಕ, ಅಧ್ಯಾತ್ಮ ಸಾಧನೆಗೆ ಅಗತ್ಯವಾದ ವೈರಾಗ್ಯ–ಈ ಸಾಧನ ಪಥವನ್ನು ಇತರರಿಗೆ ಬೋಧಿಸ ಹೊರಟ ಕನಕದಾಸರು ಹೇಳಿದಂತೆ ನಡೆದು ನುಡಿದಿದ್ದಾರೆ ಎಂದೇ ನಾವು ತಿಳಿಯಬೇಕು.

ಶಿವಶರಣರಲ್ಲಿ ಕಾಣುವ ಸತಿ–ಪತಿ ಭಾವದ ಪರಮಾತ್ಮ ಸಮಾಗಮದ

ಹೆಬ್ಬಯಕೆಯನ್ನು–ಅರ್ಹತೆಯನ್ನು ಕನಕದಾಸರಲ್ಲೂ ನಾವು ಕಾಣುತ್ತೇವೆ. ‘ಇಂದು ನೀ ಕರೆದು ತಾರೆ–ಬಾರದೆ ಶ್ರೀಗೋವಿಂದ ತಾ ಮುನಿದು ಇರೆ–ವಿರಹದಲಿ ನಾ ನೊಂದು ಸೈರಿಸಲಾರೆ–ತಂದು ನೀ ತೋರೆ” ; “ಕರೆತಂದೆ ಕಾಮಿನಿ ಕಮಲಜಪಿತನ”–ಎಂದು ಹಲವಾರು ಕೀರ್ತನೆಗಳಲ್ಲಿ ಕನಕದಾಸರು ಭಕ್ತಿಯ ಉತ್ಕಟತೆಯಲ್ಲಿ ತಾವು ಪತಿಯನ್ನಗಲಿದ ವಿರಹಿಣಿಯಾಗಿ ಪತಿಸಮಾಗಮಕ್ಕೆ ಹಂಬಲಿಸುತ್ತಾರೆ.

ಕನಕದಾಸರ ಅಧ್ಯಾತ್ಮಸಾಧನೆಯ ತುತ್ತ ತುದಿಯಿದು.

# ಮಾನವ ಮತವಾದಿ ಕನಕದಾಸರು

**ದೇ ಜ ಗೌ**

[ಕನಕದಾಸ ಸಾಹಿತ್ಯ ಸಮಗ್ರ ಸಂಪುಟಗಳನ್ನು ಹಾಗೂ ಪ್ರಶಸ್ತಿ ಗ್ರಂಥವನ್ನು ಸಿದ್ಧಗೊಳಿಸುವ ಸಲುವಾಗಿ ಕರ್ಣಾಟಕ ಸರ್ಕಾರ ಸಂಪಾದಕ ಸಮಿತಿಯನ್ನು ನೇಮಿಸಿರುವುದುಂಟಷ್ಟೆ. ಕನಕದಾಸರ ಜೀವನವಿಚಾರವಾಗಿ ಕೆಲವು ವಾದ ವಿವಾದಗಳೆದ್ದಿರುವುದು ಸರ್ವವೇದ್ಯ. ಕ್ಷೇತ್ರಕಾರ್ಯದ ಮೂಲಕ ಸಂದೇಹ ನಿವಾರಣೆ ಸಾಧ್ಯವಾಗಬಹುದೆಂದು ಸಮಿತಿ ಇಚ್ಛೈಸಿತು. ಈ ಇಚ್ಛೆಯನ್ನು ಈಡೇರಿಸಿಕೊಳ್ಳುವಲ್ಲಿ ಉದಾರ ಹೃದಯರೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರೂ ಆದ ಶ್ರೀ ಐ. ಎಂ. ವಿಠಲಮೂರ್ತಿ ನೆರವು ನೀಡಿದರು. ಅಷ್ಟೇ ಅಲ್ಲ. ತಮ್ಮ ಪರವಾಗಿ ಸಹಾಯಕ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣನವರನ್ನು ಸಮಿತಿಯೊಡನೆ ಕಳಿಸಿಕೊಟ್ಟರು. ಸಮಿತಿ ೫–೧೨–೮೯ ರಇಂದ ೮–೧೨–೮೯ ರವರೆಗೆ ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ, ಅವರೊಡನೆ ಚರ್ಚೆ ನಡೆಸಿತು. ತರುಣರೂ ಜಾಣರೂ ಆದ ಶ್ರೀ ಕಾ. ತ. ಚಿಕ್ಕಣ್ಣನವರು ಉದ್ದಕ್ಕೂ ಸಮಿತಿ ನಡೆಸಿದ ಚರ್ಚೆಯನ್ನು ಟಿಪ್ಪಣಿ ಮಾಡಿಕೊಂಡರು. ಈ ಲೇಖನಕ್ಕೆ ಆ ಚರ್ಚೆ ಟಿಪ್ಪಣಿಗಳು ಆಧಾರವಾಗಿವೆ. ಹಂಸಭಾವಿಯ ಮೃತ್ಯುಂಜಯ ಪೀಠದ ಪ್ರಾಧ್ಯಾಪಕರೂ, ಸಾಹಿತಿಗಳೂ ಆದ ಪ್ರೊ. ಭೋಜರಾಜ ಪಾಟೀಲರು ನಾನಾ ರೀತಿಯಲ್ಲಿ ಸಮಿತಿಗೆ ಅಮೂಲ್ಯ ನೆರವು ನೀಡಿದರು. ಈ ಎಲ್ಲರನ್ನು, ಸಮಿತಿಯ ಸದಸ್ಯರನ್ನು, ಮುಖ್ಯವಾಗಿ ಪ್ರೊ. ಎಚ್. ಜೆ. ಲಕ್ಕಪ್ಪಗೌಡರನ್ನು ನಾನು ಹೃತ್ಪೂರ್ವಕವಾಗಿ ವಂದಿಸುತ್ತೇನೆ.]

೧

ಐಹಿಕ ಜೀವನದಿಂದ ವಿಮುಖರಾದನಂತರ ಕನಕದಾಸರು ಕಾಗಿನೆಲೆ ವಿನಾ ಬೇರೆಲ್ಲಿಯೂ ಹೆಚ್ಚು ದಿನಗಳು ತಂಗಿದಂತಿಲ್ಲ. ಅನುಭಾವಿಗಳೂ, ವಿರಕ್ತರೂ, ಸಂತರೂ ಆದ ಅವರು ಪುರಂದರದಾಸರಂತೆ ಪರಿವ್ರಾಜಕರಾಗಿ, ತಾಳ ತಂಬೂರಿ ಹಿಡಿದುಕೊಂಡು ದಿವ್ಯಕ್ಷೇತ್ರಗಳನ್ನು ದರ್ಶಿಸುತ್ತ, ಕೀರ್ತನೆಗಳನ್ನು ಹಾಡುತ್ತ, ಹತ್ತಿರ ಬಂದವರಿಗೆ ಉಪದೇಶ ನೀಡುತ್ತ, ಕೊನೆಗೆ ಕಾಗಿನೆಲೆಯಲ್ಲಿ ಅಸುನೀಗಿದರೆಂದು ತೋರುತ್ತದೆ. ಕನಕದಾಸರಂಥ ವಿರಕ್ತರಿಗೆ ಜಗತ್ತೇ ಮನೆ, ಎಲ್ಲ ಊರು ತಮ್ಮೂರೇ ; ಚರಾಚರ ವಸ್ತುಗಳಲ್ಲಿ, ಸರ್ವತ್ರ ಆದಿಕೇಶವನನ್ನು

ಕಾಣುವ ಅವರಿಗೆ ಎಲ್ಲ ನೆಲವು ಒಂದೇ. ಭೌಗೋಳಿಕ ಇತಿಮಿತಿ, ಗಡಿಸೀಮೆಗಳು ಅವರಿಗೆ ಸಲ್ಲವು. ಜ್ಞಾನದ ಬಾಗಿಲು ತೆರೆಯುತ್ತ, ಸಾಹಿತ್ಯರಚನೆ ಮಾಡುತ್ತ ಕುಲವೊಂದೆ ಎಂದು ಮಾನವ ಮತವೊಂದೆ ಎಂದು ಸಕಲರಿಗೆ ಸಾರುತ್ತ, ಭಕ್ತಿಯ ಬೆಳಕನ್ನು ಹರವುತ್ತ ಅನುಭಾವದ ಸುಗ್ಗಿಯನ್ನು ಹಂಚುತ್ತ ಕನ್ನಡನಾಡಿನ ಹೊರಗೊಳಗೆ ಸುತ್ತುತ್ತಾರೆ ; ಅನೇಕ ಕ್ಷೇತ್ರಗಳಲ್ಲಿ ಪರ್ಯಟನ ಮಾಡಿದ್ದುಂಟು. ಆದರೆ ಅವರು ತಮ್ಮ ಅಪರವಯಸ್ಸಿನಲ್ಲಿ ನಿಂತ ನೆಲೆ ಕಾಗಿನೆಲೆಯೆಂಬುದಂತು ಸುಸ್ಪಷ್ಟ.

ಕಾಗಿನೆಲೆ (ಅಥವಾ ಕಾಗೆನೆಲೆ) ಇತಿಹಾಸ ಪ್ರಸಿದ್ಧವಾದ ಸ್ಥಳ. ಒಂದಾನೊಂದು ಕಾಲದಲ್ಲಿ ಅದು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿದ್ದಂತೆ ತೋರುತ್ತದೆ. ಅಲ್ಲಿ ಅನೇಕ ಯುದ್ಧಗಳು ನಡೆದಿದ್ದುವೆಂಬುದಕ್ಕೆ ಅಲ್ಲಿಯ ಆರೇಳು ವೀರಗಲ್ಲುಗಳು ಸಾಕ್ಷಿಯಾಗಿವೆ. ಕಾಳಹಸ್ತೇಶ್ವರ, ಸೋಮೇಶ್ವರ, ವೀರಭದ್ರ, ಕಲ್ಲೇಶ್ವರ ಮೊದಲಾದ ಶೈವಪರ ದೇವಾಲಯಗಳು ಆ ಊರಿನ ಪ್ರಾಚೀನ ಧಾರ್ಮಿಕ ವೈಭವಕ್ಕೆ ನಿದರ್ಶನಗಳಾಗಿವೆ. ಹನ್ನೊಂದನೆಯ ಶತಮಾನಕ್ಕೆ ಹಿಂದಿನಿಂದ ಅನೇಕ ರಾಜರು ಪಾಳೆಗಾರರು, ಮಹಾಮಾಂಡಲಿಕರು ಮತ್ತು ದಣಾಯಕರು ಆ ಊರಿನ ಸಿರಿಗೆ ಬೆರಗಾಗಿದ್ದಂತೆ ತೋರುತ್ತದೆ. ಅದು ಹನ್ನೆರಡು ಹಳ್ಳಿಗಳ ಸಮೂಹಕ್ಕೆ ಕೇಂದ್ರವೂ ಶಿಖರಪ್ರಾಯವೂ ಆಗಿದ್ದುದರಿಂದ ಕಾಗಿನೆಲೆ ಹನ್ನೆರಡು ಎಂದು ಶಾಸನಗಳಲ್ಲಿ (South Indian Inscriptions, No 117, 1121) ಉಲ್ಲೇಖಗೊಂಡಿದೆ. ಅದು ಎಂಥ ಶ್ರೀಮಂಥ ನಗರವಾಗಿತ್ತೆಂಬುದು ಆ ಶಾಸನದಲ್ಲಿ ಬರುವ ವರ್ಣನೆಯಿಂದ ವೇದ್ಯವಾಗುತ್ತದೆ. ಅದರ ಶ್ರೀಮಂತಿಕೆಯನ್ನೆತ್ತಿ ತೋರುವ ವೃತ್ತವೊಂದನ್ನು ಇಲ್ಲಿ ಉದ್ಧರಿಸಲಾಗಿದೆ:

ತರುಣ ಕುರಂಗಲೋಚನೆಯರಿರ್ಕ್ಕೆಯಿನೊಪ್ಪುವ ಸೂಳೆಗೇರಿ ಸ
ತ್ಪುರುಷರೆನಿಪ್ಪ ಹೆಮ್ಮೆಯ ವಣಿಗ್ಜನದಂಗಡಿಯೆಂತು ನೋರ್ಪಡಂ
ಸುರಗಿರಿಯಂ ಪಳಂಚಲೆವ ದೇವಗ್ರಿಹಂ ಜಿನಗೇಹ ಸಂಕುಳಂ
ಸಿರಿಗೆಡೆಯಾಗೆ ಕಾಗಿನೆಲೆ ರಂಜಿಸುಗುಂ ಭುವನಾಂತರಾಳದೊಳ್ ॥

ಇಂಥ ಉತ್ಕೃಷ್ಟ ನಗರ ತಮ್ಮ ಜೀವಿತದ ಕೊನೆಗಾಲದಲ್ಲಿ ಅವರ ನೆಲೆಯಾದದ್ದರಲ್ಲಿ ಆಶ್ಚರ್ಯವಿಲ್ಲ. ಈಚೆಗೆ ಅಲ್ಲಿಯ ದೇವಾಲಯಗಳು ಶಿಥಿಲವಾಗಿದ್ದರೂ, ಊರು ಹಿಂದಿನಷ್ಟು ಶ್ರೀಮಂತವಲ್ಲದಿದ್ದರೂ, ಅಲ್ಲಿರುವ ಹೆಗ್ಗೆರೆ, ಏರಿಯ ಹಿಂದಿರುವ ತೋಟ ತುಡಿಕೆಗಳು, ಮತ್ತು ಫಲವತ್ತಾದ

ಭೂಮಿಗಳು ಗತವೈಭವವನ್ನು ಇಂದಿಗೂ ನೆನಪಿಗೆ ತಂದುಕೊಡುತ್ತವೆಂದು ಹೇಳಬಹುದು.

ಕೂಡಿದ ಎಲ್ಲೆಗಳುಳ್ಳ, ತ್ರಿಕೋನಾಕೃತಿಯ ಮೂಲೆಗಳಲ್ಲಿರುವ ಕಾಗಿನೆಲೆ, ಕುಮ್ಮೂರು ಮತ್ತು ಇಂಗಳಗೊಂದಿಗಳಲ್ಲಿ ಇಂದಿಗೂ ಕನಕದಾಸರ ಪ್ರಭಾವ ಸಾಂದ್ರವಾಗಿದೆ ಹಾಗೂ ಜೀವಂತವಾಗಿದೆಯೆಂಬುದರಲ್ಲಿ ಸಂಶಯವಿಲ್ಲ. ಅವರು ಚಿನ್ಮಯ ಶರೀರಿಯಾಗಿ ಅಲ್ಲಿಯೇ ನೆಲಸಿರಬೇಕೆಂಬ ಭಾವನೆ ಅಲ್ಲಿಯ ಜನರೊಂದಿಗೆ ಚರ್ಚಿಸುವಾಗ ಮನವರಿಕೆಯಾಗುತ್ತದೆ. ಹಂಸಭಾವಿಯಿಂದ ಹತ್ತು ಕಿ. ಮೀ. ದೂರದಲ್ಲಿರುವ ಕುಮ್ಮೂರು ಚಿಕ್ಕಹಳ್ಳಿ. ಅಲ್ಲಿ ವಾಸಿಸುವ ಜನ ಪ್ರಧಾನವಾಗಿ ಲಿಂಗಾಯತರು ಮತ್ತು ವಾಲ್ಮೀಕಿಗಳು. ಕುರುಬರ ಸಂಖ್ಯೆ ಕಡಮೆ. ಊರಿಗೆ ಪಶ್ಚಿಮದಲ್ಲಿ ಊರೊಳಗೆ ಚಾಚಿಕೊಂಡಂತಿರುವ ಗುಡ್ಡದ ಮೇಲೆ ತಿಮ್ಮಕೇಶವ ದೇವಾಲಯವಿದೆ. ಕನಕದಾಸರಿಗೆ ಬಹುಪ್ರಿಯವಾದ ಆರಾಧ್ಯದೇವತೆಗಳೆಂದರೆ ಬಾಡದ ಆದಿಕೇಶವ, ತಿರುಪತಿ ತಿಮ್ಮಪ್ಪ ಮತ್ತು ಬೇಲೂರಿನ ಚೆನ್ನಕೇಶವ. ಆ ಮೂವರು ದೇವತೆಗಳನ್ನು ಕ್ರಮವಾಗಿ ಕಾಗಿನೆಲೆ, ಕುಮ್ಮೂರು ಮತ್ತು ಇಂಗಳಗೊಂದಿಗಳಲ್ಲಿ ಪ್ರತಿಷ್ಠಾಪಿಸಿ, ಮುಪ್ಪಿನ ಕಾಲದಲ್ಲಿ ಪರ್ಯಟನೆ ನಿಂತುಹೋದನಂತರ, ಈ ಮೂರು ದೇವತೆಗಳಿಗೆ ಕೊನೆಯ ತನಕ ಕೈಂಕರ್ಯ ಸಲ್ಲಿಸುತ್ತ, ಅನುಭಾವಿಗಳಾಗಿ ಮೆರೆಯುತ್ತಾರೆ.

ತಿಮ್ಮಕೇಶವ ವಿಗ್ರಹವೆನ್ನುವುದಕ್ಕಿಂತ, ಒಂದು ಕಲ್ಲೆಂದೇ ಹೇಳಬಹುದು ಗುಡ್ಡದ ಮೇಲೆ ನಿಂತು ಸುತ್ತಲೂ ಕಣ್ಣು ಹೊರಳಿಸಿದಾಗ ಉತ್ತರಕ್ಕೆ ಕಾಗಿನೆಲೆಯೂ ಈಶಾನ್ಯಕ್ಕೆ ಇಂಗಳಗೊಂದಿಯೂ, ಪಶ್ಚಿಮಕ್ಕೆ ದಾಸನಕೊಪ್ಪವೂ ಕಾಣಿಸುತ್ತವೆ. ಅನತಿ ದೂರದ ದಾಸನಕೊಪ್ಪದಲ್ಲಿದ್ದುಕೊಂಡೇ ಕನಕದಾಸರು ದಾಸನತೋಟಕ್ಕೆ (ಅದು ಗುಡ್ಡಕ್ಕೆ ಉತ್ತರದಲ್ಲಿ, ಸಣ್ಣಕೆರೆಯ ಹಿಂದಿದೆ. ಅದೀಗ ಯಾರಿಗೋ ಸೇರಿದೆ. ಪ್ರಾಯಶಃ ಆ ಕಾಲಕ್ಕೆ ದಾಸರೇ ಅಲ್ಲಿ ಹೂವಿನ ತೋಟವನ್ನು ಬೆಳೆಸಿರಬೇಕೆಂದು ತೋರುತ್ತದೆ.) ಹೋಗಿ, ಹೂವು ತಿರಿದು ತಂದು, ತಿಮ್ಮಕೇಶವನನ್ನು ಪೂಜಿಸುತ್ತಿದ್ದರೆಂದು ತೋರುತ್ತದೆ. ಗುಡ್ಡದ ದಕ್ಷಿಣಕ್ಕೆ ಕತ್ತನಾಯಕನ ಕಾಲುವೆ ಇದೆ. ಇದನ್ನು ಕನಕದಾಸರೇ ನಿರ್ಮಿಸಿದ್ದರೆಂಬ ನಂಬಿಕೆಯಿದೆ. (ಈಚೆಗೆ ಅದಕ್ಕೆ ಬೇರೊಬ್ಬ ಪಾಳೆಯಗಾರನ ಹೆಸರು ಕೊಟ್ಟಿರಬೇಕೆಂದು ತೋರುತ್ತದೆ.) ಕಾಗಿನೆಲೆಯ ಆದಿಕೇಶವ ಹಿರಿಯವನೆಂದು, ಕುಮ್ಮೂರಿನ ತಿಮ್ಮಕೇಶವ ಮಧ್ಯದವನೆಂದು, ಇಂಗಳಗೊಂದಿಯ ಚೆನ್ನಕೇಶವ ಕಿರಿಯವನೆಂದು ಜನ ಹೇಳುತ್ತಾರೆ. ಅವುಗಳನ್ನು ಸ್ಥಾಪಿಸಿದ ಕಾಲಾನುಕ್ರಮವನ್ನು

ಈ ಹೇಳಿಕೆ ಸೂಚಿಸುತ್ತದೆಂದು ಅರಿಯಬಹುದಾಗಿದೆ.

ಕನಕದಾಸರ ನಂತರ, ಅವರ ಬಳಿ ಸೇವೆ ಮಾಡಿಕೊಂಡಿದ್ದ ಭಕ್ತರೋ ಶಿಷ್ಯರೋ ತಿಮ್ಮಕೇಶವನನ್ನು ಪೂಜಿಸಿಕೊಂಡಿದ್ದಿರಬೇಕೆಂದು ತೋರುತ್ತದೆ. ಅವರು ವಿರಕ್ತರಾದ್ದರಿಂದ ಯಾವ ಕುಲಗೋತ್ರಗಳಿಗೂ ಅವರು ಅಂಟಿಕೊಂಡಿರಲಿಲ್ಲ; ಪೂಜೆಯ ಹಕ್ಕು ವಂಶಪಾರಂಪರ್ಯವಾಗಿ ನಡೆಯಬೇಕೆಂದು ಕನಸುಮನಸಿನಲ್ಲಿ ಎಣಿಸಿರಲಿಲ್ಲ; ಮೇಲಾಗಿ ಅವರೊಂದಿಗೆ ಅವರ ವಂಶದ ಸಂತತಿ ನಿಂತುಹೋಗಿತ್ತು; ಬಾಡವನ್ನು ಬಿಟ್ಟಾಗ ಅವರ ಜ್ಞಾತಿಗಳಾರೂ ಅವರನ್ನು ಹಿಂಬಾಲಿಸಿರಲಿಲ್ಲ. ಹೀಗಿರುವಾಗ ಆ ದೇವರ ಪೂಜಾರಿಗಳಾಗಿದ್ದರೆಂದು ಹೇಳಲು ಸಾಧ್ಯವಿಲ್ಲ. ಆ ಪೂಜಾರಿತನ ಅನೇಕ ಕೈಗಳಿಗೆ ತಟಾಯಿಸಿರಬೇಕೆಂದು ತೋರುತ್ತದೆ. ಸುಮಾರು ನೂರೈವತ್ತು ವರ್ಷಗಳಿಂದ ತಮ್ಮ ಮನೆತನದವರು ಆ ದೇವರ ಪೂಜಾರಿಗಳಾಗಿರುವುದಾಗಿ ಈಗಿನ ಪೂಜಾರಿ ಶಾಂತಪ್ಪನ ಮಗ ಶಂಕರಪ್ಪ ಹೇಳುತ್ತಾರೆ. ತಿಮ್ಮಕೇಶವನನ್ನು ಪೂಜೆಮಾಡುವ ಒಕ್ಕಲನ್ನು ದಾಸ ಮನೆತನದವರೆಂದು ಕರೆಯುತ್ತಾರೆ. ಅವರು ವಾಲ್ಮೀಕಿ ಕುಲದವರು. ಅವರ ಮನೆಯ ಮುಂದೆ ಭರಮಪ್ಪ ಹೆಸರಿನ ಚಿಕ್ಕ ಗುಡಿಯಿದೆ. ಅವರ ಮನೆಯಲ್ಲಿ ಕನಕದಾಸರ ಪೂಜೆಯೂ ನಡೆಯುತ್ತಿದೆ. ಕನಕದಾಸರೇ ಬಳಸುತ್ತಿದ್ದರೆನ್ನುವ ಶಂಖವನ್ನು ಸಹ ಅವರು ತೋರಿಸುತ್ತಾರೆ. ಆದರೆ ತಾವು ಕನಕದಾಸರ ಜಾತಿಯವರೆಂದು ಅವರು ಹೇಳುವುದಿಲ್ಲ.

ಲಿಂಗವಂತ ಸಮಾಜದ ಮರಿವೀರಪ್ಪನ ಮಗ ೬೭ ವರ್ಷದ ಕಾಳಪ್ಪನವರು, ಮೇಲ್ಕಂಡ ಮೂರು ದೇವತೆಗಳಿಗಿರುವ ಸಂಬಂಧವನ್ನೂ, ಅವುಗಳ ಹೆಸರಿನಲ್ಲಿ ನಡೆಯುವ ಜಾತ್ರೆಯ ವಿವರಗಳನ್ನೂ ನಿರರ್ಗಳಾಗಿ ನೀಡುತ್ತಾರೆ. ಅವರ ಸುತ್ತಲೂ ನಿಂತಿದ್ದ ಹತ್ತಾರು ಮಂದಿ ಊರಿನ ಜನ, ನಡು ನಡುವೆ ತಿದ್ದಿದರೂ, ಒಟ್ಟಿನಲ್ಲಿ ಅವರ ವಿವರಣೆಯನ್ನೊಪ್ಪಿಕೊಳ್ಳುತ್ತಾರೆ. ಮಾನೋಮಿಯ ದಿನ ಆದಿಕೇಶವ, ತಿಮ್ಮಕೇಶವ ಮತ್ತು ಚೆನ್ನಕೇಶವ ದೇವರನ್ನು ಒಟ್ಟುಗೂಡಿಸಿ ಉತ್ಸವ ಜರುಗುತ್ತದೆ. ಈ ಪೂಜೆಗೆ ಸಾವಕ್ಕಿ ಅನ್ನ, ಕುಂಬಳಕಾಯಿ ಗೊಜ್ಜು ಮತ್ತು ರಾಗಿ ಅಂಬಲಿಗಳನ್ನು ದೇವರಿಗೆ ನೈವೇದ್ಯ ಮಾಡುತ್ತಾರೆ. ಅನಂತರ ಆದಿಕೇಶವ ತಿಮ್ಮಕೇಶವನ ಬಳಿಗೆ ಬರುತ್ತಾನೆ. ಇಲ್ಲಿ ಈ ಎರಡು ದೇವರುಗಳ ಜತೆಗೆ ವೀರಭದ್ರನೂ ಸೇರಿಕೊಂಡು ವೈಭವದಿಂದ ಉತ್ಸವ ನಡೆಯುತ್ತದೆ. ಆದಿಕೇಶವ ತಿಮ್ಮಕೇಶವ ಇಬ್ಬರೂ ಇಂಗಳಗೊಂದಿಯ ಚೆನ್ನಕೇಶವ ದೇವಾಲಯಕ್ಕೆ (ಇದೂ ಒಂದು ದಿಣ್ಣೆಯ ಮೇಲಿದೆ) ಬರುತ್ತಾರೆ. ಅಲ್ಲಿ ಉತ್ಸವ

ಮುಗಿಸಿಕೊಂಡು, ಬನ್ನಿಹಳ್ಳಿ ಗ್ರಾಮಕ್ಕೆ ಹೋಗಿ, ಬನ್ನಿ ಮುಡಿದುಕೊಂಡು ಕಾಗಿನೆಲೆಗೆ ಬಿಜಯಗೈಯುತ್ತಾರೆ, ಮೂವರೂ. ಉತ್ಸವದಲ್ಲಿ ಕನಕದಾಸನ ಪ್ರತಿಮೆ ಮುಂಚೂಣಿಯಲ್ಲಿರುತ್ತದೆ.

ಕುಮ್ಮೂರಿನಿಂದ ಇಂಗಳಗೊಂದಿ ನಾಲ್ಕು ಕಿ. ಮೀ. ದೂರದಲ್ಲಿದೆ. ಇಲ್ಲಿಯ ಚೆನ್ನಕೇಶವ ವಿಗ್ರಹ ಚಿಕ್ಕದಾದರೂ ಸುಂದರಮೂರ್ತಿ. ಗರ್ಭಗುಡಿಯ ಭಾಗ ಹಳೆಯದು. ಮುಂಭಾಗ ಹೊಸದು. ಇದನ್ನು ಪ್ರತಿಷ್ಠಾಪಿಸಿದವರು ಸಹ ಕನಕದಾಸರೇ. ಅರವತ್ತು ವರ್ಷಗಳಿಂದ ಚೆನ್ನಕೇಶವನನ್ನು ಮಲ್ಲಪ್ಪನ ಮಗ ಮಲ್ಲಪ್ಪ ರುದ್ರಪ್ಪ ಪೂಜಾರಿ ಪೂಜಿಸುತ್ತಿದ್ದಾರೆ. ಇವರು ಲಿಂಗವಂತರು. ಇವರ ಪ್ರಕಾರ ಕನಕದಾಸ ಕುರುಬರು. ಈ ಊರಲ್ಲಿ ಲಿಂಗವಂತರೇ ಅಧಿಕ ; ಕುರುಬರಾಗಲಿ ವಾಲ್ಮೀಕಿ ಜನಾಂಗವಾಗಲಿ ಇಲ್ಲ.

ಇಂಗಳಗೊಂದಿಗೂ ಕಾಗಿನೆಲೆಗೂ ಕೇವಲ ಒಂದು ಕಿಲೊಮೀಟರ್ ಅಂತರ. ಈಗ ಇಲ್ಲಿ ಮುಸ್ಲಿಮರ ಸಂಖ್ಯೆಯೇ ಅಧಿಕ. ಅವರ ತರುವಾಯ ಲಿಂಗಾಯತರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ತಳವಾರರು ಮತ್ತು ಈಡಿಗರೂ ಇದ್ದಾರೆ. ಕಾಗಿನೆಲೆಯಿಂದ ಮೂರು ಕಿ. ಮೀ. ದೂರದಲ್ಲಿರುವ ಕಾಸಂಬಿಯಲ್ಲಿ, ಹತ್ತು ಕಿ. ಮೀ. ದೂರದಲ್ಲಿರುವ ಕನಕಪುರದಲ್ಲಿ ಹಾಗೂ ಮೂರು ಕಿ.ಮೀ. ದೂರದಲ್ಲಿರುವ ಹಿರಿಲಿಂಗದಳ್ಳಿಯಲ್ಲಿ ಕುರುಬರು ವಿಶೇಷವಾಗಿದ್ದಾರೆ. ಆದಿಕೇಶವನನ್ನು ಬಾಡದಿಂದ ತಂದು ಕನಕದಾಸರು ಇಲ್ಲಿ ಸ್ಥಾಪಿಸಿದರೆಂದು ಭೇಟಿಮಾಡಿದ ಊರಿನ ಗಣ್ಯರು ಕರಾರುವಾಕ್ಕಾಗಿ ಹೇಳುತ್ತಾರೆ. ಹಾವನ ಭಟ್ಟರ ಮಗ ಗುರುನಾಥ ಜೋಶಿ (ಸ್ಮಾರ್ತರು, ವಯಸ್ಸು ೫೦)ಯವರ ಹೇಳಿಕೆಯ ಪ್ರಕಾರ ನರಸಿಂಹಗುಡಿ ಹಳೆಯದು ; ಅದರ ಪಕ್ಕದಲ್ಲಿದ್ದದ್ದು ಲಕ್ಷ್ಮಿಯ ಗುಡಿ. ಈ ಲಕ್ಷ್ಮಿಯನ್ನು ಕನಕದಾಸರು ನರಸಿಂಹ ಗುಡಿಗೆ ವರ್ಗಾಯಿಸಿ, ಬಾಡದಿಂದ ಆದಿಕೇಶವನನ್ನು ತಂದು ವ್ಯಾಸರಾಯರ ಸಮ್ಮುಖದಲ್ಲಿ ಸ್ಥಾಪಿಸುತ್ತಾರೆ. ಕನಕದಾಸರ ಅಪ್ಪ ತಿಮ್ಮನಾಯಕ, ಬೀರಪ್ಪ ಅಲ್ಲ ; ಈ ಕಾರಣದಿಂದ ಇವರು ಕುರುಬರಲ್ಲ, ನಾಯಕರು ಎಂಬುದು ಇವರ ನಂಬಿಕೆ. ಈ ದೇವಾಲಯದ ಆವರಣದಲ್ಲಿರುವ ವೃಂದಾವನ ಭಂಡಾರಕೇರಿಯವರದೆಂಬ ಅಭಿಪ್ರಾಯವಿದೆ. ಲಕ್ಷ್ಮೀನರಸಿಂಹ ದೇವಾಲಯದಲ್ಲಿ ಕನಕದಾಸರು ಬಳಸಿದ ಭಿಕ್ಷಾಪಾತ್ರೆ ಹಾಗೂ ಶಂಖಗಳಿವೆ.

ಐವತ್ತು ವರ್ಷ ವಯಸ್ಸಿನ ಸಂಗಪ್ಪ ಎಂಬುವರ ಪ್ರಕಾರ ಆದಿಬಣಜಿಗರು ಇಲ್ಲಿಯ ಮೂಲದವರು. ಅವರೇ ಆದಿಕೇಶವನ ಪೂಜಾರಿಗಳು. ಐವತ್ತು–

ಅರುವತ್ತು ವರ್ಷಗಳ ಹಿಂದೆ ಅವರು ಲಿಂಗಧಾರಣೆ ಮಾಡಿಕೊಳ್ಳಲಾಗಿ, ಪೂಜಾರಿತನದ ಹಕ್ಕು ತಪ್ಪಿಹೋಗುತ್ತದೆ. ಅನಂತರ ಬ್ರಾಹ್ಮಣರೇ ಪ್ರತಿನಿತ್ಯ ಮೊದಲ ಪೂಜೆ ಪ್ರಾರಂಭಿಸುತ್ತಾರೆ ; ಅನಂತರ ಬಣಜಿಗ ಲಿಂಗಾಯತರು ಪೂಜಿಸುತ್ತಾರೆ. 'ಕನಕದಾಸರು ಜೀವನದಲ್ಲಿ ವಿರಕ್ತಿ ಹೊಂದಿ ಇಲ್ಲಿಗೆ ಬಂದರು. ಇಲ್ಲಿಯೇ ಪದ್ಯರಚನೆಮಾಡಿದರು. ತಂದೆ ಬೀರಪ್ಪನಾಯಕ. ಕನಕರಿಗೊಬ್ಬಳು ಪ್ರೇಯಸಿ ಇದ್ದಳು. ದಾಸರಾದನಂತರ ಅವರ ಸೇವೆ ಮಾಡಲು ಅವಳು ಬಂದಳೆಂಬ ಪ್ರತೀತಿಯಿದೆ. ಕೇಶವನ ಹೆಸರಿನ ಹಿಂದೆ ಆದಿ ಎಂಬುದು ಇರುವುದರಿಂದ ಕನಕದಾಸರು ಆದಿ ಬಣಜಿಗರು. ಕನಕಪ್ಪ ಎಂಬ ಹೆಸರು ಆದಿಬಣಜಿಗರಲ್ಲಿಯೂ ಚಾಲ್ತಿಯಲ್ಲಿದೆ' ಎಂಬುದಾಗಿ ಸುಮಾರು ೮೦ ವರ್ಷ ಮೀರಿರುವ ಶ್ರೀ ರಾಘವೇಂದ್ರ ದೇಸಾಯಿಯವರು ಹೇಳುತ್ತಾರೆ.

ಕನಕದಾಸರು ಇಲ್ಲಿಯೇ ತೀರಿಕೊಂಡರೆಂಬ ಬಗ್ಗೆ ಭಿನ್ನಾಭಿಪ್ರಾಯವೇ ಇಲ್ಲ, ಇಲ್ಲಿಯ ಜನರಲ್ಲಿ. ಅವರ ಗದ್ದುಗೆಯೂ ಸಹ ಕೆರೆಯ ಪಕ್ಕದಲ್ಲಿದೆ. ಆದಿಕೇಶವನ ವಿಗ್ರಹವನ್ನು ಬಾಡದಿಂದ ತಂದದ್ದೆಂಬ ಬಗ್ಗೆಯೂ ಎರಡು ಮಾತಿಲ್ಲ. ಇಲ್ಲಿಯ ಜನರಲ್ಲಿ ಕನಕದಾಸರ ಕುಲದ ಬಗ್ಗೆ ಗೊಂದಲವಿದ್ದಂತಿದೆ. ಇವರು ತಳವಾರರೂ ಅಲ್ಲ, ಕುರುಬರೂ ಅಲ್ಲ, ಆದಿಬಣಜಿಗರು ಎಂಬುದು ಕೆಲವರು ಮತ. ಕೇಶವ ಹೆಸರಿನ ಹಿಂದೆ 'ಆದಿ' ಪದವಿರುವುದೇ ಈ ಊಹೆಗೆ ಆಧಾರವೆಂದು ಹೇಳುವ ಮಾತನ್ನು ಒಪ್ಪಲಾಗದು. ಆದಿ ಜಾಂಬವರು, ಆದಿಕರ್ನಾಟಕರು ಎಂಬ ಪದಗಳಲ್ಲಿಯೂ ಆದಿ ಪದ ಕಾಣಿಸಿಕೊಳ್ಳುವುದರಿಂದ ಕನಕದಾಸರು ಆ ಆ ಕುಲಗಳಿಗೆ ಸೇರಿದವರೆಂದು ಹೇಳಲಾಗುತ್ತದೆಯೆ? ಮೇಲಾಗಿ ಈ ಆದಿಕೇಶವ ಬಾಡದಿಂದ ಬಂದವನಾದ್ದರಿಂದ ಆದಿ ಬಣಜಿಗರಿಗೂ ಆದಿಕೇಶವನಿಗೂ, ಅರ್ಥಾತ್ ಕನಕದಾಸರಿಗೂ ಏನೇನೂ ಸಂಬಂಧ ಇಲ್ಲವೆಂದೇ ಖಚಿತಪಡಿಸಬಹುದು.

ಈ ಮೂರು ದೇವರುಗಳನ್ನು ಹಿಂದೆ ಕನಕದಾಸರು ಪೂಜಿಸುತ್ತಿದ್ದಿರಬಹುದು ; ಅಥವಾ ತಮ್ಮ ಶಿಷ್ಯರನ್ನು–ಅವರು ಯಾವ ಜಾತಿಯವರೇ ಆಗಿರಲಿ–ಪೂಜೆಗೆ ನಿಯೋಜಿಸಿರಬೇಕು. ಚೆನ್ನಕೇಶವನ ಪೂಜಾರಿ ಲಿಂಗವಂತರಾದ್ದರಿಂದ ಕನಕದಾಸರು ಲಿಂಗಾಯತರೆಂದಾಗಲಿ, ಆದಿಕೇಶವನ ಪೂಜಾರಿ ಬ್ರಾಹ್ಮಣರಾದ್ದರಿಂದ ಅವರು ಬ್ರಾಹ್ಮಣರೆಂದಾಗಲಿ ಹೇಳಲು ಸಾಧ್ಯವಿಲ್ಲ. ಈ ಸಂದರ್ಭದಲ್ಲಿ ಮೈಸೂರಿನಲ್ಲಿ ಪ್ರಚಲಿತವಿರುವ ಒಂದು ಸಂಗತಿಯನ್ನಿಲ್ಲಿ ಉದಾಹರಿಸಬಹುದು. ಒಂಟಕೊಪ್ಪಲಿನಲ್ಲಿ ಪ್ರಸಿದ್ಧವಾದ ವೆಂಕಟೇಶ್ವರ

ದೇವಾಲಯುವಿದೆ. ಅಲ್ಲಿಯ ವಿಗ್ರಹವನ್ನು ತೊಂಡೂರಿಂದ ತಂದು ಪ್ರತಿಷ್ಠೆಮಾಡಿದವರು ಚಿಕ್ಕಣ್ಣ ಎಂಬುವರು. ಅವರು ಜಾತಿಯಲ್ಲಿ ಕುರುಬರು. ಈಗ ಅದರ ಮೊಖ್ತೇಸರರು ಮುಖ್ಯವಾಗಿ ಶ್ರೀವೈಷ್ಣವ ಬ್ರಾಹ್ಮಣರು. ಇಷ್ಟರಿಂದಲೇ ಆ ವಿಗ್ರಹದ ಪ್ರತಿಷ್ಠಾಪಕ ಮತ್ತು ದೇವಾಲಯದ ನಿರ್ಮಾಪಕ ಬ್ರಾಹ್ಮಣರೆಂದು ಹೇಳಲಾಗದು ; ಅಥವಾ ಪೂಜಾರಿಗಳು ಸ್ಥಾಪಕನ ವಂಶದವರೆಂದು ತಿಳಿಯಲಾಗದು.

ಮೋಹನತರಂಗಿಣಿಯಲ್ಲಿ ಕದರಮಂಡಲಿಗಿಯ ಹನುಮಂತನ ಸ್ತುತಿ ಬರುತ್ತದೆ. ಅಷ್ಟೇ ಅಲ್ಲ, ಕೀರ್ತನೆಯೊಂದರಲ್ಲಿಯೂ ಅವನ ಸ್ತುತಿ ಬರುತ್ತದೆ.;

ಕದರಮಂಡಲಗಿ ಕರುಣಿ ಹನುಮರಾಯ
ಸದುಗುಣವಂತನೆ । ಗುಣವಂತನೆ
ಅಂಜನೆಯ ವರಸೂನು । ಆಶ್ರಿತ ಕಾಮಧೇನು.
ಮಂಜುಳ ಸುಗಾನ ಗೀತ । ಪರಮವಿಖ್ಯಾತ
ಸಂಜೀವನವ ತಂದವನು । ವೀರ ಹನುಮನು
ಸದುಗುಣವಂತನೆ । ಗುಣವಂತನೆ ಇತ್ಯಾದಿ

ಇಲ್ಲಿಯ ಹನುಮಂತನ ದೇವಾಲಯ ಬೃಹತ್ ಪ್ರಮಾಣದ್ದು. ಇದರೊಳಗೆ ಆದಿಕೇಶವನ ವಿಗ್ರಹವಿದೆ. ಕನಕದಾಸರದೆಂದು ಹೇಳುವ ಮತ್ತೊಂದು ವಿಗ್ರಹವೂ ಇದೆ. ಅದರ ತಲೆಮೇಲೆ ಆದಿಶೇಷನಿರುವುದರಿಂದ ಅದು ಕನಕದಾಸರ ವಿಗ್ರಹವಂತು ಅಲ್ಲ. ಹನುಮಂತನ ಪೂಜಾರಿ ಲಿಂಗವಂತರು. ದೇವಾಲಯಕ್ಕೆ ಬಲಗಡೆ ಕನಕಮಂಟಪವಿದೆ. ಅದರಲ್ಲಿ ಕನಕದಾಸರ ವಿಗ್ರಹವಿದೆ. ಇಲ್ಲಿ ಕನಕದಾಸರು ಕುಳಿತು ಮೋಹನತರಂಗಿಣಿಯನ್ನು ರಚಿಸಿದರೆಂಬ ಪ್ರತೀತಿಯಿದೆ. ಮೋಹನತರಂಗಿಣಿಯ ಓಲೆಗರಿ ಪ್ರತಿಯನ್ನು ಸಹ ಅಲ್ಲಿ ಇಡಲಾಗಿದೆ. ನಿವೃತ್ತ ಪ್ರೈಮರಿ ಶಾಲೆಯ ಶಿಕ್ಷಕರೂ, ದೇವಾಲಯದ ಮೊಖ್ತೇಸರರೂ ಆದ ೮೭ ವಯಸ್ಸಿನ ಸ್ವಾಮಿರಾಯಾಚಾರ್ಯರು ನಿರವಿಸಿದ ಕತೆಯನ್ನಿಲ್ಲಿ ದಾಖಲಿಸಲಾಗಿದೆ. 'ತಿಮ್ಮಪ್ಪ ಯುದ್ಧದಲ್ಲಿ ಗಾಯಗೊಂಡು ಸೋತು ನರಳುವಾಗ, ತಿರುಪತಿ ತಿಮ್ಮಪ್ಪನ ಮೊರೆ ಹೋಗುವಂತೆ ಅವನ ತಾಯಿ ಬಚ್ಚಮ್ಮ ಮಗನಿಗೆ ಬುದ್ಧಿ ಹೇಳುತ್ತಾಳೆ. ತಿಮ್ಮಪ್ಪನನ್ನು ನೆನೆಯುತ್ತಿದ್ದಂತೆ ಅವನ ಗಾಯಗಳು ಗುಣವಾಗುತ್ತವೆ. ತಿರುಪತಿ ಯಾತ್ರೆಗಾಗಿ ಕಾಗಿನೆಲೆಯಿಂದ (ಪ್ರಾಯಶಃ ಬಾಡವಿರಬೇಕು–ಲೇಖಕ) ತಿರುಪತಿಗೆ ಹೋಗುವಾಗ ಕದರಮಂಡಲಿಗಿ ದಾರಿಯಲ್ಲಿ ಸಿಗುತ್ತದೆ. ಅವನಲ್ಲಿ ನಿಂತು ಹನುಮಂತನಿಗೆ

ಕೈಂಕರ್ಯ ಸಲ್ಲಿಸದೆ ಮುಂದೆ ಹೋಗುತ್ತಾನೆ. ತಿರುಪತಿಯಲ್ಲಿ ದೇವರು ಅವನಿಗೆ ದರ್ಶನ ನೀಡುವುದಿಲ್ಲ. ಏಕೆಂದರೆ ಕದರಮಂಡಲಿಗಿಯಲ್ಲಿ ಹನುಮಂತನ ದರ್ಶನವನ್ನೇಕೆ ಮಾಡಲಿಲ್ಲವೆಂದು ದೇವರು ಕನಸಿನಲ್ಲಿ ಆಕ್ಷೇಪಿಸುತ್ತಾನೆ. ಕನಕದಾಸ ಹಿಂದಿರುಗಿ ಕದರಮಂಡಲಿಗಿಯಲ್ಲಿ ನಿಂತು, ಹನುಮಂತನನ್ನು ಆರಾಧಿಸಿದ. ಅಲ್ಲಿದ್ದಾಗ ಅವನು ಮುಟ್ಟಿದ್ದೆಲ್ಲ ವರವಾಗುತ್ತಿತ್ತು. ಅದನ್ನು ಕಂಡ ಜನ ಹನುಮಂತನ ಪೂಜೆ ಮಾಡುವಂತೆ ಅವನನ್ನೆ ಕೇಳಿಕೊಳ್ಳುತ್ತಾರೆ. ಅವನು ಕುರುಬರವನೆಂಬುದರಲ್ಲಿ ಸಂದೇಹವೇ ಇಲ್ಲ.' ದೇವಸ್ಥಾನದಲ್ಲಿ ಭೇಟಿಯಾದವರೆಲ್ಲ ಈ ಸಂಗತಿಯನ್ನು ಒತ್ತಿ ಒತ್ತಿ ಹೇಳಿದರು. ಈ ಊರಿನಲ್ಲಿ ಕುರುಬರು, ವಾಲ್ಮೀಕಿಗಳು ಮತ್ತು ಲಿಂಗಾಯತರು ಸಮಸಮವಾಗಿದ್ದಾರೆ.

ಹಳೆಯ ಬಾಡವೀಗ ನಿರ್ನಾಮವಾಗಿದೆ. ವಿಜಯನಗರದ ಪತನಾನಂತರ, ಮುಸ್ಲಿಮರ ದಾಳಿಗಂಜಿ, ಜನ ದಿಕ್ಕಾಪಾಲಾಗಿ ಚೆದರಿಹೋಗಿರಬೇಕೆಂದು ತೋರುತ್ತದೆ. ಅದು ಸಂಪತ್ಸಮೃದ್ಧವಾದ ಸುಭದ್ರವಾದ ಗೋವಾ ವಿಜಯನಗರಗಳ ಹೆದ್ದಾರಿಯಲ್ಲಿ ಆಯಕಟ್ಟಿನ ಪಾಳೆಯಪಟ್ಟಾಗಿದ್ದುದರಿಂದ ಮುಸ್ಲಿಮರ ಕಣ್ಣು ಅದರ ಮೇಲೆ ಬಿದ್ದಿರಬೇಕು. ಕೇಶವ ದೇವಾಲಯವಿದ್ದ[1] ಜಾಗದಲ್ಲಿ ಕಂಬ ಬೋದಿಗೆ ಮೊದಲಾದ ಮುಟ್ಟುಗಳು ಈಗಲೂ ಕಾಣುತ್ತವೆ. ಕನಕದಾಸರ ಮನೆಯಿದ್ದ ಆವರಣದಲ್ಲಿ ಅವರು ಭೂಸ್ಪರ್ಶ ಮಾಡಿದರೆಂದು ಹೇಳಲಾದ ಸ್ಥಳದಲ್ಲಿ ಒಂದು ಮಂಟಪವನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ಉತ್ಖನನ ನಡಸಿದರೆ ಇಲ್ಲಿ ಅನೇಕ ಪುರಾತತ್ತ್ವ ವಸ್ತುಗಳು ಸಂಲಭಿಸುವ ಸಾಧ್ಯತೆಯುಂಟು. ಭಗ್ನಾವಶೇಷವಾಗಿರುವ ಈ ಊರಿನ ಸನಿಹದ ಕಲ್ಯಾಣಿ, ಸದಾಶಿವಪೇಟೆ ಮತ್ತು ಬಂಕಾಪುರಗಳಲ್ಲಿ ಕುರುಬರು ವಿಶೇಷವಾಗಿದ್ದಾರೆ. ಹಾಳು ಬಿದ್ದ ಆದಿಕೇಶವ ದೇವಾಲಯದ ಮುಂಭಾಗದಲ್ಲಿ ಮುರಿದ ಬಸವ ಇದೆ ; ಪಾಣಿಪೀಠದಲ್ಲಿ ಲಿಂಗವಿದ್ದಿರಬೇಕೆಂದು ಊಹಿಸಬಹುದಾಗಿದೆ. ಮೊದಲು ಶೈವದೇವಾಲಯವಿದ್ದ ಜಾಗದಲ್ಲಿ ವಿಷ್ಣುದೇವಾಲಯ ಸಂಸ್ಥಾಪಿತವಾಯಿತೋ

---

೧. ಅದು ರಂಗನಾಥ ದೇವಾಲಯವೆಂದೂ, ಕನಕದಾಸರು ಅದನ್ನು ಕಾಗಿನೆಲೆಗೆ ಕೊಂಡೊಯ್ದನಂತರ ಅದಕ್ಕೆ ಆದಿಕೇಶವ ಎಂಬ ಹೆಸರು ಬಂತೆಂದೂ ಕೆಲವರು ಹೇಳುತ್ತಾರೆ– ಪ್ರೊ. ಶಿ.ಬ. ಬಾರಿಗಿಡದ, ಕನಕಜ್ಯೋತಿ ಸ್ಮರಣ ಸಂಪುಟ, ಸಂತ ಕವಿ ಶ್ರೀ ಕನಕದಾಸ ಸಾಹಿತ್ಯ ಸಂಘ, ಬಾಡ–ಬಂಕಾಪುರ. ಈ ಹೇಳಿಕೆ ಸಮರ್ಥನೀಯವಲ್ಲ. ಕನಕದಾಸರು ಬಳಸಿಕೊಂಡ ಅಂಕಿತಗಳಲ್ಲಿ ಬಾಡದಾದಿಕೇಶವ ಎಂಬುದೂ ಒಂದು ಅಂಕಿತವೆಂಬ ಸಂಗತಿಯನ್ನು ಮರೆಯಲಾಗದು.

ಅಥವಾ ಆದಿಕೇಶವನ ನಿರ್ಗಮನಾನಂತರ ಶೈವದೇವಾಲಯ ಸ್ಥಾಪನೆಗೊಂಡಿದ್ದು ಅದೂ ಅನಂತರ ಹಾಳಾಯಿತೊ, ಪುರಾತತ್ತ್ವಶಾಸ್ತ್ರಜ್ಞರು ಶೋಧನೆ ನಡೆಸಬೇಕಾಗಿದೆ. ೯೨ ವರ್ಷ ವಯಸ್ಸಿನ ಹೊಸ ಬಾಡದ ಬಂಕಪ್ಪ ಬಾರಿಗಿಡದ ಎಂಬುವರು ಹೇಳುವ ಕತೆಯಿದು : ಕನಕದಾಸ ಕುರುಬ. ಅಪ್ಪ ಬೀರಪ್ಪ, ಅವ್ವ ಬಚ್ಚಮ್ಮ. ಬಾಡ ಹಾಳಾಗಿ ಇಲ್ಲಿಗೆ ೫೧೦ ವರ್ಷಗಳಾದುವು. ಅದು ಹಾಳಾಗುತ್ತಿದ್ದಂತೆ ಕನಕದಾಸ ಇಲ್ಲಿಂದ ಹೊರಟುಹೋದ. ಅವನಿಗೆ ಲಗ್ನ ಆಗಿರಲಿಲ್ಲ. ಅವನು ಸದಾಶಿವಮಠದಲಿದ್ದು ಓದುತ್ತಿದ್ದನಂತೆ[2] ಆಗಿನ ಕಾಲದಲ್ಲಿ ಇಲ್ಲೆಲ್ಲ ಕುರುಬ ಜನಾಂಗ ವ್ಯಾಪಕವಾಗಿ ಹರಡಿಕೊಂಡಿತ್ತು. ಬಕಾಸುರನೆಂಬುವನ ದಬ್ಬಾಳಿಕೆ ಹಾಗೂ ಮುಸ್ಲಿಮರ ದಾಳಿಯಿಂದಾಗಿ ಬಾಡ ಹಾಳಾಯಿತೆಂಬ ನಂಬಿಕೆಯಿದೆ. ಆದಿಕೇಶವನ ವಿಗ್ರಹ ಮುಸ್ಲಿಮರ ಕೈಗೆ ಸಿಕ್ಕಬಾರದೆಂದು ಕನಕದಾಸ ತನ್ನ ಜೋಳಿಗೆಯಲ್ಲಿರಿಸಿಕೊಂಡು ಕಾಗಿನೆಲೆಗೆ ಹೋದ.'

ಬಂಕಾಪುರದ ಕುರುಬ ಜನಾಂಗದ ಗಣ್ಯವ್ಯಕ್ತಿ ೮೧ ವರ್ಷದ ಬಾಬುರಾವ್ ತಿಮ್ಮಪ್ಪ ಹಂಡೆಯವರ ಪ್ರಕಾರ, ತಳವಾರ ಗೌಡನ ಮಗಳು ಕನಕದಾಸನನ್ನು ಪ್ರೀತಿಸಿದ್ದಳೆಂದೂ, ಅವನಿಗೆ ಅವಳನ್ನು ಮದುವೆಯಾಗಲು ಇಷ್ಟವಿರಲಿಲ್ಲವಾಗಿ ತಳವಾರ ಗೌಡರ ಕಡೆಯವರು ಅವನಿಗೆ ಕಿರುಕುಳ ಕೊಡಲು ಪ್ರಾರಂಭಿಸಿದರೆಂದೂ, ಅನಂತರ ಆದಿಕೇಶವನ ಆದೇಶದ ಮೇರೆಗೆ ಅವನು ದಾಸನಾದನೆಂದೂ ತಿಳಿಯುತ್ತದೆ.

ಈ ಕ್ಷೇತ್ರಕಾರ್ಯದಿಂದ ಸಂಲಬ್ಧವಾಗುವ ಸಂಗತಿಗಳಿಷ್ಟು : ೧. ಕನಕದಾಸ ಹುಟ್ಟಿದ್ದು ಬಾಡದಲ್ಲಿ, ಸತ್ತದ್ದು ಕಾಗಿನೆಲೆಯಲ್ಲಿ. ೨ ಅವರು ಬೀರೇಗೌಡ ಮತ್ತು ಬಚ್ಚಮ್ಮರ ಏಕಮಾತ್ರ ಪುತ್ರ ೩. ಮುಸ್ಲಿಮರ ದಾಳಿಯಿಂದ ಆದಿಕೇಶವನಿಗೆ ಆಘಾತವಾಗಬಾರದೆಂದು ಮೊದಲೇ ಆ ವಿಗ್ರಹವನ್ನು ಕಾಗಿನೆಲೆಗೆ ಸಾಗಿಸಿದ್ದು. ೪. ಅವರು ಯುದ್ಧದಲ್ಲಿ ಗಾಯಗೊಂಡದ್ದು ಮತ್ತು ವ್ರಣಪರಿಹಾರಕ್ಕಾಗಿ ತಿರುಪತಿಗೆ ಹೋದದ್ದು ಹಾಗೂ ಕದರಮಂಡಲಿಗಿಗೆ ಹಿಂದಿರುಗಿದ್ದು. ೫. ವ್ಯಾಸರಾಯರನ್ನು ಗುರುವಾಗಿ ಸ್ವೀಕರಿಸಿದ್ದು ಮತ್ತು ವೈರಾಗ್ಯ ಹೊಂದಿ

---

೨. ಸದಾಶೀವಪೇಟೆಯ ವಿರಕ್ತಮಠದಲ್ಲಿ ಕನಕದಾಸ ಕುಳಿತು ಶಿವಾನುಭವೋಪದೇಶವನ್ನು ಕೇಳುತ್ತಿದ್ದ ಕಟ್ಟೆ ಈಗಲೂ ಇದೆಯಂತೆ. ಇವತ್ತಿಗೂ ಕನಕಪ್ಪನ ಕಟ್ಟೆಯೆಂದೇ ಅದಕ್ಕೆ ಹೆಸರಿದೆ. ಅದಕ್ಕೆ ಅಕ್ಷರಾಧಾರವುಂಟು. ಸದರಿ ಮಠದ ಗೋಡೆಯಲ್ಲಿ ಅವನ ಮೂರ್ತಿ ಈಗಲೂ ಇದೆ. ಬಾಡಗ್ರಾಮದಿಂದ ಒಂದು ಮೈಲಿ ಅಂತರದಲ್ಲಿದೆ ಸದಾಶಿವಪೇಟೆ–ಶ್ರೀ ನಿ.ಪ್ರ. ಸಚ್ಚಿದಾನಂದ ಮಹಾಸ್ವಾಮಿಗಳು, ವಿರಕ್ತಮಠ ; ಅದೇ ಸ್ಮರಣ ಸಂಪುಟದಲ್ಲಿ.

ಪರಿವ್ರಾಜಕರಾಗಿ ತೀರ್ಥಯಾತ್ರೆ ಕೈಗೊಂಡದ್ದು. ೬. ಮಡದಿ ಮಕ್ಕಳ ಬಗ್ಗೆ ಸಂದೇಹ ; ಅವರು ಮದುವೆಯಾಗಿರಲಿಲ್ಲವೆಂಬ ಹೇಳಿಕೆಯೂ ಇದೆ, ೭. ತಳವಾರರ ಹೆಣ್ಣೊಬ್ಬಳು ಅವರನ್ನು ಪ್ರೀತಿಸಿದ್ದು. ೮. ಮೂರು ಕೇಶವ ವಿಗ್ರಹಗಳನ್ನು ಅವರು ಪ್ರತಿಷ್ಠಾಪಿಸಿದ್ದು. ೯. ಆ ಮೂರು ದೇವಾಲಯಗಳ ಪೂಜಾರಿಗಳೂ ಬ್ರಾಹ್ಮಣ, ವಾಲ್ಮೀಕಿ (ದಾಸರಿ) ಹಾಗೂ ಲಿಂಗವಂತ ಸಮಾಜಕ್ಕೆ ಸೇರಿದವರಾಗಿ ಅವರು ಯಾರೂ ಕನಕದಾಸರ ವಂಶದವರಲ್ಲದ್ದು. ೧೦. ಕನಕದಾಸರು ಕುರುಬರೊ ನಾಯಕರೊ ಅಥವಾ ಆದಿಬಣಜಿಗರೊ ಆಗಿರಬೇಕೆಂಬ ಸಂದಿಗ್ಧತೆ. ಧಾರವಾಡ ಜಿಲ್ಲೆಯ ಮೂರ್‍ನಾಲ್ಕು ತಾಲ್ಲೂಕುಗಳಲ್ಲಿ ಅವರ ಪ್ರಭಾವ ದಟ್ಟವಾಗಿರುವಂಥದು.

೨

ಜಾನಪದ ಸಾಹಿತ್ಯ ಕಲೆಗಳೂ ಒಂದು ಜನಾಂಗದ ಅಥವಾ ರಾಷ್ಟ್ರದ ಮೂಲಭೂತ ಚೈತನ್ಯದ ಪ್ರತಿಬಿಂಬವಷ್ಟೆ. ಅವು ಶ್ರೀಸಾಮಾನ್ಯನ ಮನೋವಿಕಾಸದ ಪ್ರಾಮಾಣಿಕ ದಾಖಲೆಗಳನ್ನೊಳಗೊಂಡಿರುವುದರ ಜತೆಗೆ, ಒಂದು ಜನಾಂಗದ ಇತಿಹಾಸಕ್ಕೂ ಕೈಗನ್ನಡಿಯಾಗಿವೆಯೆಂಬುದನ್ನು ಅಲ್ಲಗಳೆಯುವಂತಿಲ್ಲ. ಇತಿಹಾಸಕಾರ ಅವನ್ನು ಮರೆತದ್ದಾದರೆ ಅವನ ಸಂಶೋಧನೆ ಮುಕ್ಕಾಗುತ್ತದೆ. ಅಥವಾ ಪಾರ್ಶ್ವವಾಯುವಿಗೆ ಗುರಿಯಾಗುತ್ತದೆ. ಈತನಕ ಲಭ್ಯವಾಗಿರುವ ಜಾನಪದ ಸಾಹಿತ್ಯದಲ್ಲಿ ಮೂಡಿಬರುವ ಕನಕದಾಸರ ವ್ಯಕ್ತಿತ್ವದ ಕಡೆಗೆ ತುಸು ಗಮನಹರಿಸಬಹುದು.

ಹತ್ತು ದಿನಗಳು ನಡೆದ ಯುದ್ಧದಲ್ಲಿ ಕನಕನಾಯಕ ತನ್ನ ಭುಜಬಲವನ್ನೂ ಯುದ್ಧಕೌಶಲವನ್ನೂ ಪ್ರದರ್ಶಿಸಿ ಸೋತನೆಂದು, ಸತ್ತ ದಳವನ್ನು ಕಂಡು ಕಳವಳಿಸಿದನೆಂದು, ಕೊನೆಗೆ ರಕ್ತದ ಮಡುವಿನಲ್ಲಿ ಬಿದ್ದನೆಂದು ಡೊಳ್ಳಿನ ಹಾಡೊಂದು ಸಾರುತ್ತದೆ.

ಹತ್ತು ದಿನಗಳು ನಡೆದ ಯುದ್ದೇನೋ
ಸತ್ತ ದಳದ ಕಳವಳ ತಾನು ಕಂಡಾನೋ
ಸತ್ತ ದಳದ ಕಳವಳ ಕಂಡಾನಯ್ಯ
ಹೊತ್ತು ಮುಳುಗುವ ತನಕ ಹೊಡದಾನೋ[೩] ॥

ರಕ್ತದ ಮಡುವಿನಲ್ಲಿ ಬಿದ್ದ ಕನಕನಾಯಕ

---

೩. ಈ ಭಾಗದಲ್ಲಿ ಉದ್ಧೃತವಾಗಿರುವ ಜಾನಪದ ಹಾಡುಗಳನ್ನು ಡಾ. ನಿಂಗಣ್ಣ ಸಣ್ಣಕ್ಕಿಯವರ ಲೇಖನದಿಂದ ಆಯ್ದುಕೊಳ್ಳಲಾಗಿದೆ.

ಸಂಕಟ ಸಂಕಟವೆಂದು ವೆಂಕಟನ ನೆನದಾನೋ
ಸಂಕಟ ಸಂಕಟವೆಂದು ವೆಂಕಟನ ನೆನೆದಾನಯ್ಯ
ಕನಕನಾಯಕನೇಳೋ ನನ್ನ ಸೇವಕನೆಂದಾನೋ
ಕನಕನಾಯಕನೇಳೋ ನನ್ನ ಸೇವಕನೆಂದಾನಯ್ಯ ॥

ವೆಂಕಟನನ್ನು ನೆನೆದು ನಾಯಕ ಮೇಲೆದ್ದಾಗ ಆದಿಕೇಶವನ ಮೂರುತಿ ಅವನಿಗೆ ಕಾಣಿಸಿಕೊಳ್ಳುತ್ತದೆ. ಅವನ ಕಣ್ಣಿಗೆ ಕಂಡದ್ದು ಕಾಗಿನೆಲೆಯ ಆದಿಕೇಶವನೆಂದ ಮೇಲೆ ಆ ಹೊತ್ತಿಗಾಗಲೇ ಬಾಡದ ಆದಿಕೇಶವ ಅಲ್ಲಿಗೆ ಹೋಗಿ ನೆಲಸಿರಬೇಕೆಂದು ತೋರುತ್ತದೆ.

ಅದೇ ಅವನ ಪಾಲಿಗೆ ಕೊನೆಯ ಯುದ್ಧ. ಯುದ್ಧದಲ್ಲಿ ಕಣ್ಣಾರೆ ಕಂಡ ರಕ್ತಪಾತದಿಂದಾಗಿ, ತನಗಾದ ಸೋಲುನೋವುಗಳಿಂದಾಗಿ ಅವನು ವೈರಾಗ್ಯಪರನಾಗುತ್ತಾನೆ. ಅವನು ಒಡನೆಯೆ ವ್ಯಾಸರಾಯರ ಸನ್ನಿಧಿಗೈದಿ, ಅವರಿಂದ ಸಾಂತ್ವನ ಪಡೆಯುತ್ತಾನೆ.

ವ್ಯಾಸರಾಯರನ ಕಂಡು ನಮಿಸ್ಯಾನೊ
ವ್ಯಾಸರಾಯರನ ಕಂಡು ನಮಿಸ್ಯಾನಯ್ಯಾ
ತಾಳ ತಂಬೂರಿಗಳ ನಾದ ಮಾಡ್ಯಾನೊ
ತಾಳ ತಂಬೂರಿಗಳ ನಾದ ಮಾಡ್ಯಾನಯ್ಯಾ ॥

ವ್ಯಾಸರಾಯರ ಸುತ್ತಮುತ್ತಲಿದ್ದವರೆಲ್ಲ ಅವನನ್ನು ಕುರುಬನೆಂದೇ ಕರೆಯುತ್ತಾರೆ.

ಪಾವನ ಬದುಕು ತನಗರಿ ಎಂದಾನೊ
ಪಾವನ ಬದುಕು ತನಗರಿ ಎಂದಾನಯ್ಯಾ
ಕುರುಬನೆಂದು ತಾ ಕರೆಯಿಸಿಕೊಂಡಾನೋ
ಕುರುಬನೆಂದು ತಾ ಕರೆಯಿಸಿಕೊಂಡಾನಯ್ಯಾ ॥

ವ್ಯಾಸರಾಯರ ಸಂಪರ್ಕದಿಂದ ಕನಕನಾಯಕ ಕನಕದಾಸರಾಗುತ್ತಾರೆ. ಅವನು ಬರಿಯ ಕುರುಬನಲ್ಲ ; ನರಕುರಿಗಳ ಕಾಯುವ ಕುರುಬನೆಂದು ಪ್ರಾಯಶಃ ಗುರುಗಳೇ ಹೇಳಿರಬೇಕು.

'ಕನಕದಾಸರನು ನೀವೇನು ಬಲ್ಲಿರಿ । ನೀವೇನು ಬಲ್ಲಿರಿ, ನೀವೇನು ಬಲ್ಲಿರಿ' ಎಂಬ ಪಲ್ಲವಿಯಿಂದ ಪ್ರಾರಂಭವಾಗುವ ಏಕತಾರಿ ಹಾಡಿನಲ್ಲಿ ಕನಕದಾಸರು ಹಾಲುಮತದವರೆಂದು, ಮಾನವ ಮತದ ಮಹಿಮೆಯನ್ನು ಸಾರಿದವರೆಂದು ಸ್ಪಷ್ಟವಾಗಿ ನಿರೂಪಣೆಗೊಂಡಿದೆ.

ಹಾಲುಮತದ ಕನಕದಾಸನೂ
ಸಾಲುಮತಗಳ ತಿಳಿದವನೂ
ಸಾಲುಮತಗಳ ತಿಳಿದ್ಹೇಳಿದನ
ಸಾಕುಮಾಡಬೇಕು ಜಾತಿಗಳನೂ ॥
ಒಂದು ಮತ ಹಿಡಿದ್ಹೇಳಿದನೂ
ಮಾನವ ಮತವ ತಿಳಿದವನೂ
ಮಾನವ ಮತ ತಿಳಿದ್ಹೇಳಿದನ
ಬೆಳಕಿಗೆ ಇಲ್ಲ ಜಾತಿಯನೂ ॥

ಅವರಿಗೆ ಹಲವು ಮತಗಳ ಪರಿಚಯವಿತ್ತೆಂಬುದು, ಮತಗಳು ಹಲವಲ್ಲ ಒಂದೇ ಎಂದು ಅವರ ಮತವಾಗಿತ್ತೆಂಬುದು ಮುಂದಿನ ಚರಣಗಳಲ್ಲಿ ವ್ಯಕ್ತವಾಗುತ್ತದೆ. ಇಲ್ಲಿ ಹಲವು ಮತಗಳೆಂದರೆ ಶೈವ, ವೈಷ್ಣವ ಪಂಥಗಳೇ ಇರಬೇಕೆಂಬುದು, ಕೊನೆಗವರು ಮಾನವಮತವನ್ನು ಹಿಡಿದುಕೊಂಡರೆಂಬುದು ಸುಸ್ಪಷ್ಟ.

ಹಲವು ಮತ ತಿಳಿದವನವನೂ ॥
ಒಂದೇ ಒಂದು ಮತ ಎಂದವನೂ

ಗೀಗೀ ಧಾಟಿಯ 'ಮಹಾತ್ಮಾ ಕನಕದಾಸರ ಸಖಿಪದ'ದಲ್ಲಿ

ಕುರುಬನೆಂದರೂ ಕನಕದಾಸ ಮಹಾ ಬಹಾದೂರಾ
ತಿಳಿಸಿದಾನ ಸರವರಿಗೆಲ್ಲ ದೇವರಿರುವ ಕಳಾ ॥

ಸಂಸಾರವನ್ನು ತ್ಯಜಿಸಿ, ಮೇಟಿಯನ್ನು ಮರೆತು, ಕೋಟೆಯಿಂದ (ಬಾಡದ) ಹೊರಗೆ ಹೋದ ಕನಕದಾಸರ ಮತ್ತು ಅವರ ಆದಿಕೇಶವನ ಸ್ತುತಿ ಹಂತಿಯ ಹಾಡುಗಳಲ್ಲಿ ವಿಶೇಷವಾಗಿ ಬರುತ್ತದೆ.

ಮೇಟಿಯ ಸರಿಸ್ಯಾನ ಕ್ವಾಟಿಯ ಬಿಟ್ಟಾನ
ಕಾಗಿನಲೆಯ ಹಾದಿ ಹಿಡಿದಾನ
ಕಾಗಿನೆಲೆಯ ಹಾದಿ ಹಿಡಿದಾನ
ಕಾಗಿನೆಲೆಯ ಹಾದಿ ಹಿಡಿದಾನ ಕನಕಯ್ಯ
ಲೋಕದ ಮಾನ ಬೆಳಗ್ಯಾನ ॥

ಹೆಗಲ ಮೇಲೆ ಗೊಂಗಡಿ ಹೊದ್ದ ಕನಕದಾಸರು ಹರೆಯ ಹೊತ್ತಿನ ಹೆಂಗಳೆಯರ ಕನಸಿನಲ್ಲಿ ಕಾಣಿಸಿಕೊಳ್ಳುತ್ತಾನೆಂದು ಅವರು ತಮ್ಮ ತಾಯಂದಿರಿಗೆ ತಿಳಿಸಿದ ಸಂಗತಿ ತ್ರಿಪದಿಯೊಂದರಲ್ಲಿ ಸುಳಿದಿದೆ. ಹಂತಿಯ ಸಮಯದಲ್ಲಿ

ಕನಕದಾಸರಿಗೂ ಎಡೆಯಿಡುವ ರೂಢಿ ಧಾರವಾಡ ಜಿಲ್ಲೆಯಲ್ಲಿದೆಯೆಂದು ಡಾ. ನಿಂಗಣ್ಣ ಸಣ್ಣಕ್ಕಿಯವರು ಹೇಳುತ್ತಾರೆ. ವಿಜಯದಶಮಿಯ ದಿನ ಬಾಡದ ಕನಕದಾಸರ ಗುಡಿಯ ಮುಂದೆ ಕಂಬಳಿ ಹಾಸಿ ಕುಳಿತುಕೊಂಡು, ಕನಕದಾಸರ ಹೆಸರು ಹೇಳುತ್ತ, ಉಣ್ಣೆಯ ಕಂಕಣಗಳನ್ನು ಕಟ್ಟಿಕೊಳ್ಳುವ ಸಂಪ್ರದಾಯ ಆ ಕಡೆಯ ಕುರುಬರಲ್ಲಿ ಈಗಲೂ ಇದೆಯಂತೆ.

ಜಾನಪದ ಸಾಹಿತ್ಯ ಸಂಪ್ರದಾಯಗಳ ಅಧ್ಯಯನದಿಂದೊದಗುವ ಫಲಶ್ರುತಿಯಿದು : ೧. ಯುದ್ಧಕ್ಕೆ ಮುಂಚೆಯೇ ಆದಿಕೇಶವ ಬಾಡದಿಂದ ಕಾಗಿನೆಲೆಗೆ ಬಿಜಯಗೈದಿದ್ದನು. ೨. ಯುದ್ಧದಲ್ಲಿ ಸೋತನಂತರ ಕನಕನಾಯಕ ವ್ಯಾಸರಾಯರ ಆಶ್ರಯವನ್ನು ಸೇರಿ ಕನಕದಾಸರಾದರು. ೩. ಅವರು ಕುರುಬರೆಂಬುದರಲ್ಲಿ ಸಂಶಯವೆ ಇಲ್ಲ. ೪. ಎಲ್ಲ ಮತಗಳ ಸಾರವನ್ನರಿತುಕೊಂಡು, ಮಾನವಮತವನ್ನಪ್ಪಿಕೊಂಡ ಸಂತವರೇಣ್ಯರವರು. ೫. ಶ್ರೀ ಸಾಮಾನ್ಯರ ಜೀವನದ ಮೇಲಣ ಅವರ ಪ್ರಭಾವ ಅಚ್ಚಳಿಯದಿದೆ.

೩

ತನ್ನ ಕೃತಿಗಳಲ್ಲಿ ಕರ್ತೃ ಲೀನವಾಗಿರುತ್ತಾನೆಂದು ನಿತ್ಯಸತ್ಯ. ಆದರೆ ಕನ್ನಡ ಕವಿಗಳು ಸಾಮಾನ್ಯವಾಗಿ ತಮ್ಮ ಜೀವನ ವಿಚಾರವನ್ನು ಸುವ್ಯಕ್ತವಾಗಿ ಸೂಚಿಸುವ ಸಂಪ್ರದಾಯ ಬೆಳೆದುಬಂದಿಲ್ಲ. ಅದರಲ್ಲಿಯೂ ಕನಕದಾಸರಂಥ ಸಂತಕವಿಗಳು ಹಾಗೂ ವೈರಾಗ್ಯ ಶಿರೋಮಣಿಗಳು ಆತ್ಮವೃತ್ತಾಂತವನ್ನು ಹೇಳಿಕೊಳ್ಳುವುದೇ ಅಸಂಭವ. ಬಾಲ್ಯದಿಂದಲೇ ಅವರ ಜೀವನ ಧಾರ್ಮಿಕ ಆಧ್ಯಾತ್ಮಿಕ ಮತ್ತು ಸಾಹಿತ್ಯಿಕ ಸಂಸ್ಕಾರಗಳಿಂದ ಪುಷ್ಟಿಪಡೆದು, ಊರ್ಧ್ವಮುಖವಾಗಿ ವಿಕಾಸಗೊಳ್ಳುತ್ತಿತ್ತೆಂಬುದು ಅವರ ಕೃತಿಗಳಿಂದ ಸ್ಪಷ್ಟವಾಗುತ್ತದೆ. ಮೊದಲು ಅವರನ್ನು ಅಕರ್ಷಿಸಿದ್ದು ಶ್ರೀರಾಮಾನುಜ ಮತವೆಂಬುದು ಸುಸ್ಪಷ್ಟ. ನರಸಿಂಹಸ್ತವ ಅವರ ಆದಿಗ್ರಂಥವಿರಬಹುದು. ತಮ್ಮ ಯೌವನಾರಂಭದಲ್ಲಿಯೇ ಅಂಕುರಿಸಿದ ಮೋಹನತರಂಗಿಣಿಯ ರಚನೆ, ಅವರ ಲೌಕಿಕ ವ್ಯವಹಾರಗಳ ನಡುವೆ ಕುಂಟುತ್ತ ತೆವಳುತ್ತ ಮುಂದುವರಿದು, ಯುದ್ಧದಲ್ಲಿ ಗಾಯವಡೆದನಂತರ, ರಾಮಾನುಜಮತದ ಪ್ರಭಾವದಲ್ಲಿರುವಾಗಲೇ ಕದರಮಂಡಲಿಗಿಯಲ್ಲಿ ಮುಕ್ತಾಯಗೊಂಡಿರುವ ಸಾಧ್ಯತೆಯಿದೆ. ರಾಮಾನುಜ ತಾತಾಚಾರ್ಯರಿಗೆ ಅವರು ಸಲ್ಲಿಸಿರುವ ಗೌರವವೂ, ಕದರಮಂಡಲಿಗಿ ಹನುಮಂತನ ಸ್ತುತಿಯೂ ಈ ಮಾತಿಗೆ ಸಾಕ್ಷಿಯಾಗಿವೆ. ಸತಿಪತಿಯರ ಸಂವಾದ ರೂಪದಲ್ಲಿ ಮೊತ್ತ ಮೊದಲು

ರಚನೆಗೊಂಡ ಕಾವ್ಯ ಮೋಹನತರಂಗಿಣಿ. ವಿಜಯನಗರದ ವೈಭವದ ಬಗ್ಗೆ ಹೆಮ್ಮೆಯಿದ್ದ, ಯೌವನದ ಶೃಂಗಾರ ವೀರರಸಗಳು ಭೋರ್ಗರೆಯುತ್ತಿದ್ದ ಕಾಲದಲ್ಲಿ ಕಟ್ಟಿದ ಮಹಾಕಾವ್ಯವದು.

ಕನಕದಳದಲಿ ಬಂದನೆಂದರೆ ಫೌಜು । ಕನಕು ಮನಕಾಗುವುದು
ದೊರೆತನವ ಬಿಡಿಸಿ ಸುಸ್ಥಿರಮಾರ್ಗ ತೋರಿಸಿ । ನರಮಾತ್ರದವನ ನೆನೆದೆ ಹರಿಯೇ

ಕನಕನ ಕಲಿತನಕ್ಕೆ ಈ ಪದ್ಯವೇ ನಿದರ್ಶನ. ಶ್ರೋತೃವೃಂದದ ಪ್ರತಿನಿಧಿಯಂತಿರುವ ಹೆಣ್ಣನ್ನು ಸುಜ್ಞಾನವಧೂಟಿ. ಬಲ್ಮೊಲೆಯ ಮೋಹನರನ್ನೆ, ಎನ್ನ ಭಾಗ್ಯನಿಧಿ, ಬಡನಡುವಿನ ಚೆನ್ನ, ಮಡದಿಮಣಿ, ಮೊದಲಾದ ಜೇನ್ನುಡಿಗಳ ಮೂಲಕ ಸಂಬೋಧಿಸುತ್ತಾನೆ ; ಅವಳು ಸಹ ಕವಿಯನ್ನು ಇನಿಯ, ಜೀವಿತೇಶ, ಮನದನ್ನ ಮೊದಲಾದ ಸುಮಧುರ ನಲ್ಮಾತುಗಳಿಂದ ಕರೆಯುತ್ತಾಳೆ. ಈ ಕಾವ್ಯವನ್ನೋದಿದಾಗ ಕವಿ ಶೃಂಗಾರಪ್ರಿಯನೆಂದೂ, ಶ್ರೋತೃ ಅವನ ಮಡದಿಯಾಗಿರಬೇಕೆಂದೂ ವೇದ್ಯವಾಗುತ್ತದೆ. ಯುದ್ಧ ಮುಗಿಯುವುದರೊಳಗಾಗಿ ಅವಳು ತೀರಿಕೊಂಡಿದ್ದರೆ, ಕವಿಯನ್ನು ಪ್ರೀತಿಸಿದ್ದ ನಾಯಕಮನೆತನದ ಹೆಣ್ಣು ಅವರನ್ನು ಹೋದೆಡೆಯಲ್ಲೆಲ್ಲ ಹಿಂಬಾಲಿಸಿರಬೇಕೆಂದೂ, ಈ ಕೃತಿಯಲ್ಲಿ ಕವಿ ಅವಳನ್ನು ಸ್ಮರಿಸಿರಬೇಕೆಂದೂ ಊಹಿಸಬಹುದಾಗಿದೆ, ನಾಯಕ ಜನಾಂಗಕ್ಕೂ ಕವಿಗೂ ಇರುವ ನಂಟಿನ ಗಂಟು ಇದೊಂದೇ ಎಂದು ತೋರುತ್ತದೆ. ಹರಿಹರಾಭೇದವನ್ನೊಪ್ಪಿಕೊಂಡಿರುವ ಕವಿಯ ಮನಸ್ಸಿನಲ್ಲಿ ಅವನ ಪೂರ್ವಜರು ಅನುಸರಿಸುತ್ತಿದ್ದ ಶೈವಧರ್ಮದ ಗುಂಗು ಸ್ಪಂದಿಸುತ್ತಿರಬೇಕೆಂದು ತೋರುತ್ತದೆ.

ವ್ಯಾಸರಾಯರಿಂದ ಉಪದೇಶ ಸ್ವೀಕರಿಸಿದನಂತರ ವೈರಾಗ್ಯಪರರಾಗಿ, ಪರಿವ್ರಾಜಕ ಯತಿಯಾಗಿ ತೀರ್ಥಯಾತ್ರಾಕ್ಷೇತ್ರಗಳನ್ನು ಸಂದರ್ಶಿಸುತ್ತಿದ್ದಾಗ, ಬೇಲೂರಿನ ಚೆನ್ನಕೇಶವನ ಆರಾಧನೆಯಲ್ಲಿ ಬಹುದಿನಗಳನ್ನು ಕಳೆಯುತ್ತಿದ್ದ ಸಂದರ್ಭದಲ್ಲಿ, ಕಾಗಿನೆಲೆಯಲ್ಲಿ ನೆಲೆನಿಂತನಂತರ ಉಳಿದ ಕಾವ್ಯಗಳನ್ನು ಕೀರ್ತನೆಗಳನ್ನೂ ರಚಿಸಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಬಾಡದಾದಿಕೇಶವ, ಕಾಗಿನೆಲೆಯಾದಿ ಕೇಶವ, ವರಪುರ ಚೆನ್ನಿಗರಾಯ ಮೊದಲಾದ ಅಂಕಿತಗಳೂ, ಹರಿಪಾರಮ್ಯದ ಹಾಗೂ ಮಧ್ವಮತದ ಸೂಚನೆಗಳೂ ಈ ಮಾತಿಗೆ ಸಾಕ್ಷಿಯಾಗಿವೆ. ವಿಜಯನಗರದ ಪತನಾನಂತರ ನಳಚರಿತ್ರೆ

೪. ಸತಿಯನ್ನು ಸಂಬೋಧಿಸಿ ರಚಿಸಿದ ಮೊದಲ ಕೃತಿ ಛಂದೋಂಬುಧಿಯೆಂಬುದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ರಚಿತವಾಗಿದೆಯೆಂಬುದಂತು ಖಚಿತ. ಆ ಪತನದ ಬಗೆಗಿನ ಕವಿಯ ವಿಷಾದ ಆ ಕಾವ್ಯದಲ್ಲಿ ಹೊಳಲುಗೊಡುತ್ತದೆ; ಅದಕ್ಕಿಂತ ಮಿಗಿಲಾಗಿ ಅವನ ಶೃಂಗಾರಪ್ರಜ್ಞೆ ಶುದ್ಧ ಪ್ರೇಮದ ಬಂಗಾರವಾಗಿ, ಕೇವಲ ಸೌಂದರ್ಯಾಸ್ವಾದನೆಯಾಗಿ ಪರಿಣಮಿಸಿರುವುದನ್ನು ಕಾಣಬಹುದಾಗಿದೆ. ಊರ್ಧ್ವಮುಖವಾಗಿ ಚಲಿಸುವ ಜೀವ ಅನುಭವಿಸಿದ ತೊಳಲಾಟ ಹೋರಾಟ. ಅರಿಷಡ್ವರ್ಗಾದಿಗಳನ್ನು ಗೆಲ್ಲಲು ಅದು ಪಟ್ಟ ಶ್ರಮ, ಸಂಸಾರ ಭ್ರಮನಿರಸನ, ಸಾಧಕನ ಸಾಧನಾಮಾರ್ಗದಲ್ಲಿ ಅಡ್ಡಬರುವ ಸೈತಾನಿಕ ವಿಘ್ನಗಳು ಹರಿಭಕ್ತಿ ಸಾರದಲ್ಲಿ ಗುಂಪು ಗುಂಪಾಗಿ ಬರುತ್ತವೆ. ಮುಮುಕ್ಷುವಿನ, ಸಂತನ, ಅನುಭಾವಿಯ ಬದುಕಿಗೆ ಕೀರ್ತನೆಗಳ ಜತೆಗೆ ಅದೂ ಒಂದು ಕನ್ನಡಿಯಾಗಿದೆ. 'ನಾವು ಕುರುಬರು' ಎಂಬ ಕೀರ್ತನೆ ರೂಪಕ ಮಾತ್ರವಲ್ಲ; ಅವರ ಆತ್ಮಕಥನವನ್ನೊಳಗೊಂಡ, ಅವರ ಕುಲದ ಮೂಲವನ್ನು ಸೂಚಿಸುವ ರಚನೆಯೆಂದೇ ಹೇಳಬಹುದು. ನಮ್ಮ 'ದೇವರೊ ಬೀರಯ್ಯ' ಎನ್ನುವ ಮಾತು ಸಂದೇಹನಿವಾರಕ ಮಂತ್ರವಾಗಿದೆ.

೪

ಕೊಡೇಕಲ್ ಬಸವಣ್ಣನ ಸಂಪ್ರದಾಯಕ್ಕೂ ಕನಕದಾಸರ ಜೀವಿತಕ್ಕೂ ನಂಟು ಗಂಟುಹಾಕುವ ಹವಣು ಇತ್ತೀಚೆಗೆ ನಡೆದಿದೆ.[5] ಆ ಪ್ರಬಂಧದಲ್ಲಿ ಬರುವ ವಿವರಗಳ ವಿವೇಚನೆ ಇಲ್ಲಿ ಅಪ್ರಸ್ತುತ. 'ಕನಕದಾಸರಿಗೆ ಮುಂಡಿಗೆಯೊಂದರ ಅರ್ಥಬಿಡಿಸುವ ವ್ಯಕ್ತಿಯ ಅಗತ್ಯ ಬಿತ್ತು. ಕೊಡೇಕಲ್ಲ ಬಸವಣ್ಣನ ಹಿರಿಯಮಗ ರಾಚಪ್ಪಯ್ಯ ಇದನ್ನು ಬಿಡಿಸಬಲ್ಲರೆಂದು ಕಿವಿಗೆ ಬಿದ್ದು ಕನಕದಾಸ ಕೊಡೇಕಲ್ಲಿಗೆ ಬಂದ' ಎಂಬುದು ಜನವದಂತಿಯಿಂದ ತಿಳಿಯುವ ಮುಖ್ಯಸಂಗತಿ. ಇದರ ಮೇಲಿಂದ 'ಕೊಡೇಕಲ್ ಬೇಡರ ಪಾಳಯಕ್ಕೆ ಬಾಡರ ಬೇಡರ ಪಾಳಯಗಾರ ಕನಕದಾಸನ ಸೈನ್ಯಶಕ್ತಿಯನ್ನು ತಂದುಕೊಳ್ಳಲು ಇರಬಹುದು' ಎಂದು ಊಹಿಸಲಾಗಿದೆ. ಜನವದಂತಿಗೂ ಈ ಊಹೆಗೂ ಏನೇನೂ ಸಂಬಂಧವಿರಲಾರದೆಂದು ಮೇಲುನೋಟಕ್ಕೆ ಸ್ಪಷ್ಟವಾಗುತ್ತದೆ. ಜನವದಂತಿಯನ್ನು ಹಿಗ್ಗಾಮುಗ್ಗಾ ಎಳೆದಂತಿದೆ.

ಅದೇನೇ ಇರಲಿ, ನಾಯಕ ಎನ್ನುವ ಅಡ್ಡ ಹೆಸರಿನ ಮೇಲೆ

೫. 'ಕೊಡೇಕಲ್ಲ ಬಸವಣ್ಣ ಸಂಪ್ರದಾಯ ಮತ್ತು ಕನಕದಾಸರು' ಎಂಬ ಡಾ. ಬಸವಲಿಂಗ ಸೊಪ್ಪಿಮಠ ಅವರ ಲೇಖನ ಓದಿ.

ಕನಕದಾಸರನ್ನು ಬೇಡರ ಜಾತಿಗೆ ಲಗತ್ತಿಸಲು ಪ್ರಯತ್ನ ನಡೆದಂತೆ ಕಾಣುತ್ತದೆ. ಆದರೆ ಈ ಅಡ್ಡ ಹೆಸರು ಸೈನ್ಯದ ಒಂದು ಪದವಿಯನ್ನು ಸೂಚಿಸುತ್ತಿದ್ದು ಪ್ರಾಯಶಃ ಸೈನ್ಯದಲ್ಲಿ ಸೇವೆ ಸಲ್ಲಿಸಿದ ಬ್ರಾಹ್ಮಣರ ಒಕ್ಕಲಿಗರ ಮತ್ತು ವೀರಶೈವರ ಕೆಲವು ಮನೆತನಗಳಿಗೆ ಅಂಟಿಕೊಂಡು ಬಂದಿದೆಯೆಂಬುದನ್ನು ಮರೆಯುವಂತಿಲ್ಲ. ಗೌಡ ಎಂಬ ಅಡ್ಡಹೆಸರನ್ನು ಹೊಂದಿದವರೆಲ್ಲ ಒಕ್ಕಲಿಗರಲ್ಲ. ಅಯ್ಯರ್ ಅಥವಾ ಅಯ್ಯಂಗಾರ್ ಎಂಬ ವಿಶೇಷಣವಿಲ್ಲದವರೆಲ್ಲ ಬ್ರಾಹ್ಮಣೇತರರಲ್ಲ.

ಕುರುಬರು ವೈಷ್ಣವರಲ್ಲವೆಂಬ ಮಾತಿದೆ. ಉತ್ತರ ಕರ್ನಾಟಕದಲ್ಲಿ ಹೇಗೋ ಗೊತ್ತಿಲ್ಲ. ದಕ್ಷಿಣ ಕರ್ನಾಟಕದಲ್ಲಂತು ವಿಷ್ಣು–ನಾರಾಯಣರನ್ನು ಪೂಜಿಸುವ ಕುರುಬ ಮನೆತನಗಳಿವೆ. ಲಾಂಛನಧಾರಿಗಳಲ್ಲದ ಬ್ರಾಹ್ಮಣೇತರರಲ್ಲಿ ಹರಿಹರರ ಭೇದವಿಲ್ಲ. ಅವರು ಎಲ್ಲ ದೇವರನ್ನು ಸಮನಾಗಿ ಕಾಣುತ್ತಾರೆ. ಶಿವನ ಸಂತತಿಯ ದೇವರುಗಳು ಅವರ ಮನೆದೇವರಾಗಿದ್ದರೂ, ಮಕ್ಕಳಿಲ್ಲದಾಗ, ಕಷ್ಟಕ್ಲೇಶಗಳು ಅಡಸಿದಾಗ ತಿರುಪತಿ ತಿಮ್ಮಪ್ಪನಿಗೂ ಮೊರೆ ಸಲ್ಲಿಸುತ್ತಾರೆ ; ಕೊನೆಗೆ ಮುಸ್ಲಿಮ್ ಸಂತರಿಗೂ ಕಾಣಿಕೆ ಅರ್ಪಿಸುತ್ತಾರೆ. ಕನಕರು ದಾಸರಾದ ಮಾತ್ರಕ್ಕೆ ಕುರುಬರಲ್ಲ ಎನ್ನುವ ಮಾತು ಸತ್ಯ ದೂರವಾದುದು.

'ಕನಕದಾಸರ ಮೂಲಸ್ಥಳ ?' ಎಂಬ ತಮ್ಮ ಲೇಖನದಲ್ಲಿ, ಕನಕದಾಸರು ಕುರುಬರೆಂದೂ, ಅವರು ಹಾಸನ ಜಿಲ್ಲೆಯವರೆಂದೂ ಹ.ಕ. ರಾಜೇಗೌಡರು ಪ್ರತಿಪಾದಿಸಿದ್ದಾರೆ. ಕನಕದಾಸರು ಹಾಸನ ಜಿಲ್ಲೆಯವರೆಂಬುದಕ್ಕೆ ಅವರು ಕೊಡುವ ಮುಖ್ಯ ಕಾರಣಗಳಿವು : ೧. ಕನಕದಾಸರ ಒಂದು ಅಂಕಿತ ಬೇಲೂರು ಚೆನ್ನಕೇಶವ ೨. ರಾಗಿ ಉತ್ತರ ಕರ್ನಾಟಕಕ್ಕೆ ಅಪರಿಚಿತ. ೩. ದಕ್ಷಿಣ ಕರ್ನಾಟಕದ ಗಾದೆ ನುಡಿಗಟ್ಟುಗಳ ಮತ್ತು ಗ್ರಾಮ್ಯ ಪದಗಳ ಬಳಕೆ. ಅವರ ವಾದಕ್ಕೆ ಹೀಗೆ ಉತ್ತರಕೊಡಬಹುದು : ಕನಕದಾಸರ ಅಂಕಿತ ಬೇಲೂರು ಚೆನ್ನಕೇಶವ ಮಾತ್ರವಲ್ಲ, ಬಾಡದ ಕಾಗಿನೆಲೆಯ ಆದಿಕೇಶವನೂ ಉಂಟು. ಪರ್ಯಟನ ಕಾಲದಲ್ಲಿ ಅವರು ಬೇಲೂರಿನಲ್ಲಿ ಹೆಚ್ಚುದಿನ ತಂಗಿರಬಹುದು. ಅವರು ತಮ್ಮ ವಿರಕ್ತ ಜೀವನದ ಬಹುಭಾಗವನ್ನು ದಕ್ಷಿಣ ಕರ್ನಾಟಕದಲ್ಲಿ ಕಳೆದಿರುವ ಸಂಭವವಿರುವುದರಿಂದ ಅಲ್ಲಿಯ ನುಡಿಗಟ್ಟುಗಳು ಅವರ ಭಾಷೆಯಲ್ಲಿ ಸೇರಿಕೊಂಡಿರಬೇಕು. ಅಷ್ಟೇ ಅಲ್ಲ, ಗೌಡರು ಉದಾಹರಿಸಿರುವ ನುಡಿಗಟ್ಟುಗಳಲ್ಲಿ ಹಲವು ಎರಡು ಪ್ರದೇಶಗಳಿಗೂ ಸಮಾನವಾಗಿವೆ. ಧಾರವಾಡ ಜಿಲ್ಲೆಯ ಹಳ್ಳೂರಿನ ಭೂ ಸಂಶೋಧನೆಯಲ್ಲಿಯೇ ರಾಗಿ ಸಿಕ್ಕಿದ್ದು ಮಾತ್ರವಲ್ಲ, ಉತ್ತರ ಕರ್ನಾಟಕದ ಕೆಲವು ಕಡೆ ಈಗಲೂ ರಾಗಿ ಬೆಳೆಯುತ್ತಾರಲ್ಲದೆ, ಅಂಬಲಿಯನ್ನು ದೇವರಿಗೆ

ನೈವೇದ್ಯವೆಂದು ಸಲ್ಲಿಸುತ್ತಾರೆ. ಅನೇಕ ಮನೆಗಳಲ್ಲಿ ರಾಗಿಯ ಅಂಬಲಿಯನ್ನು ಈಗಲೂ ಬಳಸುತ್ತಾರೆ.

೫

ಜನವದಂತಿ ಜಾನಪದ ಸಾಹಿತ್ಯ ಮತ್ತು ಸಾಹಿತ್ಯ ಕೃತಿಗಳನ್ನನುಲಕ್ಷಿಸಿ, ಕನಕದಾಸರ ಜೀವನ ಚರಿತ್ರೆಯನ್ನು ಸಂಕ್ಷೇಪಿಸಿ ಪುನರ್‍ರಚಿಸಬಹುದಾಗಿದೆ. ಅವರು ಹದಿನೈದನೆಯ ಶತಮಾನದ ಅಂತ್ಯಭಾಗದಲ್ಲಿ ಜನಿಸಿ, ಹದಿನಾರನೆಯ ಶತಮಾನದ ಎಂಟನೆಯ ದಶಕದಲ್ಲಿ ಸಾಯುಜ್ಯಪದವಿ ಹೊಂದಿರಬೇಕೆಂದು ತೋರುತ್ತದೆ. ಕೃಷ್ಣದೇವರಾಯ ಪಟ್ಟಾಭಿಷಿಕ್ತನಾದದ್ದು ೧೫೦೯ರಲ್ಲಿ ; ೧೫೨೯ರಲ್ಲಿ ಅವನು ತೀರಿಕೊಂಡ. ಅಂದರೆ ೧೫೦೯ರ ವೇಳೆಗೆ ಕನಕದಾಸರಿಗೆ ಕನಿಷ್ಠಪಕ್ಷ ೨೦ ವರ್ಷ ವಯಸ್ಸಾಗಿರಬೇಕು. ಪುರಂದರರಿಗೂ ಅವರಿಗೂ ಎಂಟೊಂಬತ್ತು ವರ್ಷ ಅಂತರವಿದ್ದಿರಬೇಕು. ಒಟ್ಟಿನಲ್ಲಿ ಕನಕದಾಸರು ೧೪೮೯ರ ಹೊತ್ತಿಗೆ ಹುಟ್ಟಿರಬೇಕೆಂದು ನಿರ್ಣಯಿಸಬಹುದು. ಅವರ ಜನ್ಮಸ್ಥಳ ಬಾಡ ; ತಂದೆ ಬೀರಪ್ಪ, ತಾಯಿ ಬಚ್ಚಮ್ಮ ; ಕುಲದೇವರು ಬೀರಯ್ಯ ; ತಿರುಪತಿ ತಿಮ್ಮಪ್ಪನ ಅನುಗ್ರಹದಿಂದ ಹುಟ್ಟಿದ ಅವರ ಹುಟ್ಟು ಹೆಸರು ತಿಮ್ಮಣ್ಣ. ದಣಾಯಕನಾದ ತಂದೆಯ ಜತೆಯಲ್ಲಿ ಅವರು ಆಗಾಗ್ಗೆ ಹಂಪೆ, ಆನೆಗೊಂದಿಗಳಿಗೆ ಹೋಗಿಬರುತ್ತಿದ್ದಾಗ, ಅವರಿಗೆ ತಾತಾಚಾರ್ಯರ ಪರಿಚಯವೊದಗುತ್ತದೆ. ಆ ಕಾಲಕ್ಕಿನ್ನು ವ್ಯಾಸರಾಯರು ವಿಜಯನಗರಕ್ಕೆ ಬಂದಿರಲಿಲ್ಲ. ಅವರ ಕೀರ್ತಿ ಇನ್ನೂ ವ್ಯಾಪಕವಾಗಿ ಪಸರಿಸಿರಲಿಲ್ಲ. ತಂದೆ ತನ್ನ ಅಂತಸ್ತಿಗನುಗುಣವಾದ ವಿದ್ಯಾಬುದ್ಧಿಗಳು ಮಗನಿಗೂ ದೊರೆಯಲು ಏರ್ಪಾಡುಮಾಡುತ್ತಾನೆ. ವಿಜಯನಗರದ ಏಳ್ಗೆಯಲ್ಲಿ ಅವರಿಗೆ ಹೆಮ್ಮೆ ಆಸಕ್ತಿಗಳುಂಟಾಗುತ್ತವೆ. ವೀರೋಚಿತ ವಿದ್ಯೆಯನ್ನು ಕಲಿಯುವಾಗಲೇ ಅವರ ಗಮನ ಕಾವ್ಯ ಅಧ್ಯಾತ್ಮಾಭ್ಯಾಸಗಳ ಕಡೆಗೂ ಹರಿಯುತ್ತದೆ.

ಬಾಡದ ಆದಿಕೇಶವ ದೇವಾಲಯ ಬಹಳ ಹಳೆಯದಿರಬೇಕು. ಬೀರಪ್ಪನ ಕಾಲಕ್ಕಾಗಲೇ ತುಂಬ ಪ್ರಸಿದ್ಧಿ ಪಡೆದಿದ್ದು, ಹತ್ತಿರದ ದೂರದ ಭಕ್ತರು ವಿಶೇಷೋತ್ಸವಗಳಲ್ಲಿ ಅಲ್ಲಿ ಸಂದಣಿಸುತ್ತಿದ್ದಿರಬೇಕು. ರಂಗನಾಥ ಎನ್ನುವುದು ಆದಿಕೇಶವನ ಮತ್ತೊಂದು ಹೆಸರು. ಬೀರಯ್ಯ ಕೇಶವರಲ್ಲಿ ಅವರಿಗೆ ತಾರತಮ್ಯಭಾವವಿರಲಿಲ್ಲ. ತಾತಾಚಾರ್ಯರ ಶಿಷ್ಯರಾದನಂತರ ಅವರ ವಿಶೇಷ ಲಕ್ಷ್ಯ ಕೇಶವನ ಕಡೆಗೆ ಹರಿದಿರಬೇಕು. ಎಳವೆಯಲ್ಲಿಯೇ ಕಾಗಿನೆಲೆ ಕುಮ್ಮೂರು

ಮೊದಲಾದ ಪ್ರದೇಶಗಳಲ್ಲಿ ಅಡ್ಡಾಡಿರಬೇಕು ; ಕದರಮಂಡಲಿಗಿಯ ಹನುಮ ಅವರ ಮನವನ್ನು ಸೆಳೆದಿರಬೇಕು.

ತಂದೆಯ ಮರಣಾನಂತರ ಅವರು ದಣಾಯಕನ ಆಡಳಿತವನ್ನು ವಹಿಸಿಕೊಂಡು, ವಿಜಯನಗರ ಸಾಮ್ರಾಜ್ಯಕ್ಕೆ ರಕ್ಷೆಯಾಗಿ, ಅದರ ಅಭ್ಯುದಯಕ್ಕೆ ಮೀಟುಗೋಲಾಗಿ, ತಮ್ಮೆಲ್ಲ ಶಕ್ತಿ ಸಂಪತ್ತನ್ನು ವ್ಯಯಿಸುತ್ತಾರೆ. ಕೃಷ್ಣದೇವರಾಯನ ಕಾಲದಲ್ಲಿ ವ್ಯಾಸರಾಯರ ಕೃಪೆಗೆ ಪಾತ್ರರಾದನಂತರ ಅವರ ಮನಸ್ಸು ಅಧ್ಯಾತ್ಮಸಾಧನೆ ಹಾಗೂ ಸಾಹಿತ್ಯರಚನೆಗಳ ಕಡೆಗೆ ವಾಲುತ್ತದೆ.[6] ಮುಕ್ತಿಶ್ರೀ ಕೈಬೀಸಿ ಕರೆದಾಗ ವೀರಶ್ರೀ ಕಡೆಗೆ ಸಹಜವಾಗಿಯೇ ಅವರ ಉಪೇಕ್ಷೆ ಬಲಿಯುತ್ತದೆ. ಮೇಲಿಂದ ಮೇಲೆ ಮುಸ್ಲಿಮ್ ದಾಳಿಗೆ ಮೈಗೊಡಬೇಕಾಗಿದ್ದ ಸಂದರ್ಭದಲ್ಲಿ, ಬಾಡದ ಅಳಿವಿನ ಮುನ್ ಸೂಚನೆ ಕಂಡು ಬಂದಾಗ, ಅವರು ಆದಿಕೇಶವನ ವಿಗ್ರಹವನ್ನು ಕಾಗಿನೆಲೆಗೆ ಸಾಗಿಸಿ, ವ್ಯಾಸರಾಯರ ಸಮ್ಮುಖದಲ್ಲಿ ಅದನ್ನು ಪ್ರತಿಷ್ಠಾಪಿಸುತ್ತಾರೆ ಕೊಟ್ಟಕೊನೆಗೆ ಮುಸ್ಲಿಮರ ದಾಳಿಯನ್ನೆದುರಿಸಿ, ಸೋತು, ಗಾಯಗೊಂಡು, ತಿರುಪತಿಗೆ ಹೋಗುವ ದಾರಿಯಲ್ಲಿ ಕದರ ಮಂಡಲಿಗಿ ಸೇರುವ ಹೊತ್ತಿಗೆ ನಿತ್ರಾಣರಾಗುತ್ತಾರೆ. ಅಲ್ಲಿಯ ಹನುಮ ದೇವಾಲಯುದಲ್ಲಿ ನಿಂತು, ಗುಣಮುಖರಾಗುತ್ತಿದ್ದಂತೆ, ಮೋಹನ ತರಂಗಿಣಿಯನ್ನು ರಚಿಸುತ್ತಾರೆ. ಅಷ್ಟರಲ್ಲಿ ಹಡೆದ ತಾಯಿ, ಕೈಹಿಡಿದ ಸತಿ ತೀರಿಕೊಳ್ಳಲಾಗಿ ಅವರ ವೈರಾಗ್ಯಭಾವ ತೀವ್ರವಾಗಿ, ಹಂಪೆಯ ಕಡೆಗೆ ಮುಖವಾಗುತ್ತಾರೆ. ವ್ಯಾಸರಾಯರ ಸನ್ನಿಧಿಯಲ್ಲಿ ಸಂಪೂರ್ಣ ಮನಶ್ಶಾಂತಿಯನ್ನು ಪಡೆದದ್ದಲ್ಲದೆ, ಭಕ್ತಿ ವಾಹಿನಿಯಲ್ಲಿ ಮುಳುಗುತ್ತಾರೆ. ಅಧ್ಯಾತ್ಮ ಸಾಧನೆಯಲ್ಲಿ ಸಿದ್ಧಿಪಡೆಯುತ್ತಾರೆ. ಗುರುಗಳ ಪರೀಕ್ಷೆ ಪ್ರಶಂಸೆಗಳಿಗೆ ಪಾತ್ರರಾಗುತ್ತಾರೆ.

ಗುರುಗಳು ತೀರಿಕೊಂಡನಂತರ ಅವರು ಪರಿವ್ರಾಜಕ ಸನ್ಯಾಸಿಯಾಗಿ ತಿರುಪತಿ, ಮುಳಬಾಗಿಲು, ಮಳೂರು, ಶ್ರೀರಂಗಪಟ್ಟಣ, ಸೋಸಲೆ, ಮೇಲುಕೋಟೆ, ಬೇಲೂರು. ಉಡುಪಿ ಮೊದಲಾದ ಪವಿತ್ರ ಕ್ಷೇತ್ರಗಳಲ್ಲಿ ಸಂಚರಿಸುತ್ತ, ಕೀರ್ತನೆಗಳನ್ನು ಕಟ್ಟಿ ಹಾಡುತ್ತ, ಇಷ್ಟವಿದ್ದಷ್ಟು ದಿನ ತಂಗಿರುತ್ತ, ತಮ್ಮ ಪ್ರಭಾವಕ್ಕೆ ಬಿದ್ದ ಜನರಿಗೆ ಉಪದೇಶಮಾಡುತ್ತ ಮುಂದುವರಿಯುತ್ತಾರೆ. ನಳಚರಿತ್ರೆ ರಾಮಧಾನ್ಯ ಚರಿತ್ರೆಗಳ ರಚನೆ ಪರ್ಯಟನ ಕಾಲದಲ್ಲಿ ವಿಶೇಷವಾಗಿ

---

6. ಕನಕದಾಸರು ವ್ಯಾಸರಾಯರನ್ನು ಮೊದಲು ಎಲ್ಲಿ ಭೇಟಿಮಾಡಿದರೊ ಗೊತ್ತಿಲ್ಲ ; ವಿಜಯನಗರದಲ್ಲಿಯೆ ? ಸೋಸಲೆಯಲ್ಲಿಯೆ ? ತಿರುಪತಿಯಲ್ಲಿಯೆ ?

ಬೇಲೂರಿನಲ್ಲಿ ಸಾಗಿರಬೇಕು. ಉಡುಪಿಯಲ್ಲಿದ್ದಾಗ ವಾದಿರಾಜರ ಶ್ಲಾಘನೆಗೆ ಪಾತ್ರರಾಗಿ, ಸೊರಬ ಸಾಗರಗಳ ಹಾದಿಯಲ್ಲಿ ಮತ್ತೆ ಕಾಗಿನೆಲೆ ಸೇರಿ, ಅದನ್ನೇ ತಮ್ಮ ಮುಂದಿನ ಜೀವನದ ಕೇಂದ್ರವನ್ನಾಗಿ ಮಾಡಿಕೊಳ್ಳುತ್ತಾರೆ. ಚಿಕ್ಕಂದಿನಲ್ಲಿ ತಮ್ಮನ್ನು ಪ್ರೀತಿಸಿದ್ದ ನಾಯಕರ ಹುಡುಗಿಯೂ ದಾಸರ ಮಹಿಮೆಗೆ ಸೋತು, ಕಾಗಿನೆಲೆಗೆ ಬಂದು ಅವರ ಅನುಗ್ರಹಕ್ಕಾಗಿ ಕಾತರಿಸುತ್ತ, ವೈರಾಗ್ಯಪರಳಾಗಿ, ಅವರ ಸೇವೆಯಲ್ಲಿ ನಿರತಳಾಗುತ್ತಾಳೆ. ತಮಗೆ ಮುಕ್ತಿ ದೊರೆತರೆ ಸಾಲದು, ಲೋಕದ ಸಮಸ್ತರಿಗೂ ಲೇಸೊದಗಲೆಂದು, ಅವರ ಗಮನವನ್ನು ದೈವತ್ವದ ಕಡೆಗೆ ಸೆಳೆಯಲೆಂದು ಕುಮ್ಮೂರಿನಲ್ಲಿ ತಿಮ್ಮಕೇಶವನನ್ನು[7] ಇಂಗಳಗೊಂದಿಯಲ್ಲಿ ಬೇಲೂರಿನ ಚೆನ್ನಕೇಶವನ ಮಾದರಿಯ ವಿಗ್ರಹವನ್ನು ಸಂಸ್ಥಾಪಿಸುತ್ತಾರೆ. ತಾವು ಬದುಕಿರುವತನಕ, ಕೈಕಾಲುಗಳಲ್ಲಿ ತ್ರಾಣವಿರುವತನಕ ಅವರೇ ಈ ಮೂರು ವಿಗ್ರಹಗಳನ್ನೂ ಪೂಜಿಸುತ್ತಾರೆ. ಅವರ ಅವಸಾನಾನಂತರ ಅವರ ಶಿಷ್ಯರೇ– ಅವರ ವಂಶೀಯರಂತು ಅಲ್ಲವೇ ಅಲ್ಲ. ಏಕೆಂದರೆ ಅವರ ಜ್ಞಾತಿಗಳಾಗಲಿ, ದೂರದ ಬಂಧುಗಳಾಗಲಿ ಬಾಡದಿಂದ ಕಾಗಿನೆಲೆಗೆ ಬರಲಿಲ್ಲ–ಆ ದೇವತೆಗಳ ಪೂಜಾಕಾರ್ಯವನ್ನು ವಹಿಸಿಕೊಳ್ಳುತ್ತಾರೆ. ತಮ್ಮ ಸಂತಜೀವನ ಉದ್ದಕ್ಕೂ ಎದುರಿಸಿದ ಕಷ್ಟಕಾರ್ಪಣ್ಯಗಳನ್ನು, ಮನಸ್ಸನ್ನು ಕಾಡಿದ ಸಾಂಸಾರಿಕ ಕ್ಲೇಶಗಳನ್ನು, ಅವರಲ್ಲವನ್ನೂ ಮೆಟ್ಟಿನಿಂತ ಅನುಭಾವದ ಪರಾಕಾಷ್ಠೆಯನ್ನು ಒಳಗೊಂಡ ಹರಿಭಕ್ತಿಸಾರ ರಚನೆಯಾದದ್ದೇ ಕಾಗಿನೆಲೆಯಲ್ಲಿ. ಅವರು ಶ್ರೀವೈಷ್ಣವ ವೈಷ್ಣವ ಸಂಪ್ರದಾಯಗಳನ್ನು ತಿರಸ್ಕರಿಸಲಿಲ್ಲ ; ಆದರೆ ಅಲ್ಲಿಯೇ ನಿಲ್ಲದೆ, ಯಾವ ಮತಕ್ಕೂ ಅಂಟಿಕೊಳ್ಳದೆ, ಎಲ್ಲವನ್ನು ಮೀರಿ, ಮಾನವಮತವನ್ನು ಬೆಳಕಿಗೆ ತಂದ, ಹರಿಹರ ತಾರತಮ್ಯವನ್ನು ತಿರಸ್ಕರಿಸಿದ ಮಹಾಚೇತನ ಅವರದು.

ಇತಿಹಾಸಕ್ಕಿಂತ ಐತಿಹ್ಯ,[8] ಕಾನೂನಿಗಿಂತ ಜಾನಪದ ಸಂಪ್ರದಾಯ, ಕಟ್ಟುಕತೆಗಳಿಗಿಂತ ಅನೂಚಾನವಾಗಿ ಬಂದಿರುವ ಆಚರಣೆ ವಿಶ್ವಾಸಾರ್ಹವೆಂದೇ ಹೇಳಬೇಕು. ಕನಕದಾಸರಿಗೆ ಕುಲವೆಂದರಾಗದು. ಆದರೆ ಕೇವಲ ಅಧ್ಯಯನದ ದೃಷ್ಟಿಯಿಂದ ಅವರ ಕುಲವನ್ನು ಗುರುತಿಸುವ ಪ್ರಯತ್ನ ನಡೆಸುವಾಗ ಹಿಂದಿನಿಂದ

---

೭. ಕಾಗಿನೆಲೆ ಇಂಗಳಗೊಂದಿಯಲ್ಲಿರುವ ವಿಗ್ರಹಗಳು ಸುಂದರವಾಗಿವೆ. ತಿಮ್ಮಕೇಶವನ ವಿಗ್ರಹಕ್ಕೆ ಬದಲಾಗಿ ಕಲ್ಲೊಂದು ಈಗ ಪೂಜೆಗೊಳ್ಳುತ್ತಿದೆ. ಇದನ್ನು ಕನಕದಾಸರು ಪ್ರತಿಷ್ಠಾಪಿಸಿದರೆ ಎಂಬ ವಿಷಯದಲ್ಲಿ ಸಂದೇಹವುಂಟಾಗುತ್ತದೆ.

೮. ಅವರ ಬಗ್ಗೆ, ಹುಟ್ಟಿ ಜೀವಂತವಾಗಿರುವ ಐತಿಹ್ಯಗಳು ಶೂದ್ರಯತಿಯೊಬ್ಬರ ಹಿರಿಮೆಗೆ ಸಾಕ್ಷಿಯಾಗಿವೆ.

ನಡೆದು ಬಂದಿರುವ ಕುರುಬರ ಆಚರಣೆ ಸಂಪ್ರದಾಯಗಳನ್ನು ಕಡೆಗಣಿಸಲಾಗದು. ಹೋಮರ್ ತೀರಿಕೊಂಡಾಗ, ಅವನು ತಮ್ಮವನೆಂದು ಸಪ್ತರಾಷ್ಟ್ರಗಳು ಹೋರಾಟ ನಡೆಸಿದವೆಂಬ ಕತೆ ರೂಢಿಯಲ್ಲಿದೆ. ಅಂತೆಯೇ ಕನಕದಾಸರು ತೀರಿಕೊಂಡ ಐನೂರು ವರ್ಷಗಳ ನಂತರ ಅವರು ತಮ್ಮವರೆಂದು ಕುರುಬರು, ನಾಯಕರು, ಬಣಜಿಗರು ಹೇಳಿಕೊಳ್ಳುತ್ತಿರುವುದು ಸಂತೋಷದ ಹಾಗೂ ಹೆಮ್ಮೆಯ ವಿಷಯ ; ಅದು ಕನಕದಾಸರ ಹಿರಿಮೆಗೆತ್ತಿದ ನಂದಾ ದೀಪವೆಂದೇ ಹೇಳಬಹುದು. ನಿಜಕ್ಕೂ ಅವರು ಯಾವ ಕುಲದವರೂ ಅಲ್ಲ, ಮಾನವ ಕುಲದವರು, ಅವರು ನಮ್ಮವರು, ಕನ್ನಡಿಗರು, ಭಾರತೀಯರು, ವಿಶ್ವಮಾನವರು !

# ಕನಕದಾಸರ ವರ್ಣನೆಗಳು

**ಆರ್. ಸಿ. ಹಿರೇಮಠ**

ವರ್ಣನೆ ಎಂಬ ಪದ ರೂಢಿಯಲ್ಲಿ ಬಣ್ಣಿಸುವುದು, ವಿವರವಾಗಿ ಹೇಳುವುದು ಎಂಬರ್ಥದಲ್ಲಿ ಬಳಕೆಯಾಗುತ್ತಿದೆ. ಆದರೆ ಕಾವ್ಯದಲ್ಲಿ ಅದು ವಿಶಿಷ್ಟಾರ್ಥದಲ್ಲಿ ಬಳಕೆಯಾಗುತ್ತಿದೆ. ಮಹಾಕಾವ್ಯದಲ್ಲಿ ಆವಶ್ಯಕವೆನಿಸಿದ ಉದಧಿ, ಪುರ ಮೊದಲಾದ ಅಷ್ಟಾದಶವರ್ಣನೆಗಳ ವಿಷಯ ಸರ್ವಶ್ರುತ. ವರ್ಣನೆ ಎಂಬ ಪದ ಮೂಲತಃ ಕಾವ್ಯ ಸೃಷ್ಟಿಗೆ ಸಂಬಂಧಪಟ್ಟಿದೆ. ವರ್ಣನೆಯೆಂದರೆ ಒಂದು ವಸ್ತುವನ್ನು ಕೇಳುಗರ ಮನಂಬುಗುವ ರೀತಿಯಲ್ಲಿ ವಿವರಿಸುವುದು: ಅಂದರೆ ಬಣ್ಣಿಸುವುದು, ಇಲ್ಲವೆ ಅಲಂಕಾರಮಯವಾಗಿ ಹೇಳುವುದು. ಬಣ್ಣಿಸುವುದನ್ನು ಕಾವ್ಯ ಪರಿಭಾಷೆಯಲ್ಲಿ ವೈಚಿತ್ರ್ಯವೆಂದೂ 'ವೈಚಿತ್ರ್ಯಂಚಾಲಂಕಾರಃ' ಎಂದೂ ಕರೆಯುವರು. ಒಂದು ದೃಷ್ಟಿಯಲ್ಲಿ ಕಾವ್ಯವೆಂದರೆ ಅಲಂಕಾರ, ವ್ಯಾಘ್ರಕ್ಕೆ ಅದರ ಚರ್ಮಪಟ್ಟಿಕೆಗಳೆಷ್ಟು ಅವಶ್ಯವೋ ಅಷ್ಟೂ ಕಾವ್ಯಕ್ಕೆ ಅಲಂಕಾರ ಅವಶ್ಯ. 'ಕಿವಿಯಿಂ ಬಗೆವುಗುವೊಡೆ ಕೊಂಕುವೆತ್ತ ನುಡಿಯೆ ಪೋಕುಂ' ಎಂದು ಹೇಳುವಲ್ಲಿ ನಾವು ಹೇಳುವ ಮಾತು ಹೃದಯಸ್ಪರ್ಶಿಯಾಗಬೇಕಾದರೆ ಅದು ಕೊಂಕು ನುಡಿಯಾಗಿರಬೇಕು. ಕೊಂಕುನುಡಿಯೆಂದರೆ ವಕ್ರೋಕ್ತಿ ; ಅಂದರೆ ಸಾಮಾನ್ಯ ಮಾತಿನ ರೀತಿಯಲ್ಲಿ, ವಿಶಿಷ್ಟವಾಗಿ ಅಂದರೆ ಅಲಂಕಾರಯುತವಾಗಿ ಹೇಳುವುದು: ಧ್ವನಿಪೂರ್ಣವಾಗಿ ಹೇಳುವುದು. 'ಧ್ವನಿಯೆಂಬುದಲಂಕಾರಂ' ಎಂದು ಕವಿರಾಜಮಾರ್ಗದಲ್ಲಿ ಹೇಳಿರುವುದು ಈ ಅರ್ಥದಲ್ಲಿ. ಧ್ವನಿಯೆಂಬುದು ಕಾವ್ಯದ ಒಂದು ಮಹತ್ವದ ಪ್ರಸ್ಥಾನವಾಗಿ ಮುಂದೆ ನೆಲೆಗೊಂಡಿದ್ದರೂ ಅಲಂಕಾರ ಪ್ರಸ್ಥಾನದ ದೃಷ್ಟಿಯಲ್ಲಿ ಅದೂ ಒಂದು ವಕ್ರೋಕ್ತಿ ಅಂದರೆ ಅಲಂಕಾರ ಕಾವ್ಯಕ್ಕೆ ಜೀವ ಜೀವಾಳವಾಗಿರುವ ರಂಜಕತ್ವ ಗುಣ. 'ರೀತಿರಾತ್ಮಾ ಕಾವ್ಯಸ್ಯ' ಎಂದು ಹೇಳಿರುವುದು ಈ ಅರ್ಥದಲ್ಲಿ.

ಕಾವ್ಯಕ್ಕೆ ಅಲಂಕಾರ ಅವಶ್ಯ ; ಅಲಂಕಾರಗಳಲ್ಲಿ 'ವರ್ಣಕಂ ಕತೆಯೊಳೊಡಂಬಡೆಯೆ ಪೇಳ್ವೊಡೆ ಪಂಪನೆ ಪೇಳ್ಗುಂ' ಎಂಬ ಉಕ್ತಿಯಲ್ಲಿರುವ

ಅರ್ಥವೆಂದರೆ ಕತೆಯಲ್ಲಿ ಅಲಂಕಾರವನ್ನು ಅಂದರೆ ರಂಜಕತ್ವಗುಣವನ್ನು ಹಾಸುಹೊಕ್ಕಾಗುವಂತೆ ಪ್ರವಹಿಸುವುದು. ವರ್ಣಕ, ವರ್ಣನೆ ಇವೆರಡರ ಮೂಲಧಾತು 'ವರ್ಣ' ಎಂಬುದು. ವರ್ಣ ಎಂದರೆ ಬಣ್ಣ, ರಂಜನೆ. ವರ್ಣನೆ ಇವೆರಡರ ಮೂಲಧಾತು 'ವರ್ಣ' ಎಂಬುದು. ವರ್ಣ ಎಂದರೆ ಬಣ್ಣ ರಂಜನೆ, ವರ್ಣನೆ ಎಂದರೆ ರಂಜನೆ. ಕಾವ್ಯದ ಮೂಲಾರ್ಥದಲ್ಲಿ ಅಲಂಕಾರ, ಧ್ವನಿ ಎಂದು ಮುಂತಾಗಿ. ಇತ್ತೀಚಿನ ಅಲಂಕಾರ ಶಾಸ್ತ್ರದಲ್ಲಿ ವರ್ಣನೆ, ಅಲಂಕಾರ, ಧ್ವನಿ ಎಂಬ ಪದಗಳು ವಿಶಿಷ್ಟವಾಗಿ ಬಳಕೆಯಾಗಿರುವುದರಿಂದ ಸಹೃದಯರ ಮನಸ್ಸಿನಲ್ಲಿ ಈ ಅರ್ಥ ಬೇರೊಂದಿರುವುದು ಸಹಜ. ಆದರೆ ನಾವು ಅರ್ಥೈಸುತ್ತಿರುವುದು ಕಾವ್ಯಸೃಷ್ಟಿಯ ಮೂಲಕಲ್ಪನೆಯಲ್ಲಿ ; ವರ್ಣನೆಯೆಂದರೆ ಅಲಂಕಾರವೆಂಬುದೊಂದು ನೂತನ ಪ್ರಮೇಯವನ್ನು ಇಲ್ಲಿ ಸಾದರ ಪಡಿಸಲು ಇಚ್ಛಿಸುತ್ತೇವೆ.

ಕನಕದಾಸರು ಕನ್ನಡದ ಶ್ರೇಷ್ಠಕವಿಗಳಲ್ಲಿ ಒಬ್ಬರು. ಅವರು ಜನ್ಮತಃ ಕವಿಗಳು ಕಾವ್ಯವನ್ನೊರೆಯುವುದು ಅವರಿಗೆ ಸಹಜ ಗುಣವಾಗಿದೆ. ವಿಜಯನಗರ ಸಾಮ್ರಾಜ್ಯದಲ್ಲಿ ಮಾಂಡಲಿಕರಾಗಿ, ಸೇನಾಧಿಪತಿಯಾಗಿ ವೃತ್ತಿಸಾಗಿಸುತ್ತಿದ್ದರೂ ಪ್ರವೃತ್ತಿಯಲ್ಲಿ ಅವರು ಕವಿಗಳಾಗಿರುವುದು ನಿಜ. ಅಂತೆಯೇ ಎಂತಹ ದುರ್ಧರ ಪ್ರಸಂಗವಿದ್ದರೂ ಕಾವ್ಯ ಅವರನ್ನು ಕೈಬಿಟ್ಟಿಲ್ಲ ; ಅವರು ಕಾವ್ಯವನ್ನು ಮರೆತಿಲ್ಲ ನಳಚರಿತ್ರೆ, ರಾಮಧಾನ್ಯಚರಿತ್ರೆ, ಮೋಹನ ತರಂಗಿಣಿ ಮುಂತಾದ ಕಾವ್ಯರಚನೆಯಾಗಿರುವುದು ಈ ಅವಸ್ಥೆಯಲ್ಲಿ ಎಂದು ಹೇಳಬಯಸುತ್ತೇವೆ. ಮುಂದೆ ಪ್ರಪಂಚದ ಬಗೆಗೆ ಒಂದು ಬಗೆಯ ಜಿಗುಪ್ಸೆ ಹುಟ್ಟಿ ವ್ಯಾಸರಾಯರಿಂದ ದೀಕ್ಷೆಪಡೆದು ದಾಸರಾದ ಮೇಲೆ ಕೀರ್ತನೆಗಳನ್ನು ಬರೆದು ದಾಸರಲ್ಲಿ ಅತಿಶ್ರೇಷ್ಠರೆನಿಸಿದುದು ನಿಜ. ಒಟ್ಟಿನಲ್ಲಿ ಕನಕದಾಸರು ಖಂಡಕಾವ್ಯಗಳನ್ನು ಬರೆಯಲಿ, ಮಹಾಕಾವ್ಯವನ್ನು ರಚಿಸಲಿ, ಕೀರ್ತನೆಗಳನ್ನು ಹಾಡಲಿ ಎಲ್ಲೆಲ್ಲಿಯೂ ಕಾವ್ಯ ಕಣ್ದೆರೆದಿದೆ. ಅಲಂಕಾರ ವರ್ಣನೆ ಅವರ ಕಾವ್ಯಗುಣವಾಗಿದೆ.

ಕಣ್ಣೊಡೆದಂತೆ ಕಂಗೆಟ್ಟು ನೋಡಿದರೆನ್ನ
ಚಿಣ್ಣ ಮಗ್ಗುಲೊಳಿಲ್ಲದಿರಲು
ಸುಣ್ಣ ಕಲ್ಲುಡಿಗಟ್ಟಿ ಮಡುವಿನೊಳಿಳಿದಂತೆ
ಬಣ್ಣ ಗುಂದಿದೆ ಕೇಳು ತಾಯೇ
(ಮೋಹನ ತರಂಗಿಣಿ, ೪, ೮೯)

ಇಲ್ಲಿ ಕಣ್ಣೊಡೆದಂತೆ ನೋಡು, ಸುಣ್ಣಕಲ್ಲುಡಿಗಟ್ಟಿ ಮಡುವಿನಲ್ಲಿಳಿದಂತೆ

ಈ ಪ್ರಯೋಗದಲ್ಲಿ ವರ್ಣನೆಯ ಅಂದರೆ ಕಾವ್ಯಸೌಂದರ್ಯವನ್ನು ಅನುಭವಿಸಿ ಅರಿಯಬೇಕು.

ಮಗು ಮಲಗಿದಲ್ಲಿಯೇ ಮಾಯವಾದುದನ್ನು ಕಂಡು ಮಡದಿ ಹಂಬಲಿಸುವಾಗ 'ಕೃಷ್ಣ ನನ್ನ ನೋಡಿ ನೀ ಮಱೆ' (ಮೋ.ತ. ४–೯೧) ಎಂದು ಸಾಮಾನ್ಯೋಕ್ತಿಯಲ್ಲಿ ಅಸಾಮಾನ್ಯ ಕಾವ್ಯವನ್ನು ಹುಟ್ಟಿಸುತ್ತಾರೆ ಕನಕದಾಸರು.

> ತುಱುಗೆವೆಗಣ್ಣ ನೀರಿಂಗೆ । ಹರಿಗೋಲ ಹಾಯ್ಕಿಸಬೇಡೊ (ಮೋ.ತ. ४–೮೬)
>
> ವಾರಿಜಗಂಧಿ ನಿನ್ನಯ ಕಾಂತ ತಿರುಗದ
>
> ದಾರಿಯ ಹೋದಾತ ಬಹನೆ..........(ಮೋ. ೯–೧೮)
>
> ಸತ್ತವರೊಡನೆ ಸತ್ತವರುಂಟೆ...............(ಮೋ. ತ. ೧೦–೨೨).

ಹೀಗೆ ವರ್ಣನೆ, ಅಲಂಕಾರ, ಕನಕದಾಸರಿಗೆ ಉಸುರಿನಷ್ಟು ಸಹಜವಾಗಿದೆ. ಎತ್ತ ನೋಡಿದಡತ್ತತ್ತ ಇಂತಹ ಉಕ್ತಿಗಳು ಕನಕದಾಸರ ಕಾವ್ಯವೆಂಬ ವೃಕ್ಷಕ್ಕೆ ಎಲೆಯಾಗಿ, ಶಾಖೆಯಾಗಿ, ಹೂವಾಗಿ, ಕಾಯಾಗಿ, ಹಣ್ಣಾಗಿ ಕಂಗೊಳಿಸುತ್ತವೆ.

ಇನ್ನೂ ಸಾಮಾನ್ಯಾರ್ಥಕ್ಕೆ ಬಂದರೆ ವರ್ಣನೆಯೇ ಕನಕದಾಸರಿಗೆ ಕತೆಯಾಗಿ ಪರಿಣಮಿಸಿದೆ. ಮೋಹನ ತರಂಗಿಣಿಯಲ್ಲಿ ಕತೆ ಕಡಿಮೆ ವರ್ಣನೆ ಹೆಚ್ಚು. 'ಶಂಬರಾಸುರನ ವಧೆಯಿಂದ 'ಬಾಣಾಸುರನ ಭೋಗಲೀಲೆ' ಯವರೆಗಿನ ೧೩ ಸಂಧಿಗಳ ಸುಮಾರು ೯೦೦ ಸಾಂಗತ್ಯಗಳಲ್ಲಿ ಬರುವ ಕಥಾನಕ ಏನೂ ಇಲ್ಲ. ಅಲ್ಲಿ ಕೇವಲ ರತಿಯ ವಿವಾಹ, ಜಲ ಕ್ರೀಡೆ, ಮನೆತುಂಬಿಸುವುದು, ಗರ್ಭದಾನ, ಅನಿರುದ್ಧ ಜನನ, ನಗರಶೋಧ, ಬೇಟೆ, ಶೋಣಿತಪುರ, ಬಾಣಾಸುರನ ಶಿವಪೂಜೆ, ಬಾಣಾಸುರನ ಭೋಗಲೀಲೆ–ಈ ಘಟನೆಗಳು ಮಾತ್ರ ಬರುತ್ತವೆ. ಆದರೆ ಇಲ್ಲಿ ಕಾವ್ಯವನ್ನು ಹಿಗ್ಗಿಸಿದುದು ಕತೆಯ ಕೊಂಡಿಯನ್ನು ಕೊಂಡೊಯ್ದುದು ಆತನ ವರ್ಣನೆಗಳು. ಆ ವರ್ಣನೆಗಳಲ್ಲಿ ಸಾಮಯಕತೆ ಇದ್ದರೂ ಆತನ ಪ್ರತಿಭೆಯ ಮಿಂಚಿನಿಂದ ಆ ವರ್ಣನೆಗಳೆಲ್ಲ ರಸಾರ್ದ್ರಮಡುವಾಗಿವೆ. ಆತನ ವರ್ಣನೆಗಳನ್ನು ಮೂರು ಬಗೆಯಲ್ಲಿ ವಿಭಜಿಸಬಹುದು.

೧. ಶೃಂಗಾರರಸಪ್ರಧಾನವಾದ ವರ್ಣನೆಗಳು

೨. ವೀರರಸಪ್ರಧಾನವಾದ ವರ್ಣನೆಗಳು

೩. ಕರುಣ–ಭಕ್ತಿರಸಪ್ರಧಾನವಾದ ವರ್ಣನೆಗಳು

ಪರಂಪರೆಯ ಹಾದಿಯಲ್ಲಿ ಕಾವ್ಯವನ್ನೊರೆದರೂ ತನ್ನ ಪ್ರತಿಭೆಯ ಬಗೆಗೆ ಕವಿಗೆ ಅಭಿಮಾನವಿದೆ. ಈ ಕಾವ್ಯವನ್ನು ಕಂಡು ಕರುಬುವವರನ್ನು ಕುರಿತು 'ಹಸ್ತವಿಲ್ಲದ ಗೀಜಗ ಗೂಡ ಕಟ್ಟಿದಡೆ ಕೋಡಗ ಕಂಡು ಸೈರಿಸದು' (ಮೋ. ತ. ೧. ೨೩) ಎಂದು ಹೇಳುತ್ತಾನೆ. ಈ ಕಾವ್ಯದ ತನಿರಸ 'ರಸಿಕರ ಕರ್ಣವಪೊಕ್ಕು ಎಸೆವ ಪುಳಕದೊಸಗೆಯಿತ್ತು ಶಿರವ ತೂಗಿಸುವುದು' (೧. ೨೫). ಪ್ರತಿಸಂಧಿಯ ಆರಂಭದಲ್ಲಿ ಬರುವ ಇಂತಹ ಆತ್ಮ ಪ್ರಸಂಸೆಯ ಪದ್ಯಗಳು ಸಾಂಪ್ರದಾಯಿಕವಾಗಿ ಅತ್ಯುಕ್ತಿಗಳೆನಿಸಿದರೂ ಕವಿಯ ಅಭಿಮಾನದಲ್ಲಿ ಸತ್ಯಾಂಶವಿಲ್ಲದಿಲ್ಲ. ಅವನ ಕಾವ್ಯವನ್ನೋದಿ ರಸಿಕರು ತಲೆದೂಗುತ್ತಾರೆ. ಅಹುದಹುದೆಂದು ಆತನ ಕಾವ್ಯವನ್ನು ಮತ್ತೆ ಮತ್ತೆ ಓದುತ್ತಾರೆ. ಮೋಹನತರಂಗಿಣಿಯಲ್ಲಿ ರಸಿಕರ ಮನವನ್ನು ಸೆಳೆಯುವ ಮೋಹಕ ಶಕ್ತಿಯಿದೆ.

ಮೋಹನ ತರಂಗಿಣಿಯನ್ನು ಸಿಂಗರಿಸಿರುವುದು ಶೃಂಗಾರದ ತೆರೆಗಳು.

ಕಾವ್ಯಪ್ರಾರಂಭದಲ್ಲಿ ಹಕ್ಕಿಗಳನ್ನು ಹಾರಿಸುವ ಪಾಮರಿಯರ ವರ್ಣನೆ ಬರುತ್ತಿದೆ. ಕೀರಗಳು ಪಾಮರಿಯರ ದಿಟ್ಟಿಗಣ್ಣುರುಳ್ಗೊನೆಯೆಂದು ಕೊನೆಗೆ ಪಾರಿದವಂತೆ (೨. ೪೪)

ನೆತ್ತಿಯೊಳ್ ಪಾಳುವ ಗಿಳಿವಿಂಡು ಪಚ್ಚೆಯ
ಸತ್ತಿಗೆಯಂತೆ ಮಂಡಲಿಸೆ (೨. ೪೬)

ಪ್ರಕೃತಿಯನ್ನು ಬಹುಸೂಕ್ಷ್ಮವಾಗಿ ನಿರೀಕ್ಷಿಸುವ ಹಾಗೂ ಅನುಭವವನ್ನು ಸುಂದರವಾದ ಕಟ್ಟುಗಳಲ್ಲಿ ಕಂಡರಿಸುವ ಶಕ್ತಿ ಕನಕದಾಸರಿಗೆ ವಿಶೇಷವಾಗಿದೆ.

ಗಂಧಶಾಳಿಯವನ ಕಳಿತು ಗೋವಿಂದ ತನ್ನ ಪೀತಾಂಬರವನ್ನು ಭೂಮಿಗೆ ಹಾಸಿದಂತೆ ಇದ್ದಿತೆಂದು ಕವಿ ಸುಂದರವಾಗಿ ನಿರೂಪಿಸುತ್ತಾನೆ (೨. ೫೨) ಈ ವರ್ಣನೆಗಳಲ್ಲಿ ಶೃಂಗಾರ ತಲೆಯೆತ್ತಿ ನಿಂತರೆ ಮುಂದಿನ ವರ್ಣನೆಗಳಲ್ಲಿ ಅದರ ಮೆರೆವಣಿಗೆ ನಡೆದಂತಿದೆ. ಉದಾಹರಣೆಗೆ ದ್ವಾರಕಾಪುರದಲ್ಲಿ ಗಟ್ಟಿಮಗುಳ್ಚುವ ಸ್ತ್ರೀಯರ ವರ್ಣನೆ ನೋಡಬಹುದು. ಸಡಿಲಿದ ಮುಡಿ, ಬೆಮರ್ವನಿಗಳು ತೀವಿ ತೊಟ್ಟಿಡುವ ಹಣೆ.... (೩. ೧೪) ಇಲ್ಲಿಯ ಸೂಕ್ಷ್ಮ ನಿರೀಕ್ಷಣೆ. ಶುದ್ಧ ಶೃಂಗಾರ ಮೆಚ್ಚುವಂತಹವು. ದ್ವಾರಕೆಯ ಒಂದು ಬೀದಿಯಲ್ಲಿದ್ದ ಬಳೆಗಾರನ ಶೃಂಗಾರವನ್ನು ನೋಡಿರಿ :

ಕಳೆವೆತ್ತ ವಾರನಾರಿಯರ ಕನ್ನಿಕೆಯರ
ಮೊಳೆಮೊಲೆಗಳ ನೋಡಿ ನಗುತ

ಎಳೆವೆರಲ್ಗಳ ಚಿಟುಕೊತ್ತಿಕೈದೊಡಿಸುವ
ಬಳೆಗಾರರಿರ್ದರಳ್ತಿಯಲಿ............. (೩–೧೩)

ಶೃಂಗಾರ ರಾಜ ಮಹಾರಾಜರಿಗೆ ಮಾತ್ರ ಮೀಸಲಾಗಿಲ್ಲ. ನಿಜವೆಂದರೆ ಅವರದು ಕೃತ್ರಿಮ ಶೃಂಗಾರ. ಬೀದಿಯ ಬಳೆಗಾರನ ಶೃಂಗಾರವೋ ಅವನ ದೈನಂದಿನ ವ್ಯವಹಾರಕ್ಕೆ ಸಂಬಂಧಪಟ್ಟುದು. ಆ ಕನ್ನಿಕೆಯರ ಬೆರಳುಗಳನ್ನು ಚಿಟುಕೊತ್ತಿ ಬಳೆಯಿಡುವ ದೃಶ್ಯವನ್ನು ಕವಿ ಬಹಳ ಚೆನ್ನಾಗಿ ಚಿತ್ರಿಸಿದ್ದಾನೆ.

ಇನ್ನು ಋತುವರ್ಣನೆಗಳು ಬರುತ್ತವೆ. ಅವು ಶೃಂಗಾರ ಪ್ರಧಾನವಾಗಿರುವುದನ್ನು ಓದಿ ಅರಿಯಬೇಕು. ಮಳೆಗಾಲ ಆರಂಭವಾಗುತ್ತದೆ. ಮೇಘಗರ್ಜನೆ ಕೇಳಿ ಬರುತ್ತದೆ. ಶೃಂಗಾರದ ಸೋನೆ ಸುರಿಯುವುದನ್ನು ಅವು ಧ್ವನಿಸುತ್ತವೆ.

ಮೇಘ ಗರ್ಜಿಸಿದುವು ದೇವದುಂದುಭಿಗಳೂ
ಹೊಡೆದಂತೆ–(೪–೩೨)

ಗುಡುಗು ಮಿಂಚು ಕೂಡಿಯೇ ಬರಬೇಕಲ್ಲವೇ.

ಮೇಘವೆಣ್ಣು । ಸಂಚಲದೃಗು ಸನ್ನೆಯ ಮಾಡಿದಂದದಿ
ಮಿಂಚಡರಿತು ನಭಸ್ಥಳದಿ (೪. ೩೩)

ಈ ಮಳೆಗಾಲದಲ್ಲಿ, ಅತ್ಯಂತ ಆರ್ದ್ರವಾಗಿದೆ ಕವಿಯ ಕಾವ್ಯದ ಕಣ್ಣು. ಅದು ಶೃಂಗಾರ ರಸದಲ್ಲಿ ಮುಳುಗಿ ಹೋಗಿದೆ.

ಇಷ್ಟರಲ್ಲಿ ಬರುತ್ತಿದೆ ಬಿರುಗಾಳಿ :

ತುರುಗಿದ ಕಾಯಿಪಣ್ಗಳ ಸಾಲವೃಕ್ಷವ । ಮುರಿದು ದೂಳಿಯ ಚೆಲ್ಲಿಕೊಳುತ
ಸುರಿವ ಸೊಂಡಿಲ ನೀರ್ಗರೆಯುತ ಬಂದುದು । ಬಿರುಗಾಳಿ ಮದಗಜದಂತೆ
(೪–೩೬)

ಸನ್ನಿವೇಶಕ್ಕೆ ತಕ್ಕಂತೆ ಪ್ರತಿಮೆಗಳನ್ನು ನಿರ್ಮಿಸುವ ಜಾಣ್ಮೆ ಕನಕದಾಸರಿಗಿದೆ. ಸುತ್ತು ಮಣ್ಣನ್ನು ಎರಚುತ್ತ ನೀರನ್ನು ಸುರಿಸುತ್ತ ಬರುವ ಬಿರುಗಾಳಿಯನ್ನು ಮದವೇರಿ ರಭಸದಿಂದ ಓಡುವ ಮತ್ತಗಜಕ್ಕೆ ಹೋಲಿಸಿದ್ದಾನೆ.

ಈ ಆಲಿಕಲ್ಲ ಮಳೆ.

ನರ್ತಿಪ ನವಿಲ ನಾಟ್ಯಕೆ ಮೆಚ್ಚಿ ಪುರುಹೂತ । ತೆತ್ತೀಸಕೋಟಿ ನಿರ್ಜರರು
ಮುತ್ತಿನ ತ್ಯಾಗವ ಕೊಟ್ಟಂತೆ ಆಲಿಕಲ್। ಬಿತ್ತಿಕ್ಕಿಬಿರ್ದುವುರ್ವಿಯಲ್ಲಿ (೪–೩೮)

ನವಿಲು ನರ್ತನಮಾಡುತ್ತಿದೆ. ಮೇಘಗರ್ಜನೆಯನ್ನು ಕೇಳಿ ಆ ನೃತ್ಯಕ್ಕೆ ಮೆಚ್ಚಿ ದೇವೇಂದ್ರ ಹಾಗೂ ೩೩ ಕೋಟಿ ದೇವತೆಗಳು ಹಾರವನ್ನು ಕಾಣಿಕೆಯಾಗಿ

ಕೊಡುತ್ತಿರುವರೆಂದು ಆಣೆಕಲ್ಲು ವರ್ಣಿಸುವಲ್ಲಿ ಔಚಿತ್ಯವಿದೆ.

ಮತ್ತೆ ಬಂದಿತು ಮಾಗಿ

ಈ ಋತುವರ್ಣನೆಗಳು ಸಾಂಪ್ರದಾಯಕ ಮಹಾಕಾವ್ಯದಲ್ಲಿ ಅಷ್ಟಾದಶ ವರ್ಣನೆಗಳ ಅಂಗವಾಗಿ ಬರಲೇಬೇಕು. ಹಾಗೆ ಸಂಪ್ರದಯಬದ್ಧನಾಗಿ ಕವಿ ಅವನ್ನು ತನ್ನ ಕಾವ್ಯದಲ್ಲಿ ಅಳವಡಿಸಿದ್ದಾನೆ. ಆದರೆ ಅಲ್ಲಿಯ ನೈಜ ಚಮತ್ಕೃತಿ ಕಾವ್ಯ ಮೆಚ್ಚುವಂತಹವು.

ಪಗಲಾಣ್ಮ ನಡುನಡುಗಿದ ಹುತಾಶನ ಬೇರೆ
ನೆಗಳಿದ ಪ್ರತಿಗಿಚ್ಚು ತನಗೆ
ಮಗಳ ಕೊಟ್ಟವನ ಭಂಗಿಸಿ ರುದ್ರ ಹಳೆಯಾನೆ
ದೊಗಲುಟ್ಟ ಹಿಮದುಪಟಳಕೆ (೪. ೪೬)

ಬಿಸಿಲಿನ ಕೇಂದ್ರವಾದ ಸೂರ್ಯ ನಡನಡನಡುಗಿದ. ಅಗ್ನಿ ಕೈಕಾಸಿಕೊಳ್ಳಲು ಬೇರೆ ಕಿಚ್ಚನ್ನು ನಿರ್ಮಿಸಿಕೊಂಡಿತು. ಇಲ್ಲಿಯ ಕಲ್ಪನೆ ಅತಿ ಸುಂದರವಾಗಿದೆ.

ಜಾರಿತು ಮಹದಾದ ಶೀತ ಬೇಸಗೆ ಮೈದೋರಿತು ನಸುಶೈತ್ಯವನು
ಬೀರಿತು ತಂಗಾಳಿ ಮಾಂದಳಿರೆಸರೀಂಟಿ ಚೀರಿತ ಕಲಕಂಠ ನಿಚಯ (೪.೪೮)

ಶೃಂಗಾರದಂತೆ ಪ್ರಿಯವಾದುದು ಕನಕದಾಸರಿಗೆ ಪ್ರಕೃತಿ. ಮಾಗಿ ಕುಳಿತೊಡನೆ ಕೋಗಿಲೆ ಕೂಗು ಕೇಳಿ ಬರುತ್ತಿದೆ. ಅದು ಮಾಮರದಲ್ಲಿ ಕುಳಿತು ಪ್ರಕೃತಿಗೀತ ಹಾಡುತ್ತದೆ, ಅದಕ್ಕೆ ಕವಿಯ ಮನ ಸೋಲುತ್ತದೆ.

ಮುಂದೆ ಶ್ರೀಕೃಷ್ಣನ ವನವಿಹಾರ, ರುಕ್ಮಿಣಿಯ ಗರ್ಭದಾನ ಪ್ರಸಂಗಗಳನ್ನು ಕವಿ ಸಾಮಯಕ ರೀತಿಯಲ್ಲಿ ವರ್ಣಿಸುತ್ತಾನೆ (೪. ೫೦–೬೫). ಪುತ್ರದೋಹದ, ಬಾಲಲೀಲೆಗಳು ಭಾರತೀಯ ಸಾಹಿತ್ಯದ ವೈಶಿಷ್ಟ್ಯಗಳು. ಅವನ್ನು ಕವಿ ನವೀನರೀತಿಯಲ್ಲಿ ಬಣ್ಣಿಸುತ್ತಾನೆ. ಶಕ್ತಿವಂತನಾದ ಕವಿಯ ಪ್ರತಿಭೆಯಲ್ಲಿ ಹಳೆಯ ಪ್ರತಿಮೆಗಳೂ ಹೊಸ ಹೊಳಪನ್ನು ಪಡೆಯುತ್ತವೆಂಬುದು ಕನಕದಾಸರ ಕಾವ್ಯಗಳಿಂದ ಸ್ಪಷ್ಟವಾಗುತ್ತದೆ.

ರುಕ್ಮಿಣಿದೇವಿಗೆ ಮನ್ಮಥನು ಮಗನಾಗಿ ಜನಿಸುತ್ತಾನೆ. ಒಂದು ದಿನ ಶಿಶು ತಾಯ ಮಡಿಲಲ್ಲಿ ಮಲಗಿರುವಂತೆಯೇ ಮಾಯವಾಗುತ್ತದೆ. ಆಗ ತಾಯ ದುಃಖಕ್ಕೆ ಮಿತಿಯಿಲ್ಲದಾಗುತ್ತದೆ. ಕರುಣರಸ ಕೋಡಿವರಿಯುತ್ತದೆ.

ಎಣ್ಣೆಯನ್ನು ತಲೆಗೆ ಉಣ್ಣಿಸಿಲ್ಲ ; ನೊರೆವಾಲು ಬೆಣ್ಣೆಯನ್ನು ಉಣಿಸಿಲ್ಲ; ಕಣ್ಣಿವೆ ಪಳಂಚುವಂತೆ ನೋಡಿಲ್ಲ ; ಮೊಲೆಹಾಲು ತೊರೆದು ಹೊರ ಹೊಮ್ಮುತ್ತಿದೆ ; ಕಣ್ಣೀರ ಕೋಡಿ ಹರಿಯುತ್ತಿದೆ ; ಚಿತ್ತಕ್ಕೆ ಸ್ವಾಸ್ಥ್ಯವಿಲ್ಲ. ನೀನೆದುರು

ಬಂದು ಮೈದೋರು ಮಗನೇ, ಅಯ್ಯೋ ಕಂದಾ ಕಂದಾ ಎಂದು ಕರೆಯುತ್ತಲಿದ್ದೇನೆ. ಓ ಎನ್ನಲಾಗದೇ ಅಯ್ಯ, ನಿನ್ನ ಸಿರಿಮೊಗವನ್ನು ಕಾಣದೆ ಎಂತಿರಲಿ, ನನಗೆ ಕಷ್ಟವನ್ನುಂಟುಮಾಡಲು ಹುಟ್ಟಿಹೋದೆಯಾ ; ಹಾಲಿಗಾಗಿ ಹಂಬಲಿಸಲಿಲ್ಲ; ಅಂಬೆಗಾಲಿಟ್ಟು ನಡೆಯಲಿಲ್ಲ, ದಟ್ಟಡಿಯಿಟ್ಟವನಲ್ಲ, ಎಲ್ಲಿ ಹೋದೆ ಮಗೂ. ಬ್ರಹ್ಮ ನಿನ್ನ ಸಹೋದರ ಆತ ನಿನಗೆ ಈ ಬರಹ ಬರೆದನೇ ? ಇಂತಹ ವರ್ಣನೆ ತಾಯ ಹೃದಯವನ್ನು ಎತ್ತಿ ಇಟ್ಟಂತಿದೆ. ಕನಕದಾಸರ ಕಾವ್ಯಶಕ್ತಿ ಸ್ಫುಟವಾಗಿದೆ.

ಕರುಣದಂತೆ ಭಕ್ತಿರಸವನ್ನೂ ಕನಕದಾಸರು ಮನಂಬುಗುವಂತೆ ನಿರೂಪಿಸುತ್ತಾರೆ. ಉದಾಹರಣೆಗೆ ಬಾಣಾಸುರ. ಶಿವಪೂಜೆಯ ಸನ್ನಿವೇಶನ್ನು ನೋಡಬೇಕು ಬಾಣಾಸುರನು ಶಿರದೆಡೆಯಲ್ಲಿದ್ದ ಶಿವಲಿಂಗದೇವರ ವಸ್ತ್ರವನ್ನು ಬಿಚ್ಚಿ ಹೊರ ತೆಗೆದು ತನ್ನ ಕರಕಮಲದಲ್ಲಿಟ್ಟುಕೊಂಡು ಭಸ್ಮ ಗಂಧ ಪತ್ರೆ ಧರಿಸಿ ಮನವಾರೆ ಪ್ರಾರ್ಥಿಸುತ್ತಾನೆ.

> ದೇವದೇವೋತ್ತಮ ದೇವ ಶಿಖಾಮಣಿ
> ದೇವರೆಲ್ಲರ ಕಾವ ದೇವ
> ದೇವ ನಿನಗೆ ಪ್ರತಿದೇವರ ಹತವಾಮ
> ದೇವ ಮುಖಾನ್ವಿತ

ಎಂದು ಪರಶಿವನ ಅನಂತಲೀಲೆಗಳನ್ನು ವರ್ಣಿಸುವ ಅವನ ಭಕ್ತಿ ಭಾವ ಉಕ್ಕಿ ಹರಿಯುತ್ತದೆ ಕೊನೆಗೆ

> ಆಲಿಗಳೆವೆಯಲುಗದೆ ಭಕುತಿಯು ತ್ರಿ
> ಶೂಲಿಯ ಮೇಲೆ ಕಣ್ಮನವ
> ಕೀಲಿಸಿದನು ಕಿಳದಂತೆ ಹಸ್ತದಿ ಜಪ
> ಮಾಲಿಕೆಗಳ ತುಡುಕಿದನು.

ಸಮಗ್ರ ಸನ್ನಿವೇಶ ಭಕ್ತಿಭಾವವನ್ನು ಬಿತ್ತರಿಸುವಲ್ಲಿ ಕವಿ ಎಷ್ಟು ಸಮರ್ಥನಾಗಿರುವನೆಂಬುದನ್ನು ಸ್ಪಷ್ಟಪಡಿಸುತ್ತವೆ.

ಇನ್ನು ವೀರದ ವರ್ಣನೆಗಳಿಗಾಗಿ ಎರಡು ಸನ್ನಿವೇಶಗಳನ್ನು ನೋಡಬಹುದು. ಒಂದು, ಶಂಬರಾಸುರ ಮನ್ಮಥರ ಕಾಳಗ. ಎರಡನೆಯದು, ಬಾಣಾಸುರ–ಶ್ರೀಕೃಷ್ಣರ ಕಾಳಗ. ಎರಡೂ ಸನ್ನಿವೇಶಗಳಲ್ಲಿ ವೀರ ಪುಟನೆಗೆದು ಆಕಾಶವನ್ನು ಮುಟ್ಟುತ್ತದೆ. ಉಭಯ ವೀರರು ನುಡಿವ ಬಿರುನುಡಿಗಳು ಅವರ ಬಾಣಗಳಷ್ಟೇ ತೀಕ್ಷ್ಣವಾಗಿವೆ : ಪುಂಖಾನುಪುಂಖವಾಗಿವೆ. ಮನ್ಮಥನ ಬಾಣಗಳ

ಹೊಡೆತಕ್ಕೆ ಶಂಬರಾಸುರನ ಸೈನ್ಯ ತೊತ್ತಳದುಳಿದು ಹೋಗಿದೆ.

ಪರಿದಿಟ್ಟ ದಿಟ್ಟಿಯ ಬಳಿಕೋರ್ವಕಾಲ
ಮುರಿದಿಟ್ಟ ನಿಟ್ಟೆಲುಗಳನು
ನಿರಿನಿಟಿಲೆಂಬಂತೆ ಕಿತ್ತು ಮಸ್ತಕಗಳ
ತಿರಿಕಲ್ಲನಾಡಿ ಬೊಬ್ಬಿರಿದ ॥

ಮನ್ಮಥ ಶಂಬರಾಸುರನ ಸೈನಿಕರ ಕಣ್ಣುಕಿತ್ತ ; ಕಾಲು ಮುರಿದ, ಎಲುವು ಮುರಿದ. ಅವರ ತಲೆಯನ್ನು ಆಣಿಕಲ್ಲಂತೆ ಆಡಿದ.

ಆಗ ಶಂಬರಾಸುರನ ಅಭಿಮಾನಕ್ಕೆ ಭಂಗವುಂಟಾಗುತ್ತದೆ. ಅವನು ಹೇಳುತ್ತಾನೆ :

ಕರೆಗೊರಲನ ಕಣ್ಣದಳ್ಳುರಿಯಿಂ ಬೆಂದ
ಕೊರೆಗೊಳ್ಳಿ ನಿನಗೇಕೀಪಂತ
ನರೆಕೂರ್ಗಣೆಗಳಿಂ ಕಾಯ್ದುಕೊಳ್ಳೆನುತಾರ್ದು ॥

ನಿಂತನು.

ಎಲ್ಲೆಡೆ ರಕ್ತದ ಧಾರೆ ಸುರಿಯುತ್ತದೆ. ಮನ್ಮಥ ಆರ್ಭಟಿಸಿ ಶಂಬರಾಸುರನನ್ನು ಕೊಲ್ಲುತ್ತಾನೆ.

ಹೀಗೆಯೇ ಕೃಷ್ಣಬಾಣಾಸುರರ ಕಾಳೆಗವೂ ಅತ್ಯಂತ ಭೀಕರವಾಗಿ ನಡೆಯುತ್ತದೆ. ಅನಿರುದ್ಧ–ಕುಂಭಾಂಡರ ಕಾಳೆಗ, ಬಾಣಾಸುರ–ಅನಿರುದ್ಧರ ಕಾದಾಟ ಹರಿಹರರ ಕಾಳೆಗ ಭೀಕರವಾಗಿ ನಡೆಯುತ್ತವೆ. ಈ ವರ್ಣನೆಗಳನ್ನೆಲ್ಲ ಪ್ರತ್ಯಕ್ಷ ಕಾಳೆಗದ ಅನುಭವವುಳ್ಳ ಕವಿ ಅತ್ಯಂತ ಸಹಜವೆನಿಸುವಂತೆ ಚಿತ್ರಿಸಿದ್ದಾನೆ. ಸುಮಾರು ೫೦೦ ಪದ್ಯಗಳ ೭ ಸಂಧಿಗಳನ್ನು ಈ ಸನ್ನಿವೇಶದಲ್ಲಿ ಯುದ್ಧ ವರ್ಣನೆಗೆ ಮೀಸಲಾಗಿಟ್ಟರೂ ಪುನರಾವೃತ್ತಿಯ ದೋಷವಿಲ್ಲ. ಮಾತುಮಾತಿಗೆ ವೀರ ಉಕ್ಕಿ ಹರಿಯುತ್ತದೆ. ಹರಿಹರರು ಕಾಳೆಗದ ಕೊನೆಗೆ ಒಬ್ಬ ಚಕ್ರ ಇನ್ನೊಬ್ಬ ತ್ರಿಶೂಲ ಎತ್ತಿ ನಿಂತಾಗ ಆಗುವ ನಭೋವಾಣಿಯನ್ನು ಕೇಳಿರಿ.

ಶಿವ ತ್ರಿಶೂಲದೊಳಿಡಲುಳಿವವರಿಲ್ಲ ಕೇ
ಶವ ಚಕ್ರವಾರ ಲೆಕ್ಕಿಸದು
ಹವಣಲ್ಲಿ ನಿಲ್ಲುನಿಲ್ಲೆನುತಿರ್ವರಿಗೆ ಸ
ತ್ಯವ ಪೇಳ್ದುದಾಕಾಶವಾಣಿ ॥

ಉಷಾನಿರುದ್ಧರ ಪ್ರಸಂಗ ಅತ್ಯಂತ ರಸವತ್ತಾದುದು ; ತುಂಬ ನಾಟಕೀಯವಾದ ಸನ್ನಿವೇಶ. ಪಾರ್ವತಿಯ ಆಶೀರ್ವಚನದಂತೆ ಉಷೆ ಕನಸು

ಕಾಣುವುದು, ವಿರಹ ಪಡುವುದು, ಆ ಕೆಳದಿ ಚಿತ್ರಲೇಖೆ ಒಂದಿರುಳಿನಲ್ಲಿ ಮೂರುಲೋಕ ಸಂಚರಿಸಿ ಅನಿರುದ್ಧನ ಚಿತ್ರತರುವುದು ಉಷೆಗೆ ಹರ್ಷವಾದರೂ ಆತನನ್ನು ಕೂಡುವ ತವಕ ಹೆಚ್ಚುತ್ತದೆ–ಉಷೆಯಂತೆ ಅನಿರುದ್ಧನೂ ಕನಸು ಕಂಡಿದ್ದಾನೆ. ಚಿತ್ರಲೇಖೆ ತೋರಿಸಿದ ಉಷೆಯ ಚಿತ್ರಪಟದಿಂದ ಅವನಿಗೆ ನೆಮ್ಮದಿ ಚಿತ್ರಲೇಖೆಯೊಡನೆ ಬಾಣನ ಅಂತಃಪುರಕ್ಕೆ ಪ್ರಯಾಣ–ಗಾಂಧರ್ವ ವಿವಾಹ ಸರಸಸಲ್ಲಾಪ, ಶೃಂಗಾರದ ಕಡಲಲ್ಲಿ ಈಸಾಟ–ಇಷ್ಟೆಲ್ಲ ರಮ್ಯವಾಗಿ ರಮಣೀಯವಾಗಿ ಚಿತ್ರಿತವಾಗಿದೆ. ಕಾವ್ಯದ ಆದಿಯಲ್ಲಿ ಬರುವ ಮನ್ಮಥ–ಶಂಬರಾಸುರರ ಸನ್ನಿವೇಶ ಕೊನೆಗೆ ಬರುವ ಉಷಾನಿರುದ್ಧರ ದೃಶ್ಯ ಈ ಕಾವ್ಯಕ್ಕೆ ಕಳೆಯಿತ್ತಿವೆ. ಇಲ್ಲಿಯ ವರ್ಣನೆಗಳು ಜೀವಂತವಾಗಿ ಕಾವ್ಯವಾಹಿನಿಯ ಪಾತ್ರವಾಗಿ ನಿಂತಿವೆ.

ಈ ವರ್ಣನೆ, ಕಥೆ, ಶೃಂಗಾರಾದಿ ರಸಗಳು ಹೊರನೋಟಕ್ಕೆ ; ಒಳಗೆ ಆವುದೋ ಒಂದು ನಿತ್ಯಸತ್ಯವನ್ನು ಬಿತ್ತರಿಸುವುದು ಕವಿಯ ಮೂಲೋದ್ದೇಶವಾಗಿದೆ.

ಬೃಹಸ್ಪತಿ ಮನ್ಮಥರ ಸಂವಾದವನ್ನು ಕಾಲಿದಾಸ, ಹರಿಹರರಂತಹ ಹಿರಿಯ ಕವಿಗಳು ಮಾನವ ಸ್ವಭಾವದ ಸೂಕ್ಷ್ಮ ಅಂಶಗಳನ್ನು ಪರಿಗ್ರಹಿಸಿ ಬಿತ್ತರಿಸಿರುವರು. ಆ ಸನ್ನಿವೇಶ ಅವರ ಕಾವ್ಯಗಳಲ್ಲಿ ಎತ್ತರಕ್ಕೆ ಹೋಗಿದೆ. ಕನಕದಾಸ ಈ ಸನ್ನಿವೇಶವನ್ನು ಲೋಕಸತ್ಯ ನಿರೂಪಣೆಗೆ ಮಾರ್ಗವಾಗಿ ಮಾಡಿಕೊಂಡಿದ್ದಾನೆ. ಬೃಹಸ್ಪತಿ ಮನ್ಮಥನಿಗೆ ಹೇಳುವ ಮಾತುಗಳನ್ನು ಕೇಳಿರಿ :

'ಪರಹಿತಕೊಡಲುರಿದರೇನು, ಕೀರ್ತಿ ಶಾಶ್ವತವಾಗಿಹುದು'

'ಪರಹಿತಕಾಗಿ ದಧೀಚಿ ತನ್ನೊಡಲ ಮಾಂಸವಕುಡನೆ ?'

'ಲೋಕೋಪಕಾರವೆ ಕೈವಲ್ಯವಹುದು'

'ಆವಕಾಲವನಾದೊಡೆ ಮೀರಬಹುದು । ಸಾವಕಾಲವ ಮೀರಬಾರದು.'

# ಕನಕದಾಸರ ಕೃತಿಗಳಲ್ಲಿ ರಸಾನುಭವ

**ಡಾ. ಎ.ಎಸ್. ವೇಣುಗೋಪಾಲರಾವ್**

ಭಾವದ ಉತ್ಕಟತೆ ಉದಾತ್ತಗೊಂಡಾಗ 'ರಸ'ವಾಗುತ್ತದೆಯಷ್ಟೆ ! ತನ್ನ ಲೌಕಿಕ ರಾಗ ದ್ವೇಷಗಳನ್ನು ಕಳಚಿಕೊಂಡು ಅಲೌಕಿಕ ಆನಂದದ ಆಗರವೆನಿಸಿದ ಈ ಉನ್ನತ ಮನಃಸ್ಥಿತಿಯೇ ಕಾವ್ಯಾನುಭವದ ಪರಮಸಿದ್ಧಿ. ಶೋಕದ ಕಂಬನಿಯೂ ಆನಂದಬಾಷ್ಪವೇ ಎನಿಸುವ ಅಪೂರ್ವ ನೆಲೆ ಅದು. ಆತ್ಮನ ಅನಾವರಣದಿಂದ ಸ್ವಸ್ವರೂಪ ದರ್ಶನದಿಂದ ಏರುವ ಸಿದ್ಧಶಿಲೆ ಅದು, ಆನಂದವಲ್ಲದೆ ಬೇರೆ ಏನನ್ನೂ ಒಲ್ಲದ ಅದ್ವೈತಾನುಭವ ಅದು. ಉಪ್ಪರಿಗೆಯನ್ನು ಏರಲು ಏಣಿಯೇ ಸಾಧನವಾದರೂ ಏಣಿ ಉಪ್ಪರಿಗೆಯಲ್ಲ. ಲೋಕಭಾವಗಳ ನಿಚ್ಚಣಿಕೆಯನ್ನು ಏರೇರುತ್ತಲೇ ರಸದ ನೆಲೆಯನ್ನು ತಲಪಬೇಕು. ಈ ರಸಾನುವ ಮೊದಲು ಕವಿಗೆ–ಅನಂತರವೇ ಸಹೃದಯನಿಗೆ. ರಸಪರವಶತೆಯೇ ಕವಿಸೃಷ್ಟಿಯ ಪೂರ್ವದಲ್ಲಿ ಹಾಗೂ ಸೃಷ್ಟಿಯ ಅನಂತರದಲ್ಲಿ ಕವಿಯ ಪ್ರಮುಖ ಕಾಳಜಿ. ಈ ಪರವಶತೆಗೆ ಪೂರ್ವದಲ್ಲಿ ಭಾವದ ಉತ್ಕಟತೆ ತೀರ ಅಗತ್ಯ. ಭಾವವೇ ತೆಳುವಾಗಿ ತೇಲಿಹೋಗುವಂತಾದರೆ, ರಸದ ನೆಲೆಯನ್ನು ತಲುಪುವುದಾದರೂ ಹೇಗೆ? "ತೇನ ರಸಮಯೇನ ವಿಶ್ವಂ" ಎನಿಸುವದೆಂತು? ರಸಾವೇಶಕ್ಕೆ ಭಾವೋತ್ಕಟತೆ ಅನಿವಾರ್ಯ.

ಕನಕದಾಸನ ಮನೋಧರ್ಮದ ಮೂಲಧಾತು ಈ ಉತ್ಕಟತೆ–Intensity–ಆದುದರಿಂದಲೇ ಆತ ಸಹಜಕವಿ. ಭಾವದ ಬುಗ್ಗೆ ಉಕ್ಕಿದಾಗ ಅವನು ಮಾತಿಗಾಗಿ ತಡವರಿಸಿದ್ದೇ ಇಲ್ಲ. ಕೆಣಕು, ಅಪಹಾಸ್ಯ, ಪ್ರಶ್ನೆ ಪರಿಪ್ರಶ್ನೆಗಳ ಚಾವಟಿ ಅವನಲ್ಲಿ ಸದಾಸಿದ್ಧ–ಚುರುಕು ಮುಟ್ಟಿಸುವುದಕ್ಕೆ. ಪ್ರಣಯದಲ್ಲಾಗಲೀ, ಹೋರಾಟದಲ್ಲಾಗಲೀ ಅವನ ಈ ಉತ್ಕಟತೆ ಮಾಸುವುದೇ ಇಲ್ಲ. "ಆತ್ಮನ್ಯಾವಕುಲ, ಜೀವನ್ಯಾವಕುಲ. ಪಂಚೇಂದ್ರಿಯಗಳ ಕುಲ ಪೇಳಿರಯ್ಯ: ಎಂದು ಸೆಡ್ಡು ಹೊಡೆಯುವ ಧೀರ ಚೇತನಕ್ಕೆ ಜೀವನೋತ್ಸಾಹ ಸಹಜ ಸ್ವಭಾವವಾಗಿ ಬಿಡುತ್ತದೆ. ನಿರ್ಭರ ಸಮರ್ಪಣೆ–ತನ್ಮಯತೆಯ ಭಕ್ತಿ ಕಡೆಕಡೆಯಲ್ಲಿ

ಅವನಿಗೆ ಸಿದ್ಧಿಸಿರಬಹುದು. ಕಾವ್ಯಸೃಷ್ಟಿಯ ಮೊದಲಲ್ಲಿ–ಹಾಗೂ ಅವನ ಕಾವ್ಯಸೃಷ್ಟಿಯನ್ನು ಬಹುವಾಗಿ ಆವರಿಸಿದ ಭಾವಗಳಲ್ಲಿ ರತಿ–ಹಾಗೂ ಉತ್ಸಾಹವೇ ಸ್ಥಾಯಿಯಾಗಿರುವಂತೆ ತೋರುತ್ತದೆ. ಇವುಗಳ ಉತ್ಕರ್ಷದಿಂದ ಸಿದ್ಧಿಸುವ ಶೃಂಗಾರ ಹಾಗೂ ವೀರ, ಕನಕನ ರಸಪ್ರಪಂಚದಲ್ಲಿ ಮೊದಲ ಮನ್ನಣೆ ಪಡೆಯುತ್ತವೆ. ಆನಂತರವೇ–ವಿಸ್ಮಯ, ಶಮ ಇವುಗಳಿಂದ ಸಿದ್ಧಿಸುವ ಅದ್ಭುತ ಹಾಗೂ ಶಾಂತರಸಗಳು. ಇಲ್ಲಿ ಉತ್ಕಟ ಭಕ್ತಿಯೂ ಶೃಂಗಾರದಲ್ಲಿಯೇ ಅಂತರ್ಗತ, ಭಕ್ತಿ ಭಾವವನ್ನು ಕುರಿತು ಚರ್ಚೆ ಸನ್ಯತ್ರ ನಡೆದಿರುವುದರಿಂದ, ಪ್ರಕೃತ ಪ್ರಬಂಧದಲ್ಲಿ ಕನಕನ ಕೃತಿಗಳಲ್ಲಿ ಹೊರಹೊಮ್ಮುವ ಇತರ ಭಾವಗಳನ್ನೂ ಅವುಗಳ ಉತ್ಕರ್ಷದಿಂದ ಸಿದ್ಧಿಸುವ ರಸಗಳನ್ನೂ ಚರ್ಚಿಸಲಾಗಿದೆ. ಅನಂತಾ ವೈ ಭಾವಾಃ ಎಂಬುದಂತೂ ನಿಜ. ಆದರೆ ಎಲ್ಲವೂ ರಸೋತ್ಕಟವಾಗಿ ಬಿಡುವುದಿಲ್ಲ. ಸುಳಿದು ಮಾಯವಾಗುವ ಸಂಚಾರಿಗಳೇ ಹೆಚ್ಚು. ಬಹುಮಟ್ಟಿಗೆ ಸ್ಥಾಯಿ ಎನಿಸುವ ನವಭಾವಗಳಲ್ಲೂ ಮೂಲಭಾವಗಳೂ ಭರತನ ಪ್ರಕಾರ ನಾಲ್ಕು ಮಾತ್ರ ; ರತಿ–ಉತ್ಸಾಹ–ಕೋಪ–ಜಿಗುಪ್ಸೆ. ಚಿತ್ತವಿಕಾರದ ಸ್ವರೂಪವೆಂದರೆ ಹೂವಿನಂತೆ ವಿಕಾಸಗೊಂಡು ಉಲ್ಲಸಿತವಾಗುವುದು ; ಹಪ್ಪಳದಂತೆ ಕಾದ ಎಣ್ಣೆಯಲ್ಲಿ ಹರಡಿಕೊಂಡು ವಿಸ್ತರಿಸುವುದು ; ಗುಂಡಿನ ಪೆಟ್ಟು ಬಡಿದಂತೆ ಸಿಡಿದು ನಿಲ್ಲುವ ವಿಕ್ಷೇಪ ; ಹಾಗೂ ಹೊಟ್ಟೆತೊಳೆಸಿದಂತೆ ವಿಕ್ಷೋಭಗೊಂಡು ತತ್ತರಿಸುವುದು. ಇವು ಆಧುನಿಕ ಮನೋವಿಜ್ಞಾನದ ಚಿಂತನೆಗೆ ಅನುಗುಣವಾಗಿಯೇ ಇವೆ. Sex, Hunger, Anger, Aversion, Fear, ಎಂಬ ಮೂಲದ್ರವ್ಯಗಳೇ ಮನಸ್ಸಿನ ಚಟುವಟಿಕೆಗಳನ್ನು ನಿಯಂತ್ರಿಸುವ ನೇರ್ಪಡಿಸುವ, ಚಲನಶೀಲವಾಗಿಸುವ ಉತ್ಕಟ ಭಾವಗಳು. ಕಾಮದ ಆಕರ್ಷಣೆ, ಪಡೆಯುವ, ಗಳಿಸುವ, ಅದಕ್ಕಾಗಿ ಆಕ್ರಮಿಸುವ ಉತ್ಸಾಹ, ಅದಕ್ಕೆ ಅಡ್ಡಿಬಂದಾಗ, ಬಂದವನನ್ನು ತರಿದುಹಾಕುವ ಕ್ರೋಧ, ಸಾಧ್ಯವಾಗದಾಗ ಭಯ ಜಿಗುಪ್ಸೆ–ಇವುಗಳನ್ನು ಲೋಕ ಜೀವನದಲ್ಲಿ ಕಂಡಿದ್ದೇವೆ. ಅನುಭವಿಸಿದ್ದೇವೆ. ರಸ ಪ್ರಪಂಚದ ನೆಲೆಗಟ್ಟಾದರೂ ಈ ಮೂಲಭಾವಗಳೇ. ಆದರೆ ಲೋಕಜೀವನದಲ್ಲಿ ಇವುಗಳಿಗೆ ಐಂದ್ರಿಯಿಕ ಪ್ರತಿಕ್ರಿಯೆ ಉಂಟು. ಕಾವ್ಯಪ್ರಪಂಚ ಈ ಬಗೆಯ ಪ್ರತಿಕ್ರಿಯೆಯಿಂದ ದೂರವಾದದ್ದು. ಮನೋಲೋಕವಿಹಾರಿಯಾದದ್ದು. ಇದು ವಾಸ್ತವ ಸತ್ಯವಲ್ಲವೆಂಬ ನೆಮ್ಮದಿಯಿಂದ ಅನುಭವಿಸುತ್ತಾ, ಆಸ್ವಾದಿಸುತ್ತಾ. ಆನಂದಲೋಕದಲ್ಲಿ ವಿಹರಿಸುವಂತಹುದು. ಅಂತೆಯೇ ಕಾವ್ಯಪ್ರಪಂಚದಲ್ಲಿ ಭಾವವೇ ರಾಗಾದಿಗಳ ಶೃಂಖಲೆಯಿಂದ ಮುಕ್ತವಾಗಿ ಆನಂದಸ್ಯಂದಿಯಾಗಿ

ರಸ ಎನಿಸುವಂತಹುದು. ಅದಕ್ಕೆ ಅನುಗುಣವಾದ ವಿಭಾವ–ಅನುಭಾವ–ಸಂಚಾರಿಗಳನ್ನೆಲ್ಲ ಒಳಗೊಂಡು ಪಾಕವಾಗುವ ಈ ಪ್ರಕ್ರಿಯೆಯೇ ಕಾವ್ಯ ಪ್ರಪಂಚದ ವಿಸ್ಮಯ. ಪ್ರಕೃತ, ದಾಸಶ್ರೇಷ್ಠ ಕನಕದಾಸರ ಕೃತಿಗಳ ಮೂಲಕ ಈ ವಿಸ್ಮಯ ಲೋಕವನ್ನು ಪ್ರವೇಶಿಸಬಹುದು.

೨

ಕೀರ್ತನ ಸಾಹಿತ್ಯವಲ್ಲದೆ, ಮಹಾಕಾವ್ಯ ಪದ್ಧತಿಯನ್ನೂ ಮುಂದುವರೆಸಿದ ಅಪರೂಪದ ಹರಿದಾಸರು–ಕನಕದಾಸರು. ಆತನ ಕಥನ ಕಲೆ, ಚಾರಿತ್ರ್ಯ ಚಿತ್ರಣ, ವರ್ಣನಾ ಚಾತುರ್ಯಗಳು ತುಂಬ ಮೇಲ್‌ದರ್ಜೆಯುವು. ಆತನು ಅವಿದ್ಯಾವಂತನಾದ ಕಾಡುಕುರುಬ, ದಾಸಕೂಟಕ್ಕೆ ಬಂದನಂತರವೇ ಕಾವ್ಯರಚನೆಗೆ ಕೈಹಾಕಿದ ಎಂಬ ಮಾತು ನಂಬಲರ್ಹವಲ್ಲ. ಪಾಳೆಯಗಾರನಾಗಿ–ಪ್ರಭುವಾಗಿ–ವಿಜಯನಗರದ ದೊರೆಗೆ ಪ್ರಿಯನಾಗಿ–ತಾತಾಚಾರ್ಯದ ಪ್ರೀತಿಯ ಶಿಷ್ಯನಾಗಿ ಸಾಕಷ್ಟು ಸಂಪರ್ಕವನ್ನು ಪಡೆದಿರಲೇಬೇಕು. ಮೋಹನ ತರಂಗಿಣಿಯಲ್ಲಿನ ವರ್ಣನೆಗಳ ಆಧಾರದ ಮೇಲೆ ಹೇಳುವುದಾದರ ಕನಕನಿಗೆ ಸಾಹಿತ್ಯ ಶಾಸ್ತ್ರದ ಪರಿಚಯವೂ ಚೆನ್ನಾಗಿಯೇ ಇರುವಂತೆ ತೋರುತ್ತದೆ.

ಕನಕನ ನಾಲ್ಕು ಕೃತಿಗಳಾದ ಮೋಹನ ತರಂಗಿಣಿ, ನಳಚರಿತ್ರೆ, ರಾಮಧಾನ್ಯ ಚರಿತೆ, ಮತ್ತು ಹರಿಭಕ್ತಿಸಾರಗಳಲ್ಲಿ ಮೊದಲ ಎರಡು ಕಾವ್ಯಗಳಲ್ಲಿಯೂ ಶೃಂಗಾರವೇ ಪ್ರಧಾನ ರಸ ಎಂಬುದು ಗಮನಾರ್ಹ. ಬದುಕಿನ ನಡುಗಾಲದಲ್ಲಿ ಪ್ರೀತಿಯ ಪತ್ನಿಯನ್ನು ಕಳೆದುಕೊಂಡ ಶೋಕದಿಂದ ತಪ್ತವಾದ ಹೃದಯವೊಂದು ತನಗೆ ಅಗತ್ಯವಾದ ಹೃದಯ ಸಾಂತ್ವನವನ್ನು ಈ ಕೃತಿಗಳಿಂದ ಪಡೆದುಕೊಂಡಂತೆ ತೋರುತ್ತದೆ. ಶೃಂಗಾರದ ಅಭಿವ್ಯಕ್ತಿಗೆ ಅತ್ಯಂತ ಉಚಿತವಾದ ಸಾಂಗತ್ಯವನ್ನು ತರಂಗಿಣಿಯಲ್ಲಿಯೂ ಲಲಿತಮಧುರವಾದ ಭಾಮಿನೀಷಟ್ಪದಿಯನ್ನು ನಳಚರಿತ್ರೆಯಲ್ಲೂ ಬಳಸಿದ್ದಾನೆ. ಎರಡರಲ್ಲೂ ದೇಸಿಯ ದಿಗ್ವಿಜಯ.

ಮೋಹನತರಂಗಿಣಿಯಲ್ಲಿ ಬಾಣಾಸುರ–ಅನಿರುದ್ಧರ, ಬಾಣಾಸುರ–ಕೃಷ್ಣನ ಯುದ್ಧದ ಸನ್ನಿವೇಶಗಳಿರುವುದು ನಿಜ. ಆದರೆ ವೀರರಸ ಇಲ್ಲಿ ಆನುಷಂಗಿಕ, ಪೋಷಕ. ಪ್ರಧಾನರಸವಾದ ಶೃಂಗಾರವನ್ನು ಅದೇ ಚೆನ್ನಾಗಿಯೇ ಪೋಷಿಸುತ್ತದೆ. ಕಾವ್ಯ ಶಾಸ್ತ್ರದ ದೃಷ್ಟಿಯಿಂದಲೂ ಶೃಂಗಾರ–ವೀರಗಳಲ್ಲಿ ರಸಮೈತ್ರಿಯೇ ಉಂಟಷ್ಟೆ! ಅಲ್ಲದೆ ಇಲ್ಲಿ ಕೃಷ್ಣ–ಶಿವರು ಪರಸ್ಪರ ಎದುರಾಗುವುದು ಹೋರಾಟದ ಆರ್ಭಟಕ್ಕಲ್ಲ. ಕನಕನ ದೃಷ್ಟಿ ಇಲ್ಲಿ, ಆವೇಳೆಗಾಗಲೇ ರುದ್ರಭಟ್ಟನಿಂದ ಪ್ರಣೀತವಾಗಿ ಕುಮಾರವ್ಯಾಸನಲ್ಲಿ ಸ್ಥಾಯಿಯಾದ ಭಾಗವತ ಧರ್ಮ–ದರ್ಶನವನ್ನು

ಪ್ರತಿಪಾದಿಸುವುದು. ಸೋಲು–ಗೆಲುವುಗಳನ್ನು ವಿಜೃಂಭಿಸುವುದು ಅಲ್ಲವೇ ಅಲ್ಲ. ನೋಡಿ ;

ಶ್ರೀಪರಮೇಶ ರಮೇಶಂಗೆ ಮೆಚ್ಚಿ ಸ
ಲ್ಲಾಪದಿಂ ಕೈವಾರಿಸಿದ ॥ [೧೧–೪೩]

ಇದು ಮೆಚ್ಚಿಗೆ, ಸಲ್ಲಾಪ, ವೀರಾಲಾಪದ ಘರ್ಜನೆಯಲ್ಲ. ಹಾಗೆಯೇ ಗಮನಿಸಿ ;

ಮೊಳಗುವ ದೇವದುಂದುಭಿ ನಭಸ್ಥಳದಲ್ಲಿ
ಬೆಳಗುವ ಮಂಗಳಾರ್ತಿಗಳ
ತೊಳಗುವ ಮಂದಾರಮಾಲೆಯ ಮಹದಾದಿ
ಮಳೆಗಳ ಕರೆದರಿರ್ವರಿಗೆ ॥ [೧೧–೭೫]

ಇದು ರಕ್ತದ ಅಭಿಷೇಕವಲ್ಲ......ಸುರರು ಕರೆದ ಹೂಮಳೆ. ಹರಿಹರರಿಗೆ! 'ಜಾಣತನದೊಳು ಅಧ್ಯಾತ್ಮವ ನುಡಿವ" ಮೋಹತರಂಗಿಣಿಯಲ್ಲಿ ವೀರ–ರೌದ್ರಗಳಂತೂ ಪ್ರಧಾನ ರಸವಲ್ಲ. ಯುದ್ಧಾಂತ್ಯದ ಶಿವಸಂದೇಶವಾದರೂ ಏನು? ಅದೇ ಭಾಗವತ ಧರ್ಮದ ನಿಚ್ಚಳವಾದ ಸೊಲ್ಲು–

"ಕೇಶವನೆಡೆಗೆನ್ನೆಡೆಗಾವನೊರ್ವನು
ದ್ವೇಷಬುದ್ಧಿಯ ಮಾಡಿದಡೆ
ದೋಷ ಸಂಭವಿಸುವುದು......" [೧೧–೯೪]

ಶಿವ–ಕೇಶವರ ಎಡೆಬಿಡದ ಸಖ್ಯದ ಮಂಗಳ ಕಥನ ಇದು.

* * *

ಮೋಹನ ತರಂಗಿಣಿಯ ನಿರಂತರವಾದ ಹೋಳಿಯ ಬಣ್ಣ ಬಣ್ಣದ ಸಿಂಪಡಿಕೆಯೆಂದರೆ ಶೃಂಗಾರವೇ ಆಗಿದೆ. ಅದು ಕಾಮದಹನದ ಕತೆಯಷ್ಟೇ ಅಲ್ಲ, ಕಾಮನ ಪುನರ್ಜನ್ಮದ ಸಿಂಗರದ ಕತೆ. ಪ್ರದ್ಯುಮ್ನನೇ ಮನ್ಮಥನಷ್ಟೆ ! ಜಾಗರ–ಕನಸುಗಳ ತುಂಬ ಕಾಮನ ಹೋಳಿ.

ಬಾಣಾಸುರನ ಮಗಳು ಚೆಲುವೆ ಉಷೆ. ಕನಸಿನಲ್ಲಿ ಕಂಡವನೇ ನಿನಗೆ ಪತಿಯಾಗುತ್ತಾನೆ ಎಂದು ಆಕೆಗೆ ಶಿವನ ವರ. ಕೇಳಿಯೇ ಹುಡುಗಿ ರೋಮಾಂಚಿತೆಯಾಗಿ ಬಿಟ್ಟಳು. ಈ ಪುಟ್ಟ ಚೆಲುವೆ ತನ್ನಲ್ಲಿ ವರ ಬೇಡಲು ಬಂದುದನ್ನು ಕಂಡು ಹರನಿಗಾದ ಹರ್ಷವೇನು ಕಡಿಮೆಯೆ? ಕಡು ಮುದ್ದುಗಾತಿ, ಬಹುಜಾಣೆ, ಮಾತಿನಲ್ಲಿ ಮುತ್ತು ಉದುರಿಸುತ್ತಿದ್ದಾಳೆ. ಏಕೆ ಬಂದೆ ಹುಡುಗಿ? ಎಂದು ಲಲ್ಲೆಗರೆದು ಶಿವ ಕೇಳಿದರೆ ಅವಳ ಉತ್ತರ ಎಷ್ಟು ಹೃದಯಂಗಮ!

'ನಾಗಭೂಷಣ ನಿಮ್ಮ ದಿವ್ಯ ದೇಹದ ಭಾಗವೇ ಆದ ಶ್ರೀಗೌರಿದೇವಿಯ ಪದಯುಗಳವ ಕಾಣಲು ಬಂದೆ.' ಸರ್ವಮಂಗಳೆಯನ್ನು ಕುರಿತು ಹುಡುಗಿ ಆಡುವ ಮಾತು "ನಿಮ್ಮ ದೇಹವನೊತ್ತೆಗೊಂಡ" ದಿವ್ಯ ದಂಪತಿಗಳ ನೋಟ ಹುಡುಗಿಯ ಮನದಲ್ಲಿ ಮೂಡಿಸಿದ ಕಾಮನೆಗೆ ಕಳಸವಿಟ್ಟಂತಹ ಮಾತು ಇದು. ಶೃಂಗಾರದ ಸ್ಥಾಯಿಯಾದ ರತಿ ಇಲ್ಲಾಗಲೇ ಮೊಗ್ಗುಬಿರಿಯುತ್ತಿದೆ. ಆಡುವ ಮಾತು–ಚೆಂದ ರೀತಿ ಚೆಂದ. ನೋಡಬಹುದು;

"ಮಾತನಾಡಿದ ಬಾಯ್ದೆರೆಯ ಚೆಲ್ವನೆ ಕಂಡು
ಸೋತನೀಶ್ವರ ಮನದೊಳಗೆ."

ಅಲ್ಲ, ಭವಾನೀವಲ್ಲಭನ ಹೃದಯದ ಯಾವುದೋ ಕುಸುಮ ಕೇಂದ್ರವನ್ನು ಹದಿ ಹುಡುಗಿ ಕೆಣಕಿಬಿಟ್ಟಳೆ ? ಇರಬಹುದು–ಈ ಚಾಂಚಲ್ಯವನ್ನು 'ಲೋಲಿಟಾ ಕಾಂಪ್ಲೆಕ್ಸ್' ಎನ್ನುತ್ತಾರೇನೋ ಮನಶ್ಶಾಸ್ತ್ರಜ್ಞರು. ರತಿಭಾವದ ಸುಸೂಕ್ಷ್ಮ ಸ್ವರೂಪ. ಆದರೆ ಥಟ್ಟನೆ ಸಂಯಮಿಸಿಕೊಂಡ–ಅವನು ಕಾಮಾರಿಯೇ ತಾನೆ ? ಈ ಭಾವವನ್ನು ವಾತ್ಸಲ್ಯಕ್ಕೆ ತಿರುಗುವಂತೆ ಉದಾತ್ತೀಕರಿಸಿಬಿಟ್ಟ.

"ಕಾತರಿಸದೆ ತನ್ನ ಮಗಳೆಂದು ನೋಡಿದ
ಭೂತೇಶ ಕರುಣಿ ನಿರ್ಮಲನು ॥" [೮–೩೪]

ಒಂದೇ ಸಾಂಗತ್ಯದ ಎರಡು ಅರ್ಧಗಳಲ್ಲಿ ಕನಕ ಉಬ್ಬಿಸಿ ಉದಾತ್ತೀಕರಿಸುವ ಈ ಮೋಡಿಗೆ ಮನಸ್ಸು ಸೆರೆಯಾಗುತ್ತದೆ.

ದಿವ್ಯ ದಂಪತಿಗಳ ನೋಟ, ಹರನ ವರಪ್ರಸಾದ, ಕಿಶೋರಿಯ ಮನಸ್ಸಿನಲ್ಲಿ ಎಂತೆಂತಹ ಸುಕುಮಾರ ಶೃಂಗಾರ ಭಾವಗಳನ್ನು ಕೆರಳಿಸಿತೋ ! ಹರ್ಷ ಉತ್ಸಾಹಗಳಿಂದ ಹಿಂತಿರುಗಿದ ಹದಿಹುಡುಗಿಗೆ ಈ ನೋಟ–ಕೇಳ್ಮೆಗಳೇ ವಿಭಾವವಾಗಿರಬೇಕು. "ಗಾಡಿಕಾತಿಗೆ ಪುರುಷಾಪೇಕ್ಷೆಯಹುದು" ಎಂದು ಗಿರಿಜೆ ಅರಿತದ್ದು ಸರಿಯಾಗಿಯೇ ಇದೆ. ನಿನ್ನ ಕನಸಿನಲ್ಲಿ ಕಾಣುವವ–ರಸದಾಳಿವಿಲ್ಲನ ಸಮರೂಪ, ಸ್ವಪ್ನದಿ ಬಂದು ಕ್ರೀಡಿಸುವ–ಅವನು ಉಪಮಿಸಬಾರದ ಪರಮ ಸೌಂದರ ಚಂದ್ರ–ಅವನೊಡನೆಯೇ ನಿನ್ನ ವಿವಾಹ ಎಂಬ ರಸವೊಸರುವ ಬಣ್ಣನೆ ಉದ್ದೀಪನ ವಿಭಾವವಾಗಿಬಿಟ್ಟಿತು. ಇರುಳಿನ ತನಿನಿದ್ದೆ, ಆ ಮೊದಲು ಕೇಳಿದ ರಾಮಕ್ರಿಯಾ ರಾಗ, ಅತಿ ರಮ್ಯ ಹರ್ಮ್ಯ. ರತ್ನಕಾಂಚನ ಮಂಚ, ಮೃದುತಲ್ಪ, ಗಂಧೋದಕದ ಪ್ರಕ್ಷಾಳನ, ಪಾರ್ವತಿಯ ವರವನ್ನು ನೆನೆಸುವ ಸಖಿ ಚಿತ್ರಲೇಖೆ, ಈ ಎಲ್ಲವೂ ಉದ್ದೀಪನ ವಿಭಾವವಾಗಿಬಿಡುತ್ತವೆ. ಸಖಿಯಂತೂ 'ಪೂಗೋಲನ ಸಮರೂಪ, ಈಗ ನಿನ್ನೊಡನೆ ಬಂದು ಪರಮ

ಸಂಭೋಗವ ಮಾಳ್ಪ ನಿಶ್ಚಯದಿ' ಎಂದು ನೇರವಾಗಿಯೇ ನುಡಿದು ಕೆರಳಿಸುತ್ತಾಳೆ. ಈ ಆಲಂಬನ–ಉದ್ದೀಪನಗಳ ಸಹಜ ಪ್ರತಿಕ್ರಿಯೆಯಾದ ಅನುಭವಗಳೇನು? ಕವಿ ಮರೆಯುವುದಿಲ್ಲ.

"ಎಂದೊಡಾ ಮಾತಿಂಗೆ ನಸುನಾಣ್ಚಿ ಹೃದಯಾರ
ವಿಂದದುಲ್ಲಾಸ ಪೂರಯಿಸಿ
ಚಂದನ ಸೌರಭ್ಯವಡೆದ ವಿಗ್ರಹಜಾತ
ಸಂದೋಹ ಗುಡಿಗಟ್ಟಿತವಳ" [೯–೧೨]

ಲಜ್ಜೆ, ಎದೆತಾವರೆ ಉಲ್ಲಸಿತ, ಸವಿಗಂಪಿನ ನಾಸಿಕಾನುಭವ. ಶೃಂಗಾರಕ್ಕೆ ಹೇಳಿ–ಮಾಡಿಸಿದ ಶಬ್ದ ಸಂದೋಹ ! ಮುಂದಿನ ಬಣ್ಣನೆಯಂತೂ ತೀರವಾಚ್ಯವಾದ ಸಂಭೋಗ ಶೃಂಗಾರದ ರಸಚಿತ್ರ.

"ಅನಿರುದ್ಧನ ಕಂಡು ಅಮರ್ದಪ್ಪಿ, ಮುದ್ದಾಡಿ. ಮುದ್ದು ಬಾಯೊಳಗಿಟ್ಟು ಚುಂಬಿಸುತಿರ್ದಳು ರತಿಶಾಸ್ತ್ರದಲಿ."

ಪ್ರಣಯದ ಉತ್ಕಟತೆ, ಇಂದ್ರಿಯಗಮ್ಯವಾದ (sensuous) ವರ್ಣನೆ ಇದು. ಉಷೆಯಂತೂ ರತಿಶಾಸ್ತ್ರದಲ್ಲಿ ಬಲ್ಲಿದಳಲ್ಲ. ಪ್ರಾಯಶಃ ಶಾಸ್ತ್ರವೇ ಅವಳ ಚರ್ಯೆಯನ್ನು ಬಣ್ಣಿಸಿರಬೇಕು. ಪ್ರಗಲ್ಭೆಯ ಪ್ರೌಢರತಿಯಂತೆ ತೋರುವ ಈ ಚಿತ್ರಣ ಇನ್ನಷ್ಟು ಸುಕುಮಾರವಾಗಿ ಧ್ವನಿಪೂರ್ಣವಾಗಿ ಇರಬಹುದಿತ್ತು ಎನಿಸುತ್ತದೆ. ಕನಕನು ಇಲ್ಲಿ ಅಷ್ಟಾದಶ ವರ್ಣನೆಯ ದಾಸನಾಗಿಬಿಟ್ಟಿದ್ದಾನೆ. ಉಷೆಯ ಅದೇ ಅರಳಿದ ಯೌವನಕ್ಕೆ ತಕ್ಕ ಸೂಚ್ಯತೆ–ಮಾಧುರ್ಯ ಇಲ್ಲಿ ಕಾಣದೆ ಉತ್ಕಟ ಲಂಪಟತೆ ತೋರಿ ಬರುತ್ತದೆ. ಔಚಿತ್ಯದ ಮಾನದಂಡದಿಂದ ಈ ಬಣ್ಣನೆಯನ್ನು ವಿಮರ್ಶಿಸಬೇಕು.

ಆದರೆ ಮುಂದಿನ ವಿಪ್ರಲಂಭ ಶೃಂಗಾರದ ಚಿತ್ರಣ ಚಿತ್ತವೇಧಕವಾಗಿದೆ. ಕನಸು ಹರಿಯಿತು. ಅತೃಪ್ತ ಪ್ರಣಯಿನಿ ಕಂಗೆಟ್ಟಳು...ಪ್ರಾಣೋಪನ ತಡವಿ ನೋಡಿದಳು ಎಂಬ ಹೃದ್ಯವಾದ ಬಣ್ಣನೆಯಿದೆ. ಕಂಗೆಟ್ಟಳು. ಭ್ರಾಂತಿಗೊಂಡಳು. ಮಾಣದೆ ಮಗುಳರಸಿದಳು, ನಿಡಿಗಣ್ಣಿಂದ ನಿಟ್ಟಿಸಿದಳು, ನಯನದಿಂ ಮಿಡಿದಳು ಬಾಷ್ಪಾಂಬುವನು ಇತ್ಯಾದಿ ಭಾವವ್ಯಂಜಕವಾದ ಶಬ್ದ ಮಾಣಿಕ್ಯ ಕೋಶವನ್ನು ಗಮನಿಸಬಹುದು. ಈ ಹುಡುಕು ಕಣ್ಣಿನ ಚಪಲೆಯನ್ನು ಕುರಿತ "ಏಣ ನಿಭಾಯತೇಕ್ಷಣೆ" ಎಂಬ ಶಬ್ದ ಪ್ರಯೋಗ ತುಂಬ ಹೃದಯಂಗಮ–ಸಾರ್ಥಕ. ಅದರ ಜೊತೆ ಜೊತೆಯಲ್ಲಿಯೇ... ಕಾಮದೇವನ ಬಾಣಕ್ಕೆ ಗುರಿಯಾದಳಾಕೆ ಎಂದು ಕವಿ ಚಿತ್ರವನ್ನು ಪೂರ್ಣಗೊಳಿಸುತ್ತಾನೆ. ಕಮ್ಮಗೋಲನ ಬಾಣದಿಂದ

ತತ್ತರಿಸುವ ತರಳೆ ! ಇಂಥ ಪ್ರಥಮ ಪ್ರಣಯದ ಆವೇಗಕ್ಕೆ ಅನುಕಂಪದ ಆರ್ದ್ರತೆಯುಳ್ಳ ಸಖ್ಯೋಪಚಾರವೇ ಔಷಧವಷ್ಟೆ ! ಅಳಬೇಡ ಬಾರೆನ್ನ ಕಂದ ಎಂದು ಸಖಿ ಅಮರ್ದು ಅಪ್ಪುತ್ತಾಳೆ. ಸಂತೈಸುತ್ತಾಳೆ, ನಿನ್ನವನು ಎಲ್ಲಿದ್ದರೂ ಸರಿಯೇ ಹುಡುಕಿ ತರುವೆ ಎಂದು ಭರವಸೆ ನೀಡುತ್ತಾಳೆ. ಹುಡುಗಿಯ ಹೃದಯ ಅರಳುತ್ತದೆ–ದಳದಳ ಕಮಲದಂತೆ. ಸಖಿಯನ್ನೇ ಮೋಹದಿಂದ ಅಪ್ಪಿ ಮುದ್ದಾಡುತ್ತಾಳಂತೆ... ಕನಕನಲ್ಲಿ ಭಾವದ ಉತ್ಕಟತೆ ಹೆಚ್ಚು. ಅದರಿಂದಲೇ ಆತನ ಕಾವ್ಯ ರಸೋತ್ಕಟವಾಗುತ್ತದೆ ಎಂಬುದಕ್ಕೆ ಈ ಬಣ್ಣನೆಗಳು ಸಾಕ್ಷಿಯಾಗಿವೆ. ಇಂಥ ಮನೋಧರ್ಮಕ್ಕೆ ಸಂಭೋಗಶೃಂಗಾರವನ್ನು ತೀರವಾಚ್ಯವಾಗಿಸುವುದೂ ವಿಪ್ರಲಂಭದಲ್ಲಿ ಕಣ್ಣುತುಂಬಿ ಬರುವ ವಿರಹೋತ್ಕಟತೆಯನ್ನು ಹೊಮ್ಮಿಸುವುದೂ ತೀರ ಸಹಜ. ಸಹೃದಯ ರಂಜಕವೆನಿಸುವುದರಲ್ಲಿ ಕನಕದ ವಿಪ್ರಲಂಭದ ಚಿತ್ರಣಕ್ಕೆ ಮೊದಲ ಮನ್ನಣೆ ಸಲ್ಲಬೇಕು.

೩

ಕನಕದಾಸರನ ಜನಪ್ರಿಯ ಕೃತಿ 'ನಳಚರಿತ್ರೆ'ಯ ಆಧಾರದ ಮೇಲೂ ಈ ಅಂಶವನ್ನು ಪರಿಶೀಲಿಸಬಹುದು. ಅದೊಂದು ಪ್ರಣಯದ ಮಹಾಗಾಥೆ. ತರಂಗಿಣಿಯಲ್ಲಿ ಶೃಂಗಾರ ರಸಕ್ಕೆ ವೀರವು ಪೋಷಕವಾಗಿ ಬಂದಂತೆ ಇಲ್ಲಿ ಕರುಣರಸವು ಹೊನಲಾಗಿ ಹರಿದು ಶೃಂಗಾರ ಶರಧಿಯನ್ನು ಸೇರುತ್ತದೆ. ರಸಿಕ ಪ್ರಣಯಿಗಳ ಮಿಲನ–ವಿಧಿಯ ಉಪಟಳದಿಂದ ದುಸ್ಸಹವಾದ ವಿಯೋಗವಿದ್ದರೂ ಪುನಸ್ಸಮಾಗಮದ ಮಂಗಳ ಕಥೆಯಾದುದರಿಂದ, ಈ ಕಾವ್ಯದಲ್ಲೂ ಶೃಂಗಾರದ ವಿಜೃಂಭಣೆಯೇ. ಅಲ್ಲಿಯಂತೆ ಇಲ್ಲಿಯೂ ಕವಿಬೇಟಕ್ಕೆ ಒತ್ತು ಹೆಚ್ಚು. ಕನಕನ ಈ ಮನೋಧರ್ಮ ತುಂಬ ಕುತೂಹಲವನ್ನುಂಟು ಮಾಡುತ್ತದೆ.

ವಿದರ್ಭ ದೇಶದ ದೊರೆ ಭೀಮನೃಪಾಲ, ಪುತ್ರಾಕಾಂಕ್ಷೆಯಿಂದ ಯಾಗವನ್ನಾಚರಿಸಿದ ಫಲವೇ ಕುವರಿ ದಮಯಂತಿ. ಅವನ ಬಾಲಲೀಲೆಗಳ ಚಿತ್ರಣಕ್ಕೆ ಏಕೋ ಕವಿ ಕೈಹಾಕಲೇ ಇಲ್ಲ. ನಾಮಕರಣವನ್ನು ಬಣ್ಣಿಸುವ ಒಂದು ಅವಸರದ ಪದ್ಯದ ನಂತರ ಕೂಡಲೇ ತಾರುಣ್ಯದ ಲಾವಣ್ಯದ ಬಣ್ಣನೆಗೆ ದುಡುಕುತ್ತಾನೆ. ಶೃಂಗಾರದತ್ತಲೇ ಕವಿಯ ಕಣ್ಣು. ನಿರಿಗುರುಳು, ಹವಳದ ತುಟಿ, ಉರುತರದ ತೋಳು...ಇತ್ಯಾದಿ "ಹರಿಯ ಮಧ್ಯದ ಹಂಸಗಮನದ ಗುರುಕುಚದ" ಷೋಡಷಿಯ ಲಾವಣ್ಯ. ಮುಖ್ಯವಾಗಿ ರತಿಗೆಣೆಯೆನಿಪ ಸುಂದರಿ. ರಾಜಸಭೆಯಲ್ಲಿ ನಳನೃಪನ ಶೀಲ ಸೌಂದರ್ಯದ ಕೊಂಡಾಟವಾಗುತ್ತಿದ್ದರೆ ಚಪಲೆಯ ಕಿವಿ ಅತ್ತಲೇ ಹರಿಯುತ್ತವೆ. ಕಣ್ಣು ಕಾಣದ ರೂಪವನ್ನು ಮನವೇ

ಚಿತ್ರಿಸತೊಡಗುತ್ತದೆ.

> "....ನೆನೆದುದಂತಃಕರಣ ಹೆಚ್ಚಿದ ಚಿತ್ತವೃತ್ತಿಯಲಿ ।
> ನೆನೆದು ಬರೆದಳು ನಳನ ರೂಪವ
> ನನುನಯದಿ ಚಿತ್ರದಲಿ ಮಿಗೆ ಸಂ
> ಜನಿಸಿತವನಲಿಮೋಹ...."

ಎಂಬ ಮಾತುಗಳನ್ನು ಗಮನಿಸಬೇಕು. ಅಂತಃಕರಣದ ಆರ್ದ್ರತೆ, ಪ್ರಣಯದ ಸ್ನಿಗ್ಧತೆ, ಸರಿಯೇ ಭಾಮಿನೀ ಲಾಸ್ಯದಲ್ಲಿ ಸಾರ್ಥಕವಾಗಿದೆ, ಮನ್ಮಥನ ಬೇಟೆಗೆ ಬಿದ್ದ ಹರಿಣ ಕಿಶೋರಿ ಈಗ ಈ ಕನ್ನೆ, ಅವಳ ಚಿತ್ತ ವಿಕಳತೆಯನ್ನು ಕವಿಯೇ ಚಿತ್ರಿಸಲಿ :

> "ಉಣ್ಣಳನ್ನವ ಕಾಮಗತ್ತಲೆ
> ಕಣ್ಣಿನಲಿ ಪೆರ್ಚಿದುದು ಸತಿಯರ
> ಮನ್ನಣೆಗೆ ಮೈಗೊಡಳು ಬಲು ಬೇಸರದಿ ಬಳಲುವಳು ।
> ಬಣ್ಣಿಸಿಯೆ ಮಾತಾಡಲೊಳ್ಳಳು
> ಬಣ್ಣಗುಂದಿದ ದೇಹದೊಳಗೆಳ
> ವೆಣ್ಣುಗಳ ಸೌಖ್ಯವನು ತೊರೆದಳು ಮದನನೆಸುಗೆಯಲಿ ॥" [೧-೩೮]

ಹರಿಹರೆಯದ ವ್ಯಾಮೋಹ ಚಿತ್ರಣ ತುಂಬ ಚೆಲುವಾಗಿ, ಉತ್ಕಟವಾಗಿ ಮೂಡಿಬಂದಿದೆ. ಕನ್ನಡದ ಮುದ್ದು ನುಡಿಯ ಬೆಡಗನ್ನೂ ಪರಿಭಾವಿಸಬೇಕು. ಉಣ್ಣು, ಬಣ್ಣ, ಎಳವೆಣ್ಣು, ಕಣ್ಣು, ಇತ್ಯಾದಿ ಎದೆಗೆ ಗುರಿಯಿಟ್ಟು ಬೀಸುವ ನನೆವಿಲ್ಲನ ಹೂ ಬಾಣಗಳಂತಿರುವ ಶಬ್ದ ಸಿಂಚನ. ಕಾಮಗತ್ತಲೆ ಎಂಬ ಸಮಾಸದ ಉತ್ಕಟ ಭಾವಭಿವ್ಯಂಜನೆಯನ್ನು ಮುಖ್ಯವಾಗಿ ಗಮನಿಸಬೇಕು. ಕಣ್ಣರೆಪ್ಪೆಯ ಸುತ್ತ ಹಬ್ಬಿದ ಕಪ್ಪು ನೆರಳು. ಕವಿಬೇಟದಲ್ಲೇ ಕಮರಿಹೋದ ಕುವರಿ. ಎದೆಗೆರಗಿದ ಗೆಳತಿಯರು ಬಳಲಿದ ಭಾಮಿನಿಗೆ ಪರಿಪರಿಯಾಗಿ 'ಶೈತ್ಯೋಪಚಾರ' ಮಾಡಿದರಂತೆ, ಉದ್ಯಾನವನ, ಎಳೆತಳಿರ ನೆಳಲು, ಅಲರ ಪನ್ನೀರು, ಕರ್ಪುರಗಂಧ, ಆಲವಟ್ಟದ ತಂಗಾಳಿ, ಹೂಹಾಸಿಗೆ, ಇವುಗಳೇ ಬಳಸಿದ ಪರಿಕರ, ಬಳಸಿಕೊಂಡ ಪರಿಸರ. ಆದರೇನು ? ಕಾಮಿನಿಯ ಪರಿತಾಪ ಮತ್ತೂ ಹೆಚ್ಚಿತು. ಇಲ್ಲಿ ತರುಣಿ, ಕೋಮಲೆ, ರಾಜಕುವರಿ ಎನ್ನದೆ ದಮಯಂತಿಯನ್ನು ಕಾಮಿನಿ ಎಂದುದರ ಶಬ್ದೌಚಿತ್ಯವನ್ನು ಗಮನಿಸಬೇಕು. ಮಾಡಿದುದೂ ವ್ಯರ್ಥ ಶೈತ್ಯ-ಉಪಚಾರ! ಏನು ಮಾಡಲು ತೋಚದೆ ಕಂಗೆಟ್ಟ ಸಖಿಯರನ್ನು "ಚಾಪಳೆಯರು" ಎನ್ನುವುದೂ ಕವಿಯ ರಸಪ್ರಜ್ಞೆಗೆ ಸಾಕ್ಷಿ

[೧–೪೧].

ಇತ್ತ ನಿಷಧ ಭೂಪಾಲನು ದಮಯಂತಿಗೆ ಒಲಿದುದೂ ಶಬ್ದದ ಮೋಹಕತೆಯಿಂದಲೇ. ದೇಶಸಂಚಾರ ಮಾಡಿಬಂದ ಬ್ರಾಹ್ಮಣನ ಬಾಯಿಂದ ಚೆಲುವೆಯ ಬಣ್ಣನೆ. ಸೊಬಗು ಮುಕ್ಕಳಿಸುವ ಎಲ್ಲ ತಾಣಗಳನ್ನು ಕವಿ ಸೂರೆಗೊಂಡಿದ್ದಾನೆ. ಕೆನ್ನೆಯ ಮೇಲೆ ಓಲೆ ಆಡುವಾಗ, ಸೆರಗು ಜಾರಿದಾಗ, ಮೊಲೆ ಕುಸಿದಾಗ, ಸೊಂಟ ಅಲುಗಾಡಿದಾಗ, ಮಂದಹಾಸ ಚೆಲ್ಲುವಾಗ, ತೂಗುವ ತುರುಬಿನ ಭಾರಕ್ಕೆ ಕೊರಳು ಬಾಗಿದಾಗ, ಕೈಯಲ್ಲಿ ವೀಣೆ ಹಿಡಿದಾಗ... ಹೀಗೆ ಚಪಲ ಬ್ರಾಹ್ಮಣ "ಸ್ತ್ರೀರೂಪಮೆರೂಪಂ, ಶೃಂಗಾರಮೆ ರಸಂ" ಎನಿಸಿಬಿಡುತ್ತಾನೆ. "ಆವಾವ ಇಂದ್ರಿಯಂಗಳ ವಿಷಯಮಂ ಶ್ರೋತ್ರದೊಳು ಉದ್ಭಾವಿಪ ಶಬ್ದ" ಜಾಲ ಇದು. ಕವಿಯ ರಸಿಕ ನೇತ್ರಗಳಿಗೆ ಬಿಡುವೆ ಇಲ್ಲ.[1] ಈ ಬಣ್ಣನೆಯ ಫಲಶ್ರುತಿಯೇನು ? ತಲೆದೂಗಿದ ನೃಪತಿಯ ಕಣ್ಣಾಲಿಗಳ ಮುಂದೆ ಸರೋಜಮುಖಿ ಗೋಚರಿಸಿದಂತೆ ಆಯಿತಂತೆ. ಥಟಕ್ಕನೆ ಉದಿಸಿದ ಮೋಹ ! "ಲೋಲಲೋಚನೆಯೆಂತು ತನಗಹಳು" ಎಂಬುದೇ ಚಿಂತೆ. ಸರೋಜಮುಖಿ ಲೋಲಲೋಚನೆ ಎಂಬ ರೂಪಕಗಳು ಇಲ್ಲಿ ಶೃಂಗಾರ ಸ್ಯಂದಿಯಾಗಿ ಸಾರ್ಥಕವೆನಿಸುತ್ತವೆ. ಪ್ರಣಯಾರ್ದ್ರಳಾದ ತೇಲುಗಣ್ಣಿನ ಸುಂದರಿ ಅವಳು. ಮುಖ್ಯವಾಗಿ ಕನಕನ ಎರಡೂ ಕೃತಿಗಳಲ್ಲಿ ಕಿವಿಬೇಟದ ಮೋಹಕತೆ!

ಇವನು ರಾಜಕಾರ್ಯಾಸಕ್ತನಾದ ಜನಪನಲ್ಲವೆ? ಇಂಥ ಗಂಡಿಗೆ ಶೈತ್ಯೋಪಚಾರವೆಲ್ಲಿ? ಅವನ ಘನವಿರಹಕ್ಕೆ ಔಷಧವೆಂದರೆ ಬೇಂಟೆಯ ವಿನೋದ. ಬಲೆ ಕೋಲು ಕಣ್ಣಿ–ತುರಗ........ಇತ್ಯಾದಿಗಳ ಸಿದ್ಧತೆ. ಕನಕನ ಸ್ವಾನುಭವದ ಕಥನವಿರಬೇಕು. ಮುಖ್ಯವಾಗಿ ಹೆಣ್ಣಿನ ವಿರಹದುರಿಗೂ ಗಂಡಿನ ವಿರಹವ್ಯಥೆಗೂ ಸಾಂತ್ವನದ ಬಗೆ ಬೇರೆ ಬೇರೆ. ಕವಿ ಔಚಿತ್ಯಪ್ರಜ್ಞೆಗೆ ಸಾಕ್ಷಿ ಬೇರೆ ಏಕೆ?

ಜೀವರಕ್ಷಕನಾದ ನಳಮಹಾರಾಜನ ಕೃತಜ್ಞತೆಯ ಕಾಣಿಕೆಯಾಗಿ ಹಂಸದೌತ್ಯ, ಅದರ ಪರಿಣಾಮವಾಗಿ ನಳದಮಯಂತಿಯರ ವಿವಾಹ. ಕವಿ ಮೊದಲೇ ಭೂಮಿಕೆಯನ್ನು ಸಿದ್ಧಪಡಿಸುತ್ತಾನೆ. "ನಳನ ರೂಪನು ಕೇಳಲೀ

---

೧. ಮುಂದ ಕವಿ ದೈವಭಾಗದಲ್ಲಿ ತನ್ಮಯನಾಗಿ ಹಾಡಿದ ಕೀರ್ತನೆಯಲ್ಲಿನ 'ನವಮೋಹನಾಂಗಿಯರ ಎವೆಯಿಕ್ಕದೆ ನೋಡುವ ನೋಟವು ನಿನ್ನದು" ಎಂಬ ಭಾವವನ್ನು ಕುತೂಹಲದಿಂದ ಗಮನಿಸಬಹುದು.

ಹದನಾಯ್ತು ಸತಿಗೆ. ನೃಪಾಲನಂಗವು ಗೋಚರಿಸಲೆಂತಹುದೋ ವಿರಹಾಗ್ನಿ" [೩–೧]. ಈ ವಿಪ್ರಲಂಭದ ಚಿತ್ರಣದ ಸೋಗಸನ್ನು ಚಿಂತಿಸಬಹುದು: ಲಲನೆ ನಿದ್ರಾಂಗನೆಯನುಳಿದಳು....ಹೊಲಬುದಪ್ಪಿದ ಮನ ಸತಿಯರು ಸುಳಿದರೆ ನಳನೃಪ ಬಂದನೆಂದು ಕಳವಳಿಸಿ...ನಿಲುಕಿ ನೋಡುವಳೊಮ್ಮೆ, ಕಾಣದೆ ಹಲುಬುವಳೊಮ್ಮೆ............." ಇತ್ಯಾದಿ ಮುಂದೆ ಸ್ವಯಂವರದ ಸಿದ್ಧತೆ, ದಮಯಂತಿಯ ಬಗೆಗೆ ದೇವತೆಗಳ ಮೋಹ. ಕುಟಿಲೋಪಾಯ, ಶಾರದೆಯ ಕೃಪೆಯಿಂದ ದಮಯಂತಿ ನಳನನ್ನು ಗುರುತಿಸಿ ವರಿಸಿದುದು ಇತ್ಯಾದಿ ಸಂಗತಿಗಳು ಒಂದೇ ಸಂಧಿಯ ೭೪ ಷಟ್ಪದಿಗಳಲ್ಲಿ ನಾಗಾಲೋಟದಿಂದ ಓಡಿಬಿಡುತ್ತವೆ. ಕಥನ ಕವಿಯ ಕಾತರ ! ಸ್ವಯಂವರದ ವಧುವಿನ ಚಪಲಗತಿಯಲ್ಲಿ ಕುಮಾರವ್ಯಾಸನ ನೆರಳು ಇಣಿಕಿದಂತಾಗುತ್ತದೆ. ಇದು ಸಹಜವೇ.

ನೂತನ ವಧೂವರರ ಸಂಯೋಗ ಶೃಂಗಾರಕ್ಕೆ ಕವಿ ಎಡೆಯನ್ನೇ ಒದಗಿಸಿಲ್ಲ. ನಾಲ್ಕನೆ ಸಂಧಿಯ ಎರಡನೆ ಪದ್ಯದಲ್ಲೇ ಇಬ್ಬರು ಮಕ್ಕಳ ಜನನ. ಕವಿಯ ದೃಷ್ಟಿ ಪ್ರಾಯಶಃ ಮುಂದಿನ ವಿಧಿವಿಲಾಸದ ಕರುಣ ಕಥೆಯತ್ತ. ಈ ಸಂಧಿಯ ಅವಧಿಯಲ್ಲಿ ಆಗಲೇ ಚಪಲ ಚಂಚಲ ಲೋಲಲೋಚನೆ "ಘನಸತಿ"ಯಾಗಿ ಬಿಟ್ಟಿದ್ದಾಳೆ. ಪತಿಯೊಡನೆ ಕಾನನಕ್ಕೆ ಗಮಿಸುತ್ತಾಳೆ. ಅಲ್ಲಿಯ ದಾಂಪತ್ಯದ ಚಿತ್ರಣದಲ್ಲಿ ಮನಬೆಸೆದ ತನುಬೆಸೆದ ಪ್ರೌಢ ಪ್ರಣಯದ ಪರಾಕಾಷ್ಠೆ. ನಳ ಮಹಾರಾಜನ ಶೋಕದ ಉಕ್ಕು. ಅದರ ಉತ್ಕರ್ಷದಲ್ಲಿ ಹನಿಯುವ ಕರುಣೆಯ ಬಿಂದುಗಳು. ನಳಚರಿತ್ರೆಯ ಉದ್ದಕ್ಕೂ ಕರುಣೆಯ ತೆರೆತೆರೆಗಳೇ ಎದ್ದು ವಾಚಕನ ಹೃದಯವನ್ನು ಕರಗಿಸಿ ಬಿಡುವಂತಹ ರಸೋತ್ಕಟ ಚಿತ್ರಣಗಳಿವೆ. ಕಲಿಪುರುಷನ ಉಪಟಳಕ್ಕೆ ಸಿಲುಕಿದ ಅನುರಾಗಭರಿತ ದಂಪತಿಗಳ ಅಳಲೇ ಇಲ್ಲಿಯ ಪ್ರಧಾನ ಕತೆಯಷ್ಟೆ ! ಕೋಡಿವರಿಯುವ ಕಣ್ಣೀರು ಕಾವ್ಯದಲ್ಲಿ ತುಂಬಿದೆ. ಮೊದಲ ಮೂರು ಸಂಧಿಗಳಲ್ಲಿ ತುಂಬ ಹೃದಯಂಗಮವಾಗಿ ಹರಿದ ಪ್ರಣಯಕಥೆಗೆ, ಪುಷ್ಕರನೊಡನೆ ಜೂಜಾಟದ ಸನ್ನಿವೇಶದಿಂದಲೇ ಕರುಣೆಯ ತಿರುವು ಬಂದುಬಿಡುತ್ತದೆ. ನಳನೊಡನೆ ದಮಯಂತಿಯ ಸ್ವಯಂವರವಾದುದನ್ನು ದೇವೇಂದ್ರನಿಂದ ಕೇಳುತ್ತಿದ್ದಂತೆಯೇ ಹರಕುಗಡ್ಡದ ಕಲಿಪುರುಷನ ಕಣ್ಣು ಕೆಂಡವಾಗುತ್ತದೆ. "ಎನಗೆ ಸರಿಯಾರಿನ್ನು ತಹೆನಾ ವನಿತೆಯನು ಕುಹಕದಲಿ ನಳಭೂವರನ ಕೆಡಿಸಿಯೆ ಕಾನನಕೆ ಕಳುಹುವೆನು" ಎಂದು ಅವನು ಗುಡುಗುತ್ತಿರುವಂತೆಯೇ ಎದೆ ಝುಲ್ಲೆಂದು ನಡುಗುತ್ತದೆ ವಾಚಕನಿಗೆ. ಇದೇನು ವಿಪತ್ತು ಬಂತು ನವವಧೂವರರಿಗೆ ಎಂದು ಜೀವ ತಲ್ಲಣಿಸುತ್ತದೆ ಹೀಗೆ

ಮುಂದಿನ ಕರುಣ ಕಥೆಗೆ ಕವಿ ರಂಗಮಂಟಪವನ್ನು ನಿರ್ಮಿಸುತ್ತಾನೆ. ರೌದ್ರವು ಮೂಲರಸ, ಅದರ ವಿಕಾಸದಿಂದ ಕರುಣ ಎಂದು ಕಾವ್ಯ ಮೀಮಾಂಸೆ ಸಾರುವುದರ ಪ್ರತ್ಯಕ್ಷ ಪ್ರಮಾಣವಿದು.

ಪುಷ್ಕರನನ್ನು ಪ್ರಲೋಭನಗೊಳಿಸಿ, ನಳನೊಡನೆ ಜೂಜಾಡಿಸಿ ರಾಜ್ಯವನ್ನು ಕಲಿಪುರುಷ ಗೆದ್ದುಕೊಡುವಾಗ, 'ಬಾಡಿತರಸನ ವದನ ಸಭೆಯಲಿ...ಸಜ್ಜನರು ಮರುಗಿದರು....ಆಡಲೇನು?' ಎಂದು ಕವಿ ಪ್ರಶ್ನಿಸುತ್ತಾನೆ....ಸಹೃದಯ ಬಿಸುಸುಯ್ಯುತ್ತಾನೆ. ನೋಡನೋಡುತ್ತಲೇ ನವವಧುವಿನ ಕನಸಿನ ಗೋಪುರ ಕುಸಿಯಿತು. 'ಕಮಲ ವನದಲಿ ಮಂಜುಸುರಿದಾ ಕ್ರಮದ ಬಗೆಯಲಿ" ಸತಿ ಬಾಡಿ ಹೋದಳು. ಧೈರ್ಯ ಕುಸಿಯಿತು. ಕವಿ ಬಳಸುವ ರಾಹುಗ್ರಹ ಸೋಂಕಿದ ದ್ಯುಮಣಿಯಂತೆ ಇತ್ಯಾದಿ ಉಪಮೆಗಳು ರಸಪೋಷಕವೇ. ಆದರೆ "ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾಗಿ" ಎಂಬುದು ಮಾತ್ರ ಕುಮಾರವ್ಯಾಸನಿಂದ ಅನಾಮತ್ತು ಎತ್ತಿಕೊಂಡದ್ದು ! ಹಾಗೆಯೇ "ಅಪಜಯದ ನಾರಿಯ ಸೆರಗು ಹಿಡಿದೆನು" ಎಂಬುದು.

ಮುಂದಿನದೆಲ್ಲ ಅಡವಿಯ ಕೋಟಲೆಗಳ ಶೋಕಸಾಗರ "ಹೇಳಲೇನರಸ" ಎಂಬ ಉದ್ಗಾರದಿಂದಲೇ ಶೋಕಭಾವ ಅಂಕುರಿಸುತ್ತದೆ. "ತಾಳಿಗೆಗಳೊಣಗಿದವು, ಸತಿಯಳ ಕಾಲೊಡೆದು ಸುರಿವರುಣ ಜಲದಲಿ ಬಟ್ಟೆ ಕೆಸರಾಯ್ತು" ಎಂಬಲ್ಲಿ ಅದು ಪಲ್ಲವಿಸುತ್ತದೆ. ಸುಕುಮಾರಿಗೆ ಬಂದ ಭಂಗ ಕರುಳು ಕತ್ತರಿಸುವಂತಹುದು. ಹಾಯೆನುತ ಬಿಸುಸುಯ್ದು, "ಹರಹರಾಯೆನುತರಸ ಬಿಸುಸುಯ್ದು, ತಾನೆಂತು ಪೋಗುವೆನೆನುತ ಬಿಸುಸುಯ್ದು" ಇಂತಹ ಉದ್ಗಾರಗಳು ಶೋಕದ ಉದ್ದೀಪನಕ್ಕೆ ನೆರವಾಗಿ ಸಾರ್ಥಕವೆನಿಸುತ್ತವೆ.

ಹಲವು ಯೋಜನದ ಬರಿಗಾಲ ನಡಿಗೆ, ಒಡೆದ ರಕ್ತಒಸರುವ ಕಾಲುಗಳು ಕೆಸರಾದ ಬಟ್ಟೆ, ಎಳೆಬಾಳೆಯ ಸುಳಿ ಅನಲನ ಜಳದಲ್ಲಿ ಬಾಡಿದಂತೆ ಬಸವಳಿದ ಅಬಲೆ. (ಈ ಶಬ್ದದ ಸಾರ್ಥಕತೆಯನ್ನು ಗಮನಿಸಬೇಕು.) ದೊರೆಯ ಶೋಕ ಕೋಡಿವರಿಯುತ್ತದೆ.

"ಲಲಿತ ಹೇಮದ ತೂಗುಮಂಚದ
ಹೊಳೆವ ಮೇಲ್ವಾಸಿನಲಿ ಮಲಗುವ
ಲಲನೆಗೀ ವಿಧಿ ಬಂದುದೇ ಹಾಯೆನುತ ಬಿಸುಸುಯ್ದು" (೫–೨)

ಈ ನಿಟ್ಟುಸಿರು, ಹಾ ವಿಧಿ ಎಂಬ ಉದ್ಗಾರ ಕರುಣೆಗೆ ವ್ಯಂಜಕ. ಸತಿಯ ಸಂಕಟವನ್ನು ನೋಡಲಾರದೆ, ನನ್ನಿಂದ ನಿನಗೀ ಪಾಡಾಯಿತೆ ? ತೌರಿಗಾದರೂ

ತೆರಳಬಾರದೆ ? ಎಂದು ಹಂಬಲಿಸುವ ದೊರೆ. ಶೋಕ ತಾರಕ ಸ್ವರಕ್ಕೇರುತ್ತದೆ. ಸತಿಯನ್ನು ತೋಳಿನಲ್ಲಿ ಬಿಗಿಯಪ್ಪುತ್ತಾನೆ, ತೊಡೆಯಲ್ಲಿ ಕೂರಿಸಿಕೊಳ್ಳುತ್ತಾನೆ. ಕಂಬನಿಯನ್ನು ಸೆರಗಿನಲ್ಲೊರಸುತ್ತಾನೆ, ಸತಿಯನ್ನು ಅಕ್ಕರೆಯಿಂದ ಸಂತೈಸುತ್ತಾನೆ. ಈ ಬಿಗಿಯಪ್ಪುಗೆಯಲ್ಲಿರುವುದು ಶೃಂಗಾರದ ರತಿಯಲ್ಲ–ಕರುಣೆಯ, ಶೋಕಸ್ವರ. ಮಾಗಿದ ದಾಂಪತ್ಯ ಇದು. ಅದರ ಚಿತ್ರಣಕ್ಕೆ ಕರುಣರಸ ಪೋಷಕವಾಗಿಯೇ ಬಂದಿದೆ.

"ಪರಮ ಸುಖವಿಹ ಸತಿಗೆ ವಿಧಿಯಿದು
ಹರಹರಾ ಎನುತ ಕಂಬನಿದುಂಬಿದನು ಮರುಗಿ ।"

ಸತಿಯ ದುರವಸ್ಥೆ ವಿಭಾವವಾಗಿ, ಕಳವಳದ ಉದ್ಗಾರ, ಅಶ್ರುಗಳೇ ಅನುಭಾವವಾಗಿ ನಳನ ಶೋಕದ ಉತ್ಕಟತೆಯಿಂದ ಸಿದ್ಧಿಸುವ ಕರುಣ ರಸವಿದು. ಮುಂದಿನದು ರಸೋತ್ಕಟ ಚಿತ್ರ. ಸತಿಯನ್ನು ತೊರೆದು ಹೊರಟಾಗ ವಿಧಿಹತನಾದ ದೊರೆಗೆ ಪ್ರಾಯಶಃ ಪುನಃ ಸಮಾಗಮದ ಆಸೆಯೇ ಇಲ್ಲ. ಅಲ್ಲಿಯದೂ ಶೋಕದ ಉತ್ಕಲತೆಯೇ.

"ಹತ್ತೆಂಟಡಿಯ ದಾಂಟುವ...........ಮರಳಿ ನಿಜಸತಿಯೆಡೆಗೆ ತಿರುಗುವ....ಚಂದ್ರಬಿಂಬಾನನೆಯನೀಕ್ಷಿಸುವ........ದುಃಖದಲಿ ಮೆಲ್ಲಡಿಯಿಡುವ..." ಇತ್ಯಾದಿ. ಅಲ್ಲದೆ–

"ಮರುಗುವುದು ಮನವೊಮ್ಮೆ...ಕಂಗಳು ಮರಳಿ ನೋಡುವುದೊಮ್ಮೆ.... ಕಳವಳಕೆ ಬೀಡಾದುದಾ ಹೃದಯ" ಈ ಭಾವತುಮುಲಗಳು ತೆರೆತೆರೆಯಾಗುತ್ತಾ "ಕರಗಿತರಸನ ಧೈರ್ಯ" ಎಂಬಲ್ಲಿ ಕರುಣರಸೋತ್ಕಟವಾಗಿ ಕಾವ್ಯ ಕಂಬನಿ ಮಿಡಿಸುತ್ತದೆ. ನಳನಿಗೊದಗಿದ ವಿಪತ್ಪರಂಪರೆಗಳೆಲ್ಲವೂ ಉತ್ಕಟ ಶೋಕದ ಚಿತ್ರಣಗಳು. "ಕಾಲವಾವನ ಕೀಳುಮಾಡದು ಶೂಲಪಾಣಿಯೆ ಬಲ್ಲ" ಎಂದು ಕವಿಯ ಉದ್ಗಾರ. ದಮಯಂತಿಯನ್ನು ಏಕಾಂಗಿಯಾಗಿ ಬಿಟ್ಟು ತೆರಳುವ ನಳನ ಮನದ ತಲ್ಲಣವೊಂದನ್ನು ಉದಾಹರಿಸಿದರೆ ಸಾಕು.

ವನಿತೆ ಮಲಗಿಹಳೊ ಅಧೈರ್ಯದಿ
ನೆನವಳೊ ದೈವವನು ನಿದ್ರೆಯ
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ
ಕನಲಿ ವಿಧಿಯನು ಬೈವಳೊ ಕಂ

ಬನಿಯ ಸುರಿವಳೊ ಶೋಕದಲಿ ನಿಜ
ತನುವ ಬಿಡುವಳೊ ಕಾಂತೆಯೆಂತಿಹಳೆಂದು ಚಿಂತಿಸಿದ ॥ (೭–೨)

ಪುನಸ್ಸಮಾಗಮದ ಆಸೆಯನ್ನೇ ತೊರೆದುಬಿಟ್ಟ ನಳನನ್ನು ಗಮನಿಸಿದರೆ ಇದು ಶೋಕದ ಉದ್ದೀಪನದಿಂದುಂಟಾಗುವ ಕರುಣ ರಸವೇ. ವರ್ಣನೆಯಲ್ಲಿ ಶಬ್ದದ ಆಡಂಬರವಿಲ್ಲ. ಸರಳ ದೇಸಿಯ ಬಣ್ಣನೆ. ಉಪಮೆ ಉತ್ಪ್ರೇಕ್ಷೆಗಳ ಅಬ್ಬರವಿಲ್ಲ. ಕೇವಲ ಸ್ವಭಾವೋಕ್ತಿಯ ನೆರವಿನಿಂದ ಉತ್ಕಟ ರಸಪ್ರಪಂಚವನ್ನು ನಿರ್ಮಿಸಿದ್ದಾನೆ.

ಇತ್ತ ಕಾನನದಲ್ಲಿ ಏಕಾಕಿನಿಯಾದ ದಮಯಂತಿಯ ದುರವಸ್ಥೆ ಕರುಳು ಕಲಕುವಂತಹುದು. ಆಕೆ ಪತಿಯನ್ನು ಕಾಣದೆ ದುಗುಡಗೊಂಡದ್ದು, ಹಾದಿಯಲ್ಲಿ ಉರಗನನ್ನು ತುಳಿದದ್ದು, ಬಾಣಲೆಯಿಂದ ಬೆಂಕಿಗೆ ಬಿದ್ದಂತೆ ಶಬರನ ಕೈಗೆ ಸಿಲುಕಿದುದು. ಮುಂತಾದವು ಶೋಕದ ಉತ್ಕರ್ಷವನ್ನು ಚಿತ್ರಿಸಿ ಕರುಣದ ಹೊನಲನ್ನೇ ಹರಿಸುತ್ತವೆ. ಮೊದಲೇ ಮಕ್ಕಳ ವಿರಹ, ಏಕಮಾತ್ರ ಆಸರೆಯಾದ ನಂಬಿದ ಪತಿಯೂ ಕೈ ಬಿಟ್ಟಿದ್ದಾನೆ. ವನಿತೆಯ ಶೋಕದ ದಾರುಣತೆಗೆ ಪ್ರಕೃತಿಯೇ ಕಂಬನಿಯಿಡುವಂತೆ ತೋರುತ್ತದೆ. ಅವಳ ಪಾತಿವ್ರತ್ಯವೊಂದೇ ದಮಯಂತಿಯ ರಕ್ಷಣೆಗೆ ಒದಗಿದುದು. ದಂಪತಿಗಳು ವಿಧಿಯ ಕೋಟಲೆಗೊಳಗಾಗಿ ಪಡಬಾರದ ಪಾಡುಪಟ್ಟ ಕಥೆ ನಳಚರಿತ್ರೆ ಕರುಣರಸದ ಉತ್ಕಟ ಚಿತ್ರಣದಿಂದಲೇ ತುಂಬ ಜನಪ್ರಿಯವಾಗಿದೆ. ಕನ್ನಡ ಜನ ಜೀವನದಲ್ಲಿ ನಳ–ದಮಯಂತಿಯರು ಚಿರಸ್ಥಾಯಿಯಾದ ನೆನಪನ್ನು ಅಚ್ಚೊತ್ತಿಬಿಟ್ಟಿದ್ದಾರೆ.

ಹಗಲಲ್ಲಿ ಮೈಮುರಿದೆದ್ದ ಸತಿ ನಳನನ್ನು ಕಾಣದೆ ಕಾತರಿಸಿದಳು. ಬನಬನವೆಲ್ಲ ಹುಡುಕಿ ದಣಿದಳು. ಅವಳ ಶೋಕದ ಉದ್ಗಾರಗಳಲ್ಲಿ ವಚನಕಾರ್ತಿ ಅಕ್ಕನ ಪಡಿನೆಳಲು ಗೋಚರಿಸುವಂತಿದೆ. "ಕಾಣಿರೇ ಅರಸಂಚೆಗಳೆ ನೀವ್, ಕಾಣಿರೇ ಶುಕಪಿಕ, ಕಾಣಿರೇ ಮೃಗಪಕ್ಷಿಗಳೇ....." ಇತ್ಯಾದಿ. ಇಲ್ಲಿಯ ಪುನರುಕ್ತಿ, ಆದಿಯಮಕ, ಆ ಕರುಣೆಯ ಸ್ವರವನ್ನೇ ಮೀಂಟುತ್ತದೆ.

ಮುಂದೆ ಅನಿವಾರ್ಯವಾಗಿ ತೌರು ಸೇರಬೇಕಾಗಿ ಬಂದ ಸತಿ. ನಳನ ಕಷ್ಟ ಪರ್ವದತ್ತ ಕವಿಯ ಲೇಖನಿ ಹೊರಳುತ್ತದೆ. ದೈವ ಒಲಿದು, ವಿದರ್ಭದಲ್ಲಿ ನಿಜರೂಪದ ರಮಣನನ್ನು ಕಂಡು ಹರ್ಷಿತೆಯಾದ ದಮಯಂತಿಯ ಚಿತ್ರ. ವಿಧಿಯು ಸೃಜಿಸಿದ ಅಗ್ನಿಕುಂಡಕ್ಕೆ ತನ್ನನ್ನು ಒಡ್ಡಿಕೊಂಡು, ಬೆಂದರೂ ಭಸ್ಮವಾಗದೆ ಉಳಿದ ಗರತಿ ಅವಳೀಗ. ಎರಡು ಮಕ್ಕಳ ತುಂಬುತಾಯಿ. ಮಾಗಿದ ಹಣ್ಣು. ಹಿಂದಿನಂತೆ ಹಸಿಯ ಬಣ್ಣನೆಗೆ ಕವಿ ಕೈಹಾಕುವುದೇ ಇಲ್ಲ. ನಾರಿಯರ

ಸಂದಣಿಯ ನಡುವೆ ನಡೆದು ಬಂದ ಗಂಭೀರ ಗರತಿ, 'ದೇವ ಮುಕುಂದ ರಕ್ಷಿಸು' ಎಂದು ನಂದನರ ಸಹಿತ ರಥವೇರುವ ಮಹಾರಾಣಿಯಿವಳು. ತನ್ನರಮನೆಯ ಮುಂದೆ ರಥವಿಳಿವ ಸಾಮ್ರಾಜ್ಞಿಗೆ ಕವಿ ಸಿಂಪಡಿಸುವುದು ಪನ್ನೀರಿನ ರಾಗರಂಜನೆಯನ್ನಲ್ಲ. "ಭೋಗಿಶಯನನ ಕರುಣ ನಿಮಗಾಗಲೆಂದು ಸುಖಿಯಾಗೆಂದು ಹರಿಸಿದರಾಗ ಮುನಿನಿಕರುಂಬವಕ್ಷತೆ ತಳಿದರಂಗನೆಗೆ" ಎಂಬ ಮಂಗಳ ಚಿತ್ರಣವನ್ನು ಗಮನಿಸಬೇಕು. ಹಿಂದಿನಂತೆ ಕಾಮದ ಕಾತರವಿಲ್ಲ, ಭೋಗಲಾಲಸೆಯ ಅಬ್ಬರದ ಆಲಿಂಗನವಿಲ್ಲ. ಕವಿಯ ಔಚಿತ್ಯಪ್ರಜ್ಞೆಯನ್ನು ನೋಡಿ:

> "ಹರಕೆಗಳ ಕೈಗೊಳುತ ಸತಿ ಬಂ
> ದರಮನೆಯ ಹೊಕ್ಕಳು ನೃಪಾಲನ
> ಚರಣ ಕಮಲಕೆ ನಮಿಸಿ ಪಡೆದಳು ಪತಿಯ ಚಿತ್ತವನು ॥"

ಈ ಶುಭಶೃಂಗಾರದ ಗಾಂಭೀರ್ಯವನ್ನೂ ಪ್ರಸನ್ನ ಮಧುರತೆಯನ್ನು ಗಮನಿಸಬೇಕು.

ತರಂಗಿಣಿ ಹಾಗೂ ನಳಚರಿತ್ರೆ ಎರಡರಲ್ಲೂ ಶೃಂಗಾರವೇ ಪ್ರಧಾನ ರಸ. ಆದರೆ ಮೊದಲನೆಯದರಲ್ಲಿ ಪಡ್ಡೆ ಹುಡುಗಿಯರ–ಹುಡುಗರ ಚೆಲ್ಲಾಟದ ಚಾಂಚಲ್ಯ. ಬಹುಮಟ್ಟಿಗೆ ಜಘನಸ್ತನ ನಿಷ್ಠವಾದ ದೋರೆಗಾಯಿ ಅದು. ನಳಚರಿತ್ರೆಯಲ್ಲಿ ಶೃಂಗಾರ ಬೇಟದೊಡಲಲ್ಲೇ ಅಂಕುರಿಸಿದರೂ, ತನ್ನ ಉನ್ಮಾದವನ್ನು ಕಳೆದುಕೊಂಡು ಬದುಕಿನ ಬೇಗೆಯಲ್ಲಿ ಬೆಂದ ಮಾಗಿದ ರಸಫಲ. ವೀರರಸದ ನೆರವು ಪಡೆದ ಉನ್ಮತ್ತ ಶೃಂಗಾರ ಒಂದರಲ್ಲಿ, ಕರುಣೆಯ ಭಾಗೀರಥಿಯಲ್ಲಿ ಮಿಂದ ಪ್ರಸನ್ನ ಗಂಭೀರ ಶೃಂಗಾರ ಎರಡನೆಯದರಲ್ಲಿ. ತರಂಗಿಣಿಯ ಅಪ್ಪುಗೆ–ಬಿಸಿಯುಸಿರು–ತುಂಬಿ ತುಟಿಗಳ ನಾಲಗೆ ಜೇನು ಉನ್ಮಾದಕ. ನಳಚರಿತ್ರೆಯ ತಕ್ಕೈಸುವಿಕೆ, ಮುಂಡಾಟ, ಕಂಬನಿಯೊರಸು, ಸಾಂತ್ವನದಾಯಿ, ಚೈತನ್ಯದಾಯಿ. ಮಂಗಳಮಯ ಶುಭದೃಷ್ಟಿಯ ಶುಭಶೃಂಗಾರ ಉಷಾ ಅನಿರುದ್ಧರದು, ಚಿತ್ರಲೇಖೆಯ ಕುಂಟಣಿತನದಿಂದ ನಡೆದ–ಕದ್ದು ಮುಚ್ಚಿ ನಡೆದ–ಕಳ್ಳವಿವಾಹದ ರತಿ. ನಳದಂಪತಿಯರ ವಿವಾಹ, ವಿಧ್ಯುಕ್ತವಾಗಿ–ಮಜ್ಜನ, ಶೋಭಾನ, ವಧುಶೃಂಗಾರದ ಸಕಲ ಮಂಗಳದ ನಡುವೆ ವರಮುಹೂರ್ತದಲ್ಲಿ ಗುರು ಹಿರಿಯರ ಸಮ್ಮುಖದಲ್ಲಿ ನಡೆದ ವಿವಾಹಮಂಗಳ ಎಂಬುದನ್ನು ಮರೆಯುವಂತಿಲ್ಲ. ಮುಖ್ಯವಾಗಿ ತರಂಗಿಣಿಯಲ್ಲಿ ಹಲ್ಲಿಗೆ ಹುಚ್ಚು ಹಿಡಿಸುವ

ಮಾವಿನ ದೋರೆಗಾಯಿ. ನಳಚರಿತ್ರೆಯ ಶೃಂಗಾರ ಅಧರ–ಉದರಗಳನ್ನು ತಣಿಸುವ ಸಮೃದ್ಧ ರಸಾಲ.

೪

ಮಹಾಕಾವ್ಯ ಪದ್ಧತಿಗೆ ಅನುಗುಣವಾಗಿ ವಿವಿಧ ರಸಭಾವಗಳ ಹೋಳಿಯೇ ಕನಕನ ಕಾವ್ಯದಲ್ಲಿ ಕಂಡು ಬರುತ್ತದೆ. ಶೃಂಗಾರದಲ್ಲೇ ಅಂತರ್ಗತವಾಗಬಹುದಾದ ವಾತ್ಸಲ್ಯದ ಚಿತ್ರಣಗಳನ್ನು ಕೊಂಚ ಗಮನಿಸಬಹುದು. ಈ ಭಾವವನ್ನು ಪ್ರತ್ಯೇಕ ರಸವಾಗಿ ಪರಿಗಣಿಸುವ ಅವಶ್ಯಕತೆ ತೋರದು. ತಾಯಿ ಹಸುವಿಗೆ ಕರುವಿನಲ್ಲಿ, ಮಾತೆಗೆ ಕಂದನಲ್ಲಿ, ಪಿತನಿಗೆ ಕುವರಿಯಲ್ಲಿ ಇರುವ ಹೃದಯರಾಗವೂ ರತಿಮೂಲವಾದದ್ದೇ. ಕಾಮನೆಯ ಉದಾತ್ತೀಕರಣ ಬೇರೊಂದು ರಂಗು ಅದು ಎಂಬುದು ಮನಶ್ಶಾಸ್ತ್ರಕ್ಕೆ ಒಪ್ಪಿಗೆಯಾದ ಸಂಗತಿ. ಅದನ್ನು ಸಕಾಮ–ಅಕಾಮ ಎಂದು ವಿಭಾಗಿಸುವ ತುರ್ತು ಸಲ್ಲದು. ಮುಖ್ಯವಾಗಿ ಅಲ್ಲಿರುವುದು ಗಾಢ ಅನುರಕ್ತಿ. ಅದರ ಉತ್ಕರ್ಷದಿಂದ ಉಂಟಾಗುವ ಪರಿಣಾಮರಮಣೀಯತೆ ಚಿತ್ತ ವಿಕಾಸವೇ ವಿನಹ ಚಿತ್ತ ವಿಸ್ತಾರ, ವಿಕ್ಷೋಭ, ವಿಕ್ಷೇಪಗಳಲ್ಲ ಎಂಬುದನ್ನು ಗಮನಿಸಬೇಕು.[1]

ಪಶುಪಕ್ಷಿಗಳನ್ನು ಆವರಿಸಿರುವ ಈ ವಾತ್ಸಲ್ಯ ಭಾವವನ್ನು ಕುರಿತು ಕನಕನೇ ಉದ್ಗಾರ ತೆಗೆಯುತ್ತಾನೆ : "ಶಿಶುವಾತ್ಸಲ್ಯಮಿನ್ನೆಂತುಟೊ ಬಹುಮುಗ್ಧ । ಪಶು ಪಕ್ಷಿಗಳಿಗಿನಿದಾಯ್ತು ॥" (ಮೋ. ತ. ೨–೨೩). ಪ್ರದ್ಯುಮ್ನನ ಜನನದಿಂದ ರುಕ್ಮಿಣಿಯ ಹಿಗ್ಗು ಕೋಡಿವರಿದಿದೆ. ಮಗುವಿನ ಲಾಲನೆಯಲ್ಲಿ ಮೈಮರೆಯುತ್ತಾಳೆ.

ಎಣ್ಣೆಯನೂಡಿ ನೀರೆರೆದು ತೂಪಿರಿದಾಗ  
ಕಣ್ಣಿಗೆ ಕಜ್ಜಳವೆಚ್ಚಿ  
ಬಣ್ಣಿಸಿ ಸೊಡರ್ವೆಟ್ಟನಿಟ್ಟು ಪಾಲೆರೆದೋವಿ  
ಚಿಣ್ಣನ ಪಕ್ಕೆಗೈದಿದಳು ॥ (೨–೧೩)

ಈ ಅಕ್ಕರೆಯ ಉಕ್ಕಿನಲ್ಲಿ ರುಕ್ಮಿಣಿ ಯದುಕುಲಾಧೀಶನ ಪಟ್ಟಮಹಿಷಿಯಾಗಿಲ್ಲ. ಎಲ್ಲ ಸಂಸಾರವಂದಿಗರಂತೆ ವಾತ್ಸಲ್ಯದ ಅಮ್ಮನಾಗಿದ್ದಾಳೆ. ಮಹಾರಾಣಿಗೆ ಮಗುವನ್ನು ನೋಡಿಕೊಳ್ಳಲು ದಾದಿಯರಿಗೆ ಕೊರತೆಯೆ?

---

೧. ವಿವರಗಳಿಗೆ ಇದೇ ಲೇಖಕನ 'ಕುವೆಂಪು ಕಾವ್ಯದಲ್ಲಿ ವಾತ್ಸಲ್ಯ ಭಾವ' ಎಂಬ ಕೃತಿಯನ್ನು ನೋಡಬಹುದು.

ಆದರೆ ಈ ತಾಯಿ ತಾನೇ ಎಣ್ಣೆಯೂಡಬೇಕು. ನೀರೆರೆಯಬೇಕು, ಕಜ್ಜಳವಿಕ್ಕಬೇಕು, ಪಾಲೆರೆಯಬೇಕು. ಮಗುವಿಗೆ ಕಣ್ಣೆಸರಾದೀತು ಎಂದು ಮುಂದೆ ಮಂತ್ರಿಸಿದ ವಿಭೂತಿಯನ್ನೂ ತೊಡೆಯುತ್ತಾಳೆ. ಇಲ್ಲಿಯ ಮುದ್ದಾದ ಕನ್ನಡ ನುಡಿಗಳು, ಸಾಂಗತ್ಯದ ಲಾಲಿತ್ಯ ವಾತ್ಸಲ್ಯ ವ್ಯಂಜನೆಗೆ ತುಂಬ ಉಚಿತ.

ಅಭಿಮಾನ-ಕಳವಳ ಈ ಎರಡು ವಾತ್ಸಲ್ಯದ ಎರಡು ಮುಖ್ಯ ಅಂಶಗಳು. ಇದು ನನ್ನ-ನನ್ನದೇ ಆದ ಮಗು. ಜಗತ್ತಿನಲ್ಲೇ ಇದನ್ನು ಸರಿಗಟ್ಟುವ ಶಿಶುವಿಲ್ಲ ಎಂಬುದು ಅಭಿಮಾನವಾದರೆ, ಇಂಥ ಮುದ್ದು ಮಗುವನ್ನು ಯಾರು ಕದ್ದೊಯ್ವರೋ ಎಂಬ ಆತಂಕ ತಾಯಿಯನ್ನು ಎಂದೂ ಕಾಡುತ್ತದೆ.[೧] ಕನಸಿನಲ್ಲೂ ಕವ್ವನೆ ಕವರುವ ಕಳವಳ ಅದು. ಮಗುವಿನೊಡನೆ ಮಣಿಮಂಚದಲ್ಲೊರಗಿದರೂ ರುಕ್ಮಿಣಿಯ ಆತಂಕ ಕೆಟ್ಟ ಕನಸಾಗಿ ಕಾಡುತ್ತದೆ. ಮಗುವನ್ನು ಕಾಣದೆ ದುಃಖ ಉಕ್ಕುತ್ತದೆ. ದೀಪ ಹಿಡಿದು ಮೂಲೆ ಮೂಲೆ ಹುಡುಕುತ್ತಾಳೆ. ಬಾಣದ ತುದಿ ತಾಗಿದ ಹುಲ್ಲೆಯಂತೆ ಕಂಗೆಡುತ್ತಾಳೆ.

> "ಕರೆದೊಡೋಯೆನ್ನಬಾರದೆ ಕಂದ ನಿನ್ನಯ
> ಸಿರಿಮೊಗಗಾಣದೆಂತಿರಲೊ
> ಪರಿತಾಪವ ಪುಟ್ಟಿಸಿ ಪೋಗ ಬಂದೆಯ
> ಹರಿಕೊಟ್ಟ ವರ ಬಯಲಾಯ್ತು ॥ (೨-೪೯)

ಇದು ತಾಯಿಯ ಉತ್ಕಟವಾದ ಅಳಲು, ಕನಸು ನನಸುಗಳ ಅಂತರವನ್ನೇ ಅಳಿಸಿ ಹಾಕಿದ ಅಳಲು. ಎಂಥ ಒಳ್ಳೆಯ ಮಗು ನನ್ನದು. ಹಾಲಿಗೆ ಹಂಬಲಿಸುವವನೇ ಅಲ್ಲ. ಅಂಬೆಗಾಲಿಕ್ಕಿ ತೊಳಲುವವನಲ್ಲ... "ಬಾಲನೆಲ್ಲಿಗೆ ಹೋದನವ್ವ?" ನಿನ್ನ ಮುದ್ದು ಲಲಾಟದಲ್ಲಿ ಹುಟ್ಟಿನೊಡನೆ ಸಾವು ಎಂದು ವಿಧಿ ಬರೆದುಬಿಟ್ಟನೆ ! ಎಂದು "ಕಡು ದುಗುಡದಲಿ ಪಲ್ಮೊರೆದಳು" ಎಂಬ ಬಣ್ಣನೆಯನ್ನು ನೋಡಬೇಕು. ಅಂತರಂಗದ ಗಾಢ ಶೋಕ, ಜೊತೆಜೊತೆಗೇ ಕ್ರೂರ ವಿಧಿಯನ್ನು ಕುರಿತ ಕಡುಕೋಪ-ಹಲ್ಲು ಕಡಿಯುವಷ್ಟು. ಸಂಚಾರಿ ಭಾವದ ಸುಳಿಗಳು ಎದ್ದು ಬಿದ್ದು ಹೋಗುತ್ತಿವೆ. ಅಂತಃಪುರವೇ ರುಕ್ಮಿಣಿಯ ರೋದನಮಯವಾಯ್ತು. ಕಂಡ ಕನಸು ಬಾಹ್ಯದ ಅಭಿವ್ಯಕ್ತಿಯಲ್ಲಿ

---

೧. ಹೋಲಿಸಿ : ಪುರಂದರ ದಾಸರ 'ಜಗದೋದ್ಧಾರನ ಆಡಿಸಿದಳೆಶೋದಾ........." ಹಾಗೂ "ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ...... ಭಾಗವತರು ಕಂಡರೆ ಎತ್ತಿ ಕೊಂಡೊಯ್ವರೋ"

ಪರ್ಯವಸಾನವಾಗಿದೆ. ತಂಗಿ ಸತ್ಯಭಾಮೆ ಸವತಿ ಮಾತ್ಸರ್ಯವನ್ನು ತೊರೆದು ಸಂತೈಸುತ್ತಾಳೆ. ಇಲ್ಲಿ ಬಳಸಿರುವ "ಅಕ್ಕ" "ಅವ್ವಾ" "ಒಯ್ದರು ತಾಯೆ" ಎಂಬ ಸಾಂತ್ವನದ ಸವಿ ನುಡಿಗಳನ್ನು ನೋಡಬೇಕು. ಕಡೆಗೆ ಕೃಷ್ಣನೇ ಬಂದು "ಬಿಗಿಯಪ್ಪಿ...ಗಲ್ಲವ ಪಿಡಿದು ಮುದ್ದಿಸಿ...ತಲ್ಲಣಿಸದಿರೆನ್ನ ನೋಡಿ ನೀ ಮರೆ" ಎಂದು ಲಲ್ಲೈಸಬೇಕಾಯಿತು. ಆಕೆಯ ಮನಸ್ತಾಪ ಆಗಲೇ ತಂಪಾದುದು.

ಈ ಪ್ರಸಂಗದಲ್ಲಿ ಮಡುಗಟ್ಟಿ ನಿಂತಿರುವ ವಾತ್ಸಲ್ಯಭಾವ ರಸೋತ್ಕಟವಾಗಿದೆ.

* * *

ಕಾಮದಹನದ ಸನ್ನಿವೇಶ. ನೋಡ ನೋಡುತ್ತ ಹರನ ಉರಿಗಣ್ಣಿಗೆ ತುತ್ತಾದ ಮನ್ಮಥ ಬೂದಿಯ ರಾಸಿಯಾಗಿಬಿಟ್ಟನಲ್ಲ. ರತಿಯ ಕೋಡಿವರಿವ ಕರುಣೆಗೆ ವಾತ್ಸಲ್ಯದ ಅಂಚುಕಟ್ಟುತ್ತಾನೆ ಕವಿ.

......ಬಳಿಕ ಕಂಡೀಶ್ವರಿ ಗಂಧೋದಕದಿಂದೆ
ತೊಳೆದಳು ರತಿಯ ನುಣ್ಮೊಗವ । [೩–೬೧]

ಜಗನ್ಮಾತೆಯ ಹೃದಯ ನೊಂದ ಹೆಣ್ಣನ್ನು ಕಂಡು ಕರಗಿಹೋಗಿದೆ. ನೆನೆನೆನೆದು ಏಕೆ ಅಳುತ್ತೀ, ಶಿವನನ್ನೇ ಕಂಡು ಕೇಳಿಕೋ ಏಳು ಎಂದು ಕರೆದೊಯ್ದು ಕಾಮಾರಿಯ ಕಾಲಿಗೆ ನಮಸ್ಕಾರ ಮಾಡಿಸುತ್ತಾಳೆ. ರತಿಯ ಮುತ್ತೈದೆತನಕ್ಕೆ ಅಮ್ಮನ ಶಿಫಾರಸು ! ಹರನ ಪಾದಪದ್ಮಗಳಿಗೆ ಬಂದೆರಗಿದವಳು "ಕುಳಿರುವೆಟ್ಟಿನ ಕುವರಿ"–ತನ್ನ ತಪವನ್ನು ಕೆಡಿಸಿದ ಮನುಮಥನ ಮಡದಿಯಲ್ಲ. ತೆಗೆದಪ್ಪಿ ಸಂತೈಸುವಾಗಿನ ಮಾತು ಅಕ್ಕರೆಯ ಜೇನು–''..... ಅಳವಳಿಯದಿರವ್ವಾ...ಕಂದರ್ಪ ಕೃಷ್ಣನ ಮಗನಾಗಿ ಮರುಹುಟ್ಟು ಪಡೆದು ನಿನ್ನನ್ನು ನಲಿಸುತ್ತಾನೆ" ಎಂಬ ಭರವಸೆ.

* * *

ತಾಯ್ತನದ ವಾತ್ಸಲ್ಯದ ಚಿತ್ರಣದಲ್ಲಿ ಕನಕನನ್ನು ಸರಿಗಟ್ಟುವವರು ತೀರ ಕಡಿಮೆ. ಈ ಅಂತರಂಗದ ಸುಳಿಯಲ್ಲಿ ದೇವ–ಮಾನುಷ–ರಕ್ಕಸ ಭೇದಗಳೆಲ್ಲ ಅಳಿಸಿ ಹೋಗುತ್ತವೆ. ಹರನ ವರದಂತೆ ರತಿ ಬಾಣಾಸುರನ ಅರಮನೆಯಲ್ಲಿ ಆಶ್ರಯ ಪಡೆದು ಪ್ರದ್ಯುಮ್ನನ ಬೇಟದ ನಿರೀಕ್ಷೆಯಲ್ಲಿದ್ದಳಷ್ಟೆ. ಆಕೆ ಅಸುರನ ಅರಮನೆಗೆ ನಡೆತಂದಾಗ, ಹುಡುಗಿಯ ಚೆಲುವಿಗೆ ರಕ್ಕಸನ ಎದೆ ಝಲ್ಲೆಂದು ತಲ್ಲಣಿಸಿತು. ಎಚ್ಚರವೇ ಪಲ್ಲಟವಾಯಿತು. ಹೇಗೊ ಎಚ್ಚತ್ತುಕೊಂಡು ಪತ್ನಿಯನ್ನು ಕರೆಸಿ ಪರಿಚಯಿಸಿದ. ಮತ್ತೆ ತಾಯ್ತನದ ಅಕ್ಕರೆಯ ಚಿತ್ರ. ರತಿಯ ಕತೆ ಕೇಳಿ

ಬಿಸುಸುಯ್ದು ರಾಣಿ ಬಗೆಬಗೆಯಾಗಿ ಸಂತೈಸುತ್ತಾಳೆ. ಹರಣ ತೊರೆದರೆ ಏನಾಯ್ತು? ಬರಿಯ ದುರ್ಮರಣ, ಧೈರ್ಯ ತಂದುಕೋ ಎಂದು ವಿವೇಕ ಹೇಳುತ್ತಾಳೆ. ಗಮನಿಸಿ :

"ತೊಡೆದಳು ರತಿಯ ನೇತ್ರಾಂಬುವನುಗುರಿಂದೆ
ಮಿಡಿದಳು ತನ್ನ ಕಣ್ಣೀರ
ಪಿಡಿದಳು ಗಲ್ಲವ ಮುದ್ದಿಸಿ ಮುದವೆತ್ತು
ನುಡಿದಳು ಖಳರಾಯನರಸಿ ॥" [೪–೨೧]

ಇಲ್ಲಿಯ ಭಾವ ಪ್ರವಾಹವನ್ನು ನೋಡಬೇಕು. ರಸಸ್ಯಂದಿಯಾದ ವಾತ್ಸಲ್ಯವನ್ನು ಗಮನಿಸಬೇಕು. ರತಿಯ ಕಂಬನಿ ತೊಡೆಯುವ ಅರಸಿಯ ಕಣ್ಣಂಚಿನಲ್ಲೂ ಕಂಬನಿ. ಲಲ್ಲೈಸುತ್ತಾ, ಚಿಂತೆಬೇಡ ಖಳರಾಯನಿಗೆ ಹೇಳಿ ಎಲ್ಲವನ್ನೂ ಸರಿಮಾಡುತ್ತೇನೆ ಎಂಬ ಭರವಸೆ. ಶಂಬರನನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ. ತನ್ನನ್ನು ಒಲ್ಲದ ಹೆಣ್ಣು ಈ ರತಿ ಎಂಬ ಬಿಂಕ ಅವನಿಗೆ. ಅಂತಃಪುರದಲ್ಲಿ ದಾಸಿಯಾಗಿರಲಿ ಬೇಕಾದರೆ ಎನ್ನುತ್ತಾನೆ. ಅವಳನ್ನು ಪ್ರದ್ಯುಮ್ನನೊಡಗೂಡಿಸಬೇಕಾದರೆ ನಾರದ ಮುನಿಯ ವಿವೇಕದ ಉಪದೇಶವೂ ಅಗತ್ಯವಾಯಿತೆನ್ನಿ.

ॐ

ಕಾವ್ಯ ಪ್ರಪಂಚದಲ್ಲಿ ತೀರ ಅಪರೂಪವಾದ ಒಂದು ಸನ್ನಿವೇಶವನ್ನು ಗಮನಿಸಬೇಕು. ಶಿಶುವಾತ್ಸಲ್ಯ ಹಾಗೂ ಪ್ರಣಯದುತ್ಕಟತೆ ಒಂದೇ ಎಡೆಗೆ ಬೆರೆತ ವಿಚಿತ್ರ ಸನ್ನಿವೇಶ. ಈ ಎರಡು ಭಾವಗಳೂ ಶೃಂಗಾರದಲ್ಲಿ ನೆಲೆಯಾಗುತ್ತವೆ ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನ. ನಾರದ ವಚನದಂತೆ ಶಂಬರಾಸುರ ಪ್ರದ್ಯುಮ್ನನನ್ನು ಕದ್ದು ತರುವಾಗ ಮಗುವಿನ ಮೇಲಿನ ಕರುಣೆ ಮೇಲುಗೈಯಾಗಿ ಶಿಶುವನ್ನು ನೀರಿಗೆ ಎಸೆದುಬಿಟ್ಟ ಅದನ್ನು ಮೀನು ನುಂಗಿ ಅದು ಶಂಬರನ ಅಡುಗೆ ಶಾಲೆಯನ್ನೇ ಸೇರಿತಷ್ಟೆ. ಬಾಣಸಕ್ಕೆ ಬಂದ ಮತ್ಸ್ಯವನ್ನು ಸೀಳಿದರೆ ಮುದ್ದು ಮಗು! ರತಿ ಈಗ ಚಕಿತೆ. ಮಗುವನ್ನು ಕಾಣಕಾಣುತ್ತ ಚಿತ್ತದಲ್ಲಿ ರತಿ ಮೊಳೆತುಬಿಡುವುದೆ? ಆ ಸ್ಥಾಯಿಯ ಅನುಭಾವವೇನು? ರಂಗಾದ ಕಣ್ಣು, ಬೆವರಿಟ್ಟ ಮೊಗ, ಕಂಠಗದ್ಗದ, ರೋಮಾಂಚನ. ತರಳನ ಮೇಲಿನ ಭ್ರಮೆಗೆ ತಾನೇ ನಾಚಿದಳಂತೆ ಆ ಪತಿವ್ರತೆ. ಆಗ ಈ ಮೀನಗರ್ಭಜಾತ ಕಂದನನ್ನು ಕಾದುಕೋ, ಅವನು ನಿನ್ನ ಆಣ್ಮ ಎಂದು ನಭೋವಾಣಿಯಾಯಿತಲ್ಲ. ಮುಂದೆ ಪತಿಯಾಗುವವನು ಈಗ ಅಕ್ಕರೆಯ ಶಿಶು ! ಕಾಮಿನಿಯ ಭಾವತುಮುಲ

ಹೇಗೆ ತೆರೆತೆರೆಯಾಗಿ ಸರಿಸರಿಯುತ್ತದೆ ಕನಕನ ಕಾವ್ಯದಲ್ಲಿ ! ಮೊದಲು ಅಕ್ಕರೆಯ ತಾಯಿಯಂತೆ ಬಿಸಿನೀರಲ್ಲಿ ಮೈತೊಳೆದು ಭಸಿತ ಮಂತ್ರಿಸಿ, ರಕ್ಷೆಯಿಡುತ್ತಾಳೆ. ಅಂಜನ ಇಕ್ಕುತ್ತಾಳೆ. 'ಗಂಡನ' ಮೀನು ನುಂಗಿತೇ ಎಂಬ ರೋಷ ! ಮೀನನ್ನು ಕಡಿಕಡಿದು ಸಂಡಿಗೆ ಮಾಡಿ ಬಿಟ್ಟಳಂತೆ ! ಬೇರೆ ಯಾರೊ ಹೆತ್ತ ಮಗು ಎಂದು ಶಂಬರನನ್ನು ವಂಚಿಸಿ ಕಂದನನ್ನು ಕಾಪಿಡುವಾಗ ಅವಳ ವಿಚಿತ್ರ ಮನಃಸ್ಥಿತಿಯೇನು? ಪತಿಯೆಂದು ತಿಳಿತಿಳಿದೂ ತಾಯ್ತನದ ಅಕ್ಕರೆಯೊಂದನ್ನೇ ಅಭಿವ್ಯಕ್ತಿಸಲು ಸಾಧ್ಯವೆ? ವಾತ್ಸಲ್ಯ–ಪ್ರಣಯಭಾವಗಳನ್ನು ಬೆಸೆದ ಈ ರೋಮಾಂಚಕ ಪ್ರಸಂಗ ಕಾವ್ಯಪ್ರಪಂಚದಲ್ಲಿಯೇ ಅಪೂರ್ವ ಎಂದು ನನ್ನ ವಿಶ್ವಾಸ. ವಾತ್ಸಲ್ಯವೂ ರತಿಮೂಲವಾಗಿ ಶೃಂಗಾರದಲ್ಲಿಯೇ ಪರ್ಯವಸಾನವಾಗುತ್ತದೆ ಎಂಬುದಕ್ಕೆ ಇದು ಮತ್ತೊಂದು ಪ್ರಬಲ ಸಾಕ್ಷಿ. ತಾಯಿಯಿಂದಲೇ, ಎದೆಯೂಡುವಾಗಲೇ ಮಗು ಪ್ರಣಯದ ಪ್ರಥಮ ಪಾಠವನ್ನು ಕಲಿಯುತ್ತದೆ ಎಂದು ಆಧುನಿಕ ಮನೋವಿಜ್ಞಾನ ಹೇಳುತ್ತದೆಯಲ್ಲವೆ? ಕನಕನ ಪ್ರತಿಭಾ ವಿಲಾಸವನ್ನು ನೋಡಿ :

> ...ಕಳಹಂಸಗಮನೆ ಬಾಲಕನ
> ತಳತಳಿಸುವ ದಿವ್ಯದೇಹದ ಮೇಲೆ ಕಂ
> ಗಳ ಹರಹಿದಳಳ್ತಿಯಲಿ । [೪–೬೭]

ಇನ್ನೂ ಮುಂದೆ :

> .. ಸುತನಂತೆ ನುಣ್ಮೊಲೆವಿಡಿವನು ಶತನಖಾಂ
> ಚಿತವ ಮಾಡುವನುರಸ್ಥಳದಲಿ
> ಕೃತಕದಿಂ ನಸುನಕ್ಕು ಮುದ್ದಿಸಲಧರಾ
> ಮೃತವುಂಡು ಬೆಳೆದುದಾ ಶಿಶುವು । [೪–೬೦]

ಈ ಸಂಮಿಶ್ರಭಾವದ ಉತ್ಕಟತೆಯನ್ನು ನಿಭಾಯಿಸುವಲ್ಲಿ ಕನಕ ಪೂರ್ಣ ಯಶಸ್ವಿಯಾಗಿದ್ದಾನೆ.

ವಾತ್ಸಲ್ಯದ ಸುಕುಮಾರ ಚಿತ್ರಣಗಳಲ್ಲಿ ಈ ಕವಿಯ ಲೇಖನಿ ಸ್ನೇಹಾರ್ದ್ರವಾಗುವುದನ್ನು ತರಂಗಿಣಿಯಲ್ಲಿ ಉದ್ದಕ್ಕೂ ಕಾಣಬಹುದು. ಕಾಮದಹನದ ಸಂದರ್ಭದಲ್ಲಿ ಸ್ವಯಂ ಗಿರಿಜೆಯಿಂದ ರತಿಯ ಸಾಂತ್ವನ ;

---

೧. ಹೋಲಿಸಿ : ಕುಮಾರವ್ಯಾಸ : ಊರ್ವಶಿ ಪ್ರಸಂಗ : "ಕಣ್ಮನವ ಹರಹಿದಳು ಅರ್ಜುನನಂಗೋಪಾಂಗದಲಿ" ॥

ನಮಸ್ಕರಿಸಿದ ರತಿಗೆ ಶಂಭುವೇ ವಸ್ತ್ರ ಭೂಷಣದ ಉಡುಗೊರೆಯಿತ್ತು ಕಳುಹಿಸಿಕೊಡುವುದು ; ಶಂಬರಾಸುರನ ಪತ್ನಿ ರತಿಯನ್ನು ಸ್ವಾಗತಿಸಿ ತಾಯ್ತನದ ಅಕ್ಕರೆಯಿಂದ ಉಪಚರಿಸುವುದು ; ಕಾಮಾಕ್ಷಿ ಅತ್ಯಂತ ಮಮತೆಯಿಂದ ಉಷೆಗೆ ವಸ್ತ್ರಭೂಷಣ–ಪರಿಮಳಗಳ ಉಡುಗೊರೆ ಈಯುವುದು, ಇಲ್ಲೆಲ್ಲ ಈ ಅಕ್ಕರೆಯ ಸ್ನಿಗ್ಧ ಮಾಧುರ್ಯವನ್ನು ಕಾಣಬಹುದು.

ನಳಚರಿತ್ರೆಯಲ್ಲಿ ವಾತ್ಸಲ್ಯದ ಚಿತ್ರಣಗಳು ಕಡಿಮೆ. ಕತೆಯ ಓಟ ಹೆಚ್ಚು ಮೂರು ಷಟ್ಪದಿಗಳಲ್ಲಿ ಭೀಮನೃಪಾಲನ ಯಜ್ಞ, ರಾಜಪತ್ನಿ ಗರ್ಭಿಣಿಯಾದುದು. ಪದ್ಮಾವತೀ ಜನನದ ಸಂಗತಿಗಳು ಮುಗಿದುಹೋಗುತ್ತವೆ. ಮಗುವಿನ ಬಾಲಲೀಲೆಗಳ ವರ್ಣನೆಗೆ ಕವಿ ಕೈಹಾಕಿಲ್ಲ. ನೇರವಾಗಿ ಯುವತಿಯ ಲಾವಣ್ಯದ ಚಿತ್ರಣಕ್ಕೆ ತುಡುಕುತ್ತಾನೆ [೧–೩೩]. ಮುಂದಿನದೆಲ್ಲ ಉತ್ಕಟ ಪ್ರಣಯದ ಆವೇಶ–ವಿರಹದ ಉತ್ಕಟತೆ. ಹಂಸಪಕ್ಷಿಯ ಪ್ರಸಂಗದಲ್ಲಿ ಮಾರ್ದವತೆಯ ಸುಕುಮಾರ ಚಿತ್ರಣವಿದೆ.

"ಒದರಿ ಕುಣಿಯಲು ಹಸ್ತದೊಳಗದ
ಕದಲದಂತಿರೆ ಪಿಡಿಯಲರಸನ
ವದನ ಕಮಲವ ನೋಡಿ ಹೆದರಿತು ಬಹಳ ಭೀತಿಯಲಿ ।"

ಎಂಬಲ್ಲಿ ರಾಜನ ಮನದಲ್ಲಿ ಅಕ್ಕರೆ ಸುಳಿದರೂ, ಅವನ ದೈತ್ಯಾಕಾರ–ಅದು ದಮಯಂತಿಗೆ ಎಷ್ಟೇ ಮೋಹಕವಿರಬಹುದು !–ವನ್ನು ಕಂಡ ಪುಟ್ಟ ಹಕ್ಕಿಯ ಬೆದರಿಕೆಯೇ ಪ್ರಧಾನ. ಮುಂದೆ ನಳನ ಅಭಯಪ್ರದಾನದ ನಂತರ ಹಂಸದ ಮಾತುಗಳಲ್ಲಿ ಸ್ನೇಹದ ಜೇನು ತೊಟ್ಟಿಕ್ಕುತ್ತದೆ. ಆದರೆ ಇದೇ ಹಕ್ಕಿ ಮೆಲ್ಲಡಿಯಿಡುತ್ತ ದಮಯಂತಿಯ ಬಳಿಗೆ ಬಂದಾಗ ವಾತ್ಸಲ್ಯ ಮಡುಗಟ್ಟಿ ನಿಲ್ಲುತ್ತದೆ. ಹುಡುಗಿಗೆ ಹಕ್ಕಿಯಲ್ಲಿ ಮೋಹ. ಕರಪಲ್ಲವ.....ನೂಪುರದ ಘಲು ಘಲು.....ಕುಸುಮಮಯ ನವ ಮಲ್ಲಿಗೆ. ಇಂಥ ಬಣ್ಣನೆಯಲ್ಲಿ ಶಬ್ದೌಚಿತ್ಯವು ಕಾಣುತ್ತದೆ.

* * *

ದಮಯಂತಿ, ನಳನಿಂದ ತೊರೆಯಲ್ಪಟ್ಟು ಕಾನನದಲ್ಲಿ ಪಡಬಾರದ ಕೋಟಲೆಗಳನ್ನು ಅನುಭವಿಸಿ ಚೇದಿರಾಜನ ನಗರಿಗೆ ಬಂದು ರಾಜಪತ್ನಿಯಲ್ಲಿ ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ. ರಾಣಿಯ ಮಾತೃವಾತ್ಸಲ್ಯದ ಚಿತ್ರಣ ಸೊಗಸಾಗಿದೆ. "...ಬಂದಪ್ಪಿ ಸೆರಗಿನೊಳೊರಸಿ ಕಂಬನಿಯ । ಬಿಡುವ್ಯಥೆಯ, ವರಭೂಷಣಂಗಳ ತೊಡು, ದುಕೂಲವನುಡು, ಸುಮಾಲ್ಯವ ಮುಡಿಗೆ

ಸೇರಿಸು...ಚಿಂತೆ ಬೇಡ...ತನಗೆ ಮಗಳು ಸುನೀತಿಯಾಕೆಯ ಮನೆಯೊಳಿರು ಅನವರತ ನೀನು" ಎನ್ನುವಲ್ಲಿ ಈ ವಾತ್ಸಲ್ಯದ ಸುಕುಮಾರ ಚಿತ್ರಣವಿದೆ [೫–೫೭]. ಭೀಮನೃಪಾಲನ ದೂತರು ದಮಯಂತಿಯನ್ನು ಹುಡುಕಿ ಬಂದಾಗ, ಸತ್ಯಸಂಗತಿಯೆಲ್ಲವನ್ನೂ ತಿಳಿದ ರಾಣಿಯ ತಾಯ್ತನದ ಅಕ್ಕರೆ ಮತ್ತೂ ಗಾಢವಾಗುತ್ತದೆ.

"ಬಾಲೆ ಬಿಡುಶೋಕವನು ಭೀಮನೃ
ಪಾಲನರಸಿಗೆ ತಂಗಿ ತಾ ತ
ನ್ನಾಲಯದಿ ಕಡುನೊಂದೆ ಮಗಳೇ"

ಎಂದು ಸಂತೈಸಿ ಆಲಂಗಿಸುತ್ತಾಳೆ. ಸುಬಾಹು ಮಹಾರಾಜನೂ ಅಕ್ಕರೆಯಿಂದ ತಕ್ಕೈಸಿ "ಕರಗಿ ಕಂದಿದೆ ಮಗಳೆ...ನಿನ್ನ ಪುರುಷನ ಕರೆಸಿ ಕೊಡುವೆನು...ಚಿಂತೆ ಬೇಡ" ಎಂದು ಭರವಸೆ ನೀಡುತ್ತಾನೆ. ಅಲ್ಲದೆ

"ತರಳೆ ಬಾರೆಂದೆನುತ ಕಣ್ಣಿನೊ
ಳೊರೆವ ಕಂಬನಿಗಳನು ಸೆರಗಿನೊ
ಳೊರಸಿ ದಮಯಂತಿಯನು ಮನ್ನಿಸಿ ಬಂದನೋಲಗಕೆ" [೭–೪೪]

ಇಂತಹ ವಾತ್ಸಲ್ಯದ ಚಿತ್ರಣಗಳಿವೆ.

* * *

ತಂದೆ ಭೀಮನೃಪಾಲನಿಗೆ ಕಳೆದು ಹೋದ ಮಗಳು ದೊರಕಿದ ಹಿಗ್ಗು. ಸುದ್ದಿ ಹೇಳಿದ ದೂತನನ್ನು ರತ್ನಾಭರಣಗಳಿಂದ ಮನ್ನಿಸುವುದಿರಲಿ. ದಮಯಂತಿ ಬಂದಳು ಎಂದ ಸಖಿಯರನ್ನೆ ಪ್ರೀತಿಯಿಂದ ತಕ್ಕೈಸಿಬಿಡುತ್ತಾನೆ. ಕನಕನ ಕಾವ್ಯದಲ್ಲಿ ಇಂಥ ಭಾವೋತ್ಕಟತೆ ಎಂದೂ ಮೇಲುಗೈಯಾಗಿದೆ. ನಿಧಿ ದೊರೆತಂತೆ ಬಂದ ಮಗಳಿಗೆ ಅಮ್ಮನ ಅಪ್ಪುಗೆ, ಸಖಿಯರ ಸ್ನೇಹದ ಸ್ವಾಗತ ; ಮಕ್ಕಳು ಅಮ್ಮ ಬಂದಳು ಎಂದು ಓಡಿಬರುತ್ತಾರೆ. ತಾಯಿ ದಮಯಂತಿ ಮಗ ಇಂದ್ರಸೇನನನ್ನು ತಬ್ಬುತ್ತಾಳೆ. ಮಗಳನ್ನು ಅಕ್ಕರೆಯಿಂದ ತೊಡೆಯ ಮೇಲೆ ಕೂರಿಸಿಕೊಳ್ಳುತ್ತಾಳೆ. ಪ್ರೀತಿಯಿಂದ ಮುದ್ದಾಡುತ್ತಾಳೆ. ಹುಡುಗಿ ಸಾಕಷ್ಟು ದೊಡ್ಡವಳೇ. ಆದರೇನು ? ದಮಯಂತಿ–

"ಮೊಗವನೀಕ್ಷಿಸಿ ಮೊಲೆಗಳಿ ದೊರೆ
ದುಗುವ ಹಾಲಿನ ಜನನಿ" [೭–೪೩].

ಯಾಗಿ ಬಿಡುತ್ತಾಳೆ. ವಾತ್ಸಲ್ಯದ ಸಾರ್ಥಕ ಚಿತ್ರಣವಿದು.

ಮುಂದೆ ಚಿತ್ರವಿಚಿತ್ರ ಸನ್ನಿವೇಶಗಳೊದಗಿ ನಳಭೂಪಾಲ ಅಡುಗೆ ಶಾಲೆಯನ್ನು ಸೇರಬೇಕಾಯಿತು. ದಮಯಂತಿಗೆ ಸಂದೇಹ. ಮಕ್ಕಳನ್ನು ಕರೆದು–

"ತರಳರಿಗೆ ನೀರೆರೆದು ಕಾಂಚನ
ವರದುಕೂಲವನಿತ್ತು ದಿವ್ಯಾ
ಭರಣ ಭೂಷಿತರಾದ ತನಯರ ದಾದಿಯರ ಕೈಯ
ಪಿಡಿದು..."

ತಂದೆಯಲ್ಲಿಗೆ ಕಳುಹುತ್ತಾಳೆ. ಕಣ್ಣೆದುರೇ ಸುಳಿದಾಡುವ ಮಕ್ಕಳನ್ನು ಕಂಡು ನಳನೇ ಹತ್ತಿರ ಕರೆದು ಎತ್ತಿ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಮುದ್ದಾಡುತ್ತಾನೆ. ಕಣ್ಣುಗಳಿಂದ ದೃಗುಜಲ ಉಕ್ಕಿಹರಿಯುತ್ತದೆ. ದಮಯಂತಿಗೆ ಇವನು ನಳನೆಂದು ನಿರ್ಧಾರವಾಗುತ್ತದೆ.

ಹೀಗೆ ವಾತ್ಸಲ್ಯದ ಚಿತ್ರಣಗಳು ರೇಸಿಮೆಯ ವಸ್ತ್ರಕ್ಕೆ ಅಂಚುಕಟ್ಟಿದಂತೆ ನಿರೂಪಿತವಾಗಿದ್ದರೂ, ಮುಖ್ಯವಾಗಿ ಅದು ಶೋಕಾರ್ದ್ರವಾದ, ಬಹುಬೇಗ ಕಂಬನಿಗೆ ತಿರುಗುವ ಚಿತ್ರಣಗಳು. ಅಪ್ಪಟ ವಾತ್ಸಲ್ಯದ ಚಿತ್ರಣಗಳನ್ನು ತರಂಗಿಣಿಯಲ್ಲಿಯೇ ಉತ್ಕಟವಾಗಿ ಕಾಣಬಹುದು. ನಳಚರಿತ್ರೆಯಲಿ ಗಾಢಪ್ರಣಯ ಹಾಗೂ ಶೋಕ ಮೂಲವಾದ ಕರುಣೆಗೆ ಮೊದಲು ಮನ್ನಣೆ.

೬

ಈ ಎರಡು ಕೃತಿಗಳಲ್ಲಿ ಹಾಸ್ಯ ಪ್ರಧಾನರಸವಂತೂ ಅಲ್ಲ. ಹಾಗೆ ನೋಡಿದರೆ ಕನ್ನಡ ಪ್ರಾಚೀನ ಕಾವ್ಯಗಳಲ್ಲಿ ಹಾಸ್ಯ ಗೌಣರಸವೇ ಆಗಿದೆ. ಅಂಥ ನಿರ್ಮಲವಾದ ಹಾಸ್ಯವೂ ಕಂಡುಬರುವುದಿಲ್ಲ. ವಿಕೃತ ವೇಷ–ಮಾತಿನ ವಿದೂಷಕ ಹಾಸ್ಯವೇ ಹೆಚ್ಚು. ಕನಕನ ಕೃತಿಗಳಲ್ಲಿ ಕ್ವಚಿತ್ತಾಗಿ ಮಂದಹಾಸದ ರೇಖೆಗಳಂತೆ ಹಾಸ್ಯದ ಚಿತ್ರಣವುಂಟು. ಕಲಹಪ್ರಿಯನಾದ ನಾರದ ಎಂದಿನಿಂದಲೂ ಹಾಸ್ಯಪಾತ್ರವೇ. ಶಂಬರನ ಅರಮನೆಗೆ ಅವನು ಬಂದಾಗ–"ಮುನಿ ಮಾರಾಯ ಬಂದಿಳಿದ" [೪–೨೯] ಎನ್ನುತ್ತಾನೆ ಕವಿ. ಅವನನ್ನು ಕಂಡರೆ ರಕ್ಕಸಗೆ ನಗೆ ಉಕ್ಕುತ್ತದೆ. ನಿನ್ನನ್ನು ಕೊಲ್ಲುವ ಕೃಷ್ಣಶಿಶುವನ್ನು ಈಗಲೆ ಚಿವುಟಿಹಾಕು ಎಂದು ಚುಚ್ಚಿ ಅಲ್ಲಿಂದ ನಾರದ ಆಗಸಕ್ಕೆ ಧಾವಿಸುತ್ತಾನೆ. ಮುಂದೆ ಬಾಣಾಸುರನ ಅರಮನೆಗೆ ಬರುವಾಗಲೂ ಕವಿ ಆತನನ್ನು "ಮೂಲೋಕ ವ್ಯವಹಾರಿ ನಾರದ" ಎಂದು ನಗೆ ಉಕ್ಕಿಸುತ್ತಾನೆ. ಅಲ್ಲಿ ಮತ್ತೊಂದು ಹಾಸ್ಯದ ದೃಶ್ಯ. ತ್ರಿಜಗದ್ವಂದ್ಯನಾದ ಈಶ್ವರ ಭಗವಂತ, ಅಸುರನ ಬಾಗಿಲು ಕಾಯುತ್ತಿದ್ದಾನೆ. ನಾರದನ ಚೋದ್ಯವಿದು;

"ಬಂದ ನಾರದ ಬಾಗಿಲ ಪರಮೇಶಗೆ
ವಂದನೆಗೆಯ್ದು ಕೇಳಿದನು
ಕಂದಾಯಪ್ರಾಪ್ತಿಗೆ ಖಳನಿತ್ತ ಜೀವಿತ
ತಂದುದೆ ನಿಮಗೆಂದ ನಗುತ" [೧೦–೩]

ಏನು ಸ್ವಾಮಿ ಈ ಸಾಲದ ವ್ಯವಹಾರ ನಿಮಗೆ? ಈ ನಗೆಮಾತಿಗೆ ಧೂರ್ಜಟಿ ಮುನಿಯಲಿಲ್ಲ. ಮಂದಹಾಸದಿಂದಲೇ ಉತ್ತರಿಸುತ್ತಾನೆ–" ನಾರದ ಮುನಿ ಮಹರಾಯ ಕೇಳ್ ಭಕ್ತರ ದ್ವಾರಪಾಲಕನು ನಾನಹುದು!"

ಇದು ನಿಜಕ್ಕೂ ನಿರ್ಮಲಹಾಸ್ಯ. ವಿಕೃತವೇಷ. ವಿಪರೀತ ಮಾತುಗಳ ನೆರವಿಲ್ಲದೆ ಸಹಜ ಸರಸದಿಂದುಕ್ಕುವ ನಗೆಚಾಟಿಕೆ.

* * *

ನಳಚರಿತ್ರೆಯಲ್ಲಿ ಕರುಣರಸದ ಪ್ರಧಾನ್ಯತೆ. ನಡುನಡುವೆ ಸುಳಿವ ಮೃದುಹಾಸ್ಯವೂ ಅದಕ್ಕೆ ಪೋಷಕವಾಗಿಯೇ ಇದೆ. ಸರ್ಪದಂಷ್ಟ್ರನಾಗಿ ನಳಮಹಾರಾಜ ಕುರೂಪಿಯಾದನಷ್ಟೆ ! ಬಾಹುಕನಾಗಿ ಋತುಪರ್ಣನ ಆಸ್ಥಾನದಲ್ಲಿ ಬಂದು ಸೇರುತ್ತಾನೆ. ಅಲ್ಲಿ ಅವನಿಗೆ ವಾಲಾಖ್ಯನ ಸ್ನೇಹ. ಅವನೊಡನೆ ಸರಸ. ಕನಸಿನಲ್ಲೂ ದಮಯಂತಿಯ ನೆನಪು. ಎಚ್ಚತ್ತು ಅವಳನ್ನು ಕಾಣದೆ ಹಂಬಲಿಸುವಾಗ ವಾಲಾಖ್ಯ ಗಹಗಹಿಸಿ ನಗತೊಡಗುತ್ತಾನೆ. ಬಾಹುಕ ಕುರೂಪಿ–ಗಿಡ್ಡನಾದ ಕುರೂಪಿ. ಅವನಲ್ಲಿ ಪ್ರಣಯ ವಿಕಾರವೆ? [ನಮ್ಮ ಸಮಾಜದ ಅಸಹಜ ದೃಷ್ಟಿಗೆ ಹಿಡಿದ ಕನ್ನಡಿಯಿದು].

"...ಬಾಹುಕನೆ ಹಲುಬುವುದೇನು ಕಂತೆಗೆ ತಕ್ಕ ಬೊಂತೆಯನು
ಅಕಟ ನೀನತಿ ಚೆಲುವನೇ ಬಾ
ಲಕಿ ನಿನಗೆ ತಕ್ಕವಳೊ ಲೋಕದಿ
ಮಕರಕೇತನ ಮರುಳನೆಂದಪಹಾಸ್ಯ ಮಾಡಿದನು ॥" [೭–೧೦]

"ಕಂತೆಗೆ ತಕ್ಕ ಬೊಂತೆ" ಎಂಬ ಜಾನಪದ ನಾಣ್ಣುಡಿಯನ್ನು ಕವಿ ಸಾರ್ಥಕವಾಗಿ ಬಳಸಿಕೊಂಡಿದ್ದಾನೆ. ನೋಡಲು ಕುರೂಪಿ. ಆಡುವುದು ಸುಂದರಿಯ ಮಾತು ಎಂದು ವಾಲಾಖ್ಯನ ಹಾಸ್ಯ. ಆದರೆ ನಳನ ಹೃದಯದ ವೇದನೆಯನ್ನು ಮತ್ತೂ ಮೀಂಟುವ ಹಾಸ್ಯವಿದು. ಮನ್ಮಥನ ಹುಚ್ಚನ್ನು ಲೇವಡಿ ಮಾಡುತ್ತಲೇ ಕಂಬನಿ ಇಣುಕುವಂತೆ ಕವಿ ಮಾಡಬಲ್ಲ. "ಕಿರಿಯಾಳದ ನಗೆನೀರಿನ ಮೇಲೆ । ತಿರುಗುತ ಬಹುವೇಳೆ । ಕಣ್ಣೀರಿನ ಕಡಲಿನ ಪಾಲು । ಹಾಸ್ಯದ ಹರಿಗೋಲು ॥ [ಕೈಲಾಸಂ] ಎಂಬ ಸೂಕ್ತಿಗೆ ಇದು ಲಕ್ಷ್ಯ. ಕಾರ್ಕೋಟಕನ

ವಿಷದಿಂದ ಕುರೂಪಿಯಾದ ನಳನ ಚಿತ್ರಣವೂ ಹೀಗೆ. ಓದುವಾಗ ನಗೆಯುಕ್ಕಿಸಿದರೂ ಕಣ್ಣು ಆರ್ದ್ರವಾಗುವಂತಹುದು. ಪದ್ಯವೂ ಪ್ರಸಿದ್ಧವಾದದ್ದೇ:

"ದೊಡ್ಡ ಹೊಟ್ಟೆಯ ಗೂನುಬೆನ್ನಿನ
ಅಡ್ಡಮೋರೆಯ ಗಂಟುಮೂಗಿನ
ದೊಡ್ಡ ಕೈಕಾಲುಗಳ ಉದುರಿದ ರೋಮ ಮೀಸೆಗಳ ।
ಜಡ್ಡು ದೇಹದ ಗುಜ್ಜುಗೊರಲಿನ
ಗಿಡ್ಡುರೂಪಿನ ಹರಕು ಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥ (೬–೧೪)

ವಿಕೃತಿಯ ಶಬ್ದಚಿತ್ರ ಇದು. ಅದಕ್ಕೆ ತಕ್ಕ ಶಬ್ದ ಸಂದೋಹ, ಗುಜ್ಜುಗುಜ್ಜಾದ ಅಷ್ಟಾವಕ್ರತೆಯನ್ನು ಸಾಭಿನಯದಿಂದ ರೂಪಿಸುವ ಶೈಲಿ. ಎಲ್ಲವೂ ನಿಜವೇ. ಆದರೆ ಈ ವಕ್ರತೆಗೆ ಕ್ಷಣಮಾತ್ರದಲ್ಲಿ ತುತ್ತಾದವನು ಯಾರು ? ಹಂಸಪಕ್ಷಿ ದಮಯಂತಿಯ ಎದುರು ನುಡಿದ ಮಾತು ಥಟಕ್ಕನೆ ಮನದಲ್ಲಿ ನುಗ್ಗಿ ಬರುವುದಲ್ಲವೆ ? ವಿಷಾದದ ನೆಳಲು ಹಾದು ಹೋಗುವುದಲ್ಲವೆ ?

"....ಇಳೆಗೆ ನಳಕೂಬರನ ಜಯಂತನ
ಚೆಲುವ ಮದನನ ರೂಪರೇಖೆಯ
ಹಳಿವುದಾ ನಳನೃಪನ ನಿಜಸೌಂದರ್ಯದಾಟೋಪ ॥" (೨–೩೬)

ಅಂದಿನ ಆ ಆಟೋಪವೆಲ್ಲಿ! ಈ ವಿಕೃತಿಯ ವಿಜೃಂಭಣೆಯೆಲ್ಲಿ? ಪ್ರಧಾನರಸ ಹಾಗೂ ಪೋಷಕರಸದ ಸ್ಥಾನ ಮರ್ಯಾದೆಯನ್ನು ಕವಿ ಚೆನ್ನಾಗಿಬಲ್ಲ. ಪ್ರಧಾನಗಾಯನವನ್ನು ವಾದ್ಯವೃಂದ ಮರೆಸುವಂತೆ ವಿಜೃಂಭಿಸಬಾರದೆಂಬುದೇ ಔಚಿತ್ಯ ಸಿದ್ಧಾಂತವಷ್ಟೆ?

## ೭

ರೌದ್ರರಸದ ಉತ್ಕಟತೆಗೆ ಕನಕನ ಕೃತಿಗಳಲ್ಲಿ ಅಲ್ಲಲ್ಲಿ ಎಡೆಯುಂಟು. ತರಂಗಿಣಿಯಲ್ಲಿ ರುದ್ರನ ಹಣೆಗಣ್ಣಿಗೆ ಸಿಲುಕಿ ನಿಮಿಷಮಾತ್ರದಲ್ಲಿ ಭಸ್ಮದ ರಾಸಿಯಾಗಿ ಬಿಟ್ಟ ಮನ್ಮಥ. ಅವನ ತಪೋಭಂಗದ ಯತ್ನವೇ ವಿಭಾವವಾಯಿತು. ಕಿವಿವರೆಗೆ ಸೆಳೆದು ಬಿಟ್ಟ ಕುಸುಮಕೋದಂಡನ ಬಾಣ ನೇರವಾಗಿ ಹರನ ಮರ್ಮಸ್ಥಾನವನ್ನು ತಾಗಿತು. ಕೋಪ ಸ್ಥಾಯಿಯಾಗಿ, ಉದ್ದೀಪನಗೊಂಡು, ಕಣ್ಣ ಕಿಡಿಗಳೇ ಅನುಭಾವವಾದುವು.

"ಭೋಗಿ ಭೂಷಣ ಕೋಪವ ತಾಳಿ ಕಿಡಿ ಕಿಡಿ
ಯೋಗಿ ಕೆಂಗಿಡಿಗಣ್ಣ ತೆರದ ।" (೩–೫೫)

ಕ್ಷಣಾರ್ಧದಲ್ಲಿ ಏನಾಗಿಬಿಟ್ಟಿತು !

"ಭುಗು ಭುಗು ಭಟಿಭಟಿಲೆಂದು ಲೋಚನದಿಂ
ದೊಗೆದ ದಳ್ಳುರಿ ಸುತ್ತಿ ಸ್ಮರನ
ಬಿಗಿದ ಬತ್ತಲಿಕೆ ಕರ್ವುವಿಲ್ಲು ಸಹಿತ ಸು
ಟ್ಟುಗಿದುದು ಉರಿ ನಭಸ್ಥಳಕೆ ॥" (೩–೫೪)

ಮನ್ಮಥನು ಬಿಲ್ಲು ಬಾಣಗಳ ಜೊತೆಜೊತೆಗೆ ಉರಿದುಬಿದ್ದ. ರುದ್ರಕೋಪದ ಭೀಷಣತೆ ಚೆನ್ನಾಗಿಯೇ ಮೂಡಿದೆ. ಬಳಸಿದ ಛೇಕಾನುಪ್ರಾಸದಿಂದ ಕ್ರಿಯೆಯ ವೇಗ ಚೆನ್ನಾಗಿ ಅಭಿವ್ಯಕ್ತವಾಗಿದೆ. ಆಗಸಕ್ಕೆ ನೆಗೆದ ಉರಿ ಎಂಬ ಬಣ್ಣನೆ ರೌದ್ರವನ್ನು ಮತ್ತೂ ಮೀಂಟುತ್ತದೆ. ಒಂದು ಬಿಲ್ಲು ಐದುಬಾಣಗಳಿಂದ ಮೂರೂ ಲೋಕಗಳನ್ನು ಶಿಕ್ಷಿಸುವ ಕಂದರ್ಪದೇಹ ಈಗ ನಿರ್ದೇಹವಾಗಿ ಬಿಟ್ಟಿತು ಎಂಬ ಕವಿಯ ಬಣ್ಣನೆ ಕಾವ್ಯವನ್ನು ಕರುಣೆಯತ್ತ ಮೆಲ್ಲನೆ ಜಾರಿಸುತ್ತದೆ. ರೌದ್ರದಿಂದ (ಮೂಲರಸ) ವಿಕಾಸಗೊಂಡದ್ದು ಕರುಣ ಎಂಬುದನ್ನು ನೆನೆಯಬೇಕು. ಮುಂದೆ ರತಿಯ ವಿಲಾಪ ಕರುಳು ಕತ್ತರಿಸುವಂತಹುದು. ಗಾಳಿ ಹೊತ್ತು ತಂದ ಸುಗಂಧವೇ (ಕಂದರ್ಪನ ಮೈಗಂಧ–ಹೆಣದ ವಾಸನೆಯಲ್ಲ) ರತಿ ಪ್ರಳಾಪಕ್ಕೆ ಪ್ರೇರಕವಾಯಿತಂತೆ.

"ಬಿಸರುಹದಳನೇತ್ರೆಯ ಕಣ್ಣನೀರಿಂದ
ಕೆಸರಾದುದೊಡಲ ತಾಪದಲಿ ।
ರಸವರೆತೊಡನೆ ಭಸ್ಮೀಕೃತವಾಯ್ತು ಬ
ಣ್ಣಿಸಬಲ್ಲವರಾರು ದುಃಖವನು" (೩–೫೯)

ಯುದ್ಧದ ಪ್ರಸಂಗಗಳು ತರಂಗಿಣಿ–ನಳಚರಿತ್ರೆ ಎರಡೂ ಕಾವ್ಯಗಳಲ್ಲಿ ಬಂದಿದ್ದರೂ, ನಳಚರಿತ್ರೆಯ ಕಡೆಯಲ್ಲಿ ಬಂದು ಮಂಗಳ ವಿರಾಮದಂತಿದೆ. ತರಂಗಿಣಿಯಲ್ಲಾದರೋ ಅದು ಕತೆಯ ಒಡಲು. ಶಂಬರಾಸುರ ವಧೆ, ಬಾಣಾಸುರನ ಯುದ್ಧ, ಹರಿ–ಹರರ ಯುದ್ಧ ಇತ್ಯಾದಿ. ಅಲ್ಲಿ ಉತ್ಸಾಹ ಮೂಲವಾದ ವೀರರಸಕ್ಕೆ ಸಾಕಷ್ಟು ಅವಕಾಶವಿದೆ. ಆದರೆ ಕವಿಯು ಆರಿಸಿಕೊಂಡ ಛಂದಸ್ಸು ಮುಖ್ಯವಾಗಿ ಭಕ್ತಿ–ಶೃಂಗಾರಗಳಿಗೆ ಒಗ್ಗುವ ಲಲಿತ ಸಾಂಗತ್ಯ, ಆದುದರಿಂದ ಅಷ್ಟೇನೂ ರಸೋತ್ಕಟ ಚಿತ್ರಣಗಳಿಲ್ಲ.

"ಕುಡಿಮೀಸೆ ಕುಣಿದವು ನಾಸಿಕ ಹೊಗೆಸುತ್ತಿ
ಕಿಡಿಗಳನಕ್ಷಿ ಮುಕ್ಕುಳಿಸೆ

ಜಡಿದನು ಕೈಯ್ಯ ಖಡ್ಗವ ಝಳಪಿಸಿ ದೈತ್ಯ
ನುಡಿದನು ಕಠೋರವಾಕ್ಯಗಳ" [೫-೮]

ಇಂಥ ಪದ್ಯಗಳಲ್ಲಿ ಮೀಸೆ ಕುಣಿತ, ಕೆಂಡಗಣ್ಣುಗಳಲ್ಲಿ ಅನುಭಾವ ಚಿತ್ರಣ ಚೆಲುವಾದರೂ 'ನುಡಿದನು' ಎಂಬ ತೆಳುಮಾತು ಅದರ ಉತ್ಸಾಹವನ್ನು ಥಟಕ್ಕನೆ ಇಳಿಸಿ ಬಿಡುತ್ತದೆ. ಸಾಂಗತ್ಯದ ಸ್ವಭಾವವೇ ಹೀಗೆ. 'ಮೂಗು ಬಾಯೊಳಗೆಲ್ಲ ನೆತ್ತರು ಬಸಿದಂತಾಯ್ತು' ಇಂಥ ವರ್ಣನೆಗಳೇ ಹೆಚ್ಚು. "ಹಜ್ಜೆ ಹಜ್ಜೆಗೆ ತೊಡೆ ಚಲ್ಲಣವಡಸಿರ್ದ ಗೆಜ್ಜೆಯ ಗಲಿರೆಂಬ ರವದಿ" ಎಂದು ಯುದ್ಧವೀರನನ್ನು ಬಣ್ಣಿಸುವಲ್ಲಿ ಉತ್ಸಾಹದ ಉಕ್ಕಿಗಿಂತ ಶೃಂಗಾರದ ಮಾರ್ದವತೆಯೇ ಇಣಿಕುತ್ತದೆ.

"ಕರೆದು ಸಾರಥಿಗರುಹಿದನು ಪು
ಷ್ಕರನ ಬಲ ಕೈಮೀರಿ ಬರುತಿರೆ
ತಿರುಹು ತೇಜಿಯನಿತ್ತಲಿವದಿರನೊರಸಿ ಬೆನ್ನಿರಲಿ
ಕರುಳ ತೆಗೆವೆನೆನುತ್ತ ಚಾಪಕೆ
ತಿರುವನೇರಿಸಿ ಸರಳಿನಲಿ ಬೊ
ಬ್ಬಿರಿಯೆ ಧರೆತಲ್ಲಣಿಸಿತವನೀಪಾಲ ಕೇಳೆಂದ" ॥ (೯-೨೭)

ಎಂಬ ನಳಚರಿತ್ರೆಯ ಬಣ್ಣನೆ ಕೊಂಚ ಮೇಲಾದರೂ, ಕುಮಾರವ್ಯಾಸನ ಅನುಕರಣೆ ಎಂದು ಮೊದಲ ನೋಟಕ್ಕೇ ಗೋಚರಿಸುತ್ತದೆ. ಆದರೆ ಆತನ ದೈತ್ಯ ಪ್ರತಿಭೆ ಸಿದ್ಧಿಸಿಲ್ಲ. ಸ್ವತಃ ದಂಡನಾಯಕನಾಗಿ ಯುದ್ಧಗಳ ಸೋಲುಗೆಲುವುಗಳನ್ನು ಪ್ರತ್ಯಕ್ಷವಾಗಿ ಅನುಭವಿಸಿದ ಕನಕನ ಲೇಖನಿ ರೌದ್ರ-ವೀರಗಳ ಚಿತ್ರಣಗಳಲ್ಲಿ ಏಕೋ ನಿರುತ್ಸಾಹಿಯಾಗಿದೆ. ಆತನಲ್ಲಿ ಕ್ರಮ ಕ್ರಮವಾಗಿ ಬೆಳೆಯುತ್ತಿದ್ದ ಸಮಾಜೋದ್ಧಾರದ-ಶೋಷಣೆಯ ವಿರುದ್ಧ ಸೆಣಸಿನ ಕಿಡಿನುಡಿಗಳಲ್ಲಿಯೇ ವೀರರಸದ ಹೊಸ ಕಾಂತಿಯನ್ನು ಕಾಣಬಹುದು. ಮಹಾಕಾವ್ಯದ ಬಣ್ಣನೆಗಳಲ್ಲಿ ಅಲ್ಲ. ಆತನ ಕೀರ್ತನೆಗಳ ಪರಿಶೀಲನದಲ್ಲಿ ಈ ಅಂಶವನ್ನು ಗಮನಿಸಬಹುದು.

## ೮

ಯುದ್ಧರಂಗವೆಂದ ಮೇಲೆ ಭಯಾನಕವೂ ಬೀಭತ್ಸವೂ ಇದ್ದದ್ದೇ. "ಕೆಡೆದ ತಲೆಗಳ ಸಿಡಿದ ಹುಬ್ಬಿನ ಉಡಿದ ತೊಡೆಗಳ ಮಿದುಳಖಂಡದ ಹರಿದ ಕರುಳುಗಳ ಒಡೆದ ನೆತ್ತಿಗಳಿಂದ ರಕುತದ ಮಡು ಹರಿಯೆ ..." ಇಂಥಲ್ಲಿ ಬೀಭತ್ಸ-ಜುಗುಪ್ಸೆಯಿಂದ ಮೂಡಿದುದು [ನ.ಚ. ೯-೨೭] "ಮರನ

ಹುತ್ತವನೇರಿದರು ಸಂಗರದಿ ಕೈದುವ ಬಿಸುಟು ಸಲೆ ಮೈ ಮರೆದು ತೇಜಿಯನಿಳಿದು ರಾವುತರು ಕೊರಳ ಸಲಹೆನುತ ಕರವ ಮುಗಿದರು" [೯–೩೪] ಎಂಬುದು ರಣರಂಗದಲ್ಲಿ ಯೋಧರ ಯುದ್ಧ ಭೀತಿಯನ್ನು ಬಣ್ಣಿಸಿದರೂ ಭಯಾನಕವೆಂದು ಕರೆಯಲಾಗದಷ್ಟು ತೆಳುವಾಗಿದೆ. ಒಂದು ರೀತಿಯಲ್ಲಿ ಲಜ್ಜಾಜನಕವಾದ ಯೋಧರ ನಡತೆಯಲ್ಲವೆ? ಎನಿಸಿ ನಿಜಕ್ಕೂ ರಸಭಂಗವೇ ಆಗುತ್ತದೆ.

ದೇವತೆಗಳು–ರಾಕ್ಷಸರು–ಮಾನವಜೀವಿಗಳು ಮುಪ್ಪುರಿಗೊಂಡ ಕನಕನ ಕಾವ್ಯ ಪ್ರಪಂಚದಲ್ಲಿ ವಿಸ್ಮಯಜನ್ಯವಾದ ಅದ್ಭುತರಸ ಪ್ರತಿಪಾದನೆಗೆ ಎಡೆ ದೊರೆಯುವುದು ತೀರ ಸಹಜ. ಅದೊಂದು ಅದ್ಭುತ ರಮ್ಯ (Romantic) ಮಾಯಾ ಪ್ರಪಂಚವೇ ಸರಿ. ಶಂಬರಾಸುರ ಎಸೆದ ಮಗುವನ್ನು ಮೀನು ನುಂಗುವುದು, ಬಾಣಸಿಯಾದ ರತಿ ಮೀನ ಬಗೆದಾಗ ಶಿಶು ಪೊರಮಡುವುದು, ಇತ್ಯಾದಿ ಸಂಗತಿಗಳ ಸ್ಥಾಯಿ ವಿಸ್ಮಯವೇ. ಆದರೆ ಕವಿಗೆ ಕಥೆಯ ಆತುರ ಹೆಚ್ಚು–

"ಆನುವರಿಲ್ಲದೆ ಬಿದ್ದಶಿಶುವನು ಪೆ
ಣ್ಮೀನು ನುಂಗಿತು ತಕ್ಷಣದೆ–"

ಎನ್ನುತ್ತಿದ್ದಂತೆ

ಮುಂದಿನ ಸಾಲಿನಲ್ಲಿಯೇ ಪೂರ್ವದಿಗಂತದಲ್ಲಿ ಬೆಳಗಾಯಿತು, ರವಿ ಮೂಡಿದ. ಬೆಸ್ತ ಗಾಳ ಎಸೆದ...ಎಂದು ಓಡಿ ಬಿಡುತ್ತಾನೆ. ರತಿ ಮಗುವನ್ನು ಕಂಡಾಗ ಶಿಶು ಪೊರಮಟ್ಟುದಾಶ್ಚರ್ಯ ಎಂಬುದಷ್ಟೇ ಕವಿಯ ವಾಚ್ಯ ಉದ್ಗಾರ. ವಿಸ್ಮಯದ ಪೋಷಣೆಯಿಲ್ಲ. ರತಿಯಲ್ಲಿ ಮೂಡಿದ ವಿಚಿತ್ರ ಮೋಹದತ್ತ ಕವಿಯ ತುಡಿತ. ವಿಸ್ಮಯ ಸ್ಥಾಯಿಯಾಗದೆ ಸಂಚಾರಿ ಎನಿಸಿಬಿಡುತ್ತದೆ. ಹಾಗೆ ನೋಡಿದರೆ ನಳಚರಿತ್ರೆಯ ಹಂಸದೌತ್ಯವೇ ವಿಸ್ಮಯಜನಕವಾದ ಹೃದ್ಯ ಪ್ರಸಂಗ. ಒಳ್ಳೆಯ ಪರಿಪೋಷಣೆಯಿದೆ, "ಪರಮ ತೇಜದೊಳೆಸೆವ ಹಂಸೆಯ ಕಂಡು ಬೆರಗಾಗಿ" ಎಂಬಲ್ಲಿಯ ಕಡೆಯ ಮಾತು ಅಲ್ಲಿಗೆ ನಿಲ್ಲದೆ, ನಳನು ಮೃದುವಾಗಿ ಅದನ್ನು ಹಿಡಿದದ್ದು, ಅದು ಹೃದಯ ಕರಗುವಂತೆ ಮಾತನಾಡುವುದು, ದೂರದ ದಮಯಂತಿಯನ್ನು ಬಣ್ಣಿಸಿ ರಾಜನ ಬಾಯಲ್ಲಿ ನೀರೂಡಿಸುವುದು, ಮುಂದೆ ಅದರ ದೌತ್ಯ ಇವುಗಳೆಲ್ಲ ವಿಸ್ಮಯ ಮನೋಹರ ಲೋಕಕ್ಕೆ ನಮ್ಮನ್ನು ಸೆಳೆದೊಯ್ದು ಬಿಡುವಷ್ಟು ರಸೋತ್ಕಟವಾಗಿವೆ. ಅದ್ಭುತವನ್ನೂ ಶೃಂಗಾರದ ಪೋಷಣೆಗೆ ಬಳಸಿಕೊಂಡದ್ದು ಕನಕದಾಸನ ವಿಶಿಷ್ಟತೆ. ಮುಖ್ಯವಾಗಿ ಶೃಂಗಾರ–

ಕರುಣೆಗಳೇ ಈ ಕವಿಯಲ್ಲಿ ಪ್ರಧಾನ ರಸಗಳು–ರೌದ್ರ ವೀರಗಳಲ್ಲ ಎಂಬುದನ್ನು ಇಲ್ಲಿ ಸೂಚಿಸಬಹುದು.

೬

ರಾಮಧಾನ್ಯ ಚರಿತ್ರೆ ಕನಕದಾಸನ ವಿಶಿಷ್ಟ ಸ್ವೋಪಜ್ಞಕಾವ್ಯ. ಸಮಾಜದಲ್ಲಿ ರೂಢಮೂಲವಾಗಿದ್ದ ಶ್ರೀಮಂತರ ಪ್ರತಿಷ್ಠೆ–ದೀನದಲಿತರ ಶೋಷಣೆಯನ್ನು ಅತ್ಯಂತ ಕಳಕಳಿಯಿಂದ ಚಿತ್ರಿಸುವ ಕಾವ್ಯ. ಪ್ರಾಚೀನ ಸಾಹಿತ್ಯದಲ್ಲಿ ವಿರಳವಾದ ಸಾರ್ಥಕ ವಿಡಂಬನ ಕಾವ್ಯ. ಸಹಜವಾಗಿಯೇ ವಿಡಂಬನ ಹಾಸ್ಯದ ಒಂದು ಮುಖವಾಗಿ ಇಲ್ಲಿ ಹಾಸ್ಯವೇ ಪ್ರಧಾನ ರಸವೆನಿಸಬೇಕಿತ್ತು. ಆದರೆ ಸಾಮಾಜಿಕ ಕಳಕಳಿ ಇಲ್ಲಿ ಉದ್ಧಾರದ–ಉಪದೇಶದ ಉತ್ಸಾಹವನ್ನೇ ಮೇಲುಗೈಯಾಗಿಸಿದೆ. ಅಲ್ಲದೆ ಕಾವ್ಯದಲ್ಲಿ ಕವಿಯ ಪೌರಾಣಿಕ ಪ್ರಜ್ಞೆಯನ್ನೂ ಮರೆಯುವಂತಿಲ್ಲ. ರಾಮಚರಿತೆಗಾಗಿ ಕೃತಿಯ ಅರ್ಧಭಾಗ ಮೀಸಲು. ಅಕ್ಕಿ–ರಾಗಿಗಳ ವಾಗ್ವಾದದ ಪ್ರಸಂಗ, ರಾಗಿಯ ದಿಗ್ವಿಜಯದ ಕತೆಗೆ ದೊರೆತದ್ದು ಇಪ್ಪತ್ತೊಂಬತ್ತು ಪದ್ಯಗಳು ಮಾತ್ರ. ಆದರೆ ಅಲ್ಲಿಯೇ ಕನಕನ ವಿಶಿಷ್ಟ ಮನೋಧರ್ಮವನ್ನು ಗುರುತಿಸಬೇಕು. ಇಲ್ಲಿ ಕವಿ ದಲಿತನ ಮುಖವಾಣಿಯಾಗಿದ್ದಾನೆ. ಶೋಷಣೆಯ ಖಂಡನೆಗೆ ಶ್ರೀಮಂತರ ಪ್ರತಿಷ್ಠೆಯ ಪೊಳ್ಳುತನದ ಲೇವಡಿಗೆ ಟೊಂಕ ಕಟ್ಟಿದ್ದಾನೆ. ಮೊನಚಾದ ಮಾತುಗಾರಿಕೆ, ದೇಸಿಯ ನೇರನುಡಿಗಳು, ಸಂಭಾಷಣೆಯ ಚುರುಕುತನದ ಈ ಕೃತಿಯಲ್ಲಿ ರಸದ ದೃಷ್ಟಿಯಿಂದ ಉತ್ಸಾಹಜನ್ಯವಾದ ವೀರವನ್ನೇ ಗುರುತಿಸಬೇಕು. ಹಾಸಜನ್ಯವಾದ ಹಾಸ್ಯವನ್ನಲ್ಲ.

ಬಾಹಿರ ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗೆಂದ (೪೩)
ನುಡಿಗೆ ಹೇಸದ ಭಂಡ ನಿನ್ನೊಳು ಕೊಡುವರೇ
ಮಾರುತ್ತರವ, ಕಡು ಜಡವಲಾ, ನಿನ್ನೊಡನೆ ಮಾತೇಕೆ? (೪೪)
ಹೆಣದ ಬಾಯಿಗೆ ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕವಲಾ (೫೫)
ಹೆತ್ತ ಬಾಣಂತಿಯರು ರೋಗಿಗೆ ಪತ್ಯ ನೀನಹೆ (೪೬)
ಎಳ್ಳುದರ್ಭೆಯ ತೆತ್ತಿಗನು ನೀನಾದೆ..........ದುರಾತ್ಮ (೪೬)
ಎಲವೊ ನೀನೆಲ್ಲಿಹೆಯೋ, ನಿನ್ನಯ ಬಳಗವದು (೪೬)
ನಾ ನಿನ್ನಂತೆ ನಿರ್ದಯನಲ್ಲ ಎಲ ಕುಟಿಲಾತ್ಮ (೪೮)
ತಾನೆಲ್ಲಿಹುದೋ?

ಈ ಚಟಪಟಗುಟ್ಟುವ ಪಟಾಕಿ ಸಿಡಿತಗಳನ್ನು ಪರಿಕಿಸಿದರೆ ಉತ್ಸಾಹಜನ್ಯವಾದ ವೀರರಸದ ವಿಜೃಂಭಣೆಯೇ ತೋರಿಬರುತ್ತದೆ. ವೀರರಸಕ್ಕೆ

ಯುದ್ಧದ ಕೂರ್ಗಣೆಗಳೇ ಬೇಕಿಲ್ಲ ; ಕಿಡಿನುಡಿಯ ಗುಡುಗುಟ್ಟುವಿಕೆಯಿಂದಲೂ ಅದನ್ನು ಸಾಧಿಸಬಹುದು. ಮುಖ್ಯವಾಗಿ ಸಾಮಾಜಿಕ ಕಳಕಳಿಯೆಂಬ ಮೌಲ್ಯಕ್ಕೆ ರಸಪ್ರಪಂಚದಲ್ಲಿ ದೊರೆಯುವ ಮನ್ನಣೆ, ವೀರಸಿಂಹಾಸನದಲ್ಲಿ ಎಂದು ಸೂಚಿಸುವುದು ನನ್ನ ಉದ್ದೇಶ, ಕನಕ ನಿಜಕ್ಕೂ ರಸದ ಆಯಾಮವನ್ನು ವಿಸ್ತರಿಸಿದ್ದಾನೆ.

* * *

ಹರಿಭಕ್ತಿಸಾರದಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಭಕ್ತಿಯ ತನ್ಮಯತೆಯನ್ನು. ಅದನ್ನು ಬೇರೊಂದು ಲೇಖನದಲ್ಲಿ ಚರ್ಚಿಸಲಾಗಿದೆ. ಒಂದುನೂರೆಂಟು ಭಾಮಿನೀಷಟ್ಪದಿಯ ಲಲಿತ ಮಧುರ ಸುಂದರ ಲಯದಲ್ಲಿ ಭಕ್ತಿಯ ಪ್ರಸನ್ನತೆಯನ್ನು ಅನುಭವಿಸಬಹುದು. ನಡುನಡುವೆ, ವಾತ್ಸಲ್ಯ ವ್ಯಂಜಕವಾದ

"ಹಸಿವರಿತು ತಾಯ್ ತನ್ನ ಶಿಶುವಿಗೆ
ಒಸೆದು ಮೊಲೆ ಕೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು......... (೨೩)

ಎಂಬಂತಹ ಉಪಮೆಯ ಹೃದ್ಯತೆಯಿದೆ.

ವೀರರಾವಣನೊಡನೆ ಹೋರಿದ
ವೀರರಗ್ಗದ ಕಪಿಗಳು........... (೪೪)

ಇಂತಹ ವೀರದ ನೆನಪನ್ನು ಮೂಡಿಸುವ ಪೌರಾಣಿಕ ಪ್ರಜ್ಞೆಯಿದೆ.

ಮಾಂಸರಕ್ತದ ಮಡುವಿನಲಿ ನವ
ಮಾಸ ಜನನಿಯ ಜಠರದೊಳು........ (೫೬)
ಮೂತ್ರದ ಬಿಲಗಳಲಿ ಸಂಚರಿಸಿ (೫೯)

ಇತ್ಯಾದಿ ಬೀಭತ್ಸದ ಚಿತ್ರಣಗಳಿವೆ,

ಸಾರವಿಲ್ಲದ ದೇಹವಿದು(೯೯), ಸತ್ತವರಿಗಳಲೇಕೆ (೯೨), ಮೃತ್ಯು ಬೆನ್ನೊಳಗಿಹುದು (೯೨), ಮುಂತಾದ ನಿರ್ವೇದದ ನುಡಿಗಳಿಂದ ಶಾಂತದತ್ತ ಸಾಗುವ ಯತ್ನವಿದೆ, ಆದರೆ ಈ ಭಾವಗಳೆಲ್ಲವೂ ತಮಗೆ ತಾವೇ ಉತ್ಕಟವಾಗಿ ನಿಲ್ಲದೆ ಭಕ್ತಿಯುತ್ತಲೇ ತುಡಿಯುತ್ತವೆ ಎಂಬುದನ್ನು ಮುಖ್ಯವಾಗಿ ಗಮನಿಸಬೇಕು.

೧೦

ಕನಕದಾಸನನ್ನು ಹರಿದಾಸರ ಪಂಕ್ತಿಯಲ್ಲಿ ಪರಿಗಣಿಸುವಂತಾದುದು ಆತನ ಕೀರ್ತನೆಗಳಿಂದ. ಅಂತರಂಗದ ಅಭಿವ್ಯಕ್ತಿಯ ದೃಷ್ಟಿಯಿಂದ ಅವು ಶ್ರೇಷ್ಠ

ಭಾವಗೀತಗಳೇ ಆಗಿವೆ. ಹರಿದಾಸರಲ್ಲಿ ಸಾಮಾನ್ಯವಾಗಿ ಸಮರ್ಪಣ ಭಕ್ತಿಯೇ ಸ್ಥಾಯಿ. ಆದುದರಿಂದ ಸಗುಣಾರಾಧನೆಯ ಹರಿಭಕ್ತಿ, ದ್ವೈತಸಿದ್ಧಾಂತದ ನೆಲೆಗಟ್ಟು ಅದರಲ್ಲಿ ಸಾಮಾನ್ಯ. ಕೀರ್ತನಕಾರರು ಸಾಮಾನ್ಯವಾಗಿ ಮೇಲುವರ್ಗದ ವಿಶೇಷವಾಗಿ ವೈದಿಕ ಪಂಗಡದಿಂದ ಬಂದವರು. ಹೀಗಾಗಿ ದಲಿತ ಜನಾಂಗದ ವಾಣಿಯಾಗಿ ಅವರು ಸ್ಪಂದಿಸಿರುವುದು ಕಡಿಮೆಯೇ–ಬರಿಯ ಜಾತಿ ವಿರುದ್ಧದ ಘೋಷಣೆಗಳನ್ನು ಉತ್ಕಟ ಅಭಿವ್ಯಕ್ತಿ ಎನ್ನುವಂತಿಲ್ಲ. ಅಲ್ಲದೆ ದೀನದಲಿತರ ಸಂಸ್ಪರ್ಶ–ಸಹಸವಾಸಗಳಿಂದ ದೂರವೇ ಉಳಿದ ಅವರಲ್ಲಿ ಬದುಕಿನ ವಿಭಿನ್ನ ಅನುಭವಗಳ ಕೊರತೆಯಿದ್ದೇ ಇದೆ. ಹೀಗಾಗಿ ರಸಭಾವಗಳ ದೃಷ್ಟಿಯಿಂದ ಈ ಕೀರ್ತನಗಳು ತುಂಬ ಹೃದಯಂಗಮವೆನಿಸಿದರೂ, ಸಂಗೀತಶಾಸ್ತ್ರಕ್ಕೆ ಅವು ಬೆಲೆಯುಳ್ಳ ಕಾಣಿಕೆಗಳಾದರೂ ಸಾಮಾಜಿಕ ಪ್ರಜ್ಞೆಯ ದೃಷ್ಟಿಯಿಂದ ಅವುಗಳನ್ನು ವಚನಸಾಹಿತ್ಯದೊಡನೆ ಸಮೀಕರಿಸುವಂತಿಲ್ಲ.

ಈ ಮಾತಿಗೆ ಒಂದು ಗಮನಾರ್ಹ ಅಪವಾದವೆಂದರೆ ಕನಕದಾಸನ ಕೀರ್ತನಗಳು. ಅಪಾರ ಜೀವನಾನುಭವ, ಬದುಕಿನ ತಟ್ಟತಲಕ್ಕೆ ಇಳಿದು ನೋಡುವ ಸೂಕ್ಷ್ಮತೆ, ಅಧಿಕಾರದ ಅಟ್ಟಹಾಸ, ಅಧಿಕಾರ ಪತನ, ಸೋಲು, ಅಪಮಾನ, ಪತ್ನೀವಿಯೋಗ, ಶೋಷಣೆಯ ನೋವು, ಇತ್ಯಾದಿಗಳ ಪ್ರತ್ಯಕ್ಷ ಅನುಭವ ಕನಕನಿಗಿದ್ದುದರಿಂದ ಆತನ ಕೀರ್ತನೆಗಳಲ್ಲಿ ಕಾವು ಹೆಚ್ಚು, ಕೂರಂಬಿನ ತಿವಿತವೂ ಹೆಚ್ಚು. ಆದುದರಿಂದಲೇ ಏಕತಾನತೆಯನ್ನು ಮೆಟ್ಟಿನಿಲ್ಲುವ ಜೀವಂತಿಕೆ–ಲವಲವಿಕೆ ಅಲ್ಲಿ ಪುಟಿಯುತ್ತದೆ. ರಸ ಭಾವಗಳ ದೃಷ್ಟಿಯಿಂದ ಅವುಗಳಲ್ಲಿನ 'ಹೃದಯಸಂವಾದ' ಪರಿಶೀಲನಾರ್ಹವಾಗಿದೆ. ಮುಖ್ಯವಾಗಿ ಗ್ರಾಮೀಣ ಜೀವನದ ಕಸುವು–ಬನಿ ಆತನಲ್ಲಿ ಗಮನಾರ್ಹ.

ಇಂಪುಸೊಂಪಿನ ಚಂದ್ರಬಿಂಬೆ
ಕೆಂಪುತುಟಿಗಳ ನಾಸಿಕದ ರಂಭೆ
ಜೊಂಪು ಮದನ ಸಿಂಗಾಡಿ ಪೂರ್ಣಶಕ್ತಿ ಬೊಂಬೆ
ಸಂಪಿಗೆ ಮುಡಿಗಿಟ್ಟು ರಾಜಿಪ ಶಾರದಾಂಬೆ ॥

ಎಂದು ತಾಳಕುಟ್ಟುತ್ತಾ ಅವನು ಹಾಡುವಾಗ, ಮುಂದಿನ ಶತಮಾನಗಳಲ್ಲಿ ಸಮೃದ್ಧಿಯಾಗಿ ಬೆಳೆದ ಲಾವಣಿಗಳ ನೆನಪಾಗುತ್ತದೆ. ಒಳ್ಳೆ ಚೆಲುವೆ ಚಿನ್ನಾರಿಯನ್ನು ಬಣ್ಣಿಸುವಂತೆ ಶಾರದಾಂಬೆಯನ್ನು ಲವಲವಿಕೆಯಿಂದ ಬಣ್ಣಿಸಿಬಿಡುತ್ತಾನೆ. ಜೊಂಪು–ಸಿಂಗಾಡಿ ಇಂಥ ಗ್ರಾಮೀಣ ಶಬ್ದಗಳನ್ನು ಗಮನಿಸಬೇಕು. ಕನಕ ಅಂಬೆಯನ್ನು ಬೇಡುತ್ತಿದ್ದಾನೋ ಕಾಡುತ್ತಿದ್ದಾನೋ ಎನಿಸುವ ಉತ್ಸಾಹದ ಲಯ

ಪರಮ ಪ್ರೇಮ ರೂಪದ ಈ ಭಕ್ತಿಯ ಮೂಲದಲ್ಲಿರುವುದು ಉತ್ಸಾಹದ ಸ್ಥಾಯಿಯೇ. ನಮ್ಮಮ್ಮ ಶಾರದೆ ಎಂಬ ಪ್ರಸಿದ್ಧ ಗೀತೆಯ ಗಣಪತಿಯೂ ಧೀರ–ಗಣನಾಥ–ಉಟ್ಟದಟ್ಟಿಯ ಬಿಗಿದುಟ್ಟ ಚಲ್ಲಣದ ದಿಟ್ಟ–ಹೊಟ್ಟೆಯ ಗಣನಾಥ. ಹೆಮ್ಮೆಯ ಗಣನಾಥ [ಪು. ೫]. ಸ್ಥಾಯಿಯಾದುದು ಏನು ? ಹಾಸ್ಯವೆ ? ಹಾಸ್ಯದ ಲೇಪವಿದೆ ನಿಜ. ಆದರೆ ತುಂಬಿದ ಉತ್ಸಾಹ. ದಿಟ್ಟನಿವ ಎನ್ನುವುದೇ ಕನಕನ ಮನೋಧರ್ಮಕ್ಕೆ ಹತ್ತಿರವಾದ ಭಾವ.

'ದಾಸ ದಾಸರ ಮನೆಯ ದಾಸಿಯರ ಮಗ ನಾನು' ಎಂಬ ಗೀತದಲ್ಲಿ ದೈನ್ಯದ ನೈಚ್ಯಾನುಸಂಧಾನವಿದೆ. ಆಳಿನಾಳಿನ ದಾಸನಡಿದಾಸ ಎಂದು ಕನಕ ದಾಸ್ಯಭಕ್ತಿಯನ್ನು ಮೆರೆಯುತ್ತಾನೆ. ತನ್ನನ್ನು ಮಂಕುದಾಸ–ಮರುಳುದಾಸ–ಮಾದಿಗದಾಸ ಎಂದು ಆತ್ಮ ಭರ್ತ್ಸನೆ ಮಾಡಿಕೊಳ್ಳುತ್ತಾನೆ. ಈ ಅಭಿವ್ಯಕ್ತಿಯ ಹಿನ್ನೆಲೆಯುಲ್ಲಿ ಪುಟಿಯುವ ತೀವ್ರವಾದ ನೋವಿನ ದನಿಯುನ್ನು ಮರೆಯುವುದೆಂತು? 'ಕುಲವಿಲ್ಲದ ದಾಸ ಕುರುಬದಾಸ' ಎಂಬಲ್ಲಿ ಅದು ಕಾರಂಜಿಯಾಗಿಲ್ಲವೆ ?

'ಎಲ್ಲಾರು ಮಾಡುವುದು ಹೊಟ್ಟೆಗಾಗಿ' ಎಂಬ ಲಾವಣಿಯಲ್ಲಿ ಬದುಕಿನ ಬೆಡಗನ್ನು ಬಣ್ಣಿಸುತ್ತಲೆ ಅದರ ಗುಟ್ಟನ್ನು ರಟ್ಟಾಗಿಸಿಬಿಡುತ್ತಾನೆ [ಪು. ೧೭]

ಕನಕದಾಸ ಕಂಡ ಈ ವಿಸ್ತಾರದ ವೈವಿಧ್ಯದ ಬದುಕಿನಲ್ಲಿ ಜೀವದ ಮೂಲಪ್ರವೃತ್ತಿಯಾದ ಹಸಿವು–ಅದು ಆಡಿಸುವ ಆಟಗಳನ್ನು ಚಿಂತಿಸುತ್ತಾ ನಿರ್ವೇದದ ಕಡೆಗೆ ಹೊರಳಿಬಿಡುತ್ತಾನೆ. 'ಉನ್ನತ ಕಾಗಿನೆಲೆಯಾದಿಕೇಶವನ ಧ್ಯಾನವನ್ನು । ಮನಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕ್ಕಾಗಿ' ಎನ್ನುವಲ್ಲಿ ಹಾಡು ತನ್ನ ನೆಲೆಯನ್ನು ಕಂಡುಕೊಳ್ಳುತ್ತದೆ. ಶಾಂತದಲ್ಲಿ ಪರ್ಯವಸಾನವಾಗುತ್ತದೆ.

ಆದರೆ ಕವನ ಬಿಚ್ಚಿಕೊಳ್ಳುವಾಗಲೇ ಶಮದ ತನ್ಮಯತೆಯ ಸುಗಂಧ ಅನುಭವಕ್ಕೆ ಬರುವುದು 'ತಲ್ಲಣಿಸದಿರು ಕಂಡ್ಯ ತಾಳುಮನವೆ', 'ತನುನಿನ್ನದೊ ಜೀವನ ನಿನ್ನದೊ', ಇಂತಹ ಗೀತಗಳಲ್ಲಿ [ಪು. ೧೪/ಪು. ೩೩]–ಹರಿಸಮರ್ಪಿತ ಜೀವದ ಗಾಢ ದೈವಶ್ರದ್ಧೆಯಿಂದ ಮೂಡುವ ಈ ಗೀತಗಳಲ್ಲಿ–ಶಾಂತರಸದ ಸುಪ್ರಸನ್ನತೆಯನ್ನೇ ಕಾಣಬಹುದು. ಎಲ್ಲರನು ಸಲಹುವನು ಇದಕೆ ಸಂಶಯ ಬೇಡ ಎಂಬಲ್ಲಿ ನೆಲೆನಿಲ್ಲುವ ಈ ಗೀತಗಳು ಕನಕನ ಮಾಗಿದ ಮನಸ್ಸಿನಿಂದ ಹೊಮ್ಮಿದ ಸಹಜವಿರಕ್ತಿಯ ಹಾಡುಗಳು ಎಂಬುದನ್ನು ಗಮನಿಸಬೇಕು.

"ಕುಲಕುಲ ಕುಲವೆನ್ನುತಿಹರು" ಎಂಬ ಗೀತದಲ್ಲಿ [ಪು. ೨೫] ವೇದನೆ ಜುಗುಪ್ಸೆಗೆ ತಿರುಗುವಂತೆ ಉತ್ಕಟವಾಗಿ ಬಿಡುತ್ತದೆ. ಸಮಾಜದ ಮೇಲ್ವರ್ಗದ

ಬೂಟಾಟಿಕೆ ಡಂಭಾಚಾರಗಳೇ ಇಲ್ಲಿ ವಿಭಾವ. ಕೆಸರು–ಹಸುವಿನ ಮಾಂಸ–ಮೃಗದ ಮೈಯ ಕಂಪು–ಈ ವಸ್ತುಗಳಿಗಿಂತ ಅವುಗಳ ಮೂಲದಲ್ಲಿಯೇ ಹುಟ್ಟಿದ ತಾವರೆ, ಕ್ಷೀರ, ಕಸ್ತೂರಿಗಳಿಂದಲೇ ಅಬ್ಬರವಾಗಿ ಭಗವಂತನನ್ನು ಪೂಜಿಸುತ್ತಾ ಕುಲದ ಹೆಮ್ಮೆಯಿಂದ ಬೀಗುವ ಭೂಸುರರನ್ನು ಕುರಿತ ಹೇಸಿಕೆ ಈ ಗೀತದಲ್ಲಿ ಸ್ಥಾಯಿಯಾಗಿ ಬೀಭತ್ಸದತ್ತ ತುಡಿದರೆ ಅಚ್ಚರಿಯಲ್ಲ ! ತಾವರೆ ಮಾತ್ರ ಕೆಸರಿನಲ್ಲಿ ಹುಟ್ಟಿದುದಲ್ಲ. ಆ ತಾವರೆಯೇ ಕೇಶವನ ಹೊಕ್ಕಳು ಎಂದು ಸೂಚಿಸುವ "ಬಿಸಜನಾಭ" ಎಂಬ ರೂಪಕವನ್ನು ಮುಖ್ಯವಾಗಿ ಗಮನಿಸಬೇಕು. ಕುಲದ ಹೆಮ್ಮೆಯ ಬಳ್ಳಿ ಎಲ್ಲಿಂದ ಎಲ್ಲಿಯವರೆಗೆ ಸುತ್ತಿಕೊಂಡ ತೊಡಕು–ತೊಡಕು ಎಂದು ಪರಿಭಾವಿಸಬೇಕು. "ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ" ಎಂಬ ಇನ್ನೊಂದು ಗೀತದಲ್ಲಿನ (ಪು. ೨೬) ಸೂಚನೆಯೂ ಈ ಹೆಮ್ಮೆಯ ಬಳ್ಳಿಗೆ ಕನಕನು ಬೀಸಿದ ಜುಗುಪ್ಸೆಯ ಕೊಡಲಿಪೆಟ್ಟು.

ಗ್ರಾಮೀಣರ ಮುಗ್ಧ ಹಾಸ್ಯದ ಪ್ರತೀಕವಾಗಿ "ಡೊಂಕುಬಾಲದ ನಾಯಕರೆ" ಎಂಬ ಹಾಡನ್ನು ಗಮನಿಸಬಹುದು [ಪು. ೩೨]. ಉತ್ಸಾಹಲಯದ ಮಾತು ಮಾತಿನಲ್ಲೂ ನಗೆ ಚಿಮ್ಮಿಸುವ ಹಾಸ್ಯಗೀತೆ ಇದು. ಇಲ್ಲಿ ವಿಡಂಬನೆ ಕಣ್ಣು ಕುಕ್ಕುವಷ್ಟು ತೀಕ್ಷ್ಣ.

> "ಕಣಕ ಕುಟ್ಟೋ ಅಲ್ಲಿಗೆ ಹೋಗಿ
> ಹಣುಕಿ ಇಣಿಕಿ ನೋಡುವಿರಿ
> ಕಣಕ ಕುಟ್ಟೋ ಒನಕಿಲಿ ಹೊಡೆದರೆ
> ಕುಂಯಿ ಕುಂಯಿ ರಾಗವ ಪಾಡುವಿರಿ"

ಎಂಬ ಒಂದು ನುಡಿ ಉದಾಹರಿಸಿದರೆ ಸಾಕು. ಮನುಷ್ಯನ ನಾಯಿಬುದ್ಧಿಗೆ ಹಿಡಿದ ಕನ್ನಡಿಯಾಗುತ್ತದೆ ಈ ವಿಡಂಬನಗೀತೆ. ಇಲ್ಲಿಯದು ಮಂದಹಾಸವನ್ನರಳಿಸುವ ಮಧುರಹಾಸ್ಯವಲ್ಲ. ಕತ್ತೆಯಂತೆ ಲತ್ತೆಕೊಡುವ ಸಾರ್ಥಕ ಗ್ರಾಮೀಣ ಹಾಸ್ಯ.

ನರಸಿಂಹಾವತಾರವನ್ನು ಕುರಿತ "ಕಂಡೆನಾ ತಂಡ ತಂಡದ ಹಿಂಡು ದೈವ" ಎಂಬ ಕೀರ್ತನೆ ಕನಕನ ಕಾವ್ಯ ಪ್ರತಿಭೆಯ ಜೀವಂತ ಸಾಕ್ಷಿಯಾಗಿದೆ. ವಸ್ತು–ಶೈಲಿ–ಅಲಂಕಾರಗಳು ರಸವನ್ನು ಸಾರ್ಥಕವಾಗಿ ಪೋಷಿಸುತ್ತವೆ. ಭಾರತೀಯ ಕಾವ್ಯ ಮೀಮಾಂಸೆಯ ಔಚಿತ್ಯ ಸಿದ್ಧಾಂತದ ಉತ್ತಮ ಉದಾಹರಣೆ ಇಲ್ಲಿದೆ. ನರಸಿಂಹಾವತಾರದ ಕಲ್ಪನೆಯೇ ರೋಮಾಂಚಕವಾದುದು.

ಛೇಕಾನುಪ್ರಾಸದ ಸಮೃದ್ಧ ಬಳಕೆಯಿಂದ ವಿಸ್ಮಯಮೂಲವಾದ ಅದ್ಭುತದ ನೆಲೆಗೆ ಅನಾಯಾಸವಾಗಿ ಏರಿಬಿಡುತ್ತಾನೆ.

"ಕಂಡೆನಾ ತಂಡತಂಡದ ಹಿಂಡುದೈವ ಪ್ರಚಂಡರಿಪು
ಗಂಡ ಉದ್ದಂಡ ನರಸಿಂಹನ ಕಂಡೆನಯ್ಯ"

ಎಂಬ ಮಾತಿನಿಂದಲೇ ಅದ್ಭುತದ ಭೇರೀನಿನಾದದ ಮೊದಲ ಛಾಪು ಅಪ್ಪಳಿಸುತ್ತದೆ. ಕಂಡೆನಯ್ಯ ಎಂಬ ಆತ್ಮೀಯ ಸಂಬೋಧನೆಯಿಂದ 'ಅಹಹ!" ಎಂಬ ಉದ್ಗಾರವನ್ನು ಕವಿ ಬಯಸಿದರೆ ಅದು ಸಹಜವೇ.

"ಘುಡು ಘುಡಿಸಿ ಕಂಬದಲ್ಲಿ ಧಡಧಡ ಸಿಡಿಲು ಸಿಡಿಯೆ
ಕಿಡಿ ಕಿಡಿಸೆ ನುಡಿಯಡಗಲೊಡನೆ ಮುಡಿವಿಡಿದು
ಫಡಫಡನೆ ನಡುನಡುಗೆ ಘುಡು ಘುಡಿಸಿ ಸಭೆ ಬೆದರೆ
ಹಿಡಿಹಿಡಿದು ಹಿರಣ್ಯಕನ ತೊಡೆಯೊಳಿಡೆ ಕೆಡಹಿದನ"

ಎಂಬ ನುಡಿಯ ಆವೇಶದ ಅಭಿವ್ಯಕ್ತಿಯನ್ನು ಗಮನಿಸಬೇಕು. ಸತತ ಅನುಪ್ರಾಸದ ಬಳಕೆ ಅದರಲ್ಲೂ ಪರುಷಾಕ್ಷರಗಳ ಸಮೃದ್ಧಿ, ಸಂದರ್ಭದ ಅನಿರೀಕ್ಷತೆ, ಕ್ಷಿಪ್ರತೆಗಳನ್ನು, ಸವೇಗವಾಗಿ, ಉಸಿರಾಡಲೆಡೆಯಿಲ್ಲದಂತೆ, ಮನಸ್ಸು ಸ್ತಂಭಿತವಾದಂತೆ ಅಭಿವ್ಯಕ್ತಿಸಿ ಬಿಡುತ್ತದೆ. ಕ್ರಿಯೆಯ ವೇಗ ಬೆರಗಿನಲ್ಲಿ ಅದ್ದಿಬಿಡುತ್ತದೆ. ಇಲ್ಲಿನ ಹಿಡಿ ಹಿಡಿದು ಎಂಬ ಕ್ರಿಯೆಯನ್ನು ಮುಂದಿನ ನುಡಿಯ ಸರಸರನೆ ಸೀಳಿ, ಹರಿಹರಿದು ಕರುಳ ಮುಂತಾದ ಛೇಕಾನುಪ್ರಾಸಗಳೊಡನೆ ಓದಿದಾಗ ಸಾಭಿನಯವಾಗಿ ಕಣ್ಣೆದುರು ನಡೆದುಹೋದ ಅದ್ಭುತದ ರಸಾವೇಶದ ಅನುಭವ ಉಂಟಾಗುತ್ತದೆ. ವಿಸ್ಮಯಮೂಲವಾದ ಅದ್ಭುತ ಇಲ್ಲಿ ಸ್ಫುಟವಾಗಿ ಕೀರ್ತನೆ ಸಾರ್ಥಕವಾಗಿದೆ. ಕಡೆಯ ನುಡಿಯಲ್ಲಿನ 'ಪುರಜನರು ಹಾಯೆಂದು' ಎಂಬಲ್ಲಿನ ನೆಮ್ಮದಿಯ ನಿಟ್ಟುಸಿರು, ಸುರರ ವಾದ್ಯಘೋಷ, ಪುಷ್ಪವರ್ಷಗಳು, ಶಿಶು ಪ್ರಹ್ಲಾದನ ಹರಿಸ್ತುತಿಗಳು ಈ ರಸಾವೇಶದ ಚಿತ್ರಣಕ್ಕೆ ಸಾರ್ಥಕ ಮಂಗಳವೆನಿಸಿ ಸದ್ಯಃಪರನಿವೃತ್ತಿಯನ್ನು ಒದಗಿಸಿ ಧನ್ಯವೆನಿಸುತ್ತವೆ. ಕನಕದಾಸನ ಮನೋಧರ್ಮವನ್ನು ಅದರ ಕಾರಯಿತ್ರೀ ಪ್ರತಿಭೆಯನ್ನು ಸ್ಫುಟಗೊಳಿಸುವ ಈ ಕೀರ್ತನೆಯನ್ನು ಪ್ರಥಮ ದರ್ಜೆಯ ರಸಕೃತಿ ಎಂದು ಪರಿಗಣಿಸಬಹುದು. ಕಾವ್ಯಶರೀರ–ಕಾವ್ಯದ ಆತ್ಮಗಳ ಅನುಗುಣ್ಯದಿಂದ ಸಿದ್ಧಿಸುವ ಔಚಿತ್ಯಕ್ಕೆ ಇದು ಲಕ್ಷ್ಯವಾಗಲೂಬಹುದು.

ಹೀಗೆ ಕನಕದಾಸ ವಿಸ್ಮಯವನ್ನು ಸ್ಥಾಯಿಯಾಗಿಸಿ, ಉದ್ದೀಪಿಸಿ, ಅದ್ಭುತ ಪ್ರಪಂಚವನ್ನೇ ನಿರ್ಮಿಸಬಲ್ಲ ; ತಿರುಪತಿಯ ದೇವರನ್ನೇ ಗೋವಿಂದ ಸೆಟ್ಟಿ

ಎಂದು ಸರಸವಾಡಿ– "ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ । ಒಡವೆಯ ಗಳಿಸುವ ಕಡುಲೋಭಿ ಸೆಟ್ಟಿ...ಕಾಸುಕಾಸಿಗೆ ಬಡ್ಡಿಗಳಿಸಿಕೊಂಡ ಆದಿಕೇಶವ ನಾರಾಯಣ ತಿಮ್ಮಸೆಟ್ಟಿ" ಎಂದೆಲ್ಲ ಲೇವಡಿ ಮಾಡಿ ನಗೆ ಉಕ್ಕಿಸಬಲ್ಲ. ದುರ್ಜನರನ್ನು ಕಡುನಿಂದಿಸುತ್ತಾ ಉಂಡಮನೆಗೆ ಎರಡೆಣಿಸುವಾತ, ನಂಬಿದ ಠಾವಿನಲಿ ಕೇಡೆಣಿಪವ, ಹಲವು ಮಾತಾಡಿ ಆಚರಿಸದವ, ರಂಭೆಸ್ತ್ರೀಯರ ನೋಡಿ ಮೋಹಿಪವ, ಗುರುನಿಂದೆ ಪರನಿಂದೆ ಮಾಡುವ, ಇತ್ಯಾದಿ ಆಕ್ರೋಶದ– ಕಿಡಿನುಡಿಗಳನ್ನು ಕೆದರಿ ರೌದ್ರವನ್ನು ಕೆಣಕಬಲ್ಲ. ಆದರೆ ಇಂಥವರ ಸಹವಾಸವನ್ನು ತ್ಯಜಿಸಿ ಸಜ್ಜನರ ಸಂಗದಲ್ಲಿರುವುದು ಮೆಚ್ಚುವ ಅಂಶ. ಹಾಗೆ ಹೇಳುವಾಗಲೂ ತಿರಿದುಂಬುವುದೆ ಲೇಸು, ಅಡವಿಯೊಳಗಜ್ಞಾತ ಲೇಸು, ಹಸನಿಲ್ಲದ ಹಾಳುಗುಡಿಯೇ ಲೇಸು ಎಂಬ ನುಡಿಗಳ ತೀವ್ರತೆಯನ್ನು ಗಮನಿಸಿದರೆ ಉತ್ಸಾಹ–ತುಂಬು ಉತ್ಸಾಹ ಅವನಲ್ಲಿ ಸ್ಥಾಯಿ ಎನಿಸುತ್ತದೆ. ದೇವಿ ನಮ್ಮ ದ್ಯಾವರು ಬಂದಾರೆ ಎಂಬ ಜಾನಪದೀಯ ಗೀತದಲ್ಲೂ ಉತ್ಸವದ ಉತ್ಸಾಹವೇ ಭೋರ್ಗರೆಯುತ್ತದೆ. ಕೆಂಗಣ್ಣ ಮೀನ, ಗುಂಗಾಡಿಸೋಮ, ಕಾಡಿನ ಹಂದಿ, ಹಾರುವ ಹುಡುಗ ಇತ್ಯಾದಿ ಸಂಬೋಧನೆಗಳೂ ವೀರದತ್ತಲೇ ತುಡಿಯುವ ದೇಸೀ ಶಬ್ದಗಳೇ. "ಆರು ಬದುಕಿದರಯ್ಯ ಹರಿನಿನ್ನ ನಂಬಿ" ಎಂದು ಹಂಗಿಸುತ್ತಲೇ ಹೊಗಳುವ ಸ್ಪರ್ಧಾತ್ಮಕ ಧೋರಣೆ ಕನಕನಿಗೆ ಪ್ರಿಯವಾದದ್ದು. "ಆವ ಸಿರಿಯಲಿ ನೀನು ಎನ್ನ ಮರೆತೆ?" ಎಂದು ದೈವವನ್ನೇ ಕೆಣಕುವ ಪ್ರವೃತ್ತಿ ಅವನದು. ಇದು ಯಾವ ನಡತೆಯ್ಯ ನಿನ್ನದು? ಎಂದು ಸವಾಲು ಎಸೆಯಲು ಅವನು ಹಿಂಜರಿಯುವುದಿಲ್ಲ.

ಇಂಥ ಕನಕ ಉತ್ಕಟವಾಗಿ ಬದುಕನ್ನು ಉಂಡವನು, ಅಷ್ಟೇ ರಸೋತ್ಕಟವಾಗಿ ಅಭಿವ್ಯಕ್ತಿಸಬಲ್ಲ ಪ್ರತಿಭಾವಂತನು. ಅನುಭವದಿಂದಲೇ ಮಾಗುತ್ತಾ ಹೋಗುತ್ತಾನೆ. ನಯಗೊಳ್ಳುತ್ತಾನೆ, ತುಂಬಿದ ಕೊಡವಾಗುತ್ತಾನೆ, ಮಾಗಿದ ಫಲವಾಗುತ್ತಾನೆ. ಅದು ಒತ್ತಿ ಮಾಡಿದ ಬಿಸಿಲ ಹಣ್ಣಲ್ಲ. ನಿಸರ್ಗಸಹಜವಾಗಿ ತನ್ನ ಕಸರು ಕಹಿಗಳನ್ನು ಕಳಚಿಕೊಳ್ಳುತ್ತಾ ಅವುಗಳನ್ನೆ ಸಿಹಿಗೊಳಿಸಿಕೊಳ್ಳುತ್ತ ಕಂಪಿಗೆ ತಿರುಗುವ ಮಾವಿನ ಹಣ್ಣು ಅದು. ಮಾಗಿದ ಮಾವಿನಲ್ಲಿ ತೋರುವ ಕೆಂಪಿನಲ್ಲಿ ತಪಸ್ಸಿನ ಸಂಕೇತವಾದ ಕೇಸರಿ ವರ್ಣದ ಗಂಭೀರ–ನಿರ್ಮಲತೆ ದೀಪ್ತವಾಗಿದೆ ಅಲ್ಲವೆ? ಅಂತಹ ಮನಸ್ಸಿಗೇ ಶಾಂತ ರಸದ ಶುಭ್ರ ಸಂತಸ ಸಾಧ್ಯ. ಆಗ ಸಮಸ್ತ ಲೋಕಜೀವನ ನಿರ್ವೇದವನ್ನುಂಟು ಮಾಡುತ್ತ ಸಾವಿನ ಅನಿವಾರ್ಯತೆಯನ್ನು ಸಹಜವಾಗಿ ಸ್ವೀಕರಿಸುತ್ತದೆ. "ಹುಟ್ಟುತೇನು

ತರಲಿಲ್ಲ ಹೋಗುತೇನು ಒಯ್ಯಲಿಲ್ಲ" ಎಂಬ ನಿಷ್ಠುರ ಸತ್ಯವನ್ನು ಒಪ್ಪಿಕೊಳ್ಳುತ್ತದೆ. ಹಿಂದಿನ ಆಕ್ರೋಶ ಅಸಹನೆಗೆ ಬದಲಾಗಿ ಸಾಕ್ಷೀಪ್ರಜ್ಞೆ ಬೆಳೆದು

"ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು
ಅಳ್ಳಾಚಾರಿ ಗೊಂಬೆಯಂತೆ ಆಡಿಹೋಯಿತು
ಹಳ್ಳಹರಿದು ಹೋಗುವಾಗ ನೀರಗುಳ್ಳೆ ಒಡೆಯುವಂತೆ
ಉಳ್ಳಿಯ ಪೊರೆಯಂತೆ ಕಾಣೊ ಸಂಸಾರದಾಟವು" (ಪು. ೬೯)

ಎಂಬ ಸಹಜ ನಿರ್ವೇದವಾಗುತ್ತದೆ. ಶಾಂತರಸದ ಬಾಗಿಲು ತೆರೆದು ಬೆಳಕು ಮೂಡುತ್ತದೆ.. ಅಂತಹ ನೆಲೆಯಲ್ಲಿ ಮಾತ್ರ ಈ ತನ್ಮಯತೆಯ ಶಾಂತರಸೋತ್ಕಟತೆ [ಉತ್ಕಟ ಎನ್ನಬಹುದೆ ಎನ್ನುವಷ್ಟು ಶಾಂತದ ಗಂಗಾಸಲಿಲ ಅದು.] ಸಿದ್ಧಿಸುತ್ತದೆ.

"ಹೃದಯ ಹೊಲವ ಮಾಡಿ ತನುವ ನೇಗಿಲ ಮಾಡಿ
ತನ್ವಿರಾ ಎಂಬ ಎರಡೆತ್ತು ಹೂಡಿ
ಜ್ಞಾನವೆಂಬೊ ಮಿಣಿಯ ಕಣ್ಣಿ ಹಗ್ಗವ ಮಾಡಿ
ಮನವೆಂಬ ಧಾನ್ಯವ ನೋಡಿ ಬಿತ್ತಿರಯ್ಯಾ" (ಪು. ೭೬)

ಸಮಸ್ತ ಬದುಕೇ ಹರಿಸಮರ್ಪಿತವಾದ ಈಶಾವಾಸ್ಯಭಾವ ಇದು. ಶರೀರವೂ ಈಗ ತುಚ್ಛವಲ್ಲ. ನಾರಾಯಣಾನುಸಂಧಾನದ ಸಾಧನ. ಶ್ವಾಸವೇ ಸೋಹಂಭಾವದಿಂದ ಪರಮಾತ್ಮಾನುಭವದಲ್ಲಿ ತೊಡಗಿದೆ. ಭಕ್ತಿ–ಜ್ಞಾನ–ಕರ್ಮಗಳ ತೋರಿಕೆಯೇ ಮಾಯವಾಗಿ ಎಲ್ಲವೂ ಸಮನ್ವಯಗೊಂಡು ಆನಂದದ ಆಗರದಲ್ಲಿ ನೆಲೆನಿಂತ ಜೀವ ಧನ್ಯವಾಗಿದೆ. ಇದೊಂದು ಪರಮಾತ್ಮನ ನಿತ್ಯೋತ್ಸವವೇ ಸರಿ. ಶಾಸ್ತ್ರ, ಪುರಾಣ, ಗಂಧ ಕಸ್ತೂರಿಗಳ ಪರಿಮಳ, ಕಡೆಗೆ ನವಮೋಹನಾಂಗಿಯರ ನೋಡುವ ನೋಟವೂ ಆತನದೇ. ಪಂಚೇಂದ್ರಿಯಗಳೂ ಅವುಗಳ ವಿಷಯಗಳೂ ಅವುಗಳ ಅನುಭವವೂ ಆತನದೇ ಆಗಿರುವ ನೆಲೆಯಲ್ಲಿ ತ್ರಿಪುಟಿಗಳ ದ್ವಂದ್ವವೆಲ್ಲಿ? ಮೋಹಪಾಶದ ದ್ವೈತವಾದರೂ ಎಲ್ಲಿ?

"ತನು ನಿನ್ನದು ಜೀವನ ನಿನ್ನದು
ಅನುದಿನ ಬಾಹೊ ಸುಖ ದುಃಖ ನಿನ್ನದು" (ಪು. ೩೩)

ಎಂಬ ಶಾಂತರಸದ ನೆಲೆಯಲ್ಲಿ ಕನಕನ ಕಾವ್ಯ ವಿಶ್ರಾಂತವಾಗುತ್ತದೆ. ಆದರೆ ಕನಕನ ಕಾವ್ಯದಲ್ಲಿ ಶಾಂತ ಅಂತ್ಯರಸ– ಆದ್ಯಂತ ರಸವಲ್ಲ.

೧. ಭಕ್ತಿ ಭಾವವನ್ನು ಕುರಿತ ಪ್ರತ್ಯೇಕ ಲೇಖನವೇ ಇರುವುದರಿಂದ, ಕೀರ್ತನಗಳ ಪರಿಶೀಲನದಲ್ಲಿ ಅದನ್ನು ವಿಸ್ತರಿಸಿಲ್ಲ.

೨. ಕೀರ್ತನಗಳ ಅಡಿಯಲ್ಲಿ ಸೂಚಿಸಿರುವ ಪುಟ ಸಂಖ್ಯೆ 'ಜನಪ್ರಿಯ ಕನಕ ಸಂಪುಟ' (ಸಂ. ದೇಜಗೌ) ಕೃತಿಯದು. ಇದರ ಕೀರ್ತನ ಸಂಕಲನಗಳನ್ನು ಗಮನಿಸಲಾಗಿದೆ.

# ಕನಕ ಸಾಹಿತ್ಯದಲ್ಲಿ ಅಲಂಕಾರಗಳು

**ಟಿ. ಕೇಶವ ಭಟ್ಟ**

ಹರಿದಾಸ ಪರಂಪರೆಯ ಅಗ್ರಮಾನ್ಯ ಕವಿಯುಗಳರಲ್ಲಿ ಒಬ್ಬರು ಕನಕದಾಸರು ; ಇನ್ನೊಬ್ಬರು ಪುರಂದರದಾಸರು. ಇವರಿರ್ವರು ಸಮಕಾಲೀನರು, ಮಾತ್ರವಲ್ಲ ; ವ್ಯಾಸರಾಯರ ಶಿಷ್ಯರು, ದಾಸಸಾಹಿತ್ಯನಿರ್ಮಾಪಕರು, ಕವಿಗಳು, ಕೀರ್ತನಕಾರರು. ಪುರಂದರದಾಸರದು ಕಾವ್ಯಕ್ಷೇತ್ರಕ್ಕೆ ಕೊಡುಗೆ ಇಲ್ಲ. ನೀತಿಬೋಧಕ, ಭಕ್ತಿಪ್ರತಿಪಾದಕ, ತಾಳಬದ್ಧ ಕೀರ್ತನೆಗಳನ್ನೂ ಉಗಾಭೋಗಗಳನ್ನೂ ಅಸಂಖ್ಯವಾಗಿ ರಚಿಸಿದ್ದಾರೆ. ಕನಕದಾಸರು ಇದೇ ಬಗೆಯ ಗೇಯಸಾಹಿತ್ಯವನ್ನು ಮಾತ್ರವಲ್ಲದೆ, ಕಾವ್ಯರಚನೆಯನ್ನೂ ಮಾಡಿ ಹೆಸರಾಂತಿದ್ದಾರೆ. ಸುಲಭ ಸುಂದರ ಶೈಲಿಯಲ್ಲಿ ಷಟ್ಪದಿ ಸಾಂಗತ್ಯಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಅವರು ರಚಿಸಿರುವ 'ಮೋಹನ ತರಂಗಿಣಿ' ೪೨ ಸಂಧಿಗಳ ಸಾಂಗತ್ಯ ಕಾವ್ಯ. ನಳಚರಿತ್ರೆ ಎಂಬುದು ೯ ಸಂಧಿಗಳಿಂದ ೪೮೧ ಭಾಮಿನಿಷಟ್ಪದಿ ಪದ್ಯಗಳಿಂದೊಪ್ಪುವ ಕಥನಾತ್ಮಕ ಖಂಡಕಾವ್ಯ. 'ಹರಿಭಕ್ತಿಸಾರ' ೧೧೦ ಭಾಮಿನಿಷಟ್ಪದಿಗಳ ಶತಕ ಕೃತಿ. 'ರಾಮಧಾನ್ಯ ಚರಿತ್ರೆ' ೧೫೮ ಭಾಮಿನಿ ಷಟ್ಪದಿಗಳುಳ್ಳ ರಚನೆ. ಈ ನಾಲ್ಕು ಪದ್ಯಕೃತಿಗಳನ್ನು ಹಾಗೂ ತಾಳಛಂದಸ್ಸಿನ ಕೀರ್ತನೆಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಂಡು ಅವುಗಳ ಅಲಂಕಾರಿಕ ಅಭಿವ್ಯಕ್ತಿಯನ್ನು ನಿರೂಪಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶ.

ಕಾವ್ಯಶರೀರಕ್ಕೆ ಶೋಭೆಯನ್ನುಂಟುಮಾಡತಕ್ಕ ಧರ್ಮವನ್ನು 'ಅಲಂಕಾರ' ಎಂದಿದ್ದಾರೆ. ಕಾವ್ಯದ ಘಟಕಗಳು ಶಬ್ದ ಮತ್ತು ಅರ್ಥ ಆಗಿರುವುದರಿಂದ ಅಲಂಕಾರಗಳು ಶಬ್ದಾಲಂಕಾರ ಅರ್ಥಾಲಂಕಾರ ಎಂದೆರಡು ವಿಧ. ಶಬ್ದಾಲಂಕಾರಗಳು ಕಾವ್ಯಶರೀರಕ್ಕೆ ಉಡುಗೆ ತೊಡುಗೆಗಳಂತೆ ಬಾಹ್ಯಶೋಭೆಯನ್ನು ಮಾಡುವುವು. ಅರ್ಥಾಲಂಕಾರಗಳು ಧೈರ್ಯ ಶೌರ್ಯ ಶೀಲ ಸದ್ಗುಣಗಳಂತೆ ಅಂತಃಶೋಭೆಯನ್ನು ಬೀರುವುವು. ಇವೆರಡು ಇದ್ದಷ್ಟೂ ಕಾವ್ಯವು ಸೊಗಸಾಗುವುದು. ಕನಕಸಾಹಿತ್ಯದಲ್ಲಿ ಈ ಬಗೆಯ ಎರಡೂ ವಿಧದ ಅಲಂಕಾರಗಳು ಮಿತವಾಗಿ ಮೂಡಿ ಬಂದಿವೆ.

ಕಾವ್ಯಗಳಲ್ಲಿ ಬರುವ ಅರ್ಥಾಲಂಕಾರಗಳು ಸಂಖ್ಯೆಯಲ್ಲಿ ಒಂದು ನೂರು ಎಂತಲೂ, ಆಧುನಿಕರು ಅವಕ್ಕೆ ಸೇರಿಸಿಕೊಂಡವು ಮತ್ತೆ ಹದಿನೈದು ಎಂತಲೂ 'ಅಪ್ರತಿಮವೀರ ಚರಿತೆ'ಯಲ್ಲಿ ಹೇಳಿದೆ. ಈ ೧೧೫ ರಲ್ಲಿ ಅನೇಕವು ಹಲವು ಪ್ರಭೇದಗಳಿಂದ ಕೂಡಿವೆ. ಇದರಿಂದಾಗಿ ಅಲಂಕಾರಗಳ ಸಂಖ್ಯೆ ಸುಮಾರು ೨೨೦ಕ್ಕೆ ಮೀರುತ್ತದೆ. ಇವುಗಳಿಗೆಲ್ಲ ಉದಾಹರಣೆಗಳು ಹಳಗನ್ನಡ ನಡುಗನ್ನಡ ಕಾವ್ಯಗಳಲ್ಲಿ ನಮಗೆ ದೊರೆಯುತ್ತವೆ. ಆದರೆ, ಕನಕದಾಸರು ಪಾಂಡಿತ್ಯ ಪ್ರದರ್ಶನಕ್ಕಾಗಿ ಕಾವ್ಯ ರಚನೆ ಮಾಡಿದವರಲ್ಲವಾದ್ದರಿಂದ ಅವೆಲ್ಲವನ್ನೂ ತಮ್ಮ ಕಾವ್ಯಗಳಲ್ಲಿ ಅಳವಡಿಸುವ ಕೃತಕಯತ್ನವನ್ನು ಮಾಡಿಲ್ಲ. ಅವರ ಕೃತಿಗಳಲ್ಲಿ ಅಲಂಕಾರಗಳು ಸಹಜವಾಗಿ ಮೂಡಿ ಬಂದುವು. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ನಿರ್ದೇಶಿಸಲಾಗುವುದು.

[ಉದಾಹೃತ ಪದ್ಯಗಳ ಸಂಕ್ಷೇಪಾಕ್ಷರ ವಿವರ : ನ.–ನಳಚರಿತ್ರೆ, ಮೋ.–ಮೋಹನ ತರಂಗಿಣಿ, ರಾ.–ರಾಮಧಾನ್ಯ ಚರಿತ್ರೆ, ಹ.–ಹರಿಭಕ್ತಿಸಾರ. ಜ.–ಜನಪ್ರಿಯ ಕನಕಸಂಪುಟ.]

ಕನ್ನಡ ಕಾವ್ಯಗಳಲ್ಲಿ ಅತಿಮುಖ್ಯ ಶಬ್ದಾಲಂಕಾರವಾಗಿರುವುದು ದ್ವಿತೀಯಾಕ್ಷರ ಪ್ರಾಸ. ಕವಿರಾಜಮಾರ್ಗದಲ್ಲಿ ಹೀಗೆ ಹೇಳಿದೆ :

ನುತ ಶಬ್ದಾಲಂಕಾರದೊ
ಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ (೨–೩೦)

ಕನ್ನಡಕ್ಕೆ ಅತಿಶಯ (ವಿಶೇಷ ಲಕ್ಷಣ)ವೆನಿಸುವ ಈ ಪ್ರಾಸವನ್ನು ಚಂಪು, ಷಟ್ಪದಿ, ಸಾಂಗತ್ಯಕಾವ್ಯಗಳಲ್ಲಿಯೂ ತ್ರಿಪದಿ, ಶೋಭಾನೆ, ಯಕ್ಷಗಾನ ಸಾಹಿತ್ಯ, ದಾಸಸಾಹಿತ್ಯಗಳಲ್ಲಿಯೂ ಬಲುಮಟ್ಟಿಗೆ ಜನಪದಸಾಹಿತ್ಯದಲ್ಲಿಯೂ ಕಾಣಬಹುದಾಗಿದೆ. ಕನಕದಾಸರ ಎಲ್ಲ ರಚನೆಗಳಲ್ಲಿಯೂ ದ್ವಿತೀಯಾಕ್ಷರ ಪ್ರಾಸವಿದೆ. ಕೆಲವೆಡೆ ಅನುಪ್ರಾಸ ಅಂತ್ಯಪ್ರಾಸಗಳೂ ಬಂದಿವೆ. ಎರಡು ಅಕ್ಷರಗಳು ಜತೆಜತೆಯಾಗಿ ಬರುವ ಛೇಕಾನುಪ್ರಾಸವೂ ಒಮ್ಮೊಮ್ಮೆ ಬಂದಿದೆ. ಉದಾ:

ಬಾಣ ಸುಮೇರುಬಾಣಾಸನಧರ ಭಕ್ತ
ಬಾಣಪಂಚಕ ಸಮ ರೂಪ
ಬಾಣ ಗೀರ್ವಾಣಸೇವಿತ ಪಾದ ಪಂಕಜ
ಬಾಣ ಭಾಸ್ಕರತೇಜ ಜಯತು ॥ (ಮೋ. ೨೦–೪೩)

ಈ ಪದ್ಯವು ಛೇಕಾನುಪ್ರಾಸಕ್ಕೂ 'ಸಮತೆ' ಎಂಬ ಶಬ್ದಗುಣಕ್ಕೂ

ಉದಾಹರಣೆಯಾಗುತ್ತದೆ. 'ಅವೈಷಮ್ಯೇನ ಭಣನಂ ಸಮತಾ ಸಾ ನಿಗದ್ಯತೇ' ಎಂಬುದದರ ಲಕ್ಷಣ (ನೋಡಿ : ಅಪ್ರತಿಮವೀರಚರಿತೆ).

ಕೇಳುವುದು ಹರಿಕಥೆಯ ಕೇಳಲು
ಹೇಳುವುದು ಹರಿಭಕ್ತಿ ಮನದಲಿ
ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ
ಊಳಿಗವ ಮಾಡುವುದು ವಿಷಯವ
ಹೂಳುವುದು ನಿಜಮುಕ್ತಿಕಾಂತೆಯ
ನಾಳುವುದು ಕೃಪೆಮಾಡಿ ರಕ್ಷಿಸು ನಮ್ಮನನವರತ ॥ (ಹ. ೧೦೨)

ಈ ಪದ್ಯದಲ್ಲಿ 'ಳುವುದು' ಎಂಬ ಮೂರಕ್ಷರದ ಪ್ರಾಸ ಐದು ಪಾದಗಳಲ್ಲಿ ಬಂದಿದೆ. ಕನಕದಾಸರ ಕೀರ್ತನಗಳಲ್ಲಿಯೂ ಶಬ್ದಾವೃತ್ತಿಯ ಮೂಲಕ ಶಬ್ದಾಲಂಕಾರದ ಸೊಗಸು ಬಂದಿರುವುದುಂಟು– "ಎಲ್ಲಾರು ಮಾಡುವುದು ಹೊಟ್ಟೆಗಾಗಿ" (ಜ. ೧೭) ಎಂಬ ಕೀರ್ತನೆಯ ಪ್ರಾರಂಭ ಹಾಗೂ ಪ್ರತಿಯೊಂದು ನುಡಿಯ ಕೊನೆಗೆ 'ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂಬ ಧ್ರುವ (ಪಲ್ಲವಿ) ಶಬ್ದಾಲಂಕಾರದ ಸೊಗಸನ್ನು ಬೀರುತ್ತದೆ. ಶಬ್ದಾಲಂಕಾರಕ್ಕಿಂತ ಮಹತ್ತ್ವದ ಅರ್ಥಾಲಂಕಾರವನ್ನೀಗ ಲಕ್ಷಿಸುವ :

ಕನಕಸಾಹಿತ್ಯದಲ್ಲಿ ಉಪಮೆ, ಉತ್ಪ್ರೇಕ್ಷೆ, ದೃಷ್ಟಾಂತ, ಅತಿಶಯೋಕ್ತಿ, ರೂಪಕ, ಸ್ವಭಾವೋಕ್ತಿಗಳು ಅಧಿಕವಾಗಿವೆ, ಇನ್ನುಳಿದವು ವಿರಳವಾಗಿ ಕಾಣಸಿಗುತ್ತವೆ. ಅವನ್ನಿಲ್ಲಿ ಪ್ರಸ್ತಾವಿಸಲಾಗುವುದು.

**ಉಪಮಾಲಂಕಾರ** : ಅರ್ಥಾಲಂಕಾರಗಳಲ್ಲಿ ಉಪಮಾಪ್ರಪಂಚ ಬಲುದೊಡ್ಡದು. ಇದರಲ್ಲಿ ಉಪಮೇಯ, ಉಪಮಾನ, ಸಾಮಾನ್ಯಧರ್ಮ ಮತ್ತು ವಾಚಕಪದ ಎಂಬ ನಾಲ್ಕು ಅಂಶಗಳೂ ವ್ಯಕ್ತವಾಗಿದ್ದರೆ ಅದು 'ಪೂರ್ಣೋಪಮೆ': ಒಂದೋ ಎರಡೋ ಮೂರೋ ಲುಪ್ತವಾಗಿರುವುದುಂಟು. ಆಗ ಅದು 'ಲುಪ್ತೋಪಮೆ' ಯಾಗುವುದು. ಒಂದು ಪೂರ್ಣೋಪಮೆ, ಎಂಟು ಲುಪ್ತೋಪಮೆಗಳು–ಹೀಗೆ ಒಂಬತ್ತು. ಕವಿರಾಜಮಾರ್ಗದಲ್ಲಿ ಇನ್ನು ೨೬ ಉಪಮಾಪ್ರಭೇದಗಳನ್ನು ಹೇಳಿದೆ. ಉಪಮಾಲಂಕಾರದ ಛಾಯೆಗಳಾಗಿ, ಉತ್ಪ್ರೇಕ್ಷೆ, ರೂಪಕ ದೃಷ್ಟಾಂತ ಮುಂತಾದವು ಹಲವಿವೆ. ಆದುದರಿಂದ ಉಪಮಾಲಂಕಾರಕ್ಕೆ ತುಂಬ ಮಹತ್ತ್ವ. ಸಂಸ್ಕೃತದಲ್ಲಿ ಕಾಳಿದಾಸನು ಉಪಮಾ ಕವಿಚಕ್ರವರ್ತಿಯಾಗಿದ್ದಾನೆ. ಕನಕ ಸಾಹಿತ್ಯದಿಂದ ಕೆಲವು ಉದಾಹರಣಗಳಿವು : ನಳನು ಪುಷ್ಕರನೊಂದಿಗೆ ಜೂಜಾಡಿ ರಾಜ್ಯವನ್ನೆಲ್ಲ ಸೋತನು. ಇನ್ನು ತನ್ನು

ಪತ್ನಿಯನ್ನು ಪಣವಾಗಿಡಲು ಯೋಚಿಸಿದನು. ಇದನ್ನು ಆಪ್ತಪುರೋಹಿತನು ಅಂತಃಪುರದಲ್ಲಿದ್ದ ದಮಯಂತಿಗೆ ತಿಳಿಸಿದನು. ಆಗ ಆಕೆಯ ಸ್ಥಿತಿ ಹೀಗೆ ವರ್ಣಿತವಾಗಿದೆ :

ಕಮಲವನದಲಿ ಮಂಜು ಸುರಿದಾ
ಕ್ರಮದ ಬಗೆಯಲಲಿ ಸತಿಯಳಿಗೆ ಮುಖ
ಕಮಲ ಬಾಡಿತು ನುಡಿಯ ಕೇಳುತ ಮನದ ಚಿಂತೆಯಲಿ
ಕಮಲನಾಭನ ಕರುಣಕವಚವು
ಸಮೆದರಾರೇಗುವರು ಹರ ಹರ
ಕುಮತಿ ಪುಷ್ಕರನಿಂತು ಮುನಿದನೆ ಎನುತ ಮರುಗಿದಳು ॥ (ನ. ೪-೩೪)

ಇಲ್ಲಿ ಸ್ಪಷ್ಟವಾಗಿ ಪೂರ್ಣೋಪಮೆ ಕಾಣುತ್ತಿದೆ. ಇದಲ್ಲದೆ, ಮುಖಕಮಲ, ಕರುಣಕವಚ ಎಂಬಲ್ಲಿ ರೂಪಕಾಲಂಕಾರವೂ ರೂಪತಳೆದಿದೆ. 'ಕಮಲನಾಭನ ಕರುಣಕವಚವು ಸಮೆದರೆ ಆರು ಏಗುವರು' ('ಏನು ಮಾಡುವರು') ಎಂಬುದಾಗಿ ಕಷ್ಟಬಂದುದನ್ನು ಶ್ರೀಹರಿಯ ಕರುಣಕವಚ ಹರಿದು ಹೋದುದಾಗಿ ಹೇಳಿರುವುದರಿಂದ ಈ ಪದ್ಯದಲ್ಲಿ ಪರ್ಯಾಯೋಕ್ತಿ ಎಂಬ ಅಲಂಕಾರವೂ ಕಂಡುಬರುತ್ತಿದೆ. ಕವಿಯ ಅನುಪಮ ಅಭಿವ್ಯಕ್ತಿ ಸಾಮರ್ಥ್ಯಕ್ಕೆ ಈ ಏಕತ್ರಿತ ಅಲಂಕಾರಗಳು ಸಮರ್ಥಕಗಳಾಗಿವೆ. ಲಾಕ್ಷಣಿಕರು ಇದನ್ನು ಅಲಂಕಾರ ಸಂಸೃಷ್ಟಿ ಎನ್ನುವರು.

ಮೋಹನತರಂಗಿಣಿ ಕಾವ್ಯವನ್ನು ಕನಕದಾಸರು ಪ್ರಿಯತಮೆ ಸುಜ್ಞಾನವಧೂಟಿಗೆ ಹೇಳುವಂತೆ ರಚಿಸಿದ್ದಾರೆ. ಒಂದೆಡೆ ಆಕೆ ಹೀಗೆನ್ನುತ್ತಾಳೆ:

ಗದೆ ಶಂಖ ಚಕ್ರ ಪಂಕೇರುಹ ಪಾಣಿಯ
ಹೃದಯದೊಳಿಂಬಿಟ್ಟುಕೊಂಡು
ಸೊದೆಗಡಲೊಳ್ದೆರೆಯಂತೆ ಮೇಲ್ಗತೆಯ ಮಾ
ಣದೆ ಪೇಳು ಮನ್ಮನೋನಾಥ ॥ (ಮೋ. ೧೪-೧)

ಶಂಖ ಚಕ್ರ ಗದಾಪದ್ಮಧಾರಿಯಾದ ಹರಿಯನ್ನು ಕ್ಷೀರಸಮುದ್ರದ ಅಲೆ ತನ್ನ ಎದೆಯಲ್ಲಿಟ್ಟುಕೊಂಡು ಇರುವ ಹಾಗೆಯೇ ಆ ಶ್ರೀ ಹರಿಯನ್ನು ಹೃದಯದಲ್ಲಿಟ್ಟುಕೊಂಡು (ಧ್ಯಾನಿಸಿಕೊಂಡು) ಮುಂದಿನ ಕಥೆ ಹೇಳು–ಎಂಬೀ ಮಾತಿನಲ್ಲಿ ಪೂರ್ಣೋಪಮೆಯಿದೆ. ಇಂತಹುದೆ ಇನ್ನೊಂದು :

ಚಂದ್ರನಂದದೆ ಚಂದ್ರಶೇಖರನಂತೆ ಮೃ
ಗೇಂದ್ರನಂತಹಿರಾಜನಂತೆ

ಇಂದ್ರನೈರಾವತದಂತೆ ನಾರದಮೌ
ನೀಂದ್ರ ಶಂಬರನ ಕಣ್ಗೆಸೆ ॥ (ಮೋ. ೧೧–೪)

'ಮದನಾಗಮದ ಶ್ರೀಕಾರದಂತಿರುವ ನಿನ್ನ ಕಿವಿ' (ಮೋ. ೬–೨) ಇಲ್ಲಿ ಸಾಮಾನ್ಯಧರ್ಮ ಲುಪ್ತ. ಹರಿಭಕ್ತಿಸಾರದಲ್ಲಿಯೂ ಹಲವೆಡೆ ಉಪಮಾಲಂಕಾರಗಳಿವೆ:

ಹಸಿವರಿತು ತಾಯ್ತನ್ನ ಶಿಶುವಿಗೆ
ಒಸೆದು ಮೊಲೆಗೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು (ಹ. ೨೩)
ನೀರ ಮೇಲಣ ಗುಳ್ಳೆಯಂದದಿ
ತೋರಿಯಡಗುವ ದೇಹವೀ ಸಂ
ಸಾರ ಬಹಳಾರ್ಣವದೊಳಗೆ ಮುಳುಗಿದೆನು ಪತಿಕರಿಸಿ
ತೋರಿಸಚಲಾನಂದ ಪದವಿಯ
ಸೇರಿಸಕಟಾ ನಿನ್ನವೊಲು ನಮ
ಗಾರು ಬಾಂಧವರುಂಟು ರಕ್ಷಿಸು ನಮ್ಮನನವರತ ॥ಹ. ೭೫)

ಕನಕದಾಸರ ಕೀರ್ತನೆಯಲ್ಲಿ :

ತಲೆಹುಳಿತ ನಾಯಂತೆ ಹಲವು ಬೀದಿಯ ತಿರುಗಿ
ಗೆಲುವಿನಿಂದಲಿ ಮೂಲ ಮಲವನಳಿಯದೆ ಹ್ಯಾಂಗೆ ನೀ ದಾಸನಾದಿ (ಜ.ಪು. : ೯೨)

ತಿಳಿಗೇಡಿಯಾಗಿದ್ದು ತನ್ನ ಕೊರತೆ ತಿದ್ದದೆ ಊರೂರು ಸುತ್ತಾಡುವ ಕಪಟದಾಸನನ್ನು ಇಲ್ಲಿ ತಲೆಯಲ್ಲಿ ಹುಣ್ಣಾಗಿ ಹುಳುವಾಗಿ ಬೀದಿ ಬೀದಿ ತಿರುಗುವ ನಾಯಿಗೆ ಹೋಲಿಸಲಾಗಿದೆ.

**ಉತ್ಪ್ರೇಕ್ಷಾಲಂಕಾರ :** (ಉಪಮೇಯವನ್ನು ಉಪಮಾನವಸ್ತುವೋ ಎಂದು ಸಂಭಾವಿಸುವುದು) ನಿಷಧನಗರದ ಈ ವರ್ಣನಪದ್ಯದಲ್ಲಿ ಉತ್ಪ್ರೇಕ್ಷೆಯೊಂದಿಗೆ ಅತಿಶಯೋಕ್ತಿಯೂ ಬಂದಿದೆ–

ಮುಗಿಲ ತುಡುಕುವ ತೆನೆಗಳಾಳ್ವೇ
ರಿಗಳು ಪಾತಾಳಗಳ ಖಾತಗ
ಳಗಳು ಬಳಸಿದ ಕೋಟೆ ಸುತ್ತಾವರಿಸಿದುನ್ನತದ
ಗಗನವೀಧಿಯ ತಾರಕೆಯವೊಲ್
ಸೊಗಸುದೋರುವ ಕನ್ನಡಿಯ ಸಾ
ಲುಗಳ ರತ್ನಪ್ರಭೆಗಳಲಿ ರಂಜಿಸಿದುದಾ ನಗರ ॥ (ನ. ೧–೨೧)

ಕೋಟೆ ಗೋಡೆ ತುದಿಗಳು ಮುಗಿಲನ್ನು ಮುಟ್ಟಿದ್ದುವು, ಪಾತಾಳದ ತನಕ ಕಂದಕದ ಅಗೆತವಿದ್ದಿತು ಎಂದುದು ಅತಿಶಯೋಕ್ತಿ. ಕನ್ನಡಿಯ ಸಾಲುಗಳು ಆಗಸಬೀದಿಯ ನಕ್ಷತ್ರಗಳೋ ಎಂಬಂತೆ ಎಂದುದು ಉತ್ಪ್ರೇಕ್ಷಾಲಂಕಾರವಾಗಿದೆ. ನಳಚರಿತ್ರೆಯಲ್ಲಿ–ತಮದ ರಾಹುಗ್ರಹವು ಸೋಂಕಿದ ದ್ಯುಮಣಿಯಂತಿರೆ (೪–೩೫), ಹೊಲಬುದಪ್ಪಿದ ಹುಲ್ಲೆ ಬೇಡನ ಬಲೆಗೆ ಬಿದ್ದಂತಾಗೆ (೪–೩೭), ಎಳೆಯ ಬಾಳೆಯ ಸುಳಿಯು ಅನಲನ ಜಳದ ಹೊಯ್ಲಲಿ ನೊಂದವೊಲ್ (೫–೨), ಹಿಮಕರನ ನುಂಗುವ ರಾಹುವಿನವೊಲ್ (೫–೨೭), ದಮಯಂತಿಯನು ನೋಡಲು ಸೊಗಸಿ ಬಂದನಿಮಿಷರವೊಲ್ ತಾರೆಗಳು ಮೂಡಿದವಂಬರದಿ (೫–೪೩). ರಾಮಧಾನ್ಯಚರಿತ್ರೆಯಲ್ಲಿ : ರಾಮಣೀಯಕ ರಚನೆಯಲಿ ಸುತ್ರಾಮನೋಲಗದಂತೆ (ರಾ. ೨೨), ನುಡಿದನು ಸಿಡಿಲ ಗರ್ಜನೆಯಂತೆ (೪೪). 'ಮೋಹನ ತರಂಗಿಣಿಯಲ್ಲಿ' ಉತ್ಪ್ರೇಕ್ಷೆಯೊಂದಿಗೆ ರೂಪಕಾಲಂಕಾರವೂ ಸೇರಿರುವ ಪದ್ಯೋದಾಹರಣೆ–

ವಾಣಿಯ ಧವನೆಂಬ ವ್ಯವಹಾರಿ ಪಟ್ಟೆಯ
ಗೋಣಿಯೊಳ್ ತುಂಬಿದ ರತ್ನ
ಓಣಿಯೊಳ್ ಚೆಲ್ಲಿದಂತಿದೆ ನಿನ್ನ ಮಾತೆಂಬ
ಮಾಣಿಕ ಮನ್ಮನೋನಾಥ (ಮೋ. ೧–೩೪) ॥

ಇಲ್ಲಿ 'ಮಾತೆಂಬ ಮಾಣಿಕ' ರೂಪಕಾಲಂಕಾರ. 'ಚೆಲ್ಲಿದಂತಿದೆ' ಉತ್ಪ್ರೇಕ್ಷೆ.

ಪುಷ್ಕಳವಾಗಿ ಉಂಡು, ಹೊಟ್ಟೆಯುಬ್ಬಿಸಿ, ಊಟದಿಂದೆದ್ದ ಬ್ರಾಹ್ಮಣರು ಲಂಬೋದರ ಗಣಪತಿಯು ಬಳಗದವರೋ ! ಎಂಬಂತೆ ಕಾಣಿಸಿದರೆಂದು ಉತ್ಪ್ರೇಕ್ಷಿಸಿರುವುದು ಹೀಗೆ :

ರಸರಸಾಯನವ ಚಪ್ಪರಿದು ನೀರ್ಮಜ್ಜಿಗೆ
ಹಸಗೆಯ್ದಿರಲೀಂಟಿ ಬುಧರು
ಪೊಸ ವಿಘ್ನರಾಜನ ಬಳಗವೆಂಬಂತೇಳೆ
ವಶವಲ್ಲದೆದ್ದರುತ್ಸವದಿ ॥ (ಮೋ. ೩–೫೭)

ರುಕ್ಮಿಣೀದೇವಿ ಗರ್ಭಿಣಿಯಾಗಿದ್ದಾಗ ಬಂದ ಮಳೆಗಾಲದ ವರ್ಣನೆಯ ಹಲವು ಪದ್ಯಗಳಲ್ಲಿ ವಿಭಾವನಾಲಂಕಾರದೊಡನೆ ಉತ್ಪ್ರೇಕ್ಷಾಲಂಕಾರವಿದೆ (೪–ಪದ್ಯ ೩೩–೩೮), ೪೩). ಒಂದು ಉದಾಹರಣೆ :

ನರ್ತಿಪ ನವಿಲ ನಾಟ್ಯಕೆ ಮೆಚ್ಚಿ ಪುರುಹೂತ
ತೆತ್ತಿಸ ಕೋಟಿ ನಿರ್ಜರರು

ಮುತ್ತಿನ ತ್ಯಾಗವ ಕೊಟ್ಟಂತೆಯಾಲಿಕಲ್
ಬಿತ್ತಿಕ್ಕಿ ಬಿರ್ದುದುರ್ವಿಯಲಿ ॥(ಮೋ. ೪–೩೮)

ಹೊರಳ್ದಳು ಮುಮ್ಮೊನೆ ತಾಗಿದ ಹುಲ್ಲೆಯಂತೆ (೪–೭೮), ಕಣ್ಣೊಡೆದಂತೆ ಕಂಗೆಟ್ಟು, ಸುಣ್ಣಕಲ್ ಪುಡಿಗಟ್ಟಿ ಮಡುವಿನೊಳೆಳಿದಂತೆ (೪–೮೯)–ಇವೆಲ್ಲ ಉತ್ಪ್ರೇಕ್ಷಾಲಂಕಾರದ ನೆಲೆಗಳು. ಉತ್ಪ್ರೇಕ್ಷೆಗೆ ಯಥಾಸಂಖ್ಯಾಲಂಕಾರ ಮೇಳವಿಸಿರುವ ಉದಾಹರಣೆ ಇಲ್ಲಿದೆ :

ಓರಂತೆ ಮಧು ಘೃತ ರಸದಾಳಿರಸ ಗೋ
ಕ್ಷೀರದಂತೆಸೆವ ಕಾರ್ಯಕ್ಕೆ
ನೀರಂತೆ ಕಡಜಿಗನೆಸಱಂತೆ ಪುಟಿಯಂತೆ
ನಾರದ ಬಂದನಾಯೆಡೆಗೆ ॥ (೧೨–೨೦)

ಮಧುವಿಗೆ (ಜೇನಿಗೆ) ನೀರಿನಂತೆ, ತುಪ್ಪಕ್ಕೆ ಮತ್ತು ಕಬ್ಬಿನ ರಸಕ್ಕೆ ಕಹಿಜೀರಿಗೆಯ ರಸದಂತೆ, ಹಸುವಿನ ಹಾಲಿಗೆ ಹುಳಿಯಂತೆ ಎಂದು ಪೂರ್ವೋಕ್ತವಾದ ಮೂರು ಪದಾರ್ಥಗಳನ್ನು ಕೆಡಿಸುವ ಮೂರು ಪದಾರ್ಥಗಳನ್ನು ಅನುಕ್ರಮವಾಗಿ ಇಲ್ಲಿ ಹೇಳಿದುದರಿಂದ 'ಯಥಾಸಂಖ್ಯೆ' ಎಂಬ ಅಲಂಕಾರ. ಅದನ್ನೆ ಇಲ್ಲಿ ಉತ್ಪ್ರೇಕ್ಷಿಸಲಾಗಿದೆ. ರೂಪಕಾಲಂಕಾರಯುಕ್ತ ಉತ್ಪ್ರೇಕ್ಷಾಲಂಕಾರವಿಲ್ಲದೆ ; ಎಳಮಗು ಅನಿರುದ್ಧನಿಗೆ ಹಲ್ಲು ಮೂಡಿದುದರ ನಿರೂಪಣೆ :

ಇಳೆಯೊಳು ರತಿ ಕಾಮದೇವರ ಪರಿತೋಷ
ಬೆಳೆಯಂಕುರಗಳೆಂಬಂತೆ
ಎಳೆಯನ ಪುಟ್ಟ ಬಾಯೊಳು ಮೆಲ್ಲಮೆಲ್ಲನೆ
ಮೊಳೆವಲ್ಗಳೊಡೆದು ಮೂಡಿದವು ॥ (೧೭–೭೦)

ಮುಂಜಾನೆಯ ಕೋಳಿ ಕೂಗಿನ ಕವಿಭಾವ ರಸಿಕತೆ ಇಲ್ಲಿ ಉತ್ಪ್ರೇಕ್ಷಾಲಂಕಾರಕ್ಕೆ ಎಡೆಮಾಡಿದೆ :

ಗುತ್ತಿಗೆವಿಡಿದ ವೇಶ್ಯಾಕಾಂತ ವ್ಯಭಿಚಾರ
ಕರ್ತರ ಕರ್ಣಯುಗ್ಮವನು
ಕಿತ್ತ ಕಠಾರಿಯೊಳ್ ತಿವಿದಂತೆ ಸುಸ್ವರ
ವೆತ್ತಿ ಕೂಗಿದವು ಕೋಳಿಗಳು ॥ (೧೮–೧೫)

**ದೃಷ್ಟಾಂತಾಲಂಕಾರ :** (ವರ್ಣನೆಯಲ್ಲಿ ಬಿಂಬಪ್ರತಿಬಿಂಬತ್ವ ಕಂಡುಬರುವುದು.)

ಅರ್ಕನೊಳಾಟವೆ ತಮಕೆ ತಾರ್ಕ್ಷ್ಯನ ಕೂಡೆ
ಕಾರ್ಕೋಟಕ ಮೇಳವಿಪುದೆ
ತರ್ಕಕೆ ರಾಮಾನುಜರೊಳು ವಾದಿ ಸಂ
ಪರ್ಕ ನಿಲ್ವುದೆ ನಿಲ್ಲಲರಿದು ॥(ಮೋ. ೧-೩೭)

ಇಲ್ಲಿಯ ಕೊನೆಯ ವಾಕ್ಯಕ್ಕೆ ಮೊದಲ ಎರಡು ಪ್ರಶ್ನಾರ್ಥಕ ವಾಕ್ಯಗಳು ಪ್ರತಿಬಿಂಬದಂತಿವೆ. ಇದೇ ಕಾವ್ಯದ ೬-೮ ಮತ್ತು ೩೩-೩೪ ಪದ್ಯಗಳು ಇನ್ನೆರಡು ಉದಾಹರಣೆಗಳಾಗಿವೆ. ನಳಚರಿತ್ರೆಯಲ್ಲಿ ೩-೪೦, ೪-೮, ೫-೧೦, ೨-೧೯, ೬-೧೫ ಈ ಪದ್ಯಗಳಲ್ಲಿಯೂ ದೃಷ್ಟಾಂತಾಲಂಕಾರವಿದೆ. ರಾಮಧಾನ್ಯಚರಿತ್ರೆಯಿಂದ ಉದಾಹರಣವಿದು :

ಸುರನದಿಗೆ ತಾ ಸರಿಯೆ ಕಾಡೊಳು
ಹರಿವ ಹಳ್ಳದ ನೀರು ಗರುಡನ
ಮರಿಗೆ ಹದ್ದಂತರವೆ ಹಂಸಕೆ ಬಕನು ಹೋಲುವುದೆ
ಸರಸ ಮರಿಕೋಗಿಲೆಗೆ ವಾಯಸ
ವಣಕಿಸುವ ತೆರನಾಯ್ತು ಸಾಕಿ
ನ್ನರೆದಲೆಗ ನೀನಾವ ಮಾನ್ಯನು ಕಡೆಗೆ ತೊಲಗೆಂದ ॥ (ರಾ. ೪೩)

**ರೂಪಕಾಲಂಕಾರ :** (ಉಪಮಾನೋಪಮೇಯಗಳನ್ನು ಒಂದಾಗಿ ರೂಪಿಸುವುದು) ಕಾಮ್ಯಕವನದಲ್ಲಿ ದುಃಖಾರ್ತನಾಗಿದ್ದ ಧರ್ಮರಾಯನಲ್ಲಿಗೆ ಮುನಿನಿವಹದೊಂದಿಗೆ ರೋಮಶ ಮುನಿ ಬಂದು ಸಂತೈಸುವುದು ಸಂದರ್ಭ, ಕಾಡನ್ನೆ ಇಲ್ಲಿ ಧರ್ಮರಾಯನ ರಾಜ್ಯವೈಭವವನ್ನಾಗಿ ರೂಪಿಸಿದೆ :

ಪರಮಋಷಿಗಳ ನೆರವಿಯೇ ಸಭೆ
ಹರಿಯ ಕಾರುಣ್ಯಾಂಬುಧಿಯೆ ಸಿರಿ
ನರ ವೃಕೋದರ ಮಾದ್ರಿತನಯರು ನಿನಗೆ ಬಾಹುಬಲ
ತರುಣಿಯೇ ಭೋಗೈಕ ಸಂಪ
ತ್ತುರುತರದ ವನರಾಜ್ಯ ನಿನಗಿಂ
ತಿರಲು ಸರಿಯಾರರಸ ಚಿಂತಿಸಲೇಕೆ ನೀನೆಂದ (ನ. ೧-೧೬)

ಮನುಜದೇಹವನ್ನೆ ಒಂದು ಮನೆಯಾಗಿ ರೂಪಿಸಿರುವುದನ್ನು ಹರಿಭಕ್ತಿಸಾರದ ಎರಡು (೮೫-೮೬) ಪದ್ಯಗಳಲ್ಲಿ ಕಾಣಬಹುದು, ಮೊದಲನೆಯದು ಇದು :

ಹೊಡಿದೆಲು ಮರಮುಟ್ಟು ಮಾಂಸದ
ಗೋಡೆ ಚರ್ಮದ ಹೊದಿಕೆ ನರಗಳ
ಗೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮನಿರುತಿರಲು
ಬೀಡು ತೊಲಗಿದ ಬಳಿಕಲಾ ಸುಡು
ಗಾಡಿನಲಿ ಬೆಂದುರಿವ ಕೊಂಪೆಯ
ನೋಡಿ ನಂಬಿರಬಹುದೆ ರಕ್ಷಿಸು ನಮ್ಮನನವರತ ॥ (ಹ. ೮೫)

ರೂಪಕಾಲಂಕಾರವಿರುವ ಕೀರ್ತನೆಗಳಲ್ಲಿ ಇವನ್ನು ಉಲ್ಲೇಖಿಸಬಹುದು:

ನಾರಾಯಣನೆಂಬ ನಾಮದ ಬೀಜವನು ನಾಲಗೆಯ
ಕೂರಿಗೆಯ ಮಾಡಿ ಬಿತ್ತಿರಯ್ಯಾ (ಜ. ೭೬)
ಅಡಿಗೆಯನ್ನು ಮಾಡಬೇಕಣ್ಣ ನಾನೀಗ ಜ್ಞಾನ
ದಡಿಗೆಯನ್ನು ಮಾಡಬೇಕಣ್ಣ (ಜ. ೨೨)
ನಾವು ಕುರುಬರು ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿಯ ಹಿಂಡುಗಳ (ಜ. ೩೦)

**ಸ್ವಭಾವೋಕ್ತ್ಯಲಂಕಾರ :** (ಸ್ವಭಾವವನ್ನು ಚಿತ್ರಿಸುವುದು)

ಕಾರ್ಕೋಟಕ ದಂಶದಿಂದ ನಳನಿಗಾದ ವಿಕೃತರೂಪವನ್ನು ಕನಕದಾಸರು ವರ್ಣಿಸಿದುದು ಹೀಗಿದೆ :

ದೊಡ್ಡ ಹೊಟ್ಟೆಯ ಗೂನು ಬೆನ್ನಿನ
ಅಡ್ಡ ಮೋರೆಯ ಗಂಟುಮೂಗಿನ
ದೊಡ್ಡ ಕೈಕಾಲುಗಳವುದುರಿದ ರೋಮ ಮೀಸೆಗಳ
ಜಡ್ಡು ದೇಹದ ಗುಜ್ಜುಗೊರಲಿನ
ಗಿಡ್ಡ ರೂಪಿನ ಹರಕು ಗುಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥ (ನ ೬–೧೪)

ಶಂಬರಾಸುರನ ಮಹಾ ಕ್ರೋಧದ ಚಿತ್ರಣದಲ್ಲಿ ಸ್ವಭಾವೋಕ್ತಿ ಅಲಂಕಾರವಿದೆ –

ಕುಡಿಮೀಸೆ ಕುಣಿದವು ಮೂಗಿನೊಳ್ ಪೊಗೆ ಸುತ್ತಿ
ಕಿಡಿಗಳನಕ್ಷಿ ಮುಕ್ಕುಳಿಸೆ
ಜಡಿದನು ಕೆಯ್ಯ ಖಡ್ಗವ ಜಳಪಿಸಿ ದೈತ್ಯ
ನುಡಿದ ಕಠೋರ ವಾಕ್ಯಗಳ (ಮೋ. ೧೨–೧೦)

ಹೀಗೆಯೇ ೧೯–೧೩, ೧೪, ೧೫, ೪೬ ; ೩೩–೨೨ ಪದ್ಯಗಳು

ಸ್ವಭಾವೋಕ್ತಿಗೆ ಉದಾಹರಣೆಗಳಾಗಿವೆ. 'ಡೊಂಕು ಬಾಲದ ನಾಯಕರೇ ನೀವೇನೂಟವ ಮಾಡಿದಿರಿ' (ಜ. ೩೨) ಎಂಬ ಪಲ್ಲವಿಯ ಕೀರ್ತನೆ ಸ್ವಭಾವೋಕ್ತಿಯೊಂದಿಗೆ ವ್ಯಾಜಸ್ತುತಿ ಎಂಬ ಅಲಂಕಾರಕ್ಕೂ ಉದಾಹರಣೆಯಾಗಿದೆ.

**ಅತಿಶಯೋಕ್ತ್ಯಲಂಕಾರ :** (ವಾಸ್ತವಿಕತೆಯನ್ನು ಮೀರಿ ವರ್ಣಿಸುವುದು)

ಮೋಹ ತರಂಗಿಣಿಯಲ್ಲಿ ದ್ವಾರಕೆಯ ವರ್ಣನೆ, ಅಲ್ಲಿಯ ಹಡಗುವ್ಯಾಪಾರಿಗಳು ವ್ಯಾಪಾರದಲ್ಲಿ ಬಂದ ಹಣವನ್ನು ಭಾರದ ಸಂಖ್ಯೆಯಿಂದ (ಮಣ ಖಂಡಿಗಳ ಲೆಕ್ಕದಲ್ಲಿ) ತೂಕಮಾಡಿ ಲೆಕ್ಕಹಾಕುತ್ತಿದ್ದರು ! ಅವರು ಕುಬೇರನಿಗೆ ಸಾಲಕೊಡುವಂತಿದ್ದರು ! (೩-೨೧) ಶಂಬರಾಸುರನನ್ನು ಮನ್ಮಥನು ವಧಿಸಿದಾಗ, ಅವನ ದೇಹವು ಕುಂಭಕರ್ಣನ ದೇಹದಂತೆ ಕೆಡೆದಿದ್ದಿತು! ಆ ದೇಹದಿಂದ ಸುರಿದ ರಕ್ತ ಅವನ ಹೆಂಡಿರು ಸುರಿಸಿದ ಕಣ್ಣೀರಿನಿಂದ ನಿವಾರಣೆಯಾಯಿತು (೧೩-೬)! ವಿರಹತಾಪದಿಂದ ಇದ್ದ ರತಿಯನ್ನು ಸ್ತ್ರೀಯರು ಚಂದ್ರಕಾಂತ ಸೋಪಾನದ ತಣ್ಗೊಳನ ಸ್ಫಟಿಕಶಿಲೆಯಲ್ಲಿ ಎಳಬಾಳೆಸುಳಿಯನ್ನು ಹಾಸಿ ಕುಳ್ಳಿರಿಸಿ, ಮಾಂದಳಿರಂತಹ ಆಕೆಯ ಪಾದಗಳನ್ನು ತಂಪಾಗಲೆಂದು ಕೊಳದ ನೀರಿನಲ್ಲಿ ಅದ್ದಿದರು. ಆಗ, ಎರಡು ಚಿನ್ನದ ಸರಳುಗಳ ತುದಿಗಳನ್ನು ಕೆಂಡದಲ್ಲಿ ಕಾಸಿ ನೀರಿನಲ್ಲಿಟ್ಟ ಹಾಗೆ, ಆ ಕೊಳದ ನೀರು ಗುಳು ಗುಳು ಎಂದು ಕುದಿಯಿತು! (೯-೪೧, ೪೨, ೪೩). ಇಂತಹ ವಿವರಗಳು ಅವಾಸ್ತವದಂತೆ ಇದ್ದರೂ ಅತಿಶಯೋಕ್ತ್ಯಲಂಕಾರವೆನಿಸಿ ಸಹೃದಯರಂಜಕವಾಗುವುದು. ಅನಿರುದ್ಧನು ಹುಟ್ಟಿದ ಸಂದರ್ಭದಲ್ಲಿ ನೀಡಿದ ಷೋಡಶದಾನ ದಕ್ಷಿಣೆಗಳಿಗೆ ಮಿತಿಯಿಲ್ಲ. ಅದನ್ನು ಪರಿಪೂರ್ಣವಾಗಿ ನೋಡಲು ಸಹಸ್ರಾಕ್ಷನಾದ ಇಂದ್ರನಿಗೆ ಶಕ್ಯವಾಗದು! ವರ್ಣಿಸಲು ಎರಡು ಸಾವಿರ ನಾಲಗೆಯ ಶೇಷನಿಗೂ ಅಸಾಧ್ಯ ! ಶ್ರೀಕೃಷ್ಣನ ತ್ಯಾಗದ ಮುಂದೆ ಕಾಮಧೇನು ಚಿಂತಾಮಣಿ ಕಲ್ಪವೃಕ್ಷಗಳು ಬರಡೆನಿಸಿದುವು! (೧೭-೩೫, ೩೬)' ಬಿಸಿಲಿನ ವರ್ಣನೆಯೊಂದರಲ್ಲಿ ಅತಿಶಯೋಕ್ತಿಯ ಮಾತುಗಳು ಹೀಗಿವೆ-

> ಗಾಳಿ ಘರ್ಮಾಂಬುವೊತ್ತುದು ಭೂಮಿ ನೆಕ್ಕನೆ
> ಸೀಳಿತು ಕೂರ್ಮನ ಬೆನ್ನು
> ಹೋಳಿಗೆವಡೆದುದು ಬಲುಬಿಸಿಲಿನ ಚ
> ಡಾಳಿಗೆ ಜಗವ ಭಂಗಿಸಿತು ॥(ಮೋ. ೧೯-೪೬)

ಅಂದರೆ, ಬಿಸಿಲಿನ ಬೇಗೆಯಿಂದ ಗಾಳಿ ಬೆವರಿತು, ! ನೆಲ ಸೀಳಿತು!

ಭೂಮಿಯನ್ನು ಹೊತ್ತ ಕೂರ್ಮನ ಬೆನ್ನು ಹೋಳಾಯಿತು ! ಕನಕದಾಸರ ಅತಿಶಯೋಕ್ತಿಯ ನುಡಿ ಬೆಡಗುಗಳಿವು.

**ಅರ್ಥಾಂತರನ್ಯಾಸಾಲಂಕಾರ :** (ವಿಶೇಷವನ್ನು ಸಾಮಾನ್ಯದಿಂದ ಅಥವಾ ಸಾಮಾನ್ಯವನ್ನು ವಿಶೇಷದಿಂದ ಸಮರ್ಥಿಸುವುದು) ಋತುಪರ್ಣನಲ್ಲಿಗೆ ಬಂದ ನಳನು ಅಡುಗೆಯಲ್ಲಿ ಪ್ರವೀಣನು, ಅಶ್ವಕುಲ ಹೃದಯವನ್ನು ಬಲ್ಲೆನು, ನನ್ನ ಪೌರುಷವನ್ನು ನೋಡು ಎನ್ನುತ್ತಾನೆ. ಈ ವಿಶೇಷವನ್ನು ಸಮರ್ಥಿಸಲು 'ಮುಂಗೈ ಕಂಕಣಕೆ ಕನ್ನಡಿಯೇಕೆ?' ಎನ್ನುತ್ತಾನೆ (೭-೪). ಇನ್ನೊಂದೆಡೆ ಕಾಡಿನಲ್ಲಿ ದಮಯಂತಿ ವೈಶ್ಯರ ರಕ್ಷಣೆಯಲ್ಲಿದ್ದಾಗ, ಕಾಡಾನೆಗಳು ಬಂದು ವೈಶ್ಯರನ್ನು ಸೀಳಿಹಾಕತೊಡಗಿದವು. ಆಗ, ಆಕೆ ಕಣ್ಮುಚ್ಚಿ ಕಾಪಾಡೆಂದು ದೇವರನ್ನು ಧ್ಯಾನಿಸಿದಳು. ಕಾಡಾನೆಗಳು ದೂರ ಸರಿದುಹೋದುವು. ಈ ಸಂದರ್ಭದಲ್ಲಿ 'ದೈವವನ್ನು ನೆನೆವ ಭಕ್ತರಿಗೆ ಭಯವುಂಟೆ?' (೫.೫೦) ಎಂಬ ಮಾತು ಬರುತ್ತದೆ. ಇದು ವಿಶೇಷವನ್ನು ಸಾಮಾನ್ಯದಿಂದ ಸಮರ್ಥಿಸುವ ಅರ್ಥಾಂತರ-ನ್ಯಾಸಾಲಂಕಾರವೆನಿಸುತ್ತದೆ.

**ಪ್ರತೀಪಾಲಂಕಾರ :** (ಉಪಮಾನವನ್ನು ಉಪಮೇಯುವಾಗಿ ಪರಿಗಣಿಸುವುದು.)

ಸಿರಿ ಗಿರಿಜಾತೆ ಶಾರದೆ ಶಚಿ ಮುಖ್ಯರು
ಸರಿಯಲ್ಲವಿವಳಚ್ಚು ಬೇರೆ
ಹರಿ ಹರ ವಿಧಿ ಪುರಂದರರು ಜೀವಾವಧಿ
ಸ್ಮರಿಸಲ್ಕೆ ಮೊಗವ ತೋರುವಳೆ? (ಮೋ. ೧೦-೫)

ಇಲ್ಲಿ ರತಿಯ ಸೌಂದರ್ಯವನ್ನು ವರ್ಣಿಸುವ ನೆವದಲ್ಲಿ ಅವಳ ಸೌಂದರ್ಯಕ್ಕೆ ಉಪಮಾನಗಳಾದವರ ಸೌಂದರ್ಯವನ್ನು ಉಪಮೇಯುವಾಗಿ ಗಣಿಸಿ ವರ್ಣಿಸಲಾಗಿದೆ.

**ವಿಭಾವನಾಲಂಕಾರ :** (ಕಾರಣವಿಲ್ಲದೆ ಅಥವಾ ಅಲ್ಲದ ಕಾರಣದಿಂದ ಕಾರ್ಯವಾಯ್ತೆನ್ನುವುದು)

ಕರುಣದೋರದೆ ನೃಪತಿ ಸತಿಯಳ
ತೊರೆದು ಬಿಸುಟನು ಮನದೊಳಗೆ ಹುಲಿ
ಕರಡಿ ಮೃಗದುಪಟಳವ ತಾನಿನ್ನೆಂತು ಸೈರಿಪಳೋ
ಮೊರೆಯ ಲಾಲಿಸಿ ನೋಳ್ಪೆನೆಂದುರು
ತರದ ಪ್ರೇಮದಿ ಬಂದು ಸತಿಗೆ
ಚ್ಚರಿಸುವಂದದಿ ತರಣಿ ತಲೆದೋರಿದನು ಪೂರ್ವದಲಿ ॥ (ನ. ೫-೨೦)

ಇಲ್ಲಿ ಸೂರ್ಯನುದಯಿಸಲು ಕಾರಣವಲ್ಲದುದನ್ನು ಕಾರಣವಾಗಿ ಹೇಳಿದೆ. ಇಂತಹದೇ ಮೋಹನ ತರಂಗಿಣಿಯಲ್ಲಿ ರೂಪಕಾಲಂಕಾರ ಸಹಿತವಾಗಿದೆ :

ಅಂಬುಧಿ ಮಧ್ಯದ ಧರೆಯೊಳು ಚತುರಾಸ್ಯ
ನೆಂಬ ವಿದ್ಯಾಧಿಕನೊಲಿದು
ಕಂಬಸೂತ್ರವ ಪ್ರತಿಷ್ಠೆಯ ಮಾಡಿದಂದದಿ
ಪೊಂಬೆಟ್ಟ ಕಣ್ಗೆ ರಾಜಿಸಿತು । (ಮೋ. ೨–೧೦)

ಇಲ್ಲಿ ಚತುರಾಸ್ಯನ್ನು ಓರ್ವ ವಿದ್ಯಾಧಿಕನನ್ನಾಗಿ ರೂಪಿಸಿದೆ. ಕಾರಣವಲ್ಲದುದನ್ನು ಕಾರಣವಾಗಿ ಹೇಳಿದುದರಿಂದ ವಿಭಾವನಾಲಂಕಾರವಾಗುತ್ತದೆ. ಸಂಭಾವಿಸಿ (ಊಹಿಸಿ) ಹೇಳಿದುದರಿಂದ ಇದನ್ನೇ ಉತ್ಪ್ರೇಕ್ಷಾಲಂಕಾರವಾಗಿಯೂ ಪರಿಗಣಿಸಬಹುದು. ಮೋ. ೧೨–೧೬ರಲ್ಲಿಯೂ ವಿಭಾವನಾಲಂಕಾರವಿದೆ.

ಸ್ವರ್ಣಾಂಬರನಂಘ್ರಿ ನಿರ್ಮಾಲ್ಯ ತುಲಸಿಯ
ಕರ್ಣದೊಳಿಟ್ಟುಕೊಂಬಂತೆ
ನಿನ್ನ ಮೆಲ್ನುಡಿಗಳ್ಗೆ ಕಿವಿಗುಡದವರಾರು
ಮನ್ನಾಥ ಪೇಳು ಮೇಲ್ಗತೆಯ ॥ (ಮೋ. ೬–೧)
ಸಿಂಗರದೋಟದ ಸಿರಿಗಂಪ ಸುಜನರ್ಗೆ
ತಂಗಾಳಿ ತಂದೀವ ತೆರದೆ
ಮಂಗಳ ಹರಿಕಥಾಮೃತವ ನಾ ನಿನ್ನ ಕ
ರ್ಣಂಗಳಿಗೆರೆವೆ ಲೇಸೆನಿಸಿ (ಮೋ. ೧೦–೨)

**ವಿಷಮಾಲಂಕಾರ :** (ಒಂದಕ್ಕೊಂದು ಹೊಂದಿಕೊಳ್ಳದ ಘಟನೆಯನ್ನು ವರ್ಣಿಸುವುದು)

ರಜ್ಜುವದೆತ್ತ ದಳ್ಳುರಿಗರುತ್ತಮನೆತ್ತ
ವಜ್ರವೆತ್ತಾಲಿಕಲ್ಲೆತ್ತ
ಮಜ್ಜೀವಿತೇಶ್ವರನೆತ್ತ ನೀನೆತ್ತ ಕೇಳ್
ದುರ್ಜೀವಿ ತೆರಳೆಂದಳೊಲಿದು ॥ (ಮೋ. ೭–೨೪)

ಶಿವನ ತಪವನ್ನು ಕೆಡಿಸುವುದಕ್ಕೆಂದೇ ನಡೆತಂದ ಮನ್ಮಥನನ್ನು ಕುರಿತು ಪಾರ್ವತಿಯು ಮೇಲಿನ ಮಾತನ್ನು ಹೇಳಿದ್ದಾಳೆ. 'ಹಗ್ಗವೆಲ್ಲಿ, ದಟ್ಟವಾದ ಬೆಂಕಿಯುಳ್ಳವರಲ್ಲಿ ಶ್ರೇಷ್ಠನಾದವನೆಲ್ಲಿ? ವಜ್ರವೆಲ್ಲಿ, ಆಲಿಕಲ್ಲೆಲ್ಲಿ? ನನ್ನೊಡೆಯನಾದ ಹರನೆಲ್ಲಿ, ನೀನೆಲ್ಲಿ?' ಎಂಬಲ್ಲಿ ಅನನುರೂಪತೆಯ ವರ್ಣನೆಯಿದೆ. ಹರನ

ಕಣ್ಣುರಿಯಿಂದ ಕಂದರ್ಪನ ದೇಹ ಉರಿದುಹೋದಾಗ ವ್ಯಕ್ತವಾದ ಕವಿವಾಣಿಯಲ್ಲಿಯೂ (೭–೪೧, ೪೨) ಇದೇ ವಿಷಮಾಲಂಕಾರವನ್ನು ಕಾಣಬಹುದು.

**ಪ್ರಹರ್ಷಣಾಲಂಕಾರ :** (ವಿಶೇಷ ಪ್ರಯತ್ನವಿಲ್ಲದೆ ಅಪೇಕ್ಷಿತ ಕಾರ್ಯ ಕೈಗೂಡುವುದು) ಹರಿಭಕ್ತಿಸಾರದಲ್ಲಿ ಇದಕ್ಕೆ ಉದಾಹರಣೆ ದೊರೆಯುತ್ತದೆ (ಪದ್ಯ ೧೦೬, ೧೦೭)

ನೂರು ಕನ್ಯಾದಾನವನು ಭಾ
ಗೀರಥೀಸ್ನಾನವನು ಮಿಗೆ ಕೈ
ಯಾರೆ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು
ಊರುಗಳ ನೂರಗ್ರಹಾರವ
ಧಾರೆಯೆರೆದಿತ್ತಂತೆ ಫಲ ಕೈ
ಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದರಿಗೆ ॥ (ಹ. ೧೦೬)

**ಕಾವ್ಯಲಿಂಗಾಲಂಕಾರ :** (ಸಮರ್ಥನೀಯವಾದುದನ್ನು ಸಮರ್ಥಿಸುವುದು) ಎಂಜಲಿಲ್ಲ ಎಂಬುದನ್ನು ಕೆಳಗಿನ ಪದ್ಯದಲ್ಲಿ ಸಮರ್ಥಿಸಿದೆ– :

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನಿಸಿರದೆ
ಎಂಜಲೆಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ (ಹ. ೧೦೧)

ಕೀರ್ತನೆಗಳಲ್ಲಿ 'ತಲ್ಲಣಿಸದಿರು ಕಂಡ್ಯ ತಾಳು ಮನವೆ" (ಜ. ೧೪), 'ಕುಲಕುಲ ಕುಲವೆನ್ನುತಿಹರು' (೨೫)–ಎಂಬಿವು ಕಾವ್ಯಲಿಂಗಾಲಂಕಾರದಿಂದ ಕೂಡಿವೆ.

**ವ್ಯಾಜಸ್ತುತ್ಯಲಂಕಾರ :** (ನಿಂದೆಯ ಮೂಲಕ ಸ್ತುತಿಯೂ ಸ್ತುತಿಯ ಮೂಲಕ ನಿಂದೆಯೂ ಅಭಿವ್ಯಕ್ತವಾಗುವುದು) ಹಿಂದೆ ಪ್ರಸ್ತಾಪಿಸಿರುವ, 'ಡೊಂಕು ಬಾಲದ ನಾಯಕರೇ' ಎಂಬ ಕೀರ್ತನೆಯಲ್ಲಿ ಸ್ತುತಿಯ ಮೂಲಕ ನಿಂದೆ ವ್ಯಕ್ತವಾಗಿದೆ. ನಿಂದೆಯ ಮೂಲಕ ಸ್ತುತಿಗೆ ಉದಾಹರಣೆ– :

ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರು ಈ ಧರೆಯೊಳಗೆ ಒಬ್ಬರನು ಕಾಣೆ ॥ ಪಲ್ಲವಿ ॥

ಕಲಹಬಾರದ ಮುನ್ನ ಕರ್ಣನೊಬ್ಬನ ಕೊಂದೆ
ಸುಲಭದಲಿ ಕೌರವನ ಮನೆಯ ಮುರಿದೆ
ನೆಲನ ಬೇಡಲಿ ಪೋಗಿ ಬಲಿಯ ಭೂಮಿಗೆ ತುಳಿದೆ
ಮೊಲೆಯನುಣ್ಣಲು ಪೋಗಿ ಪೂತನಿಯ ಕೊಂದೆ (ಜ. ೪೬)

ಕರ್ಣನು ವ್ಯಕ್ತಿಚಾರಿತ್ರದಲ್ಲಿ ಉತ್ತಮನಾಗಿದ್ದರೂ ದುರುಳಕೌರವನ ಪಕ್ಷ ಹಿಡಿದಿದ್ದರಿಂದ, ಅವನು ಯುದ್ಧಕ್ಕೆ ಬರುವ ಮೊದಲೇ ಕೃಷ್ಣನು ಅವನ ಜನ್ಮ ವೃತ್ತಾಂತವನ್ನು ತಿಳಿಸಿ ಹಾಗೂ ಕುಂತಿಯ ಮೂಲಕ ಅವನಿಂದ ಪ್ರತಿಜ್ಞೆ ಪಡೆಯಿಸಿ ಅವನ ಮರಣಕ್ಕೆ ಪರೋಕ್ಷಕಾರಣನಾಗಿದ್ದಾನೆ. ಸುಜನರಾದ ಪಾಂಡವರನ್ನು ರಕ್ಷಿಸುವುದಕ್ಕಾಗಿ ಹೀಗೆ ಮಾಡಿದ್ದೆಂಬ ಗೂಢಾರ್ಥದ ಸ್ತುತಿ ಇಲ್ಲಿದೆ. ಕೌರವನ ಬಳಗವನ್ನು ಪಾಂಡವರ ಮೂಲಕ ಸದೆಬಡಿದುದು ಧರ್ಮಸ್ಥಾಪನೆಗಾಗಿ. ಆದುದರಿಂದ ಅದು ಸ್ತುತ್ಯ. ಬಲಿಚಕ್ರವರ್ತಿ ದಾನಶೂರನಾಗಿದ್ದರೂ ಇಂದ್ರನನ್ನು ಪದವಿಯಿಂದ ಉಚ್ಚಾಟಿಸುವ ದುರುದ್ದೇಶದವನಾಗಿದ್ದುದರಿಂದ ಹರಿಯು ವಾಮನನಾಗಿ ಬಂದು ಮೂರಡಿ ನೆಲವನ್ನು ಬೇಡಿ, ಅವನನ್ನು ಪಾತಾಳಕ್ಕೆ ಇಳಿಸಿದನು ; ಇದೂ ಸ್ತುತ್ಯಕಾರ್ಯ. ಪೂತನಿ ಓರ್ವ ಶಿಶುಘಾತಕಿ ರಾಕ್ಷಸಿ ; ಮೊಲೆಯುಣ್ಣುತ್ತ ಆಕೆಯ ಅಸುವನ್ನು ಕೃಷ್ಣನು ಹೀರಿದುದು ಲೋಕಹಿತದ ಸ್ತುತ್ಯಕಾರ್ಯವೇ ಸರಿ. ಹೀಗೆ ಈ ಕೀರ್ತನೆ ವ್ಯಾಜಸ್ತುತ್ಯಲಂಕಾರದಿಂದ ಕೂಡಿದೆ.

**ಅಪ್ರಸ್ತುತ ಪ್ರಶಂಸೆ :** (ಪ್ರಸ್ತುತವಲ್ಲದ ಸಂಗತಿ ಪ್ರಸ್ತುತಕ್ಕೆ ಆಶ್ರಯವಾಗಿರುವುದು)

ಶತ್ರುಗಳನ್ನು ಮೊಳಕೆಯಲ್ಲಿಯೇ ಮುರುಟಿಸಬೇಕು–ಎಂಬ ಪ್ರಸ್ತುತದ ಸಮರ್ಥನೆಗಾಗಿ ಈ ಉದಾಹರಣೆ :

ಕಳಿಲೆಯ ನಖದಲಿ ಚಿವುಟಲಹುದು ಮುಂದೆ
ಲಳಿಗೆ ಕೂರುಗುರಿಗಂಜುವುದೆ
ಉಳಿದ ಮಾತೇನು ಆಲಸ್ಯದಿಂದಮೃತವು
ಗಳಿಲನೆ ವಿಷವಾಗದಿಹುದೆ ॥ (ಮೋ. ೧೧–೧೩)

**ಉಲ್ಲೇಖಾಲಂಕಾರ :** (ಒಂದೇ ವಸ್ತು ಅಥವಾ ವ್ಯಕ್ತಿ ಒಬ್ಬೊಬ್ಬರಿಗೆ ಒಂದೊಂದು ಬಗೆಯಾಗಿ ತೋರುವುದು). ಉದಾ :

ಎಲ್ಲರಲಿ ನೀನಾಗಿ ಸುಮನಸ
ರಲ್ಲಿ ಅತಿಹಿತನಾಗಿ ಯಾದವ

ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ
ಕೊಲ್ಲಿಸಿದೆ ಭೀಮಾರ್ಜುನರ ಕೈ
ಯಲ್ಲಿ ಕೌರವಕುಲವನೆಲ್ಲವ
ಬಲ್ಲಿದನು ನೀನಹುದು ರಕ್ಷಿಸು ನಮ್ಮನನವರತ (ಹ. ೩೩)

**ಸ್ಮೃತ್ಯಲಂಕಾರ** : (ನೆನಪು ಮಾಡುವಂತಹುದು)

ಕನಕದಾಸರ ಕೀರ್ತನೆ 'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ' (ಜ. ೨೩), ಮೋಹನತರಂಗಿಣಿಯಲ್ಲಿ ರತಿಪ್ರಲಾಪದ ಹಲವು ಪದ್ಯಗಳು (ಮೋ. ೮–೭' ೮, ೯, ೧೬) ಸ್ಮೃತ್ಯಲಂಕಾರಕ್ಕೆ ಉದಾಹರಣೆಗಳಾಗುತ್ತವೆ.

**ಭ್ರಾಂತಿಮದಲಂಕಾರ** : (ಭ್ರಮಿಸುವ ಅಂದರೆ, ತಪ್ಪಾಗಿ ತಿಳಿಯುವ ವಿಚಾರವನ್ನುಳ್ಳ ಅಭಿವ್ಯಕ್ತಿ)

ಕೃಷ್ಣನ ಜಲಕ್ರೀಡೆಯ ವರ್ಣನೆಯ ಪದ್ಯ :

ಕಮಲಾಕ್ಷ ನೀರೊಳು ಬಿದ್ದು ನಿಟ್ಟಿಸಲಾಗ
ತಮಚೋರನಲ್ಲಿಂದ ಹೊರಡೆ
ರಮಣಿಯರುಗಳ ಬಲ್ಮೊಲೆದೊಟ್ಟ ಕರ್ಬಣ್ಣ
ತಮನೆಂದು ಪಿಡಿದೌಕಿದನು ॥ (ಮೋ. ೧೪–೫೫)

ನಳನನ್ನು ಪ್ರಥಮತಃ ಕಂಡ ದಮಯಂತಿ ಆತನನ್ನು ಮನ್ಮಥನೋ !, ನಳನೋ !, ನಳಕೂಬರನೋ ಜಯಂತನೋ !, ಎಂದು ವಿಸ್ಮಯಗೊಂಡಳು (ನ. ೩–೩೪) ಎಂಬಲ್ಲಿಯೂ ಭ್ರಾಂತ್ಯಲಂಕಾರವಿದೆ.

**ಸಂದೇಹಾಲಂಕಾರ** : (ಸಂಶಯವನ್ನು ವ್ಯಕ್ತಪಡಿಸುವ ವರ್ಣನೆ.) ಭ್ರಾಂತಿಗೂ ಸಂದೇಹಕ್ಕೂ ಸೂಕ್ಷ್ಮವ್ಯತ್ಯಾಸವಿದೆ.

ಈತನಾರು ಪಿತಾಮಹನೊ ಪುರು
ಹೂತನೋ ಮನ್ಮಥನೊ ಲಕ್ಷ್ಮೀ
ನಾಥನೋ ಚಂದ್ರಮನೊ ಶಂಕರನೋ ಮಹಾದೇವ
ಈತನೇ ನಳನೃಪತಿ ಭೂವಿ
ಖ್ಯಾತನೆಲ್ಲಿಂದಿಲ್ಲಿ ಬಂದನು
ಪೂತು ಮಝುರೇ ಎನುತ ಕೊಂಡಾಡಿತು ನೃಪಸ್ತೋಮ ॥ (ನ. ೯–೨)

**ಪರಿಕರಾಲಂಕಾರ** : (ವಿಶೇಷಣಗಳು ಅಭಿಪ್ರಾಯಗರ್ಭಿತವಾಗಿರುವುದು)

ಶ್ರೀಯರಸ, ಗಾಂಗೇಯನುತ, ಕೌಂ
ತೇಯ ವಂದಿತ ಚರಣ, ಕಮಲದ

ಳಾಯತಾಂಬಕ ರೂಪ, ಚಿನ್ಮಯ, ದೇವಕೀತನಯ,
ರಾಯ ರಘುಕುಲವರರ್‍ಯ, ಭೂಸುರ
ಪ್ರೀಯ ಸುರಪುರನಿಲಯ ಚೆನ್ನಿಗ
ರಾಯ ಚತುರೋಪಾಯ ರಕ್ಷಿಸು ನಮ್ಮನನವರತ (ಹ.೧)

ಇಲ್ಲಿ ಸುರಪುರ ಚೆನ್ನಿಗರಾಯ ಎಂಬ ವಿಶೇಷ್ಯಕ್ಕಿರುವ ವಿಶೇಷಣಗಳು ಅಭಿಪ್ರಾಯಗರ್ಭಿತವಾಗಿವೆ, 'ಶ್ರೀಯರಸ' ಎಂದುದರಿಂದ ನಮಗೆ ಸಂಪತ್ತನ್ನು ಕೊಡುವವನಾಗಬೇಕೆಂಬ ಅಭಿಪ್ರಾಯ. 'ಗಾಂಗೇಯ (ಭೀಷ್ಮ)ನುತ'ನಾದ ನೀನು ಅವನಿಗೆ ಭಕ್ತಿಯ ದೃಢತೆಯನ್ನು ಕೊಟ್ಟ ಹಾಗೆ ನಮಗೂ ಕೊಡು. ಅರ್ಜುನನಿಂದ ನಮಸ್ಕೃತನಾದ ನೀನು ಅವನಿಗೆ ಜ್ಞಾನ ಕರ್ಮಗಳನ್ನು ಉಪದೇಶಿಸಿ ಜಯದ ಹಾದಿಯಲ್ಲಿ ನಡೆಸಿದಂತೆ ನಮ್ಮನ್ನೂ ನಡೆಸು. ತಾವರೆಯ ಎಸಳಂತೆ ವಿಶಾಲವಾದ ಕಣ್ಣುಳ್ಳವನಾದ ನೀನು ವಿಶಾಲ ಪ್ರೇಮದೃಷ್ಟಿಯನ್ನು ಬೀರಿ ಉದ್ಧರಿಸು, ಚಿನ್ಮಯ (ಜ್ಞಾನಮಯ)ನಾದ ನೀನು ಜ್ಞಾನಪ್ರದನಾಗು. ದೇವಕಿಗೆ ಮಗನಾಗಿ ಆಕೆಯ ಕಷ್ಟ ಪರಿಹರಿಸಿದವನು ನಮ್ಮ ಸಮಾಜದ ತಾಯಂದಿರ ಕಷ್ಟ ಪರಿಹರಿಸಲು ಪ್ರೇರಕನಾಗು. ರಘುಕುಲಶ್ರೇಷ್ಠನಾದ ರಾಯನಾಗಿದ್ದವನು ನೀನು ದುಷ್ಟರ ನಾಶವನ್ನೂ ಶಿಷ್ಟಸಂರಕ್ಷಣೆಯನ್ನೂ ಮಾಡಿದವನು ; ಇಂದಿಗೂ ಆಗಬೇಕಾದುದು ಇದೇ– ಈ ಅಭಿಪ್ರಾಯಗಳು ಇಲ್ಲಿವೆ. ಭೂಸುರಪ್ರಿಯ– ಭೂಮಿಯಲ್ಲಿದ್ದುಕೊಂಡು ದೇವರಂತೆ ಉದಾತ್ತವಾಗಿ ವರ್ತಿಸುವವರನ್ನು ಪ್ರೀತಿಸುವವನು ಎಂಬ ಅಭಿಪ್ರಾಯ ಬರುತ್ತದೆ. ಹೀಗೆ ಈ ಪದ್ಯವು ಪರಿಕರಾಲಂಕಾರಯುತವಾಗಿದೆ.

**ಲೋಕೋಕ್ತ್ಯಲಂಕಾರ :** (ಪ್ರಸಿದ್ಧವಾದ ಗಾದೆಯನ್ನೊಳಗೊಂಡ ಅರ್ಥಗರ್ಭಿತವಾದ ಮಾತು) ಮನ್ಮಥನು ಶಿವನಿಗೆ ಪುಷ್ಪಬಾಣ ಬಿಟ್ಟು ಆತನ ತಪವನ್ನು ಕೆಡಿಸಲು ಮಾಡಿದ ನಿರ್ಧಾರವನ್ನು ಪತ್ನಿಯಾದ ರತಿಗೆ ತಿಳಿಸಿದಾಗ, ಆಕೆ ಹೀಗೆನ್ನುವಳು :

ಗೊಲೆಗೊಳಿಸಿದ ಪುಷ್ಪಚಾಪ ಸರೋಜ ನೈ
ದಿಲೆಗೋಲ್ಗಳ ಕುಸುಕಿರಿದು
ಕಲ್ಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ ಹೋ
ಗೆಲೊ ಪಾಪಿ ಮನ್ಮಥ ಮನೆಗೆ ॥ (ಮೋ. ೭–೨೩)

'ತಲೆ ಗಟ್ಟಿಯಾಗಿದೆಯೆಂದು ಕಲ್ಲಿಗೆ ಜಪ್ಪವುದೇಕೆ ?' ಎಂಬ ಗಾದೆಮಾತು ಇಲ್ಲಿ ಬಂದಿದೆ.

ಕನಕದಾಸರ ಸಾಹಿತ್ಯದಲ್ಲಿ ಪ್ರಯತ್ನದಿಂದ, ಪಾಂಡಿತ್ಯ ಪ್ರದರ್ಶನೇಚ್ಛೆಯಿಂದ ತಂದಿಟ್ಟ ವಿರೋಧಾಭಾಸ, ಶ್ಲೇಷೆ, ಸಮಾಸೋಕ್ತಿಯಂತಹ ಪ್ರೌಢಿಮೆಯ ಅಲಂಕಾರಗಳು ಕಾಣಿಸದಿದ್ದರೂ ಪರಿಣತ ಹಾಗೂ ಪರಿಪಕ್ವ ಕವಿಭಾವನೆಯ ಸಹಜಾಭಿವ್ಯಕ್ತಿಯ ಅರ್ಥಾಲಂಕಾರಗಳು ಹಿತ ಮಿತವಾಗಿ ಮೂಡಿಬಂದಿವೆ ಎನ್ನಲು ಅಡ್ಡಿಯಿಲ್ಲ, ಈ ಅಲಂಕಾರಗಳು ಅಲ್ಲಲ್ಲಿಯ ಸನ್ನಿವೇಶಕ್ಕೆ ಅರ್ಥಪುಷ್ಟಿಯನ್ನು ನೀಡಿವೆ. ಓದುಗರಿಗೆ ಹೃದಯರಂಜಕವಾಗಿವೆ. ಕಾವ್ಯಾಭ್ಯಾಸ ಮಾಡುವವರಿಗೆ ವಿಶೇಷಾನುಭವಪ್ರದವಾಗಿವೆ.

# ಕನಕದಾಸರ ಕೃತಿಗಳಲ್ಲಿ ಛಂದಃಸ್ವರೂಪ ಮತ್ತು ಕನಕದಾಸರ ಮನೋಧರ್ಮ

**ಡಾ. ಎ.ಎಸ್. ವೇಣುಗೋಪಾಲ ರಾವ್**

೧

ಪದ್ಯ ಕಾವ್ಯದ ಅನಿವಾರ್ಯ ಅಂಶವಾದ ಛಂದಸ್ಸನ್ನು ಕುರಿತು ವಿದ್ವತ್ಪ್ರಪಂಚದಲ್ಲಿ ಈಗಾಗಲೇ ಸಾಕಷ್ಟು ಚರ್ಚೆಯಾಗಿದೆ. ಕಾವ್ಯದ ಬಂಧಕ್ಕೂ ಆದರಿಂದ ಉಂಟಾಗುವ ಆಹ್ಲಾದಕ್ಕೂ ಕಾರಣವಾದ ಈ ಪದ್ಯಲಾಸ್ಯವನ್ನು ಕುರಿತ ಚರ್ಚೆಯ ಮಥಿತಾರ್ಥವನ್ನು ಹೀಗೆ ಸಂಗ್ರಹಿಸಬಹುದು :

೧. ಛಂದಸ್ಸು–ಗದ್ಯವನ್ನು ಪದ್ಯದಿಂದ ಪ್ರತ್ಯೇಕಿಸುವ ವಿಶೇಷ ಅಂಶ.

೨. ದೇಹಕ್ಕೆ ಚರ್ಮದಂತೆ ಪದ್ಯದೊಡನೆಯೇ ಅದು ಹುಟ್ಟಿಬಂದು ಪದ್ಯಕ್ಕೆ ಆಚ್ಛಾದನೆಯಾಗಿಯೂ ಅದರ ಚೆಲುವಿಗೆ ಕಾರಣವಾಗಿಯೂ ರಂಜಿಸುತ್ತದೆ.

೩. ಕವಿತೆಯ ಅವತಾರವೆಂದರೆ ಛಂದಸ್ಸಿನ ಅವತಾರವೂ ಹೌದು. ವಾಲ್ಮೀಕಿ ರಾಮಾಯಣವೇ ಇದಕ್ಕೆ ಉತ್ತಮ ಉದಾಹರಣೆ. ಮುನಿವರನ ಶೋಕ ಭಾವದ ಉಕ್ಕು ಹರಿದು ಬಂದ ಗತಿಯೇ ಲೌಕಿಕ–ಅನುಷ್ಟುಪ್ ಛಂದಸ್ಸು. ಅದು ಪಾದಬದ್ಧವಾಗಿ ಅಕ್ಷರಸಮವಾಗಿ ಹಾಗೂ ತಂತ್ರೀಲಯ ಸಮನ್ವಿತವಾಗಿ ಇದ್ದು, ಕವಿಗೇ ಬೆರಗನ್ನು ತಂದಿತು. "ನೂತನಃ ಛಂದಸಾಮವತಾರಃ" ಎಂದು ಭವಭೂತಿ ಉದ್ಗರಿಸಿದುದು ಈ ಕಾವ್ಯರಹಸ್ಯಕ್ಕೆ ಬರೆದ ಸುಂದರ ವ್ಯಾಖ್ಯಾನ.

೪. ಮೇಲಿನ ಉದಾಹರಣೆಯಲ್ಲಿ ತೋರುವಂತೆ ಛಂದಸ್ಸು ಕೃತಕಗಣಿತದ ಲೆಕ್ಕಾಚಾರವಲ್ಲ. ಕವಿಗೆ ಅಯತ್ನದಿಂದ ಅತಿಸಹಜವಾಗಿ ಸಿದ್ಧಿಸಿದ ವಾಗ್ದೇವಿಯ ಕೃಪೆ.

೫. ಅತಿಸೂಕ್ಷ್ಮವಾದ ಅಂತರಂಗ ವಸ್ತುವಾದ ಕವಿಭಾವವು ಅಕ್ಷರದ

ಸ್ಥೂಲ ಆಕಾರವನ್ನು ತಾಳುವ ಪ್ರಕ್ರಿಯೆಯ ಲಾಸ್ಯವೇ ಛಂದಸ್ಸು. ಎಂದರೆ ಭಾವಕ್ಕೆ– ಅದರ ಉತ್ಕಟತೆಗೆ –ತಕ್ಕಂತಹ ಛಂದೋಶರೀರವನ್ನೇ ಕಾವ್ಯ ಅಪ್ಪಿಕೊಳ್ಳುತ್ತದೆ.

೬. ಪದ್ಯಕಾವ್ಯದ ಗತಿ ಬಿಟ್ಟ ಬಾಣದಂತೆ ನೇರವಲ್ಲ–ಹರಿಯುವ ಹೊಳೆಯ ಲಾಸ್ಯ ಅದು. ಆದುದರಿಂದಲೇ ಅದರಲ್ಲಿ ಸಹಜ ಸಂಗೀತ ಸಿದ್ಧಿಸುತ್ತದೆ ಅದು ಶಾಸ್ತ್ರೀಯ ಸಂಗೀತದ ರಾಗ ತಾಳದ ಲೆಕ್ಕವಲ್ಲ. "ಅದು ಸಂಗೀತಾಂಗವಲ್ಲ ; ಅದು ಕಾವ್ಯರಚನೆಯ ಅಂಗವೆಂಬುದೇ ಸಿದ್ಧಾಂತ"
[ಡಾ. ಕೆ. ಕೃಷ್ಣಮೂರ್ತಿ–ಕನ್ನಡ ಛಂದಸ್ಸಿನ ಚರಿತ್ರೆ–ಭಾಗ ೧]

೭. ಛಂದೋಯತಿ ಸಮನ್ವಿತವಾದದ್ದೇ ಸುಬದ್ಧ ಕಾವ್ಯ. "ನುಡಿಯಂ ಛಂದದೊಳೊಂದಿರೆ ತೊಡರ್ಚಲರಿವಾತನೆ" ಜಾಣಕವಿ. [ಕವಿರಾಜ ಮಾರ್ಗ. ೮–೧]

ಹೀಗೆ ಕವಿಭಾವಕ್ಕೆ ತಕ್ಕ ರೂಪವನ್ನೇ ಛಂದಸ್ಸು ತಾಳುತ್ತದೆ ಎಂದ ಮೇಲೆ ಕಾವ್ಯಾರ್ಥಗ್ರಹಣದಲ್ಲಿ ಕಾವ್ಯದ ಛಂದಸ್ಸಿನ ಪರಿಶೀಲನೆ ಮಹತ್ವದ ಅಂಶವಾಗುತ್ತದೆ. ವೇದಾರ್ಥಗ್ರಹಣದಲ್ಲಿ ವೇದದ ಷಡಂಗಗಳಲ್ಲಿ ಒಂದಾದ ಛಂದಸ್ಸಿನ ಪಾತ್ರವನ್ನು ಪ್ರಾಚೀನರು ಗ್ರಹಿಸಿಯೇ ಇದ್ದರು. ಛಂದಸ್ಸನ್ನು ವೇದಪುರುಷನ ಪಾದಗಳೆಂದು ಸರಿಯಾಗಿಯೇ ಸೂತ್ರೈಸಿದ್ದರು. ನಿಲ್ಲುವುದಕ್ಕೆ ನಡೆಯುವುದಕ್ಕೆ ಪಾದಗಳು. ಹಾಗೆಯೇ ಯತಿಗತಿಗಳ ನಿರಂತರ ಲಾಸ್ಯವೇ ಪದ್ಯಲಯ–ಅದರಿಂದಲೇ ಕಾವ್ಯ ಸಂಗೀತ. ಅದು ಕವಿಭಾವದ ಸಂಗೀತವೇ ಹೌದು. "ಛಂದಸ್ಸು ಪ್ರತಿಭಾವಂತರ ಕೈಯಲ್ಲಿ ಸೌಂದರ್ಯಾನುಭೂತಿಯ ಉತ್ತಮ ಸಾಧನವಾಗಬಲ್ಲದು. ಛಂದಸ್ಸನ್ನು ಕೇವಲ ಕವಿತ್ವದ ಅಂಗವೆನ್ನುವುದಕ್ಕಿಂತ ಕವಿತಾವೇಶ ತಾನಾಗಿಯೇ ಪಡೆಯುವ ನೈಸರ್ಗಿಕ ಮೂರ್ತಿಭಾವವೆಂದು ತಿಳಿಯಬಹುದು" ಎನ್ನುವುದು ತೀರ ಸರಿಯಾದ ವಿವರಣೆ. [ಡಾ. ಕೆ. ಕೃಷ್ಣ ಮೂರ್ತಿ–ಕನ್ನಡ ಛಂದಸ್ಸಿನ ಚರಿತ್ರೆ, ಭಾಗ–೧]

ಈ ಶ್ರದ್ಧೆಯಿಂದ, ಕನಕದಾಸರ ಕೃತಿಗಳಲ್ಲಿನ ಛಂದಸ್ಸಿನ ಸ್ವರೂಪವನ್ನು ಪರಿಶೀಲಿಸುವ ಯತ್ನ ಈ ಪ್ರಬಂಧದಲ್ಲಿದೆ.

## ೧

ದಾಸಸಾಹಿತ್ಯ ಪರಂಪರೆಯಲ್ಲಿ ಕನಕದಾಸರದ್ದು ವಿಶಿಷ್ಟ ಸ್ಥಾನ ಎಂಬುದು ಕೇವಲ ಔಪಚಾರಿಕ ಮಾತಲ್ಲ. ಅನುಭವದ ಹರಹು ಹಾಗೂ ಅಭಿವ್ಯಕ್ತಿಯ

ಸೊಗಡು ಎರಡರಲ್ಲೂ ಅವರು ಉಳಿದ ಹರಿದಾಸರಿಗಿಂತ ಪ್ರತ್ಯೇಕವಾಗಿ ನಿಲ್ಲುತ್ತಾರೆ. ವೈದಿಕ ಪರಂಪರೆಯ ಸಾಂಪ್ರದಾಯಿಕ, ಧರ್ಮ–ಆಚಾರನಿಷ್ಠವಾದ, ಸೀಮಿತ ಅನುಭವಕ್ಕಿಂತ ಈತನ ಅನುಭವ ಆಳದಲ್ಲಿಯೂ ಅಗಲದಲ್ಲಿಯೂ ರೋಮಾಂಚಕರವಾಗಿರಬೇಕು. ಬದುಕಿನ ಬವಣೆಗಳೊಡನೆ ರೋಷ–ಅಪಮಾನದಂತಹ ಉತ್ಕಟ ಭಾವಾವೇಶಗಳು ತಳುಕು ಹಾಕಿಕೊಂಡಿರಲೇಬೇಕು. ಕನಕನ ವೈರಾಗ್ಯ–ದೈವಶ್ರದ್ಧೆಗಳು ಪುಸ್ತಕವ್ಯಾಸಂಗ, ಪ್ರವಚನಗಳಿಂದ ಬಂದುದಾಗಿರದೆ ತೀವ್ರವಾದ ಜೀವನಾನುಭವದ ಸಹಜ ಪರಿಪಕ್ವ ಫಲವಾಗಿರಬೇಕು. ಪರಿಣಾಮವಾಗಿ ಸಾಮಾಜಿಕ ವಿಸಂಗತಿಗಳ ಬಗೆಗೆ–ಬೂಟಾಟಿಕೆ, ಡಂಭಾಚಾರದ ಬದುಕು, ಜಾತಿಮತಗಳಿಂದ ಮಾನವ ಹೃದಯದಲ್ಲಿ ಮೂಡಿದ ಬಿರುಕುಗಳ ಬಗ್ಗೆ ಉತ್ಕಟ ರೋಷ–ಅಸಹನೆಗಳೂ ಆತನ ಕೃತಿಯಲ್ಲಿ ಹೊರಹೊಮ್ಮಿವೆ. ಭಕ್ತಿಯ ಉಲ್ಲಾಸಕ್ಕಿಂತ ಅಲ್ಲಿ ಆವೇಶಕ್ಕೆ ಅಗ್ರಸ್ಥಾನ. ಅನುಭವ ಪಕ್ವವಾದ ನಂತರ ಹೃದಯಂಗಮ ತನ್ಮಯತೆ, ಕನಕದಾಸರಲ್ಲಿ ಅತಿ ಸಹಜವಾಗಿ ಹೊರಹೊಮ್ಮುತ್ತದೆ. ಆತನ ನುಡಿಗಳು ಅಪ್ಪಟ ಅನುಭವದ ಕಿಡಿಗಳಾಗುವುದು ಒಂದು ಸಹಜ ಪ್ರಕ್ರಿಯೆ ಎನಿಸುತ್ತದೆ. ಉಜ್ವಲ ವ್ಯಕ್ತಿತ್ವದ ವ್ಯಾಸರಾಯರ ಪ್ರಸನ್ನ ಕಾರುಣ್ಯದಿಂದ ಕನಕನ ಗ್ರಾಮೀಣ ರಾಜಸ ಮನೋಧರ್ಮ ಸ್ವಲ್ಪ ನಯಗೊಂಡಿರುವ ಸಾಧ್ಯತೆಯನ್ನೂ ಅಲ್ಲಗಳೆಯುವಂತಿಲ್ಲ. ಹೀಗಾಗಿ ಕನಕದಾಸರ ಕೃತಿಗಳಲ್ಲಿ–ಕೀರ್ತನೆಗಳಲ್ಲಿ ಕಾಣುವ ವೈವಿಧ್ಯ ಆತನಿಗೇ ವಿಶಿಷ್ಟ. ಅಲ್ಲಿನ ಛಂದಸ್ಸಿನ ಪರಿಶೀಲನೆಯಲ್ಲೂ ಈ ಅನುಭವ ವಿವರಗಳನ್ನು ಮರೆಯುವಂತಿಲ್ಲ.

೨

ಪುರಂದರದಾಸರ ಸಮಕಾಲೀನರೂ, ದಾಸಸಾಹಿತ್ಯದ ಯಮಳರಲ್ಲಿ ಒಬ್ಬರು ಎಂದೂ ಖ್ಯಾತರಾದ ಕನಕದಾಸರು ಬರೆದದ್ದು ಬರಿಯ ಕೀರ್ತನಗಳನ್ನಲ್ಲ. ಮಹಾಕಾವ್ಯ ಸಂಪ್ರದಾಯಕ್ಕೂ ಅವರ ವಿಶಿಷ್ಟ ಕಾಣಿಕೆ ಇದ್ದೇ ಇದೆ. ಅವರಿಗೆ ಮೊದಲಿನ ನರಹರಿ ತೀರ್ಥರಾಗಲೀ ಶ್ರೀಪಾದರಾಜ ವ್ಯಾಸತೀರ್ಥರಾಗಲೀ ಇಂತಹ ಸುದೀರ್ಘ ಕನ್ನಡ ಕಾವ್ಯಗಳನ್ನು ಬರೆಯಲಿಲ್ಲ. ಪುರಂದರದಾಸರು ಅಸಂಖ್ಯಾತ ಕೀರ್ತನಗಳನ್ನು ಸಂಗೀತರಚನೆಗಳನ್ನು–ಕಟ್ಟಿದರೂ ಮಹಾಕಾವ್ಯ ಪದ್ಧತಿಗೆ ಒಲಿಯಲಿಲ್ಲ. ತಾತ್ವಿಕ ಮಹಾಕಾವ್ಯವನ್ನು ಮುಂದೆ ಬರೆದ ಹರಿದಾಸರು ೧೭ನೇ ಶತಮಾನದ ಜಗನ್ನಾಥದಾಸರು. ಹೀಗಾಗಿ ಕಾವ್ಯ ಪರಂಪರೆಯಲ್ಲಿಯೂ ಕನಕದಾಸರ ಹೆಸರು ತುಂಬ ಸ್ಮರಣೀಯ. ಪ್ರೀತಿಯ ಪತ್ನಿಯನ್ನು ಕಳೆದುಕೊಂಡ ತರುಣದಲ್ಲಿ, ಶ್ರೀವೈಷ್ಣವ ಗುರು ಶ್ರೀ

ತಾತಾಚಾರ್ಯರ ಪ್ರಭಾವವಲಯದಲ್ಲಿ ಬೆಳೆಯುತ್ತಿದ್ದ ದಿನಗಳಲ್ಲಿ ಕನಕದಾಸರು "ಮೋಹನ ತರಂಗಿಣಿ"ಯನ್ನು ಬರೆದಿರಬಹುದು. ಕಂಡುಂಡ ಅನುಭವದ ಪುನಸ್ಮರಣೆಯಾಗಿ ಪ್ರಿಯಪತ್ನಿಯ ಅಮರಸ್ಮಾರಕವಾಗಿ ಈ ಪ್ರಣಯಗಾಥೆ ನಿರ್ಮಾಣಗೊಂಡಿರಬಹುದು. ಪರ್ಯಾಯವಾಗಿ ನಾಡ ದೊರೆ ಶ್ರೀಕೃಷ್ಣದೇವರಾಯನನ್ನು ಈ ಕೃತಿಯಲ್ಲಿ ಸ್ಮರಿಸಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ ಆದರೆ ಮುಖ್ಯವಾಗಿ ಕನಕನು ಪಟ್ಟಪಾಡು ಕಟ್ಟಿದ ಹಾಡಾಗಿ ಹೃದಯಂಗಮವಾಗಿ, ಭಾವ ಪ್ರವಾಹವಾಗಿ, ಹರಿದಿರುವ ಸಾಧ್ಯತೆಯೇ ಹೆಚ್ಚು. ದಾಸನ ದೈನ್ಯತೆಗಿಂತ ಪ್ರಣಯಿಯ ಲವಲವಿಕೆಯ ಉಲ್ಲಾಸದ ದನಿಯೇ ಹೊಳೆಯಾಗಿ ಬಳುಕುತ್ತಿರುವ ಕಾವ್ಯ ಮೋಹನ ತರಂಗಿಣಿ. ಇಂತಹ ಪ್ರಣಯೋಲ್ಲಾಸದ ಕಥೆಗೆ ಸಾಂಗತ್ಯವನ್ನು ಬಳಸಿಕೊಂಡದ್ದು ಕನಕದಾಸರ ಔಚಿತ್ಯ ಪ್ರಜ್ಞೆಗೆ ಸಾಕ್ಷಿಯಾಗಿದೆ. ಸಾಂಗತ್ಯವಂತೂ ಶುದ್ಧ ಜಾನಪದ ಛಂದಸ್ಸು-ಅಂಶ ಗಣಾನ್ವಿತವಾದದ್ದು. ಅದೊಂದು ಹಾಡುಗಬ್ಬವೇ ಸರಿ. ಪ್ರಾಯಶಃ ತ್ರಿಪದಿಯಿಂದ ಕಸಿಗೊಂಡದ್ದು. ದ್ವಿತೀಯ ಹಾಗು ಚತುರ್ಥ ಪಾದಾಂತ್ಯದಲ್ಲಿ ನಿಯತವಾಗಿ ಬ್ರಹ್ಮಗಣ ಬರುವುದರಿಂದ, ತ್ರಿಪದಿಗಿಂತ ಹೆಚ್ಚಿನ ತಾಳಲಯ ಸಾಂಗತ್ಯದಲ್ಲಿ ಸಾಧ್ಯ. ಗೇಯತೆಯ ಅನುಕೂಲಕ್ಕೆ ತಕ್ಕಂತೆ ಪದವನ್ನು ಕುಗ್ಗಿಸುವ ಹಿಗ್ಗಿಸುವ ಸೌಕರ್ಯ ಈ ದೇಸೀಛಂದದ ಮೋಹಕತೆಗೆ ಮತ್ತಷ್ಟು ಕಾರಣ. ಕನಕದಾಸರ ಕಾಲಕ್ಕೆ ದೇಪರಾಜ ತನ್ನ 'ಸೊಬಗಿನ ಸೋನೆ' ಎಂಬ ಶೃಂಗಾರ ಕಾವ್ಯವನ್ನು ಸಾಂಗತ್ಯದಲ್ಲಿ ರಚಿಸಿ ಅದರ ಸಾಧ್ಯತೆಯನ್ನು ಜನಪ್ರಿಯಗೊಳಿಸಿರಲೂ ಸಾಕು. ಗ್ರಾಮೀಣ ಪರಿಸರದಲ್ಲಿ ಯಕ್ಷಗಾನ, ಡೊಳ್ಳು ಕುಣಿತ, ಡೊಂಬರ ಕುಣಿತಗಳನ್ನು ಕಂಡು, ಕೇಳಿದ ಕನಕನಿಗೆ ಪ್ರಾಯಃ ಈ ಜಾನಪದ ವಲಯದಿಂದಲೇ ಉಷಾಸ್ವಯಂವರದ ಕತೆಯ ಪರಿಚಯವಾಗಿರಬೇಕು. ಏಕೆಂದರೆ ಆವರೆಗಿನ ಕನ್ನಡ ಮಹಾಕಾವ್ಯಗಳಿಂದ ಈ ಕಥೆ (ಕುಮಾರವ್ಯಾಸ-ಲಕ್ಷ್ಮೀಶ) ಕನಕದಾಸರಿಗೆ ದೊರೆತಿಲ್ಲ. ಇಂಥ ಜಾನಪದ ಶೃಂಗಾರ ಕತೆಗೆ ಮೃದುಮಧುರ ಬಂಧವಾದ ಸಾಂಗತ್ಯ ಅತ್ಯಂತ ಉಚಿತವಾದ ಛಂದಸ್ಸು. "ಸಾಂಗತ್ಯವು ಹಾಡುಗಬ್ಬಕ್ಕೆ ತುಂಬಾ ಅಳವಡುವ ಮಟ್ಟು ; ಅದರ ರಾಗರಂಜನೆ ಅಪ್ರತಿಮವಾದುದು....ಸ್ವರ ಸಾಂಗತ್ಯವು ಅದರ ಮುಖ್ಯ ಲಕ್ಷಣ. ಸಾಂಗತ್ಯವು ಮಧುರಸ್ವರಗಳ ಸಂಮಿಲನದಿಂದ ಹೊರಡುವ ಗತಿಯನ್ನು ಸೂಚಿಸುತ್ತದೆ....ಸಂಗತಿ ಎಂದರೆ ಮೇಳದೊಡನೆ ಸಾಗುವ ಗತಿ... ಸಾಂಗತ್ಯವು ಹಾಡುಗಬ್ಬ ಮಾತ್ರವಲ್ಲ ಬಾಜನೆಗಬ್ಬವೂ ಹೌದು" ಎಂಬ ಡಾ. ಡಿ. ಎಸ್. ಕರ್ಕಿಯವರ ಮಾತನ್ನು ವಿಶೇಷವಾಗಿ ಲಕ್ಷಿಸಬೇಕು

[ಕನ್ನಡ ಛಂದೋ ವಿಕಾಸ, ಪು. ೨೧೦] ಯಕ್ಷಗಾನದಲ್ಲಿ ಸಾಂಗತ್ಯಕ್ಕೆ ದೊರೆತಿರುವ ಸ್ಥಾನವನ್ನು ಪರಿಶೀಲಿಸಿದರೆ, ಕನಕದಾಸರ ಸ್ಫೂರ್ತಿಯ ಮೂಲವನ್ನು ಸುಲಭವಾಗಿ ಗುರುತಿಸಲು ಸಾಧ್ಯ. ಸಂಗೀತಕ್ಕೂ ಸಾಂಗತ್ಯಕ್ಕೂ ಇರುವ ಸಹಜ ಸಂಬಂಧವನ್ನೂ ಮರೆಯುವಂತಿಲ್ಲ. ವರ್ಣನಾ ಪ್ರಧಾನವಾದ ತನ್ನ ಕಥೆಗೆ ಈ ವರ್ಣಕ ಛಂದಸ್ಸನ್ನು ಬಳಸಿಕೊಂಡಿರುವುದು. ಕವಿಯ ಸೂಕ್ಷ್ಮಜ್ಞತೆಗೆ ಸಾಕ್ಷಿ. ಶೃಂಗಾರ, ಕರುಣೆ, ಮೃದುಹಾಸಗಳಂತೆ ಸಾಂಗತ್ಯವು ವೀರ ರೌದ್ರಗಳಲ್ಲಿ ಶೋಭಿಸುವುದಿಲ್ಲ ಎಂಬುದನ್ನೂ ಮರೆಯವಂತಿಲ್ಲ. "ತನಿಬೆಲ್ಲದ ಅಚ್ಚು", "ಜೇನುತುಪ್ಪದ ತೊರೆ" ಎಂದು ಕನಕದಾಸರು ತಮ್ಮ ಈ ಕಾವ್ಯವನ್ನು ಬಣ್ಣಿಸಿಕೊಂಡಿದ್ದಾರೆ. ಈ ರೂಪಕಗಳು ಸಾಂಗತ್ಯದ ಸ್ವಭಾವವನ್ನೂ ಸಹಜವಾಗಿಯೇ ಧ್ವನಿಸುತ್ತದೆ. ಸಾಂಗತ್ಯ ಮುಖ್ಯವಾಗಿ ಮೃದು ಮಧುರವಾದ ಕಾವ್ಯ ಬಂಧ. ೨೩೦೦ ಸಾಂಗತ್ಯ ಪದ್ಯಗಳ ಈ ಸುದೀರ್ಘ ಕಾವ್ಯದ ಬಹುಪಾಲು ಈ ಮಾಧುರ್ಯ-ಲಾಲಿತ್ಯಗಳನ್ನು ಬಿಂಬಿಸಿ ಸಾರ್ಥಕವಾಗುತ್ತವೆ. ನೋಡಬಹುದು :

ಎಣ್ಣೆಯ ತಲೆಗೂಡಿದುದಿಲ್ಲ ನೊರೆವಾಲು
ಬೆಣ್ಣೆಯ ಮೆಲಿಸಿದುದಿಲ್ಲ
ಕಣ್ಣಿವೆ ಹಳಚಿ ನೋಡಿದುದಿಲ್ಲ ಮಗನ ಲಾ
ವಣ್ಯವನೆಂದಳಲಿದಳು (ಸಂ. ೨-೪೮)

ಎಣ್ಣೆ, ಬೆಣ್ಣೆ, ಕಣ್ಣಿವೆ, ಅಳಲು, ಹಳಚಿ ಇಂತಹ ಅಪ್ಪಟ ದೇಸಿ ನುಡಿಗಳು ಸನ್ನಿವೇಶದ ತೀವ್ರತೆಯನ್ನು ಮನದಟ್ಟು ಮಾಡಿಕೊಡುತ್ತವೆ. ಅಕ್ಕರೆ ಉಕ್ಕಿನಿಂದ ಅತ್ಯಂತ ಭಾವ ಗರ್ಭಿತವಾಗುತ್ತವೆ. ಪ್ರದ್ಯುಮ್ನ ಜನನದಿಂದ ಹರ್ಷಿತಳಾದ ರುಕ್ಮಿಣಿಯ ವಾತ್ಸಲ್ಯ ಕೋಡಿವರೆದು, ಸಾಂಗತ್ಯ ಸಾರ್ಥಕವಾಗಿದೆ. ಮುಂದಿನ ಪದ್ಯವೂ ಹೀಗೆ ವಿಷ್ಣುಗಣದ ತುತ್ತು ತೂಗಿ ತೂಗಿ ಊಡಿಸುವಂತಹುದು.

ಹಾಲಿಗೆ : ಹಂಬಲಿ : ಸುವನಲ್ಲ : ಬಿಡದಂಬೆ
ಗಾಲಿಕ್ಕಿ : ತೊಳಲುವ : ನಲ್ಲ
ಕಾಲು ಬ : ಲಿದು ದಟ್ಟ : ಡಿಯಿಡುವ : ವನಲ್ಲ
ಬಾಲನೆ : ಲ್ಲಿಗೆ ಹೋದ : ನವ್ವ (ಸಂ. ೨-೪೯)

ಗಣವನ್ನು ಎತ್ತಿಕೊಡುವಾಗಲೂ ಒಂದು ಗುರುವಿಗಿಂತ ಎರಡು ಲಘುಗಳ ಲಾಲಿತ್ಯವೇ ಹೆಚ್ಚು. ಬ್ರಹ್ಮಗಣದ ನಲ್ಲ/ನವ್ವಗಳೂ ಅತಿ ಸಹಜವೆನಿಸುವಂತೆ ಅಂತರಂಗದ ಅನುರಾಗವನ್ನೇ ಮೀಂಟುತ್ತವೆ. ಪ್ರತಿಪಾದದ ಆರಂಭದಲ್ಲಿ ಹಾಲಿ/

ಗಾಲಿಕ್ಕಿ/ಕಾಲು/ಬಾಲ/ ಇಲ್ಲಿನ ಶಿಶುಸಹಜ ಲೀಲಾಂದೋಲನವನ್ನು ವಿಶೇಷವಾಗಿ ಗಮನಿಸಬೇಕು. ಗಜ ಪ್ರಾಸದ ಗತಿಯನ್ನು ನೋಡಬೇಕು. ವಾತ್ಸಲ್ಯ ವ್ಯಂಜನೆ ಸಾಂಗತ್ಯಕ್ಕೆ ತೀರ ಸಹಜ. ಬಾಣಾಸುರ ರಕ್ಕಸನ ಹೃದಯವೂ ಈ ವಿಷಯದಲ್ಲಿ ಬೆಣ್ಣೆಯೇ. ತನ್ನ ಪ್ರಿಯದೈವ ಶಿವನ ಅಭಿಷೇಕ ಮಾಡುತ್ತ ಅವನು ಉದ್ಗರಿಸುವ ಮಾತಿನ ಹೃದ್ಯತೆಯನ್ನು ನೋಡಿ.

ಹಡೆದ ತಾ : ಯಿಲ್ಲ ತಾ : ಯುಳ್ಳೊಡೆ : ತಲೆಹೀಗೆ
ಜಡೆಗಟ್ಟಿ ; ಕೊಂಡು ಮಾ : ಸಿಹುದೆ
ಮಡದಿಯ : ಮಂಡೆಯ : ಸಿಕ್ಕನೊ : ಡೆವರೆ
ನ್ನೊಡೆಯ ಕೋ : ಎನುತ ನೀ : ರೆರೆದ ॥ (೭–೧೪)

ಅಸುರನ ರಕ್ಕಸತನವೇ ಭಕ್ತಿ ವಾರಿಧಿಯಲ್ಲಿ ಮಿಂದು ಮೃದುವಾಗಿ ಬಿಟ್ಟಿದೆ. ಅದೇ ತಾನೇ ಪ್ರೀತಿಯ ತಾಯಿಯನ್ನೂ ಕೈಹಿಡಿದ ಪ್ರಿಯಪತ್ನಿಯನ್ನೂ ಕಳೆದುಕೊಂಡ ಒಂಟಿ ಜೀವದ ಅಳಲು ಅವರ ನೆನಪನ್ನೇ ಸವಿಸವಿದು ಎರೆಯುತ್ತಿರಬಹುದೇ ಎಂದು ಕನಕನ ಬದುಕನ್ನು ಚಿಂತಿಸುತ್ತಾ ಹನಿಗಣ್ಣಾಗುತ್ತದೆ ಭಾವುಕನ ಹೃದಯ. ಇಡಿಯ ಕಾವ್ಯವನ್ನೆ ಕನಕ ತನ್ನ ಪತ್ನಿಗೆ ಹೇಳಿದಂತೆ ಕತೆ ನಡೆದಿದೆ. ಮಡದಿಯ ಮಂಡೆ ಮಾಣಿಕವೆ ಕೇಳು, ಕೇಳ್ ಕೆಳದಿ, ಕತೆಯ ಬಿತ್ತರಿಪೆ ನಿನಗೆ, ಮುಂತಾಗಿ ಸಲ್ಲಪಿಸುತಾ ಕವಿ ಅಗಲಿದ ಮಡದಿಗೆ ಶ್ರದ್ಧಾಂಜಲಿ ಅರ್ಪಿಸುತ್ತಿದ್ದಾನೆಯೇ?

ಆದರೆ ವೀರರೌದ್ರಗಳಲ್ಲಿ ಸಾಂಗತ್ಯ ಸೋಲುವುದನ್ನು ಮರೆಯುವಂತಿಲ್ಲ ಅದು ಹೂವಿನಿಂದ ಹಲಗೆಯನ್ನು ಹೊಡೆದಂತೆ. ಸಾಂಗತ್ಯದ ತೇಲುಲಯ ಇಂಥ ಭಾವಗಳ ಅಭಿವ್ಯಕ್ತಿಯಲ್ಲಿ ಸೋತುಬಿಡುತ್ತದೆ. ರನ್ನ ಹರಿಹರರನ್ನು ಇಲ್ಲಿನ ಸಾಂಗತ್ಯ ಶೈಲಿಗೆ ಹೋಲಿಸಲಾದೀತೆ? ಉದಾಹರಣೆಗೆ ಗಮನಿಸಬಹುದು

ಲೆಕ್ಕವಿಲ್ಲದೆ ಕೊಂದನದಟುಳ್ಳ ದೈತ್ಯರ
ವಿಕ್ರಮ ವೀರೋತ್ತಮನ
ರಕ್ಕಸರಾಯ ಬಾಣಾಸುರ ಹಿಡಿದನು
ಮುಕ್ಕಣ್ಣ ಕೊಟ್ಟ ಶಕ್ತಿಯಲಿ ॥ (೧೧–೯)

ಎಲ್ಲಿಯ ವೀರ? ಹಾಡು ಕೇಳಿದಂತೆ ಭಾಸವಾಗುತ್ತದೆ ! ಇದು ಪಾಂಚಜನ್ಯದ ಘೋರ್ಗರೆತವಲ್ಲ. ಕೊಳಲ ದನಿ.

ಇದೆ ನೋಡು ಕಾದು ಕೊಳ್ಳೆನುತ ಮನ್ಮಥ ಹೊನ್ನ
ಹೊದೆಯಿಂದಲೊಂದಂಬ ತೆಗೆದು

ಎದೆಯ ಸಂಕುಲದಿ ಮೂಡಿಸಿ ತೋರಿಸಿ ಬಿಲ್ಲ
ಹೆದೆಯ ಕತ್ತರಿಸಲಿಕ್ಕಿದನು. (೧೧–೪೫) ॥

ಮುಗಿದುಹೋಯಿತು. ಇದು ಜೀವಾಕರ್ಷಣ ಪಾಶವಂತೂ ಅಲ್ಲ, ಮನ್ಮಥನ ಹೂಬಾಣ. ಮಾಂತ್ರಿಕ ಟೋಪಿಯಿಂದ ರಂಗು ರಂಗಿನ ಹೂ ಹಾರ ತೆಗೆದೆಸೆದಂತೆ. ಕದನ ಪ್ರಚಂಡನೂ ಆದ ದಂಡನಾಯಕ ಕವಿಗೆ ರೌದ್ರ ಒಲಿದಿಲ್ಲ, ಆದರೆ ಮಾರ್ದವತೆ ಲಾಲಿತ್ಯದಲ್ಲಿ ಭಕ್ತಿಯ ನಿರ್ಭರತೆಯಲ್ಲಿ ಆತನನ್ನು ಸರಿಗಟ್ಟುವವರು ಕಡಿಮೆ. ಆತನ ರೋಷ ಆವೇಶಗಳ ದಲಿತದನಿ ಕೇಳಬರುವುದು ಕೀರ್ತನೆಗಳಲ್ಲಿ–ಸಾಂಗತ್ಯದಲ್ಲಲ್ಲ.

೩

ಕನಕದಾಸ ಒಳ್ಳೆಯ ಕಥನಕಾರ. ಆತನ ಕಥನ ಕಲೆಗೆ ಸಾಂಗತ್ಯಕ್ಕಿಂತಲೂ ಷಟ್ಪದಿ ಹೆಚ್ಚು ಒಗ್ಗುತ್ತದೆ. ಆದರೆ ವಾರ್ಧಕದ ಧೀರಗಂಭೀರ ಗತಿಗಿಂತ ಭಾಮಿನಿಯ ಲಾಲಿತ್ಯವೇ ಆತನಿಗೆ ಹೆಚ್ಚು ಪ್ರಿಯವಾಗಿರುವಂತೆ ತೋರುತ್ತದೆ. ತನ್ನ ನಳಚರಿತ್ರೆ. ರಾಮಧಾನ್ಯ ಚರಿತೆ ಹಾಗೂ ಹರಿಭಕ್ತಿಸಾರ ಈ ಮೂರೂ ಕೃತಿಗಳಿಗೆ ಭಾಮಿನಿಯನ್ನೇ ಬಳಸಿರುವುದನ್ನು ಗಮನಿಸಬಹುದು. ಈ ಯಾವ ಕೃತಿಯೂ ಯುದ್ಧದ ಕಥೆಯಲ್ಲದಿರುವುದೂ ಕುತೂಹಲದ ಅಂಶ. ನಳಚರಿತ್ರೆ ರಮ್ಯ ಪ್ರಣಯ ಕಾವ್ಯ ; ಹರಿಭಕ್ತಿಸಾರ ಹೃದಯಂಗಮ ಭಕ್ತಿಗೀತ ; ರಾಮಧಾನ್ಯ ಚರಿತೆ ಸಾಮಾಜಿಕ ಚಿಂತನೆಯನ್ನು ಪ್ರೇರಿಸುವ ಅನ್ಯೋಕ್ತಿ ಕಾವ್ಯ. ಪಾಳೆಯ ಪಟ್ಟಿನ ಅಧಿಪತಿ ದಂಡನಾಯಕ ಕನಕ. ಬದುಕಿನ ಬವಣೆಗಳು–ಯುದ್ಧದಲ್ಲಿಯ ಸೋಲೂ ಸೇರಿದಂತೆ–ಆತನನ್ನು ರಣಜುಗುಪ್ಸಿತನನ್ನಾಗಿಸಿರಬಹುದೆ? ದೈವೀಕರುಣೆಯತ್ತ ವಾಲಿಸಿರಬಹುದೆ? ವೈವಿಧ್ಯಪೂರ್ಣ ಅನುಭವದ ಈ ವ್ಯಕ್ತಿಯಿಂದ ವೀರಕಾವ್ಯವೊಂದೂ ರಚಿತವಾಗದುದು ಒಂದು ಕೊರತೆಯೆ ಅಲ್ಲವೆ? ಆದರೆ ಈ ಅಂಶ ಅಂದಿನ ಭಕ್ತಿಯುಗದ ಮನೋಧರ್ಮಕ್ಕೂ ಕನ್ನಡಿ ಹಿಡಿದಿರಬಹುದು. ಅನುಭವ ದ್ರವ್ಯದ ಪರಿಣಾಮವೂ ಇರಬಹುದು, ದಂಡನಾಯಕರೂ ಆಗಿದ್ದ ಪಂಪ–ರನ್ನರ ವೀರಯುಗದ ಕೃತಿಗಳನ್ನು ಕುತೂಹಲಕ್ಕೆ ಹೋಲಿಸಬಹುದು.

ನಳಚರಿತ್ರೆಯೂ ಮೋಹನ ತರಂಗಿಣಿಯಂತೆ ಉತ್ಕಟ ಪ್ರಣಯ ಕಥೆಯೇ. ಮಹಾಭಾರತದ ನಳೋಪಾಖ್ಯಾನ ಯಕ್ಷಗಾನ ಬಯಲಾಟದ ಮೂಲಕವೂ ಕವಿಗೆ ಪರಿಚಿತವಾಗಿರಬಹುದು. ಭಾರತೀಯ ಮನೋಧರ್ಮಕ್ಕೆ ಚಿರಪರಿಚಿತವಾದ ವಿಧಿವಿಲಾಸದ ಅದಮ್ಯತೆ ಈ ಕತೆಯಲ್ಲಿ ಹಾಸುಹೊಕ್ಕಾಗಿದ್ದು

ಕರುಣೆಯನ್ನೂ ಮಿಡಿಯುತ್ತದೆ, ಇಂಥ ಕತೆಯಲ್ಲಿ ಉಜ್ವಲತೆ-ರೌದ್ರತೆಗಳಿಗಿಂತ ಮಾರ್ದವತೆ, ಸುಕುಮಾರತೆಗೇ ಪ್ರಥಮಸ್ಥಾನ. ಅಂತೆಯೇ ಕನಕದಾಸ ಭಾಮಿನಿಯ ಲಾಲಿತ್ಯವನ್ನು ಸಾರ್ಥಕವಾಗಿ ಬಳಸಿಕೊಂಡದ್ದು ತೀರ ಉಚಿತ. ರಾಜಸಭೆಯಲ್ಲಿ ನಳ ಮಹಾರಾಜನ ಶೀಲವನ್ನೂ ಚೆಲುವನ್ನೂ ಭೀಮನೃಪಾಲನ ಓಲಗದ ಕವಿಗಳೂ ಬಣ್ಣಿಸುವುದನ್ನು ಕೇಳಿಯೇ ರಾಜಕುಮಾರಿ ಕಿವಿಬೇಟಕ್ಕೆ ಈಡಾದಳು. ಈ ಮನ್ಮಥನ ಮಾಯೆಯನ್ನು ಕವಿ ವರ್ಣಿಸುವುದು ಹೀಗೆ :

ಆಗ : ಮದನನು : ತನ್ನ : ಬಲವನು
ಬೇಗ : ದಲಿಜೋ : ಡಿಸಲು : ಖೋಯೆಂ
ದಾಗ : ಲರಸಂ : ಚೆಗಳು : ಅಳಿವಿಂ : ಡುಗಳು : ನಲಿದಾಡೆ :
ಕೋಗಿ : ಲೆಗಳಾ : ರ್ಭಟಿಸೆ : ಗಿಳಿಗಳು
ಕೂಗೆ : ನಮಿಲು : ಗಳಾಡೆ : ಮನ್ಮಥ
ನಾಗ : ಪೂಗಣೆ : ಗಳನು : ಸಂಧಿಸಿ : ಯೆಚ್ಚ : ನಂಗನೆ : ಯ॥

ಸಂಯುಕ್ತಾಕ್ಷರಗಳು ಇಲ್ಲವೇ ಇಲ್ಲ ಎಂಬಷ್ಟು ಕಡಿಮೆ. ಅತಿಸಹಜವಾಗಿ ಹರಿಯುವ ಮೂರು ನಾಲ್ಕರ ಮಾತ್ರಾಲಯ. ಅಪ್ಪಟ ಕನ್ನಡನುಡಿಗಳ ಮೋಹಕತೆ. ಗಣಗಳನ್ನು ಕಟ್ಟುವಾಗಣ ಖಚಿತತೆ. ದೇಸಿಯ ಬೆಡಗಿಗೆ ನೋಡಿ :

ಉಣ್ಣ : ಳನ್ನವ : ಕಾಮ : ಗತ್ತಲೆ
ಕಣ್ಣಿ : ನಲಿಪೆ : ರ್ಚಿದುದು : ಸತಿಯರ
ಮನ್ನ : ಣೆಗೆಮೈ : ಗೊಡಳು : ಬಲುಬೇ : ಸರದಿ : ಬಳಲುವ : ಳು ।
ಬಣ್ಣಿ : ಸಿಯೆಮಾ : ತಾಡ : ಲೊಲ್ಲಳು :
ಬಣ್ಣ : ಗುಂದಿದ : ದೇಹ : ದೊಳಗೆಳ
ವೆಣ್ಣು : ಗಳಸೌಖ್ಯವನು : ತೊರೆದಳು : ಮದನ: ನೆಸುಗೆಯ : ಲಿ ॥

ಹುಡುಕಿದರೂ ಸಿಗದ ಸಂಸ್ಕೃತದ ಭೂರಿ ಸಮಾಸಗಳು, ಚೆಲುವಾದ ಆಡುಮಾತು. ಕಾಮಗತ್ತಲೆ-ಬಣ್ಣಗುಂದಿದ-ಇಂತಹ ದೇಸಿನುಡಿಗಳ ಧ್ವನಿರಮ್ಯತೆಯನ್ನು ಗಮನಿಸಬೇಕು. ಎಲ್ಲವೂ ಭಾಮಿನಿಯ ತುತ್ತು ತುತ್ತುಗಳಲ್ಲಿ ಬಡಿಸಿದ ನಳಪಾಕ !

ನಳಮಹಾರಾಜನ ಭೀಮಹಸ್ತದಲ್ಲಿ ಹಿಡಿಯಲ್ಪಟ್ಟ ಕೋಮಲ ಹಂಸದ ಬೆದರಿಕೆಯನ್ನು ಕವಿ ಹೀಗೆ ಕಣ್ಣಿಗೆ ಕಟ್ಟುತ್ತಾರೆ.

ಒದರಿ : ಕುಣಿಯಲು : ಹಸ್ತ : ದೊಳಗದ
ಕದಲ : ದಂತಿರೆ : ಪಿಡಿಯ : ಲರಸನ
ವದನ : ಕಮಲವ : ನೋಡಿ : ಹೆದರಿತು : ಬಹಳ : ಭೀತಿಯ : ಲಿ
ಹೃದಯ : ಕರಗುವ : ಮಾತ : ನೆಂದುದು
ಮದಕ : ರಿಗೆ ನೊರ : ಜದಂ : ತರವೆಕ್ಕೈ
ಸದರ : ದವರನು : ಕೊಲುವು : ದೇನರಿ : ದುದೆಂ : ದುದಾಪಕ್ಷಿ.

(ಸಂಧಿ ೨-೧)

ನಿಜಕ್ಕೂ ಇದು ದೇಸಿಯ ದಿಗ್ವಿಜಯ. ಪುಟ್ಟಪಕ್ಷಿಯ ಬಹಳ ಭೀತಿ, ಎದೆಗೆ ತಟ್ಟುವಂತಹ ಐಂದ್ರಿಯಿಕ ಅನುಭವ ತಂದು ಕೊಡುವಂತಹುದು. ದಮಯಂತಿಯ ಪಾಲಿಗೆ ಎಷ್ಟೇ ಮೋಹಕವಾಗಿದ್ದರೂ ನಳನ ಹಸ್ತದಲ್ಲಡಗಿದ ಈ ಪುಟ್ಟ ಪಕ್ಷಿಗಂತೂ ಅದು ಮೃತ್ಯು ಹಸ್ತವೇ ತಾನೇ ! ತನ್ನ ಮುದ್ದು ನುಡಿಗಳಿಂದ ಅರಸನ ಮನಸ್ಸನ್ನು ಗೆದ್ದುಕೊಂಡಿತು ಆ ಹಂಸ. ಆಗ ಕವಿಯ ಮಾತು ;

ನುಡಿಗೆ : ನಾಚಿದ : ನರಸ : ಹಂಸದ
ನಡವಳಿಗೆ ಮೆಚ್ಚಿದನು........

ಅತ್ಯಂತ ಸುಕುಮಾರವಾದ ಸಹಜ ಪ್ರತಿಕ್ರಿಯೆ ಇಲ್ಲಿಯದು.

ಮಲಗಿ ನಿದ್ರಿಸುವ ಪತ್ನಿಯ ವಸ್ತ್ರವನ್ನು ಸೆಳೆದುಕೊಂಡು ಆಕೆಯನ್ನು ಕಾಡಿನಲ್ಲಿ ಅಗಲಿ ಹೋಗುವಾಗಿನ ಸನ್ನಿವೇಶದಲ್ಲಿ ಕವಿ,

ಮರೆದು ಮಲಗಿದವಳ ಮಗ್ಗುಲ
ಸೆರಗ ಮೆಲ್ಲನೆ ಜಾರಿಸುತಲಾ
ಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ... (ಸಂಧಿ ೫-೧೭)

ಎನ್ನುತ್ತಾರೆ, ಇಲ್ಲಿ 'ಮೆಲ್ಲನೆ' 'ಜಾರಿ' 'ಸೆರಗು' ಈ ಶಬ್ದಗಳನ್ನು ಗಮನಿಸಿದರೆ ಕನಕನ ಇಂಗಿತಜ್ಞತೆಯ ಪರಿಚಯವಾಗುತ್ತದೆ. ಸೆರಗು-ಜಾರಿ ಎರಡರಲ್ಲೂ ಮೂರು ಮಾತ್ರೆಗಳೇ. ಆದರೆ ಅನುಭವದಲ್ಲಿ ಎಂತಹ ಅಂತರ, ಒಂದು ಹೊದೆದದ್ದು-ಮುಚ್ಚಿದುದು ; ಮತ್ತೊಂದು ಸಡಿಲಿಸಿ ಸರಿಸುವಂತಹದು. ದೀರ್ಘವನ್ನು ಎಷ್ಟು ಸಾರ್ಥಕವಾಗಿ ಕವಿ ಮೀಟುತ್ತಾರೆ, ನೋಡಬಹುದು.

ಅ) ಹಾ ರಮಣ ... ಹಾ ರಣಧೀರ ... ಸದ್ಗುಣ ಹಾರ ... ಇನ್ನಾರುಗತಿ ...
(ನಳನಿಲ್ಲದ ದಮಯಂತಿಯ ಹಲುಬು) ೫-೨೨

ಆ) ವನಿತೆ ಮಲಗಿಹಳೋ / ಅಧೈರ್ಯದಿ ನೆನೆವಳೋ / ...

ಕನಸ ಕಂಡೇಳುವಳೋ /... ಕನಲಿ ವಿಧಿಯನು ಬೈವಳೋ /

ಕಂಬನಿಯ ಸುರಿವಳೋ / ಶೋಕದಲಿ ತನುವ ಬಿಡುವಳೋ ...

ಇಂತಹ ಕಡೆಗಳಲ್ಲಿ ಹ್ರಸ್ವ–ದೀರ್ಘಗಳ ಭಾವಾಭಿನಯವನ್ನು ಮುಖ್ಯವಾಗಿ ನೋಡಬೇಕು. ಬರಿಯ ಗಣಿತವನ್ನು ಗಮನಿಸಿದರೆ ಸಾಲದು.

ಇಂಥದೇ ಔಚಿತ್ಯವನ್ನು, ಕಾರ್ಕೋಟಕವಿಷದ ಪರಿಣಾಮದಿಂದ ಕುರೂಪಿಯಾದ ನಳಮಹಾರಾಜನ ವರ್ಣನೆಯಲ್ಲಿ ಗಮನಿಸಬಹುದು ;

ದೊಡ್ಡ ಹೊಟ್ಟೆಯ ಗೂನು ಬೆನ್ನಿನ

ಅಡ್ಡ ಮೋರೆಯ ಗಂಟು ಮೂಗಿನ

ದೊಡ್ಡ ಕೈಕಾಲುಗಳ ಉದುರಿದ ರೋಮ ಮೀಸೆಗಳ.... ಇತ್ಯಾದಿ

ಊದಿದ ಹೊಟ್ಟೆಯನ್ನು ಬಣ್ಣಿಸುವಾಗ ದೊಡ್ಡ ಎಂಬ ಪರುಷಾಕ್ಷರವನ್ನೂ ಬಾಗಿದ ಬೆನ್ನನ್ನು ಗೂನು ಎಂಬ ಕ್ರಿಯಾಭಿನಯದ ಶಬ್ದವನ್ನೂ ಕವಿ ಬಳಸಿದ್ದಾನೆ. ಎರಡು ಶಬ್ದಗಳ ಮಾತ್ರಾ ಸಂಖ್ಯೆ ೨:೨. ಆದರೆ ಅರ್ಥ ವ್ಯಂಜನೆಯಲ್ಲಿ ಎಂಥ ವ್ಯತ್ಯಾಸ ! ಉದುರಿದ ರೋಮ ಮೀಸೆಗಳ....ಕೂದಲು ಉದುರಿದ ಬೋಳುತನಕ್ಕೆ ಕನ್ನಡಿ ಹಿಡಿಯುವುದಿಲ್ಲವೆ ?

ಭಾವಾಭಿನಯ ತತ್ಪರನಾದ ಕವಿಗೆ ಯಮಕದಂಥ ದುಷ್ಕರ ಕವಿತ್ವ ಒಗ್ಗುವುದಿಲ್ಲ. ಆದರೆ ಇಲ್ಲಿ ಯಮಕವಿದೆಯೆಂದು ಅರಿವಿಗೇ ಬಾರದಷ್ಟು ಸಹಜವಾಗಿ, ಯಮಕವನ್ನು ಭಾವವ್ಯಂಜನೆಗೆ ಬಳಸಿಕೊಂಡ ಕವಿಪ್ರತಿಭೆ ಕಣ್ಣಿಗೆ ನಿಚ್ಚಳ ನೋಡಿ :

ಕಾಣಿರೇಯರಸಂಚೆಗಳೆ ನೀವ್

ಕಾಣಿರೇ ನಿಜಪತಿಯ ಶುಕಪಿಕ

ಕಾಣಿರೇ ಮೃಗಪಕ್ಷಿಗಳೆ ನಳಚಕ್ರವರ್ತಿಯನು.... ಇತ್ಯಾದಿ

ಇಂಥಲ್ಲಿ ಕಾಣಿ:ರೇಯರ:ಸಂಚೆ: ಗಳೆ ನೀವ್, ಎಂದು ಕೃತಕವಾಗಿ ಮಾತ್ರೆಗಳನ್ನು ಎಣಿಸುವುದು ವ್ಯರ್ಥವಲ್ಲವೆ ? ಚಿಂತಿಸಬೇಕು.

ಉದಾಹರಣೆಗಳನ್ನು ಮತ್ತಷ್ಟು ಬೆಳೆಸುವುದು ಅನವಶ್ಯಕ.

೪

ರಾಮಧಾನ್ಯ ಚರಿತೆ ಸಾಮಾಜಿಕ ಮಹತ್ವವುಳ್ಳ ವಿಡಂಬನ ಕೃತಿ. ಉಳ್ಳವರು ಇಲ್ಲದವರ ನಡುವಿನ ಸಂಘರ್ಷದ ವಸ್ತುವನ್ನು ಅಷ್ಟು ಹಿಂದೆಯೇ ಕನಕದಾಸರು ಚರ್ಚೆಗೆ ಈಡುಮಾಡಿ, ಶೋಷಿತರಿಗೆ ರಾಘವ ಕೃಪೆಯನ್ನೂ ಸಂರಕ್ಷಣೆಯನ್ನೂ ಒದಗಿಸಿಕೊಟ್ಟಿದ್ದಾರೆ. ವ್ಯಾವಸಾಯಿಕ ಧಾನ್ಯಗಳನ್ನೂ ಪ್ರಾಣಿಗಳನ್ನೂ ಮಹಾಕಾವ್ಯದ

ಪಾತ್ರಗಳಾಗಿಸಿರುವುದು ಇಲ್ಲಿಯ ಸಿದ್ಧಿ. ಈ ಕಾವ್ಯದಲ್ಲಿಯೂ ತಮಗೆ ಪ್ರಿಯವಾದ ಭಾಮಿನಿ ಷಟ್ಪದಿಯನ್ನೇ ಕವಿ ಬಳಸಿದ್ದಾರೆ. ಪ್ರಾರ್ಥನಾ ಪದ್ಯಗಳಲ್ಲಿಯಂತೂ ಈ ಸಹಜಲಯದ ಮಾರ್ದವತೆ ಗಮನಾರ್ಹ.

ಗಿರಿಜೆ : ಯರಸನ : ಭಜಿಸಿ : ಲಕ್ಷ್ಮೀ

ವರನ : ಪಾದಾಂ : ಬುಜಕೆ : ವಂದಿಸಿ.........[೨]

ಇತ್ಯಾದಿ ಹಿತವಾದ ಓಟ–ಅಥವಾ ಲಾಸ್ಯ ಎನ್ನುವುದೇ ಸರಿ–ಇಲ್ಲಿ ಸಾಗುತ್ತದೆ. ಮುಖ್ಯವಾಗಿ ಸಂಭಾಷಣೆಯ ಸಲಿಲತೆಯನ್ನು ಭಾಮಿನಿಯಲ್ಲಿ ಸಾಧಿಸಲಾಗಿದೆ.

ಒಂದೆರಡು ಉದಾಹರಣೆಗಳನ್ನು ಗಮನಿಸಬಹುದು :

ಸಾರ : ಹೃದಯರು : ನೀವು : ನಮಗುಪ

ಚಾರ : ವೇಕಿದು : ನಿಮ್ಮಡಿಯ ಕರು

ಣಾರ : ಸವೆಸಲ : ಹುದು : ನಮ್ಮನು : ಸಾಕ : ದಂತಿರ : ಲಿ । [೨೬]

ಎಲ್ಲ : ಧರ್ಮದ : ಸಆರ : ವನು ನೀವ್

ಬಲ್ಲ : ರರಿಯದೆ : ಯೆಲ್ಲ : ರನುನೀ

ವಿಲ್ಲಿ : ನುಡಿವ : ಯುಪೇಕ್ಷೆಯುಂಟೇ : ಸಾಕ : ದಂತಿರ : ಲಿ [೩೫]

ಏನೆಲವೊ ನರೆದಲೆಗ ನೀನುಸ

ಮಾನನೇ ಯೆನಗಿಲ್ಲಿ ನಮ್ಮನು

ದಾನವಾಂತಕ ಬಲ್ಲ ನಿಬ್ಬರ ಹೆಚ್ಚು ಕುಂದುಗಳ [೩೬]

ಮೊದಲ ಎರಡು ಪದ್ಯಗಳಲ್ಲಿ ಸಹಜ ವಿನಯ, ಕಡೆಯ, ಪದ್ಯವನ್ನು ಮೀಟುವಾಗಲೇ ಉಕ್ಕಿ ಹರಿವ ಅಹಂಕಾರಕ್ಕೆ ಅನುಗುಣವಾದ ಪದ್ಯಲಾಸ್ಯವನ್ನು ಗಮನಿಸಬೇಕು.

ಕೆಲರು ಗೋಧಿಯ ಸಾಮೆಯನು ಕೆಲ

ಕೆಲರು ನವಣೆಯ ಕಂಬು ಜೋಳವ

ಕೆಲರು ಹಾರಕನೆಂದು ಕೆಲವರು...... ಇತ್ಯಾದಿ [೩೩]

ಇಲ್ಲಿ ಪಕ್ಷಕಟ್ಟಿ ಕಲಹವಾಡುವ ಗುಂಪು ಪ್ರವೃತ್ತಿಯನ್ನು ಆದಿಯಮಕ ಸಾರ್ಥಕವಾಗಿ ವ್ಯಂಜಿಸುತ್ತದೆ.

ಚೀರಿದವು ಕಹಳೆಗಳು/ಆರತಿಯ ತಳಿಗೆಗಳು/

ವಾರಣದ ಬೀದಿಗಳ/ತೋರಣದ ಮಂಟಪದ/

ಕಾರಳಿಯ ಕುಂಕುಮದ/

ಇಂಥ ಎಡೆಯಲ್ಲಿನ ದೀರ್ಘಾಕ್ಷರಗಳು ಉದ್ದೇಶಪೂರ್ಣವಾಗಿ ಬಳಸಿ ಅರ್ಥ ವ್ಯಂಜಕತೆಯನ್ನು ಮಾಡುತ್ತವೆ. ಬರಿಯ ನಿಯಮ ಪಾಲನೆ ಇಲ್ಲಿಯ ಉದ್ದೇಶವಲ್ಲ ಎಂಬುದು ಮೇಲೆಯೇ ಸ್ಪಷ್ಟವಾಗುತ್ತದೆ.

ಕೇಳು ಲಕ್ಷ್ಮಣ ಕೇಳು ಜಾಂಬವ
ಕೇಳು ನಳನೀಲಾದಿ ಸುಭಟರು
ಕೇಳಿರೈ........ [೧೨೪]

ಮೂರುಮಾತ್ರೆಯ ಗಣದ ಅನುರಣನೆ, ಒಬ್ಬೊಬ್ಬರನ್ನೂ ಬೆರಳು ಮಾಡಿ ತೋರುವಂತಿಲ್ಲವೆ ? ಮುಖ್ಯವಾಗಿ ಹ್ರಸ್ವ, ದೀರ್ಘ, ಪ್ರಾಸಾನುಪ್ರಾಸ, ಯಮಕಗಳೆಲ್ಲವೂ ಭಾಮಿನೀಲಯಕ್ಕೆ ಹೊಂದಿಕೊಂಡು ಸಾರ್ಥಕ್ಯವನ್ನು ಪಡೆದ ಕಾವ್ಯ–ರಾಮಧಾನ್ಯ ಚರಿತೆ.

೫

ಭಕ್ತಿ ಭಾವ ನಿರ್ಭರತೆಯಿಂದ ಹೃದಯವನ್ನು ತುಂಬುವ ಪ್ರಸಾದಗುಣದ ಕೃತಿ 'ಹರಿಭಕ್ತಿಸಾರ'. ಪ್ರತಿಪದ್ಯದಲ್ಲಿಯೂ 'ನಮ್ಮನನವರತ' ಎಂದು ಅಂಕಿತದಂತೆ ಮೊರೆಯುವ ಅಖಂಡ ಷಟ್ಪದಿ ಕಾವ್ಯ ಪ್ರಾಯಶಃ ಇದೊಂದೇ. ಭಕ್ತಿ ಕಾವ್ಯಕ್ಕೆ ಅತ್ಯಂತ ಉಚಿತ ವಿಧಾನವಿದು. 'ಹರಹರಾ ಶ್ರೀಚೆನ್ನಸೋಮೇಶ್ವರಾ' ಎಂದು ಪ್ರತಿಪದ್ಯಾಂತದಲ್ಲಿ ಮುಗಿಯುವ ಸೋಮೇಶ್ವರ ಶತಕವನ್ನು ಇದು ನೆನಪಿಸುತ್ತದೆ. ಪಾಲ್ಕುರಿಕೆ ಸೋಮನಾಥನ (ಕ್ರಿ. ಶ. ೧೨೦೦) ಸೋಮೇಶ್ವರ ಶತಕ (ವೃತ್ತ)ವನ್ನು ಕನಕದಾಸರು ಕೇಳಿರಬಹುದೆ? ಷಟ್ಪದಿಯಲ್ಲಿ ಈ ಕುತೂಹಲದ ಪ್ರಯತ್ನವನ್ನು ಕವಿ ಮಾಡಿರಬಹುದೆ? ಮುಕ್ತಕಗಳಂತೆ ಬಿಡಿಬಿಡಿಯಾಗಿಯೂ ಅಖಂಡ ಕಾವ್ಯದಂತೆ ಒಟ್ಟಾಗಿಯೂ ಹಾಡಲು ಬರುವಂತಹ ಹೃದಯಂಗಮ ಕಾವ್ಯ ಹರಿಭಕ್ತಿಸಾರ. ೧೦೮ ಷಟ್ಪದಿಗಳಲ್ಲದೆ ಮೂರು ಮಂಗಳಪದ್ಯಗಳೂ ಇಲ್ಲಿ ಸೇರ್ಪಡೆಯಾಗಿವೆ. ಕಥನ ಕಾವ್ಯಗಳಲ್ಲಿ ಫಲಸ್ತುತಿ ಪದ್ಯಗಳುಂಟು. ವೇದಪಾರಾಯಣದ ಫಲ.....ಇತ್ಯಾದಿ. ಕುಮಾರವ್ಯಾಸ ಕುಮಾರ ವಾಲ್ಮೀಕಿಗಳನ್ನು ಗೌರವದಿಂದ ಸ್ಮರಿಸಿರುವ ಕನಕದಾಸರಿಗೆ ಈ ಪರಂಪರೆ ಪರಿಚಿತವಾದದ್ದೇ. ಹರಿಭಕ್ತಿಸಾರದಲ್ಲಿಯೂ ಇಂತಹ ಫಲಸ್ತುತಿ ಪದ್ಯಗಳಿದ್ದೇ ಇವೆ [೧೦೬, ೧೦೭, ೧೦೮]. ಆದರೆ ಅನಂತರದ ಮೂರು ಮಂಗಳಪದ್ಯಗಳು ಇಲ್ಲಿ ಸೇರ್ಪಡೆಯಾಗಿರುವುದು ಈ ಕೃತಿಯ ಒಂದು ವಿಶೇಷತೆ. ಈ ಅಂಶವು ಖಂಡಿತವಾಗಿ ಜಾನಪದೀಯ ಪ್ರೇರಣೆ ಎನಿಸುತ್ತದೆ. ಆರತಿ ಹಾಡುಗಳನ್ನು ಹೋಲುವ ಈ ಷಟ್ಪದಿ, ಗಾಯನಕ್ಕೆ (ವಾಚನಕ್ಕಿಂತ) ತುಂಬ ಹಿತವಾಗಿದೆ.

ಮಂಗಳಂ ಜಗದಾದಿ ಮೂರ್ತಿಗೆ
ಮಂಗಳಂ ಶ್ರಿತಪುಣ್ಯ ಕೀರ್ತಿಗೆ
ಮಂಗಳಂ ಕರಕಲಿತ ಚಕ್ರವಿದಳಿತ ನಕ್ರನಿಗೆ
ಮಂಗಳಂ ದ್ರೌಪದಿಯ ಪೊರೆದಗೆ
ಮಂಗಳಂ ಧ್ರುವರಾಜಗೊಲಿದಗೆ
ಮಂಗಳಂ ಬೇಲೂರ ಚೆನ್ನಿಗರಾಯ ಕೇಶವಗೆ ॥

ಆದಿಪ್ರಾಸದೊಡನೆ ಅಂತ್ಯಪ್ರಾಸವೂ ನಿಯತವಾಗಿದೆ. ಆದಿಯಮಕವೂ ಖಚಿತ. ವಿಷ್ಣುಗಣಗಳ ಸಂಖ್ಯೆಯೇ ಹೆಚ್ಚಾಗಿ ಅಂಶಲಯಕ್ಕೂ ಚೆನ್ನಾಗಿ ಒಗ್ಗುವಂತಿದೆ. ಚಕ್ರವಿದಳಿತ–ನಕ್ರನಿಗೆ ಇಂಥಲ್ಲಿ ತಾಳಹಾಕಿ ತೋರುವ ಗತ್ತು ಕಾಣುತ್ತದೆ. ಮಂಗಳಂ । ಬೇಲೂರ । ಚೆನ್ನಿಗ ರಾಯಕೇ/ಶವಗೇ ಎಂಬುದು ಇಲ್ಲಿಯ ಹಾಡಿಕೆಯ ಮಟ್ಟು. ಹರಿಭಕ್ತಿಸಾರದ ಗೇಯತೆ ಎದ್ದು ತೋರುವಂತಹುದು. ಕವಿಯ ಜೀವನಾನುಭವದ ವಿವರಗಳು ಹಾಸುಹೊಕ್ಕಾಗಿರುವಂತಿದೆ. ಸಹಜ ವಿರಕ್ತಿ, ಅಧ್ಯಾತ್ಮ ತೃಷೆ, ಭಕ್ತಿಯ ಆರ್ತತೆ ಪಂಡಿತಕಾವ್ಯದ ಮಾರ್ಗವಾಗದೆ ಭಕ್ತ ಜೀವವೊಂದರ ತನ್ಮಯೀಭಾವನ ಎನಿಸುತ್ತದೆ. ಬಳಸಿದ ಭಾಮಿನೀ ಷಟ್ಪದಿಯ ಲಾಲಿತ್ಯಕ್ಕಾಗಿ ಒಂದೆರಡು ಉದಾಹರಣೆಗಳನ್ನು ಮಾತ್ರ ಇಲ್ಲಿ ಸೂಚಿಸುವುದು ಸಾಧ್ಯ.

ಎಂಟು ಗೇಣಿನ ದೇಹ ರೋಮಗ
ಳೆಂಟು ಕೋಟಿಯ ಕೀಲ್ಗಳಿರುವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು ।
ನೆಂಟ ನೀನಿರ್ದಗಲಿದಡೆ ಒಣ
ಹೆಂಟೆಯಲಿ ಮುಚ್ಚುವರು ದೇಹದ
ಲುಂಟೆ ಫಲಪುರುಷಾರ್ಥ ರಕ್ಷಿಸು ನಮ್ಮನನವರತ । (೬೬)

ದೇಹಾಭಿಮಾನದ ನಿಷ್ಫಲತೆಯನ್ನು ಸಾರುವ ಈ ಪದ್ಯದ ಸಹಜ ಶಬ್ದಗಳನ್ನು ಗಮನಿಸಬೇಕು. ಮೂರು ನಾಲ್ಕರ ಮಾತ್ರೆ ತಮತಮಗೇ ಕೂಡಿಕೊಂಡು ಬಂದಿವೆ, ಅಯತ್ನವಾಗಿ. ಎಂಟು ; ಗೇಣಿನ... ಇತ್ಯಾದಿ 'ನೆಂಟನೀನಿರ್ದಗಲಿದೊಡೆ' ಎಂಬುದು ತುಂಬ ಹೃದ್ಯವಾದ ಭಾವ. ಜೀವನ ಆವಾಸವಾಗಿರುವಾಗಷ್ಟೆ ದೇಹದ ಬೆಲೆ. ಅನಂತರ ಒಣ ಹೆಂಟೆಯಲ್ಲಿ ಮುಚ್ಚಿಹೋಗಿ ಮಣ್ಣಾಗುವುದಷ್ಟೆ. ಜೀವನನ್ನು "ನೆಂಟ" ಎಂಬ ದೇಸಿನುಡಿಯಲ್ಲಿ ಸಂಬೋಧಿಸಿರುವುದು ಗಮನಾರ್ಹ. ಇದ್ದು ಹೋಗುವುದಷ್ಟೇ ನೆಂಟನ ಕೆಲಸ.

ಭದ್ರವಾಗಿ ತಳ ಊರುವುದಲ್ಲ. ದೇಹ ಪಂಚಭೂತಗಳಲ್ಲಿ ವಿಲೀನವಾಗಿ ಬಿಡುತ್ತದೆ ಎಂಬ ಅಧ್ಯಾತ್ಮದ ಪಾರಿಭಾಷಿಕ ಪದಪುಂಜಕ್ಕೆ ಬದಲಾಗಿ "ಒಣ ಹೆಂಟೆಯಲ್ಲಿ ಮುಚ್ಚುವರು" ಎಂಬ ಗ್ರಾಮೀಣ ನೆಲದ ಮಾತು ಕನಕನ ವಿಶಿಷ್ಟತೆಯನ್ನು ಸಾರುತ್ತದೆ.

ಒಡೆಯ ನೀನೆಂದರಿತು ನಾ ನಿ
ನ್ನಡಿಯ ಭಜಿಸದೆ ದುರುಳನಾದೆನು
ಮಡದಿ ಮಕ್ಕಳ ಮೋಹದಲಿ ಮನಸಿಲುಕಿತಡಿಗಡಿಗೆ
ಮಡದಿಯಾರೀ ಮಕ್ಕಳ್ಯಾರೀ
ಒಡಲಿಗೊಡೆಯನು ನೀನು ನೀ ಕೈ
ವಿಡಿದು ಮುದದಲಿ ಬಿಡದೆ ರಕ್ಷಿಸು ನಮ್ಮವನವರತ ।

ಒಡೆಯ / ನಿನ್ನಡಿ / ಮಡದಿ / ಅಡಿಗಡಿಗೆ / ಒಡಲು / ಒಡೆಯ / ಕೈವಿಡಿ ಇಂಥ ಅಪ್ಪಟ ದೇಸಿಯ ಚೆಲುವು ತನಗೆ ತಾನೇ ಮೂರು ಮಾತ್ರೆಯ ತುತ್ತುಗಳಾಗಿವೆ. ಷಟ್ಪದಿಯಂತೂ ದೇಸೀ ಛಂದಸ್ಸು.

ಮುಂದಿನ ಷಟ್ಪದಿ (೭೧) ಯಲ್ಲಿಯೂ ಪಂಟಿಸು । ದಂಟಿಸುತ । ಕಂಟಕದ । ಬಂಟ । ನೆಂಟ । ... ಇಂತಹ ದೇಸಿಯ ಸಮೃದ್ಧಿ.

ಮೊದಲು : ಜನನ : ವನರಿಯೆ : ಮರಣದ
ಹದನ : ಕಡೆಯಲಿ ತಿಳಿಯೆ : ನಾ ಮ–
ಧ್ಯದಲಿ ನೆರೆನಾ : ನಿಪುಣ : ನೆಂಬುದು: ಬಳಿಕ : ನಗೆಗೇಡು ।

ನಿಜಕ್ಕೂ ಇದೆಂತಹ ಮಾರ್ಮಿಕ ಚಿಂತೆ–ತಾರ್ಕಿಕ ಪ್ರಶ್ನೆ ! ಎಲ್ಲವೂ ಸಹಜ ಭಾಮಿನೀ ಲಯದಲ್ಲಿ. ಕನಕನನ್ನು ಖಂಡಿತ ಭಾಮಿನಿ ಒಲಿದಿದ್ದಾಳೆ !

೬

ಇಷ್ಟಾದರೂ ಕನಕದಾಸರ ಜಾನಪದ ಲಯವಿನ್ಯಾಸದ ಗತ್ತು ಗಮಕಗಳನ್ನು ಕಾಣಬೇಕಾದುದು, ಅವರಿಂದ ರಚಿತವಾದ ಹಾಡುಗಳಲ್ಲಿ. ಸಾಮಾನ್ಯವಾಗಿ ಎಲ್ಲ ಹಾಡುಗಳನ್ನೂ ಕೀರ್ತನಗಳು ಎಂದು ಹೆಸರಿಸಿಬಿಡುವುದು ವಾಡಿಕೆ. ಇದು ಸರಿಯಲ್ಲ. ಕೀರ್ತನ ಎಂಬ ನಿರ್ದಿಷ್ಟ ಪ್ರಕಾರಕ್ಕೆ ಖಚಿತವಾದ ಒಂದು ರೂಪವಿನ್ಯಾಸವಿದೆ. ಸಾಮಾನ್ಯವಾಗಿ ಕೀರ್ತನೆ ದೈವಸ್ತುತಿಯಾಗಿರುತ್ತದೆ. ಹಾಡಿಕೆಯೇ ಅದರ ಉದ್ದೇಶವಾದುದರಿಂದ ವಿಸ್ತಾರ ಕಡಿಮೆ. ಸಾಮಾನ್ಯವಾಗಿ ಮೂರು, ಐದು ನುಡಿಗಳು. ನುಡಿಗೆ ಮೊದಲು ಪಲ್ಲವಿ ಹಾಗೂ ಅನುಪಲ್ಲವಿ.

ಘನೀಭೂತವಾದ ಭಾವವೊಂದು ಪಲ್ಲವಿಯಲ್ಲಿ ಕಟ್ಟಿಕೊಳ್ಳುತ್ತದೆ. ಅನುಪಲ್ಲವಿ ಅದನ್ನು ಪೋಷಿಸುತ್ತದೆ. ಮುಂದಿನ ನುಡಿಗಳೂ ಈ ಭಾವವನ್ನು ಸೋದಾಹರಣವಾಗಿ ಸಮರ್ಥಿಸುತ್ತವೆ. ಕನಕನ ಹಲವಾರು ಹಾಡುಗಳು ಕೀರ್ತನೆಯ ವ್ಯಾಪ್ತಿಯನ್ನು ಮೀರುತ್ತವೆ. ಗ್ರಾಮೀಣರ ಕೋಲಾಟ. ಲಾವಣಿ, ತತ್ತ್ವ ಪದಗಳ ಹಾದಿಯಲ್ಲಿ ಸುದೀರ್ಘವಾಗಿ ಹರಿಯುತ್ತವೆ. ಅವೆಲ್ಲವೂ ಜಾನಪದ ಛಂದೋಲಯಗಳಿಂದ ಕೂಡಿರುವ ರಚನೆಗಳು. ಶಾಸ್ತ್ರೀಯ ಸಂಗೀತಕ್ಕೆ ಅಳವಡುವುದಿಲ್ಲ. ಕೀರ್ತನೆಗಳಲ್ಲಿ ತಾಳಬದ್ಧತೆ ಅನಿವಾರ್ಯ, ಸಾಮಾನ್ಯವಾಗಿ ಮಾತ್ರಾಗಣಕ್ಕೆ ಒಗ್ಗುತ್ತವೆ. ಅತಿದೀರ್ಘವಾಗಿರುವುದಿಲ್ಲ. ಕನಕದಾಸನ ಅಂಥ ಕೀರ್ತನೆಗಳು ಸಂಖ್ಯೆಯಲ್ಲಿ ಕಡಿಮೆ. ಆದರೆ ತತ್ವದಲ್ಲಿ ತುಂಬ ಹಿರಿದಾದವು. ಪ್ರಾಯಶಃ ಪುರಂದರದಾಸರ ಹಾಗೂ ಗುರು ವ್ಯಾಸರಾಯರ ಸಾನ್ನಿಧ್ಯದಿಂದ ಪ್ರೇರಿತವಾದವು. ಇವು ಸಂಗೀತ ರಚನೆಗಳೂ ಆಗಿರುವುದರಿಂದ ಕನಕನಿಗೆ ಸಂಗೀತಶಾಸ್ತ್ರ ಜ್ಞಾನವೂ ಇದ್ದಿರಬೇಕು. "ಪೂಸರ ಜನಕನೇ" ಎಂಬ ಭೂಪಾಳಿರಾಗದ ಕೀರ್ತನೆಯಲ್ಲಿ "ತ್ರಯದಶದ್ವಯರಾಗ" ಎಂಬ ಮಾತು ಬರುತ್ತದೆ. ೧೨ನೆಯ ಶತಮಾನದಿಂದಲೂ ಪ್ರಚಲಿತವಿದ್ದ ಬತ್ತೀಸರಾಗದ ಕಲ್ಪನೆ ಕನಕನಿಗಿರಬೇಕು. "ತಂಗದಿರನ ನಿಮಿಷ ನಿಮಿಷ ತಾರಕೆಗಳು" ಎಂಬ ಭೂಪರಾಗದ ಕೀರ್ತನೆಯಲ್ಲಿ ಭೂಪಾಳೀ, ದೇಶಾಕ್ಷಿ, ನಾರಾಯಣಿ, ಗುಜ್ಜರಿ ಮುಂತಾದ ರಾಗಗಳನ್ನೂ ಉಲ್ಲೇಖಿಸಲಾಗಿದೆ. ಅಲ್ಲದೆ ಸೂಳಾದಿ ತಾಳಗಳು ಎಂದೇ ಖ್ಯಾತವಾದ ಧ್ರುವ, ಮಠ್ಯ, ರೂಪಕ, ತ್ರಿಪುಟ, ಅಟ್ಟ, ಏಕ, ಆದಿ, ರಗಣ ತಾಳಗಳನ್ನೂ ಕನಕನು ತಿಳಿದಿರುವಂತೆ ತೋರುತ್ತದೆ. ಡಾ. ಸತ್ಯನಾರಾಯಣ ಅವರು ತಮ್ಮ ವಿದ್ವತ್‌ಪೂರ್ಣ ಪ್ರಬಂಧ ಒಂದರಲ್ಲಿ ಸರಿಯಾಗಿಯೇ ನುಡಿದಿರುವಂತೆ "....ಈ ಸಾಧನೆಯು ನಮ್ಮ ಸಂಗೀತದ ಶಾಶ್ವತ ಸಿದ್ಧಿಯಾಗಿ ಪರಿಣಮಿಸಿದೆ. ದೇಸೀ ತಾಳಗಳನ್ನು ಶಾಸ್ತ್ರೀಯ ಸಂಗೀತದಿಂದ ಕಿತ್ತೊಗೆದು ಸೂಳಾದಿ ತಾಳಗಳನ್ನು ಮಾತ್ರ ನಿಲ್ಲಿಸಿದರು... ಕನಕದಾಸರು ಹರಿದಾಸರ ಪ್ರಭಾವ, ಸ್ಫೂರ್ತಿಗಳ ನೆರಳಿನಲ್ಲಿ ತಮ್ಮ ವಾಗ್ಗೇಯಕಾರಕ ವ್ಯಕ್ತಿತ್ವವನ್ನು ಮೂಡಿಸಿಕೊಂಡವರು. ಅವರು ಸೂಳಾದಿ ತಾಳಗಳಲ್ಲಿ ಹಾಡುಗಳನ್ನು ರಚಿಸಿದ್ದು ಆಶ್ಚರ್ಯವಲ್ಲ." ('ಕನಕಕಿರಣ', ಪು. ೨೮೨). ಈ ರಾಗ ತಾಳಗಳ ವಿವೇಚನೆ ಸಂಗೀತ ಶಾಸ್ತ್ರಕ್ಕೆ ಸಂಬಂಧಪಟ್ಟುದು. ಈ ಲೇಖನಕ್ಕೆ ನೇರವಾಗಿ ಪ್ರಕೃತವಲ್ಲ. ಆದರೆ ಈ ವಿವರಗಳನ್ನು ಪ್ರಸ್ತಾಪಿಸಿರುವುದರ ಉದ್ದೇಶವೆಂದರೆ, ಉಳಿದ ಹರಿದಾಸರ ಮಾದರಿಯಲ್ಲಿ

ಕೆಲವಾದರೂ ಕೀರ್ತನಗಳನ್ನು ರಚಿಸಿರುವ ಕನಕನಿಗೆ ರಾಗ–ತಾಳ–ಲಯಗಳ ಜ್ಞಾನ ಹಾಗೂ ಸಂಗೀತ ಶಾಸ್ತ್ರದ ಪರಿಚಯ ಸಾಕಷ್ಟು ಇದ್ದಿತು ಎಂದು ಸೂಚಿಸುವುದು. ಆದರೂ ಸಂಗೀತ ರಚನೆ ಕನಕನ ಉದ್ದೇಶವಲ್ಲ, ಆದುದರಿಂದ ಆತ ವಾಗ್ಗೇಯಕಾರನಲ್ಲ–ದೇವರನಾಮ ಎಂದು ಖ್ಯಾತವಾದ ಸಾಕಷ್ಟು ಕೀರ್ತನಗಳನ್ನು ಆತನು ರಚಿಸಿರುವುದುಂಟು. ಇವುಗಳಲ್ಲಿ ಪಲ್ಲವಿ–ಅನುಪಲ್ಲವಿ–ನುಡಿಗಳು ಎಂಬ ಖಚಿತ ವಿಭಾಗಗಳಿದ್ದರೂ ಅನುಪಲ್ಲವಿಯನ್ನು ಕೈಬಿಟ್ಟಿರುವುದೇ ಹೆಚ್ಚು. ರಾ. ಸತ್ಯನಾರಾಯಣ ಅವರು ತೋರಿಸಿಕೊಟ್ಟಿರುವಂತೆ ೧೭೫ ಕೃತಿಗಳಲ್ಲಿ ೩೫ರಲ್ಲಿ ಮಾತ್ರ ಅನುಪಲ್ಲವಿಯಿದೆ. ಗೋಪಾಲದಾಸರು (೮೭–೬೬), ವಾದಿರಾಜರು (೫೯–೩೭) ಮುಂತಾದವರೊಡನೆ ಹೋಲಿಸಿದರೆ ಅನುಪಲ್ಲವಿ ಇಲ್ಲದಿರುವುದು ಕನಕನ ಕೃತಿಗಳ ವಿಶೇಷ ಸ್ವರೂಪವೆಂದೇ ತೋರುತ್ತದೆ. ನಿಜಗುಣಶಿವಯೋಗಿಯ ಕೃತಿಗಳೂ ಹೀಗೆಯೇ. ಅನುಭಾವ–ದೈವೀಶ್ರದ್ಧೆಯ ಕನಕನ ಕೃತಿಗಳಿಗೆ ಅವು ಮಾದರಿಯಾಗಿರಬಹುದೆಂದು ತೋರುತ್ತದೆ. ಮಾತ್ರಾಲಯಕ್ಕೆ ಅಳವಡುವುದರಿಂದ ತಾಳಬದ್ಧವಾಗಿ ಸಾಗುವ ಒಂದು ಕೀರ್ತನೆಯನ್ನು ಮಾದರಿಗಾಗಿ ನೋಡಬಹುದು :

> ಕಂಡೆನಾ, ತಂಡತಂ. ದಡಹಿಂಡ. ದೈವಪ್ರ
> ಚಂಡರಿಪು. ಗಂಡಉ. ದ್ದಂಡನರ. ಸಿಂಹನಾ ॥ ಪ ॥
> ಗುಡುಗುಡಿಸಿ. ಕಂಬದಲಿ. ಧಡಧಡಿಸಿ ಸಿಡಿಲುಸಿಡಿ
> ಕಿಡುಕಿಡಿಸೆ. ನುಡಿಯಡಗ. ಲೊಡನೆ. ಮುಡಿ. ವಿಡಿದು ॥ ಪ.ಗ ॥
> ಗಡಗಡನೆ. ನಡುನಡುಗೆ. ಗುಡುಗುಡಿಸಿ. ಸಭೆಬೆದರೆ
> ಹಿಡಿಹಿಡಿದು. ಹಿರಣ್ಯಕನ. ತೊಡೆಯಲ್ಲಿ. ಕೆಡಹಿದನ ॥

(ಇಂತಹ ಇನ್ನೆರಡು ನುಡಿಗಳಿಂದ ಕೀರ್ತನೆ ಮುಗಿಯುತ್ತದೆ.)

ಉತ್ಕಟ ರಸಾವೇಶ ಕನಕನ ಸ್ವಭಾವ. ಮೇಲಿನದು 'ತನ್ನ ಆರಾಧ್ಯದೈವ ನರಸಿಂಹನನ್ನು ಕುರಿತ ಕೀರ್ತನೆ. ವಸ್ತು ಅಭಿವ್ಯಕ್ತಿಯ ಸಾಮರಸ್ಯವನ್ನು ಕಾಣಬಹುದು. ಭಕ್ತಿಯ ಆವೇಶ ಪುಟಿಪುಟಿಯುತ್ತದೆ. ಐದೈದು ಮಾತ್ರೆಗಳ ಲಲಿತಲಯದಲ್ಲಿ ನೃಸಿಂಹಾವತಾರದ ರುದ್ರ ರಮಣೀಯ ಪ್ರಸಂಗ ಕಣ್ಣಿಗೆ ಕಟ್ಟುತ್ತದೆ. ಟ ವರ್ಗದ ಪರುಷಾಕ್ಷರದ (ಡ) ಸತತ ಅನುರಣನ ವೀರರಸಸ್ಯಂದಿಯಾಗಿದೆ. ಪಂಚಮಾತ್ರಾಲಯ ಝಂಪೆ ತಾಳಕ್ಕೆ ಒಗ್ಗುವಂತಹುದು. ನಾಟರಾಗ ಪ್ರಾಯಶಃ ಉಚಿತ. ಹಿಂದೆ ಸೂಚಿಸಿದಂತೆ ಈ ಕೀರ್ತನೆಯಲ್ಲಿ ಪಲ್ಲವಿ ಮಾತ್ರವಿದೆ. ಅನುಪಲ್ಲವಿಯಿಲ್ಲ. ನುಡಿಗಳ ಸಂಖ್ಯೆ ಪರಿಮಿತವಾಗಿದ್ದು,

ಹಾಡಿಗೆ ಅನುಕೂಲವೆನಿಸುತ್ತದೆ. ಸತತ ಆದಿಪ್ರಾಸ ಗಮನಾರ್ಹ. ಮೊದಲ ನುಡಿಯ ಎರಡನೆಯ ಪಾದದಲ್ಲಿ ಆಧುನಿಕ ಛಂದಸ್ಸಿನ ವಿವೇಚನೆಯಲ್ಲಿ ತೀನಂಶ್ರೀಯವರು ಸೂಚಿಸಿರುವ ಪದ್ಮಗಣವನ್ನು ಗುರುತಿಸಬಹುದು.

ಹೀಗೆಯೇ ಕನಕದಾಸನ ಕೀರ್ತನೆಗಳಲ್ಲಿ ನಾಲ್ಕು ಮಾತ್ರೆಗಳ ಮಂದಾನಿಲವನ್ನೂ ಮೂರು ಮಾತ್ರೆಗಳ ಉತ್ಸಾಹಲಯವನ್ನೂ ಕಾಣಬಹುದು. ಉದಾಹರಣೆಗಾಗಿ :

ನೆಟ್ಟನ. ದಾರಿಯ. ಬಟ್ಟೆಯೋ. ಳಿರುತಿರೆ
ಬೆಟ್ಟನ. ಬಳಲಿಸ. ಲಿನ್ನೇ. ಕಯ್ಯಾ ।
ಬೆಲ್ಲವ. ಕರದೊಳ. ಗಿರುತಿರೆ. ಕಾಡಿನ.
ಕಲ್ಲನು. ಕಡಿಯಲು ಏಕಯ್ಯ ।
ಬಲ್ಲಿದ. ಕಾಗಿನೆ. ಲೆಯಾದಿ. ಕೇಶವ
ಚಿಲ್ಲರೆ. ದೈವದ. ಹಂಬಲು. ಏಕಯ್ಯ ॥ ..ಇತ್ಯಾದಿ

ಮೂರು–ನಾಲ್ಕು ಮಾತ್ರೆಯ ಭಾಮಿನೀಲಯವನ್ನು ನೋಡಿ :

ಹಲವು. ದಾಸರ. ಮನೆಯ. ಹೊಲೆದಾ. ಸನಾನ. ಯ್ಯ
ಕುಲವಿ. ರದದಾ. ಸ ಕುನ್ನಿದಾಸ । [ಪು. ೧೩]

ಆದರೆ ಕನಕನಿಗೆ ಮೂರು ಮಾತ್ರೆಗಳ ಉತ್ಸಾಹಲಯದಲ್ಲಿ ಹೆಚ್ಚು ಅಭಿರುಚಿಯಿರುವಂತೆ ತೋರುತ್ತದೆ. ಆತನ ವಿಸ್ತಾರವಾದ ಕೃತಿಗಳಲ್ಲಿಯೂ ಮೂರು ಮಾತ್ರೆಯ ವಿನ್ಯಾಸವೇ ಅಧಿಕ. ಗಮನಿಸಬಹುದು :

ಈಶ. ನಿನ್ನ. ಚರಣ. ಭಜನೆ
ಆಶೆ. ಯಿಂದ. ಮಾಡು. ವೇನು.
ದೋಷ. ರಾಶಿ. ನಾಶ. ಮಾಡು. ಶ್ರೀಶ. ಕೇಶವ । [ಪು. ೩೭]

ಸಾವೇರಿರಾಗದಲ್ಲಿ ಸಾಮಾನ್ಯವಾಗಿ ಹಾಡುವ ಈ ಹಾಡು ೨೫ ನುಡಿಗಳಷ್ಟು ದೀರ್ಘಭೋಗಷಟ್ಪದಿಯ ವಿನ್ಯಾಸ ಇಲ್ಲಿದೆ. ಮೂಲ ಷಟ್ಪದಿಯು ಅಂಶಗಣಾನ್ವಿತವಾದದ್ದು ಎಂಬುದನ್ನು ಗಮನಿಸಿದರೆ ನಾಲ್ಕು ನಾಲ್ಕು ಬ್ರಹ್ಮಗಣಗಳ ಚತುಷ್ಪದಿಯಾಗಿ ಇದು ಪರಿವರ್ತಿತವಾಗಬಹುದು. ಕನಕನ ಹಾಡುಗಳ ಸಹಜ ಲಯ ಅಂಶಗಣಾನ್ವಿತವೇ ಎಂದು ತೋರುತ್ತದೆ. ಹಾಡಿನ ಜೇಕಿಗೆ ತಕ್ಕಂತೆ ಮಾಡು. ವೇನು. ಎಂದು ಎಳೆಯಬೇಕಾಗುತ್ತದೆ. ಕೇ. ಶವ. ಎಂದೋ ಕೇಶ. ವಾ. ಎಂದೋ ಜೇಕಿ ಹೇಳುವ ಸೌಕರ್ಯವೂ ಅಂಶಲಯದಲ್ಲಿ ಮಾತ್ರ ಸಾಧ್ಯ. ಈ ಉದಯರಾಗವನ್ನು ಕೀರ್ತನೆ ಎಂದು ಕರೆಯಲಾಗದಷ್ಟು

ಅದು ದೀರ್ಘವಾಗಿದೆ. ಕಥನಕವಿಯೂ ವರ್ಣಕ ಕವಿಯೂ ಆದ ಕನಕನಿಗೆ ಇಂಥ ಸುದೀರ್ಘ ರಚನೆಗಳೇ ಪ್ರಿಯವಾಗಿರುವಂತೆ ತೋರುತ್ತದೆ. ಅವುಗಳ ಸಂಖ್ಯೆಯೇ ವಿಪುಲ. ಅಂಶಲಯವೇ ಅಂಥಲ್ಲಿ ಸಹಜ. ಹೀಗಾಗಿ ಪುರಂದರ ಅಥವಾ ಇತರ ಹರಿದಾಸರ ಹಾಡುಗಳಂತೆ ಶಾಸ್ತ್ರೀಯ ಸಂಗೀತದ ಚೌಕಟ್ಟನ್ನು ಕನಕನ ಎಲ್ಲ ಕೃತಿಗಳ ಮೇಲೂ ಹೇರುವಂತಿಲ್ಲ ತಾಳ, ಡೋಲು, ಕಹಳೆ, ಡಪ್ಪ ಇಂತಹ ಜಾನಪದ ವಾದ್ಯ ವಿಶೇಷಗಳ ಹಿಮ್ಮೇಳದಲ್ಲಿಯೇ ಅವು ಹೆಚ್ಚು ಸೊಗಯಿಸುತ್ತವೆ. ಹೀಗಾಗಿ ಅಂಶ ಛಂದದ ಲಯವನ್ನೇ ಕನಕನ ಕೃತಿಗಳಲ್ಲಿ ಹೆಚ್ಚಾಗಿ ಗುರುತಿಸಲು ಸಾಧ್ಯ. ನೋಡಬಹುದು.

ತ್ರಿಪದಿ– : ಪಿಂಗಳ. ಕಣ್ಣಿನ. ಕೊಂಗಗಳ ಳನುಕೂಡಿ.
ಛಂಗನೆ. ಲಂಕೆಗೆ. ಪೋಗಿ । ನಮ್ಮರಂಗ
ಹೆಂಗಸು. ಗಳ್ಳನ. ಕೊಂದಾನ್ಮ್ಯಾ ।

ಈ ತ್ರಿಪದಿಯನ್ನು ಸಾಂಗತ್ಯವಾಗಿ ವಿಸ್ತರಿಸುವುದು ಪರಿಚಿತವೇ. ಆಗ ಈ ಛಂದೋರೂಪವು ಹೀಗೆ ಪರಿವರ್ತಿತವಾಗುತ್ತದೆ.

ಪಿಂಗಳ. ಕಣ್ಣಿನ. ಕೊಂಗಗ. ಳನು. ಕೂಡಿ
ಛಂಗನೆ. ಲಂಕೆಗೆ. ಪೋದಾನ್ಮ್ಯಾ ।
ಛಂಗನೆ. ಲಂಕೆಗೆ. ಪೋಗಿನ. ಮ್ಮರಂಗ
ಹೆಂಗಸು. ಗಳ್ಳನ. ಕೊಂದನ್ಮ್ಯಾ । [ಪು. ೮೬, ಕನಕದಾಸರ ಭಕ್ತಿಗೀತಗಳು]

**ಸಾಂಗತ್ಯ :** ನಾಲ್ಕು ಪಾದಗಳ ಸಾಂಗತ್ಯವಾಗಿಯೇ ರೂಪುಗೊಂಡ ನುಡಿಗೆ ಉದಾಹರಣೆ :

ಮೋರೆಕ. ಪ್ಪಿನಭಾವ, ಮೊರದಗ. ಲದಕಿವಿ ೪ ವಿ
ಕೋರೆದಾ. ಡೆಯನಾ. ರಮ್ಮ ೨ ವಿ. ಬ್ರ
ಮೂರುಕ. ಣ್ಣನಸುತ. ಮುರಿದಿಟ್ಟ. ಚಂದ್ರನ ೪ವಿ
ಧೀರತಾ. ಗಣನಾ. ಥನ್ನೆ ೨ ವಿ. ಬ್ರ [ಪು. ೫]

**ಅಂಶಗಣಾನ್ವಿತ ಸೀಸಪದ್ಯ** [ಪು. ೨೫]

ಕೆಸರೊಳು. ತಾವರೆ. ಪುಟ್ಟಲು. ಅದತಂದು. ೪. ವಿ
ಕುಸುಮನಾ. ಭನಿಗೆ. ಅರ್ಪಿಸ. ರೇನಯ್ಯ ವಿ. ಬ್ರ. ವಿ. ವಿ
ಪಶುವಿನ. ಮಾಂಸದೊ. ಳುತ್ಪತ್ತಿ. ಕ್ಷೀರವ
ವಸುಧೆಯೊ. ಳಗೆಭೂ. ಸುರರುಣ್ಣ. ರೇನಯ್ಯ । ವಿ. ಬ್ರ. ವಿ. ವಿ

ಸೀಸ ಪದ್ಯವು ಮಾತ್ರಾಗಣಾನ್ವಿತವೂ ಆಗಬಲ್ಲುದಷ್ಟೆ. ಆಗ ಅದರ ರಚನೆ ಹೀಗಿರುತ್ತದೆ :

| | |
|---|---|
| ಹಾವಹಿಡಿ. ಯಲು ಬಹುದು. ಹರಣ ನೀ. ಡಲುಬಹುದು | ೫ : ೫ : ೫ : ೫ : |
| ಬೇವಕಿ. ಚ್ಚನುಹಿಡಿದು. ನುಂಗಬಹು.ದು | ೫ : ೫ : ೫ : ಗು |
| ಭಾವೆಯತಂ, ದಮನೆಯಲಿ. ಜೀವಿಪುದ. ಕಿಂತಲೂ | ೫ : ೫ : ೫ : ೫ : |
| ಸಾವುದೇ. ಲೇಸು ಅಭಿ. ಮಾನಿಗಳಿಗೆ | ೫. ೫. ೫. ಗು |

## ೭

ಹೀಗೆ ಅಂಶ ಹಾಗೂ ಮಾತ್ರಾಲಯಗಳನ್ನು ಕನಕನ ಪದಗಳಲ್ಲಿ ತೋರಿಸ ಬಹುದಾದರೂ ಮುಖ್ಯವಾಗಿ ಅವು ಹಾಡುಗಬ್ಬಗಳು. ಶಿಥಿಲರಳಕುಳ ಸವಾಸದಿಂದ ಕೂಡಿದವು, ಅಲ್ಲದೆ ಅದು ದೇಸೀ ಛಂದಸ್ಸಿನಲ್ಲಿ ಪ್ರಯೋಗಯುಗ. ಅಂಶಛಂದಸ್ಸು ಮಾತ್ರಾಗಣವಾಗಿ ಪರಿವರ್ತಿವಾಗುತ್ತಿದ್ದ ಕಾಲ. ತ್ರಿಪದಿ ಸಾಂಗತ್ಯಕ್ಕೆ ತಿರುಗಿ ಸಾಂಗತ್ಯವೇ ಸ್ವತಂತ್ರ ಛಂದವಾಗುತ್ತಿದ್ದ ಕಾಲ, ಅಲ್ಲದೆ ಮುಂದೆ ಅವತರಿಸಿದ ಲಾವಣಿ ಕೋಲಾಟ ಬಂಧಗಳನ್ನು ಪ್ರಾಯಶಃ ಪ್ರಯೋಗಿಸಿ ನೋಡುತ್ತಿದ್ದ ಕಾಲ. ಸಂಗೀತದ ಪ್ರಭಾವ, ಗಾಢವಾಗಿ ಹರಿ ಕೀರ್ತನ ಪದ್ಧತಿ ಬೆಳೆಯುತ್ತಿದ್ದ ಕಾಲ. ಹೀಗೆ ತುಂಬ ಸಂಕೀರ್ಣ ಯುಗದ ರಚನೆಗಳಲ್ಲಿ ಭಾಗಿಯಾದ ಛಂದೋ ಬಂಧಗಳನ್ನು ನಿರೀಕ್ಷಿಸುವುದು ಸಾಧುವಲ್ಲ. ಹಾಡಿನ ಗತಿಯೇ ಮುಖ್ಯ ಮಾನದಂಡವಾದುದರಿಂದ ಪ್ರಾಸ–ಅನುಪ್ರಾಸ, ಅಂತರ್ಲಯಗಳಿಗೆ ಹೆಚ್ಚು ಒತ್ತು ಸಹಜವಾಗಿಯೇ ದೊರೆಯಿತು. ಕನಕದಾಸನಿಗಂತೂ ಕನ್ನಡದ ಆರು ಪ್ರಾಸ ಪ್ರಭೇದಗಳ ಅರಿವಿದ್ದಂತೆ ತೋರುತ್ತದೆ. ಅಜಪ್ರಾಸ ವಿನಹ ಉಳಿದೆಲ್ಲ ಪ್ರಭೇದಗಳೂ ಆತನ ರಚನೆಯಲ್ಲಿ ದೊರೆಯುತ್ತವೆ. ನೋಡಬಹುದು :

**ಸಿಂಹ :** ಜನಕನ ಮನೆಯಲ್ಲಿ........
ಧನುಸು ಮುರಿದಿ.........
ವನವು ಸೆದೆನೆಂದು.............
ವನಿತೆ ಮನದಿ ನೊಂದು......[ಪುಟ ೭]

**ಗಜ :** ಸೇತುವೆಯ ಕಟ್ಟಿ........
ಜಾತಲಂಕಾಧೀಶನ............
ಸೀತೆಯಸೆರೆಯ.........
ನಾಥಾದಿಕೇಶವಗೆ....

**ವೃಷಭ :** ಕಂಬದಲಿ ಬಂದ.......
ನಂಬಿರಲ್ಲದ.......
ಅಂಬರೀಷಗೆ........
ಡಂಭಕರ್ಮಿಯು... [ಪುಟ. ೮]

**ಹಯ :** ಕಲ್ಲಿನಲಿ ತಾ ಹುಟ್ಟಿ........
ಅಲ್ಲಿ ಆಹಾರವನು..........
ಬಲ್ಲಿದನು ಕಾಗಿನೆಲೆ..........
ಎಲ್ಲರನು ಸಲಹುವನು....[ಪು.೧೪]

**ಶರಭ :** ಅಲ್ಪದೊರೆಗಳ...............

ಬಲ್ಪಂಥ ವಿಲ್ಲದವನ..............

ಕಲ್ಪ ಕಲ್ಪಿತ.......

ಅಲ್ಪವೂ ನೆನೆಯದು........[ಪು. ೧೬]

ಒಳಪ್ರಾಸದ ಸೊಗಸು ಕನಕದಾಸನಲ್ಲಿ ಅಡಿಗಡಿಗೂ ಎಡೆತಾಗುತ್ತದೆ. ಗಮನಿಸಬಹುದು :

ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ... [ಪು. ೧೭]

ಅಡಿಗೆಯನ್ನು ಮಾಡಬೇಕು ಮಡಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ ಸಡಗರದಿ ಮನೆಯಸಾರಿಸಿ [ಪು. ೨೨]
ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಮನಸಿನ ಒಳಗೊ ಮನಸು ಜಿಹ್ವೆಯ ಒಳಗೊ
ಜಿಹ್ವೆ ಮನಸುಗಳೆರಡು ನಿನ್ನಳಗೊ ಹರಿಯೇ.... [ಪು. ೨೪]

ಛೇಕಾನುಪ್ರಾಸದ ಬೆಡಗು ಭಾವತೀವ್ರತೆಯನ್ನು ಉಂಟುಮಾಡುತ್ತ ಸಾರ್ಥಕವಾಗುವುದನ್ನು ಗಮನಿಸಬಹುದು ;

ಕುಲಕುಲಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರು ಬಲ್ಲಿರ । [ಪು. ೨೬]
ಘುಡುಘುಡಿಸಿ...ಧಡಧಡ...
ಕಿಡಿಕಿಡಿಸೆ...ಫಡಫಡ...
ಕಿಡಿಕಿಡಿಸೆ...ನಡುನಡುಗೆ...
ಪರಿಪರಿಯಲಿ....ಹರಿಹರಿದು...
ತರತರದಿ... [ಪು. ೪೫]

ಅಂತ್ಯಪ್ರಾಸದ ಚೆಲುವಿಗೂ ಕೊರತೆಯಿಲ್ಲ :

ವನ ಉಪವನಗಳಿಂದ
ಘನಸರೋವರಗಳಿಂದ
ಕನಕಗೋಪುರಗಳಿಂದ
...
ನಾಗಶಯನನ ಮೂರುತಿ ಕಂಡೆ

ಭೋಗಿಭೂಷಣ ಶಿವನನು ಕಂಡೆ
ಭಾಗವತರ ಸಮ್ಮೇಳವ ಕಂಡೆ
ಕಾಗಿನೆಲೆಯಾದಿಕೇಶವ... [ಪು. ೨೦]

ಮೊದಲ ಉದಾಹರಣೆಯಲ್ಲಿ ಅಯತ್ನವಾಗಿ ಅಂತ್ಯಯಮಕವೂ ಸಿದ್ಧಿಸಿದೆ.

೮

ಈ ಪ್ರಾಸಾನುಪ್ರಾಸದ ಬೆಡಗನ್ನು ವಿಶೇಷವಾಗಿ ಆತನ ಗ್ರಾಮೀಣ ರಚನೆಗಳಲ್ಲಿ ಎಂದರೆ ಕೋಲಾಟ-ತತ್ವಪದಗಳನ್ನು ಹೋಲುವ ಕೃತಿಗಳಲ್ಲಿ ಕಾಣಬಹುದು. ಕನಕನ ಜೀವಸ್ವರ ಕೇಳಬರುವುದು ಅಲ್ಲಿಯೇ. ಕೀರ್ತನೆ ಎಂಬ ವ್ಯಾಪ್ತಿಗೆ ಒಳಪಡದ ಈ ಕೃತಿಗಳು ಶಾಸ್ತ್ರೀಯ ಸಂಗೀತದ ರಚನೆಗಳಂತೂ ಅಲ್ಲ. ಗ್ರಾಮೀಣರ ಉದಯ ಗೀತೆಗಳು, ಉತ್ಸವ ಗೀತಗಳು. ಅಂಥಲ್ಲಿ ಅಂಶಲಯವೇ ಅತಿ ಸಹಜವಾದದ್ದು. ಅಲ್ಲದೆ ದೇಸೀಪದಗಳ ಅನಾಯಾಸವಾದ ಬಳಕೆ ಅಲ್ಲಿ ಎದ್ದು ತೋರುತ್ತದೆ. ಅಂಶವು-ಮಾತ್ರೆಗೆ ತಿರುಗುತ್ತಿದ್ದ ಪರಿವರ್ತನ ಕಾಲದಲ್ಲಿ ಕನಕನು ಇದ್ದುದು ನಿಜ. ಆತನ ಕೆಲವು ಕೃತಿಗಳಲ್ಲಿ ಮಾತ್ರಾಲಯ ಹಾಗೂ ಅಂಶಲಯುಗಳೆರಡೂ ಅಳವಡುವುದೂ ಸುಳ್ಳಲ್ಲ. ಆದರೆ ಪ್ರಯತ್ನಪೂರ್ವಕವಾಗಿ ಮಾತ್ರಾಲಯಕ್ಕೆ ತೊಡಗಿರುವುದಕ್ಕಿಂತ ಅಂಶಲಯದ ಜಾಡನ್ನೇ ಹಿಡಿದು ಹೊರಡುವುದು ಉತ್ತಮ. ೧೧, ೨೫ ರಷ್ಟು ನುಡಿಗಳ ಸುದೀರ್ಘಗೀತಗಳನ್ನು ಮಾತ್ರಾಗಣದ ಸಂಗೀತರಚನೆಗಳೆಂದು ಕರೆಯುವುದಕ್ಕಿಂತ ಜಾನಪದ ಗೀತಗಳೆಂದೇ ಪರಿಭಾವಿಸಬೇಕು.

ತಾಳದಂಡಿಗೆ ಶೃತಿ ಮೇಳ ತಂಬೂರಿಗೊಂಡು
ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ।
ಹಳ್ಳದಲ್ಲಿ ಕುಳಿತುಕೊಂಡು ಕಲ್ಲುದೊಣ್ಣೆ ಹಿಡಿದುಕೊಂಡು
ಕಳ್ಳತನವ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ । [ಪು. ೧೭]

ಇಂತಹ ನುಡಿಗಳನ್ನು ನಗರದ ಬದುಕಿನ ಶಿಷ್ಟಕವಿ ನಿಜಕ್ಕೂ ಲೀಲಾಜಾಲವಾಗಿ ಹೆಣೆಯಲಾರ. ಜಾನಪದ ಬದುಕಿನಿಂದ ನೇರವಾಗಿ ಎದ್ದುಬಂದ ಕನಕನ ಕೃತಿಗಳಲ್ಲಿನ ಜಾನಪದ ಲಯವನ್ನು ಈಗ ಕೊಂಚ ವಿರಲವಾಗಿ ನೋಡಬಹುದು. "ಈಶ ನಿನ್ನ ಚರಣ ಭಜನೆ" ಎನ್ನುವ ಸವಿಸ್ತಾರವಾದ ಗೀತೆ ಒಂದು ಉತ್ತಮ ಉದಾಹರಣೆಯಾಗಬಲ್ಲದು. ಹಳ್ಳಿಗರು ಹಾಡುವ ಉದಯಕಾಲದ ಮನೆಯವಾಳ್ತೆಯ ಗೀತದಂತೆ ಇದು ರಂಜಿಸುತ್ತದೆ. ಇದು ಕಛೇರಿಯ ಸಂಗೀತವಾದ್ಯಗಳಿಗೆ ಒಗ್ಗುವ ಸಂಗೀತರಚನೆಯಂತೂ ಅಲ್ಲ.

ಭಕ್ತಿಪರವಾದ ಉದಯಗೀತೆಗೆ ತಕ್ಕ ಅಂಶಲಯ ಇಲ್ಲಿದೆ. ತಾಳ ಬದ್ಧವಾಗಿದೆ. ('ಜನಪ್ರಿಯ ಕನಕ ಸಂಪುಟ'ದ ೩೭ನೆ ಪುಟ)

ಅಡಿಗೆಯನು ಮಾಡಬೇಕಣ್ಣ । ನಾನೀಗ ಸುಜ್ಞಾನ
ದಡಿಗೆಯನು ಮಾಡಬೇಕಣ್ಣ ।
ಅಡಿಗೆಯನು ಮಾಡಬೇಕು । ಮಡಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ । ಸಡಗರದಿ ಈ ಮನೆಯ ಸಾರಿಸಿ । [ಪು. ೨೨]

ಇಲ್ಲಿಯು ಲಯು ನಾಲ್ಕು ಅಂಶಗಳ ರುದ್ರಗಣದ್ದು. ಪಲ್ಲವಿ ಅನುಪಲ್ಲವಿಗಳಿವೆ ಎಂದ ಮಾತ್ರಕ್ಕೆ ಕೀರ್ತನೆಯ ಸಾಲಿಗೆ ಸೇರುವುದಿಲ್ಲ.

ಅಡಿಗೆಯನು : ಮಾಡಬೇ : ಕಣ್ಣ । ನಾನೀಗಸು : ಜ್ಞಾನ
ದಡಿಗೆಯನು : ಮಾಡಬೇ : ಕಣ್ಣ ।

ಅಡಿಗೆಯನು ಎಂಬುದನ್ನು ಅಡಿಗೆಯನ್ನು ಎಂದು ಒತ್ತುವುದು ಮಾತ್ರಾಗಣದಲ್ಲಿ ಸಾಧ್ಯವಲ್ಲ. ಪಲ್ಲವಿಯ ಸಾಲುಗಳನ್ನು ಪುನರುಚ್ಚರಿಸುತ್ತಾ ಸಾಗುವ ಹಾಡು ತತ್ತ್ವಪದದ ಧಾಟಿಯದು ಏಕನಾದದ ಶ್ರುತಿಯಲ್ಲಿ, ತಾಳಕ್ಕೆ ತುಂಬ ಹಿತವಾಗಿ ಒಗ್ಗುತ್ತದೆ. ಒಳಪ್ರಾಸದ ಬಾಹುಳ್ಯ ತಾಳದ ಗತ್ತನ್ನು ಎತ್ತಿ ತೋರುತ್ತದೆ. ನೋಡಿ :

'ತತ್ವಭಾಂಡವ ತೊಳೆಯಬೇ ಕಣ್ಣ । ಸತ್ಯಾತ್ಮನಾಗಿ
ಅರ್ತಿ ಅಕ್ಕಿಯ ಮಥಿಸಬೇಕಣ್ಣ ।
ಕತ್ತರಿಮನವೆಂಬ ಹೊಟ್ಟನು ಎತ್ತಿ ಒಲೆಗೆ ಹಾಕಿ ಇನ್ನು
ಹೊತ್ತಿಕೊಂಡಿಹ ಮಮತೆಯನ್ನು ಎತ್ತಿ ಹೆಸರ ಹಿಂಗಿಸುತಲಿ ।

ರೂಪಕವೂ ಜಾನಪದ ಬದುಕಿನಿಂದ ನೇರವಾಗಿ ಎತ್ತಿಕೊಂಡದ್ದು. ತೊಳೆ, ಹಿಂಗಿಸು, ಹೊಟ್ಟು, ಒಲೆ, ಎಲ್ಲವೂ ಬದುಕಿನ ಭಂಡಾರದ ನಾಣ್ಯಗಳು (ಪು. ೨೨, ಜ.ಕ.ಸಂ).

ಡಿಂಬಿನೊಳು : ಪ್ರಾಣವಿರಲು : ಕಂಬಸೂತ್ರ : ಬೊಂಬೆಯಂತೆ :
ಎಂದಿದ್ದರೊಂ : ದುದಿನ ಸಾವು ತಪ್ಪ : ದು

ಡಿಂಬಿನೋಳು ಎಂದು ಎಳೆದು ಹೇಳುವುದು ವಾಡಿಕೆ. ಕಡೆಯಲ್ಲೂ ಲಂಬಿಸಿ ಹಾಡುವುದರಿಂದ ಸೊಗಸು ಹೆಚ್ಚುತ್ತದೆ. ಈ ಹಾಡಿನ ಒಂದು ನುಡಿಯಂತೂ ತುಂಬ ಭಾವಪೂರ್ಣವಾಗಿ ತನ್ನ ಧ್ವನಿರಮ್ಯತೆಯಿಂದ ಮನಸ್ಸನ್ನು ಕಚ್ಚಿ ಬಿಡುತ್ತದೆ. ಒಳಪ್ರಾಸದ ನುಡಿಕೆಗಳು ತುಂಬ ತಾಳ ಬದ್ಧವಾದವು. ನೋಡಿ:

ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು

ಅಳ್ಳಾಚಾರಿ ಬೊಂಬೆಯಂತೆ ಆಡಿಹೋಯಿತು
ಹಳ್ಳಹರಿದು ಹೋಗುವಾಗ ನೀರಗುಳ್ಳೆ ಒಡೆಯುವಂತೆ
ಉಳ್ಳಿ ಪೊರೆಯಂತೆ ಕಾಣೊ ಸಂಸಾರದಾಟವು । [ಪು. ೬೯]

ಪದಪುಂಜಗಳು ಪೂರ್ಣ ಗ್ರಾಮೀಣ. ಬೆಳ್ಳಿ ಬಂಗಾರ–ಒಳ್ಳೆವಸ್ತ್ರ–ನೀರಗುಳ್ಳೆ–ಉಳ್ಳಿ ಪೊರೆ–ಇತ್ಯಾದಿ. ಸಂಸಾರದಾಟವನ್ನು ಬೊಂಬೆಯಾಟಕ್ಕೆ ಹೋಲಿಸಿರುವುದು ತುಂಬ ಅರ್ಥಪೂರ್ಣ. ರುದ್ರಗಣಗಳ ಆಧಿಕ್ಯವಿರುವ ಈ ಹಾಡಿನಲ್ಲಿ ಹೆಣ್ಣು : ಹೊನ್ನು : ಮಣ್ಣು : ಮೂರು : (೨) ಎಂಬಲ್ಲಿ ತುತ್ತು ತೂಗಿದಂತೆ ಎತ್ತಿ ಆಡಿಸಿದಂತೆ ಬೆರಳು ಮಾಡಿ ಮಾಡಿ ಎಣಿಸಿದಂತೆ ಬ್ರಹ್ಮಗಣಕ್ಕೆ ಹೊಂದಿಸಿರುವುದೂ ಚೆಲುವಾಗಿಯೇ ಇದೆ.

ಕೋಲಾಟದ ಪದವನ್ನೇ ಹೋಲುವ ಈ ಪ್ರಸಿದ್ಧಗೀತವನ್ನು ನೋಡಬಹುದು :

ಊರಿಗೆ ಬಂದರೆ ದಾಸಯ್ಯ ನಮ್ಮ ।
ಕೇರಿಗೆ ಬಾ ಕಂಡ್ಯ ದಾಸಯ್ಯ । [ಪು. ೬೬]

ಇಲ್ಲಿಯ ನಿಯತ ವಿಷ್ಣುಗಣಗಳು ಮೊದಲ ಪಾದದ ಅಂತ್ಯದಲ್ಲಿ ಮುಂದಿನ ಸಾಲಿನ ಸೊಲ್ಲನ್ನು ಎತ್ತಿ ಕೊಡುವ ಬ್ರಹ್ಮಗಣ [ನಮ್ಮ] ಗಮನಾರ್ಹ. ಈ ಪಲ್ಲವಿಯ ನಂತರ ನಾಲ್ಕು ಪದದ ಮೂರು ನುಡಿಗಳು. ಅಲ್ಲಿಯೂ ಇದೇ ವಿನ್ಯಾಸ. ಮಾದರಿಗೆ ನೋಡಿ :

ಕೊರಳೊಳು : ವನಮಾಲೆ : ದಾಸಯ್ಯ : ಬಲು
ಗಿರಿಯನು : ನೆಗಹಿದ : ದಾಸಯ್ಯ ।
ಇರುಳು ಹ : ಗಲುನಿನ್ನ : ಕಾಣದೆ : ಇರಲಾರೆ
ಮರುಳು : ಮಾಡು : ವಂಥ : ದಾಸಯ್ಯ [ಬ : ಬ್ರ : ಬ್ರ : ವಿ]

ಪುನಃ ಪುನಃ ಅನುರಣನವಾಗುವ ದಾಸಯ್ಯ ಎಂಬ ನುಡಿ ಕೋಲಾಟದ ಗತ್ತಿಗೆ ಹೊಂದಿಕೊಳ್ಳುವಂತಹುದು.

ಕನಕದಾಸರ ಜನಪ್ರಿಯ ಗೀತೆಗಳಲ್ಲಿ ಒಂದಾದ ಈ ಲಾವಣಿಯನ್ನು ಗಮನಿಸಬಹುದು [ಪು. ೩೨] :

ಡೊಂಕು ಬಾಲದ ನಾಯಕರೆ ಬ್ರ : ವಿ : ರು
ನೀವೇನೂಟವ ಮಾಡಿದಿರಿ ? ಬ್ರ : ವಿ : ರು

ಪಲ್ಲವಿಯಲ್ಲಿ ಬ್ರ : ವಿ : ರು : ಗಣ ಪ್ರಯೋಗ ಕುತೂಹಲವನ್ನುಂಟು ಮಾಡುತ್ತದೆ. ಪ್ರಾಯಶಃ ತಾಳದ ಪೆಟ್ಟಿಗೆ ಒಗ್ಗುವಂತೆ ಮುಂದಿನ ನುಡಿಗಳಲ್ಲಿ

ಬ್ರಹ್ಮಗಣದ ಆಧಿಕ್ಯವನ್ನು ಗಮನಿಸಬಹುದು.

ಕಣಕ ಕುಟ್ಟೋ ಅಲ್ಲಿ ಹೋಗಿ
ಹಣಿಕಿ ಇಣಿಕಿ ನೋಡು ವಿಠಿ
ಕಣಕ ಕುಟ್ಟೋ ಒನಕಿಲಿ ಹೊಡೆದರೆ ಬ್ರ : ಬ್ರ : ವಿ : ವಿ
ಕುಂಯಿ ಕುಂಯಿ ರಾಗ ಹಾಡು ವಿಠಿ

ಇತ್ಯಾದಿ.

ಕನಕನ ಕುಲದೇವರು ಬೀರೇದೇವರು. ಈ ಮಾತನ್ನು ಅವರೇ ಹೇಳಿಕೊಂಡಿದ್ದಾರೆ. ಅಲ್ಲದೆ ದ್ಯಾವಮ್ಮ, ಮುತ್ಯಾಲಮ್ಮ, ಎಲ್ಲಮ್ಮ ಮುಂತಾದ ಗ್ರಾಮ ದೇವತೆಯರ ಉತ್ಸವಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಂತೆ ತೋರುತ್ತದೆ. ತಿರುಪತಿ ದೇವರ ವಕ್ಕಲಾದ ಮೇಲೆ ಪ್ರಾಯಶಃ ಈ ದೇವಿಯರನ್ನು ವೆಂಕಟೇಶ್ವರನ ತಂಗಿಯರೆಂದು ಹೃದಯಂಗಮವಾಗಿ ಕಲ್ಪಿಸಿಕೊಂಡರು. ಈ ಸಂದರ್ಭದಲ್ಲಿ “ದೇವಿ ನಮ್ಮ ದ್ಯಾವರು ಬಂದರು ಬನ್ನಿರೆ : ಎಂಬ ಹಾಡು ತುಂಬ ಕುತೂಹಲ ಉಂಟು ಮಾಡುತ್ತದೆ. ಬಾಡ ಕನಕದಾಸರ ಹುಟ್ಟೂರು ಅಲ್ಲಿಗೆ ತೀರ ಸಮೀಪದಲ್ಲಿ ಬಂಕಾಪುರ ಪ್ರಸಿದ್ಧ ಕಾರಣಿಕ ಕ್ಷೇತ್ರ. ಅಲ್ಲಿಯ ಜಾತ್ರೆ–ಉತ್ಸವಗಳಲ್ಲಿ ಡೊಳ್ಳಿನ ಹಾಡುಗಳ ಪರಿಚಯ ಅವರಿಗೆ ಇದ್ದಿರಲೇಬೇಕು. ಅಂಥ ಹಾಡಿನ ಧಾಟಿಯಲ್ಲಿ ರಚಿತವಾದ ಅಪ್ಪಟ ಗ್ರಾಮೀಣ ಗೀತೆ ಇದು– ಡೊಳ್ಳಿನ ತಾಳ–ಲಯ–ಧಾಟಿ.

ದೇವೀ ನಮ್ಮ ದ್ಯಾವರು ಬಂದರು ಬನ್ನೀರೆ ।
ಕೆಂಗಣ್ಣ ಮೀನನಾಗಿ । ನಮ ರಂಗ
ಗುಂಗಾಡಿ ಸೋಮನ ।ಕೊಂದಾನ್ಯಾ ।
ಗುಂಗಾಡಿ ಸೋಮನ ಕೊಂದು ವೇದವ ।
ಬಂಗಾರದೊಡಲನಿಗಿತ್ತಾನ್ಯಾ ॥ [ಪು. ೨೭]

ವಿಷ್ಣುವಿನ ದಶಾವತಾರಗಳನ್ನು ಗ್ರಾಮೀಣರು ಹಾಡುವ ಭಂಗಿ ಇದು. ಕೊಂದಾನ್ಯಾ । ಮಾಡ್ಯಾನ್ಯಾ । ಕೊಟ್ಟಾನ್ಯಾ । ಇವು ಶುದ್ಧ ದೇಸಿಯಗತ್ತು. ಗುಂಗಾಡಿ. ಗುಡ್ಡ. ಪುಟ್ಟಿಗೆ, ಆವು, ಕೊಂಗ, ಬಿಂಕ, ಭಂಡ ಮುಂತಾದ ಗ್ರಾಮೀಣ ಪದಗಳು ಹಾಡಿಗೆ ಚೆಲುವು. ಕಲ್ಕಿಯ ವಾಹನ ಕುದುರೆ ಎಂಬುದು ವೈದಿಕ ಪುರಾಣದ ಕಲ್ಪನೆ. ಆದರೆ “ಚೆಲುವೆ ಹೆಂಡತಿ ಕುದುರೆ ಮಾಡಿ । ಒಳ್ಳೆ ರಾವುತನಾದಾನ್ಯಾ ।” ಎಂಬುದು ಹಳ್ಳಿಗರ ಚೆಲುವಿನ ಕಲ್ಪನೆಯೇ ಸರಿ. ಈ ಹಾಡಿನ ಕಡೆಯ ನುಡಿ ಇಡಿಯ ಗೀತದ ತಾಳದ ಗತ್ತನ್ನು ಸೂಚಿಸಿ ತೋರುತ್ತದೆ.

ಡೋಳಿನ ಮೇಲ್ಕೈ ಬರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಟ್ಯಾನ್ಯಾ
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ಯಾ । [ಅದೇ]

ಇದು ಡೋಲು ಬಡಿಯುತ್ತಾ ತಾಳ ತಟ್ಟುತ್ತಾ ಕುಣಿದು ಹಾಡಿದ ಪದವೇ ಸರಿ.

"ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ
ತುತ್ತು ಹಿಟ್ಟಿಗಾಗಿ ।" [ಪು. ೧೭]

ಈ ಹಾಡಿನ ಜಾನಪದ ಗತ್ತನ್ನು ಗಮನಿಸಬಹುದು. ಮುಖ್ಯವಾಗಿ ಇದು ಹನ್ನೊಂದು ದ್ವಿಪದಿಗಳಿಂದ ಕೂಡಿದ ಲಾವಣಿಯೇ ಸರಿ. ಹೊಟ್ಟೆಗಾಗಿ । ಗೇಣು । ಬಟ್ಟೆಗಾಗಿ । ತುತ್ತು । ಹಿಟ್ಟಿಗಾಗಿ । ಇವು ತಾಳದ ಛಾಪನ್ನು ಚೆನ್ನಾಗಿ ತೋರುತ್ತವೆ. ಪುನರುಕ್ತಿಯಿಂದ ಹಾಡು ಇನ್ನೂ ಸೊಗಸುತ್ತದೆ. ತಾಳ ಕುಟ್ಟಲು ಬ್ರಹ್ಮಗಣಗಳ ಆಧಿಕ್ಯ ಅಗತ್ಯ. ಶಾಸ್ತ್ರ । ಓದಿ । ಕೊಂಡು ವೇದ । ಬೋಧ । ನೇಯ । ಮಾಡು । ವುದು... ಹೀಗೆ ತಾಳದ ಗತಿ. ಹಾಗೆಯೇ

ಕುಂಟೆ । ತುದಿಗೆ । ಕೊರಡು । ಹಾಕಿ । ಹೆಂಟೆ । ಮಣ್ಣು । ಸಮವ । ಮಾಡಿ । ...

ಅಲ್ಲದೆ ಈ ಹಾಡಿನಲ್ಲಿ ಅಪ್ಪಟ ಜಾನಪದೀಯ ಶಬ್ದಗಳನ್ನು ಸಮೃದ್ಧವಾಗಿ ಕಾಣಬಹುದು. ಗೇಣು। ಕುಂಟೆ। ರೆಂಟೆ। ಹೆಂಟೆ। ಮಣ್ಣು। ಬೊಗಳಿ। ಕೊಟ್ಟಣ। ಕಟ್ಟಿಗೆ। ದಂಡಿಗೆ। ಸೂಳೆ। ಜಂಗಮ ಜೋಗಿ। ಕಲ್ಲು ದೊಣ್ಣೆ । ಅಂದಣ ಪಲ್ಲಕ್ಕಿ ।......ಒಂದೇ ? ಎರಡೆ ? ಮಣ್ಣಿನ ವಾಸನೆ ಗಾಢವಾಗಿ ತಟ್ಟುವ ಅಪ್ಪಟ ದೇಸೀ ಹಾಡು ಇದು–ಲಾವಣಿಯ ಗತ್ತಿನದು. 'ಅಡಿಗೆಯನು ಮಾಡಬೇಕಣ್ಣಾ' ಎಂಬ ತತ್ತ್ವ ಪದದಲ್ಲಿಯೂ ಜಾನಪದದ ಛಾಪುತಾಳವೇ ಸುಶ್ರಾವ್ಯವಾಗುತ್ತದೆ. ಸಾಮಾನ್ಯವಾಗಿ ಹಳ್ಳಿಯ ಬದುಕಿನ ಪರಿಸರದ ಪದಗಳೇ ಗುಯ್‌ಗುಟ್ಟುತ್ತವೆ. ಒನಕೆ, ಭಾಂಡ, ಹೊಟ್ಟು, ಸೊಂಡಿಗೆ, ಕಟ್ಟಳೆ ಇತ್ಯಾದಿ. ಲಾವಣಿಕಾರರು ಬಳಸುವ ಡಪ್ಪುವಾದ್ಯ ಇದಕ್ಕೆ ತುಂಬ ಉಚಿತವಾದ ತಾಳವಾದ್ಯ.

೬

ಇಲ್ಲಿ ಉದಾಹರಿಸಿರುವ ಪದಗಳಲ್ಲಿನ ಗ್ರಾಮೀಣ ಶಬ್ದಗಳನ್ನು ಸಮೃದ್ಧವಾಗಿ ಉಲ್ಲೇಖಿಸುವ ಉದ್ದೇಶವೆಂದರೆ ಕನಕದಾಸರ ಕೀರ್ತನೆಗಳೊಂದಿಗೆ–ಅಲ್ಲಿ ಬಳಸಲಾದ ಶಬ್ದಗಳೊಡನೆ ಹೋಲಿಸಿ

ನೋಡುವುದು. ವ್ಯಾಸರಾಯರ ಪ್ರಭಾವವಲಯದಲ್ಲಿ ಬೆಳೆದು ಪುರಂದರ ದಾಸರ ಮಾದರಿಯಲ್ಲಿ ಕನಕದಾಸ ಕೀರ್ತನೆಗಳನ್ನು ರಚಿಸಲು ಹೊರಟಾಗ ಹಾಡಿನ ಲಯ ಹಾಗೂ ಬಳಸುವ ಭಾಷೆ ಎರಡೂ ಗ್ರಾಮೀಣ ಗತ್ತನ್ನು ಕಳಚಿಕೊಳ್ಳುತ್ತದೆ. ಬಹುಮಟ್ಟಿಗೆ ನಗರೀಕರಣಗೊಳ್ಳುತ್ತದೆ. ಸಂಸ್ಕೃತೀಕರಣಗೊಳ್ಳುತ್ತದೆ. ವೇದಾಂತದ ಪ್ರೌಢ ಪರಿಭಾಷೆಗೆ ತೆಕ್ಕೆ ಬಿದ್ದು ಬಿಡುತ್ತದೆ. ಕವಿತೆ ನಯಗೊಳ್ಳುವುದು ನಿಜ. ಆದರೆ ಮಣ್ಣಿನ ಸೊಗಡೂ ಮಾಯವಾಗಿ ಬಿಡುತ್ತದಲ್ಲವೆ ? ಉದಾಹರಣೆಗೆ ನೋಡಬಹುದು ; (ಪು. ೪೧–ಕನಕದಾಸರ ಭಕ್ತಿಗೀತಗಳು)

ಸುರುಚಿರೋಜ್ವಲಪೀತವಾಸನಿಗೆ ಉಡುಗೊರೆಯ
ಅರಿವೆ ಏನನು ಪೊದಿಸಲಿ ?
ವರ ಕೌಸ್ತುಭವು ಕೊರಳಿನೊಳಗೆ ಇಪ್ಪವಗೆ ಆ
ಭರಣವಾವುದು ತೊಡಿಸಲಿ ?
ತರಣಿಶತಕೋಟಿ ತೇಜದಮುಂದೆ ಹೇಗೆ ನಾ
ಪೆರತೊಂದು ದೀಪವಿಡಲಿ ? ... ಇತ್ಯಾದಿ

ಆದರೆ ಈ ಗೀತದ ಉದ್ದಕ್ಕೂ ಫಣಿರಾಜ । ಶತಪತ್ರ । ವನಜಜಾಂಡವ । ಅನಿಮಿಷ । ವಿನತೆಯಾತ್ಮಜಪಕ್ಷ । ಅಣುರೇಣು । ನಿಗಮತತಿ । ಷೋಡಶೋಪಚಾರ ಪೂಜಾ । ನಿಗಮ ಶಾಸ್ತ್ರ ನವವಿಧ ಭಕ್ತಿ.... ಇಂತಹ ವೈದಿಕ ಶಬ್ದ ಸಂದೋಹದ ವಿಜೃಂಭಣೆಯೇ. ಕನಕದಾಸನ ಸಾಹಿತ್ಯದ ಈ ತಿರುವಿನಿಂದ ಆದ ಲಾಭ ನಷ್ಟಗಳ ಜಿಜ್ಞಾಸೆ ತುಂಬ ಕುತೂಹಲ ಉಂಟುಮಾಡುತ್ತದೆ.

## ೧೦

ಛಂದಸ್ಸು ಕೇವಲ ಗಣಿತದ ಲೆಕ್ಕಾಚಾರವಲ್ಲ. ಭಾವಾಭಿವ್ಯಕ್ತಿಯ ಸಹಜವಾಹಕ ಎಂಬ ಅಂಶವನ್ನು ಈಗಾಗಲೇ ಸ್ಪಷ್ಟಪಡಿಸಿದೆ. ಆದರೆ ಅದು ಕಾವ್ಯಶಾಸ್ತ್ರದ ಒಂದು ಅಂಗವೂ ಆದುದರಿಂದ, ಕವಿಗೆ, ವ್ಯುತ್ಪತ್ತಿಯ ಪ್ರಶ್ನೆಯೂ ಎದುರಾಗುತ್ತದೆ. ಹೀಗಾಗಿ ಯಾವುದೇ ಕವಿಯ ಛಂದೋಲಯಗಳ ಪರಿಶೀಲನೆಯಿಂದ ಆತನ ಪ್ರತಿಭೆ ಹಾಗೂ ಪಾಂಡಿತ್ಯದ ಪರಿಚಯ ಸಹಜವಾಗಿಯೇ ಆಗುತ್ತದೆ. ಈಗಾಗಲೇ ಕೈಗೊಂಡ ಅಂಥ ಪರಿಶೀಲನೆಯಿಂದ ಕನಕದಾಸನ ಕಾವ್ಯದ ಛಂದೋಲಯಗಳು ಆತನ ಬಹುಮುಖ ಪಾಂಡಿತ್ಯ ಹಾಗೂ ಸಹಜ ಪ್ರತಿಭೆಯ ಸಹಾಯಕವಾಗುತ್ತವೆ. ಕೆಳಗಣ ತೀರ್ಮಾನಗಳನ್ನು ಪ್ರಾಯಶಃ ಒಪ್ಪಬಹುದು :

೧. ಕನಕದಾಸನು ವಿದ್ಯಾವಂತನಲ್ಲದ ಗ್ರಾಮೀಣ ವ್ಯಕ್ತಿ. ವ್ಯಾಸರಾಯ ಮುಂತಾದವರ ಆಶ್ರಯ ದೊರೆತಮೇಲೆಯೇ ಆತನಿಗೆ ಕಾವ್ಯಸಿದ್ಧಿಯಾಯಿತು ಎಂಬಂಥ ಕತೆಗಳು ಸರಿಯಲ್ಲ. ಇದು ಸಂಪೂರ್ಣವಾಗಿ ತಪ್ಪು ಅಭಿಪ್ರಾಯ, ಮಧ್ವಸಿದ್ಧಾಂತದ ಪರಿಚಯಕ್ಕೆ ಮೊದಲೇ ಆತನು 'ಮೋಹನ ತರಂಗಿಣಿ'ಯಂತಹ ಪ್ರೌಢ ಸಾಂಗತ್ಯ ಕಾವ್ಯವನ್ನು ರಚಿಸಿದ್ದಾನೆ. ಅಲ್ಲಿಯ ಕಾವ್ಯಪದ್ಧತಿ, ಅಷ್ಟಾದಶ ವರ್ಣನೆಗಳು, ಶೈಲಿಯನ್ನು ಗಮನಿಸಿದರೆ ಪೂರ್ವ ಕವಿಗಳ ಕಾವ್ಯಾಭ್ಯಾಸ ಅವನಿಗೆ ಚೆನ್ನಾಗಿಯೇ ಇದ್ದಿತೆಂದು ತೋರುತ್ತದೆ. ದಂಡನಾಯಕನೂ ವಿಜಯನಗರದ ಅರಸನ ಸಾಮಂತನೂ ಆದ ಆತನಿಗೆ ವಿದ್ವಾಂಸರ, ಕವಿಗಳ ಒಡನಾಟ, ಅವರೊಡನೆ ಕಾವ್ಯಾರ್ಥ ಚಿಂತನ. ಭಾಗವತ ಧರ್ಮದ ಪರಿಚಯ, ತಾತಾಚಾರ್ಯರ ಮೂಲಕ ಶ್ರೀವೈಷ್ಣವ ಧರ್ಮದ ಸಹಜ ಒಲವು ಗಾಢವಾಗಿಯೇ ಇದ್ದಂತೆ ತೋರುತ್ತದೆ. ವಿಸ್ತಾರ ಕಥನ ಕಾವ್ಯಕ್ಕೆ ಸಾಂಗತ್ಯದಂತಹ ಕೋಮಲ ಛಂದಸ್ಸನ್ನು ಒಗ್ಗಿಸಿದ ಶ್ರೇಯಸ್ಸು ಅವನದು. ಈ ವಿಷಯದಲ್ಲಿ ಅವನು ರತ್ನಾಕರನಿಗೆ ಮಾತ್ರ ಎರಡನೆಯವ, ಕಾಲದ ದೃಷ್ಟಿಯಿಂದ ಅವನಿಗೂ ಮೊದಲಿಗ.

೨. ಪ್ರತ್ಯಕ್ಷವಾಗಿ ರಾಜ್ಯಾಡಳಿತ ಯುದ್ಧಗಳಲ್ಲಿ ಕಲಿಯಾಗಿ ಹೋರಾಡುತ್ತಿದ್ದರೂ ಅವನ ಮನಸ್ಸು ಒಳಗೊಳಗೇ ಮೃದುಗೊಳ್ಳುತ್ತಾ, ಬದುಕಿನ ಚೆಲುವು ವಿಷಾದಗಳಿಗೆ ತೆರೆದುಕೊಳ್ಳುತ್ತಾ ಪ್ರಣಯಕಾವ್ಯಗಳಿಗೇ ಒಲಿಯುತ್ತಿದ್ದುದನ್ನು ಮೋಹನ ತರಂಗಿಣಿ ಹಾಗೂ ಹೃದಯಸಂಗಮ ಭಾಮಿನೀಲಯದ ನಳಚರಿತ್ರೆಯೂ ತೋರಿಸಿಕೊಡುತ್ತವೆ. ಸಾಂಗತ್ಯ ಮತ್ತು ಭಾಮಿನಿ ಎರಡರಲ್ಲಿಯೂ ಕೋಮಲ ಭಾವ ಸ್ಫುರಣೆಗೇ ಅವನ ಪ್ರಥಮ ಪ್ರಾಶಸ್ತ್ಯ ; ವೀರ ರೌದ್ರಗಳು ಗೌಣರಸ. ಕುಮಾರವ್ಯಾಸನನ್ನು ಅವನು ಗೌರವಿಸಿದ್ದರೂ ಕನಕನ ಮನಸ್ಸಿನ ಧಾತು ಬೇರೆ ಬಗೆಯದು ಎಂದು ಅವನ ಛಂದಸ್ಸಿನ ಪರಿಶೀಲನೆ ಖಚಿತಗೊಳಿಸುತ್ತದೆ.

೩. ಕನಕನ ಕೃತಿಗಳಲ್ಲಿ ವ್ಯಾಸರಾಯರ ಹಾಗೂ ಪುರಂದರದಾಸರ ಪ್ರಭಾವ ಕಂಡರೂ ಕನಕನ ಕೀರ್ತನೆಗಳ ಸಂಖ್ಯೆ ಕಡಿಮೆ ಎಂಬುದನ್ನೂ ಅವನ ಕೃತಿಗಳ ವಿಪುಲತೆ ಕೋಲಾಟ, ಲಾವಣಿಗಳ ಮಾದರಿಯದೆಂದೂ ಗಮನಿಸಲಾಗಿದೆ. ಇದರ ಅರ್ಥವೆಂದರೆ ಮಧ್ವಸಂಪ್ರದಾಯದ ಪರಿಚಯಕ್ಕೆ ಮೊದಲೇ ಅವನು ಕೃತಿರಚನೆಗೆ ತೊಡಗಿದ್ದಾನೆ. ತನ್ನ ಸುತ್ತಲ ಜಾನಪದ ಸಂಗೀತವನ್ನು ಸುಸೂಕ್ಷ್ಮವಾಗಿ ಗಮನಿಸಿದ್ದಾನೆ. ಗ್ರಾಮೀಣ ಉತ್ಸವ, ಹಬ್ಬಗಳಲ್ಲಿ,

ಜಾತ್ರೆ ಯಾತ್ರೆಗಳಲ್ಲಿ ಸಕ್ರಿಯವಾಗಿ ಸಂಭ್ರಮದಿಂದ ಭಾಗವಹಿಸಿದ್ದಾನೆ. ತನ್ನ ಸಹಜಸ್ಫೂರ್ತಿಯಿಂದ ಹಾಡುಗಳನ್ನು ಕಟ್ಟಿ, ಜಾನಪದ ಲಯವನ್ನು ಧಾರಾಳವಾಗಿ ಸೂರೆಹೊಡೆದು ಅವುಗಳಿಗೆ ಜೀವಕೊಟ್ಟು ಕುಣಿಸಿದ್ದಾನೆ. ಈ ರಚನೆಗಳ ಮೇಲೆ ವ್ಯಾಸಕೂಟದ ಪ್ರಭಾವ ಇಲ್ಲವೇ ಇಲ್ಲ ಎಂದರೂ ಸಲ್ಲುತ್ತದೆ.

೪. ಯಾವುದೋ ಸ್ಪಷ್ಟವಾಗದ ಆಂತರಿಕ ಒತ್ತಡದಿಂದಲೋ, ಆಕಸ್ಮಿಕ ಸಂದರ್ಭಗಳಿಂದಲೋ ಕನಕನು ವ್ಯಾಸಕೂಟದ ಸಂಪರ್ಕವನ್ನು ಬದುಕಿನ ಕಡೆಕಡೆಯ ದಿನಗಳಲ್ಲಿ ಬೆಳೆಸಿರುವುದು ನಿಜ. ಆ ವೇಳೆಗೆ ಆಗಲೇ ಅವನು ಮಹಾಕಾವ್ಯ ಪದ್ಧತಿಯಲ್ಲೂ ಕೃತಿರಚನೆಯಲ್ಲಿಯೂ ಸಿದ್ಧಹಸ್ತನಾಗಿದ್ದಂತೆ ತೋರುತ್ತದೆ. ವ್ಯಾಸರ ಹೃದಯದ ಔದಾರ್ಯ, ಪುರಂದರಾಸರ ಅವ್ಯಾಜ ಮೈತ್ರಿ ಅವನಿಗೆ ದೊರಕಿ ತುಂಬ ಸಮಾಧಾನ ಸಂತೃಪ್ತಿಗಳನ್ನು ತಂದಿರಬಹುದು. ಆದರೆ ಆ ಪರಿಸರದಲ್ಲಿ ಆತನಿಗೆ ಸಲ್ಲಬೇಕಾದ ಮರ್ಯಾದೆ ಸಂಪ್ರದಾಯ ಜಡರಿಂದ ದೊರೆಯಲೇ ಇಲ್ಲ. ಬದಲಾಗಿ ತಿರಸ್ಕಾರ ಮೂದಲಿಕೆ, ಅಪಮಾನಗಳನ್ನೇ ಮಡಿಲಿಗೆ ಕಟ್ಟಿಕೊಳ್ಳುವಂತಾಗಿರಬಹುದು. ಆದರೆ ಆವೇಳೆಗೆ ಬದುಕಿನ ವಿಷಮತೆ ಅವನಿಗೆ ಜೀವನದ ಸ್ವರೂಪವನ್ನು ತೆರೆದು ತೋರಿಸಿತ್ತು; ಪಾಡನ್ನು ಹಾಡಾಗಿ ಪರಿವರ್ತಿಸುವ ಕಾವ್ಯಕಲೆ ಅವನಿಗೆ ಸಿದ್ಧಿಸಿತ್ತು. ಸ್ಥಾನಭ್ರಷ್ಟನೂ ಆಗಿದ್ದ ಈ ದಲಿತನಿಗೆ ಅತ್ತ ಆಡಳಿತವರ್ಗದಿಂದಲೂ ಇತ್ತ ಸಂಪ್ರದಾಯ ಜಡ ಪಂಡಿತ ವರ್ಗದಿಂದಲೂ ಪುರಸ್ಕಾರ ದೊರೆಯಲಿಲ್ಲ. ಹೀಗಾಗಿ ಅವನ ಈ ಪರಿಸರದ ಕೀರ್ತನೆಗಳೆಂದರೆ ನೋವಿನ ನುಡಿಗಳು–ಸಾಮಾನ್ಯವಾಗಿ ತಿಳಿಯಲಾದಂತೆ ಕ್ರಾಂತಿಯ ಕಿಡಿಗಳಲ್ಲ. ಕನಕನ ಬದುಕಿನ ಬಹುಭಾಗ ಜೀವನೋಲ್ಲಾಸದ ಗ್ರಾಮೀಣ ಮುಗ್ಧ ಪರಿಸರದಲ್ಲಿ ಬೆಳೆಯದಿದ್ದರೆ, ತಾರುಣ್ಯದಲ್ಲಿಯೇ ಅವನು ಸಂಪ್ರದಾಯಜಡರ ನಡುವೆ ಬಂದು ಬಿದ್ದಿದ್ದರೆ, ಅವನು ನಿಜಕ್ಕೂ ಬಸವೇಶ್ವರರಂತೆ ಸಿಡಿದು ನಿಲ್ಲುತ್ತಿದ್ದ ಬಂಡಾಯಗಾರನಾಗುತ್ತಿದ್ದ. ಅವನ ನುಡಿಗಳೂ ಬೆಂಕಿಯ ಸಿಡಿಗಳಾಗುತ್ತಿದ್ದವು. ಆದರೆ ಇದೀಗ ಅವನ ಮನಸ್ಸು ಚಿಂತನಪರವಾಗಿತ್ತು. ನಿರ್ಭರ ಭಕ್ತಿಯ ತೆಕ್ಕೆಗೆ ತನ್ನನ್ನು ತೆತ್ತುಕೊಳ್ಳುತ್ತಿತ್ತು; ಆತ್ಮ ಸಮರ್ಪಣೆಯ ಸಂತೃಪ್ತಿ, ಶಮ, ಸಿದ್ಧಿಸಿತ್ತು. ಹೀಗಾಗಿ ಕಡು ಜಾಣನೂ ಶಾಸ್ತ್ರ–ಕಾವ್ಯಗಳೆರಡರಲ್ಲೂ ಆಗಲೇ ಪರಿಣತನೂ ಆಗಿದ್ದ ತನ್ನನ್ನು ಶುಷ್ಕ ಪಂಡಿತವರ್ಗ ಕಾಡು ಕುರುಬನೆಂದೂ ಹಳ್ಳಿಯ ಬೀರನೆಂದೂ ಮೂಗು ಮುರಿದುದನ್ನು ಕಂಡು ಕನಕನು ಒಳಗೊಳಗೇ ನಗುತ್ತಿರಬಹುದು; ಮುಂಡಿಗೆಗಳ ಮೂಲಕ ಅವರನ್ನು ಪೇಚಿಗೆ ಸಿಕ್ಕಿಸುವ ಆರೋಗ್ಯಕರ ಕೀಟಲೆಯನ್ನೂ

ಬೆಳೆಸಿಕೊಂಡಿರಬಹುದು ; ಈ ಗ್ರಾಮೀಣ ಜಾಣನಿಗೆ ಒಗಟುಗಳನ್ನು ಹೊಸದಾಗಿ ಕಲಿಯಬೇಕಿರಲಿಲ್ಲ : ಅದು ಅವನ ಸಹಜ ಪ್ರವೃತ್ತಿಯೇ ಆಗಿತ್ತು; ಇದೀಗ ನಗರದ ಅಷ್ಟಾವಧಾನಿಗಳು ಶತಾವಧಾನಿಗಳು ಅವನ ಮುಂಡಿಗೆಗೆ ಸೋತು ಮಂಡಿಯೂರುತ್ತಿದ್ದುದನ್ನು ನೋಡಿ ಅವನ ಕೀಟಲೆಯ ಮನೋಧರ್ಮಕ್ಕೆ ಕೊಂಚ ಗೆಲುವು ದೊರಕಿರಬಹುದು ! ಅವಮಾನ–ಶೋಷಣೆಗಳು ಅನರ್ಹರಿಂದ ಒದಗಿದಾಗ ಅವನ ಏಕಮಾತ್ರ ಸಾಂತ್ವನ ಕಾಗಿನೆಲೆಯ ಆದಿಕೇಶವ–ಅನಾದಿಕೇಶವ. ಅವನ ಸಮರ್ಪಿತ ಜೀವ ಹಾಡಾಗಿ ಹೊಳೆಯಾಗಿ ಹರಿಯಿತು. ಮಾತು ನಯವಾಯಿತು. ತನ್ನ ರೂಕ್ಷತೆಯನ್ನು ಕಳೆದುಕೊಂಡಿತು, ಸಂಸ್ಕೃತೀಕರಣ ಸಹಜವಾಗಿ ಸಿದ್ಧಿಸಿತು. ಅವನಿಂದ ಆಗ ಹೊಮ್ಮಿದುದು ಮಧ್ವಸಿದ್ಧಾಂತದ ಪ್ರಮೇಯಗಳಲ್ಲ–ಆರ್ತ ಭಕ್ತಿ, ಶುದ್ಧ ಭಕ್ತಿ, ಶರಣಾಗತಿಯ ಸಂಪೂರ್ಣ ಪ್ರಪತ್ತಿ. 'ತನು, ನಿನ್ನದು, ಜೀವನ. ನಿನ್ನದು : 'ದೇಹವನ್ನೇ ಮೊದಲು ಎತ್ತಿ ಮಂದಾನಿಲವಾಗಿ ಹರಿಸಿದ ಹಾಡು. 'ನಿತ್ಯ ಜ್ಞಾನಿಯಾದ ಮೇಲೆ ಚಿಂತೆ ಯಾತಕೆ' ಎಂಬ ದೃಢ ನಿಶ್ಚಯದ ಉತ್ಸಾಹಲಯದ ಬದುಕು 'ಮನ್ನಣೆಂದ ನಡೆಸದಿರುವ ದೊರೆಯು ಯಾತಕೆ?" ಎಂದು ಮೂರು ಆರಾಗಿ ಬೆಳೆದ ಲಯ ವಿಸ್ತಾರ. ಹನಿಗಣ್ಣಾಗದೆ ಓದಲು ಸಾಧ್ಯವಿಲ್ಲದ ಈ ನುಡಿಯನ್ನು ಕೇಳಿ :

> ಪ್ರಾಣವ ಪರರಿಗೆ ಬೇಡಿದರೆ ಕೊಡಬಹುದು
> ಮಾನಾಭಿಮಾನವ ತಗ್ಗಿಸಬಹುದು
> ಪ್ರಾಣದಾಯಕನಾದ ಆದಿಕೇಶವರಾಯ
> ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದು । [ಪು. ೩೪]

ಎರಡನೆಯ ಪಾದ ನಿಜಕ್ಕೂ ಕನಕನ ಆತ್ಮಕಥನದ ಅಂದಿನ ನೆಲೆ. ಅವನ ಆರಾಧ್ಯ ದೈವ ಜಾಣಕೃಷ್ಣ ಎಂಬುದನ್ನು ಮರೆಯಲಾಗದು.

ಮುಖ್ಯವಾದ ಮಾತೆಂದರೆ ಕನಕನು ಮಧ್ವಸಿದ್ಧಾಂತದ ನೆರಳಿನಲ್ಲಿ ಬೆಳೆದ ಹರಿದಾಸ ಪರಂಪರೆಯವನಲ್ಲ. ಅವನ ನೆಲೆಯೇ ಬೇರೆ, ಬೆಲೆಯೇ ಬೇರೆ. ಪಂಡಿತ ಸಮಾಜದಿಂದ, ವ್ಯಾಸ–ದಾಸ ಕೂಟಗಳಿಂದ ಅವನು ಪಡೆದುದಕ್ಕಿಂತ ಕೊಟ್ಟುದೇ ಹೆಚ್ಚು. ಅವನನ್ನು ಗುರುತಿಸಿ ಪ್ರೀತಿಸಿದಂಥ ಗುಣಗ್ರಾಹಿಗಳಾದ ವ್ಯಾಸರಾಯರು–ಪುರಂದರದಾಸರು ನಿಜಕ್ಕೂ ಧನ್ಯರು–ಆ ಕಾರಣದಿಂದ ನಮಗೂ ಮಾನ್ಯರು.

ಟಿಪ್ಪಣಿ :

೧. ಕನಕದಾಸನ ಕೃತಿಗಳನ್ನು ಹಾಡಿ ತೋರಿಸಿ ಅಲ್ಲಿಯ ಜಾನಪದ ಲಯಗಳನ್ನು ಗುರುತಿಸಲು ನನಗೆ ನೆರವು ನೀಡಿದ ಶ್ರೀಮತಿ ನಾಗಲಕ್ಷ್ಮಿ ಶೀ. ನಂ. ಶಂಕರನಾರಾಯಣ ಅವರಿಗೆ ನನ್ನ ಹಾರ್ದಿಕ ಕೃತಜ್ಞತೆಗಳು ಸಲ್ಲುತ್ತವೆ.

೨. ಕೃತಿಗಳಲ್ಲಿ ಸೂಚಿಸಿರುವ ಸಂಖ್ಯೆಗಳು 'ಜನಪ್ರಿಯ ಕನಕ ಸಂಪುಟ'ದ ಪುಟಗಳು. ಇತರ ಕೃತಿಗಳನ್ನು ಆಧರಿಸಿದ್ದರೆ, ಪ್ರತ್ಯೇಕವಾಗಿ ಹೆಸರಿಸಲಾಗಿದೆ.

೩. ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆಯಾದ ಈ ಸಂಪುಟವನ್ನಲ್ಲದೆ ಬೆಟಗೇರಿ ಕೃಷ್ಣಶರ್ಮರಿಂದ ಸಂಪಾದಿತವಾದ 'ಶ್ರೀ ಕನಕದಾಸರ ಭಕ್ತಿ ಗೀತಗಳು' ಎಂಬ ಗ್ರಂಥವನ್ನೂ, ಕನಕದಾಸರ ಮೋಹನ ತರಂಗಿಣಿ, ಹರಿಭಕ್ತಿಸಾರ, ನಳಚರಿತ್ರೆ ಮತ್ತು ರಾಮಧಾನ್ಯಚರಿತೆಗಳನ್ನೂ ಅಭ್ಯಸಿಸಲಾಗಿದೆ. ನೃಸಿಂಹಸ್ತವದ ಪೂರ್ಣಪಾಠ ಈ ಲೇಖಕನಿಗೆ ದೊರಕಿಲ್ಲ.

# ಕನಕದಾಸರ ಕೃತಿಗಳಲ್ಲಿ ಭಾಷಾಸ್ವರೂಪ

**ಡಾ. ಹಂಪನಾ**

ಕನಕದಾಸರ ಕೃತಿಗಳ ಒಂದು ವರ್ಣನಾತ್ಮಕ ವ್ಯಾಕರಣವನ್ನು ಸಿದ್ಧಪಡಿಸಿದೆವೆನ್ನಿ. ಆಗ ಅದು ಈಗ ಪ್ರಚಲಿತವಾಗಿರುವ ಕನ್ನಡ ಭಾಷೆಯ ಸ್ವನಿಮಾ ಮತ್ತು ಆಕೃತಿಮಾಗಳ ಒಟ್ಟು ವ್ಯವಸ್ಥೆಗಿಂತ ತೀರ ಭಿನ್ನವಾಗಿರುವುದಿಲ್ಲ. ಕೆಲವು ಸ್ವನಗಳ ಉಚ್ಚಾರದ ವಿಚಾರದಲ್ಲಿ ಅಲ್ಲಿ–ಇಲ್ಲಿ ಅಂತರಗಳೂ ಏರಿಳಿತಗಳೂ ಇದ್ದಿರಬಹುದು. ಆದರೆ ಅಂತಹ ಅಂತರಗಳನ್ನು ಗುರುತಿಸಲೂ ದಾಖಲಿಸಲೂ ಅಗತ್ಯವಾದ ಸಲಕರಣೆಗಳ ಪರೋಕ್ಷದಲ್ಲಿ ಇಂದು ಆ ಕಾರ್ಯ ಅಸಾಧ್ಯವಾಗಿದೆ. ಆದರೂ ಎರಡು ಮೂರು ಸ್ವನಗಳ ಹೊರತಾಗಿ ಉಳಿದಂತೆ ಕನ್ನಡ ಭಾಷೆಯ ಸ್ವನವ್ಯವಸ್ಥೆಯಲ್ಲಿರುವ ನೈರಂತರ್ಯವನ್ನು ಗುರುತಿಸಬಹುದು. ಈ ನಿರಂತರತೆಯನ್ನು ಪುಷ್ಟೀಕರಿಸುವ ಭಾಷಿಕ ಆಧಾರಗಳು ಕನಕದಾಸರ ಕೃತಿಗಳಲ್ಲೂ ಸಿಗುತ್ತವೆ.

ಭಾಷಿಕ ವೈಲಕ್ಷಣ್ಯಗಳೆಂದು ಗುರುತಿಸಿ ತೋರಿಸಬಹುದಾದುವು ಕೆಲವಿವೆ. ಅವುಗಳನ್ನು ಎರಡು ನೆಲೆಗಳಿಂದ ಅರಿಯಬಹುದು. ಕನಕದಾಸರು ಇರುವ ಕಾಲದ ಘಟ್ಟದಿಂದ ಹಿಮ್ಮೊಗನಾಗಿ ಚಲಿಸತೊಡಗಿ ಅವೆರಡರ ನಡುವೆ ಸಂಭವಿಸಿದ ವ್ಯತ್ಯಾಸಗಳಲ್ಲಿ ತೌಲನಿಕವಾಗಿ ಕಂಡುಬರುವ ಅಂತರಗಳನ್ನು ಪರಿಚಯಿಸಬಹುದು. ಕನಕದಾಸರ ಕಾಲದ(ಕೃತಿಗಳ)ಲ್ಲಿರುವ ಕನ್ನಡ ಭಾಷೆಗೆ ನಡುಗನ್ನಡವೆಂದು ಕರೆಯಲಾಗಿದೆ. ಕನಕದಾಸರವರೆಗೆ ನಡೆದು ಬೆಳೆದು ಬಂದಿದ್ದ ಕನ್ನಡ ಭಾಷೆ ಆಗಲೇ ಎರಡು ಹಂತಗಳನ್ನು ದಾಟಿತ್ತು. ಕನ್ನಡ ಭಾಷೆಯ ಈ ಎರಡು ಸ್ಥಿತ್ಯಂತರಗಳನ್ನು ಪೂರ್ವದ ಹಳೆಗನ್ನಡ ಮತ್ತು ಹಳೆಗನ್ನಡವೆಂದು ಹೆಸರಿಸಲಾಗಿದೆ. ಕನಕದಾಸರಿಗೆ ಹಿಂದಿದ್ದ ಹಳೆಗನ್ನಡ ಭಾಷೆಗೆ ಹೋಲಿಸಿದಾಗ ಸಹಜವಾಗಿಯೇ ಕನಕದಾಸರ (ಕೃತಿಗಳ) ಕನ್ನಡ ಭಾಷೆಯಲ್ಲಿ ಅನೇಕ ವ್ಯತ್ಯಾಸಗಳು ಸಂಭವಿಸಿರುವುದು ಕಂಡು ಬರುತ್ತದೆ.

ಇನ್ನು ಕನಕದಾಸರ ಕನ್ನಡ ಭಾಷೆಯನ್ನು ಕೇಂದ್ರವಾಗಿರಿಸಿ, ಅಲ್ಲಿಂದ

ಮುಮ್ಮೊಗನಾಗಿ ಹೊರಟು, ನಮ್ಮ ಕಾಲದ ಈ ೨೦ನೆಯ ಶತಮಾನದ ಕನ್ನಡ ಭಾಷೆಯ ಸ್ವರೂಪವನ್ನು ತುಲನೆಮಾಡಿ ನೋಡಬಹುದು. ಕನಕದಾಸರ ಕಾಲದ ಕನ್ನಡವನ್ನು ನಡುಗನ್ನಡವೆಂದೂ ನಮ್ಮ ಈಗಿನ ಕನ್ನಡವನ್ನು ಹೊಸಗನ್ನಡವೆಂದೂ ನಿರ್ದೇಶಿಸಲಾಗಿದೆ. ಹಳೆಗನ್ನಡಕ್ಕೂ ಹೊಸಗನ್ನಡಕ್ಕೂ ಹಲವಾರು ಭಾಷಿಕವ್ಯತ್ಯಾಸಗಳು ಘಟಿಸಿರುವುದನ್ನು ಭಾಷಾವಿಜ್ಞಾನಿಗಳು ತೋರಿಸಿಕೊಟ್ಟಿದ್ದಾರೆ.

ಹೀಗೆ ಈ ಎರಡು ತೆರನಾದ ತೌಲನಿಕ ಭಾಷಿಕ ಅಧ್ಯಯನಕ್ಕೂ ಕನಕದಾಸರ ಕೃತಿಗಳ ಕನ್ನಡ ಭಾಷೆಯನ್ನು ಒಳಪಡಿಸಬಹುದು. ಹಾಗೆ ನೋಡುವುದಾದರೆ, ಇವೆರಡು ಚಾರಿತ್ರಿಕ ಅಧ್ಯಯನ ವಿಧಾನಗಳನ್ನು ಕೈಬಿಟ್ಟು, ಮೂರನೆಯದಾದ ಇನ್ನೊಂದು ವಿಧಾನದಿಂದಲೂ ಕನಕದಾಸರ ಕನ್ನಡ ಭಾಷೆಯನ್ನು ಪರಿಶೀಲಿಸಿ ನೋಡಲು ಅವಕಾಶವಿದೆ. ಅದೆಂದರೆ, ಅವರ ಸಮಕಾಲೀನ ಕನ್ನಡ ಲೇಖಕರ ಕೃತಿಗಳ ಕನ್ನಡದೊಂದಿಗೆಯೇ ಹೋಲಿಸುವುದು ಮತ್ತು ಅವುಗಳಲ್ಲಿರುವ ಭಾಷಿಕ ಭಿನ್ನತೆ ಅಥವಾ ಏಕರೂಪತೆಯನ್ನು ದಾಖಲಿಸುವುದು. ಈ ಮೂರು ವಿಧಾನಗಳಲ್ಲದೆ ನಾಲ್ಕನೆಯದಾದ ಇನ್ನೊಂದು ದಾರಿಯೂ ಸಾಧ್ಯವಿದೆ. ಅದೆಂದರೆ (ಪೂರ್ವದ) ಹಳೆಗನ್ನಡದೊಂದಿಗೆ ಇಲ್ಲವೆ ಹೊಸಗನ್ನಡದೊಂದಿಗೆ ಅಥವಾ ಸಮಕಾಲೀನ ಲೇಖಕರ ಕೃತಿಗಳ ಕನ್ನಡದೊಂದಿಗೆ–ಹೀಗೆ, ಮೇಲೆ ಹೇಳಿದ ಎಲ್ಲ ತೌಲನಿಕ ಪರಾಮರ್ಶೆಯನ್ನೂ ಕೈಬಿಟ್ಟು ನೇರವಾಗಿ ಕನಕದಾಸರ ಕೃತಿಗಳಲ್ಲಷ್ಟೇ ಕಂಡುಬರುವ ಕನ್ನಡ ಭಾಷೆಯನ್ನು ವರ್ಣನಾತ್ಮಕವಾಗಿ ಅಥವಾ ಚಾರಿತ್ರಿಕ ದೃಷ್ಟಿಯಿಂದ ಅಭ್ಯಸಿಸುವ ವಿಧಾನ.

ಈ ಲೇಖನದಲ್ಲಿ ತೌಲನಿಕ ಭಾಷಿಕ ಅಧ್ಯಯನವನ್ನು (Comparative linguistic analysis) ಗೌಣನೆಲೆಗೆ ಸರಿಸಿ, ಕೇವಲ ಕನಕದಾಸರ ಕೃತಿಗಳಲ್ಲಿ, ಅದರಲ್ಲಿಯೂ ಪ್ರಧಾನವಾಗಿ ಅವರ ಕೀರ್ತನೆಗಳಲ್ಲಿ ಕನ್ನಡ ಭಾಷೆಯ ದಾಖಲೆಗಳು ಯಾವ ಸ್ವರೂಪದಲ್ಲಿ ಸಿಗುತ್ತವೆಂಬುದರ ಪರಿಶೀಲನೆಗಷ್ಟೇ ಒತ್ತು ಕೊಡಲಾಗುವುದು ಇದು ಕನ್ನಡ ಭಾಷೆಯ ಐತಿಹಾಸಿಕ ಹಿನ್ನೆಲೆಯನ್ನಿರಿಸಿಕೊಂಡಿರುವ ಅಧ್ಯಯನವೂ ಹೌದು. ಕನಕದಾಸರ ಕಾಲ ೧೬ನೆಯ ಶತಮಾನದ ನಡುಗಾಲವೆಂದು ಬಲ್ಲಿದರು ತಿಳಿಸುತ್ತ ಬಂದಿದ್ದಾರೆ. ಹಾಗೆ ನೋಡುವುದಾದರೆ ಈ ೧೬ನೆಯ ಶತಮಾನದ ಕನ್ನಡ ಭಾಷೆಯ ಸ್ವರೂಪ ಎಂತಹುದಿತ್ತು ಎಂಬುದರ ಸ್ಪಷ್ಟ ಕಲ್ಪನೆ ಇಲ್ಲ ; ದಾಖಲೆ ಸಮೀಕ್ಷೆ

ಮತ್ತು ವಿವೇಚನೆ ಇದುವರೆಗೂ ಸರಿಯಾಗಿ ನಡೆದಿಲ್ಲವೆಂದೇ ಹೇಳಬೇಕು. ಅಲ್ಲದೆ ಈ ಬಗೆಯ ಅಧ್ಯಯನದಲ್ಲಿ ಕೆಲವು ತೊಡಕುಗಳೂ ಎದುರಾಗುತ್ತವೆ. ೧೬ನೆಯ ಶತಮಾನದ ಕರ್ನಾಟಕ ಯಾವುದು, ಎಲ್ಲಿಂದ ಎಲ್ಲಿಯವರೆಗೆ, ಅದರ ಉದ್ದ-ಅಗಲಗಳ ಭೌಗೋಳಿಕ ವ್ಯಾಪ್ತಿ ಏನು ಎತ್ತ, ಅಂದಿನ ಶಿಷ್ಟ ಕನ್ನಡವೆಂದು ಯಾವ ಭಾಗದ ಆಡು ನುಡಿ ಮಾನ್ಯತೆ ಪಡೆದಿತ್ತು. ಅಂದಿನ ಕನ್ನಡ ಭಾಷೆಯಲ್ಲಿದ್ದ ಸಾಮಾಜಿಕ ಪ್ರಾದೇಶಿಕ ಪ್ರಭೇದಗಳೂ ಯಾವುವು, ಅವುಗಳಲ್ಲಿ ಕನಕದಾಸರ ಬರವಣಿಗೆಗೆ ಆರಿಸಿಕೊಂಡಿರುವ ಕನ್ನಡ ಯಾವ ಭಾಗದ ಉಪಭಾಷೆ-ಎಂಬ ಹತ್ತಾರು ಭಾಷಿಕ ಪ್ರಶ್ನೆಗಳೇಳುತ್ತವೆ. ಈ ಬಗೆಯ ಪ್ರಶ್ನೆಗಳಿಗೆ ಉತ್ತರಿಸುವ ವಿಶ್ಲೇಷಣೆಗೆ ಪ್ರಸ್ತುತ ಲೇಖನ ತಕ್ಕ ಸ್ಥಳವಾಗಲಾರದು. ಅದರಿಂದ ಕನಕದಾಸರ ಕೀರ್ತನೆಗಳಲ್ಲಿ ಕಂಡು ಬರುವ ಕನ್ನಡ ಭಾಷೆಯ ಸ್ವರೂಪವನ್ನು ಕುರಿತ ಒಂದು ಸ್ಥೂಲ ವಿವರಣೆಯಷ್ಟೇ ಈ ಬರವಣಿಗೆಯ ಚೌಕಟ್ಟಿನಲ್ಲಿ ಸಾಧ್ಯವಾಗುವ ಕೆಲಸ.

ಕನಕದಾಸರ ನಳಚರಿತ್ರೆ, ಮೋಹನತರಂಗಿಣಿ, ಹರಿಭಕ್ತಿಸಾರ, ರಾಮಧಾನ್ಯ ಚರಿತೆ-ಎಂಬ ನಾಲ್ಕು ಕೃತಿಗಳ ಮೂಲಕವಾಗಿ ರೂಪಿತವಾಗುವ ಕನ್ನಡ ಭಾಷೆಯ ಸ್ವರೂಪದಲ್ಲಿ ಹೆಚ್ಚಿನ ಪ್ರತ್ಯೇಕತೆ ಅಥವಾ ಸ್ವಂತಿಕೆ ಭಿನ್ನತೆ ಕಂಡುಬರುವುದಿಲ್ಲ. ಅಂದರೆ ಶತಮಾನಗಳಿಂದ ಶತಮಾನಗಳಿಗೆ ನಿರಂತರವಾಗಿ ಹರಿದುಬರುತ್ತಿರುವ ಕನ್ನಡ ಭಾಷೆಯ ಅವಿಚ್ಛಿನ್ನತೆಯ ಒಂದು ಮುಂದುವರಿಕೆಯಷ್ಟೇ ಕನಕದಾಸರಲ್ಲಿ ಕಂಡು ಬರುತ್ತದೆ. ಇಡೀ ಕನ್ನಡ ಕೀರ್ತನಕಾರರ ಸಮುದಾಯದಲ್ಲಿ ಕಾವ್ಯಸತ್ವ ಹೆಚ್ಚಿನ ಪ್ರಮಾಣದಲ್ಲಿ ಪ್ರಕಟವಾಗಿರುವುದು ಕನಕದಾಸರಲ್ಲೇ. ಕನ್ನಡ ಭಾಷೆಯ ಸಾಧ್ಯತೆಗಳಲ್ಲಿ ಕೆಲವನ್ನು ಮಾತ್ರ ಈ ಕವಿ ದುಡಿಸಿಕೊಂಡಿದ್ದಾನೆ. ತದ್ಭವಗಳನ್ನೂ, ತತ್ಸಮಗಳನ್ನೂ ಸಮಪ್ರಮಾಣದಲ್ಲಿ ಬಳಸಿರುವಂತೆ ಕಾಣುತ್ತದೆ ; ಈ ಲೇಖನ ಬರೆಯುವ ಸಲುವಾಗಿ ನಾನು ಗಮನಿಸಿದಂತೆ ಕಂಡುಬಂದ ಒಂದು ಸ್ಥೂಲ ಸಮೀಕ್ಷೆಯ ಮಾತಿದು ; ಇದರ ಬಗೆಗೆ ಇನ್ನಷ್ಟು ಕೂಲಂಕಷವಾದ ತೌಲನಿಕ ಅಧ್ಯಯನಕ್ಕೆ ಅವಕಾಶವಿದೆ. ಕವಿಯ ಸಿದ್ಧತೆ, ಲೋಕಾನುಭವ, ವ್ಯಾಸಂಗ, ವಿವಿಧ ಶಾಸ್ತ್ರ ಹಾಗೂ ಜ್ಞಾನ ಕ್ಷೇತ್ರಗಳ ಪರಿಚಯ, ಪುರಾಣಪ್ರಜ್ಞೆ, ಭಾಷಾಸಂಪತ್ತು-ಮೊದಲಾದ ಎಷ್ಟೋ ಅಂಶಗಳ ಪರಿಚಯಕ್ಕೆ ಆತನ ಬರವಣಿಗೆಯನ್ನೇ ಆಶ್ರಯಿಸಬೇಕು. ಯಾವುದೇ ಲೇಖಕನ ಎಲ್ಲ ಚಿಂತನೆಗಳೂ ಭಾಷೆಯ ಚೌಕಟ್ಟು ಮತ್ತು ಮಿತಿಗಳ ಸಂದರ್ಭದಲ್ಲೇ ಸಂಭವಿಸಬೇಕು.

ಕನಕದಾಸರ ಕೃತಿಗಳಲ್ಲಿ ಕವಿಯ ಕಾಲದ ಕನ್ನಡ ಭಾಷಾ ಸ್ವರೂಪದ ಅಧ್ಯಯನಕ್ಕೆ ವಿಪುಲವಾದ ಸಾಮಗ್ರಿ ಸಿಗುವುದು ಕೀರ್ತನೆಗಳಲ್ಲಿಯೇ. ಕನಕದಾಸರ ಕೀರ್ತನೆಗಳಲ್ಲಿ ಹೆಚ್ಚಿನವು ವೈದೃಶ್ಯಗಳಲ್ಲಿ ಮೈಪಡೆಯುವುದನ್ನು ಕಂಡಾಗ ಕನಕದಾಸರಿಗೂ ವೈದೃಶ್ಯಗಳನ್ನು ಅಳವಡಿಸಿ ಮಾತನಾಡುವುದು ತುಂಬ ಪ್ರಿಯವೆಂದು, ಅದು ಅವರ ಮನೋಧರ್ಮಕ್ಕೆ ಹತ್ತಿರವೆಂದು ತೋರುತ್ತದೆ. ಅಂದು–ಇಂದು, ಭೂತ–ವರ್ತಮಾನ, ವೈಭವ ಸುಖ–ಕಷ್ಟಕಾರ್ಪಣ್ಯ, ಸಿರಿತನ–ಬಡತನ–ಎಂಬೀ ಬಗೆಯ ದ್ವಂದ್ವ ನೆಲೆಗಳಲ್ಲಿ ಅಭಿವ್ಯಕ್ತಿ ಹಾಗೂ ಸಂವೇದನೆ ಆಕಾರ ಪಡೆಯುತ್ತಾ ಹೋಗುತ್ತದೆ. ಇದನ್ನು ಎರಡು ದೃಷ್ಟಾಂತಗಳಿಂದ ಸ್ಪಷ್ಟಪಡಿಸಬಹುದು :

೧. ಎನ್ನ ಕಂದ ಹಳ್ಳಿಯ ಹನುಮಾ
ಚೆನ್ನಾಗಿ ಇಹರೆ ಲಕ್ಷ್ಮಣ ದೇವರು ॥ಪ॥
ತುಪ್ಪ ಪಂಚಾಮೃತವಂದು ಅಡವಿಗಡ್ಡೆಗಳಿಂದು
ಕರ್ಪೂರ ವೀಳ್ಯವಂದು ಕರುಕು ಇಂದು
ಸುಪ್ಪತ್ತಿಗೆ ಮಂಚವಂದು ಹುಲ್ಲ ಹಾಸಿಗೆಯಿಂದು
ಶ್ರೀಪತಿ ರಾಘವ ಕ್ಷೇಮದಲ್ಲೈದಾರೆ ॥೧॥
ನವವಸ್ತ್ರಗಳು ಅಂದು ನಾರಸೀರೆಗಳಿಂದು
ಹೂವಿನಗಂಟು ಅಂದು ಜಡೆಗಳಿಂದು
ಜವಾಜಿ ಕತ್ತುರಿಯಂದು ಭಸಿತಧೂಳಿಯಿಂದು
ಶ್ರೀವರ ರಾಘವ ಕ್ಷೇಮದಲ್ಲೈದಾರೆ ॥೨॥
ಕನಕ ರಥಗಳಂದು ಕಾಲುನಡಿಗೆಯಿಂದು
ಘನ ಸತ್ತಿಗೆಯಂದು ಬಿಸಿಲು ಇಂದು
ಸನಕಾದಿಗಳೋಲೈಪ ಆದಿಕೇಶವ ನಮ್ಮ
ಹನುಮೇಶ ರಾಘವ ಕ್ಷೇಮದಲ್ಲೈದಾರೆ ॥೩॥

೨. ಏನೆಂದು ಕೊಂಡಾಡಿ ತುತಿಸಲೋ ದೇವ
ನಾನೇನು ಬಲ್ಲೆ ನಿನ್ನಯ ಮಹಿಮೆ ಘನವ ॥ಪ॥
ಹರಿಮುಕುಂದನು ನೀನು ನರಜನ್ಮಹುಳು ನಾನು
ಪರಮಾತ್ಮನು ನೀನು ಪಾಮರನು ನಾನು
ಗರುಡಗಮನನು ನೀನು ಮರುಳು ಪಾಪಿಯು ನಾನು
ಪರಂಜ್ಯೋತಿಯು ನೀನು ತಿರುಕನು ನಾನು ॥೧॥

ವಾರಿಧಿಶಯನನಾದ ಕಾರುಣ್ಯಪತಿ ನೀನು
ಘೋರದಿಂದಿಹ ಕಾಮಿ ಕ್ರೋಧಿ ನಾನು.
ಈರೇಳು ಭುವನದೊಳು ಇರುವ ಮೂರುತಿ ನೀನು
ದೂರಿ ನಿಮ್ಮನು ಬೈವ ದುಷ್ಟ ನಾನು ॥೨॥
ಅಣುರೇಣುತೃಣಗಳಲಿ ಪರಿಪೂರ್ಣನು ನೀನು
ಕ್ಷಣಕ್ಷಣಕ್ಕೆ ಅವಗುಣ ಕುಕರ್ಮಿ ನಾನು
ವಾಣಿಯರಸನ ಹೆತ್ತ ವೈಕುಂಠಪತಿ ನೀನು
ತನು ನಿತ್ಯವಲ್ಲದ ಗೊಂಬೆ ನಾನು ॥೩॥
ಕಂಬದಲಿ ಬಂದ ಆನಂದ ಮೂರುತಿ ನೀನು
ನಂಬಿಕಿಲ್ಲದ ಪ್ರಪಂಚಿಗನು ನಾನು
ಅಂಬರೀಷಗೆ ಒಲಿದ ಅಕ್ರೂರ ಸಖ ನೀನು
ಡಂಭಕರ್ಮಿಯು ನಾನು ನಿರ್ಜಿತನು ನೀನು ॥೪॥
ತಿರುಪತಿಯವಾಸ ಶ್ರೀವೆಂಕಟೇಶನು ನೀನು
ಸ್ಮರಿಸಿ ನಿಮ್ಮಯ ನಾಮ ಬದುಕುವವ ನಾನು
ಬಿರುದುಳ್ಳವನು ನೀನು ಮೊರೆ ಹೊಕ್ಕವನು ನಾನು
ಸಿರಿಕಾಗಿನೆಲೆಯಾದಿ ಕೇಶವನು ನೀನು ॥೫॥

ಈ ಎರಡು ಕೀರ್ತನೆಗಳನ್ನು ಭಾಷಾಸ್ವರೂಪದ ದೃಷ್ಟಿಯಿಂದ ಸ್ವಲ್ಪ ನೋಡೋಣ. ಇಲ್ಲಿನ ಭಾಷಾಶೈಲಿಯಲ್ಲಿ ಜಿನುಗುವ ಆತ್ಮೀಯ ಧಾಟಿ ತಟ್ಟನೆ ಮನಸೆಳೆಯುತ್ತದೆ. ಸರಸಸಂಭಾಷಣೆಯ ಲಯ ಎದ್ದು ಕಾಣುತ್ತದೆ. ಕನಕದಾಸರು ಬಳಸುವ ವಾಕ್ಯಗಳ ಮಾದರಿಗೂ ಇಲ್ಲಿ ಉದಾಹರಣೆಗಳಿವೆ. ತುತಿ (ಸ್ತುತಿ), ಮೂರುತಿ (ಮೂರ್ತಿ), ಸತ್ತಿಗೆ (ಛತ್ರಿಕಾ), ಸಿರಿ (ಶ್ರೀ)–ಮುಂತಾದ ತದ್ಭವ ರೂಪಗಳೊಂದಿಗೆ ಅಣುರೇಣು ತೃಣ–ಮುಂತಾದ ತತ್ಸಮಗಳೂ ಸಮ ಸಮಕ್ಕೆ ಸೇರಿಕೊಂಡಿವೆ. –ಇಸು ಪ್ರತ್ಯಯಾಂತ ರೂಪಗಳೂ ಇವೆ : ತುತಿಸು, ಸ್ಮರಿಸು, –ಇಗ ಪ್ರತ್ಯಯ ಹತ್ತಿದ 'ಪ್ರಪಂಚಿಗ' ಎಂಬ ರೂಪದ ಬಳಕೆ ಗಮನಾರ್ಹ ; ಪ್ರಾಪಂಚಿಕನು, ಲೌಕಿಕನು ಎಂಬರ್ಥದಲ್ಲಿ ಪ್ರಪಂಚಿಗ ಎಂಬ ಅಪರೂಪ ಪ್ರಯೋಗವಿದು. ಕೇಶಿರಾಜ ಕೊಡುವ ತದ್ಧಿತ ಪ್ರತ್ಯಯ ಹತ್ತಿದ ಪ್ರಯೋಗಗಳ ಪಟ್ಟಿಯಲ್ಲಿ ಪ್ರಪಂಚಿಗ ರೂಪವಿಲ್ಲ ; ಕನಕದಾಸರು ಕೇಶಿರಾಜನಾದ ನಾಲ್ಕು ಶತಮಾನ ಅನಂತರ ಬಂದವರಾದರೂ ಈ ಶಬ್ದ ರೂಪ ಹಿಂದಿನವರು ಪ್ರಯೋಗಿಸಿದ್ದಿಲ್ಲವೆಂಬುದಕ್ಕೆ ಶಬ್ದಮಣಿದರ್ಪಣಕಾರನನ್ನು ಹೆಸರಿಸಿದ್ದಷ್ಟೆ. ಪಕಾರ

ಹಕಾರವಾಗಿರುವುದು ಕನ್ನಡಭಾಷೆಯ ವೈಶಿಷ್ಟ್ಯಗಳಲ್ಲೊಂದು ; ಕನಕದಾಸರ ಈ ಎರಡು ಕೀರ್ತನೆಗಳಲ್ಲೇ ಹಾಸಿಗೆ, ಹುಲ್ಲು ಹೂ ಹೆರು (ಹೆತ್ತ) ಹೊಗು– ಎಂಬ ರೂಪಗಳಿವೆ. ಐದಾರೆ ಎಂಬುದು ಕನ್ನಡ ಭಾಷೆಯ ಜೀವಂತ ರೂಪವಾದರೂ ಕನ್ನಡ ನಿಘಂಟು ದಾಖಲಿಸಿಲ್ಲ ! ಕಸಾಪ ಬೃಹತ್ ನಿಘಂಟಿನಲ್ಲೂ ಕನಕದಾಸರಿಗೆ ಪ್ರವೇಶವಿಲ್ಲ !! ಇರು (←ಇರ್) ಎಂಬ ಕ್ರಿಯಾರೂಪದ ಕೃದಂತ ರೂಪವಾಗಿ ಇಲ್ಲವೆ ಕೃಲ್ಲಿಂಗ ರೂಪವಾಗಿ ಐದಾರೆ ಎಂಬ ರೂಪವನ್ನೂ ಪರಿಗಣಿಸಬಹುದೆ ? ಇದು ವಿಚಾರಣೀಯ. ಇದಾರೆ ಇದ್ದಾರೆ ಇದ್ಧಾರೆ ಎಂಬ ರೂಪಗಳಂತೆ ಐದಾರೆ ಎಂಬುದನ್ನೂ ಬದುಕಿದ್ದಾರೆ(ಯೆ) ಎಂಬರ್ಥ ಕೊಡುವ ಕೃದಂತರೂಪವೆಂದು ಭಾವಿಸಿ ತೋರಿಸಬೇಕಲ್ಲವೆ ? ನಿಘಂಟುಕಾರರ ಮಡಿಲಿಗೆ ಕನಕದಾಸರು ಐದಾರೆ ಶಬ್ದವನ್ನು ಹಾಕಿದ್ದಾರೆ. ಕ್ಷೇಮ, ಕ್ಷಣ ಕ್ಷಣ, ಕರುಕು, ಗೊಂಬೆ–ಎಂಬೀ ಶಬ್ದರೂಪಗಳನ್ನೂ ಕಸಾಪ ನಿಘಂಟುಗಳು ಪ್ರಯೋಗ ಕೊಡುವಾಗ ದಾಖಲಿಸದಿರುವುದು ಮರವೆಯೊ, ಕನಕನ ಕಿಂಡಿಯೊ ಎಂಬುದು ಪರಿಶೀಲಿಸಬೇಕಾದ ವಿಷಯ. 'ಡಂಭಕರ್ಮಿ' ಎಂಬ ಪ್ರಯೋಗವೂ ಅಷ್ಟೆ ; ಇದನ್ನು ಡಂಭ (←ದಂಬ) ಶಬ್ದದ ಕೆಳಗೆ 'ಡಂಭಕರ್ಮಿ' ಎಂದು ಪ್ರತ್ಯೇಕವಾಗಿ ತೋರಿಸಿ, ಅರ್ಥ ವಿವರಿಸಿ, ಕನಕದಾಸರ ಪ್ರಯೋಗ ಕೊಡಬೇಕಲ್ಲವೆ ? ಕೆಲವು ಕನಕದಾಸರ ಹಾಡುಗಳನ್ನು ಹೊಟ್ಟೆಯುರಿಯಿಂದ ಹಾಳುಮಾಡಿರುವ ಅಕ್ಕರಿಗರು, ಇನ್ನೂ ಕೆಲವು ಕೀರ್ತನೆಗಳ ಕಡೆಯ ಅಂಕಿತವನ್ನಷ್ಟೇ ತಿದ್ದಿ ಬೇರೆಯವರ ಅಂಕಿತ ಹಾಕಿ, ಕನಕದಾಸರಿಗೆ ದೊಡ್ಡ ಪಂಗನಾಮ ಹಾಕಿರುವ ಕೆಲಸವೂ ನಡೆದಿದೆಯೆಂಬುದಕ್ಕೆ ಸಾಕ್ಷ್ಯಾಧಾರಗಳಿವೆ ; ಆ ಪುರಾವೆಗಳ ಪರಿಶೀಲನೆ ಇಲ್ಲಿಗೆ ಅಪ್ರಸ್ತುತವೆಂದು ಕೈಬಿಡಲಾಗಿದೆ.

ಇಲ್ಲಿ ಉದಾಹರಿಸಿರುವ ಎರಡು ಹಾಡುಗಳ ಧ್ವನಿಯೇನೆಂಬುದು ಸುಲಭವಾಗಿ ಹೃತ್ಸಂವೇದ್ಯವಾಗುತ್ತದೆ. ಬದುಕಿನ ನಡಿಗೆಯಲ್ಲಿರುವ ವಿರುದ್ಧ ತುದಿಗಳನ್ನು ಹಿಡಿದು ತುಲನೆ ಮಾಡಿ ನೋಡುವುದು, ವಿಧಿಯ ಕೈವಾಡ ಅದ್ಭುತವೆಂದು ಅಚ್ಚರಿಯಿಂದ ಹುಬ್ಬೇರಿಸುವುದು–ಇದು ಸರ್ವೇ ಸಾಮಾನ್ಯ. ಆದರೆ ಇವು ಓದುಗನ ಮೇಲೆ ಅತ್ಯಂತ ಪರಿಣಾಮಕಾರಿಯಾದ ಪ್ರಭಾವ ಬೀರುತ್ತವೆಂಬುದನ್ನೂ ನೆನಪಿಡಬೇಕು, ಎರಡನೆಯ ಕೀರ್ತನೆ ನೈಚ್ಯಾನುಸಂಧಾನದ ಕೀರ್ತನೆ ; ಇದಕ್ಕೆ ಸದೃಶವಾದ ಕೀರ್ತನೆಗಳೂ ಕನಕದಾಸರಲ್ಲೇ ಅಲ್ಲದೆ ಇತರ ಕೀರ್ತನಕಾರರಲ್ಲೂ ಸಾಕಷ್ಟು ಸಿಗುತ್ತವೆ. ಆದರೆ ವಿಡಂಬನೆಯ ಸಂದರ್ಭದಲ್ಲಿ

ಕನಕದಾಸರ ಲೇಖಣಿಗೆ ಬರುವ ಹರಿತ, ಮೊನಚು ವಿಶೇಷ ಗಮನಿಕೆಗೆ ತಕ್ಕುದಾಗಿದೆ. ನಿದರ್ಶನಕ್ಕೆಂದು (ಇಡೀ ಕೀರ್ತನೆಗಳನ್ನು ಉದಾಹರಿಸದೆ) ಆಯಾ ಕೀರ್ತನೆಯ ಮೊದಲ ಸಾಲನ್ನು ಮಾತ್ರ ಉಲ್ಲೇಖಿಸುತ್ತೇನೆ : ತೀರ್ಥವನು ಪಿಡಿದವರೆಲ್ಲ, ಕನಕದಾಸನ ಮೇಲೆ ದಯಮಾಡಲು, ಅಜ್ಞಾನಿಗಳ ಕೂಡೆ ಅಧಿಕ ಸ್ನೇಹ, ಕುಲ ಕುಲ ಕುಲವೆಂದು ಹೊಡೆದಾಡದಿರಿ, ಕುಲ ಕುಲ ಕುಲವೆನ್ನುತ್ತಿಹರು, ಎಲ್ಲಾರು ಮಾಡುವುದು ಹೊಟ್ಟೆಗಾಗಿ–ಮೊದಲಾದ ಕೀರ್ತನೆಗಳ ಭಾಷಾ ಸ್ವರೂಪ ಅಭ್ಯಾಸಯೋಗ್ಯವಾಗಿದೆ. ಇದನ್ನು ಕೇವಲ ಭಾಷೆಯ ನಿಟ್ಟಿನಿಂದಷ್ಟೇ ಅಲ್ಲದೆ, ಶೈಲಿ ವಿಜ್ಞಾನದ ಆಸಕ್ತಿಯಿಂದಲೂ ನೋಡಬೇಕು. ಏಕೆಂದರೆ ಇಂಥ ವಚನಗಳಲ್ಲಿ ಕನಕದಾಸರ ಆಲೋಚನೆಗಳು ಹರಳುಗೊಂಡು ಕವಿಯ ಆತ್ಮಾಭಿವ್ಯಕ್ತಿಯ ಧಾಟಿಯಲ್ಲಿ ಕೇಳಿಸುತ್ತವೆ. ಅಲ್ಲದೆ ಇವು ಕನಕದಾಸರ ಸಾಧಕ ಜೀವನದೊಂದಿಗೇನೇ ಹೋರಾಟದ ಹೆಜ್ಜೆ ಗುರುತುಗಳೂ ಇರುವ ವಚನಗಳು.

ಕನಕದಾಸರು ಜನಪರವಾದ ದೃಷ್ಟಿ–ಸಂವೇದನೆಯುಳ್ಳವರು. ಮುಖ್ಯವಾಗಿ ಅವರು ಜನತೆಯ ಕವಿ. ಅವರು ಹುಟ್ಟಿಬಂದದ್ದು, ಬಾಳಿದ್ದು ಜನರ ನಡುವೆ ಅಮೂರ್ತವೂ ಸುಲಭಗ್ರಾಹ್ಯವೂ ಆದ ತಾತ್ವಿಕ ಸಂಗತಿಗಳನ್ನು ಇಂದ್ರಿಯಗಳು ಹಿಡಿಯುವಷ್ಟು ಸುಲಭಗೊಳಿಸಿ, ಹಾಗೆಯೇ ಮೂರ್ತಗೊಳಿಸಿ, ನಿರಾಯಾಸವಾಗಿ ಭಾಷೆಯಲ್ಲಿ ಹೇಳುವುದು ಕನಕರಿಗೆ ಅತಿ ಸುಲಭಸಾಧ್ಯವಾಗಿದೆ. ಅವರ ಭಾಷೆ ಇಂತಹ ನೆಲೆಗಳಲ್ಲಿ ಕ್ರಿಯಾಶೀಲವಾಗಿ ಸಾಭಿನಯವಾಗಿ ಚಲಿಸುತ್ತದೆ. ಅದಕ್ಕಾಗಿ ಅವರು ಬಹುಮಟ್ಟಿಗೆ ಹಳ್ಳಿಗಾಡಿನ ಜನಜೀವನದ ಸಾಮತಿಗಳನ್ನು ಆಶ್ರಯಿಸಿದ್ದಾರೆ. ತಮ್ಮ ಕಾಲದ ವಿದ್ಯಾವಂತ ಮೇಲುವರ್ಗದ ಹಾಗೂ ನಗರದವರ ಶಿಷ್ಟ ಭಾಷೆಗೆ ಕನಕರು ಎಲ್ಲೋ ಆಳದಲ್ಲಿ ಭಿನ್ನವಾಗಿ ಪ್ರತಿಕ್ರಿಯಿಸುವುದಕ್ಕೇ ಹೆಚ್ಚು ಉತ್ಸುಕರಾದಂತೆ ತೋರುತ್ತದೆ : 'ಪೆರ್ಮಕ್ಕಳ ಬಿಟ್ಟು ಸಲೆ ವಾಗ್ದೇವಿಯೆನ್ನೊಳಗಿರು ತಾಯೆ' (೧–೧೦) ಎಂಬ ಮೋಹನತರಂಗಿಣಿ ಕಾವ್ಯದ ಅರಿಕೆಯಲ್ಲಿರುವ ಧ್ವನಿ ಪರಿಭಾವನಾರ್ಹವೆನಿಸುತ್ತದೆ. ಡೊಂಕುಬಾಲದ ನಾಯಕರೆ ಎಂಬಂಥ ಅಭಿವ್ಯಕ್ತಿ, ಆತ್ಮ ಯಾವ ಕುಲ ಜೀವ ಯಾವ ಕುಲ ಎಂಬಂಥ ತಾತ್ವಿಕ ಪ್ರಶ್ನೆ, ಹೂವತರುವರ ಮನೆಗೆಹುಲ್ಲ ತರುವ ಎಂಬಂಥ ಕೃತಜ್ಞತೆ ಘನೀಕರಿಸಿದ ಹೇಳಿಕೆ, ತಲ್ಲಣಿಸದಿರು ಕಂಡ್ಯ, ತಾಳು ಮನವೆ–ಎಂಬಂಥ ಅದ್ಭುತ ವಾಸ್ತವಿಕತೆಯ ಚಿತ್ರ–ಇಂಥ ಕೀರ್ತನೆಗಳ ಭಾವದೊಂದಿಗೆ ಭಾಷೆಯನ್ನೂ ವಿಶೇಷವಾಗಿ ಗಮನಿಸಬಹುದು.

ಆದರೆ ಜನಸಾಮಾನ್ಯರ ನಡುವೆಯೇ ಇದ್ದು ಹಾಡಿಕೊಂಡ ಹಾಡುಗಳಿವು

ಎಂಬುದನ್ನು ಸಾಬೀತುಪಡಿಸುವ ಸಾಕ್ಷ್ಯಾಧಾರಗಳು ; ಶಿಷ್ಟಕಾವ್ಯಗಳ ಭಾಷೆಯ ಕಟ್ಟು ಪಾಡುಗಳನ್ನು ಮೀರಿ, ಮಡಿಯಿಲ್ಲದೆ ಜೀವಂತ ಕನ್ನಡದ, ಜನತೆಯ ನುಡಿಕಟ್ಟುಗಳನ್ನು ಒಪ್ಪಿಕೊಂಡು ಬರೆದ ಕೀರ್ತನೆಗಳು ಕನಕರ ಕೀರ್ತನರಾಶಿಯಲ್ಲಿ ಕಂಡಾಪಟ್ಟೆ ಸಿಗುತ್ತವೆ, ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ, ದೇವಿ ನಮ್ಮ ದ್ಯಾವರು ಬಂದರು– ಎಂಬ ಹಾಡುಗಳಂತೂ ಅಂದಿನ ವ್ಯಾವಹಾರಿಕ ಕನ್ನಡ ಭಾಷೆಗೆ ಹಿಡಿದ ರನ್ನಗನ್ನಡಿಯಾಗಿದೆ. ಅವರ ಕಾಲದ ಜನಪದರ ಭಾಷೆಯ ಸೊಗಡು. ವಾಸನೆ ಮೂಗಿಗೆ ಬಡಿಯುವ ಭಾಗಗಳು ಸಮೃದ್ಧವಾಗಿದ್ದು ಹೆಕ್ಕಿದಲ್ಲಿ ಸಿಕ್ಕುತ್ತವೆ : ಊರೂಟ, ಹಣ್ಣು ಬಿಡದ ಮರಗಳು, ಮೊರದಗಲ ಕಿವಿ, ಹೊಟ್ಟೆಯ ಗಣನಾಥ, ಮೋರೆ ಕಪ್ಪು, ಅಡವಿಗಡ್ಡೆ, ಹಳ್ಳೀಯ ಹನುಮಾ, ಮೂಳದಾಸ ಮಾದಿಗದಾಸ, ಕಲ್ಲಿನಲ್ಲಿ ಹುಟ್ಟಿ ಕೂಗುವ ಕಪ್ಪೆ, ಗೇಣುಬಟ್ಟೆ ತುತ್ತುಹಿಟ್ಟು, ಹೆಂಟೆಮಣ್ಣು ಸಮಮಾಡಿ, ಸುಳ್ಳು ಬೊಗಳಿ, ಕೊಟ್ಟಣ ಕುಟ್ಟಿಕೊಂಡು ಕಟ್ಟಿಗೆ ಹೊತ್ತುಕೊಂಡು, ಒನಕೆಯಿಂದ ಕುಟ್ಟಿಕೇರಿ. ಸುಟ್ಟು ಸುಟ್ಟು ಸುಣ್ಣದರಳು ಆಯಿತೇ ಕಾಯ, ಬಂಡಿ ತುಂಬ ಇದ್ದ ಧನವು, ಕೊಳೆತ ತೆಂಗಿನ ತುರಿ, ಹರಕು ತೊಗಲಿನ ಮಿಣಿ, ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ. ಉಂಡ ಮನೆಗೆರಡೆಣಿಸುವಾತ, ಹೊತ್ತರೆದ್ದು ಹೋಗಿ, ಹೋಗುತೇನು ಒಯ್ಯಲಿಲ್ಲ, ಕಾಲುನಡಿಗೆ, ಸುಣ್ಣವಿಲ್ಲದ ವೀಳ್ಯ, ಮೊಲೆ ಬಿದ್ದ ಹೆಣ್ಣು, ಬೆಲೆ ಬಿದ್ದ ಸರಕು, ಕಳ್ಳ ಕೂಗನೆ ಬೊಗಳಿ, ಬೆಟ್ಟಗಳನೆ ಕಿತ್ತಿ–ಹೀಗೆ ಈ ಬಗೆಯ ಇನ್ನೂ ನೂರಾರು ಪದಪುಂಜಗಳನ್ನಿತ್ತು, ಇವೆಲ್ಲ ಕನ್ನಡ ಜೀವದ್ಭಾಷೆಯ ದೇಸಿ ಹೇಗೆ ಕೆನೆಕಟ್ಟಿದೆಯೆಂದು ತೋರಿಸಬಹುದು, ಕನ್ನಡ ಆಡು ನುಡಿಯ ಸೊಗಡು ಮೂಗಿಗೆ ಬಡಿಯುವ, ಕೈಗೆ ಅಂಟಿಕೊಳ್ಳುವ ಮಾತುಗಳು ಕನಕದಾಸರ ನಾಲಗೆ ತುದಿಯಲ್ಲಿ ಕುಣಿಯುತ್ತಿರುತ್ತವೆ. ದಶಾವತಾರಗಳನ್ನು ಹಳ್ಳಿಯ ಹೈದರಿಗೆ ನಿಲುಕುವಂತೆ ನಿರೂಪಿಸಿರುವ ಕನಕದಾಸರ ಕನ್ನಡ ಭಾಷೆಗೊಂದು ಮಾದರಿ.

ದೇವಿ ನಮ್ಮದ್ಯಾವರು ಬಂದರು ಬನ್ನಿರೆ ನೋಡ ಬನ್ನಿರೆ ॥ಪ॥
ಕೆಂಗಣ್ಣಮೀನನಾಗಿ । ನಮರಂಗ
ಗುಂಗಾಡಿ ಸೋಮನಾ ಕೊಂದನ್ಯಾ
ಗುಂಗಾಡಿ ಸೋಮನ ಕೊಂದು ವೇದವ
ಭಂಗಾರದೊಡಲನಿಗಿತ್ತನ್ಯಾ ॥೧॥
ದೊಡ್ಡ ಮಡುವಿನೊಳಗೆ । ನಮರಂಗ
ಗುಡ್ಡವ ಹೊತ್ತುಕೊಂಡು ನಿಂತನ್ಯಾ

ಗುಡ್ಡವ ಹೊತ್ತುಕೊಂಡು ನಿಂತು ಸುರರನು
ದೊಡ್ಡವರನ್ನು ಮಾಡನ್ಯಾ ॥೨॥
ಚನ್ನ ಕಾಡಿನ ಹಂದಿಯಾಗಿ । ನಮರಂಗ
ಚಿನ್ನದ ಕಣ್ಣನ ಕೊಂದನ್ಯಾ
ಚಿನ್ನದ ಕಣ್ಣನ ಕೊಂದು ಭೂಮಿಯ
ವನಜ ಸಂಭವನಿಗಿತ್ತನ್ಯಾ ॥೩॥
ಸಿಟ್ಟಲಿ ಸಿಂಹನಾಗಿ । ನಮರಂಗ
ಹೊಟ್ಟೆಯ ಕರುಳ ಬಗಿದನ್ಯಾ
ಹೊಟ್ಟೆಯ ಕರುಳ ಹಾರವ ಮಾಡಿ
ಪುಟ್ಟಗೆ ವರವ ಕೊಟ್ಟನ್ಯಾ ॥೪॥
ಹುಡುಗ ಹಾರುವನಾಗಿ । ನಮರಂಗ
ಬೆಡಗಲಿ ಮುಗಿಲಿಗೆ ಬೆಳೆದನ್ಯಾ
ಬೆಡಗಲಿ ಮುಗಿಲಿಗೆ ಬೆಳೆದು ಬಲಿಯನ್ನು
ಅಡಿಯಿಂದ ಪಾತಾಳಕೊತ್ತನ್ಯ ॥೫॥
ತಾಯ ಮಾತನು ಕೇಳಿ । ಸಾಸಿರ ತೋಳಿನ
ಆವಿನ ಕಳ್ಳನ ಕೊಂದನ್ಯಾ
ಆವಿನ ಕಳ್ಳನ ಕೊಂದು ಭೂಮಿಯ
ಅವನಿಸುರರಿಗೆ ಇತ್ತನ್ಯಾ ॥೬॥
ಕೆಂಗ್ಯಾಳೆ ಕಣ್ಣಿನ ಕೊಂಗಗಳ ಕೂಡಿ
ಜಂಘೇಲಿ ಲಂಕೆಗೆ ಪೋದನ್ಯಾ
ಜಂಘೇಲಿ ಲಂಕೆಗೆ ಪೋಗಿ । ನಮರಂಗ
ಹೆಂಗಸು ಕಳ್ಳನ ಕೊಂದನ್ಯಾ ॥೭॥
ಕರಿಯ ಹೊಳೆಯಲ್ಲಿ ತುರುಗಳ ಕಾಯುತ
ಉರುಗನ ಮಡುವ ಧುಮುಕ್ಯಾನ್ಯಾ
ಉರುಗನ ಹೆಡೆಮೇಲೆ ಹಾರಾರಿ ಕುಣಿವ್ಯಾಗ
ಯಾರ್‍ಯಾರಿಗೇನೇನು ಇತ್ತಾನ್ಯಾ ॥೮॥
ಬಿಂಕದ ಗೋವಳನಾಗಿ । ನಮರಂಗ
ಡೊಂಕಾದ ಮುದುಕಿಯ ಕೂಡ್ಯಾನ್ಯಾ
ಡೊಂಕಾದ ಮುದುಕಿಯ ಕೂಡಿ ಮಾವನ

ಬಿಂಕವ ಮುರಿದು ಕುಣಿದಾನ್ಯ್ಯಾ ॥೯॥
ಭಂಡನಂದದಿ ಪುಂಡರೀಕಾಕ್ಷನು
ಕಂಡಕಂಡಲ್ಲಿಗೆ ತಿರುಗ್ಯಾನ್ಯ್ಯಾ
ಕಂಡಕಂಡಲ್ಲಿಗೆ ತಿರುಗಿ ತ್ರಿಪುರರ
ಹೆಂಡಿರನೆಲ್ಲ ಕೆಡಿಸ್ಯಾನ್ಯ್ಯಾ ॥೧೦॥
ಚೆಲುವೆ ಹೆಂಡತಿ ಕುದುರೆಯ ಮಾಡಿ
ಒಳ್ಳೆ ರಾವುತನಾದಾನ್ಯ್ಯಾ
ಒಳ್ಳೆರಾವುತನಾಗಿ । ನಮರಂಗ
ಡೊಳ್ಳುಹೊಟ್ಟೆಯ ಮೇಲೊದ್ದನ್ಯ್ಯಾ ॥೧೧॥
ಡೋಳಿನ ಮೇಲ್ ಕೈ ಬರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಯಾನ್ಯ್ಯಾ
ಒಳ್ಳೊಳ್ಳೆ ಪದಗಳು ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ಯ್ಯಾ ॥೧೨॥

ಈ ಇಡೀ ಹಾಡನ್ನು ಇಲ್ಲಿ ಉದಾಹರಿಸಿರುವುದು ನಿರುದ್ದೇಶದಿಂದಲ್ಲ, ಇದು ಕನಕದಾಸರ ಸ್ವಗತಲಹರಿಯಂತೆ ಹರಿದು ಬಂದಿರುವ ಕೀರ್ತನೆಯೆಂದು ಇಲ್ಲಿರುವ ಸ್ವಾರಸ್ಯವನ್ನು ಸಾದರಪಡಿಸಲು. ಅಚ್ಚಗನ್ನಡದ ಕೆಚ್ಚಿನಿಂದ ಬರೆಯ ಹೊರಟ ಕಬ್ಬಿಗರ ಕಾವ್ಯದ ಆಂಡಯ್ಯನ ಪ್ರಯತ್ನವನ್ನು ಇದು ನೆನಪಿಸುತ್ತದೆ. ಮತ್ಸ್ಯಾವತಾರ, ಕೂರ್ಮಾವತಾರ, ವರಾಹಾವತಾರ, ಹಿರಣ್ಯಾಕ್ಷ, ಪ್ರಹ್ಲಾದ, ತ್ರಿವಿಕ್ರಮ, ಕಾರ್ತವೀರ್ಯಾರ್ಜುನ, ರಾವಣ. ಯಮುನಾನದಿ, ಕುಬ್ಜೆ–ಎಂಬೀ ಸಂಸ್ಕೃತ ರೂಪಗಳಿಗೆ ಕ್ರಮವಾಗಿ ಕೆಂಗಣ್ಣಮೀನ, ಗುಡ್ಡಹೊತ್ತುನಿಂತವ, ಚನ್ನ ಕಾಡಿನಹಂದಿ, ಚಿನ್ನದಕಣ್ಣ, ಪುಟ್ಟ, ಹುಡುಗ ಹಾರುವ, ಸಾಸಿರ ತೋಳಿನ ಆವಿನ ಕಳ್ಳ, ಹೆಂಗಸುಕಳ್ಳ, ಕರಿಯಹೊಳೆ, ಡೊಂಕಾದ ಮುದುಕಿ ಎಂದು ಕನ್ನಡದ ನುಡಿಯೊಳಗೆ ಹಿಡಿದು ಕೊಟ್ಟಿರುವುದು ಕನ್ನಡ ಭಾಷೆಯ ಸಾಧ್ಯತೆಯನ್ನು ಬಯಲಿಗೆಳೆದ ಕನಕದಾಸರ ಎದೆಗಾರಿಕೆಯಾಗಿದೆ. ಒಂದು ಭಾಷೆಗೆ ಇಂಥ ದೋಹದವೆಸಗುತ್ತ ಹೊರಟಾಗಲೆ ಅದರ ಕಸುವು ಹೊರಬೀಳುವುದು. ಅಲ್ಲದೆ ಹಳ್ಳಿಯ ಜನಪದರನ್ನು ಎದುರಿಗೆ ಕುಳ್ಳಿರಿಸಿ ಅವರ ನಿತ್ಯದ ನುಡಿಗಳನ್ನು ಅಳವಡಿಸಿ ಅವತಾರಗಳನ್ನು ಸರಳವಾಗಿ ತಿಳಿಸಲಾಗಿದೆ. ಇಹನ್ಯಾರಮ್ಮ, ಐದಾರೆ, ಎನ್ನಿರೊ, ಸತನೀಗೆ, ಯಾರಿಗ್ಯಾರಿಲ್ಲ, ಬೊಮ್ಮ, ಪೂರ್ತ್ಯಾಗಲೆಂದು, ಬ್ಯಾರೆ ಬ್ಯಾರೆ, ಅಮ್ಮಯ್ಯ, ಕಾಯ್ವ ಕಂಡ್ಯ, ಗಟ್ಯಾಗಿ, ವೀಳ್ಯ, ಅವರ್ಯಾರೊ, ಹಚ್ಯಡ

ನೋಡಿರೋ, ಹ್ಯಾಂಗೆ, ಕೆಂಗ್ಯಾಳೆ, ತೀರ್ಥವ್ಯಾತಕೆ–ಮುಂತಾದ ಮಾತುಗಳು ಕೇಶಿರಾಜನ ಕಿವಿಗೆ ಬಿದ್ದದ್ದೇ ಆದರೆ 'ಅರಿಯದೆ ಗ್ರಾಮ್ಯರು ಉಚ್ಚರಿಪರು' ಎಂದು ಕೈವಾರಿಸುತ್ತಿದ್ದನೇನೋ ! ಆದರೆ ಕನಕಪ್ಪನಿಗೆ ಶುದ್ಧಾಶುದ್ಧದ ಮಡಿಮೈಲಿಗೆಯ ಪ್ರಶ್ನೆಯೇ ಇಲ್ಲ, ಮಾತುಗಳು ಜನಬಳಕೆಯಲ್ಲಿದ್ದರೆ ಆಯಿತು.

ಕನಕದಾಸರ ಕೃತಿಗಳಲ್ಲಿ ಸಿಗುವ ಕನ್ನಡ ಭಾಷೆ, ಶೈಲಿಯ ದೃಷ್ಟಿಯಿಂದ ಒಂದೇ ಬಗೆಯದಲ್ಲವೆನಿಸುತ್ತದೆ. ಕೀರ್ತನೆಗಳಲ್ಲಿ ಕಾಣುವುದಕ್ಕಿಂತ ಬೇರೆಯಾದ ಶೈಲಿಯೊಂದು ಅವರ ಕಾವ್ಯಗಳಲ್ಲಿದೆ ಎಂಬುದು ಇದುವರೆಗಿನ ಸಮೀಕ್ಷೆಯಿಂದ ದತ್ತವಾಗುವ ಸಾರಾಂಶ. ಅಲ್ಲದೆ ಅವರ ಶೈಲಿಯಲ್ಲಿ ಕೆಲವು ತಿರುವುಗಳಿರುವುದನ್ನೂ ಪರಿಚಯಿಸಿಕೊಳ್ಳಬಹುದು. ಯಕ್ಷಗಾನದ ನಡಿಗೆ, ಆಡುಮಾತಿನ ವರಿಸೆ, ಶಿಷ್ಟಭಾಷೆಯ ಗತ್ತು–ಇವಿಷ್ಟೂ ಅವರ ಒಟ್ಟು ಕೃತಿಗಳಲ್ಲುಂಟು. ವರವ ಕೊಡು ಎನಗೆ ವಾಗ್ದೇವಿ–ಎಂಬೊಂದು ವರ್ಣನಾತ್ಮಕ ಸ್ವರೂಪದ ಕೀರ್ತನೆಯಿದೆ. ಶಾರದೆಯ ಸ್ತುತಿ ಕವಿತೆಯೆಂದು (ಕನಕದಾಸರು ಸರಸ್ವತಿಯನ್ನು ಉಳಿದವರಿಗಿಂತ ಹೆಚ್ಚು ಸ್ತೋತ್ರಿಸಿರುವುದು ಗಮನಿಸಬೇಕಾದ ಅಂಶ) ಧಾರಾಳವಾಗಿ ಪರಿಗಣಿಸಬಹುದಾದ ಈ ಕೀರ್ತನೆಯಲ್ಲಿ, ಶಿಷ್ಟ ಕಾವ್ಯ ಸಂಪ್ರದಾಯದ ಭಾಷಾ ಮರ್ಯಾದೆಯನ್ನು ಅನುಸರಿಸಿ ಆದಿಪ್ರಾಸವನ್ನು ನಿಯತವಾಗಿಯೇ ಪಾಲಿಸಲಾಗಿದೆ. ಇದು ಕೀರ್ತನೆಯ ಛಂದಸ್ಸಿನ ಶರೀರ ಲಕ್ಷಣಕ್ಕೂ ಅನುಗುಣವಾಗಿ ಪಲ್ಲವಿ ಮತ್ತು ಚರಣಗಳನ್ನೊಳಗೊಂಡಿದೆ. ನಾನು ಒತ್ತುಕೊಟ್ಟು ಪ್ರಸ್ತಾಪಿಸ ಬಯಸುತ್ತಿರುವುದು ಫಲಾನಿ ಕೀರ್ತನೆಯ ಈ ಮುಖವನ್ನಲ್ಲ, ಸ್ವಾರಸ್ಯ ಹಾಗೂ ಕವಿಯ ಸ್ವಂತಿಕೆಯ ಛಾಪು ಬಿದ್ದಿರುವುದು, ಪ್ರತಿಚರಣದ ಕಡೆಯಲ್ಲಿ ಎದ್ದು ಕುಣಿಯುವ ಅಂತ್ಯಪ್ರಾಸ. ಈ ಕೀರ್ತನೆಯಲ್ಲಿ ಕವಿಯ ಚಿತ್ರಕ ಶಕ್ತಿ ಮತ್ತು ಕಾವ್ಯಾಂಶಗಳು ಅಷ್ಟೇನೂ ಉನ್ನತ ಮಟ್ಟದಲ್ಲಿ ಮೈದೋರದಿದ್ದರೂ ಭಾಷೆಯ ಲಯನಿರಿಗೆ ಗಮನ ಸೆಳೆಯುತ್ತದೆ. ತಾಳಗತಿಗೆ ಹಾಕುವ ಹೆಜ್ಜೆ ಕುಣಿತದ ನೂಪುರ ಗತಿಯೂ, ಗಲುಗಲು ಎನ್ನುವ ಗೆಜ್ಜೆಸದ್ದೂ ಕೇಳುತ್ತಿರುವ ಅನುಭವ ಓದುಗನಿಗೆ ಆಗುತ್ತದೆ.

ವರವ ಕೊಡು ಎನಗೆ ವಾಗ್ದೇವಿ ನಿಮ್ಮ
ಚರಣಕಮಲಗಳ ದಯಮಾಡು ದೇವಿ ॥ಪ॥
ಶಶಿಮುಖದ ನಸುನಗೆಯ ಬಾಲೆ
ಎಸೆವ ಕರ್ಣದ ಮುತ್ತಿನೋಲೆ
ನಸುವ ಸುಪಲ್ಲ ಗುಣಶೀಲೆ । ದೇವಿ

ಬಿಸಜಾಕ್ಷಿ ಎನ್ನ ಹೃದಯದೊಳು ನಿಂದಳೆ ॥೧॥
ಇಂಪು ಸೊಂಪಿನ ಚಂದ್ರಬಿಂಬೆ
ಕೆಂಪು ತುಟಿಗಳ ನಾಸಿಕದ ರಂಭೆ
ಜೊಂಪು ಮದನಸಿಂಗಾಡಿ ಪೂರ್ಣಶಕ್ತಿಬೊಂಬೆ । ಒಳ್ಳೆ
ಸಂಪಿಗೆ ಮುಡಿಗಿಟ್ಟು ರಾಜಿಪ ಶಾರದಾಂಬೆ ॥೨॥
ರವಿಕೋಟಿ ತೇಜ ಪ್ರಕಾಶೆ । ಮಹಾ
ಕವಿಜನಹೃತ್ಕಮಲವಾಸೆ
ಅವಿರಳಪುರಿ ಕಾಗಿನೆಲೆಯಾದಿ ಕೇ
ಶವನ ಸುತನೀಗೆ ಸನ್ನುತ ರಾಣಿ ವಾಸೆ ॥೩॥

ಬಾಲೆ ಮುತ್ತಿನೋಲೆ ಗುಣಶೀಲೆ, ಚಂದ್ರಬಿಂಬೆ ರಂಭೆ ಬೊಂಬೆ ಶಾರದಾಂಬೆ. ತೇಜ ಪ್ರಕಾಶೆ ರಾಣಿವಾಸೆ–ಎಂಬ ಓಟ ಉದ್ದಕ್ಕೂ ಪೋಷಾಕು ತೊಟ್ಟು ಸಾಭಿನಯಪೂರ್ವಕ ಕುಣಿಯುತ್ತಾ ರಂಗದ ಮೇಲೆ ನಿಂತ ಯಕ್ಷಗಾನದ ಪಾತ್ರವನ್ನು ಕಣ್ಣಿಗೆ ಕಟ್ಟಿದಂತೆ ಕಾಣಿಸುತ್ತದೆ. ಎರಡು–ಮೂರು, ಮೂರು–ನಾಲ್ಕು ಹೀಗೆ ಮಾತ್ರೆಗಳ ಸಂಯೋಜಿತ ಜೋಡಿಗಳು ಚರಣಗಳೊಳಗೆ ನಡಸುವ ದಾಂಪತ್ಯ–ಇವಿಷ್ಟೂ ವಿಶ್ಲೇಷಣೆಗೆ ಬಯಲುಗೊಳ್ಳುತ್ತ ಇಡೀ ಕೀರ್ತನೆಯ ಒಟ್ಟು ಪರಿಣಾಮವನ್ನು ಹಿಗ್ಗಿಸುತ್ತದೆ. ಸಾಂದ್ರಗೊಳಿಸುತ್ತದೆ. ಅಂತ್ಯಪ್ರಾಸ ಬಂದ ಕಡೆಗಳಲ್ಲೆಲ್ಲಾ ಅದು ಯಕ್ಷಗಾನದ ಭಾಷಾಲಯ ಎಂದು ಒಟ್ಟು ತೀರ್ಮಾನವೆಂದು ಈ ಹೇಳಿಕೆಗೆ ಅರ್ಥವಲ್ಲ.

ಏನೆಂದು ಕೊಂಡಾಡಿ ತುತಿಸಲೋ ದೇವ–ಎಂಬ ಇನ್ನೊಂದು ಹಾಡಿನ ಭಾಷಾ ಸ್ವರೂಪ ನೋಡೋಣ. ಅದರ ಐದೂ ಚರಣಗಳಲ್ಲಿ ನಾನು–ನೀನು–ನಾನು ಎಂಬ ಉತ್ತಮ–ಮಧ್ಯಮ ಪುರುಷ ಸರ್ವನಾಮ ರೂಪಗಳೇ ಕ್ರಮವಾಗಿ ಪ್ರತಿಪಾದದಲ್ಲೂ ಪುನರಾವೃತ್ತಿಗೊಳ್ಳುತ್ತವೆ. ಆದರೂ ಅದು ಬಯಲಾಟದ ಧಾಟಿಗೆ ಸಂವಾದಿಯಲ್ಲ. ಕನಕದಾಸರಿಗೆ ಯಕ್ಷಗಾನದ ಭಾಷೆ–ಲಯ ಪರಿಚಯವಿತ್ತಷ್ಟೇ ಅಲ್ಲದೆ ಪ್ರಿಯವಾಗಿತ್ತೆಂದು ತೋರಿಸಲು ಅವರ ಇತರ ಕೃತಿಗಳಿಂದಲೂ ಪುಷ್ಟಿ ಸಿಗುತ್ತದೆ. ಅವರ 'ಮೋಹನ ತರಂಗಿಣಿ' ಎಂಬ ಸಾಂಗತ್ಯ ಕಾವ್ಯದಿಂದ ಒಂಡೆರಡು ಪದ್ಯಗಳನ್ನು ತೆಗೆದುಕೊಂಡು, ಆ ಪದ್ಯಗಳೊಳಗೆ ಕುಳಿತು ಕುಣಿಯುವ ಯಕ್ಷಗಾನದ ಭಾಷೆಯನ್ನು ಹೊರಗೆಳೆಯಬಹುದು.

ಖ್ಯಾತವೇದಾಗಮಾತೀತೆ ಶರ್ವನ ಮನಃ
ಪ್ರೀತೆ ಷಣ್ಮುಖಂ ವಿನಾಯಕರ

ಮಾತೆ ದನುಜ ಕುಲಭೀತೆ ತುಹಿನಗಿರಿ
ಜಾತೆ ಕೊಡೆನಗೆ ಸನ್ಮತಿಯ ॥೧–೧೦॥
ಓಪನೆ ಸಕಲ ಕಲಾಪನೆ ಸತ್ಕುಲ
ದೀಪನೆ ಲಲಿತ ಪುಂಡ್ರೇಕ್ಷು
ಚಾಪನೆ ಮೋಹನ ರೂಪನೆ ನಿನ್ನಬಿ
ಟ್ಟೀಪರಿಯಲಿ ಬಾಳ್ವೆ ಜೀಯ ॥ (೮–೧೮)

ಇಂಥ ಇನ್ನೂ ಕೆಲವು ನಿದರ್ಶನಗಳನ್ನು ನೋಡಿದರೆ ಕನಕದಾಸರೂ ಬಯಲಾಟಗಳಿಗೆ ಸಾಹಿತ್ಯ ಕೊಟ್ಟು ಜನಪದರನ್ನು ಹುರಿದುಂಬಿಸಿರಬಹುದೆಂಬ ಭಾವನೆಗೆ ಇಂಬು ದೊರೆಯುತ್ತದೆ. ಈ ಸಾಂಗತ್ಯ ಕಾವ್ಯದ ನಡುವೆಯೂ ಕೀರ್ತನೆಯ ರಚನೆಯನ್ನೂ ಲಯವನ್ನೂ ನೆನಪಿಸುವಂಥ ಪದ್ಯಗಳಿವೆಯೆಂಬುದಕ್ಕೊಂದು ಉದಾಹರಣೆ :

ಹಾಲಿಗೆ ಹಂಬಲಿಸುವವನಲ್ಲ ಬಿಡದಂಬೆ
ಗಾಲಿಕ್ಕಿ ತೆರಳುವವನಲ್ಲ
ಕಾಲುಬಲಿದು ದಟ್ಟಡಿಯಿಡುವವನಲ್ಲ
ಬಾಲನೆಲ್ಲಿಗೆ ಹೋದನವ್ವ ॥ (೪–೮೨)

ಆದರೆ ಮೇಲೆ ಉದಾಹರಿಸಿದ ಯಕ್ಷಗಾನ ಲಯದ ಹಾಗೂ ಕೀರ್ತನೆ ಲಯದ ಭಾಷಾ ರಚನೆ ಶಿಷ್ಟ ಕಾವ್ಯಗಳಲ್ಲಿ ಎಲ್ಲೋ ಅಲ್ಲೊಮ್ಮೆ ಇಲ್ಲೊಮ್ಮೆ ತಲೆಹಾಕುವ ಅಪರೂಪದ ಭಾಷೆಯೇ ಹೊರತು, ನಿಯತವಾಗಿ ಕಾಣಿಸಿಕೊಳ್ಳುವ ಗುಣವಲ್ಲ. ಕನಕದಾಸರು ತಾವು 'ಸಕ್ಕದ ಕನ್ನಡವೆರಸಿ ಸತ್ಕವಿತೆಯನೊಕ್ಕಣಿಸು'ವುದಾಗಿ ನಿವೇದಿಸಿಕೊಂಡಿದ್ದಾರೆ (೧೫–೨). ತನ್ನ 'ಮೆಲ್ನುಡಿಗಳ್ಗೆ ಕಿವಿಗೊಡದವರಾರು' ಎಂಬ (೬–೧) ಆತ್ಮವಿಶ್ವಾಸದೊಂದಿಗೆ 'ಉದಧಿಯೊಳೊಗೆದ ಪೀಯೂಷದಂತುಸಿರುವೆ ಹದವಾದ ಮಾತ' (೬–೨) ಎಂಬ ಬಿನ್ನಹವೂ ಇದೆ. ತಮ್ಮ ಕಾಲದ ಕನ್ನಡ ಜನ ಬಳಸುತ್ತಿದ್ದ ಗಾದೆ ಸಾಮತಿ ನುಡಿಗಟ್ಟುಗಳನ್ನು ಸಾಕಷ್ಟು ಅಳವಡಿಸಿಕೊಂಡಿದ್ದಾರೆ : 'ನಾಡೊಳಗುಳ್ಳ ಜಾಣರು ಜಾಣೆಯರೊಡನಾಡುವ ಸವಿವಾತುಗಳ ಪಾಡುಗಬ್ಬವ ಪರುಠವಿಸಿದ ಬಗೆ'ಯನ್ನು (೧–೩೬) ತನ್ನ ಕಾವ್ಯದಲ್ಲಿ ನೋಡಬಹುದೆಂದು ಕವಿಯೇ ಸೂಚಿಸಿರುತ್ತಾರೆ.

ಕನಕದಾಸರು ಒಟ್ಟಾರೆ ಕನ್ನಡ ಭಾಷೆಯ ಬಾಗು ಬಳುಕು ಬಿಬ್ಬೋಕಗಳನ್ನು, ನಯ ಲಯ ಧ್ವನಿ ಸೂಕ್ಷ್ಮಗಳನ್ನು ಲೆಕ್ಕಾಚಾರವಾಗಿ

ದುಡಿಸಿಕೊಳ್ಳುವತ್ತ ಮುತುವರ್ಜಿ ವಹಿಸಿದಂತೆ ನನಗೆ ಅನಿಸುತ್ತಿಲ್ಲ. ಅವರು ಆನು ಒಲಿದಂತೆ ಹಾಡುವೆನಯ್ಯ. ಓಜೆ ಬಜಾವಣೆಯನರಿಯೆ ಎಂಬಂಥ ಒಂದು ಜನಪದ ಮನೋಧರ್ಮದ ಕವಿ. ಹೀಗಾಗಿ ಕನ್ನಡ ಭಾಷೆಯ ಸಾಧ್ಯತೆಗಳನ್ನು, ಕೀರ್ತನೆಗಳಲ್ಲಿ ಕೂಡ ಸೂರೆ ಮಾಡುವ ಕಡೆ ಅವರು ಕಿಂಚಿತ್ತೂ ಮನಸ್ಸು ಹಾಕಿದವರಲ್ಲ. ಹೀಗೊಂದು ಸ್ಥೂಲವಾದ ಹೇಳಿಕೆ ಕೊಟ್ಟಾಗಲೂ, ಕೆಲವು ಕೀರ್ತನೆಗಳೊಳಗೆ ಸುಳಿದು ಮಿಡುಕುವ ಜನರ ದನಿಗಳಿಗೆ ಕಿವಿಯೊಡ್ಡಿದಾಗ, ಇಲ್ಲೇನೋ ಹೇಳುತ್ತಿರುವಂತೆ, ಪಿಸು ನುಡಿಯುವ ಕಸರತ್ತು ನಡೆದಿರುವಂತೆ ಭಾಸವಾಗುತ್ತದೆ ; ನಮ್ಮ ಕಿವಿಗಳಿಗಿಂತ ಬುದ್ಧಿಗಿಂತ ಸಂವೇದನೆಗಳು ಜಾಗೃತಗೊಂಡರೆ ಹಿಡಿಯಬಹುದಾದ ಹೊಳಹುಗಳಿರುವಂತೆಯೂ ಕಾಣುತ್ತದೆ.

ಕನಕದಾಸರು ದಾಸರೆಂದರೂ, ಭಗವಂತನನ್ನು ಆರಾಧಿಸುವ ಸಮರ್ಪಣ ಭಾವದ ಕೇವಲ ಒಬ್ಬ ಪ್ರಾಂಜಲ ಭಕ್ತರೇ ಹೊರತು ದ್ವೈತ ಅದ್ವೈತ–ಇಲ್ಲವೇ ವಿಶಿಷ್ಟಾದ್ವೈತಗಳ ಉಪಾಧಿಯ ತೆಕ್ಕೆಗೆ ಸಿಕ್ಕಿದವರಲ್ಲ. ಅವರದು ನೈಸರ್ಗಿಕವಾದ, ಒಮ್ಮೊಮ್ಮೆ ರೂಕ್ಷವೆಂದೂ ತೋರಬಹುದಾದ ಕಾಡಿನ ಮಹಾಸಲಗನ ದಿಟ್ಟದಾರಿ ಪಯಣ. ನಿಜಕ್ಕೂ ಅವರು ಕೀರ್ತನಕಾರರ ಸಮುದಾಯದಲ್ಲೂ, ದಾಸರ ಪಾಳಯದಲ್ಲೂ ಹಿಂಡನಗಲಿದ ಒಂಟಿ ಸಲಗನಂತೆಯೇ ಸ್ವಚ್ಛಂದರಾಗಿದ್ದಾರೆ. ಶಿವಪಾರ್ವತಿ ಗಣನಾಥರನ್ನೊಮ್ಮೆ, ಕೇಶವ ಕೃಷ್ಣರನ್ನು ಇನ್ನೊಮ್ಮೆ, ಶಾರದೆ ಹಳ್ಳಿಯ ಹನುಮರನ್ನು ಮಗುದೊಮ್ಮೆ ನೆನೆದು ನುತಿಸುತ್ತಾರೆ. ಮತ್ತೊಮ್ಮೆ ಇದೇ ಉಸಿರಿನಲ್ಲಿಯೇ ಎಕ್ಕನಾತಿ ಎಲ್ಲಮ್ಮ ಮಾರಿದುರ್ಗಿ ಚೌಡಿಯರನ್ನೂ ಮರೆಯದೆ ನೆನೆಯುತ್ತಾರೆ. ಇವು ಕನ್ನಡ ಜನ ಒಪ್ಪಿಕೊಂಡ ಊರು ಕೇರಿ ಓಣಿಗಳ ದೈವಗಳು. ಗ್ರಾಮೀಣ ಪ್ರಜ್ಞೆಯಂತೆ, ಹಳ್ಳಿಯ ಮಣ್ಣಿನ ಮಕ್ಕಳ ಕನ್ನಡ ಭಾಷೆಯೂ ಕನಕದಾಸರ ಹಾಡುಗಳಲ್ಲಿ ಸಾಕಷ್ಟು ಹೆಪ್ಪು ಕಟ್ಟಿದೆ. 'ಹಳ್ಳಿಯ ಹನುಮಾ' ಎಂಬುದಂತೂ ಸೊಗಸಾದ ಪ್ರತಿಭೆಯ ಮೂಸೆಯಲ್ಲಿ ಅದ್ದಿ ತೆಗೆದ ಜನಭಾಷೆಯ ಕೆನೆಯಕೆನೆ, ಕನ್ನಡ ಸಾಹಿತ್ಯದಲ್ಲೇ ಒಂದು ಅಪರೂಪದ ಭಾಷಾಭಿವ್ಯಕ್ತಿ. ಎನ್ನಕಂದ ಹಳ್ಳಿಯ ಹನುಮಾ ಎಂಬ ಕೀರ್ತನೆಯೊಂದಿಗೇನೆ ಏನೆಂದಳೇನೆಂದಳೋ ನಿನ್ನೊಳು ಸೀತೆ ಹನುಮಯ್ಯ ಎಂಬ ಕೀರ್ತನೆಯನ್ನೂ ಒಟ್ಟಿಗೆ ಹಿಡಿದು ನೋಡಬೇಕು ; ಇವೆರಡು ಹಾಡುಗಳೂ ಯುಗ್ಮ – ಜೋಡಿ ಕೀರ್ತನೆಗಳು.

# ಮೋಹನ ತರಂಗಿಣಿಯ ಆಕರ ವಿವೇಚನೆ

**ಕೆ. ಸಚ್ಚಿದಾನಂದಯ್ಯ**

ವರಮೋಹನ ತರಂಗಿಣಿ ಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮನುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ॥

ಮೋಹನ ತರಂಗಿಣಿಯನ್ನು ಬರೆದು ಓದಿ ಕೇಳಿದವರಿಗೆ ಕೃಷ್ಣನ ಕೃಪೆ ಆಚಂದ್ರಾರ್ಕ ಎಂಬುದು ಕನಕದಾಸರ ಹೇಳಿಕೆ.

ಕನ್ನಡದಲ್ಲಿ ದಾಸಸಾಹಿತ್ಯವನ್ನು ಪರಿಪೋಷಿಸಿದವರಲ್ಲಿ ಕನಕದಾಸರೂ ಒಬ್ಬರು–ಶ್ರೇಷ್ಠರು. ಅವರ ಸಾಹಿತ್ಯಪ್ರತಿಭೆ ಕೇವಲ ದೇವರನಾಮಗಳಿಗೆ ಸೀಮಿತವಾಗಲಿಲ್ಲ. ಅವರು ಕಾವ್ಯಗಳನ್ನು ಬರೆದರು. ಅವರ ಕಾವ್ಯಗಳಲ್ಲಿ ಮೋಹನತರಂಗಿಣಿಯು ಸಾಂಗತ್ಯದಲ್ಲಿರುವ ಬೃಹತ್ ಕಾವ್ಯ. ಪೀಠಿಕೆಯೂ ಸೇರಿದಂತೆ ನಲವತ್ತೆರಡು ಸಂಧಿಗಳಿಂದ ಕೂಡಿದ ಒಟ್ಟು ೨,೬೯೯ ಸಾಂಗತ್ಯಗಳಿರುವ ಮಹಾಕಾವ್ಯ.

ಮೋಹನತರಂಗಿಣಿಯು ಹೆಸರೇ ಹೇಳುವಂತೆ ಶೃಂಗಾರಕಾವ್ಯ. ಇಲ್ಲಿರುವ ಕಥಾಚರಿತ್ರೆ ಕಾಮನದು ; ಕಾಮಪಿತನದ್ದು ; ಹಾಗೂ ಕಾಮಪುತ್ರನದ್ದು. ಆದ್ದರಿಂದಲೇ ಶೃಂಗಾರರಸಪೂರ್ಣವೆಂಬುದು ವೇದ್ಯ.

ಕೆಂಚೆ ನೀ ಕೇಳು ಕೇವಲ ಜಾಣೆ ರಹಿತ ಪ್ರ
ಪಂಚೆ ಮತ್ಕೃತಿ ರಸವಜಿತ
ಬಂಜೆಯೆಂದೆನಬೇಡ ಶೃಂಗಾರರಸಪೂರ್ಣ
ವಂಚೆನಡೆಯಳೆ ವಿಶ್ರಮಿಸು ॥

ಕನಕದಾಸರೇ ಈ ಮಾತನ್ನು ತನ್ನ ಮಡದಿಗೆ–ಸುಜ್ಞಾನವಧೂಟಿಗೆ ಹೇಳಿದ್ದಾರೆ. ಕೃಷ್ಣ–ರುಕ್ಮಿಣಿ, ಪ್ರದ್ಯುಮ್ನ–ರತಿ, ಅನಿರುದ್ಧ–ಉಷೆ ಇವರ

ಶೃಂಗಾರಮಯ ಜೀವನವೇ ಈ ಕಾವ್ಯದ ಮುಖ್ಯ ವಸ್ತು. ಮನ್ಮಥನ ಪಿತನಾದ ಕೃಷ್ಣನ ಸುತ್ತಲೂ ಹೆಣೆದಿದೆ ಈ ಕಥೆ. ಕನಕದಾಸರ ಆರಾಧ್ಯದೇವರಾದ ಕೃಷ್ಣನನ್ನು ಪ್ರಾರ್ಥಿಸುವಲ್ಲಿಯೂ ಅವರು ಶೃಂಗಾರರಸವನ್ನು ಮರೆಯಲಿಲ್ಲ.

ಅರುಣಾಬ್ಜ ನಿಳಯ ಕವಾಟ ಕೌಸ್ತುಭರತ್ನ
ಕಿರಣದಿಂ ತೆಗೆದೊಳಪೊಕ್ಕು
ತರುಣಿ ಲಕ್ಷ್ಮಿಯ ಕುಚವಿಡಿದ ಕೈಯಿಂದ ಸ
ತ್ಕರುಣವೀವುದು ಕೃಷ್ಣ ನಮಗೆ ॥ –ಎನ್ನುತ್ತಾರೆ

ಪೊಸರದಹನ, ಕಾಮೋತ್ಪತ್ತಿ ವರಶಂಬ
ರಾಸುರ ವಧೆ ಕಂತುಸುತನ
ಭಾಸುರಲೀಲೆ ಬಾಣನಗೆದ್ದ ಜಯ ಲ
ಕ್ಷ್ಮೀಶನ ಕೃತಿಯ ವಿಸ್ತರಿಪೆ ॥

ಎಂಬುದಾಗಿ ತನ್ನ ಕಾವ್ಯದ ವಿಸ್ತಾರವನ್ನು ಹೇಳಿದ್ದಾರೆ.

ತೆಂಗಿನ ಕಾಯತೋರದ ಮೊಲೆವೆತ್ತ ಲ
ತಾಂಗಿಯ ಬಂದುಗೆವಾಯ
ರಂಗಿಪ ಚೆಂದುಟಿಯಿದೆನೆ ಮೋಹ ತ
ರಂಗಿಣಿ ಪೇಳ್ವೆ ಕೇಳಬಲೆ ॥

ಎಂದು ಮೋಹನ ತರಂಗಿಣಿಯ ವೈಶಿಷ್ಟ್ಯವನ್ನು ಹೇಳುತ್ತಾರೆ.

ನಾಡೊಳಗುಳ್ಳ ಜಾಣರುಜಾಣೆಯರೊಡ
ನಾಡುವ ಸವಿವಾತುಗಳ
ವಾಡುಗಬ್ಬವ ಪರುಠವಿಸಿದ ಬಗೆಯ ನೀ
ನೋಡು ಮಾನಿನಿ ಮುಂದೆ ಮುಂದೆ ॥

ಈ ಕಾವ್ಯ ಜಾಣ–ಜಾಣೆಯರ ಸರಸದ ಮಾತು–ಸವಿಮಾತುಗಳಿಂದ ಕೂಡಿದ್ದು. ಆದರೂ

ಹರಿಶರಣರ ಪೆಚ್ಚು ಬುಧಜನರಿಗೆ ಮೆಚ್ಚು
ದುರಿತವನಕೆ ಕಾಳ್ಕಿಚ್ಚು
ವಿರಹಿಗಳಿಗೆದೆಗಿಚ್ಚು ವೀರರ್ಗೆ ಪುಚ್ಚು ಕೇ
ಳ್ವರಿಗಿದು ತನಿಬೆಲ್ಲದಚ್ಚು ॥

ಇಲ್ಲಿಯ ಕಥೆಯಲ್ಲಿ ಕಾಮನ ಕೈವಾಡವಿದ್ದಂತೆ ಭಕ್ತಿಪ್ರಿಯ ಕೃಷ್ಣನ ಸರ್ವೋತ್ತಮತೆಯೂ ಇದೆ.

ಇಲ್ಲಿ ಬೇರೆಯಾದ ಕಥೆಯೇ ಇರಲಿ ಮುಖ್ಯವಾಗಿ ಕಥಾನಾಯಕ ಕೃಷ್ಣ: ಕೃಷ್ಣರಾಯ. ಕೃಷ್ಣನೆಂದು ಬಂದಾಗಲೆಲ್ಲಾ ಕನಕದಾಸರು ಹಲವೆಡೆ ಕೃಷ್ಣದೇವರಾಯನೆಂದೇ ಬಳಸಿದ್ದಾರೆ. ಅಂದರೆ ಇದು ವಿಜಯನಗರದ ಪ್ರಸಿದ್ಧ ಅರಸ–ಕನಕದಾಸರಿಗೆ ಆಶ್ರಯದಾತ ಕೃಷ್ಣದೇವರಾಯನ ಕಥೆಯೂ ಆಗಿದೆ. ಪಂಪ ರನ್ನಾದಿಗಳಂತೆ ತನ್ನ ಆಶ್ರಯದಾತರನ್ನು ಸಮೀಕರಿಸಿ ಕಾವ್ಯ ಬರೆಯುವ ಪದ್ಧತಿಯನ್ನು ಕನಕದಾಸರೂ ಇಲ್ಲಿ ಅನುಸರಿಸಿದ್ದಾರೆ.

ವಿಜಯನಗರ ಕಾಲದ ಸರ್ವಧರ್ಮಸಮನ್ವಯ ದೃಷ್ಟಿ ಕನಕದಾಸರನ್ನು ಶಿವ–ಕೃಷ್ಣರಲ್ಲಿ ಭೇದವೆಣಿಸದಂತೆ ಮಾಡಿರಬೇಕು. ಸ್ವತಃ ರಾಮಾನುಜರ ಶಿಷ್ಯರಾಗಿ ಪರಮ ಶ್ರೀವೈಷ್ಣವ ಮತಾವಲಂಬಿಯೆನಿಸಿದ್ದರೂ ಶೈವ ಪಂಥದಲ್ಲಿ ತಿರಸ್ಕಾರವಿಲ್ಲ. ಶಿವನ ಸರ್ವೋತ್ತಮತೆಯನ್ನೂ ಕಡೆಗಾಣಿಸಿಲ್ಲ. ಕಾವ್ಯದ ಕೊನೆಯಲ್ಲೂ ಶಿವ–ವಿಷ್ಣು ಅಭೇದವನ್ನೇ ಕೋರಿದ್ದಾರೆ.

ಮೋಹನತರಂಗಿಣಿಗೆ ಆಕರವಾವುದು? ವೈಷ್ಣವಪುರಾಣಗಳೇ ? ವಿಷ್ಣುವಿನ ಕಥೆಯಿರುವ ಇದಕ್ಕೆ ಅವೇ ಆಕರವಾಗಿರಬೇಕೆನಿಸುವುದು ಸಹಜ. ಅಲ್ಲದೆ ವಾದಿರಾಜರು–ಕನಕದಾಸರ ಗುರುಗಳೇ ಆದವರು–ಬರೆದ ರುಕ್ಮಿಣೀಶ ವಿಜಯವನ್ನು ಮುಂದುವರಿಸಿ ಕನ್ನಡದಲ್ಲಿ ದಾಸರು ಈ ಕಾವ್ಯವನ್ನು ಬರೆದರೆಂಬ ಮಾತಿದೆ. ರುಕ್ಮಿಣೀಶ ವಿಜಯ ಕೃಷ್ಣನ ಕತೆ, ಕೃಷ್ಣನ ಜನ್ಮದಿಂದ ರುಕ್ಮಿಣಿಯನ್ನು ಮದುವೆಯಾಗುವಲ್ಲಿವರೆಗಿನ ಕತೆ. ಸಂಸ್ಕೃತದಲ್ಲಿ ರಚಿತವಾದ ಭಕ್ತಿಕಾವ್ಯ. (ಶೃಂಗಾರ ರಸಪೂರ್ಣವಲ್ಲ) ದಾಸರು ಆ ಕತೆಯನ್ನೇ ಮುಂದುವರಿಸಿದ್ದಾರೆ ಎಂಬುದಕ್ಕೆ ಇದರ ಪ್ರಾರಂಭ ರುಕ್ಮಿಣೀಕೃಷ್ಣರ ಸರಸ–ರುಕ್ಮಿಣಿಯ ಸಂತಾನಾಪೇಕ್ಷೆ ಉದಾಹರಣೆಯೆನ್ನಬಹುದು. ರುಕ್ಮಿಣಿಗೆ ಸಂತಾನೋತ್ಪತ್ತಿಯಿಂದ ಪ್ರಾರಂಭವಾದ ಮೋಹನತರಂಗಿಣಿ ಮೊಮ್ಮಗನ ವಿವಾಹದಲ್ಲಿ ಅಂತ್ಯಗೊಳ್ಳುತ್ತದೆ. ಆದರೆ ಹೇಗೆ ರುಕ್ಮಿಣೀಶ ವಿಜಯದಲ್ಲಿ ರುಕ್ಮಿಣಿಯನ್ನು ವರಿಸುವಲ್ಲಿ ಸಾಹಸ ತೋರಿದನೋ ಅಂತೆಯೇ ಇಲ್ಲಿಯೂ ಉಷೆಯ ಮದುವೆಯಲ್ಲಿ ಅದೇ ರುಕ್ಮಿಣೀಶನೇ ಸಾಹಸತೋರುತ್ತಾನೆ. ಬಾಣನ ಗರ್ವಭಂಗ ಮಾಡುತ್ತಾನೆ. ಒಂದು ಬಗೆಯಲ್ಲಿ ಮೋಹನತರಂಗಿಣಿಯೂ ರುಕ್ಮಿಣೀಶನ ವಿಜಯವೇ.

ಈ ಕಾರಣದಿಂದಲೂ ಈ ಕಥಾವಸ್ತುವಿಗೆ ಆಕರವಾದುವು ವೈಷ್ಣವಪುರಾಣಗಳೆಂದೇ ಹೇಳಬೇಕು. ವಿಷ್ಣುವಿಗೆ ಸಂಬಂಧಿಸಿದ ಕತೆಗಳನ್ನು ಸಾರುವ ಪುರಾಣಗಳು ಹಲವಿವೆ. ಅವುಗಳಲ್ಲಿ ಪ್ರದ್ಯುಮ್ನ ಹಾಗೂ ಅನಿರುದ್ಧರ ಕಥೆಗಳಿರುವ ಪುರಾಣಗಳೆಂದರೆ (೧) ಮಹಾಭಾರತ (೨) ಭಾಗವತ (೩)

ವಿಷ್ಣುಪುರಾಣ (೪) ಹರಿವಂಶ ಇವು ಮುಖ್ಯವಾದುವು. ಕನ್ನಡದ ರುದ್ರಭಟ್ಟನ ಜಗನ್ನಾಥವಿಜಯದಲ್ಲಿಯೂ ಅನಿರುದ್ಧನ ಕಥೆಯಿದೆ. ಹಾಗೆಯೇ ಕಾಮದಹನದ ಕಥೆ ಸ್ಕಂದಪುರಾಣದಲ್ಲಿ ಬರುತ್ತದೆ. – ಶಿವಪುರಾಣದಲ್ಲಿಯೂ ಬರುತ್ತದೆ. ದಾಸರಿಂದ ಹಿಂದಿನವರಾದ ಕಾಳಿದಾಸನ ಮತ್ತು ಕನ್ನಡದ ಹರಿಹರನ ಕಾವ್ಯಗಳಲ್ಲಿಯೂ ಬರುತ್ತದೆ.

ಕೃಷ್ಣರಾಯನ ವಿಚಾರ ಬರುವಲ್ಲೆಲ್ಲ ದಾಸರು ತನ್ಮಯತೆಯಿಂದ ಹಾಡುತ್ತಾರೆ. ಕಾಡಿನ ಬೇಡಿತಿಯರು ಬಿದಿರಕ್ಕಿಯನ್ನು ಮಿದಿಯುವಾಗಲೂ ಹೇಳುತ್ತಿದ್ದ ರಾಧಾಕೃಷ್ಣನ ಮಹಿಮೆ.

ನಿಗಮ ದುರ್ಲಭ ಸುವ್ವಿ ನಿರ್ಜರಾರ್ಚಿತ ಸುವ್ವಿ
ಯಘಹರ ಭವದೂರ ಸುವ್ವಿ
ಗಗನಚರಣ ಸುವ್ವಿ ಗರುಡಗಮನ ಸುವ್ವಿ
ಜಗದಧಿಪತಿ ಕೃಷ್ಣ ಸುವ್ವಿ ॥

ಜಲಕ್ರೀಡೆಗೆಂದು ಕೃಷ್ಣನನ್ನು ಸ್ತ್ರೀಯರು ಹೊಗಳುತ್ತಾರೆ.

ಇಳೆಯನೀರಡಿ ಮಾಡಿದ ಪದ ಜತನ, ಬಾಂ ।
ಬೊಟೆಯ ಪರಿಸಿದಂಘ್ರಿ ಜತನ
ಹಟಗಲ್ಲಾಗಿದ್ದ ಮುನಿವಧುವಿಗೆ ಜೀವ
ಕಳೆಯಿತ್ತ ಪಾದವೆಚ್ಚರಿಕೆ ॥

ಇದರಿಂದ ಕನಕದಾಸರ ಈ ಕೃತಿ ವೈಷ್ಣವ ಸಂಪ್ರದಾಯವನ್ನಾಧರಿಸಿದ್ದೇ ಎನ್ನುವುದುಂಟು. ಆದರೆ ಕನಕದಾಸರು ಶಿವನಸ್ತುತಿಯಲ್ಲಿ ಕಡಿಮೆ ತೋರಲಿಲ್ಲ:

ಆವಂಗೆ ಮೇರುಕಾರ್ಮುಕ ಶೇಷ ಸಿಂಜಿನಿ
ಯಾವಂಗೆ ನಾರಾಯಣಾಸ್ತ್ರ
ಆವಂಗೆ ವಿಧುಮಿತ್ರ ಗಾಳಿ ಭೂರಥ ವಾಜಿ
ಆವಂಗೆ ಶ್ರುತಿಕರ್ತ ಸೂತ ॥

ಪ್ರತಿನಾಯಕನಾದ–ಶಿವಭಕ್ತರಾದ ಶಂಬರ ಬಾಣಾಸುರರೂ ನೀಚರಲ್ಲ. ಅವರಲ್ಲಿಯೂ ಉದಾರಗುಣಗಳಿವೆ. ಕಾರುಣ್ಯದಲ್ಲಿ–ವಿವೇಚನೆಯಲ್ಲಿ ಅವರು ಕಡಿಮೆಯವರಲ್ಲ. ಸ್ತ್ರೀಲಂಪಟರೂ ಅಲ್ಲ. ಬಾಣಾಸುರನು ಯೋಗ ಭೋಗಗಳ ಸಮನ್ವಯದವನು–

ಈತನೆ ಪರಮೇಶ್ವರನೆಂದು ತಿಳಿದು ತಾ
ನಾವನೊಳಾತ ತನ್ನೊಳಗೆ

ಏತರೊಳೆರವಿಲ್ಲದಿರ್ದರು ಬೀಜ ವೃ
ಕ್ಷಾಕವ ಪರಿಹರಿಸಿದುವು ॥

ಎಂಬ ಭಾವದವನು.

ಈ ಕೆಲವು ಉದಾಹರಣೆಗಳಿಂದ ಕನಕದಾಸರು ಕೇವಲ ವೈಷ್ಣವ ಪುರಾಣಗಳಿಂದಲೇ ಮೋಹನತರಂಗಿಣಿಯ ಕಥೆಯನ್ನು ಸಾಗಿಸುತ್ತಾ ಹೋಗಲಿಲ್ಲವೆನ್ನಬಹುದು. ಶೈವಪುರಾಣ ಕಥೆಗಳೂ ಆಕರವಾಗಿವೆ ಎಂಬುದಾಗಿಯೂ ಹೇಳಬಹುದು. ಆದರೂ ಕತೆಯ ದೃಷ್ಟಿಯಿಂದ ಪುರಾಣಗಳಿಗೆ ಪರವಾದರೂ ಅದನ್ನು ನಿರ್ವಹಿಸುವಲ್ಲಿ ಕನಕದಾಸರು ವಿಜಯನಗರದ ರಾಜಧಾನಿಯಿಂದ ಪಡು ಕರಾವಳಿಯವರೆಗಿನ ಸೀಮೆಯ ಜನಜೀವನ–ರೂಢಿ ಸಂಪ್ರದಾಯಗಳಿಗೆ ಸ್ಪಂದಿಸಿದ್ದಾರೆ ಎಂಬುದನ್ನು ನಾವು ಕಾಣಬಹುದು. ಸೂಕ್ಷ್ಮಸಂವೇದನೆಯಿಂದ ಕೂಡಿದ ದಾಸರು ಜನರ ಕವಿ. ದುಃಖಿತರನ್ನು ಸಂತೈಸುವಲ್ಲಿ–ಮದುವೆಯ ಕಟ್ಟುಗಳಲ್ಲಿ–ಹೆರಿಗೆ ಮುಂತಾದೆಡೆಯ ಸಹಜೋಪಚಾರಗಳಲ್ಲಿ ಕನಕದಾಸರ ಜೀವನಾನುಭವ (ಮಣ್ಣಿನ ವಾಸನೆ) ಮೋಹನ ತರಂಗಿಣಿಯ ಮಹತ್ವದ ಆಕರವೆಂಬುದನ್ನು ಕೃತಿಯನ್ನು ಓದಿದಾಗ ತಿಳಿಯದಿರದು.

ಕಥೆಯ ದೃಷ್ಟಿಯಿಂದ ಪುರಾಣಗಳಲ್ಲೇನು ಹೇಳಿದೆ ಎಂಬುದನ್ನು ಮೊದಲು ವಿವರಿಸಿ ಕನಕದಾಸರ ಕೃತಿಯಲ್ಲೇನಿದೆಯೆಂಬುದನ್ನಿಲ್ಲಿ ನಿರೂಪಿಸಬಯಸುತ್ತೇನೆ. ಇದರಿಂದ ದಾಸರು ಮಾಡಿಕೊಂಡ ಮಾರ್ಪಾಡು ಅದರೌಚಿತ್ಯ ನಮ್ಮರಿಕೆಗೆ ಬರುವುದೆಂದು ಭಾವಿಸುತ್ತೇನೆ. ಮೂಲಭಾರತದಲ್ಲಿ ಪ್ರದ್ಯುಮ್ನ ಅನಿರುದ್ಧರ ಕಥೆಯಿದೆ. ಶಂಬರಾಸುರನ ಅಂತ್ಯ, ಉಷಾಪರಿಣಯ, ಬಾಣಾಸುರ ಗರ್ವಭಂಗ ಕಥೆಯಿದೆ.

**೧. ಭಾಗವತದಲ್ಲಿ :** ಈಶ್ವರನಿಂದ ಭಸ್ಮೀಕೃತನಾದ ಕಾಮನು ವಾಸುದೇವನನ್ನು ಸೇರಿ ರುಕ್ಮಿಣಿಯ ಮಗನಾಗಿ ದೇಹಧರಿಸುತ್ತಾನೆ. ಪ್ರದ್ಯುಮ್ನನೆಂಬ ಹೆಸರಿನಿಂದ ಖ್ಯಾತನಾಗುತ್ತಾನೆ. ಹುಟ್ಟಿದ ಹತ್ತುದಿನಗಳಲ್ಲಿಯೇ ಕಾಮರೂಪಿಯಾದ ಶಂಬರನೆಂಬ ರಾಕ್ಷಸನು ತನ್ನ ಶತ್ರುವೆಂದು ತಿಳಿದು ಅವನನ್ನು ಅಪಹರಿಸಿ ಸಮುದ್ರಕ್ಕೆಸೆಯುತ್ತಾನೆ. ಅಲ್ಲೊಂದು ಮೀನು ಮಗುವನ್ನು ನುಂಗುತ್ತದೆ. ಅದನ್ನು ಬೆಸ್ತರು ಹಿಡಿತಂದು ಶಂಬರನಿಗೊಪ್ಪಿಸುತ್ತಾರೆ. ಪಾಕಶಾಲೆಗೆ ತಂದು ಅಡುಗೆಯವರು ಅದನ್ನು ಕೊಯ್ದಾಗ ಶಿಶುವಿರುವುದು ತಿಳಿಯುತ್ತದೆ. ಅಡುಗೆಯವರು ಮಾಯಾವತಿಗೆ ತಿಳಿಸುವರು. ಅವಳು ಶಂಕಿಸುತ್ತಿದ್ದಂತೆ

ನಾರದರು ಬಂದು ಮಗುವಿನ ಪೂರ್ವಾಪರ ಹೇಳುತ್ತಾರೆ. ಮಾಯಾವತಿಯಾದರೋ ಕಾಮನ ಪತ್ನಿ ರತಿಯೇ ಆಗಿದ್ದಳು. ಪತಿನಿರೀಕ್ಷೆಯಲ್ಲಿದ್ದ ಪತಿವ್ರತೆಯಂತೆ ಮಗುವನ್ನು ಸಾಕುತ್ತಾಳೆ (ಇಲ್ಲಿ ರತಿ ಮಾಯಾವತಿಯಾಗಿ ಬಂದದ್ದು ಹೇಗೆಂದೇನೂ ಇಲ್ಲ) ಬೆಳೆಯುತ್ತಿದ್ದಂತೆಯೇ ಅವನಲ್ಲಿ ಮೋಹಪರವಶಳಾಗುತ್ತಾಳೆ. ಹುಡುಗನು ಕಾರಣ ಕೇಳಿದಾಗ ನಿಜಸ್ಥಿತಿಯನ್ನು ಹೇಳಿ ಮಾಯೆಯಿಂದ ಶಂಬರನನ್ನು ಸಂಹರಿಸುವಂತೆ, ಹೇಳಿ 'ಮಹಾಮಾಯೆ'ಯೆಂಬ ವಿದ್ಯೆಯನ್ನು ಉಪದೇಶಿಸುತ್ತಾಳೆ. ಪ್ರದ್ಯುಮ್ನನು ಶಂಬರನಲ್ಲಿಗೆ ಹೋಗಿ ಆತನನ್ನು ನಿಂದಿಸಿ ಕಲಹಕ್ಕೆ ಕಾಲ್ಕೆರೆಯುತ್ತಾನೆ. ಶಂಬರನ ಮಾಯೆಯನ್ನು ಮೀರಿಸುವ ಮಾಯೆಯಿಂದ ಶಂಬರನನ್ನು ಕೊಲ್ಲುತ್ತಾನೆ. ರತಿಯು ಅಂಬರ ಮಾರ್ಗದಿಂದ ಪ್ರದ್ಯುಮ್ನನನ್ನು ದ್ವಾರಕಾನಗರಿಗೆ ಕರೆದೊಯ್ಯುತ್ತಾಳೆ. ಅಂತಃಪುರಕ್ಕೆ ಪ್ರವೇಶಿಸಿದಾಗ ಪ್ರದ್ಯುಮ್ನನನ್ನು ಕೃಷ್ಣನ ಸ್ತ್ರೀಯರು ಕೃಷ್ಣನೇ ಎಂದು ಭ್ರಮೆಗೊಂಡು ನೋಡುತ್ತಾರೆ. ಆದರೆ ರುಕ್ಮಿಣಿ ಮಾತ್ರ ಕೃಷ್ಣನಿಗಿಂತ ಭಿನ್ನನೆಂದೂ ಮಗನಿರಬಹುದೆಂದೂ ಭಾವಿಸುತ್ತಾಳೆ. ಕೃಷ್ಣನು ವಸುದೇವ–ದೇವಕಿಯರೊಡನೆ ಬರುತ್ತಾನೆ. ಗೊತ್ತಿದ್ದರೂ ಅರಿಯದವರಂತೆ ನಟಿಸುತ್ತಾರೆ. ನಾರದನೇ ಬಂದು ನಿಜವನ್ನು ಹೇಳಬೇಕಾಗುತ್ತದೆ. ಎಲ್ಲರೂ ಸಂತೋಷದಿಂದ ಅಪ್ಪಿಕೊಳ್ಳುತ್ತಾರೆ. ಕೇವಲ ೪೦ ಶ್ಲೋಕಗಳಲ್ಲಿ ಪ್ರದ್ಯುಮ್ನನ ಈ ಕಥೆ ಭಾಗವತದಲ್ಲಿ ನಿರೂಪಿತವಾಗಿದೆ.

ಪ್ರದ್ಯುಮ್ನನು ರುಕ್ಮಿಣಿಯ ಅಣ್ಣನಾದ ರುಕ್ಮಿಯ ಮಗಳು ರುಕ್ಮವತಿಯನ್ನು ಸ್ವಯಂವರದಲ್ಲಿ ವರಿಸುತ್ತಾನೆ. ರುಕ್ಮಿಯು ಮನಸ್ಸಿಲ್ಲದಿದ್ದರೂ ತಂಗಿಯ ಮೇಲಿನ ವ್ಯಾಮೋಹದಿಂದ ಈ ಸ್ವಯಂವರನನ್ನು ಒಪ್ಪಿ ಮದುವೆ ಮಾಡಿಸುತ್ತಾನೆ. ಪ್ರದ್ಯುಮ್ನ–ರುಕ್ಮವತಿಯರ ಮಗನೇ ಅನಿರುದ್ಧ. ಅವನಿಗೂ ರುಕ್ಮಿಯು ತನ್ನ ಮೊಮ್ಮಗಳು ರೋಚನೆಯೆಂಬವಳನ್ನು ಮದುವೆ ಮಾಡಿಸಿಕೊಡುತ್ತಾನೆ. (ಈ ಸಂದರ್ಭದಲ್ಲೇ ರುಕ್ಮಿಯು ಬಲರಾಮನಿಂದ ಹತನಾಗುತ್ತಾನೆ. ದೌಹಿತ್ರಾಯಾನಿರುದ್ಧಾಯ ಪೌತ್ರೀಂ ರುಕ್ಮ್ಯದದ್ದಾರೇ । ರೋಚನಾಂ ಬದ್ಧವೈರೋಽಪಿ ಸ್ವಸು ಪ್ರಿಯಸ್ವಚಿಕೀರ್ಷಯಾ । ಜಾನನ್ನಧರ್ಮಾಂ ತದೌಯಾನಂ ಸ್ನೇಹಪಾಶಾನುಬಂಧನಃ ।)

ಬಾಣಾಸುರನು ಬಲಿಯ ನೂರು ಮಕ್ಕಳಲ್ಲಿ ಮೊದಲಿಗ, ಮಹಾಶಿವಭಕ್ತ. ಶಿವನನ್ನೇ ತನ್ನ ಪುರರಕ್ಷಕನನ್ನಾಗಿಸಿಕೊಂಡಿದ್ದ. ಅವನ ಮಗಳು ಉಷಾ. ಒಂದು ದಿನ ಆಕೆ ಕನಸಿನಲ್ಲಿ ಅನಿರುದ್ಧನನ್ನು ಕಾಣುತ್ತಾಳೆ. ಅವನೊಡನೆ ರತಿಸುಖವನ್ನು ಅನುಭವಿಸುತ್ತಾಳೆ.

ತಸ್ಯೋಷಾನಾಮ ದುಹಿತಾ ಸ್ವಪ್ನೇ ಪ್ರಾದ್ಯುಮ್ನಿನಾ ರತಿಂ
ಕನ್ಯಾಲಭತಕಾಂತೇನ ಪ್ರಾಗದೃಷ್ಟ ಶ್ರುತೇನ ಸಾ ॥ (ಭಾಗವತ)

ಎದ್ದು ಆತನಿಲ್ಲದೆ ರೋದಿಸತೊಡಗುತ್ತಾಳೆ. ಆಗ ಬಾಣಾಸುರನ ಮಂತ್ರಿಯಾದ ಕುಂಭಾಂಡನ ಮಗಳು ಚಿತ್ರಲೇಖೆ ವಿಚಾರಿಸುತ್ತಾಳೆ. ಉಷೆಯು ತನಗೇ ತಿಳಿಯದ ಪುರುಷನೊಡನಾದ ಅಂಗಸಂಗವನ್ನು ವಿವರಿಸಿದಾಗ ಚಿತ್ರಲೇಖೆ ಆತನಾರೆಂದು ತಿಳಿಯಲು ಹಲವರ ಚಿತ್ರ ಬರೆಯುತ್ತಾಳೆ. ಯಾದವಕುಲದವರಾದ ವಸುದೇವ, ಬಲರಾಮ, ಕೃಷ್ಣ, ಪ್ರದ್ಯುಮ್ನ, ಅನಿರುದ್ಧರ ಚಿತ್ರಬರೆಯುತ್ತಾಳೆ. ಪ್ರದ್ಯುಮ್ನನ ಚಿತ್ರಬರೆದಾಗ ನಾಚಿದ ಉಷೆ, ಅನಿರುದ್ಧನ ಚಿತ್ರಬರೆದಾಗ 'ಅವನೇ, ಅವನೇ' ಎನ್ನುತ್ತಾಳೆ. ಚಿತ್ರಲೇಖೆ ಯೋಗಶಕ್ತಿಯುಳ್ಳವಳು. ಅವಳು ಕೂಡಲೇ ದ್ವಾರಕೆಗೆ ಹೋಗಿ ಮಲಗಿದ್ದ ಅನಿರುದ್ಧನನ್ನೆತ್ತಿಕೊಂಡು ಶೋಣಿತಪುರಕ್ಕೆ ತರುತ್ತಾಳೆ. ಉಷೆಗೆ ತೋರುತ್ತಾಳೆ.

ಚಿತ್ರಲೇಖಾ ತಮಾಜ್ಞಾಯ ಪಾತ್ರಂ ಕೃಷ್ಣಸ್ಯಯೋಗಿನಿ ।
ಯಯೌ ವಿಹಾಸಾ ರಾಜನ್ ದ್ವಾರಕಾಂ ಕೃಷ್ಣಪಾಲಿತಾಂ ॥ ೨೨ ॥
ತತ್ರಸುಪ್ತಂ ಸುಪರ್ಯಂಕೇ ಪ್ರದ್ಯುಮ್ನಿಂಯೋಗಮಸ್ಥಿತಾ ।
ಗೃಹೀತ್ವಾ ಶೋಣಿತಪುರಂ ಸಂಖ್ಯೈಪ್ರಿಯಮದರ್ಶನಯತ್ ॥ ೨೩ ॥

ಉಷೆಯು ಯಾರಿಗೂ ತಿಳಿಯದಂತೆ ಅಂತಃಪುರದಲ್ಲಿ ಅವನೊಡನೆ ರಮಿಸತೊಡಗುತ್ತಾಳೆ.

ಅಂತಃಪುರದ ಕಾವಲುಗಾರರಿಗೆ ಶಂಕೆಯುಂಟಾಗುತ್ತದೆ. ಬಾಣಾಸುರನಲ್ಲಿ ಬಿನ್ನವಿಸುತ್ತಾರೆ. ಬಾಣಾಸುರ ಉಷೆಯ ಅಂತಃಪುರಕ್ಕೆ ನುಗ್ಗುತ್ತಾನೆ. ಅಲ್ಲಿ ಅನಿರುದ್ಧನನ್ನು ಕಾಣುತ್ತಾನೆ. ಸೈನಿಕರು ಆತನನ್ನು ಹಿಡಿಯಲು ಬರುತ್ತಾರೆ. ಅನಿರುದ್ಧ ಅವರನ್ನೆಲ್ಲ ಸದೆಬಡಿಯುತ್ತಾನೆ. ಬಾಣಾಸುರ ತಾನೇ ಮುಂದಾಗಿ ಬಂದು ನಾಗಪಾಶದಿಂದ ಅನಿರುದ್ಧನನ್ನು ಬಂಧಿಸುತ್ತಾನೆ.

ಅನಿರುದ್ಧನ ವಿಚಾರವನ್ನು ನಾರದರು ಕೃಷ್ಣನಿಗೆ ತಿಳಿಸುತ್ತಾರೆ. ಕೃಷ್ಣ, ಬಲರಾಮ, ಸೇನೆಸಹಿತ ಶೋಣಿತಪುರಕ್ಕೆ ತೆರಳುತ್ತಾರೆ. ಬಾಣಾಸುರನ ಕಡೆಯಿಂದ ಶಿವನೇ ಯುದ್ಧಕ್ಕೆ ಬರುತ್ತಾನೆ. ಶಿವ–ಕೃಷ್ಣರಿಗೆ ಯುದ್ಧವಾಗುತ್ತದೆ. ವಿಜೃಂಭಿಸಿದ ಶಿವನನ್ನು ಜೃಂಭಣಾಸ್ತ್ರದಿಂದ ಸ್ಥಗಿತಗೊಳಿಸುತ್ತಾನೆ–ಕೃಷ್ಣ. ಪ್ರದ್ಯುಮ್ನನಿಂದ ಸೋತ ಕುಮಾರಸ್ವಾಮಿ ಓಡಿಹೋಗುತ್ತಾನೆ. ಕುಂಭಾಂಡ ಶೂರ್ಪಕರ್ಣರು ಬಲರಾಮನಿಂದ ಹತರಾಗುತ್ತಾರೆ. ಬಾಣಾಸುರ ಯುದ್ಧಕ್ಕೆ ಬರುತ್ತಾನೆ, ಸೋಲುತ್ತಾನೆ. ಆಗ ಅವನ ತಾಯಿ ದಿಗಂಬರೆಯಾಗಿ ಕೃಷ್ಣನ ಮುಂದೆ

ನಿಲ್ಲುತ್ತಾಳೆ. ಕೃಷ್ಣ ಮುಖ ತಿರುಗಿಸುತ್ತಿದ್ದಂತೆ ಬಾಣಾಸುರ ಓಡಿಹೋಗುತ್ತಾನೆ. ಆಗ ಮಹೇಶ್ವರ ಜ್ವರ ಕೃಷ್ಣನ ಸೈನ್ಯವನ್ನು ಮುತ್ತುತ್ತದೆ. ಅದಕ್ಕೆ ವಿರುದ್ಧವಾಗಿ ವೈಷ್ಣವ ಜ್ವರ ಮುಂದಾಗುತ್ತದೆ. ವೈಷ್ಣವಜ್ವರದಿಂದ ಸೋತ ಮಹೇಶ್ವರ ಜ್ವರ ಕೃಷ್ಣನನ್ನು ಶರಣು ಹೋಗುತ್ತದೆ. ಕೃಷ್ಣ ಅಭಯ ನೀಡುತ್ತಾನೆ.

ಬಾಣಾಸುರ ತನ್ನ ಸಾವಿರ ಕೈಗಳಲ್ಲಿ ವಿವಿಧ ಅಸ್ತ್ರಗಳನ್ನು ಧರಿಸಿ ಯುದ್ಧಕ್ಕೆ ಬರುತ್ತಾನೆ. ಕೃಷ್ಣ ಅವನ ಕೈಗಳನ್ನೆಲ್ಲಾ (ನಾಲ್ಕನ್ನು ಬಿಟ್ಟು) ಕಡಿದು ಹಾಕುತ್ತಾನೆ. ಎಚ್ಚೆತ್ತ ಶಿವನು ಕೃಷ್ಣನನ್ನು ಸ್ತುತಿಸುತ್ತಾನೆ. "ನನ್ನವನು ಈತ ಬಿಟ್ಟುಕೊಡು" ಎನ್ನುತ್ತಾನೆ, ಆಗ ಕೃಷ್ಣನು

ಯದಾತ್ಥ ಭಗವಂಸ್ತ್ವನ್ನ ಕರವಾಮ ಪ್ರಿಯಂತವ
ಭವತೋ ಯತ್ ವ್ಯವಸಿತಂ ಹಸ್ಮೇ ಸಾಧ್ವನುಮೋದಿತಂ ॥
ಅವಧ್ಯೇಯಂ ಮಮಾಪ್ಯೇಷ ವೈರೋಚನಿ ಸುತೋಸುರಃ ।
ಪ್ರಹ್ಲಾದರಪಿ ವರೋದತ್ತೋ ನವಧ್ಯೋಮೇತದಾನ್ವಯಃ ॥
ದರ್ಪೋಪಶಮನಾಯಸ್ಯ ಪ್ರವ್ಯಕ್ಣಾ ಬಾಹವೋ ಮಯಾ
ಸೂದಿತಂ ಚ ಜಲಂಭೂರಿ ಯಚ್ಚಭಾರಾಯತಂ ಭುವಂ ॥

ಶಿವನ ಮಾತನ್ನನುಮೋದಿಸಿ ಬಾಣಾಸುರನನ್ನು ಬಿಡುತ್ತಾನೆ.– 'ತನಗೂ ಈತ ವಧಾರ್ಹನಲ್ಲ' ಎನ್ನುತ್ತಾನೆ. ಕಾರಣ ಪ್ರಹ್ಲಾದನಿಗೆ ಕೊಟ್ಟ ವರ– ಬಾಣಾಸುರನಿಗೂ ಅಭಯ ಕೊಡುತ್ತಾನೆ. ಉಷಾನಿರುದ್ಧರ ಮದುವೆಯಾಗುತ್ತದೆ.

**೨. ವಿಷ್ಣುಪುರಾಣದಲ್ಲಿ :** ಭಾಗವತದಂತೆ ವಿಷ್ಣುಪುರಾಣದಲ್ಲಿಯೂ ಪ್ರದ್ಯುಮ್ನ ಅನಿರುದ್ಧರ ಕಥೆಯಿದೆ. ಪ್ರದ್ಯುಮ್ನನ ಕಥೆಯನ್ನು ಭಾಗವತದಂತೆಯೇ ವಿಷ್ಣು ಪುರಾಣವೂ ಹೇಳುತ್ತದೆ. ಮಾಯಾವತಿಯ ಬಗ್ಗೆ ಮಾತ್ರ ವಿಷ್ಣುಪುರಾಣದಲ್ಲಿ ಹೀಗೆ ಸ್ಪಷ್ಟತೆಯಿದೆ :

ತಸ್ಯಮಾಯಾವತೀನಾಮ ಪತ್ನೀ ಸರ್ವಗೃಹೇಶ್ವರೀ
ಕಾರಯಾಮಾಸ ಸೂದಾನಾಮಾಧಿಪತ್ಯಮನಿಂದಿತಾ ॥

(ವಿ. ಪು, ೫–೨೭–೭)

ಮಾಯಾವತಿಯು ಶಂಬರಾಸುರನ ಹೆಂಡತಿಯಾಗಿದ್ದಳು. ಅಡುಗೆ ಕೋಣೆಯ ಆಧಿಪತ್ಯ ಅವಳದಾಗಿದ್ದಿತು. ಆ ಮಾಯಾವತಿಯು ಯಾರೆಂಬುದನ್ನು ಅದರಲ್ಲಿ ಹೇಳಿದೆ.

ಮನ್ಮಥೇತುಗತೇ ನಾಶಂ ತದುದ್ಭವ ಪರಾಯಣಾ
ಶಂಬರಂ ಮೋಹಯಾಮಾಸ ಮಾಯಾ ರೂಪೇಣ ರೂಪಿಣೀ

ವಿಹಾರಾದ್ಯುಪಭೋಗೇಷು ರೂಪಂ ಮಾಯಾಮಯಂ ಶುಭಂ
ದರ್ಶಯಾಮಾಸ ದೈತ್ಯಸ್ಯ ಯಸ್ಯೇಯಂ ಮದಿರೇಕ್ಷಣಾ ॥
(ವಿ. ಪು. ೫-೨೭-೨೮,೨೯)

ವಿಹಾರಾದಿ ಉಪಭೋಗಗಳಲ್ಲಿ ಮಾತ್ರ ತನ್ನ ಮಾಯೆಯಿಂದ ಆತನನ್ನು ಸಂತುಷ್ಟಿಗೊಳಿಸುತ್ತಲಿದ್ದಳು ರತಿ.

ಅನಿರುದ್ಧನ ಕಥೆಯಲ್ಲಿ ಭಾಗವತ ವಿಷ್ಣುಪುರಾಣಗಳಲ್ಲಿ ವ್ಯತ್ಯಾಸವಿದೆ. ಪ್ರದ್ಯುಮ್ನ ರುಕ್ಮವತಿಯನ್ನು ಮದುವೆಯಾದದ್ದು, ಅವರ ಮಗ ಅನಿರುದ್ಧ, ಅವನಿಗೆ ರುಕ್ಮಿಯ ಮೊಮ್ಮಗಳು ರೋಚನೆಯೊಂದಿಗೆ ಮದುವೆಯಾದದ್ದು ಇವು ಭಾಗವತ ವಿಷ್ಣುಪುರಾಣದಲ್ಲಿ ಒಂದೇ ರೀತಿಯಾಗಿ ವರ್ಣಿತವಾಗಿವೆ.

ಉಷೆಯ ಬಗ್ಗೆ ಪುರಾಣದಲ್ಲಿ ಹೀಗಿದೆ–ಪಾರ್ವತಿಯು ಶಂಭುವಿನ ಜತೆ ಕ್ರೀಡಿಸುತ್ತಿದ್ದುದನ್ನು ನೋಡಿದ ಉಷೆಯು ತಾನೂ ಪತಿಯೊಡನೆ ಕ್ರೀಡಿಸುವ ಭಾವ ಪ್ರದರ್ಶಿಸುತ್ತಾಳೆ. ಇದನ್ನರಿತ ಪಾರ್ವತಿಯು "ನಿನಗೂ ಆ ಯೋಗ ದೂರವಿಲ್ಲ" ಎನ್ನುತ್ತಾಳೆ. ಯಾವಾಗ ಎಂದು ಪ್ರಶ್ನಿಸಿದಾಗ "ವೈಶಾಖಶುದ್ಧ ದ್ವಾದಶಿಯ ರಾತ್ರಿಯಲ್ಲಿ ಸ್ವಪ್ನದಲ್ಲಿ ಯಾರು ನಿನ್ನಲ್ಲಿ ಸಂಭೋಗ ಮಾಡುತ್ತಾರೋ ಅವನೇ ನಿನ್ನ ಪತಿ" ಎನ್ನುತ್ತಾಳೆ.

ಬಾಣಾಸುರನು ಮಹಾ ಶಿವಭಕ್ತ. ಅವನನ್ನೊಲಿಸಿಕೊಂಡು ಸಾವಿರ ಕೈಗಳನ್ನು ಪಡೆದಿದ್ದವನು. ತನ್ನ ಪುರರಕ್ಷಕನನ್ನಾಗಿ ಮಾಡಿಕೊಂಡಿದ್ದವನು. ಆ ಗರ್ವದಿಂದಲೇ ಒಂದು ದಿನ ಯುದ್ಧ ಮಾಡಬೇಕೆಂಬಾಸೆಯುಂಟಾಗಿ ಯಾರೂ ಇದಿರಾಳುಗಳಿಲ್ಲ ಎನ್ನುತ್ತಾನೆ. ಈ ಅಹಂಕಾರದ ಮಾತುಗಳಿಗೆ ಈಶ್ವರನು, "ನಿನ್ನ ಮಯೂರ ಧ್ವಜವು ಭಂಗವಾದೊಡನೆ ಕದನವುಂಟಾಗುವುದು" ಎನ್ನುತ್ತಾನೆ. ಸಂತೋಷದಿಂದ ಮುಕ್ಕಣ್ಣನಿಗೆ ನಮಸ್ಕರಿಸಿ ಬರುವಾಗಲೇ ಬಾಣಾಸುರನ ಧ್ವಜ ಮುರಿಯುತ್ತದೆ. ಯುದ್ಧವಾಗುವುದೆಂಬ ಸಂತೋಷವೇ ಬಾಣಾಸುರನಿಗಾಗುತ್ತದೆ.

ಬಾಣಾಸುರನ ಮಗಳೇ ಉಷೆ. ಪಾರ್ವತಿ ಹೇಳಿದ ಸಮಯವನ್ನೇ ನಿರೀಕ್ಷಿಸುತ್ತಿದ್ದ ಆಕೆಗೆ ವೈಶಾಖ ಶುದ್ಧ ದ್ವಾದಶಿಯ ರಾತ್ರಿಯಲ್ಲಿ ಕನಸಿನಲ್ಲಿ ಅನಿರುದ್ಧನ ಸಂಗವಾಗುತ್ತದೆ. ಆಕೆ ಆತನಿಂದ ರತಿಸುಖವನ್ನು ಅನುಭವಿಸುತ್ತಾಳೆ. ಎಚ್ಚತ್ತು ವಿರಹತಾಪವನ್ನು ಅನುಭವಿಸುತ್ತಾಳೆ. ಗೆಳತಿ ಚಿತ್ರಲೇಖೆಗೆ ಹೇಳುತ್ತಾಳೆ.

ಏತಸ್ಮಿನ್ನೇವ ಕಾಲೇಷು ಯೋಗವಿದ್ಯ ಬಲೇನ ತಂ
ಅನಿರುದ್ಧಮಥಾನಿನ್ಯೇಚಿತ್ರಲೇಖಾ ವರಾಪ್ಸರಾ
ಕನ್ಯಾಂತಃಪುರಮಭೇಕ್ಯ ರಮಮಾಣಂ ಸಹೋಷಯಾ
ವಿಜ್ಞಾಯ ರಕ್ಷಿಣೋ ಗತ್ವಾ ಶಶಂಸರ್ದೈತ್ಯ ಭೂಪತೇ ॥

ಚಿತ್ರಲೇಖೆಯೆಂಬ ಯೋಗಿನಿಯಾದ ಅಪ್ಸರೆ ಅನಿರುದ್ಧನನ್ನು ತಂದು ಸೇರಿಸುತ್ತಾಳೆ. ಕಾವಲುಗಾರರಿಗೆ ಸಂಶಯ ಬಂದು ಬಾಣಾಸುರನಿಗದನ್ನು ತಿಳಿಸುತ್ತಾರೆ. ಆತ ಬಂದು ಅನಿರುದ್ಧನನ್ನು ಕಾಣುತ್ತಾನೆ, ಯುದ್ಧವಾಗುತ್ತದೆ. ಅನಿರುದ್ಧನನ್ನು ನಾಗಪಾಶದಿಂದ ಬಂಧಿಸುತ್ತಾನೆ.

ನಾರದನಿಂದ ಸುದ್ದಿ ತಿಳಿದ ಕೃಷ್ಣನು ಸೈನ್ಯ ಸಹಿತ ಬಾಣಾಸುರನಲ್ಲಿಗೆ ಬರುತ್ತಾನೆ. ಶಿವನಿಗೂ ಕೃಷ್ಣನಿಗೂ ಯುದ್ಧವಾಗುತ್ತದೆ. ಅತ್ಯಂತ ವಿಜೃಂಭಿಸಿದ ಶಂಕರನನ್ನು ಜೃಂಭಕಾಸ್ತ್ರದಿಂದ ಕೃಷ್ಣ ಸ್ಥಗಿತಗೊಳಿಸುತ್ತಾನೆ. (ಜೃಂಭಕಾಸ್ತ್ರೇಣ ಗೋವಿಂದೋ ಬೃಂಭಯಾಮಾಸ ಶಂಕರಃ) (ವಿ. ಪು. ೫–೨೯–೪) ಕಾರ್ತಿಕೇಯನೂ ಸೋತು ಓಡಿಹೋಗುತ್ತಾನೆ.

ಗರುಡಕ್ಷತವಾಹಶ್ಚ ಪ್ರದ್ಯುಮ್ನಾಸ್ತ್ರೇಣ ಪೀಡಿತಃ
ಕೃಷ್ಣ ಹೂಂಕಾರ ವಿಧೂತ ಶಕ್ತಿಶ್ಚಾಪಯ ಯೋ ಗುಹಃ ॥ ೫. ೩೦–೨೬

ಕೊನೆಗೆ ಬಾಣಾಸುರನೇ ಬರುತ್ತಾನೆ. ಕೃಷ್ಣ ಬಾಣಾಸುರರಿಗೆ ಘೋರ ಯುದ್ಧ ನಡೆಯುತ್ತದೆ. ಕೃಷ್ಣ ತನ್ನ ಚಕ್ರ ಹಿಡಿಯುತ್ತಾನೆ. ಆಗ ದೈತ್ಯವಿದ್ಯೆಯಾದ 'ಕೋಟರೀ'ಯು ನಗ್ನ ಅವಸ್ಥೆಯಲ್ಲಿ ಹರಿಯ ಮುಂದೆ ನಿಲ್ಲುತ್ತದೆ. ಮುಖತಿರುಗಿಸಿದ ಕೃಷ್ಣನು ಚಕ್ರವನ್ನು ಕಳುಹುತ್ತಾನೆ. ಅದು ಬಾಣಾಸುರನ ೯೯೮ ಕೈಗಳನ್ನು ಕತ್ತರಿಸುತ್ತದೆ. ಎಚ್ಚೆತ್ತ ಈಶ್ವರನು ಕೃಷ್ಣನಲ್ಲಿಗೆ ಬಂದು "ಇವನು ಅಪರಾಧಿಯಲ್ಲ. ಈತನಿಗೆ ನಾನೇ ವರಕೊಟ್ಟಿದ್ದೇನೆ. ಇದರಿಂದಾಗಿ ನಾನೇ ಕ್ಷಮೆ ಕೇಳುತ್ತೇನೆ" ಎನ್ನುತ್ತಾನೆ. ಕೃಷ್ಣನು ಆಗ–

ತ್ವಯಾ ಯದಭಯಂ ದತ್ತಂ ತದ್ದತ್ತಮಖಿಲಂ ಮಯಾ
ಮತ್ತೋ ವಿಭಿನ್ನಮಾತ್ಮಾನಂ ದೃಷ್ಟುಮರ್ಹಸಿ ಶಂಕರ
ಯೋಹಂ ಸತ್ವಂ ಜಗಚ್ಚೇದಂ ಸದೇವಾಸುರ ಮಾನುಷಂ
ಮತ್ತೋ ನಾನ್ಯವಶೇಷಂ ತತ್ತ್ವಂ ಜ್ಞಾತುಮಿಹಾರ್ಹಸಿ ॥

ಎನ್ನುತ್ತಾನೆ. (ನೀನು ಅಭಯವಿತ್ತರೆ ನಾನಿತ್ತಂತೆ. ನಮ್ಮಲ್ಲಿ ಭೇದವಿಲ್ಲ. ಅಜ್ಞಾನಿಗಳು ಮಾತ್ರ ನಮ್ಮಲ್ಲಿ ಭೇದವನ್ನು ಕಾಣುತ್ತಾರೆ.)

ಬಳಿಕ ಅನಿರುದ್ಧನನ್ನು ಬಿಡಿಸಿಕೊಂಡು ಉಷಾನಿರುದ್ಧರ ಜತೆಯಲ್ಲಿ ಕೃಷ್ಣನು ದ್ವಾರಕೆಗೆ ತೆರಳುತ್ತಾನೆ. ಬಾಣಾಸುರನೇ ಉಷೆಯನ್ನು ಮದುವೆ ಮಾಡಿಕೊಡುತ್ತಾನೆ.

**೩. ಹರಿವಂಶ (ವಿಷ್ಣುಪರ್ವ ಅಧ್ಯಾಯ ೧೦೪–೧೨೮) :** ಹರಿವಂಶದಲ್ಲಿಯೂ ಪ್ರದ್ಯುಮ್ನ ಅನಿರುದ್ಧರ ಕಥೆಯಿದೆ.

ಭಾಗವತ ಮತ್ತು ವಿಷ್ಣು ಪುರಾಣಗಳಿಂದ ಕೆಲವಂಶ ಇದರಲ್ಲಿ ಭಿನ್ನವಾಗಿದೆ. ಇದರಲ್ಲಿ ರುಕ್ಮಿಣಿಯ ಮಗನಾದ ಪ್ರದ್ಯುಮ್ನನನ್ನು ಏಳುದಿನಗಳಲ್ಲಿಯೇ ಶಂಬರಾಸುರನು ಕದ್ದೊಯ್ದು ತನ್ನ ಹೆಂಡತಿಯಾದ ಮಾಯಾವತಿಗೆ (ಆಕೆಗೆ ಮಕ್ಕಳಿರಲಿಲ್ಲ) ಕೊಡುತ್ತಾನೆ. ಆ ಮಗುವು ತನ್ನ ಪತಿಯಾದ ಕಾಮನೆಂದು ಆಕೆಗೆ ಜ್ಞಾಪಕ ಬರುತ್ತದೆ. ಆಕೆ ಮಗುವಿಗೆ ಮೊಲೆಯುಣ್ಣಿಸದೇ ಇರುತ್ತಾಳೆ. ಮಾಯೆಯ ಮಾಯೆಯು ಪ್ರದ್ಯುಮ್ನನಲ್ಲಿ ಬೆಳೆಯುತ್ತಿರುವುದು ಆತನಿಗೂ ಭಾಸವಾಗುತ್ತದೆ. ಆತ ಕಾರಣ ಕೇಳಿದಾಗ ಮಾಯಾವತಿಯು ನಿಜವೃತ್ತಾಂತವನ್ನು ಹೇಳುತ್ತಾಳೆ. ಪ್ರದ್ಯುಮ್ನ ಶಂಬರರಿಗೆ ಯುದ್ಧವಾಗುತ್ತದೆ. ನಾರದ ಇಂದ್ರನಿಂದ ವೈಷ್ಣವಾಸ್ತ್ರ ಕವಚಗಳನ್ನು ಪ್ರದ್ಯುಮ್ನನಿಗೆ ತಂದುಕೊಡುತ್ತಾನೆ. ಶಂಬರನ ವಧೆಯಾಗುತ್ತದೆ. ಪ್ರದ್ಯುಮ್ನನು ಮಾಯಾವತಿಯ ಜತೆಗೆ ದ್ವಾರಕೆಗೆ ತೆರಳುತ್ತಾನೆ. ಆಶ್ಚರ್ಯಗೊಂಡ ಎಲ್ಲರಿಗೂ ಕೃಷ್ಣನೇ ನಿಜಸ್ಥಿತಿ ತಿಳಿಸುತ್ತಾನೆ.

ಬಾಣಾಸುರನು ಶಿವನನ್ನು ವ್ರತದಿಂದ ಒಲಿಸಿಕೊಳ್ಳುತ್ತಾನೆ. ವರವನ್ನು ಕೇಳಲು ಹೇಳಿದಾಗ, "ಪಾರ್ವತಿಯ ಪುತ್ರನಾಗಬೇಕು" ಎಂದು ವರ ಬೇಡುತ್ತಾನೆ. ಶಿವನು "ನೀನು ಕಾರ್ತಿಕೇಯನ ತಮ್ಮ" ಎಂದು ವರವಿತ್ತು "ನಿನ್ನ ಧ್ವಜ ತುಂಡಾದಾಗ ನಿನಗೆ ಯುದ್ಧವೊದಗುವುದು" ಎನ್ನುತ್ತಾನೆ. ಬಾಣಾಸುರನ ಮಂತ್ರಿ ಕುಂಭಾಂಡ ಅವನೊಡನೆ ಮಾತನಾಡುತ್ತಿದ್ದಾಗ ಸಿಡಿಲು ಬಡಿದು ಬಾಣನ ಧ್ವಜ ನೆಲಕ್ಕುರುಳುತ್ತದೆ.

ಬಾಣಾಸುರನ ಮಗಳು ಉಷೆ. ವಿಷ್ಣುಪುರಾಣದಲ್ಲಿರುವಂತೆ ಈಕೆ ಪಾರ್ವತಿಯಿಂದ ಆಶೀರ್ವಾದ ಪಡೆದದ್ದು, ಕನಸಿನಲ್ಲಿ ಅನಿರುದ್ಧನೊಡನೆ ರಮಿಸಿದ್ದು, ಕುಂಭಾಂಡನ ಮಗಳು ಚಿತ್ರಲೇಖೆಯೊಡನೆ ಹೇಳಿದ್ದು– ಚಿತ್ರಲೇಖೆಯೆಂಬ ಅಪ್ಸರಸಿ ಹಲವು ಚಿತ್ರಗಳನ್ನು ತಂದದ್ದು, ಅನಿರುದ್ಧನ ಪಟವನ್ನು ನೋಡಿ ಉಷೆ ಅವನೇ ಎಂದದ್ದು– ಈ ಕತೆ ಇಲ್ಲಿಯೂ ಸಾಗುತ್ತದೆ. ಅನಿರುದ್ಧನನ್ನು ಇಲ್ಲಿ ಹಾಗೆಯೇ ಎತ್ತಿ ತರುವುದಿಲ್ಲ. ಚಿತ್ರಲೇಖೆ ಅವನೊಡನೆ ಹೇಳಿ ಅವನೂ ತನಗಾದ ಕನಸನ್ನೂ, ಉಷೆಯೇ ತನ್ನ ಪತ್ನಿಯೆಂಬುದನ್ನೂ ತಿಳಿಸಿದ ಬಳಿಕ ಆತನನ್ನು ಎತ್ತಿಕೊಂಡು ಶೋಣಿತಪುರಕ್ಕೆ ಬಂದು ಉಷೆಯೊಡನೆ ಸೇರಿಸುತ್ತಾಳೆ.

ಮುಂದಿನ ಕತೆ ವಿಷ್ಣುಪುರಾಣದಂತೆ ಸಾಗುತ್ತದೆ. ಯುದ್ಧದಲ್ಲಿ ಕೃಷ್ಣರುದ್ರನಿಗೆ ತುಮುಲ ಯುದ್ಧವಾದಾಗ ಭೂದೇವಿ ಬ್ರಹ್ಮನೆಡೆಗೆ ಹೋಗುತ್ತಾಳೆ. ಬ್ರಹ್ಮನು ಬರುವಷ್ಟರಲ್ಲಿ ಶಿವನಿಗೆ ತಾನೇ ಕೃಷ್ಣನಲ್ಲಿ ನೆಲೆಸಿದುದು ಗೋಚರವಾಗುತ್ತದೆ.

ಆತ್ಮಾನಂ ಕೃಷ್ಣಯೋನಿಸ್ಥಂ ಪಶ್ಯತೇ ಹ್ಯೇಕ ಯೋನಿಜಂ
ತತೋನಿಸೃತ್ಯ ರುದ್ರಸ್ತು ವ್ಯಸ್ತವಾದ್ಯೋ ಭವನ್ಮೃಧೇ ॥

ಶಿವನು ಯುದ್ಧ ನಿಲ್ಲಿಸುತ್ತಾನೆ.

ಬ್ರಹ್ಮನೂ ಕನಸಿನಲ್ಲಿ :

ಹರಂಚ ಹರಿರೂಪೇಣ ಹರಿಂಚ ಹರರೂಪಿಣಂ
ಶಂಖಚಕ್ರ ಗದಾಪಾಣಿಂ ಪೀತಾಂಬರಧರಂ ಹರಂ
ತ್ರಿಶೂಲ ಪಟ್ಟಿಶಧರಂ ವ್ಯಾಘ್ರ ಚರ್ಮಧರಂ ಹರಿಂ
ಗರುಡಸ್ಥಂ ಚಾಪಿ ಹರಂ ಹರಿಂಚ ವೃಷಭಧ್ವಜಂ ॥

ಹೀಗೆ ಹರಿಹರರಲ್ಲಿ ಅಭೇದವನ್ನು ಕಾಣುತ್ತಾನೆ.

ಶಿವನು ಯುದ್ಧದಿಂದ ನಿವೃತ್ತನಾದಾಗ ಗುಹನು ಕೃಷ್ಣ ಪ್ರದ್ಯುಮ್ನರನ್ನು ಪ್ರತಿಭಟಿಸುತ್ತಾನೆ. ಕೃಷ್ಣನು ಕಾರ್ತಿಕೇಯನನ್ನು ಸಂಹರಿಸಬೇಕೆಂದಿರುವಾಗ ಲಂಬಾ ಎಂಬ ಹೆಸರಿನ ಕೊಟ್ಟವೀದೇವಿ (ಪಾರ್ವತಿಯ ಒಂದಂಶ) ಕೃಷ್ಣನ ಮುಂದೆ ಬತ್ತಲೆ ನಿಲ್ಲುತ್ತಾಳೆ.

ದಿಗ್ವಾಸಾ ದೇವವಚನಾತ್ ಪ್ರವಿಷ್ಯಾತತ್ರ ಕೊಟ್ಟವೀ
ಲಂಬಾ ನಾಮ ಮಹಾಭಾಗಾ ಭಾಗೋ ದೇವ್ಯಾಸ್ತದಷ್ಟಮಃ

ಕೃಷ್ಣನು ಮುಖ ತಿರುಗಿಸುತ್ತಾನೆ. ಕೊಟ್ಟವಿಯು ಗುಹನನ್ನು ಕರೆದೊಯ್ಯುತ್ತಾಳೆ. ಬಾಣನೇ ಕೃಷ್ಣನಿಗೆದುರಾಗುತ್ತಾನೆ. ಬಾಣನಿಗೆ ಶಿವನ ರಥವನ್ನೇ ನಂದಿಯೊದಗಿಸುತ್ತಾನೆ. ಲಂಬೆಯು ಮತ್ತೆ ಕೃಷ್ಣನ ಮುಂದೆ ಬತ್ತಲೆಯಾಗಿ ನಿಲ್ಲುತ್ತಾಳೆ. ಕೃಷ್ಣನು ಬಾಣನ ೯೯೮ ಕೈಗಳನ್ನು ಕತ್ತರಿಸುತ್ತಾನೆ. ನಂದಿಯು ಶಿವನನ್ನು ಬಾಣನಲ್ಲಿಗೆ ಕರೆದೊಯ್ಯುತ್ತಾನೆ. ಆತ ಬಾಣನನ್ನು ಹರಸಿ ಆತನಿಗೆ ಅಮರತ್ವವನ್ನು ನೀಡಿ ವಿದ್ರೂಪವಡಗಿದ ದೇಹ ನೀಡುತ್ತಾನೆ.

ಕೃಷ್ಣನು ಅನಿರುದ್ಧ–ಉಷೆಯರನ್ನು ಕರೆದೊಯ್ಯುತ್ತಾನೆ. ಕುಂಭಾಂಡ ಬಾಣನ ರಾಜ್ಯವನ್ನು ಪಡೆಯುತ್ತಾನೆ.

**೪. ಮಹಾಭಾರತದಲ್ಲಿಯೂ** ಉಷಾನಿರುದ್ಧರ ಕಥೆಯಿದೆ (ಸಭಾಪರ್ವ ಅಧ್ಯಾಯ ೬೦) ಅನಿರುದ್ಧನು,

ಯೇನೋಪಾಯೇನ ಕೌಂತೇಯ ಅನಿರುದ್ಧೋ ಮಹಾದ್ಯುತಿಃ
ಪ್ರದ್ಯುಮ್ನಿಸ್ತಾಮುಷಾಂ ಪ್ರಾಪ್ಯ ಪ್ರಚ್ಛನ್ನಃ ಪ್ರಮುಮೋದಹ ।

ಹೇಗೋ ಬಾಣನ ಮಗಳಾದ ಉಷೆಯನ್ನು ಪಡೆದು ಪ್ರಚ್ಛನ್ನವಾಗಿ ಆಕೆಯೊಡನೆ ರಮಿಸುತ್ತಿರುತ್ತಾನೆ.

ಬಾಣಾಸುರನಿಗೆ ತಿಳಿಯುತ್ತದೆ, ಅವರಿಬ್ಬರನ್ನು ಬಾಣನು ಸೆರೆಯಲ್ಲಿಡುತ್ತಾನೆ. ಬಾಣನ ಪೆಟ್ಟು ತಗಲಿ ಅನಿರುದ್ಧ ಮೂರ್ಛೆ ಹೋಗುತ್ತಾನೆ. ನಾರದನು ಕೃಷ್ಣನಿಗೆ ತಿಳಿಸುತ್ತಾನೆ. ಕೃಷ್ಣನು ಬಲರಾಮ ಪ್ರದ್ಯುಮ್ನರ ಸಹಿತ ಶೋಣಿತಪುರಕ್ಕೆ ಬರುತ್ತಾನೆ. ದ್ವಾರಪಾಲಕರನ್ನೂ ಸೋಲಿಸುತ್ತಾನೆ. ಉತ್ತರ ದ್ವಾರದಲ್ಲಿದ್ದ ಶಿವನಲ್ಲಿ ಯುದ್ಧ ಮಾಡಿ ಅವನನ್ನು ಸೋಲಿಸಿ ಬಾಣನೊಡನೆ ಯುದ್ಧ ಮಾಡುತ್ತಾನೆ.

ಚಕ್ರಮುದ್ಯಮ್ಯ ರೋಷಾದ್ವೈ ದಿವ್ಯಂ ಶಸ್ತ್ರೋತ್ತಮಂ ಶತಃ
ಸಹಸ್ರ ಬಾಹೋಚಿಚ್ಛೇದ ಬಾಣಸ್ಯಾಮಿತ ತೇಜಸಃ ।
ತತೋಬಾಣೋ ಮಹಾರಾಜ ಕೃಷ್ಣೇನ ಭೃಶಪೀಡಿತಃ
ಭಿನ್ನ ಬಾಹುಪಪಾತಾಶು ವಿಶಾಖ ಇವ ಪಾದಪಃ ॥

ಬಾಣನ ಎಲ್ಲ ಬಾಹುಗಳನ್ನೂ ಛೇದಿಸುತ್ತಾನೆ. ಕೊಂಬೆಗಳಿಲ್ಲದ ಮರದಂತೆ ನೆಲಕ್ಕುರುಳಿದ ಬಾಣನ ಅಂತ್ಯವಾಗುತ್ತದೆ. ಬಾಣನ ಸಂಪತ್ತನ್ನೆಲ್ಲ ಗರುಡನ ಮೇಲೆ ಹೇರಿಕೊಂಡು ಉಷಾ ಅನಿರುದ್ಧರನ್ನು ಸೇವಕರ ಸಹಿತ ಕರೆದುಕೊಂಡು ಕೃಷ್ಣ ದ್ವಾರಕೆಗೆ ಹೋಗುತ್ತಾನೆ.

**೫. ಜಗನ್ನಾಥವಿಜಯದಲ್ಲಿ :** ಹದಿಮೂರನೆಯ ಶತಮಾನದ ಕವಿ ರುದ್ರಭಟ್ಟನು ಬರೆದ ಕನ್ನಡ ಕಾವ್ಯ ಜಗನ್ನಾಥ ವಿಜಯದಲ್ಲಿಯೂ ಉಷಾನಿರುದ್ಧರ ಕಥೆಯಿದೆ.

ಪ್ರದ್ಯುಮ್ನನ ಬಗೆ ವಿಶೇಷವಾದ ವಿವರವೇನೂ ಇಲ್ಲ. ಇಷ್ಟು ಮಾತ್ರ ಇದೆ :

ಹರಿಗಂ ರುಕ್ಮಿಣಿಗಂ ತನೊಜನೊಗೆದಂ ಪ್ರದ್ಯುಮ್ನದೇವಂ ರತೀ
ಶ್ವರನುನ್ಮೂಲಿತ ಶಂಬರಂ ಸಕಲ ಲೋಕೋತ್ಪತ್ತಿ ಬೀಜಂ ಸುಧಾಕರ ಮಿತ್ರಂ
ಮಕರಾಂಕನಿಕ್ಷುಧನು ಪುಷ್ಪಾಸ್ತ್ರಂ ವಸಂತಪ್ರಿಯಂ
ವಿರಹಿವ್ರಾತ ಭಯಂಕರಂ ವಿಟವಿಟೀ ಶೃಂಗಾರ ಸಾರೋದಯಂ ॥ ಜ.ವಿ. ೧೨.೬೦

ಅನಿರುದ್ಧನ ಕಥೆಯೆನ್ನುವುದಕ್ಕಿಂತ ಹೆಚ್ಚಿನದಾಗಿ ಬಾಣಾಸುರನ ಕಥೆಯೆನಿಸುವ ಕಥಾಭಾಗ ಜಗನ್ನಾಥ ವಿಜಯದಲ್ಲಿದೆ.

ಬಾಣಾಸುರನು ಪಾಂಡವರ ರಾಜಸೂಯ ಯಾಗ ಸಂದರ್ಭದಲ್ಲಿ ಶಿಶುಪಾಲನಿಗೆ ಬೆಂಬಲಿಗನಾಗಿ ಹೋಗಿದ್ದನೆಂದೂ ತಳಿಗೆಯಿಂದ ಶಿಶುಪಾಲನ ಶಿರಚ್ಛೇದನ ಮಾಡಿದ ಕೃಷ್ಣನ ಕೈಚಳಕವನ್ನು ನೋಡಿ ಪಲಾಯನ ಮಾಡಿದನೆಂದೂ ಇದೆ.

ಬೆಂಬಲಮಪ್ಪೆವೆಮ್ಮ ಶಿಶುಪಾಲಮಹೀಪತಿಗೆಂದು ಚಾತುರಂ
ಗಂಬೆರಸಣ್ಮಿನೊಳ್ಪೆಸೆವಿನಂ ಕಡುಬಿಂಕದವೇಣುಧಾರಿ ಸಾ
ಲ್ವಂ ಬಲಸೂನು, ರುಕ್ಮಿ ರಣರಾಗದೆ ಬಿಲ್ವಿಡಿದೆರ್ದು ಕಂಡು ಬಿ
ಲ್ಲಿಂ ಬೆರಗಾದರೊಮೊರ್ದದಲೆ ಪಾಳುವುದುಂ ಶಿಶುಪಾಲಮಸ್ತಕಂ ॥ ಜ.ವಿ. ೭.೫೬

"ಯಃ ಪಲಾಯಃ ಸಜೀವತಿ" ಎಂದು ಓಡುತ್ತಾರೆ ಅವರೆಲ್ಲಾ.

ಅದೇ ಬಲಿಸೂನು ಬಾಣಾಸುರನು ಸಹಸ್ರಬಾಹುಗಳಿಂದ ಕೊಬ್ಬಿದವನಾಗಿ 'ಸಂಗ್ರಾಮಕಾಮನಾಗಿ ತನ್ನುಪವನದೊಳ್ ಸನ್ನಿಹಿತನಾಗಿರ್ಪ ದರ್ಪಕ ವಿರೋಧಿಯನಾರಾಧಿಸಿ ನಿಜಮಯೂರಧ್ವಜ ಪತನೋತ್ಪಾತವಾದಂದು ಮಹಾಹವಮಪ್ಪುದೆಂದು ವರಂಬಡೆದು ಒಂದೊಂದು ಸಮಯ ಮೊಡ್ಡೋಲಗಂಗೊಟ್ಟಿರ್ದನಲ್ಲಿ.....

ಮಂತ್ರಿಯಾದ ಕುಂಭಾಂಡ ಕೇಳುತ್ತಾನೆ. "ಹರನನ್ನು ಒಲಿಸಿ ಏನು ವರ ಪಡೆದೆ? ಅಮರತ್ವವನ್ನು ಪಡೆದೆಯೋ? ವಿಶ್ವಜಗತ್ರಿತಯಾಧಿಪತ್ಯಮಂ ಪಡೆದೆಯೋ? ಮಹಾಸ್ತ್ರಮಂ ಪಡೆದೆಯೋ? ತಂದೆಗೆ ಬಂಧಮೋಕ್ಷಮಪ್ಪುದಂ ಪಡೆದೆಯೋ?"

ಅದಕ್ಕೆ ಬಾಣ ಉತ್ತರ ಕೊಡುತ್ತಾ "ಇವೆಲ್ಲ ಏನು ಮಹಾ ? ರಣವೆಂಬ ವಸ್ತುವೊಂದನೆ ಪಡೆಯಲ್ ಮನಂ ಬಯಸಿ ಪೂಜಿಸಿದೆ-ವರವಿತ್ತಂ ಶಂಭು ದೇವಾಸುರ ಸಮರದ ರಾಮಾಯಣೋಗ್ರಾಹವಾಡಂಬರದಪ್ಪೊಂದು ಸಂಗ್ರಾಮಮೆನಗೆ" ಎಂದು ಬೀಗುತ್ತಾನೆ.

ಅವನಿಗೆ ಉಷೆಯೆಂಬ ಅತ್ಯಂತ ಸುಂದರಿಯಾದ ಮಗಳು.

ಶೋಣಿತಪುರೋಪಾಂತದ ಗೋಮತೀನದಿಯ ಪರಿಸರ ಪ್ರದೇಶದಲ್ಲಿ ಶೂಲಿಯ ಲೀಲಾವನ. ಅಲ್ಲೊಂದು ದಿನ ಶೂಲಿಯ ಮುಗ್ಧತೆಯಿಂದ ಸಂತೋಷ ಪಡುತ್ತಿದ್ದ ಹರನ ಬಳಿಯಲ್ಲೇ ಕುಳಿತಿದ್ದ ಪಾರ್ವತಿಯಲ್ಲಿಗೆ ಉಷೆ ಬರುತ್ತಾಳೆ. ಈಶ್ವರನನ್ನು ಆಸೆಯಿಂದ ನೋಡುತ್ತಾಳೆ. ಅವಳ ಭಾವವನ್ನರಿತ ಗಿರಿಜೆ:

ಅದಟಿಂದಾಕಾರದಿಂ ವೈಭವದಿನೆಣೆ ಸಮಂ ಸಾಟಿಯಲ್ತೇ ತ್ರಿಣೇತ್ರಂ
ಮದನಂ ದೇವೇಂದ್ರನೆಂಬಂತೆಸೆವ ಬಲಗುಣಾಲಂಕೃತಂ ಒಂದು ವೈಶಾ
ಖದಶುದ್ಧದ್ವಾದಶೀರಾತ್ರಿಯೊಳನುಭವಿಕುಂ ಕನ್ಯೆ ನಿನ್ನೊಳ್ ಮನೋ ರಾ
ಗದಿನೊರ್ವಂಸ್ವಪ್ನದೊಳ್ ತತ್ಸುಭಗನೆ ನಿನಗಕ್ಕುಂ ವರಂ ಪೋಗಮೋಘಂ ॥

ಗಿರಿಜೆಯ ಮಾತಿನಂತೆ ಸ್ವಪ್ನದಲ್ಲಿ ಅನಿರುದ್ಧ ಬಂದದ್ದು, ಅವನಿಂದಾದ ವಿರಹ ವೇದನೆಯನ್ನು ತಡೆಯಲಾರದೆ ಚಿತ್ರಲೇಖೆಗೆ ಹೇಳಿದ್ದು, ಅವಳು

ಚಿತ್ರಗಳನ್ನು ಬರೆದು ತೋರಿದ್ದು (ಏಳು ದಿನಗಳ ವಾಯಿದೆ ಅದರಲ್ಲಿ ಛಪ್ಪನ್ನ ದೇಶಗಳ ಚಿತ್ರಗಳ ಸಹಿತ ನರಕಿನ್ನರಾದಿಯಾದೆಲ್ಲರ ಚಿತ್ರ) ಅನಿರುದ್ಧನಲ್ಲಿಗೆ ಹೋಗಿ ಅವನಿಗೆ ತಿಳಿಸಿ ಕರೆತಂದದ್ದು, ಬಾಣಾಸುರನಿಗೆ ಕನ್ಯಾಧ್ಯಕ್ಷನಿಂದ ತಿಳಿದದ್ದು, ಯುದ್ಧ, ಅದರಲ್ಲಿ ಮೋಸದಿಂದ ಸರ್ಪಾಸ್ತ್ರದಿಂದ ಅನಿರುದ್ಧನ ಬಂಧನ, ಇವೆಲ್ಲವೂ ವಿಷ್ಣುಪುರಾಣ ಹರಿವಂಶಗಳಂತೆಯೇ ಇಲ್ಲಿಯೂ ಇದೆ.

ಅನಿರುದ್ಧನ ಅಂತಃಪುರದವರ ಗೋಳು ಕೇಳಿ ಯೋಚನೆಗೀಡಾದ ಯಾದವರಿಗೆ ನಾರದ ಅನಿರುದ್ಧನ ವಿಚಾರ ತಿಳಿಸುತ್ತಾನೆ. ಗರುಡನನ್ನು ಕರೆಸಿ ಯುದ್ಧಕ್ಕೆ ಹೋಗುತ್ತಾರೆ. ಶೋಣಿತಪುರಕ್ಕೆ ಬಂದು ಕೃಷ್ಣ ತನ್ನ ಪಾಂಚಜನ್ಯವನ್ನೂದುತ್ತಾನೆ.

"ಆಗಳಾಮಹಾನಾದಮಂ ಪಾಂಚಜನ್ಯನಾದಮೆಂದಱಿದು ಶರ್ವಂ ಪಾರ್ವತೀ ಸುತನಿರ್ವಿಶೇಷನಪ್ಪ ಬಾಣಂಬರಂ ಯುದ್ಧಮೇವುದೀಯೆಡೆಯೊಳೆ ವಾರಿಜಾಕ್ಷನಂ ನಿವಾರಿಪೆನೆಂದು ಗಿರಿವ್ರಜನಾಮಪಾವಕಪುರಸ್ಸರನಂಗಿರನೆಂಬಗ್ನಿ ರಾಜನುಮಲ್ಲಿಂ ಪಿಂತೆ ನಂದಿಪ್ರಮುಖನಿಖಿಲ ಪ್ರಮಥಯೂಥಮನಲ್ಲಿಂ ಪೆಱಗೆ ಭೈಷಜ್ಯಕಾದಿಜ್ವರಮುಮಂ ಬೆಸಸೆ."

ಅವರೆಲ್ಲರೂ ಸೋಲುತ್ತಾರೆ. ಭಯಂಕರವಾದ ಜ್ವರವೂ ವಿಜೃಂಭಿಸಿದಾಗ ಕೃಷ್ಣನು ವೈಷ್ಣವ ಜ್ವರವನ್ನು ಬಿಟ್ಟು ಮಹೇಶ್ವರ ಜ್ವರವನ್ನು ಹಿಡಿದು ತರಿಸುತ್ತಾನೆ. ಅದನ್ನು ಕೊಲ್ಲಲುದ್ಯೋಗಿಸಿದಾಗ ಆಕಾಶವಾಣಿಯಾದುದರಿಂದ ಕೊಲ್ಲದೇ ಕಾಯುತ್ತಾನೆ.

ಕೊನೆಗೆ ಈಶ್ವರನೇ ಬರುತ್ತಾನೆ. ಭಯಂಕರ ಯುದ್ಧವಾಗುತ್ತದೆ. ಕೃಷ್ಣನು ವೈಷ್ಣವಾಸ್ತ್ರವನ್ನು ಪ್ರಯೋಗಿಸಿದಾಗ ಈಶ್ವರನು ಸಿಟ್ಟಿನಿಂದ ಪಾಶುಪತಾಸ್ತ್ರವನ್ನು ತೊಡಲುದ್ಯೋಗಿಸುತ್ತಾನೆ. ಆಗ, ಉಪಾಯದಿಂದ "ಜೃಂಭಾಣಾಸ್ತ್ರದಿನಣಂ ಕೈ ವೇಗದಿಂದೆಚ್ಚುಮಾಧಿಪನಂ" ಸ್ತಂಭಿಸುತ್ತಾನೆ.

ಷಡಾನನ ಬರುತ್ತಾನೆ. ಪ್ರದ್ಯುಮ್ನನಿಗೂ ಆತನಿಗೂ ಘೋರ ಯುದ್ಧವಾಗುವಾಗ ಬ್ರಹ್ಮಶಿರೋಸ್ತ್ರದಿಂದ ಷಡಾನನನು ಹೊಡೆದಾಗ ಚಕ್ರದಿಂದ ಕೃಷ್ಣನದನ್ನು ಪರಿಹರಿಸುತ್ತಾನೆ. ಶಕ್ತ್ಯಾಯುಧದಿಂದೆಚ್ಚಾಗ ಅದನ್ನು ತುಂಡರಿಸಿ ಷಡಾನನನ ಮೇಲೆ ಪ್ರಯೋಗಿಸಲು ಚಕ್ರಹಿಡಿದಾಗ "ಗಿರಿಜಾಕಾಂತೆ ನಗ್ನತ್ವದಿಂ ಕೌಟವಿ ಬಂದಡ್ಡಂ ನಿಲಲ್" ಕೃಷ್ಣಮುಖ ತಿರುಗಿಸುತ್ತಾನೆ. ಷಡಾನನ ಅಪಸರಣಂಗೆಯ್ಯುತ್ತಾನೆ.

ಬಾಣಾಸುರನೇ ಬರುತ್ತಾನೆ. ಅಮೋಘ ಯುದ್ಧವಾಗುತ್ತದೆ. ಬಾಣಾಸುರನ

ಬಿಲ್ಬಲ್ಮೆಯನ್ನು ನಾರದನೇ ಹೊಗಳುತ್ತಾನೆ. ಎಲ್ಲ ಬಗೆಯ ಮಂತ್ರಾಸ್ತ್ರಗಳ ಪ್ರಯೋಗವಾಗುತ್ತದೆ. ಶಕ್ತಿಯನ್ನೆಸೆದಾಗ ಅದನ್ನು ಹಿಡಿದು ಅವನಿಗೆ ಎಸೆಯುತ್ತಾನೆ, ಕೃಷ್ಣ ಗಾಯಗೊಳ್ಳುತ್ತಾನೆ. ಬಾಣಾಸುರ ಗಾಯಗೊಂಡ ಸಿಂಹವಾಗುತ್ತಾನೆ. ಆಗ ಕೃಷ್ಣ ಚಕ್ರ ಹಿಡಿದು ಅವನ ಬಾಹುಗಳನ್ನು ಕತ್ತರಿಸುತ್ತಾನೆ. ಮತ್ತೆ ಶಿರಚ್ಛೇದನಕ್ಕೆಂದು ಚಕ್ರಪ್ರಯೋಗಿಸಬೇಕೆಂದಿರುವಲ್ಲಿ ಸಮೀಪಕ್ಕೆ ವಿಶ್ವರೂಪನೆ ಬಂದು.

ಉಡುಗುಡುಗು ಚಕ್ರಮಂ
ಬಿಡದಿರ್ ಬಿಡದಿರ್ ಬಲೀಂದ್ರಸೂನುಗೆ ಮಾಣ್ ಮಾಣ್
ಪೊಡೆಯಲರ ಮನ್ನಿಸೆನ್ನಯ
ನುಡಿಯಂ ಗುಹನಿಂ ವಿಶೇಷವೆನಗೀಬಾಣಂ ॥
ದ್ವಯಭಾವಂ ನಮಗಿಲ್ಲ ಬಲ್ಲವರೆ ನಾನುಂ ನೀನುಮೀ ಮಾತ ನಿ
ಶ್ಚಯಮೆಂತೆಂದೆನಲೇಕ ಮೂರ್ತಿಮೊದಲೊಳ್ ಸಂದತ್ತದಿನ್ನೇಕ ಮೂ
ರ್ತಿಯೆ ಮೂರ್ತಿತ್ರಯವಾಯ್ತದಲ್ಲದೆಯುಮಾ ತ್ರೈಮೂರ್ತಿಯೊಳ್ ಸತ್ವಮೂ
ರ್ತಿಯೆ ನೀಂ ರಕ್ಷಣವೃತ್ತಿ ನಿನ್ನದದಱಿಂ ರಕ್ಷಿಸೀ ಬಾಣನಂ ॥

ಎನ್ನುತ್ತಾನೆ. ಹರಿಯು ಮನ್ನಿಸುತ್ತಾನೆ. ಬಾಣಾಸುರನು ಮಹಾಕಾಳ ನಾಮದಿಂದ ಪ್ರಮಥ ಸಾಮಾನ್ಯಪದವಿಯನ್ನು ಪಡೆದು ಮೃಡನೊಡನೆ ಕೈಲಾಸಕ್ಕೆ ಹೋಗುತ್ತಾನೆ. ಅನಿರುದ್ಧ ಉಷೆಯರೊಂದಿಗೆ ಬಲರಾಮಾದಿಗಳು ದ್ವಾರಾವತಿಗೆ ಹೋಗುತ್ತಾರೆ. ಅಲ್ಲಿ ಸಾಲ್ವ ಯುದ್ಧಕ್ಕೆ ಸಿದ್ಧನಾಗಿರುತ್ತಾನೆ. ಹೀಗೆ ಜಗನ್ನಾಥವಿಜಯದಲ್ಲಿ ಬಾಣಾಸುರ ವಿಜಯದ ನೆಪದಲ್ಲಿ ಈಶ್ವರ–ವಿಷ್ಣು ಸಮಾನತೆಯನ್ನು ಸಾರುತ್ತಾನೆ ರುದ್ರಭಟ್ಟ.

ಇಲ್ಲಿಯವರೆಗೆ ನಿರೂಪಿಸಿದ ಭಾಗವತ, ಭಾರತ, ವಿಷ್ಣುಪುರಾಣ, ಹರಿವಂಶ ಈ ಪುರಾಣಗಳು ವಿಷ್ಣು ಸರ್ವೋತ್ತಮತೆಯನ್ನು ಸಾರುವ ಪುರಾಣಗಳೇ ಆಗಿವೆ. ರುದ್ರಭಟ್ಟನ ಜಗನ್ನಾಥ ವಿಜಯವೂ ಕೃಷ್ಣನಮಹಿಮೆಯನ್ನೂ ಆತನ ಸರ್ವೋತ್ಕೃಷ್ಟತೆಯನ್ನೂ ಸಾರುವಂತಹುದೇ ಆಗಿದೆ. ಆದುದರಿಂದ ಈ ಕತೆಯಲ್ಲಿ ಸಾಮಾನ್ಯವಾಗಿ ಹೆಚ್ಚಿನ ಘಟನೆಗಳು ಸಮಾನವಾಗಿಯೇ ಇವೆ. ಅಲ್ಲಲ್ಲಿ ಮಾತ್ರ ಭೇದವನ್ನು ಕಾಣುತ್ತೇವೆ.

**೬. ಶಿವಪುರಾಣದಲ್ಲಿ :** ಶಿವನಿಗೆ ಸಂಬಂಧಿಸಿದ ಪುರಾಣಗಳಲ್ಲಿಯೂ ಉಷಾನಿರುದ್ಧರ ಕತೆಯಿದೆ. ಮಹರ್ಷಿ ಪ್ರಣೀತ ಶಿವಪುರಾಣ–ರುದ್ರಸಂಹಿತೆ ಯುದ್ಧಕಾಂಡ ಅಧ್ಯಾಯ ೫೧–೫೪ರಲ್ಲಿ ಉಷಾಚರಿತ್ರೆಯಿದೆ.

ವೈಷ್ಣವಪುರಾಣಗಳಿಗೂ ಶಿವಪುರಾಣಕ್ಕೂ ಕಥೆಯಲ್ಲಿ ಅಲ್ಲಲ್ಲಿ ಭಿನ್ನತೆಯಿದೆ.

ಶೋಣಿತಪುರವನ್ನಾಳುತ್ತಿದ್ದ ಬಾಣಾಸುರ ಮಹಾಶಿವಭಕ್ತ. ಬಲಿಯ ಹಿರಿಯ ಮಗನಾದ ಈತ ಒಂದು ದಿನ ಸಹಸ್ರವಿಧವಾದ್ಯಗಳಿಂದ ಕೂಡಿ ತಾಂಡವ ನೃತ್ಯವನ್ನಾಡಿದ. ಶಿವನಿದರಿಂದ ಸಂತೃಪ್ತನಾದ–ವರಗಳನ್ನು ನೀಡಿದ. ಬಾಣಾಸುರನು ತನ್ನ ಪಟ್ಟಣದಲ್ಲೇ ರಕ್ಷಕನಾಗಿ ಪರಿವಾರ ಸಹಿತ ಶಿವನಿರಬೇಕೆಂದು ವರವನ್ನು ಬೇಡಿಕೊಂಡ. ಅದರಂತೆ ಶಿವನು ಶೋಣಿತಪುರದಲ್ಲೇ ತನ್ನ ಗಣಗಳು ಸಹಿತ ವಾಸಮಾಡುತ್ತಾನೆ.

ಒಂದು ದಿನ ಕ್ರೀಡಾಸಕ್ತನಾದ ಶಿವ ಕಾಮಾಸಕ್ತಳಾದ ಪಾರ್ವತಿಯನ್ನು ಕರೆತರಲು ನಂದಿಗೆ ಆಜ್ಞಾಪಿಸುತ್ತಾನೆ. ಪಾರ್ವತಿ ಅಲಂಕಾರ ಮಾಡಿಕೊಳ್ಳುತ್ತಿದ್ದಳು. ಪಾರ್ವತಿಯು ಬರುವ ಮೊದಲೇ ಕೂಷ್ಮಾಂಡನೆಂಬ ರಾಕ್ಷಸಪುತ್ರಿ ಚಿತ್ರಲೇಖೆಯು ತಾನು ಶಂಕರನನ್ನು ಸೇವಿಸಲು ಗೌರೀರೂಪ ತಾಳಿದಳು. ಅವಳಿಗೆ ವಿಷ್ಣುಶಕ್ತಿಯಿತ್ತು. ಬಾಣಾಸುರನ ಮಗಳು ಉಷೆಯು ಕುಂಭಾಂಡನ ಮಗಳು ಚಿತ್ರಲೇಖೆಯು ಒಂದೊಂದು ರೀತಿಯ ವೇಷವನ್ನು ಧರಿಸಿದರು. ಸರ್ವಾಂತರ್ಯಾಮಿಯಾದ ಗೌರಿಯು ಉಷೆಯಲ್ಲಿಗೆ ಬಂದು

ಅಸ್ಮಿಂಸ್ತು ಕಾರ್ತಿಕೇ* ಮಾಸೇ ಋತುಧರ್ಮಾಸ್ತು ಮಾಧವೇ
ದ್ವಾದಶ್ಯಾಂ ಶುಕ್ಲಪಕ್ಷೇತು ಯಾಸ್ತೇ ಘೋರೇ ನಿಶಾಗಮೇ ॥
ಕೃತೋಪವಾಸಾಂ ತ್ವಾಂ ಭೋಕ್ತಾ ಸುಪ್ತಾಮಂತಃ ಪುರೇ ವರಃ
ಸತೇ ಭರ್ತಾ ಕೃತೋ ದೇವ್ಯೈಸ್ತವ ಸಾರ್ಥಂ ರಮಿಷ್ಯತಿ ॥

ಎನ್ನುತ್ತಾಳೆ. (ಕಾರ್ತಿಕಮಾಸ ಶುಕ್ಲದ್ವಾದಶಿಯಂದು ರಾತ್ರಿಯಲ್ಲಿ ಯಾವನು ನಿನ್ನ ಅಂತಃಪುರವನ್ನು ಪ್ರವೇಶಿಸಿ ನಿನ್ನನ್ನು ಭೋಗಿಸುತ್ತಾನೋ ಅವನೇ ನಿನ್ನ ಪತಿಯಾಗುತ್ತಾನೆ) ಉಷೆಗೆ ಒಪ್ಪಿಗೆಯಾಗುತ್ತದೆ. ಸಂತೋಷವಾಗುತ್ತದೆ.

ಬಾಣಾಸುರನಿಗೆ ಯುದ್ಧದ ಅಪೇಕ್ಷೆಯುಂಟಾಗುತ್ತದೆ. ಶಿವನೊಡನೆ ಕೇಳಿಕೊಳ್ಳುತ್ತಾನೆ. ಆಗ ಶಿವನು "ನನ್ನಷ್ಟೇ ಬಲಿಷ್ಠನಾದವನೊಬ್ಬನು ನಿನ್ನೊಡನೆ ಯುದ್ಧಕ್ಕೆ ಬಂದು ನಿನ್ನ ಸೊಕ್ಕನ್ನಡಗಿಸುತ್ತಾನೆ" ಎನ್ನುತ್ತಾನೆ. ಪೂರ್ವಸೂಚನೆಯಾಗಿ ಬಾಣನ ಧ್ವಜ ಮುರಿಯುವುದೆಂದು ಹೇಳುತ್ತಾನೆ.

ನಿಶ್ಚಿತ ದಿವಸ ಅನಿರುದ್ಧ (ಪ್ರದ್ಯುಮ್ನನ ಮಗ, ಕೃಷ್ಣನ ಮೊಮ್ಮಗ) ನನ್ನು ಗೌರೀದೇವಿಯೇ ತನ್ನಮಾಯಾಬಲದಿಂದ ಉಷೆಯಲ್ಲಿಗೆ ಕಳುಹಿಸುತ್ತಾಳೆ.

---

* ವೈಷ್ಣವ ಪುರಾಣಗಳಲ್ಲಿ ವೈಶಾಖ ಮಾಸವಿದ್ದರೆ ಇಲ್ಲಿ ಕಾರ್ತಿಕಮಾಸವಾಗಿದೆ.

ಉಷೆಯನ್ನಾತ ಬಲಾತ್ಕಾರವಾಗಿ ಭೋಗಿಸಿದ ಬಳಿಕ ಪಾರ್ವತಿಯ ಮಾಯಾಸಖಿಯರು ಆತನನ್ನು ಸ್ವಸ್ಥಾನದಲ್ಲಿರಿಸುತ್ತಾರೆ, ಉಷೆಗೆ ದುಃಖವಾಗುತ್ತದೆ. ಪತಿ ವಿರಹದಿಂದ ಆಕೆ ಬೇಯುತ್ತಾಳೆ. ಚಿತ್ರಲೇಖೆಯು ಇದನ್ನರಿತು (ಎಲ್ಲಿಗೂ ಹೋಗದೆ) ಉಷೆಯ ಮುಂದೆ ಹಲವು ಚಿತ್ರಗಳನ್ನು ಬರೆಯುತ್ತಾಳೆ. ಯದುವಂಶದ ಬಲರಾಮ, ಕೃಷ್ಣ, ಪ್ರದ್ಯುಮ್ನ, ಅನಿರುದ್ಧರನ್ನು ಬರೆಯುತ್ತಾಳೆ. ಅನಿರುದ್ಧನನ್ನು ಉಷೆ ಗುರುತಿಸುತ್ತಾಳೆ. ಆತನಾರೆಂದು ವಿಚಾರಿಸುತ್ತಾಳೆ. ಸಖಿಯು ಆತನ ವಿವರ ನೀಡುತ್ತಾಳೆ. ಯೋಗಶಕ್ತಿಯುಳ್ಳ ಆಕೆ ಅನಿರುದ್ಧನಲ್ಲಿಗೆ ಬರುತ್ತಾಳೆ. 'ಮಾಧವೀ' ಎಂಬ ಮದ್ಯಪಾನದಿಂದ ಮತ್ತನಾಗಿ ನಾರೀಜನರೊಡನೆ ಕುಳಿತಿದ್ದ–ಕಂಗೊಳಿಸುತ್ತಿದ್ದ ಅನಿರುದ್ಧನನ್ನು ಮಾಯೆಯ ಬಲದಿಂದ ಇದ್ದ ಮಂಚಸಹಿತ ಕಪ್ಪುಬಟ್ಟೆಯಿಂದ ಸುತ್ತಿ ಶೋಣಿತಪುರಕ್ಕೆ ತರುತ್ತಾಳೆ. ಉಷೆಯೊಡನೆ ಸೇರಿಸುತ್ತಾಳೆ.

ಕಾವಲುಗಾರನಿಗೆ ಸಂಶಯ ಮೂಡುತ್ತದೆ. ಅನಿರುದ್ಧನೂ ಅವರಿಗೆ ಗೋಚರಿಸುತ್ತಾನೆ, ಬಾಣಾಸುರನಿಗೆ ತಿಳಿಸಿದಾಗ ಆತ ಬಂದು ಅನಿರುದ್ಧನನ್ನು ಕಾಣುತ್ತಾನೆ. ಯುದ್ಧವಾಗುತ್ತದೆ. ಸಹಸ್ರಸಂಖ್ಯೆಯ ಬಾಣನ ಸೈನಿಕರನ್ನು ಅನಿರುದ್ಧನು ಬಾಗಿಲಿನ ಅಗುಳಿಯಿಂದ ಹೊಡೆದು ನಾಶಮಾಡುತ್ತಾನೆ. ಬಾಣಾಸುರನೇ ಯುದ್ಧಕ್ಕೆ ಬರುತ್ತಾನೆ. ಆದರೆ, ಶಿವನ ಒಂದು ತೇಜಸ್ಸು ಅನಿರುದ್ಧನನ್ನು ರಕ್ಷಿಸುತ್ತಿರುತ್ತದೆ. ಕೊನೆಗೂ ಅನಿರುದ್ಧನನ್ನು ಮೋಸದಿಂದ ಸರ್ಪಾಸ್ತ್ರಗಳಿಂದ ಬಂಧಿಸುತ್ತಾನೆ. ಕೊಲ್ಲಲು ಆಜ್ಞಾಪಿಸುತ್ತಾನೆ ಬಾಣಾಸುರ. ಆದರೆ ಮಂತ್ರಿ ಕುಂಭಾಂಡನು ಅದನ್ನು ತಡೆಯುತ್ತಾನೆ. "ನಿನ್ನಲ್ಲಿ ಕೋಪಗೊಂಡ ಈಶ್ವರನ ತೇಜಸ್ಸಿನಿಂದಲೇ ಅನಿರುದ್ಧ ಅಭಿವೃದ್ಧಿಗೊಂಡಿದ್ದಾನೆ." ಎಂದೂ ಹೇಳುತ್ತಾನೆ. ಅನಿರುದ್ಧ ಜಗ್ಗುವುದಿಲ್ಲ. ಶರಣು ಬರುವಂತೆ ಹೇಳಿದ ಕುಂಭಾಂಡನ ಮಾತನ್ನು ಕೇಳುವುದಿಲ್ಲ. ಕೋಪಗೊಂಡ ಬಾಣಾಸುರನಿಗೆ ಆಕಾಶವಾಣಿ ಸಮಾಧಾನ ಹೇಳುತ್ತದೆ. ಆತ ಅನಿರುದ್ಧನನ್ನು ಕೊಲ್ಲದೆ ಹೋಗುತ್ತಾನೆ ರಾತ್ರಿ ಕಾಳಿಕಾದೇವಿಯು ಅನಿರುದ್ಧನ ಪ್ರಾರ್ಥನೆಯಂತೆ ಬಂದು ಆತನನ್ನು ಸರ್ಪಾಸ್ತ್ರಗಳಿಂದ ವಿಮುಕ್ತಿಗೊಳಿಸಿ ಉಷೆಯ ಅಂತಃಪುರಕ್ಕೆ ತಲುಪಿಸುತ್ತಾಳೆ. ಉಷಾನಿರುದ್ಧರು ಸುಖವನ್ನನುಭವಿಸುತ್ತಾರೆ.

ಕೃಷ್ಣನಿಗೆ ನಾರದನಿಂದ ತಿಳಿದು ಬಲರಾಮ ಸಹಿತ ಯುದ್ಧಕ್ಕೆ ಬರುತ್ತಾನೆ ಅಲ್ಲಿ ಶಿವನದೇ ಮೇಲುಗೈ. ಕೃಷ್ಣ ಶೀತಜ್ವರವನ್ನು ಬಿಡುತ್ತಾನೆ. ಈಶ್ವರನು ಪ್ರತಿಯಾಗಿ ಜ್ವರವನ್ನೇ ಕಳುಹಿಸುತ್ತಾನೆ. ಈಶ್ವರಜ್ವರ ಗೆಲ್ಲುತ್ತದೆ, ಸೋತ

ವಿಷ್ಣುಜ್ವರವು ಈಶ್ವರನನ್ನು ಸ್ತುತಿಸುತ್ತದೆ. ಈಶ್ವರನದನ್ನು ಸಮಾಧಾನಪಡಿಸುತ್ತಾನೆ. ಕೊನೆಗೆ ಆ ಜ್ವರವು ರುದ್ರನಲ್ಲೇ ನಿಲ್ಲುತ್ತದೆ.

ಪ್ರದ್ಯುಮ್ನನು ಸ್ಕಂದನಿಂದ ಸೋಲಿಸಲ್ಪಟ್ಟು ಓಡಿಹೋಗುತ್ತಾನೆ. ಬಲರಾಮನೂ ಸೋಲುತ್ತಾನೆ. ಗರುಡನು ಬಸವನಿಂದ ಪರಾಭವಹೊಂದಿ ಕೃಷ್ಣನನ್ನು ಬಿಟ್ಟು ಓಡಿಹೋಗುತ್ತಾನೆ. ಕೃಷ್ಣನು ಶಂಕರನಲ್ಲಿಗೆ ಬಂದು ಆತನನ್ನು ಸ್ತುತಿಸುತ್ತಾನೆ. ಆಗ ಈಶ್ವರನು ತನ್ನ ಅಸಹಾಯಕತೆಯನ್ನೇ ವಿವರಿಸುತ್ತಾನೆ. ಉಪಾಯವನ್ನು ಹೇಳುತ್ತಾನೆ.

ಕಿಂ ಕರೋಮಿ ರಮಾನಾಥ ಭಕ್ತಾಧೀನಸ್ಸದಾಹರೇ
ಪಶ್ಯತೋಮೇ ಕಥಂ ವೀರ ಸ್ಯಾದ್ಬಾಣಭುಜಕೃಂತನಂ ॥
ಅತಸ್ತ್ವಂ ಜೃಂಭಕಾಸ್ತ್ರೇಣ ಮಾಂ ಜೃಂಭಯ ಮದಾಜ್ಞಯಾ
ತತಸ್ತ್ವಂ ಕುರು ಕಾರ್ಯಂ ಸ್ವಂ ಯಥೇಷ್ಟಂ ಚ ಸುಖೀಭವ ॥

(ನಾನೇನು ಮಾಡಲಿ ರಮಾನಾಥ, ಭಕ್ತಾಧೀನ ನಾನು. ನನ್ನ ಕಣ್ಣಮುಂದೆಯೇ ಬಾಣನ ಬಾಹುಗಳನ್ನು ತರಿಯುವುದು ಹೇಗಾದೀತು? ನೀನು ನನ್ನನ್ನು ಜೃಂಭಕಾಸ್ತ್ರದಿಂದ ನನ್ನಾಜ್ಞೆಯಂತೆಯೇ ಮೂರ್ಛೆಗೊಳಿಸು. ಬಳಿಕ ನಿನಗಿಷ್ಟಬಂದಂತೆ ಕಾರ್ಯಪೂರೈಸು.)

ಈಶ್ವರನ ಆಣತಿಯಂತೆ ಜೃಂಭಕಾಸ್ತ್ರದಿಂದ ಶಿವನನ್ನು ಮೂರ್ಛೆಗೊಳಿಸಿದ ಕೃಷ್ಣನು ಬಾಣಾಸುರನೊಡನೆ ಘೋರಯುದ್ಧ ಮಾಡುತ್ತಾನೆ :

ಅವಶಿಷ್ಟಾ ಭುಜವಾಶು  ಚತ್ತಾರೋತೀವ ಸುಂದರಃ
ಗತವ್ಯಥೋ ಭಭ್ರುವಾಶು ಶಂಕರಸ್ಯ ಪ್ರಸಾದತಃ ॥
ಗತಸ್ಮೃತಿರ್ಯಥಾ ಬಾಣ ಶಿರಚ್ಛೇತ್ತುಂ ಸಮುದ್ಯತಃ
ಕೃಷ್ಣೋವಿರತ್ವಮಾಪನ್ನಸ್ತದಾರುದ್ರ ಸಮುತ್ಥತಃ ॥

ನಾಲ್ಕು ಸುಂದರವಾದ ಬಾಹುಗಳನ್ನುಳಿದು ಮಿಕ್ಕೆಲ್ಲವನ್ನೂ ಕತ್ತರಿಸಿ ತಲೆಯನ್ನು ಕತ್ತರಿಸಬೇಕೆಂದು ಕೃಷ್ಣ ದೃಢನಿಶ್ಚಯನಾಗುತ್ತಿರುವಾಗಲೇ ರುದ್ರನು ಮೂರ್ಛೆ ತಿಳಿದೇಳುತ್ತಾನೆ.

ದತ್ತಂ ಮಯಾಪುರಾ ತುಭ್ಯಮನಿವಾರ್ಯಂ ರಣೇ ತವ
ಚಕ್ರಂ ಜಯಂಚ ಗೋವಿಂದಮಮೋಘಂ ಮಜ್ಜನೇ ಸದಾ

ಅನಿವಾರ್ಯವಾಗಿ ಹಿಂದೆ ಯುದ್ಧದಲ್ಲಿ ನಿನಗೆ ಕೊಡಲ್ಪಟ್ಟ ಚಕ್ರವೂ–ಜಯವೂ ನನ್ನವರಲ್ಲಿ ಪರಿಣಾಮ ಬೀರದು ಎನ್ನುತ್ತ ತಡೆಯುತ್ತಾನೆ. ಬಾಣಾಸುರನನ್ನು ಕರೆದು

ಮಹಾಜ್ಞಯಾ ಹರಿಃ ಪ್ರಾಪ್ತೋ ಭುಜಚ್ಛೆ ತ್ತಾ ತಾವಾಥವೈ
ನಿವರ್ತಸ್ವ ರಣಾದ್ಗಚ್ಛ ಸ್ವಗೃಹಂ ಸವಧೂವರಃ ॥

'ನನ್ನಿಂದಾಗಿಯೇ ಈ ನಾಲ್ಕು ಭುಜಗಳನ್ನಳಿದು ಉಳಿದೆಲ್ಲವನ್ನೂ ಕತ್ತರಿಸಿದ್ದಾನೆ ಕೃಷ್ಣ. ಈಗ ಯುದ್ಧ ನಿಲ್ಲಿಸು, ಮನೆಗೆ ಮರಳು ವಧೂವರರ ಸಹಿತ' ಎನ್ನುತ್ತಾನೆ. ಬಾಣಾಸುರನೂ ಹರನ ಮಾತಿನಂತೆ ಉಷೆಯನ್ನು ಅನಿರುದ್ಧನಿಗೆ ಸಕಲ ಸಂಪತ್ತಿನೊಡನೆ ವಿವಾಹ ಮಾಡಿಕೊಟ್ಟು ಕಳುಹಿಸುತ್ತಾನೆ. ಅನಿರುದ್ಧನು ಉಷೆಯ

ತತ್ಸಖೀಂ ಚಿತ್ರಲೇಖಾಂಚ ಗೃಹೀತ್ವ ಪರಮ ಯೋಗಿನೀಂ
ಪ್ರಸನ್ನೋ ಭೂತ್ತತಃ ಕೃಷ್ಣಃ । ಕೃತಕಾರ್ಯ ಶಿವಾಜ್ಞಯಾ ॥

ಸಖಿಯಾದ ಪರಮ ಯೋಗಿನಿಯಾದ ಚಿತ್ರಲೇಖೆಯನ್ನೂ ವರಿಸುತ್ತಾನೆ. ಕೃಷ್ಣನೂ ಕೃತಕಾರ್ಯನಾಗಿ ಹಿಂದಿರುಗುತ್ತಾನೆ.

ವೈಷ್ಣವಪುರಾಣಗಳಲ್ಲಿ ಕೃಷ್ಣನ ಸರ್ವಶ್ರೇಷ್ಠತೆ ವಿಜಯ ಸಾರುತ್ತಿದ್ದರೆ, ಶೈವ–ಪುರಾಣಗಳಲ್ಲಿ ಶಿವನ ಸರ್ವೋತ್ಕೃಷ್ಟತೆ ವ್ಯಕ್ತವಾಗುತ್ತದೆ.

**ಮೋಹನತರಂಗಿಣಿ**

ಕನಕದಾಸರ ಮೋಹನತರಂಗಿಣಿಗೆ ಈ ಪುರಾಣಗಳು–ಕಾವ್ಯಗಳು ಆಕರವಾಗಿರಬಹುದು. ಆದರೆ ಯಾವುದನ್ನೂ ಅವರು ಯಥಾವತ್ತಾಗಿ ಅನುಸರಿಸಲಿಲ್ಲ. ಭಾಗವತದಲ್ಲಾಗಲೀ, ವಿಷ್ಣುಪುರಾಣದಲ್ಲಾಗಲೀ ಪ್ರದ್ಯುಮ್ನ ಅನಿರುದ್ಧರ ಕಥೆ ಮೂರು ನಾಲ್ಕು ಅಧ್ಯಾಯಗಳಿಗಿಂತ ಹೆಚ್ಚು ಬೆಳೆದಿಲ್ಲ. ಸುಮಾರು ೧೦೦–೨೦೦ ಶ್ಲೋಕಗಳಲ್ಲಿ ಮುಗಿದು ಹೋಗುತ್ತದೆ. ಶಿವಪುರಾಣದಲ್ಲಿ. ಅನಿರುದ್ಧನ ಕಥೆ ಐದು ಅಧ್ಯಾಯಗಳಲ್ಲಿ ವಿಸ್ತೃತವಾಗಿ ಸಾಗಿದೆ. ಕನಕದಾಸರು ಕೃಷ್ಣರಾಯನ ಚರಿತೆಯಲ್ಲಿ ಪ್ರದ್ಯುಮ್ನ ಅನಿರುದ್ಧರ ಕತೆಯನ್ನು ಅಳವಡಿಸಿ ಒಂದು ಕೌಟುಂಬಿಕ ಕಥೆಯನ್ನಾಗಿ ಸಾಗಿಸಿದ್ದಾರೆ.

ಮೋಹನತರಂಗಿಣಿಯ ಕಥೆ ಯಾವುದೇ ಪುರಾಣಗಳಂತೆ ಯಾವುದೇ ಋಷಿ ಮತ್ತೊಬ್ಬ ಋಷಿಗೋ–ಶಿಷ್ಯನಿಗೋ ಹೇಳುವ ಕಥೆಯಾಗಿಲ್ಲ.

ಬರಹವ ತಿಳಿಯಬೇಡೆನುತೆನ್ನ ಭಾಳದಿ
ಬರೆದ ನಾಲ್ಮೊಗವದರಿಂದ
ಬರದಹವನಳೆಯೆನಾ ಪದವಿಟ್ಟು ಕಡಿತದೊಳ್
ಬರೆದು ಮಾಡಿದ ಕೃತಿಯಲ್ಲ ॥

ಎಂದು ಸಾರಿಕೊಂಡು

ಹೇಳು ಹಿರಣ್ಯಾಂಬರನ ತಾತ್ಪರಿಯವೆ
ತ್ತಾಳುಗಳಡಿದಾವರೆಗೆ
ಬೀಳುವ ಪುರುಷಪಟ್ಟದ ನಿನ್ನ ವಚನವ
ಕೇಳುವೆ ಪರಮ ಸಂತಸದಿ ॥

ಎಂದು ಆಲಿಸುವ ಆಸಕ್ತಿಯನ್ನು ತೋರಿದ ಹೆಣ್ಣಿಗೆ (ಹೆಂಡತಿಗೆ) ಹೇಳಿದ ಕಥೆಯಿದು.

ಕೃತಿವೇಳ್ದ ಕನಕದಾಸೋತ್ತಮ ಕೇಳ್ದವ
ಳತಿ ಸುಜ್ಞಾನ ವಧೂಟಿ
ಕೃತಿಗೆ ಕರ್ತನು ಕಾಗಿನೆಲೆಯಾದಿ ಕೇಶವ
ಕೃತಿಯ ಕೇಳ್ದರೆ ಪುಣ್ಯವಹುದು ॥

ಹೀಗೆ ಪ್ರಾರಂಭವಾಗುತ್ತದೆ, ಕತೆ.

ಸಮಸ್ತ ಸನ್ಮಂಗಳಗಳಿಗೆ ಆಶ್ರಯವಾದ ಸುಖಸಮೃದ್ಧವಾದ ಸೌರಾಷ್ಟ್ರ ಅದರಲ್ಲಿರುವ ದ್ವಾರಕೆ. ದ್ವಾರಕೆಯ ವೈಭವವಾದರೂ ಸಾಮಾನ್ಯವೇ?

ಮಗಳ ಗಂಡನ ಕೂಡೆ ಮಹದಾದಿ ದೈತ್ಯರು
ಜಗಳಕ್ಕೆ ಜಪ್ಪರೆನುತ
ನೆಗಪಾನೆ ಮೀನ್ಗಳ ನೊಳಕೊಂಡು ಬಂದು ಪೇ
ರಗಟಾದುದಬ್ಧಿ ದ್ವಾರಕೆಗೆ ॥

ಸಮುದ್ರವು ಭದ್ರಕೋಟೆಯಂತೆ ಸುತ್ತುವರಿದಿದೆ.

ದೇಶಾಧಿಪ ಕೃಷ್ಣರಾಯರಿಗೆ ಖಳರಿಂದ
ಮೋಸವ ಬರಗುಡನೆಂದು
ಶೇಷ ಮಂಡಳಿಸಿದಂದದಿ ವಜ್ರದಾಳ್ವೇರಿ
ಲೇಸಾದುದೇನವಣ್ಣಿಸುವೆನು ॥

ಕೃಷ್ಣರಾಯನಿಗೆ ಮೋಸವಾಗಬಾರದು. ಅದಕ್ಕಾಗಿ ಸುತ್ತಲೂ ವಜ್ರದಗೋಡೆ (ಕಂದಕದಲ್ಲಿ) ! ಇದ್ದಕ್ಕಿಂತ ರಕ್ಷಾಕವಚವೇಕೆ ಬೇಕು ?

ದ್ವಾರಕಾಪಟ್ಟಣದಲ್ಲಿ ಬೀದಿಗಳಿವೆ. ಅವುಗಳಲ್ಲಿ ಮುಖ್ಯವಾದವು :

ಸೋಮಸೂರಿಯ ವೀಧಿ ವೀಧಿಯಿಕ್ಕೆಲದಲ್ಲಿ
ಹೇಮ ನಿರ್ಮಿತ ಸಾಲ ಸೌಧಾ
ರಾಮಣೀಯತೆವೆತ್ತ ಕಳಸದಂಗಡಿಯಿರ್ದು
ವಾ ಮಹಾದ್ವಾರಕಾಪುರದೆ ॥

ಚಂದ್ರಸೂರ್ಯರ ಹೆಸರಿನ ಈ ಬೀದಿಗಳಲ್ಲಿ ಹೇಮನಿರ್ಮಿತ

ಸಾಲುಸೌಧಗಳು ! ಅಲ್ಲಿಂದ ಕಟ್ಟಡಗಳು ಅಸ್ತವ್ಯಸ್ತವಾದುದಲ್ಲ. ಅವ್ಯವಸ್ಥೆಯುಳ್ಳದ್ದಲ್ಲ. 'ಆಗಮಜ್ಞರು ಹಂಚಿ ಕೊಟ್ಟಂತೆ' ನಿರ್ಮಿತವಾದುವು.

ಚಪ್ಪನ್ನ ದೇಶದ ನಾಣೆಯಂಗಳ ನೋಟ
ತಪ್ಪದ ಚಪಲ ಸೆಟ್ಟಿಗಳು
ಬಿಪ್ಪವಡೆದು ಕುಳಿತಿರ್ದರು ಹಣಹೊನ್ನ
ಕುಪ್ಪೆಯ *ಮುಂದಿಟ್ಟುಕೊಂಡು ॥

ಒಪ್ಪವಾಗಿ ಕುಳಿತ ಸೆಟ್ಟಿಗಳು ; ತಮ್ಮ ಒರೆಗಲ್ಲಿಗೆ ಅಂಟಿದ ಚಿನ್ನದ ಧೂಳಿಯನ್ನು ಮೇಣದಲ್ಲಿ ಒತ್ತಿ ತೆಗೆದು ಕರಗಿಸಿ ಯಾಚಕರಿಗೆ ಕೊಡುವ ಚಿನ್ನವರದರು–

ಓರಂತೆ ಮರಕಾಲರು ಹಡಗಿನ ವ್ಯವ
ಹಾರದಿ ಗಳಿಸಿದ ಹಣವ
ಭಾರಸಂಖ್ಯೆಯಲಿ ತೂಗುವರು ಬೇಡಿದರೆ ಕು
ಬೇರಂಗೆ ಕಡವ ಕೊಡುವರು ॥

ಶ್ರೀಮಂತ ಮರಕಾಲರು (ಮರಕಲರು) ಕುಬೇರನಿಗೂ 'ಕಡ' ಕೊಡಬಲ್ಲವರು–ಹೀಗೆ ವ್ಯಾಪಾರಿಗಳಿದ್ದರೆ–

ರಾಮಾನುಜರ ವ್ಯಾಖ್ಯಾನ ಸುತತ್ವದ
ಬ್ರಾಹ್ಮಣೋತ್ತಮರ ಮಂದಿರದಿ
ಸಾಮಾಮ್ನಾಯ ಘೋಷಣೆ ವಿಷ್ಣು ಪ್ರೀತ್ಯರ್ಥ
ಹೋಮವ ಮಾಳ್ಪರುತ್ಸವದಿ ॥

ರಾಮಾನುಜಪಂಥದ ಬ್ರಾಹ್ಮಣರು ; ಶಿಷ್ಯರನ್ನು ಓದಿಸುವ ಕಸೆಯ ಕೋಲಣ್ಣಗಳು' ; 'ಪುಸ್ತಕ ಲಿಖಿತಜ್ಞರು' ಅಲ್ಲಿಯ ಜನರು. ಬೈರ್ವಾಸವುಟ್ಟು ಸ್ನಾನಮಾಡುವವರು ; ವಿಷ್ಣು ಪೂಜೆ ಮಾಡುವವರು, ಒಳಪುಗುವುದಕೆ ಗುದ್ದಾಡಿಕೊಂಡು ಬಾಗಿಲು ಹಿಡಿಸದೇ ನುಗ್ಗಿ ಹೊಕ್ಕು ಗದ್ದುಗೆ ಹಿಡಿಯುವ ಭೋಜನ ಶೂರರು ಅಲ್ಲಿಯಜನ. ಭಕ್ಷಭೋಜ್ಯಗಳಲ್ಲಿ ಫೇಣಿ, ಸುಖೀನುಂಡೆ, ವಡೆ, ಗಾರಿಗೆ ! ಊಟಕ್ಕೆ ಸಣ್ಣಕ್ಕಿಯೋಗರ, ತೊವ್ವೆ ಪಳಿದ್ಯಗಳು, ಹುಳಿ,

---

* ವಿಜಯನಗರದ ವೈಭವದ ವರ್ಣನೆಯಿಲ್ಲಿದೆ. ಸಂತೆಗಳಲ್ಲಿ ಈಗಲೂ ತರಕಾರಿ ಮೊದಲಾದುವುಗಳನ್ನು ಕುಪ್ಪೆಯಿಡುವುದನ್ನು ನೋಡಬಹುದು. ಆದರೆ ಆಗಿನದು ತರಕಾರಿ ಕುಪ್ಪೆಯಲ್ಲ, ಹೊನ್ನನಾಣ್ಯದ ಕುಪ್ಪೆ.

ದಾಳಿದ ಸಾರು, ಸೀಕರಣೆ ! ಇಂಗಿನ ಒಗ್ಗರಣೆ ಕಂಪು ! ಇಂತಹ ರುಚಿಭೋಜನ ; ಇವೆಲ್ಲಾ ದ್ವಾರಕೆಯ ವೈಭವ.

ಈ ದ್ವಾರಕೆಯ ವೈಭವ ವರ್ಣನೆಗೆ ಕನಕದಾಸರಿಗೆ ಆಕರವಾದದ್ದು ಪುರಾಣವಲ್ಲ. ವಿಜಯನಗರ ಸಾಮ್ರಾಜ್ಯದ ಜೀವಂತ ವೈಭವ ; ಹಾಗೆಯೇ ಜನಸಾಮಾನ್ಯರ ಜೀವನ ಕ್ರಮ. ಉಡುಪಿಯ ವಾದಿರಾಜರ ಶಿಷ್ಯರಾಗಿಯೂ ಇದ್ದ ಕನಕದಾಸರು ಕಡಲತೀರದ ಪುಣ್ಯ ಕ್ಷೇತ್ರದ ಶ್ರೀಸಾಮಾನ್ಯನ ಬಾಳನ್ನೂ ಕಂಡಿದ್ದಾರೆ. ಬೈರ್ವಾಸ, ಪಳಿದ್ಯ, ದಾಲಿದ, ಸುಖೀನುಂಡೆ, ಆ ಜೀವನದ ಪರಿಕರಗಳು. 'ಮರಕಲ' ಪಶ್ಚಿಮ ಕರಾವಳಿಯ ಒಂದು ಜನಾಂಗ ; ಮೀನು ಹಿಡಿಯುವ, ದೋಣಿ ನಡೆಸುವ ಉದ್ಯೋಗದವರು, ಸಾಹಸಿಗಳು. ಹಂಪೆಯಿಂದ ಕರಾವಳಿಯವರೆಗೆ ಜನಜೀವನದ ಜತೆ ಒಡನಾಡಿದ ಕನಕದಾಸರಿಗೆ ಆಗಿನ ಕಾಲದ ಅನುಭವವೇ, ಸೂಕ್ಷ್ಮದೃಷ್ಟಿಯೇ ಮುಖ್ಯ ಆಕರ. ಕಾವ್ಯದುದ್ದಕ್ಕೂ ಈ ಬಗೆಯ ನೆಲದ ಕಂಪು ಬೆರೆತುಕೊಂಡಿದೆಯೆಂಬುದಕ್ಕೆ ನೂರಾರು ಉದಾಹರಣೆಗಳನ್ನು ಈ ಕಾವ್ಯದಲ್ಲಿ ಕಾಣಬಹುದು.

ಕಥೆಯಲ್ಲೂ ಕನಕದಾಸರು ಯಾವ ಒಂದೇ ಪುರಾಣವನ್ನು ಆಕರವಾಗಿಸಿಕೊಳ್ಳಲಿಲ್ಲ ತಮ್ಮದೇ ಆದ ಕಲ್ಪನೆಯ ನೆಲೆಯಲ್ಲೇ ನಿಂತು ಸತ್ಯವನ್ನು ಕಂಡರು ಎಂಬುದನ್ನು ಗಮನಿಸಬಹುದು.

ದ್ವಾರಕೆಯಲ್ಲಿ ವೈಭವದಿಂದಿದ್ದ ಕೃಷ್ಣನರಸಿ ರುಕ್ಮಿಣಿಗೆ ಮಕ್ಕಳ ಬಯಕೆಯಾಗುತ್ತದೆ.

'ನಾಪುತ್ರಸ್ಯಲೋಕೋಸ್ತಿ'ಯೆಂದೆಂಬ ಶಾ
ಸ್ತ್ರೋಪದೇಶವ ಕೇಳ್ದೆ ಜೀಯ
ನೀ ಪಾಲಿಸಬೇಕು ನನಗೋರ್ವ ಕಂದರ್ಪ
ರೂಪಾಂತ ವರಕುಮಾರಕನ ॥

ಎಂದು ಕೃಷ್ಣನನ್ನು ಪ್ರಾರ್ಥಿಸುತ್ತಾಳೆ. "ಮಕ್ಕಳ ಪಡೆದ ಮಾತ್ರದಲ್ಲಿ ಕಕ್ಕಸಮೊಲೆ ಜಜಿದಪುದು." ಎಂಬುದಾಗಿ ಕಟಕಿಯ ಮಾತನ್ನಾಡಿದರೂ (ಈ ಭಾವನೆ ಪ್ರಾಯಶಃ : ಈಗಿನ ಹಲವು ಹೆಂಗಸರಲ್ಲಿದ್ದಂತೆ ಆಗಲೂ ಕೆಲವರಲ್ಲಿ–ರೂಪವತಿಯರೆಂದು ಕೊಬ್ಬುವವರಲ್ಲಿ ಇತ್ತೆಂದು ತೋರುತ್ತದೆ.)

ದರ್ಪಕಹರನಿಂದ ತನುದಗ್ಧನಾದ ಕಂ
ದರ್ಪ ನಿನ್ನಯ ಬಸಿರೊಳಗೆ
ಬರ್ಪನು ನಾ ಕೊಟ್ಟ ವರದೊಳು ತುಸುಮಾತ್ರ
ತಪ್ಪದು ಕೇಳಾಯತಾಕ್ಷಿ

ಎಂದೂ ಹೇಳುತ್ತಾನೆ. ರುಕ್ಮಿಣಿ ಗರ್ಭತಾಳುತ್ತಾಳೆ. ಕ್ರಮವಾಗಿ ವರ್ಷಋತು, ಶರದೃತು, ಹೇಮಂತ, ಶಿಶಿರ ಋತುಗಳು ಕಳೆದು ವಸಂತ ಋತು ಬರುತ್ತದೆ. ರುಕ್ಮಿಣಿ ನವಮಾಸ ತುಂಬಿ ಮಗುವಿಗೆ ಜನ್ಮವೀಯುತ್ತಾಳೆ. ಜಗದೊಳು ಶ್ರೀಕೃಷ್ಣದೇವರಾಯಂಗೆ ಗಂಡುಮಗನಾದ ಪರಮಸಂಭ್ರಮ–ಕೃಷ್ಣನ ಹಸ್ತಸುರಪಾದಪ ಗುರುವೆನಿಸುತ್ತದೆ. ಆದರೆ ಹತ್ತನೇ ದಿನದಂದು ಕನಸಿನಿಂದೆಚ್ಚೆತ್ತ ರುಕ್ಮಿಣಿ ಪಕ್ಕದಲ್ಲಿ ಮಗುವಿಲ್ಲದುದನ್ನು ನೋಡಿದಳು. ದುಃಖಿಸಿದಳು, ಮಾಧವ ಬಂದು ಸಮಾಧಾನ ಪಡಿಸಿದ.

"ಹುಟ್ಟಿದಾಕ್ಷಣ ಶಿಶುನೋಡಲ್ಕೆ ಮಟಮಾಯವಾದುದಾಶ್ಚರ್ಯ"ವೆಂಬ ಸುಜ್ಞಾನವಧೂಟಿಗೆ ಹರನಿಂದೆ ಹತನಾದ ಕಂತು ರುಕ್ಮಿಣಿಯ ಸುತನಾಗಿ ಹುಟ್ಟಿ ಮುಂದಿನ ಕೆಲಸಕ್ಕೆ ಬಯಲಾದ ಕತೆಯನ್ನು ಬಿತ್ತರಿಸುತ್ತಾರೆ ಕನಕದಾಸರು.

ತಾರಕಾಸುರನ ಉಪಟಳ ತಾಳಲಾರದೆ ಸುರರು ಬಿದಿಯಲ್ಲಿ ಬಿನ್ನೈಸಿದಾಗ, ಪದುಮೋದ್ಭವನು ಇಂಗಡಲಲ್ಲಿ ಹಾವಿನಮೇಲೆ ಮಲಗಿದ ವಿಷ್ಣುವಿನಲ್ಲಿಗೆ ಬರುತ್ತಾನೆ, ಸ್ತುತಿಸುತ್ತಾನೆ. (ವಿಷ್ಣುಸ್ತುತಿ ಬಂದಾಗ ಕನಕದಾಸರು ತನ್ಮಯರಾಗುತ್ತಾರೆ.) ಯೋಗನಿದ್ರೆಯಿಂದ ಕಣ್ತೆರೆದ ಅಸುರಾರಿ "ಬ್ರಹ್ಮ ನಿನ್ನಿಂದಲೇ ತಾರಕಾಸುರನಿಗೆ ವರದೊರೆಯಿತು. ಧೂರ್ಜಟಿಯ ಮಗನಿಂದಲೇ ಆತನ ಸಂಹಾರ" ಎನ್ನುತಾನೆ. "ಈಗಲಾತನಿಗೆ ತಪಸ್ಸು" ಎಂದಾಗ "ಪೂಗೋಲನ ಬಾಣಗಳಿಂದ ಆತನ ತಪಸ್ಸಳಿಯುತ್ತದೆ" ಎಂದು ಹೇಳುತ್ತಾನೆ.

ಬ್ರಹ್ಮನು ಬೃಹಸ್ಪತಿಯನ್ನು ಕಾಮನಲ್ಲಿಗೆ ಕಳುಹಿಸುತ್ತಾನೆ. ಗುರುವು ಕಾಮನನ್ನು ಕಂಡು ಪರಿಪರಿಯಾಗಿ ಸುರರ ವಿಚಾರವನ್ನು ವಿವರಿಸುತ್ತಾನೆ.

ಬಡಮಾತನಾಡಿದೆ ತವ ಪಂಚಬಾಣಕ್ಕೆ
ಮೃಡವಿಧಿ ವಿಷ್ಣುದೇವೇಂದ್ರ
ಒಡಲೊಳು ಪೆಣ್ಮುದ್ರೆವೆತ್ತರು ನಿನಗೆ ಕಂ
ಗೆಡದವರಾರು ಲೋಕದಲಿ ॥

ಎಂದು ಉಬ್ಬಿಸುತ್ತಾನೆ. 'ತನುವೊಂದುಳ್ಳೊಡೆ ಸಕಲ ಸುಖಂಗಳೊಳನುಭೋಗವಕಾಣಬಹುದು'– ಹಾಗಿರುವಾಗ ಈ ದೇಹವನ್ನೇಕೆ ಮೃಡನ ಕಣ್ಣುರಿಗೆ ಬಲಿಗೊಡಲಿ ಎಂದ ಕಾಮನನ್ನು ಸಮಾಧಾನಪಡಿಸಿ ಒಪ್ಪಿಸುತ್ತಾನೆ ಬೃಹಸ್ಪತಿ.

ಕಾಮನು ಮೃಡನಲ್ಲಿಗೆ ಹೋಗಲು ನಿಶ್ಚಯಿಸಿ ತನ್ನ ಕಾಂತೆಗೆ ಹೇಳುತ್ತಾನೆ. ಅವಳು ವಿರೋಧಿಸುತ್ತಾಳೆ. ಹರನಲ್ಲಿ ಕಲಹಬೇಡವೆನ್ನುತ್ತಾಳೆ. ಆದರೆ ಕಾಮನದಕ್ಕೆ

ಒಪ್ಪದೆ ಗುರುವಿಗೆ ತಾನಿತ್ತ ವಚನವನ್ನು ಮರೆಯಲಾರೆ ಎನ್ನುತ್ತ ಹೊರಡುತ್ತಾನೆ. ಆದರೆ ಕೆಟ್ಟ ಶಕುನಗಳಾಗುತ್ತವೆ.

ತೋರಿತು ವಾಯಸವೆಡಗಡೆಯೆಡದಿಂದ*
ಹಾರಿತು ಹಂಗ ದಕ್ಷಿಣಕೆ
ದೂರಿತು ಬಲದಭಾಗದೆ ಪಲ್ಲಿ ಮುಂಗಟ್ಟಿ
ಪಾಱಿತು ವಾಸುಗಿವಕ್ಕಿ ॥
ಎಡದೋಳು ಹಾಱಿತು ವಾಮಲೋಚನ ಬೆಂ
ಬಿಡದಲುಗಿತು ಮುಂದೆ ಓಡೆ
ಗಿಡುವೆದ್ದು ಪರಿದುದು ಮನ್ಮಥ ಬಲಗೂಡಿ
ನಡೆವಾಗಲೇನ ಹೇಱುವೆನು ॥

ಆದರೂ ಕಾಮ ಹಿಂಜರಿಯಲಿಲ್ಲ. ಮುಂದುವರಿಯುತ್ತಾನೆ. ಗಂಗಾನದಿ ಇರಿದಾಯಿತು. ಸ್ನಾನ, ನಿತ್ಯಕರ್ಮಗಳನ್ನು ಮಾಡುವವರನ್ನು ನೋಡುತ್ತ ಕಾಮ ಗಂಗಾನದಿಯನ್ನು ಹೊಗಳಿದ. ಸ್ನಾನಮಾಡುವುದಕ್ಕೆ ತಾನು ಸಿದ್ಧನಿಲ್ಲವೆಂದ. 'ಏಕೆಂದರೆ, ಗಂಗಾನದಿಯಲ್ಲಿ ಸ್ನಾನ ಮಾಡಿದರೆ ತಕ್ಷಣ ರುದ್ರನಾಗುತ್ತೇನೆ' ಆಗ

ನಿಡುಗಣ್ಣಿಂದೆ ನಿಟ್ಟಿಪೆನು ಮದ್ವಲ್ಲಭೆ
ಯಿಡಿಕಿರಿದಿರ್ದ ಬಲ್ಮೊಲೆಯ
ಕಿಡಿಗಣ್ಣದೊಡದೆಂತು ನೋಡುವೆನೆಂದು
ನುಡಿದ ಕಂದರ್ಪ ಜಾಹ್ನವಿಗೆ ॥

ಮುಂದೆ ರಜತಾದ್ರಿ ಇದಿರಾಗುತ್ತದೆ. ಈಶ್ವರನ ತಪೋವನ ಗೋಚರಿಸುತ್ತದೆ. "ಶ್ರೀ ಗೌರೀಶನ ವರತಪೋವನ ತಾನಾಗಬೇಕೆಂದ" ಮನ್ಮಥ. ಮನ್ಮಥನ ಪ್ರಭಾವ ತಪೋವನದ ಋಷಿಜನರಲ್ಲಿಯೂ ಆಗುತ್ತದೆ. ಕಾಮನ ಸೈನ್ಯ ತಪೋವನವನ್ನು ಮುತ್ತುತ್ತದೆ. ಆಗ ಬಾಗಿಲಲ್ಲಿದ್ದ ನಂದೀಶ ಮುರಿಯಲಿಕ್ಕಿದನು. ಹತಾಶನಾದ ಕಾಮನಿಗೆ ಗಿರಿಜೆಯಿದಿರಾಗುತ್ತಾಳೆ.

"ಕಷ್ಟಪಟ್ಟು ಇಲ್ಲಿಗೇಕೆ ಬಂದೆ" ಎಂದು ಕೇಳುತ್ತಾಳೆ ಗಿರಿಜೆ. "ಅಸಮಾಕ್ಷನ ಮೇಲೆ ಕಮ್ಮಲರ್ಗೋಲಿಂದಲೆಸೆ ಬಂದೆ" ಎನ್ನುತ್ತಾನೆ ಕಾಮ. "ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ" ಎನ್ನುತ್ತಾಳೆ ಗಿರಿಜೆ. ಆಗ ನಗುತ್ತ ಕಾಮ

ನೋಡವ್ವ ನನ್ನ ಸಾಹಸವ ನಿನ್ನಯ ಮೊಗ
ನೋಡದೆ ತಪಗೈವ ಶಿವನ

---

* ಈ ಶಕುನಗಳ ನಂಬಿಕೆ ಜನಪದದ ಸ್ವಭಾವ. ಕನಕದಾಸರು ಅದನ್ನು ಅಳವಡಿಸಿದ್ದಾರೆ.

ಗೂಢಹೃತ್ಕಮಲವನೊಡೆಯೆಚ್ಚು ನಿನಗೆ ಕೈ
ಗೊಡದೆ ಬಿಡೆನೆಂದ ॥

ಆಗಲೂ ಪಾರ್ವತಿ ಒಪ್ಪದೆ ಮೃಡನೇತ್ರದಿಂದ ಬೆಂದುಹೋಗ ಬೇಡವೆನ್ನುತ್ತಾಳೆ. ಕಾಮನು ತಾನು ಬಂದ ಉದ್ದೇಶವನ್ನೆಲ್ಲಾ ಹೇಳಿ "ಶಿವನು ನಿನ್ನೊಡನೆವೆರೆದರೆ ನಿನಗೊಬ್ಬ ಮಗನಾಗುತ್ತಾನೆ. ರಾಕ್ಷಸಾಧಮ ತಾರಕನನ್ನು ಸಂಹರಿಸುವನು. ಸುರರಿಗೆ ಸುಖ ನೀಡುವನು". ಎಂದು ವಿವರಿಸುತ್ತಾನೆ. ಆಗ ಪಾರ್ವತಿ ಮನ್ಮಥನನ್ನು ಸಂತೈಸಿ ಸಂತೋಷದಿಂದ ತನ್ನಲ್ಲಿ ಮರೆಮಾಡಿಕೊಂಡು ನಂದೀಶ ಕಾಣದಂತೆ ಒಳಗೆ ಹೊಗಿಸುತ್ತಾಳೆ.

ಕಾಮ ತಪೋನಿರತನಾದ ಹರನಮೇಲೆ ಪೂಗಣೆಗಳನ್ನೆಸೆಯುತ್ತಾನೆ.– "ತಾಗಿದು ಮರ್ಮಸ್ಥಾನಕೆ ಕಡಿದು ವಿಭಾಗಿಸೆ ದೃಢಚಿತ್ತವಾಡಿದು" ಮುಕ್ಕಣ್ಣ ತನ್ನ ಕಣ್ಣು ತೆರೆದ. ಭುಗಿಲೆನ್ನುತ್ತ ಉರಿ ಬಂದು ಕಂದರ್ಪನನ್ನು ಸುಟ್ಟುರುಹುತ್ತದೆ.

ಕಾಮದಹನದ ಕಥೆಯುಳ್ಳ ಶಿವಪುರಾಣದಲ್ಲಿ ಈ ಕಾಮ–ಗಿರಿಜೆಯರ ಸಂಭಾಷಣೆಯಿಲ್ಲ. ಧೃತಿಗೆಟ್ಟ ಕಾಮನಿಗೆ ಗಿರಿಜೆಯ ಆಗಮನ ಅಸಮಾನ ಧೈರ್ಯ ತುಂಬಿತೆಂದು ಮಾತ್ರ ಅಲ್ಲಿಯ ಹೇಳಿಕೆ. ಸ್ಕಂದ ಪುರಾಣದಲ್ಲಿ ಕಾಮದಹನದ ಕಥೆ ಸಂಕ್ಷಿಪ್ತವಾಗಿ ಹೀಗಿದೆ : ದೇವತೆಗಳಿಂದ ಪ್ರೇರಿತನಾದ ಕಾಮನು ಶಿವನಲ್ಲಿಗೆ ಬರುತ್ತಾನೆ. ತಪೋನಿರತನಾದ ಶಿವನನ್ನು ನೋಡುತ್ತಾನೆ. ತಾನೇ ಆತನ ಮನಸ್ಸಿನೊಳಹೋಗುತ್ತಾನೆ. ಶಂಕರನಿಗೆ ಮನೋಚಂಚಲತೆಯುಂಟಾಗುತ್ತದೆ. ಆತ ಗಿರಿಜೆಯನ್ನು ನೆನೆಯುತ್ತಾನೆ. ಆಗಲೇ ಗಿರಿಜೆಯೂ ಎಂದಿನಂತೆ ಆಶ್ರಮವನ್ನು ಪ್ರವೇಶಿಸುತ್ತಾಳೆ. ಈಶ್ವರನಿಗೆ ಆಕೆಯ ಮೇಲೆ ಮೋಹವುಂಟಾದರೂ ಕೂಡಲೇ ತಿಳಿದು ಹಿಂದೆ ನೋಡುತ್ತಾನೆ. ಹಿಂದೆಯೇ ಕಾಮನಿರುವುದು ಕಾಣುತ್ತದೆ. ಅವನನ್ನು ನಾಶಮಾಡಬಾರದೆಂದು ಅಲ್ಲಿಂದೆದ್ದು ಸಂಚಾರಕ್ಕೆ ಹೊರಡುತ್ತಾನೆ. ಮೂರು ಲೋಕ ಸುತ್ತಿದರೂ ಕಾಮ ಹಿಂದಿನಿಂದಲೇ ಇದ್ದಾನೆ. ಕೊನೆಗೆ ಆಶ್ರಮಕ್ಕೆ ಮತ್ತೆ ಬಂದ ಈಶ್ವರನು ಅಲ್ಲಿಯೂ ಕಾಮನನ್ನು ಕಂಡು ಸಿಟ್ಟುಗೊಂಡು ಮೂರನೆಯ ಕಣ್ಣು ತೆರೆಯುತ್ತಾನೆ. ಕಾಮದಹನವಾಗುತ್ತದೆ. ರತಿಯ ದುಃಖವನ್ನು ತಿಳಿದ ಮಹಾದೇವನು ಅವಳಿಗೆ

ಅಮೂರ್ತೋಽಪೀಹ್ಯಯಂ ಭದ್ರೇ ಕಾರ್ಯಂ ಸರ್ವಂ ಪತಿಸ್ತವ
ರತಿಕಾಲೇ ಧ್ರುವಂಬಾಲೆ ಕರಿಷ್ಯತಿ ನ ಸಂಶಯಃ ॥

'ಅಮೂರ್ತನಾಗಿದ್ದೂ ಸಂಭೋಗ ಕಾಲದಲ್ಲಿ ನಿನಗೆ ಎಂದಿನಂತೆಯೇ ಸುಖದಾಯಕನಾಗುತ್ತಾನೆ' ಎಂದು ಹೇಳಿ, ಎಂದು ಮಹಾವಿಷ್ಣುವು ವಸುದೇವನ ಮಗನಾಗಿ ಅವತರಿಸುವನೋ ಆಗ ನಿನ್ನ ಪತಿಯು ಅವನ ಮಗನಾಗಿ

ಪ್ರದ್ಯುಮ್ನನೆಂಬ ಹೆಸರಿನಿಂದ ಸಶರೀರಿಯಾಗುತ್ತಾನೆ' ಎಂದು ಅಭಯ ನೀಡುತ್ತಾನೆ.

ಹರಿಹರನ ಗಿರಿಜಾಕಲ್ಯಾಣ ಮಹಾಪ್ರಬಂಧದಲ್ಲಿ ಕಾಮನು ನಂದಿಯಿಂದ ತನ್ನ ಸೈನ್ಯ ನಾಶವಾದುದನ್ನು ಕಂಡು ಸಂತಾಪದಿಂದ ಚಿಂತಿಸುತ್ತಿದ್ದಾಗ ಪಾರ್ವತಿಯು ಬರುತ್ತಾಳೆ. ಆಗ "ಕಣ್‌ಬಂದಂತೆ ಉಸಿರು ಬಂದಂತೆ ಮುದ ತಾಳಿ ಗಿರಿಜೆಗೆ ಅಷ್ಟಾಂಗ ನಮಸ್ಕಾರ ಮಾಡಿ 'ಸಾಲಂಕಾರ ಸಾರಂಗಿ ವಿಶ್ವೋದರೆ ರಕ್ಷಿಸು' ರಕ್ಷಿಸೆನ್ನುತ್ತಿರುವ ಆ ಕಾಮನನ್ನು ಸಂತೈಸುತ್ತ ಗಿರಿಜೆ "ಎನ್ನಿಷ್ಟಮಿದೆ, ಎನ್ನರಕೆ, ಎನ್ನಿಚ್ಛೆಯೆನ್ನಲಾಭಂ ಲೋಭಂ" ಎಂದು ಹೇಳಿ "ನಾನಿದ್ದೇನೆ, ನಾನೇ ರಕ್ಷಿಸುತ್ತೇನೆ" ಎನ್ನುತ್ತಾಳೆ. ಇದರಿಂದ ಸಂತುಷ್ಟನಾದ ಮದನನು ಆಕೆಯ ಪುಷ್ಪಕವಿಮಾನದ ನೆರಳಿನಲ್ಲಿ ನಡೆದು ಬರುತ್ತಾನೆ. (ವಿಮಾನದ ನೆರಳಿನಲ್ಲಿ ಬರುತ್ತಾನೆ ಎಂಬುದಕ್ಕಿಂತಲೂ ತನ್ನೊಳಗಿಟ್ಟುಕೊಂಡು ಗಿರಿಜೆ ಬಂದಳೆಂಬುದು ತುಂಬ ಔಚಿತ್ಯಪೂರ್ಣ ಹಾಗೂ ಮನೋವೈಜ್ಞಾನಿಕ ಎನಿಸುತ್ತದೆ.)

ಕನಕದಾಸರು ಹರಿಹರನನ್ನು ಅನುಸರಿಸಿ ತಮ್ಮದೇ ಆದ ರೀತಿಯ ಸಂಭಾಷಣೆಯನ್ನುಂಟುಮಾಡಿದ್ದಾರೆಂದು ತೋರುತ್ತದೆ. ಇಲ್ಲಿಯ ಸಂಭಾಷಣೆ ಸಹಜ ಸುಂದರವೆಂಬುದನ್ನು ನಾವು ಕಾಣಬಹುದು.

ಕಾಮದಹನದ ಬಳಿಕ ರತಿಯ ವಿಲಾಪ ಮುಗಿಲು ಮುಟ್ಟುತ್ತದೆ.

ಅಱದವರಱುತಿರ್ದರು ರತಿಕಾಂತನ
ಹಱವಳಿಸುವ ಪ್ರಳಾಪದಲಿ
ಬಳಿಕ ಕಂಡೀಶ್ವರಿ ಗಂಧೋದಕದಿಂದ
ತೊಳೆದಳು ರತಿಯ ನುಣ್ಮೊಗವ ॥

ಪಾರ್ವತಿಗೆ ಕರುಣೆ ಮೂಡುತ್ತದೆ. ಗಂಧೋದಕದಿಂದ ಆಕೆಯ ಮುಖತೊಳೆಯುತ್ತಾಳೆ. ಮುತ್ತಿನ ಸೆರಗಿನಿಂದ ರತಿಯ ಬಲ್ಮೊಲೆಗಳನ್ನು ಮರೆಮಾಡುತ್ತಾಳೆ. ಕೂದಲನ್ನು ಕಟ್ಟುತ್ತಾಳೆ. ರಟ್ಟೆ ಹಿಡಿದೆತ್ತಿ ನಿಲ್ಲಿಸುತ್ತಾಳೆ.

ಒಂದೊಂದ ಹಳುಕುಟ್ಟಬೇಡ ನಿನ್ನಾಳ್ದನ
ಕೊಂದ ಮದೀಯ ವಲ್ಲಭನ
ಸಂದರುಶನವ ಮಾಡೇಳೆಂದು ಚರಣಾರ
ವಿಂದಕೆ ಪೊಡಮಡಿಸಿದಳು ॥

ಈಶ್ವರನಿಗೆ ನಮಸ್ಕಾರ ಮಾಡಿಸುತ್ತಾಳೆ. 'ನಿನ್ನ ಗಂಡ ನನ್ನ ತಪಕೆಡಿಸಿದ. ಆದ್ದರಿಂದ ಸುಟ್ಟೆನು. ನೀನು ದುಃಖಿಸಬೇಡ' ಎಂದು ಆಕೆಯನ್ನು ಹಿಡಿದೆತ್ತುತ್ತಾನೆ

ಈಶ್ವರ. ಇಲ್ಲಿ ಈಶ್ವರ ರತಿಯರಲ್ಲಿ ಮಾತುಕತೆ ನಡಯುತ್ತದೆ. ಶಿವ ಸಮಾಧಾನಪಡಿಸುತ್ತಾನೆ. ರತಿ ತನ್ನ ಪತಿಯ ಕುರಿತು ವಾದಿಸುತ್ತಾಳೆ. 'ಅವನದೇನು ತಪ್ಪು? ಪರರ ಕೆಲಸಕ್ಕಾಗಿ ಬಂದರೆ ಈ ಶಿಕ್ಷೆಯೇ' ಎಂಬ ವಾದ ಬಹಳ ಸೊಗಸಾದುದು, ಕನಕದಾಸರು ಸೊಗಸಾಗಿ ವಿವೇಚಿಸಿದ್ದಾರೆ. ಕೊನೆಗೆ ರತಿ :

> ಕೆಂಡವ ತೋಡಿಸಬೇಡ ಶುಷ್ಕವ ಸುಟ್ಟು
> ಕೊಂಡವ ಮಾಡಿಸಬೇಡ
> ಖಂಡೇಂದುಶೇಖರ ಕಣ್ಗಿಚ್ಚಿನಿಂದೆನ್ನ
> ಗಂಡನನುರುಹಿದಂತುರುಹು ॥ – ಎಂದು ಹೇಳುತ್ತಾಳೆ.

ಆ ಕ್ಷಣ ಗಿರಿಜೆ ತನ್ನ ಪತಿಯೊಡನೆ 'ಕಂದರ್ಪನರ್ಧಾಂಗಿಯ ಮೇಲೆ ವೈಧವ್ಯ ಪೊಂದದೋಲ್ ಮಾಡೆ'ಂದಳು. ಈಶ್ವರನು ರತಿಯನ್ನು ಸಮಾಧಾನಪಡಿಸಿ

> ನಿನಗೆ ವೈಧವ್ಯ ಲಕ್ಷಣವಿಲ್ಲ ಮನದೊಳು
> ನೆನೆದೊಡೆ ಬರ್ಪ ನಿನ್ನಾಳ್ದ
> ಮನಸಿಜನೆನಿಸಿ ಜೀವಿಸಲೆಂದು ಮುತ್ತೈದೆ
> ತನವನಿತ್ತನೀಶ್ವರ ರತಿಗೆ ॥

ಕೂಡಲೇ ರತಿಯು ಪರೀಕ್ಷೆ ಮಾಡುತ್ತಾಳೆ. ನೆನೆಯುತ್ತಾಳೇ. ಮನ್ಮಥನನ್ನು ಹೃದಯದಲ್ಲಿ ಕಾಣುತ್ತಾಳೆ. ಸಂತಸದಿಂದ ಸರ್ಪಭೂಷಣನಿಗೆ ವಂದಿಸಿ ಮತ್ತೊಂದು ಬಿನ್ನಹವೆನ್ನುತ್ತಾಳೆ. ಅದೆಂದರೆ ಬೂದಿಯಾಗಿ ಬಿದ್ದಿದ್ದ ಮನ್ಮಥ ಶರೀರವನ್ನು 'ಭಸ್ಮ'ವನ್ನಾಗಿಸಬೇಕೆಂಬುದು. ಶಿವನದನ್ನೂ ಒಪ್ಪಿ ಆ ಭಸ್ಮವನ್ನೇ ಲೇಪಿಸಿಕೊಳ್ಳುತ್ತಾನೆ. ರತಿಯು ಮಾದೇವನಿಗೆ ನಮಸ್ಕರಿಸಿ 'ನನ್ನ ಪಟ್ಟಣಕ್ಕೆ ಹೋಗುತ್ತೇನೆ' ಎನ್ನುತ್ತಾಳೆ. ನಾಗಕಂಕಣನು ಅವಳನ್ನು ಹಿಡಿದೆತ್ತಿ 'ವಸ್ತ್ರಭೂಷಣವಿತ್ತು' ಕಾರುಣ್ಯದಿಂದ ಹೋಗೆಂದು ಹೇಳುತ್ತಾನೆ.

ರತಿಯು ಪಾರ್ವತಿಯ ಪಾದಕ್ಕೆರಗುತ್ತಾಳೆ. ಅವಳನ್ನು ಅಪ್ಪಿಕೊಂಡು ಗಿರಿಜೆಯು

> ಚಂದನಗಂಧಿ ನಿನ್ನಾಳ್ದ ಚಿತ್ತಜನಾದ
> ನೆಂದಳಲದಿರವ್ವಾ
> ಕಂದರ್ಪ ಕೃಷ್ಣಾತ್ಮಜನಾಗಿ ಪುನರಪಿ
> ಬಂದಪ ದಿವ್ಯವಿಗ್ರಹದಿ ॥

'ಆತನ ಕೈಹಿಡಿದು ನೀನು ಸುಖದಿಂದ ಬಾಳುವೆ' ಎನ್ನುತ್ತ ಉಡುಗೊರೆಯಿತ್ತು ಕಳುಹುತ್ತಾಳೆ.

ಗಿರಿಜಾಕಲ್ಯಾಣದ ಪಾರ್ವತಿಯೂ ದುಃಖಿಸುತ್ತಿದ್ದ ರತಿಯಲ್ಲಿಗೆ ಬಂದು ಅವಳ ಮೈಮುಖ ಸವರುತ್ತಾಳೆ. ರತಿಯು ಅತೀವ ದುಃಖದಿಂದ ಅವಳ ಕಾಲಲ್ಲಿ ಬಿದ್ದು ಹೊರಳಾಡುತ್ತಾಳೆ. ಆಗ ಪಾರ್ವತಿಯು 'ಶೋಕರಸಮಂ ನೀಡಾಗದೆ ನಿನ್ನ ವಲ್ಲಭನ ನೀಶ್ವರನಂ ಬೇಡುವೆನಾವರ್ಥದೊಳಂ ಮಾಡುವೆನೆಲೆ ಪರಮ ಹರ್ಷಮಂ ನಿನಗೆ ರತಿ' ಎನ್ನುತ್ತಾಳೆ. ಆಗಲೇ ವರನೀಡುವುದಿಲ್ಲ. ತಪಸ್ಸಿಗೆ ಹೊರಡುತ್ತಾಳೆ.

'ಕುಮಾರಸಂಭವ'ದಲ್ಲಿ ಕಾಮನನ್ನು ನೆನೆದು ಪ್ರಲಾಪಿಸುತ್ತಿದ್ದ ರತಿಗೆ ಸರಸ್ವತಿಯು ಹೇಳುತ್ತಾಳೆ :

ಪರಿಣೆಷ್ಯತಿ ಪಾರ್ವತೀಂ ಯದಾ ತಪಸಾ ತತ್ಪ್ರವಶೀಕೃತೋಹರಃ ।
ಉಪಲಬ್ಧ ಸುಖಸ್ತದಾಸ್ಮರಂ ವಪುಷಾನ್ಯೇನ ನಿಯೋಜಯಿಷ್ಯತಿ ॥

(ಹರನು ಪಾರ್ವತಿಯನ್ನು ವರಿಸಿದಾಗ ಸ್ಮರನು ತನ್ನ ದೇಹವನ್ನು ಪಡೆಯುತ್ತಾನೆ) ಇಷ್ಟು ಮಾತ್ರ ಇದೆ.

ಶಿವಪುರಾಣದಲ್ಲಿ ಕಾಮದಹನದ ಬಳಿಕ ದೇವತೆಗಳು ಬಂದು ಈಶ್ವರನನ್ನು ಸ್ತುತಿಸಿ ತಮ್ಮ ಕಾರ್ಯ ಹಾಳಾಯಿತೆಂದು ಗೋಳಿಡುತ್ತಾರೆ. ರತಿಯ ದುಃಖವನ್ನು ಹೋಗಲಾಡಿಸೆಂದು ಬೇಡುತ್ತಾರೆ. ಆಗ ಶಿವನು 'ರತಿಪ್ರಿಯನಾದ ಮನ್ಮಥನು ರುಕ್ಮಿಣೀಪತಿಯಾಗಿ ಕೃಷ್ಣ ಅವತರಿಸುವವರೆಗೂ ಅನಂಗನಾಗಿಯೇ ಇರುವನು. ಕೃಷ್ಣನಿಗೆ ರುಕ್ಮಿಣಿಯಲ್ಲಿ ಮಗನಾಗಿ ಪ್ರದ್ಯುಮ್ನನೆಂಬ ಹೆಸರಿನಿಂದ ಶರೀರಿಯಾಗುವನು. ಹುಟ್ಟಿದೊಡನೆಯೇ ಆ ಮಗುವನ್ನು ಶಂಬರಾಸುರನು ಸಮುದ್ರಕ್ಕೆಸೆಯುವನು' ಎನ್ನುತ್ತಾನೆ. ರತಿಯನ್ನು ಕಂಡು 'ರತಿಯೇ, ನೀನು ಅಲ್ಲಿಯವರೆಗೆ ಶಂಬರಾಸುರನ ನಗರದಲ್ಲಿರಬೇಕು. ಅಲ್ಲಿಯೇ ನಿನ್ನ ಪತಿ ದೊರೆಯುವನು. ಶಂಬರಾಸುರನನ್ನು ಕೊಂದು ನಿನ್ನೊಡನೆ ಸುಖವನ್ನನುಭವಿಸುವನು' ಎಂದೂ ಹೇಳುತ್ತಾನೆ.

ಪಾರ್ವತಿಯೇ ರತಿಗೆ ವರವನ್ನು ಕೊಡುವುದೂ ಕೊಡಿಸುವುದೂ ಕನಕದಾಸರ ಮೋಹನ ತರಂಗಿಣಿಯ ವೈಶಿಷ್ಟ್ಯ. ದುಃಖಿತರನ್ನು ಸಂತೈಸುವ ಸ್ತ್ರೀಹೃದಯ ಇಲ್ಲಿ ಸುಂದರವಾಗಿ ಪ್ರಭಾವಶಾಲಿಯಾಗಿದೆ. ಕನಕದಾಸರು ಚಿತ್ರಿಸಿದ ಪಾರ್ವತಿ ಈಶ್ವರನನ್ನು 'ಮದ್ವಲ್ಲಭ' ಎಂಬ ದೃಢತೆಯುಳ್ಳವಳು. ಅವನಲ್ಲಿ ಅಧಿಕಾರಯುತವಾಗಿ ಬಿನ್ನವಿಸುವ ಸಾಮರ್ಥ್ಯವುಳ್ಳವಳು.

ಕಾಮದಹನದ ಬಳಿಕ ಕಾಳಿದಾಸನಾಗಲಿ ಹರಿಹರನಾಗಲಿ ರತಿಯನ್ನು ಹಿಂಬಾಲಿಸುವುದಿಲ್ಲ. ಅವರು ಪಾರ್ವತಿಯ ಹಿಂದೆ ಸಾಗುತ್ತಾರೆ. ಪಾರ್ವತಿಯು

ಈಶ್ವರನನ್ನು ಒಲಿಸಿಕೊಂಡು ಮದುವೆಯಾಗುವ, ಬಳಿಕ ಕುಮಾರನನ್ನು ಪಡೆಯುವ ಕಥೆ ಅವರದು. ಕನಕದಾಸರು ಗಿರಿಜೆಯನ್ನನುಸರಿಸುವುದಿಲ್ಲ. ರತಿಯನ್ನು ಹಿಂಬಾಲಿಸುತ್ತಾರೆ.

ರತಿಯು ರಾಜಮಂದಿರಕ್ಕೆ ಬಂದು ಬೆದಕಿ ನೋಡಿ ತನ್ನ ವಲ್ಲಭನ ತೇಜೋಮಯ ಚಿತ್ರಪಟವ ಕಂಡು ಅದನ್ನಪ್ಪಿಕೊಂಡು ನಿಜವೆಂದೇ ಭಾವಿಸಿ ಬಡಬಡಿಸತೊಡಗುತ್ತಾಳೆ. ದುಃಖದ, ವಿರಹದ ಮಾತುಗಳಿಂದ ಆ ಚಿತ್ರವನ್ನು ನೋಡಿ ಅಳುತ್ತಿರುವ ರತಿಯನ್ನು ನೋಡಿ ದಾಸಿಯರು ಸಮಾಧಾನಪಡಿಸುತ್ತಾರೆ. ದುಃಖಪಡದೆ ಮನೆವಾರ್ತೆ ಮಾಡು ಎನ್ನುತ್ತಾರೆ.

ಒಗೆತನ ಬಿಟ್ಟು ಹೋದಾಗ ಹಾಲಿಗೆ ಹೆಪ್ಪ
ಮೊಗೆದಿಕ್ಕಿದವರಾರುಂಟು
ಜಗವೇಕೆ ಜಾಣನ ಕಾಣದರಣ್ಯವ
ಹೊಗಬೇಕು ತಾನೆಂದಳಲುತ ॥

ಅಂತೆಯೇ ಯಾವುದನ್ನೂ ತೆಗೆದುಕೊಳ್ಳದೆ ಊಳಿಗದವರಲ್ಲಿ ಒಬ್ಬಳನ್ನು ಕರೆದುಕೊಂಡು ಕಾಡಿಗೆ ಹೊರಟೇಬಿಡುತ್ತಾಳೆ. ಅಲ್ಲಿಯೂ ಒಂದೊಂದು ಹೂ, ಗಿಡ, ಬಳ್ಳಿ, ಹಕ್ಕಿ, ಮೃಗಗಳನ್ನು ನೋಡಿ ನೆನೆದು ದುಃಖಿಸುತ್ತಾ ಮುಂದರಿಯುತ್ತಾಳೆ. ಬರಬರುತ್ತ :

ಚರಣದಂಗುಷ್ಟವನೆಡವಿದ ತಾವಿಲೀ
ಶ್ವರ ನರ್ತಿಸಲೆಂದೆನುತ
ತರಹರದಲಿ ಬಂದಳಂಬುಜಾಕ್ಷಿ ಶಂಬರಾ
ಸುರನ ಪಟ್ಟಣವನೀಕ್ಷಿಸುತ ॥

ಶಂಬರಾಸುರನ ಉಪವನವನ್ನು ಹೊಗುತ್ತಾಳೆ. ವನಪಾಲಕರು ಆಕೆಯ ಸ್ಥಿತಿಯನ್ನು ಕಂಡು ವಿಶಾಲ ತಂಗೊಳವನ್ನು ತೋರುತ್ತಾರೆ. ತೋಟಿಗರಲ್ಲೊಬ್ಬ ರತಿಯ ಪ್ರಸಂಗವನ್ನು ಶಂಬರಾಸುರನ ಕಿವಿಯಲ್ಲಿ ಉಸುರುತ್ತಾನೆ. ಆಕೆಯ ಸೌಂದರ್ಯವನ್ನು ವರ್ಣಿಸುತ್ತಾನೆ. ಶಂಬರಾಸುರನು ಕೂಡಲೆ ಹೊನ್ನಂದಣದವರನ್ನು ಕರೆಸಿ ರತಿಯನ್ನು ಕರೆತರಲು ಕಳುಹುತ್ತಾನೆ. ದೂತಿಯರು, ಕೊಜ್ಜೆಯರು (ಕೋಜಾಗಳು) ಸಹಿತ ಅಂದಣದವರು ಬಂದು ನಯವಾದ ಮಾತಿನಿಂದ ರತಿಯನ್ನು ಅಂದಣಕ್ಕೇರಿಸಿ ಓಣಿಯಿಂದ (ನೇರವಾಗಿ ಬೀದಿಯಲ್ಲಲ್ಲ) ಕರೆತರುತ್ತಾರೆ. ಆಕೆಯನ್ನು ನೋಡುತ್ತಲೇ ಶಂಬರ ಮೂರ್ಛಿತನಾಗುತ್ತಾನೆ ಆ ಸೊಬಗಿಗೆ ಮರುಳಾಗಿ. ಎಚ್ಚೆತ್ತು "ನೀನು ಯಾರು?"

ಎಂದು ಕೇಳುತ್ತಾನೆ. ದುಃಖಿಸುತ್ತಿರುವವಳು ಎಂದೂ ಯೋಚಿಸದೇ "ನೀನು ನನ್ನನ್ನಂಗೀಕರಿಸು" ಎನ್ನುತ್ತಾನೆ. "ಕಾಮಬಾಧೆಯನ್ನು ಹೋಗಲಾಡಿಸು" ಎನ್ನುತ್ತಾನೆ.

ಶಂಬರನ ಸತಿಯು ರತಿಯನ್ನು ಕರೆದು ಸ್ನಾನಾದಿಗಳಿಂದುಪಚರಿಸಿ ವಿಚಾರಿಸುತ್ತಾಳೆ. ತಾನು ಕಾಮನಪತ್ನಿಯೆಂದೂ ಆತನುರಿದು ಹೋದುದರಿಂದ ದೇಸಿಗಳಂತೆ ಬಂದಿರುವೆನೆಂದೂ ಹೇಳಿದಾಗ ಆ ಸತಿಯು "ನನ್ನ ಪತಿಯನ್ನೇ ನೀಡುತ್ತೇನೆ, ಒಗೆತನ ಮಾಡಿಕೊ" ಎಂದು ಪರಿಪರಿಯಾಗಿ ಹೇಳುತ್ತಾಳೆ. ರತಿಯು ನಿರಾಕರಿಸುತ್ತಾಳೆ. ''ಕಾಮನ ತೋಳತೆಕ್ಕೆಯಲ್ಲಿದ್ದವಳಿಗೆ ಪರಪುರುಷನ ದೇಹಸ್ಪರ್ಶವಾಗಬಹುದೇ ?" ಎನ್ನುತ್ತಾಳೆ. ನಿನ್ನನ್ನು ಕಂಡ ಯಾವ ಪುರುಷನೂ ಸುಮ್ಮನೆ ಬಿಡಲಾರ" ಎಂದರೆ "ಮನಸಿಜನಾಗಿದ್ದಾನೆ ಕಾಮ–ಪರಪುರುಷರು ಮುಟ್ಟಿದರೆ ಶಪಿಸಿ ನುಗ್ಗುಮಾಡುವ" ನೆಂದು ಹೇಳಿ "ನಿನ್ನ ವಲ್ಲಭನಿಗೆ ಹೇಳು. ಸಾಯುವುದಕ್ಕೂ ನಾನು ಸಿದ್ಧ, ಆದರೆ ದುರ್ಮರಣ ಹೆಣ್ಣಿಗೆ ಹೊಲ್ಲ. ಆದ್ದರಿಂದ ನಿನ್ನ ಪತಿ ಕರಣ ವಿಕಾರಗೊಳ್ಳದಿರಲಿ" ಎಂದು ಅಳುತ್ತ ಹೇಳುತ್ತಾಳೆ.

ಶಂಬರನ ಸತಿಗೆ ಕರುಣೆಯುಂಟಾಗುತ್ತದೆ. ಆಕೆ ರತಿಯ ಕಣ್ಣೀರನ್ನು ತೊಡೆದು ಗಲ್ಲವ ಮುದ್ದಿಸಿ–" ಈ ಹೆಣ್ಣು ಜನ್ಮವೇ ಹೀಗೆ. ನನ್ನ ಪತಿಗೆ ಹೇಳಿ ನಿನಗಾವ ತೊಡಕೂ ಆಗದಂತೆ ನೋಡಿಕೊಳ್ಳುತ್ತೇನೆ" ಎನ್ನುತ್ತಾಳೆ. ಶಂಬರನಲ್ಲಿಗೆ ಬಂದು ಆತನನ್ನು ಒಡಂಬಡಿಸುತ್ತಾಳೆ. ರತಿಯ ವಿಚಾರವನ್ನೆಲ್ಲಾ ತಿಳಿಸುತ್ತಾಳೆ.

"ಪತಿವ್ರತೆಯರ ಸಂಗ ಮಾಡಿದ ದೇವೇಂದ್ರರ ಗತಿಯೇನಾಯ್ತು? ಆದ್ದರಿಂದ ನೀನೂ ರತಿಯ ವಿಚಾರ ಬಿಡು" ಎಂದು ಕಾಲಿಗೆರಗುತ್ತಾಳೆ. ಶಂಬರನು

> ಮತ್ತೇಭಗಮನೆ ಕೇಳಾ ನಿನಗಿಂತ ಚೆಲುವಿನೊ
> ಳುತ್ತಮ ಸ್ತ್ರೀಯರಿಗುಂಟೆ
> ಚಿತ್ತಜನರ್ಧಾಂಗಿ ನಿನ್ನರಮನೆಯಲ್ಲಿ
> ತೊತ್ತಾಗಿರಲೆಂದು ನುಡಿದ ॥

ಶಂಬರನ ಪತ್ನಿಗೂ ಸಮಾಧಾನವಾಯಿತು. ಆಕೆ ರತಿಯನ್ನು ಅಡಿಗೆಯ ಮನೆಗೆಲಸಕ್ಕೆ ನೇಮಿಸುತ್ತಾಳೆ :

> ವಾಸಿಯೊಳು ತನ್ನನೊಲ್ಲದ ರತಿದೇವಿಯ
> ದಾಸಿಯ ಮಾಡಿದೆನೆಂಬ ಭಾಷಿತ ಮಹದೈಶ್ವರ್ಯದಿ ಮದನ

ದ್ವೇಷಿ ಮಂದಿರದೊಳೊಪ್ಪಿದನು ॥

ಒಂದು ದಿನ ನಾರದ ಶಂಬರಾಸುರನಲ್ಲಿಗೆ ಬರುತ್ತಾನೆ. "ರತಿಯನ್ನು ಸೆರೆಹಿಡಿದಿಟ್ಟುದರಿಂದ ನಿನಗೆ ಕೇಡಾಗುತ್ತದೆ. ಮನ್ಮಥನು ರುಕ್ಮಿಣಿಯ ಮಗನಾಗಿ ಜನಿಸಿದ್ದಾನೆ. ಶತ್ರುವನ್ನು ಚಿಗುರುವ ಮೊದಲೇ ಚಿವುಟುವುದೊಳ್ಳೆಯದು" ಎನ್ನುತ್ತಾನೆ. ಶಂಬರನು ನಾರದನ ಮಾತನ್ನು ಕೇಳಿ ಕೃಷ್ಣನರಮನೆಯಿಂದ ಮಗುವನ್ನು ತಂದು ಮರ್ದಿಸುವೆನೆನ್ನುತ್ತಾನೆ. ರಾತ್ರಿಯಾಗುತ್ತಲೇ ಶಂಬರನು ಶುಕ್ರಾಚಾರ್ಯನು ಉಪದೇಶಿಸಿದ ಮಂತ್ರದಿಂದ ವಿಶ್ವರೂಪತಾಳಿ ಸಮೀರಣನಾಗಿ ಕೃಷ್ಣನಗರಿಗೆ ಹೋಗಿ ರುಕ್ಮಿಣಿಯ ಪಕ್ಕದಲ್ಲಿದ್ದ ಮಗುವನ್ನೆತ್ತಿ ತರುತ್ತಾನೆ.

ಕೃಷ್ಣನಿಗಿದೆಲ್ಲ ತಿಳಿದಿಲ್ಲವೆಂದಲ್ಲ–ಆ ಮಗುವಿನಿಂದಲೇ ಶಂಬರನ ವಧೆಯಾಗಲಿ ಎಂದೇ ಸುಮ್ಮನಿದ್ದನಂತೆ. ಶಂಬರನ ಮನದಲ್ಲಿ ಯೋಚನೆ ಹುಟ್ಟುತ್ತದೆ :

ಈ ತರಳನ ಮರ್ದಿಸಿ ಭ್ರೂಣಹತ್ಯಾ
ಘಾತಕವನು ಕಟ್ಟಿಕೊಳಲು
ಏತಕೆ ತನ್ನ ತಾನೇ ಸಾಯಲೆನುತ ಕೈ
ಸೋತಂತೆ ಬಿಸುಟನಬ್ಧಿಯಲಿ ॥ –ಮಗುವನ್ನು ಮೀನೊಂದು ನುಂಗುತ್ತದೆ.

ಮರುದಿನ ಪ್ರಾತಃಕಾಲ ಸ್ನಾನಮಾಡಿ ಶಿವಪೂಜೆ ನೆರವೇರಿಸಿ ದಾನಧರ್ಮ ಮಾಡಿದ ಶಂಬರನಲ್ಲಿಗೆ ಮೀನೊಂದನ್ನು ಕಾಣಿಕೆಯಾಗಿ ಕೊಟ್ಟನೊಬ್ಬ ಜಲಗಾರ ಅದನ್ನು ಅಡುಗೆಮನೆಗೆ ಕಳುಹಲಾಗುತ್ತದೆ. ಮಾಯಾಂಗನೆ (ರತಿ) ಅದನ್ನು ತುಂಡರಿಸತೊಡಗಿದಾಗ ಅದರಿಂದ ಶಿಶು ಹೊರಗೆ ಬರುತ್ತದೆ. ಅದನ್ನು ನೋಡಿದಾಗ ರತಿಗೆ ಮೈ ಝುಂ ಎನ್ನುತ್ತದೆ. ಇದೇಕೆ ಈ ಮಗುವಿನ ಮೇಲೆ ವ್ಯಾಮೋಹ ಎನ್ನುತ್ತಿದ್ದಂತೆ ಆಕಾಶವಾಣಿಯೊಂದು :

ಕಂದನ ಕಾದುಕೊ ಮೀನ ಗರ್ಭದಿ ಪುಟ್ಟಿ
ಬಂದ ಮನ್ಮಥ ಶಂಬರನ
ಕೊಂದಾಕ್ಷಣ ನಿನ್ನಾಳಿದನಾದಪ
ನೆಂಬುದು....॥

ಅದನ್ನು ಕೇಳಿ ಮಾಯಾಂಗನೆ ಮಗುವನ್ನು ಸ್ವಚ್ಛಗೊಳಿಸಿ ಮಲಗಿಸುತ್ತಾಳೆ. ಮೀನಿನ ಮಾಂಸದಿಂದ ಅಡುಗೆ ಮಾಡಿ ಶಂಬರನಿಗೆ ಉಣಬಡಿಸುತ್ತಾಳೆ. ತೃಪ್ತನಾದ ರಕ್ಕಸನು 'ನಿನ್ನನ್ನು ತಡಹುವುದಿಲ್ಲ–

ನಿನ್ನಾಲಯದೊಳಗೆ ವಿಂಗಡವಾಗಿ ಸುಖಬಾಳು' ಎನ್ನುತ್ತಾನೆ. ಆಗಲೇ ಮಾಯಾಂಗನೆ 'ಮತ್ತೋರ್ವ ಸ್ಮರವಿಳಾಸಿನಿ ನನ್ನಲ್ಲಿಗೆ ಬಂದು ಮಗುವನ್ನು ಹೆತ್ತಳು. ಆ ಮಗುವನ್ನು ಸಾಕಲೋ ಬೇಡವೊ' ಎಂದು ಅಳತೊಡಗುತ್ತಾಳೆ. ಮಗುವನ್ನು ಸಾಕಿಕೊಳ್ಳಲು ಶಂಬರನು ಅನುಮತಿ ಕೊಡುತ್ತಾನೆ.

ರತಿಯು ಮಗುವಿನಂತೆಯೇ ಮನ್ಮಥನನ್ನು ಸಲಹುತ್ತಾಳೆ. ಮುದ್ದಿಸುತ್ತಾಳೆ. ಬಟ್ಟಬಲ್ಮೊಲೆಯನ್ನು ಬಾಯೊಳಗಿಡುತ್ತಾಳೆ. ಮುದ್ದಿಸಲಧರಾಮೃತವೊಂದುಗೂಡಿ ಬೆಳೆಯುತ್ತದೆ ಮಗು. ಬೆಳೆದ ಸುಂದರ ಬಾಲಕನನ್ನು ಶಂಬರ ನೋಡುತ್ತಾನೆ. ಅವನಲ್ಲಿ ಪ್ರೀತಿಯುಕ್ಕುತ್ತದೆ. ಆ ಮಗುವನ್ನು ಕರೆತಂದು ತನ್ನೆಲ್ಲ ಮಾಯಾವಿದ್ಯೆಯನ್ನು ಕಲಿಸಿ ಕೊಡುತ್ತಾನೆ. ಶುಕ್ರಾಚಾರ್ಯನು ಹೇಳಿಕೊಟ್ಟ ಹದಿನಾರು ವಿದ್ಯೆಯನ್ನು ಕಲಿಸುತ್ತಾನೆ. ಅದನ್ನೆಲ್ಲ ತಿಳಿದುಕೊಂಡುಬಂದು ಪ್ರದ್ಯುಮ್ನ ಮಾಯಾಂಗನೆಯಲ್ಲಿ ಹೇಳುತ್ತಾನೆ : 'ಪೀತಾಂಬರನಾಜ್ಞೆಯಿಂದ ಶಂಬರನ ಎಲ್ಲಾ ವಿದ್ಯೆಯನ್ನು ಬೇತಾಳ ವಿಘ್ನೇಶ್ವರರು ಕಲಿಸಿಕೊಟ್ಟರು' ಎಂದು.

ಒಂದು ದಿನ ನಾರದ ಬರುತ್ತಾನೆ. ಕೃಷ್ಣ ಮಗುವನ್ನು ಕಡಲಲ್ಲಿ ಎಸೆದೆ ಎಂಬ ತೃಪ್ತಿಯಿಂದಿದ್ದ ಶಂಬರನಿಗೆ ನಡೆದ ಕತೆಯನ್ನು ಹೇಳುತ್ತಾನೆ. 'ನಿನ್ನ ಎಲ್ಲ ವಿದ್ಯೆಯನ್ನು ಕಲಿತ ಆತನಿಂದ ಸೋಲೇ ಸರಿ' ಎನ್ನುತ್ತಾನೆ. ಶಂಬರನಿಗೆ ಸಿಟ್ಟು ನೆತ್ತಿಗೇರುತ್ತದೆ. ನಾರದ ಇನ್ನೂ ಕೆರಳಿಸುತ್ತಾನೆ. "ನಿನಗೆ ಸರಿಸಮಾನರು ಯಾರು ? ನೀನು ಬ್ರಹ್ಮ ಕೊಟ್ಟ ವಿದ್ಯೆಯಿಂದ ಮದನನನ್ನು ನಾಶಪಡಿಸಬಲ್ಲೆ" ಎಂದು ಸೂಚಿಸುತ್ತಾನೆ. 'ಸಣ್ಣವನೆಂದು ತಿರಸ್ಕರಿಸಬೇಡ. ಷಣ್ಮುಖನ ಕತೆ ಗೊತ್ತಿಲ್ಲವೇ ? ಕೃಷ್ಣ ಏನು ಮಾಡಿದ'ಎಂದೆಲ್ಲ ಹೇಳಿ, 'ಏನಾದರಾಗಲಿ ನಾನೊಮ್ಮೆ ಆ ಮಗುವನ್ನು ಕಂಡುಬರಲೇ?' ಎಂದು ಕೇಳುತ್ತಾನೆ. ಶಂಬರನೊಪ್ಪುತ್ತಾನೆ. ಅಲ್ಲಿಗೆ ಹೋದ ನಾರದನು ಮದನನಿಗೆ ಎಲ್ಲವನ್ನು ಹೇಳಿ ಹಿಂದಿರುಗಿ ಬರುತ್ತಾನೆ. "ಶಂಬರನ ಮಾತನ್ನಾತ ಧಿಕ್ಕರಿಸಿದ" ಎಂದು ಉರುಹುತ್ತಾನೆ. ಶಂಬರನು ಸಿಟ್ಟಿನಿಂದ ಆತನನ್ನು ಹಿಡಿತರಲು ಹೇಳುತ್ತಾನೆ. ದಡಿಗರೆಲ್ಲ ಹೋಗಿ ಸಾಯುತ್ತಾರೆ. ಶಂಬರನೇ ಬಂದು ಕೊನೆಗೆ ಸಾವನ್ನಪ್ಪುತ್ತಾನೆ.

ಪ್ರದ್ಯುಮ್ನನು ಮಹಾಮಂತ್ರಿಗೆ ರಾಜ್ಯಾಭಿಷೇಕ ಮಾಡಿ 'ಶಂಬರನಿಗೆ ಸಂಸ್ಕಾರಮಾಡು, ಐಶ್ವರ್ಯವನ್ನು ಜತನದಿಂದ ಕಾಪಾಡು' ಎಂದು ಉಪದೇಶಿಸಿ ದ್ವಾರಕೆಗೆ ತೆರಳುತ್ತಾನೆ, ರತಿಸಹಿತ ಪುಷ್ಪಕವಿಮಾನದಲ್ಲಿ.

ದ್ವಾರಕೆಯಲ್ಲಿ ಎಲ್ಲರಿಗೂ ಆಶ್ಚರ್ಯ. ಕೃಷ್ಣನೇ ಬಂದನೆಂದರು ಕೆಲವರು. ರುಕ್ಮಿಣಿಗೆ ಈತನಾರೆಂಬ ಕುತೂಹಲ. ಅಲ್ಲಿಗೆ ಬಂದ ಕೃಷ್ಣನಲ್ಲಿ ಆಕೆ ಕೇಳುತ್ತಾಳೆ.

(ಮೊದಲೇ ಕೃಷ್ಣನೇ ಕೇಳುತ್ತಾನೆ.) ಕೃಷ್ಣ ಹೇಳುವುದಿಲ್ಲ. ನಾರದನೇ ಬಂದು ಎಲ್ಲ ವಿಚಾರವನ್ನು ತಿಳಿಸುತ್ತಾನೆ.

ಆತನಿಗೆ ಮನೆಯೊಂದು ಸಿದ್ಧವಾಗುತ್ತದೆ. ಪ್ರದ್ಯುಮ್ನ ರತಿಯರ ಶಾಸ್ತ್ರೋಕ್ತ ವಿವಾಹವೇರ್ಪಡುತ್ತದೆ :

ನೆಟ್ಟನೆ ತೆರೆವಿಡಿದರು ಶಾಸ್ತ್ರವಿಧಿಯಿಂದೆ
ಮೆಟ್ಟಕ್ಕಿಯ ಮೇಲೆ ನಿಲಿಸಿ
ಶ್ರೇಷ್ಠರು ಮಂಗಳಾಷ್ಟಕದಿ ನಿರೀಕ್ಷಣೆ
ಗೊಟ್ಟರು ದಂಪತಿಗಳಿಗೆ ॥
ಮಧುಪರ್ಕ ತಂಡುಲಾರೋಹಣ ಮೊದಲಾದ
ವಿಧಿಯಿಂದಲಾ ಪುರೋಹಿತರು
ವಧುವನನಲಸಾಕ್ಷಿಯೊಳಗೆ ಧಾರೆಯ
ಪದುಮಾಸ್ತ್ರಗೆಱೆ ದರುತ್ಸವದಿ ॥

ದಿಬ್ಬಣ ಮೊದಲಾದ ಕ್ರಮಗಳು ನಡೆದುವು. "ನೋಡಿದದೊಂದೇ ದಿವಸದೆ ದಿನನಾಲ್ಕ ಜೋಡಿಸಿ ವೈವಾಹವಿಧ'ದಿ ಮಾಡಿದರ್ ಮಂಗಳೋತ್ಸವದಿಂದ." ನಾಲ್ಕುದಿನ ವಿವಾಹ ವಿಧಿ ಒಂದೇದಿನದಲ್ಲಿ ಮುಗಿಯಿತು.[1]

ಪುಷ್ಕಳವಾದ ಭೋಜನವಾದ ಬಳಿಕ ರುಕ್ಮಿಣಿ ಸತ್ಯಭಾಮೆಯರಪೇಕ್ಷೆಯಂತೆ ಜಲಕ್ರೀಡೆ ನಡೆಯುತ್ತದೆ. ಜಲಕ್ರೀಡೆಯಲ್ಲಿ ಬಲರಾಮ, ಕೃಷ್ಣ, ಪ್ರದ್ಯುಮ್ನ ತಂತಮ್ಮ ಸತಿಯರೊಂದಿಗೆ ಮೆರೆಯುತ್ತಾರೆ. ಅವರವರಿಗೆ ಒಂದೊಂದು ಚಂದ್ರಕಾಂತ ಶಿಲೆಯ ಕೊಳವನ್ನು[1] ತೋರುತ್ತಾನೆ. ಕೃಷ್ಣ.

ಲೀಲೆಗಾರ್ತಿಯರಚ್ಯುತನಾಜ್ಞೆಯಿಂದೆ ಪೆ
ರ್ಗಾಲ ಹೊಂದೂಂಬನು ನೆಗಹೆ
ಕೀಲಣೆಗೆಯ್ದ ಸುವರ್ಣವೇತಂಡ ಶುಂ
ಡಾಲದೆ ಸುರಿದುದು ಸಲಿಲಂ ॥

ಹೆಂಗಸರ ಕಂಧರದವರೆಗೆ ನೀರು ಬಂದಾಗ ಹೊಂದೂಂಬನು ಬಲಿಯುತ್ತಾರೆ. ಜಲಕ್ರೀಡೆ ಸಾಗುತ್ತದೆ.

---

೧. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಾಲ್ಕುದಿನದ ವಿವಾಹ ಸಂಪ್ರದಾಯವಿತ್ತು. ಅದನ್ನು ಒಂದು ದಿನದಲ್ಲಿ ಮುಗಿಸುವ ಕ್ರಮ ಈಗಿದೆ. ಪ್ರಾಯಶಃ ಕನಕದಾಸರ ಕಾಲದಲ್ಲಿಯೇ ಈ ಕ್ರಮ ಪ್ರಾರಂಭವಾಗಿದ್ದಿರಬೇಕು.

1. ವಿಜಯನಗರ ಸಾಮ್ರಾಜ್ಯದ ಈಜುಕೊಳದ ಜೀವಂತ ವರ್ಣನೆಯದಾಗಿದೆಯೆನ್ನಬಹುದೆ?

ಮನ್ಮಥನನ್ನು ಮನೆತುಂಬಿಸಿಕೊಳ್ಳುವ ಶಾಸ್ತ್ರ ನಡೆಯುತ್ತದೆ. ಬಲರಾಮ ತನ್ನ ದ್ವಾರಕೆಯ ಅರಮನೆಗೆ ಕರೆದೊಯ್ಯುತ್ತಾನೆ. ವೈಭವದಿಂದ ಕೂಡಿದ ಮೆರವಣಿಗೆಯಲ್ಲಿ ಅಲ್ಲಿ ಮನ್ಮಥ ರತಿಯೊಂದಿಗೆ ರಾಜಮಂದಿರ ಪ್ರವೇಶಿಸುತ್ತಾನೆ.

ರತಿಯೊಡನೆ ಕೂಡುತ್ತಾನೆ. ಗರ್ಭದಾನವಾಗುತ್ತದೆ.[2] ರತಿಯು ಗರ್ಭವತಿಯಾಗುತ್ತಾಳೆ. ಅರ್ಭಕನನ್ನು ಪಡೆಯುತ್ತಾಳೆ :

ಹೊಗರಾಂತ ಹೊಸ ಹೊನ್ನ ರಸ ಕಾಯ್ದಿರೆ ತಂದು
ಸೆಗಣಿಯಲೆಱೆ ವಂತೆ ಮೊಱದಿ
ಮೃಗಮದ ಗಂಧಿಯರ್ ಗೋಮಯದಿಂ ಮುದ್ದು
ಮಗ ದೇಹವಸಾರ್ಚಿದರು ॥[3]

ಮಗುವಿಗೆ ಅಗತ್ಯ ಸಂಸ್ಕಾರಗಳಾಗುತ್ತವೆ. ಆತನ ಬಾಲಲೀಲೆಯಿಂದ ಅರಮನೆ ತುಂಬುತ್ತದೆ. ರತಿಗೆ ಆನಂದವಾಗುತ್ತದೆ. ಅನಿರುದ್ಧ ಬೆಳೆಯುತ್ತಾನೆ. ಅನಿರುದ್ಧನ ನಗರಶೋಧನೆ ಅವನ ವಿಲಾಸವನ್ನು ಸೂಚಿಸಿದರೆ, ಬೇಟೆಯಲ್ಲಿ ಆತನ ಸಾಹಸವನ್ನು ಪ್ರದರ್ಶಿಸಲಾಗಿದೆ.

ಕಾಮನನ್ನು ಕಳೆದುಕೊಂಡ ರತಿ ಮತ್ತೆ ಆತನನ್ನು ಪಡೆದು ಪುತ್ರೋತ್ಸವವನ್ನು ಕಾಣುವಲ್ಲಿವರೆಗಿನ ಈ ಕತೆಯಲ್ಲಿ ಪುರಾಣಗಳ ಆಕರವಿರುವುದು ಸ್ವಲ್ಪವೆಂದೇ ಹೇಳಬೇಕು. ಶಂಬರಾಸುರನ ವಧೆಯ ಕಥೆಯನ್ನುಳಿದರೆ–ಉಳಿದ ರತಿಯ ಅಲೆತ–ರತಿ ಮನ್ಮಥರ ವಿವಾಹ, ಗರ್ಭಾದಾನ, ಪುತ್ರೋತ್ಸವ ಇವು ಯಾವ ಪುರಾಣದಲ್ಲೂ ಇಲ್ಲ. ಕೊಂಡಿಯಿಲ್ಲದ ಪುರಾಣಕಥೆಗೆ ಲೋಕಜೀವನದ ಮೆರುಗನ್ನು ನೀಡಿ ಕನಕದಾಸರು ರತಿಯ ಕಥೆಯನ್ನು ವರ್ಣಿಸಿದ್ದಾರೆ. ಶಂಬರಾಸುರನ ಪತ್ನಿಯೇ ಹೇಳುವಂತೆ ಹೆಣ್ಣು ಜೀವನದ ಸಂಕಟವನ್ನು ವಿವರಿಸಿದ್ದಾರೆ. ಜತೆಯಲ್ಲೇ ಹೆಣ್ಣೇ ಆದ ಸರ್ವಶಕ್ತ–ಶಕ್ತಿಯಾದ ಪಾರ್ವತಿಯ ಕರುಣೆ, ರಾಕ್ಷಸನ ಪತ್ನಿಯಾದರೂ ಶಂಬರಾಸುರನ ಮಡದಿಯ ಅನುಕಂಪ ನಮ್ಮನ್ನಿಲ್ಲಿ ವಾಸ್ತವಜಗತ್ತಿನಲ್ಲಿ ವಿಹರಿಸುವಂತೆ ಮಾಡುತ್ತವೆ. ಆ ಕಾಲದ ರೂಢಿ ಸಂಪ್ರದಾಯಗಳೇ ಆದ ಕಥಾಸ್ರೋತ ನಮ್ಮನ್ನು ಸುತ್ತುವುತ್ತಲ ಪ್ರಪಂಚಾನುಭವದಲ್ಲಿ ಮುಳುಗಿಸಿಬಿಡುತ್ತದೆ. ವರ್ಣನೆಯಲ್ಲಿ ವಿಜಯನಗರದ

---

2. ಇಲ್ಲಿಯ ವರ್ಣನೆ ಭರತೇಶ ವೈಭವದ ಸಂಭೋಗ ಸಂಧಿಯ ವರ್ಣನೆಯನ್ನು ಹೋಲುತ್ತದೆ. ಕನಕದಾಸರ ಬಳಿಕ ಅಥವಾ ಅದೇ ಕಾಲದಲ್ಲಿ ರತ್ನಾಕರವರ್ಣಿ ಈ ಕೃತಿಯನ್ನು ನೋಡಿರಲೂಬಹುದು.

3. ಬಾಣಂತಿಯರ ಆರೈಕೆಯ ರೂಢಿಯ ಸೊಗಸಾದ ಚಿತ್ರಣ ಇಲ್ಲಿದೆ.

ಆ ಕಾಲದ ವೈಭವವೂ ಹಾಸುಹೊಕ್ಕಾಗಿದ್ದರೆ ವಿವಾಹ ಮುಂತಾದ ಸಂಪ್ರದಾಯದಲ್ಲಿ ಜನಜೀವನ ಪ್ರತಿಬಿಂಬಿಸಿದೆ.

ಅನಿರುದ್ಧನ ನಗರ ಶೋಧನೆ–ಹಾಗೂ ಬೇಟೆಯ ವರ್ಣನೆಗೆ ಆಕರ ಪೂರ್ಣವಾಗಿ ವಿಜಯನಗರ ಮತ್ತು ಕರಾವಳಿಯ ಜನಜೀವನವೇ ಆಗಿದೆಯೆಂಬುದರಲ್ಲಿ ಸಂಶಯವಿಲ್ಲ.

ಉಷಾನಿರುದ್ಧರ ಕತೆ ಪುರಾಣಗಳಲ್ಲಿದೆ. ಆ ಅಕರಗಳಿಂದಲೇ ರೂಪುಗೊಂಡ ಮೋಹನತರಂಗಿಣಿಯ ಉಷಾನಿರುದ್ಧರ ಕಥೆ, ಬಾಣಾಸುರನ ಗರ್ವಭಂಗ–ಕೃಷ್ಣರಾಯನ ಸರ್ವೋತ್ತಮತೆಯಾಗಿ ಪರಿವರ್ತನೆಗೊಂಡಿದೆ. (ಪುರಾಣಗಳಲ್ಲಿ ಅನಿರುದ್ಧ ರತಿಯ ಮಗನಲ್ಲ.)

ಬಾಣಾಸುರ ಮಹಾಭಕ್ತ–ಶೋಣಿತಪುರದೊಡೆಯ. ಆತನ ಶೋಣಿತಪುರ:

ಕಾಣಿಸಿಕೊಂಬ ಕಂಡವರ, ಕಾಣದ ರಿಪು
ಶ್ರೇಣಿಯ ಕಱಿದ ರೋಹಿತದಿ
ಹೂಣಿಸಿ ಕೆಸರ್ಗೂಡಿ ಕೋಟೆಯ ರಚಿಸಲ್ಕೆ
ಶೋಣಿತಪುರವೆಂಬುದಾಯ್ತು ॥

ಹದಿನಾರು ಗುಪ್ತ ಕಿಟಕಿಗುಳುಳ್ಳ ಮೂವತ್ತೆರಡು ಗುಪ್ತದ್ವಾರಗಳುಳ್ಳ ಹಾಗೂ ಸೂರ್ಯಕಾಂತ ಶಿಲೆಯಿಂದ ರಚಿತವಾದ ಕೋಟೆಯ ಬುರುಜುಗಳು, ಬೀದಿಬೀದಿಗಳಲ್ಲಿ ಶಿವಾಲಯಗಳು :– ಜತೆಗೆ

ಜೂಜಾಟಿಕೆ ಸೂಳೆಬಂಟಿಕೆ ಹಣದ ಸಂ
ವಾದ ಪೆರ್ಗುಡಿಗಳ ಚರ್ಚೆ
ರಾಜವೀಧಿಯೊಳಿಜೆದಾಡುವ ಸಂದಣಿ
ಮಾಜದು ನಿತ್ಯಕೃತ್ಯದಲಿ ॥

ಕುಂಭಾಂಡನೆಂಬ ಮಂತ್ರಿಯ ಭವನ, ಚತುರಂಗ ಬಲ–ಇವುಗಳಿಂದ ಶೋಭಿಸುತ್ತದೆ ಶೋಣಿತಪುರ. ಅದು ಧರ್ಮಸಮನ್ವಯವನ್ನೂ ತೋರುತ್ತಿತ್ತು, ಜಿನ, ವೈಷ್ಣವ, ಶಾಕ್ತ ಗಣಪತಿ ದಿನಕರಾರ್ಚಕರು ಅಲ್ಲಿದ್ದರು. ಅವರೆಲ್ಲ ಬಾಣಾಸುರನ ಆಸ್ಥಾನಕ್ಕೆ ಬಂದು ಗೌರವ ತೋರುತ್ತಿದ್ದರು.

ಬಾಣಾಸುರ ಶಿವಭಕ್ತ. ಅವನ ಶಿವಪೂಜೆ ಆತನ ಭಕ್ತಿಗೊಂದು ನಿದರ್ಶನ. ಅಭಿಷೇಕ ಅಲಂಕಾರ ಮೊದಲಾದ ಷೋಡಶೋಪಚಾರಗಳ ಪೂಜೆ ಇದ್ದು ಜತೆಗೆ ಶಿವನ ಮಹಿಮೆಯನ್ನು ಸಾರುವ–ಸ್ತುತಿಗಳಿಂದ ಕೂಡಿದ್ದು :

ಹಡೆದ ತಾಯಿಲ್ಲ ತಾಯುಳ್ಳೊಡೆ ತಲೆ ಹೀಗೆ
ಜಡೆಗಟ್ಟಿಕೊಂಡು ಮಾಸಿಹುದೇ
ಮಡದಿಯರಿಲ್ಲ ಮಂಡೆಯ ಹಿಕ್ಕನೊಡೆವರೆ
ನ್ನೊಡೆಯ ಕೋ ಎನುತ ನೀರೆರೆದ ॥ –ಹೀಗೆ ಸಾಗುತ್ತದೆ ಪೂಜೆ.

ಬಾಣನ ಭಕ್ತಿ ಅಪ್ರತಿಮವಾದದ್ದು. ಪೂಜಾಕ್ರಮ ಶಾಸ್ತ್ರ ಮತ್ತು ಭಕ್ತಿಯ ಸಂಗಮವಾದದ್ದು.

ಬಾಣಾಸುರನ ಪೂಜೆಯ ಕೊನೆಗೆ ಈಶ್ವರ ಪ್ರತ್ಯಕ್ಷನಾಗುತ್ತಾನೆ. ವರಬೇಡಲು ಹೇಳುತ್ತಾನೆ. ಬಾಣನು "ಹಿಮಗಿರಿಯನ್ನು ಬಿಟ್ಟುಬಂದು ಇಲ್ಲಿ ನನ್ನ ಬಾಗಿಲು ಕಾಯುತ್ತಿರಬೇಕು" ಎಂದು ಕೇಳಿಕೊಂಡು ತನ್ನ ಯುದ್ಧಬಯಕೆಯನ್ನೂ ಹೇಳುತ್ತಾನೆ. ಈಶ್ವರನು "ಸದ್ಯದಲ್ಲೇ ನಿನ್ನನ್ನು ಗೆಲ್ಲುವವ ಬರುತ್ತಾನೆ. ನಿನ್ನ ಚಿತ್ರರಥದ ಮಯೂರ ಕೇತನ ಮುರಿದಾಗ" ಎಂದು ಹೇಳುತ್ತಾನೆ–ಬಾಣನಿಗೆ ಸಂತಸವಾಗುತ್ತದೆ.

ಬಾಣಾಸುರ ಶೃಂಗಾರಪ್ರಿಯನೂ ಹೌದು. ಆತ ತನ್ನ ಮಡದಿಯೊಂದಿಗೆ ರತಿ ಕ್ರೀಡೆಯಡುತ್ತಾನೆ. ಆದರೆ

ರತಿಯಾದಿ ಮಧ್ಯಾಂತಯೋಗದಿ ಬಾಣ ಸ[1]
ದ್ಗತಿ ಮೌನಮೂರ್ಛೆಯ ತಾಳ್ದು
ಮತಿಭ್ರಷ್ಟನಾಗದೆ ಚಿತ್ತವಿದ್ದುದು ಪಾ
ರ್ವತಿಯ ಪ್ರಾಣೇಶನಂಘ್ರಿಯಲಿ ॥

ಬೆಳಗಾಗಿ ಸಂಭೋಗ ಸುಖ ಕೆಟ್ಟಿತೇ ಎಂದು ಸತಿ ಪರಿತಪಿಸಿದಾಗ:

ಸುಖವೇನು ಲಕ್ಷ್ಯಸುರಾರ್ಚಿತ ಪದರುದ್ರ
ಬಕುತಿಯ ಮಾಳ್ಪೆನೇಳೆನುತ ॥

–ಆಕೆಯನ್ನು ಸಂತೈಸುತ್ತಾನೆ. ಎದ್ದು ಸ್ನಾನಮಾಡಿ ಶುಭ್ರನಾಗಿ ಶಿವನ ನಿತ್ಯಪೂಜೆ ಮಾಡುತ್ತಾನೆ. ಈ ಯೋಗ–ಭೋಗಗಳ ಸಮನ್ವಯ ಶ್ಲಾಘ್ಯವಾದುದು. ಭೋಗ ಸುಖದಲ್ಲಿ ಮುಳುಗಿದ್ದು ಕೂಡಲೇ ಭಕ್ತನಾಗಿ ದೈವಾರಾಧಕನಾಗಿ ಯೋಗಿಯಾಗಿ ಪರಿಣಮಿಸುವುದು ಬಾಣನ ಅಗ್ಗಳಿಕೆಯೇ ಆಗಿದೆ.

ಒಂದು ದಿನ ಬಾಣಾಸುರನ ಮಗಳು ಈಶ್ವರನ ದರ್ಶನಕ್ಕಾಗಿ ಹೊರಡುತ್ತಾಳೆ. ಶೃಂಗಾರವಾಗುತ್ತಾಳೆ, ಆಭರಣಗಳಿಂದಲಂಕೃತಳಾಗುತ್ತಾಳೆ :

ಆಪಾದಮಸ್ತಕ ದಿವ್ಯವಿಗ್ರಹದ ಸ್ವ
ರೂಪುವೊಂದೊಂದ ನೋಡಿದೊಡೆ

ಶ್ರೀಪತಿಯಾತ್ಮ ಸಂಭವನ ಪೂಗೋಲ ಸಂ
ತಾಪಕ್ಕೆ ಬೀಚಿದರಾರು ॥

ಆಕೆಯಂತೆಯೇ ಆಕೆಯ ಸಖಿ ಚಿತ್ರಲೇಖೆ (ಕುಂಭಾಂಡನ ಮಗಳು)ಯನ್ನು ರೂಪಿಂಗೆ ಪ್ರತಿರೂಪವೆಂಬಂತೆ ಶೃಂಗರಿಸುತ್ತಾರೆ ಪರಿಚಾರಿಕೆಯರು.

ಆ ಇಬ್ಬರೂ ಹರ್ಮ್ಯದಿಂದಿಳಿದು ಬರುತ್ತಾರೆ. ಪರಿವಾರದೊಡನೆ ಪಲ್ಲಕ್ಕಿಯಲ್ಲಿ ಮೆರವಣಿಗೆಯಂತೆ ಈಶ್ವರನ ಚಾವಡಿಗೆ ಬರುತ್ತಾರೆ. ಒಡ್ಡೋಲಗಗೊಟ್ಟ ಪಾರ್ವತೀ ಪರಮೇಶ್ವರರನ್ನು ನೋಡುತ್ತಾರೆ. ತಾವು ತಂದ ಹೂಗಳಿಂದ ಅರ್ಚಿಸುತ್ತಾ ಉಷೆ ನಾಚುತ್ತಾಳೆ. ಚಿತ್ರಲೇಖೆಯೇ ಈಶ್ವರನ ವರ್ಣನೆಮಾಡುತ್ತ ವಂದಿಸಲು ಹೇಳುತ್ತಾಳೆ. 'ನಿಮ್ಮನ್ನೇನೆಂದು ವರ್ಣಿಸಲಿ' ಎಂದು ನಾಚಿ ಸ್ತುತಿಸುತ್ತಾಳೆ, ಉಷೆ. ಆಗ ಈಶ್ವರನು 'ನೀವು ಬಂದ ಕಾರಣವೇನು' ಎಂದು ಕೇಳುತ್ತಾನೆ :

ನಾಗಭೂಷಣ ನಿಮ್ಮ ದಿವ್ಯದೇಹದೊಳೊಂದು
ಭಾಗ ದೇಹವನೊತ್ತೆಗೊಂಡ
ಶ್ರೀಗೌರೀದೇವಿಯ ಪದಯುಗಳವ ಕಂಡು
ಪೋಗಲ್ಕೆ ಬಂದೆವು ಜೀಯ ॥

ಎಂದು ಸೂಚ್ಯವಾಗಿ ಹೇಳುತ್ತಾರೆ. ಮಾತನಾಡಿದ ಉಷೆಯ ಚೆಂದುಟಿಯನ್ನು ನೋಡಿ ಈಶ್ವರನೇ ಸೋತಂತಾಗುತ್ತಾನೆ. ಕಾತರಿಸದೆ ಮಗಳೆಂದು ನೋಡುತ್ತ ತೊಡೆಯ ಮೇಲಿದ್ದ ಪಾರ್ವತಿಗೆ ತೋರುತ್ತಾನೆ. ಹೊಗಳುತ್ತಾನೆ. "ನಿನ್ನನ್ನು ಬೇಡಿಕೊಳ್ಳಲು ಬಂದವರುಗಳ ಕುಸ್ತರಿಸಿ ಬೆಂಡನ ಬೀಳ್ಕೊಡು" ಎಂದು ಪಾರ್ವತಿಗೆ ಹೇಳಿ ತನ್ನ ತೊಡೆಯಿಂದೆಬ್ಬಿಸುತ್ತಾನೆ.

ಪಾರ್ವತಿ ಬಾಗಿಲಲ್ಲಿ ಯೋಗಿಣಿಯರನ್ನಿಟ್ಟು ಗದ್ದುಗೆಯನ್ನೇರುತ್ತಾಳೆ. ಉಷೆಯನ್ನು ಕೇಳುತ್ತಾಳೆ. 'ನಿನಗರಿಯದದಾವುದು' ಎನ್ನುವ ಉಷೆಯ ಇಂಗಿತವನ್ನು ತಿಳಿದು :

ನಾಳಿನ ವೈಶಾಖ ಶುದ್ಧ ದ್ವಾದಶಿಯ ಛ
ಡಾಳಿಸಿದಿರುಳಿನ ಕಡೆಯ

---

೧. ಇಲ್ಲಿಯ ಯೋಗಭೋಗಗಳ ಸಮನ್ವಯ ರತ್ನಾಕರವರ್ಣಿಗೆ ದಾರಿ ತೋರಿರಬಹುದೆ! ಕೆಲವೇ ಪದ್ಯಗಳಲ್ಲಾದರೂ ಪರಿಣಾಮಕಾರಿಯಾದ ಇಲ್ಲಿಯ ವರ್ಣನೆಯು ವಿಸ್ತಾರವಾಗಿ ರೂಪಿಸಲು ರತ್ನಾಕರವರ್ಣಿಗೆ ಪ್ರಚೋದನೆ ನೀಡಿರಬಹುದೇ?

ತೋಳಿಗೊಪ್ಪುವ ನಲ್ಲ ಕನಸಿನೊಳ್ ಬಹ ರಸ
ದಾಳಿವಿಲ್ಲನ ಸಮರೂಪದ ॥
ಸ್ವಪನದಿ ಬಂದು ಕ್ರೀಡಿಸಿದಾತ ಪ್ರಿಯವಾ
ದಪ ಕೆಲದಿವಸಗಳಿಗೆ
ಉಪಮಿಸಬಾರದ ಪರಮ ಸೌಂದರಚಂದ್ರ
ಲಪನಂಗೆ ವೈವಾಹವಹುದು ॥

ಎನ್ನುತ್ತಾಳೆ. ಉಷೆಯನ್ನು ಸಂತೋಷದಿಂದ ಮುದ್ದಿಡುತ್ತಾಳೆ. ಚಿತ್ರಲೇಖೆಯ ಕೋರಿಕೆಯನ್ನೂ ಕೇಳುತ್ತಾಳೆ. ಆಕೆ ಮಾತ್ರ "ಅಷ್ಟೆ ಸಾಕು" ಎನ್ನುತ್ತಾಳೆ. ಮತ್ತೆ ಈಶ್ವರಿಯು ಈಶ್ವರರಲ್ಲಿಗೆ ಬಂದು ತೊಡೆಯೇರಿ ಬಂದವರನ್ನು ಕಳುಹಲು ಹೇಳುತ್ತಾಳೆ. ಈಶ್ವರನೂ ಉಡುಗೊರೆಯಿತ್ತು ಕಳುಹುತ್ತಾನೆ. (ಬಂದ ಅತಿಥಿಗಳಿಗೆ ಅದರಲ್ಲೂ ಕನ್ಯೆಯರಿಗೆ ಮುತ್ತೈದೆಯರಿಗೆ ಹೊರಡುವಾಗ ಉಡುಗೊರೆಯ ಕೊಟ್ಟು ಕಳುಹುವುದು ಈಗಲೂ ಬಳಕೆಯಲ್ಲಿರುವ ಸಂಪ್ರದಾಯ. ಇದನ್ನು ದೇವ–ದೇವತೆಗಳೂ ಪಾಲಿಸಿಕೊಂಡು ಬಂದಂತೆ ಮಾಡಿದ್ದಾರೆ ಕನಕದಾಸರು ಕಾವ್ಯದುದ್ದಕ್ಕೂ.)

ಪಾರ್ವತಿ ಹೇಳಿದ ದಿನ ಬರುತ್ತದೆ. ಸಿದ್ಧಳಾಗಿರೆಂದು ಚಿತ್ರಲೇಖೆ ಸರಸವಾಡುತ್ತಾಳೆ. ಉಷೆ ನಿದ್ರಿಸುತ್ತಾಳೆ. ಕನಸು ಕಾಣುತ್ತಾಳೆ. ಅದರಲ್ಲಿ

ನಿಜವಾಗಿ ತನ್ನತೋಳವನ ತೋಳುಗಳೆಂದು
ದ್ವಿಜಮುದ್ರಾಂಕಿತಗೆಯ್ದು
ಕುಚಕುಂಭನಿಭವೃತ್ತಸ್ತನ ಪ್ರಾಣಕಾಂತನ
ಭುಜವೆಂದು ನಖದೊಳೊತ್ತಿದಳು ॥

ತನ್ನ ಅಂಗಾಂಗಗಳಲ್ಲೇ ಪುರುಷನನ್ನು ಕಂಡು– "ಕೀಲಿಸಿದೊಡಲ್ಗಳ ರತಿಯಾಡಿ ಮಧ್ಯಾತಕೈವಾಟದಿಂದ ಸೋಲಿಸಿದನು ಕಾಂತ"– ಕಾಮೋದ್ರೇಕದಿಂದೆಚ್ಚೆತ್ತ ಉಷೆ ಇನಿಯನನ್ನು ಕಾಣದಾಗುತ್ತಾಳೆ. ವಿರಹತಾಪವನ್ನನುಭವಿಸುತ್ತಾಳೆ. ಚಿತ್ರಲೇಖೆಯೆಲ್ಲವನ್ನು ತಿಳಿದು :

ಕಂಗೆಡವೇಡೆಲೆ ಸಖಿ ನಿನಗವನೊಳು
ಸಂಗವಪ್ಪಂತೆ ಮಾಡುವೆನು ॥ ಎನ್ನುತ್ತಾಳೆ.

ಎಲ್ಲಾ ಲೋಕವನ್ನು ಸುತ್ತಿ ಚಿತ್ರ ತರುವೆನೆಂದೂ ಅದರಲ್ಲಿ ನಿನ್ನ ಪ್ರಿಯನಾರು ಎಂಬುದನ್ನು ತಿಳುಹೆಂದೂ ಹೇಳುತ್ತಾಳೆ. ಕಾಗದ ತೆಗೆದುಕೊಂಡು ಪಯಣೋದ್ಯುಕ್ತಳಾಗುತ್ತಾಳೆ. ಉಷೆಗೆ ಹಿತವಾದ ಹೇಳುತ್ತಾಳೆ.

ನಿಟ್ಟವಿದಡೆ ಭೂತಭೇತಾಳ ಕೋಟಿಯ
ಮೆಟ್ಟಿ ನೆಗ್ಗಿಸುವ ಯಂತ್ರಗಳ
ಕಟ್ಟಿದಳ್ ತನಗೆ ತತ್ಸಖಿಗೆ ಸಂದೇಹವ
ವಟ್ಟಿದಳಿನಿತಿಲ್ಲದಂತೆ ॥

ಗುರುವನ್ನು ನೆನೆದು ಗಗನಗಾಮಿಯಾದಳು. ತಾನೆಲ್ಲವನ್ನು ಕಾಣುತ್ತಿದ್ದರೂ ಅವರಾರೂ ಕಾಣದಂತೆ ಸಂಚರಿಸುತ್ತಾಳೆ. ಎಲ್ಲ ಲೋಕಗಳನ್ನೂ ಸುತ್ತಿ ದ್ವಾರಕೆಗೆ ಬರುತ್ತಾಳೆ. ಅಲ್ಲಿ ತನ್ನ ಅಸುರಕರ್ಮ ಬಿಟ್ಟು ವೈಷ್ಣವ ಮಂತ್ರದಿಂದ ನಗರವನ್ನು ರಕ್ಷಿಸುವ ಚಕ್ರಕ್ಕೆ ಸುತ್ತುಬಂದು ಒಳಹೋಗುತ್ತಾಳೆ. ಅಲ್ಲಿದ್ದವರನ್ನು ಕಾಣುತ್ತಾಳೆ. ಬಲರಾಮ, ಕೃಷ್ಣ, ಪ್ರದ್ಯುಮ್ನ, ಅನಿರುದ್ಧ ಇವರ ರೂಪಿಗೆ ಮರುಳಾಗುತ್ತಾಳೆ. ಚಿತ್ರಬರೆಯುತ್ತಾಳೆ. ಅನಿರುದ್ಧನನ್ನು ಬರೆದು ಇವನೇ ಇರಬೇಕೆಂದು ಊಹಿಸಿಕೊಳ್ಳುತ್ತಾಳೆ.

ಚಿತ್ರಗಳನ್ನು ತಂದು ವಿವರ ಹೇಳುತ್ತ ತೋರಿಸುತ್ತಾಳೆ. ಕೊನೆಗೆ ಅನಿರುದ್ಧ ನನ್ನು ತೋರಿಸುತ್ತಾಳೆ. ಒಮ್ಮಿಂದೊಮ್ಮೆಗೆ ಉಷೆಗೆ ಮೂರ್ಛೆಬಂದಂತಾಗುತ್ತದೆ. ಎಚ್ಚೆತ್ತು ಯಾರಿವನೆಂದು ಕೇಳುತ್ತಾಳೆ. ಉಷೆಗೆ ಪರಮಾನಂದವಾಗುತ್ತದೆ. ಕತ್ತಲಾಗುತ್ತಲೇ ಆತನನ್ನು ತರಲು ಚಿತ್ರಲೇಖೆ ಸಿದ್ಧಳಾಗುತ್ತಾಳೆ. ದ್ವಾರಕೆಗೆ ಹೋಗಿ ಅನಿರುದ್ಧನಲ್ಲಿಗೆ ಹೋಗುತ್ತಾಳೆ. ನಾರಿಯರು ಆತನನ್ನು ಸುತ್ತುವರಿದಿರುತ್ತಾರೆ. ಅವರನ್ನು ಮೂರ್ಛೆಗೊಳಿಸಿ ಅನಿರುದ್ಧನನ್ನು ಮಾತನಾಡಿಸುತ್ತಾಳೆ. ಆತ "ಹಿಂದಿನ ದಿನ ಕಂಡ ಕನಸ"ನ್ನು ವಿವರಿಸುತ್ತಾನೆ. "ದುಃಖಿಸಬೇಡ. ಆಕೆಯೊಡನೆ ಸೇರಿಸುವೆ, ಏಳು ಹೋಗೋಣ" ಎನ್ನುತ್ತಾಳೆ. ಯಾರು ನೀನೆಂದು ವಿಚಾರಿಸಿದ ಅನಿರುದ್ಧನಿಗೆ ತನ್ನ ಪರಿಚಯ–ಉಷೆಯ ಪರಿಚಯ ಹೇಳಿ "ಅವಳು ನಿನ್ನನ್ನೇ ಹಂಬಲಿಸುತ್ತಿದ್ದಾಳೆ" ಎನ್ನುತ್ತಾಳೆ. ಆಕೆಯ ಚಿತ್ರವನ್ನು ತೋರುತ್ತಾಳೆ. ನಂಬಿದ ಅನಿರುದ್ಧನು ಚಿತ್ರಲೇಖೆಯ ಜತೆ ಪಯಣಕ್ಕೆ ಸಿದ್ಧನಾಗುತ್ತಾಣೆ. ಆತನನ್ನು ಬೆನ್ನಮೇಲೇರಿಸಿಕೊಂಡು ಬರುತ್ತಾಳೆ ; ಉಷೆಗೆ ಒಪ್ಪಿಸುತ್ತಾಳೆ.

ಚಿತ್ರಲೇಖೆಯನ್ನು ಕೃತಜ್ಞತೆಯಿಂದ ಕೊಂಡಾಡಿದ ಅನಿರುದ್ಧ ತಮ್ಮ ವ್ಯವಹಾರ ಯಾರಿಗೂ ತಿಳಿಯದಂತೆ ಮಾಡೆಂದು ಹೇಳಿ ನಮಸ್ಕರಿಸುತ್ತಾನೆ. ಉಷಾನಿರುದ್ಧರು ಸುಖಿಸುತ್ತಾರೆ.

ಒಂದು ದಿನ ಕಲಹಕಲ್ಯಾಣ ನಾರದ ಬರುತ್ತಾನೆ. ಬಾಣನ ಮನೆಯ ಬಾಗಿಲು ಕಾಯವ ಈಶ್ವರನಲ್ಲಿ "ಕಂದಾಯ ಪ್ರಾಪ್ತಿಗೆ ಖಳನಿತ್ತ ಜೀವಿತಸಂದುದೆ ನಿಮಗೆಂದ" ನಗುತ. ಶಿವನನ್ನು ಲೇವಡಿಮಾಡಿ ಅವನ ಅನುಮತಿ ಪಡೆದು

ಬಾಣನಲ್ಲಿಗೆ ಹೋಗಿ "ಶಿವನೂ ನಿನ್ನ ಮಾನಹಾನಿಯನ್ನು ಗಮನಿಸಲಿಲ್ಲವೇ" ಎನ್ನುತ್ತ

ಕೇಳಿದೊಡಾಂಪೇಳುವೆ ಕೇಳು ನಿನಗೀ
ವೇಳೆಯೊಳ್ ತಲೆಗುತ್ತಲಹುದು
ಭಾಳಾಕ್ಷನ ಸದ್ಭಕ್ತನಂದನೆಯತ್ತ । ಸೂಳೆಯಾಗಿರ್ಪುದು ಸುಖವೇ ॥

ಮಗಳು 'ಸೂಳೆಯಾಗಿರ್ಪುದು ಸುಖವೇ' ಎಂದು ಕೆಣಕುತ್ತಾನೆ. ಅನಿರುದ್ಧ ಉಷೆಯಂತಃಪುರ ಹೊಕ್ಕದ್ದನ್ನು ಹೇಳುತ್ತಾನೆ. ಮನಕ್ಕೆ ನಾಟುವಂತೆ ನುಡಿಯುತ್ತಾನೆ. ಸಿಟ್ಟುಗೊಂಡ ಬಾಣನು ಕುಂಭಾಂಡನನ್ನು ಕಳುಹುತ್ತಾನೆ.

ಅನಿರುದ್ಧನನ್ನು ತರುವಲ್ಲಿ, ಅನಿರುದ್ಧನ ಕೃತಜ್ಞತೆಯ ನುಡಿಯಲ್ಲಿ ಈ ವಿಚಾರ ಬಾಣನಿಗೆ ತಿಳಿಂಯುವಲ್ಲಿ ಭಾಗವತ, ಹರಿವಂಶ, ವಿಷ್ಣುಪುರಾಣಗಳೆಲ್ಲೆಲ್ಲಾ ಇರುವ ಕತೆಗಿಂತ ಇಲ್ಲಿ ಭಿನ್ನತೆಯಿದೆ. ಬಾಣಾಸುರನಿಗೆ ನಾರದ ತಿಳಿಸುವುದಿಲ್ಲ. ಅಲ್ಲಿ ಸೇವಕರು ತಿಳಿಸುತ್ತಾರೆ. ಶಿವನೊಡನೆ ನಾರದನ ಈ ಸರಸದ ಮಾತು ಕಟಕಿಯ ನುಡಿ ಅಲ್ಲಿಲ್ಲ. ಇಲ್ಲಿ ನಾರದನ ಪಾತ್ರ ಹೆಚ್ಚು "ಕಲಹ ಕಲ್ಯಾಣ" ಎಂಬುದೇ ನಾರದನಿಗೆ ಬಿರುದು ಕನಕದಾಸರದು.

ಕುಂಭಾಂಡ ಸೈನ್ಯಸಹಿತ ಬಂದು ಅನಿರುದ್ಧನನ್ನು ಕಂಡು ಯುದ್ಧಮಾಡಿ ಸೋಲುತ್ತಾನೆ. ಉಳಿದ ರಕ್ಕಸನೊಬ್ಬ ಬಂದು ಬಾಣನಿಗಿದನ್ನು ತಿಳಿಸುತ್ತಾನೆ. "ಹೆಣ್ಣು ಭೋಗಿಸ ಬಂದವನಲ್ಲ. ಕದನವ ಹಣ್ಣಲೋಸುಗ ಬಂದವನು" ಎನ್ನುತ್ತಾನೆ. ಅದನ್ನು ಕೇಳಿ ಸಿಟ್ಟುಗೊಂಡ ಬಾಣಾಸುರನು ತಾನೇ ಯುದ್ಧಕ್ಕೆ ಹೋಗುತ್ತಾನೆ. ಭೀಕರ ಕದನವಾಗಿ ಕೊನೆಗೂ ಅನಿರುದ್ಧನು ಮೂರ್ಛಿತನಾಗಿ ಬಾಣನ ಕೈಸೆರೆ ಸಿಕ್ಕುತ್ತಾನೆ. ಆತನನ್ನು ಅಸುರ ಕೊಲ್ಲಲು ಬಯಸಲಿಲ್ಲ. ವಿವೇಚಿಸುತ್ತಾನೆ :

ಕೊಂದಡೆ ಮಗಳೀಗೆ ವೈಧವ್ಯವಹುದೆಂದು
ಕಂದರ್ಪನಾತ್ಮಸಂಭವನ
ಸುಂದರಮಯ ದಿವ್ಯದೇಹ ಕರ್ಗೋಲಿಂದೆ
ನೊಂದಿರೆ ಮೆಯ್ದಡವಿದನು ॥

ಉಷೆಯು ಪತಿ ಸೆರೆಸಿಕ್ಕದ್ದನ್ನು ಕಂಡು ಮೂರ್ಛಿತಳಾಗುತ್ತಾಳೆ. ಅವಳಿಗೂ ಹೇಳಿಕಳಿಸುತ್ತಾನೆ. "ಅನಿರುದ್ಧನನ್ನು ಕೊಲ್ಲುವುದಿಲ್ಲ" ಎಂದು, ಅನಿರುದ್ಧನನ್ನು ಹಿಡಿತಂದು ಸಿಂಹಾಸನದಲ್ಲಿ ಕುಳಿತಿದ್ದ ನಾರದನಿಗೆ ತೋರಿ "ಏನುಮಾಡಬೇಕು" ಎಂದು ಕೇಳುತ್ತಾನೆ. ನಾರದ ಶಿವನನ್ನು ಕೇಳುವಂತೆ ಹೇಳುತ್ತಾನೆ. ಶಿವನನ್ನು ಕೇಳಿದಾಗ :

ಆಲೋಚನೆಗೆಯ್ಯಲೇಕೆ ಸಾಸಿರ
ತೋಳಬಲ್ಪೊಳಗೆನ್ನ ಭಜಿಸಿ
ಕಾಳೆಗ ಬೇಕೆನೆ ಬಂದುದು ಸಮರ ಸ
ಮ್ಮೇಳವೆಂದನು ಶಿವನಗುತೆ ॥

ಬಾಣಾಸುರನೂ ಕೆಚ್ಚಿನಿಂದ "ಇವನನ್ನು ಬಂಧಿಸುತ್ತೇನೆ. ಇವನಿಗಾಗಿ ಬಂದ ನಾರಾಯಣನಲ್ಲಿ ಯುದ್ಧಮಾಡುವೆನೆಂದಾಗ" ಶಿವನು

ಭಕ್ತಿಯೊಳು ಎನ್ನನಾರಾಧಿಸಿ ನಾಲ್ವಗೆ
ಮುಕ್ತಿಯಪಡೆದವನಲ್ಲ
ಶಕ್ತಿಯೊಳ್ ಕಾಳಗಬೇಕೆಂಬ ಸಮರ ಸ
ದುಕ್ತಿಯ ನೀ ಬಲ್ಲೆ ಮಗನೆ ॥ –ಎನ್ನುತ್ತಾನೆ.

ಕೊನೆಗೂ ಬಾಣನು "ಗೋಮಿನೀವರನೊಳು ಕಡಿದಾಡಿ ಕೈಲಾಸ ಭೂಮಿಗೆ ತಾಬಪ್ಪೆನೆನ್ನುತ್ತಾನೆ." ಶಿವನು ಅಲ್ಲಿಂದ ಹೊರಟುಹೋಗುತ್ತಾನೆ.

ಈ ಸನ್ನಿವೇಶವು ಪುರಾಣಗಳಲ್ಲಿ ಈ ಬಗೆಯಲ್ಲಿಲ್ಲ. ಬಾಣಾಸುರನನ್ನು ತಂದು ಬಂಧಿಸಿದ್ದು–ಶಿವನ ಮಾತು ಇವು ಕನಕದಾಸರ ಸೃಷ್ಟಿ. ತನ್ನ ಅಹಂಕಾರದಿಂದಲೇ ಹಾಳಾಗುತ್ತಿರುವ ಬಾಣನಿಗೆ ಈಶ್ವರನೂ ಜವಾಬ್ದಾರನಾಗಲಾರ. ಇಲ್ಲಿಯ ನಿರೂಪಣೆ ಔಚಿತ್ಯಪೂರ್ಣವೆನಿಸುತ್ತದೆ. ನಾರದ ಕೃಷ್ಣನಲ್ಲಿಗೆ ಬಂದು ಎಲ್ಲವನ್ನೂ ಹೇಳುತ್ತಾನೆ. ಕೃಷ್ಣ ಗರುಡನನ್ನು ಕರೆಸಿಕೊಳ್ಳುತ್ತಾನೆ. ಬಲರಾಮ ಪ್ರದ್ಯುಮ್ನ ಸಾತ್ಯಕಿ ಮೊದಲಾಗಿ ಶೋಣಿತಪುರಕ್ಕೆ ಸೈನ್ಯಸಹಿತ ಬರುತ್ತಾರೆ. ಕೃಷ್ಣನು ನಾರದನನ್ನು ಕರೆದು ಶಿವನಲ್ಲಿ ಅನಿರುದ್ಧನನ್ನು ಒಪ್ಪಿಸಲು ಹೇಳುವಂತೆ ಹೇಳಿಕಳುಹುತ್ತಾನೆ. ಶಿವನು ಎಲ್ಲವನ್ನೂ ಮನದಲ್ಲಿ ಭಾವಿಸಿ "ಆತನಿಗೆ ಹೇಳಿ ಕಳುಹುವುದರಿಂದೇನೂ ಲಾಭವಿಲ್ಲ. ಆದರೂ ನೋಡುತ್ತೇನೆ" ಎಂದು ನಾರದನಿಗೆ ಹೇಳಿ ಜನರನ್ನಟ್ಟುತ್ತಾನೆ. ಬಾಣಾಸುರನಿಗೆ ಇದರಿಂದ ಸಿಟ್ಟು ಬರುತ್ತದೆ. 'ಅವನು ಕುಂಭಾಂಡನಲ್ಲಿ ದೂರುತ್ತಾನೆ. ಕುಂಭಾಂಡನೂ ಬಾಣಾಸುರನಿಗೆ ಹಿತವಚನಗಳನ್ನು ಹೇಳುತ್ತಾನೆ. ಯುದ್ಧ ಬೇಡವೆನ್ನುತ್ತಾನೆ. ಬಾಣಾಸುರ ಒಪ್ಪುವುದಿಲ್ಲ. ಯುದ್ಧ ಸಿದ್ಧವಾಗುತ್ತದೆ. ಈ ಸನ್ನಿವೇಶವೂ ಪುರಾಣಗಳ ಕಥೆಯಂತಿಲ್ಲ. ಶಿವಪುರಾಣದಲ್ಲಿ ಬರುವ ಶಿವನ ಅಸಹಾಯಕತೆಯನ್ನಿಲ್ಲಿ ಕನಕದಾಸರು ಬಂಧುರವಾಗಿ ಬಳಸಿಕೊಂಡಿದ್ದಾರೆ.

ಚಂದ್ರಶೇಖರನು ಕೃಷ್ಣನನ್ನು ಕೀರ್ತಿಸುತ್ತಾನೆ. ಇದನ್ನು ಕಂಡ ಷಣ್ಮುಖನೇ ಮೊದಲಾದವರು ಪಂಥದಿಂದ ಯುದ್ಧಕ್ಕೆ ಬರುತ್ತಾರೆ. ಷಣ್ಮುಖನಿಗೂ ಕೃಷ್ಣನಿಗೂ

ಯುದ್ಧವಾಗುತ್ತದೆ. ಕೃಷ್ಣ ಚಕ್ರ ಹಿಡಿಯುವಾಗ ಕಾಳಿಯು ಬೆತ್ತಲೆಯಾಗಿ ಬಂದು ನಿಲ್ಲುತ್ತಾಳೆ. ಕೃಷ್ಣ ಮುಖ ತಿರುಗಿಸಿದಾಗ ಕೃಷ್ಣನಲ್ಲಿ ಯುದ್ಧಬೇಡವೆಂದು ಷಡಾನನ ಹಿಂದಿರುಗುತ್ತಾನೆ. ಷಣ್ಮುಖನು ಹರನಲ್ಲಿಗೇ ಹೋಗಿ ಹೇಳುತ್ತಾನೆ. ಶಿವನು ಕೇಳುತ್ತ ನಿಂತಾಗ ನವಿಲು–ಗರುಡ ನಂದಿಗೆ ಯುದ್ಧವಾಗುತ್ತದೆ. ಗಣಪತಿ ಬಲರಾಮರಿಗೆ ಕಾಳಗ ಸಮನಿಸುತ್ತದೆ. ಇಬ್ಬರೂ ಬಲಾಢ್ಯರು. ಸೋಲದ ಯುದ್ಧ ಮಾಡುತ್ತಾರೆ, ಶಿವನೇ ಕೊನೆಗೆ ಗಣೇಶನನ್ನು ಹಿಂದಕ್ಕೆ ಕರೆಸಿಕೊಳ್ಳುತ್ತಾನೆ.

ಕೃಷ್ಣರಾಯನಿಗೂ ಪರಮೇಶ್ವರನಿಗೂ ಘೋರಯುದ್ಧವಾಗುತ್ತದೆ. ಕೊನೆಯ ಹಂತದಲ್ಲಿ ಶಿವ ತ್ರಿಶೂಲವನ್ನು ಕೃಷ್ಣ ಚಕ್ರವನ್ನು ಹಿಡಿಯುತ್ತಾರೆ. ಆಗ

ಶಿವ ತ್ರಿಶೂಲದೊಳಿಡಲುಟಿದವರಿಲ್ಲ ಕೇ
ಶವ ಚಕ್ರವಾರ ಲೆಕ್ಕಿಸದು
ಹವಣಲ್ಲ ನಿಲ್ಲು ನಿಲ್ಲೆನುತೀರ್ವರಿಗೆ ಸ
ತ್ಯವೇಟ್ಟು ದಾಕಾಶವಾಣಿ ॥

ಹೂಮಳೆಯಾಗುತ್ತದೆ. ಶಿವನೂ ಹಿಂತೆಗೆದು ಕೈಲಾಸಕ್ಕೆ ಹೋಗುತ್ತಾನೆ. ಯುದ್ಧದಲ್ಲಿ ಶಿವನಾಗಲೀ ಶಿವನಕಡೆಯವರಾಗಲೀ ಸೋಲುವುದಿಲ್ಲ. ಸತ್ಯಕ್ಕೆ ಕಟ್ಟುಬಿದ್ದು ಹಿಂದೆಗೆಯುತ್ತಾರೆ. ವಿಷ್ಣುವಿಗೆ ಭಕ್ತರಾದರೂ ಕನಕದಾಸರು ಇಲ್ಲಿಯೂ ಹರಿಹರ ಐಕ್ಯವನ್ನು ಪ್ರತಿಪಾದಿಸುತ್ತಾರೆ.

ಬಾಣಾಸುರನಿಗೂ ಕೃಷ್ಣನಿಗೂ ಯುದ್ಧವಾಗುತ್ತದೆ. ಕುಂಭಾಂಡಾದಿಗಳು ಸೋಲುತ್ತಾರೆ. ಕೃಷ್ಣ ಚಕ್ರ ಹಿಡಿಯುತ್ತಾನೆ. ದಿಟ್ಟತನದಿಂದ ಇದಿರುನಿಂತ ಬಾಣನನ್ನು ಹೊಗಳುತ್ತಾನೆ. ಚಕ್ರವು ೯೯೮ ಕೈಗಳನ್ನು ಕತ್ತರಿಸಿ ಹಿಂದೆ ಬರುತ್ತದೆ. ಉಳಿದೆರಡನ್ನೂ ಕತ್ತರಿಸುವೆನೆಂದು ಮತ್ತೊಮ್ಮೆ ಚಕ್ರವನ್ನು ತುಡುಕಿದಾಗ ಮುಕ್ಕಣ್ಣನು ಇಬ್ಬರ ಮಧ್ಯೆ ಬಂದು ನಿಲ್ಲುತ್ತಾನೆ :

ಮಾನವರೂಪಿನೊಳುದಿಸಿದ ಪರಬೊಮ್ಮ
ನೀನೆಂದು ನೋಡಿ ಭಾವಿಸದೆ
ತಾನತಿ ಮಥನವ ಮಾಡಲುಜ್ಜುಗವೆತ್ತ
ದಾನವೇಶನ ಬಿಡು ನನಗೆ ॥ –ಎನ್ನುತ್ತಾನೆ.

ಕೃಷ್ಣನು ಹರನ ಮಾತಿನಂತೆ ಯುದ್ಧ ನಿಲ್ಲಿಸುತ್ತಾನೆ. ಈಶ್ವರನು ತನ್ನ ಭಕ್ತನ ಶೌರ್ಯಕ್ಕೆ ಮೆಚ್ಚಿ ಆತನ ಮೈಯ ರಕ್ತವನ್ನೊರಸಿ ಸಂತೈಸಿ :

ಕೇಶವನೆಡೆಗೆನ್ನೆಡೆಗಾವನೋರ್ವನು
ದ್ವೇಷಬುದ್ಧಿಯ ಮಾಡಿದೊಡೆ

ದೋಷ ಸಂಭವಿಸುವುದೆಂದು ಧೂರ್ಜಟಿ ದೈ
ತ್ಯೇಶಗೆ ವಿಸ್ತರಿಸಿದನು ॥

ಉಷೆಯನ್ನು ಅನಿರುದ್ಧನಿಗೆ ಮದುವೆಮಾಡಿಕೊಡೆಂದು ಕುಂಭಾಂಡನಿಗೆ ತಿಳಿಸಿದ ರುದ್ರನು "ಶೋಣಿತಪುರವನ್ನು ಕುಂಭಾಂಡನಿಂದ ಸರಿಯಾಗಿ ನೋಡಿಕೊಳ್ಳುವಂತೆ ಮಾಡು" ಎಂದು ಕೃಷ್ಣನಲ್ಲಿ ನುಡಿಯುತ್ತಾನೆ. ಇದು ಒಪ್ಪಿಗೆಯೇ ಬಲಿಸುತನಿಗೆ ಎಂದು ಕೃಷ್ಣ ಕೇಳಿದಾಗ "ನಾನು ತಪ್ಪಿದೆ. ನನ್ನ ತಂದೆ ತಿಳಿದಿದ್ದ ನಿನ್ನ ಮಹಿಮೆಯನ್ನು ನಾನರಿಯಲಿಲ್ಲ. ತಂದೆ ಭೂಮಿಯನ್ನೇ ನಿನ್ನಡಿಗೆ ಕೊಟ್ಟಿರುವಾಗ ಅವನ ಮಗನಾದ ನಾನು ನಿನ್ನ ಮೊಮ್ಮಗನಿಗೆ ಮಗಳನ್ನು ಕೊಡಲಾರೆನೇ ? ಈಶ್ವರ ಮತ್ತು ನಿಮ್ಮಲ್ಲಿ ಭೇದವಿಲ್ಲವೆಂಬುದನ್ನರಿತೆ

ಬೋಧಾರುಹನಾದ ಪರಮೇಶ ನಿಮ್ಮೊಳು
ಭೇದವಿಲ್ಲೆಂದು ಸೂಚಿಸಲು
ರೋದನ ತೀರ್ಕಣಿಸಿತು ನಿಮ್ಮ ಮೊಮ್ಮಗ
ಮಾಧವ ಕೊಟ್ಟೆ ಮತ್ಸುತೆಯ ॥
ಇಂತೀಬಿನ್ನಹಂಗಳ ನೀನೆನ್ನಯ
ಮಂತ್ರಿಯಿಂದೊಪ್ಪುಗೊಳ್ಳೆನುತೆ
ದಂತಿಚರ್ಮಾಂಬರಧರ ಸಮಕ್ಷದಲಿ ನಿ
ರ್ಭ್ರಾಂತಿಯಿಂ ಬೀಳ್ಕೊಂಡ ಹರಿಯ ॥

ಮಂತ್ರಿಯಿಂದ ಮುಂದಿನ ಕೆಲಸವೆಂದು ತಿಳಿಸಿದ ಬಾಣಾಸುರ. ಹರಿ–ಹರರು ಮಾತನಾಡಿಕೊಳ್ಳುತ್ತಾರಂತೆ ಮತ್ತೆ :

ಅರಳಿದ ಬೆಳ್ದಾವರೆಗಣ್ಣನಕೂಡೆ
ಮರಳಿ ಧೂರ್ಜಟೆ ಮಾತನಾಡಿ
ಇರಲುರಿಗಣ್ಣವ ರಹಿತ ಬಾಹನಕೊಂಡು
ತೆರಳಿದ ಕೈಲಾಸಪುರಿಗೆ ॥

ಈ ಹರಿಹರ ಸಮಾನತೆಯ ಭಾವವನ್ನು ಇಷ್ಟೊಂದು ಸುಂದರವಾಗಿ ಯಾವ ಪುರಾಣಗಳೂ ಸಾರುವುದಿಲ್ಲ. ಸಮಾನಸ್ಕಂಧರಂತ ವರ್ತಿಸುತ್ತಾರೆ– ಹರಿಹರರು ಇಲ್ಲಿ ಈ ಸನ್ನಿವೇಶ ಒಂದು ಸೊಗಸಾದ ಅಲೌಕಿಕ ಅನುಭವವನ್ನು ನಮ್ಮ ಮುಂದಿಡುತ್ತದೆ. ಆದರೂ ಸಹಜತೆಯ ಪರಾಕಾಷ್ಠತೆಯನ್ನು ಸಾರುತ್ತದೆ.

ವಿಷ್ಣುಪುರಾಣದಲ್ಲೇನೋ ಅಜ್ಞಾನಿಗಳೂ ಹೀಗೆ ಭೇದವೆಣಿಸುತ್ತಾರೆಂದು ಹೇಳಿದರೂ ಶಿವನ ಕಡೆಯ ಸೋಲೇ ಅಲ್ಲಿ ವರ್ಣಿಸಲ್ಪಟ್ಟಿದೆ. ಹರಿವಂಶದಲ್ಲಿ

ಬ್ರಹ್ಮನಿಗೆ ಈ ಸತ್ಯ ತೋರುತ್ತದೆ. ಆದರೆ ಇಲ್ಲಿಯ ಭಾವವೇ ಬೇರೆ–ಹಾಗೂ ಸುಂದರ.

ಪುರಾಣಗಳಲ್ಲಿ ಸೂಚನೆ ಮಾತ್ರ ಇರುವ ಮುಂದಿನ ಕತೆಯೂ ಇಲ್ಲಿ ರಮ್ಯವಾಗಿದೆ. ಕೃಷ್ಣಸಂಪತ್ತನ್ನು ತುಂಬಿಕೊಂಡು ದ್ವಾರಕೆಗೆ ಹೋಗುವುದಿಲ್ಲ. ಅದರ ಮೊದಲು ಹರನ ಅಪೇಕ್ಷೆಯಂತೆ ರಾಜ್ಯ ವ್ಯವಸ್ಥೆಯನ್ನು ಮಾಡಬೇಕಲ್ಲ.

ನಾರದ ಬಂದು ಕೃಷ್ಣನನ್ನು ಸ್ತುತಿಸುತ್ತಾನೆ. ಕುಂಭಾಂಡನನ್ನು ಕರೆತಂದು ಕೃಷ್ಣನ ಕಾಲಿಗೆರಗಿಸುತ್ತಾನೆ.

ಯೋಚಿಸಿ ಬುದ್ಧಿ ಪೇಳ್ದೆಡೆ ಕೇಳದ ಮೂರ್ಖ  
ಭೂಚಕ್ರವರ್ತಿಯ ತೋಳ್ಗಡಿದು  
ನಾಚಿಸಬೇಡ ನಮ್ಮವನೆಂದು ಮೌಳಿಯ  
ಚಾಚಿದ ಕೃಷ್ಣನಂಘ್ರಿಯೊಳು ॥

ಹೀಗೆ ಕಾಲ್ಗೆರಗಿದ ಕುಂಭಾಂಡನನ್ನು ಮೇಲೆತ್ತುತ್ತಾನೆ ಕೃಷ್ಣ. ಕುಂಭಾಂಡ ಕೃಷ್ಣನನ್ನು ಹೊಗಳುತ್ತ ಸ್ತುತಿಸುತ್ತಾನೆ.

ಕಾಶಿಯಸ್ತಲದಲ್ಲಿ ಶಿವಸಮಸ್ತರಿಗುಪ  
ದೇಶಿಸುವುದು ನಿನ್ನನಾಮ  
ದೋಷಿಗಳದನರಿಯದೆ ಕೆಟ್ಟರು ಪುಣ್ಯ  
ರಾಶಿ ನಾರಾಯಣ ಜಯತು ॥

ಹೀಗೆ ಜಯಕಾರ ಮಾಡುತ್ತಾರೆ.

ದೇಶದೊಳನ್ಯರ ವರ ಜಲಪಿಯಂತೆ  
ನಾಶವಹುದು ಕೊಡಲೊಡನೆ  
ದಾಸೋತ್ತಮರಿಂಗೆ ನೀ ಕೊಟ್ಟ ವರ ತಾಮ್ರ  
ಶಾಸನವಹುದು ನನ್ನೊಡೆಯ

ಎನ್ನುತ್ತಾನೆ

(ಇಲ್ಲಿ ವಿಜಯನಗರದ ಕೃಷ್ಣದೇವರಾಯನ ಶಾಸನದ ವರ್ಣನೆಯೇ ತೋರುವುದಲ್ಲವೇ? ಕನಕದಾಸರಿಗೆ ಕೃಷ್ಣದೇವರಾಯನಿತ್ತ ವರ ತಾಮ್ರಶಾಸನವಾಗದಿರುವುದೇ?)

ಕೊನೆಗೆ ಪುರವ ನೋಡಲು ದಯಮಾಡಿಸೆನ್ನುತ್ತಾನೆ ಕುಂಭಾಂಡ ಕೃಷ್ಣನ ದಕ್ಕೆ– "ಬಂದೇನು ಮಾಡಲಿ–ಬಲರಾಮಾದಿಗಳೊಡನೆ ಹೋಗಿ ಕುಮಾರನ ಕರೆದು ತಾ' ಎನ್ನುತ್ತಾನೆ.

ಅವರು ಬರುತ್ತಾರೆ :

ಭೋಂಕನೆ ಹೊಕ್ಕರು ಸೆಱೆವನೆಯೊಳು ಹೊನ್ನ
ಸಂಕಲೆವಡೆದ ಬಾಲಕನ
ಸಂಕಟವನು ಕಂಡು ಬಲರಾಮದೇವ ಮೀ
ನಾಂಕ ದುಃಖದೊಳಪ್ಪಿದರು ॥

ಅನಿರುದ್ಧನನ್ನು ನಾಗಪಾಶದಿಂದ ಬಂಧಿಸಿದ್ದಲ್ಲ. ಹೊನ್ನ ಸಂಕಲೆಯಿಂದ ಬಂಧಿಸಿದ್ದರು. ವಿಜಯನಗರದ ಸೆರೆಮನೆಯ ಚಿತ್ರವಿದೆಂದು ತೋರುತ್ತದೆ.

ವೈಭವದಿಂದ ಅನಿರುದ್ಧ–ಉಷೆಯರನ್ನು ಮರವಣಿಗೆಯಲ್ಲಿ ಕರೆತರುತ್ತಾರೆ.

ಪುಟಿದೊಳೆದೊಪ್ಪವನಿಕ್ಕಿದ ಹೊನ್ನ ಪು
ತ್ತಟಿಯಂತೆ ಮದುವಕ್ಕಳೊಲಿದು
ಗಳಿಲನೆ ಬಂದು ಶ್ರೀಕೃಷ್ಣದೇವರಾಯನ ಪಾದ
ನಳಿನಕ್ಕೆ ಶಿರವ ಚಾಚಿದರು ॥

(ಇಲ್ಲಿ ಶ್ರೀಕೃಷ್ಣದೇವರಾಯನ ಪಾದ ಎಂಬುದನ್ನು ಗಮನಿಸಬೇಕು.)

ಚಿತ್ರಲೇಖೆ ಕೃಷ್ಣನನ್ನು ಸ್ತುತಿಸುತ್ತಾಳೆ. ಅವಳು ಮಾಡಿದ ಒಳ್ಳೆಯ ಕಾರ್ಯವನ್ನು ಕೃಷ್ಣನೂ ಹೊಗಳುತ್ತಾನೆ. "ಉಷಾನಿರುದ್ಧರ ಕೂಟ ನಿನ್ನಿಂದಾಯಿತೆ"ಂದು ಶ್ಲಾಘಿಸುತ್ತಾನೆ. ಕುಂಭಾಂಡನು ಕಾಣಿಕೆಯನ್ನು ತಂದೊಪ್ಪಿಸುತ್ತಾನೆ. ಗರುಡನ ವಿಶಾಲವಾದ ಬೆನ್ನಮೇಲೆ ಬಲರಾಮ ಮೊದಲಾದವರು ಕುಳಿತುಕೊಳ್ಳುತ್ತಾರೆ. ಕಾಣಿಕೆಯ ವಸ್ತುಗಳು, ವಾಹನಗಳು, ಸ್ತ್ರೀಸಮೂಹ ಎಲ್ಲವನ್ನೂ ಅದರಲ್ಲಿರಿಸುತ್ತಾರೆ. ಗರುಡನು ಎಲ್ಲವನ್ನೂ ಹೊತ್ತುತಂದು ಗೋಮತಿಯ ತೀರದಲ್ಲಿ ಇಳಿಸುತ್ತಾನೆ.

ಸತ್ಯಭಾಮೆ ರುಕ್ಮಿಣೀ ಮೊದಲಾದ ಹೆಂಗಳೆಯರು ಕೃಷ್ಣನನ್ನು ಕಂಡು ಜಯಕಾರ ಮಾಡುತ್ತಾರೆ. ಆರತಿ ಎತ್ತುತ್ತಾರೆ. ತಮ್ಮ ಸಂತೋಷವನ್ನು ತೋಡಿಕೊಳ್ಳುತ್ತಾರೆ.

ನೋಡಿದರಾಗಮೋಕ್ತಿಯಲಿ ಬಾಸಿಂಗವ
ಸೂಡಿದರ್ ತೊಂಡಿಲ ತಂದು
ಪಾಡಿದರ್ ಪರಮಶೋಭನದಿಂದ ಮದುವೆಯ
ಮಾಡಿದರ್ ಮದುವೆಯ ಮಂಟಪದೆ ॥

ವಧೂವರರು ಚಿತ್ರಲೇಖೆಯನ್ನು ಮೊದಲುಗೊಂಡು ಎಲ್ಲ ಹಿರಿಯ ಹೆಂಗಸರಿಗೆ ವಂದಿಸುತ್ತಾರೆ. ಅವಳು ಸೊಸೆಯೊಡಗೂಡಿ ಕೃಷ್ಣನಂಘ್ರಿಗೆ

ನಮಿಸುತ್ತಾಳೆ. ನಾರದಾದಿಗಳಿಗೂ ನಮಿಸಿ ಆರೋಗಣೆಗೆ ದಯಮಾಡಿಸಲು ಬಿನ್ನವಿಸುತ್ತಾಳೆ, ಕೃಷ್ಣನು ಎಲ್ಲರೊಡನೆ ಆರೋಗಣೆ ಮಾಡುತ್ತಾನೆ. ಬಳಿಕ ಗಂಧಸಂಯುಕ್ತ ತಾಂಬೂಲವನೊಲಿದು ಗೋವಿಂಪಾಲಿಸಿದನೆಲ್ಲರಿಗೆ. (ಹಿರಿಯರಿಗೆ ಮದುಮಕ್ಕಳು ನಮಿಸುವುದು ಬೆಳೆದು ಬಂದ ಹಾಗೂ ಇಂದೂ ರೂಢಿಯಲ್ಲಿರುವ ಸಂಪ್ರದಾಯ).

ಭೋಜ್ಯವಸ್ತುಗಳೊಳು ಮುಖ್ಯವಾದುದು ಲಲಿ
ತಾಜ್ಯನಿರ್ಜರ ಜನರೊಳಗೆ
ಸೋಜ್ಯಸುಖಾಢ್ಯಪಾಲಕ ಕೃಷ್ಣಸುಖಸಾ
ಮ್ರಾಜ್ಯವನಾಳಿದ ಮುದದೆ ॥

ಕೊನೆಗೂ ಕೃಷ್ಣದೇವರಾಯನದೇ ವೈಭವ. ಅವನ ವಿಜಯದ ತುತ್ತೂರಿ. ಶತ್ರುರಾಜರನ್ನು ಜಯಿಸಿಬಂದ ವೀರಚಕ್ರವರ್ತಿಗೆ ನೀಡುವ ವೈಭವೋಪೇತ ಸ್ವಾಗತ ಉಪಚಾರವೇ ಇಲ್ಲಿ ವರ್ಣಿತವಾಗಿದೆ ಇದಕ್ಕೆ ಆಕರ ಪುರಾಣಗಳಲ್ಲ.

ಗೀರ್ವಾಣಭಾಷೆ ಕನ್ನಡದಿ ಹೇಳಿದ ಕನಕದಾಸರ ಮೋಹನತರಂಗಿಣಿಗೆ ಆಕರಗಳು ಪುರಾಣಗಳು ಮಾತ್ರವಲ್ಲ. ಜನಜೀವನ, ಪ್ರಚಲಿತ ಪರಿಸ್ಥಿತಿ ಕಥೆಯನ್ನು ಆಮೂಲಾಗ್ರವಾಗಿ ಓದಿದಾಗ ನಾವು ಯಾವುದೋ ಲೋಕದಲ್ಲಿದ್ದಂತೆ ಭಾವಿಸುವುದಿಲ್ಲ, ನಮ್ಮ ಸುತ್ತಮುತ್ತಲ ಜಗತ್ತಿನಲ್ಲಿ ನಿಂತುನೋಡುತ್ತಿದ್ದೇವೆ ಎಂಬ ಭಾವನೆಯನ್ನೇ ಮೂಡಿಸಿಕೊಳ್ಳುತ್ತೇವೆ.

## ಗ್ರಂಥಋಣ

1. ಸ್ಕಂದಪುರಾಣ 2. ಮಹಾಭಾರತ 3. ಭಾಗವತ 4. ವಿಷ್ಣು ಪುರಾಣಂ 5. ಹರಿವಂಶ 6. ಶಿವಮಹಾಪುರಾಣಂ 7. ಕುಮಾರಸಂಭವ 8. ಗಿರಿಜಾಕಲ್ಯಾಣ ಪ್ರಬಂಧಂ 9. ಜಗನ್ನಾಥವಿಜಯಂ

# ‘ಮೋಹನತರಂಗಿಣಿ’–ಪೌರ್ವಾತ್ಯ ಮತ್ತು ಪಾಶ್ಚಾತ್ಯ ಮಹಾಕಾವ್ಯ ಲಕ್ಷಣಗಳ ದೃಷ್ಟಿಯಲ್ಲಿ

**ಡಾ. ಪ್ರಧಾನ್ ಗುರುದತ್ತ**

ಸಂತವರೇಣ್ಯ ಶ್ರೀ ಕನಕದಾಸರ ‘ಮೋಹನತರಂಗಿಣಿ’ ೪೨ ಸಂಧಿಗಳನ್ನು ೨೬೯೯ ಪದ್ಯಗಳನ್ನು ಒಳಗೊಂಡಿರುವ ಬೃಹತ್‌ಕಾವ್ಯ. “ಪಾಪಹರ ಕೃಷ್ಣಚರಿತೆ’[1]ಯ ಅಂಗವಾಗಿ “ಪೂಸರದಹನ ಕಾಮೋತ್ಪತ್ತಿ ವರಶಂಬ । ರಾಸುರವಧೆ ಕಂತುಸುತನ ॥ ಭಾಸುರಲೀಲೆ ಬಾಣನ ಗೆದ್ದ ಜಯಲ । ಲಕ್ಷ್ಮೀಶನ ಕೃತಿಯು ವಿಸ್ತರಿಪೆ॥”[2] ಎಂಬುದಾಗಿ ತಮ್ಮ ಈ ಬೃಹತ್‌ಕಾವ್ಯದ ಧ್ಯೇಯವೇನೆಂಬುದನ್ನು ಕನಕದಾಸರು ಮೊದಲಿಗೇ ಸ್ಪಷ್ಟಪಡಿಸಿದ್ದಾರೆ. ಈ ಧ್ಯೇಯವನ್ನು ಮಹಾಕಾವ್ಯದ ಲಕ್ಷಣಗಳಿಗೆ ಅನುಸಾರವಾಗಿ ಸಾಧಿಸಲು ಅವರಿಗೆ ಎಷ್ಟರಮಟ್ಟಿಗೆ ಸಾಧ್ಯವಾಗಿದೆ ಎಂಬುದನ್ನೀಗ ಪರಿಶೀಲಿಸಬಹುದು.

“ಮಹಾಕಾವ್ಯದ ಕಲೆಯನ್ನು ಸೀಳಿ ನೋಡುವುದು ಕೊಲೆ”[3]ಗೆ ಸಮಾನವಾದ ಕಾರ್ಯ ಎಂದು ಕೆಲವು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ ಎಂಬುದು ನಿಜವಾದರೂ ಮಹಾಕಾವ್ಯದ ಮಾನದಂಡಗಳು ಅಥವಾ ಲಕ್ಷಣಗಳು ಯಾವುವು ಎಂಬುದನ್ನು ವಿಶ್ಲೇಷಿಸುವುದು ಕಾವ್ಯಮೀಮಾಂಸೆಯ ಅನಿವಾರ್ಯ ಪ್ರಕ್ರಿಯೆಯೇ ಆಗಿದೆ. ಭಾರತೀಯ ಮತ್ತು ಪಾಶ್ಚಾತ್ಯ ಆಲಂಕಾರಿಕರು, ಸೌಂದರ್ಯಮೀಮಾಂಸಕರು ಈ ದಿಕ್ಕಿನಲ್ಲಿ ತಮ್ಮ ಚಿಂತನ ಮತ್ತು ಆಲೋಚನೆಗಳನ್ನು ಮುಂದಿರಿಸಿದ್ದಾರೆ. ಹೀಗೆ ಮಾಡುವಾಗ ತಮ್ಮ ತಮ್ಮ ನಾಡಿನ ಸಾಂಸ್ಕೃತಿಕ ಆಶೋತ್ತರಗಳು ಮತ್ತು ಧ್ಯೇಯೋದ್ದೇಶಗಳು ಅವರ

---

1. ‘ಮೋಹನತರಂಗಿಣಿ’ (ಡಾ. ಎಸ್.ಎಸ್. ಕೋತಿನ ಅವರ ಗದ್ಯಾನುವಾದೊಂದಿಗೆ)’ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೮ ; ೧೯೮೪ ; ಪು. ೩೧, (೧–೪೦)
2. ಅದೇ : ಪು. ೨೯ (೧–೩೨)
3. “It is murder to dissect the art of an epic.”

ಮನಸ್ಸಿನಲ್ಲಿದ್ದುದರ ಜೊತೆಗೆ, ತಮ್ಮ ಕಾಲಕ್ಕಾಗಲೇ ಲಭ್ಯವಾಗಿದ್ದ ಉದ್ಧಕೃತಿಗಳೂ ಅವರ ಕಣ್ಣಮುಂದೆ ಇದ್ದುವು. ಹೀಗಾಗಿ, ಅವರು ನಿರೂಪಿಸಿರುವ ಲಕ್ಷಣಗಳು ಈ ಎಲ್ಲ ಅಂಶಗಳ ಪ್ರತಿಬಿಂಬವೇ ಆಗಿವೆ. ಒಮ್ಮೆ ಹೀಗೆ ಈ ಲಕ್ಷಣಗಳನ್ನು ಸಮಗ್ರವಾಗಿಯೋ ಅಸಮಗ್ರವಾಗಿಯೋ ರೂಪಿಸಿದ ಬಳಿಕ, ಮುಂದೆ ಬಂದ ಕವಿಗಳು ಅವನ್ನು ಅನುಸರಿಸಿ ಕಾವ್ಯ ರಚನೆಗೆ, ತೊಡಗುವುದೂ ಒಂದು ಸಹಜವಾದ ಪ್ರಕ್ರಿಯೆಯೇ ಆಗುತ್ತದೆ ; ಸಂಪ್ರದಾಯವೇ ಆಗಿ ಪರಿಣಮಿಸುತ್ತದೆ. ಸಂಪ್ರದಾಯವನ್ನು ಉಲ್ಲಂಘಿಸಿ ನಿಂತು ತಮ್ಮದೇ ಆದ ರೀತಿಯಲ್ಲಿ ಕಾವ್ಯರಚನೆಮಾಡಿ ವಿನೂತನ ವಿಕ್ರಮವನ್ನು ಮೆರೆಯುವಂಥ ಕವಿಗಳು ವಿರಳವಾಗಿದ್ದಾರೆ,[1] ಸಂಪ್ರದಾಯವನ್ನು ಅನುಸರಿಸಿಯೇ ತಮ್ಮ ಕಾವ್ಯವನ್ನು ರಚಿಸುವಂಥ ಕವಿಗಳ ಸಂಖ್ಯೆ ಹೇರಳವಾಗಿರುತ್ತದೆ. ಇಂಥ ಪ್ರಕ್ರಿಯೆಗೆ ಯಾವುದೇ ಸಾಹಿತ್ಯವೂ ಅಪವಾದವಾಗಿರುವುದು ಸಾಧ್ಯವಿಲ್ಲ.

ಭಾರತೀಯ ಸಾಹಿತ್ಯ ಬಹುಮಟ್ಟಿಗೆ ಧರ್ಮನಿಬದ್ಧವಾಗಿರುವಂಥದು. ಪ್ರಾಚೀನ ಸಾಹಿತ್ಯದಲ್ಲಂತೂ ಅಪವಾದ ಸ್ವರೂಪವಾಗಿಯೂ ಬೇರೆ ಬಗೆಯ, ಧರ್ಮನಿರಪೇಕ್ಷವಾದ ಸಾಹಿತ್ಯ ಕಾಣದೊರೆಯುವುದಿಲ್ಲ. ಹೀಗಾಗಿ, ಚತುರ್ವಿಧವಾದ ಪುರುಷಾರ್ಥಗಳಲ್ಲಿ ಒಂದಾದ ಧರ್ಮವನ್ನು ಉದ್ಘೋಷಿಸುವುದರ ಜೊತೆಗೆ, ಅದಕ್ಕೆ ಪ್ರೇರಕವೂ ಪೋಷಕವೂ ಆಗುವಂತೆ, ತನ್ಮೂಲಕ ಪರಮಪುರುಷಾರ್ಥವಾದ ಮೋಕ್ಷಕ್ಕೆ ಸಾಧನವಾಗುವಂತೆ ತಮ್ಮ ಸಾಹಿತ್ಯವನ್ನು ರಚಿಸುವುದೇ ಭಾರತೀಯರ ಧ್ಯೇಯವಾಗಿತ್ತು. ಕಾವ್ಯಪ್ರಯೋಜನಗಳಲ್ಲಿ "ಸದ್ಯಃಪರನಿವೃತಿ"ಯನ್ನು "ಶಿವೇತರಕ್ಷತಿ"ಯನ್ನು ಒತ್ತಿ ಹೇಳಿರುವುದಾದರೂ ಈ ಕಾರಣದಿಂದಲೇ.[2] ಈ ಹಿನ್ನೆಲೆಯಲ್ಲಿ ಮಹಾಕಾವ್ಯದ ಬಗೆಗಿನ ಭಾರತೀಯ ಲಾಕ್ಷಣಿಕರ ಪರಿಭಾಷೆಯನ್ನು ಪ್ರಾತಿನಿಧಿಕವಾಗಿ ನಾನಿಲ್ಲಿ ಉಲ್ಲೇಖಿಸಬಯಸುತ್ತೇನೆ.[3] ಮಹಾಕಾವ್ಯದ ಬಗೆಗಿನ

---

1. ಸಂಪ್ರದಾಯವನ್ನು ಹೀಗೆ ತೂರಿ ಸಹಜತೆಯ ಹೆದ್ದಾರಿಯೇ ಮಹಾಕಾವ್ಯದ ಮಾರ್ಗವೆಂಬುದನ್ನು ಸಾರಿ ಹೇಳಿರುವ, ಹಾಗೂ "ಭಗವದಾವಿರ್ಭಾವ ಬಹುಸೂತ್ರತೆಗೆ" ಮಹಾ ಕಾವ್ಯದ ಆವಿರ್ಭಾವವೂ ಹೊರತಲ್ಲವೆಂಬುದನ್ನು ಉದ್ಘೋಷಿಸಿರುವ ವಿರಳ ಸ್ವರೂಪದ ಕೃತಿ ಶ್ರೀ ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ'

2. ಕಾವ್ಯಪ್ರಯೋಜನವನ್ನು ಕುರಿತ ರಾಜಶೇಖರನ 'ಕಾವ್ಯಮೀಮಾಂಸೆ'ಯ "ಕಾವ್ಯಂಯಶಸೇ..." ಎಂಬ ಪ್ರಸಿದ್ಧ ವೃತ್ತದಲ್ಲಿ ಬರುವ ಮಾತುಗಳು.

3. ವಿಶ್ವನಾಥನ ಈ ಪರಿಭಾಷೆ ಬಹುಮಟ್ಟಿಗೆ ಸಮಗ್ರವೂ ಸಮರ್ಪಕವೂ ಆಗಿರುವುದೇ ಅದರ ವಿಶೇಷವಾದ ಮಾನ್ಯತೆಗೆ ಕಾರಣವಾಗಿದೆ.

ಅವನ ವಿವರಣೆ ಹೀಗಿದೆ :[4]

ಸರ್ಗಬಂಧೋ ಮಹಾಕಾವ್ಯಂ ತತ್ರೈಕೋ ನಾಯಕಃ ಸುರಃ ।
ಸದ್ವಂಶಃ ಕ್ಷತ್ರಿಯೋ ವ್ಯಾಪಿ ಧೀರೋದಾತ್ತಗುಣಾನ್ವಿತಃ ॥

ಏಕವಂಶಭವಾ ಭೂಪಾಃ ಕುಲಜಾ ಬಹವೋಽಪಿ ವಾ ।
ಶೃಂಗಾರವೀರ ಶಾಂತಾನಾಮೇಕೊಂಗೀ ರಸ ಇಷ್ಯತೇ ॥

ಅಂಗಾನಿ ಸರ್ವೇಽಪಿ ರಸಾಃ ಸರ್ವೇ ನಾಟಕಸಂಧಯಃ ।
ಇತಿಹಾಸೋದ್ಭವಂ ವೃತ್ತಮನ್ಯದ್ವಾ ಸಜ್ಜನಾಶ್ರಯಮ್ ॥

ಚತ್ವಾರಸ್ತಸ್ಯವರ್ಗಾಃ ಸ್ಯುಸ್ತೇಷ್ವೇಕಂ ಚ ಫಲಂ ಭವೇತ್ ।
ಅದೌ ನಮಸ್ಕ್ರಿಯಾಶೀರ್ವಾ ವಸ್ತುನಿರ್ದೇಶ ಏವ ವಾ ॥

ಕ್ವಚಿನ್ನಿಂದಾ ಖಲಾದೀನಾಂ ಸತಾಂ ಚ ಗುಣಕೀರ್ತನಮ್ ।
ಏಕವೃತ್ತಮಯೈಃ ಪದ್ಯೈರವಸಾನೇನ್ಯವೃತ್ತಕೈಃ ॥

ನಾತಿಸ್ವಲ್ಪಾ ನಾತಿದೀರ್ಘಾಃ ಸರ್ಗಾ ಅಷ್ಟಾಧಿಕಾ ಇಹ ।
ನಾನಾವೃತ್ತಮಯಃ ಕ್ವಾಪಿ ಸರ್ಗಃ ಕಶ್ಚನ ದೃಶ್ಯತೇ ॥

ಸರ್ಗಾಂತೇ ಭಾನಿಸರ್ಗಸ್ಯ ಕಥಾಯಾಃ ಸೂಚನಂ ಭವೇತ್ ।
ಸಂಧ್ಯಾ ಸೂರ್ಯೇಂದು ರಜನೀ ಪ್ರದೋಷಧ್ವಾಂತ ವಾಸರಾಃ ॥

ಪ್ರಾತರ್ಮಧ್ಯಾಹ್ನ ಮೃಗಯಾ ಶೈಲರ್ತುವನ ಸಾಗರಾಃ ।
ಸಂಭೋಗ ವಿಪ್ರಲಂಭೌ ಮುನಿಸ್ವರ್ಗಪುರಾಧ್ವರಾಃ ॥

ರಣಪ್ರಯಾಣೋಪಯಮ ಮಂತ್ರ ಪುತ್ರೋದಯಾದಯಃ ।
ವರ್ಣನೀಯಾ ಯಥಾಯೋಗಂ ಸಾಂಗೋಪಾಂಗಾ ಅಮೀ ಇಹ ॥

---

4. **'ಮಹಾಕಾವ್ಯ ಲಕ್ಷಣ'** : ಟಿ. ವಿ. ವೆಂಕಟಾಚಲಶಾಸ್ತ್ರೀ ; ತ.ವೆಂ. ಸ್ಮಾರಕ ಗ್ರಂಥಮಾಲೆ ಮೈಸೂರು–೪ ; ೧೯೬೯, ಪು. ೮೩–೮೪ರಲ್ಲಿ ಉದ್ಧೃತ.

ಕವೇರ್ವೃತ್ತಸ್ಯ ವಾ ನಾಮ್ನಾ ನಾಯಕಸ್ಯೇತರಸ್ಯ ವಾ ।

ನಾಮಾಸ್ಯ ಸರ್ಗೋಪಾದೇಯ ಕಥಯಾ ಸರ್ಗನಾಮ ತು ॥" (೬.೩೧೫–೨೪)

ಇದರ ಅಭಿಪ್ರಾಯ ಇಷ್ಟು :

"ಸ್ವರ್ಗಬದ್ಧವಾದುದು"[೧] ಮಹಾಕಾವ್ಯ. ಅದರಲ್ಲಿ ಧೀರೋದಾತ್ತ ಗುಣಾನ್ವಿತನಾದ ಒಬ್ಬ ದೇವತೆಯೋ, ಸದ್ವಂಶಜನಾದ ಒಬ್ಬ ಕ್ಷತ್ರಿಯನೋ ನಾಯಕನಿರುತ್ತಾನೆ. ಅಥವಾ ಸತ್ಕುಲಪ್ರಸೂತರಾಗಿದ್ದು ಒಂದೇ ವಂಶದಲ್ಲಿ ಹುಟ್ಟಿದ ಅನೇಕ ರಾಜರೂ ನಾಯಕರಾಗಿರುತ್ತಾರೆ. ಶೃಂಗಾರ, ವೀರ ಮತ್ತು ಶಾಂತರಸಗಳಲ್ಲಿ ಒಂದು ಪ್ರಧಾನವಾಗಿರುತ್ತದೆ. ಉಳಿದೆಲ್ಲ ರಸಗಳೂ ಪ್ರಧಾನ ರಸಕ್ಕೆ ಅಂಗಗಳಾಗಿ (ಅಧೀನವಾಗಿ) ಬರುತ್ತವೆ. ಎಲ್ಲ ನಾಟಕ–ಸಂಧಿಗಳೂ ಇರುತ್ತವೆ. (ಇತಿ)ವೃತ್ತವು ಇತಿಹಾಸದಿಂದ ಹುಟ್ಟಿದ್ದಾಗಿರಬಹುದು ಅಥವಾ ಇತರ ಸತ್ಪುರುಷರನ್ನು ಕುರಿತದ್ದಾಗಿರಬಹುದು. ಚತುರ್ವರ್ಗಗಳೂ ಬಂದಿದ್ದು ಅವುಗಳಲ್ಲಿ ಒಂದರ ಫಲವು ಮುಖ್ಯವಾಗಿ ಉದ್ದಿಷ್ಟವಾಗಿರುತ್ತದೆ. ಆದಿಯಲ್ಲಿ ನಮಸ್ಕಾರ ಆಶೀರ್ವಚನ ವಸ್ತುನಿರ್ದೇಶ ಇವುಗಳಲ್ಲಿ ಒಂದು ಇರುತ್ತದೆ. ಕೆಲವೊಮ್ಮೆ ಖಲಾದಿಗಳ ನಿಂದೆ ಮತ್ತು ಸತ್ಪುರುಷರ ಗುಣಕೀರ್ತನೆ ಇವು ಬರುತ್ತವೆ ಏಕವಿಧವಾದ ವೃತ್ತಜಾತಿಯ ಪದ್ಯಗಳಿಂದ ರಚಿತವಾಗಿ ಕೊನೆಯಲ್ಲಿ ಭಿನ್ನವೃತ್ತಗಳಿಂದ ಕೂಡಿರುವ, ಅತಿ ಸಂಕ್ಷೇಪವೂ ಅತಿವಿಸ್ತಾರವೂ ಆಗಿರದ, ಸಂಖ್ಯೆಯಲ್ಲಿ ಎಂಟಕ್ಕೆ ಹೆಚ್ಚಾಗಿರುವ, ಸರ್ಗಗಳಿಂದ ಕೂಡಿರುತ್ತದೆ. ಸರ್ಗದ ಕೊನೆಯಲ್ಲಿ ಮುಂದಿನ ಸರ್ಗದ ಕಥೆಯ (ವಿಷಯದ) ಸೂಚನೆಯಿರಬೇಕು.

---

೧. ಸರ್ಗಬದ್ಧವಾಗಿರುವಂಥ ಕೃತಿ ಮಹಾಕಾವ್ಯವೆನ್ನಿಸಿಕೊಳ್ಳುತ್ತದೆ ಎಂಬ ಮಾತು ಭಾಮಹ, ದಂಡಿ ಮೊದಲಾದ ಅಲಂಕಾರಿಕರಲ್ಲಿ ಒಂದೇ ರೀತಿಯಲ್ಲಿ ಕಾಣಿಸಿಕೊಳ್ಳುತ್ತದೆ : "ಸರ್ಗ ಬಂಧೋ ಮಹಾಕಾವ್ಯಂ" ('ಕಾವ್ಯಾಲಂಕಾರ' ೧–೧೯ ; 'ಕಾವ್ಯಾದರ್ಶ' ೧–೧೪). ಆದರೆ, ಸರ್ಗಬದ್ಧವಾಗಿಲ್ಲದಿರುವಂಥ ಕೃತಿಯೂ ಮಹಾಕಾವ್ಯವೆನ್ನಿಸಿಕೊಳ್ಳಬಹುದು ಎಂಬ ಮಾತು ಅಪವಾದ ಸ್ವರೂಪವಾಗಿಯಾದರೂ, ಕಾಣದೊರೆಯುತ್ತದೆ. ಉದಾಹರಣೆಗೆ 'ಮಂದಾರಮಕರಂದಚಂಪವೂ'ವಿನ ಕರ್ತೃವಾದ ಶ್ರೀಕೃಷ್ಣ ಕವಿಯ ಮಾತುಗಳನ್ನು ನೋಡಬಹುದು:

"ಸರ್ಗಬಂಧೋ ಮಹಾಕಾವ್ಯಮಿತಿ ಕೇಚಿತ್ಪ್ರಚಕ್ಷತೇ ।

ಅಸರ್ಗಬಂಧಮಪಿ ಚ ಮಹಾಕಾವ್ಯಮಿತೀಷ್ಯತೇ ॥" (೧೧.೧೯೩)

(ಕೆಲವರು ಸರ್ಗಬದ್ಧವಾದ್ದು ಮಹಾಕಾವ್ಯ ಎನ್ನುತ್ತಾರೆ. ಸರ್ಗಬದ್ಧವಲ್ಲದಿದ್ದರೂ ಮಹಾಕಾವ್ಯವೆಂದು ಕೆಲವರ ಅಭಿಪ್ರಾಯ).

–ಹೆಚ್ಚಿನ ವಿವರಗಳಿಗೆ ನೋಡಿ : 'ಮಹಾಕಾವ್ಯ ಲಕ್ಷಣ', ಪೂರ್ವೋಕ್ತ, ಪು. ೫೧ ಮತ್ತು ೮೬.

ಸಂಧ್ಯೆ, ಸೂರ್ಯ, ಇಂದು, ರಜನಿ, ಪ್ರದೋಷ, ಧ್ವಾಂತ (ಕತ್ತಲೆ), ವಾಸರ (ಹಗಲು), ಪ್ರಾತಃ-ಕಾಲ, ಮಧ್ಯಾಹ್ನ, ಮೃಗಯೆ, ಶೈಲ, ಋತುಗಳು, ವನ, ಸಾಗರ, ಸಂಭೋಗ, ವಿಪ್ರಲಂಭ, ಮುನಿ, ಸ್ವರ್ಗ, ಪುರ, ಅಧ್ವರ, ರಣ, ಪ್ರಯಾಣ, ಉಪಯಮ (ವಿವಾಹ). ಮಂತ್ರ, ಪುತ್ರೋದಯ-ಮೊದಲಾದವುಗಳು ಯಥಾಯೋಗ್ಯವಾಗಿ ಸಾಂಗೋಪಾಂಗವಾಗಿ ವರ್ಣಿಸಲ್ಪಡಬೇಕು. ಕವಿ, ಇತಿವೃತ್ತ, ನಾಯಕ ಅಥವಾ ಇತರ ಯಾವುದಾದರೂ ಒಂದರ ಹೆಸರನ್ನು ಅವಲಂಬಿಸಿ ಮಹಾಕಾವ್ಯಕ್ಕೆ ಹೆಸರಿಡಬೇಕು. ಸರ್ಗೋಪದೇಯವಾದ ಕಥೆಯಿಂದ ಸರ್ಗವು ಹೆಸರಿಸಲ್ಪಡಬೇಕು."[1]

ಈ ಪರಿಭಾಷೆಯ ಹಿನ್ನೆಲೆಯಲ್ಲಿ ನೋಡಿದಾಗ, ಕನಕದಾಸರ 'ಮೋಹನತರಂಗಿಣಿ' ಮಹಾಕಾವ್ಯವೆಂಬ ಹೆಸರಿಗೆ ಅರ್ಹವಾಗುವಂಥ ಕೃತಿ ಎಂಬುದರಲ್ಲಿ ಯಾವುದೇ ಬಗೆಯ ಅನುಮಾನಕ್ಕೂ ಎಡೆಯಿರುವುದಿಲ್ಲ. ಏಕೆಂದರೆ, ಈ ಕೃತಿಯಲ್ಲಿ ಅನಾಯಾಸವಾಗಿಯೇ ಈ ಎಲ್ಲ ಲಕ್ಷಣಗಳನ್ನೂ ಗುರುತಿಸಬಹುದು. ಉದಾಹರಣೆಗೆ (i) 'ಕವಿ, ಇತಿವೃತ್ತ ನಾಯಕ ಅಥವಾ ಯಾವುದಾದರೂ ಒಂದರ ಹೆಸರನ್ನು ಅವಲಂಬಿಸಿ ಮಹಾಕಾವ್ಯಕ್ಕೆ ಹೆಸರಿಡಬೇಕು" ಎಂಬ ಸೂಚನೆಗೆ ಅನುಗುಣವಾಗಿ. ಇಲ್ಲಿಯ ಇತಿವೃತ್ತವನ್ನು ಆಧರಿಸಿ ಕನಕದಾಸರು ತಮ್ಮ ಈ ಕೃತಿಗೆ 'ಮೋಹನತರಂಗಿಣಿ' ಎಂಬ ಹೆಸರನ್ನು ಕೊಟ್ಟಿದ್ದಾರೆ. ಹಂಪ. ನಾಗರಾಜಯ್ಯನವರು ಹೇಳಿರುವಂತೆ, "ಕಾವ್ಯದ ಹೆಸರು ಅನ್ವರ್ಥಕವಾಗಿರುವ ಕಾವ್ಯಗಳಲ್ಲಿ 'ಮೋಹನತರಂಗಿಣಿ'ಯೂ ಒಂದು. ದೇವರನ್ನು ವರ್ಣಿಸಲಿ, ಮನುಷ್ಯರನ್ನು ಬಣ್ಣಿಸಲಿ, ಶೃಂಗಾರ ಪುಟಿಯುತ್ತದೆ. ಭಕ್ತ ಭಗವಂತನೆಂಬ ಭೇದಭಾವವಿಲ್ಲದೆ ಭೋಗದ ಬದುಕು ಚಿತ್ರಿತವಾಗುತ್ತದೆ."[೨] ಶ್ರೀಕೃಷ್ಣನ ಸಾಂಸಾರಿಕ ಸುಖವೈಭವದ ಚಿತ್ರದೊಂದಿಗೆ ಮೊದಲಿಟ್ಟು, ಬಾಣಾಸುರ-ನಿಗ್ರಹ ಮತ್ತು ಉಷಾ-ಅನಿರುದ್ಧರ ವಿವಾಹದಲ್ಲಿ ಪರ್ಯವಸಾನಗೊಳ್ಳುವ ಶ್ರೀಕೃಷ್ಣನ ಸಾಹಸದವರೆಗಿನ ಅನೇಕ ವಿವರಗಳು ಶ್ರೀಕೃಷ್ಣನ ಮಹಿಮೆಯನ್ನು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಓದುಗರ ಗಮನಕ್ಕೆ ತರುತ್ತಲೇ ಸಾಗುವುದರಿಂದ ಇದನ್ನು ಶ್ರೀಕೃಷ್ಣನ ಲೀಲಾತರಂಗಿಣಿ ಎಂದೂ ಭಾವಿಸಬಹುದಾಗಿದೆ. ಹೀಗಾಗಿ ಈ ದೃಷ್ಟಿಯಿಂದಲೂ ಕೃತಿಯ ಶೀರ್ಷಿಕೆ

1. ಅದೇ, ಪು. ೪೨-೩. 2. 'ಮೋಹನತರಂಗಿಣಿ : ಪೂರ್ವೋಕ್ತ, ಪು. ix (ಹಂಪ. ನಾಗರಾಜಯ್ಯನವರ ಮುನ್ನುಡಿ.)

ಅರ್ಥವತ್ತಾಗಿದೆ ಎನ್ನಿಸುತ್ತದೆ. (ii) ಆಯಾ ಸರ್ಗಗಳಲ್ಲಿ ನಿರೂಪಣೆಗೊಂಡಿರುವ ವಿವರಗಳ ಆಧಾರದ ಮೇಲೆ ಸರ್ಗಗಳಿಗೆ ಹೆಸರನ್ನಿಡಬೇಕೆಂಬ ಸೂಚನೆಗೆ ಅನುಗುಣವಾಗಿ ಕಂದರ್ಪಜನನ (೪ನೆಯ ಸಂಧಿ), ಕಾಮನಿಗೆ ದೇವತೆಗಳ ಭೋಧೆ (೫), ಮನ್ಮಥನ ದಂಡಯಾತ್ರೆ (೬) ರತಿಯ ಪ್ರಲಾಪ (೭), ಮಾರ ಜನನ (೧೧), ಶಂಬರಾಸುರನ ವಧೆ (೧೨), ಅನಿರುದ್ಧ ಜನನ (೧೭), ಬಾಣಾಸುರನ ಶಿವಪೂಜೆ (೨೧), ಉಷೆಯ ಸ್ವಪ್ನ (೨೭), ಬಾಣಾಸುರಾನಿರುದ್ಧರ ಜಗಳ (೩೫), ಹರಿ–ಹರರ ಕಾಳಗ (೩೮), ಶ್ರೀಕೃಷ್ಣನು ದ್ವಾರಕೆಗೆ ಬಂದುದು (೪೨). ಎಂದು ಮುಂತಾಗಿ ಶೀರ್ಷಿಕೆಗಳೊಡನೆ ವರ್ಗೀಕರಿಸಿಕೊಳ್ಳಲು ಸಾಧ್ಯವಾಗುವಂತೆ ೪೨ ಸಂಧಿಗಳಲ್ಲಿ ಕಥೆಯನ್ನೇ ವಿಸ್ತರಿಸಿ ಹೇಳಲಾಗಿದೆ. (iii) ಇವುಗಳ ಸಂಖ್ಯೆ, ಈ ಸಂಬಂಧವಾಗಿ ಗೊತ್ತುಪಡಿಸಲಾಗಿರುವ ಎಂಟು ಸರ್ಗಗಳ ಕನಿಷ್ಠ ಮಿತಿಯನ್ನು ಮೀರಿರುವುದಲ್ಲದೆ, ಅವುಗಳಲ್ಲಿ ಯಾವೊಂದು ಸರ್ಗವೂ ಅತಿ ಸಂಕ್ಷಿಪ್ತವಾಗಲೀ, ಅತಿ ವಿಸ್ತೃತವಾಗಲೀ ಆಗದಂತೆಯೂ ನೋಡಿಕೊಳ್ಳಲಾಗಿದೆ [ಕಡಿಮೆ ಎಂದರೆ ೩೯ ಸಾಂಗತ್ಯಗಳೂ (೧೫–೩೯) ಹೆಚ್ಚೆಂದರೆ ೧೧೦ ಸಾಂಗತ್ಯಗಳೂ (೧೮–೧೧೦) ಇರುವುದನ್ನು ಗಮನಿಸಬಹುದಾಗಿದೆ] ಹೀಗೆ, ನಲವತ್ತೆಂಟು ಸಂಧಿಗಳಿಂದ ಕೂಡಿದ್ದು, ಮಹಾಕಾವ್ಯತ್ವಕ್ಕೆ ತಾನು ಅರ್ಹತೆಯನ್ನು ಗಳಿಸಿಕೊಂಡಿರುವುದನ್ನು ಇದು ಸಾರುತ್ತದೆ. (iv) ಧೀರೋದಾತ್ತನೂ, ಸಮಸ್ತ ಆದರ್ಶಗುಣಗಳಿಂದ ಕೂಡಿದವನೂ, ಮಹಿಮಾನ್ವಿತನೂ ಆದ ಶ್ರೀಕೃಷ್ಣ ಇದರ ನಾಯಕನಾಗಿದ್ದಾನೆ ಅಥವಾ ಇದರಲ್ಲಿನ ವಿವಿಧ ಪ್ರಸಂಗಗಳನ್ನು ಗಮನಿಸಿದಾಗ, ಸತ್ಕುಲಪ್ರಸೂತರಾದ ಪ್ರದ್ಯುಮ್ನ–ಅನಿರುದ್ಧರೂ ನಾಯಕರೇ ಆಗಿದ್ದಾರೆ ಎನ್ನಲೂಬಹುದು. (v) ಇಲ್ಲಿ ನಿರೂಪಿತವಾಗಿರುವ ಇತಿವೃತ್ತವೂ ಶ್ರೀಕೃಷ್ಣ, ಪ್ರದ್ಯುಮ್ನ ಮತ್ತು ಅನಿರುದ್ಧರಂಥ ಸತ್ಪುರುಷರ ಇತಿಹಾಸವೇ ಆಗಿದೆ. (vi) ಈ ಕಾವ್ಯದ ಆದಿಯಲ್ಲಿಯೂ ನಮಸ್ಕಾರ–ಆಶೀರ್ವಚನ, ಖಲಾದಿಗಳ– ಅಂದರೆ, ದುಷ್ಟರ–ನಿಂದೆ ಮತ್ತು ಸತ್ಪುರುಷರ ಗುಣಕೀರ್ತನೆಗಳೂ, "ಪೂಸರದಹನ, ಕಾಮೋತ್ಪತ್ತಿ, ವರ ಶಂಬರಾಸುರ ವಧೆ, ಕಂತುಸುತನ ಭಾಸುರಲೀಲೆ, ಬಾಣನ ಗೆದ್ದ ಜಯಲಕ್ಷ್ಮೀಶನ ಕೃತಿಯ ವಿಸ್ತರಿಪೆ" (೧–೩೩) ಎಂಬುದಾಗಿ ವಸ್ತು ನಿರ್ದೇಶವೂ ಕಾಣದೊರೆಯುತ್ತದೆ. (vii) "ವರಮೋಹನತರಂಗಿಣಿಯೆಂಬ ಕಾವ್ಯವ ಬರೆದೋದಿ ಕೇಳಿದ ಜನರ ತರಣಿಚಂದ್ರರುಳ್ಳನಕ ಸತ್ಕೃಪೆಯಿತ್ತು ಪೊರೆವ ಲಕ್ಷ್ಮೀಕಾಂತ ಬಿಡದೆ" ಎಂದು

ಮಾತ್ರವಲ್ಲದೆ (೪೨–೭೮), "ನಿರ್ಮತ್ಸರದೊಳೀ ಕೃತಿಯ ಕೇಳ್ದವರಿಗೆ ಧರ್ಮಾರ್ಥಕಾಮಮೋಕ್ಷಗಳ ಭರ್ಮಾಂಬರನೀವ ಭಾಮೆ ಕೇಳ್ ನಮ್ಮ ದುಷ್ಕರ್ಮ ವಿಚ್ಛೇದನವಾಯ್ತು" (೪೨–೭೬) ಎಂದು ಪರಮ ಪುರುಷಾರ್ಥಗಳೆಲ್ಲವೂ ಲಭಿಸುತ್ತವೆಂದೂ ಹೇಳಲಾಗಿದೆ. (viii) ಯಥಾಯೋಗ್ಯವಾಗಿ ಸೌರಾಷ್ಟ್ರ, ದ್ವಾರಕಾಪುರ, ಶೋಣಿತಪುರ (ಕ್ರಮಶಃ ೨, ೩ ಮತ್ತು ೨೦ನೆಯ ಸಂಧಿಗಳು), ಪುತ್ರೋದಯ (ಕಂದರ್ಪಜನನ, ೪ ; ಮಾರಜನನ, ೧೧ : ಅನಿರುದ್ಧ ಜನನ, ೧೭), ಉಪಯಮ (ರತಿಯ ವಿವಾಹ, ೮೨ ; ಉಷೆಯ ವಿವಾಹ, ೩೩). ಯುದ್ಧ (ಶಂಬರಾಸುರವಧೆ, ೧೨, ಅನಿರುದ್ಧ ಕುಂಭಾಂಡರ ಕಾಳೆಗ, ೩೪ ; ಬಾಣಾಸುರ–ಅನಿರುದ್ಧರ ಕಾಳೆಗ, ೩೫; ಹರಿ–ಹರರ ಕಾಳೆಗ, ೩೮ ; ಕೃಷ್ಣ–ಬಾಣಾಸುರರ ಕಾಳೆಗ ೪೧), ಮೃಗಯೆ (ಅನಿರುದ್ಧನ ಬೇಟೆ, ೧೯), ಸಂಭೋಗ ಶೃಂಗಾರ (೪, ೧೧. ೧೬, ೨೧, ೨೭, ೩೨, ಇತ್ಯಾದಿ) ವಿಪ್ರಲಂಭಶೃಂಗಾರ (ರತಿಯ ಪ್ರಲಾಪ, ೮; ಉಷೆಯ ವಿರಹ, ೨೮), ಜಲಕ್ರೀಡೆ (೧೫), –ಇವೇ ಮೊದಲಾದ ಅಷ್ಟಾದಶ ವರ್ಣನೆಗಳನ್ನೂ ಈ ಕಾವ್ಯ ಒಳಗೊಂಡಿದೆ (ix) ಶೃಂಗಾರವೇ ಪ್ರಧಾನ ರಸವಾಗಿಯೂ, ವೀರ, ಕರುಣ ಮೊದಲಾದ ಇತರ ರಸಗಳು ಆನುಷಂಗಿಕವಾಗಿಯೂ ಈ ಕಾವ್ಯದಲ್ಲಿ ಕಾಣಿಸಿಕೊಂಡಿವೆ. (x) ಸಾಂಗತ್ಯದ ಛಂದಸ್ಸಿನಲ್ಲಿ ಇಡೀ ಕಾವ್ಯ ರಚಿತವಾಗಿದೆ. ಭಿನ್ನ ಛಂದೋಜಾತಿಗಳಿಲ್ಲ ಮತ್ತು ಸಂಧಿಗಳ ಕೊನೆಯಲ್ಲಿ ಮುಂದಿನ ಸಂಧಿಗಳಲ್ಲಿ ಬರುವ ಕಥಾಭಾಗದ ನಿರ್ದೇಶನವಿಲ್ಲ ಎಂಬ ಎರಡು ಗೌಣ ಲಕ್ಷಣಗಳನ್ನು ಬಿಟ್ಟರೆ, ಉಳಿದೆಲ್ಲ ಸಾಂಪ್ರದಾಯಿಕ ಲಕ್ಷಣಗಳನ್ನೂ ಈ ಕಾವ್ಯ ಪೂರೈಸುತ್ತದೆ ಎಂಬುದು ಇದರಿಂದ ಸ್ಪಷ್ಟವೇ ಆಗುತ್ತದೆ.

ಔಪಚಾರಿಕವಾಗಿ ಈ ಹಲವು ಲಕ್ಷಣಗಳನ್ನು ಪೂರೈಸುವಷ್ಟರಿಂದಲೇ ಯಾವುದಾದರೂ ಕೃತಿ ಮಹಾಕಾವ್ಯವೆನಿಸಿಕೊಳ್ಳಬಹುದಾಗಿದ್ದರೆ, ಅಂಥ ಮಹಾಕಾವ್ಯಗಳ ಸಂಖ್ಯೆ ನಮ್ಮ ಸಾಹಿತ್ಯದಲ್ಲಿ ಅಗಣಿತವಾಗಿ ಬಿಡಬಹುದಾಗಿತ್ತು. ಅವಿಷ್ಟರಿಂದಲೇ ಮಹಾಕಾವ್ಯವೆನ್ನಿಸಿಕೊಳ್ಳುವುದು ಸಾಧ್ಯವಿಲ್ಲದಿರುವುದರಿಂದಲೇ ಯಾವುದೇ ಸಾಹಿತ್ಯದಲ್ಲಿ ಮಹಾಕಾವ್ಯಗಳ ಸಂಖ್ಯೆ ಎಂದೂ ಸೀಮಿತವಾಗಿಯೇ ಇರುತ್ತದೆ. ಮಹಾ ಪುರುಷರನ್ನು ಕುರಿತ ರಚನೆಯಾಗಿರುವುದರ ಜೊತೆಗೆ, ಮಹತ್ತನ್ನೂ ಅದು ತನ್ನದಾಗಿಸಿಕೊಂಡಿದ್ದಲ್ಲಿ ಮಾತ್ರ "ಮಹತಾಂ ಚ ಮಹಚ್ಚ ಯತ್:" (ಭಾಮಹ. 'ಕಾವ್ಯಾಲಂಕಾರ' (೧–೧೯)) ಮಹಾಕಾವ್ಯವೆನಿಸಿಕೊಳ್ಳುತ್ತದೆ.

ಮಹಾಕಾವ್ಯಗಳು ಸುದೀರ್ಘವಾಗಿರುತ್ತವೆಂಬುದೇನೋ ನಿಜ. ಆದರೆ, ಸುದೀರ್ಘವಾಗಿರುವುದೆಲ್ಲ ಮಹಾಕಾವ್ಯ ಎನ್ನಿಸಿಕೊಳ್ಳುವುದಿಲ್ಲ. ಮಹತ್ತರ ವಸ್ತು, ಅದ್ಭುತ ಪಾತ್ರಚಿತ್ರಣ, ಸನ್ನಿವೇಶಗಳ ಪರಿಮಾಣ ರಮಣೀಯತೆ ಸಹೃದಯರ ಮನಸ್ಸನ್ನು ದ್ರವಿಸಬಲ್ಲಂಥ ರಸಾಕ್ಷಿಪ್ತತೆ–ಇವೇ ಮೊದಲಾದ ಗುಣಗಳನ್ನು ಒಳಗೊಂಡಿದ್ದಾಗ ಮಾತ್ರವೇ ಅದು ನಿಜಕ್ಕೂ ಮಹಾಕಾವ್ಯವೆನ್ನಿಸಿಕೊಳ್ಳುತ್ತದೆ. ಶೈಲಿಯ ಬೀಸು ಮತ್ತು ಗಾಂಭೀರ್ಯಗಳು ವಿಷಯದ ಮಹತ್ತ್ವ ಮತ್ತು ಗುರುತ್ವಗಳಿಗೆ ಅನುಗುಣವಾಗಿರಬೇಕಾದದ್ದೂ ಮಹಾಕಾವ್ಯದ ಇನ್ನೊಂದು ಲಕ್ಷಣ. ಈ ಎಲ್ಲ ವೈಶಿಷ್ಟ್ಯಗಳಿಂದ ಅದು ವಿಭಿನ್ನ ಮುಖಗಳಲ್ಲಿ ಜೀವನವನ್ನು ಆಳವಾಗಿ ಸ್ಪರ್ಶಿಸುವಂಥವಾಗಿ ಪರಿಣಮಿಸುತ್ತದೆ. ಒಂದಲ್ಲ ಒಂದು ರೂಪದಲ್ಲಿ ನಮ್ಮ ಜೀವನದೊಂದಿಗೇ ಬೆರೆತುಕೊಳ್ಳುವಂಥದೂ ಆಗಿರುತ್ತದೆ. ಈಗ ಈ ದೃಷ್ಟಿಯಿಂದ 'ಮೋಹನತರಂಗಿಣಿ'ಯ ನಿರೂಪಣೆ ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾಗಿದೆ ಎಂಬುದನ್ನು ಪರಿಶೀಲಿಸಬಹುದು.

ಕನಕದಾಸರು ತಮ್ಮ ಈ ಕಾವ್ಯಕ್ಕೆ ಹಲವು ಮೂಲಗಳಿಂದ ವಸ್ತು ಮತ್ತು ಆಶಯಗಳನ್ನು ಸಂಗ್ರಹಿಸಿಕೊಂಡಿದ್ದಾರೆ ; ಹಲವು ಕವಿಗಳ ಪ್ರಭಾವಕ್ಕೂ ಒಳಗಾಗಿದ್ದಾರೆ. ವಸ್ತುವಿನ ದೃಷ್ಟಿಯಿಂದ ಅವರಿಗೆ ಪ್ರಧಾನವಾಗಿರುವ ಆಕರಗಳೆಂದರೆ 'ಸ್ಕಾಂದಪುರಾಣ'ದಲ್ಲಿನ ಕೇದಾರಖಂಡ (ಅಧ್ಯಾಯಗಳು ೨೦ ಮತ್ತು ೨೧) ಕೌಮಾರಿಕಾಖಂಡ (ಅಧ್ಯಾಯ ೨೪) ; 'ವಿಷ್ಣುಪುರಾಣ' (ಸಂ. ೩–೨೬) ; 'ಮಹಾಭಾರತ' (ಸಭಾಪರ್ವ, ಅಧ್ಯಾಯ ೬೭) ; 'ಭಾಗವತ' (ದಶಮಸ್ಕಂಧ) ಮತ್ತು 'ಹರಿವಂಶ' (ವಿಷ್ಣುಪರ್ವ, ಅಧ್ಯಾಯ ೧೦೪–೨೮). ಇವುಗಳ ಜೊತೆಗೆ ಕಾಳಿದಾಸನ 'ಕುಮಾರ ಸಂಭವ'ದ ಪ್ರಭಾವವನ್ನೂ ಗುರುತಿಸಬಹುದಾಗಿದೆ. ಕನ್ನಡದ ಕವಿಗಳಲ್ಲಿ ಕುಮಾರವ್ಯಾಸ ಮತ್ತು ಲಕ್ಷ್ಮೀಶರ ಪ್ರಭಾವವನ್ನು ಕನಕದಾಸರೇ ಪರೋಕ್ಷವಾಗಿ ಉಲ್ಲೇಖಿಸಿದ್ದಾರೆ. ತಮ್ಮ ಕಾವ್ಯ "ಹರಿಶರಣರ ಪೆಚ್ಚು ಬುಧಜನರಿಗೆ ಮೆಚ್ಚು, ದುರಿತವನಕೆ ಕಾಳ್ಗಿಚ್ಚು, ವಿರಹಿಗಳೆದೆಗಿಚ್ಚು ವೀರರ್ಗೆ ಪುಚ್ಚು, ಕೇಳ್ವರಿಗಿದು ತನಿವೆಲ್ಲದಚ್ಚು" (೧–೩೯) ಎಂದು ಹೇಳಿಕೊಂಡಿರುವಲ್ಲಿ ಕುಮಾರವ್ಯಾಸನ "ಅರಸುಗಳಿಗಿದು ವೀರ..." ಇತ್ಯಾದಿ ಮಾತುಗಳನ್ನೂ, "ಗುಬ್ಬಿಯ ಕೊರಲ್ಗೆ ಗೋದಿಯ ಕಲ್ಲ ಕಟ್ಟಿದರೆ ಗುಬ್ಬಿಯಾಗಸಕೆ ಪಾಱುವುದೇ" (೧–೨೨) ಎಂಬ ಮಾತುಗಳಲ್ಲಿ "ಪ್ರಾಂಶು ಲಭ್ಯೇ ಫಲೇ ಉದದ್ಬಾಹುರಿವ ವಾಮನಃ" (ಎತ್ತರವಾಗಿರುವವನ ಕೈಗೆ ಎಟಕುವಂತಿರುವ ಹಣ್ಣಿಗಾಗಿ ಕೈಯೆತ್ತಿ ನಿಂತಿರುವ ಕುಳ್ಳನಂತೆ) ಇತ್ಯಾದಿ

ಮಾತುಗಳನ್ನೂ ಗುರುತಿಸಬಹುದಾಗಿದೆ. "ಬರೆಹವ ತಿಳಿಯಬೇಡೆನುತೆನ್ನ ಬಾಳಲಿ ಬರೆದ ನಾಲ್ಮೊಗವದಜೆಂದ ಬರಹವನಜೆಯೆ ನಾ ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ" (೧–೨೧) ಎಂದು ಅವರು ಹೇಳಿಕೊಂಡಿದ್ದಾರಾದರೂ, ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿನ ಅನೇಕ ಕೃತಿಗಳ ಪರಿಚಯ ಅವರಿಗಿತ್ತೆಂಬುದಕ್ಕೆ ಅವರ ಈ ಕಾವ್ಯವೂ ಅನೇಕ ಆಂತರಿಕ ಸಾಕ್ಷ್ಯಗಳನ್ನು ಒದಗಿಸುತ್ತದೆ. ಶೃಂಗಾರರಸದ ನಿರ್ವಹಣೆಯಲ್ಲಿಯಂತೂ ಲಕ್ಷ್ಮೀಶನನ್ನೇ ಅವರು ಮಾದರಿಯಾಗಿಸಿಕೊಂಡಿರುವಂತೆ ತೋರುತ್ತದೆ.

ಈ ಕಾವ್ಯದಲ್ಲಿ ಕನಕದಾಸರು ಕೊಟ್ಟಿರುವ ಹಲವು ವರ್ಣನೆಗಳಲ್ಲಿ ಹೊಸತನ ಅಷ್ಟಾಗಿ ಕಾಣದೊರೆಯುವುದಿಲ್ಲವೆಂಬುದು ನಿಜವಾದರೂ, ಅಲ್ಲಲ್ಲಿ ತಮ್ಮ ಸ್ವಂತಿಕೆಯನ್ನು ಮೆರೆದಿರುವ ನಿದರ್ಶನಗಳೂ ಇವೆ. ಉದಾಹರಣೆಗೆ ನಗರ ವರ್ಣನೆಯ ಅಂಗವಾಗಿ ಬಂದಿರುವ ಈ ಸಂಪ್ರದಾಯಾನುಸಾರಿ ಕಲ್ಪನೆಗಳನ್ನು ಗಮನಿಸಬಹುದು :

"ಪೊಡೆಯೆಂಬುದು ಗಂಧ ಶಾಲಿಯೊಳ್ ಕೈಯೊಳು
ಕೊಡೆಯೆಂಬರಾತಪತ್ರವನು ।
ತಡೆಯೆಂಬುದಹಿಮಂತ್ರದೊಳಗಲ್ಲದಾದೇಶ
ದೆಡೆಯೊಳೀ ಶಬ್ದಂಗಳಿಲ್ಲ ॥೨.೨೨॥
ಕಂಟಕವೆಂಬುದು ಕೇತಕಿಯೊಳು ರಾಜ
ಕಂಟಕವೆಂಬುದಂಬುಜದಿ ।
ಕಂಟಕವೆಂಬುದು ಹಲಸಿನೊಳಲ್ಲದೆ
ಕಂಟಕವಾದೇಶಕಿಲ್ಲ ॥೨.೨೧॥
ದಂಡ ಸನ್ಯಾಸಿ ವರ್ಗದೊಳುಂಟು ಪುನರಪಿ
ದಂಡ ಗೋಪಾಲರೊಳುಂಟು ।
ದಂಡ ಪುಂಡ್ರೇಕ್ಷುವಾಟಿಯೊಳುಂಟು ಮಿಕ್ಕಿನ
ದಂಡವಾದೇಶದೊಳಿಲ್ಲ ॥೨.೨೨॥
* * *
ಕುಟಿಲ ಕುಂತಲದೊಳು ಮಧುಪಾನ ತೊಂಡೆವ
ಣ್ಬುಟಿಯೊಳು ಕಠಿನಕಾಂತೆಯರ ।
ಘಟಕುಚದೊಳಗಲ್ಲದೀನುಡಿಗಳು ಸಂ
ಘಟಿಸವು ಸೌರಾಷ್ಟ್ರದಲ್ಲಿ ॥೨.೨೩॥"

ಇಂಥ ಹಳೆಯ ಜಾಡಿನ ವರ್ಣನೆಯ ನಡುವೆಯೂ ಹೊಸತನವನ್ನು

ಅವರು ಹೇಗೆ ಮೆರೆಯುತ್ತಾರೆ ಎಂಬುದಕ್ಕೆ ಕಾಲುವೆಗಳ ಬಗೆಗಿನ ಈ ಕಲ್ಪನೆಯನ್ನು ನೋಡಬಹುದು :

"ಮಳೆಗಾಲದೊಳುಬ್ಬಿ ಬೇಸುಗೆಯೊಳು ಕಾಲು
ವೊಳೆಯಾದವೆಂಬ ನಿಂದೆಯನು ।
ತಳೆಯದೆ ತುಂಬಲಿ ಪೋಱಮಟ್ಟ ಕುಲ್ಯ
ಗಳಿಳೆಯಗಲದಿ ಚಲಿಸುವುವು ॥೨.೩೮)
ಭಾಗೀರಥಿ ದೇವಿಯರು ಸಾಸಿರಮೊಗ
ವಾಗಿ ಸಾಗರವೆರದಂತೆ ।
ರಾಗಿಪ ಪರಿಗಾಲುವೆ ಸಾಸಿರ ಮೊಗ
ವಾಗಿ ಸದ್ವನವ ಸಾರಿದವು" ॥೨.೩೯)

ಇದೇ ರೀತಿಯಲ್ಲಿ, ಬೇಟೆಯ ವರ್ಣನೆಯೂ ಬಹುಮಟ್ಟಿಗೆ ಸಹಜಾನುಭವ ವಿರಹಿತವಾದ ಸಾಂಪ್ರದಾಯಿಕ ಚೌಕಟ್ಟಿನಲ್ಲಿಯೇ ರೂಪುಗೊಂಡಿರುವಂಥ ಅನುಭವ ನಮಗಾಗುತ್ತದೆ. ಉದಾಹರಣೆಗೆ ಅನಿರುದ್ಧನ ಬೇಟೆಯ ವರ್ಣನೆಯನ್ನೊಳಗೊಂಡಿರುವ ಈ ಚಿತ್ರವನ್ನು ನೋಡಬಹುದು:

"ತಡೆಯದೆ ಮಗುಳೊರ್ವ ಶಾರ್ದೂಲವನೆಚ್ಚೊ
ಡೊಡೆ ಹಾಯುತುರ್ವಿ ಚಂದನವ ।
ತಡೆಗಡಿಯಲು ಸುತ್ತಿಕೊಂಡಿರ್ದ ನಾಗರ
ಹೆಡೆವಣಿ ಸುರಿದುವೇನೆಂಬೆ" ॥೧೯.೨೫॥

ಶಾರ್ದೂಲವನ್ನು ಇರಿದು ಕೊಂದ ಬಾಣ ಮುಂದೆ ಸಾಗಿ ಗಂಧದ ಮರವನ್ನು ಕತ್ತರಿಸಿ, ಅದನ್ನು ಸುತ್ತಿಕೊಂಡಿದ್ದ ಹಾವಿನ ಹೆಡೆಯನ್ನೂ ಸೀಳಿ, ಅದರಿಂದ ರತ್ನಗಳ ಸುರಿಮಳೆಯಾಯಿತೆಂಬ ಈ ವರ್ಣನೆ ಸಹೃದಯರ ಮನಸ್ಸಿಗೆ ಬೇಟೆಯ ನಿಜವಾದ ಅನುಭವವನ್ನಾಗಲೀ, ಆನಂದವನ್ನಾಗಲೀ ತಂದುಕೊಡಲಾರದೆ ವಿಫಲವಾಗುತ್ತದೆ. ಇಂಥ ಚಿತ್ರಗಳು ವಿರಳವಾಗಿಲ್ಲದೆ ವಿಪುಲವಾಗಿರುವುದು ಈ ವರ್ಣನೆಗಳ ಯಾಂತ್ರಿಕ ಏಕತಾನತೆಯನ್ನೇ ತೋರಿಗೊಡುತ್ತವೆ. ಉದಾಹರಣೆಗೆ, ಬೇಡರೆಲ್ಲ ದಿಕ್ಕಾಪಾಲಾಗಿ ಓಡಿಹೋಗುವಂಥ ಸಂದರ್ಭದ ಚಿತ್ರಣ ಹೀಗಿದೆ.

"ಸೊಂಡಿಲೊಳ್ ಕೊನೆವೆತ್ತ ಮದಹಸ್ತಿಗಳ ಕಚ್ಚಿ
ಕೊಂಡಿರ್ದ ಕೇಸರಿಗಳನು ।
ತುಂಡದೊಳೆರಡು ಕಾಲ್ಗೊಳೆರಡಾಂತ ಗಂಡು ಭೇ

ರುಂಡನ ಮುರಿಯಲಿಕ್ಕಿದನು ॥೧೯.೩೬॥
ಬಿದ್ದುದು ವೃಕ್ಷ ವೃಕ್ಷದ ಮೇಲೆ ಮದಹಸ್ತಿ
ಬಿದ್ದುದು ಕೇಸರಿಯೊಡನೆ ।
ಬಿದ್ದುದು ವಿಹಗೇಶ ಬೀಟುವ ನೆಲದೆ ನಿಂ
ದಿರ್ದ ಕಿರಾತರೋಡಿದರು" ॥೧೯.೩೭॥

ಸೊಂಡಿಲಲ್ಲಿ ರೆಂಬೆಗಳನ್ನು ಹೊತ್ತುಕೊಂಡಿದ್ದ, ಮದಗಜಗಳನ್ನು ಕಚ್ಚಿಕೊಂಡಿದ್ದ ಕೇಸರಿಗಳನ್ನು ತನ್ನ ಎರಡೂ ಬಾಯಿ ಮತ್ತು ಕಾಲುಗಳಲ್ಲಿ ಹಿಡಿದುಕೊಂಡಿದ್ದ ಗಂಡ ಭೇರುಂಡವನ್ನು ಅನಿರುದ್ಧನು ಕೊಂದಾಗ, ರೆಂಬೆಗಳು ಆನೆಗಳ ಮೇಲೆ, ಆನೆಗಳು ಕೇಸರಿಗಳ ಮೇಲೆ, ಆ ಕೇಸರಿಗಳು ಗಂಡಭೇರುಂಡದ ಮೇಲೆ ಬಿದ್ದುವಂತೆ. ಇಷ್ಟೆಲ್ಲ ಹೊರೆಯನ್ನು ಹೊತ್ತ ಗಂಡಭೇರುಂಡ ನೆಲದ ಮೇಲೆ ಬಿದ್ದಾಗ, ಬೇಡರೆಲ್ಲ ಬೆದರಿ ದಿಕ್ಕಪಾಲಾಗಿ ಓಡಿದರಂತೆ. ಅಸಹಜತೆಯ ಅತಿರೇಕ ನಮ್ಮ ಕಾವ್ಯಗಳಲ್ಲಿ ಹೇಗೆ ತಾಂಡವವಾಡುತ್ತದೆಂಬುದಕ್ಕೆ ಇದೂ ಒಂದು ನಿದರ್ಶನ.

ಆದರೆ, ಬೇಟೆಯ ಶ್ರಮದಿಂದ ಬಳಲಿದ್ದ ಬೇಡರು, ನೀರಿನ ತಾಣವಾಗಿದ್ದ ಬನವನ್ನು ಕಂಡು, ಸಂತೋಷಗೊಂಡು ತಮ್ಮ ದಾಹವನ್ನು ತಣಿಸಿಕೊಂಡ ಬಗೆಯನ್ನು ಅವರು ತುಂಬ ಸಹಜವಾಗಿಯೇ

"ತೊಡೆಯೆರ್ದೆ ಕೊರಲುದ್ದ ಪೊಕ್ಕು ಸಲಿಲವ
ಉಡೆಯಲ್ಲಿ ಬೆದಕಿ ನೀರ್ಗುಡಿದು ॥
ಪೊಡವಿಗೆ ಪೊರಮಟ್ಟು ಕಳಿವಣ್ಗಳ
ತಿನ್ನತೊಡಗಿದರೇನ ಹೇಟುವೆನು" ॥೧೯.೫೪॥

ಯುದ್ಧದ ವರ್ಣನೆಗಳಲ್ಲಿಯೂ ಅತಿಶಯೋಕ್ತಿಪೂರ್ಣವಾದ, ಪರಂಪರಾಗತವಾದ ಚಿತ್ರಗಳು ಕಾಣದೊರೆಯುವಂತೆಯೇ, ಸಹಜವಾದ ಚಿತ್ರಗಳೂ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ, ಶಂಬರಾಸುರವಧೆಯ ಪ್ರಸಂಗದಲ್ಲಿನ,

'ಕಂಡ ಮಾತ್ರದಿ ಖಳರಾಯ ನೇವರಿಸಿ ಕೋ
ದಂಡವತೀವಿ ಜೇವೊಡೆಯೆ ।
ಸೊಂಡಿಲ ನೆಗಹಿ ಭೂಮಿಯ ಹೊತ್ತ ಸತ್ವವೇ
ತಂಡಗಳೊರಲಿದಂತಾಯ್ತು ॥೧೨.೫೨॥
ರಂಜಿಪ ಹೊಂಗಟ್ಟಿನ ಬಿಲ್ಲ ಮನ್ಮಥ

ಸಿಂಜಿನಿಗೊಳಿಸಿ ಜೇವೊಡೆಯೆ ।
ಅಂಜಿದು ಫಣಿರಾಯ ತಲೆಯದೊನೆಯಲು ರತ್ನ
ಗುಂಜಿಯಂತೆಸೆದು ಚೆಲ್ಲಿದವು"[1] ॥೧೨.೫೩॥

–ಈ ವರ್ಣನೆಯಲ್ಲಿ ನಮಗೆ ಯುದ್ಧದ ಸಹಜಾನುಭವ ದೊರೆಯುವ ಸಂಭವವೇ ಇಲ್ಲ. ಇದೇ ಸಂದರ್ಭದಲ್ಲಿ ಸ್ವಲ್ಪ ಮೊದಲಿಗೆ ಬಂದಿರುವ–

"ಬಾಲನಂತೆಸದಿರ್ದ ಸುಜನರ್ಗೆ ಕಮ್ಮಲ–
ರ್ಗೋಲನಂದದಿ ಪೆಣ್ಣನಕೆ ।
ಕಾಲನಂತೆಸೆದ ಶಂಬರನ ಕಣ್ಮನಸಿಗೆ......." ॥೧೨.೫೦॥

–ಮಾತುಗಳೂ ಈ ಬಗೆಯ ಪರಂಪರಾಗತ ಕಲ್ಪನೆಯನ್ನೇ ನೆನಪಿಗೆ ತರುತ್ತವೆ.[೨] ಆದರೆ, ಅನಿರುದ್ಧ ಕುಂಭಾಂಡರ ಕಾಳೆಗದಲ್ಲಿ ಬರುವ, ಕುಂಭಾಂಡನ ಅಹಂಕಾರದ ಪ್ರತೀಕವಾಗಿರುವ ಈ ಮಾತುಗಳಲ್ಲಿ ಕನಕದಾಸರ ಸಹಜಾನುಭವವೇ ಮೈದಳೆದು ನಿಲ್ಲುತ್ತದೆ :

"ಎಳವಾಟಿ ಬಲಿಪಿಗೆ ಬಂದರೆ ಸೀಗೆಯ
ಮೆಳೆಯೊಳು ಮಥನವೆ ಮಗನೆ ।
ಇಳೆಯೊಳಗಜಿದರಿನ್ನೆಂದಿಗೆ ನೀ ಹುಟ್ಟಿ
ಬೆಳೆವೆ ಹೋಗೆಂದು ಸಾರಿದರು" ॥೩೪.೨೪॥

ಅಂತೆಯೇ, ಅನಿರುದ್ಧನ ಸಾಹಸಾತಿಶಯವನ್ನು ಮೆಚ್ಚಿದ ಬಾಣಾಸುರನ ಈ ಮಾತುಗಳಲ್ಲಿಯೂ ನಮಗೆ ವೀರೋಚಿತವಾದ ಸಹಜಾಭಿವ್ಯಕ್ತಿಯೇ ಎದುರಾದ ಅನುಭವವಾಗುತ್ತದೆ :

"ವೀರನದೇನು ಸಮರ್ಥನೊ ತನ್ನೈ–
ನೂಱಂಬನೊಂದು ಬಾಣದಲಿ ।
ಹಾಱಲಿಕ್ಕಿದನು ಪೇರುರದಲ್ಲಿ ಮಱಮೊನೆ
ದೋರಲೆಚ್ಚಾಡುವನಹುದೋ ॥೩೫.೩೪॥
"ವಿಸ್ತರಿಸುವರೆ ಸಾಸಿರ ತೋಳು ನನಗುಂಟು
ದುಸ್ತರ ಕರಯುಗಳದಲಿ ।

---

೧. ಈ ಕವಿಸಮಯ ಕನಕದಾಸರಿಗೆ ತುಂಬ ಪ್ರಿಯವಾದುದು ಎಂಬುದಕ್ಕೆ ಸಾಕ್ಷಿಯಾಗಿ ಈ ಹಿಂದೆ ಉದ್ಧರಿಸಲಾಗಿರುವ ಬೇಟೆಯ ವರ್ಣನೆಯನ್ನು ನೋಡಬಹುದು. (೧೯–೨೫)

೨. "ಸಾಧುಗೆ ಸಾಧು ಮಾಧುರ್ಯಂಗೆ/ಮಾಧುರ್ಯಂ ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್/ಮಾಧವನೀತನ್ ಪೆಱನಲ್ಲ" ಎಂಬ ಪ್ರಸಿದ್ಧ ತ್ರಿಪದಿಯೂ ನೆನಪಿಗೆ ಬಾರದಿರದು.

ವಿಸ್ತರಿಸುವದಚ್ಚರಿಯೆಂದು ಸಮರ ಪ್ರ–
ಹಸ್ತಮಲ್ಲನ ಕೀರ್ತಿಸಿದ" ॥೩೫.೩೫॥

ಸ್ಪಷ್ಟವಾಗಿಯೇ, ಶೃಂಗಾರ ರಸ ಈ ಕಾವ್ಯದಲ್ಲಿ ಪ್ರಧಾನವಾಗಿದೆ. ಇದರ ಅಭಿವ್ಯಕ್ತಿಗೆ ಕವಿ ವಿಶೇಷವಾದ ಒತ್ತನ್ನು ಕೊಟ್ಟಿರುವುದಕ್ಕೆ ಕಾವ್ಯದ ಉದ್ದಕ್ಕೂ ನಾವು ನಿದರ್ಶನಗಳನ್ನು ಅಪ್ರಯಾಸವಾಗಿ ಗುರುತಿಸಬಹುದು. ಶೃಂಗಾರ ಧ್ವನಿರಮ್ಯವಾಗುವುದಕ್ಕೆ ಬದಲಾಗಿ ಅತಿವಾಚ್ಯವಾಗಿಬಿಟ್ಟಿದೆಯೆಂಬ ಅನುಭವವೂ ಉಂಟಾಗದೆ ಇರದು. ಪಾತ್ರಾಪಾತ್ರಗಳ ವಿವೇಚನೆಯೂ ಇಲ್ಲದಂತೆ, ಔಚಿತ್ಯದ ಮೇರೆಯನ್ನೂ ಮೀರಿ ಶೃಂಗಾರ ಇಲ್ಲಿ ವರ್ಣಿತವಾಗುತ್ತದೆ. ಬಹುತೇಕ ಪ್ರಸಂಗಗಳು ಶೃಂಗಾರದಲ್ಲಿಯೇ ಪರ್ಯವಸಾನಗೊಳ್ಳುತ್ತವೆ. ಹಂ.ಪ. ನಾಗರಾಜಯ್ಯನವರು ಉಚಿತವಾಗಿಯೇ ಹೇಳಿರುವಂತೆ, "ದೇವರನ್ನು ವರ್ಣಿಸಲಿ, ಮನುಷ್ಯರನ್ನು ಬಣ್ಣಿಸಲಿ, ಶೃಂಗಾರ ಪುಟಿಯುತ್ತದೆ. ಭಕ್ತ ಭಗವಂತನೆಂಬ ಭೇದಭಾವವಿಲ್ಲದೆ ಭೋಗದ ಬದುಕು ಚಿತ್ರಿತವಾಗುತ್ತದೆ."[1] ಈ ಮಾತಿಗೆ ಉದಾಹರಣೆಯಾಗಿ ರುಕ್ಮಿಣಿಯ ಪುತ್ರಾಭಿವಾಂಛೆಯ ಪ್ರಸಂಗವನ್ನು ನೋಡಬಹುದು. ಪಕ್ಷಿಗಳು ತಮ್ಮ ಮರಿಗಳಿಗೆ ಗುಟುಕನ್ನು ಕೊಡುವ ದೃಶ್ಯವನ್ನು ಕಂಡು ರುಕ್ಮಿಣಿಯ ಮನಸ್ಸಿನಲ್ಲಿ ಮಕ್ಕಳ ಬಗೆಗಿನ ಆಸೆ ಮೂಡುವ ದೃಶ್ಯವನ್ನು[2] ಕನಕದಾಸರು ಚಿತ್ರಿಸಿರುವ ಬಗೆ ಇದು :

"ಶಿಶುವಾತ್ಸಲ್ಯಮಿನ್ನೆಂತುಟೊ ಬಹುಮುಗ್ಧ
ಪಶುಪಕ್ಷಿಗಳಿಗಿನಿತಾಯ್ತು ।
ವಸುದೇವ ವಂಶಾಬ್ಧಿಸಂತಾನ ಶೋ
ಭಿಸುವುದು ಪುಣ್ಯಾಧಿಕರಿಗೆ" ॥೪.೨೦॥

–ಹೀಗೆಂದು ಭಾವಿಸಿದ ರುಕ್ಮಿಣಿ ಶ್ರೀಕೃಷ್ಣನನ್ನು ಈ ಪರಿಯಾಗಿ ಪ್ರಾರ್ಥಿಸುತ್ತಾಳೆ :

'ನಾ ಪುತ್ರಸ್ಯ ಲೋಕೋಸ್ತಿ'ಯೆಂದೆಂಬ ಶಾ
ಸ್ತ್ರೋಪದೇಶವ ಕೇಳ್ದೆ ಜೀಯ ।

1. 'ಮೋಹನತರಂಗಿಣಿ', ಪೂರ್ವೋಕ್ತ, ಪು. ix (ಹಂಪ. ನಾ. ಅವರ ಮುನ್ನುಡಿ)

2. ಇದೇ ಪ್ರಸಂಗ ಎಷ್ಟು ಹೃದ್ಯವಾಗಿ ಮತ್ತು ಪರಿಣಾಮಕಾರಿಯಾಗಿ ಮೂಡಿಬಂದಿದೆ ಎಂಬುದಕ್ಕೆ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿನ ದಶರಥನ ಪುತ್ರಾಭಿವಾಂಛೆಯ ಪ್ರಸಂಗವನ್ನು ನೋಡಬಹುದು.

ನೀ ಪಾಲಿಸಬೇಕು ನನಗೊರ್ವ ಕಂದರ್ಪ
ರೂಪಾಂತ ವರಕುಮಾರನ" ॥೪.೪೧॥

ಇದಕ್ಕೆ ಕೃಷ್ಣನ ಪ್ರತಿಕ್ರಿಯೆ ಇದು :

"ನಕ್ಕನು ಕೃಷ್ಣ ನಲ್ಲೆಯ ಮಾತ ಕೇಳ್ದು ನೀ
ಮಕ್ಕಳ ಪಡೆದ ಮಾತ್ರದಲಿ ।
ಕಕ್ಕಸ ಮೊಲೆ ಜಜೆದಪುದೆಂದು ಕಟಕಿಯ
ನೊಕ್ಕಣಿಸಿದನು ವಲ್ಲಭೆಯ ॥೪.೨೨॥

ಈ ಮಾತಿಗೆ ಪ್ರತಿಯಾಗಿ ರುಕ್ಮಿಣಿ ಹೇಳುವ ಸಮಾಧಾನ ಹೀಗಿದೆ :

"ಮಗುವುಂಡು ಬಲ್ಮೊಲೆತೊರೆದರೆ ಮತ್ತಿಷ್ಟು
ಬಿಗುಹುದೋರುವುದುರ ಸ್ಥಳದಿ ।
ಲಗುಗೆಯ್ಯದೆನ್ನ ಬಿನ್ನಹವ ಲಾಲಿಪುದೆಂದು
ಸುಗುಣಂಗೆ ಬಿನ್ನಯಿಸಿದಳು" ॥೪.೨೩॥

ಕಂದರ್ಪಜನನದ ಪೀಠಿಕೆ ಹೀಗೆ ಸುರುಚಿದ್ಯೋತಕವಾಗಿರದಿದ್ದರೂ,[1] ರುಕ್ಮಿಣಿ ಗರ್ಭವತಿಯಾದ ಸಂತೋಷದಲ್ಲಿ ಇಡೀ ಪ್ರಕೃತಿಯೇ ಹೇಗೆ ಸ್ಪಂದಿಸಿತೆಂಬುದನ್ನು ಚಿತ್ರಿಸುವ ಚಿತ್ರ ಅತಿಶಯೋಕ್ತಿಪೂರ್ಣವಾಗಿದ್ದು ಸುಂದರವಾಗಿ ಮೈದಳೆದಿರುವುದನ್ನು ಕಾಣಬಹುದು. ಆಗ ಆಕಾಶದಲ್ಲಿ ಕಾಣಿಸಿಕೊಂಡ ಮೋಡ ಮಿಂಚು, ಗುಡುಗು–ಸಿಡಿಲು ಮತ್ತು ಹೂಮಳೆಗಳ ಚಿತ್ರ ಹೀಗೆ ಬಂದಿದೆ :

".............ಮೇಘಗರ್ಜಿಸಿದುವು ದೇವ
ದುಂದುಭಿಗಳ ಹೊಡೆದಂತೆ ॥೪.೨೩॥
ಇಂಚರದಮರಿಯರೊಡನಾಡುವ ನೇತ್ರ
ಲಾಂಛನಗುಜಿ಼ ಮೇಘವೆಣ್ಣು ।
ಸಂಚಲದೃಗುಸನ್ನೆಯ ಮಾಡಿದಂದದಿ
ಮಿಂಚಡರಿತು ನಭಸ್ಥಳದಿ ॥೪.೩೩॥

1. ಮಕ್ಕಳಿಗೆ ಮೊಲೆಯೂಡಿಸಿದರೆ ತಮ್ಮ ಸೌಂದರ್ಯ ಹಾಳಾಗುತ್ತದೆಂದು ಭಾವಿಸುವ ಸ್ತ್ರೀ ಸ್ವಾತಂತ್ರ್ಯವಾದಿಗಳೂ ಅಚ್ಚರಿಗೊಳ್ಳುವಂಥ ಪ್ರಸಂಗ ಇದು.

ಕಡುಗೋಪದಲಿ ಜೀವಿತರಣನರಸಿಂಹ
ನಡು ವಜ್ರಗಂಬವನೊಡೆದು ।
ಘಡುಘಡಿಸುವ ಪೊಱಮಟ್ಟಂತೆ ಮಹದಾದಿ
ಸಿಡಿಲೆಱಗಿದುವು ಖೇಚರದಿ ॥೪.೩೪॥

ಜಂಭಾರಿ ತನ್ನೈರಾವತ ನೀರಾಟ
ಗೊಂಬುದ ನೋಡಬೇಕೆಂದು ।
ಪೊಂಬಳ್ಳಿಗಂಟಿಯ ಬಲಿದಂತೆ ಸುರಚಾಪ
ಸಂಭ್ರಮವಾಯ್ತು ಕಣ್ಮನದೆ ॥೪.೩೫॥

ತಾಪಸ ಸೂರ್ಯ ತನ್ನಯ ವಂಶೋತ್ಪನ್ನ
ಭೂಪಾಲಕರಿಗೆ ಕೂರ್ತು ।
ರೂಪಾಂತನೆಂದರಳ್ಗಱಿದ ರೀತಿಯೊಳಿಂದ್ರ
ಗೋಪದ ಪುಟುವುದರಿದುವು ॥೪.೩೬॥

ಶೃಂಗಾರರಸ ನಿರೂಪಣೆಯ ಬಗೆಗಿನ ಇದೇ ಅತಿರೇಕ ಜಲಕೇಳಿಯ ವರ್ಣನೆಯಲ್ಲೂ ಕಾಣದೊರೆಯುತ್ತದೆ. ಶ್ರೀಕೃಷ್ಣ ಮತ್ತು ರುಕ್ಮಿಣಿ-ಸತ್ಯಭಾಮೆಯರ ಪ್ರಸಂಗವಾದರೂ ಸರಿಯೆ, ಕಾಮ-ರತಿಯರ ಪ್ರಸಂಗವಾದರೂ ಸರಿಯೆ, ಕವಿಯ ಶೃಂಗಾರ-ಸಾಮರ್ಥ್ಯ ಅತಿವಾಚ್ಯತೆಯಲ್ಲಿಯೇ ರಮಿಸುತ್ತದೆ. ಉದಾಹರಣೆಗೆ, ಈ ವರ್ಣನೆಗಳನ್ನು ನೋಡಬಹುದು :

"ಕಮಲಾಕ್ಷ ನೀರೊಳುಬಿದ್ದು ನಿಟ್ಟಿಸಲಾಗ
ತಮಚೋರನಲ್ಲಿಂದ ಹೊರಟು ।
ರಮಣಿಯರ ಬಲ್ಮೊಲೆದೊಟ್ಟ ಕರ್ಬಣ್ಣ
ತಮವೆಂದು ಹಿಡಿದೌಕಿದನು ॥೧೪.೫೫॥

* * *

ಕೆಂಬಾವುಡೆ ದುಡಿವಸನಗಳೆ ತೊಯ್ದು ನಿ
ತಂಬವು ದೃಶ್ಯತೆವಡೆದು ।
ಪೊಂಬಾಟೆದೊಡೆ ತೋಳು ನುಣ್ಮೊಲೆ ಮೆಱೆಯೆ ಪೀ
ತಾಂಬರ ನೋಡಿ ಹಿಗ್ಗಿದನು ॥೧೪.೫೮॥

ಕೃಷ್ಣನ ಪರಿಯೇ ಹೀಗಾದರೆ, ಕಾಮ-ರತಿಯರ ಚೆಲ್ಲಾಟ ಇನ್ನು ಹೇಗೆ

ಆಗಬಹುದು? ಕವಿಯ ಈ ವರ್ಣನ–ಪ್ರತಿಭೆ ಮತ್ತಷ್ಟು ಸಕ್ರಿಯವಾಗುತ್ತದೆ. ಇದರ ಪರಿಣಾಮವಾಗಿ

"ಉಟ್ಟ ಸಾಲಿಯ ಸೀರೆ ತೊಯ್ದು ಪೇರುರದಲ್ಲಿ
ಬಟ್ಟ ಬಲ್ಮೊಲೆ ಸುಢಾಳಿಸಲು ।
ನೆಟ್ಟನೆ ಪೊರೆಮಟ್ಟು [ನೀರಿಂದ] ಬಂದು ಕಾಮಗೆ ಕೈ
ಗೊಟ್ಟಳು ಮುಂಗುರುಳಿಡಿದು ॥೧೪.೭೭॥

* * *

"ಹೊಗರುಗುವಂಗೋಪಾಂಗ ವಕ್ಷದೊಳು ಪೊಂ
ಬೊಗರಿಯಂತಿರ್ಪ ನುಣ್ಮೊಲೆಯ ।
ದೃಗುಯುಗಳದೆ ನೋಡಿ ಹೆಱೆಹಿಂಗಲಾರದೆ
ಮುಗುಳಂಬನಮರ್ದಪ್ಪಿದನು ॥೧೪.೮೨॥

"ಪಲ್ಲವಿಸಿದ ನಿರ್ಜರ ಕಲ್ಪವೃಕ್ಷವ
ವಲ್ಲರಿ ತೊಡರಿಕೊಂಬಂತೆ ।
ಸಲ್ಲಲಿತಾಂಗಿನುಣ್ದೋಳಿಂದೆ ರಸದಾಳಿ
ವಿಲ್ಲನ ಬಿಗಿದಪ್ಪಿದಳು" ॥೧೪.೮೩॥

ಈ ಶೃಂಗಾರಿಕ ಮನೋಧರ್ಮ ಹೇಗೆ ಅನೌಚಿತ್ಯಕ್ಕೂ ಎಡೆಮಾಡಿಕೊಡುತ್ತದೆ ಎಂಬುದಕ್ಕೆ ನಿದರ್ಶನವಾಗಿ ಚಿತ್ರಲೇಖೆ ಅನಿರುದ್ಧನನ್ನು ಹೊತ್ತುತರುವ ಪ್ರಸಂಗದ ವರ್ಣನೆಯನ್ನು ನೋಡಬಹುದು : ವಾಯುವೇಗದಿಂದ ಅವಳು ಹಾರಿಬರುತ್ತಿರುವಾಗ, ಬಿದ್ದು ಹೋದೇನೆಂಬ ಭಯದಿಂದ ಅನಿರುದ್ಧ ಅವಳ ಮೊಲೆಗಳನ್ನೇ ಬಲವಾಗಿ ಹಿಡಿದುಕೊಂಡನಂತೆ, ಅವಳೂ ಪುಲಕಗೊಂಡಳಂತೆ :

"ಪವನವೇಗದ ಕೀೞ್ಪಿಡಿಸಿದೂವಾಳಿಪ
ಜವಗಾತಿಯ ಬೆನ್ನೊಳಿರ್ದು ।
ಕುವರ ಕಂಗೆಟ್ಟು ಬಿದ್ದಪೆನೆಂದು ತಕ್ಕೆಗೊಂ
ಡವಳ ನುಣ್ಮೊಲೆಯ ಬಲ್ಪಿಡಿದ ॥೩೧.೨೭॥

"ಮುಟ್ಟಿದೊಡಾಕ್ಷಣ ತನುರೋಮಗಳು ಗುಡಿ
ಗಟ್ಟಿ ಮೆಯ್ಯೊಳಗೆ ಕಾತುರವ ।
ಮುಟ್ಟಿದರೆದೆ ಹದಿರ್ಗೊಳ್ಳದೆ ಕರಣದ
ಗಟ್ಟಿವಾಳದೆ ತೆರಳಿದಳು" ॥೩೧.೨೮॥

ಮುಂದೆ ಈ ಪ್ರಸಂಗವನ್ನು ಉಷೆಗೆ ವರ್ಣಿಸಿ ಹೇಳುವಾಗ, ತಾಯಿ ತನ್ನ ಮಗುವನ್ನು ಬೆನ್ನಲ್ಲಿ ಹೊತ್ತು ತರುವಂತೆ ನನ್ನನ್ನು ಹೊತ್ತುತಂದು ನಿನ್ನಲ್ಲಿ ಸುಖಿಸುವಂತೆ ಮಾಡಿದಳು ಎಂಬ ಮಾತನ್ನು ತಂದಿರುವುದಂತೂ ಇದನ್ನು ಅನೌಚಿತ್ಯದ ಶಿಖರಕ್ಕೇ ಏರಿಸುತ್ತದೆ :

"ಉನ್ನತ ಗಗನ ವೀಧಿಯಲಿ ಮಾತೃಕೆ ಕೊಂಡು
ಬೆನ್ನೊಳು ಶಿಶುವ ತರ್ಪಂತೆ ।
ನನ್ನಯ ಭಾರಭಾರವ ಹೊತ್ತು ತಂದೀಗ
ನಿನ್ನೊಳು ಸೊಗವಡಿಸಿದಳು' ॥೩೨.೩೮॥

ಕವಿಯ ಮನೋಧರ್ಮವೇ ಹೀಗಿರುವಾಗ, ಸುರತವರ್ಣನೆಯ ಸಂದರ್ಭದಲ್ಲಿ ಕವಿಯ ಆವೇಶ ಅತಿವಾಚ್ಯತೆಯಲ್ಲಿ ರಮಿಸುವುದು ಆಶ್ಚರ್ಯದ ಸಂಗತಿಯೇನೂ ಆಗಿ ಉಳಿಯುವುದಿಲ್ಲ. ಉದಾಹರಣೆಗೆ, 'ರತಿಯ ಗರ್ಭಾದಾನ'ದ ಪ್ರಸಂಗದಲ್ಲಿ ಬರುವ ಈ ಮಾತುಗಳನ್ನುನೋಡಬಹುದು :

"ವಾಮಹಸ್ತವ ತುರುಬಿನೊಳಿಟ್ಟು ಬಲಗೈಯ
ಪ್ರೇಮದಿಂ ಚುಂಬುಕಾಗ್ರವಿಡಿದು ।
ಕೋಮಲವಡೆದ ಬಂದುಗೆವಾಯ್ಗೆ ಪೋಳ್ದುಂಬಿ
ಭ್ರಾಮಕವಡೆದು ಚುಂಬಿಸಿದ ॥೧೬.೩೭॥

"ನೆಟ್ಟನೆ ನಿಱಿಗಳೆದುದು ಚಂದ್ರಗಾವೀಯ
ಬಟ್ಟೆಪಾವುಡೆ ಸಹವಾಗಿ ।
ಕಟ್ಟಾಯವಡೆದಿರ್ದನಂಗಜನಲರ್ಗೋಲ
ತೊಟ್ಟ ಮೋಹನ ಶಕ್ತಿಯಂತೆ ॥೧೬.೩೮॥

"ಪೊಸವಗೆವಿದಿನಿಯಳ ರೂಪಕಂಡು ಸೈ
ರಿಸಲಾಱದಮರ್ದಪ್ಪಿಕೊಂಡು ।
ವಸನವ ಕಳೆದೊಳೊಯ್ಯನೆ ಪಕ್ಕೆಗೊಳಿಸಿ ಸ
ದ್ವಸನಕ್ಕೆ ಪ್ರಾರಂಭಿಸಿದ" ॥೧೬.೩೯॥

* * *

ತೊಂಡೆವಣ್ದುಟಿಯ ಪೀರ್ದರೆಲೋಚನಯುಗ
ಬೆಂಡೆದ್ದು ನವಿರ್ಗುಡಿ ಕಟ್ಟಿ

ಪುಂಡರೀಕಾಕ್ಷಿಗೆ ನಾಣೊಸರ್ದುದ ನೋಡಿ
ಕಂಡನು ತವಕೊನ್ನತಿಯ ॥೧೯.೪೧॥

ಸುದತಿಶಿರೋಮಣಿ ಸುರತಕ್ಕೆ ನೀ ಪ್ರಪಂ
ಚದಲಿ ಮೇಲಾದುದಕಂಡು ।
ಹದನಾಹುದೆಂದು ತಾತ್ಪರ್ಯದಿ ರತಿಗೊಡ
ರ್ಚಿದ ಕಾಮಕಾಮಿನಿಯೊಡನೆ" ॥೧೬.೪೨॥

ಇದನ್ನೆಲ್ಲ ನೋಡಿದರೆ, ಸಂಪ್ರದಾಯಾನುಸರಣೆಗಿಂತಲೂ ಮಿಗಿಲಾಗಿ "ಬಹುಶಃ ಆರಿಸಿಕೊಂಡಿರುವ ಶೃಂಗಾರದ ವಸ್ತುವಿಗೆ ಅಪಚಾರವಾಗಬಾರದೆಂದೂ, ಸನ್ಯಾಸಿಯಾದವನೊಬ್ಬ ಸಂಸಾರದ ಸೊಗಸನ್ನೂ ದಾಂಪತ್ಯದ ರಹಸ್ಯವನ್ನೂ ಹೇಗೆ ತಾನೆ ಸಂಪೂರ್ಣವಾಗಿ ಚಿತ್ರಿಸಬಲ್ಲ ಎಂಬ ರಸಿಕರ ಸಂದೇಹವನ್ನು ದೂರಪಡಿಸಲೆಂದೂ ಅಗತ್ಯಕ್ಕಿಂತ ಹೆಚ್ಚು ರಸಿಕತೆಯನ್ನು ಪ್ರಕಟಿಸಿದಂತೆ ತೋರುತ್ತದೆ"[1] ಎಂಬ ಮಾತನ್ನು ಒಪ್ಪಬೇಕಾಗುತ್ತದೆ.[2]

ಇಷ್ಟಾಗಿಯೂ ಕನಕದಾಸರು ಶಕ್ತಕವಿ ಎಂಬುದರಲ್ಲಿ ಅನುಮಾನವೇನೂ ಇಲ್ಲ. ಬಾಳಿನ ವಿವಿಧ ಮುಖಗಳ ಅನುಭವಗಳನ್ನು ಅವರು ಸಾಂದ್ರವಾಗಿಯೂ, ಪರಿಣಾಮಕಾರಿಯೂ ಆಗಿ ಚಿತ್ರಿಸಬಲ್ಲರೆಂಬುದಕ್ಕೆ ಅನೇಕ ನಿದರ್ಶನಗಳನ್ನು ಎತ್ತಿಕೊಡಬಹುದು. ತಾನು ಹೆತ್ತ ಮಗು ಕಾಣೆಯಾದಾಗ ರುಕ್ಮಿಣಿ ಹಂಬಲಿಸುವ ಪರಿಯನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಅವಳ ಆತಂಕ, ಕಾತರ, ದುಃಖಗಳೆಲ್ಲ ಹೇಗೆ ಮಡುಗಟ್ಟುತ್ತವೆಂಬುದನ್ನು ಇಲ್ಲಿ ನೋಡಬಹುದು :

"ಮಾಣದೆ ಮಣಿದೀಪ್ತಿಯ ಪಿಡಿದಾವಾವ
ತಾಣದೊಳಱಿಸಿ ನಂದನನ ।
ಕಾಣದೆ ಕಂಗೆಟ್ಟು ಹೊರಳ್ದಳು ಮುಮ್ಮೊನೆ
ಬಾಣತಾಗಿದ ಹುಲ್ಲೆಯಂತೆ ॥ ೪.೭೮ ॥

1. 'ಮೋಹನ ತರಂಗಿಣಿ, ಪೂರ್ವೋಕ್ತ ಪು. ix (ಹಂಪ. ನಾಗರಾಜಯ್ಯನವರ 'ಮುನ್ನುಡಿ')

2. ಶೃಂಗಾರದ ಅನೌಚಿತ್ಯಕ್ಕೆ ನಮ್ಮ ಸಾಹಿತ್ಯದಲ್ಲಿ ಬರಗಾಲವೇನೂ ಇಲ್ಲ. ನೇಮಿಚಂದ್ರ, ಲಕ್ಷ್ಮೀಶ, ರತ್ನಾಕರವರ್ಣಿ ಮೊದಲಾದವರಲ್ಲಿ ಇಂಥದನ್ನು ಸುಲಭವಾಗಿಯೇ ಗುರುತಿಸಬಹುದು.

"ಎಣ್ಣೆಯ ತಲೆಗೂಡಿದುದಿಲ್ಲ ನೊರೆವಾಲು
ಬೆಣ್ಣೆಯ ಮೆಲಿಸಿದುದಿಲ್ಲ ।
ಕಣ್ಣೆವೆ ಹಳಚಿ ನೋಡಿದುದಿಲ್ಲ ಮಗನ ಲಾ
ವಣ್ಯವನೆಂದಳಲಿದಳು ॥ ೪.೭೯ ॥

"ಮೊಲೆವಾಲು ತೊರೆದುಗುತಿರೆ ಕೋ ಲೋಚನವಾರಿ
ಸೆಲೆಹಾಯ್ದೊಡೆ ಹೋಗುತಿದೆ ಕೋ ।
ನೆಲೆಗೊಳ್ಳದು ಚಿತ್ತ ಮಗನೆ ನೀನಿದಿರ್ವಂದು
ತಲೆದೋಱೆಸೆಂದಟಲಿದಳು ॥ ೪.೮೦ ॥

"ಕರೆದೊಡೋಯೆನ್ನಬಾರದೆ ಕಂದ ನಿನ್ನಯ
ಸಿರಿಮೊಗಗಾಣದೆಂತಿರಲೊ
ಪರಿತಾಪವ ಪುಟ್ಟಿಸಿ ಪೋಗಬಂದೆಯ
ಹರಿಕೊಟ್ಟ ವರ ಬಯಲಾಯ್ತು ॥೪.೮೧॥

"ಹಾಲಿಗೆ ಹಂಬಲಿಸುವವನಲ್ಲ ಬಿಡದಂಬೆ
ಗಾಲಿಕ್ಕೆ ತೆರಳುವನಲ್ಲ ।
ಕಾಲುಬಲಿದು ದಟ್ಟಡಿಯಿಡುವವನಲ್ಲ
ಬಾಳನೆಲ್ಲಿಗೆ ಹೋದನವ್ವ" ॥ ೪.೮೨ ॥

ಅಂತೆಯೇ ಮನ್ಮಥ–ದಹನದ ಪ್ರಸಂಗದಲ್ಲಿ ರತಿ ತನ್ನ ವೇದನೆಯನ್ನು ತೋಡಿಕೊಳ್ಳುವಾಗ ಶಿವನೊಡನೆ ಆಡುವ ಈ ಮಾತು ಅದೆಷ್ಟು ಪರಿಣಾಮಕಾರಿಯಾಗಿದೆ ಎಂಬುದನ್ನು ಬಿಡಿಸಿ ಹೇಳುವ ಅಗತ್ಯವೇ ಉಂಟಾಗುವುದಿಲ್ಲ :

"ಪಾಪಕ್ಷಯಕ್ಕೆಂದು ಗಂಗೆಯೊಳ್ಮಿಂದರೆ
ಪಾಪಿಯ ಮೊಸಳೆತಿಂದಂತೆ ।
ತಾಪಸ್ಥ ಸುರರಿಗೆ ಹಿತಗೈಯ ಬಂದ ಪ್ರಾ
ಣೋಪನನುರಿಹಿದೆ ನೀನು" ॥ ೮.೩೩ ॥

ಇದೇ ರೀತಿ, ಮಗುವನ್ನು ಅಪಹರಿಸುವಂತೆ ಶಂಬರಾಸುರನ್ನು ಪ್ರಚೋದಿಸುವ ಸಂದರ್ಭದಲ್ಲಿ ಪ್ರಾಚೀನೋಕ್ತಿಯೊಂದನ್ನು ಅತ್ಯುಚಿತವಾಗಿ

ಬಳಸಿಕೊಂಡಿರುವುದು ಮಾತ್ರವಲ್ಲದೆ, ಇನ್ನೊಂದು ಸುಂದರವಾದ ಹೋಲಿಕೆಯಿಂದ ಇಡೀ ಪ್ರಸಂಗದ ಪರಿಣಾಮ ಹಲವು ಪಟ್ಟಾಗುವಂತೆ ಮಾಡುವ ಕೌಶಲವನ್ನೂ ಅವರು ಮೆರೆದಿದ್ದಾರೆ :

"ಕಟಿಲೆಯ ನಖದಲಿ ಚಿವುಟಲಹುದು ಮುಂದೆ
ಲಳಿಗೆ ಕೂರುಗುರಿಗಂಜುವುದೇ ।
ಉಟಿದ ಮಾತೇನು ಆಲಸ್ಯದಿಂದಮೃತವು
ಗಟಿಲನೆ ವಿಷವಾಗದಿಹುದೇ" ॥ ೧೧.೧೩ ॥

ಹೀಗೆ, ಪೌರ್ವಾತ್ಯ ಮಹಾಕಾವ್ಯಗಳ ಲಕ್ಷಣದ ದೃಷ್ಟಿಯಲ್ಲಿ ಈ ಕಾವ್ಯದ ನೆಲೆ-ಬೆಲೆಗಳೇನು ಎಂಬುದನ್ನು ಪರಿಶೀಲಿಸಬಹುದು. ಪಾಶ್ಚಾತ್ಯ ಮಹಾಕಾವ್ಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು 'A Glossary of Literary Terms' ನಲ್ಲಿ ಎಂ. ಎಚ್. ಅಬ್ರಾಮ್ಸ್ ಅವರು ಕೊಟ್ಟಿರುವ ಈ ಪರಿಭಾಷೆಯನ್ನು ಪ್ರಾತಿನಿಧಿಕವಾಗಿ ಪರಿಗಣಿಸಬಹುದಾಗಿದೆ :

"A long marrative poem on a great and serious subjected. related in an elevated style and centred on a heroic or quasi-divine figure, on whose action depends the fate of the tribe or a nation or the human race."

ಇದರಲ್ಲಿ ಐದು ಮುಖ್ಯಾಂಶಗಳನ್ನು ಒತ್ತಿ ಹೇಳಲಾಗಿದೆ: (i) ಮಹಾಕಾವ್ಯ ಎಂಬುದು ಸುದೀರ್ಘವಾದ ಕಥನಕಾವ್ಯವಾಗಿರುತ್ತದೆ; (ii) ಅದು ಮಹತ್ತಾದ ಹಾಗೂ ಗಂಭೀರವಾದ ವಸ್ತುವನ್ನು ಆಧರಿಸಿರುತ್ತದೆ; (iii) ಅದರ ಶೈಲಿ ಉದಾತ್ತವಾಗಿರುತ್ತದೆ; (iv) ಪರಾಕ್ರಮಿ ಅಥವಾ ದೈವಾಂಶಸಂಭೂತನಾದ ವ್ಯಕ್ತಿ ಅದರ ಕೇಂದ್ರಬಿಂದುವಾಗಿರುತ್ತದೆ; ಮತ್ತು (v) ಅವನ ಕಾರ್ಯ ಒಂದು ಜನಾಂಗ ಅಥವಾ ರಾಷ್ಟ್ರದ ಅಥವಾ ಮಾನವ ಜನಾಂಗದ ಭವಿಷ್ಯವನ್ನು ನಿರ್ಧರಿಸುವಂಥದಾಗಿರುತ್ತದೆ.

ಸುದೀರ್ಘವಾದ ಕಾವ್ಯ ಮಹಾಕಾವ್ಯವೆನ್ನಿಸಿಕೊಳ್ಳುತ್ತದೆ ಎಂಬುದು ನಿಜವಾದರೂ ಅದರ ದೀರ್ಘತ್ವವೇ ಅದಕ್ಕೆ ಮಹಾಕಾವ್ಯತ್ವವನ್ನೂ ತಂದುಕೊಡುವುದಿಲ್ಲ ಎಂಬುದು ಸ್ಪಷ್ಟವೇ ಆಗಿದೆ. ಆ ದೀರ್ಘತ್ವವನ್ನು ಸಮರ್ಥಿಸುವಂಥ ಅಷ್ಟೇ ಅಲ್ಲ ಅದನ್ನು ಮೀರಿ ನಿಲ್ಲುವಂಥ ಗುರುತ್ವ ಅದರಲ್ಲಿ ಸಮಾವೇಶಗೊಂಡಿದ್ದಾಗ ಮಾತ್ರವೇ ಅದು ನಿಜಕ್ಕೂ ಮಹಾಕಾವ್ಯವೆನ್ನಿಸಿಕೊಳ್ಳುತ್ತದೆ. ಒಂದು ಸಮುದಾಯ ಅಥವಾ ರಾಷ್ಟ್ರ ಅಥವಾ

ಮಾನವ ಜನಾಂಗದ ಭವಿಷ್ಯವನ್ನೇ ನಿರ್ಧರಿಸುವಂಥ ಕ್ರಿಯೆ ಅದಕ್ಕೆ ಮಾಧ್ಯಮವಾಗಿ ಪರಿಣಮಿಸುವಂಥ ಮಹತ್ವದ ವ್ಯಕ್ತಿತ್ವ, ಅದರ ಕೇಂದ್ರ ಪಾತ್ರವಾಗಿರುವುದು ಹಾಗೂ ಇದರ ನಿರೂಪಣೆ, ಉದಾತ್ತ ರೂಪದಲ್ಲಿ ನೆರವೇರಿರುವುದು–ಇವು ಮಹಾಕಾವ್ಯದ ವಸ್ತುವಿಗೆ, ಗುರುತ್ವವನ್ನು ತಂದುಕೊಡುವ ಅಂಶಗಳು. ಈ ಕಾರಣಗಳಿಂದಾಗಿಯೇ ಅದು ನಮ್ಮ ನಿಜಜೀವನಕ್ಕೆ ನಿಕಟವಾಗಿ ಸಂಬಂಧಿಸಿರುತ್ತದೆ, ಹಾಸು–ಹೊಕ್ಕಾಗಿ ಬೆರೆತುಕೊಂಡಿರುತ್ತದೆ. ಕಾಲಾವಧಿಯ ದೃಷ್ಟಿಯಿಂದ ನಮಗೆ ತುಂಬ ದೂರದ್ದೆನಿಸಬಹುದಾದರೂ, ನಮ್ಮ ಅಂತರ್ಯವನ್ನೇ ಕಲಕಿಬಿಡುವಷ್ಟರ ಮಟ್ಟಿಗೆ ಅದು ನಮಗೆ ಹತ್ತಿರದ್ದೇ ಆಗಿರುತ್ತದೆ, ನಾಲ್ಕನೆಯ ಆಯಾಮದಲ್ಲಿ, ಮಾನವೀಯ ಜೀವನ ಅನುಭವಗಳ ಮೂರ್ತರೂಪವೇ ಆಗಿಬಿಡುತ್ತದೆ ; ಹಾಗೂ, ತನ್ನ ಈ ವೈಶಿಷ್ಟ್ಯಗಳಿಂದಾಗಿ ಅದು ಜಗತ್ತಿನ ಸಾಂಸ್ಕೃತಿಕ ಸಂಪತ್ತಿ ಎಂದೂ ಅನ್ನಿಸಿಕೊಳ್ಳುತ್ತದೆ. ಈ ಉದ್ದೇಶವನ್ನು ಈಡೇರಿಸಲು ವಿಶಾಲ ಭಿತ್ತಿಯೊಂದನ್ನು ಯೋಜಿಸಿಕೊಳ್ಳ ಬೇಕಾಗುತ್ತದೆ, ಭವ್ಯವೆನಿಸುವಂಥ ಪಾತ್ರಗಳನ್ನು ರೂಪಿಸಿಕೊಳ್ಳಬೇಕಾಗುತ್ತದೆ : ಚಿರಸ್ಥಾಯಿ ಎನ್ನಬಹುದಾದಂಥ ಘಟನೆಗಳನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಇದಕ್ಕೆ ಮಾಧ್ಯಮವಾಗಿ ಹಲವು ಆಶಯಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಅವು ಯಾವುವೆಂದರೆ ; (i) ಯುದ್ಧಗಳು ; (ii) ಸಮುದ್ರಯಾನ ; (iii) ಅಪಹರಣ ಮತ್ತೆ ಸೆರೆ ; (iv) ಸ್ಪರ್ಧೆಗಳು ; (v) ಚರ್ಚೆಗಳು ; (vi) ಮಹತ್ತರ ಪಾತ್ರಗಳು ; (vii) ವಿಧಿವಾದ ; (viii) ಅತಿಮಾನವೀಯ ಅಂಶಗಳು; (ix) ಅಧೋಲೋಕದ ಯಾತ್ರೆ.

ಯುದ್ಧಗಳು ನಾಯಕ ಪಾತ್ರಗಳ ಶೌರ್ಯಾತಿಶಯವನ್ನು ಮೆರೆಯುವುದಕ್ಕೆ ಸಾಧಕವಾಗಿ ಬರುವಂಥ ಆಶಯುವೆನ್ನಿಸಿಕೊಂಡಿವೆ. "ವೀರ ಕಾವ್ಯಕ್ಕೆ ಅತ್ಯುಚಿತವಾದ ಏಕೈಕ ಆಶಯ" (hitherto the only argument herioc deemed" Paradis Lost IX. 28-29) ಎಂದು ಮಿಲ್ಟನ್ ಕೂಡ ಇದನ್ನೂ ಹಾಡಿ ಹೊಗಳಿದ್ದಾನೆ. ನಾಯಕ ಪಾತ್ರಗಳ ಮಹತ್ವ–ಉದಾತ್ತತೆಗಳೂ ನಮ್ಮ ಅರಿವಿಗೆ ಬರಲೂ ಯುದ್ಧದ ಪ್ರಸಂಗಗಳು ನೆರವಾಗುತ್ತವೆ. ಅನೇಕವೇಳೆ ಇವು ಜನಾಂಗದ ಭವಿತವ್ಯವನ್ನೇ ನಿರ್ಧರಿಸುವ ಒರೆಗಲ್ಲುಗಳೂ ಆಗಿ ಪರಿಣಮಿಸುತ್ತವೆ. ಹೀಗಾಗಿ, ಮಹಾಕಾವ್ಯದಲ್ಲಿ ಈ ಆಶಯಕ್ಕೆ ಮೊದಲ ಮನ್ನಣೆ ದೊರೆತಿದೆ. ಕವಿಗೆ ತನ್ನ ಜೀವನಾನುಭವವನ್ನು, ವಿಭಿನ್ನ ಜನಸಮುದಾಯಗಳ ರೀತಿ ನೀತಿಗಳು, ಆಚರಣೆ–ಸಂಪ್ರದಾಯಗಳು ಮತ್ತು ಸಭ್ಯತೆ–ಸಂಸ್ಕೃತಿಗಳ ಬಗೆಗಿನ ತನ್ನ ಅರಿವನ್ನು ಚಿತ್ರಿಸಲು

ಸಮುದ್ರಯಾನದ ಆಶಯ ತುಂಬ ಉಪಯುಕ್ತವಾಗುತ್ತದೆ. ಸ್ಪರ್ಧೆಗಳು ವಿವಿಧ ಕಲೆಗಳಲ್ಲಿ ಯೋಧರ ಪ್ರತಿಭಾ–ಸಾಮರ್ಥ್ಯಗಳನ್ನು ಕಂಡುಕೊಳ್ಳುವ ಅವಕಾಶಗಳನ್ನು ಒದಗಿಸುವುದಲ್ಲದೆ, ಹಿರಿಯರ ಸ್ಮರಣೆಯ ಸಂದರ್ಭಗಳಾಗಿಯೂ ಕವಿಗಳಿಗೆ ಉಪಯುಕ್ತವೆನ್ನಿಸುತ್ತವೆ. ಮೃತರನ್ನು ಗೌರವಿಸುವ ಮಾಧ್ಯಮವೆಂಬಂತೆ, ಇವು ಪಾಶ್ಚಾತ್ಯ ಕಾವ್ಯಗಳಲ್ಲಿ ಕಾಣದೊರೆಯುತ್ತವೆ. ಈ ಬಗೆಯ ದೈಹಿಕ ಉಲ್ಲಾಸಕ್ಕೆ ಈ ಸ್ಪರ್ಧೆಗಳು ಅತ್ಯುತ್ತಮ ಅವಕಾಶವನ್ನು ಒದಗಿಸಿದರೆ, ವಾಗ್ವಾದಗಳೂ, ಚರ್ಚೆಗಳು, ಮಂತ್ರಾಲೋಚನೆಗಳು ಬೌದ್ಧಿಕ ವಿಲಾಸಕ್ಕೆ ಅನುವು ಮಾಡಿಕೊಡುತ್ತವೆ. ಕಾವ್ಯದ ಕೇಂದ್ರ ಆಸಕ್ತಿಯ ತಾಣಗಳಾಗಿ ಪರಿಣಮಿಸುವಂಥ ತಮ್ಮ ಕ್ರಿಯೆಗಳಿಂದ ಜನಾಂಗದ ಭವಿಷ್ಯವನ್ನೇ ಬರೆದಿಡುವಂಥ ಮಹತ್ತರ ಪಾತ್ರಗಳ ಕಲ್ಪನೆ ಕಾವ್ಯಕ್ಕೆ ಗಂಭೀರತೆ, ಉದಾತ್ತತೆಗಳನ್ನು ತಂದುಕೊಡುತ್ತದೆ, ಕಾವ್ಯದಲ್ಲಿನ ಘಟನೆಗಳಿಗೆ ಸ್ವಾರಸ್ಯಕರವಾದ ತಿರುವು ಮೂಡುವುದೂ ಇಂಥ ಪಾತ್ರಗಳಿಂದಲೇ. ಇಂಥ ಪಾತ್ರ ಕಾವ್ಯಕ್ಕೆ ಜೀವಂತಿಕೆ ಮತ್ತು ಲವಲವಿಕೆ ಸಮನಿಸುತ್ತವೆ. ಅತಿಮಾನವೀಯ ಅಂಶಗಳು ಕಾವ್ಯದ ಹಿನ್ನೆಲೆ–ಮುನ್ನೆಲೆಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸಬಹುದಾದರೂ ಮಾನವ ಭವಿತ್ಯವೇ ಮುಖ್ಯವಾಗಿರುವಂತೆ ಅವುಗಳನ್ನು ಅಳವಡಿಸಿಕೊಳ್ಳಲಾಗುತ್ತದೆ. ಅನೇಕ ಸಂದರ್ಭಗಳಲ್ಲಿ ತಮ್ಮ 'ಗತಿ' ಏನೆಂಬುದು ಪಾತ್ರಗಳಿಗೆ ಗೊತ್ತಿದ್ದರೂ, ಆ 'ವಿಧಿ'ಯನ್ನು ನೆನೆದು, ಅವು ಕೈ ಚೆಲ್ಲಿ ಕೂಡದೆ, ಕೊನೆಯ ಗಳಿಗೆಯವರೆಗೂ ಮಾನುಷ್ಯ ಪರಾಕ್ರಮದ ಹಿರಿಮೆಯನ್ನು ಮೆರೆಯುತ್ತವೆ. ಧಾರ್ಮಿಕ ನಂಬಿಕೆಗಳ ಪ್ರತೀಕವಾಗಿ ಹಾಗೂ ಅವುಗಳ ಸಮರ್ಥನೆಯ ರೂಪದಲ್ಲಿ ಇತರ ಲೋಕಗಳ ವರ್ಣನೆ ಕಾಣಿಸಿಕೊಳ್ಳುತ್ತದೆ. ಮಾನವ–ಸಾಮರ್ಥ್ಯದ, ದೃಷ್ಟಿ–ದಿಗಂತದ ಆಚೆಗಿನ ವಿವರಗಳನ್ನು, ಭವಿಷ್ಯದ ಚಿತ್ರಣವನ್ನು ಒದಗಿಸಲು ಇವನ್ನು ಬಳಸಿಕೊಳ್ಳಲಾಗುತ್ತದೆ. ಒಟ್ಟಿನಲ್ಲಿ ವಸ್ತು–ವಿವರಗಳ ಅಳವಡಿಕೆಯ ರೀತಿ–ನೀತಿಗಳನ್ನು ಈ ಆಶಯಗಳೂ ಪ್ರತಿಬಿಂಬಿಸುತ್ತವೆಂದು ಇಟ್ಟುಕೊಳ್ಳಬಹುದು.

'ಮೋಹನ ತರಂಗಿಣಿ'ಯಲ್ಲಿ ಶಂಬರಾಸುರ, ಬಾಣಾಸುರ ಮತ್ತು ಕುಂಭಾಂಡರೊಡನೆ ಕ್ರಮಶಃ ಮನ್ಮಥ, ಶ್ರೀಕೃಷ್ಣ ಮತ್ತು ಅನಿರುದ್ಧರು ಹೋರಾಡಿ ಅವರನ್ನು ಕೊಲ್ಲುವ ಅಥವಾ ಅಸ್ತ್ರ–ಬಲರನ್ನಾಗಿಸುವ ಪ್ರಸಂಗಗಳು ಮಾತ್ರವಲ್ಲದೆ, ಹರಿ–ಹರರ ಕಾಳೆಗವೇ ನಡೆದು, ಅದರಲ್ಲಿ ಪ್ರದ್ಯುಮ್ನ–ಷಣ್ಮುಖ, ಗರುಡ–ನವಿಲು ಮತ್ತು ನಂದಿ, ಬಲರಾಮ–ವೀರಭದ್ರ ಮತ್ತು ಗಣಪರು

ಪಾಲ್ಗೊಂಡು ವೀರಾವೇಶದಿಂದ ಹೋರಾಡುವ ಪ್ರಸಂಗಗಳ ವರ್ಣನೆಯೂ ಬರುತ್ತದೆ. ಹೀಗಾಗಿ, ಮೊದಲನೆಯ ಆಶಯವಾದ ಯುದ್ಧ ಸಾಕಷ್ಟು ಪ್ರಮುಖ ರೂಪದಲ್ಲಿಯೇ ಈ ಕಾವ್ಯದಲ್ಲಿ ಮೈದೋರುತ್ತದೆಂಬುದು ಸ್ಪಷ್ಟವಾಗುತ್ತದೆ.

ಸಮುದ್ರಯಾನದ ವರ್ಣನೆ ಈ ಕಾವ್ಯದಲ್ಲಿ ಕಾಣದೊರೆಯುವುದಿಲ್ಲವಾದರೂ, ಸಮುದ್ರದ ವರ್ಣನೆಯೇನೋ ಸೌರಾಷ್ಟ್ರದೇಶದ ವರ್ಣನೆಯ ಅಂಗವಾಗಿ ಕಾಣಿಸಿಕೊಂಡಿದೆ. ಭೂದೇವಿಯ ಉಡುಗೆಯ ಒಡ್ಯಾಣದಂತೆ ಆ ಸಾಗರ ಸೌರಾಷ್ಟ್ರದೇಶವನ್ನು ಸುತ್ತುವರಿದಿತ್ತು ("...ರತ್ನಾಕರ ನೆಲವೆಣ್ಣಿನುಡೆಯ ಮೇಖಲೆಯೆಂಬಂತೆ ಪರಿವೇಷ್ಟಿಸಿರ್ದುದು" ೨.೪), ಕ್ರೂರಜಂತುಗಳಿಂದ ತುಂಬಿತ್ತು (ನೀರೇಭ ನೆಗಟುವ ಪಾಠೀನ ಕಮಠ ಶಿಂಶುಮಾರ, ಕರ್ಕಟ ಜಳ್ಳೂಕ ಘೋರಾಹಿ ಮೊದಲಾದ ದುಷ್ಟ ಜಂತುಗಳಿಂದ ವಾರಾಶಿ ಕಣ್ಗೆ ರಂಜಿಸಿತು", ೨. ೫) ಎಂಬಿವೇ ಮೊದಲಾದ ಸಂಪ್ರದಾಯಬದ್ಧವಾದ ಹಾಗೂ 'ವೇದವನ್ನು ಕದ್ದವನಿಗೆ ಆಶ್ರಯಕೊಟ್ಟ ಅಪರಾಧಕ್ಕಾಗಿ ವಿಷ್ಣು ಕರೆಸಲು ಕೂಡಲೇ ಬಂದು ಸಾಷ್ಟಾಂಗ ಪ್ರಣಾಮ ಮಾಡಿದನೋ ಎಂಬಂತೆ ಸಮುದ್ರದಲ್ಲಿ ಉಬ್ಬರ ಕಾಣಿಸಿಕೊಂಡಿತು" ಎಂಬಂಥ (೨.೯) ಪೌರಾಣಿಕ ಪ್ರತಿಮೆಗಳಿಂದ ಕೂಡಿದ್ದರೂ, ಸ್ವಲ್ಪ ಮಟ್ಟಿನ ಹೊಸತನವೂ ಅಲ್ಲಲ್ಲಿ ಕಾಣದೊರೆಯುತ್ತದೆ. ಉದಾಹರಣೆಗೆ, ತೆರೆಗಳು ಬಂದು ಅಪ್ಪಳಿಸುತ್ತಿರುವ ಸಾಗರವನ್ನು ಕನಕದಾಸರು ಹೀಗೆ ವರ್ಣಿಸಿದ್ದಾರೆ :

"ಹೊದ್ದಿರಲುರ್ವಿಯದೆಜಿಸಾರುಸಾರೆಂದು
ಬುದ್ಧಿಗಳಿಸೆ ಕೇಳದಿರಲು ।
ಗದ್ದಿಸಿ ತೆರೆಗಯ್ಗಳಿಂದ ತಾಡಿಸುವಂತೆ
ಗುದ್ದಿತು ಜಲನಿಧಿ ತಟವ" ॥೨.೮॥

ಕನಕದಾಸರ ಉದ್ದೇಶ ಇಲ್ಲಿ ಸಂಪೂರ್ಣವಾಗಿ ಭಿನ್ನವಾಗಿರುವುದರಿಂದ, ಪಾಶ್ಚಾತ್ಯ ಮಹಾಕಾವ್ಯಗಳಲ್ಲಿ ಕಾಣಿಸುವಂತೆ ವಿಭಿನ್ನ ಜನಸಮುದಾಯ, ಸಂಸ್ಕೃತಿ ಮತ್ತು ಆಚಾರ–ವಿಚಾರಗಳ ಬಗೆಗಿನ ಕವಿಯ ಲೋಕಜ್ಞಾನವನ್ನು ಪರಿಚಯಿಸಿಕೊಡುವ ಸಾಧನವಾಗಿ ಸಮುದ್ರಯಾನದ ವರ್ಣನೆಯನ್ನು ನಾವಿಲ್ಲಿ ನಿರೀಕ್ಷಿಸುವುದು ಸಾಧ್ಯವೂ ಇಲ್ಲ, ಸಾಧುವೂ ಅಲ್ಲ. ಇತ್ತ, ಉಷೆ ಕನಸಿನಲ್ಲಿ ಕಂಡ ನಲ್ಲನನ್ನು ಅರಸಿಕೊಂಡು ಬರುವ ಸಲುವಾಗಿ ದೇವದಾನವ ನಾಗಲೋಕಾದಿಗಳನ್ನೆಲ್ಲ ಸುತ್ತಿಬರುವ ಚಿತ್ರಲೇಖೆಯನ್ನು ಚಿತ್ರಿಸುವಾಗ ವಿಲಕ್ಷಣವಾದ ಹಲವು ವರ್ಣನೆಗಳನ್ನು ಕಾಣಬಹುದಾಗಿದೆಯಾದರೂ, ಅದೂ,

ಈ ಉದ್ದೇಶಕ್ಕೆ ಸಾಧಕವಾಗಿಯೇನೂ ಬಂದಿಲ್ಲ. ಕವಿಯ ಕಲ್ಪನೆಯ ವಿಚಿತ್ರ ಲೋಕಗಳಾಗಿ ಮಾತ್ರ ಅವು ಕಾಣಿಸಿಕೊಂಡಿವೆ. ಹೀಗಾಗಿ, ಈ ಆಶಯದ ಅರ್ಥಪೂರ್ಣ ಚಿತ್ರಣವೇನೂ ಈ ಕಾವ್ಯದಲ್ಲಿಲ್ಲ.

ಅಪಹರಣ ಮತ್ತು ಸೆರೆಯ ಆಶಯ ಈ ಕಾವ್ಯದಲ್ಲಿ ಅನೇಕ ರೀತಿಗಳಲ್ಲಿ ಕಾಣಿಸಿಕೊಂಡಿದೆ. ಶಂಬರಾಸುರ ಪ್ರದ್ಯುಮ್ನನನ್ನು ಅಪಹರಿಸಿಕೊಂಡು ಹೋಗುವ ಹಾಗೂ ಬಾಣಾಸುರ ಅನಿರುದ್ಧನನ್ನು ಸೆರೆಹಿಡಿದು ಬಂಧನದಲ್ಲಿರಿಸುವ ಪ್ರಸಂಗಗಳ ವರ್ಣನೆ ಈ ಕಾವ್ಯದಲ್ಲಿ ಸಾಕಷ್ಟು ಚೆನ್ನಾಗಿಯೇ ಬಂದಿದೆ. ಪ್ರದ್ಯುಮ್ನಾಪಹರಣದ ಸಂದರ್ಭದಲ್ಲಿ ಮಾತೆಯ ಮಮತೆಯ ಮನಕರಗಿಸುವಂಥ ಚಿತ್ರ ಹೇಗೆ ಬಂದಿದೆ ಎಂಬುದನ್ನು ಈಗಾಗಲೇ ನಾವು ನೋಡಿದ್ದೇವೆ. ಈ ಅಪಹರಣಗಳು ಈ ಕಾವ್ಯದ ಎರಡು ಯುದ್ಧ ಪ್ರಸಂಗಗಳಿಗೆ ಹೀಗೆ ದಾರಿಮಾಡಿಕೊಡುತ್ತವೆ ಹಾಗೂ ಈ ಯುದ್ಧಗಳು ಈ ಕಾವ್ಯದ ಕ್ರಿಯೆಯ ಕೇಂದ್ರ ಘಟನೆಗಳು ಆಗಿ ಪರಿಣಮಿಸುತ್ತವೆ. ಪ್ರದ್ಯುಮ್ನ–ಕೃಷ್ಣರಂಥ ಈ ಕಾವ್ಯದ ನಾಯಕ ಪಾತ್ರಗಳ ಶೌರ್ಯಾತಿಶಯವನ್ನು ಮೆರೆಯಲೂ ಇವು ಮಾಧ್ಯಮವಾಗಿ ಬಂದಿವೆ ಈ ದೃಷ್ಟಿಯಲ್ಲಿ ಈ ಆಶಯದ ಪರಿಣಾಮಕಾರಿ ಚಿತ್ರಣವೇ ನಮಗೆ ಈ ಕಾವ್ಯದಲ್ಲಿ ದೊರೆಯುತ್ತದೆ ಎನ್ನಬಹುದು. ಹೆಣ್ಣಿನ ಅಪಹರಣದ ಸಾಮಾನ್ಯ ಚಿತ್ರ ಮತ್ತು ಇದನ್ನು ಆತ್ಮಗೌರವದ ಪ್ರಶ್ನೆಯೆಂದು ಮಾತ್ರವಲ್ಲದೆ, ರಾಷ್ಟ್ರಗೌರವಕ್ಕೆ ಒಡ್ಡಿದ ಸವಾಲು ಎಂದು ಭಾವಿಸಿ ಯುದ್ಧದಲ್ಲಿ ತೊಡಗುವ ಚಿತ್ರ, 'ರಾಮಾಯಣ' ಮತ್ತು 'ಇಲಿಯಡ್'ನಂಥ ಮಹಾಕಾವ್ಯಗಳಲ್ಲಿ ಕಾಣದೊರೆಯುತ್ತದಷ್ಟೆ ; ಅದಕ್ಕೆ ಸಂಪೂರ್ಣವಾಗಿ ಭಿನ್ನವಾಗಿ ಇಲ್ಲಿ ಪುರುಷಪಾತ್ರಗಳ ಅಪಹರಣ ಮತ್ತು ಬಂಧನದ ಚಿತ್ರ ಈ ಕಾವ್ಯದಲ್ಲಿ ಕಾಣಿಸುತ್ತದೆ. ಹೀಗಾಗಿ, ಇದನ್ನು ಪೂರಕವಾದ ವಿಭಿನ್ನ ಚಿತ್ರವೆಂದು ಭಾವಿಸಬಹುದಾಗಿದೆ.

ಅಳಿದವರ ನೆನಪಾಗಿ ಏರ್ಪಡಿಸಲಾಗುವ ಶೌರ್ಯ–ಪರಾಕ್ರಮಗಳ ಸ್ಪರ್ಧೆಯ ಚಿತ್ರಗಳು ಈ ಕಾವ್ಯದಲ್ಲಿ ದೊರೆಯದಿರುವುದು ಅಸಹಜವೇನೂ ಅಲ್ಲ. ಸಾಂಸ್ಕೃತಿಕ ಭಿನ್ನತೆಯ ಸಹಜ ಪರಿಣಾಮ ಇದು. ಇಲ್ಲಿಯ ಕಾವ್ಯಗಳಲ್ಲಿ ಕ್ವಚಿತ್ತಾಗಿ ಶಸ್ತ್ರಾಸ್ತ್ರ ಸ್ಪರ್ಧೆಯ ಚಿತ್ರಗಳು–ಉದಾಹರಣೆಗೆ, 'ಮಹಾಭಾರತ'ದಲ್ಲಿ ಅರ್ಜುನಾದಿಗಳ ಶಸ್ತ್ರವಿದ್ಯಾಕೌಶಲದ ಪ್ರದರ್ಶನ ನಡೆಯುವ ಪ್ರಸಂಗ–ಕಾಣದೊರೆಯುತ್ತದೆಯಾದರೂ, ಉದ್ದೇಶ ಸಂಪೂರ್ಣವಾಗಿ ಭಿನ್ನವೇ ಆಗಿರುತ್ತದೆಂಬುದು ಸ್ಪಷ್ಟ. ಹೀಗಾಗಿ ಯೋಧರ ಯುದ್ಧಕೌಶಲದ ಪ್ರದರ್ಶನಕ್ಕೆ ಯುದ್ಧಭೂಮಿಯೇ ಬಹುತೇಕವಾಗಿ ಒರೆಗಲ್ಲಾಗಿ ಬರುವುದು ನಮ್ಮ

ಕಾವ್ಯಗಳಲ್ಲಿನ ಸಹಜ ಪ್ರಕ್ರಿಯೆಯೇ ಆಗಿರುತ್ತದೆ. ಈ ಕಾವ್ಯದಲ್ಲಿನ ವಿವಿಧ ಯುದ್ಧಗಳ ಪ್ರಸಂಗದಲ್ಲಿ–ಅದರಲ್ಲಿಯೂ ಹರಿಹರರ ಕಾಳೆಗದ ವರ್ಣನೆಯಲ್ಲಿ–ಹಲವು ಯೋಧರ ಸಾಹಸಾತಿಶಯಗಳ ವೈವಿಧ್ಯಮಯವಾದ ವರ್ಣನೆಯನ್ನು ಕಾಣಬಹುದಾಗಿದೆ. ಹೀಗಾಗಿ, ಈ ಆಶಯ ಬದಲಾದ ಸಾಂಸ್ಕೃತಿಕ ಪರಿಸರಕ್ಕನುಗುಣವಾದ ರೀತಿಯಲ್ಲಿ ಅಭಿವ್ಯಕ್ತಿಯನ್ನು ಪಡೆದಿದೆ ಎಂದು ಭಾವಿಸಬಹುದಾಗಿದೆ.

ಬೌದ್ಧಿಕ ವಿಲಾಸ–ಉಲ್ಲಾಸಗಳಿಗೆ ಎಡೆಮಾಡಿ ಕೊಡುವಂಥ ಮಂತ್ರ–ದೌತ್ಯಾದಿಗಳ ಪ್ರಸಂಗ ಇಲ್ಲಿ ಅಷ್ಟಾಗಿ ಇಲ್ಲ, ಇದಕ್ಕೆ ಇಲ್ಲಿಯ ಪೌರಾಣಿಕ ಪರಿಸರವೇ ಕಾರಣ. ಇಷ್ಟಾಗಿಯೂ, ನಾರದನ ಚಿತಾವಣೆಯ ಪ್ರಸಂಗದಲ್ಲಿ (೩೩. ೧೫–೨೫), ಹರಿಹರರ ಕಾಳೆಗದ ಸಂದರ್ಭದಲ್ಲಿ (೩೮, ೩೯ನೆಯ ಸಂಧಿಗಳು) ಇಂಥ ಉದ್ಬೋಧಕ ಸನ್ನಿವೇಶಗಳನ್ನು ಗುರುತಿಸಬಹುದು. ಉದಾಹರಣೆಗೆ, ಬಾಣಾಸುರನನ್ನು ನಾರದ ಎತ್ತಿ ಕಟ್ಟುವ ಸನ್ನಿವೇಶದಲ್ಲಿ ಬರುವ ಈ ವರ್ಣನ ಭಾಗಗಳನ್ನು ನೋಡಬಹುದು. ನಾರದ ಹೀಗೆನ್ನುತ್ತಾನೆ :

> "ಕೇಳಿದೊಡಂ ಪೇಳ್ದಪೆ ಕೇಳು ನಿನಗೀ
> ವೇಳೆಯೊಳ್ ತಲೆಗುತ್ತಲಹುದು ।
> ಭಾಳಾಕ್ಷನ ಸದ್ಭಕ್ತನಂದನೆಯತ್ತ
> ಸೂಳೆಯಾಗಿರ್ಪುದು ಸುಖವೇ" ॥೩೩.೧೬॥

ಇದಕ್ಕೆ ಬಾಣಾಸುರ ಸಹಜವಾಗಿಯೇ ಕೋಪೋದ್ಧತನಾಗಿ ಪ್ರತಿಕ್ರಿಯೆ ತೋರುತ್ತಾನೆ :

> "............ಯಮನದಾಡೆಯ ಸೀಳ್ದದಡಿಗೆದೈತ್ಯರ ಕಾದು
> ಮಮ ಕುಮಾರತಿಯ ಗೋಪುರಕೆ ॥ ೩೩.೧೭ ॥
> "ಆಟಾಳದಾರು ಪೋಪರು ಕೇಳು ಮಿಕ್ಕಿನ
> ಪೋಟಾಳುಗಳಿಗೆ ಗೋಚರವೇ
> ಮೀಟಾದ ಸುರನರೋರಗರೆಂಬ ಬಹಳ ನಿ
> ಶಾಟರತಿಕ್ಕಿ ಮುಕ್ಕುವರು" ॥೩೩.೧೮॥

ನಾರದ ಅವನ ಅಹಮ್ಮನ್ನು ಸರಿಯಾಗಿಯೇ ಇರಿಯುತ್ತಾನೆ.

> "ಹರಮಹಾದೇವನೇ ಬಡವನೆ ನಾ ಬಲ್ಲೆ
> ನುರವಣೆಗಾಜಿನೆಂಬುದನು ।
> ತರಹರದಿಂದೆ ಪೇಟೆನು ನಿನ್ನ ಮಗಳಿಗೆ

ಪರನಾವನೆಂದು ನಿಶ್ಚಯಿಸು ॥೩೩.೧೯॥

* * *

"ಹೊಗಟಲದೇಕೆ ನಿಂದಿಸಲೇಕೆ ನಿಮಗೆ ನಾ

ಜಗಳವನಿಕ್ಕು ಬಂದವನೆ ।

ಮಗಳನು ಕೆಡಿಸಿದವನಿಗೆ ರಹವಱಿಯದೆ

ದೃಗುಯುಗದೊಳು ಕಿಡಿಯೇಕೆ ॥೩೩.೨೫॥

ಇದರ ಪರಿಣಾಮವಾಗಿ "ಹೆಂಬೇಡಿ ಕಾಮನ ಮಗನೆನ್ನ ಮಗಳಿಂಗೆ ಸಂಭೋಗ ಕೃತಪುಣ್ಯನಂತೆ" ಎಂದು ಸಿಡಿದೆದ್ದು ಕಾಳಗವನ್ನು ಸಾರುತ್ತಾನೆ. ಇಂಥ ಪ್ರಸಂಗಗಳು ಕನಕದಾಸರ ಭಾಷೆ ಸಂದರ್ಭಾನುಗುಣವಾಗಿ ಹೇಗೆ ನುಡಿಕಿಡಿಗಳನ್ನು ಕಾರಬಲ್ಲದು, ವೀರ್ಯೋತ್ತೇಜಕವಾಗಬಲ್ಲದು ಎಂಬುದನ್ನೂ ಸಾರಿಹೇಳುತ್ತವೆ. ಸಹೃದಯ ಚೇತನ ಇಂಥ ಸಂದರ್ಭಗಳಲ್ಲಿ ಬೌದ್ಧಿಕ ಉಲ್ಲಾಸಕ್ಕೆ ಸಹಜವಾಗಿಯೇ ಭಾಗಿಯಾಗುತ್ತದೆ.

ಪಾತ್ರಗಳ ದೃಷ್ಟಿಯಿಂದ ನೋಡಿದಾಗ, ಇಲ್ಲಿಯ ದೇವಾನುದೇವತೆಗಳು, ದೈವಾಂಶಸಂಭೂತರು ಮಹತ್ವಸಂಯುಕ್ತರೆಂಬುದನ್ನೂ ಬಿಡಿಸಿಹೇಳುವ ಅಗತ್ಯವೇ ಇರುವುದಿಲ್ಲ. ಹರಿ–ಹರರು, ರತಿ–ಪ್ರದ್ಯುಮ್ನರು, ಉಷಾ–ಅನಿರುದ್ಧರು, ಶಂಬರಾಸುರ ಬಾಣಾಸುರರು ಮಾತ್ರವೇ ಅಲ್ಲ, ಕುಂಭಾಂಡನಂಥ ಸೇನಾಪತಿಗಳು, ಚಿತ್ರಲೇಖೆಯಂಥ ಸಖಿ–ಇವರೆಲ್ಲರೂ ಇಲ್ಲಿ ಮಹತ್ವದವರಾಗಿ ತಮ್ಮ ಪಾತ್ರಗಳನ್ನು ಪರಿಣಾಮಕಾರಿಯಾಗಿಯೇ ಮರೆಯುತ್ತಾರೆ. ಕನಕದಾಸರು ಈ ಎಲ್ಲ ಪಾತ್ರಗಳನ್ನೂ ಕಣ್ಣಿಗೆ ಕಟ್ಟುವಂತೆ ಕಡೆದು ನಿಲ್ಲಿಸುವಲ್ಲಿಯೂ ಯಶಸ್ವಿಯಾಗಿದ್ದಾರೆ ಎಂಬ ಅನುಭವ ಮೂಡದೆ ಇರದು.

ಪಾಶ್ಚಾತ್ಯ ಮಹಾಕಾವ್ಯಗಳಲ್ಲಿ ವಿಧಿವಾದ ವಿಲಕ್ಷಣವಾದ ರೀತಿಯಲ್ಲಿ ಕಾರ್ಯಶೀಲವಾಗಿರುವುದನ್ನು ಕಾಣುತ್ತೇವೆ. ಅಲ್ಲಿನ ಅನೇಕ ವೀರಾಧಿವೀರರಿಗೆ ತಮ್ಮ ಅವಸಾನದ ಅರಿವು ಇರುತ್ತದೆಯಾದರೂ, ಅವರು ಹೆಂಬೇಡಿಗಳಂತೆ ಕೈಚೆಲ್ಲಿ ಕೂರದೆ, ತಮ್ಮ ಪರಾಕ್ರಮವನ್ನು ಮೆರೆದು ವಿಧಿವಶರಾಗುತ್ತಾರೆ. ಇಲ್ಲಿಯ ಪೌರಾಣಿಕ ಪರಿಸರದಲ್ಲಿನ ಅಸುರಯೋಧರು, ಈ ಬಗೆಯ 'ಅರಿವು' ಅಷ್ಟಾಗಿ ಇಲ್ಲದಿದ್ದರೂ, ತಮ್ಮ ಪರಮ ಶೌರ್ಯವನ್ನು ಮೆರೆಯುವುದರಲ್ಲಿ ಹಿಂದೆ ಬೀಳುವುದಿಲ್ಲ. ಅರಿಯದೆ ತಾನೇ ಸಲಹುತ್ತಿರುವ ತನ್ನ ವೈರಿಯ ಎದುರಿನಲ್ಲಿ ಶಂಬರಾಸುರ ತನ್ನೆಲ್ಲ ಯುದ್ಧವಿದ್ಯಾಕೌಶಲವನ್ನು ಪ್ರದರ್ಶಿಸಿ, ತನ್ನ ಪರಾಕ್ರಮದ ರಹಸ್ಯಗಳನ್ನು ತಾನೇ ಬಯಲುಮಾಡಿದರೂ, ಎದೆಗುಂದದೆ ಆ ವೈರಿಯ

ವಿರುದ್ಧ ಹೋರಾಡಿ, ವೀರಮರಣವನ್ನು ಪಡೆಯುತ್ತಾನೆ. ಬಾಣಾಸುರನ ಪ್ರಸಂಗದಲ್ಲಿಯಂತೂ ಅಶರೀರವಾಣಿಯ ಕೈವಾಡದಿಂದ ಹರಿ–ಹರರ ಕಾಳಗ ಕೊನೆಗೊಳ್ಳುತ್ತದೆ ; ಸ್ವತಃ ಶಿವನ ಮಧ್ಯಪ್ರವೇಶದಿಂದ ಬಾಣಾಸುರ ಕೃಷ್ಣರ ಕ್ಷಮೆಯನ್ನು ಕೋರಿ, ಘಟನೆಗಳು ಮಂಗಳದಲ್ಲಿ ಪರ್ಯವಸಾನಗೊಳ್ಳಲು ಕಾರಣನಾಗುತ್ತಾನೆ. 'ನಿಯತಿ'ಯ ಈ ಬಗೆ ಇಲ್ಲಿಯ ಸಾಂಸ್ಕೃತಿಕ ನಿಲುವಿಗೆ ಅನುಗುಣವಾಗಿಯೇ ಇದೆ. ಹೀಗಾಗಿ, ಈ ಆಶಯವೂ ಸಮುಚಿತ ರೂಪದಲ್ಲಿ ಅಳವಟ್ಟಿದೆ ಎಂದೆನಿಸುತ್ತದೆ.

ಅತಿಮಾನವೀಯ ಅಂಶಗಳು ಇಲ್ಲಿನ ಪೌರಾಣಿಕ ಪ್ರಪಂಚಕ್ಕೆ ಹೊಂದುವಂತೆಯೇ ನಿರೂಪಿತವಾಗಿವೆ. ಪ್ರದ್ಯುಮ್ನನ ಅಪಹರಣ, ಚಿತ್ರಲೇಖ ಅನಿರುದ್ಧನನ್ನು ಅರಸಿಕೊಂಡು ವಿವಿಧ ಲೋಕಗಳಲ್ಲಿ ಸಂಚರಿಸುವುದು, ಅವನನ್ನು ಬೆನ್ನ ಮೇಲೆ ಹೊತ್ತು ಗಗನಗಾಮಿಯಾಗಿ ಸಂಚರಿಸುವುದು, ಗರುಡಾದಿಗಳ ಪ್ರವೇಶದ ಪರಿಣಾಮ, ಆಕಾಶವಾಣಿಯ ಬಳಕೆ – ಈ ಎಲ್ಲ ಪ್ರಸಂಗಗಳಲ್ಲಿ ಅತಿಮಾನವೀಯ ಅಂಶಗಳ ಅಳವಡಿಕೆ ಯಥೋಚಿತವಾಗಿ ಬಂದಿದೆ ; ಹಾಗೂ ಇಲ್ಲಿನ ಪೌರಾಣಿಕ ಲೋಕಕ್ಕೆ ಹೊಂದುವಂಥ ಸಂಗತಿಗಳೇ ಆಗಿವೆ. ಹೀಗಾಗಿ, ಈ ಆಶಯವೂ ಇಲ್ಲಿ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ ಎನ್ನಲು ಅಡ್ಡಿಯೇನೂ ಇಲ್ಲ.

'ಈನ್ಯಡ್' 'ಡಿವೈನ್ ಕಾಮಿಡಿ', 'ಪ್ಯಾರಡೈಸ್ ಲಾಸ್ಟ್' ಹಾಗೂ 'ಮಹಾ ಭಾರತ'ದಲ್ಲಿ (ಉಲೂಪಿಯ ಪ್ರಸಂಗದಲ್ಲಿ ಅರ್ಜುನನ ನಾಗಲೋಕ ಪ್ರವಾಸ ಹಾಗೂ ಸ್ವರ್ಗಗಮನಕ್ಕೆ ಮೊದಲು ಧರ್ಮರಾಯನ ನರಕಲೋಕದ ಭೇಟಿ) ಕಾಣದೊರೆಯುವಂತೆ ಅಧೋಲೋಕಗಳ ವರ್ಣನೆ 'ಮೋಹನ ತರಂಗಿಣಿ'ಯಲ್ಲೇನೂ ಕಾಣದೊರೆಯುವುದಿಲ್ಲ. ಈಗಾಗಲೇ ಸೂಚಿಸಿರುವಂತೆ, ಚಿತ್ರಲೇಖೆಯು ಹಲವು ಲೋಕಗಳ ಪ್ರವಾಸದ ಉಲ್ಲೇಖ ಕಾಣದೊರೆಯುತ್ತದೆಯಾದರೂ, ಅವುಗಳ ವಿವರವಾದ ಹಾಗೂ ಆಕರ್ಷಕವಾದ ವರ್ಣನೆಯೇನೂ ನಮಗೆ ದೊರೆಯುವುದಿಲ್ಲ. 'ಡಿವೈನ್ ಕಾಮಿಡಿ' ಹಾಗೂ 'ಪ್ಯಾರಡೈಸ್ ಲಾಸ್ಟ್' ಕಾವ್ಯಗಳಲ್ಲಿ ಧಾರ್ಮಿಕ ನಂಬಿಕೆಗಳಿಗೆ ಪೋಷಕವಾಗುವಂತೆ ಯಾಗಲೀ, 'ಈನ್ಯಡ್' ಕಾವ್ಯದಲ್ಲಿ ನಾಡಿನ ಭವ್ಯ ಇತಿಹಾಸ–ಸಂಸ್ಕೃತಿಗಳ ಉದ್ಘೋಷಣೆ ನೆರವಾಗುವಂತೆಯಾಗಲೀ ಈ ಲೋಕಗಳ ವರ್ಣನೆ ಕನಕದಾಸರಲ್ಲಿ ಬರುವುದಿಲ್ಲ. ಅವರ ಉದ್ದೇಶವೂ ಅದಾಗಿಲ್ಲ. ಏನೆಂದರೆ, ಶ್ರೀ ಕೃಷ್ಣಾದಿಗಳ ಹಿರಿಮೆಯ ಬಣ್ಣನೆಗೆ ಅವರು ದ್ವಾರಕಾನಗರದ ವರ್ಣನೆಯ

ಪ್ರಸಂಗವನ್ನೇ ಬಳಸಿಕೊಂಡಿದ್ದಾರೆ. ಹೀಗಾಗಿ, ಈ ಆಶಯದ ಚಿತ್ರಣದ ದೃಷ್ಟಿಯಿಂದ ಕನಕದಾಸರಲ್ಲಿ ಮಹತ್ವದ ಸಂಗತಿಯೇನೂ ನಮ್ಮ ಅನುಭವಕ್ಕೆ ಬರದು.

ಎಲ್ಲ ಆಶಯುಗಳನ್ನು ಎಲ್ಲ ಮಹಾಕಾವ್ಯಗಳೂ ನಿಯತವಾಗಿ ಬಳಸಿಕೊಳ್ಳಲೇ ಬೇಕಾದ ಅನಿವಾರ್ಯತೆಯೂ ಇರುವುದಿಲ್ಲ–ಅಷ್ಟಾದಶ ವರ್ಣನೆಗಳ ಮತ್ತು ನವರಸಗಳ ನಿರೂಪಣೆಯ ಷರತ್ತನ್ನು ಪೂರೈಸುವಷ್ಟರಿಂದಲೇ ಯಾವುದೇ ಕೃತಿ ಮಹಾಕಾವ್ಯವಾಗದೆ ಇರುವಂತೆ. ಆದರೆ, ಈ ಆಶಯಗಳು ಪರಿಣಾಮಕಾರಿಯಾಗಿ ಅಳವಟ್ಟಲ್ಲಿ ಮಹಾಕಾವ್ಯತ್ವಕ್ಕೆ ಅವು ಪೋಷಕವಾಗಿ ನಿಲ್ಲುತ್ತವೆ. ಈ ದೃಷ್ಟಿಯಿಂದ ನೋಡಿದಾಗ ಪಾಶ್ಚಾತ್ಯ ಮಹಾಕಾವ್ಯಗಳಲ್ಲಿ ಸಾಮಾನ್ಯವಾಗಿ ಬಳಸಿಕೊಳ್ಳಲಾಗುವ ಆಶಯಗಳಲ್ಲಿ ಕೆಲವನ್ನಾದರೂ ಕನಕದಾಸರು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆಂದು ಹೇಳಬಹುದಾಗಿದೆ. ಆದರೆ, ಮೂಲಭೂತವಾಗಿ ಈ ಕಾವ್ಯದ ವಸ್ತುವನ್ನು ಮಹತ್ತಾದುದೆಂದಾಗಲೀ, ಗಂಭೀರವಾದುದೆಂದಾಗಲೀ ಹೇಳಲು ಸಾಧ್ಯವಿಲ್ಲದೆ ಇರುವುದರಿಂದ, ಒಂದು ಸಮುದಾಯದ, ಜನಾಂಗದ ಅಥವಾ ರಾಷ್ಟ್ರದ ಭವಿತವ್ಯವನ್ನು ನಿರ್ಧರಿಸುವಂಥ ಮಹತ್ತರ ಕಾರ್ಯದ ನಿರೂಪಣೆ ಇಲ್ಲಿ ನಡೆದಿದೆಯೆಂದಾಗಲೀ ಹೇಳಲು ಬರುವುದಿಲ್ಲವಾದ್ದರಿಂದ ಹಾಗೂ ಇಲ್ಲಿಯ ವಸ್ತುವಿಗೆ ಬಳಸಿಕೊಂಡಿರುವ ಸಾಂಗತ್ಯದ ಶೈಲಿ ಉದಾತ್ತತೆಯ ನೆಲೆಗೆ ನಮ್ಮನ್ನು ಕೊಂಡೊಯ್ಯುವಂಥದಾಗಲೀ ಆಗಿಲ್ಲದಿರುವುದರಿಂದ 'ಮೋಹನ ತರಂಗಿಣಿ' ಪಾಶ್ಚಾತ್ಯ ನೆಲೆ–ಬೆಲೆಯಲ್ಲಿನ ಉತ್ಕೃಷ್ಟ ಮಹಾಕಾವ್ಯದ ಪಟ್ಟಕ್ಕೆ ತಾನು ಅರ್ಹವೆಂದು ಉದ್ಘೋಷಿಸಿಕೊಳ್ಳಲಾರದು. ಆದರೆ ಪೌರ್ವಾತ್ಯ ಅಥವಾ ಪಾಶ್ಚಾತ್ಯ ಲಕ್ಷಣಗಳ ಒರೆಗಲ್ಲಿನಲ್ಲಿ "ಸತ್ಕಾವ್ಯ"ವೆಂಬ ಅರ್ಹತೆಯನ್ನಂತೂ ಅದು ಖಂಡಿತವಾಗಿಯೂ ತನ್ನದಾಗಿಸಿಕೊಳ್ಳುತ್ತದೆ ಎಂಬುದರಲ್ಲಿ ಅನುಮಾನವೇನೂ ಇಲ್ಲ.

# ಮೋಹನ ತರಂಗಿಣಿಯ ಶೈಲಿ

**ಎ. ವಿ. ನಾವಡ**

ಕನಕದಾಸರ ಕಾವ್ಯಾಭಿವ್ಯಕ್ತಿಯ ಪ್ರಧಾನ ಮಾಧ್ಯಮವಾದ ಕೀರ್ತನೆಗಳಿಂದ ಬೇರೆಯಾದ ಭಾಷಾನಿರ್ವಹಣೆ 'ಮೋಹನ ತರಂಗಿಣಿ'ಯಲ್ಲಿ ಹೇಗೆ ಕಾಣಿಸಿಕೊಂಡಿದೆ ಹಾಗೂ ಆ ಕಾವ್ಯದ ಶೈಲಿಯ ಸ್ವರೂಪವನ್ನು ಭಾರತೀಯ ಕಾವ್ಯಮೀಮಾಂಸೆ ಮತ್ತು ಪಾಶ್ಚಾತ್ಯ ಶೈಲಿ ಶಾಸ್ತ್ರದ[1] ಬೆಳಕಿನಲ್ಲಿ ಗಮನಿಸುವುದು ಪ್ರಕೃತ ಬರೆಹದ ಉದ್ದೇಶ.

* * *

ಇಂಗ್ಲೀಷ್‌ನ ಸ್ಟೈಲ್‌ಗೆ ಸಂವಾದಿಯಾಗಿ ನಾವಿಂದು ಬಳಸುವ ಶೈಲಿಯ ಸುತ್ತಮುತ್ತ ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸಾಕಷ್ಟು ಮಾತು ಕೇಳಿಬಂದಿದೆ. "........ಶೈಲಿಯ ಮುಖ್ಯ ತುಡಿತವೆಂದರೆ ಅನುಭವವನ್ನು ಹರಳುಗಟ್ಟಿಸುವ ಪ್ರಯತ್ನ. ಅದಕ್ಕಾಗಿ ಅಲಂಕಾರಗಳನ್ನು ಬಳಸಿಕೊಳ್ಳಬಹುದು. ಪದಗಳ ಆಯ್ಕೆ ಮುಂತಾದ ಪ್ರಯತ್ನಗಳೆಲ್ಲಾ ಸೃಷ್ಟ್ಯಾತ್ಮಕವಾದ ಆ ಕ್ರಿಯೆಯ ಅನಿವಾರ್ಯವಾದ ಅಂಗವಾಗಿ ಬರುತ್ತವೆ. ಅದನ್ನೆಲ್ಲಾ ನಿಯಂತ್ರಿಸುವುದು ಕವಿ ಮನೋಧರ್ಮದಲ್ಲಿಯೇ ಅಂತರ್ಗತವಾಗಿರುವ ಪ್ರತಿಭಾಕ್ರಿಯೆ. ಅವನ ಅನುಭವ ಜಗತ್ತು 'ಪ್ರತಿಮಾ'ರೂಪವಾದ ಭಾಷೆಯಲ್ಲಿ ಮಾಡುವ ವಿಶಿಷ್ಟ ಕ್ರಿಯೆ ಇದು."[2] ಮೇಲಿನ ಮಾತುಗಳು ಶೈಲಿಯ ಕ್ರಿಯೆಯನ್ನು ಹೇಳಿದರೆ ಪಾಶ್ಚಾತ್ಯ ವಿದ್ವಾಂಸರಲ್ಲಿ ಅರ್ವಾಚೀನರು ಶೈಲಿಯ ಸ್ವರೂಪವನ್ನು ಹೇಳುತ್ತಾ 'ಕವಿಯೇ ಶೈಲಿ' ಎಂದರು. ಅಂದರೆ ಅದು ಇಡಿಯ ವ್ಯಕ್ತಿತ್ವದ ಫಲ ಎಂದು ಅಭಿಪ್ರಾಯಪಟ್ಟರು. ಈ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯಕ್ಕೆ ಸಮೀಪವಾಗುವಂತೆ ಬಹಳ ಹಿಂದೆಯೇ ಮಾತನಾಡಿದವನು ಭಾರತೀಯ ಮೀಮಾಂಸಕಾರ ಕುಂತಕ. ಕವಿಗಳೂ ತಮ್ಮ ಮನೋಧರ್ಮಕ್ಕನುಗುಣವಾಗಿ ಕಾವ್ಯಮಾರ್ಗಗಳನ್ನು ನಿರ್ಮಿಸಿಕೊಳ್ಳುತ್ತಾರೆಂದೂ ಅದು ದೇಶವಾಚಕನಿಬದ್ಧವಾದುದಲ್ಲವೆಂದೂ ಹೇಳಿದನು. ಕವಿ ಸ್ವಭಾವಕ್ಕನುಸರಿಸಿ 'ಸುಕುಮಾರಮಾರ್ಗ', 'ವಿಚಿತ್ರಮಾರ್ಗ'

ಹಾಗೂ 'ಮಧ್ಯಮ ಮಾರ್ಗ' ಎಂದು ಮೂರು ಬಗೆಯ ಕಾವ್ಯಮಾರ್ಗವನ್ನು ಆತ ಹೆಸರಿಸಿದ. ಹೀಗೆ ಕಾವ್ಯದ ರೀತಿಯನ್ನು ನೋಡುವಲ್ಲಿ ಹೊಸಕಣ್ಣು ಕುಂತಕನಿಂದ ದೊರೆಯಿತು. ಎಷ್ಟು ಜನ ಕವಿಗಳೋ ಅಷ್ಟು ಬಗೆಯ ಮಾರ್ಗ ಸಾಧ್ಯ ಎನ್ನುವ ಕಲ್ಪನೆ ಅವನಿಂದ ಬಂದಿತು. 'ಶೀಲದಂತೆ ಶೈಲಿ' 'ಸ್ಟೈಲ್ ಈಸ್ ದಿ ಮ್ಯಾನ್' ಎಂಬ ಮಾತುಗಳ ತತ್ವದ ಹೊಳಹು ಅವನಲ್ಲೇ ದೊರೆಯಿತು.

ತಾನು ಹೇಳಿದ ಮಾರ್ಗಗಳಲ್ಲಿ ಒಂದು ಶ್ರೇಷ್ಠವೆಂದೂ, ಇನ್ನೊಂದು ಕನಿಷ್ಠವೆಂದೂ ಕುಂತಕ ಹೇಳಲಿಲ್ಲ. ಎಲ್ಲಾ ಗುಣಗಳು ಎಲ್ಲಾ ಮಾರ್ಗದಲ್ಲಿರುತ್ತವೆ, ಅದನ್ನು ಆಯಾ ಮಾರ್ಗಗಳಿಗನುಗುಣವಾಗಿ ಬಳಸಿಕೊಳ್ಳುವುದು ಕವಿಪ್ರತಿಭೆಗೆ ಸಂಬಂಧಿಸಿದ್ದು. ಶೈಲಿ–ಅದು ಕವಿಯ ಅನುಭವ ವ್ಯಕ್ತಗೊಳ್ಳುವ ಒಂದು ವಾಹಕ. ಅವನ ಅಂತರಂಗದ ವಕ್ರತಾಮನೋರೂಪದ ಬಹಿರ್‌ರೂಪ. ಹೀಗೆ ಕುಂತಕ ಕಾವ್ಯ ಭಾಷೆಗೆ ವೈಯಕ್ತಿಕತೆಯನ್ನು ತಂದುಕೊಟ್ಟು ನಾವಿಂದು ಹೇಳುವ ಪಂಪನ ಶೈಲಿ, ಕುಮಾರವ್ಯಾಸನ ಶೈಲಿ, ಕುವೆಂಪು ಶೈಲಿ ಎಂದು ವಿಶಿಷ್ಟವಾಗಿ ಗುರುತಿಸುವ ಪರಿಕಲ್ಪನೆಗೆ ಸಾಮೀಪ್ಯವನ್ನು ಹೊಂದುತ್ತಾನೆ. ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ಕುಂತಕ ಹೇಳುವ 'ಮಧ್ಯಮ ಮಾರ್ಗ'ದ ಸ್ವರೂಪ ಕಾಣಿಸುತ್ತದೆ. ಸುಕುಮಾರ ಹಾಗೂ ವಿಚಿತ್ರ–ಈ ಎರಡು ಮಾರ್ಗಗಳ ಗುಣಲಕ್ಷಣಗಳನ್ನು ಹದವರಿತು ಬಳಸಿಕೊಂಡಾಗ ಆತ ಹೇಳಿದಂತೆ 'ನಾನಾ ರುಚಿ ಮನೋಹರವಾಗಿರುತ್ತದೆ. ಮಧ್ಯಮ ಮಾರ್ಗದ ಸಹಜಾಹಾರ್ಯ ಶೋಭಾತಿಶಯ ಶಾಲಿನಿ' ಗುಣವನ್ನು ಈ ಉದ್ದೇಶಿತ ಕೃತಿಯಲ್ಲಿ ನಿಚ್ಚಳವಾಗಿ ಗುರುತಿಸಬಹುದಾಗಿದೆ. 'ಸುಕುಮಾರ'ದ ಸಹಜತೆಯನ್ನು ತೋರುವ ಪದ್ಯಗಳೇ ಮೋಹನ ತರಂಗಿಣಿಯಲ್ಲಿ ಅಧಿಕವಾಗಿ ಗೋಚರಿಸುತ್ತವೆ. ದ್ವಾರಕಾಪುರದ ವರ್ಣನೆಯ ಸಂದರ್ಭದಲ್ಲಿ ಬರುವ ಬಳೆಗಾರರ ಒಂದು ಚಿತ್ರದಲ್ಲಿ 'ಸುಕುಮಾರ' ಗುಣ ಢಾಳವಾಗಿ ಗೋಚರಿಸುತ್ತದೆ :

ಕಳೆವೆತ್ತ ವಾರನಾರಿಯರ ಕನ್ನಿಕೆಯರ
ಮೊಳೆಮೊಲೆಗಳ ನೋಡಿ ನಗುತ
ಎಳವೆರಲ್ಗಳ ಚಿಟುಕೊತ್ತಿ ಕೈದೊಡಿಸುವ
ಬಳೆಗಾರರಿರ್ದರಿಕ್ಕೆಲದಿ ॥ (೩–೨೩)

ಮನ್ಮಥ ದಹನದ ಚಿತ್ರದಲ್ಲಿ ಕಾಣಿಸುವುದು ಮಧ್ಯಮ ಮಾರ್ಗ

ಭುಗಿಭುಗಿ ಛಟಿಛಟಿಲೆಂದು ಲೋಚನದೊಳಿ

ದೊಗೆದ ದಳ್ಳುರಿ ಸುತ್ತಿ ಸ್ಮರನ
ಬಿಗಿದ ಬತ್ತಳಿಕೆ ಕರ್ವಿಲ್ಲು ಸಹಿತೆ ಸು
ಟ್ಟುಗಿದುದು ಕುಡಿ ನಭಸ್ಥಳಕೆ ॥ (೭-೩೪)

ಕವಿ ಮನೋಧರ್ಮ ಹಾಗೂ ಆತನ ಪ್ರತಿಭೆಗನುಸಾರವಾಗಿ ಮಾರ್ಗ ರೂಪುಗೊಳ್ಳುತ್ತದೆ ಎನ್ನುವ ಕುಂತಕನ ಆಲೋಚನೆಯ ಹಿನ್ನೆಲೆಯಲ್ಲಿ ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ವ್ಯಕ್ತಿವಿಶಿಷ್ಟವಾದ ಒಂದು ಶೈಲಿಯನ್ನು ನಾವು ಗುರುತಿಸಬಹುದು.

ಕಲೆಯಲ್ಲಿ ಎಲ್ಲಿ ಸಂವಹನ ಸಾಮರ್ಥ್ಯ ಇರುತ್ತದೋ ಅಲ್ಲಿ ಮಾತ್ರ ಶೈಲಿ ಇರುವುದು ಸಾಧ್ಯ. ಚಿತ್ರ, ಸಂಗೀತ, ನೃತ್ಯಕ್ಕಿಂತ, ಹೆಚ್ಚಿನ ಪ್ರಮಾಣದಲ್ಲಿ ಶೈಲಿಯನ್ನು ಭಾಷೆಯಲ್ಲಿ ಗುರುತಿಸುವುದು ಸಾಧ್ಯವಾಗುತ್ತದೆ. ಕವಿಯಾದವನ ವ್ಯಕ್ತಿತ್ವ ಪ್ರಕಟಣ ವಿಧಾನವಾದ ಶೈಲಿಗೆ ಡಾ. ಕೆ. ವಿ. ತಿರುಮಲೇಶ್ ಹೇಳುವಂತೆ "ಭಾಷಾ ವಿಜ್ಞಾನದ ದೃಷ್ಟಿಯಿಂದ ಮುಖ್ಯವಾದ ಎರಡು ಸಮೀಪನಗಳಿವೆ.– ಶೈಲಿಯೆಂದರೆ ಆಯ್ಕೆ (Choice), ಶೈಲಿಯೆಂದರೆ ಲಂಘನ ಅಥವಾ ಅಡ್ಡದಾರಿ (deviance) ಎಂಬುದಾಗಿ[3] ಮಾತಿನ ಮೂಲಕ ಅಭಿವ್ಯಕ್ತಿಯನ್ನು ಕಾಣುವ ಕಾವ್ಯದಲ್ಲಿ ಪದ, ಕಾವ್ಯಗಳ ವಿನ್ಯಾಸ, ಕಾಕು, ಸ್ವರಭಾರಗಳ ಸಂಯೋಜನೆ ಮಾತಿನೊಂದಿಗೆ ಮೌನ ತರುವ ಅರ್ಥ–ಇಲ್ಲೆಲ್ಲ ಹಲವು ಬಗೆಯ ಆಯ್ಕೆಗೆ ಅವಕಾಶವಿದೆ. ಕವಿಕಾವ್ಯದ ಮೂಲಕ ತನ್ನ ಪ್ರತಿಭೆಯ ಅವಿಷ್ಕರಣದಲ್ಲಿ ನಿಯಮಬದ್ಧವಾದ ಭಾಷಾ ಪ್ರಯೋಗವನ್ನು ಮೀರಿ ನಡೆಯುತ್ತಾನೆ. ಈ ಉಲ್ಲಂಘನೆಯಲ್ಲೇ ಅವನ ಹಿರಿಮೆ ಸ್ಥಾಪಿತವಾಗುತ್ತದೆ. ಈ ಪ್ರಕ್ರಿಯೆಯನ್ನು ಕುರಿತು ತಿರುಮಲೇಶರು 'ಈ ದಿಕ್ಚ್ಯುತಿ ಕೇವಲ ವ್ಯಾಕರಣ ನಿಯಮಗಳಿಗಷ್ಟೇ ಸೀಮಿತವಲ್ಲ, ಭಾಷೆಯ ಎಲ್ಲ ವಿದ್ಯಮಾನಗಳಿಗೂ ಸಂಬಂಧಿಸಿದುದು....ಇಂಥ ಉಲ್ಲಂಘನೆಗಳು ಕವಿ, ಮಾತಿನ ಆದರ್ಶ ಸ್ಥಿತಿಯ ಅಥವಾ ಪರಿಪೂರ್ಣ ಸ್ಥಿತಿಯ ಕಡೆಗೆ ನಡೆಸುವ ತುಯ್ತಗಳು. ಇವುಗಳಲ್ಲಿ ಕವಿ ಎಷ್ಟರ ಮಟ್ಟಿಗೆ ಸಫಲನಾಗುತ್ತಾನೆ ಎನ್ನುವುದು ಅವನ ಪ್ರತಿಭೆಯನ್ನು ಹೊಂದಿಕೊಂಡಿದೆ'[4] ಕಾವ್ಯದಲ್ಲಿ ಭಾಷೆ ಆಡುಮಾತಾಗಿ ಬಂದಾಗ ಅದರ ಅರ್ಥಾಭಿವ್ಯಕ್ತಿ ಸಾಮರ್ಥ್ಯ ಹೆಚ್ಚುತ್ತದೆ, ದ್ರವಣತೆ ಬರುತ್ತದೆ. ಆದರೆ ದಿನಬಳಕೆಯ ಆಡುಮಾತಿನ ಬಳಕೆಯಷ್ಟೇ ಒಳ್ಳೆಯ ಶೈಲಿಗೆ ಕಾರಣವಾಗುವುದಿಲ್ಲ. ಅಸಾಮಾನ್ಯವಾದ ಪದಗಳು ವಿಶಿಷ್ಟ ರೀತಿಯಲ್ಲಿ ಹೆಣಿಗೆಗೊಂಡು ರೂಪಕಾತ್ಮಕವಾಗಿ ಸನ್ನಿವೇಶಕ್ಕನುಗುಣವಾಗಿ ಕಲಾತ್ಮಕವಾಗಿ ವ್ಯಕ್ತಿವಿಶಿಷ್ಟತೆಯ ಮೊಹರು ಧರಿಸಿ ಆಕಾರ ಪಡೆದಾಗಲೇ ಒಳ್ಳೆಯ

ಶೈಲಿ ರೂಪುಗೊಳ್ಳುತ್ತದೆ. ಇದು ಮತ್ತೆ ಹಿಂದೆ ಹೇಳಿದ ಆಯ್ಕೆ ಹಾಗೂ ಲಂಘನಗಳ ತತ್ವವನ್ನೇ ಹೇಳಿದಂತಾಯಿತು.

ಶೈಲಿಯೆಂದರೇನು ಎನ್ನುವುದನ್ನು ವಿದ್ವಾಂಸರು ನಾಲ್ಕು ಬಗೆಯಲ್ಲಿ ವರ್ಗೀಕರಿಸಿ ಹೇಳಿರುವರಾದರೂ ನಮಗಿಲ್ಲಿ ಪ್ರಸ್ತುತವಾದುದು, ಒಂದು ಸಾಹಿತ್ಯ ಸಂಪ್ರದಾಯದಲ್ಲಿ ಅಥವಾ ಲೇಖಕನಲ್ಲಿ ಗುರುತಿಸಬಹುದಾದ ವಿಶಿಷ್ಟತೆ ಹಾಗೂ ವಸ್ತು ವಿಷಯ ಸಂದರ್ಭಗಳಿಗೆ ತಕ್ಕಂತೆ ಭಾಷೆಯನ್ನು ಬಳಸುವ ರೀತಿ. 'ಮೋಹನ ತರಂಗಿಣಿ', 'ನಳಚರಿತ್ರೆ', 'ರಾಮಧಾನ್ಯಚರಿತ್ರೆ', 'ಹರಿಭಕ್ತಿಸಾರ' ಹಾಗೂ ಕೀರ್ತನೆಗಳ ಬರವಣಿಗೆಯಲ್ಲಿ ಭಿನ್ನ ರೂಪದ ಶೈಲಿಯ ಹೊಳಪು ಗೋಚರಿಸುತ್ತದೆ. ಇದಕ್ಕೆ ಕನಕರ ಜೀವಿತದಲ್ಲಿ ಕಾಲ ಕಾಲಕ್ಕೆ ಉಂಟಾದ ವ್ಯಕ್ತಿತ್ವದ ಹೊರಳುವಿಕೆಯೇ ಕಾರಣವಾಗಿರಬಹುದು. 'ಮೋಹನ ತರಂಗಿಣಿ' ಅವರ ತುಂಬು ಯೌವನದ ಸಂಪತ್ಸಮೃದ್ಧ ಜೀವಿತಾವಧಿಯಲ್ಲಿ ರಚಿತವಾದದ್ದಿರಬೇಕು. ವಿಜಯನಗರದ ಕೃಷ್ಣದೇವರಾಯನ ಸಾಮ್ರಾಜ್ಯ ವೈಭವ ಕಣ್ಣಿಗೆ ಢಾಳವಾಗಿ ಕಾಣುತ್ತಿದ್ದ ಸಂದರ್ಭದಲ್ಲಿ 'ಭೋಗ'ದ ತುತ್ತ ತುದಿಯಲ್ಲಿ ನಿಂತು ಭೋಗ–ಭಕ್ತಿಗಳನ್ನು ಸಂಲಗ್ನಗೊಳಿಸುವ ಪ್ರಯತ್ನದಲ್ಲಿ ಈ ಕೃತಿ ಅವತರಿಸಿರಬೇಕು. ಮುಂದೆ ಮನಸ್ಸು ವೈರಾಗ್ಯದಲ್ಲಿ ಮಿಡಿದು ಪಕ್ವಗೊಂಡಾಗ ಕೀರ್ತನೆ, ಹರಿಭಕ್ತಿಸಾರದಂತಹ ಕೃತಿಗಳು ಬಂದಿರಬೇಕು.

ಕವಿಯೇ ಹೇಳಿರುವಂತೆ 'ಮೋಹನ ತರಂಗಿಣಿ' ಹಾಡುಹಬ್ಬ ಅಕ್ಷರಗಳಲ್ಲಿ ಮೂಡಿಸಿ, ಶಾಬ್ದಿಕವಾಗಿ ಓದುವುದರಿಂದ ಹೆಚ್ಚಿನ ಅರ್ಥವಂತಿಕೆಯನ್ನು ಅದು ಸಂಗೀತದ ಸಾಹಚರ್ಯದೊಂದಿಗೆ ಹಾಡಿದಾಗ ಪಡೆದುಕೊಳ್ಳುತ್ತದೆ. ಅಕ್ಷರ ವಿದ್ಯೆಯಲ್ಲಿ ಪ್ರಕಾಂಡ ಪಂಡಿತನಲ್ಲದ ಕನಕರು ಬಹುಶಃ ಈ ಕಾವ್ಯವನ್ನು ಮೌಖಿಕ ರೂಪದಲ್ಲಿ ಹೆಣೆದಿರಬೇಕು.[5] 'ಬರಹವನಜೆಯೆ ನಾ ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ' (ಮೋಹನ ತರಂಗಿಣಿ ೧–೨೧). ಹೀಗಾಗಿ ಕಾವ್ಯ ತನ್ನ ಬೆನ್ನ ಹಿಂದಿನ ಕವಿಗಳ ಅಷ್ಟಾದಶವರ್ಣನೆ, ಕವಿಸಮಯ, ಸಿದ್ಧ ವಿಶೇಷಣ, ಶ್ಲೇಷೆ, ಕ್ಲೀಷೆಗಳ ಸಿದ್ಧ ಅಚ್ಚಿನಲ್ಲಿ ಎರಕಗೊಳ್ಳುವುದು ಸಹಜ. ಲೇಖನಿ ಹಿಡಿದು ಬರೆವಾಗ ಸಿದ್ಧಿಸುವ ಪದ ಸಂಯಮ, ವರ್ಣನೆಗಳಲ್ಲಿನ ಕೃಪಣತೆಗಳು ಬಾಯ್ದುರೆ ನಿರೂಪಣೆಯಲ್ಲಿ ಬರುವುದು ಸಾಧ್ಯವಿಲ್ಲ. ಪುರವರ್ಣನೆ, ಸಮುದ್ರವರ್ಣನೆ, ವಿವಾಹದ ವಿಧಿ ವಿಧಾನಗಳು, ಸೂರ್ಯಾಸ್ತ. ಸೂರ್ಯೋದಯ, ಯುದ್ಧ ವಿವರ ಮುಂತಾದ ವರ್ಣನಾ ಭಾಗಗಳಲ್ಲಿ ತಾನು ಈ ಹಿಂದೆ ಕೇಳಿಸಿಕೊಂಡಿದ್ದ ವಿವರಗಳೂ ತನ್ನ ನೆನಪಿನ ಭಂಡಾರದಲ್ಲಿರುತ್ತವೆ. ಹಾಡುವ

ಸನ್ನಿವೇಶ ಒದಗಿದಾಗ ಸಂಬಂಧಿಸಿದ ನುಡಿಗಟ್ಟುಗಳನ್ನು ಅಲ್ಲೇ ಹೆಣೆದು ಬಳಸುತ್ತಾನೆ, ಇಲ್ಲವೇ ಪುನರ್ ಸೃಷ್ಟಿಗೊಳಿಸಿ ಹಾಡಿನಿಂದ ಹಾಡಿಗೆ ಪರಿಷ್ಕಾರಗೊಳಿಸುತ್ತಾ ಹೋಗುತ್ತಾನೆ.[೬] ಹೀಗಾಗಿ ಮೌಖಿಕ ಸಾಹಿತ್ಯವು ಕವಿಯ ಸಮಯಸ್ಫೂರ್ತಿ, ಸಂದರ್ಭ ಹಾಗೂ ಎದುರಿನ ಕೇಳುವ ಶ್ರಾವಕ ವರ್ಗವನ್ನು ಅನುಸರಿಸಿ ಬದಲಾಗುತ್ತಾ ವಿಸ್ತಾರಗೊಳ್ಳುತ್ತಾ ಇಲ್ಲವೇ ಸಂಕ್ಷೇಪಗೊಳ್ಳುತ್ತಾ ಹೊಸ ರೂಪವನ್ನು ತಾಳುತ್ತಾ ಹೋಗುತ್ತದೆ. ಬಹುಶಃ ಮೋಹನ ತರಂಗಿಣಿಯು ವಿಸ್ತಾರಗೊಂಡುದು, ವರ್ಣನೆಗಳಿಂದ ಇಡಿಕಿರಿದುದು 'ಬರೆದು ಮಾಡಿದುದಲ್ಲದೆ' ಹೋದುದು ಹಾಗೂ 'ಸುಜ್ಞಾನವಧೂಟಿ'ಯೊಬ್ಬಳನ್ನು ಕೇಳುಗಳನ್ನಾಗಿ ಸೃಷ್ಟಿಸಿಗೊಂಡುದು. ಆದರೆ ಈ ಕಲ್ಪಿತ ಪಾತ್ರದಿಂದಾಗಿ ಮುದ್ದಣ್ಣನ ರಾಮಾಶ್ವಮೇಧದಂತೆ ಈ ಕಾವ್ಯವು ಸ್ವಾಭಿಮುಖ ಸಾಹಿತ್ಯಕ್ಕೆ[7] ಒಳ್ಳೆಯ ನಿದರ್ಶನವಾಗಲಿಲ್ಲ. ಪ್ರತಿ ಸಂಧಿಯ ಆರಂಭದಲ್ಲಿ 'ವಿಸ್ತರಿಸು', 'ಪೇಳು' 'ಪ್ರಕಟಿಸು' ಎಂದು ಕೇಳಿಕೊಳ್ಳುವುದಷ್ಟೇ ಆಕೆಯ ಕೆಲಸ ಹೊರತು ರಾಮಾಶ್ವಮೇಧದ ಮುದ್ದಣ್ಣ–ಮನೋರಮೆಯರಂತೆ ಕಾವ್ಯಕ್ಕೆ ಒಂದು ವೈಚಾರಿಕ ನೆಲೆಗಟ್ಟನ್ನು ಒದಗಿಸಿಲ್ಲ. 'ಕನ್ನಡ ವಾಕ್ಯದಲ್ಲಿ ನಾರಾಯಣನ ಸತ್ಕೃತಿಯ ವಿಸ್ತರಿಸು,' 'ಕೃತಿವೇಟಖಂಡ ಶರ್ಕರೆಯಂತೆ ಸವಿವಾತುವೆರಸಿ', 'ಜೇನುತುಪ್ಪದ ತೊಟಿಯಾಗೆಜೌಯಾ ಪೇಳುಮೆಲ್ಲಗೆ'ಯ, 'ಆಲಸ್ಯ ಪರಿಹರವಪ್ಪಂತೆ ಪೇಳ್, 'ಕವಿತೆಯ ಪೇಟೌನ್ನ ಕಿವಿಗೆ ಲೇಸೆನಿಸಿ' ಎಂದು ಮುಂತಾಗಿ ಕೇಳಿಕೊಂಡ ಸುಜ್ಞಾನವಧೂಟಿಗೆ ಕವಿ 'ಕರ್ಣರಾಸಾಯನವೆನಲುಸಿರುವೆನೀ ಕೃತಿಯ', 'ಕರ್ಣಕೆ ಕಡು ರುಚಿವಡಿಸುವೆ', 'ಸಕ್ಕದ ಕನ್ನಡವೆರಸಿ ಸತ್ಕವಿತೆಯನೊಕ್ಕಣಿಸುವೆ',–ಇಂತಹ ಮಾತುಗಳು ಕಾವ್ಯದ ಭಾಷಾ ಸ್ವರೂಪ ಹಾಗೂ ನಿರೂಪಣೆಯ ರೀತಿಯನ್ನು ಸ್ಪಷ್ಟಪಡಿಸುತ್ತವೆಯಾದರೂ ಕವಿಯ ಸಮಕಾಲೀನ ಅಭಿವ್ಯಕ್ತಿಯ ಸಮಸ್ಯೆ, ದ್ವಂದ್ವ ತುಮುಲಗಳನ್ನು ಸಾಕಷ್ಟು ಸಶಕ್ತವಾಗಿ ವ್ಯಕ್ತಪಡಿಸುವುದರಲ್ಲಿ ಸಫಲವಾಗಿಲ್ಲ.

"ಹಳಗನ್ನಡ ಯಾವ ಮಹತ್ವದ ಕವಿಯೂ ಅಷ್ಟಾದಶವರ್ಣನೆಗಳ ಜಂಜಡದಿಂದ ಪಾರಾಗಲಿಲ್ಲ. ಎಷ್ಟೋ ಕವಿಗಳ ಪ್ರತಿಭೆ ಈ ಅನಿವಾರ್ಯತೆಯ ಮಡುವಿನಲ್ಲಿ ಸಿಲುಕಿ ನರಳಿದೆ. ಕಾಳಿದಾಸನೂ ಇದಕ್ಕೆ ಹೊರತಾಗಿಲ್ಲ. ಕವಿಯ ಉದ್ದೇಶವೇ 'ಮಹಾಕಾವ್ಯ'ದ ರಚನೆಯಾದ್ದರಿಂದ ಈ ಬಂಧನವನ್ನು ಮೀರಿಕೊಳ್ಳಲು ಸಾಧ್ಯವಾಗಲಿಲ್ಲ. ಆದುದರಿಂದಲೇ ಅಷ್ಟಾದಶವರ್ಣನೆಗಳ ಈ ಗೊಂದಲದಲ್ಲಿ ಉತ್ತಮ ಕಾವ್ಯಭಾಗಗಳನ್ನು ಹುಡುಕಿ ತೆಗೆಯಬೇಕಾಗಿದೆ. ಅಂಥ ಉತ್ತಮ ಭಾಗಗಳಲ್ಲಿ ಕನಕದಾಸನ ಪ್ರತಿಭೆ ಮಿಂಚುತ್ತದೆ."[8]

ಹೆಚ್ಚೇನೂ ಓದಿನ ಹಿನ್ನೆಲೆಯಿಲ್ಲದ ಕನಕದಾಸರಿಗೆ ತನ್ನ ಕಾವ್ಯವನ್ನು ಓದುಗರು ಹೇಗೆ ಸ್ವೀಕರಿಸುವರೋ ಎಂಬ ಕುತೂಹಲ. ಹಾಗಾಗಿ 'ಈ ಕಾವ್ಯದಲ್ಲಿ ಸಾವಿರ ದೋಷಗಳಿದ್ದರೂ ಬರುವ ಒಂದು ಉತ್ತಮ ಗುಣವನ್ನು ಪಂಡಿತರಾದವರು ಮೆಚ್ಚಬೇಕು. (೧–೨೧) ಎಂದು ಮೊದಲಲ್ಲೆ ನಿವೇದಿಸಿಕೊಳ್ಳುತ್ತಾರೆ. 'ಗುಬ್ಬಿಯ ಕೊರಳಿಗೆ ಗೋದಿಯ ಕಲ್ಲು ಕಟ್ಟಿದರೆ, ಆ ಗುಬ್ಬಿ ಆಕಾಶಕ್ಕೆ ಹಾರಬಲ್ಲುದೆ.[2]' ಆದುದರಿಂದ ಕವಿಗಳು ನಾನು ರಚಿಸಿದ ಕಾವ್ಯವನ್ನು ತಿದ್ದಿ ಭೂಮಿಯ ಮೇಲೆ ಪ್ರಸರಿಸಬೇಕು (೧–೨೪) ಎನ್ನುವಲ್ಲಿ ಕವಿಯ ವಿನಯಶೀಲ ಬುದ್ಧಿಯನ್ನು ಕಾಣಬಹುದು. ಸಾಮಾಜಿಕ 'ಏಣಿಶ್ರೇಣಿ ವ್ಯವಸ್ಥೆಯಲ್ಲಿ ಕೆಳಗಿನ ಸ್ತರದಿಂದ ಬಂದ ಕನಕದಾಸರಿಗೆ ಸಾಹಿತ್ಯ ರಚನೆಯ ಸಂದರ್ಭದಲ್ಲಾದ ಯಾವುದೋ ಅನುಭವಕ್ಕೆ 'ಕೈಯಿಲ್ಲದ ಗೀಜಗವು ಕಟ್ಟಿದ ಗೂಡನ್ನು ಕಿಡಿಗೇಡಿ ಕಪಿಯು ಸಹಿಸದೆ ಹಾಳು ಮಾಡಿದರೆ ಏನು ಬಂದಂತಾಯಿತು ? ಕುಹಕಿಗಳಾದರೂ ಅಷ್ಟೆ. : (೧–೨೩) ಪ್ರತಿಕ್ರಿಯೆಯಾಗಿ ಬಂದಿರಬೇಕು. ಮುಂದೆ ಆತ್ಮಪ್ರತ್ಯಯ ತುಂಬಿ ಬಂದಾಗ "ನೆಟ್ಟನೆ ಕನಕದಾಸನ ಕಾವ್ಯದೊಳ್ ದೋಷ ತಟ್ಟದು ತಪ್ಪೆನ್ನಬೇಡ, 'ರಸಪೂರಿತ ಸುಪ್ರಬಂಧ ವಿಲಕ್ಷಣವೆಸೆವಂತೆ ಪೇಳ್ದಪೆನಿದನು"–ಇಂತಹ ಮಾತುಗಳು ಬಂದಿವೆ. ಇದನ್ನು ಕಂಡೇ ಕನಕದಾಸರ ವ್ಯಕ್ತಿತ್ವವನ್ನು ಕುರಿತು "ವಿನಯವಳ, ನಮ್ರ ; ಆದರೆ ದೀನನಲ್ಲ, ಧೈರ್ಯಗೇಡಿಯಲ್ಲ, ಬಗ್ಗಿದರೂ ಕುಗ್ಗುವವನಲ್ಲ, ಆತ್ಮಪ್ರತ್ಯಯ ಬಾಹಿರನಲ್ಲ" ಎನ್ನುವ ಅಭಿಪ್ರಾಯ ಬಂದಿರುವುದು.

ಕಾವ್ಯ ಭಾಷೆಯನ್ನು ಕುರಿತು ಕಳೆದ ಶತಮಾನದ ಕೊನೆಯಲ್ಲಿ ಮುದ್ದಣ ಏನು ಸಮಸ್ಯೆಯನ್ನು ಇದಿರಿಸಿದನೋ ಅದೇ ಬಗೆಯ ಸಂಘರ್ಷವನ್ನು ಸ್ವಲ್ಪಮಟ್ಟಿಗೆ ಕನಕದಾಸರೂ ಇದಿರಿಸಿರಬೇಕು. ಈ ಹಾಡುಗಬ್ಬವನ್ನು ಕಿವಿದೆರೆದು ಕೇಳುವ ಅವನ ಸುಜ್ಞಾನವಧೂಟಿ 'ಅರಸುವಂತೆ ಮಾಡದಿರು....... ಕಾಣಬರ್ಪಂತೆ ಕನ್ನಡ ವಾಕ್ಯದೆ ನೆರೆ ಜಾಣ ಸತ್ಕೃತಿಯ ವಿಸ್ತರಿಸು' ಎನ್ನಬೇಕಾದರೆ ಕನಕದಾಸರ ಕಾಲದಲ್ಲಿ ಪಂಡಿತವಲಯದಲ್ಲಿ ಸಂಸ್ಕೃತಕ್ಕಿದ್ದ ಪ್ರತಿಷ್ಠೆಯನ್ನು ಸೂಚಿಸುತ್ತದೆ. ಆದರೆ ಕನಕರ ಧೋರಣೆ ಬೇರೆ. 'ಕೃತಿಪೇಳ್ವೆ ಗೀರ್ವಾಣಭಾಷೆ ಕನ್ನಡದಿ, (೩೩–೧) ಸಕ್ಕದ ಕನ್ನಡವೆರಸಿದ ಕವಿತೆಯನೊಕ್ಕಣಿಸುವೆ ಕೇಳುಕೆಳದಿ' (೧೫–೨), 'ನಾಡೊಳಗುಳ್ಳ ಜಾಣರು ಜಾಣೆಯರೊಡನಾಡುವ ಸವಿವಾತುಗಳ, ಹೀಗೆಂದರೂ (೧–೩೬) ಸಮಕಾಲೀನ ಪಂಡಿತ ಮಂಡಲಿಯ ಮೆಚ್ಚು ಪಡೆಯಲು ಅಥವಾ ಕೃತಿ ಮಹಾಕಾವ್ಯವಾಗಬೇಕಾದರೆ ಸಂಸ್ಕೃತ ವೈಭವದ ಮೆರವಣಿಗೆ

ಅನಿವಾರ್ಯವೆಂಬ ಸಂಪ್ರದಾಯದ ಜಡತೆಗೆ ಅಂಟಿಕೊಂಡ ಫಲವೋ ಏನೋ ಕೆಲವೊಮ್ಮೆ ಅವರ ಸಂಸ್ಕೃತ ವ್ಯಾಮೋಹ ಮಿತಿಮೀರುತ್ತದೆ:

ವಿಚ್ಛೇದನೋದ್ಯೋಗ ; ನಾರಾಯಣನುರಕ್ಷಿಹ್ನೆ ; ಅಪೋನಾರಾಯಣತತ್ವಂ ;
ಸತ್ವದ ಮಿತ್ರಾಪ ಜಯದ ವೇಳೆ ; ನೇತ್ರ ಲಾಂಛನಗೆ ;
ವಾರಿಮಸ್ತಕನ ; ನಾ ಪುತ್ರಸ್ಯ ಲೋಕೋಸ್ತಿ, ರಾಕ್ಷಸಭೇದಿಯಂಗುಷ್ಟ
ಸಂಭವೆ ; ಮರುತ ಭುಕ್ತಾಧಿಪತನಪರಾವತಾರ ; ಲಪನಾಬ್ಜಮಿತ್ರ
ಮಾಧವ ; ವಿಗ್ರಹಜಾತ ಸಂದೋಹ ; ರಾಜಾರ್ಕಶಿಖಿನೇತ್ರ

ಅಲ್ಲದೆ ಗರುಡನಿಗೆ **'ಕ್ಷ್ವೇಡಾಳ'**, ಹೇಸರಗತ್ತೆಗೆ **'ವೇಸರ'** ಬೃಹಸ್ಪತಿಗೆ **'ಜೀವ'** ಮುಂತಾದ ಪದಗಳನ್ನು ಬಳಸಿದ್ದು 'ತಾನೊಂದು ಪ್ರೌಢ ಉದ್ಗ್ರಂಥ ವಿರಚನೆಯಲ್ಲಿ ತೊಡಗಿದ್ದೇನೆಂಬ ಸಾರಸ್ವತ ಸುದ್ದಿಯನು ಡಂಗೂರಿಸುವ ವಾದ್ಯ ಸಲಕರಣೆ ಕವಿಗೆ : ಅವನ ಸಂಪ್ರದಾಯ ಶರಣಾಗತಿಯ ಘೋಷಣೆ."[10]

ತನ್ನ ಕಾವ್ಯವನ್ನು ಕುರಿತು ಕನಕದಾಸರು ಹೇಳಿದ ಮಾತುಗಳಿಂದಲೇ ಅವರ ಕಾವ್ಯದ ಹದವನ್ನು ಅರಿತುಕೊಳ್ಳಬಹುದು. ಶೃಂಗಾರವೇ ಮುಂತಾದ ಸುಕೋಮಲ ಭಾವಗಳನ್ನು ವಿಸ್ತರಿಸುವುದಕ್ಕೆ ಹೇಳಿ ಮಾಡಿಸಿದ ಛಂದ ಸಾಂಗತ್ಯ. ಹೀಗಾಗಿ 'ಮೋಹನ ತರಂಗಿಣಿ'ಯ ಯುದ್ಧ ಭಾಗಕ್ಕಿಂತ ಇತರೆಡೆಗಳಲ್ಲೇ ಹೆಚ್ಚಿನ ದ್ರವಣತೆ ಗೋಚರಿಸುತ್ತದೆ. ಅದನ್ನೇ ಕವಿ 'ಕಿವಿಗೆ ಭೂಷಣವಾಗುವ ಸವಿ ಮಾತುಗಳಿಂದ ತುಂಬಿದೆ' (೧–೧೮) ಎಂದುದು. ಪದಮೈತ್ರಿ ಅವನ ಕಾವ್ಯದ ಜೀವಾಳ. 'ರಸಪೂರಿತ ಸುಪ್ರಬಂಧವಿದು' 'ಶ್ರವಣಕಾನಂದವೆಂದೆನಿಸಿ' ಎನ್ನುವ ಮಾತುಗಳು ಬರಿಯ ಉತ್ಪ್ರೇಕ್ಷೆಯಲ್ಲ. ಆದರೆ ಪ್ರಾಚೀನ ಕವಿಗಳಿಗೆ ಪ್ರಾಸ, ಅನುಪ್ರಾಸ, ಯಮಕ ಪುನರುಕ್ತಿಯೆಂದರೆ ಎಲ್ಲಿಲ್ಲದ ಜೀವ ಕನಕರೂ ಇದರಿಂದ ಹೊರತಲ್ಲ. ಕೆಲವೊಮ್ಮೆ ಪ್ರಾಸಾನುಪ್ರಾಸಗಳ ಜೀತಗಾರಿಕೆಯನ್ನು ಅರ್ಥಭಾವಗಳೂ ಮಾಡಬೇಕಾದ ಅನಿವಾರ್ಯ ಸ್ಥಿತಿ ನಿರ್ಮಾಣವಾದುದೂ ಇದೆ.

ಕುಂಭಸ್ತನೆಯ ದಿಟ್ಟಿಸಲು ತನ್ನಯ ಕುಚ
ಕುಂಭ ಸಮಾನವೆಂದೆನಿಪ
ಕುಂಭೋದಕವ ಸೋದಿಸಿ ತುಂಬಿಸಿ ದ್ವಯಹೇಮ
ಕುಂಭವ ತಂದಿರಿಸಿದಳು ॥ (೨೧–೮)

ಹರಿಶರಣಪೆಚ್ಚು ಬುಧಜನರಿಗೆ ಮೆಚ್ಚು
ದುರಿತವನಕೆ ಕಾಟಿಚ್ಚು

ವಿರಹಿಗಳೆದೆಗಿಚ್ಚು ವೀರರ್ಗೆ ಪುಚ್ಚು
ಕೇಳ್ವರಿಗಿದು ತನಿಬೆಲ್ಲದಚ್ಚು ॥ (೧–೩೯)

ಒಂದೇ ಪದವನ್ನು ಮತ್ತೆ ಮತ್ತೆ ಬಳಸುವ ಶಬ್ದಮೋಹ ಕನಕನಲ್ಲಿ ಕಾಣಿಸುವುದುಂಟು. ಕುಂಭಾಂಡನ ಕಡೆಯ ರಕ್ಕಸರು ಅನಿರುದ್ಧನನ್ನು ಎಳವಾವೆ ಎಂದು ಹಂಗಿಸಿದಾಗ ಅವನು ಕೊಟ್ಟ ಉತ್ತರ;

ಬಾಟಿ ನಾನಹುದು ನಿಮ್ಮುವ ಕೊಲ್ಲದನ್ನಕ
ಬಾಟಿ ಬಿಲಾನ್ವಿತನಾಗಿ
ಬಾಟಿ ಬಾಣಾತ್ಮ ಸಂಭವೆಯಿಲ್ಲದಾನೊರ್ವ
ಬಾಟಿ ನೆಂದನಿರುದ್ಧ ನುಡಿದ ॥ (೩೪–೨೫)

ವಡಿಯ ಬಳಕೆ ಕನಕದಾಸರಿಗೆ ಪ್ರೀತಿಯ ಸಂಗತಿ. ಪ್ರೊ. ರಂಗಣ್ಣನವರು ಹೇಳುವಂತೆ 'ಕಿವಿಯ ಕಣ್ಣಿಗೆ ತಂಪಾಗಿ ತೋರುವುದರಿಂದ ಅದು ಸಾಧಾರಣ ಕುಣ್ಣು ಕುಕ್ಕುವುದಿಲ್ಲ, ಬರಿ ಶಬ್ದಚಿತ್ರದಂತೆ ತಿರಸ್ಕರಣೀಯವಾಗುವುದಿಲ್ಲ'

ಕಂಡುದ ನುಡಿದರೆ ಕೋಪವೆ ಕುಸುಮ ಕೋ
ದಂಡ ಕಾದಲಿಕೆ ಬಂದಿಹನೆ ॥ (೧೧–೩೩)
ಕರಗಸವೆತ್ತ ಕಂದಳಿಯೆತ್ತ ಕಾಲಸಂ
ಹರನೆತ್ತ ಕಂದರ್ಪನೆತ್ತ ॥ (೭–೪೧)

ಕೆಲವೊಮ್ಮೆ ವಡಿ ಕಿವಿಗೆ ಹೊಡೆದಂತೆ ಕಿರಿಕಿರಿಯಾಗುವುದು ಉಂಟು.

ಮಾತಾಡು ಮಜ್ಜನ್ಮ ದುಃಖವಿಚ್ಛೇದನ
ಮಾತಾಡು ಮತ್ಪುಣ್ಯ ನಿಧಿಯೆ
ಮಾತಾಡು ಮತ್ಸುತ ಕುಂಜರ ನೀ ಮುದ್ದು
ಮಾತನಾಡೆಂದಳರ್ಭಕನ ॥ (೧೭–೬೪)

ಸಾಂಗತ್ಯದೊಳಗೆ ಪದಮೈತ್ರಿ ಎಂಬ ಶ್ರುತಿ ಸುಭಗತೆಯನ್ನು ತರಬಲ್ಲುದೆನ್ನುವುದಕ್ಕೆ ಮುಂದಿನ ಪದ್ಯ ದೃಷ್ಟಾಂತ.

ಮಾಮರದೆಡೆಯಲ್ಲಿ ಮಂಗಳಮಯವಾದ
ಲಾಮಚದಮಳ ಚಪ್ಪರದಿ
ಹೇಮಾಂಬುರುಹ ಮೊಗ್ಗೆ ಮೊಲೆಯರು ನೀರ್ವಿಡಿ
ದಾ ಮಹಾಸ್ಥಲಗಳೊಪ್ಪಿದುವು ॥

ವೀರರಸಾಭಿವ್ಯಕ್ತಿಗೆ ಸಾಂಗತ್ಯ ಹೇಳಿಸಿದುದಲ್ಲ. ಮಾಧುರ್ಯ–ಲಾಲಿತ್ಯಗಳಿಗೆ

ಅದು ಸೂಕ್ತವಾಹಕ. ಕೋಮಲಮೆಯ್ಯ ಸಾಂಗತ್ಯಕ್ಕೆ ಯುದ್ಧದ ಭೀಷಣತೆಯನ್ನು ಸಹಿಸುವ ಸಾಮರ್ಥ್ಯ ಇಲ್ಲದೆ ಹೋಗಿದೆ.

ಕೂಗಿ ಬೊಬ್ಬಿರಿದರುಬ್ಬರ ಸಿಡಿಲ್ಕೋಟಿ ಜೊ
ತ್ತಾಗಿ ಗರ್ಜಿಸುವಂತೆ ಖಲರು
ಬಾಗಿದ ಬಿಲ್ಗೋಲ ಕಿವಿವರೆದೆಗೆದಿಕ್ಕಿ
ತಾಗಿದ ನವ ಪುಷ್ಪಶರನ ॥ (೩೫-೧೯)

ತನ್ನ ಯೌವನದ ದಿನಗಳಲ್ಲಿ ಕಲಿಯಾಗಿ ರಣರಂಗವನ್ನು ಸ್ವತಃ ಕಂಡಿದ್ದ ಕನಕದಾಸರ ರಣರಂಗದ ಬೀಭತ್ಸ ವರ್ಣನೆ ಸಚಿತ್ರವಾಗಿದೆ :

ತಲೆಗಳ ತುಂಡು ತೋಳ್ಗಳ ತುಂಡು ನಡು ತುಂಡು
ಸಲೆ ಜಾನು ಜಂಘೆಯ ತುಂಡು
ಬೆಲೆಯಿಂದೆ ಕಟುಕರಂಗಡಿಯಂತೆ ರಣರಂಗ
ಸಲೆ ಜಿಗುಪ್ಸೆಯ ತೋರಿಸಿತು ॥

ಕನಕದಾಸರ ಕೈ ಶೃಂಗಾರ ರಸಾಭಿವ್ಯಂಜನದಲ್ಲಿ ಒಳ್ಳೆಯ ಕುಸುರಿತನವನ್ನು ತೋರಿದೆ. ಪರುಷಾಕ್ಷರವಿರಹಿತವಾದ, ದೀರ್ಘಸಮಾಸ ಪದರಹಿತವಾದ ಶೈಲಿ ರತಿಭಾವ ವ್ಯಂಜನೆಗೆ ಅನುಕೂಲವಾಗಿರುತ್ತದೆ. ಮೋಹನ ತರಂಗಿಣಿಯ ಬಹುಭಾಗವನ್ನು ಆವರಿಸಿರುವ ಇಂತಹ ಸುಕುಮಾರ ಭಾವಾಭಿವ್ಯಕ್ತಿಯ ಸಂದರ್ಭಗಳು ಕವಿಯ ಗೆಲ್ಗಂಬಗಳಾಗಿವೆ. ಅಲ್ಲೆಲ್ಲ ಕವಿಯ ಪ್ರತಿಭೆ ಮಿಂಚುತ್ತದೆ. ನಿರಾಯಾಸವಾಗಿ ನುಡಿಮಗ್ಗದಲ್ಲಿ ಪದಗಳು ಹೆಣಿಗೆಗೊಳ್ಳುತ್ತವೆ. ರತಿವಿವಾಹ, ಜಲಕ್ರೀಡೆ, ರತಿಯ ಗರ್ಭದಾನ, ಅನಿರುದ್ಧ ಜನನ, ಉಷಾದೇವಿಯ ಶೃಂಗಾರ, ಉಷೆ ಚಿತ್ರಲೇಖೆಯರ ಸರಸ-ಇಂತಹ ಕಾವ್ಯಭಾಗಗಳು ಮೋಹನ ತರಂಗಿಣಿಯ ರಸಸ್ಥಾನಗಳು.

ಒಂದು ಉಪಮೆ ಅಥವಾ ಸಾದೃಶ್ಯದ ಮೂಲಕ ಒಂದು ವ್ಯಕ್ತಿಯ ಅಥವಾ ಸಂಗತಿಯ ಒಳನೋಟವನ್ನು ಮೂರ್ತಗೊಳಿಸುವುದರಲ್ಲಿ ಕನಕದಾಸರು ಜಾಣರು. ಕಲಹಪ್ರಿಯ ನಾರದನು ರತಿಯಲ್ಲಿಗೆ ಬಂದ ಸಂದರ್ಭ :

ಓರಂತೆ ಮಧುಘೃತರಸವಾಳಿರಸಗೋ
ಕ್ಷೀರದಂತೆಸೆವ ಕಾರ್ಯಕ್ಕೆ
ನೀರಂತೆ ಕಡಜಿಗನೆಸಜಿಂತೆ ಪುಟಿಯಂತೆ
ನಾರದ ಬಂದನಾಯೆಡೆಗೆ ॥ (೧೨-೨೦)

ರತಿಯ ಶೋಕವನ್ನು ಕಂಡು ಶಂಬರಾಸುರ ಸತಿಯ ಸಮಾಧಾನದಲ್ಲಿ

ಆ ರಾಕ್ಷಸ ಕನ್ಯೆಯ ವ್ಯಕ್ತಿತ್ವದ ಪಾರದರ್ಶಕತೆ.

> ವೃತ್ತ ಕುಚಾನ್ವಿತೆ ನಿನಗೆ ತನ್ನಾಳ್ದನ
> ನಿತ್ತಪೆನೆಂದಳಾಕಾಂತೆ ॥

ಗೆಳತಿ ಉಷೆಯ ಕಾಮತಾಪವನ್ನು ಕಂಡು ನೊಂದ ಗೆಳತಿ ಚಿತ್ರಲೇಖೆ ಸೂರ್ಯನಿಗೆ ಮುಳಿದ ಬಗೆ :

> ಅಸಗೆಟ್ಟುವೊ ಹರಿ ಹೆರೆಯಣ್ಣೆ ತೀರ್ದುದೊ
> ಅಸಮಾಶ್ವಗಳು ಬಾಂದೊರೆಯ
> ಕೆಸಱೊಳೂ ಬಿದ್ದೇಱಲಾಱದಾದುವೊ ಎಂದು
> ಬಿಸಜಾಕ್ಷಿ ರವಿಯ ನೋಡಿದಳು ॥ ೨೭–೧೯)

ತಂದೆ ಬಾಣಾಸುರನಿಗೂ ತನ್ನ ಪ್ರೀತಿಯ ಎರೆಯ ಅನಿರುದ್ಧನಿಗೂ ಯುದ್ಧ ಪ್ರಾರಂಭವಾದಾಗ ಉಷೆಯ ಮನಸ್ಸಿನ ತುಮುಲ :

> ಪಱುಕನಧಟ ಸಾಸಿರಬಾಹು ಪಿತನೆನ್ನ
> ಕಿಱುಕಾಂತನೊಳು ಕಾದುತಿಹನು
> ಇಱಿದುಕೊಂಡರೆ ಹೊಟ್ಟೆ ತಿವಿದುಕೊಂಡರೆ ಕಣ್ಣು
> ಮರುಕ ಮನ್ಮನವ ಭಂಗಿಸಿತು ॥ (೩೫–೩೭)

ವರ್ಣನೆಗಳ ಅತಿಬಳಕೆಯಿಂದ ಕನಕದಾಸರು ಕೆಲವೊಮ್ಮೆ ಪದಗಳ ದುಂದುಗಾರನಂತೆ ಕಾಣುವುದುಂಟು. ಆದರೆ ಸಂಸ್ಕೃತಭೂಯಿಷ್ಠ ಸಮಾಸ ಪದಗಳ ಹೆಣಿಗೆ ಅವರಿಗೆ ದೂರ. ರಾಜಸ್ತುತಿ, ದೇವಸ್ತುತಿಯನ್ನುಳಿದು ಎಲ್ಲೆಲ್ಲೂ 'ಜಾಣ ಜಾಣೆಯರಾಡುವ ಸವಿಮಾತೆ' ಕಾಣಿಸುತ್ತದೆ. ತಿಳಿಗನ್ನಡದ ಸವಿಮಾತಿನ ಮಂಪಟ ಕಟ್ಟಿ 'ಸಹೃದಯರಿಗೆ ಆನಂದ ತರಬಲ್ಲ 'ಎಣ್ಣೆಯನೂಡಿ ನೀರೆರೆದು ತೂಪಿರಿದಾಗ ಕಣ್ಣಿಗೆ ಕಜ್ಜಳವೆಚ್ಚಿ ಬಣ್ಣಿಸಿ ಸೊಡರ್ವಟ್ಟನಿಟ್ಟು ಪಾಲೆರೆದೋವಿ ಚಿಣ್ಣನ ಪಕ್ಕೆಗೈಸಿದಳು'–ಬಾಲ ಕಂದರ್ಪನಿಗೆ ರುಕ್ಮಿಣಿ ಎಣ್ಣೆಯೂಡಿ ನೀರೆರೆದು ಕಣ್ಣಿಗೆ ಕಾಡಿಗೆ ಹೆಚ್ಚಿ ಹಾಲು ಕುಡಿಸಿದ ಸನ್ನಿವೇಶ ಸಚಿತ್ರವಾಗಿದೆ. 'ಎಣ್ಣೆಯ ತಲೆಗೂಡಿದುದಿಲ್ಲ ನೊರೆವಾಲು ಬೆಣ್ಣೆಯ ಮೆಲಿಸಿದುದಿಲ್ಲ ಕಣ್ಣೆವೆ ಹಳಚಿ ನೋಡಿದುದಿಲ್ಲ ಮಗನ ಲಾವಣ್ಯವನೆಂದಟಲಿದಳು' (೪–೭೯). ಶಂಬರನು ಬಾಲಕನನ್ನು ಕದ್ದೊಯ್ದಾಗ ತಾಯಿ ರುಕ್ಮಿಣಿಯ ಅಳಲಿನಲ್ಲಿ ಜನಪದಗೀತಗಳ ನೆರಳು ದಟ್ಟವಾಗಿದೆ ಇಲ್ಲೆಲ್ಲ ಕವಿಯಲ್ಲಿ ವಸ್ತುವನ್ನು ಕಾವ್ಯವಾಗಿಸುವ ಜಾಣ್ಮೆ ಕಾಣಿಸುತ್ತದೆ. ಕೆಲವೊಮ್ಮೆ ನಿರೂಪಣೆ ಔಚಿತ್ಯ ಮೀರುವುದೂ ಉಂಟು. 'ನೆಟ್ಟನೆ ಮೊಗನೋಡಿ ಮುದ್ದಿಪಳ್ ತರಳನ ಪುಟ್ಟ ಕೈಗಳ ತಂದು ತನ್ನ ಬಟ್ಟೆ

ಬಲ್ಮೊಲೆಗಡರ್ಚುವಳು ಬಾಯೊಳು ಬಾಯನಿಟ್ಟು ಗಲ್ಲವ ಪೀಡಿಪಳು' (೧೧–೫೬). ಇಲ್ಲಿ ರತಿಯು ಮಗುವಾಗಿರುವ ತನ್ನ ಗಂಡನೊಂದಿಗೆ ನಡೆಸುವ ಸರಸದಲ್ಲಿ ಶಿಶು ಸಹಜವಾದ ಮುಗ್ಧ ಚಿತ್ರಣದ ಬದಲು ಕಾಮದ ವಾಸನೆ ಕಾಣಿಸುತ್ತದೆ.

ಅಲಂಕಾರಗಳು ಕಾವ್ಯಕ್ಕೆ ಸೊಗಸು ತರತಕ್ಕ ಅಂಶಗಳು. ಹಾಳತವಾಗಿ ಬಳಸಿದರೆ ನಿತ್ಯೋಪಯೋಗಿಯಾದ ಭಾಷೆ ಭಾವೋಪಯೋಗಿಯಾಗುವಾಗ ಸಾಲಂಕೃತವಾಗುವುದು ಅನಿವಾರ್ಯ. ಕವಿಯ ಭಾವಗಳು ಅಲಂಕಾರದ ಮೂಲಕ ಮೂರ್ತಗೊಂಡಾಗ ರಸಾಭಿವ್ಯಕ್ತಿಗೆ ಅನುಕೂಲವಾಗುತ್ತದೆ. ಮಾತು ಅಡಕಗೊಳ್ಳುತ್ತದೆ. ಕನಕದಾಸರು ಉಪಮೆಗಳನ್ನು ನಿರ್ಮಿಸುವುದರಲ್ಲಿ ಲಕ್ಷ್ಮೀಶನಿಗೆ ಸರಿಸಾಟಿಯಾಗುತ್ತಾರೆ. ತಮ್ಮ ಸ್ತ್ರೀ ಪುರುಷ ರೂಪವರ್ಣನೆ, ಸೂರ್ಯೋದಯ, ಸೂರ್ಯಾಸ್ತ, ಚಂದ್ರೋದಯ ಮುಂತಾದ ಪ್ರಕೃತಿ ವ್ಯಾಪಾರ, ಯುದ್ಧದ ವರ್ಣನೆ– ಹೀಗೆ ಹತ್ತು ಹಲವು ಸಂದರ್ಭಗಳಲ್ಲಿ ಉಪಮೆ ಬಳಕೆಗೊಂಡಿವೆ. ನಿದರ್ಶನಕ್ಕಾಗಿ ಕೆಲವನ್ನು ಇಲ್ಲಿ ನೀಡಿದೆ.

'ಮುಮ್ಮೊನೆ ಬಾಣ ತಾಗಿದ ಹುಲ್ಲೆಯಂತೆ' (೪–೭೮) ರುಕ್ಮಿಣಿ ಮಗನ ಅಗಲಿಕೆಯಿಂದ ನೊಂದಳು. 'ಹುತವಹನನೆಡೆಯೊಳು ಹುದುಗಿರ್ದ ಚಿನ್ನಕ್ಕೆ ಹಿತವಾಗಿ ಬಣ್ಣ ಬಂದಂತೆ ಮನ್ಮಥನ ಶರೀರವು ರಂಜಿಸಿತು. 'ಪತಿಭಕ್ತಿಯೆಂಬ ಕೂರಸಿಯಿಂದೆ ಕೊಂದಳೇ' (೧೦–೩೩) ರತಿ ತನ್ನ ಪತಿಭಕ್ತಿಯಿಂದ ಶಂಬರನನ್ನು ನಿರಾಕರಿಸಿದುದು. 'ಸಂಪಗೆಯ ಅರಲುಂಡ ಪೆಣ್ದುಂಬಿಯಂದದಿ' (೧೨–೨೨) ಶಂಬರಾಸುರನು ಮನ್ಮಥನ ಮೇಲೆ ಎರಗಿದನು. 'ಇಳೆಯಾಳು ರತಿಕಾಮರ ಪರಿತೋಷ ಬೆಳೆಯಂಕುರಗಳೆಂಬಂತೆ' (೧೭–೭೦) ಮಗುವಿನ ಬಾಯಲ್ಲಿ ಹಲ್ಲುಗಳೂ ಕಾಣಿಸಿಕೊಂಡವು. 'ಚೆನ್ನಾಗಿ ಪುಟಿದೊಡೆದೊಪ್ಪವಿಕ್ಕಿದ ಚೊಕ್ಕ ಚಿನ್ನದ ಪ್ರತಿಮೆಗಳಂತೆ(೧೮–೩೬) ಆಸ್ಥಾನದಲ್ಲಿ ಸುಗುಣವತಿಯರು ಶೋಭಿಸಿದರು. 'ಮದನ ಮಂದಿರದ ಬಾಗಿಲಿಗೆ ತೋರಣವ ಕಟ್ಟಿದವೊಲು' (೧೯–೬೩) ಶಬರಿಯರ ಮೈಮೇಲೆ ತಳಿರಿನ ಉಡುಗೆ ರಂಜಿಸಿತು. 'ಹೊಂಗೊಡದೊಳು ನೀರ ಹೊತ್ತು ಧೂರ್ಜಟಿಯಂತೆ' (೨೪–೪೨) ತೇಂಗಾಯ ಮರಗಳು ಒಪ್ಪಿದುವು. 'ಮಧ್ಯಾಹ್ನ ಸೂರ್ಯನ ಜೀಮೂತವೆ ಮುತ್ತಿಕೊಂಡಂತೆ' (೩೪–೪೧) ಗಜ ಸೈನ್ಯವು ಅನಿರುದ್ಧನ ಶರಕಿರಣಗಳಿಂದ ನುಗ್ಗಾಯಿತು. 'ಅಜವಿಂಡ ಹೊಕ್ಕ ಹೆಬ್ಬುಲಿಯಂತೆ, ಸೊಕ್ಕಿದ ಗಜವಿಂಡ ಸಿಂಹ ಹೊಕ್ಕಂತೆ, ಭುಜಗ ಸಮೂಹವ ಖಗರಾಜ ಹೊಕ್ಕಂತೆ' (೩೫–೨೧) ರಕ್ಕಸರನ್ನು ಅನಿರುದ್ಧನು ಸದೆಬಡಿದನು. 'ವಜ್ರದುಂಬಿಗಳು ಹೆಬ್ಬಿದಿರನು

ಕೊರೆವೊಡೆಯುಜ್ಜಗವೆತ್ತ ರೀತಿಯಲಿ' (೩೫–೪೦) ಅನಿರುದ್ಧನ ಬಾಣಗಳು ಬಾಣಾಸುರನ ನಿಡುದೋಳುಗಳನ್ನು ಕೊರೆದುವು. 'ಮುತ್ತುಗದ ನಿಡುಗೊನೆ ನಿಕರ ಹೂವಾದಂತೆ' (೩೫–೪೧) ರಕ್ಕಸರ ಮೈಮೇಲೆ ನೆತ್ತರು ಕಾಣಿಸಿತು. 'ಕಡು ಗೋಪದಲಿ ಜೀವಿತರಣ ನರಸಿಂಹ ನಡುವಜ್ರಗಂಬವನೊಡೆದು ಘುಡಿಘುಡಿಸುತ ಪೊರಮಟ್ಟಂತೆ' (೪–೩೪) ಸಿಡುದನಿ ಕೇಳಿಸಿತು. ತುಱುಗಿದ ಕಾಯಿ ಪಣ್ಗಳ ಸಾಲವೃಕ್ಷವ ಮುರಿದು ದೂಳಿಯ ಚೆಲ್ಲಿಕೊಳುತ ಸುರಿವ ಸೊಂಡಿಲ ನೀರ್ಗರೆಯುತ ಬಂದುದು ಬಿರುಗಾಳಿ ಮದಗಜದಂತೆ' (೪–೩೭) 'ಹೊಗರಾಂತ ಹೊಸಹೊನ್ನ ರಸಕಾಯ್ದಿರೆ ತಂದು ಸೆಗಣಿಯೊಳೆರೆವಂತೆ' (೧೭–೨೦) ಕಸ್ತೂರಿಯ ಪರಿಮಳದ ಚೆಲುವೆಯರು ಗೋಮಯದಿಂದ ಮಗುವನ್ನು ಮರದ ದೋಣಿಯಲ್ಲಿ ಎರೆದರು. 'ಬಾಣನ ಮಹದಾಸ್ಥಾನ ದುಗ್ಧಾಬ್ಧಿಯ ಕೇಣವಿಲ್ಲದೆ ಪೆರ್ಚಿಸುವ ಏಣಾಂಕ ತಾನೆಂಬಂತೆ; (೨೦–೩೨) ಕುಂಭಾಂಡನು ಶೋಭಿಸಿದನು.

ಹೀಗೆ ಕನಕದಾಸರ 'ಮೋಹನ ತರಂಗಿಣಿ' ಉಪಮೆಗಳ ಕೊಪ್ಪರಿಗೆ. ಕೆಲವು ಸಾಂಪ್ರದಾಯಿಕವಾದರೂ ಹೊಸ ಸಂದರ್ಭದಲ್ಲಿ ಕಾವ್ಯ ಶೋಭಾಕರವಾಗುತ್ತವೆ. ಇಲ್ಲಿ ಕೆಲವು ಪ್ರಕೃತಿ ವ್ಯಾಪಾರಕ್ಕೆ ಸಂಬಂಧಿಸಿದವು. ಸಸ್ಯ, ಪ್ರಾಣಿಲೋಕದಿಂದ ಎತ್ತಿಕೊಂಡವುಗಳು, ವೃತ್ತಿ ಸಂಬಂಧವಾದವುಗಳೂ ಕೆಲವಿವೆ. ಪ್ರಾಚೀನ ಪುರಾಣಶಾಸ್ತ್ರಗಳಿಂದ ಎತ್ತಿಕೊಂಡ ಉಪಮೆಗಳೂ ಇವೆ.

ಕನಕದಾಸರಿಗೆ ಪ್ರಿಯವಾದ ಇನ್ನೊಂದು ಅಲಂಕಾರವೆಂದರೆ ಶ್ಲೇಷ. ಇದು ಕವಿಯ ಪಾಂಡಿತ್ಯ ಪ್ರದರ್ಶನದ್ಯೋತಕ. ಆದರೆ ಇಂತಹ ಪದ್ಯಗಳ ಸಂಖ್ಯೆ ತೀರಾ ಕಡಮೆ. ಶ್ರೀಕೃಷ್ಣನ ಸೌರಾಷ್ಟ್ರ ದೇಶದ ವರ್ಣನೆಯಲ್ಲಿ ಈ ಅಲಂಕಾರವುಳ್ಳ ಕೆಲವು ಪದ್ಯಗಳಿವೆ.[12]

ಪೊಡೆಯಂಬುದು ಗಂಧಶಾಲಿಯೊಳು
ಕೊಡೆಯೆಂಬರಾತಪತ್ರವನು
ತಡೆಯೆಂಬುದಹಿಮಂತ್ರದೊಳಗಲ್ಲದಾದೇಶ
ದೆಡೆಯೊಳೀ ಶಬ್ದಂಗಳಿಲ್ಲ ॥ (೨–೨೦)

ಕಂಟಕವೆಂಬುದು ಕೇತಕಿಯೊಳು ರಾಜ
ಕಂಟಕವೆಂಬುದಂಬುಜದಿ
ಕಂಟಕವೆಂಬುದು ಹಲಸಿನೊಳಲ್ಲದೆ
ಕಂಟಕವಾದೇಶಕಿಲ್ಲ ॥ (೨–೨೧)

ಶಬ್ದ ಚಿತ್ರವನ್ನು ಕಡೆಯುವುದರಲ್ಲಿ ಕನಕದಾಸರು ನಿಸ್ಸೀಮರು. ತನಗೆ ಪರಿಚಿತ ನೆಲದಲ್ಲಿ ತಾನು ಕಂಡ, ಕೇಳಿದ ವ್ಯಕ್ತಿಗಳ ಮೂಲಕ ಕಣ್ಣಿಗೆ ಕಟ್ಟುವಂತೆ ಸನ್ನಿವೇಶವನ್ನು ಚಿತ್ರಿಸುವಲ್ಲಿ ವಾಸ್ತವತೆ ಗಮನಾರ್ಹ ಅಂಶ. ಇದನ್ನೇ ಪ್ರೊ. ರಂಗಣ್ಣನವರು 'ಯಥಾರ್ಥ ಚಿತ್ರಣ'ವೆಂದು ಗುರುತಿಸಿದುದು. ಇಲ್ಲೆಲ್ಲ ಅರ್ಥಸ್ಪಷ್ಟತೆಯ ಜತೆಗೆ ಭಾಷೆಯ ನವುರುತನವನ್ನೂ ಕಾಣಬಹುದು.

ಸಣ್ಣವರುಗಳನೋದಿಸುತಿರ್ಪ ಕೈಯ ಕೋ
ಲಣ್ಣಗಳ್ ಚೌಪದಿಗವಿತೆ
ಬಣ್ಣಗಂಬಿಯ ಪುಸ್ತಕ ಲಿಖಿತಜ್ಞರು
ಕನ್ನಡಕವ ತಾಳ್ದಿಹರು ॥ (೩-೪೧)

ಕೊಡೆಮೇಣಗಪ್ಪಡ ಗೊಂಗಡಿಬಹುರಮ್ಯ
ವಡೆದಿರ್ದ ಸಕಲಾತಿದಳೆದು
ಬಿಡಯವಿಲ್ಲದೆ ಪುರದೊಳು ನೀರ್ಮನುಜರು
ತೆಡೆಯಾಡುತಿರ್ದರೂರುಗರು ॥ (೪-೪೧)

ಕನ್ನಡದಲ್ಲಿ ರನ್ನ, ರಾಘವಾಂಕ, ಕುಮಾರವ್ಯಾಸರನ್ನು ಬಿಟ್ಟರೆ ನಾಟಕ ಸಹಜವಾದ ಸನ್ನಿವೇಶ, ಕ್ರಿಯೆ, ಸಂವಾದಗಳನ್ನು ಕಟ್ಟುವುದರಲ್ಲಿ ಇತರರು ಅಷ್ಟೊಂದು ಆಸಕ್ತಿ ತೋರಿಸಿಲ್ಲ. ಆದರೆ ಕನಕದಾಸರು ತಮ್ಮ 'ಮೋಹನ ತರಂಗಿಣಿ'ಯಲ್ಲಿ ದೃಶ್ಯ ನಿರ್ಮಾಣ ಚಾತುರ್ಯದ ಮೂಲಕ ನಾಟಕೀಯತೆಯನ್ನು ತೋರಿದ್ದಾರೆ. ಚತುರ ಸಂಭಾಷಣೆಯ ನಾಟಕೀಯತೆ ಅಲ್ಲೊಮ್ಮೆ ಇಲ್ಲೊಮ್ಮೆ ಕಾಣಿಸಿಕೊಂಡರೂ, ಹೆಚ್ಚಾಗಿ ಒಂದು ಪಾತ್ರ ಮಾತನಾಡಿ ಮುಗಿಸಿದ ಬಳಿಕ ಇನ್ನೊಂದು ಪಾತ್ರ-ಹೊಸದೊಂದು ಸಾಂಗತ್ಯ ಪದ್ಯದ ಮೂಲಕ ಮಾತಿಗೆ ತೊಡಗುವುದು ಸಾಮಾನ್ಯ ಸಂಗತಿ. ಕೃಷ್ಣ ರುಕ್ಮಿಣಿಯರ ಸಂಭಾಷಣೆ, ಶಂಬರಾಸುರ-ಮನ್ಮಥರ ನಡುವಣ ಸಂಭಾಷಣೆ, ಚಿತ್ರಲೇಖೆ-ಉಷೆಯರ ಸಂಭಾಷಣೆ ಅನಿರುದ್ಧ-ಬಾಣಾಸುರರ ನಡುವಣ ಸಂಭಾಷಣೆಯ ಸಂವಾದದ ಕುಶಲತೆ, ಗಾಂಭೀರ್ಯಕ್ಕೇನೂ ಕೊರತೆಯಿಲ್ಲವಾದರೂ ರಾಘವಾಂಕನಲ್ಲಿ ಕಾಣಿಸುವ ಚೂಪು ಚುರುಕು, ವೇಗ ಇಲ್ಲಿಲ್ಲ. ಶಂಬರಾಸುರನ ಪತ್ನಿ ಹಾಗೂ ರತಿಯ ನಡುವಣ ಸಂಭಾಷಣೆಯ ಒಂದು ಮಾದರಿಯನ್ನು ಗಮನಿಸೋಣ.

ಸತ್ತವರೊಡನೆ ಸತ್ತವರುಂಟೆ ಮಗುಳೊಂದು
ಚಿತ್ತೈಸುವೊಡೊಕ್ಕತನವ

ವೃತ್ತಕುಚಾನ್ವಿತೆ ನಿನಗೆ ತನ್ನಾಳ್ದನ
ನಿತ್ತಪೆನೆಂದಳಾ ಕಾಂತೆ ॥ (೧೧.೨೨)

ನಾರಾಯಣ ಕೃಷ್ಣ ಗೋವಿಂದ ಬಹಳಾಪ
ಚಾರದ ಮಾತ ಕೇಳಿದೆನು
ಆರಾದೊಡೆ ಹದಿಬದೆಯರಿಗನುಭೋಗ
ಬೇರುಂಟೆ ಮತ್ತೊರ್ವರೊಡನೆ ॥ (೧೦-೨೩)

ಪುಟ್ಟ ಪುಟ್ಟ ಪದಗಳ, ಚುರುಕು ಮಾತಿನ ಸಂವಾದವು ಮೋಹನ ತರಂಗಿಣಿಯಲ್ಲಿ ಅಪೂರ್ವವಾಗಿ ಗೋಚರಿಸುತ್ತದೆ. ಸೂಳೆಗೇರಿಯಲ್ಲಿ ಸೂಳೆಯರ ಹಾಗೂ ವಿಟರ ನಡುವಣ ಸಂಭಾಷಣೆ ಹೀಗೆ ಬಂದಿದೆ :

ಸೂಳೆ : ಮುಟ್ಟದಿರಾಳ್ದ.
ವಿಟಂ : ಮುಟ್ಟುವೆನಾತ್ಮೇಶ್ವರಿ.
ಸೂಳೆ : ಮುಟ್ಟಲಾಯುವು ಕ್ಷೀಣವಹುದು.
ವಿಟ : ಮುಟ್ಟದೊಡಸು ನಿಲ್ಲದು.

ಅಷ್ಟಾದಶ ವರ್ಣನೆಗಳ ಇಕ್ಕಟ್ಟಿಗೆ ಸಿಲುಕಿದ ಕನಕದಾಸರಿಗೆ ನಾಟಕೀಯ ಸೊಬಗನ್ನು ಒಳಗೊಂಡ ದೃಶ್ಯ ನಿರ್ಮಾಣ ಮಾಡುವುದರಲ್ಲಿ ಲವಲವಿಕೆ ವಿಶೇಷ ಇದ್ದಂತೆ ಕಾಣುವುದಿಲ್ಲ. ಆದರೂ ರುಕ್ಮಿಣಿಯ ಮಗು-ಪ್ರದ್ಯುಮ್ನನನ್ನು ಅಪಹರಿಸಿದ ಸಂದರ್ಭ, ಮನ್ಮಥ ದಹನ ಪ್ರಸಂಗ, ರತಿದೇವಿ ಶಂಬರಾಸುರನ ಅರಮನೆಯಲ್ಲಿ ದಾಸಿಯಾಗಿ ಸೇರಿಕೊಂಡ ಸಂದರ್ಭ, ಮನ್ಮಥ-ಶಂಬರಾಸುರರ ನಡುವಣ ಕಾಳಗ, ಉಷೆಗೆ ಮನ್ಮಥ ರೂಪದ ನಲ್ಲನು ದೊರೆವಂತೆ ಶಿವನ ಆಶೀರ್ವಾದ, ಚಿತ್ರಲೇಖೆಯ ಚಿತ್ರಪಟ ಪ್ರಸಂಗ-ಇಲ್ಲೆಲ್ಲ ಕನಕದಾಸರ ದೃಶ್ಯ ನಿರ್ಮಾಣ ಕೌಶಲ ಚೆನ್ನಾಗಿ ಪ್ರಕಟಗೊಂಡಿದೆ.

ಜನಸಾಮಾನ್ಯರಲ್ಲಿ ರೂಢಿಯಲ್ಲಿದ್ದ ಅನೇಕ ನಾಣ್ಣುಡಿ, ಜಾಣುನುಡಿ, ನುಡಿಗಟ್ಟು, ಗಾದೆಯ ಮಾತುಗಳನ್ನು ಕನಕದಾಸರು ಕಾವ್ಯವಲಯದೊಳಗೆ ತರುವ ಪ್ರಯತ್ನ ಮಾಡಿದ್ದಾರೆ. ಕಾವ್ಯಕ್ಕೆ ಆಡುಮಾತಿನ ಗತಿ, ಕಾಕು ದನಿ ಏರ್ಪಟ್ಟಾಗ ಸಂವಹನಶೀಲತೆ ಹೆಚ್ಚುತ್ತದೆ. ಸಮಷ್ಟಿಯಲ್ಲಿನ 'ತೊಳೆಯದ ಬಾಚದ' ಶಬ್ದಗಳನ್ನು ಅನಾಮತ್ತಾಗಿ ಎತ್ತಿ ಕಾವ್ಯದಲ್ಲಿ ಬಳಸಿದೊಡನೆ ದೇಸಿಶೈಲಿ ಏರ್ಪಟ್ಟಿತೆಂದು ತಿಳಿಯುವುದು ಸರಿಯಲ್ಲ. ಜನಬಳಕೆಯ ಪದಗಳನ್ನು ಬಳಸಿ ವಾಚ್ಯಾರ್ಥಕ್ಕೆ ಮೀರಿದ ಅರ್ಥಕ್ಕಾಗಿ ಅವುಗಳನ್ನು ದುಡಿಸಿಕೊಂಡಾಗಲೇ ಕವಿಯ

ಯಶಸ್ಸು. ಅಂಥ ವ್ಯಕ್ತಿ ವಿಶಿಷ್ಟವಾದ ಭಾಷಾಶೈಲಿಯನ್ನು ಕನಕದಾಸರು ರೂಪಿಸಿಕೊಂಡಿಲ್ಲವಾದರೂ ಕಾವ್ಯಕ್ಕೆ ದೇಸಿಯ ಅಂಶಗಳ ಬೆಸುಗೆ ಮಾಡಿದ್ದಾರೆ.

**ಕೆಲವು ಗಾದೆಯ ಮಾತುಗಳು :**

1. ಊರಗುದ್ದಲಿಯ ಕೊಂಡು ನಾಡಕಾಲುವೆಯ ತಿದ್ದುವರೆ ? (೬–೮) ಉರಿಗಣ್ಣನೊಡನೆ ಮನ್ಮಥನಿಗೆ ಯುದ್ಧ ಸಾಧ್ಯವೆ ? ರತಿಯ ಪ್ರಶ್ನೆ.
2. ತಲೆಬಲ್ಲಿತೆಂದು ಕಲ್ಲನೆ ಹಾಯಬೇಡ (೭–೨೩)
ಶಿವನೊಡನೆ ಕಾದಾಟ ಅಪಾಯಕಾರಿಯೆಂದು ಗಿರಿಜೆಯ ಉಪದೇಶ.
3. 'ಕೊಂಡವ ತೋಡಿಸಬೇಡ, ಶುಷ್ಕವ ಸುಟ್ಟು ಕೆಂಡವ ಮಾಡಿಸಬೇಡ' (೮–೩೭) ಅಲ್ಪವೂ ನಿರರ್ಥಕವೂ ಆದ ಕೆಲಸವನ್ನು ಮಾಡಬೇಡವೆಂದು ಶಿವನಲ್ಲಿ ರತಿಯು ಕಾಮದಹನವಾದ ಬಳಿಕ ಮಾಡಿಕೊಂಡ ನಿವೇದನೆ.
೪. ಒಗೆತನವ ಬಿಟ್ಟು ಹೋದಾಗ ಹಾಲಿಗೆ ಹೆಪ್ಪ ಮೊಗದಿಕ್ಕಿದವರಾರುಂಟು? (೯–೧೯). ರತಿದೇವಿಯ ತನ್ನ ಮನೆಯಲ್ಲಿ ಕಾಮನ ಚಿತ್ರಪಟವನ್ನು ನೋಡಿ ಅಳುತ್ತಿದ್ದ ಸಂದರ್ಭದಲ್ಲಿ ಸಮಾಧಾನ ಪಡಿಸಿದ ದಾಸಿವರ್ಗಕ್ಕೆ ಕೊಟ್ಟ ಉತ್ತರ.
೫. ನೀತಿ ತಪ್ಪುವುದೇ ಸತ್ತಾತನ ಬಾಯೊಳೆ ಮಣ್ಣು (೯–೨೭)
ಮನ್ಮಥನ ಸಹಚರರು ಬದುಕಿದ್ದಾಗಲೇ ಆತನಿಗೆ ಸಾವು ಬಂದುದನ್ನು ಕಂಡು ಅವರ ಬಗ್ಗೆ ರತಿಯ ಆಕ್ಷೇಪ.
೬. ಸತ್ತವರೊಡನೆ ಸತ್ತವರುಂಟೆ ? (೧೦–೨೨)
ಶಂಬರಾಸುರನ ಪತ್ನಿ ರತಿಯೊಡನೆ ಶಂಬರನನ್ನು ಸೇರುವಂತೆ ಒತ್ತಾಯಿಸಿದ ಸಂದರ್ಭ.
೭. ಕಣ್ಣರಿಯದಿರ್ದೊಡೇನು ಕರುಳ್ಬಲ್ಲುದು (೧೩–೨೫)
ಮನ್ಮಥನನ್ನು ಕಂಡು ರುಕ್ಮಿಣಿಗಾದ ಮಾನಸಿಕ ಸ್ಥಿತಿ.
೮. ಎಳವಾಟಿಬಲ್ಪಿಗೆ ಬಂದರೆ ಸೀಗೆಯ ಮೆಳೆಯೊಳು ಮಥನವೆ? (೩೪–೨೪) ಅನಿರುದ್ಧ ಕುಂಭಾಂಡರ ಯುದ್ಧದ ಸಂದರ್ಭದಲ್ಲಿ ರಕ್ಕಸರು ಅನಿರುದ್ಧನನ್ನು ಹಂಗಿಸಿದ ಬಗೆ.
೯. ಹುಗಲಮ್ಮದಿರುಳು ನಿಟ್ಟಿಸಿದ ಹೆಬ್ಬಾವಿಗೆ ಹಗಲೆ ಬಿದ್ದಂತಾಯಿತು (೩೯–೨೦) ಗರುಡನ ಜೊತೆ ಕಾದಾಡಿ ನುಗ್ಗಾದ ದೇವತೆಗಳು ಕೃಷ್ಣನ ಎದುರು ಕಾದಬೇಕಾಗಿ ಬಂದ ಸನ್ನಿವೇಶ.

ಕನಕದಾಸರ ವಿಸ್ತಾರವಾದ ಓದಿನ ಫಲವಾಗಿ ಸುಭಾಷಿತದ ಮಾದರಿಯ ತುಣುಕುಗಳು ಕಾವ್ಯದಲ್ಲಿ ಕಾಣಿಸಿಕೊಂಡಿವೆ.

೧. ಪ್ರಾಪ್ತಿಯ ಮೀರಲೊರ್ವರಿಗೆ ಸಾಧನವೆ (೧೦–೪೦)
೨. ಅಲಸ್ಯದಿಂದಮೃತವು ಗಟಿಲನೆ ವಿಷವಾಗದಿಹುದೆ ? (೧೧–೧೩)
೩. ನೀರೂಡಿ ನೆರೆ ಸಲಹಿದರೆ ಶಾಲ್ಮಲಿ ವೃಕ್ಷ ಬೀರುವುದುಂಟೆ ಸತ್ಫಲವ (೪೧–೨೪)
೪. ಕೊಡವಾಲು ಪುಳಿವೆರೆದಳಿವುದಲ್ಲದೆ ಪಾಲ್ಗಡಲು ನಾಶವನ್ನೈದುವುದೆ ? (೧–೩೦)
೫. ದೇಶದೊಳ್ ಪರಹಿತವೆಂಬುದೆ ನವರತ್ನ ಭೂಷಣ ಕೇಳು (೫–೫೭)
೬. ಮಂದರಗಿರಿಯನೆತ್ತುವಡೆ ನುಗ್ಗೆಯ ದೊಣ್ಣೆಯಿಂದೆ ಮೀಂಟಿದಡೇಟು ವುದೆ? (೩೦–೩೪)
೭. ವಿಷಯಾತುರಗೆ ವಿವೇಕವಿಲ್ಲ (೩೧–೨೫)
೮. ಮಾತೃಕೆಯ ಗರ್ಭವ ಮತ್ತೆ ಹೊಕ್ಕಡೆ ಬಿಡುವುದೆ ಪ್ರಾಪ್ತಿ (೩೩–೪೨)
೯. ಓಡಿದ ಹಂದೆಯ ಬಾಹುಮೂಲದಿ ಮಾಡೆ ಸತ್ಕೀರ್ತಿ ನಿಲ್ಲುವುದೆ? (೪೦–೩೦)

ಕನಕದಾಸರ ನುಡಿಟಂಕಸಾಲೆಯಲ್ಲಿ ಕೆಲವು ಅಪೂರ್ವ ನುಡಿನಾಣ್ಯಗಳು ಟಂಕಿತವಾಗಿವೆ. ಎಳೆಗ, ಉಡುಕು, ಉಟ್ಪಾಡಿ ಕಾಸುಗರಿ, ಪಡುಚ, ತುಕ್ಕು (ತಿರುಗಾಡು), ಜವಳ, ಬಜ್ಜಣಿಗೆ, ಓಡುಗೈಯ್ಯ, ಸೊಕ್ಕಾನೆದಲೆಗ, ಜಡೆಗ, ಅಡಿಯ, ಕಾಮಾಟ ಪೆರ್ಗುಡಿಗಳು, ಬಿಲೇಶ, ಲಾಗು (ಹಾರು).

ಅನುವಾದ ಸ್ವೀಕರಣೆಯ ಮೂಲಕ ಕನಕದಾಸರು ಕೆಲವೊಂದು ಸಮಾಸ ಪದಗಳನ್ನು ಸೃಷ್ಟಿಸಿದ್ದಾರೆ. ಕಕ್ಕಸಮೊಲೆ, ಬರೆವನಿ, ಮಸ್ತಕವನಿ, ಮೂರೆಲೆಗಣ್ಣ, ಹಿಮದೊಟ್ಟಿಲು, ಪಿನ್ನೆತ್ತಿ, ಕುಳಿರ್ವಟ್ಟ, ಸೊನ್ನೆಗೇದಿಗೆ, ಪೂಸರಳ, ಸಸಿಯೊಡಲ ಭಕ್ಷಿಪರು, ದಿಟ್ಟಿವಾಹಕ, ಸಕ್ಕರೆವಿಲ್ಲ, ತೊಂಡೆವೆಣ್ದುಟಿ, ಪೊಂಬಚ್ಚಲ್, ಮಂಡೆಮಾಣಿಕ, ಬೇದಕ್ಕರಿಗಬ, ಅಂಶ ಛಂದದ ಸುಲಲಿತತೆಗಾಗಿ ಸ್ವರಾಗಮದ ಮೂಲಕ ಪದಗಳನ್ನು ಸರಳಗೊಳಿಸುವುದಕ್ಕೆ ಹಲವು ದೃಷ್ಟಾಂತಗಳು ಸಿಗುತ್ತವೆ. ರಕುತ, ಬಕುತ, ಸಂದರುಶನ, ಅದ್ದಿಕದವರು, ಕಡುಗ, ನಾಲುಕು, ಸ್ವಪನ.

ಸಣ್ಣ ಪ್ರಮಾಣದಲ್ಲಿ ಅನ್ಯದೇಶಿಯ ಪದಗಳು ಈ ಕಾವ್ಯದಲ್ಲಿ ತಲೆ ಹಾಕಿ ಕೊಂಡಿವೆ. ಚೌರಶೀತಿ, ಚೌಶೀತಿ, ಬತ್ತೀಸ, ಸೋಳಸಾಸಿರ, ಚೌವೀಸ, ತೆತ್ತೀಸ, ಚೌಷಷ್ಟಿ, ಬಾಹತ್ತರ ಇತ್ಯಾದಿ

ಯುದ್ಧವರ್ಣನೆಯ ಸಂದರ್ಭದಲ್ಲಿ ಕನಕದಾಸರು ಹಲವು ಆಯುಧಗಳನ್ನು ಹೆಸರಿಸುತ್ತಾರೆ. ಅವುಗಳಲ್ಲಿ ಕೆಲವು ಹಿಂದಣ ಕಾವ್ಯಗಳಲಿ ಬಂದಿದ್ದರೆ ಇನ್ನು ಕೆಲವು ಅವರು ಸಮಕಾಲದ ಯುದ್ಧಗಳಲ್ಲಿ ಬಳಸುತ್ತಿದ್ದ ಆಯುಧಗಳಿರಬೇಕು : ತಿಱಿಕಲ್ಲು, ಬಿಱುಕಲ್ಲು, ತೋಮರ, ಬಳದಡಿ, ಪಾಱುಂಬಳೆ, ಚೆಪ್ಪಗೊಡಲಿ, ನೇಗಿಲು, ಮುಸಲ, ಪಲಗೆ, ಪೆರ್ಬಡಿಗೆ, ಅಡ್ಡಣ ವಂಕುಡಿವಿಡಿ, ಸಿಡಿಗಲ್ಲು, ಹಾಸಱೆಗಲ್ಲು, ಚೌಕದ ಬಡಿಗಲ್ಲು, ಪೆಟಲಂಬು, ಕಡಿಕಲೆ ಕಂಬು, ಖಂಡೆಯ, ಕೈಗತ್ತಿ, ಬಲುದಡಿ, ಪಿಡಿಚಕ್ರ.

ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಬಿಟ್ಟರೆ ಇಷ್ಟು ವಿವರವಾಗಿ ಬೇಟೆಯ ವಿವರಣೆ ದೊರೆಯುವುದು ಕನಕದಾಸರ ಮೋಹನ ತರಂಗಿಣಿಯಲ್ಲಿಯೇ ಸೈ. ಅಲ್ಲಿ ಬರುವ ಬೇಟೆಯ ಕೆಲವು ಪಾರಿಭಾಷಿಕ ಪದಗಳು: ಪೊಂಬಾಸಿನ ನೇಣು, ಪೆರ್ಬಡಿಗೋಲು, ಪಿಡಿವಲೆ, ಸೆಱೆವಲೆ, ಕಾಲ್ಬಲೆ, ಕೊರಲ್ಬಲೆ, ನಿಡಿವಲೆ, ಪಾಜಿ, ಬೆಳ್ವಾರ, ಬಡಿವಲೆ, ಬಲುವಲೆ.

ಗೀರ್ವಾಣ ಕನ್ನಡದಲ್ಲಿ, ನಾಡಿನ ಜಾಣಜಾಣೆಯರಾಡುವ ಸವಿವಾತುಗಳಲಿ ಬರೆವುದಾಗಿ ಹೇಳಿದ ಕನಕರು ಬಹುಪಾಲು ತಮ್ಮ ಮಾತನ್ನು ಉಳಿಸಿಕೊಂಡಿದ್ದಾರೆ. ನಾರಿಯರಿಂದ ಮನ್ಮಥ ಸ್ತುತಿ, ಬಾಣಾಸುರನ ಶಿವಸ್ತುತಿಗಳಲ್ಲಿ ಅವರ ಸಂಸ್ಕೃತ ಪಾಂಡಿತ್ಯ ತಲೆಯೆತ್ತಿದೆ. ಬಹುಶಃ ದೇವಸ್ತುತಿ ಸಂಸ್ಕೃತದಲ್ಲೇ ಇರಲೆಂಬ ವಾಡಿಕೆ ಅವರ ಕೈಯನ್ನು ಹಾಗೆ ನಡೆಸಿರಬೇಕು.

ಘೋರ ಸಂಸಾರ ವಿದೂರೀಕೃತ ಭಕ್ತ
ಘೋರ ದುರಿತ ಸಂಹಾರ
ಘೋರ ಪಾತಕ ಪ್ರಾಯಶ್ಚಿತ್ತ ನಾಮಾಂಕಿತಾ
ಘೋರ ಮುಖಾನ್ವಿತ ಶರಣು ॥ (೨೧–೫೦)

ನೇಸಱುಗರ್ವಪರ್ವತ ವಜ್ರ ಜಯತು ಪ
ರಾಶರ ಗೂಢವಿಭಾಡ
ದೋಷಕರ ತುಂಗಭಂಗ ಪರಾಕೆಂದು
ಪೂಸರನನು ಹೊಗಟಿದರು ॥೧೬–೬)

ಬಲಿಮದವಿದಳನ ದೈತ್ಯರ ಗುರು ಚಕ್ಷು
ಸಲಿಲಜ ದಳನಾಶ ಜಯತು

ನಲಿನಭವಾಂಡ ಪಾಟಿತಪಾದ ಪದ್ಮ ನಿ
ರ್ಮಲಿನ ಗಂಗಾಪಿತ ಜಯತು ॥ (೫-೬)

'ಮೋಹನ ತರಂಗಿಣಿ'ಯನ್ನು ಬರೆದ ಬಳಿಕ ದಾಸರಾಗಿ ಹರಿಕೀರ್ತನೆಯಲ್ಲಿ ತೊಡಗಿದ ಕನಕರಿಗೆ ಸಂಗೀತದ ಪರಿಭಾಷೆಯ ಅರಿವು ಚೆನ್ನಾಗಿತ್ತು ಎನ್ನುವುದು ಈ ಕಾವ್ಯದಿಂದ ತಿಳಿಯುತ್ತದೆ. ರುದ್ರವೀಣೆ, ಧನುರ್ವೀಣೆ, ತುಂಬುರವೀಣೆ, ಕೂರ್ಮ ವೀಣೆ, ಸ್ವರಮಂಡಲ ಮುಂತಾದ ನಾನಾ ತಂತಿವಾದ್ಯಗಳು, ಹಸ್ತಿವಾವುಜ ಮದ್ದಳೆ, ರಾವಣಹಸ್ತ, ತಾಳದಂಡಿಗೆ, ಭೇರಿ, ಡೋಳು, ವತಾರಿ, ತಂಬಟ, ಶಂಖ, ಹೆಗ್ಗಾಳೆ ಮುಂತಾದ ಸಂಗೀತವಾದ್ಯಗಳು, ಹಿಂದೊಳ, ವಸಂತರಾಗ, ದೇಶಾಕ್ಷಿ, ನಾರಾಯಣಿ ಷಡ್ಜ, ಪಂಚಮ, ಸ್ಥಾಯಿ, ತಾಯೆ, ಸಾಳಗ, ದೇಶಾಕ್ಷಿ, ಗುರ್ಜರಿ, ದೇವಗಾಂಧಾರಿ, ಗುಂಡಕ್ರಿಯೆ, ವಸಂತ, ಆರಭಿ, ಸಾಮಂತ, ಮಲಹರಿ ಮುಂತಾದ ರಾಗಗಳ ಪ್ರಸ್ತಾಪ ಕಾವ್ಯದಲ್ಲಿ ಬರುತ್ತದೆ.

ಸ್ತ್ರೀರೂಪ ವರ್ಣನೆಯ ಸಂದರ್ಭದಲ್ಲಿ ಕವಿಗಳು ದೇಹದ ಒಂದೊಂದು ಅಂಗವನ್ನು ಇನ್ನೊಂದಾಗಿ ಉಪಮಿಸುವುದು, ರೂಪಕಾತ್ಮಕವಾಗಿ ನಿರೂಪಿಸುವುದು, ಸಿದ್ಧವಿಶೇಷಣವಾಗಿ ಬಳಸುವುದು ಎಲ್ಲ ದೇಶಕಾಲಗಳ ಕ್ಲೀಷೆ. ಉದಾ : ಭೃಂಗೋಪಮಾನ ಕುಂತಲೆ, ಕುಂಭಕುಚಾನ್ವಿತೆ, ಪಲ್ಲವಾಧರೆ, ತೊಂಡೆವೆಣ್ದುಟಿ, ತುಂಬಿಗುರುಳ ಪೆಣ್ ಇತ್ಯಾದಿಯಾಗಿ, ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ಹೆಣ್ಣಿನ ಮೊಲೆ ಕವಿಯ ಮನಸ್ಸನ್ನು ವಿಶೇಷವಾಗಿ ಸೆಳೆದಿದೆ. ಹೆಣ್ಣಿನ ರೂಪಕ್ಕೆ ಒಂದು ವಿಶೇಷಣವಾಗಿ, ಸಂಬೋಧನೆಯ ರೂಪದಲ್ಲಿ ಅಡಿಗಡಿಗೆ ಬಂದಿದೆ. ಒಂದೇ ಪದ ಹಲವು ಸಂದರ್ಭದಲ್ಲಿ ಬಳಕೆಯಾದುದೂ ಉಂಟು. ಪೆರ್ಮೊಲೆವಾಲು, ಪೆರ್ಮೊಲೆವೆಣ್, ಬಟ್ಟ ಬಲ್ಮೊಲೆ, ವೃತ್ತಕುಚೆ, ವೃತ್ತ ಕುಚಾನ್ವಿತೆ ; ಘಟಕುಚ, ಕುಂಭಸ್ತನ, ಪೊಂಗೊಡ ಮೊಲೆವೆಂಗಳು, ಕೊಡಮೊಲೆವೆಣ್, ಕಳಶಸ್ತನ ; ಮೊಗ್ಗೆಮೊಲೆಯರು, ಬಣ್ಣದಾವರೆ ಮೊಗ್ಗೆಮೊಲೆ; ತೋರಮೊಲೆ ; ಇಡಿಕಿರಿಮೊಲೆ, ನಿಬಿಡ ಪಯೋಧರೆ, ಇಡಿಕಿರಿದಿರುವ ಬಲ್ಮೊಲೆ ; ಪೇಋುರ ಪೀನಕುಚೆ, ಪೀವರಕುಚೆ, ಗುರುಕುಚ; ಬಿಂಕಿದ ಕುಚ, ಜಡಜ ಕುಟ್ಮಲ ಕುಚಾನ್ವಿತೆ, ನಿಬಿಡ ಸ್ತನಭಾರ ಭರಿತೆ ; ಮೊಳೆಮೊಲೆ ; ಅದರುವ ಕುಚ ; ಅಲಗುವ ಕುಚ ; ಬಟ್ಟಬಲ್ಮೊಲೆ ; ವೃತ್ತಕುಚ, ತೆಂಗನಕಾಯ ತೋರದ ಮೊಲೆವೆತ್ತಳ್, ರೂಪಕವಾಗಿ ಕುಚಕುಂಭ, ಪಾರ್ಲಿ ಕುಚ ಕೊಪ್ಪರಿಗೆ, ಕುಚ ಮಂಡಲ, ಮೊಲೆಗೊಡ, ಕುಚ ಹೈಮ

ಶೈಲೇಂದು ಹೀಗೆ ಇನ್ನೂ ಅನೇಕ ರೀತಿಗಳಲ್ಲಿ ಬಳಕೆಯಾಗಿದೆ.

ಅಷ್ಟಾದಶ ವರ್ಣನೆಗಳ ಅಂಗವಾಗಿ ಸೂರ್ಯೋದಯ, ಸೂರ್ಯಾಸ್ತ, ಚಂದ್ರೋದಯ, ಚಂದ್ರಾಸ್ತಗಳು, 'ಮೋಹನ ತರಂಗಿಣಿ'ಯಲ್ಲಿ ಬಂದಿದ್ದರೂ, ಕೆಲವು ಕಡೆ ಪ್ರಕೃತಿ ಹೇಗೆ ರಂಜಿಸಿತು ಎನ್ನುವ ಬಗ್ಗೆ ವಸ್ತುನಿಷ್ಠ ಚಿತ್ರಣವಾಗಿ ಬಾರದೆ ಪಾತ್ರಗಳ/ಸನ್ನಿವೇಶಗಳ ಒಳ ಪ್ರಕೃತಿಯನ್ನು ಓದುಗರ ಗಮನಕ್ಕೆ ತರುವ ಹಿನ್ನೆಲೆಯಲ್ಲಿ ತುಂಬ ಅರ್ಥಪೂರ್ಣವಾಗಿ ಮೂಡಿಬಂದಿವೆ.

ಸೂರ್ಯೋದಯಕ್ಕೆ ಹಿನ್ನೆಲೆಯಾಗಿ ಕೋಳಿ ಕೂಗಿದುವು ಎನ್ನುವುದು ಒಂದು ಸಾಮಾನ್ಯ ಸಂಗತಿ. ಇದು ಮಹಾಕಾವ್ಯದಲ್ಲಿ ಆಗಿಂದಾಗ್ಗೆ ಕಾಣಿಸಿಕೊಳ್ಳುವ ಒಂದು ಸಿದ್ಧ ಶೈಲಿ–ಸೂತ್ರ. ಕೋಳಿ ಕೂಗಿದುವು ಎಂದಷ್ಟೇ ಕವಿ ಹೇಳಿದ್ದರೆ ಅದೊಂದು ಕ್ಲೀಷೆಯಾಗುತ್ತಿತ್ತು. 'ಗುತ್ತಿಗೆ ಪಡೆದ ವಿಟರ ಹಾಗೂ ವ್ಯಭಿಚಾರಿಗಳ ಕಿವಿಗಳನ್ನು ಹಿರಿದ ಕಠಾರಿಯಿಂದ ತಿವಿದಂತೆ ಉಚ್ಚಕಂಠದಿಂದ ಕೋಳಿಗಳು ಕೂಗಿದುವು' (೧೮–೧೦೬) ಎಂದು ಕವಿ ಬರೆಯುತ್ತಾರೆ. ಇದು ಅನಿರುದ್ಧನು ಶೋಣಿತಪುರದಲ್ಲಿ ಕಂಡ ವೇಶ್ಯಾವಾಟಿಕೆಯ ವರ್ಣನೆಯ ಕೊನೆಯಲ್ಲಿ ಬರುತ್ತಿರುವುದು ಅರ್ಥಪೂರ್ಣ. ಬಾಣಾಸುರನ ಭೋಗಲೀಲೆಯ ಕೊನೆಯಲ್ಲಿ ಕೋಳಿ ಕೂಗಿದ ಪ್ರಸಂಗ ಮೂರು ಪದ್ಯಗಳಷ್ಟು ವಿಸ್ತರಿಸಿದೆ. ಇಲ್ಲಿ ಅವನ ನಲ್ಲೆ ಸಂಭೋಗ ಸುಖವನ್ನು ಹಾಳಗೆಡೆದ ಹುಂಜವನ್ನು ಹಾಳಾಗಿ ಹೋಗಬಾರದೇಕೆ ಎಂದು ದುಃಖಿಸುತ್ತಾಳೆ. ಇಲ್ಲಿ ಸೂರ್ಯೋದಯದ ಹಿನ್ನೆಲೆಯಲ್ಲಿ ಆಕೆಯ ಅತೃಪ್ತ ಕಾಮವನ್ನ ಹೇಳುವುದು ಕವಿಯ ಉದ್ದೇಶ, ಉಷಾ–ಅನಿರುದ್ಧರು ಏಕಾಂತದಲ್ಲಿ ಸುಖಪಟ್ಟು ರಾತ್ರಿಯ ಕೊನೆಯಲ್ಲಿ 'ಸಂಭೋಗದಾಸೆಯಿಂದ ಅರ್ಧರಾತ್ರಿಯವರೆಗೆ ಇಷ್ಟೆಲ್ಲ ಆದುದು ಸಾಕು. ಇನ್ನು ಹೆಚ್ಚು ಬಳಲುವುದು ಬೇಡ..." (೩೨–೪೬) ಎಂದು ಅವರಿಬ್ಬರಿಗೆ ಬುದ್ಧಿ ಹೇಳುವಂತೆ ಕೂಗಿದವು. ಸಂಬಂಧಪಟ್ಟ ವ್ಯಕ್ತಿಗಳ ಗುಣ ಶೀಲಗಳು ಬದಲಾದಂತೆ ಕೋಳಿಯ ಕೂಗಿಗೆ ಬೇರೆ ಬೇರೆ ಅರ್ಥ ಪರಿವೇಷ ನಿರ್ಮಾಣ ಗೊಳ್ಳುವುದನ್ನು ಗಮನಿಸಬೇಕು. 'ಸೂರ್ಯೋದಯವನ್ನು ಕುರಿತು ತರುಣಾರ್ಕ ಗರುಡಿಯ ಕೆಮ್ಮಣ್ಣಿನಿಂದಲೆ ಅರುಣೋದಯವು ತೋಜೆಸಿತು' (೧೮–೧೦೯) 'ಮಡಿ ವಸ್ತ್ರವನುಟ್ಟು ಪೂರ್ವದಿಗ್ವನಿತೆಯ ಮುಡಿಯಾಳು ಪೊತ್ತ ಪೊಂಗಳಸ' ಎಂದುದು, ಸೂರ್ಯಾಸ್ತವನ್ನು ಕುರಿತು. 'ಗಗನದೆ ಬಪ್ಪ ನಾರದನ ಕಾಣುತ ಸೂರ್ಯ ಭಗವಾನನು ತನಗೊಬ್ಬರೊಡನೆ ಜಗಳವ ಗಂಟಿಕ್ಕದೆ ಬಿಡನೆಂದಂಜಿ ಹುಗಲೊಡರ್ಚಿದ ಪಡುಗಡಲ' (೧೦–೧೬) 'ಮೇರು ಪರ್ವತವ ಸುತ್ತಲು

ದುಃಖಿತನಾಗಿ ತೀರುವುದಿಲ್ಲವೆಂದು ಸೂರ್ಯವಾರುವ ರಥಗೂಡಿ ಪಡುವೆಟ್ಟ ಶಿಖರದ ನೀರೊಟ್ಟಿಲೊಳು ಬಿದ್ದ ಮುದದಿ' (೧೮-೩)-ಇವೆಲ್ಲ ಸಾಂಪ್ರದಾಯಿಕ ವರ್ಣನೆಗಳು.

'ಮೋಹನ ತರಂಗಿಣಿ'ಯ ಅಭಿವ್ಯಕ್ತಿ ವಿಧಾನದಲ್ಲಿ ಜನಪದ ಮೌಖಿಕ ಸಂಪ್ರದಾಯಗಳ ಪ್ರಭಾವ ಏನು ಎನ್ನುವ ಬಗ್ಗೆ ಈಗ ವಿವೇಚಿಸಲಿದ್ದೇನೆ. ಈ ಕಾವ್ಯವು ಏಕಕವಿಕರ್ತೃಕ ಹೌದು. ಆದರೆ ಕವಿಯು ಕಾವ್ಯದ ಆರಂಭ ಭಾಗದಲ್ಲಿ ಹೇಳಿದ ಪ್ರಕಾರ ತನ್ನ ನಲ್ಲೆಗೆ ಕತೆ ಹೇಳುವ ಸನ್ನಿವೇಶದಲ್ಲಿ ಹುಟ್ಟಿಕೊಂಡು ಮುಂದೆ ಅದು ಹಾಡುಗಬ್ಬವಾಗಿ ಪ್ರಸರಣಗೊಂಡ ಹಿನ್ನೆಲೆಯಲ್ಲಿ ಅದರಲ್ಲಿ ಮೌಖಿಕ ಮಹಾಕಾವ್ಯದ ಲಕ್ಷಣವನ್ನು ಕಾಣಬಹುದು. ಮೌಖಿಕ ರೂಪದ ಕೀರ್ತನ ಸಂಪ್ರದಾಯದ ಆಚಾರ್ಯ ಪುರುಷ ಕನಕದಾಸರು ತಮ್ಮ ಸಾಹಿತ್ಯಕ ಜೀವನದ ಮೊದಲ ದಿನಗಳಲ್ಲಿ ಈ ಕಾವ್ಯವನ್ನು ಬರೆದಿದ್ದರೂ ಅವರೊಳಗೆ ಸುಪ್ತವಾಗಿದ್ದ ಮೌಖಿಕ ಕಾವ್ಯ ಸಂರಚನಾ ಸಾಮರ್ಥ್ಯ ಈ ಕಾವ್ಯವನ್ನು ಮುನ್ನಡೆಸಿರಬೇಕು. ಫಲವಾಗಿ ಒಂದು ಬಗೆಯ ಸೂತ್ರಾತ್ಮಕ (formulaic) ಹಾಗೂ ಅಲಂಕೃತ (ornametal) ಶೈಲಿ ಇಲ್ಲಿ ಏರ್ಪಟ್ಟಿದೆ. "ಒಂದು ಮಹಾಕಾವ್ಯದ ಅನಿವಾರ್ಯ ಅಂಶಗಳಾದ ಪುನರಾವೃತ್ತಿ, ಸಾಂಪ್ರದಾಯಿಕ ಸೂತ್ರಗಳು. ಕ್ರಿಯೆಗಳನ್ನು ಕುರಿತು ವಿಸ್ತಾರವಾದ ವರ್ಣನೆ, ಅಲಂಕೃತ ಸಿದ್ಧ ವಿಶೇಷಣಗಳು. ಉಪಮೆಗಳು ಕಲಾತ್ಮಕತೆಯ ಉದ್ದೇಶಕ್ಕಾಗಿ ಕ್ರಿಯೆಯನ್ನು ನಿಧಾನಗೊಳಿಸಲು ಸಹಕರಿಸುತ್ತವೆ."[13]

ಜನಪದ ಕಾವ್ಯಗಳಲ್ಲಿ ಮತ್ತೆ ಮತ್ತೆ ಕಾಣಿಸುವ ಪುನರಾವೃತ್ತಿಗಳಲ್ಲಿ ಕೇಂದ್ರ ಪುನರಾವೃತ್ತಿ (nucleus repetition) ಒಂದು. ಇಂತಹ ಒಂದು ಪುನರಾವೃತ್ತಿಯುನ್ನು ನಾರದ ಬಂದು ಕೃಷ್ಣ-ರುಕ್ಮಿಣಿಯರ ಇದಿರು ಶಂಬರಾಸುರನನ್ನು ಕೊಂದು ಬಂದ ಮನ್ಮಥನು ತನ್ನ ಮಗನೆಂದು ತಿಳಿಯದ ರುಕ್ಮಿಣಿಗೆ ಅವನ ಜನ್ಮ ವೃತ್ತಾಂತವನ್ನು ವಿವರವಾಗಿ ಹೇಳಿದ್ದರಲ್ಲಿ ಕಾಣಬಹುದು. ಇಲ್ಲಿ ಕಥೆಯ ಕೇಂದ್ರ ಆಶಯವು ಯಾವ ಬದಲಾವಣೆಗೂ ಇಲ್ಲದೆ ಪುನರಾವೃತ್ತಿಗೊಳ್ಳುತ್ತದೆ.

ಕಾವ್ಯಗಳಲ್ಲಿ ಸಾಮಾನ್ಯವಾಗಿ ಬರುವ ನಗರ ವರ್ಣನೆಯ ಭಾಗದಲ್ಲಿ ಸಮುದ್ರ, ಕೋಟೆ, ದೇವಾಲಯಗಳು, ಆರವಟ್ಟಿಗೆ, ಸೂಳೆಗೇರಿ, ಜಲಾಶಯ, ಬೆಳೆ-ಪೈರುಗಳು, ಬತ್ತದ ಗದ್ದೆಯನ್ನು ರಕ್ಷಿಸಲು ನಿಂದಿರುವ ಸುಂದರಿಯರಾದ ಪಾಮರಿಯರು, ವ್ಯಾಪಾರಿಗಳು, ಅವರು ಮಾರುವ ಬಗೆಬಗೆಯ ಸರಕುಗಳು.

ಚಿಣ್ಣರಿಗೆ ಓದಿಸುವ ಅಯ್ಯಗಳು, ಭೋಜನ ಶಾಲೆಯಲ್ಲಿ ತಯಾರಾಗುವ ಬಗೆಬಗೆಯ ಭಕ್ಷ್ಯವಿಶೇಷಗಳು–ಬಲುಮಟ್ಟಿಗೆ ಎಲ್ಲ ಕಾವ್ಯಗಳಿಗೂ ಸಾಮಾನ್ಯ. ಒಂದೇ ಕಾವ್ಯದಲ್ಲಿ ಇದೇ ಬಗೆಯ ನಗರದ ವರ್ಣನೆಗೆ ಅವಕಾಶ ಇದ್ದಾಗ ಬಹುಪಾಲು ವರ್ಣನೆಗಳು ಮೊದಲನೆಯದರ ಪಡಿಯಚ್ಚಾಗಿರುತ್ತದೆ. ಕವಿಯ ಪ್ರತಿಭಾ ಸಾಮರ್ಥ್ಯಕ್ಕನುಸರಿಸಿ ಸೂತ್ರ ಅದೇ ಆದರೂ ನವೀನತೆ ತಲೆ ಹಾಕಬಹುದು. 'ಮೋಹನ ತರಂಗಿಣಿಯ'ಯ ಸೌರಾಷ್ಟ ವರ್ಣನೆ. ದ್ವಾರಕಾಪುರ ವರ್ಣನೆ, ಬಾಣನ ಶೋಣಿತಪುರಗಳ ವರ್ಣನೆಗಳ ನಡುವೆ ಮೇಲು ನೋಟಕ್ಕೆ ಶಾಬ್ದಿಕ ಭಿನ್ನತೆ ಕಂಡುಬಂದರೂ ಅಚ್ಚು ಒಂದೇ. ರತಿ ಮನ್ಮಥರ, ಉಷಾ–ಅನಿರುದ್ಧರ ಬಾಣಾಸುರನ ಏಕಾಂತ ರತಿಭೋಗದಲ್ಲೂ ಒಂದು ಬಗೆಯ ಪುನರಾವೃತ್ತಿಯನ್ನು ಗುರುತಿಸಬಹುದು. ಬಾಣಾಸುರನು ಶಿವಪೂಜಾ ಗೃಹವನ್ನು ಪ್ರವೇಶಿಸಿದಾಗ ಅವನ ಪರಿಚಾರಿಕೆಯರು ಹೇಮಕುಂಭ, ಗಂಧವಟ್ಟಲು, ಶೋಭಾಕ್ಷತೆವಟ್ಟಲು, ವಿಭೂತಿ, ಸಂಬಂಧ ಪಾತ್ರೆ, ಏಕಾರತಿ, ಪಂಚಾರತಿ, ಮೃಗದಾರತಿ, ನೀಲಾಂಜಲಿ ಇತ್ಯಾದಿಗಳನ್ನು ಅಣಿಗೊಳಿಸಿದರು ಎನ್ನುವಲ್ಲಿ ಆಶಯ ಒಂದೇ. ಸಣ್ಣ ಪುಟ್ಟ ಬದಲಾವಣೆ ಮಾತ್ರ. ಇದನ್ನೇ ಮೌಖಿಕ ಮಹಾಕಾವ್ಯ ಸಂಪ್ರದಾಯದಲ್ಲಿ ಚೌಕಟ್ಟಿನ ಪುನರಾವೃತ್ತಿ' (frame repetition) ಎಂದು ಗುರುತಿಸುತ್ತಾರೆ. ಈ ಪರಂಪರೆಯನ್ನು ಕೇಳಿಸಿಕೊಂಡು ಬಂದ ಶ್ರಾವಕ ವರ್ಗ ಇಂತಹ ಪುನರಾವೃತ್ತಿಯನ್ನು ಬಯಸುತ್ತದೆ. ಹೀಗೆ ಮೋಹನ ತರಂಗಿಣಿಯ ಉಕ್ತಿ ವಿಧಾನದಲ್ಲಿ ಮೌಖಿಕ ಕಾವ್ಯ ಸಂಪ್ರದಾಯದ ದಟ್ಟ ನೆರಳು ಇದ್ದಂತೆ ಕಾಣುತ್ತದೆ.

ಜನಪದ ಮೌಖಿಕ ಸಂಪ್ರದಾಯಗಳಲ್ಲಿ ಕಾಣಿಸುವ ಹುಟ್ಟು, ವಿವಾಹ, ನಾಮಕರಣ ಮುಂತಾದ ಜೀವನಾವರ್ತಗಳ ಸವಿವರ. (ರತಿವಿವಾಹ, ಉಷಾ–ಅನಿರುದ್ಧರಿಗೆ ವಿವಾಹ) ಬೇಡತಿಯರು ಹಾಡುವ ಸುವ್ವಿ ಹಾಡು, ಮನ್ಮಥ, ಅನಿರುದ್ಧರಿಗೆ ಹಾಡಿದ ಜೋಗುಳ ಹಾಡು, ಮಗುವಿನ ಲಾಲನೆ ಪಾಲನೆ, ಶಕುನ, ವಿವಿಧ ಬಗೆಯ ಆಟಗಳು ಮೋಹನ ತರಂಗಿಣಿಯಲ್ಲಿ ಕಾಣಿಸಿಕೊಳ್ಳುವ ಮೂಲಕ ಕಾವ್ಯದ ಒಟ್ಟು ಬಂಧ ಹಾಗೂ ಶೈಲಿಯ ಮೇಲೆ ಪ್ರಭಾವ ಬೀರಿದೆ.

**ಕೊನೆಯ ಮಾತು**

ಕನ್ನಡದ ವಿಮರ್ಶಕರೆಲ್ಲರೂ ಕನಕದಾಸರ ವಾಚಾಳಿತನದ ಬಗೆಗೇ ಆಕ್ಷೇಪಿಸಿದ್ದಾರೆ. "ಈ ಕೃತಿಯು ಸೋಲಿರುವುದು ಅಭಿವ್ಯಕ್ತಿಯು

ಅನಿಯಂತ್ರಣದಿಂದಾಗಿ ಎನ್ನುವುದು ಸ್ಪಷ್ಟವಾಗಿದೆ.'[14] "ಬ್ರಾಹ್ಮಣನಾದ ಅಬ್ರಾಹ್ಮಣ ಕವಿಯೊಬ್ಬ ತನ್ನ ಕಾಲದ ಪಾಂಡಿತ್ಯದ ಹಾಗೂ ಬ್ರಾಹ್ಮಣಿಕೆಯ ಆಹ್ವಾನಗಳನ್ನು ಎದುರಿಸುವ ಅನಿವಾರ್ಯದಿಂದಲೆಂಬಂತೆ ಕನಕದಾಸ ತನ್ನ ಕಾವ್ಯದಲ್ಲಿ ಉದ್ದೇಶಪೂರ್ವಕವಾದ ಪಾಂಡಿತ್ಯವನ್ನು ಹಾಗೂ ಕಾವ್ಯ ರಚನೆಯ ಔಚಿತ್ಯ ಬಾಹಿರವಾದ ಉತ್ಸಾಹವನ್ನು ಮೆರೆದಂತಿದೆ.... ಮೋಹನ ತರಂಗಿಣಿ ಮುಖ್ಯವಾಗಿ ಒಂದು ಹಾಡುಗಬ್ಬ. ಸಾಂಗತ್ಯದಂಥ ಶುದ್ಧ ದೇಸಿ ಮಟ್ಟನ್ನು 'ನಾಡೊಳಗುಳ್ಳ ಜಾಣರು ಜಾಣೆಯರೊಡನಾಡುವ ಸವಿಮಾತುಗಳನ್ನು' ಹಾಗೂ ಸಮಕಾಲೀನ ಜೀವನದ ಚಿತ್ರವನ್ನೊಳಗೊಂಡ ದೇಸಿ ಕಾವ್ಯ. ತನ್ನ ಸಮಕಾಲೀನ ಜನರ ಸಂಸ್ಕಾರ ಮತ್ತು ಅಭಿರುಚಿಯನ್ನು ಕಣ್ಣೆದುರಿಟ್ಟುಕೊಂಡು ಕವಿಕಾವ್ಯ ರಚಿಸಿದ್ದು ಹಾಡಿ ಹೇಳುವುದಕ್ಕೆ, ಕುಳಿತು ಕೇಳುವುದಕ್ಕೆ ಹೊರತು ಓದುವುದಕ್ಕಲ್ಲ. ಆದುದರಿಂದ ಇಂಥ ಹಾಡುಗಬ್ಬದಲ್ಲಿ ಹೇಳಿದುದನ್ನು ಮತ್ತೆ ಬೇರೆ ಬೇರೆ ಗತ್ತಿನಿಂದ ಹಾಡಿ ಹೇಳಿದಾಗಲೇ ಅದಕ್ಕೆ ಒಂದು ಬಗೆಯ ಒನಪು. ಆದ್ದರಿಂದ ವರ್ಣನೆ ಹಾಗೂ ನಿರೂಪಣೆಯಿಂದ ಕಾವ್ಯ ಹಿಗ್ಗುತ್ತ ಹೋಗುವುದು ಸಹಜವಾಗುತ್ತದೆ.....ಸಾಂಗತ್ಯದಲ್ಲಿಯ ಹಾಡುಗಬ್ಬವನ್ನು ಹಾಡಿನ ಮೂಲಕ ಕೇಳುವ ಸಂಸ್ಕಾರವನ್ನು ತಪ್ಪಿಸಿಕೊಂಡಿರುವ ನಮಗೆ ಅಲ್ಲಿಯ ವರ್ಣನೆ ಮತ್ತಿಷ್ಟು ಮಿತಿಮೀರಿದುದಾಗಿ ಕಂಡರೆ ಅದಕ್ಕೆ ಕವಿಯೇ ಹೊಣೆಗಾರನಲ್ಲ ಎನ್ನುವುದನ್ನು ಮರೆಯಲಾಗದು. ಈ ಹಿನ್ನೆಲೆಯ ಪ್ರಜ್ಞೆಯಿಂದ ನೋಡಿದಾಗಲೂ, ಇಲ್ಲಿಯ ಹದ್ದು ಮೀರಿದ ವರ್ಣನೆಗೆ, ಕಾವ್ಯ ಹಾಡುಗಬ್ಬವಾಗಿರುವುದು ಮತ್ತು ಆ ಕಾಲದ ಸಂಸ್ಕಾರ ಒಂದೇ ಕಾರಣವಾಗಿ ಕಾಣದೆ ಕವಿಯ ಪಾಂಡಿತ್ಯ ಪ್ರದರ್ಶನ ಹಾಗೂ ಔಚಿತ್ಯ ಪ್ರಜ್ಞೆಯ ಅಭಾವವೂ ಬಹುಮಟ್ಟಿಗೆ ಕಾರಣವಾಗಿ ಕಾಣಿಸಿಕೊಳ್ಳುವುದು ಸುಳ್ಳಲ್ಲ."[೧೫] ಹೀಗೆ ಕಾವ್ಯ ಹುಟ್ಟಿಕೊಂಡ ಸನ್ನಿವೇಶ, ಅದು ಸಂವಹನಗೊಳ್ಳುತ್ತಿದ್ದ ಬಗೆಯನ್ನು ಪುನರ್‌ರಚಿಸಿಕೊಂಡಾಗ ಕನಕದಾಸರ ವಾಚಾಳಿತನಕ್ಕೆ ಉತ್ತರ ಸಿಗುತ್ತದೆ. ಅದು ಅಂದಿನ ಮಹಾಕಾವ್ಯದ ಲಕ್ಷಣವೂ ಆಗುತ್ತದೆ. ಒಟ್ಟಿನಲ್ಲಿ 'ಮೋಹನ ತರಂಗಿಣಿ' ಜನಪದ ಮಹಾಕಾವ್ಯವೊಂದರ ರೂಪ ಹಾಗೂ ಅಭಿವ್ಯಕ್ತಿ ವಿಧಾನವನ್ನು ಮೂಲ ಪದರದಲ್ಲೂ, ಮೇಲ್‌ಪದರದಲ್ಲಿ ಪಾಂಡಿತ್ಯದ ಪ್ರದರ್ಶನವನ್ನು ಹೆಣಿಗೆಗೊಳಿಸಿರುವ ಒಂದು ವಿಶಿಷ್ಟ ಕಾವ್ಯ ಎನ್ನಬಹುದು.

## ಟಿಪ್ಪಣಿಗಳು

1. ಕನ್ನಡದಲ್ಲಿ ಒಂದು ಕೃತಿಯನ್ನು ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಸಂಪ್ರದಾಯ ಬೆಳೆದು ಬಂದಿದೆ. ಆದರೆ ಶೈಲಿ ವಿಜ್ಞಾನದ ದೃಷ್ಟಿಯಿಂದ ವಿಶ್ಲೇಷಿಸುವ ಪ್ರಯತ್ನ ಡಾ. ಶಾಂತಿನಾಥ ದೇಸಾಯಿ, ಡಾ. ತಿರುಮಲೇಶ್, ಡಾ. ಕಿ. ರಂ. ನಾಗರಾಜ. ಡಾ, ಕೆ. ವಿ. ನಾರಾಯಣ ಅವರನ್ನು ಬಿಟ್ಟರೆ ಯಾರೂ ಮಾಡಿದಂತೆ ಕಾಣುತ್ತಿಲ್ಲ.
2. ತಿಪ್ಪೇರುದ್ರ ಸ್ವಾಮಿ ಎಚ್. (ಡಾ) ತೌಲನಿಕ ಕಾವ್ಯಮೀಮಾಂಸೆ : ರೀತಿ–ಮಾರ್ಗ–ಶೈಲಿ, ಪ್ರ : ಡಿ.ವಿ.ಕೆ. ಮೂರ್ತಿ, ಮೈಸೂರು. 1986 ಪು. 239-261
3. ತಿರುಮಲೇಶ್ ಕೆ. ವಿ. (ಡಾ.) ಸಮ್ಮುಖ : ಬೇಂದ್ರೆಯವರ ಕಾವ್ಯಶೈಲಿ ಪ್ರ: ಅಕ್ಷರ ಪ್ರಕಾಶನ, ಹೆಗ್ಗೋಡು 1989 ಪು. 1-31
4. ಅದೇ, ಪು. 3
5. ಮೌಖಿಕ ಸ್ವರೂಪದ ಕಾವ್ಯವನ್ನು ವಿಶ್ವಕೋಶವೊಂದರಲ್ಲಿ ಹೀಗೆ ವಿವರಿಸಿದೆ : Poetry composed in oral Performance by People who cannot read and write.

   ಅಂದರೆ ಪ್ರದರ್ಶನದ ಸಂದರ್ಭದಲ್ಲೇ ಅದು ಅವತರಿಸುತ್ತದೆ. ಒಂದೊಂದು ಸಂದರ್ಭದಲ್ಲೂ ವಿಶಿಷ್ಟ ಅವತರಣ ಕ್ರಿಯೆ ಜರಗುತ್ತದೆ. ಹಾಗಾಗಿ ಯಾವುದೇ ಒಂದು ಪಠ್ಯ ಶ್ರೇಷ್ಠವಲ್ಲ, ಎಲ್ಲವೂ ವಿಶಿಷ್ಟ, ಹಾಗೂ ಅಧ್ಯಯನ ಯೋಗ್ಯ. ಹೀಗೆ ನಾಯಕನಿಂದ ಗಾಯಕನಿಗೆ, ಒಬ್ಬನೇ ಗಾಯಕನಲ್ಲೂ ಸಂದರ್ಭದಿಂದ ಸಂದರ್ಭಕ್ಕೆ ಕಾಣಿಸಿಕೊಳ್ಳುವ ಬದಲಾವಣೆಯೇ ಜನಪದ ಕಾವ್ಯದ ಒಂದು ಲಕ್ಷಣ.
6. ಹೋಮರನ ಇಲಿಯಡ್ ಒಡಿಸ್ಸಿ ಕಾವ್ಯಗಳು ಸೂತ್ರಾತ್ಮಕ ವಿನ್ಯಾಸಗಳಿಂದ ಪ್ರದರ್ಶನಗಳ ಸಂದರ್ಭಗಳಲ್ಲಿ ಸಂರಚನೆಗೊಂಡುದಾಗಿ 1935ರಷ್ಟು ಹಿಂದೆಯೇ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಮಿಲ್‌ಮೇನ್ ಪೆರಿ ಅವರು ಬರೆದಿದ್ದರು. ಅವರು 'The Singer of Tales' ಎಂಬ ಗ್ರಂಥವನ್ನು ಬರೆಯಲು ತೊಡಗಿದ ಕೆಲವೇ ದಿನಗಳಲ್ಲಿ ತೀರಿಕೊಂಡಾಗ ಅವರ ಶಿಷ್ಯ ಆಲ್ಬರ್ಟ್ ಬಿ. ಲಾರ್ಡ್ ಆ ಕೆಲಸವನ್ನು ಮುಂದುವರಿಸಿ ಹೋಮರನ ಹಾಗೂ ಯುಗೋಸ್ಲಾವಿಯನ್ ಜನಪದ ಕಾವ್ಯಗಳ ಸಂರಚನೆ, ಸಂವಹನ, ಪಾಠ ವ್ಯತ್ಯಯ, ಸೂತ್ರಾತ್ಮಕ ವಿನ್ಯಾಸವನ್ನು ಕುರಿತು 'The Singer of Tales' ಎಂಬ ಅಮೂಲ್ಯ ಗ್ರಂಥವನ್ನು ಬರೆದರು.
7. ಹೆಚ್ಚಿನ ವಿವರಗಳಿಗೆ ನೋಡಿ : ಡಾ. ಸಿ. ಎನ್. ರಾಮಚಂದ್ರನ್ : ಸ್ವಾಭಿಮುಖ ಸಾಹಿತ್ಯ : ಮುದ್ದಣನ ರಾಮಾಶ್ವಮೇಧ ಮತ್ತು ಶಾಂತಿನಾಥ ದೇಸಾಯಿ ಅವರ

ಸೃಷ್ಟಿ. ಒಂದು ವಾಖ್ಯಾನ. ಶಿಲ್ಪ ವಿನ್ಯಾಸ. ಪು. 62-86 ಕನ್ನಡ ಸಂಘ ಸಂತ ಫಿಲೋಮಿನಾ ಕಾಲೇಜು ಪುತ್ತೂರು 1987

೮. ಶಾಮರಾವ್, ಜೆ. ಎನ್. 1982 'ಮೋಹನ–ತರಂಗಿಣಿ ಒಂದು ಅಧ್ಯಯನ : ಕನಕ ಕಿರಣ ಪು, 77-86 ಪ್ರ : ಕಾಳಿದಾಸ ಸಾಂಸ್ಕೃತಿಕ ಸಂಘ, 17ನೇ ಮುಖ್ಯ ರಸ್ತೆ ಮಾಗಡಿ ಕಾರ್ಡ್ ರಸ್ತೆ, ಬೆಂಗಳೂರು–೪೦.

9. ಎಸ್.ವಿ. ರಂಗಣ್ಣ (ಡಾ) ಶೈಲಿ–2 'ಕನಕದಾಸರ ಶೈಲಿ' ಪುಟ 54–75 ಪ್ರ : ಕಾವ್ಯಾಲಯ ಮೈಸೂರು.

10. ಅದೇ, ಪು. 54-75

11. ಅದೇ, ಪು. 54-75

12. ಇಂತಹ ಶ್ಲೇಷೆಯನ್ನು ಒಳಗೊಂಡಿರುವ ಪದ್ಯಗಳು ನಂಜುಂಡನ ರಾಮನಾಥ ಚರಿತೆ ಹಾಗೂ ಲಕ್ಷ್ಮೀಶನ ಜೈಮಿನಿ ಭಾರತಗಳಲ್ಲೂ ಕಾಣಿಸುತ್ತವೆ.

ಉದಾ : ಕಟ್ಟೆಂಬ ನುಡಿ ಮುಡಿಯೊಳಗಾಚಾರದ
ಬಟ್ಟೆಯೊಳಾಜ್ಞೆಯೆಡೆಯೊಳು
ಪುಟ್ಟಿಹುದಲ್ಲದಾ ನಾಡೊಳದನು ಬಾಯ
ಬಿಟ್ಟು ನುಡಿದವರಲ್ಲ ॥ (1-2-52 ರಾಮನಾಥ ಚರಿತೆ)
ಪೊಡೆಯೆಂಬ ನುಡಿ ಶಾಲಿವನದೊಳುದರದೊಳು
ತಡೆಯದೆಯ್ದಿಪ ಗೋಕುಲದೊಳು
ಬಿಡದೆ ವರ್ತಿಸುತಿಹುದಲ್ಲದಾ ಮಾತನು
ನುಡಿದವರಿಲ್ಲಾ ದೇಶದೊಳಗೆ ॥ (1-2-54 ರಾಮನಾಥ ಚರಿತೆ)
ಕೊಡೆಯೆಂಬರಾತಪತ್ರವನುದರದೇಶಮಂ
ಪೊಡೆಯೆಂಬರೊಲಿದು ಮಂಥನವನೆಸಗೆಂಬುದಂ
ಕಡೆಯೆಂಬರಾನಡಿಯನಳಿಯೆಂಬರುದುಕ ಪ್ರವಾಹಮಂ ತೊರೆಯೆಂಬರು
(ಜೈಮಿನಿ ಭಾರತ 2-9)

13. Oinasi Felix. G. 1972
Folk epic Folklore and Folklife Edited by Richard M. Dorson pp 99-116 University of Chicago Press, Chicago.

14. ಶಾಮರಾವ್, ಜೆ. ಎನ್. 1982

15. ಕೋತಿನ. ಎಸ್. ಎಸ್. (ಡಾ) 1984 ಮೋಹನ ತರಂಗಿಣಿ. ಮೂಲ ಮತ್ತು ಗದ್ಯಾನುವಾದ ಪ್ರ. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

**ಆಕರ ಸೂಚಿ**

ಒಯಿನಾಸ್ ಫೆಲಿಕ್ಸ್, ಜೆ.

1972 FOLK EPIC Folklore and folk life Edited by Richard M. Dorson pp 99-116 University of Chicago press Chicago.

**ಕೋತಿನ. ಎಸ್. ಎಸ್. (ಡಾ)**

1984 ಮೋಹನ ತರಂಗಿಣಿ, ಮೂಲ ಮತ್ತು ಗದ್ಯಾನುವಾದ ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

**ತಿಪ್ಪೇರುದ್ರಸ್ವಾಮಿ (ಡಾ)**

1985 ತೌಲನಿಕ ಕಾವ್ಯಮೀಮಾಂಸೆ ಪು. 239-261

ರೀತಿ ಮಾರ್ಗ ಶೈಲಿ ಪ್ರ : ಡಿ.ವಿ. ಕೆ. ಮೂರ್ತಿ, ಮೈಸೂರು.

**ತಿರುಮಲೇಶ್ ಕೆ. ವಿ. (ಡಾ)**

1989 'ಬೇಂದ್ರೆಯವರ ಕಾವ್ಯಶೈಲಿ' ಸಮ್ಮುಖ ಪು.

1-33 ಪ್ರ. ಅಕ್ಷರ ಪ್ರಕಾಶನ ಸಾಗರ (ಕರ್ನಾಟಕ)

1989 ಶೈಲಿ ಶಾಸ್ತ್ರದ ರೂಪುರೇಷೆಗಳು ಸಮ್ಮುಖ ಪು : 90-103 ಅಕ್ಷರ ಪ್ರಕಾಶನ ಸಾಗರ (ಕರ್ನಾಟಕ)

**ರಂಗಣ್ಣ ಎಸ್. ವಿ. (ಡಾ)**

1971 ಕನಕದಾಸನ ಶೈಲಿ ಶೈಲಿ–2 ಗ್ರಂಥದಲ್ಲಿ

ಪು. 54-75 ಪ್ರ. ಕಾವ್ಯಾಲಯ ಮೈಸೂರು.

**ರಾಮಚಂದ್ರನ್ ಸಿ. ಎನ್. (ಡಾ)**

**1986 ಸ್ವಾಭಿಮುಖ ಸಾಹಿತ್ಯ : ಮುದ್ರಣ ರಾಮಾಶ್ವಮೇಧ'**

**ಮತ್ತು ಶಾಂತಿನಾಥ ದೇಸಾಯಿಯವರ ಸೃಷ್ಟಿ : ಒಂದು ವ್ಯಾಖ್ಯಾನ**

'ಶಿಲ್ಪ ವಿನ್ಯಾಸ' ಪು. 62-86 ಪ್ರ. ಕನ್ನಡ ಸಂಘ ಸಂತ ಫಿಲೋಮಿನಾ

ಕಾಲೇಜು, ಪುತ್ತೂರು

**ಲಾಡ್ ಅಲ್ಬರ್ಟ್**

1960 The Singer of Tales Camvridge USA

Harvard University Press

# ‘ಮೋಹನ ತರಂಗಿಣಿ’ಯಲ್ಲಿ ಶೃಂಗಾರ ಚಿತ್ರಣದ ವೈಶಿಷ್ಟ್ಯ

**ಡಾ. ದೇವೇಂದ್ರಕುಮಾರ್ ಸಿ. ಹಕಾರಿ**

ಕನಕದಾಸರ ಮೋಹನ ತರಂಗಿಣಿ ಮಹಾಕಾವ್ಯದ ವ್ಯಾಪ್ತಿಯನ್ನು ಹೊಂದಿದ ಒಂದು ವಿಶಿಷ್ಟ ಕೃತಿ. ವಿಜಯನಗರದ ಅರಸ ಕೃಷ್ಣದೇವರಾಯನ ಕಾಲದಲ್ಲಿ (೧೫೦೯–೩೦) ಬಾಳಿದ ಕನಕದಾಸನ ಜೀವನದಲ್ಲಿ ಎರಡು ಘಟ್ಟಗಳಿವೆ. ಒಂದು : ಜನಪದಕುಲ ಗುಂಪು–ಕುರುಬಪಂಗಡದಿಂದ ಬಂದವನಾಗಿ, ತನ್ನ ಕಾರ್ಯ ಬುದ್ಧಿಮತ್ತೆಗಳಿಂದ ಬಾಡ ಗ್ರಾಮದ ಪಾಳೆಯಗಾರನಾಗಿ ಯುದ್ಧದಲ್ಲಿ ಹೋರಾಡಿ ಆಳರಸರ ಮೆಚ್ಚುಗೆಗಳಿಸಿ, ಪಾಳೆಯಗಾರಿಕೆಯ ದೌಲತ್ತು ವಿಲಾಸ ಬೆಡಗುಗಳ ಜೀವನ ನಡೆಸಿದ್ದು ; ಮತ್ತು ಕೃಷ್ಣದೇವರಾಯನ ಕಾಲದ ಅತ್ಯಂತ ವೈಭವಪೂರ್ಣ ಅಂತಃಪುರದ ವಿವಿಧ ಸುಖ ಸಮೃದ್ಧಿಗಳಿಂದ ಕೂಡಿದ ಬದುಕಿನ ಸ್ಥಿತಿಗತಿಗಳನ್ನು ಶೃಂಗಾರ–ಕ್ರೀಡೆಗಳನ್ನು ಕಣ್ಣಾರೆ ಕಂಡದ್ದು, ಜನಪದರ ಕಷ್ಟಯಾತನೆ ಶ್ರಮಜೀವನ ಒಲವುಗಳಿಂದ ಮೊದಲುಗೊಂಡು ಆಳರಸರ ಕ್ರೌರ್ಯ ಉನ್ಮಾದ ಶೃಂಗಾರಗಳವರೆಗಿನ ವೈವಿಧ್ಯಮಯ ಪರಿಸರದಲ್ಲಿ ಓಡಾಡಿದ್ದು, ಓಲಾಡಿದ್ದು, ಎರಡು ದೊರೆತನದ ದೌಲತ್ತು ಅಮಲುಗಳಿಂದ ದೂರ ಸರಿಯುತ್ತ, ಜನಪದ ಬದುಕಿನ ಸಂಕಟ ನೋವು ಮೂಢನಂಬಿಕೆ ಶೋಷಣೆಗಳನ್ನು ಕಂಡು ಅನುಭವಿಸಿ ಸಮಕಾಲೀನ ಜೀವನದ ಮೇಲೆ ಗಾಢಪ್ರಭಾವ ಬೀರಿದ ದಾಸ ಸಮುದಾಯದ ಸಂಪರ್ಕದಲ್ಲಿ ಬಂದು ಭಕ್ತಿ ಪಥದತ್ತ ಹೊರಳಿದ್ದು, ವೈಷ್ಣವ ಭಕ್ತರಾಗಿ ಕೀರ್ತನೆ ಹಾಡು ಕಾವ್ಯಗಳ ಮೂಲಕ ಅಂತರಂಗದ ಅನುಭಾವಗಳನ್ನು ಅಧ್ಯಾತ್ಮದ ದರ್ಶನವನ್ನು ಅಭಿವ್ಯಕ್ತಗೊಳಿಸಿ ಪರಮ ಭಾಗವತರು ಅನಿಸಿಕೊಂಡದ್ದು.

‘ಕನಕದಳದಲಿ ಬಂದನೆಂದರೆ ಫೌಜು
ಕನಕು ಮನಕಾಗುವುದು’
‘ದೊರೆತನವ ಬಿಡಿಸಿ ಸುಸ್ಥಿರಮಾರ್ಗ ತೋರಿಸಿ
ನರಮಾತ್ರದವನ ನೆನೆದೆ ಹರಿಯೇ’

ಇತ್ಯಾದಿ ನುಡಿಗಳು ಕನಕದಾಸರ ಮೊದಲ ಘಟ್ಟದ ಜೀವನ ಸೂಚಿಗಳಾಗಿವೆ. ಜನಪದ ಬದುಕಿನ ಇಡಿಕಿರಿದ ಅನುಭವಗಳ ಮೂಲದಿಂದ ಬಂದ ತನ್ನ ಪರಾಕ್ರಮದಿಂದ 'ಮೊನೆಗಾರಧಣಿ' ಯಾಗಿ ಮೆರೆದ ಕನಕನ ಅದಮ್ಯ ಉತ್ಸಾಹ, ಬದುಕಿನ ವಿವಿಧ ವಸ್ತುಗಳ ಮೇಲೆ ತಾಳಿದ ಮೋಹ, ಯೌವ್ವನ ಸಹಜ ಕಾಮಪ್ರೇಮ ಭಾವನೆಗಳಿಂದ ವಿಜೃಂಭಿಸುತ್ತಿದ್ದ ಶೃಂಗಾರ ವ್ಯಾಮೋಹ ಇತ್ಯಾದಿಗಳ ಈ ಕಾಲಾವಧಿಯಲ್ಲಿಯೇ 'ಮೋಹನ ತರಂಗಿಣಿ' ಕಾವ್ಯರಚಿಸಿರುವ ಸಾಧ್ಯತೆ ಅಧಿಕ. ಆದರೆ ವೈಷ್ಣವಭಕ್ತನಾಗಿ ದಾಸಜೀವನ ಸ್ವೀಕರಿಸಿದ ಮೇಲೆಯೂ ತನ್ನ 'ಮೋಹನತರಂಗಿಣಿ' ಕಾವ್ಯವನ್ನು ಮತ್ತೆ ಮತ್ತೆ ಪರಿಷ್ಕರಿಸಿರಬೇಕು. ಪೌರಾಣಿಕ ಹಿನ್ನೆಲೆಯ ಕಥಾನಕ. ಕೃಷ್ಣ, ಶಂಬರಾಸುರ, ರತಿ, ಪ್ರದ್ಯುಮ್ನ, ಬಾಣಾಸುರ, ಉಷಾ, ಅನಿರುದ್ಧ ಮುಂತಾದ ವ್ಯಕ್ತಿಗಳ ಬದುಕಿಗೆ ಸಂಬಂಧಿಸಿದ ವಿವಿಧಪ್ರಸಂಗಗಳನ್ನು ಅತಿಯೆನಿಸುವಷ್ಟು ದೀರ್ಘ ಮತ್ತು ಬಿಚ್ಚು ಶೃಂಗಾರಗಳಿಂದ ಬಣ್ಣಿಸಿರುವುದು ಮೋಹನತರಂಗಿಣಿ ಕಾವ್ಯದುದ್ದಕ್ಕೂ ಮೇಲುನೋಟಕ್ಕೇ ಹೊಡೆದು ಕಾಣುವ ಗುಣ. ಆದರೆ ಕಾವ್ಯವನ್ನು ಓದುತ್ತಹೋದಂತೆ ಸರಳಶೈಲಿ ಮತ್ತು ಪರಿಚಿತವೆನಿಸುವ ಜೀವನಚಿತ್ರಗಳಿಂದಾಗಿ ಆಕರ್ಷಕವೆನಿಸುತ್ತದೆ, ಮೋಹಕ ರಂಜಕವೆನಿಸುತ್ತದೆ, ಕೆಲವೊಮ್ಮೆ ಗಂಭೀರ ಸ್ವರೂಪನಿರೂಪಣೆ ಕಾಣಲು ಅಚ್ಚರಿಗೊಳಿಸುತ್ತದೆ. ಕನಕದಾಸನಿಗೆ ಈ ಕಾವ್ಯರಚನೆ ತನ್ನ ಆಳರಸು ವಿಜಯನಗರದ ಶ್ರೀ ಕೃಷ್ಣದೇವರಾಯನನ್ನು ಹೊಗಳುವ. ಆತನ ಶೌರ್ಯ ಪರಾಕ್ರಮ ಶೃಂಗಾರಗಳನ್ನು ವಿವರಿಸುವ ಮತ್ತು ಒಟ್ಟು ವಿಜಯನಗರ ಸಾಮ್ರಾಜ್ಯದ ವೈಭವಪೂರ್ಣ ಚಿತ್ರವನ್ನು ಕೊಡುವ ಮುಖ್ಯ ಸಾಧನ ಎಂದು ಕೆಲವರ ಅನಿಸಿಕೆ. ಆದರೆ ಕಾವ್ಯದ ಕಥಾನಕದ ವಿವಿಧ ಸಂದರ್ಭಗಳನ್ನು[1] ಗಮನಿಸಿದರೆ ಇದು ಕೇವಲ ಆನುಷಂಗಿಕ ಅನಿಸುತ್ತದೆ. ಈ ಕಾವ್ಯದ ಕಥೆ ಕೇವಲ ಕೃಷ್ಣಚರಿತೆಯಾಗಿರದೆ ಇಬ್ಬರು ಪುರಾಣ ವ್ಯಕ್ತಿಗಳ ಸುತ್ತ ಹೆಣೆದುದಾಗಿದೆ. ಕಾಮ ದಹನದಿಂದ ಅನಿರುದ್ಧನ ಹುಟ್ಟಿನವರೆಗೆ (ಮನ್ಮಥ) ಕಾಮನೇ ನಾಯಕ ; ಆ ಬಳಿಕ ಉಷೆಯ ಜೊತೆ ಅನಿರುದ್ಧನ ಮದುವೆ ಮೊದಲುಗೊಂಡು, ಕೃಷ್ಣ ಬಾಣಾಸುರರ ಕಾಳಗ, ದ್ವಾರಾವತಿಯಲ್ಲಿ ಉಷಾ ಅನಿರುದ್ಧರ ವಿವಾಹ, ಬಾಣಾಸುರನ ಕೈಲಾಸ ಪಯಣದವರೆಗೆ ಅನಿರುದ್ಧನೇ

---

1. ಬೆಟಗೇರಿ ಕೃಷ್ಣಶರ್ಮ : ಕರ್ನಾಟಕ ಜನಜೀವನ, ಪು. 76-77 ಸಮಾಜ ಪುಸ್ತಕಾಲಯ, ತೃ.ಮು. 1971.

ನಾಯಕ. ಅದೂ ಅಲ್ಲದೆ ಇದು ಕೇವಲ ವಿಷ್ಣುಭಕ್ತಿಯನ್ನು ಮಾತ್ರ ಪ್ರತಿಪಾದಿಸದೆ ಶಿವ–ವಿಷ್ಣುಭಕ್ತಿಗಳ ಸಾಮರಸ್ಯವನ್ನೂ ಬೋಧಿಸುವ ಗುರಿಯನ್ನಿಟ್ಟುಕೊಂಡಂತೆ ತೋರುತ್ತದೆ. "ಕನಕದಾಸ ಭಕ್ತಿಜೀವಿ. ಭಕ್ತಿ ಯಾವ ದಿಕ್ಕಿನಿಂದ ಬಂದರೂ ಅದನ್ನು ಸ್ವೀಕರಿಸುವ ಮುಕ್ತಮನಸ್ಸು ಅವನಿಗಿದೆ. ಆದುದರಿಂದಲೇ ಸಮಕಾಲೀನ ಶ್ರೀವೈಷ್ಣವ, ದ್ವೈತ ಮತ್ತು ಶೈವಮತಗಳು ಕನಕದಾಸರ ಮೇಲೆ ಪ್ರಭಾವವನ್ನು ಬೀರಿವೆ' ಎನ್ನುವ ಮಾತಿಗೆ 'ಮೋಹನತರಂಗಿಣಿ' ಸುದೀರ್ಘ ಕಾವ್ಯ[2] ಒಂದು ನಿದರ್ಶನ. ಇದೊಂದು ವರ್ಣಕಕಾವ್ಯ. ವಾಸ್ತವ–ಸಮಕಾಲೀನವೆನಿಸಬಹುದಾದ– ಜೀವನದ ವಿಸ್ತೃತವಾದ ವರ್ಣನೆ ವರ್ಣಕಕಾವ್ಯದ ಜೀವಾಳವೆಂದು ಹೇಳಲಾಗುತ್ತಿದೆ. ಇಡಿಕಿರಿದ ಜೀವನಚಿತ್ರಗಳು, ವೈವಿಧ್ಯಪೂರ್ಣವಾದ ಪ್ರಸಂಗಗಳು, ಹತ್ತಾರು ಬಗೆಯ ಚೆಲ್ಲು ಚೆಲ್ಲಾದ ಉನ್ಮತ್ತ, ಉತ್ತೇಜಕ ಶೃಂಗಾರ ಚಿತ್ರಗಳು, ಅಂತಃಪುರ ಮೊದಲುಗೊಂಡು ಕೇರಿಕೇರಿಯ ಕಡುವಿಲಾಸದ ಘಾಟುಚಿತ್ರಗಳು, ಒಪ್ಪವಿಟ್ಟ ಗಟ್ಟಿಯಾದ ಯುದ್ಧದ ವರ್ಣನೆ ಮಾಲೆಮಾಲೆಯಾಗಿ ಈ ಕಾವ್ಯದಲ್ಲಿ ಮೈವೆತ್ತು ಬಂದು, ಇದನ್ನೊಂದು ಜೀವಂತಮನೋಹರ ಕಾವ್ಯವನ್ನಾಗಿಸಿದೆ. ವಿಪ್ರಲಂಭ ಶೃಂಗಾರ, ಪ್ರಣಯೋತ್ಕಟತೆ, ಪ್ರೇಮಾರಾಧನೆಗಳ ಮೂಲಕ ಮಧುರಭಕ್ತಿಯ ಲಾಲಿತ್ಯ ವಾತ್ಸಲ್ಯ ಮಾರ್ದವಗಳನ್ನು ಅನಾವರಣಗೊಳಿಸುವುದು ತನ್ಮೂಲಕ ತನ್ನ ಆರಾಧ್ಯ ದೈವದ ಉಜ್ವಲದರ್ಶನ ಮಾಡಿಸುವುದು ಕನಕದಾಸರ ಮನೀಷೆ. ಕನಕದಾಸರ ಕಾವ್ಯಪ್ರತಿಭೆ ಮತ್ತು ಅವರಲ್ಲಿ ಅಂತರ್ಗತವಾದ ದೈವೀಭಕ್ತಿಯಿಂದಾಗಿ ಮೋಹನ ತರಂಗಿಣಿ ಒಂದು ಸಾಂಕೇತಿಕ ಕೃತಿಯಾಗಿ ರೂಪುಗೊಂಡಿದೆ.

**(೨) ಮೋಹನತರಂಗಿಣಿಯ ಸಂಕ್ಷಿಪ್ತ ಚರಿತೆ**

ಸಂಪದ್ಭರಿತ ದ್ವಾರಕೆ, ಶ್ರೀಕೃಷ್ಣನ ಆಳ್ವಿಕೆ, ಅಂತಃಪುರದ ಬಲ್ಮೆ ಬಗೆಬಗೆಯ ಕಲೆಗಳ ಪ್ರದರ್ಶನ, ಶ್ರೀಕೃಷ್ಣ ರುಕ್ಮಿಣಿ ಮತ್ತು ಪರಿವಾರದವರು ನೋಡಿ ನಲಿಯುತ್ತಿರುತ್ತಾರೆ. ಆಗ ವಿನೋದದ ಆಟಗಳನ್ನು ಆಡುವ ಪಕ್ಷಿಕ್ರೀಡೆಗಳ ಪ್ರದರ್ಶನ. ಹಕ್ಕಿಯೊಂದು ತನ್ನ ಮರಿಗೆ ಅಕ್ಕರೆಯಿಂದ ಗುಟುಕುಕೊಡುವ ದೃಶ್ಯ ಕಂಡ ರುಕ್ಮಿಣಿಗೆ ಪುತ್ರಾಪೇಕ್ಷೆ. ಅವಳ ಇಚ್ಛೆಯನ್ನರಿತ ಕೃಷ್ಣ ಶಿವನ ಹಣೆಗಣ್ಣ ಉರಿಗೆ ಭಸ್ಮವಾಗುವ ಕಾಮ ನಿನಗೆ ಪುತ್ರನಾಗಿ ಜನಿಸುತ್ತಾನೆ ಎಂದು

---

2. ಮೋಹನತರಂಗಿಣಿ : ಸಂ. ಡಾ. ಆರ್. ಸಿ. ಹಿರೇಮಠ, ಕ.ಅ. ಪೀಠ.

ಹರಸುತ್ತಾನೆ. ರುಕ್ಮಿಣಿಯ ಗರ್ಭಧಾರಣೆ–ಮಗುವಿನ ಜನನ, ಪ್ರದ್ಯುಮ್ನ ಎಂದು ಹೆಸರು.

ತಾರಕಾಸುರನಿಂದ ದೇವತೆಗಳಿಗೆ ಮಿತಿಮೀರಿದ ತೊಂದರೆ. ಈ ಉಪಟಳದ ನಿವಾರಣೆಗಾಗಿ ದೇವತೆಗಳಿಂದ ಬ್ರಹ್ಮನಲ್ಲಿ ಪ್ರಾರ್ಥನೆ. ಶಿವನಿಂದ ಜನಿಸುವ ಪುತ್ರನಿಂದ ಮಾತ್ರ ತಾರಕಾಸುರನ ವಧೆಯೆಂದು ತಿಳಿದಾಗ ಶಿವನಲ್ಲಿಗೆ ಹೋಗಬೇಕೆಂದರೆ ಅವನು ತಪೋನಿರತ. ತಪೋಭಂಗ ಮಾಡಲು ಬೃಹಸ್ಪತಿಯ ಆಜ್ಞೆಯಂತೆ ಮನ್ಮಥನ ಪಯಣ–ಯತ್ನ, ಎಚ್ಚತ್ತ ಶಿವನ ಕ್ರೋಧ, ಹಣೆಗಣ್ಣ ಉರಿಯಲ್ಲಿ ಮನ್ಮಥ ಬೂದಿ. ಪತ್ನಿ ರತಿಯ ಶೋಕಪ್ರಲಾಪ, ಶಿವನ ಕನಿಕರ. 'ಮನಸಿಜನಾಗಿ ನಿನ್ನೊಡಗೂಡಿ ಇರುತ್ತಾನೆ' ಎಂದು ರತಿಗೆ ಶಿವನಿಂದ ಸಾಂತ್ವನ, ದುಃಖತಪ್ತೆ ರತಿ ಅಲೆದಾಡುತ್ತ ಶಂಬರಾಸುರನ ರಾಜ್ಯಕ್ಕೆ ಬಂದು ಅವನ ಅಂತಃಪುರದಲ್ಲಿ ಅಡುಗೆ ಕೆಲಸಕ್ಕಾಗಿ ಸೇರಿಕೊಳ್ಳುತ್ತಾಳೆ.

ರುಕ್ಮಿಣಿಗೆ ಹುಟ್ಟಿದ ಮಗುವಿನಿಂದ ತನಗೆ ಕುತ್ತು ಎಂದರಿತ ಶಂಬರಾಸುರ ಹತ್ತನೆಯ ದಿನದ ಕೂಸು ಪ್ರದ್ಯುಮ್ನನನ್ನು ಕದ್ದು ಕಡಲಲ್ಲಿ ಬೀಸಾಡುತ್ತಾನೆ. ಆ ಕೂಸನ್ನು ಮೀನು ನುಂಗುತ್ತದೆ. ಒಮ್ಮೆ ಬೆಸ್ತರವನೊಡ್ಡಿದ ಬಲೆಗೆ ಅದೇ ಮೀನು ಬೀಳುತ್ತದೆ. ವಿಚಿತ್ರ ಮೀನು ಎಂದು ಭಾವಿಸಿದ ಜಾಲಗಾರ ಅದನ್ನು ಶಂಬರಾಸುರನಿಗೆ ಕಾಣಿಕೆಯಾಗಿ ಅರ್ಪಿಸುತ್ತಾನೆ. ಅಡುಗೆಮನೆ ಸೇರಿದ ಆ ಮೀನನ್ನು ಆಳಾದ ರತಿದೇವಿ ಹೆಚ್ಚುತ್ತಾಳೆ ; ಅದರ ಒಡಲಿಂದ ಹೊರಬಂದುದು ಅತಿ ಸುಂದರ ಮಗು, ವಿಸ್ಮಿತ ರತಿಗೆ ಅಶರೀರವಾಣಿಯ ಸಂದೇಶ: 'ಕಂದನ ಕಾದುಕೊ.' ರತಿ ಶಂಬರನ ಅನುಮತಿ ಪಡೆದು ಆ ಮಗುವನ್ನು ಪೋಷಿಸುತ್ತಾಳೆ. ದಿನಕ್ಕೊಂದು ಚೆಂದದಂತೆ ಬೆಳದ ಮಗು ಸಕಲರ ಮನ ಸೆಳೆಯುತ್ತದೆ. ಮಗುವಿನ ಅಂದಚೆಂದ ಸೊಬಗುಗಳಿಗೆ ಮಾರುವೋದ ಶಂಬರಾಸುರ ತಾನು ಕಲಿತ ಸಕಲಕಲೆಗಳನ್ನೂ ಆ ಮಗುವಿಗೆ ಕಲಿಸುತ್ತಾನೆ. ಸಕಲಕಲಾ–ವಿದ್ಯಾ–ಪರಿಣತನಾದ ಆ ಮಗುವೇ ಪ್ರದ್ಯುಮ್ನ, ಅವನಿಂದ ತನಗೆ ಕೇಡು ಎಂದು ನಾರದರಿಂದ ಅರಿತ ಶಂಬರಾಸುರ ಪ್ರದ್ಯುಮ್ನನನ್ನು ಮುಗಿಸುವ ಯತ್ನಮಾಡುತ್ತಾನೆ. ಶಂಬರಾಸುರ ಪ್ರದ್ಯುಮ್ನರ ನಡುವೆ ಯುದ್ಧ, ಶಂಬರಾಸುರನ ಕೊನೆ. ರತಿಯೊಡನೆ ಪ್ರದ್ಯುಮ್ನ ದ್ವಾರಕೆಗೆ ಬರುತ್ತಾನೆ. ಕೃಷ್ಣ–ರುಕ್ಮಿಣಿಯರಿಂದ ಸ್ವಾಗತ; ಇಬ್ಬರಿಗೂ ವಿಜೃಂಭಣೆಯ ಮದುವೆ. ಪ್ರದ್ಯುಮ್ನ ರತಿಯರ ವೈಭೋಗ, ಸುಖವಿಲಾಸ, ಸರಸ ಸಲ್ಲಾಪ. ಅವರಿಗೆ ಪುತ್ರಜನನ–ಅವನೇ ಅನಿರುದ್ಧ. ತ್ರಿಲೋಕಸುಂದರ.

ಶೋಣಿತಪುರ, ಅರಸು ಬಾಣಾಸುರ, ಅಸಮಬಲ ಮತ್ತು ಮಹಾಶಿವಭಕ್ತ. ಶಿವನನ್ನು ತನ್ನ ತಪೋಬಲದಿಂದ ಮೆಚ್ಚಿಸಿ 'ಸಾವಿರ ತೋಳು'ಗಳ ವರಪಡೆದ ಧೀರ. ತನ್ನ ಜೊತೆ ಕಾದಾಡುವ ಸಮಬಲ ಶೂರನನ್ನು ಕಾಣುವ ಬಯಕೆಯನ್ನು ಶಿವನೆದುರು ವ್ಯಕ್ತಪಡಿಸಿದಾಗ ಎಂದು ನಿನ್ನ ರಥದ ಧ್ವಜ ಮುರಿದು ಬೀಳುತ್ತದೆ ಅಂದು ನಿನ್ನ ಜೊತೆ ಹೋರಾಡುವ ಕಡುಗಲಿ ಬರುವನು' ಎಂದು ಶಿವನ ನುಡಿ. ಬಾಣನ ಹರ್ಷ, ಮತ್ತು ಅವನಿಂದ ಆ ದಿನದ ನಿರೀಕ್ಷೆ.

ಶಿವಭಕ್ತ ಬಾಣಾಸುರ ಮಗಳು ಉಷೆ. ಚೆಲುವೆಯರ ಚೆಲುವೆ. ಅವಳ ಅಚ್ಚುಮೆಚ್ಚಿನ ಗೆಳತಿ ಚಿತ್ರಲೇಖೆ, ಕಲಾನಿಪುಣೆ, ಚದುರೆ ಮತ್ತು ಸಕಲ ಮಾಯಾವಿದ್ಯೆಗಳಲ್ಲಿ ಪರಿಣತೆ. ಒಮ್ಮೆ ಇಬ್ಬರೂ ಕೂಡಿ ಶಿವಪೂಜೆಗೆ ಹೋದಾಗ ಚಿತ್ರಲೇಖೆ ತನ್ನ ಗೆಳತಿ ಉಷೆಯ ಅಂತರಂಗವನ್ನು ಪಾರ್ವತಿಯೆದುರು ಬಿಚ್ಚಿ ಅವಳಿಗೆ–ಸರ್ವವಿಧದಲ್ಲಿ–ಯೋಗ್ಯನಾಗುವ ವರನ (ಪತಿಯ) ಬಗೆಗೆ ಕೇಳುತ್ತಾಳೆ. 'ವೈಶಾಖ ಶುದ್ಧ ದ್ವಾದಶಿಯ ರಾತ್ರಿ ಅವಳ ಕನಸಿನಲ್ಲಿ ಕಾಣಿಸಿಕೊಳ್ಳುವ ಪುರುಷನೇ ಅವಳಿಗೆ ಪತಿಯಾಗುವನು' ಎಂದು ಪಾರ್ವತಿ ಹೇಳುತ್ತಾಳೆ.

ಮುಂದೆ ಅಂಥ ಒಂದು ರಾತ್ರಿ ಉಷೆಯ ಕನಸು–ಅದರಲ್ಲಿ ಸ್ಫುರದ್ರೂಪಿ ಪುರುಷನದರ್ಶನ–ಮಿಲನ. ಕನಸು ಕರಗಿ ಎಚ್ಚತ್ತ ಉಷೆಗೆ ಆ ಪುರುಷನ ಬಡಬಡಿಕೆ, ವಿರಹತಾಪ. ನಚ್ಚಿನ ಗೆಳತಿಯ ವಿರಹತಾಪಕ್ಕೆ ಬೆಂದ ಚಿತ್ರಲೇಖೆ ಗೆಳತಿ ಕನಸಿನಲ್ಲಿ ಕಂಡ ಪುರುಷನನ್ನು ಹುಡುಕಲು ನಿಶ್ಚಯಿಸುತ್ತಾಳೆ. ಅತಿ ಚದುರೆ ಮತ್ತು ಚಿತ್ರಕಲೆಗಳಲ್ಲಿ ವಿಶೇಷ ಕೌಶಲಪಡೆದ ಚಿತ್ರಲೇಖೆ ತನ್ನ ಮಂತ್ರವಿದ್ಯೆಗಳ ಬಲದಿಂದ ಲೋಕ ಲೋಕಗಳನ್ನು ಅಲೆದು, ಚೆಂದಕಂಡ ಪುರುಷರ ಸಹಸ್ರಾರು ಚಿತ್ರಗಳನ್ನು ಬಿಡಿಸಿ ತಂದು ಗೆಳತಿಯೆದುರು ಇಟ್ಟು ಕನಸಿನ ಪುರುಷನನ್ನು ಗುರುತಿಸಲು ಹೇಳುತ್ತಾಳೆ. ಉಷೆ ಒಂದೊಂದೇ ಚಿತ್ರ ನೋಡುತ್ತ ಆಚೆ ಇಡುತ್ತ ಇರುವಂತೆ ಅನಿರೀಕ್ಷಿತವಾಗಿ ಒಂದು ಚಿತ್ರವನ್ನು ನೋಡಿ, 'ಇವನೇ ನನ್ನ ಕನಸಿನಲ್ಲಿ ಕಂಡ ಸುಂದರಾಂಗ' ಎಂದು ಚಡಪಡಿಸುತ್ತಾಳೆ. ಚಿತ್ರದಲ್ಲಿಯೇ ಪರವಶಳಾಗುತ್ತಾಳೆ. ಆ ಚಿತ್ರದಲ್ಲಿದ್ದ ಪುರುಷ ಅನಿರುದ್ಧ.

ದ್ವಾರಕೆಯಲ್ಲಿ ಅನಿರುದ್ಧನ ಸ್ಥಿತಿ ಕೂಡ ವಿರಹತಪ್ತ. ಅವನೂ ತನ್ನ ಕನಸಿನಲ್ಲಿ ನೋಡಿದವಳು ಉಷೆ : ಅವಳಿಗಾಗಿ ಹಂಬಲಿಸುತ್ತಾನೆ. ಇದೆಲ್ಲವನ್ನು ಅರಿತ ಚಿತ್ರಲೇಖೆ ದ್ವಾರಕೆಗೆ ಬಂದು, ಅರಮನೆಯಲ್ಲಿ ಅನಿರುದ್ಧನ ಶಯನಾಗಾರವನ್ನು ಪ್ರವೇಶಿಸಿ ಅನಿರುದ್ಧನನ್ನು ಎಚ್ಚರಿಸುತ್ತಾಳೆ. ಅವನು ಕನಸಿನಲ್ಲಿ

ಕಂಡ ಉಷೆಯ ಸಂಗತಿಯನ್ನು ತಿಳಿಸಿ ಯಾರಿಗೂ ಗೊತ್ತಾಗದಂತೆ ಅನಿರುದ್ಧನನ್ನು–ಬಾಣಾಸುರನ–ಶೋಣಿತಪುರಕ್ಕೆ ಕರೆದೊಯ್ಯುತ್ತಾಳೆ. ಉಷಾ ಅನಿರುದ್ಧರ ಗಾಂಧರ್ವ ವಿವಾಹ ನೆರವೇರಿಸುತ್ತಾಳೆ. ಎಲ್ಲವೂ ಗುಪ್ತವಾಗಿಯೇ ನಡೆಯುತ್ತದೆ. ಅನಿರುದ್ಧ ಮತ್ತು ಉಷಾ ಮೇರೆಯಿರದ ಸುಖವಿಲಾಸಗಳಲ್ಲಿ ನಿರತರು. ಕೆಲವು ಸಮಯದ ಬಳಿಕ ನಾರದನಿಂದ ಬಾಣಾಸುರನಿಗೆ ಉಷಾ ಅನಿರುದ್ಧರ ಗುಪ್ತಪ್ರಣಯದ ವಿಷಯ ತಿಳಿಯುತ್ತದೆ. ಕೋಪೋದ್ರಿಕ್ತನಾದ ಬಾಣಾಸುರ, ಅನಿರುದ್ಧನನ್ನು ಹಿಡಿದುತರಲು ಕುಂಭಾಂಡನಿಗೆ ಆದೇಶವೀಯುತ್ತಾನೆ. ಉಷೆಯ ಅಂತಃಪುರದಿಂದಲೇ ತನ್ನ ಬೆನ್ನುಹತ್ತಿದ ಸೈನ್ಯವನ್ನು ಅನಿರುದ್ಧನೊಬ್ಬನೇ ಹೋರಾಡಿ ಸೋಲಿಸುತ್ತಾನೆ. ಉಗ್ರನಾದ ಬಾಣಾಸುರ ತಾನೇ ಯುದ್ಧಮಾಡಿ ಅನಿರುದ್ಧನನ್ನು ಸೆರೆಹಿಡಿದು ತರುತ್ತಾನೆ. ನಾರದನಿಂದ ಈ ಸಂಗತಿ ತಿಳಿದ ಕೃಷ್ಣ ಅಗಣಿತ ಸೈನ್ಯಬಲದೊಡನೆ ಶೋಣಿತಪುರವನ್ನು ಮುತ್ತುತ್ತಾನೆ. ಶಿವ ಮತ್ತು ಶಿವಗಣಗಳೂ ಕೂಡ ಯುದ್ಧಮಾಡುತ್ತಾರೆ. ಪುರ ಪ್ರವೇಶಿಸಿದ ಕೃಷ್ಣ ಬಾಣನೊಡನೆ ನೇರವಾಗಿ ಯುದ್ಧಮಾಡಿ ಅವನ ಸಾವಿರ ತೋಳು ಕತ್ತರಿಸುತ್ತಾನೆ. ಭೀಕರ ಸ್ಥಿತಿ ನಿರ್ಮಾಣವಾಗುತ್ತಿರುವಂತೆ ಶಿವ ನಡುವೆ ಪ್ರವೇಶಿಸಿ, ಕೃಷ್ಣನನ್ನು ಶಾಂತಗೊಳಿಸಿ ಬಾಣನನ್ನು ತನ್ನ ಹತ್ತಿರ ಕರೆದು 'ನಾನು ಕೃಷ್ಣ ಬೇರೆ ಬೇರೆ ಅಲ್ಲ ; ಒಂದೇ' ಎಂದು ತಿಳಿಸಿ ಸಮಾಧಾನಪಡಿಸುತ್ತಾನೆ. ಸಂತೋಷಭರಿತನಾದ ಬಾಣ ತನ್ನ ಮಗಳು ಉಷೆಯನ್ನು ಅನಿರುದ್ಧನಿಗೆ ಕೊಡಲು ಒಪ್ಪುತ್ತಾನೆ. ಕೃಷ್ಣ ಉಷಾ ಅನಿರುದ್ಧರೊಡಗೂಡಿ ದ್ವಾರಕೆಗೆ ಬರುತ್ತಾನೆ : ಅವರಿಬ್ಬರ ಮದುವೆ ವೈಭವವೋಪೇತವಾಗಿ ನೆರವೇರುತ್ತದೆ. '....ಭಕ್ತರಿಗೆ ಇಷ್ಟಾರ್ಥವನೀವ ಕೃಷ್ಣ ದ್ವಾರಕೆಯೊಳಗಷ್ಟೈಶ್ವರ್ಯ'ಗಳಿಂದ ಶೋಭಿಸಿದನು.

(೩) ಉಕ್ಕುವ ಹರೆಯದಲ್ಲಿ ಕನಕದಾಸರಿಂದ ರಚಿತವಾದ 'ಮೋಹನತರಂಗಿಣಿ' ಅವರ ಅಂದಿನ ಮನೋಧರ್ಮವನ್ನು ಸೂಚಿಸುತ್ತದೆ. ಲೌಕಿಕ ವೈಭವದ ಭೋಗ ಜೀವನದಲ್ಲಿ ಮನಸ್ಸು ಮುಳುಗಿದ್ದಾಗ, ಪ್ರಾಪಂಚಿಕ ಪಾರಮಾರ್ಥಿಕ ಸಾಧನೆಗಳ ನಡುವೆ ಚಿತ್ತ' ಓಲಾಡುತ್ತಿದ್ದ ಸಮಯದ ಕನಕ ಪ್ರತಿಭಾಸೃಷ್ಟಿ ಮೋಹನ ತರಂಗಿಣಿ. ಆ ಕಾಲಕ್ಕಾಗಲೇ[1] ಭಕ್ತಿಪಂಥ, ಕರ್ನಾಟಕದ

---

1. ಜನಪ್ರಿಯ ಕನಕ ಸಂಪುಟ : ದೇಜಗೌ ಪು xvi : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1988

ಸಾಹಿತ್ಯ ಸಮಾಜ ಜೀವನದಲ್ಲಿ ಆಳವಾಗಿ ಬೇರೂರಿತ್ತು ; ಒಂದು ವಿನೂತನ ಪರಂಪರೆಯ ಜನಪದ ಹೆದ್ದಾರಿಯನ್ನು ನಿರ್ಮಿಸಿತ್ತು. ಕನಕದಾಸರಂಥ ಆಶುಕವಿತಾ ಪ್ರತಿಭಾಸಂಪನ್ನರಿಗೆ, ಇದರ ದಟ್ಟ ಪ್ರಭಾವವಾಗಿದ್ದರಲ್ಲಿ ಅಚ್ಚರಿಯಿಲ್ಲ. ಭಾಗವತ ಸಂಪ್ರದಾಯದ ವೈಷ್ಣವ ಭಕ್ತಿ ಮತ್ತು ಶರಣ ಸಂಪ್ರದಾಯದ ಶಿವಭಕ್ತಿ ಜೊತೆಗೆ ದಾಸವರೇಣ್ಯರ ದ್ವೈತಭಾವ ಇವುಗಳ ತ್ರಿವೇಣಿ ಸಂಗಮವಾದ ಪರಿಸರದಿಂದ ಕನಕದಾಸರು ಅಪ್ರಜ್ಞಾಪೂರ್ವಕವಾಗಿ ಪ್ರೇರಿತರಾಗಿದ್ದರು ಎಂದು ಹೇಳಲೂ ಸಾಧ್ಯವಿದೆ. ತಮ್ಮ ವಯೋಮಾನಕ್ಕೆ ತಕ್ಕಂತೆ ತಮ್ಮ ಅಂತರಂಗದಲ್ಲಿ ತುಡಿಯುತ್ತಿದ್ದ ಶೃಂಗಾರ ಪ್ರಣಯ ಪ್ರೇಮ ಭಾವನೆಗಳನ್ನು ತಮ್ಮ ಮೋಹನ ತರಂಗಿಣಿ ಕಾವ್ಯನಿರ್ಮಿತಿಗೆ ಧಾರಾಳವಾಗಿ ಬಳಸಿಕೊಂಡಿದ್ದರೂ 'ಸ್ನೇಹೋ ಭಕ್ತಿರಿತಿಪ್ರೋಕ್ತಃ' ಎನ್ನುವ ಮಾತು ಅವರಿಗೆ ತುಂಬ ಪ್ರಿಯವಾಗಿರಬೇಕು. ಭಕ್ತ ಮತ್ತು ಪರಮಾತ್ಮ ತತ್ವಗಳ ಚರ್ಚೆ ಕನಕದಾಸರಿಗೆ ಅಪ್ರಸ್ತುತವಾದಂಥ ಚಿತ್ತ ಸ್ಥಿತಿಯಲ್ಲಿ ರೂಪಗೊಂಡದ್ದು 'ಮೋಹನ ತರಂಗಿಣಿ' : ಭಾಗವತ ಪಥದ ಜೀವನನಶ್ವರತೆ, ಐಹಿಕ ಭೋಗ ವಿಮುಖತೆಗಳನ್ನು ಇನ್ನೂ ಅರ್ಥಮಾಡಿಕೊಳ್ಳಬೇಕಾಗಿದ್ದ ಹಂತದಲ್ಲಿಯೇ ಸೃಷ್ಟಿಗೊಂಡ ಈ ಕಾವ್ಯದಲ್ಲಿ ಕನಕದಾಸರು ಬದುಕಿನ ವಿವಿಧ ಮುಖಗಳಲ್ಲಿ ಕಂಡುಬರುವ ವಾತ್ಸಲ್ಯ. ಪ್ರಣಯ, ಉನ್ಮಾದ, ಪರವಶತೆ, ಸ್ನೇಹ, ಮಮತೆ, ವಿಸ್ಮಯ, ಸರ್ವಾರ್ಪಣ ಮುಂತಾದ ನಾನಾ ಕಳಕಳಿಸುವ ಭಾವನೆಗಳನ್ನು ಜೀವನಸಂದರ್ಭಕ್ಕೆ ತಕ್ಕಂತೆ ತುಂಬಿ, ಶೃಂಗಾರರಸದ ಪೋಷಣೆಗೆ ಎಲ್ಲಬಗೆಯ ಸಂವೇದನೆಗಳನ್ನು ಮಿಡಿದಿದ್ದಾರೆ ; ಮತ್ತೆ ಇದೆಲ್ಲಕ್ಕೆ ಮೇಲಾಗಿ ಶೃಂಗಾರವನ್ನು ದೈವೀಭಕ್ತಿಗೆ ಉನ್ಮುಖಗೊಳಿಸಿದ್ದಾರೆ. ಈ ದೃಷ್ಟಿಯಿಂದ ಮೋಹನ ತರಂಗಿಣಿ ಅನೇಕ ವೈಶಿಷ್ಟ್ಯಗಳಿಂದ ಕೂಡಿದ ಒಂದು ಮಹತ್ವದ ಕೃತಿ. ವಿವಿಧ ಮತ ಧರ್ಮ ತತ್ವಗಳನ್ನು ತಮ್ಮ ಜ್ಞಾನವರ್ಧನೆ ಆಧ್ಯಾತ್ಮ ಸಾಧನೆಗಾಗಿ ಅರಿತುಕೊಂಡಿದ್ದ ಕನಕದಾಸ. ಈ ಕಾವ್ಯ ಅವರ ಚೊಚ್ಚಲ ಕೃತಿ ಎಂದು ಗುರುತಿಸಲಾಗಿದೆ. 'ಮೋಹನ ತರಂಗಿಣಿ' ಮಾನವೀಯ ಕೋಮಲ ಮಧುರ ಪ್ರೇಮ ಸಂಬಂಧಗಳನ್ನು ಶೃಂಗಾರರಸ ನೆಲೆಯಲ್ಲಿ ಗುರುತಿಸುವ ಕಾವ್ಯವಾಗಿದೆ ; ಶೃಂಗಾರದ ಉತ್ಕಟ ಭಾವವನ್ನು ಭಕ್ತಿಯ ಉದಾತ್ತ ಸಂವೇದನೆಗೆ ತಿರುಗಿಸುವ ಭಗವದುಪಾಸನಾ ಕಾವ್ಯವಾಗಿದೆ. 'ಮೋಹನ ತರಂಗಿಣಿ ಮತೀಯ ಕಾವ್ಯವಾಗಿಲ್ಲ'ವೆನ್ನುವುದನ್ನು ಕೂಡ ಸಹೃದಯರು ಎತ್ತಿ ಹೇಳಿದ್ದಾರೆ.

ಈ ಕಾವ್ಯದ ಭಾಷೆ, ಶೈಲಿ, ವಸ್ತು, ನಿರೂಪಣಾ[೧] ವಿಧಾನ ಸನ್ನಿವೇಶ ಹೀಗೆ ಒಂದೊಂದೂ ವಿಶಿಷ್ಟವಾಗಿದೆ. ಆದರೆ ಕನಕರು ಕಾವ್ಯವನ್ನು ಅನಾವರಣಗೊಳಿಸುವ ರೀತಿ ಅವರ ಅನನ್ಯ ಪ್ರತಿಭೆಗೆ ಸಾಕ್ಷಿಯಾಗಿದೆ. ಕಾವ್ಯದ ಆರಂಭದಿಂದ ಕೊನೆಯವರೆಗೂ ಎದ್ದುಕಾಣುವ ಅಂಶವೆಂದರೆ ಅವರ ರಸಿಕದೃಷ್ಟಿ. ಹೇಳುವ ಪ್ರತಿಯೊಂದು ಮಾತೂ ರಸದುಂಬಿರಬೇಕು ; ಚಿತ್ತಾಕರ್ಷಕವಾಗಿರಬೇಕು ಮತ್ತು ರಂಜನೀಯವಾಗಿರಬೇಕು.

ವಾಚಕರ ಹೃದಯಕ್ಕೆ ಅವರ ಚಿರಪರಿಚಿತ ನಿರೂಪಣೆಗಳಿಂದ ಸರಳವಾಗಿ ಮತ್ತು ನೇರವಾಗಿ ಸಂವಹನಗೊಳ್ಳಬೇಕು. ತನ್ನ ಕಾವ್ಯ ಕೇವಲ ಪಂಡಿತರಿಗಾಗಿ ಅಲ್ಲ. ಜನಪದರು ಕೂಡಿ ಇದನ್ನು ಕೇಳಿ ಮೆಚ್ಚಬೇಕು ತಲೆದೂಗಬೇಕು ಎನ್ನುವ ಆಶಯ ಈ ಕಾವ್ಯದ ಪ್ರತಿಯೊಂದು ಸನ್ನಿವೇಶದಲ್ಲೂ ಒಡಮೂಡಿದೆ. ಈ ಕಾವ್ಯದ ಶೃಂಗಾರ ಚಿತ್ರಣವೆಂದರೆ ಎರಡು ಬಗೆಯಲ್ಲಿ ಕಣ್ಣಿಗೆ ಕಟ್ಟುತ್ತದೆ ; ಹೃದಯವನ್ನು ಮುಟ್ಟುತ್ತದೆ. ಒಂದು ಕವಿ ಕೊಡುವ ಜನಪದ ಬದುಕಿನ, ರಸಿಕತೆಯಿಂದ ಕೂಡಿದ ಶೃಂಗಾರ ಚಿತ್ರಗಳ ಸರಮಾಲೆ. ಮತ್ತೊಂದು ಕಥಾನಕದ ವಿವಿಧ ಸನ್ನಿವೇಶದಲ್ಲಿ ಒಡಮೂಡುವ ಮಾನವೀಯ ಮಧುರ ಸಂಬಂಧದ ರಸಪೂರ್ಣ ಸಂದರ್ಭಗಳ ಸೌಂದರ್ಯಧಾರೆ.

ಕಾವ್ಯಮುಖದಲ್ಲಿಯೇ ಕವಿಯ ಪ್ರಣಯ ಸಹಜ ದೃಷ್ಟಿ ನಮ್ಮ ಚಿತ್ತ ಸೆಳೆಯುತ್ತದೆ. ತನ್ನ ಆರಾಧ್ಯ ದೈವವನ್ನು 'ಪೂರ್ಣಕಾಮ' ಎಂದು ಸ್ತುತಿಸಿದ ಕವಿ ತನ್ನ ಕಾವ್ಯ 'ರಸಿಕರ ಕರ್ಣಯುಗ್ಮವ ಪೊಕ್ಕು' ಅವರನ್ನು ತಣಿಸಬೇಕು. ಇದು 'ರಸಪೂರಿತ ಸುಪ್ರಬಂಧ' ಎಂದು ಮುಂತಾಗಿ ವಿವರಿಸುತ್ತಾನೆ. ಈ ಕಾವ್ಯವನ್ನು ತನ್ನ ನಚ್ಚಿನ ಮಡದಿಗೆ ಹೇಳುವ ಕಾವ್ಯತಂತ್ರ ಮೊದಲ ಹಂತದಲ್ಲಿಯೇ ಶೃಂಗಾರ ಪರಿಸರ ನಿರ್ಮಾಣದ ಆತಂಕಗಳನ್ನು ಲೀಲಾಜಾಲವಾಗಿ ಪರಿಹರಿಸಲಾಗಿದೆ. ತನ್ನ ಮಡದಿಯೇ ಈ ಕಾವ್ಯದ ಪ್ರಥಮಶ್ರೋತೃ. ಆಕೆ ಹತ್ತಿರ ಕುಳಿತಿದ್ದಾಳೆ. ಅವಳಿಗೆ ತಾನು ಕಾವ್ಯವನ್ನು ವಾಚಿಸಿ. ಹಾಡಿ ವಿವರಿಸುತ್ತಾನೆ. ಆದ್ದರಿಂದ ತನಗೆ ಇಷ್ಟಬಂದ ರೀತಿಯಲ್ಲಿ ಅವಳನ್ನು ಸಂಬೋಧಿಸುತ್ತಾನೆ. ಕವಿಯ ಸಂಬೋಧನೆಯ ಮೋಹಕತೆ ವಿನೋದ ರಸಿಕತೆಗಳಲ್ಲಿ ಓದುಗರೂ ಒಂದಾಗುತ್ತಾರೆ.

---

1. ಜನಪ್ರಿಯ ಕನಕ ಸಂಪುಟ : ದೇಜಗೌ, ಪು. viii : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, 1988.

'ಕಣ್ಗೆಮಂಗಳವಪ್ಪ ಬಟ್ಟಬಲ್ಮೊಲೆಯ ಮೋಹನರನ್ನೆ'
'ಕಣ್ಣು ಮನವ ನಿರ್ಕುಳಿಗೊಳ್ವ ಕಡುಜಾಣವೆಣ್ಣುಗಳ
ಅಧಿದೇವಿ', 'ಎನ್ನಭಾಗ್ಯನಿಧಿ', 'ಸುಡಾಳ ಬಲ್ಮೊಲೆವೆತ್ತ
ನೀರೆ' 'ಕೊಡಮೊಲೆವೆಣ್ಣೆ', 'ಬಡನಡುವಿನ ಚೆನ್ನೆ'
'ಭಾಮಿನಿಯರ ರನ್ನೆ' 'ಮಡದೀಮಣಿ'

ಮುಂತಾದ ಇನಿಮಾತುಗಳಿಂದ ಮಡದಿಯನ್ನು ಸಂಬೋಧಿಸುತ್ತಾನೆ. ತನ್ನ ಪತಿಯ ರಸಿಕ ಮಾತುಗಳಿಗೆ ಮರುಳಾದ ಅವಳು ಕೂಡ ಉಲ್ಲಸಿತಳಾಗಿ ಸ್ಪಂದಿಸುತ್ತಾಳೆ. 'ಇನಿಯ' 'ಜೀವಿತೇಶ' 'ಮನದನ್ನ' ಮುಂತಾದ ಸುಮಧುರ ನುಡಿಗಳಿಂದ ಅವನನ್ನು ಪ್ರೇರಿಸುತ್ತಾಳೆ ; ಕಾವ್ಯ ರಚನೆಗೆ ಸ್ಫೂರ್ತಿಯ ಸೆಲೆಯಾಗುತ್ತಾಳೆ. ತಾಜಾ ಜೇನು ತುಪ್ಪ, ಸಕ್ಕರೆ ಮಿತವಾಗಿ ಬೆರೆತ ಹಿತವಾಗಿ ಕಾಯ್ದ ಹಾಲು ಸೇವಿಸಿದ ಹೃದಯ ಮಧುರ ಮಾತು ಸವಿ ಹಾಗೆ ನೀನು ಕಾವ್ಯ ಹೇಳು ಎಂದು ಉಲ್ಲಸಿತಳಾಗಿ ಕೇಳುತ್ತಾಳೆ. ಕಾವ್ಯದ ಪ್ರತಿ ಸಂಧಿಯ ಆರಂಭಕ್ಕೆ ಬರುವ ಈ ಬಗೆಯ ಸತಿ ಪತಿಗಳ ಇನಿವಾತು ಕಾವ್ಯದುದ್ದಕ್ಕೂ ಅಲ್ಲಲ್ಲಿ ಕಟ್ಟಿದ ತೋರಣಗಳಾಗಿ ತೂಗುತ್ತವೆ. ಈ ಸಂಬೋಧನೆಗಳಲ್ಲಿ ಶೃಂಗಾರ ತುಂಬ ವಾಚ್ಯವೆನಿಸಿದರೂ ಅದಕ್ಕೆ ಕವಿ ಜಾಗರೂಕತೆಯಿಂದ ಸಾತ್ವಿಕತೆಯ ಮೆರಗು ನೀಡುತ್ತಾನೆ. 'ಬಟ್ಟಬಲ್ಮೊಲೆ' ನಿಜ–ಆದರೆ ಅದು 'ಕಣ್ಗೆಮಂಗಳ'. ಕನಕದಾಸರು ತಮ್ಮ ಕಾವ್ಯದ ಉದ್ದಕ್ಕೂ ಬಳಸುವ ಶೃಂಗಾರ ಪ್ರಣಯಗಳ ಧೋರಣೆಗೆ ಈ 'ಮಂಗ'ಳದ ಕಾಮ, ಸೌಂದರ್ಯದ ನಿಜಸ್ವರೂಪ ದರ್ಶನಕ್ಕೆ ಪೋಷಕ ಪ್ರೇರಕವಾಗುವ ರೀತಿಯಲ್ಲಿ ತನ್ನ ರಸಿಕತೆ ಶೃಂಗಾರಗಳನ್ನು ಬಳಸಿರುವುದರಿಂದ 'ಮೋಹನ ತರಂಗಿಣಿ' ಸುಮಧುರ ಕೋಮಲ ಭಾವಗಳಿಂದ ತರಂಗಿತಗೊಳ್ಳುತ್ತ ಅಲ್ಲಲ್ಲಿ ಶೃಂಗಾರ ಮಡುಗಟ್ಟುತ್ತ ವಿಶಿಷ್ಟರೀತಿಯ ಕೃತಿಯಾಗಿ ಮೆರೆಯುತ್ತದೆ. ಹಸಿ ಹಸಿಯೆನಿಸುವ ಚೆಲುವಿಗೆ ಸಾತ್ವಿಕತೆಯ ಬಿಸಿ, ಹದ ಹಾಗೆಂದು ಸಹಜ ಶೃಂಗಾರಕ್ಕೆ ಈ ಕಾವ್ಯದಲ್ಲಿ ಕೊರತೆಯಿದೆ ಎಂದು ಅರ್ಥವಲ್ಲ. ಕನಕದಾಸರು ತಾವು ಕಂಡ ವಿಜಯನಗರದ ಜನಜೀವನದ ಮತ್ತು ಆಳರಸರ ಅಂತಃಪುರದ ಚಿತ್ರಗಳನ್ನು ಕೊಡುವಲ್ಲಿ ಶೃಂಗಾರದ ಸಹಜ ಸಂಗತಿಗಳನ್ನು ನಡೆದ ಉತ್ಸವ ಹಬ್ಬಗಳನ್ನು ವಿಪುಲವಾಗಿ ವರ್ಣಿಸುತ್ತಾರೆ. ದ್ವಾರಕಾಪುರದ ವರ್ಣನೆ ಅಲ್ಲಿಯ ಪೇಟೆಗಳನ್ನು ಕುರಿತು ಕವಿಗೆ ವಿವರಿಸಬೇಕಾಗಿದೆ. ಸೋಮವಿಧಿ, ಸೂರ್ಯವಿಧಿ, ಸುಂದಕಳಸದಂಗಡಿ ಇದೆಲ್ಲ ಸರಿ. ಆದರೆ ಪೇಟೆಯ ಭಾಗದ ಅಂಗಡಿಗಳು ಹೇಗೆ ಒಪ್ಪಿದವೆಂದರೆ, 'ರಾಗರಸದೊಳನವರತ ಕಾದಲರ

ಸಂಭೋಗಕ್ಕೆ ಸಮವಾಗಲೆನುತ ಆಗಮಜ್ಞರು ಹಂಚಿಕೊಟ್ಟಂತೆ.' ಇನ್ನು ಬಿಳಿಯೆಲೆಗಳ ಅಂಗಡಿಗಳು ಶೃಂಗಾರ ಕಲೆಯನ್ನು ಅರಿತವರು. 'ಕಾದಲೆಯರ ಕರೆವ ಸನ್ನೆಯನು ಸಲೆ ಪರಿಗ್ರಹಿಸಿ ಶೋಭಿಸುತ್ತವೆ. ಇನ್ನು ಗಂಧದ ಅಂಗಡಿಗಳು? ಗಂಧವನ್ನು ತೀಡುವ ಹೆಣ್ಣುಗಳು?

'ಸಡಿಲಿದ ಮುಡಿ, ಬೆಮರ್ವನಿಗಳು ತೀವಿ
ತೊಟ್ಟಿಡುವ ಆಸ್ಯ, ಅಲುಗುವ ಕುಚಗಳಿಂದ
ಕಡುಸೊಬಗಂತು ಗಂಧವ ಮಗುಚ್ಚುವ ಹೆಂಗಳಡಸಿದ
ಅಂಗಡಿಗಳೊಪ್ಪಿದುವು'

ಹೂವಿನಂಗಡಿ, ಹೂಮಾಲೆಗಾರ್ತಿಯರು ಸುಗಂಧದಂಗಡಿಗಳು. ರಸದ್ರವ್ಯ ಸಕಲ ಸಂಭರದ ಅಂಗಡಿ, ಚಿತ್ರಗೆಲಸಿ, ಪಾಂಚಾಳ ಬಳೆಗಾರರ ಅಂಗಡಿಗಳು. ಬಳೆಗಾರರ ಅಂಗಡಿಯ ಸೊಗಸೇ ಸೊಗಸು.

ಕಳೆವೆತ್ತ ವಾರನಾರಿಯರ ಕನ್ನಿಕೆಯರ ಮೊಳೆಮೊಲೆಗಳನ್ನು ನೋಡಿ (ಒಳಗೊಳಗೇ ?) ನಗುತ್ತ ಅವರ ಕೋಮಲ ಬೆರಳು ಮೃದು ಹಸ್ತಗಳನ್ನು 'ಚಿಟುಕೊತ್ತಿ' ಬಳೆ ತೊಡಿಸುವ ಬಳೆಗಾರರು 'ಮೊಳೆಮೊಲೆ' 'ಚಿಟುಕುತ್ತ' ಮುಂತಾದ ಪದಗಳ ಶ್ಲೇಷೆ ಅರ್ಥವಾದಷ್ಟೂ ಈ ವರ್ಣನೆಗಳ ರಸಿಕದೃಷ್ಟಿ ಎದೆಮುಟ್ಟುತ್ತದೆ ; ಮನಸಿಗೆ ನಾಟುತ್ತದೆ. ಅದಕ್ಕಾಗಿ ಕವಿ ತನ್ನ ಶ್ರೋತೃ ಮಡದಿಗೆ ಬೇಸರಬರದಿರಲಿ ಎಂದು ಕಬ್ಬಿನ ರಸ ಕುಡಿಸುತ್ತಾನೆ ! 'ಗಣ್ಣುಗೊಳ್ಳದೆ ಬೆಳ್ಗಬ್ಬಿನ ರಸದಂತೆ ಬಣ್ಣಿಸುವೆನು' ಅನ್ನುತ್ತಾನೆ. ಬಿಳಿಯ ಕಬ್ಬಿನ ರಸ ಮಧುರ ಎನ್ನುವುದು ಕವಿಗೆ ಗೊತ್ತು. ಹಾಗೆ ಈ ಕಾವ್ಯದ ಆಸ್ವಾದನೆ ಎಂದು ಸೂಚಿಸುತ್ತಾನೆ. ಶಂಬರಾಸುರನ ವಧೆಯ ಬಳಿಕ ರತಿಮನ್ಮಥರ ವಿವಾಹ ಸಂದರ್ಭದ ಹೋಳೀ ಹಬ್ಬದ ಉಲ್ಲಾಸ. ವಸಂತೋತ್ಸವೆಂದು ಕರೆಯಿಸಿಕೊಳ್ಳುವ ಆ ಪ್ರಸಂಗದ ಜಲಕ್ರೀಡೆ, ಕುಣಿತ ಕೋಲಾಟಗಳು ಸುರುಳಿ ಸುರುಳಿಯಾಗಿ ವರ್ಣಿತಗೊಂಡಿವೆ. 'ಕನಕದಾಸರು ಕಂಡ ವಿಜಯನಗರ' ಕುರಿತು ಈಗಾಗಲೇ ಕೆಲವು ವಿದ್ವಾಂಸರು ಬರೆದಿದ್ದಾರೆ ; ಅದರ ಸೊಬಗು ಎತ್ತಿ ವರ್ಣಿಸಿದ್ದಾರೆ. ಮೋಹನ ತರಂಗಿಣಿಯಲ್ಲಿ ಚಿತ್ರಿತವಾದ ಜನಪದ ಸಂಸ್ಕೃತಿ[1]. ಒಂದು ಪ್ರತ್ಯೇಕ ಅಧ್ಯಯನದ ವಿಷಯವಾಗಿರುವುದರಿಂದ ಅದನ್ನು ಇಲ್ಲಿ ಸೂಚ್ಯವಾಗಿ ಹೇಳಲಾಗಿದೆ.

---

1. ಬೆಟಗೇರಿ ಕೃಷ್ಣಶರ್ಮ 'ಕರ್ನಾಟಕ ಜನ ಜೀವನ' ಪು. ೮೨–೮೪, ಸಮಾಜ ಪುಸ್ತಕಾಲಯ ಧಾರವಾಡ ೧೯೭೧.

ರಾಟಣದುಯ್ಯಾಲೆಯ ಒಂದು ಸೊಬಗಿನ ದೃಶ್ಯ ಮನೋಜ್ಞವಾಗಿದೆ. ತೊಟ್ಟಿಲು ಜೋಕಾಲಿ ಸುತ್ತ ಜೀಕಿದ ವರ್ಣನೆ ಕಣ್ಣಿಗೆ ಕಟ್ಟುತ್ತದೆ. ಕುಚ್ಚು, ಹೂಮಾಲೆಗಳು ಝುಲ್ಲರಿಝುಲ್ಲರಿ–ಜೀಕುದೊಟ್ಟಿಲಲ್ಲಿ ನೋಡುವ ಕಣ್ಮನಗಳಿಗೆ ಚೆಲುವು ತುಂಬುವ ಬಾಲೆಯರು, ಓಕುಳಿ ಆಟ, ಅದರ ಸ್ವಚ್ಛಂದ ವಿಲಾಸ, ಚೆಲುವೆಯರ ಚೆಲ್ಲು ಚೆಲ್ಲು ಆಟ–ಇವೆಲ್ಲ ಲೌಕಿಕ ಶೃಂಗಾರದ ಚಿತ್ರಗಳಾಗಿವೆ.

ಕೃಷ್ಣ, ರುಕ್ಮಿಣಿ ಸತ್ಯಭಾಮೆಯರೊಡಗೂಡಿ ಆಡಿದ ಜಲಕ್ರೀಡೆ ಓಕುಳಿಯಾಟದ ಚಿತ್ರ. ಕೃಷ್ಣ ರುಕ್ಮಿಣಿ ಸತ್ಯಭಾಮೆಯರಿಗೆ 'ನಿಲ್ಲಿ'ಎಂದು ಅವರ ಕೈಲಿದ್ದ ಬಣ್ಣದ ಕೊಡ ಕಸಿದುಕೊಂಡು ಅವರ ತಲೆ ಮೇಲೆ ಸುರುವುತ್ತಾನೆ. ಮೊಲೆ ಮುಡಿಗಳು ತೊಯ್ಯುತ್ತವೆ. ಆಗ ಅವರಿಬ್ಬರು. ಸುಮ್ಮನಿರುತ್ತಾರೆಯೇ?

'ನೀರನು ಬಿಟ್ಟಿರಲಪ್ಪುದೆ ಮತ್ಸ್ಯಾವ
ತಾರನೀನೆಂದು ನೀಱೆಯರು
ರಾರಾಜಿಸುತಿಪ್ಪ ಕುಂಕುಮ ಜಲದೊಳು
ನಾರಾಯಣನನದ್ದಿದರು' ॥

ಕಾಮರತಿಯರಾಡುವ ಓಕುಳಿ ಚಿತ್ರ ಸರಸ ಸಂಭಾಷಣೆಗಳಿಂದ ಸೊಬಗಿಯರ ಬೆಡಗಿನಿಂದ ಮಿಂಚುತ್ತದೆ.

'ಹೊಗರುಗುವಂಗೋಪಾಂಗ ವಕ್ಷದೊಳು ಪೊಂ
ಬೊಗರಿಯಂತಿರ್ಪ ನುಣ್ಮೊಲೆಯ
ದೃಗುಯುಗಳದಿ ನೋಡಿ ಹೆಱಿಂಗಲಾಱದೆ
ಮುಗುಳಂಬನಮರ್ದಪ್ಪಿದನು' ॥

ಆಗ ಪಲ್ಲವಿಸಿದ ಕಲ್ಪವೃಕ್ಷವನ್ನು ಬಳ್ಳಿ ತಬ್ಬಿಕೊಳ್ಳುವ ಹಾಗೆ 'ಸಲ್ಲಲಿತಾಂಗಿ ನುಣ್ದೋಳಿಂದೆ ರಸದಾಳಿವಿಲ್ಲನ ಬಿಗಿಯಪ್ಪುತ್ತಾಳೆ.' ತನಿಮೋಹರಸ ಒಸರುತ್ತ ಹೋಗುವ ತಂಪಾದ ಮೋಹರಸದಿಂದ ಎದೆ ತೊಯ್ಯುವಂತೆ ಒಬ್ಬರೊಬ್ಬರು ಹೊಯ್ದಾಡಿದ ಓಕುಳಿ, ಉತ್ಸವಗಳ ನೂರಾರು ದೃಶ್ಯಗಳು ಓದುಗನನ್ನು ಒಂದು ಕ್ಷಣ ಮೈಮರೆಸುತ್ತವೆ ; ಮೈನವಿರೇಳಿಸುತ್ತವೆ. ಮನ್ಮಥನಿಗೆ ತಾಂಬೂಲ ಸಿದ್ಧಮಾಡುವ ರತಿ ಎಲೆಗೆ ಸುಣ್ಣ ಹಚ್ಚಬೇಕಾಗಿದೆ. ಸುಣ್ಣ ಹಚ್ಚುವಾಗ ಅವಳಿಗೆ ತನ್ನನ್ನು ಕಂಡು ಹೊಟ್ಟೆಕಿಚ್ಚು ಪಡುವ ಹೆಣ್ಣಿನ ನೆನಪಾಗುತ್ತದೆ. ಅವಳ ಕೈಯೊಳಗಿನ ಎಲೆ ಮತ್ಸರಿಸಿದ ಹೆಣ್ಣಿನ ಮೂಗಾಯಿತು. ಕೈಯಲ್ಲಿ ಸುಣ್ಣ ಇದ್ದೇ ಇದೆ.

2. ಮೋಹನ ತರಂಗಿಣಿ ಸಂಧಿ ೧೪ ಪದ್ಯ ೫೩–೫೪. ಸಂ. ಆರ್. ಸಿ. ಹಿರೇಮಠ, ಕ. ವಿ. ವಿದ್ಯಾಲಯ ಪ್ರಕಟನೆ

'ಬಣ್ಣವಾದರೆ ಮೊಗ್ಗಮೊಲೆಯ ಮಾನಿನಿ ತನ್ನ
ಕಣ್ಣಾಟಿ ಕಂಡು ಮಚ್ಚರಿಪ
ಹೆಣ್ಣಾವಳವಳ ಮೂಗಿನ ಮೇಲೆ ಬರೆವಂತೆ
ಸುಣ್ಣವನೆಲೆಗೆ ಪೂಸಿದುಳು' ॥ (ಸಂ. ೧೬. ಪ. ೩೪)

ಅನಿರುದ್ಧನ ಸೌಂದರ್ಯ ಕಂಡು ವಿಸ್ಮಿತರಾದ ಕೋಮಲೆಯರ ಚಿತ್ರಣ ಕನಕದಾಸರ ಶೃಂಗಾರ ವಿಶೇಷವಾಗಿದೆ.

ಅನಿರುದ್ಧನ ಚೆಲುವನ್ನು ಕಣ್ತುಂಬ ನೋಡಿದ ಲಲನೆಯರಿಗೆ ಮನವನು 'ತುಂಡಾಗಿಸುವ' ಈ ಜಾಣನಾರು ಎನ್ನುವ ವಿಸ್ಮಯ.

'ನೊಸಲ ಕತ್ತುರಿ ಬಾಗಿದ ಪುರ್ಬುತಾವರೆ
ಯೆಸಱನೇಱಿಪ ನಿಡುಗಣ್ಣು
ಪಸಂಪತಿಲಪುಷ್ಪನಾಸಿಕ ಸತ್ಕರ್ಣ
ಪೊಸರೂವ ನೋಡಿ ಹಿಗ್ಗಿದರು' ॥ (ಸಂ. ೧೮ ಪು. ೨೭)

ಈ ಸುಂದರಾಂಗನನ್ನು ಕೂಡದಿದ್ದರೆ ಹೆಣ್ಣಾಗಿ ಹುಟ್ಟಿದರೂ ಏನು ಸಾರ್ಥಕ ? ಅವನನ್ನು ತಮ್ಮ ಪೆರ್ಮೊಲೆಗೆ ಅಪ್ಪಿಕೊಳ್ಳದಿದ್ದರೆ' ...ಏರ್ದೆಗಡರ್ಚದ ಮೊಗ್ಗೆ ಮೊಲೆಗಳು ಮೆಕ್ಕೆಯ ಕಾಯ್ಗಳು' ಎಂದು ಬೆಂದರು. ಹೀಗೆ ಹೆಜ್ಜೆಗೆ ಕಾತರತಳೆವ ಭಾವಗಳಿಂದ ಕನವರಿಸುವ ಹೆಣ್ಣುಗಳ ಉತ್ಕಟತೆಯ ಚಿತ್ರಣಗಳು ಸಾಲುಗಟ್ಟಿ ಹಿಂಡುಗಟ್ಟಿ ಬರುತ್ತವೆ.

ಒಂದೆಡೆ ಬರುವ ಮದ್ಯಪಾನ ಗೋಷ್ಠಿಯಂತೂ ಈ ಕಾವ್ಯದ ಒಂದು ವಿಶಿಷ್ಟ ಸನ್ನಿವೇಶವಾಗಿದೆ. ಪಾನದ ಸೊಕ್ಕು ಮತ್ತು ಯೌವನದ ಮದ ಸೂರೆಗೊಳ್ಳುವ ಚಿತ್ರಗಳು ತೀರ ವಾಚ್ಯದ ಮಟ್ಟಕ್ಕಿಳಿದು ಕಾವ್ಯಬಂಧದ ತೂಕವನ್ನು ತಗ್ಗಿಸುವಂತಾಗುತ್ತದೆ.

ಅನಿರುದ್ಧನ ಬೇಟೆಯ ವರ್ಣನೆಯ ಪ್ರಸಂಗದಲ್ಲಿ ಕವಿ ತೋರುವ ಬೇಡರ ನಡವಳಿಕೆ ತುಂಬ ರಸವತ್ತಾಗಿದೆ ; ಅನಿರುದ್ಧ ಬೇಟೆಯಿಂದ ಬಳಲಿ ಅಡವಿಯ ಒಂದೆಡೆ ವಿಶ್ರಮಿಸುತ್ತಾನೆ. ಆಗ ತಿಣ್ಣ ಜವ್ವನದ ಚಂಚಲೆಯರು ಮಧುರ ಸ್ವರದಿಂದ ಸುವ್ವಾಲೆ ಹಾಡುತ್ತಾರೆ.

'ಸುವ್ವಿ ಪೂರಿತಕಾಮ ಸುವ್ವಿ ಸದ್ಗುಣಧಾಮ
ಸುವ್ವಿ ಸುರೇಂದ್ರಲಲಾಮ.
ಸುವ್ವಿ ಸರ್ವರ ಭೌಮ ಸುವ್ವಿ ರಾಘವರಾಮ
ಸುವ್ವಿ ಸಾಸಿರಪುಣ್ಯನಾಮ

ನಿಗಮದುರ್ಲಭಸುವ್ವಿ ಸುವ್ವಿ ನಿರ್ಜತಾರ್ಚಿತ ಸುವ್ವಿ
ಯಘಹರಭವದೂರ ಸುವ್ವಿ
ಗಗನಚರಣ ಸುವ್ವಿ ಗರುಡಗಮನ ಸುವ್ವಿ
ಜಗದಧಿಪತಿ ಕೃಷ್ಣ ಸುವ್ವಿ' ॥

ಮಂದರಧರ ಸುವ್ವಿ ಮಾಮನೋಹರ ಸುವ್ವಿ
ವೃಂದಾವನವಿಭು ಸುವ್ವಿ
ನಂದನಂದನ ಸುವ್ವಿ ನತಜನಹಿತ ಸುವ್ವಿ
ಯೆಂದವರೊಲಿದು ಪಾಡಿದರು' ॥

ಕವಿ ಕೆಲವೊಮ್ಮೆ ತನಗರಿಯದಂತೆ ತನ್ನ ಕೃತಿಯ ಪರಿಸರ ಪಾತ್ರಗಳೊಂದಿಗೆ ಬೆರೆತುಹೋಗುತ್ತಾನೆ. ಇಲ್ಲಿ ಸುವ್ವಿ ಹಾಡುವ ಬೇಡತಿಯರು ಯಾರು ? ಪೌರಾಣಿಕ ಕಥಾನಕದ ಈ ಸಂದರ್ಭದಲ್ಲಿ ಸುವ್ವಾಲೆ ಹಾಡಿದವರು ಕವಿ ಕನಕದಾಸರೇ ! ಬೇಡತಿ–ಬೆಂಬೆತಿಯರು ಪ್ರತೀಕ ಮಾತ್ರ.

೬. ಮೋಹನ ತರಂಗಿಣಿಯಲ್ಲಿ ನಿರೂಪಿತವಾಗಿರುವ ಜೀವನದ ವಿವಿಧ ಪ್ರಸಂಗಗಳಲ್ಲಿ ಶೃಂಗಾರ ಹಾಸುಹೊಕ್ಕಾಗಿದೆ. ಆದರೆ ಅದರ ವೈಶಿಷ್ಟ್ಯದ ಮತ್ತೊಂದು ಆಯಾಮವೆಂದರೆ ಅದರಲ್ಲಿ ಬರುವ ಕೋಮಲ ಅಂತಃಕರಣಪೂರಿತ ಮಾನವೀಯ ಸಂಬಂಧಗಳಿಂದ ಆವಿಷ್ಕಾರಗೊಳ್ಳುವ ಮಧುರ ಸ್ನೇಹ ವಾತ್ಸಲ್ಯ ಪ್ರೀತಿಗಳ ನಿಗೂಢತೆ.

ಉಷಾ ಅನಿರುದ್ಧರ ಪ್ರಣಯ ಅಪ್ಪಟ ಜನಪದ ಕಥೆಯೊಂದರಲ್ಲಿ ನೆರವೇರಬಹುದಾದ ಪ್ರಣಯ. ಇವರಿಬ್ಬರನ್ನು ಒಂದುಗೂಡಿಸಲು ಚಿತ್ರಲೇಖೆ ಮಾಡುವ ಪ್ರಯತ್ನಗಳಿಗೆ ಲೆಕ್ಕವಿಲ್ಲ. ತನ್ನ ಪ್ರಾಣವನ್ನು ಪಣಕ್ಕಿಟ್ಟು ತನ್ನ ಗೆಳತಿ ಉಷೆಯ ಜೀವವಾಂಛೆಯನ್ನು ಸಫಲಗೊಳಿಸುತ್ತಾಳೆ.

ಉಷಾ ಅನಿರುದ್ಧ ದಂಪತಿಗಳು ಕಾಮೋನ್ಮಾದದ ಸುಸಿಲಪ್ಪುಗೆಯಲ್ಲಿರುತ್ತಾರೆ. ಏಳು ಜನ್ಮಗಳಲ್ಲೂ ಬಡತನದ ಬವಣೆಯಿಂದ ಬಳಲಿದವಗೆ ಚಿಂತಾಮಣಿ ದೊರೆತಂತೆ ಉಷೆ ದೊರಕಿದಳು. ಅವಳ 'ಚೆಂದುಟಿಯೀಂಟಿ, ಅಮರ್ದಪ್ಪಿ' ಪರಸ್ಪರ ಭೋಗ ವಿಲಾಸದಲ್ಲಿ ಪರವಶರಾಗಿರುತ್ತಾರೆ.

ಆಗ, ತಮ್ಮ ಈ ಅಪರಿಮಿತ ಸುಖಕ್ಕೆ ಅಪೂರ್ವ ಪ್ರಣಯ ಸಂಗಮಕ್ಕೆ

ಕಾರಣಳಾದ ತನ್ನ ಪ್ರಾಣ ಸ್ನೇಹಿತೆಯನ್ನು ಉಷೆ ನೆನಸಿಕೊಳ್ಳುತ್ತಾಳೆ ; ಅನಿರುದ್ಧನೂ ಸ್ಮರಿಸಿಕೊಳ್ಳುತ್ತಾನೆ.

"ಉನ್ನತ–ಗಗನ ವೀಧಿಯಲಿ ಮಾತೃಕೆ ಕೊಂಡು
ಬೆನ್ನೊಳು ಶಿಶುವ ತರ್ಪಂತೆ
ನನ್ನಯ ಭಾರಭಾರವ ಹೊತ್ತು ತಂದೀಗ
ನಿನ್ನೊಳು ಸೊಗವಡಿಸಿದಳು" ॥

ಆದ್ದರಿಂದ ಆಕೆಯದು ನಮ್ಮಿಂದ ತೀರಿಸಲಾಗದ ಋಣ. 'ಮುಂದೆ ಹುಟ್ಟುವ ಮಕ್ಕಳಿಗೆ ಅವಳ ಹೆಸರಿಡೋಣ'

'ಬೇಕೆನೆ ಪೆತ್ತ ಮಕ್ಕಳ ಪೆಸರ್ಗುಡು ಚಿತ್ರ
ಲೇಖೆಯೆಂದನಿರುದ್ಧ ನುಡಿದ'

ಶೃಂಗಾರದ ದಟ್ಟನೆಯ್ಗೆಯಲ್ಲಿ ವಾತ್ಸಲ್ಯದ ಸ್ನೇಹದ ಎಂಥ ಸ್ವರ್ಣದೆಳೆ! ಅದೆಷ್ಟು ಅದರ ಉಜ್ವಲಕಾಂತಿ !

ಶೃಂಗಾರವನ್ನು ಭಕ್ತಿಗೆ ಸಾಧನ ಮಾಡಿಕೊಂಡ ಮೋಹನ ತರಂಗಿಣಿಯನ್ನು ಬೆಟಗೇರಿ ಕೃಷ್ಣಶರ್ಮರು 'ಜಾನಪದ ಮಹಾಕಾವ್ಯ' ಎಂದು ಕರೆದರು. ಮೋಹನ ತರಂಗಿಣಿಯ ಕಾವ್ಯಶೈಲಿ, ಜನಪದಹಾಡು ಅಲ್ಲಿಂದ ಹಾಡುಗಬ್ಬಗಳ ಪರಂಪರೆ, ಸಾಂಗತ್ಯದ ವೈಶಿಷ್ಟ್ಯ ಜನಪದ ಸಂಸ್ಕೃತಿಯ ಹಲವು ಹತ್ತಾರು ಮುಖಗಳು ಹೀಗೆ ಈ ಕಾವ್ಯವನ್ನು ಅಧ್ಯಯನ ಮಾಡುವ ಒಂದು ಮಹತ್ವದ ಆಯಾಮ ಇಂದಿಗೂ ಅನಾವರಣಗೊಳ್ಳಲು ಕಾದಿದೆ. ಶೃಂಗಾರ ಪರಿಕಲ್ಪನೆಯ ವಿವಿಧ ಸ್ತರಗಳನ್ನು ಸಂಗತಗೊಳಿಸಿದ ಮೋಹನ ತರಂಗಿಣಿ, ಉದಾತ್ತಮಾನವ ಕಾವ್ಯ; ದೇವಮಾನವ ಸಂಬಂಧಗಳನ್ನು ಪ್ರೇಮ ಭಕ್ತಿಗಳಿಂದ ಸಮರಸಗೊಳಿಸಿದ ವಿರಳಕಾವ್ಯ.

# ಮೋಹನ ತರಂಗಿಣಿಯ ಕಾವ್ಯಮೌಲ್ಯ

**ಡಾ. ಗುರುಪಾದ ಮರಿಗುದ್ದಿ**

ಪ್ರಾಚೀನ ಕನ್ನಡ ಸಾಹಿತ್ಯವಾಹಿನಿಯ ಪಥವನ್ನು ಗತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಹಲವಾರು ಆಶ್ಚರ್ಯಕರವಾದ ಅಂಶಗಳು ಗಮನ ಸೆಳೆಯುತ್ತವೆ. ಹತ್ತನೆಯ ಶತಮಾನಕ್ಕೆ ಹಿಂದಿನ ಕಾವ್ಯಕೃತಿಗಳು ಲಭ್ಯವಾಗದಿದ್ದರೂ, ಉಪಲಬ್ಧ ಪ್ರಥಮ ಕೃತಿಯೆ ಲಾಕ್ಷಣಿಕ ಗ್ರಂಥವಾಗಿರುವುದರಿಂದ ತತ್ಪೂರ್ವದಲ್ಲಿ ಹುಲುಸಾದ ಸಾಹಿತ್ಯಕೃಷಿ ನಡೆದಿರಬೇಕೆಂಬ ವಾದವನ್ನು ಸುಲಭದಲ್ಲಿ ತಳ್ಳಿಹಾಕುವಂತಿಲ್ಲ. ಪಂಪ ರನ್ನಾದಿಗಳ ಕಾವ್ಯಮಾರ್ಗ 'ಲೌಕಿಕ' ಮತ್ತು 'ಅಲೌಕಿಕ' ಎಂದು ಗುರುತಿಸಲಾದ ಸಾಮಾಜಿಕ ಮತ್ತು ಧಾರ್ಮಿಕ ಸ್ವರೂಪದ್ದು. ಈ ಕಾವ್ಯಮಾರ್ಗಕ್ಕೆ ಹೊಸ ಆಯಾಮ ಮೂಡಿದ್ದು, ಹೊಸ ಪ್ರಯೋಗಸಾಧ್ಯತೆಗಳು ಕಾಣಿಸಿಕೊಂಡದ್ದು ಹನ್ನೆರಡನೆಯ ಶತಮಾನದಲ್ಲಿ–ಎಂದರೆ ಅನುಭಾವ ಇಲ್ಲವೆ ಭಕ್ತಿಸಾಹಿತ್ಯದ ಸೇರ್ಪಡೆಯಿಂದ. ಮುಂದೆ ದಾಸರು ಇದೇ ಮಾರ್ಗದ ಇನ್ನೊಂದು ಕವಲಾಗಿ ಬರುತ್ತಾರೆ. ವಚನಕಾರರು ಮತ್ತು ದಾಸರು ಕನ್ನಡ ಸಾಹಿತ್ಯ ಸ್ವರೂಪವನ್ನು ಮಹತ್ತರವಾಗಿ ಮಾರ್ಪಡಿಸಿದರು. ಕಾವ್ಯ ಲೌಕಿಕ ಮತ್ತು ಅಲೌಕಿಕ ಎಂದು ಭಿನ್ನ ಭಿನ್ನವಾಗಿ ಅಭಿವ್ಯಕ್ತಗೊಳ್ಳುವುದು ನಿಂತು ಹೋಗಿ, ಈ ಎರಡೂ ಆಶಯಗಳ ಏಕಮಾರ್ಗ ಆರಂಭಗೊಂಡಿತು. ಇದೇ ಹಂತದಲ್ಲಿ ಜನಪರ ಧೋರಣೆಗಳು ಕಾಣಿಸಿಕೊಂಡವು.

ಮೊದಮೊದಲು ಕಾವ್ಯವು ಜನಸಾಮಾನ್ಯರನ್ನು ಗಮನದಲ್ಲಿಟ್ಟುಕೊಂಡಿರಲಿಲ್ಲ. ಬದಲಾಗಿ ಶಾಸ್ತ್ರಕೋವಿದರನ್ನು, ವಿದ್ವಾಂಸರನ್ನು, ಕಲಾಭಿಜ್ಞರನ್ನು ಒಪ್ಪಿಸಲು, ರಾಜಾಧಿರಾಜರನ್ನು ಮೆಚ್ಚಿಸಲು ಯತ್ನಿಸುತ್ತಿತ್ತು. ಮುಂದೆ ಇಷ್ಟರಾಜನಿಗಿಂತ ಇಷ್ಟದೈವವನ್ನು ಕುರಿತು ಕಾವ್ಯ ರಚಿಸಿ ಹೊಸ ಪರಂಪರೆಯೊಂದನ್ನು ಕವಿಗಳು ಹುಟ್ಟು ಹಾಕಿದರು. 'ಜನ ಬದುಕಲೆಂಬ' ಕಾರಣಕ್ಕೆ ಕಾವ್ಯರಚನೆ ಮೊದಲಾದದ್ದು ಆ ಸಮಯದಲ್ಲಿ. ಇದರಿಂದಾಗಿ ಕಾವ್ಯದ ವಸ್ತು, ಛಂದಸ್ಸು, ರೀತಿಗಳೆಲ್ಲ ಬದಲಾದವು. ಸಂಸ್ಕೃತ ಮಮತೆಯಿಂದ ಕನ್ನಡ

ಮಮತೆಯತ್ತ, ಚಂಪೂವಿನಿಂದ ಷಟ್ಪದಿ-ಸಾಂಗತ್ಯದತ್ತ, ಪಾಂಡಿತ್ಯ ಮಮತೆಯಿಂದ ಹಾಡುಗಬ್ಬದತ್ತ, ವ್ಯಷ್ಟಿಯಿಂದ ಸಮಷ್ಟಿಯತ್ತ ಕನ್ನಡ ಕಾವ್ಯ ಹೊರಳಿಕೊಂಡ ಚರಿತ್ರೆಯು ಕಾವ್ಯ ಜನಸಂಮುಖವಾಗುತ್ತ ಬಂದುದರ ಚರಿತ್ರೆಯೇ ಆಗಿದೆ.

ಕಾವ್ಯವನ್ನು ಜನಸಂಮುಖವಾಗಿಸಿದವರಲ್ಲಿ ಕನಕದಾಸರಿಗೆ ವಿಶಿಷ್ಟ ಸ್ಥಾನವಿದೆ. ಷಟ್ಪದಿ, ಸಾಂಗತ್ಯಗಳಂಥ ಸರಳವಾದ ನುಡಿಗಟ್ಟುಗಳಲ್ಲಿ ಕಾವ್ಯರಚಿಸಿ, ಜನಮಾತಿಗೆ ಸಮೀಪದ ಶೈಲಿಯನ್ನು ಅಳವಡಿಸಿಕೊಂಡು, 'ವಾಕ್'ಗೆ ಗೇಯತೆಯ ಮಾಧುರ್ಯ ನೀಡಿ ಕವಿಯಾಗಿಯೂ ಕೀರ್ತನಕಾರರಾಗಿಯೂ ಕನಕದಾಸರು ಪ್ರಸಿದ್ಧರು. ಹರಿದಾಸರಲ್ಲಿ ಕನಕದಾಸರ ಕೀರ್ತನೆಗಳಿಗೆ ಭಾವರಮ್ಯತೆಯಾಗಲಿ, ಕಲ್ಪನಾವಿಲಾಸವಾಗಲಿ ಅಧಿತ ; ಮೂಲತಃ ಕವಿ ಮನೋಧರ್ಮವಲ್ಲದೆ, ಕಾವ್ಯಕೃತಿಗಳಲ್ಲಿ ಹರಿಭಕ್ತಿ ಎದ್ದು ಕಂಡರೂ ಯಾವುದೇ ಮತದ ಪ್ರಚಾರವಾಗಲಿ, ಅನ್ಯಮತದ ಖಂಡನೆಯಾಗಲಿ ಕಾಣಿಸದು. ಸುಪ್ರಸಿದ್ಧ ನಳ-ದಮಯಂತಿಯರ ಕಥಾನಕವನ್ನು ಕನ್ನಡಕ್ಕೆ ತಂದು, 'ರಾಮಧಾನ್ಯ ಚರಿತೆ' ಯಂಥ ವರ್ಗ ಸಂಘರ್ಷದ ಪ್ರತಿಮಾತ್ಮಕ ಕಾವ್ಯ ನೀಡಿದ ಕನಕದಾಸರು 'ಮೋಹನ ತರಂಗಿಣಿ'ಯಂಥ ಬೃಹತ್ ಕಾವ್ಯರಚಿಸಿ ಸಾಂಗತ್ಯ ಕವಿಗಳಲ್ಲಿ ಗಮನಾರ್ಹರಾಗಿದ್ದಾರೆ.

'ಮೋಹನ ತರಂಗಿಣಿ ೪೨ ಸಂಧಿಗಳ ಸುಮಾರು ೨೮೦೦ ಸಾಂಗತ್ಯ ಪದ್ಯಗಳ ವಿಸ್ತಾರವಾದ ಕಾವ್ಯ. ಪೀಠಿಕಾ ಪದ್ಯಗಳಲ್ಲಿ ಕಾಗಿನೆಲೆಯ ರಂಗ, ರಾಮಾನುಜ ಮುನಿ, ತಾತಾಚಾರ್ಯ, ಶ್ರೀಕೃಷ್ಣ, ಕಾಶಿಯ ವಿಶ್ವನಾಥ, ಬ್ರಹ್ಮ-ಸರಸ್ವತಿ, ಗಿರಿಜೆ, ಗಣಪತಿ, ಗರುಡ, ಆದಿಶೇಷ, ಮುನಿಗಳು, ಕುಮಾರವಾಲ್ಮೀಕಿ, ಕುಮಾರವ್ಯಾಸರುಗಳನ್ನು ಕವಿ ನೆನೆದು ನಮಸ್ಕರಿಸುತ್ತಾನೆ. ಮುಂದೆ ತನ್ನಯ ಕಾವ್ಯದ ಬಗ್ಗೆ ಸಾಂಪ್ರದಾಯಿಕವಾಗಿ ಕೆಲವು ಪದ್ಯಗಳಲ್ಲಿ ವಿವರಿಸುವನು. ಪ್ರತಿ-ಸಂಧಿಯ ಮೊದಲು ಮತ್ತು ಕೊನೆಗೆ ಕಥಾನಕ ದಟ್ಟವಾಗಿಯೂ, ನಡುವೆ ವರ್ಣನಾಂಶ ಗಾಢವಾಗಿಯೂ ಬರುತ್ತವೆ. ಕವಿಗೆ ತನ್ನಯ ಕೃತಿಯು 'ಇನಿವಾತುಗಳ ಸತ್ವದ ಬಂಧ ವ್ಯಂಗ್ಯೋಕ್ತಿ ಧ್ವನಿಯಾರ್ಥ ಗೌರವದಿಂದೆ ತನಿರಸವಡೆದ' ಕೃತಿಯೆಂಬ ಅಭಿಮಾನ, ವಿಶ್ವಾಸಗಳಿವೆ. ಈ ಪದಬಂಧ ಉಕ್ತಿಗಳೆಲ್ಲ ಕಾವ್ಯದಲ್ಲಿ ಹೇಗೆ ಬಂದಿವೆ ಮತ್ತು ಕನಕದಾಸರ ಕಾವ್ಯಶಕ್ತಿ ಇವುಗಳನ್ನು ಹೇಗೆ ಸೃಜಿಸಿದೆ ಎಂಬುದಕ್ಕೆ ಆ ಕೃತಿಯನ್ನು ವಿವರವಾಗಿ ಪರಿಶೀಲಿಸ ಬೇಕಾದುದಗತ್ಯ. ಪ್ರಸ್ತುತ ಇಲ್ಲಿ ಆ ಕೃತಿಯ ಕೆಲವು ಮುಖಗಳನ್ನು ಅಧ್ಯಯನಕ್ಕೆ ಎತ್ತಿಕೊಂಡು ಕಾವ್ಯ ಮೌಲ್ಯವನ್ನು ಕಾಣಲೆತ್ನಿಸಿದೆ.

**ಕಥಾ ಪೋಷಣೆ**

ಕೃಷ್ಣ ರುಕ್ಮಿಣಿಯರು ವೈಭವದಿಂದ ಆಸ್ಥಾನದಲ್ಲಿ ಸುಖಾಸೀನರಾಗಿರಲು, ಪಕ್ಷಿಯೊಂದು ತನ್ನ ಮರಿಗೆ ಪ್ರೀತಿಯಿಂದ ಗುಟುಕು ಕೊಡುವುದನ್ನು ಕಾಣುತ್ತಾರೆ. ಇದು ರುಕ್ಮಿಣಿಯ ಮನಸ್ಸಿನ ಮೇಲೆ ಪ್ರಭಾವ ಬೀರುತ್ತದೆ. ಅವಳಿಗೆ ಪುತ್ರಬಯಕೆ ಕಾಡುತ್ತದೆ. ಕೃಷ್ಣನಿಂದ ಪ್ರದ್ಯುಮ್ನ ಎಂಬ ಸುಂದರವಾದ ಗಂಡು ಮಗುವನ್ನು ತುಸುದಿನಗಳಲ್ಲಿ ಪಡೆಯುತ್ತಾಳೆ. ದೇವತೆಗಳ ಅಭೀಪ್ಸೆಯಂತೆ ಉಗ್ರ ತಪಸ್ಸಿನಲ್ಲಿದ್ದ ಶಿವನನ್ನು ಎಚ್ಚರಿಸಲೆಂದು ಪ್ರಯತ್ನಿಸಿ, ಶಿವನ ಕೋಪಕ್ಕೆ ಸಿಕ್ಕು ಸುಟ್ಟು ನಾಶವಾದ ಮನ್ಮಥನೇ ಪ್ರದ್ಯುಮ್ನನಾಗಿ ಜನಿಸಿರುತ್ತಾನೆ. ಒಂದು ರಾತ್ರಿ ಆ ಮಗುವನ್ನು ಶಂಬರಾಸುರನೆಂಬ ರಕ್ಕಸನು ಅಪಹರಿಸಿ ಕೊಂಡೊಯ್ದು ಕೊಲ್ಲಲು ಮನಸ್ಸುಬಾರದೆ ಸಮುದ್ರದಲ್ಲಿ ಬೀಸಾಡುವನು. ಒಂದು ಮೀನು ಆ ಮಗುವನ್ನು ನುಂಗಿರುತ್ತದೆ. ಮೀನುಗಾರರು ಬಲೆಯಲ್ಲಿ ಸಿಲುಕುವ ಆ ಮೀನನ್ನು ಶಂಬರಾಸುರನಿಗೆ ಕಾಣಿಕೆಯಾಗಿ ನೀಡುವರು. ಮನ್ಮಥನನ್ನು ಕಳೆದುಕೊಂಡಿದ್ದ ರತಿಯು ಆಗ ಶಂಬರಾಸುರನಲ್ಲಿ ಆಶ್ರಯ ಪಡೆದು ಬಾಣಸಿಗಳಾಗಿರುತ್ತಾಳೆ. ಮೀನನ್ನು ಕೊಯ್ದು ಮಗುವನ್ನು ಕಂಡು ಗುಪ್ತವಾಗಿ ಬೆಳೆಸುತ್ತಾಳೆ. ಮುಂದೆ ನಾರದರಿಂದ ಶತ್ರುವಾದ ಪ್ರದ್ಯುಮ್ನ ತನ್ನರಮನೆಯಲ್ಲಿ ಬೆಳೆಯುತ್ತಿರುವ ಸಂಗತಿಯನ್ನು ಅರಿಯುವ ಶಂಬರಾಸುರನು ಯುದ್ಧಮಾಡಿ ಹತನಾಗುತ್ತಾನೆ. ತರುವಾಯ ಪ್ರದ್ಯುಮ್ನ–ರತಿಯರು ದ್ವಾರಕೆಗೆ ಬಂದು ನೆಲೆಸುತ್ತಾರೆ. ಕಾಲಾಂತರದಲ್ಲಿ ಅವರಿಗೆ ಅನಿರುದ್ಧನೆಂಬ ಮಗ ಜನಿಸುತ್ತಾನೆ. ಮಹಾಶಿವಭಕ್ತನೂ ಶೋಣಿತಪುರದರಸನೂ ಆದ ಬಾಣಾಸುರನಿಗೆ ಉಷೆ ಎಂಬ ದಿವ್ಯಸುಂದರಿಯಾದ ಮಗಳಿರುತ್ತಾಳೆ. ಬೆಳೆದು ದೊಡ್ಡವರಾಗಿ ಅನಿರುದ್ಧ–ಉಷೆಯರು ಪರಸ್ಪರ ಪ್ರೀತಿಸಿ ಗಾಂಧರ್ವ ರೀತಿಯ ವಿವಾಹವಾಗುತ್ತಾರೆ. ನಾರದರಿಂದ ಈ ವಿಚಾರವನ್ನು ತಿಳಿದು ಕುಪಿತನಾಗುವ ಬಾಣಾಸುರ ಅನಿರುದ್ಧನನ್ನು ಬಂಧಿಸಿ ಸೆರೆಮನೆಯಲ್ಲಿಡುವನು. ಪರಿಣಾಮವಾಗಿ ಕೃಷ್ಣನೊಂದಿಗೆ ಘನಘೋರವಾದ ಯುದ್ಧ ಸಂಭವಿಸುತ್ತದೆ. ಶಿವನ ಕೃಪೆಯಿಂದ ಬಾಣಾಸುರನು ಕೈಲಾಸಕ್ಕೆ ಹೋಗುವನು. ಅನಿರುದ್ಧ–ಉಷೆಯರ ಪುನಃ ಸಮಾಗಮವಾಗಿ ಎಲ್ಲರೂ ದ್ವಾರಕೆಗೆ ಬಂದು ಸುಖವಾಗಿ ಕಾಲಕಳೆಯುತ್ತಾರೆ. ಇದು ತುಂಬ ಸ್ಥೂಲವಾಗಿ ಕಾವ್ಯದ ಕಥೆ.

ಒಂದು ರೀತಿಯಾಗಿ ಕಂಡರೆ ಈ ಕಥಾನಕದಲ್ಲಿ ಮೂರು ವೃತ್ತಾಂತಗಳು ಸೇರಿಕೊಂಡಿವೆ.

೧. ಕೃಷ್ಣ–ರುಕ್ಮಿಣಿಯರ ವೃತ್ತಾಂತ
(ಕಾಮದಹನದ ಕಥೆ)
೨. ಪ್ರದ್ಯುಮ್ನ–ರತಿಯರ ವೃತ್ತಾಂತ
(ಶಂಬರಾಸುರ ಸಂಹಾರದ ಕಥೆ)
೩. ಅನಿರುದ್ಧ–ಉಷೆಯರ ವೃತ್ತಾಂತ
(ಬಾಣಾಸುರ ಸಂಹಾರದ ಕಥೆ)

ಮೂರು ಪ್ರಣಯ ವೃತ್ತಾಂತಗಳೊಂದಿಗೆ ಮೂರು ಸಂಹಾರದ ಕಥೆಗಳೂ ಸೇರಿಕೊಂಡಿವೆ ! ಮುಖ್ಯನದಿಗಳಿಗೆ ಸೇರಿಕೊಳ್ಳುವ ಉಪನದಿಗಳಂತೆ ಸಂಹಾರ ಕಥೆಗಳು ಕಾಣಿಸುತ್ತವೆ. ಮುಖ್ಯವಾದ ಮೂರು ವೃತ್ತಾಂತಗಳು ಒಂದಕ್ಕೊಂದು ಸಂಬಂಧ ಪಡೆದಿವೆಯಾದರೂ ಅವು ಒಂದರನಂತರ ಮತ್ತೊಂದು ಪ್ರತ್ಯೇಕವಾಗಿಯೇ ಪೋಷಣೆ ಪಡೆಯುತ್ತವೆ. ಹಲವಾರು ಮೂಲಗಳಿಂದ ಕಥೆಯನ್ನು ಎತ್ತಿಕೊಂಡು ಇಲ್ಲಿ ಸಂಯೋಜಿಸಿರುವುದರಿಂದ ಅವುಗಳ ಜೋಡಣೆ ಸ್ಪಷ್ಟವಾಗಿ ಕಾಣುತ್ತದೆ.

ಪಂಪ ರನ್ನ ದುರ್ಗಸಿಂಹ ನಯಸೇನರಂಥ ಕವಿಗಳು ತಮ್ಮ ಕೃತಿಗಳಿಗೆ ಸಂಸ್ಕೃತ ಇಲ್ಲವೆ ಪ್ರಾಕೃತಗಳಲ್ಲಿಯ ವಸ್ತುವನ್ನು ಎತ್ತಿಕೊಂಡಿದ್ದಾರೆ. ಸ್ವತಂತ್ರದೃಷ್ಟಿ ತೋರಿ ಮೂಲದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಂಡರೂ ಆಕರಗ್ರಂಥ ಒಂದೇಯಾಗಿರುತ್ತಿತ್ತು (?–ಸಂ.) ಆ ಕಾವ್ಯಗಳ ಕಥಾನಕವನ್ನು ಒಂದೆರಡು ವಾಕ್ಯಗಳಲ್ಲಿ ಹಿಡಿದಿಡಬಹುದು, ಸುಲಭವಾಗಿ ಸಂಗ್ರಹಿಸಬಹುದು. ಕನಕದಾಸರ 'ಮೋಹನ ತರಂಗಿಣಿ'ಗೆ ಮಹಾಭಾರತ, ಭಾಗವತ, ಹರಿವಂಶ, ಸ್ಕಂದಪುರಾಣ, ವಿಷ್ಣುಪುರಾಣಗಳು ಆಕರಗಳಾಗಿವೆ. ಜೊತೆಗೆ ಜನಪದದಲ್ಲಿ ಪ್ರಚಲಿತವಿದ್ದ ಸಮಕಾಲೀನ ಕಥೆ, ಹಾಡು, ಖಂಡಕಾವ್ಯ, ಕಥನಗೀತೆಗಳೂ ಪೂರಕವಾಗಿ ಬಂದು ಪ್ರಭಾವ ಬೀರಿರಬೇಕು. ಹಲವು ಮೂಲಗಳಿಂದ ಆಯ್ದುಕೊಂಡ ಕಥೆಯನ್ನು ಕನಕದಾಸರು ತಮ್ಮ ಪ್ರತಿಭಾಶಕ್ತಿಯಿಂದ ಬಣ್ಣವಿಟ್ಟು ನೆಯ್ದಿದ್ದಾರೆ. ಸ್ವತಂತ್ರವಾದ ಮೂರು ಕೃತಿಗಳಾಗಬಹುದಾದದ್ದನ್ನು ಒಂದೇ ಪಾತ್ರದಲ್ಲಿ ತುಂಬಿಕೊಟ್ಟಿದ್ದಾರೆ. ಹಾಗಾಗಿ ಎಲ್ಲವೂ ಒಂದು ಅಳತೆಯಲ್ಲಿ, ಹಿಡಿತದಲ್ಲಿ ದೊರೆಯಲು ಸಾಧ್ಯವಾಗಿದೆ.

ಮೂರು ವೃತ್ತಾಂತಗಳ ವಿಸ್ತಾರವಾದ ಇಂಥ ಕಥಾನಕವೂ ಕಾವ್ಯದಲ್ಲಿ ತೀರ ತೆಳುವಾಗಿ ಕಾಣಿಸುತ್ತದೆ. ವರ್ಣನೆ ಬಣ್ಣನೆ ಅಲಂಕಾರ ಸ್ತುತಿ–ವಿವರಗಳ ಬಾಹುಳ್ಯದಲ್ಲಿ, ಮೇಲಾಟದಲ್ಲಿ ಕಥೆ ಹಿಂದಕ್ಕುಳಿಯುತ್ತದೆ. ವರ್ಣನೆಗಳ ಮೇಲೆ

ವರ್ಣನೆಗಳು ಸಾಲು ಸಾಲಾಗಿ ಬಂದುಬಿಡುತ್ತವೆ. ಸಹೃದಯರು ಅವುಗಳ ಮೋಹಕತೆಗೆ ಮನಸೋತು ಮೈಮರೆಯುವಷ್ಟರಲ್ಲಿ ಕಥೆಯ ಜಾಡು ಕಾಣಿಸಿಕೊಂಡು ಎಚ್ಚರಿಸುತ್ತದೆ. ಕಥಾಪೋಷಣೆಯಲ್ಲಿ ಕನಕದಾಸರು ಅನುಸರಿಸಿದ ರೀತಿ ಈ ತೆರನದು. 'ದ್ವಾರಾವತಿಯ ಪಟ್ಟಣದ ಸಂಪೂರ್ಣ ಶೃಂಗಾರದ ಪೇಳ್ವೆ'ನೆಂದು ಹೊರಡುವ ಕವಿ ಆ ಪಟ್ಟಣದ ಉದ್ದಗಲಗಳ ವಿವರಗಳನ್ನು ಒಂದೂ ಬಿಡದಂತೆ ವರ್ಣಿಸುವನು. ಕೋಟೆ, ದ್ವಾರ ರಸ್ತೆ, ಕೇರಿ ಮನೆ ಮಠ ಅಂಗಡಿಗಳ ಬಣ್ಣನೆ ಸವಿಸ್ತಾರವಾಗಿದ್ದು, ಅಪರಿಚಿತಯಾತ್ರಿಕರನ್ನು ಕರೆದೊಯ್ದು ತೋರುವ ಮಾರ್ಗದರ್ಶಿಯ ಹೇಳಿಕೆಯಂತಿದೆ. ಕೊನೆಗೆ ಮಾತ್ರ ಈ ಪದ್ಯ ಒಂದು ಕಥೆಗೆ ಜೋಡಣೆ ನೀಡುತ್ತದೆ :

ಶರಧಿಯೊಳೊಗೆದ ಹೊಂದಾವರೆಯಂತಿರ್ಪ
ಪುರ ಮಧ್ಯದಲಿ ಕೃಷ್ಣರಾಯ
ಅರಮನೆ ಕನ್ನಿಕೆಯೆಂಬಂತೆ ಜನ ಮೋ
ಹರಿಸಲು ಕಣ್ಗೆ ರಂಜಿಸಿತು ॥ [೩–೬೨]

ಶೋಣಿತಪುರದ ಕೋಟೆ, ಕೊತ್ತಲ, ಪೇಟೆ, ಬೀದಿ, ಕಲಾಕೇಂದ್ರ, ಆಸ್ಥಾನಗಳ ವಿವರಣೆಯ ನಂತರ 'ಸಿಂಗವಿಟ್ಟರದೊಳೊಡ್ಡೋಲಗಗೊಟ್ಟಿರ್ದ ಲಿಂಗಾರ್ಚಕ ಜಾಣ ಬಾಣ' ಎಂದೂ ; ಶಿವಪೂಜೆಗೆ ಹೋಗುವ ಉಷೆಯ ದಾರಿಯುದ್ದಕ್ಕೂ ಹೂದೋಟ ಗಿಡಮರಗಳು ಬನಗಳು ಎದುರಾಗಿ ಅವುಗಳ ವಿಸ್ತೃತ ವರ್ಣನೆಯ ನಂತರ 'ನಂದನವನಲಕ್ಷ್ಮಿಯ ಪೋಲ್ದು ಬಾಣಜೆ ಬಂದಳೀಶ್ವರ ಚಾವಡಿಗೆ' ಎಂದೂ ಬರುವಲ್ಲಿ ಇದೇ ಕಥಾಪೋಷಣೆಯ ರೀತಿಯನ್ನು ಅರಿಯಬಹುದಾಗಿದೆ. ವರ್ಣನೆಗಳ ಆಧಿಕ್ಯದ ನಡುವೆ ಕಥಾನಕ ನಿಧಾನಕ್ಕೆ ಪೋಷಣೆ ಪಡೆಯುತ್ತ ನಿರ್ದಿಷ್ಟ ದಿಕ್ಕಿನತ್ತ ದಾಪುಗಾಲನ್ನಿಡುತ್ತದೆ. ಕಥೆಯ ಓಟಕ್ಕೆ ಭಂಗಬಂದಿದ್ದರೂ ಅದರ ಗ್ರಹಿಕೆಗೆ ಭಂಗಬರುವುದಿಲ್ಲ. ಎಂದರೆ ಕಥೆ ಕುಂಟುತ್ತ ತಡವರಿಸುತ್ತ ಸಾಗುತ್ತಿದೆ ಎಂದೆನಿಸದು. ಇದನ್ನು ಮನ್ಮಥನ ಜನನದಲ್ಲಾಗಲಿ, ಜಲಕ್ರೀಡೆ ಬೇಟೆಗಳಲ್ಲಾಗಲಿ, ಶೃಂಗಾರದ ದೃಶ್ಯಗಳಲ್ಲಾಗಲಿ ನೋಡಬಹುದು.

ಕಾವ್ಯವನ್ನು 'ಹೇಳುವ–ಕೇಳುವ' ಒಂದು ತಂತ್ರದಿಂದಾಗಿ 'ಮೋಹನ ತರಂಗಿಣಿ'ಯು ವಿಶಿಷ್ಟವಾದ ಕಾವ್ಯವಾಗಿ ನಿಂತಿದೆ. ಕವಿ ಮತ್ತು ಸುಜ್ಞಾನವಧೂಟಿಯ ಸಂವಾದದ ಮೂಲಕ ಕಾವ್ಯ ಕಥೆ ಮುಂದುವರೆಯುತ್ತದೆ. ಪೀಠಿಕಾ ಭಾಗದ ಸ್ತುತಿ–ಪದ್ಯಗಳ ತರುವಾಯವಿರುವ ಈ ಎರಡು ಪದ್ಯಗಳು

ಆ ತಂತ್ರವನ್ನು ಸುಜ್ಞಾನವಧೂಟಿಯನ್ನು ಪ್ರಥಮವಾಗಿ ಪರಿಚಯಿಸುತ್ತವೆ.

ಅದರಿಂದೆ ವರ್ಣದೋಷಂಗಳೂ ಪರಮ ಸಂ
ಪದವೆತ್ತು ಕೃತಿಗಿಲ್ಲವೆಂದು
ಬುಧರಾಮ್ನಾಯ ಶಾಸ್ತ್ರಾರ್ಥವ ತಿಳಿದು ನಾ
ನಿದ ಪೇಳ್ವೆ ಕೇಳಾಯತಾಕ್ಷಿ ॥

ಹೇಳು ಹಿರಣ್ಯಾಂಬುಕನ ತಾತ್ಪರಿಯವೆ
ತ್ತಾಳುಗಳಡಿದಾವರೆಗೆ
ಬೀಳುವ ಪುರುಷ ಷಟ್ಪದಿ ನಿನ್ನ ವಚನವ
ಕೇಳುವೆ ಪರಮ ಸಂತಸದಿ ॥ [೧-೩೧, ೩೨]

ಪ್ರತಿಯೊಂದು ಸಂಧಿಯ ಆರಂಭದಲ್ಲಿ ಇಂಥ ಸಂವಾದ ಬರುತ್ತದೆ. ಕೆಲವು ಕನ್ನಡ ಕವಿಗಳು ಪಂಡಿತರನ್ನು, ರಾಜರನ್ನು ಉದ್ದೇಶಿಸಿದ್ದರೆ, ಇನ್ನು ಕೆಲವರು ಅಧಿದೈವವನ್ನು ಗಮನದಲ್ಲಿಟ್ಟುಕೊಂಡು ಕಾವ್ಯ ನಿರೂಪಿಸಿದ್ದಾರೆ. ಮೋಹನ ತರಂಗಿಣಿಯ ಈ ಸಂವಾದದಲ್ಲಿ ನಿರೂಪಕನಂತೆ ನೇರವಾಗಿ ಕವಿಯೂ, ಸಹೃದಯರ ಪರವಾಗಿ ಸುಜ್ಞಾನವಧೂಟಿಯೂ ಪಾಲ್ಗೊಳ್ಳುತ್ತಾರೆ. ಬಹುತೇಕ ಸಂಧಿಗಳ ಆರಂಭದ ಪದ್ಯದಲ್ಲಿ ಸುಜ್ಞಾನವಧೂಟಿಯೇ ಕಥೆಯನ್ನು ಮುಂದುವರಿಸಲು ಬಿನ್ನವಿಸುತ್ತಾಳೆ. ಕಥೆಯ ನಡುವೆ ಅಲ್ಲಲ್ಲಿ ಆಕೆ ಕಾಣಿಸಿ ವಿವರಣೆ ಪಡೆಯುವುದಾಗಲಿ, ಪ್ರತಿಕ್ರಿಯೆ ತೋರುವುದಾಗಲಿ ಕಂಡುಬಾರದು. ಬಾಣಾಸುರನಾಳುವ ಶೋಣಿತಪುರದ ಉಲ್ಲೇಖ ಬಂದಾಗ ಮಾತ್ರ ಇದಕ್ಕೆ ಅಪವಾದವೆಂಬಂತೆ 'ಸ್ಮರಹರಭಕ್ತನಾಳುವ ದುರ್ಗ ಶೋಣಿತಪುರ ವೆಂಬುದೇಕಾದುದೆರೆಯ?' ಎಂದು ಪ್ರಶ್ನಿಸಿ ಉತ್ತರ ಪಡೆಯುತ್ತಾಳೆ. ಇದನ್ನು ಹೊರತುಪಡಿಸಿದರೆ ಸುದೀರ್ಘವಾದ ಕಾವ್ಯದ ಯಾವ ಭಾಗದಲ್ಲಿಯೂ ನಡುನಡುವೆ ಅವರೀರ್ವರ ಸಂವಾದ, ಚರ್ಚೆಗಳು ಬರಲಾರವು. ಹೀಗಾಗಿ ಈ ತಂತ್ರ ಪ್ರತಿ-ಸಂಧಿಯ ಆರಂಭದಲ್ಲಿ ನಿಗದಿತವಾಗಿ, ಏಕಪ್ರಕಾರವಾಗಿ ಬರುವುದರಿಂದ ಯಾವ ಆಸಕ್ತಿಯಾಗಲಿ ಆಕರ್ಷಣೆಯಾಗಲಿ ಕುದುರುವುದಿಲ್ಲ. ಕವಿಯು ಸಹೃದಯ ಪ್ರತಿನಿಧಿಯೆಂಬಂತೆ ಆಕೆಯನ್ನು ರೂಪಿಸಿದ್ದರೂ, ಸುಜ್ಞಾನವಧೂಟಿ ಕವಿಯ ಇನ್ನೊಂದು ರೂಪವಾಗಿದ್ದಾಳೆಯೇ ಹೊರತು ಸಹೃದಯರನ್ನೇನೂ ನ್ಯಾಯಯುತವಾಗಿ ಪ್ರತಿನಿಧಿಸುವುದಿಲ್ಲ. ಮುದ್ದಣ ಕವಿಯ ಮುದ್ದಣ-ಮನೋರಮೆಯರ ಸಂವಾದದೊಂದಿಗೆ ಇದನ್ನು ಹೋಲಿಸಿದರೆ

ಅದು ಸ್ಪಷ್ಟವಾಗುತ್ತದೆ. ಮನೋರಮೆಯ ಮಾತುಗಳಿಂದ ಕಥಾನಕ ರಂಜನೀಯವಾಗುತ್ತದೆ. ಆಕೆಯ ಸರಸ, ವಿನೋದ, ಕೊಂಕು, ವಿಡಂಬನೆಗಳು ವಿಮರ್ಶೆಯ ಧಾಟಿಯಲ್ಲಿದ್ದು, ಕಥೆ ಭಾವ ಬಣ್ಣನೆಗಳ ವಿಚಾರದಲ್ಲಿ ಸಮತೂಕ ಕಾಯ್ದುಕೊಳ್ಳುವಂತೆ ಮಾಡುತ್ತವೆ. ಮೆಚ್ಚುಗೆ, ಬೇಜಾರುಗಳನ್ನು ಆಕೆ ನೇರವಾಗಿ ತಿಳಿಸುತ್ತಾಳೆ. ಅದರೆ ಸುಜ್ಞಾನವಧೂಟಿ ಭಕ್ತಿಭಾವದಿಂದ ಗೌರವದಿಂದ ಎಲ್ಲವನ್ನೂ ಕಿವಿಗೊಟ್ಟು ಕೇಳುವ ವಿಧೇಯತೆಯನ್ನು ಮಾತ್ರ ಮರೆಯುತ್ತಾಳೆ. 'ನಿನ್ನ ಮೆಲ್ನುಡಿಗೆ, ಕಿವಿಗುಡದವರಾರು', 'ಪೇಳು ಮೆಲ್ಗತೆಯ' 'ವಿಸ್ತರಿಸೆನ್ನ ಕಿವಿಗೆ ಲೇಸೆನಿಸಿ' 'ಕೂರ್ತು ಮುಂದಣ ಕೃತಿವೇಳು ಮುದದಿ', 'ಕರುಣದಿ ತುಟಿಬಿಚ್ಚಿ ಪೇಳು ಮೇಲ್ಗತೆಯ' ಎಂಬ ಆಸಕ್ತಿಯನ್ನು ವಿನಯವನ್ನು ಧಾರಾಳವಾಗಿ ತೋರುತ್ತಾಳೆ. ಮುದ್ದಣ ಕವಿಗಿಂತ ಮೊದಲು ಕನಕದಾಸರು ಇಂಥದೊಂದು ತಂತ್ರದಿಂದ ಕಾವ್ಯ ನಿರೂಪಿಸಿದ್ದಾರೆ ಎಂಬುದನ್ನು ಮರೆಯುವಂತಿಲ್ಲ.

ಕಥಾಪೋಷಣೆಯಲ್ಲಿ ಕನಕದಾಸರು ಇನ್ನೊಂದು ರೀತಿಯಾಗಿ ಈ ಎರಡು ತಂತ್ರಗಳಿಂದ ಕಾವ್ಯ ನಿರೂಪಣೆಯನ್ನು ಪೂರ್ಣಗೊಳಿಸಿದ್ದಾರೆ.

೧. ನೇರವಾದ ನಿರೂಪಣಾ ತಂತ್ರ.

೨. ಹಿನ್ನಡೆ ನಿರೂಪಣಾ ತಂತ್ರ.

ಶಂಬರಾಸುರ ವಧೆ ಬಾಣಾಸುರ ಸಂಹಾರಗಳು ನೇರವಾದ ನಿರೂಪಣಾ ತಂತ್ರದಿಂದ ಬಂದಿದ್ದರೆ, ಮನ್ಮಥನ ಪ್ರಸಂಗ ಹಿನ್ನಡೆ ತಂತ್ರದಿಂದ ವರ್ಣಿತಗೊಂಡಿದೆ.* ರುಕ್ಮಿಣಿಯು ಪ್ರದ್ಯುಮ್ನನನ್ನು ಪಡೆದು ಸಂತೋಷದಿಂದಿರುವ ನಾಲ್ಕನೆಯ ಸಂಧಿಯವರೆಗೂ ಕಥೆಯು ನೇರವಾಗಿಯೇ ಬರುತ್ತದೆ. ಮಲಗಿ ನಿದ್ರಿಸುತ್ತಿದ್ದ ಮಗುವನ್ನು ಶಂಬರಾಸುರ ಅಪಹರಿಸಿಕೊಂಡು ಹೋಗುವನು. 'ಹುಟ್ಟಿದಾಕ್ಷಣ ಶಿಶು ನೋಡಲಕೆ ಮಟಮಾಯವಾದುದಾಶ್ಚರ್ಯ' ಎಂದು ಸುಜ್ಞಾನವಧೂಟಿ ಅಚ್ಚರಿಪಡುತ್ತಾಳೆ. ಆಗ ಕವಿ :

> ಶತಪತ್ರದಳಲೋಚನೆ ಕೇಳು ಹರನಿಂದ
> ಹತನಾದ ಕಂತು ರುಕ್ಮಿಣಿಯ

---

* ಆಧುನಿಕ ಸಾಹಿತ್ಯ ಕೃತಿಗಳಲ್ಲಿ ಅಧಿಕವಾಗಿ ಕಾಣಿಸುವ ಈ 'ಹಿನ್ನಡೆ ತಂತ್ರ'ವು ಕನ್ನಡದ ಪ್ರಾಚೀನ ಕಾವ್ಯಕೃತಿಗಳಲ್ಲಿ ವಿರಳವಾಗಿ ಕಾಣಿಸುತ್ತದೆ. ಮುದ್ದಣ ಕವಿಯ 'ರಾಮಾಶ್ವಮೇಧ'ದಲ್ಲಿ, ಲಕ್ಷ್ಮೀಶ ಕವಿಯ 'ಜೈಮಿನಿಭಾರತ'ದಲ್ಲಿ ಈ ತಂತ್ರ ಮುಖ್ಯಪಾತ್ರವಾಡಿದೆ. ಜೈನಪುರಾಣಕಾವ್ಯಗಳಲ್ಲಿ ವರ್ಣಿತವಾಗುವ ಪೂರ್ವ ಭವಾವಳಿಗಳೂ ಈ ತಂತ್ರದ ಒಂದು ಭಾಗವಾಗಿರಬಲ್ಲವೆ ? ಎಂಬುದು ವಿಚಾರಣೀಯವಾದುದು.

ಸುತನಾಗಿ ಹುಟ್ಟಿ ಮುಂಗೆಲಸಕ್ಕೆ ಬಯಲಾದ
ಕತೆಯ ಬಿತ್ತರಿಪೆ ನಿನ್ನೊಡನೆ ॥ (೫–೨)

ಎಂದು ಹಿಂದಿನ ಕಥೆಯತ್ತ ತಿರುಗುತ್ತಾನೆ. ಮುಖ್ಯ ಕಥೆ ಕೆಲಸಂಧಿಗಳವರೆಗೆ ವಿಶ್ರಮಿಸುತ್ತದೆ. ಕಾಮನನ್ನು ದೇವತೆಗಳು ಶಿವನ ತಪೋಭಂಗಕ್ಕೆ ಸಿದ್ಧಗೊಳಿಸುವುದು, ರತಿಯ ಆತಂಕ, ಕಾಮನ ಅಭಯ, ದಂಡಯಾತ್ರೆ, ಆಕ್ರಮಣ, ಶಿವನ ತಪೋಭಂಗ, ಕೋಪ ತಾಪಗಳು, ಕಾಮನ ಮರಣ, ರತಿಯ ಶೋಕ, ಶಿವಪಾರ್ವತಿಯರ ಅಭಯ–ಇವೇ ಮುಂತಾದ ಘಟನಾವಳಿಗಳು ಹಿನ್ನಡೆ ತಂತ್ರದಿಂದ ವಿಸ್ತರಿಸಲ್ಪಡುತ್ತವೆ. ನಂತರ ಮತ್ತೆ ಮಗುವಿನ ಅಪಹರಣಕ್ಕೆ ಜೋಡಣೆ ಪಡೆದು ಮುಖ್ಯಕಥೆ ನೇರ ನಿರೂಪಣೆಯ ತಂತ್ರದಿಂದ ಮುಂದುವರೆಯುತ್ತದೆ. ಹಿನ್ನಡೆ ತಂತ್ರದಿಂದ ಕಥಾನಕದ ಒಂದು ಅಂತರ ತುಂಬಿಕೊಳ್ಳುವ ಜೊತೆಗೆ, ಗತಕಾಲದ ಕಥೆಯು ಕಾವ್ಯದ ವರ್ತಮಾನಕ್ಕೆ ಬರುತ್ತದೆ. ಹೀಗೆ ಕೆಲವು ಸೂಕ್ಷ್ಮ ಮತ್ತು ಗಮನಾರ್ಹ ಅಂಶಗಳಿಂದ, ಮೋಹನ ತರಂಗಿಣಿಯ ವಿಶಿಷ್ಟ ತೆರನಾಗಿ ಕಥಾಪೋಷಣೆ ಹೊಂದಿದೆ.

**ಪಾತ್ರ ಚಿತ್ರಣ**

ಕಾವ್ಯದುದ್ದಕ್ಕೂ ಒಬ್ಬನೇ ನಾಯಕನನ್ನು ಒಬ್ಬಳೇ ನಾಯಕಿಯನ್ನು ಕಾಣಲಾರೆವು. ಇದರರ್ಥ ಕಾವ್ಯಕ್ಕೆ ನಾಯಕ ನಾಯಕಿಯರೇ ಇಲ್ಲವೆಂದಲ್ಲ. ಮೂವರು ನಾಯಕರು ಅಷ್ಟೇ ಸಂಖ್ಯೆಯ ನಾಯಕಿಯರು ಇದರಲ್ಲಿದ್ದು, ಒಂದು ಕಾಲಕ್ಕೆ ಒಂದು ಜೊತೆ ಮಾತ್ರ ನಾಯಕ ನಾಯಕಿಯರಾಗಿರುತ್ತಾರೆ. ಕೃಷ್ಣ–ರುಕ್ಮಿಣಿಯರು ಕಾವ್ಯದ ಮೊದಲ ನಾಲ್ಕು ಸಂಧಿಗಳಲ್ಲಿ, ಕಾಮ (ಪ್ರದ್ಯುಮ್ನ)–ರತಿಯರು ತರುವಾಯದ ಹನ್ನೆರಡು ಸಂಧಿಗಳಲ್ಲಿ, ಅನಿರುದ್ಧ–ಉಷೆಯರು ಕೊನೆಯ ಇಪ್ಪತ್ತಾರು ಸಂಧಿಗಳಲ್ಲಿ ಪ್ರಧಾನರಾಗಿ ಬರುತ್ತಾರೆ. ಕಾವ್ಯವು ನಾಯಕಪ್ರಧಾನವೊ ನಾಯಕಿಪ್ರಧಾನವೋ ? ಎಂಬುದಾಗಿ ವಿಚಾರಿಸಿದರೂ ಸೋಜಿಗವಾಗುತ್ತದೆ. ಕವಿಗೆ 'ಶ್ರೀಕೃಷ್ಣಚರಿತೆ' ಯಾದುದರಿಂದ, ಆತನೇ ನಾಯಕ ಎಂಬ ಭಾವವೂ 'ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ' ಎಂದು ಹೇಳುವಲ್ಲಿ ಸ್ಫುಟವಾಗಿದೆ. ಆದರೆ ಕಥೆಯನ್ನು ಒಳಹೊಕ್ಕು ಕಂಡರೆ, ವಿವರಗಳನ್ನು ವರ್ಣನೆಗಳನ್ನು ಪರಿಶೀಲಿಸಿದರೆ ಕವಿಯ ಆ ಭಾವನೆಗೆ ಹೆಚ್ಚಿನ ಪುಷ್ಟಿಯೇನೂ ದೊರೆಯುವುದಿಲ್ಲ. ನಾಯಕರಂತೆ ನಾಯಕಿಯರೂ ಸಮಬಲವಾಗಿ ಎದ್ದು ನಿಂತು ಉಭಯಪ್ರಧಾನ ಕಾವ್ಯವನ್ನಾಗಿಸಿದ್ದಾರೆ. ರುಕ್ಮಿಣಿ, ರತಿ, ಉಷೆಯರು

ಇದಕ್ಕೆ ಸಾಕ್ಷಿಯಾಗಿದ್ದು, ಅವರ ಪಾತ್ರಗಳು ಹೆಚ್ಚು ಢಾಳವಾಗಿ ಉಜ್ವಲವಾಗಿ ಮೂಡಿಬಂದಿದೆ.

ಕಾವ್ಯದ ಗಾತ್ರಕ್ಕೆ ಕಥೆಯ ಹರಹಿಗೆ ಹೋಲಿಸಿದರೆ, ಬರುವ ಪಾತ್ರಗಳ ಸಂಖ್ಯೆ ಕಡಿಮೆ ಎನ್ನಿಸದಿರದು, ಪ್ರಮುಖ ಪಾತ್ರಗಳೆಂದರೆ ಕೃಷ್ಣ, ಪ್ರದ್ಯುಮ್ನ, ಅನಿರುದ್ಧ, ರುಕ್ಮಿಣಿ, ರತಿ, ಉಷೆ, ಶಂಬರಾಸುರ, ಬಾಣಾಸುರರು ಮಾತ್ರ. ಆದರೆ ಈ ಪ್ರಮುಖ ಪಾತ್ರಗಳು ಕವಿಪ್ರತಿಭೆಯ ಸ್ಪರ್ಶದಿಂದ ಜೀವಂತವಾಗಿ ಮೂಡಿನಿಂತಿರುವುದು ಮಹತ್ವದ ಅಂಶ. ಕೃಷ್ಣನ ಪಾತ್ರ, ಭಾರತೀಯ ಪರಂಪರೆಯಲ್ಲಿ ಈಗಾಗಲೇ ಬೆಳೆದು ನಿಂತಂತೆ ಕಾವ್ಯದಲ್ಲಿ ಚಿತ್ರತವಾಗಿದೆ. ಕೃಷ್ಣನ ಉಲ್ಲೇಖ ಬಂದಾಗಲೆಲ್ಲ ಕವಿ ಭಕ್ತಿ ಭಾವದಿಂದ ಹಾಡಿ ಹೊಗಳುತ್ತಾನೆ. ದ್ವಾರಕೆಯ ಅರಮನೆಯಲ್ಲಿ ಕುಳಿತಿದ್ದ ಕೃಷ್ಣನ ದರ್ಶನವನ್ನು ಕವಿ ಓದುಗರಿಗೆ ಮೊಟ್ಟಮೊದಲು ಮಾಡಿಸುವುದಿಂತು ;

> ಅಂತಃಪುರಶಿಖಾಮಣಿಯೆನಲೊಪ್ಪುವ
> ಜಂತದ ಚಾವಡಿಯೊಳಗೆ
> ಸಂತತ ಸಿಂಹವಿಷ್ಟರದಲ್ಲಿ ಲಕ್ಷ್ಮಿಯ
> ಕಾಂತನೊಲಿದುದೊಪ್ಪಿದ್ದದೋಲಗದಿ ಕುಳಿತಿರ್ದ ॥ [೩–೭೦]

ಅರಮನೆಯ ದಂತಮಯವಾದ ಚಾವಡಿಯೊಳಗೆ ಸಿಂಹಾಸನಾರೂಢನಾಗಿ ಕುಳಿತಿದ್ದ ಕೃಷ್ಣನ ಚಿತ್ರ ಬಗೆಗಣ್ಣಿನೆದುರು ತೇಲಿಬರುತ್ತದೆ. ರುಕ್ಮಿಣಿಗೆ ಗಂಡುಮಗು ಬೇಕೆನಿಸಿದಾಗ, ಮಗುವಿನಿಂದ ಚೆಲುವಿಕೆ ಹೋದಿತೆಂದು ಕೀಟಲೆ ಮಾಡುತ್ತಾನೆ. ಜಲಕ್ರೀಡೆಯಲ್ಲಿ ಗೋಪಿಕಾ ಸ್ತ್ರೀಯರನ್ನು ನಾನಾ ತೆರನಾಗಿ ಪೀಡಿಸುವನು ಸುಂದರಿಯರನ್ನು ನೀರಲ್ಲಿ ನೂಕುತ್ತ, ಬಣ್ಣವೆರಚುತ್ತ, ಅವರ ಬಯಕೆಗಳನ್ನು ಸಲಿಸುತ್ತ–ಒಟ್ಟು ರಾಸಲೀಲೆಯನ್ನು ತೋರುವಂತೆ ಚಿತ್ರಿತನಾಗಿದ್ದಾನೆ. ರುಕ್ಮಿಣಿ ಸತ್ಯಭಾಮೆಯರ 'ಮಸ್ತಕದಲ್ಲಿ ಸುರಿದನು ಮೊಲೆ ಮುಡಿಯುಗಳ ತೋಯ್ದಂತೆ' 'ಕುಂತಳ ತಮವೆಂದು ನಿಡುಜಡೆ ಪಿಡಿದು ಶ್ರೀಕಾಂತ ನೀರೊಳಗೆ ನೂಕಿದನು' ಎಂಬ ಸಂಗತಿಗಳು ಆ ರಾಸಲೀಲೆಯ ಕೃಷ್ಣನನ್ನು ಬೆರಳೆತ್ತಿ ತೋರುತ್ತವೆ. ಪ್ರದ್ಯುಮ್ನ ರತಿಯರು ಶಂಬರಾಸುರನನ್ನು ಕೊಂಡು ದ್ವಾರಕೆಗೆ ಬಂದಾಗ ಕೃಷ್ಣ ಹಿರಿಯನಾಗಿ ನಿಂತು ಸ್ವಾಗತಿಸಿ. ವಿವಾಹವೇರ್ಪಡಿಸಿ ಅವರಿಗೆ ಪ್ರತ್ಯೇಕ ಬಿಡಾರವೇರ್ಪಡಿಸುವನು. ಅಲ್ಲಿ ತಂದೆಯಾಗಿ ಜವಾಬ್ದಾರಿಗಳನ್ನು ಸಂತೋಷದಿಂದ ನಿರ್ವಹಿಸುವ ಪ್ರೌಢ ಕೃಷ್ಣನನ್ನು ಕಾಣುವಂತಾಗುತ್ತದೆ. ಮುಂದೆ ಕಾವ್ಯದಲ್ಲಿ ಕೃಷ್ಣನನ್ನು ಕಾಣುವುದು,

ಅನಿರುದ್ಧನ ದೆಸೆಯಿಂದ ಬಾಣಾಸುರನೊಂದಿಗೆ ನಡೆಯುವ ಕಾಳಗದಲ್ಲಿ. ಶಿವನೊಂದಿಗೆ ಮತ್ತು ಬಾಣಾಸುರನೊಂದಿಗೆ ಹೋರಾಡಿ ಗೆಲ್ಲುವ ಕೃಷ್ಣ ಕೊನೆಗೆ ಎಲ್ಲರೊಂದಿಗೆ ದ್ವಾರಕೆಗೆ ಹಿಂದಿರುಗುತ್ತಾನೆ. ಕಾವ್ಯದಲ್ಲಿ ಒಂದೆಡೆಗೆ ಪ್ರಿಯತಮನಾಗಿ, ಇನ್ನೊಂದೆಡೆಗೆ ಹಿರಿಯನಾಗಿ ಕೃಷ್ಣ ಕಾಣಿಸುತ್ತಾನೆ. ರುಕ್ಮಿಣಿ ಸತ್ಯಭಾಮೆಯರ ಜೊತೆಗೆ ರಾಸಕ್ರೀಡೆಯಾಡುತ್ತಲೂ, ಮಗ ಮೊಮ್ಮಗರನ್ನು ಆಪತ್ತುಗಳಿಂದ ಕಾಪಾಡುತ್ತಲೂ ಎರಡು ವಿಧದಲ್ಲಿ ಕೃಷ್ಣ ಪ್ರೇಮವನ್ನು ವಾತ್ಸಲ್ಯವನ್ನು ಮೆರೆಯುತ್ತಾನೆ. ಕವಿ ಆಗಾಗ್ಗೆ ವರ್ಣಿಸುವಾಗ ಕಪಟನಾಟಕಸೂತ್ರಧಾರ, ತಾನೆಲ್ಲ ನಿಯಮಿಸಿ ಏನೂ ಗೊತ್ತಿಲ್ಲದಿರುವ ಶಕ್ತಿವಂತ, ಲೀಲೆಗಾಗಿ ಬಂದಿರುವ ವಿಷ್ಣು ಎಂಬ ಭಾವವನ್ನು ಪ್ರಕಟಿಸಿದ್ದಾನೆ.

ಮನ್ಮಥ (ಪ್ರದ್ಯುಮ್ನ) ಅನಿರುದ್ಧರ ಪಾತ್ರಗಳು ಹೆಚ್ಚಿನ ಸಂದರ್ಭದಲ್ಲಿ ಶೃಂಗಾರಮಯವಾದ ಹಿನ್ನೆಲೆಯಲ್ಲಿ ಚಿತ್ರಿತವಾಗಿವೆ. ಸೌಂದರ್ಯ ಶೃಂಗಾರದ ಅಧಿದೇವತೆಯಾಗಿ ಮನ್ಮಥ ತನ್ನರಮನೆಯಲ್ಲಿ ವೈಭವದಿಂದ ಇರುತ್ತಿದ್ದ ರೀತಿ ಕಾವ್ಯದಲ್ಲಿ ಚೆನ್ನಾಗಿ ಮೂಡಿದೆ. ಆತನ ದಂಡಯಾತ್ರೆ, ಉತ್ಸಾಹ, ಆಕ್ರಮಣಗಳೆಲ್ಲ ಪುರುಷ ಪ್ರಯತ್ನವಾಗಿ ಮುಖ್ಯವಾಗುತ್ತವೆ. ದೇವಲೋಕದವರ ಒಳಿತಿಗಾಗಿ ವೀರಮರಣವನ್ನು ಆಹ್ವಾನಿಸುವ ಮನ್ಮಥ ಸೌಂದರ್ಯದಲ್ಲಿಯೂ ವೀರತೆಯಲ್ಲಿಯೂ ಅನುಪಮನಾಗಿದ್ದಾನೆ. ಅನಿರುದ್ಧ ನಗರ ಶೋಧನೆಯಲ್ಲಿ ತಾರುಣ್ಯದ ಸಹಜ ಬಯಕೆಗಳನ್ನು ಪಡೆದುಕೊಂಡು, ಬೇಟೆಯಲ್ಲಿ ತನ್ನ ಶಕ್ತಿಯನ್ನು ವರ್ಧಿಸಿಕೊಂಡು ಉಷೆಯನ್ನು ವರಿಸಲು ತಕ್ಕವನಾಗುತ್ತಾನೆ. ಆತನ ಅಂಗಸೌಂದರ್ಯ, ಸರಸ ಪ್ರಣಯಗಳು ಕಾವ್ಯದಲ್ಲಿ ಮುಖ್ಯವಾಗಿದ್ದು, ಇತರ ಮುಖಗಳಿಗೆ ಅವಕಾಶ ದೊರೆತಿಲ್ಲವಾಗಿ ಒಬ್ಬ ದುರ್ಬಲ ನಾಯಕನಂತೆ ಭಾಸವಾಗುತ್ತಾನೆ.

ಕಾವ್ಯದಲ್ಲಿ ರುಕ್ಮಿಣಿ–ರತಿ–ಉಷೆಯರ ಪಾತ್ರಗಳು ಬಂದಾಗಲೆಲ್ಲ ಸೌಂದರ್ಯ ಮೋಹಕತೆಗಳ ಮಂದಾನಿಲ ತೀಡುತ್ತದೆ. ಶೃಂಗಾರ ಗಣಿಯ ಬಾಗಿಲು ತೆರೆಯುತ್ತದೆ. ಒಬ್ಬರಿಗಿಂತೊಬ್ಬರು ರೂಪಸಿಯರಾಗಿ ಚಿತ್ರತವಾಗಿದ್ದಾರೆ. ಪ್ರೇಯಸಿಯಾಗಿ. ಮಾತೆಯಾಗಿ ರುಕ್ಮಿಣಿ ಸ್ತ್ರೀಸಹಜವಾಗಿ ವರ್ತಿಸಿದ್ದಾಳೆ. ಗಂಡು ಮಗು ಬೇಕೆಂಬ ಬಯಕೆ ಕಾಡಿದಾಗ 'ಜೀಯ ನೀ ಪಾಲಿಸಬೇಕು ನನಗೋರ್ವ ಕಂದರ್ಪ ರೂಪಾಂತ ವರಕುಮಾರಕನ' ಎಂದು ಕೇಳುವಲ್ಲಿ. ಮಗುವನ್ನು ಕಳೆದುಕೊಂಡಾಗ 'ಬಾಣ ತಾಗಿದ ಹುಲ್ಲೆಯಂತೆ' ವೇದನೆಪಡುವಲ್ಲಿ, ಮಗ ರಾಕ್ಷಸನನ್ನು ಸಂಹರಿಸಿ ಸೊಸೆಯೊಂದಿಗೆ ಹಿಂದಿರುಗಿದಾಗ ಸಂತೋಷಿಸುವಲ್ಲಿ

ಆ ಸಹಜತೆಯನ್ನು ಕಾಣಬಹುದಾಗಿದೆ. ರತಿಯಾದರೋ ಮನ್ಮಥನ ಪ್ರೇಯಸಿ, ಸತಿ ರೂಪದಲ್ಲಿ ಲಾವಣ್ಯದಲ್ಲಿ ಆಕೆಗೆ ಸರಿದೊರೆಯಾದ ಹೆಂಗಳೆಯರಿಲ್ಲ. ತನ್ನ ಗಂಡನು ಶಿವನು ತಪೋಭಂಗಕ್ಕೆ ಹೊರಟಿರುವ ಸುದ್ದಿತಿಳಿದು ಆಕೆ ಆತಂಕಿತಳಾಗಿ ಬರುತ್ತಾಳೆ. ತನ್ನ ಮನದ ಭಯವನ್ನು ನಯವಾಗಿ ಕಾಮನಿಗೆ ತಿಳಿಸಿ 'ಮೂಢರಂದದೊಳೂರ ಗುದ್ದಲಿಯನು ಕೊಂಡು ನಾಡ ಕಾಲುವೆಯ ತಿದ್ದುವರೆ ?' ಎಂದು ಬುದ್ಧಿ ಹೇಳುತ್ತಾಳೆ. ಆದರೂ ಲೋಕಕಲ್ಯಾಣಕ್ಕಾಗಿ ತನ್ನ ಗಂಡನು ಆ ಕಾರ್ಯವನ್ನು ಮಾಡಲೇಬೇಕಾದುದೆಂದು ಅರಿತಾಗ್ಗೆ 'ಉತ್ತರೋತ್ತರ ಜೇಯ ಶಕುನ ಮುಂತಾಗಿ ನೀ ಚಿತ್ತಯಿಸುವುದು' ಎಂದು ಸಮ್ಮತಿಸುವಳು. ಇಲ್ಲಿ ರತಿ 'ಕಾಂತಾಸಂಮಿತ'ದ ವಿವೇಕದ ಸತಿಯಾಗಿ, ಉದ್ವೇಗ ಆತಂಕಗಳ ಸಹಜ ಹೆಣ್ಣಾಗಿ ವಾಸ್ತವವಾಗಿ ಚಿತ್ರಿತವಾಗಿದ್ದಾಳೆ. ಶಿವನ ಕೋಪಕ್ಕೆ ತುತ್ತಾಗಿ ಕಾಮನು ಹತನಾಗಲು ರತಿ ಪಡುವ ಶೋಕ ಅಳಲುಗಳು ಹೃದಯಕ್ಕೆ ತಟ್ಟುತ್ತವೆ. 'ಅಳದವರಳುತಿರ್ದರು ರತಿಕಾಂತನ ಹಳವಳಿಸುವ ಪ್ರಳಾಪದಲಿ' ಎಂಬುದು ಸೂಕ್ತವೆಂಬಂತೆ ರತಿ ಪಾರ್ವತಿಯ ಮನ ಕರಗಿಸುತ್ತಾಳೆ. ಶಿವನೆದುರು ನಿಂತು ಆಕೆ ಕೇಳುವ ಮಾತು ಎಷ್ಟು ಅರ್ಥಪೂರ್ಣ!

ಕೊಲ್ಲಲುದ್ಯೋಗಿಸಲಪ್ಪುದೆ ರಸದಾಳಿ
ವಿಲ್ಲನಂತವರುಗಳಿಹರೆ
ಒಲ್ಲದ ಗಂಡು ಹೆಣ್ಣುಗಳನೊಂದಾಗಿಸ
ಬಲ್ಲ ಭಾವಜ್ಞರ ತೋರು ॥ [೮-೩೨]

ಶಿವ ಪಾರ್ವತಿಯರಿಂದ ಅಭಯಪಡೆದು, ಪತಿಯನ್ನು ನೆನೆಯುತ್ತ ದುಃಖಭಾರ ನೀಗಿ ದೇಶಾಂತರ ಹೋಗುವ ರತಿಯ ಚಿತ್ರ ಎಂಥವರನ್ನೂ ಮೃದುಗೊಳಿಸುತ್ತದೆ. ವಿರಹ ವ್ಯಥೆಯಲ್ಲಿ ಅಲೆಯುತ್ತಿದ್ದ ಆಕೆ ಶಂಬರಾಸುರನ ಕಣ್ಣಿಗೆ ಬಿದ್ದು ಹೊಸ ಕಷ್ಟ ಪರಂಪರೆಯನ್ನು ಎದುರಿಸುತ್ತಾಳೆ. ಆಕೆಯ ರೂಪಕ್ಕೆ ಮೋಹಿತನಾಗಿ ಬರುವ ಶಂಬರಾಸುರನಿಗೆ, ಆತನ ಪರವಾಗಿ ಮೋಹದ ಬಲೆ ಬೀಸಲೆತ್ನಿಸುತ್ತಿದ್ದ ರಾಣಿಗೆ 'ನಾರಾಯಣ ಕೃಷ್ಣ ಗೋವಿಂದ ಬಹಳಾಪಚಾರದ ಮಾತಕೇಳಿದೆನು' ಎಂದು ಪಾತಿವ್ರತ್ಯವನ್ನು ಮೆರೆಯುತ್ತಾಳೆ. ಶಂಬರಾಸುರನಲ್ಲಿ ದಾಸಿಯಾಗಿ ಅಡುಗೆಯ ಸೇವಕಿಯಾಗಿ ಇರಲು ಒಪ್ಪಿದರೂ, ಮರ್ಯಾದೆಗೆ ಭಂಗ ಬರದಂತೆ ಆಶ್ರಯ ಪಡೆಯುತ್ತಾಳೆ. ಮೀನಿನ ದೇಹದಲ್ಲಿ ದೊರೆಯುವ ಮಗುವನ್ನು ಕಂಡೊಡನೆ ಆಕೆಯ ಮೈಗೆ ರೋಮಾಂಚನದ ಮಿಂಚುತಾಗುವುದು, ಸ್ತ್ರೀತ್ವ ಪ್ರಬಲಿಸುವುದು ಸೊಗಸಾಗಿ ಮೂಡಿಬಂದಿವೆ. ಅಲ್ಲಿ ಆಕೆಯ ಜಾಣ್ಮೆ

ವಿವೇಕಗಳು ವ್ಯಕ್ತಗೊಂಡಿವೆ. ಕಾವ್ಯದಲ್ಲಿ ರತಿಯು ಹಲವಾರು ಅವಸ್ಥೆಗಳನ್ನು ಅನುಭವಿಸುವ ಹೆಣ್ಣಾಗಿ ಸಹಾನುಭೂತಿ ಉಕ್ಕಿಸುತ್ತಾಳೆ.

ಉಷೆಯಾದರೂ ಕಾವ್ಯದಲ್ಲಿ ಸುಕೋಮಲವಾದ ನಳನಳಿಸುವ ಹೂವಿನಂತಿದ್ದಾಳೆ. 'ಹೊಗರೇಳ್ವ ಹೊಂಬಣ್ಣ ಮೈಯ್' 'ದರಹಾಸಮುಖಿ' 'ಕೆಮ್ಮೀನ್ಗಳಂದದಿ ಕಿರುದೊಡೆ', 'ಹೊಂಬಾಳೆದೊಡೆಗಳು' 'ವಜ್ರಮುಷ್ಟಿಗಳಂತೆ ಜಘನದ ಸ್ಥಳಗಳು' 'ಕಾಸುಗುಳಿಯೆನೆ ಹೊಕ್ಕಳು' 'ಕಾಮಪಾಶವೊ ತೋಳೆರಡೊ' 'ಸ್ವರ್ಣಮೌಕ್ತಿಕದ ಚಿಪ್ಪುಗಳೆಂದೆಂಬಂತೆ ಕರ್ಣಗಳ್–ಎಂಬೀ ಅಂಗಾಂಗಬಣ್ಣನೆಯ ಪದವೃಂದಗಳಲ್ಲಿ ಉಷೆಯ ಅನುಪಮವಾದ ಸೌಂದರ್ಯರಾಶಿಯನ್ನು ಉಪಮಿಸಲಾಗಿದೆ ! ಗೆಳತಿಯರು ಅಲಂಕರಣ ವಿನ್ಯಾಸದಿಂದಾಗಿ ಆಕೆಯ ಚೆಲುವಿಕೆಗೆ ನೆರೆ ಬರುತ್ತದೆ. ಮನುಜರಿರಲಿ ದೇವತೆಗಳೂ 'ಸ್ಮರಬಾಣಕ್ಕೆ' ತುತ್ತಾಗಿ ತಾಪವನನುಭವಿಸುತ್ತಾರೆ. ದೇವಾಲಯಕ್ಕೆ ಪೂಜೆಗೆಂದು ಹೋಗುವಲ್ಲಿ ಆಕೆಯ ನಡಿಗೆ, ಬನದ ಹೂಗಳ ನಡುವೆ ಆಕೆಯ ಇರುವಿಕೆ ವರ್ಣಚಿತ್ರಗಳಾಗಿ ಬಂದಿವೆ. ಶಿವನ ಪೂರ್ವಸೂಚನೆಯಂತೆ ಕನಸಿನಲ್ಲಿ ಅನಿರುದ್ಧನೊಡನೆ ಕ್ರೀಡಿಸಿ, ಎಚ್ಚೆತ್ತು ಅನುಭವಿಸುವ ವಿರಹವ್ಯಥೆ ತೀವ್ರತರವಾಗಿದೆ. ಕೋಮಲಳಾದ ಸುಂದರಿಯಾದ ಉಷೆಯ ಸ್ಥಿತಿಯಿದು :

ನೆಟ್ಟುದು ಕೂರ್ಗಣೆ ಕುವರಿಯ ಹರಣ
ಕಂಗೆಟ್ಟುದು ಸಂತಾಪವೆರಸಿ
ಬಿಟ್ಟುದು ದೇಹಾಭಿಮಾನ ವಿಗ್ರಹ ಮರ
ವಟ್ಟುದು ಜ್ವರವು ಪೂರಯಿಸಿ ॥ [೨೮–೧೫]

'ನಾಸಿಕದುಸಿರ ದಳ್ಳುರಿ ಮೂಗುತಿಗಂಧ ಗ್ರಾಸದಂತಾಗಿ' 'ಅಂಕುರವಡೆದ ಪೂಗಿಡು ವೃಕ್ಷಲತೆವೇರ್ಗೆ ಬೆಂಕಿಯ ಹರಹಿದಂತಾಯ್ತು'–ವಿರಹತಾಪದಿಂದಾಗಿ ಉಷೆಯ ಸ್ಥಿತಿ. ಚಿತ್ರಲೇಖೆಯೆದುರು ತನ್ನ ಅನುಭವವನ್ನು ವಿರಹವನ್ನು ಹೇಳುವಲ್ಲಿಯ ಆತ್ಮೀಯತೆ, ಚಿತ್ರಪಟಗಳನ್ನು ಒಂದೊಂದಾಗಿ ಗಮನಿಸುವಲ್ಲಿಯ ಕಾತುರ ಆತಂಕತೆಯಿಂದಾಗಿ ಉಷೆ ಉತ್ಕಂಠಿತ ಪ್ರಣಯಿನಿಯಾಗಿ ಕಾಣಿಸುತ್ತಾಳೆ. ಅನಿರುದ್ಧನ ಚಿತ್ರಪಟವನ್ನು ಕಂಡ ತಕ್ಷಣ 'ಒಮ್ಮಿಂದೊಮ್ಮೆ ನೋಡಲು ಮೆಯ್ಯರೋಮವು ಜುಮ್ಮೆಂದು ಮನದ ಮೂರ್ಚ್ಛೆಯಲಿ ಹಮ್ಮೈಸಿದಳು ; ಅನಿರುದ್ಧ ಬಂದಾಗ ಪ್ರಣಯಭರದಲ್ಲಿ ಶಾಸ್ತ್ರ ನೀತಿಗಳನ್ನು ಮೀರಿ ಗಾಂಧರ್ವ ವಿವಾಹಕ್ಕೆ ಸಮ್ಮತಿಸಿ ಪ್ರಿಯತಮನಲ್ಲಿ ಒಂದಾಗುತ್ತಾಳೆ. ಉಷೆ ತುಂಬ ಕೋಮಲಳಾಗಿ, ಮೃದುಹೃದಯದವಳಾಗಿ, ಲಜ್ಜೆಯ ಮಿತ ಭಾಷಿಯಾಗಿ

ಚಿತ್ರಿತವಾಗಿದ್ದರೂ, ತಾನೊಲಿದವನನ್ನು ಪಡೆಯಲು ಏಕಪ್ರಕಾರವಾಗಿ ಯತ್ನಿಸಿ ಸಮಾಜದ ಮಿತಿ ಮರ್ಯಾದೆಗಳನ್ನು ಮೀರಿ ಛಲ ತೋರುತ್ತಾಳೆ. ರುಕ್ಮಿಣಿ ರತಿಯರಿಗಿಂತ ಆಕೆ ಪ್ರಣಯದಲ್ಲಿ, ವಿರಹದಲ್ಲಿ, ಪ್ರಿಯತಮನೊಂದಿಗಿನ ಏಕಾಂತದಲ್ಲಿ ಹೆಚ್ಚು ತೀವ್ರವಾಗಿ ಪ್ರತಿಸ್ಪಂದಿಸಿದ್ದಾಳೆ.

ಶಂಬರಾಸುರ ಬಾಣಾಸುರರು ರಾಕ್ಷಸರಾಜರು, ವೀರರು ಶಕ್ತಿಶಾಲಿಗಳು. ರತಿಯ ಚೆಲುವಿಕೆಯಿಂದ ಕಾಮುಕನಾಗುವ ಶಂಬರಾಸುರ, ಅವಳ ಅಸಮ್ಮತಿಯಿಂದ ದಾಸಿಯಾಗಿದ್ದರೂ ತನ್ನ ಆಶ್ರಯದಲ್ಲಿರಲೆಂದು ಬಯಸುತ್ತಾನೆ. ಮಗುವನ್ನು ಅಪಹರಿಸುವಲ್ಲಿ, ನಾರದರನ್ನು ಗೌರವದಿಂದ ಎದುರುಗೊಳ್ಳುವಲ್ಲಿ, ಕೊನೆಗೆ ಹೋರಾಟದಲ್ಲಿ ಶಂಬರಾಸುರ ಗುಣದೋಷಗಳ ವ್ಯಕ್ತಿಯಾಗಿ ಕಾಣಿಸಿಕೊಂಡಿದ್ದಾನೆ. ಬಲ ದೌರ್ಬಲ್ಯಗಳೆರಡರ ಪ್ರತೀಕವಾಗಿದ್ದಾನೆ. ಇದಕ್ಕೆ ಭಿನ್ನವಾಗಿ ಬಾಣಾಸುರ ಮಹಾವೀರನೂ ಪರಮ ಶಿವಭಕ್ತನಾಗಿಯೂ ಚಿತ್ರಿತವಾಗಿದ್ದಾನೆ. ಶಿವನ ಪೂಜೆಯನ್ನು ವಿಧ್ಯುಕ್ತವಾಗಿ ಮಾಡುವ ಆತನ ಪೂಜಾಭಂಗಿ ಸೊಗಸಾಗಿ ಮೂಡಿಬಂದಿದೆ. ಮಗಳ ಬಗ್ಗೆ ಅತುಲ ಪ್ರೀತಿ–ವಾತ್ಸಲ್ಯಗಳಿರುವ ತಂದೆಯಾಗಿಯೂ ಆತ ಕಾಣಿಸುತ್ತಾನೆ. ಆದರೆ ನಾರದ ಮುನಿಯು ಆತನಿಗೆ 'ನಿನಗೀ ವೇಳೆಯೊಳ್ ತಲೆಗುತ್ತಲಹುದು ಭಾಳಾಕ್ಷನ ಸದ್ಭಕ್ತನಂದನೆಯತ್ತ ಸೂಳೆಯಾಗಿರ್ಪುದು ಸುಖವೇ' ಎಂದು ಉಷೆ–ಅನಿರುದ್ಧರ ಸಮಾಗಮದ ವಿಚಾರ ಹೇಳಿದಾಗ ಕಿಡಿಕಿಡಿಯಾಗುತ್ತಾನೆ. 'ಕುಡಿಮೀಸೆ ಕುಣಿದು ನಾಸಿಕದಲಿ ಹೊಗೆ ಸುತ್ತಿ ಕಿಡಿಗಳನಕ್ಷಿ ಮುಕ್ಕಳಿಸೆ' ಕುಪಿತನಾಗಿ 'ಯತಿರಾಯ ನೀನಲ್ಲದಿನ್ನೋರ್ವರಾದಡಾಹುತಿಯನೆಯ್ದಿಸುವೆ ಖಂಡೆಯಕೆ' ಎಂದು ಗರ್ಜಿಸುವನು ಆ ಕಾರಣಕ್ಕಾಗಿ ಕೃಷ್ಣನೊಂದಿಗೆ ಯುದ್ಧಕ್ಕೆ ಸಿದ್ಧನಾಗುವನು. ವೀರನಂತೆ ಹೋರಾಡಿ ಕೈಲಾಸ ಸೇರಿ ಮುಕ್ತಿಪದವಿ ಪಡೆಯುತ್ತಾನೆ. ಬಾಣಾಸುರನ ವರ್ತನೆ, ಮಾತುಗಳಲ್ಲಿ ಎಲ್ಲಿಯೂ ಅಸಹಜತೆಯ ಕೃತ್ರಿಮತೆಯ ಸೋಂಕಿಲ್ಲ. ಆತನ ಭಕ್ತಿ, ಕೋಪವಾತ್ಸಲ್ಯ, ವೀರತೆಗಳು ಯಥಾವತ್ತಾಗಿ ಮೂಡಿನಿಂತಿವೆ.

ಬೃಹಸ್ಪತಿ, ಪಾರ್ವತಿ, ಶಿವ, ಚಿತ್ರಲೇಖೆ, ಕುಂಭಾಂಡ, ಗರುಡ, ನಂದಿ, ಬಲರಾಮ, ಗಣಪತಿ ಮುಂತಾದ ಪಾತ್ರಗಳು ಸೀಮಿತ ಅವಕಾಶದಲ್ಲಿಯೂ ಚೆನ್ನಾಗಿ ಮೂಡಿನಿಂತಿವೆ. ಆಯಾ ಪ್ರಸಂಗದಲ್ಲಿ ಅವು ತಮ್ಮ ತಮ್ಮ ಸ್ವಭಾವದರ್ಶನವನ್ನು ಶಕ್ತಿ ಯುಕ್ತಿಗಳ ಪರಿಚಯವನ್ನು ನೀಡುವುದರಿಂದ ನೆನಪಿನಲ್ಲಿ ಉಳಿಯುತ್ತವೆ. ಮುಖ್ಯ ಪಾತ್ರಗಳು ಸಮರ್ಥವಾಗಿ ಮೂಡಿಬರಲು

ಇವು ಹಿನ್ನೆಲೆಯಲ್ಲಿ ಪೂರಕವಾಗಿ ಸೂಕ್ತವಾದ ಕಾರ್ಯಗೈದಿರುವುದನ್ನು ಕೂಡ ಮರೆಯಲಾಗದು. ಪ್ರಧಾನ ಪಾತ್ರಗಳೇ ಇರಲಿ ಚಿಕ್ಕಪುಟ್ಟ ಪಾತ್ರಗಳೇ ಇರಲಿ ಕಾವ್ಯದಲ್ಲಿ ಅವುಗಳನ್ನು ಜೀವಧರಿಸಿ ಚಲಿಸುವಂತೆ ಮಾಡುವಲ್ಲಿ ಕವಿಪ್ರತಿಭೆ ಅನನ್ಯವಾಗಿ ಕಾರ್ಯಗೈದಿದೆ.

**ರಸಾಭಿವ್ಯಕ್ತಿ**

ಕನ್ನಡ ಸಾಹಿತ್ಯಚರಿತ್ರೆಯ ಮಧ್ಯಭಾಗವನ್ನು ಭಕ್ತಿಯುಗ ಎಂದೇ ಸಾಮಾನ್ಯವಾಗಿ ಭಾವಿಸಲಾಗುತ್ತದೆ. ಹರಿಹರ ರಾಘವಾಂಕರಿಂದ ಮೊದಲ್ಗೊಂಡು ಷಡಕ್ಷರದೇವ ಲಕ್ಷ್ಮೀಶನವರೆಗೆ ಬರುವ ಹಲವಾರು ಕವಿಗಳು ಇಷ್ಟದೇವತಾಸ್ತುತಿಗಾಗಿ, ಸ್ವಮತದ ಮೇಲಿನ ಪ್ರೀತಿಗಾಗಿ ಭಕ್ತಿಯ ಕೃತಿಗಳನ್ನು ರಚಿಸಿದ್ದಾರೆ. 'ತಿಳಿಯ ಹೇಳುವೆ ಕೃಷ್ಣ ಕಥೆಯನು ಇಳೆಯ ಜಾಣರು ಮೆಚ್ಚುವಂತಿರೆ' ಎಂದೋ, 'ಹೊತ್ತು ಹೋಗದ ಪುಂಡರಾಲಿಪ ಮತ್ತಮತಿಗಳ ಗೋಷ್ಠಿಯಲ್ಲಿದು' ಎಂದೋ ತಮ್ಮ ಉದ್ದೇಶವನ್ನು ಕವಿಗಳು ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ವಿಚಿತ್ರವೆಂದರೆ ಈ ಕಾವ್ಯಗಳಲ್ಲಿ ಇನ್ನಿಲ್ಲದಂತೆ ಶೃಂಗಾರ ರಸ ಸೂರೆಯಾಗಿದೆ. ಚಾಮರಸ ಕವಿ ಮುಂದಿನ ವೈರಾಗ್ಯ ಭಕ್ತಿಭಾವಗಳಿಗೆ ಶೃಂಗಾರವನ್ನು ಹಿನ್ನೆಲೆಯ ದೃಶ್ಯದಂತೆ ಬಳಸಿಕೊಂಡಿದ್ದರೆ, ಷಡಕ್ಷರ ದೇವ ಶೃಂಗಾರದ ಹೆದ್ದೊರೆಯ ನಂತರ ಮಂತ್ರಮಹಿಮೆಯ ಯಥಾರ್ಥತೆಯನ್ನು ಬಿಂಬಿಸಿದ್ದಾನೆ. ಇದೇ ಸಾಲಿನಲ್ಲಿ ಬೇರೊಂದು ರೀತಿಯಲ್ಲಿ ಮೋಹನ ತರಂಗಿಣಿಯೂ ಸೇರಿಕೊಳ್ಳುತ್ತದೆ.

ಕವಿ ತನ್ನಯ ಕಾವ್ಯವನ್ನು 'ಕೃಷ್ಣಚರಿತೆ' 'ನಾರಾಯಣನ ಸತ್ಕೃತಿ' 'ಹರಿಕಥೆ' 'ಹರಿಕಥಾಮೃತ–ಪಂಚಧಾರೆ' 'ವಾಸುದೇವನ ಪುಣ್ಯಕಥೆ' ಎಂದೆಲ್ಲ ಕರೆದಿದ್ದಾನೆ. ಆದರೆ ಕಾವ್ಯವು ಕಥಾನಕ, ವೃತ್ತಾಂತ ವರ್ಣನೆ ಅಲಂಕಾರ ಸ್ತುತಿಗಳಲ್ಲಿ ಶೃಂಗಾರ ರಸದ ಹೊನಲಾಗಿ ಬಿಟ್ಟಿದೆ. ಸೌರಾಷ್ಟ್ರದ ವರ್ಣನೆಯಲ್ಲಿ ದ್ವಾರಕೆ–ಕುಸುಮಾವತಿಗಳ ಬಣ್ಣನೆಯಲ್ಲಿ ಶೃಂಗಾರ ತಂತಾನೆ ಒಸರುತ್ತದೆ. ಹಾಡುವ ದುಂಬಿಗಳು, ನರ್ತಿಸುವ ನವಿಲುಗಳು, ತಾವರೆಯ ಕೊಳಗಳು, ಹಲವಾರು ಜಾತಿಯ ಫಲ ಪುಷ್ಪಗಳು, ಮೇಳದ ಅಂಗನೆಯರು ಇದಕ್ಕೆ ಪೋಷಕವಾಗಿ ನಿಲ್ಲುತ್ತಾರೆ.

ವಸಂತೋತ್ಸವಕ್ಕೆ ಶೃಂಗಾರದ ಬಣ್ಣವಿಟ್ಟಂತಿದೆ, ವಸಂತಾಗಮನ. ಕ್ರೀಡಾ ಕೊಳದ ಸಿಂಗಾರ, ನಾರಿಯರ ಉತ್ಸಾಹ ಹಾಡುಗಳಿಂದಾಗಿ ಆ ಪ್ರಸಂಗ ರಮಣೀಯವಾಗಿದೆ. ಜಲಕ್ರೀಡೆಯ ವರ್ಣನೆಯು ಉದ್ದೀಪಕವಾಗಿದೆ :

ಬಿಸಜಾಕ್ಷಿಯನು ತೊಪ್ಪನೆ ತೊಯ್ದು ಪೊರಮಟ್ಟು
ವಸನವ ಮುರಿದು ಹಿಂಡಿದರೆ
ಎಸೆವ ನಿರ್ಮಲದೇಹ ಲಾವಣ್ಯ ಪರಿಪೂರ್ಣ
ರಸ ಸೋರ್ದುವಂತಾದುದಬಲೇ ॥ (೧೪-೫೭)

ಕೃಷ್ಣ ರುಕ್ಮಿಣಿ ಸತ್ಯಭಾಮೆಯರಲ್ಲಿ ನಡೆಯುವ ಬಣ್ಣ ಎರಚುವ ಆಟ, ನೀರಲ್ಲಿ ನೂಕುವ ವಿನೋದ, ಮೂದಲಿಕೆಗಳಿಂದ ಕೆಣಕುವ ಪರಿಗಳೆಲ್ಲ ಸೇರಿ ಆ ದೃಶ್ಯವನ್ನು ರಂಗುರಂಗಾಗಿಸಿವೆ. ಅನಿರುದ್ಧನು ನಗರಶೋಧನೆಗೆಂದು ಹೋಗಿ ಕಾಣುವ ದೃಶ್ಯಗಳು ಜನರ ರಸಿಕತೆಗೆ ಶೃಂಗಾರಾಭಿರುಚಿಗೆ ಕನ್ನಡಿ ಹಿಡಿಯುತ್ತವೆ. ಅಲ್ಲಿಯ ಮನೆಗಳ ವಿನ್ಯಾಸವು 'ಏಣಾಕ್ಷಿಯರ ಮಂದಿರಗಳಿರ್ದವು ಪಂಚಬಾಣನ ರತಿಗೇಹದಂತೆ' ಎಂಬಲ್ಲಿ ತಿಳಿಯುತ್ತದೆ. ಅವುಗಳೊಳಗೆ 'ನೂತನಾವಯವದ ಸದ್ಗುಣ ರೂಪು ನಾಲುಕು ಜಾತಿಯಂಗನೆಯರೊಪ್ಪಿದರು'. ಅಲ್ಲಿಯ ಕಾಮಿನಿಯರ ಕೇಕೆ, ನಗು, ಕರೆ, ಮೊರೆ, ಪ್ರಾರ್ಥನೆ, ದೈನ್ಯ, ಹಂಬಲ, ಕೋಪ, ತಾಪ, ವಿರಹಗಳು ಒಂದರ ಮೇಲೊಂದು ನುಗ್ಗಿಬರುತ್ತವೆ.

ವೇಶ್ಯಾವಾಟಿಕೆಯ ವರ್ಣನೆಯಲ್ಲಿ, ದಂಪತಿಗಳ ಸುರತ ಕ್ರೀಡೆಯಲ್ಲಿ ಹಸಿಹಸಿಯಾದ ಶೃಂಗಾರ ಬರುತ್ತದೆ. ವಿವಾಹದ ನಂತರ ದ್ವಾರಕೆಯಲ್ಲಿ ಪ್ರದ್ಯುಮ್ನ ರತಿಯರು ಏಕಾಂತದಲ್ಲಿ ಸುಖಪಡುವ ದೃಶ್ಯ ಇದಕ್ಕೆ ನಿದರ್ಶನವಾಗಿದೆ. ಚಿತ್ರಮಯ ಭಿತ್ತಿಗಳ ಶಯನಾಗೃಹದ ನಡುವೆ ಅಲಂಕೃತಗೊಂಡಿದ್ದ ಮೃದುಹಾಸಿನ ಮಂಚವನ್ನು ಕಂಡು ಮನದಲ್ಲಿ ಮುದಗೊಳ್ಳುವರು.

ಎಂಬತ್ತುನಾಲ್ಕು ಬಂದದಿ ಮೇಣದ
ಬೊಂಬೆಗಳಂತೆ ಮೈಮಣಿದು
ಮುಂಬರಿವರು ತಾಳ್ವರ್ತವಕಿಪರು ಮೇಣ್
ಚುಂಬನಗೈದರರ್ತಿಯಲಿ ॥ (೧೬-೪೪)

ದಂಪತಿಗಳೀರ್ವರ ಅಂಗಸಂಗವು ಮುಂದೆ ವಿವರವಾಗಿಯೇ ಬರುತ್ತದೆ. ಉಷೆಯ ಸ್ವಪ್ನದಲ್ಲಿ ಮತ್ತು ಅನಿರುದ್ಧನ ಜೊತೆಗೆ ಆಕೆ ಕಳೆಯುವ ರಾತ್ರಿಯಲ್ಲಿ ಈ ತೆರನಾದ ಸಂಭೋಗ ಶೃಂಗಾರವು ಎದುರಾಗುತ್ತದೆ. ಉಷೆಯ ಸೌಂದರ್ಯವನ್ನು ಲಾವಣ್ಯವನ್ನು ಅನಿರುದ್ಧ 'ಪಿಂತೇಳು ಜನ್ಮದ ಬಡವಂಗೆ ಕಮನೀಯ ಚಿಂತಾಮಣಿ ದೊರೆದಂತೆ' ಚೆಂದುಟಿಯಿಂದ ಈಂಟುತ್ತಾನೆ. ಅದರಿಂದಾಗಿ ಲಜ್ಜೆಯಿಂದ ಕೂತಿದ್ದ ಉಷೆಗೆ 'ಚುಂಬಿಪ ತವಕಾದಿ ಕಾಮಾಂಬು

ತುಂಬಿತು ನಾನಾ ತಾಣದಲಿ'. ಅವರ ಕೂಟದ ಚಿತ್ರ ಕೂಡ ನೇರವಾಗಿ ಸ್ಫುಟವಾಗಿ ಬಂದಿದೆ.

ನಿರ್ಧರವಾದ ಮೋಹನಶಕ್ತಿಯೊಳಗನಿ
ರುದ್ಧನೆಂದೆಂಬ ಗಾರುಡನು
ಕದ್ದೈಸದೆ ಕೆಲವಾಡುವದ್ವಿತೀಯಗ
ಳಧ್ವನಿ ನಸುಮೊಳಗಿದುದು ॥ (೩೨-೧೩)

ಮುಂದೆ 'ನುಣ್ದೊಡೆಯೊಳಗೆ ನುಣ್ದೊಡೆ ತೋಳ್ಗಳೊಳು ತೋಳು' ಸೇರಿಕೊಂಡು ಸುರತಕ್ರೀಡೆ ತುರೀಯಕ್ಕೆ ಸಾಗುತ್ತದೆ. ಯಾವ ಮಡಿವಂತಿಕೆಯನ್ನೂ ತಾರದೆ ಕನಕದಾಸರು ಇಂಥ ಶೃಂಗಾರದ ದೃಶ್ಯಗಳನ್ನು ಸಹಜವೆಂಬಂತೆ ಕಾವ್ಯದಲ್ಲಿ ತಂದಿದ್ದಾರೆ. ಇಂಥಲ್ಲಿ ಕಾವ್ಯವು ಏಕಾಂತದಲ್ಲಿ ಸುಖಪಡುವ ಪ್ರಣಯಿಗಳನ್ನು ತೋರುವ ಜಾಲಂಧ್ರವಾಗುತ್ತದೆ.

ಇಲ್ಲಿಯ ಶೃಂಗಾರ ವಿವರಗಳಲ್ಲಿ ಒಂದು ವ್ಯತ್ಯಾಸ ಎದ್ದು ಕಾಣುತ್ತದೆ. ಕೃಷ್ಣ-ರುಕ್ಮಿಣಿ, ಪ್ರದ್ಯುಮ್ನ-ರತಿ, ಅನಿರುದ್ಧ-ಉಷೆಯರ ಶೃಂಗಾರ ಸನ್ನಿವೇಶಗಳಲ್ಲಿ, ಮೂರೂ ಜೊತೆಗಳು ಸಮಾನವಾಗಿ ಸ್ಥಾನ ಪಡೆದಿಲ್ಲ. ಕೃಷ್ಣ-ರುಕ್ಮಿಣಿಯರ ಸರಸ, ಪ್ರಣಯಭಾವಗಳು ಹಿತಮಿತವಾಗಿದ್ದರೆ. ಪ್ರದ್ಯುಮ್ನ-ರತಿಯರಲ್ಲಿ ಅದು ಪ್ರಬಲವಾಗಿ ಬಂದಿದೆ. ಅನಿರುದ್ಧ-ಉಷೆಯರಂತೂ ಇದಕ್ಕೂ ಮುಂದುವರೆದು ಸ್ವಚ್ಛಂದದಿಂದ ಕ್ರೀಡಿಸುತ್ತಾರೆ. ಇಲ್ಲಿ ಇತಿಮಿತಿಯಾಗಲಿ ಮುಚ್ಚುಮರೆಯಾಗಲಿ ಕಾಣಿಸದೆ ಎರಡು ಸ್ವತಂತ್ರ ಹಕ್ಕಿಗಳೆರಡರ ವಿಹಾರದಂತೆ ಕಾಣುತ್ತದೆ. ಕೃಷ್ಣನ ಬಗ್ಗೆ ಕವಿಗಿರುವ ಭಕ್ತಿ ಭಾವದಿಂದಾಗಿ ಆ ಪಾತ್ರದ ಸಂದರ್ಭದಲ್ಲಿ ಬರುವ ಶೃಂಗಾರಾದಿ ಬಣ್ಣನೆಗಳು ಸೂಚ್ಯವಾಗಿವೆ. ಏನಿದ್ದರೂ ಶೃಂಗಾರರಸ ಕಾವ್ಯದಲ್ಲಿ ಹಿರಿಯಪಾಲು ಪಡೆದು ತಾನೇ ತಾನಾಗಿ ವಿಜೃಂಭಿಸಿದೆ. ಅಲ್ಲಿ ಬರುವ ತೋಟಗಳಲ್ಲಿ ಮಲ್ಲಿಗೆ ಕೇದಗೆ ಸುರಗಿ ಸೇವಂತಿಕೆಗಳು ಮಧುವನ್ನು ಹೊತ್ತು ಅರಳಿ ನಿಂತಿವೆ. ಬನಗಳಲಿ ತೆಂಗು, ಮಾವು, ಪೇರಲ ಪೇರಳೆ ನೇರಳೆಗಳು ರಸಿಕರಿಗಾಗಿ ತೂಗಿ ತೊನೆಯುತ್ತಿವೆ. ಬೀಸುವ ಗಾಳಿಯಲ್ಲಿ ಕಾಲುವೆಗಳ ನದಿಗಳ ಹರಿವ ನೀರಿನಲ್ಲಿ ಪ್ರಣಯ ಧ್ವನಿ ಅಂತರ್ಗತವಾಗಿದೆ. ಎಲ್ಲ ಹೆಣ್ಣುಗಳೂ ಸುಂದರಿಯರು ಮೋಹಿನಿಯರು. ಅವರೆಲ್ಲ ಸದಾಕಾಲ ವೃತ್ತಕುಚಾನ್ವಿತೆಯರು, ದರಹಾಸಿನಿಯರು, ಬಡನಡುವಿನವರು, ಜವ್ವನಿಗರು ! ಇದರಿಂದ ಮೋಹನ ತರಂಗಿಣಿಯು ಹಲವು ಶೃಂಗಾರತೀರ್ಥಗಳನೊಳಗೊಂಡ ರಸಕಾವ್ಯ.

ಕಾವ್ಯದಲ್ಲಿ ಒಂದೆರಡು ಕರುಣರಸದ ಪ್ರಸಂಗಗಳಿವೆ. ಅದೇ ತಾನೆ ಹುಟ್ಟಿದ

ಮಗು ಮಲಗಿದಲ್ಲಿ ಮಾಯವಾಗಿ ಹೋಗುವುದನ್ನು ಅರಿತ ರುಕ್ಮಿಣಿ ಶೋಕಪಡುತ್ತಾಳೆ. 'ಎಣ್ಣೆಯ ತಲೆಗೂಡಿದುದಿಲ್ಲ ನೊರೆವಾಲ ಬೆಣ್ಣೆಯ ಮೆಲಿಸಿದುದಿಲ್ಲ ಕಣ್ಣಿವೆ ಹಳಚಿ ನೋಡಿದುದಿಲ್ಲ', 'ಮೊಲೆವಾಲು ತೊರೆದುಗುತಿರೆ ಕೋ ಲೋಚನವಾರಿ ಸಲೆಹಾಯ್ದೊಡೆ ಹೋಗುತಿದೆ ಕೋ' 'ಪರಿತಾಪವ ಪುಟ್ಟಿಸಿ ಪೋಗಬಂದೆವು ಹರಿಕೊಟ್ಟ ವರ ಬಯಲಾಯ್ತೆ' ಎಂಬಲ್ಲಿ ಬೇಡಿ ಬಯಸಿ, ಹೊತ್ತು ಹೆತ್ತ ಮಗುವನ್ನು ಕಳೆದುಕೊಂಡ ತಾಯೊಬ್ಬಳ ಶೋಕ ಸಾಮಾನ್ಯವಾಗಿ ಸಹಜವಾಗಿ ಹೊಮ್ಮಿದೆ. ಆಕೆಯ ದುಃಖದ ಅಳಲನ್ನು ಕಂಡು ಸತ್ಯಭಾಮೆಗೂ ಕಣ್ಣಲ್ಲಿ ನೀರೂರುತ್ತದೆ. ಗಂಟಲು ಕಟ್ಟುತ್ತದೆ. ಮಗು ಹೇಗೆ ಬಯಲಾಗಿ ಹೋದನೆಂದು ಆಕೆ ಕೇಳಿದರೆ ರುಕ್ಮಿಣಿಗೆ ದುಃಖ ಸಂತಾಪ ಅಧಿಕಗೊಂಡು ವಿವರಿಸುವ ಮುಗ್ಧವಾದ ಚಿತ್ರ ವಾಸ್ತವವಾಗಿದೆ.

ಪುಂಡರೀಕಾಕ್ಷಿ ನಿದ್ದೆಯೊಳಾನೊರಗಿರೆ
ಕಂಡೆನು ಬಲುಕೆಟ್ಟ ಕನಸ
ಚಂಡಾಂಶುವಿನಂತೆ ಹೊಳೆವ ಪುತ್ರನ ದೈತ್ಯ
ಕೊಂಡೊಯ್ಯಲೆಚ್ಚೆತ್ತೆನವ್ವಾ ॥ (೪–೮೮)

ಮಗುವಿನಿಂದ ವಂಚಿತಳಾದ ತಾನು 'ಸುಣ್ಣ ಕಲ್ಪುಡಿಗಟ್ಟಿ ಮಡುವಿನೊಳಿಳಿದಂತೆ ಬಣ್ಣಗುಂದಿದ' ರೀತಿಯಾಗಿದೆ ಎಂದು ತಿಳಿಸುವಲ್ಲಿ ಅಸಹಾಯಕ ಸ್ಥಿತಿಯ ಅರಿವಾಗುತ್ತದೆ. ರುಕ್ಮಿಣಿಯ ಶೋಕ ಪುತ್ರವಾತ್ಸಲ್ಯಕ್ಕೆ ಭಂಗ ಬರುವುದರಿಂದ ಮೂಡಿಬರುವ, ಲೋಕದ ತಾಯಿಯೊಬ್ಬಳ ಶೋಕವರ್ತನೆಯಂತೆ ಸಾಮಾನ್ಯ ಶೋಕವಾಗಿಯೂ ಮನವನ್ನು ಆರ್ದ್ರಗೊಳಿಸುತ್ತದೆ. ಪುತ್ರನಾದನೆಂಬ ಸಂತೋಷ ಪಡುತ್ತಿದ್ದವಳಿಗೆ ತಕ್ಷಣ ಬಂದೊದಗುವ ವಿಪತ್ತಿನಿಂದ ಸಹಾನುಭೂತಿ ಮೂಡುತ್ತದೆ.

'ರತಿಯ ವಿಳಾಪ' ಇನ್ನು ಹೆಚ್ಚಿನ ಶಕ್ತಿ ಪಡೆದು ಅಭಿವ್ಯಕ್ತಿಗೊಂಡ ಕರುಣ ಪ್ರಸಂಗ. ಶಿವನಿಂದ ಹತನಾದ ಗಂಡನ ಸಲುವಾಗಿ ರತಿ ಪ್ರಳಾಪಿಸುವಳು. ಗಂಡನ ಕಳೇಬರದ 'ಬಿಸಿವಡೆದ ಗಂಧ ಸಂಯುಕ್ತ ಭಸ್ಮದಿ' ಹೊರಳಾಡುವಳು, ತಬ್ಬಿಕೊಂಡು ಅಳಲು ಪತಿಯ ಮೃತದೇಹವಿಲ್ಲದೆ. 'ಗಿಳಿದೇಜಿಗಳೆಲ್ಲಿ? ಕರ್ವಿಲ್ಲು ಮೊರೆವ ಬಾಲಳಿ ವೆದೆ ಪೂಗೋಲ್ಗಳೆಲ್ಲಿ? 'ವೀರಚೆಮ್ಮುರಿಯ ಪೆರ್ದುರುಬೆಲ್ಲಿ? ಪೆರೆಯಂತೆ ರಾರಾಜಿಪ ನೊಸಲೆಲ್ಲಿ? ಸಿಂಗಾಡಿಯ ಪೋಲ್ವ ಪುರ್ಬೆಲ್ಲಿ? ಪತಾಕೆಯೊಳಿಹ ಮಕರ ರಾಯತನೇತ್ರವೆಲ್ಲಿ? ಚಂಪಕದಂತೆ ರಂಜಿಸುವ ನಾಸಿಕವೆಲ್ಲಿ? ಸ್ವರ್ಣದರ್ಪಣವೇರಿದ ಕದಪುಗಳೆಲ್ಲಿ? ಹೊದರಾಂತ

ಕೊನೆಮೀಸೆಗಳೆಲ್ಲಿ ? ಕೆಂಬವಳದ ಅಧರವದೆಲ್ಲಿ ? ಎಲ್ಲಾ ಕಲೆಗಲೆಗಳನೊಳಕೊಂಡು ರಾಜಿಪ ಮೆಲ್ಲದೆಗುರುಹೆಲ್ಲಿ ? ಅಪ್ಪುವ ನಳಿತೋಳ್ಗಳೆಲ್ಲಿ ಮತ್ಕುಚದ ಮೇಲೊಪ್ಪುವ ಸಿರಿಗೈಗಳೆಲ್ಲಿ ?'–ದುಃಖದ ಕಟ್ಟೆಯೊಡೆದ ತೆರನಲ್ಲಿ ಪತಿಯ ಒಂದೊಂದು ಅಂಗಾಂಗಗಳ ಬಣ್ಣಿಸಿ ತನ್ನ ಅಳಲನ್ನು ಹರಿಬಿಡುತ್ತಾಳೆ. ಎಲ್ಲಿ ಎಲ್ಲಿ ಎಂಬಪದಗಳ ಪುನರುಕ್ತಿ ದುಃಖಸ್ಥಿತಿಯ ನಿಗದಿತ ಬಿಕ್ಕಳಿಕೆಯನ್ನು, ಸತ್ತವನನ್ನು ಭ್ರಮೆಗೊಂಡು ನೆನೆಯುವ ಕ್ರಮವನ್ನು ನೆನಪಿಗೆ ತರುತ್ತವೆ. ಶಿವನ ಎದುರಿಗೆ ಬಂದು, ಸುಂದರವಾದ ಮನ್ಮಥನನ್ನು ಕೊಲ್ಲಲೆಂತು ಮನಬಂದಿತೆಂದು ಧೈರ್ಯದಿಂದ ಕೇಳುತ್ತಾಳೆ. ಆತನನ್ನು ಸುಟ್ಟುಹಾಕಿದಂತೆ ತನ್ನನ್ನೂ ಸುಟ್ಟುಹಾಕಿದರೆ ಕೃಪೆಮಾಡಿದಂತಾಗುತ್ತದೆಂದು ಮೊರೆಯಿಡುತ್ತಾಳೆ. 'ತಾಪಸ್ಥ ಸುರರಿಂಗೆ ಹಿತಗೈಯ ಬಂದ ಪ್ರಾಣೋಪನನುರಿಹಿದೆ ನೀನು' ಎಂದು ಆಪಾದಿಸುವಲ್ಲಿ ಆಕೆಯ ದುಃಖಾತಿಶಯತೆ ಹೃದಯಕ್ಕಾದ ಗಾಯಗಳು ವ್ಯಕ್ತಗೊಂಡಿವೆ. ಪತಿಯನ್ನು ಕಳೆದುಕೊಂಡು ಹೊರಳಾಡಿ, ಪತಿ ಗುಣಗಳನ್ನು ಹೊಗಳಿ ಹಾಡಿ ಅಳುವ ರತಿಯ ವಿಲಾಪ ಎಂಥವರ ಹೃದಯವನ್ನು ಕರಗಿಸುತ್ತದೆ, ಸಹಾನುಭೂತಿಯನ್ನು ಸೂರೆಗೊಳ್ಳುತ್ತದೆ.

ಕಾವ್ಯದಲ್ಲಿ ಯುದ್ಧದ ಕೆಲವು ಪ್ರಸಂಗಗಳು ದೀರ್ಘವಾಗಿ ಬರುತ್ತವೆ. ಮನ್ಮಥನ ದಂಡಯಾತ್ರೆ ಆಕ್ರಮಣಗಳ ಸೊಗಸು ಒಂದು ತೆರನಾದರೆ, ಶಂಬರಾಸುರ ಪ್ರದ್ಯುಮ್ನರ ಹೋರಾಟ ಬೇರೊಂದು ರೀತಿಯದು. ಇವುಗಳಿಗೆ ಭಿನ್ನವಾಗಿ ಹರಿ–ಹರ ಯುದ್ಧ, ಕೃಷ್ಣ ಬಾಣಾಸುರರ ಯುದ್ಧಗಳು ಬಂದಿವೆ. ಯುದ್ಧ ಬಂದಾಗಲೆಲ್ಲ ಆಯಾ ಪ್ರಸಂಗದಲ್ಲಿ ಲವಲವಿಕೆ, ಉತ್ಸಾಹ, ಆವೇಶಗಳು ಎದ್ದು ತೋರಿದರೂ ಅವು ಪ್ರಬಲವಾಗಿ ಕಲಾತ್ಮಕವಾಗಿ ವ್ಯಕ್ತಗೊಂಡು ವೀರರಸವಾಗಿ ಅನುಭವ ನೀಡುವುದಿಲ್ಲ. ಯುದ್ಧಕ್ಕೆ ನಡೆಯುವ ಸನ್ನಾಹ, ಆಯಧಗಳ ಭರಾಟೆ, ಮೂದಲಿಕೆ ಕಟೂಕ್ತಿಗಳು ಅಧಿಕವಾಗಿ ವ್ಯಕ್ತಿಗತವಾದ ವೀರಗುಣವು ಪರಿಷ್ಕಾರಗೊಳ್ಳುವುದಿಲ್ಲ. ಗರುಡ, ನಂದಿ, ಬಲರಾಮ, ಗಣಪತಿಯರ ಹೋರಾಟ ರಂಜನೀಯವೆನ್ನಿಸಿದರೆ, ಶಿವ–ವಿಷ್ಣುವಿನ ಕಾಳಗ ಲೀಲೆಯಾಗಿಬಿಡುತ್ತದೆ. ಗಣಪತಿ ಬಲರಾಮರ ನಡುವಿನ ಯುದ್ಧದ ಸಂವಾದದ ವಿನೋದಗುಣವನ್ನು ಪಡೆದ ರೀತಿ ಇದು :

ಗ– 'ದೂಷಕ ಬಲರಾಮ ಕೈದೋರಿಸು'

ಬ– 'ಒದವಿದ ಭಕ್ಷ್ಯಭೋಜ್ಯಕೆ ಬಪ್ಪದೆ ಭಾದ್ರಪದ ಶುದ್ಧ ಚೌತಿಯಿದಲ್ಲ, ಕದನ ಕಪೂಪವ ತೋರು.'

ಗ– 'ಬಡಿಸಿದರುಂಡು ತೇಗುವ ಬಕುತರಿಗೆ ನೂರ್ವುಡಿ ಸತ್ಫಲವನೆಯ್ದಿಸುವೆ... ಹಲಹಿಡಿದು ಭೂಮಿಯ ಮೇಲೆ ಸೀಳಿ ಬಲ್ಲವ ನಿನಗೆ ಕೀಳಾರಂಭ ಬೇಡ.'

ಬ– 'ಬಡವ ನಾನೊಂದು ನೇಗಿಲಲಿ ನಿನ್ನನು ಬೀಳಹೊಡೆದು ಕಾರ್ಗಲಿಸಿ ಗದ್ದೆಯನು ತಡೆಯದೆ ಸತ್ಕೀರ್ತಿ ಗಂಧಶಾಲಿಯ ಬಿತ್ತಿಪಡೆವೆನು ಬಲವ'

ಗ– 'ಬಲರಾಮ ನನ್ನೊಳು ಸಮರಕ್ಕೆ ಸೆಣಸಿ ದುರ್ಬಲರಾಮನಾಗಿ ಹೋಗು.'

ಮೂದಲಿಸಿ ಕೆಣಕಿ ಯುದ್ಧಕ್ಕೆಳೆವ ರೀತಿಯಿದು. ಶಸ್ತ್ರಾಸ್ತ್ರಗಳ ಹೊಯ್ದಾಟದಲ್ಲಿ, ದೇವ–ದಾನವರ ಹೋರಾಟದಲ್ಲಿ ಸಾಂಪ್ರದಾಯಕ ಯುದ್ಧದ ಸ್ಥಿತಿಯು ಚಿತ್ರಿತವಾಗಿದೆ. ರಕ್ತ ಹರಿಯುವುದು, ಮಾಂಸ ಎಲುಬುಗಳು ರಾಶಿರಾಶಿಯಾಗಿ ಬೀಳುವುದು, ಶಾಕಿನಿಡಾಕಿನಿಯರು ಔತಣ ಪಡುವುದು ಸಾಮಾನ್ಯವಾಗಿ ಬಂದಿವೆ.

ಕಾವ್ಯದ ಒಂದೆರಡು ಪ್ರಸಂಗಗಳು ಅಚ್ಚರಿಯನ್ನೂ, ಕೋಪವನ್ನೂ ಚಿತ್ರಿಸುತ್ತವೆ. ಆದರೆ ಆ ಭಾವಗಳು ಗಟ್ಟಿಯಾದ ಸ್ಥಾಯಿಯಾಗುವ ಮಟ್ಟಕ್ಕೂ ಅಭಿವ್ಯಕ್ತಗೊಂಡಿಲ್ಲವಾಗಿ ಅದ್ಭುತ ರೌದ್ರನ ಬಗ್ಗೆ ಚರ್ಚಿಸುವ ಸ್ಥಿತಿಯೇ ಉದ್ಭವಿಸುವುದಿಲ್ಲ.

**ಅಲಂಕಾರಗಳು :**

ಮೋಹನ ತರಂಗಿಣಿಯಲ್ಲಿ ಅಲಂಕಾರಗಳೂ ವಿಪುಲವೆಂಬುದು ಮೇಲ್ನೋಟಕ್ಕೆ ತಿಳಿಯುತ್ತದೆ. ಪ್ರತಿ ಚಿಕ್ಕ ವಿವರವನ್ನು ದೃಶ್ಯವನ್ನು ಅನುಭವವನ್ನು ಮನಂಬುಗುವಂತೆ ಚಿತ್ರಿಸುವ ಪ್ರಯತ್ನಕ್ಕೆ ಹೆಚ್ಚಿನ ಅಲಂಕಾರಗಳು ಪೂರಕವಾಗಿವೆ.

ಕಂಟಕವೆಂಬುದು ಕೇತಕಿಯೊಳು ರಾಜ
ಕಂಟಕವೆಂಬುದಂಬುಜದಿ
ಕಂಟಕವೆಂಬುದು ಹಲಸಿನೊಳಲ್ಲದೆ
ಕಂಟಕವಾದೇಶಕಿಲ್ಲ ॥ (೨–೨೧)

ಇಂಥ ವರ್ಣನೆಗಳು ಅರ್ಥಪೂರ್ಣವಾದ ಶಬ್ದಾಲಂಕಾರಗಳಾಗಿ ಆಕರ್ಷಕವಾಗಿವೆ. 'ಗಂಧಸುಗಂಧ ಗಂಧಿಯ ಮೊಗನೋಡಲು ಗಂಧ ಕುಂಕುಮರಸಭರಿತ ಗಂಧವ ಗಂಧೋದಕದಿಂದ.. 'ಪಂಚಬಾಣನ ರಾಣಿ...' ಮುಂತಾದೆಡೆಗಳಲ್ಲಿಯ ಅನುಪ್ರಾಸ ನಾದ ಮಾಧುರ್ಯವನ್ನುಂಟುಮಾಡುತ್ತದೆ.

ಆದರೆ ಕೆಲವು ಸಲ 'ತಿಂಗಳಾದುದು ತಿಂಗಳೆರಡಾದುದು ಮೂರು ತಿಂಗಳಾದುದು ನಾಲ್ಕೈದು ತಿಂಗಳಾದುದು ತಿಂಗಳಾರೇಳು...' ಎಂದು ನೀರಸವಾಗಿ ಅನಗತ್ಯವಾಗಿ ನುಸುಳಿದುವುಗಳೂ ಇವೆ. ಆದರೆ ಎಲ್ಲಿಯೂ ಇವು ಕೇವಲ ಶಬ್ದಾಡಂಬರವಾಗಿ, ಚಿತ್ರಕವಿತ್ವವಾಗಿ ಎಳೆದೆಳೆದು ತಂದ ಜೋಡಣೆಗಳಾಗಿ ಕಾಣಿಸುವುದಿಲ್ಲ ಎಂಬುದು ಗಮನಾರ್ಹ.

ಕಾವ್ಯದಲ್ಲಿ ಉಪಮೆಗಳು ಸಾಲುಸಾಲಾಗಿ ಬರುತ್ತವೆ. ರತಿಭಾವವಿರಲಿ, ಉತ್ಸಾಹವಿರಲಿ, ಶೋಕವಿರಲಿ ಪ್ರಕೃತಿಯ ಸಹಜವಾದ ಬಣ್ಣನೆಯಿರಲಿ ಅಲ್ಲಿ ಉಪಮೆಗಳು ಹೇಗೋ ಕಾಣಿಸಿಕೊಂಡು ಚಿತ್ರಣಕ್ಕೆ ಒಪ್ಪವಿಡುತ್ತವೆ. ಅವುಗಳ ರೂಪಕ್ಕೆ ರಚನೆಗೆ ಸೊಗಸಿಗೆ ಇವು ಕೆಲವು ನಿದರ್ಶನಗಳಾಗಬಲ್ಲವು.

'ಮುಂಬೆಳಸಿಗೆ ಪಣತವ ಕಟ್ಟಿದಂದದಿ ಪೊಂಬೆಟ್ಟ'

'ಕಾವನ ಮುಂಗೈ ಗಿಳಿಯಂತೆ ಪಾಮರಿಯರು'

'ಶರಧಿಯೊಳೊಗೆದ ಹೊಂದಾವರೆಯಂತಿರ್ಪ...ಅರಮನೆ'

'ಹಿಂಡನಗಲಿದ ಹುಲ್ಲೆಯಂತೆ'

'ಕಲ್ಲಪಡಿಯೊಳಿದ್ದ ಕೆನ್ನೀರು ಒಡೆವಾಯ್ವಂತೆ...ರೋಹಿತಧಾರೆ'

'ಪೊಂಬಳ್ಳಿ ಬರೆದಂತೆ ರೇಖೆದೋರು'

'ತನಿಮೋಹನರಸವಸರ್ವಂತೆ ಹೊಯ್ದಾಡು'

'ಏಣಾಕ್ಷಿಯರ ಮಂದಿರಗಳಿರ್ದವು ಪಂಚಬಾಣನ ರತಿಗೇಹದಂತೆ'

'ಮಲ್ಲಿಗೆಯರಳ್ಗೂಡಿ ಪಾಲ್ದಳಿದಂದದಿ.....ಬೆಳದಿಂಗಳು'

'ಸೊನ್ನೆಯ ಸರಳ್ಗಳ ತುದಿಗಾಸಿ ನೀರೊಳಗಿಟ್ಟಂತೆ

'ಅಚ್ಚವೆಳ್ದಿಂಗಳ ಸಿರಿಯಂತೆ...'

ಕಾವ್ಯದೊಳಗೆ ಸಾಂದರ್ಭಿಕವಾಗಿ ಕೆಲವು ದೀಪಕ ರೂಪಕ ದೃಷ್ಟಾಂತ ನ್ಯಾಸ ಉತ್ಪ್ರೇಕ್ಷೆಗಳು ಸ್ಥಾನಪಡೆದಿವೆ. ಬಣ್ಣನೆಗೆ ಬಣ್ಣವಿಟ್ಟಂತೆ ಅರ್ಥಕ್ಕೆ ರಮ್ಯತೆ ಮೂಡಿದಂತೆ ಅವುಗಳೆಲ್ಲ ಕಾರ್ಯಗೈದಿವೆ. 'ಕಮಲಾಕ್ಷ ನೀರೊಳು ಬಿದ್ದು ನಿಟ್ಟಿಸಲಾಗ ತಮಚೋರನಲ್ಲಿಂದ ಹೊರಟು ರಮಣಿಯರ ಬಲ್ಮೊಲೆದೊಟ್ಟ ಕರ್ಬಣ್ಣ ತಮವೆಂದು ಹಿಡಿದೌಂಕಿದನು.' 'ಕುಂದಣವರ್ಣದ ಕುಚಗಿರಿಯಲಿ ನಖಚಂದಿರನಿರಲಮರ್ದಪ್ಪಿದನು' 'ನಳಿನಾಸ್ಯ ಕುಚಕೋಕ ಕುಮುದಿನಿ ಚಕ್ಷುಗಳ್ ಸುಳಿನಾಭಿ ತಿವಳಿ ತರಂಗ', 'ಬಿಸುಗದಿರನ ನುಂಗಿ ನೀರ್ಗುಡಿದಖಿಳ ರಾಕ್ಷಸಿಯ ಮಸ್ತಕದ ಬೈತಲೆಯ ಅಸಿಯ ಚಂದ್ರಾಂಕಿತವೆಂಬಂತೆ ಸಂಜೆಗೆಂಪು', 'ಹೇರಾನೆಯ ಗಂಧಲೇಪದ ಮದ ಕಂಠೀರವ ಬಾಯ ಕಟ್ಟುವುದೆ ಘೋರಾಕೃತಿಯಾಸುರ

ಕರ್ಮ ದುರಿತ ವಿದೂರಿಯ ಪುರಕೆ ಸಿದ್ಧಿಪುದೆ' 'ಸೊದೆಯ ನೀಂಟುವ ರಾಜಹಂಸನ ಮರಿಗೆ ಮೇವಿದೆಯ ತೋರಿದಡೆ ಪೀರ್ದಪುದೆ ಎರ್ದೆಗಿಚ್ಚನಿಕ್ಕಿ ಪೋದಾತನಲ್ಲದೆ ಮಿಕ್ಕ ಸದೆಗರ ತಂದೊಡೊಪ್ಪುವೆನೆ'–ಮುಂತಾದವುಗಳು ಭಾವಕ್ಕೆ ತಕ್ಕಂತೆ ಮೆರಗು ನೀಡುತ್ತವೆ.

ಕನಕದಾಸರ ಸ್ವಭಾವೋಕ್ತಿಗಳು ಸಹಜ ಚೆಲುವಿನಿಂದ ಕಾವ್ಯಕ್ಕೆ ಶೋಭೆ ನೀಡಿವೆ. ಅವುಗಳ ಹಿತಮಿತವಾದ ಬಳಕೆಯನ್ನು, ನಿರ್ಮಳ ಚೆಲುವನ್ನು ಅರ್ಥವಂತಿಕೆಯನ್ನು ಸವಿದೇ ಕಾಣಬೇಕು. 'ಸಡಿಲಿದ ಮುಡಿ ಬೆವರ್ವನಿಗಳ ತೀವಿ ತೊಟ್ಟಿಡುವಾಸ್ಯದಲುಗುವ ಕುಚ' 'ಪಾಡುವ ಪೆಣ್ದುಂಬಿ, ನರ್ತಿಪ ನವಿಲು ಕೊಂಡಾಡುವ ಬಾನ್ವಕ್ಕಿ' 'ಹೆಂಗಳ ರನ್ನೆಯ ಹೇಮವಕ್ಷವನಾಂತ ಕಂಗೊಳಿಸುವ ಬಟ್ಟಮೊಲೆಯ' 'ಬೆಂಡೆದ್ದ ಬಳಲ್ಗಣ್ಣು ಹೊಯ್ವಳ್ಳೆ ನಿಡುಸುಯ್ ಕೊಂಡದಟಳಿದ ವಿಗ್ರಹ.' ಸ್ವಭಾವೋಕ್ತಿಯ ಸ್ವಾಭಾವಿಕ ಚೆಲುವಿಕೆಗೆ ಸಾಕ್ಷಿಯಾಗಿವೆ. ಹೀಗೆ ಕಾವ್ಯದಲ್ಲಿ ಹಲವಾರು ಅಲಂಕಾರಗಳು ಸಮೃದ್ಧವಾಗಿ ಬಳಕೆಗೊಂಡಿವೆ. ಹೆಚ್ಚಿನ ಸಂದರ್ಭಗಳಲ್ಲಿ ಅವುಗಳಿಂದ ಕಾವ್ಯಕ್ಕೆ ಮೆರಗು ಬಂದಿದೆಯಾದರೂ, ಕೆಲವು ಸಲ ಅವು ಭಾರವೆನಿಸಿವೆ ; ತಮ್ಮ 'ಶೋಭಾಕರ ಧರ್ಮ'ದಿಂದ ದೂರ ಸರಿದು ಅನಗತ್ಯವೆನಿಸಿವೆ.

ಕಾವ್ಯವನ್ನು ಮಹಾಕಾವ್ಯವನ್ನಾಗಿಸಲು ನಮ್ಮ ಕವಿಗಳು ಅಷ್ಟಾದಶ ವರ್ಣನೆಗಳನ್ನು ಕಾವ್ಯದಲ್ಲಿ ತರುತ್ತಾರಷ್ಟೆ. ಇದನ್ನು ಮೋಹನ ತರಂಗಿಣಿಯಲ್ಲಿಯೂ ಕಾಣಬಹುದು. ಸಮುದ್ರ, ಬೆಟ್ಟ, ನದಿಗಳ ವರ್ಣನೆ, ಸೂರ್ಯ ಚಂದ್ರರ ಉದಯಾಸ್ತಗಳ ವರ್ಣನೆ, ಬೇಟೆಯ ವರ್ಣನೆ, ವೇಶ್ಯಾವಾಟಿಕೆಯ ವರ್ಣನೆ ಅಗತ್ಯವಿರಲಿ ಇಲ್ಲದಿರಲಿ ಕಾವ್ಯದಲ್ಲಿ ಎಡೆವಡೆದಿವೆ. ಕೆಲವು ಸಲ ಬಣ್ಣನೆಗಳು ಆಕರ್ಷಕವೂ ಅರ್ಥಪೂರ್ಣವೂ ಆಗಿವೆ. ಒಂದು ಸಲ ನಾರದಮುನಿ ಶಂಬರಾಸುರನ ಹತ್ತಿರ ಬರುವುದನ್ನು ಕಂಡ ಸೂರ್ಯದೇವ 'ತನಗೊಬ್ಬರೊಡನೆ ಜಗಳವ ಗಂಟಿಕ್ಕದೆ ಬಿಡನೆಂದಂಜಿ' ಅಸ್ತಮಿಸುವನು. ಅಲ್ಲಿ ನಾರದನ ಗುಣಸ್ವಭಾವಗಳು ಧ್ವನಿತವಾಗುವಂತೆ ಮುಂದೆ ಆತ ಮಾಡುವ ಕಾರ್ಯವೂ ಸೂಚಿತವಾಗಿದೆ. ಇನ್ನೊಮ್ಮೆ ದಿನನಿತ್ಯ ಅಲೆಯುವ ದುಃಖ ಸಾಕೆಂದು 'ನೀರೊಟ್ಟಿಲಲ್ಲಿ' ಬೀಳುವ ಸೂರ್ಯ, 'ರಥದ ಮೇಲಡರ್ಚಿದ ರನ್ನಗನ್ನಡಿಯಂತೆ' ಉದಯಿಸುವ ಸೂರ್ಯ ಅರ್ಥವಾಗಿದ್ದರೂ ಆಸಕ್ತಿ ಹುಟ್ಟಿಸುವಂತಿದೆ. ಆಕೆಯ ಗೆಳತಿಯರು ಸೇರಿ ನಡೆಸುವ ಆ ಶೃಂಗಾರ ಅಪೂರ್ವವಾಗಿದೆ. ನೋಡುವವರ ಕಣ್ಣಿಗೆ ದೃಷ್ಟಿಯಿಟ್ಟಂತೆ ತುರುಬು ಕಟ್ಟಿ, ಜಾತಿ

ಮುತ್ತುಗಳ ಎಸಳನ್ನೂ ಮಾಣಿಕವನ್ನೂ ಅದಕ್ಕೆ ತೊಡಿಸುವುದು ಮಾಲೆ, ತಿಲಕ, ಕಾಡಿಗೆ, ಇತರ ಆಭರಣಗಳನ್ನು ತೊಡಿಸುತ್ತ ಚೆಲುವನ್ನು ವರ್ಧಿಸುತ್ತ ಸಾಗುವರು. ಹಾಗೆ ಮಾಡುವಾಗ ಬರುವ ಹೋಲಿಕೆಗಳು ಬಣ್ಣನೆಗಳು ಕಾಣಿಸಿವೆ. ಪುರ, ಬೀದಿ, ಕೋಟೆ, ಅರಮನೆ, ಅರಮನೆಯ ವಸ್ತುವಿಸ್ತರಗಳು, ಜನರು, ಮುಖ್ಯ ಪಾತ್ರಗಳು ಘಟನೆಗಳು ದೃಶ್ಯಗಳು ಎಲ್ಲ ಈ ವರ್ಣನೆಗಳ ವೃತ್ತವನ್ನು ಸುತ್ತಿಕೊಂಡೇ ಬರಬೇಕು. ವರ್ಣನೆಗಳೇ ಕಾವ್ಯಕಥೆಯ ಕೈಹಿಡಿದುಕೊಂಡು ಮುನ್ನಡೆಯುತ್ತವೆ !

**ಭಾಷಾ ಬಳಕೆ**

ಕವಿಗೆ ಕಾವ್ಯದ ಅಭಿವ್ಯಕ್ತಿಯ ಮಾಧ್ಯಮವಾಗಿ ಭಾಷೆ ತುಂಬ ಮುಖ್ಯ, ಕಾವ್ಯದ ಕೋಮಲತೆ ಸೂಕ್ಷ್ಮತೆ ಧ್ವನಿಮಯತೆಗಳನ್ನು ಹಿಡಿದಿಡುವ, ಹಲವಾರು ಅರ್ಥಸ್ತರಗಳನ್ನು ಬಿಚ್ಚಿಕೊಡುವ ಶಕ್ತಿಯಾಗಿ ಅದು ಕಾರ್ಯಗೈಯುತ್ತದೆ. ಸನ್ನಿವೇಶ ನಿರ್ಮಾಣದಲ್ಲಿ ಸ್ವಭಾವಚಿತ್ರಣದಲ್ಲಿ ಭಾವಾಭಿವ್ಯಕ್ತಿಯಲ್ಲಿ ಭಾಷೆಯ ಬಳಕೆ ಜವಾಬ್ದಾರಿಯುತವಾಗಿರುತ್ತದೆ.

ಈ ಅರಿವನ್ನು ಕನಕದಾಸರು ಒಂದು ಮಿತಿಯಲ್ಲಿ ತೋರಿರುವದರಿಂದ ಕಾವ್ಯದಲ್ಲಿ ರಸ ಭಾವಗಳು ಪುಷ್ಟಗೊಂಡಿವೆ. ನಗರ, ದೇಶಗಳ ವರ್ಣನೆಯಲ್ಲಿ ನಿರ್ದೇಶಕ ರೀತಿಯಲ್ಲಿ 'ಆ ಶರಧಿಯ ಮಧ್ಯದಿ' 'ಆ ಪರ್ವತದ ದಕ್ಷಿಣ ಭಾಗದೊಳು' 'ಇಂತಿವು ಮೊದಲಾದ ಬಹುದೇಶದಲ್ಲಿ' 'ಆವಾವ ಗ್ರಾಮಾನುಗ್ರಾಮದಿ'–ವಿವರಣೆ ಬರುತ್ತದೆ. ರಮಣೀಯವಾದ ಸನ್ನಿವೇಶವನ್ನು, ಮನೋಹರವಾದ ಪ್ರಕೃತಿಯನ್ನು ಸುಂದರಿಯನ್ನು ಕುರಿತು ವಿಸ್ತರಿಸುವಾಗ ಭಾಷೆ ನಯ ನಾಜೂಕುಗಳಿಂದ ಗಮನಸೆಳೆಯುತ್ತದೆ. 'ತಳಿತರಸಾಲ, ಪೆಸರುವಡೆದ ಮಧುರ ರಸವಾಹಿನಿ, ಕುಂದಗಂಧಿನಿಯರ ಮೆಲ್ನುಡಿಗನ್ನಡಿ, ಕೊಂಚೆಗಳಿಂಚರ ಇನಿರಸವಾಂತ ಕರ್ವಿಲ್ಲು, ಭ್ರಮದ ಸಿಂಜಿನಿ, ವಿಲಸಿತ ಪೂಗಪತ್ರಿಕೆಯ ನೇತ್ರಿಕೆ, ಅಲ್ಲಿಗಲ್ಲಿಗೆ ಜಾಜಿ ಸುರಹೊನ್ನೆ ಸಂಪಿಗೆ ಮಲ್ಲಿಗೆ ಹೊಗರೇರಿದವು, ಮಧುಮಾಸವಲ್ಲ ವಸಂತ ಬಂದಿದೆ ನೋಡು'–ಎಂಬ ಪದಗಳ ಬಳಕೆಯೇ ಆ ಭಾವವನ್ನು ಹುಟ್ಟಿಸುತ್ತವೆ. ಭಾವತೀವ್ರತೆ ಆವೇಶಗಳು ಬರುವಾಗ ಭಾಷೆಯ ಪ್ರಯೋಗ ಇದಕ್ಕೆ ಭಿನ್ನವಾಗುತ್ತದೆ. ಶಿವನು ಮನ್ಮಥನನ್ನು ಸುಟ್ಟ ನಂತರ ಬರುವ ವರ್ಣನೆಯಿದು, 'ಕರಗಸವೆತ್ತ ಕಂದಳಿಯೆತ್ತ ಕಾಲಸಂಹರನೆತ್ತ ಕಂದರ್ಪನೆತ್ತ' 'ಗಜವೆತ್ತ ಕಂಠೀರವನೆತ್ತ ರಜನಿಯ ವ್ರಜವೆತ್ತ

ಭಾಸ್ಕರನೆತ್ತ ಭುಜಗಭೂಷಣನೆತ್ತ ಸ್ಮರನೆತ್ತ' ಭಾವಕ್ಕೆ ತಕ್ಕಹಾಗೆ ಪದಗಳು ನೆಗೆದಂತೆ ಭಾಸವಾಗುತ್ತದೆ. ಯುದ್ಧದ ಭೀಕರತೆ, ಕ್ರೌರ್ಯ, ಹೋರಾಟ, ಆಕ್ರಮಣಗಳು, ಈ ಪದಗಳಲ್ಲಿ ಪಡೆಮೂಡಿವೆ.

> ತಡೆದರೆ ತಡೆದೊದ್ದರೊದ್ದರಕ್ಕೆಯೊಳಿಟ್ಟು
> ಹೊಡೆದರೆ ಹೊಡೆದು ಡೊಕ್ಕರಿಸಿ
> ಕೆಡೆದರೆ ಕೆಡದುಗುರ್ಗಳೊಳೊತ್ತಿ ಭೀಕರ
> ವಡೆದು ಹೊಯ್ದಾಡಿದುವೆರಡು ॥
> ಸಿಕ್ಕಲು ಸೆಳೆವರು ಸೆಳೆದೊಳಹುಗುವರು
> ಕುಕ್ಕಲು ಕುಕ್ಕಿ ಕಡಿವರು
> ಹಕ್ಕಗಳರಸನು ಮೋರನ ನೆಲಕ್ಕಿಕ್ಕಿ
> ತಿಕ್ಕಿತು ಕೂಗಿ ಬೊಬ್ಬಿಡಲು ॥ (೩೮-೨೮, ೨೯)

ಹಕ್ಕಿಗಳೆರಡರ ರುದ್ರಹೋರಾಟ ಎಲ್ಲ ಬಿಂಬಿತವಾಗಿದ್ದು ಹಾರಿ ಹಾರಿ ಬಂದು ಪರಸ್ಪರ ಕಾದಾಡುವುದು ಕಣ್ಣಿಗೆ ಕಟ್ಟುತ್ತದೆ. ಭಾವಕ್ಕೆ ತಕ್ಕ ಭಾಷೆಯ ಪ್ರಯೋಗ ಬಂದಾಗಲೆಲ್ಲ ನಿರೀಕ್ಷಿತ ಪ್ರಭಾವ ಪರಿಣಾಮಗಳಾಗುತ್ತವೆ.

'ನಾಡೊಳಗುಳ್ಳ ಜಾಣರು ಜಾಣೆಯರೊಡನಾಡುವ ಸವಿಮಾತುಗಳ ಪಾಡುಗಬ್ಬವ ಪರುಠವಿಸಿದ ಬಗೆಯ'ನ್ನು ಕಾವ್ಯವಾಗಿ ನೀಡುವ ಆಶಯದಿಂದ ಕವಿ ಕಾವ್ಯ ರಚನೆಗೆ ತೊಡಗಿದ್ದಾನೆ. ಇದರಿಂದ ೧) ಜಾಣಜಾಣೆಯರ ಸವಿಮಾತುಗಳನ್ನು ಕಾವ್ಯವಾಗಿ ನಿರೂಪಿಸುವ ಮತ್ತು ೨) ಆ ನಿರೂಪಣೆ ಹಾಡುಗಬ್ಬವಾಗಿ ಬರುವಂತೆ ಮಾಡುವ ಆಶಯಗಳು ಸ್ಪಷ್ಟವಾಗಿವೆ. ಒಂದು ಅರ್ಥದಲ್ಲಿ ನಾಡಿನ ಜನತೆಯ ಶೃಂಗಾರ ಭಾವವನ್ನು ಹಾಡುಗಬ್ಬವಾಗಿಸಿ ಹೇಳುವ ವಿಚಾರವಿದು. 'ತೆಂಗಿನಕಾಯಿ ತೋರದ ಮೊಲೆವೆತ್ತ ಲತಾಂಗಿಯು ಬಂದುಗೆವಾಯ ರಂಗಿಪ ಚೆಂದುಟಿಯಿನಿದೆನೆ ಮೋಹನತರಂಗಿಣಿ ಕಾವ್ಯ ಕಾಣಿಸುತ್ತದೆಂಬ ಕವಿಮಾತು ಇದಕ್ಕೆ ಆಧಾರವಾಗಿ ನಿಲ್ಲುತ್ತದೆ. ದೇಸೀಯತೆ ಹಾಡುಗಬ್ಬದ ಮುಖ್ಯವಾಹಿನಿ ಭಾವ, ಭಾಷೆಗಳ ದೇಸೀಯತೆ ಈ ಕಾವ್ಯದಲ್ಲಿ ಹಲವು ಕಡೆ ಚೆನ್ನಾಗಿ ಬಂದಿದೆ. ರುಕ್ಮಿಣಿ ತನಗೆ ಗಂಡುಮಗು ಬೇಕೆಂದು ಕೇಳಿದರೆ ಕೃಷ್ಣ ನಗುನಗುತ್ತ 'ನೀ ಮಕ್ಕಳ ಪಡೆದ ಮಾತ್ರದಲಿ ಕಕ್ಕಸಮೊಲೆ ಜದಪುದು' ಎನ್ನುವಲ್ಲಿ ದೇಸೀಭಾವ ತಟ್ಟನೆ ಎದ್ದು ನಿಲ್ಲುವುದು. ಅನಿರುದ್ಧನ ನಗರ ಶೋಧನೆಯಲ್ಲಿ ಕಾಣಿಸುವ ದೃಶ್ಯಗಳು, ಕೇಳುವ ಮಾತುಗಳು, ಉಷೆ ಚಿತ್ರಲೇಖೆಯರು ಬೀದಿಯಲ್ಲಿ ಹೋಗುವಾಗ ನಾಡಿನ ಯುವಕರು ಆಡಿಕೊಳ್ಳುವ

ಮಾತುಗಳು ದೇಸೀಯ ಮುದ್ರೆಪಡೆದಿವೆ. ದೇಸೀ ಪದಗಳ ಬಳಕೆಯಂತೂ ಕಾವ್ಯದಲ್ಲಿ ಎದ್ದು ಕಾಣುವಂತಿದೆ.

| | | | | |
|---|---|---|---|---|
| ಗುದ್ದೀತು | ನೆಟ್ಟನೆ | ಕಡುಗೋಲ | ಕಬ್ಬು | ಚಿಟಕೊತ್ತು |
| | ಗುಪ್ಪೆ | ಕುಪ್ಪೆ | ಚೊಕ್ಕ | ಹಚ್ಚಡ ಚಿಂದಿ |
| ದೋತ್ರ | ಗುದ್ದಾಡು | ಗಲಬೆ | ಗಿಂಡಿ | ಗುಟುಕು |
| ಸೇಂದು | ದುಕ್ಕ | ಬಾಸೆ | ಬಾಡು | ದೊಡ್ಡಿ |
| ಒದರುವ | ಯೋಗತೆ | ಸೊಕ | ರಿಸಿ | ನೆಪ್ಪು |
| ನಾದು | ವಾರತೆ | ಒಗತನ | ಕಟ್ಟಕಡೆ | ಅಚ್ಚು |
| ಪಲ್ಲಕ್ಕಿ | ವರಿಸ | ನುಗ್ಗ | ರೊಟ್ಟಿ | ಸಂಡಿಗೆ |
| ಗಾರಾಗು | ಗುಪಿತ | ಪಂತ | ಅಂಡಲೆ | ಹೆಟ್ಟು |
| ಜತನ | ಬಕುತಿ | ತುತ್ತ | ತೆಂಗಾಯ | ರಾಸಿ |
| ರಕುತ | ಬೊಂಬಾಳ | ಸೀಪು | ಗೊಂಗಡಿ | ಮಂಕ |
| ಮುಂಡೆ | ಜೂದು | ಕಾರಿಯವ | ಸ್ವಪನ | ರತುನ |
| ದೊಣ್ಣೆ | ರಿಣ | ಜಳಕ | ಸವರು | ಗಯ್ಯಾಳ |
| ದಡಿಗ | ಹೈದ | ರಟ್ಟು | ಡೊಣಗ | ಚೋಟುದ್ದ |

ಇವುಗಳೊಂದಿಗೆ ಅಲ್ಲಲ್ಲಿ ಅನ್ಯಭಾಷಾ ಪದಗಳೂ ಕಾಣಿಸಿಕೊಳ್ಳುತ್ತವೆ. 'ತೆತ್ತಿಸಕೋಟಿ ಸೋಳಸಾಸಿರ ಬತ್ತೀಸ ಚೌವೀಸ ಚೌಷಷ್ಟಿ ಠಾವು ಠಾಣ ಪಾರುಪತ್ಯ ಅವಗಡ ಪಾವುಡ ಚಾವುಡಿ ಖೋಡಿ ಜೋಡು ಸಂಬಾಳಿಸು ಛಡಾಳಿಸು ಬಾಷ್ಕಳ ಪೌಜು ರಾವುತ ಚೂಣಿ ಠಕ್ಕೆಯ ಖಂಡೆಯ ಮಝುಪೂತ' ಅವುಗಳಲ್ಲಿ ಮುಖ್ಯವಾಗಿವೆ. ಕನಕದಾಸರ ಕಾಲದ ಕನ್ನಡ ಭಾಷೆಯ ಮೇಲಾದ ಅನ್ಯಭಾಷೆಗಳ ಪ್ರಭಾವದ ದೃಷ್ಟಿಯಿಂದ ಇವುಗಳಿಗೆ ಮಹತ್ವವಿದೆ. ವಚನಕಾರರಲ್ಲಿ ಕುಮಾರವ್ಯಾಸನಲ್ಲಿ ಇಲ್ಲಿಯ ಕೆಲವು ಪದಗಳು ಬಳಕೆಗೊಂಡಿದ್ದು ಕಾಲಕ್ರಮದ ಪ್ರಭಾವ ಗುರುತಿಸಲು ಇವು ಸಹಾಯಕವಾಗುತ್ತವೆ.

ಕನಕದಾಸರಿಗೆ ಕೆಲವು ಪದಗಳ ಬಗ್ಗೆ ವಿಶೇಷ ಮೋಹ. ಕಾವ್ಯದ ಹಲವು ಕಡೆಗಳಲ್ಲಿ ಅವು ಮತ್ತೆ ಮತ್ತೆ ಬಳಕೆಗೊಂಡಿವೆ. 'ಕುಸ್ತರಿಸು' ಎಂಬ ಪದ ಸರಿಸುಮಾರಾಗಿ ಎಲ್ಲಾ ಸಂಧಿಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ. ಅದರಂತೆ ಚಿಣ್ಣ ಪೀತಾಂಬರ ಕೇವಣ ಸಾಚುರ್ ಜತನ ಬಲ್ಮೊಲೆ ಮೇಲ್ಗತೆ ಸೊಲ್ಲಿಸು ತೊಂಡೆವೆಣ್ದುಟಿ ಒಕ್ಕಣಿಸು ಪರಿತೋಷ ಜತ್ತಾಯ ವಧೂಟಿ ಗುಡಿಗಟ್ಟು ನೀರೊಟ್ಟಿಲು ಕುಪ್ಪಿಗೆ ಕೊಜ್ಜಿಯರು'–ಮುಂತಾದ ಪದಗಳು ಆಗಾಗ ಕಾವ್ಯದಲ್ಲಿ

ಕಾಣಿಸುತ್ತವೆ. ಇದಕ್ಕೆ ವ್ಯತಿರಿಕ್ತವೆಂಬಂತೆ ವಿಚಿತ್ರವೆನ್ನಬಹುದಾದ ಕೆಲವು ಪದಗಳೂ ಬಂದಿವೆ. 'ನಂಜೊರೆವಾಯ ಎಳೆಗ ಉಡಕು ಉಟ್ಪಾಡಿ ಕಾಸುಗರಿ ಪಡುಚ ಜವಿಬೀಸರು ನೊರೆಲಗಣಗಳು' ಸಂಕೀರ್ಣವೆನಿಸುತ್ತವೆ.

ಒಂದು ಜನಾಂಗದ ಅನುಭವ–ಜ್ಞಾನ–ವಿವೇಕಗಳು ಆ ಜನರ ಭಾಷೆಯಲ್ಲಿಯ ಪಡೆನುಡಿ ಗಾದೆ ಸೂಕ್ತಿಗಳಲ್ಲಿ ಹೆಪ್ಪುಗಟ್ಟಿರುತ್ತವೆ. ತಲೆಮಾರಿನಿಂದ ತಲೆಮಾರಿಗೆ ಜ್ಞಾನಾನುಭವಗಳನ್ನು ಹೊತ್ತು ಸಾಗುವ ಅವು ಆಡುನುಡಿಯ ಜೀವಂತಿಕೆಯನ್ನು ಬಿಂಬಿಸುತ್ತವೆ. ಜನರ ಬದುಕಿಗೆ ಹತ್ತಿರವಾಗಿ ನಿಂತು ಕಾವ್ಯರಚಿಸುವ ಯಾವ ಕವಿಯೂ ಅವುಗಳಿಗೆ ಬೆನ್ನುತಿರುಗಿಸಲು ಸಾಧ್ಯವಿಲ್ಲ. ಮೋಹನ ತರಂಗಿಣಿಯಲ್ಲಿ ಇಂತಹ ಕೆಲವು ಸೂಕ್ತಿಗಳೂ ಗಾದೆಗಳು ಬಂದಿದ್ದು, ಅವುಗಳನ್ನಿಲ್ಲಿ ಸಂಗ್ರಹಿಸಿ ನೀಡಲಾಗಿದೆ :

'ಗುಬ್ಬಿಯ ಕೊರಳ್ಗೆ ಗೋಧಿಯ ಕಲ್ಲುಕಟ್ಟಿದೊಡುಬ್ಬಿಯಾಗಸಕೆ ಹಾರುವುದೆ'

'ಊರ ಗುದ್ದಲಿಯನು ಕೊಂಡು ನಾಡ ಕಾಲುವೆಯ ತಿದ್ದುವರೆ'

'ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ'

'ಪಾಪಕ್ಷಯವೆಂದು ಗಂಗೆಯೊಳು ಮಿಂದರೆ ಪಾಪಿಯ ಮೊಸಳೆ ತಿಂದಂತೆ'

'ಒಗೆತನಬಿಟ್ಟು ಹೋಹಾಗ ಹಾಲಿಗೆ ಹೆಪ್ಪು ಮೊಗೆದಿಕ್ಕಿದವರಾರುಂಟು'

'ಕಳಿಲೆ ನಖದಲಿ ಚಿವುಟಲಹದು ಮುಂದೆ ಲಳಿಗೆ ಕೂರುಗುರಿಗಂಜುವುದೆ'

'ಕಣ್ಣರಿಯದೊಡೇನು ಕರುಳ್ಬಲ್ಲುದು'

'ಕಣಸಿನ ಭತ್ತಕೆ ಗೋಣಿಯನಾಂತರ್'

'ಮಂದರಗಿರಿಯನೆತ್ತುವೊಡೆ ನುಗ್ಗೆಯ ಡೊಣ್ಣೆಯೇ'

'ವಿಷಯಾತುರಗೆ ವಿವೇಕವಿಲ್ಲ'

'ಮೀನ ಮಕ್ಕಳಿಗೀಸ ಕಲಿಪ ಗುರುಗಳುಂಟೆ'

'ಇರುಳು ನಿಟ್ಟಿಸಿದ ಹೆಬ್ಬಾವಿಗೆ ಹಗಲೆ ಬಿದ್ದಂತಾಗು'

ಈ ಗಾದೆಗಳು ಕಾವ್ಯಸಂದರ್ಭದಲ್ಲಿ ಅರ್ಥಪೂರ್ಣವಾಗಿ ಬಳಕೆಗೊಂಡಿವೆ. ಶಿವನ ತಪಸ್ಸನ್ನು ಕೆಡಿಸಲೆಂದು ಬರುವ ಮನ್ಮಥನಿಗೆ ಪಾರ್ವತಿಯು 'ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ ಹೋಗೆಲವೊ ಪಾಪಿ ಮನ್ಮಥ ಮನೆಗೆ' ಎನ್ನುವಳು. ಕಾಮ ಮತ್ತು ಶಿವನ ಭಕ್ತಿ ಸಾಮರ್ಥ್ಯಗಳ ನಡುವಿನ ವ್ಯತ್ಯಾಸವನ್ನು ಸೂಚಿಸುವಂತೆ, ಮುಂದೊದಗುವ ಅನಿಷ್ಟವನ್ನು ಧ್ವನಿಸುತ್ತದೆ. ಅನಿರುದ್ಧ ಉಷೆಯರು ಅದೇ ತಾನೆ ಹರಯ ಮೂಡಿದ ತರುಣ ತರುಣಿಯರು.

ಅವರೀರ್ವರೂ ಗಾಂಧರ್ವ ವಿವಾಹವಾಗಿ ಸುರತದಲ್ಲಿ ತೊಡಗಿರಲು 'ಮೀನ ಮಕ್ಕಳಿಗೀಸು ಕಲಿಪ ಗುರುಗಳುಂಟೆ' ಎಂಬ ಗಾದೆ ಬರುತ್ತದೆ. ಸಾಮಾನ್ಯ ಅರ್ಥದಲ್ಲಿ ಯಾವ ತರುಣ ತರುಣಿಯರಿಗೂ ಪ್ರೇಮಿಸುವುದನ್ನು ಹೇಳಿ ಕೊಡಬೇಕಾಗಿಲ್ಲ ಎಂಬ ಭಾವವಿದೆ. ಮೀನಿನ ಮಕ್ಕಳು ನಿಸರ್ಗಸಹಜವಾಗಿ ಈಜು ಕಲಿಯುವಂತೆ ಮನುಷ್ಯರೆಲ್ಲ ಸುರತದಲ್ಲಿ ಮುಳುಗುತ್ತಾರೆ. ಆದರೆ ಇಲ್ಲಿಯ ಅನಿರುದ್ಧ ನೇರವಾಗಿ ಕಾಮನ ಮಗ. ಇಲ್ಲಿ 'ಮೀನ ಮಕ್ಕಳು' ಇನ್ನೊಂದು ಅರ್ಥದಲ್ಲಿ ರಮ್ಯವಾಗಿದೆ. ಇಂಥ ಗಾದೆ, ಸೂಕ್ತಿಗಳಿಂದ ಕಾವ್ಯ ಜನಭಾಷೆಯನ್ನು ಹಿಡಿದಿಟ್ಟಿದ್ದರೆ, ಇನ್ನೊಂದೆಡೆಗೆ ಅವುಗಳಿಂದ ಅದು ಶೋಭೆಯನ್ನು ಪಡೆದಿದೆ.

**ಇತರ ಅಂಶಗಳು**

ಮೋಹನ ತರಂಗಿಣಿ ಕೃತಿಗೆ ಸಾಹಿತ್ಯಕ ಕಾರಣಗಳಿಂದ ಇರುವ ಬೆಲೆ ಸಾಂಸ್ಕೃತಿಕ ಕಾರಣಗಳಿಂದಲೂ ಇದೆ. ಅದು ತನ್ನ ಸಮಕಾಲೀನ ಅಂಶಗಳನ್ನು ಒಡಲಲ್ಲಿಟ್ಟುಕೊಂಡ ಕಾರಣ ದಾಖಲೆಯಂತೆಯೂ ತೋರಿದರೆ ಅಚ್ಚರಿಯೇನಲ್ಲ. ಕಾವ್ಯದಲ್ಲಿ ಬರುವ ಕೋಟೆ ಕೊತ್ತಳ ಬೀದಿ ಅರಮನೆ ಅಂಗಡಿ ಸಾಲುಗಳು ಅಂದಿನ ಕಾಲದ ರಾಜಧಾನಿಯೊಂದರ ವರ್ಣನೆಯಂತಿದೆ.* ದ್ವಾರಕಾಪುರದ ಪೇಟೆಯ ಸಾಲಿನಲ್ಲಿ ಬೆಳ್ಳೆಲೆಯಂಗಡಿಗಳು, ಗಂಧದಂಗಡಿಗಳು, ಪುಷ್ಪದಂಗಡಿಗಳೂ, ಹಣ್ಣಿನಂಗಡಿಗಳೂ, ಸುಗಂಧದಂಗಡಿಗಳು ಒಂದರ ನಂತರ ಒಂದು ಕಾಣಿಸುತ್ತಿದ್ದವು. ಅವುಗಳನ್ನು ದಾಟಿ ಮುಂದಕ್ಕೆ ನಡೆದರೆ ಕಂಚುಗಾರರು, ಕೈದುಗಾರರು, ಮಂಚಗಾರರು, ಶಿಲ್ಪಿಗರು, ಬಳೆಗಾರರು, ವಸ್ತ್ರಗಾರರು, ರನ್ನಪಡಿಯರು, ತೇಟಿಗರು, ವಣಿಕರು, ಸೆಟ್ಟಿಗಳು, ಚಿನ್ನಗಾರರು ಹೀಗೆ ವ್ಯಾಪಾರ ಉದ್ಯೋಗಗಳ ಜನರನ್ನು ಕಾಣಬಹುದು.ಇಂಥ ವರ್ಣನೆ ಸೌರಾಷ್ಟ್ರ, ದ್ವಾರಕೆ, ಶಂಬರಾಸುರ ಪಟ್ಟಣ, ಶೋಣಿತಪುರಗಳ ಬಗ್ಗೆ ಹೇಳುವಾಗಲೆಲ್ಲ ಅದೇ ರೀತಿಯಲ್ಲಿ ಕ್ರಮದಲ್ಲಿ ಬರುವುದರಿಂದ ಕವಿ ಕಂಡ ತನ್ನ ಕಾಲದ ರಾಜಧಾನಿಯ ಚಿತ್ರಣವಿದು ಎಂಬುದಕ್ಕೆ ಆಧಾರ ಒದಗುತ್ತದೆ.

---

* ಶ್ರೀ ಬೆಟಗೇರಿ ಕೃಷ್ಣಶರ್ಮರು 'ಕನಕದಾಸರು ಕಂಡ ವಿಜಯನಗರ' ಎಂಬ ದೀರ್ಘ ಲೇಖನದಲ್ಲಿ ಮೋಹನ ತರಂಗಿಣಿಯ ಆಧಾರದಿಂದ ಈ ವರ್ಣನೆಗಳೆಲ್ಲ ವಿಜಯನಗರದ ವಾಸ್ತವ ಸ್ಥಿತಿಗಳಾಗಿದ್ದುವೆಂಬ ಬಹುಮೂಲ್ಯ ಅಭಿಮತಕ್ಕೆ ಬರುತ್ತಾರೆ.

ವಸಂತೋತ್ಸವದ ಹಬ್ಬವನ್ನು ಹೇಗೆ ಅಂದಿನ ಜನರು ಆಚರಿಸುತ್ತಿದ್ದರೆಂಬುದಕ್ಕೆ ಕೃಷ್ಣ-ರುಕ್ಮಿಣಿಯರಾಡಿದ ವಿವರಗಳು ದಾಖಲೆಗಳಾಗಿವೆ. ಹೊಂಡದ ರಚನೆ, ಬಣ್ಣ* ಸುಗಂಧಗಳನ್ನು ಮಿಶ್ರವಾಡುವುದು, ಪೂಜೆಯಾಗುವುದು, ಪರಸ್ಪರರು ಬಣ್ಣವನ್ನು ಎರಚಾಡುವುದು ಕ್ರಮವಾಗಿ ನಿರೂಪಿತವಾಗಿವೆ. ಆ ಸಂದರ್ಭದಲ್ಲಿ 'ಧವಳ ಶೋಭನ'ಗಳನ್ನು ಹಾಡುತ್ತಿದ್ದುದು ಗಮನಾರ್ಹ.

ಪ್ರದ್ಯುಮ್ನ ರತಿಯರ ವಿವಾಹ ವರ್ಣನೆಯ ಭಾಗದಿಂದ ಆ ಕಾಲದ ವಿವಾಹ ವಿಧಿ-ವಿಧಾನಗಳನ್ನು ಆಚರಣೆಯನ್ನು ಗುರುತಿಸಬಹುದು. ಮಜ್ಜನ, ಬಾಸಿಂಗ ಕಟ್ಟುವಿಕೆ, ಕಾಡಿಗೆ ಕಸ್ತೂರಿ ಚಂದನಗಳ ಅಲಂಕರಣ, ಶೋಭಾನ ಪದಗಳನ್ನು ಹಾಡುವಿಕೆ, ಮಂಟಪಕ್ಕೆ ಕರೆತರುವುದು, ತೆರೆಯನ್ನು ಅಡ್ಡವಾಗಿ ಹಿಡಿಯುವುದು, ಮೆಟ್ಟಕ್ಕಿಯ ಮೇಲೆ ನಿಲ್ಲಿಸುವುದು, ಮಂಗಳಾಷ್ಟಕ ಹೇಳುವುದು, ಧಾರೆ ಶಾಸ್ತ್ರ ನಡೆಸುವುದು-ಎಲ್ಲ ಸಾಂಪ್ರದಾಯಿಕ ವಿವಾಹದ ಕಾಲಕ್ಕೆ ನಡೆಸುತ್ತಿದ್ದ ಶಾಸ್ತ್ರ ವಿಧಿಗಳಾಗಿವೆ. ಪ್ರದ್ಯುಮ್ನ-ರತಿಯರ ಮತ್ತು ಅನಿರುದ್ಧ ಉಷೆಯರ ಪ್ರಥಮ ಸಮಾಗಮದ ರಾತ್ರಿ ನಡೆಸುವ ಪೂರ್ವಸಿದ್ಧತೆಗಳು ಅಂದಿನ 'ನಿಷೇಕ ವಿಧಿ'ಗಳ ಬಗ್ಗೆ ತಿಳುವಳಿಕೆ ನೀಡುತ್ತವೆ. ಶಯನಗೃಹವನ್ನು ಅಲಂಕರಿಸಿ ಹೂಗಳನ್ನು ಹಾಸಿರುವುದು, ಶುದ್ಧಸ್ನಾನ ಮಾಡಿಸುವುದು, ವೀಳ್ಯಕರಂಡಕ ಸಿದ್ಧಪಡಿಸುವುದು, ಪಿಂಗಾಣಿ ಬಟ್ಟಲಿಡುವುದು, ದೀಪಗಳನ್ನಿಡುವುದು ಪ್ರಸ್ತದ ಪೂರ್ವದ ವಿವರಗಳಾಗಿ ಕಾವ್ಯದಲ್ಲಿ ಬಂದಿವೆ.

ಅನಿರುದ್ಧ ತನ್ನ ಸಂಗಡಿಗರೊಡನೆ ನಡೆಸುವ ಬೇಟೆಯಲ್ಲಿ ಅಂದಿನ ಬೇಟೆಯ ಬದುಕು ಸ್ಪಷ್ಟವಾಗಿದೆ. ಬೇಟೆಯ ಸನ್ನಾಹ, ಸಿದ್ಧತೆಗಳು, ಪರಿಕರಗಳು, ವಿಧಾನಗಳು ಬೆಳಕಿಗೆ ಬರುತ್ತವೆ. ಬೇಟೆಗೆ ಬಳಸಿದ ಬಲೆಗಳ ವೈವಿಧ್ಯವೇ ಅಚ್ಚರಿ ಮೂಡಿಸುತ್ತದೆ.

ಪಿಡಿವಲೆ ಸೆರೆವಲೆ ಕಾಲ್ವಲೆ ಕೊರಲ್ವಲೆ
ಸಿಡಿವಲೆ ಪಾಜಿ ಬೆಳ್ಳಾರ
ಬಡಿವಲೆ ಬಲುವಲೆಗಾರರು ಕೂಗಿ ಬೊ
ಬ್ಬಿಡುತಲೈದಿದರು ಮುಂಗಡೆಯ ॥ (೧೯-೧೬)

---

* ನೋಡಿ : ಕರ್ನಾಟಕ ಜನಜೀವನ

ಬೇಟೆಯಲ್ಲಿ ಬಾಯಿಕಟ್ಟುವ, ಕಾಲ್ಗೆ ಅಡ್ಡಗಟ್ಟುವ, ಬಡಿಗೋಲದ, ಬಿಲ್ಲಿನ, ಕೊಚ್ಚುವ ವಿಧಾನಗಳಿದ್ದುದಾಗಿ ಮುಂದಿನ ಪದ್ಯಗಳಲ್ಲಿ ಬರುವ ವರ್ಣನೆಯಿಂದ ತಿಳಿಯುತ್ತದೆ.

ಬ್ರಾಹ್ಮಣರ ಬೀದಿಯಲ್ಲಿಯ ಬ್ರಾಹ್ಮಣರು ಊಟಮಾಡುತ್ತಿದ್ದ ಪದಾರ್ಥಗಳು, ಕೃಷ್ಣನ ಆರೋಗಣೆಯಲ್ಲಿ ಬರುವ ಪದಾರ್ಥಗಳು ಅಂದಿನ ಊಟದ ವಿವರಗಳನ್ನು ನೀಡುತ್ತವೆ. ಮೇಲೋಗರ, ಪಳಿದ್ಯ, ಪಲ್ಯ, ಅಕ್ಕಿಯನ್ನ, ತುಪ್ಪ, ತೊವ್ವೆ ತೋಯಸಾನ್ನ, ಪಾಯಸ, ಕಜ್ಜಾಯ, ದಧ್ಯನ್ನ, ಮಜ್ಜಿಗೆ, ತಿಳಿ ಮೊದಲಾದವುಗಳ ಉಲ್ಲೇಖವಿರುವುದು ಗಮನಾರ್ಹ. ಬಾಣಾಸುರನ ಪೂಜಾವಿವರಗಳು, ಉಷೆಯು ಶಿವದರ್ಶನಕ್ಕೆ ಹೋಗುವಾಗ ಬಂದಿರುವ ಗಿಡಮರಗಳು ಫಲಪುಷ್ಪಗಳು ಆ ಕಾಲದ ಅಂಶಗಳಾಗಿ ಮಹತ್ವ ಪಡೆಯುತ್ತವೆ. ಗೀತೆಗಳನ್ನು ಹಾಡುವ, ನರ್ತಿಸುವ, ವಾದ್ಯ ನುಡಿಸುವ ಸಂಗತಿಗಳೂ ಇದೇ ತೆರನಾಗಿ ಮುಖ್ಯವಾಗಿವೆ.

ಕಾವ್ಯದಲ್ಲಿ ಸಾಮಾನ್ಯವಿವರಗಳೂ ಹೇಗೆ ಐತಿಹಾಸಿಕ ಸಾಂಸ್ಕೃತಿಕ ಮಹತ್ವ ಪಡೆಯಬಲ್ಲವು ಎಂಬುದಕ್ಕೆ ಕನಕದಾಸರ ಈ ಕೃತಿ ನಿದರ್ಶನವಾಗಿದೆ. ಮಹಾ ಶಿವಭಕ್ತನಾದ ಬಾಣಾಸುರನು ಪೂಜಾಗೃಹದಲ್ಲಿ ಲಿಂಗಪೂಜೆ ಮಾಡುವ ಉಲ್ಲೇಖವಿದೆ. ಆತ 'ಶಿರದೆಡೆಯೊಳಿರ್ದ ಶಿವಲಿಂಗದೇವರ ಪರಮವಸ್ತ್ರವ ಬಿಚ್ಚಿ ತೆಗೆದು' ಕೈಗೆ ತೆಗೆದು ಪೂಜಿಸುವನು. ಪೂಜೆಯ ಉದ್ದಕ್ಕೂ ಲಿಂಗವನ್ನು ಕರಸ್ಥಲದಲ್ಲಿ ಹಿಡದು ಭಸ್ಮ, ಹೂವು, ಮಾಲೆ, ನೈವೇದ್ಯ ಅರ್ಪಿಸುವನು. ಆದರೆ ಆತನ ಮಗಳಾದ ಉಷೆಯು ಊಟಕ್ಕೆ ಮುಂಚೆ ಲಿಂಗಪೂಜೆ ಮಾಡಿ 'ಅವಧರಿಸಿದಳು ಲಿಂಗವನುರಸ್ಥಳದಲಿ' ಧರಿಸುತ್ತಾಳೆ. ತಲೆಯ ವಸ್ತ್ರದಲ್ಲಿ ಲಿಂಗವನ್ನು ಕಟ್ಟಿಡುವ ಮತ್ತೆ ಎದೆಯ ಮೇಲೆ ಧರಿಸುವ ಎರಡೂ ಸ್ಥಿತಿಗಳನ್ನು ಕಾವ್ಯ ದಾಖಲಿಸುವುದರಿಂದ ಆ ಕಾಲದ ಶೈವ, ವೀರಶೈವ ಆಚಾರ ವಿಚಾರಗಳ ಬಗ್ಗೆ ಹೆಚ್ಚಿನ ಅಧ್ಯಯನಕ್ಕೆ ಆಸ್ಪದ ನೀಡುತ್ತದೆ. ಇಂಥ ಕಾರಣಗಳಿಂದ ಕಾವ್ಯಕೃತಿಗೆ ಸಾಂಸ್ಕೃತಿಕ ಮಹತ್ವವಿದೆ.

ಕನಕದಾಸರ ಕಾವ್ಯದಲ್ಲಿ ಪ್ರಧಾನ ಪಾತ್ರಗಳು ಕಡಿಮೆಯಾಗಿದ್ದರೂ ಜನ ಸಾಮಾನ್ಯರನ್ನು ಪ್ರತಿನಿಧಿಸುವ ಹಲವು ಅನಾಮಧೇಯ ಪಾತ್ರಗಳಲ್ಲಿ ಬರುತ್ತವೆ. ಹಲವು ಉದ್ಯೋಗಗಳ ಜನರು, ಹಾಡುವವರು, ನಟಿಸುವವರು, ದ್ವಾರಪಾಲಕರು, ಬೇಡರ ಪಡೆ, ವೇಶ್ಯೆಯರು, ಸೇವಿಕೆಯರು. ಸೈನಿಕರು ಅಂಥ ಸಾಮಾನ್ಯರನ್ನು ಹೋಲುತ್ತಾರೆ. ಕಾವ್ಯದ ಮುಖ್ಯ ಪಾತ್ರಗಳೂ ಕೂಡ ಅಪ್ಪಟ ಮಾನವೀಯ

ಸ್ತರದಲ್ಲಿ ವ್ಯವಹರಿಸುತ್ತವೆ. ದೇವತೆಗಳು, ರಾಕ್ಷಸರು, ದೇವವಾಹನಗಳು, ರಾಣಿಯರು ಎಲ್ಲ ಮನುಷ್ಯಸಹಜ ಗುಣದೋಷಗಳ ರಕ್ತಮಾಂಸದಿಂದ ಕೂಡಿ ವಾಸ್ತವವಾಗಿ ಮೂಡಿಬಂದಿದ್ದಾರೆ. ಅವರ ಪರಿಸರದ ಚಿತ್ರಣವನ್ನು ಕ್ಷಣಕಾಲ ಮರೆತರೆ ಅವರೆಲ್ಲ ಈ ನೆಲದ ಮೇಲೆ ನಡೆದಾಡುವ ವ್ಯಕ್ತಿಗಳೇ ಆಗಿರುವುದನ್ನು ಗುರುತಿಸಬಹುದು.

ಕನಕದಾಸರ ವೈಶಿಷ್ಟ್ಯವೆಂದರೆ ಎಲ್ಲಿಯೂ ಪಾತ್ರಗಳು ಕಪ್ಪುಬಿಳುಪು ಚಿತ್ರಗಳಂತೆ ಬರುವುದಿಲ್ಲ. ದೇವತೆಗಳನ್ನು ಉದಾತ್ತವಾಗಿ, ರಾಕ್ಷಸರನ್ನು ಕೀಳಾಗಿ ಬಣ್ಣಿಸಿಲ್ಲ. ರಾಕ್ಷಸಪಾತ್ರಗಳೂ ಧೀರ–ಗಂಭೀರ ಆಕೃತಿ ಪಡೆದು ಗೌರವದ ವ್ಯಕ್ತಿತ್ವವನ್ನು ಹೊಂದಿವೆ. ರಾಕ್ಷಸರೆಂದರೆ ದುಷ್ಟರು, ನೀಚರು ಎಂಬ ಪೂರ್ವಾಗ್ರಹದಿಂದ ಅವರನ್ನು ಹೀನಾಯವಾಗಿ ಚಿತ್ರಿಸಲು ಹೋಗಿಲ್ಲ ಎಂಬುದು ಸಮಾಧಾನಕರವಾದ ಅಂಶ.

ಕನಕದಾಸರ ಕಾವ್ಯವಾದರೂ ಇಲ್ಲಿ ಹರಿಸರ್ವೋತ್ತಮ ತತ್ವ ಮೆರೆದಿಲ್ಲ. ಅನ್ಯ ಮತದ ಖಂಡನೆಗೆ ಅವಕಾಶವಿಲ್ಲ. ಕೃಷ್ಣ ಮತ್ತು ಶಿವನ ಪಾತ್ರಗಳೆರಡಕ್ಕೂ ಸಮಾನ ಗೌರವವಿದೆ. ಕೃಷ್ಣಸ್ತುತಿಯಂತೆ, ಶಿವಸ್ತುತಿಯೂ ಬಂದಿದೆ. ನಮ್ಮ ಸಂಸ್ಕೃತಿಯ ಮಹೋನ್ನತ ತತ್ವ, ಸ್ವಮತನಿಷ್ಠೆ, ಪರಮತ ಸಹಿಷ್ಣುತೆ, ಈ ಕಾವ್ಯದ ಸಂದೇಶವಾಗಿದೆ, ಆದರ್ಶವಾಗಿದೆ. ಮತಪ್ರಚಾರದ ಹೆಗ್ಗಳಿಕೆ ಭಾವವೂ ಕಾವ್ಯದಲ್ಲಿ ಸುಳಿದಿಲ್ಲ ಎಂಬುದೇ ಕಾವ್ಯದ ಅಗ್ಗಳಿಕೆ, ಹಿರಿಮೆ.

ಕನಕದಾಸರ ಕಾವ್ಯದಲ್ಲಿ ಹಲವಾರು ದೋಷಗಳು ಕೊರತೆಗಳು ಕಂಡುಬರುವುದು ರುಕ್ಮಿಣಿಯು ಮಗುವನ್ನು ಕಳೆದುಕೊಂಡಾಗ ಪಡುವ ಶೋಕ ತಿರುಕೊಳವಿನಾಚಿಯ ಅಥವಾ ಚಂದ್ರಮತಿಯ ಪ್ರಲಾಪದಷ್ಟು ಶಕ್ತಿಯುತವಾಗಿಲ್ಲ; ಶೃಂಗಾರ ಭಾವವು ರತ್ನಾಕರವರ್ಣಿಯಂತೆ ಹೆಚ್ಚು ನಯವಾಗಿ ಬಂದಿಲ್ಲ; ಕಾಮದಹನ, ರತಿವಿಲಾಪಗಳು ಹರಿಹರ ಕವಿಯಂತೆ ಸಾಕಾರಗೊಂಡಿಲ್ಲ. ಯುದ್ಧಬಣ್ಣನೆ ಕುಮಾರವ್ಯಾಸನ ಶಕ್ತಿ ಪಡೆದಿಲ್ಲ–ಹೀಗೆ ಮುಂತಾದ ಹೇಳಿಕೆಗಳನ್ನು ಸಾಧಾರವಾಗಿ ವಿಸ್ತರಿಸಬಹುದು. ಒಟ್ಟಿನಲ್ಲಿ ಕನಕದಾಸರಿಗೆ ಕಲಾತ್ಮಕತೆಯ ಜಾಣ್ಮೆ ಒದಗಿಬಂದಿಲ್ಲ ಎನ್ನಬಹುದು.

ಆದರೆ ಕನ್ನಡ ಭಾಷೆಯ ಸರಳ ಪ್ರಯೋಗದಿಂದ, ಅಲಂಕಾರಗಳ ಮಾದಕತೆಯಿಂದ, ಶೃಂಗಾರಸದ ರುಚಿಯಿಂದ ಕಾವ್ಯ ನಿಜಕ್ಕೂ 'ಮೋಹನ'ವಾಗುತ್ತದೆ. ಭಕ್ತಿ ಭಾವದ ಮೋಹನ ತರಂಗಿಣಿಯಾಗಿರದಿದ್ದರೂ 'ತನಿರಸ ತೀವಿದ' ಆಕರ್ಷಕ ಆಹ್ಲಾದಕರ ಹಾಡುಗಬ್ಬವಾಗಿ ಮೋಹನ

ತರಂಗಿಣಿಯಂತೂ ಖಂಡಿತವಾಗಿ ಆಸ್ವಾದ್ಯವಾಗಿದೆ. ಕವಿಯ ಕಲಾತ್ಮಕತೆಯನ್ನು ಪ್ರಶ್ನಿಸಬಹುದಾದರೂ ಕಾವ್ಯನಿರ್ಮಾಣ ಶಕ್ತಿಯನ್ನು, ಸಾಂಗತ್ಯ ಪದ್ಯಗಳ ರಚನೆಯ ಸಾಮರ್ಥ್ಯವನ್ನು ಯಾರೂ ಪ್ರಶ್ನಿಸುವಂತಿಲ್ಲ. ನಡುಗನ್ನಡ ಕವಿಗಳಲ್ಲಿ ಅದರಲ್ಲಿಯೂ ಸಾಂಗತ್ಯದ ಕವಿಗಳಲ್ಲಿ ಕನಕದಾಸರ ಸ್ಥಾನ ಮೇಲ್ತರಗತಿಯದು. ಮೋಹನ ತರಂಗಿಣಿಯ ಕಾವ್ಯಮಯತೆ, ಗೇಯತೆಗಳು ಸದಾಕಾಲ ನಿಲ್ಲಬಲ್ಲ ಅಂಶಗಳು.

# ಕನ್ನಡದಲ್ಲಿ ನಳದಮಯಂತಿಯರ ಸಾಹಿತ್ಯ

**ಚೆನ್ನಣ್ಣ ವಾಲೀಕಾರ**

೧

ಸಂಸ್ಕೃತ ಮಹಾಭಾರತದ ವನಪರ್ವದಲ್ಲಿ ಬರುವ ನಳೋಪಾಖ್ಯಾನವೇ ಕನ್ನಡದಲ್ಲಿ ನಳದಮಯಂತಿಯರ ಸಾಹಿತ್ಯ ರಚನೆಗೆ ಮೂಲವಾಗಿದೆ. ಕಾಲಾನುಕಾಲದಿಂದ ಈ ಕಥೆ ಜನಮನವನ್ನು ಹಿಡಿದಿಡಲು ನಳನ ಶ್ರೇಷ್ಠಗುಣ, ಕಷ್ಟಸಹಿಷ್ಣುತೆ, ದಮಯಂತಿಯ ಧೈರ್ಯ, ಆದರ್ಶ ಪ್ರೇಮ ಮೂಲ ಕಾರಣವಾಗಿವೆ. ಈ ಕಥೆ ಭಾರತೀಯ ಭಾಷೆಗಳಿಗಷ್ಟೇ ಅಲ್ಲ, ಜಗತ್ತಿನ ಪ್ರಮುಖ ಭಾಷೆಗಳಾದ ಇಂಗ್ಲೀಷ್, ಫ್ರೆಂಚ್, ಜರ್ಮನ್, ಇಟಾಲಿಯನ್, ಸ್ವೀಡಿಷ್, ಸೆಕ್, ಪೋಲಿಷ್, ರಷಿಯನ್, ಗ್ರೀಕ್ ಮತ್ತು ಹಂಗೇರಿ ಭಾಷೆಗಳಲ್ಲಿ ಕಾಣಿಸಿಕೊಂಡಿದೆ. ಈ ಕಥೆಯ ಶ್ರೇಷ್ಠತೆ ಮತ್ತು ಸೊಗಸೇ, ವಿಶ್ವ ಸಾಹಿತ್ಯದ ಕಥಾರತ್ನಗಳಲ್ಲಿ ಒಂದೆಂದು ಪರಿಗಣಿಸಲು ಕಾರಣವಾಗಿದೆ.

ಈ ಕಥೆಯನ್ನೆತ್ತಿಕೊಂಡು ಕನ್ನಡದಲ್ಲಿ ಚೌಂಡರಸ, ಕನಕದಾಸ, ಶಾಲ್ಯದ ಕೃಷ್ಣರಾಯ, ಕೆಂಪಯ್ಯ, ಮುಮ್ಮಡಿ ಕೃಷ್ಣರಾಜ, ಬಸವಪ್ಪಶಾಸ್ತ್ರಿ, ಕೆರೂರ ವಾಸುದೇವಯ್ಯನವರು ಗದ್ಯಪದ್ಯ ನಾಟಕ, ಚಂಪೂ ಮತ್ತು ಯಕ್ಷಗಾನ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಹೇಳಿದ್ದಾರೆ. ಇವೆಲ್ಲವುಗಳಲ್ಲಿ ಕನಕದಾಸರ ನಳಚರಿತೆಯಷ್ಟು ಉಳಿದ ಕೃತಿಗಳು ಪ್ರಸಿದ್ಧವಾಗಲಿಲ್ಲ. ಈ ಚರಿತೆಯ ಸಹಜತೆ, ಸೊಗಸು, ಸತ್ವ ಉಳಿದ ಕೃತಿಗಳಿಗೆ ಬರಲಿಲ್ಲ. ನಳಕಾರ್ಕೋಟಕರ ಸಂವಾದ, ದಮಯಂತಿಯ ಶುದ್ಧಪ್ರೇಮ, ನಳನ ಸತ್ಯಸಂಧತೆ ಇಂದಿಗೂ ಜನಮನದಲ್ಲಿ ಒಂದಾಗಿ ಹೋಗಿರುವುದರಿಂದ ಕನಕದಾಸರ ನಳಚರಿತ್ರೆ ಲೋಕ ಪ್ರಿಯವಾಗಿದೆ. ಕನ್ನಡದಲ್ಲಿ ಬಂದ ಎಲ್ಲಾ ಕೃತಿಗಳು ಸಿಗಲಾರದ ಸಲುವಾಗಿ ಕೆಲಕೃತಿಗಳ ಮೌಲ್ಯಮಾಪನ ಮೊದಲುಮಾಡಿ ನಂತರ ಕನಕದಾಸರ ನಳಚರಿತ್ರೆಯ ವಿಮರ್ಶೆಗೆ ತೊಡಗಿದರೆ ಆ ಕೃತಿಯ ಸತ್ವ ಸೊಗಸು ಎಷ್ಟೆಂಬುದು ತಿಳಿದು ಬರುವುದು. ಆ ಕಾರಣದಿಂದ ಕೆಲಕೃತಿಗಳ ಮೌಲ್ಯಮಾಪನ ಮೊದಲು ಮಾಡಲು

ಹೊರಟದ್ದು. ಭಾಷಾ ಭಿನ್ನತೆಯಿಂದ ಆಯಾ ಕೃತಿಗಳಲ್ಲಿ ಹಲಕೆಲ ಮಾರ್ಪಾಡುಗಳಿದ್ದರೂ ಮೂಲ ಆಶಯ ಒಂದೇ ಆಗಿದೆ.

**(೧) ಚೌಂಡರಸನ ನಳಚಂಪು**

ಹದಿಮೂರನೆಯ ಶತಮಾನದವನಾದ ಚೌಂಡರಸ ಬ್ರಾಹ್ಮಣ ಕವಿ, ಜೈನಕವಿಗಳಾದ ಪಂಪ ಪೊನ್ನ, ಬ್ರಾಹ್ಮಣ ಕವಿಗಳಾದ ಚಂದ್ರರಾಜ, ರುದ್ರಭಟ್ಟರನ್ನು ತನ್ನ ಮಾರ್ಗದರ್ಶಿಗಳನ್ನಾಗಿ ಮಾಡಿಕೊಂಡು ಚಂಪೂಶೈಲಿಯಲ್ಲಿ ತನ್ನ ಕೃತಿಗಳನ್ನು ರಚಿಸಿರುವನು. ಇವರು ಬರೆದಿರುವ ಮೂರು ಕೃತಿಗಳಲ್ಲಿ ಬಾಣಾಸುರ ವಿಜಯ ಇನ್ನೂವರೆಗೆ ಸಿಕ್ಕಿಲ್ಲ. ಕಲ್ಯಾಣ ನಳಖ್ಯಾತಿ ಮತ್ತು ದಶಕುಮಾರ ಚರಿತ್ರೆ ಸಿಕ್ಕಿವೆ. ನಳನ ಕುರಿತು ಸಂಸ್ಕೃತದಲ್ಲಿ ನಲವತ್ತೆರಡು ಕೃತಿಗಳು ರಚಿತವಾಗಿದ್ದರೆ ಕನ್ನಡದಲ್ಲಿ ಹದಿಮೂರು ಕೃತಿಗಳು ಹುಟ್ಟಿಕೊಂಡಿವೆ. ಇದರಿಂದ ಈ ಕೃತಿಯ ಜನಾನುರಾಗ ಎಷ್ಟೆಂಬುದು ತಿಳಿದು ಬರುವುದು.

ಚೌಂಡರಸ ಬರೆದ ನಳಚಂಪು ಕನ್ನಡದಲ್ಲಿ ನಳದಮಯಂತಿಯರ ಕುರಿತು ಬರೆದ ಮೊದಲ ಕೃತಿಯಾಗಿದೆ. ಇವನು ತನ್ನ ನಳಚಂಪುವಿನಲ್ಲಿ ತನ್ನನ್ನು 'ಕರ್ನಾಟಕವಂಶ ಶೃಂಗಾರರಸಂ' ಎಂದು ಹೇಳಿಕೊಂಡಂತೆ ನಳದಮಯಂತಿಯರ ಈ ಕಥೆಯನ್ನು ಹೆಚ್ಚಾಗಿ ಶೃಂಗಾರರಸಕ್ಕೆ ಮೀಸಲಾಗಿಟ್ಟದ್ದು ಕಂಡು ಬರುವುದು. ನಳಚಂಪುವಿನ ಕಥಾನಾಯಕನಾದ ನಳಮಹಾರಾಜನ ವ್ಯಕ್ತಿತ್ವ ಎಂಥದಿತ್ತೆಂಬುದು ಈ ಕೆಳಗಿನ ಪದ್ಯದಲ್ಲಿ ಕಾಣಬಹುದು.

> ಬಡಿದೊಡೆ ಖಡ್ಗಮಂ ನಳನೃಪಂ ರಿಪುವಾಗಳೆ ಯುದ್ಧರಂಗದೊಳ್
> ಮಡಿವನಿದಿರ್ಚನೆಂಬ ನುಡಿಗೇಳ್ದೊಡೆ ತನ್ನಯ ರಾಜ್ಯಮೆಲ್ಲಮಂ
> ಬಡುವನಮರ್ಚಿದುಂಗುಟವಲುಂಗಿದೊಡಂ ಪ್ರಿಯ ಮೇಲೆ ಬೇಗದಿಂ
> ಕೆಡೆಮನದೇನಮಾನುಷಮೊ ಬಾಹುಬಲಂ ವಿಮಳಾಧಿನಾಥನಾ ॥

ಕಥಾನಾಯಕನಾದ ನಳನ ವರ್ಣನೆ ಈ ರೀತಿ ಮಾಡಿದರೆ ಕಥಾನಾಯಕಿಯಾದ ದಮಯಂತಿಯ ಸೌಂದರ್ಯ ಅಷ್ಟೇ ಜನಜನಿತವಾಗಿ ದೇಶದೇಶಗಳಲ್ಲಿ ಹಬ್ಬಿದ್ದನ್ನಿಲ್ಲಿ ಕಾಣಬಹುದು.

> ರೂಪವಿಹೀನರಂ ಕುಟಿಲ ಬುದ್ಧಿಗಳಂ ಪರಪೀಡೆಯುಳ್ಳರಂ
> ಕೋಪಿಗಳಂ ಕುಲಾಧಮರನಸ್ಥಿರರಂ ಸತತಂ ದರಿದ್ರರಂ
> ಚಾಪಲಚಿತ್ತರಂ ಮಱೆದು ನಿರ್ಮಿಸಿದುತ್ಕಟ ಚಿಂತೆಯಿಂದೆ ತ
> ತ್ಪಾಪಮಡಂಗಲೆಂದು ಪಡೆದಂ ದಮಯಂತಿಯನಬ್ಜಸಂಭವಂ ॥

ವರ್ಣನೆಯೇ ಚೌಂಡರಸನ ಕಾವ್ಯಗುಣವಾಗಿದೆ. ಅದಕ್ಕಾಗಿ ನಳದಮಯಂತಿಯರ ಸ್ವಯಂವರಕ್ಕೆ ಹೆಚ್ಚಿನ ಭಾಗ ಇಟ್ಟು ಉಳಿದ ಮುಂದಿನ ಭಾಗವನ್ನು ಬಹು ಬೇಗನೆ ಮುಗಿಸಿದಂತೆ ಕಾಣುವುದು. ನಳ ಬೇಟೆಯಾಡಲು ಬಂದು ಸರೋವರದ ಸಮೀಪದಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾಗ ಒಂದು ಸುಂದರ ಹಂಸಪಕ್ಷಿಯನ್ನು ಕಂಡನು. ಅದನ್ನು ಹಿಡಿಯಲು ಹೋದಾಗ ಆ ಪಕ್ಷಿ ಹೇಳಿದ ಮಾತುಗಳು ಬಲು ಮುಖ್ಯವಾಗಿವೆ :

ಶಿಕ್ಷಿಸುವೊಡೆ ಮುಳಿದಾಂತ ವಿ
ಪಕ್ಷಂಗಳ ಕಾದಿ ಪಿಡಿವುದಲ್ಲದೆ ಮುಳಿಸಿಂ
ಪಕ್ಷಿಗಳಂ ಪಿಡಿವುದು ನಿಜ
ಲಕ್ಷಣಮೇ ಭೂಭುಜರ್ಗೆ ನೃಪಕುಲತಿಲಕಾ ॥

ಹಂಸ ಬಂದು ದಮಯಂತಿಯ ಜೊತೆ ಮಾತುಕಥೆಯಾಡಿ ಮತ್ತೆ ನಳನಲ್ಲಿಗೆ ಮರಳಿ ಪ್ರೇಮರಾಯಭಾರ ಮಾಡುವ, ದೇವತೆಗಳೂ ದಮಯಂತಿಯನ್ನು ಮದುವೆಯಾಗಲು ಬಯಸುವ ಪ್ರಸಂಗಗಳೂ ಸುಂದರವಾಗಿದೆ. ಶೃಂಗಾರರಸನಾಮಕನಾದ ಚೌಂಡರಸನು ತಾನು ಹೇಳಿಕೊಂಡಂತೆ ನಳದಮಯಂತಿಯರ ವಿವಾಹ ವೈಭವವನ್ನು ವರ್ಣಿಸುವುದರಲ್ಲಿ ತನ್ನ ಪ್ರಾಚೀನ ಕವಿ ಸಾಮರ್ಥ್ಯವನ್ನು ತೋರಿಸಿದ್ದಾನೆ. 'ವಿವಾಹ ಹೋಮಮನೆಸಗಿ ಬಳಿಕ್ಕಮುರ್ದಸಪ್ತಪದಿಯುಂ ಮೆಟ್ಟಲ್ ಪಸರಿಸಿರೆ ಮಾತ್ರೆತಲ್? ಪಡ್ರಸಭೋಜನದೆಸೆವ ಬೂವದೆಡೆಯಾಯ್ತಾಗಳ್' ಎಂದು ಮದುವೆಗೆ ಬಂದಿದ್ದ ಬಂಧು ಬಳಗ ಆಪ್ತರಿಗೆಲ್ಲ ಭಾರಿಭೋಜನವಾಯಿತು.

ಮದುವೆಯಾಗಿ ಹೆಂಡತಿಯೊಂದಿಗೆ ಊರಿಗೆ ಹಿಂದಿರುಗಿ ಎರಡು ಮಕ್ಕಳನ್ನು ಪಡೆದು ಸುಖದಿಂದಿರುತ್ತಿರುವಾಗ ನಳನಿಗೆ ಕಲಿ ಮೂಲಾದದ್ದು ಅವನ ಸತ್ವಪರೀಕ್ಷೆಗೆ ಆರಂಭವಾಯಿತು. ದೇವತೆಗಳು ಮದುವೆಯಾಗಬೇಕಾಗಿದ್ದ ದಮಯಂತಿಗೆ ನಳ ಮದುವೆಯಾದದ್ದು ಕಲಿಗೆ ಸಿಟ್ಟು ಬಂದು ಅವನನ್ನು ಕಾಡಲು ಮೂಲಾದನು. ಇಲ್ಲಿ ನಾವು ಮೇಲ್ವರ್ಗ ಕೆಳವರ್ಗಗಳ ವರ್ಗವ್ಯವಸ್ಥೆ ಕಾಣುತ್ತೇವೆ. ಆದರೆ ಮುಂದೆ ಗಂಡನಿಂದಗಲಿದ ದಮಯಂತಿಗೆ ಬೇಡ ಗಂಟುಬಿದ್ದಾಗ ಅವನನ್ನು ತನ್ನ ಶಾಪದಿಂದ ಸುಟ್ಟು ಹಾಕಿದಳು ಎಂಬ ದಮಯಂತಿಯ ಪಾತ್ರವನ್ನು ಕಡಿಮೆ ಮಾಡುವುದು. ಈ ವಿಷಯ ಕುರಿತು ಜೈನ. ವೀರಶೈವ ಕವಿಗಳು ಬರೆದಿದ್ದರೆ, ದಾಸರು ಚಿತ್ರಿಸಿದರೆ ಈ ಪಾತ್ರಕ್ಕೆ ಘನತೆ ಬರುತ್ತಿತ್ತು. ಸಾಮಾನ್ಯ ಸ್ತ್ರೀಯಂತೆ ದಮಯಂತಿ ವರ್ತಿಸಲಾರಳು ಎಂಬ

ಮಾತು ಕನಕದಾಸರ ಕೃತಿಯಲ್ಲಿ ಕಾಣುತ್ತೇವೆ.

ಕಲಿಯಿಂದ ನಳದಮಯಂತಿಗೆ ಒದಗುವ ಕಷ್ಟಗಳು ಓದುಗರ ಕರುಳು ಹಿಂಡುವವು. ಆರಂಭದಲ್ಲಿ ಸುಖಾಂತ ಮಧ್ಯದಲ್ಲಿ ದುಃಖಾಂತ ಇರುವ ಈ ಕಾವ್ಯ ಕೊನೆಗೆ ನಳದಮಯಂತಿಯರ ಕೂಡುವಿಕೆಯಿಂದ ಕಳೆದುಕೊಂಡ ರಾಜ್ಯ ಪಡೆಯುವುದರಿಂದ ಸುಖಾಂತವಾಗುವುದು. ಇದು ಚಂಪೂ ಕಾವ್ಯವೆನ್ನಿಸಿದರೂ ಉಳಿದ ಕಾವ್ಯಗಳಂತೆ ಇಲ್ಲಿ ಗದ್ಯಪದ್ಯ ಹದವಾದ ಪ್ರಮಾಣದಲ್ಲಿ ಬಳಕೆಮಾಡಿಲ್ಲ. ಪದ್ಯಗಳ ಸಂಖ್ಯೆಯೂ ಹೆಚ್ಚಿರುವದು. ಸಮಗ್ರ ಕಾವ್ಯವನ್ನು ಆಶ್ವಾಸಗಳನ್ನಾಗಿ ಮಾಡಿಲ್ಲ. ಸಾಮಾನ್ಯವಾಗಿ ಕಾವ್ಯದ ಕೊನೆಯಲ್ಲಿ ಬರುವ ಸಮಾಪ್ತಿ ಕಾವ್ಯವೂ ಇಲ್ಲಿ ಇಲ್ಲ. ಬರೀ ಶೃಂಗಾರಕ್ಕೆ ಹೆಚ್ಚಿನ ಮಹತ್ವ ನೀಡಿ ಕರುಣರಸದ ಪ್ರಸಂಗಗಳನ್ನು ಬಹುಬೇಗನೆ ಮುಗಿಸಿಬಿಟ್ಟಿದ್ದರಿಂದ ಈ ಕೃತಿ ಓದುಗರ ಮೇಲೆ ಅಷ್ಟೊಂದು ಪರಿಣಾಮ ಮಾಡುವುದಿಲ್ಲ. ಬದುಕಿನ ಬಹುಮುಖ್ಯ ಭಾಗವಾದ ಕಷ್ಟಜೀವನವನ್ನು, ಕರುಣಾಭಾಗವನ್ನು ಸಹಜವಾಗಿ ಹರಿಯಲು ಬಿಟ್ಟಿದ್ದರೆ ಈ ಕೃತಿಯ ಸೊಗಸು ಹೆಚ್ಚಾಗುತ್ತಿತ್ತು.

ಕವಿ ಬರೆದುದೆಲ್ಲ ಬಂಗಾರವಾಗುವದಿಲ್ಲ. ಕಾವ್ಯದ ಪ್ರತಿಸಾಲು ಮಿಂಚಾಗುವುದಿಲ್ಲ. ಆ ದೃಷ್ಟಿಯಿಂದ  ಈ ಕಾವ್ಯ ನೋಡಿದಾಗ ಅಲ್ಲಲ್ಲಿ ಚೌಂಡರಸ ಮಿಂಚಿದ್ದು ಇಲ್ಲಿ ಕಾಣಬಹುದು.

(i) ವಿರಹಸ್ಮೃತಿ ಕೇವಳಮೇ ಧರಿತ್ರಿಯೊಳ್ (ಪದ್ಯ ೬೩)

(ii) ಸತತಂ ಗಾಡಿಯೊಳಿರ್ಪ ಕೋಮಳೆಯ ರೂಪು ಮನೋಜನ ಮೈಮೆಯಲ್ಲವೆ (ಪದ್ಯ ೧೬೨)

(iii) ವಿರಹಮೇಂ ಕೇವಳಮೇ (ಪದ್ಯ ೧೮೬)

(iv) ಕಲಿಯ ಮಹಿಮೆಯೇಂ ಕೇವಳಮೇ (ಪದ್ಯ ೩೦೮)

(v) ಸರ್ವಜ್ಞನಾದೊಡಂ ಮತಿ ಖರ್ವತೆಯಂ ಪಡೆವನುಳಿದರೇಂ ದೊರೆ ಧರೆಯೊಳ್ (ಪದ್ಯ ೩೩೧)

(vi) ಪ್ರಾರಬ್ಧದ ಬಲೆಯನಳಿವ ಶೂರರುಮೊಳರೇ (ಪದ್ಯ ೩೬೭)

(vii) ಸುತರನಗಲ್ದೆಂತು ನಿಲ್ವರೊ ಕಲ್ಲೆರ್ದೆಗಳ್ (ಪದ್ಯ ೭೧೭)

ಚೌಂಡರಸ ಪ್ರಾಚೀನ ರೀತಿಯಲ್ಲಿ ಸಂಪ್ರದಾಯಶರಣನಾಗಿ ವ್ಯವಸ್ಥೆಯ ಪರವಾದ ದೃಷ್ಟಿಕೋನ ಇಟ್ಟುಕೊಂಡು ಬರೆದದ್ದರಿಂದ ಈ ಕೃತಿ ಪಾಂಡಿತ್ಯ ಪೂರ್ಣವಾಗಿ ರಚನೆಯಾಗಿದ್ದರೂ ಇದು ಕನಕದಾಸರ ನಳಚರಿತ್ರೆಯಂತೆ ಜನಮನಕ್ಕೆ ಮುಟ್ಟದೆ ಹೋಯಿತು. ತಿಳಿಯಾದ ಭಾಷೆಯಲ್ಲಿ ಬರದೆ ಪಂಡಿತರಿಗೆ

ಮೀಸಲಾಗಿದ್ದು ಚಂಪೂ ರೀತಿಯಲ್ಲಿ ಬರೆದದ್ದರಿಂದ ಶ್ರೀಸಾಮಾನ್ಯನ ಸಂವೇದನೆಗೆ ತಟ್ಟದೇ ಹೋದುದಕ್ಕಾಗಿ ಈ ಕೃತಿ ಅಷ್ಟೊಂದು ಜನಪ್ರಿಯವಾಗಲಿಲ್ಲ.

**(೨) ಬಸವಪ್ಪಶಾಸ್ತ್ರಿಗಳ ದಮಯಂತಿ ಸ್ವಯಂವರ**

'ಅಭಿನವ ಕಾಳಿದಾಸ' ಎಂದು ಹೆಸರಾದ ಬಸವಪ್ಪಶಾಸ್ತ್ರಿಗಳು ಆರು ನಾಟಕ, ಆರು ಕಾವ್ಯ, ಮೂರು ಚಂಪೂಗ್ರಂಥ, ಎಂಟು ಸಂಸ್ಕೃತ ಗ್ರಂಥಗಳನ್ನು ಬರೆದ ಘನಪಂಡಿತ ಕವಿಗಳು. ಮೈಸೂರಿನ ಶ್ರೀ ಚಾಮರಾಜ ಒಡೆಯರವರಿಗೆ ವಿದ್ಯಾ ಬೋಧಕರಾಗಿದ್ದರು. ಮತ್ತವರ ಆಸ್ಥಾನ ಕವಿಗಳಾಗಿದ್ದರು. ಅಲ್ಲಿರುವಾಗಲೇ ಈ 'ದಮಯಂತಿ ಸ್ವಯಂವರ' ಎಂಬ ಚಂಪೂಕಾವ್ಯ ಬರೆದಿದ್ದಾರೆ.

ಚೌಂಡರಸ ಕವಿಯಂತೆ ಇವರು ಚಂಪೂ ಶೈಲಿ ಪ್ರಿಯರಾದುದರಿಂದ ಅವನಂತೆ ಇವರು ವರ್ಣನಾಪ್ರಿಯ ಕವಿಗಳಿರುವರೆಂಬ ಮಾತು ಇಡೀ ಕಾವ್ಯದುದ್ದಕ್ಕೂ ಕಾಣುತ್ತೇವೆ. ಆದರೆ ಅವನಿಗಿಂತ ಇವರು ಶೃಂಗಾರದ ಜೊತೆಗೆ ಕರುಣ ಮತ್ತು ಶಾಂತಿರಸಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿದ್ದಾರೆ.

ಕಥಾನಾಯಕನಾದ ನಳನ ರೂಪು ಹೇಗಿತ್ತೆಂಬ ವರ್ಣನೆ ಇಲ್ಲಿ ಪ್ರಖರವಾಗಿ ಬಂದಿದೆ.

ನಳನೃಪನ ಚೆಲ್ವು ಮುಂದಿ
ನ್ನಿಳಿಕೈದಪುದೆಂದನಂಗತೆಯ ಮುನ್ನಮೆ ತಾಂ
ತಿಳಿದವನನೆ ಕುಸುಮಶರನಿ
ನ್ನಳಿದರ್ ತನ್ನೃಪನ ರೂಪಿಗೆಣೆವಂದಪರೇ ॥

ನಳನಂತೆ ಕಥಾನಾಯಕಿಯಾದ ದಮಯಂತಿಯ ಕೋಪಿಷ್ಠದ ಮಾತು ಬಸವಪ್ಪ ಶಾಸ್ತ್ರಿಗಳು ನಮ್ಮ ಮನ ಸೆರೆಗೊಳ್ಳುವಂತೆ ಚಿತ್ರಿಸಿದ್ದಾರೆ :

ರತಿದೇವಿ ರೂಪದೊಳ್ಬಾ
ರತಿ ವಿದ್ಯೆಯೊಳಬ್ಜನಾಭಸತಿ ಸೌಭಾಗ್ಯ
ಸ್ಥಿತಿಯೊಳಗಾ ಭೀಮಮಹೀ
ಪತಿಸುತೆ ದಮಯಂತಿಯೆಂದೊಡಂ ಕಿರಿದಕ್ಕುಂ ॥

ನಳನ ಊರುಕೇರಿ ದೇಶ ದಮಯಂತಿಯ ಜನನ ಬಾಲ್ಯ ಯೌವನದ ಒಂದೊಂದು ಬೆಳವಣಿಗೆಯ ಅವಸ್ಥೆಯನ್ನು ವರ್ಣಿಸಿದ್ದು ನೋಡಿದರೆ

ನಿಜವಾಗಿಯೂ ಇಲ್ಲಿ ಕಾಳಿದಾಸ ನೆನಪಾಗುವನು. ಅದಕ್ಕಾಗಿಯೇ ಬಸವಪ್ಪಶಾಸ್ತ್ರಿಗಳಿಗೆ ಅಭಿನವ ಕಾಳಿದಾಸ ಎಂದು ಕರೆದದ್ದು. ಇದನ್ನು ಚಂಪೂ ರೀತಿಯಲ್ಲಿ ಬರೆಯದೆ ಜನಕ್ಕೆ ಅರ್ಥವಾಗುವ ಸರಳ ರೀತಿಯಲ್ಲಿ ಬರೆದಿದ್ದರೆ ಇದರ ಮಹತ್ವ ಹೆಚ್ಚಾಗುತ್ತಿತ್ತು.

ದಮಯಂತಿಯ ರೂಪಕ್ಕೆ ಮರುಳಾಗಿ ಸ್ವಯಂವರಕ್ಕೆ ದೇವತೆಗಳು ಬಂದದ್ದು ನೋಡಿದರೆ ಆಗ ಮಾನವರಿಗೂ ದೇವತೆಗಳಿಗೂ ಸಂಬಂಧವಿತ್ತೆಂದು, ನಳನ ರಾಯಭಾರಿಯಾಗಿ ರಾಜಹಂಸ ಬಂದು ದಮಯಂತಿಗೆ ಅವನ ಪ್ರೇಮ ಸಂದೇಶ ಬೀರಿ ಹೋಗುವುದು ನೋಡಿದರೆ ಹಕ್ಕಿಗಳು ಮಾನವರೊಂದಿಗೆ ಮಾತನಾಡುತ್ತಿದ್ದವು, ಸಹಾಯ ಮಾಡುತ್ತಿದ್ದವು ಎಂದೆನ್ನಿಸುವದು. 'ಮಾಳ್ಪೆನಾಂ ಪ್ರಿಯಮೊಂದಂ' ಎಂದು ರಾಜಹಂಸ 'ನಿಮ್ಮಯ ಬಗೆವೊಕ್ಕುದನೀವೆಂ' ಎಂದು ನಳ ಮಾತುಕೊಟ್ಟಂತೆ ನಡೆದುಕೊಳ್ಳುವುದು ಆಗಿನ ಬದುಕಿನ ಮೌಲ್ಯವನ್ನೆತ್ತಿ ಹೇಳುವುದು.

ಇಡೀ ಕಾವ್ಯ ರಾಜಹಂಸ ನಳನ ರಾಯಭಾರಿಯಾಗಿ ಕೆಲಸ ಮಾಡುವ ದಮಯಂತಿ ನಳನ ವಿರಹದಿಂದ ಬಳಲುವ, ನಳ ದೇವತೆಗಳ ಪ್ರತಿನಿಧಿಯಾಗಿ ದಮಯಂತಿಯಲ್ಲಿಗೆ ಸ್ವಯಂವರಕ್ಕೆ ಬಂದಿರುವ ಪ್ರಸಂಗಗಳಿಂದ ತುಂಬಿಕೊಂಡಿದೆ. ಈ ಕಾವ್ಯ ತನ್ನ ಹೆಸರೇ ಹೇಳುವಂತೆ ದಮಯಂತಿಯ ಸ್ವಯಂವರಕ್ಕೆ ಮೀಸಲಾಗಿದೆ. ನಳದಮಯಂತಿಯರ ಪೂರ್ವಾರ್ಧದ ಕಥೆಯನ್ನಷ್ಟೇ ಈ ಕಾವ್ಯ ಹೇಳುವುದು. ಉತ್ತರಾರ್ಧದ ವಿಚಾರ ಬಿಟ್ಟಿದ್ದರಿಂದ ಬಸವಪ್ಪ ಶಾಸ್ತ್ರಿಗಳ ಶೃಂಗಾರ ಸಾರ್ಥಕವಾಗಿದೆ. ಉತ್ತರಾರ್ಧ ಭಾಗದ ದುಃಖಾಂತ ಕಥೆ ಹೇಳಿದ್ದರೆ ಶಾಸ್ತ್ರಿಗಳ ಕಲಮು ಹೇಗೆ ಕೆಲಸ ಮಾಡುತ್ತಿತ್ತು ? ಚೌಂಡರಸನಂತೆ ಸೋಲುತ್ತಿತ್ತೆ ಎಂಬ ಪ್ರಶ್ನೆ ಏಳುವವು. ಜನಸಾಮಾನ್ಯನಿಗೆ ಈ ಚಂಪೂಕಾವ್ಯ ಕಬ್ಬಿಣದ ಕಡಲೆಯಾದರೂ ಪಂಡಿತಕವಿಗಳು ಮೆಚ್ಚುವ ಕಾವ್ಯವಾಗಿದೆ. ಸಾಹಿತ್ಯಾಭ್ಯಾಸಿಗಳು ಓದುವ ಕೃತಿಯಾಗಿದೆ. ರಾಜಹಂಸ, ನಳದಮಯಂತಿ ಮತ್ತು ದೇವತೆಗಳ ಪ್ರಸಂಗಗಳಿಂದ, ಕಾವ್ಯದುದ್ದಕ್ಕೂ ಬಂದಿರುವ ಶೃಂಗಾರದ ವರ್ಣನಾ ವೈಭವದಿಂದ ನಾಲ್ಕು ಆಶ್ವಾಸಗಳಿಂದ ಕೂಡಿದೀ ಕಾವ್ಯ ಮೆಲುಕು ಹಾಕುವಂತಿದೆ.

ಸ್ವಯಂವರಕ್ಕೆ ಬಂದ ದೇವತೆಗಳು ನಳನಂತೆ ಕಾಣಲು ದಮಯಂತಿ ಪೇಚಿಗೆ ಸಿಲುಕಿದಾಗ ಪರಸ್ಪರ ಅವಳ ಪರವಾಗಿ ದೇವತೆಗಳಿಗೆ ಬೇಡಿಕೊಳ್ಳುವುದು ಹೆಣ್ಣಿನ ಪರ ಹೆಣ್ಣೇ ಕೆಲಸಮಾಡುವದೆಂದು, ಗಂಡಿಗಿಂತ ಹೆಣ್ಣಿನ ಗೋಳು ಹೆಣ್ಣೇ ಚೆನ್ನಾಗಿ ತಿಳಿಯುವದೆಂದು ಇಲ್ಲಿಯ ಈ ಪ್ರಸಂಗ ತಿಳಿಸುವದು.

ವರಿಸುವಳೆಂತುಟೀಕೆ ದಿಗಧೀಶ್ವರರೇ ಸಲೆ ನಿಮ್ಮನೆಲ್ಲರಂ
ವರಿಪಳುಮಲ್ತು ನಿಮ್ಮೊಳುಳಿದರ್ಗವಮಾನ ಮೆನತ್ತಾಮೊರ್ವನಂ
ಪಿರಿದನುರಾಗದಿಂ ನಿಜಮನ ಪ್ರಿಯನಂ ಭವದಂಶಪೂರ್ಣನಂ
ವರ ನಿಷಧೇಂದ್ರನಂ ವರಿಸಲಾಟಿಪಳೀವುದು ನೀಮನುಜ್ಞೆಯಂ

ಸಂಸ್ಕೃತಭೂಯಿಷ್ಠವಾಗಿ ಹೇಳದೆ ಜನಪದರಿಗೆ ಹತ್ತಿರಾಗಿ ಅರ್ಥವಾಗುವ ರೀತಿಯಲ್ಲಿ ಆಧುನಿಕಯುಗದ ಈ ಕವಿ ಹೇಳಿದ್ದರೆ ಇವರ ಕಾವ್ಯಕ್ಕೆ ಇನ್ನಷ್ಟು ಮಹತ್ವ ಬರುತ್ತಿತ್ತು.

ಇರ್ದಪುದೇಂ ನಿರ್ಗುಣಮುಂ
ನಿರ್ದೋಷಮುಮೆನಿಪ ವಸ್ತುಲೋಕದೊಳದರಿಂ
ಪೊರ್ದುವುದು ಗುಣವನೊಲವಿಂ
ತಿರ್ದುವುದಿರೆ ದೋಷಮಮಲಮತಿಗಳ ಕೃತಿಯೊಳ್ ॥

ಈ ಲೋಕದಲ್ಲಿ ಗುಣವಿಲ್ಲದ ಮತ್ತು ದೋಷವಿಲ್ಲದ ವಸ್ತು ಯಾವುದಿದೆ? ಆದ್ದರಿಂದ ಶ್ರೇಷ್ಠರಾದ ವಿದ್ವಾಂಸರು ಈ ಕಾವ್ಯದಲ್ಲಿ ಬಂದಿರುವ ದೋಷಗಳನ್ನು ತಿದ್ದಿ ಪ್ರೀತಿಯಿಂದ ಗುಣಗಳನ್ನೇ ಆರಿಸಿಕೊಳ್ಳಬೇಕೆಂದು ಪ್ರಾರ್ಥಿಸಿಕೊಳ್ಳುವ ಕವಿ ಮನಸ್ಸು ನಮಗೆ ತುಂಬ ದೊಡ್ಡದಾಗಿ ಕಾಣುವುದು. ಪದಸಂಪತ್ತಿನಿಂದ ಕವಿ ತುಂಬಿ ತುಳುಕುವನು. ಗಣ, ಯತಿ, ಪ್ರಾಸಗಳು ಸಮಯೋಚಿತವಾಗಿ ಬಂದಿರುವವು.

೧. ಗಳಗಳನೆ ಗಳಪುವರಗಿಳಿಗಳ ಕಲಗಳಗಳ (೩–೮)
೨. ಕೇತಕಿಯಿದೊಂದೆ ಗಡ ಸಾಕೇತ
೩. ನಳದಮ ನಳಮಳ ಮೆಲ್ಲೆರ್ದೆ (೩–೪)

ಪದಸಂಪತ್ತಿನಂತೆ ರಸಸ್ಯಂದಿ ಹೊಳೆಯಾಗಿ ಹರಿಯುವುದು. ಗಂಭೀರವಾಗಿ ಸಾಗುವುದು. ಶೃಂಗಾರ ಸಾಗರ ಉಕ್ಕೇರುವುದು ಛಂದಸ್ಸು ಗದ್ಯ ಪದ್ಯಗಳಿಂದ ಕೂಡಿ ಸಾಗುವುದು. ಕಂದವೃತ್ತಗಳು ನಿರರ್ಗಳವಾಗಿ ಸಾಗುವದು. ಹೊಸ ಮಾದರಿಯಲ್ಲಿ ಶ್ಲೇಷಾರ್ಥ ಬರುವಂತೆ ರಚಿಸಲಾಗಿದೆ.

೧. ಸುಮನಸರಿಗಾಮೋದಮನಮರ್ಚಿ (೧–೯೦)
೨. ಕದನಮೆ ಮಾಣೆನ್ನಿದಿರೊಳ್ಮದನಾ (೩–೫೬)
೩. ಮಲೆಯೆಂಬುದರಣ್ಯದೆ (೧–೮)

**(೩) ಕುಮಾರವ್ಯಾಸ ಭಾರತದಲ್ಲಿ ನಳದಮಯಂತಿ**

ಕುಮಾರವ್ಯಾಸ ಕವಿಯ ಮಹಾಭಾರತದ ಅರಣ್ಯಪರ್ವದ ಒಂಬತ್ತನೆಯ

ಸಂಧಿಯಲ್ಲಿ ನಳದಮಯಂತಿಯರ ಪ್ರಸಂಗ ಬರುವುದು. ಪದ್ಯ ೫ ರಿಂದ ೯ ರವರೆಗೆ ಸಂಕ್ಷಿಪ್ತ ರೂಪದಲ್ಲಿ ನಳದಮಯಂತಿಯರು ಪಟ್ಟ ಕಷ್ಟದ ಚಿತ್ರ ಕುಮಾರವ್ಯಾಸ ಮನಸೂರೆಗೊಳ್ಳುವಂತೆ ಚಿತ್ರಿಸಿದ್ದಾನೆ.

ಪಾಂಡವರು ಅರಣ್ಯವಾಸದಲ್ಲಿದ್ದಾಗ ಅರ್ಜುನನು ಮುಂದೆ ನಡೆಯುವ ಕುರುಕ್ಷೇತ್ರ ಯುದ್ಧದ ತಯ್ಯಾರಿಗಾಗಿ ಶಿವನಿಂದ ಪಾಶುಪತಾಸ್ತ್ರ ಪಡೆದು ದೇವೇಂದ್ರನಿಂದ ದೇವತಾ ಅಸ್ತ್ರಗಳನ್ನು ಪಡೆಯಲು ಸುರಲೋಕಕ್ಕೆ ಹೋದನು. ದೇವೇಂದ್ರನಲ್ಲಿಗೆ ಹೋದ ತಮ್ಮ ಅರ್ಜುನನು ಬೇಗ ಮರಳಿ ಬರಲಿಲ್ಲವೆಂದು ಧರ್ಮರಾಯ ತಮ್ಮಂದಿರೊಡನೆ ಚಿಂತಿಸುತ್ತ ಕುಳಿತಾಗ ದೇವೇಂದ್ರನು ಅರ್ಜುನನ ಸಂಗತಿಯನ್ನು ತಿಳಿಸಲು ಪಾಂಡವರಲ್ಲಿಗೆ ಲೋಮಶ ಮುನಿಗಳನ್ನು ಕಳಿಸಿಕೊಟ್ಟನು. ಆ ಮುನಿಗಳು ಕಾಮ್ಯಕವನದಲ್ಲಿರುವ ಧರ್ಮರಾಯನನ್ನು ಕಂಡು ಅರ್ಜುನನ ಕ್ಷೇಮ ಸಮಾಚಾರ ತಿಳಿಸುತ್ತ ನಿಮ್ಮಂತೆ ಕಷ್ಟಪಟ್ಟ ಅರಸರು ಈ ಭೂಮಂಡಲದಲ್ಲಿ ಇದ್ದಾರೆ ಎಂದು ಅವನಿಗೆ ಸಮಾಧಾನವನ್ನುಂಟುಮಾಡಲು ಈ ಹಿಂದೆ ರಾಜ್ಯಾಪಹಾರದಲ್ಲಿ ದ್ಯೂತವಾಡಿ ಸೋತು ಪಡಬಾರದ ಕಷ್ಟಪಟ್ಟ ನಳನ ಚರಿತ್ರೆಯನ್ನು ವಿವರಿಸಿದನು :

ಆತನೀತನ ಸಂತವಿಟ್ಟು
ದ್ಯೂತದಲಿ ನಳಚಕ್ರವರ್ತಿ ಮ
ಹೀತಳವ ಸೋತನು ಕಣಾ ಕಲಿಯಿಂದ ಪುಷ್ಕರಗೆ
ಭೂತಳವ ಬಿಸುಟಡವಿಗೈದಿದ
ನಾತ ನಿಜವಧು ಸಹಿತವನದಲಿ
ಕಾತರಿಸಿ ನಿಜಸತಿಯ ಬಿಸುಟನು ಹಾಯ್ದನಡವಿಯಲಿ ॥

ಕೇವಲ ಈ ಒಂದೇ ಒಂದು ಪದ್ಯದಲ್ಲಿ ಕುಮಾರವ್ಯಾಸ ಕಲಿಯ ಪ್ರೇರಣೆಯಿಂದ ದ್ಯೂತವಾಡಲು ಬಂದ ಪುಷ್ಕರನಿಗೆ ತನ್ನ ರಾಜ್ಯ ಸೋತು ನಳ ತನ್ನ ಪ್ರೀತಿಯ ಹೆಂಡತಿಯಾದ ದಮಯಂತಿಯನ್ನು ಅಡವಿಯಲ್ಲಿ ಬಿಟ್ಟುಹೋಗುವ ಶಬ್ದಚಿತ್ರ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಬಳಿಕ ಕಾರ್ಕೋಟಕನ ದೆಸೆಯಿಂ
ದಳಿಯ ನಿಜಋತುಪರ್ಣಭೂಪನ
ನಿಳಯಕೋಲೈಸಿದನು ಬಾಹುಕನೆಂಬ ನಾಮದಲಿ
ಲಲನೆ ತೊಳಲಿದು ಬರುತ ತಂದೆಯ
ನಿಳಯವನು ಸಾರಿದಳು ಬಳಿಕಾ
ನಳಿನಮುಖಿಯಿಂದಾಯ್ತು ನಳಭೂಪತಿಗೆನಿಜರಾಜ್ಯ ॥

ಮೊದಲಿನ ಪದ್ಯದಲ್ಲಿ ಜೂಜಾಡಿ ಸೋತ ನಳ ಅಡವಿಯಲ್ಲಿ ಹೆಂಡತಿಯನ್ನು ಬಿಟ್ಟು ಹೋದರೆ ಈ ಪದ್ಯದಲ್ಲಿ ನಳದಮಯಂತಿಯರ ಉತ್ತರಾರ್ಧದ ಕಥೆ ಬಂದಿದೆ. ಇಲ್ಲಿ ಕುಮಾರವ್ಯಾಸ ಕವಿ ಪಂಪನಂತೆ ಹಿತಮಿತವಾಗಿ, ಸಂಕ್ಷಿಪ್ತವಾಗಿ ಹೇಳಿದ್ದು ಕಾಣುತ್ತೇವೆ. ದಮಯಂತಿಯನ್ನು ಬಿಟ್ಟು ಹೊರಟ ನಳನಿಗೆ ಕಾರ್ಕೋಟಕನೆಂಬ ಹಾವು ಕಚ್ಚಿ ಅವನನ್ನು ವಿಕಾರಗೊಳಿಸುವದು. ಆಗ ವಿಕಾರಗೆಟ್ಟ ನಳನು ಬಾಹುಕನೆಂಬ ಹೆಸರಿನಿಂದ ಋತುಪರ್ಣ ರಾಜನಲ್ಲಿ ಅಶ್ವಗಳ ಕೆಲಸ ಮಾಡುತ್ತ ಇರುವನು. ಮುಂದೆ ದಮಯಂತಿ ತನ್ನ ತಂದೆಯನ್ನು ಸೇರಿ ಗಂಡನಿಗಾಗಿ ಹುಡುಕಾಡಿಸುವಳು. ಗಂಡ ತನಗೆ ದೊರೆಯಲು ಸ್ವಯಂವರವನ್ನು ಏರ್ಪಡಿಸುವಳು. ಋತುಪರ್ಣ ರಾಜನ ರಥ ನಡೆಸುವವನಾಗಿ ಬಂದ ನಳ ಮತ್ತೆ ಹೆಂಡತಿಯನ್ನು ಕೂಡುವನು. ಮತ್ತೆ ಜೂಜಾಟದಲ್ಲಿ ಪುಷ್ಕರನಿಗೆ ಸೋಲಿಸಿ ಕಳೆದ ತನ್ನ ರಾಜ್ಯವನ್ನು ಪಡೆಯುವನು.

ಈ ಎರಡು ಪದ್ಯಗಳಲ್ಲಿ ಕುವಮಾರವ್ಯಾಸ ಉಳಿದ ಕವಿಗಳು ನಳದಮಯಂತಿಯರ ಕುರಿತು ದೀರ್ಘವಾಗಿ ಬರೆದುದನ್ನು 'ಕೊಡದೊಳ್ ಕಡಲನ್ನು ಹಿಡಿವಂತೆ' ಹೇಳಿದ್ದು ಇಲ್ಲಿಯ ವಿಶೇಷತೆಯಾಗಿದೆ. ತುಂಬ ವಾಚಾಳಿಯಾದ ಕುಮಾರವ್ಯಾಸ ಈ ಪ್ರಸಂಗದಲ್ಲಿ ಸಂಗ್ರಹವಾಗಿ ಹೇಳಿದ್ದೇ ಅವನ ವಿಶೇಷತೆ ಎಂದು ಹೇಳಬಹುದು. ಇದೇ ರೀತಿ ಈ ಮಹಾಭಾರತವನ್ನು ಹೇಳಿದರೆ ಪಂಪನಿಗಿಂತಲೂ ಕುಮಾರವ್ಯಾಸನ ಶಕ್ತಿ ಹೆಚ್ಚಾಗುತ್ತಿತ್ತು. 'ಮಹೀತಳವ ಸೋತನು ಕಣಾ ಕಲಿಯಿಂದ ಪುಷ್ಕರಗೆ' ಎಂದು ಹೇಳುವಲ್ಲಿ ನಮ್ಮ ಕಣ್ಣೆದುರಿಗೆ ದಮಯಂತಿಯ ಸ್ವಯಂವರ ನಡೆದದ್ದು ನಿರಾಶೆಗೊಂಡು ಹೋಗುವ ದೇವತೆಗಳನ್ನು ನೋಡಿ ಕಲಿ ಸಿಟ್ಟಿಗೆದ್ದು ಆ ಸೇಡು ತೀರಿಸಿಕೊಳ್ಳಲು ಪುಷ್ಕರ ದೊರೆಯಲ್ಲಿ ಸೇರಿಕೊಂಡು ಜೂಜಾಟಕ್ಕೆಳಸುವದು ಕಾಣುತ್ತವೆ. ಭೂತಳವ ಬಿಸುಟಡವಿಗೈದನು ಎಂಬ ಮಾತಿನಲ್ಲಿ ನಳ ರಾಜ್ಯಬಿಟ್ಟು ಅಡವಿಗೆ ಬಂದ ಸಂಗತಿ ತಿಳಿದರೆ ನಿಜವಧು ಸಹಿತ ವನದಲಿ ಕಾತರಿಸಿ ನಿಜಸತಿಯ ಬಿಸುಟನು ಹಾಯ್ದನಡವಿಯಲಿ ಎನ್ನುವಲ್ಲಿ ನಳ ತೂಗುಯ್ಯಾಲೆಯಾಗಿ ಹೆಂಡತಿಯನ್ನು ಏಕಾಂಗಿಯಾಗಿ ಅಡವಿಯಲ್ಲಿ ಮಲಗಿದವಳಿಗೆ ಹಾಗೆ ಬಿಟ್ಟು ಹೋಗುವ ಚಿತ್ರ ಕಣ್ಣೆದುರು ಬರುವುದು. ಹೀಗೆ ಈ ಎರಡು ಪದ್ಯಗಳಲ್ಲಿ ಬರುವ ಒಂದೊಂದು ಸಾಲು ನಳದಮಯಂತಿಯರ ಪೂರ್ವಾರ್ಧ, ಉತ್ತರಾರ್ಧ ಬದುಕಿನ ಚಿತ್ರ ಕಣ್ಕಟ್ಟುವಂತೆ ಚಿತ್ರಿಸುವದು ಕಾಣುತ್ತೇವೆ.

ಧರ್ಮರಾಯನ ಸಮಾಧಾನಕ್ಕಾಗಿ ಈ ಕಥೆಯನ್ನು ಲೋಮಶ ಮುನಿಗಳು ಹೇಳುವುದು ಉಪಕಥೆಯಾಗಿ. ಮುಖ್ಯಕಥೆಯಾಗಿದ್ದರೆ ಕವಿ ಕುಮಾರವ್ಯಾಸ ದೀರ್ಘವಾಗಿ ಬೆಳಸುತ್ತಿದ್ದನು. ಇದು ಉಪಕಥೆಯಾದುದರಿಂದ ಸಂಕ್ಷಿಪ್ತವಾಗಿ ಸಂಗ್ರಹವಾಗಿ ಹೇಳಿದ್ದು ಸರಿಯಾಗಿದೆ.

ಕುಮಾರವ್ಯಾಸನು ಹರಿಭಕ್ತನಾದರೂ ಕನಕದಾಸನಂತೆ ಈ ವಸ್ತುವನ್ನು ಬಳಸಿಕೊಂಡಿಲ್ಲ. ಬಸವಪ್ಪ ಶಾಸ್ತ್ರಿಗಳು ಸಾಹಿತ್ಯದ ದೃಷ್ಟಿಯಿಂದ, ಚೌಂಡರಸನು ತನ್ನ ಧರ್ಮದ ದೃಷ್ಟಿಯಿಂದ ಈ ಕಥೆಯನ್ನು ಬಳಸಿಕೊಂಡದ್ದು ಕಾಣುತ್ತೇವೆ. ಕನಕದಾಸನ ನಳಚರಿತ್ರೆ ಇವರೆಲ್ಲರಿಗಿಂತ ನಮಗೆ ಅತಿ ಪ್ರಿಯವಾಗಲು ಕಾರಣ ಕನಕದಾಸ ಕರುಣಾ ಸಾಗರದಲ್ಲಿ ಭಕ್ತಿಭಾವದಿಂದ ಮಾನವೀಯ ಮೌಲ್ಯಗಳನ್ನೂ ಎತ್ತಿ ಹಿಡಿಯಲು ಹೇಳುವಲ್ಲಿ ಈ ಕಾವ್ಯದ ಸತ್ವಸೊಗಸು ಉಳಿದ ಕೃತಿಗಳಿಗಿಂತ ಮಿಗಿಲಾಗಿ ಕಾಣುವುದು.

**ಕನಕದಾಸರ ನಳಚರಿತ್ರೆ :**

ರಾಯರೊಳಗಗ್ಗಳೆಯನಹ ಕೌಂ
ತೇಯನಿಗೆ ರೋಮಶ ಮಹಾಮುನಿ
ರಾಯ ವಿಸ್ತರಿಸಿದನು ನಳಭೂವರನ ಚರಿತೆಯನು
ಪ್ರೀಯದಿಂದಾಲಿಪುದು ಸುಜನರು
ಶ್ರೀಯರಸ ವರಪುರದ ಚೆನ್ನಿಗ
ರಾಯನಂಕಿತಮಾಗಿ ಪೇಳುವೆನೀ ಮಹಾಕಥೆಯ ॥

ಪಾಂಡವರು ದ್ಯೂತದಲ್ಲಿ ಸೋತು ಹನ್ನೆರಡು ವರುಷ ವನವಾಸಕ್ಕೆ ಬಂದಾಗ ಆದ ಸಂಗತಿಯಿದು. ಇಂದ್ರಲೋಕಕ್ಕೆ ಅರ್ಜುನ ಹೋಗಿದ್ದಾಗ ಧರ್ಮರಾಯ ಅವನನು ಕುರಿತು ಚಿಂತಿಸುವನು. ತಮಗೊದಗಿದ ಕಷ್ಟಗಳನ್ನು ನೆನೆಸುವನು.; ಈ ಹೊತ್ತಿಗೆ ರೋಮಶ ಮಹಾಮುನಿಗಳು ನಳರಾಜನ ಕಷ್ಟದ ಕಥೆಯನ್ನು ಹೇಳಿ ಸಮಾಧಾನ ಪಡಿಸುವರು. ಸಂಸ್ಕೃತ ಮಹಾಭಾರತದ ವನಪರ್ವದ ಇಪ್ಪತ್ತೆಂಟು ಅಧ್ಯಾಯಗಳಲ್ಲಿ ವಿಸ್ತಾರವಾಗಿ ಬಂದಿರುವ ಈ ಕಥೆಯನ್ನು ಕನಕದಾಸ ತನ್ನ ನಳಚರಿತ್ರೆಗೆ ಮೂಲವಾಗಿ ಇಟ್ಟುಕೊಂಡಿದ್ದಾನೆ. ಕೆಲವನ್ನು ಬಿಟ್ಟು ಕೆಲವನ್ನು ಸೇರಿಸಿ, ಕಥೆಯ ಕೆಲ ಸನ್ನಿವೇಶಗಳನ್ನು ಸಣ್ಣ ವ್ಯತ್ಯಾಸಗಳೊಡನೆ ಬದಲಿಸಿಕೊಂಡಿದ್ದಾನೆ. ಕನಕದಾಸ ಯಾವುದನ್ನು ಸೇರಿಸಿ, ಬಿಟ್ಟು, ವ್ಯತ್ಯಾಸ ಮಾಡಿಕೊಂಡರೂ ಕಥೆಯ ಸೊಗಸು ಕಡಿಮೆಯಾಗದೆ ಹಿಗ್ಗಿದೆ. ಉಳಿದವರಿಗಿಂತ ಕನಕದಾಸರ ನಳಚರಿತ್ರೆ ಪ್ರಿಯವಾಗಲು ಕಾರಣ ಇಲ್ಲಿ

ಬಳಸುವ ಭಾಷೆ, ತಂತ್ರ ಮೂಲವಾಗಿದೆ.

ಅತ್ತಲಾ ದಮಯಂತಿ ನಳನಲಿ
ಚಿತ್ತವಿಟ್ಟಳು ನೃಪಗೆ ವಿರಹವು
ಹೊತ್ತಿತಾಕೆಯ ಮೇಲೆ ಇರ್ವರಿಗಾಯ್ತು ಸಂತಾಪ
ಚಿತ್ತಜನು ಪಾತಕನು ವಿರಹವ
ಹೊತ್ತಿಸಿದನಿಬ್ಬರಿಗೆ ಮದನನ
ಹೆತ್ತವನು ವರಪುರದ ಚೆನ್ನಿಗರಾಯ ಕರುಣಿಸಿದ ॥

ನಳನ ಗುಣಶೀಲ ಶೌರ್ಯ ಸಾಹಸಗಳನ್ನು ಕೇಳಿ ದಮಯಂತಿ, ದಮಯಂತಿಯ ರೂಪ, ಲಾವಣ್ಯ ಯೌವನವನ್ನು ಕೇಳಿ ನಳ ಒಬ್ಬರನ್ನೊಬ್ಬರು ಆಶಿಸುವದು, ಆಕರ್ಷಿಸುವದು, ಪ್ರೀತಿಸುವದು ತುಂಬ ಸಹಜವಾಗಿ ಬಂದಿದೆ. ಅದರಲ್ಲು ರಾಜಹಂಸ ಬಂದು ಪ್ರೀತಿಯ ರಾಯಭಾರಮಾಡಿ ಹೋದಾಗ ಇಬ್ಬರಲ್ಲೂ ಹೊತ್ತುವ ವಿರಹಾಗ್ನಿ ಅವರಿಬ್ಬರೂ ತುಂಬ ಹತ್ತಿರದವರಾಗಲು ಕಾರಣವಾಗಿದೆ.

ಎನಲು ಕೇಳಿದಳಾ ನುಡಿಯ ಸುರ
ವನಿತೆಗೆಂದಳು ಚಿತ್ತವೆನಗೊ
ಬ್ಬನಲಿ ಸಿಲಿಕಿತು ಮರಳಿಪಡೆ ಕಮಲಾಕ್ಷಗಳವಲ್ಲ
ಅನಿಮಿಷಾಧಿಪ ತನಗೆ ದೇವಾಂ
ಗನೆಯರಿರುತಿರೆ ಮನುಜಸತಿ ಪಾ
ವನವೆ ಬರಿದೆ ದುರಾಸೆ ತನಗೇಕೆಂದಳಿಂದುಮುಖಿ ॥

ಇಲ್ಲಿ ದಮಯಂತಿ ನಳನ ಮೇಲಿಟ್ಟಿರುವ ಅಪಾರ ಪ್ರೀತಿ ವ್ಯಕ್ತವಾಗುವುದು. ಇದರಿಂದಾಕೆ ದೇವತೆಗಳನ್ನು ವರಿಸೆಂದು ಹೇಳಲು ಬಂದ ಅಪ್ಸರಾಸ್ತ್ರೀಯರ, ಅವಳ ಬಾಳಸಂಗಾತಿಯಾಗಲಿರುವ ಸೋತ ನಳನೆ ಹೇಳಿದಾಗಲೂ ಆಕೆ ಆಡುವ ಮಾತುಗಳು ಆಕೆಯ ಘನತೆ ಗೌರವಗಳನ್ನೆತ್ತಿ ತೋರಿಸುವವು. ನಳನ ಮೇಲೆ ದಮಯಂತಿ ಇಟ್ಟ ಉತ್ಕಟ ಪ್ರೀತಿ ನೋಡಿ ದೇವತೆಗಳು ಪ್ರಸನ್ನರಾಗುವರು. ನಳ ದಮಯಂತಿಯರ ಮದುವೆಯಾಗುವುದು. ನಳ ತನ್ನ ಹೆಂಡತಿಯನ್ನು ಕರೆದುಕೊಂಡು ತನ್ನ ರಾಜಧಾನಿಗೆ ಹೋಗುವನು. ಅಲ್ಲಿ ತನ್ನ ಗೆಳೆಯನಾದ ಪುಷ್ಕರನಿಂದ ದ್ಯೂತದಲ್ಲಿ ಸೋತು ಪಡಬಾರದ ಕಷ್ಟಪಡುವನು.

ಭೀಮ ದೊರೆಗೆ ಗಂಡುಮಕ್ಕಳಾದ ವಿಷಯ, ದಮಯಂತಿಯ ಸ್ವಯಂವರ ಸಂದರ್ಭದಲ್ಲಿ ದಿಕ್ಪಾಲರು ನಳನಿಗೆ ಕೊಟ್ಟ ವರ ಇಲ್ಲಿ ಬಂದಿಲ್ಲ.

ಹಂಸ ಕಾಣುವ ಮೊದಲು ನಳ ಬೇಟೆಗೆ ಹೋಗುವುದು, ಇಂದ್ರನ ಸಂದೇಶ ನಳ ಒಯ್ಯುವ ಪೂರ್ವ ದೇವತಾ ಸ್ತ್ರೀಯರು ದಮಯಂತಿಗೆ ಇಂದ್ರನಲ್ಲಿ ಪ್ರೇಮ ಹುಟ್ಟಿಸಲು ಬರುವುದು, ಕಳೆದ ರಾಜ್ಯ ಹಿಂದಿರುಗಿ ಪಡೆಯಲು ಪುಷ್ಕರನೊಡನೆ ಯುದ್ಧ ಮಾಡುವುದು ಇವು ಹೊಸದಾಗಿ ಸೇರಿದ ಸಂಗತಿಗಳಾಗಿವೆ. ದಮನ ಋಷಿಯ ಆಶೀರ್ವಾದದಿಂದ ರಾಜನಿಗೆ ಮಕ್ಕಳಾದದ್ದು, ನಳನು ತನ್ನ ಪಟ್ಟಣದ ಬಳಿಯ ಉಪವನದಲ್ಲೇ ಸುವರ್ಣಮಯವಾದ ಹಂಸವನ್ನು ನೋಡಿದ್ದು, ನಾರದನ ಮಾತನ್ನು ಕೇಳಿ ಇಂದ್ರನು ದಮಯಂತಿಯ ಸ್ವಯಂವರಕ್ಕೆ ಹೊರಟಿದ್ದು, ನಳನನ್ನ ದಾರಿಯಲ್ಲೆ ಕಂಡದ್ದು, ಇಂದ್ರನ ವರದಿಂದ ನಳನು ದಮಯಂತಿಯ ಅಂತಃಪುರವನ್ನು ನಿಜರೂಪದಿಂದ ಸೇರಿದ್ದು, ನಳನು ತನಗೆ ದೊರೆಯುವಂತಾಗಬೇಕೆಂದು ದಮಯಂತಿ ಇಂದ್ರಾದಿಗಳನ್ನು ಬೇಡಿದ್ದು, ಸ್ವಯಂವರಕ್ಕೆ ಹೊರಟಿದ್ದ ಕಲಿ ದ್ವಾಪರನೊಡನೆ ಸಂಧಿಸಿದ್ದು, ಮೂತ್ರ ವಿಸರ್ಜನೆ ಮಾಡಿದ ನಳನು ಆಚಮನ ಮಾಡದೆ ಸಂಧ್ಯಾದಿ ಕಾರ್ಯಗಳಲ್ಲಿ ತೊಡಗಿದ್ದು, ಹಾವಿನ ಬಾಯಿಂದ ಬಿಡಿಸಿದ ಬೇಡನು ದಮಯಂತಿಯನ್ನು ಕಾಮಿಸಲು, ಆಕೆ ಅವನನ್ನು ಸುಟ್ಟುಬಿಡುವುದು ಇವೆಲ್ಲ ಕೆಲ ಮೂಲದ ಪ್ರಸಂಗಗಳು ಅಲ್ಲಲ್ಲಿ ಅಲ್ಪಸ್ವಲ್ಪ ವ್ಯತ್ಯಾಸದೊಡನೆ ಈ ಕಾವ್ಯದಲ್ಲಿ ಬಂದಿವೆ.

ಎನಲು ಖತಿಗೊಂಡೆಂದ ಕೇಳೆಲೆ
ಯನಿಮಿಷಾಧಿಪ ಎನ್ನನರಿಯಾ
ದಿನಪನಿದಿರಿಲಿ ತಮದ ಹಾವಳಿಯೇ ಮಹಾದೇವ
ಎನಗೆ ಸರಿಯಾರಿನ್ನು ತಹೆನಾ
ವನಿತೆಯನು ಕುಹಕದಲಿ ನಳ ಭೂ
ವರನ ಕೆಡಿಸಿಯೆ ಕಾನನಕೆ ಕಳುಹುವೆನು ನೋಡೆಂದ ॥

ಇಂದ್ರನಾಡಿದ ಚುಚ್ಚುಮಾತು ಕೇಳಿ ಸಿಟ್ಟಿಗೆದ್ದ ಕಲಿ ನಳನನ್ನು ಕಾಡಿಗಟ್ಟುವೆನೆಂದು ಪ್ರತಿಜ್ಞೆ ಮಾಡಿದಂತೆ ಅವನ ಗೆಳೆಯನಾದ ಪುಷ್ಕರನಿಂದ ಜೂಜಿನಲ್ಲಿ ಅಡವಿಗಟ್ಟುವ ಪ್ರಸಂಗ, ಅಡವಿಯಲ್ಲಿ ನಳ ದಮಯಂತಿಯರು ಕಷ್ಟಕ್ಕೀಡಾದ ಸಂಗತಿಗಳು ಕನಕದಾಸರು ತಮ್ಮ ಕರುಳು ಚುರುಗುಡುವಂತೆ ಚಿತ್ರಿಸಿದ್ದಾರೆ.

ಜಗನ್ಮೋಹದ ಪಕ್ಷಿಗಳು ನಳನುಟ್ಟ ಹಚ್ಚಡವನು ತೆಗೆದುಕೊಂಡು ಆಕಾಶಕ್ಕೆ ಹಾರಿದಾಗ ಕವಿಹೇಳುವ ಮಾತು ತುಂಬ ಸೊಗಸಾಗಿವೆ :

ಹರೆದುದೆಲ್ಲ ಸಮಸ್ತ ರಾಜ್ಯದ
ಸಿರಿಗೆ ಬಾಹಿರನಾಗಿ ಪತ್ನಿಯ
ಸೆರಗನುಡುವಂತಾಯ್ತೆ ಹರಹರ ಎನುತ ಬಿಸುಸುಯ್ದು

ತನ್ನ ಜೊತೆಗೆ ಬರುತ್ತಿರುವ ಹೆಂಡತಿ ಕಷ್ಟಕ್ಕೀಡಾಗಬಾರದೆಂದು ನಳ ತಂದೆಯಲ್ಲಿಗೆ ಹೋಗೆಂದು ತಿಳಿಸಿದಾಗ ದಮಯಂತಿ ಆಡುವ ಮಾತು ಅವಳ ಸತಿತನಕ್ಕೆ ಕಿರೀಟಪ್ರಾಯವಾಗಿವೆ :

ನೆಳಲು ತನುವಿನ ಬಳಿಯಲಲ್ಲದೆ
ಚಲಿಸುವುದೆ ತಾ ಬೇರೆ ನಿಮ್ಮಡಿ
ನಳಿನದಲಿ ಸುಖದುಃಖವಲ್ಲದೆ ಬೇರೆ ಗತಿಯುಂಟೆ
ಹಳುವವೇ ಸಾಮ್ರಾಜ್ಯ ನಿಮ್ಮಡಿ
ನೆಳಲಿನಲಿ ತಾನಿರುವೆನಲ್ಲದೆ
ನಿಳಯವೆ ನನಗಡವಿಯೆಂದೆರಗಿದಳು ಪದಯುಗಕೆ ॥

ತನಗೊದಗುವ ಕಷ್ಟ ಹೆಂಡತಿಗೆ ಬರಬಾರದೆಂದು ಅಡವಿಯಲ್ಲಿ ಅವಳನ್ನು ಬಿಟ್ಟು ನಡೆದಾಗಲು ಅವನು ಆಕೆಗಾಗಿ ಚಿಂತಿಸುವ ಸಂಗತಿ ಅವನ ಪತಿತನವನ್ನು ತೋರಿಸುವದು, ಹಾವಿನಿಂದುಳಿಸಿದ ಬೇಡ ಮೋಹಿಸಿ ನಿಂತಾಗ ದಮಯಂತಿಯ ಮಾತು :

ಇಂದೆನಗೆ ಅಸುವಿತ್ತು ಸಲಹಿದ
ತಂದೆಯಲ್ಲವೆ ನೀನು ಕೇಳು ಪು
ಳಿಂದ ಮುಳಿದರೆ ಶಪಿಸುವೆನು ಹೋಗೆಂದಳಿಂದುಮುಖಿ ॥

ಇಲ್ಲಿಯ ದಮಯಂತಿಯ ಪಾತ್ರ ಉಳಿದವರ ಪಾತ್ರಗಳಿಗಿಂತಲೂ ಹಿರಿತನವನ್ನು ಪಡೆದದ್ದು ಕಾಣುತ್ತೇವೆ. ತನ್ನನ್ನು ಮೋಹಿಸಿದ ಬೇಡನಿಗೆ ಶಪಿಸದೆ, ಬುದ್ಧಿವಾದ ಹೇಳಿ ಅವನ ಮನಃಪರಿವರ್ತನೆ ಮಾಡುವ ಸಂಗತಿ ಅಪೂರ್ವವಾಗಿದೆ. ಕನಕದಾಸ ಒಬ್ಬ ಭಕ್ತ ಕವಿಯಾಗಿದ್ದ ಸಲುವಾಗಿ ಅವನಿಂದ ದಮಯಂತಿಯ ಪಾತ್ರ ಈ ರೀತಿಯಾಗಿ ಚಿತ್ರಿತವಾಗಿದೆ. ನಳಚರಿತ್ರೆಯಲ್ಲಿ ಬರುವ ನಳ ಮತ್ತು ಕಾರ್ಕೋಟಕ ಸಂವಾದ ಯಾರೂ ಮರೆಯಲಾರದಂಥದ್ದು. ಕಳಕೊಂಡ ರಾಜ್ಯ ಸಿಗುವ ವಿಚಾರ ತಿಳಿಸಿ ಅವನನ್ನ ವಿಕಾರಗೊಳಿಸಿದ ಹಾವು ಋತುಪರ್ಣ ರಾಜನಲ್ಲಿ ಹೋಗೆಂದು ತಿಳಿಸುವ ಸಂಗತಿ ತುಂಬ ಮಾರ್ಮಿಕವಾಗಿ ಬಂದಿದೆ.

ಎಲೆ ನೃಪಾಲಕ ನಿನ್ನ ಸತ್ಯದ
ನೆಲೆಯನೀಕ್ಷಿಸಬೇಕೆನುತ ಬಂ
ದಳಲಿಸಿದೆ ಹಿರಿದಾಗಿ ನೋಯದಿರಿನ್ನು ಚಿತ್ತದಲಿ
ತೊಲಗಿದೆನು ಇಂದಿನಲಿ ಶುಭ ಮಂ
ಗಳಕರವು ನಿನಗಪ್ಪುದೆನಲಾ
ನಳನೃಪತಿ ಖತಿಗೊಂಡು ಶಾಪವ ಕೊಡದೆ ಮನ್ನಿಸಿದ ॥

ತನ್ನನ್ನು ಹಾವಿನಿಂದ ಉಳಿಸಿ ಮೋಹಿಸಲು ಬಂದ ಬೇಡನಿಗೆ ದಮಯಂತಿ ಶಾಪಕೊಡದೆ ತಿಳಿಹೇಳಿ ಕಳಿಸಿದಂತೆ ಇಲ್ಲೂ ನಳ ತನ್ನನ್ನು ನಾನಾ ಪರಿಯಿಂದ ಕಾಡಿಸಿದ ಕಲಿಗೆ ಸಿಟ್ಟಿಗೆ ಬಂದು ಶಾಪಕೊಡದೆ ಮನ್ನಿಸಿ ಕಳಿಸುವ ಮಾತು ಅವನ ಘನವ್ಯಕ್ತಿತ್ವವನ್ನೆತ್ತಿ ಹೇಳುವುದು. ಕಳೆದುಹೋದ ಗಂಡನನ್ನು ಮತ್ತೆ ಪಡೆಯಲು ಹೂಡಿದ ಸ್ವಯಂವರ ವಾರ್ತೆಯನ್ನು ಕೇಳಿ, ತಲ್ಲಣಗೊಳ್ಳುವ, ಹೆಂಡತಿಯನ್ನು ಕಂಡಾಗ ಕಣ್ಣೀರು ಸುರಿಸುವ ನಳ ಜನಸಾಮಾನ್ಯರಂತೆ ವರ್ತಿಸುವದು ನೋಡಿ ಅವನ ಬಗ್ಗೆ ನಮ್ಮ ಪ್ರೀತಿ ಉಕ್ಕಿ ಬರುವುದು. ಕಳೆದುಕೊಂಡ ರಾಜ್ಯವನ್ನು ಪುಷ್ಕರನಿಗೆ ಜೂಜಿನಲ್ಲಿ ಸೋಲಿಸಿ ಪಡೆಯುವದು, ಅವನು ಶರಣು ಬಂದಾಗ ಅವನ ತಪ್ಪನ್ನೆಲ್ಲ ಕ್ಷಮಿಸಿ ಅವನ ಸಕಲ ಸಂಪತ್ತು ಹಿಂದಿರುಗಿ ಕೊಡುವುದರಲ್ಲಿ ನಳನ ಹಿರಿಮೆ ಕಾಣುವುದು.

ನೆಲವು ಹಿಂಗಿದ ಪುಷ್ಕರನ ಮನ
ವೊಲಿದು ಮನ್ನಿಸಿ ಕರೆದು ನಳನೃಪ
ಕಲಿಪುರುಷನಿಂದಾದುಪಹತಿ ನಿನ್ನ ತಪ್ಪೇನು
ಹಲವು ಹಂಬಲಿಸದಿರು ನಿನ್ನಲಿ
ಚೆಲವು ನಮಗಿನಿತಿಲ್ಲ ಮುನ್ನವೊ
ಲಿಳೆಯ ಪಾಲಿಸು ನಮ್ಮ ನೀನೋಲಗಿಸು ಹೋಗೆಂದ

ಕನ್ನಡದಲ್ಲಿ ಬಂದ ಇತರ ಕೃತಿಗಳಿಗಿಂತ ಕನಕದಾಸರ ನಳಚರಿತ್ರೆ ಅತ್ಯಂತ ಪ್ರಿಯವಾಗಲು ಇಲ್ಲಿ ಬಳಸಿರುವ ತಿಳಿಗನ್ನಡದ ಭಾಷೆ ಬಲುಕಾರಣವಾಗಿದೆ. ಶೈಲಿಯೂ ಅಷ್ಟೇ ಮೋಹಕವಾಗಿದೆ. ಕನ್ನಡ ಮಾತುಗಳನ್ನು ಹೆಚ್ಚಾಗಿ ಬಳಸಲಾಗಿದೆ. ಸಂಸ್ಕೃತ ಪದಗಳಿಗಾಗಿ, ಪೆಡಸಾದ ಸಮಾಸಗಳಿಗಾಗಿ, ಪ್ರಾಸಕ್ಕಾಗಿ, ಪಾದಪೂರ್ಣಕ್ಕಾಗಿ ಕವಿ ಒದ್ದಾಡಿದ ಪ್ರಸಂಗಗಳು ಎಲ್ಲಿಯೂ ಕಾಣುವದಿಲ್ಲ. ತಿಳಿಯಾದ ಇಂಪಾದ ಭಾಷೆಯಿಂದ ಕನಕದಾಸರ ನಳಚರಿತ್ರೆ ಅತ್ಯಂತ ಜನಪ್ರಿಯವಾಗಲು ಮೂಲವಾಗಿದೆ. ಕನ್ನಡದಲ್ಲಿ ಬಂದಿರುವ ಇತರ ಕೃತಿಗಳಿಂದ

ಇದು ತುಂಬ ಭಿನ್ನ ಮತ್ತು ರುಚಿಕಟ್ಟಾಗಿರಲು ಕನಕದಾಸ ಭಕ್ತಿಕವಿಯಾಗಿದ್ದದ್ದು ಕಾರಣ.

ಇದೊಂದು ಕಥನಕಾವ್ಯವಾದರೂ ಕಥೆಯು ಒಳಗಡೆ ಎಲ್ಲೂ ಉಪಕಥೆಗಳು ಸೇರಿಲ್ಲ. ಹೊಳೆ ಉಕ್ಕಿ ಹರಿಯುವಂತೆ ಕವಿ ಕಾವ್ಯ ನಡೆಸಿಕೊಂಡು ಹೋಗಿದ್ದಾನೆ.

ಇಲ್ಲಿ ಬರುವ ವರ್ಣನೆಗಳು ಹಿತಮಿತವಾಗಿ ಬಂದಿರುವದಕ್ಕೆ ಈ ಕೆಳಗಿನ ಪದ್ಯ ನೋಡಬಹುದು :

ಮುಗಿಲು ಮುಸುಕಿದ ಚಂದ್ರಬಿಂಬವೊ
ಪಗಲೊಳೆಸೆವ ಸುದೀಪಕಾಂತಿಯೊ
ಹೊಗೆಯೊಳೆಸೆವ ಚಿತ್ರಪ್ರತಿಮೆಯೊ ಹೇಳಲೇನವಳ
ಉಗಿದು ಬಿಸುಟ ವಿಭೂಷಣದ ಮೈ
ಲಿಗೆಯ ಸೀರೆಯ ಮಲಿನ ತನು ಕಳೆ
ದೆಗೆದು ಕೈಗಲ್ಲದಲಿ ನಿಂದಿರೆ ಕಂಡನಾ ಸತಿಯ

ಕನಕದಾಸರೊಬ್ಬರು ಭಕ್ತನಾಗಿರುವುದರ ಜೊತೆಗೆ ಕಲಾತ್ಮಕ ಕವಿ ಎಂಬ ಮಾತಿಗೆ ಮೇಲಿನ ಪದ್ಯ ಸಾಕ್ಷಿಯಾಗಿರುವುದು. ಉಳಿದ ಕವಿಗಳಂತೆ ಬರೀ ವರ್ಣನೆಯಲ್ಲಿಯೇ ಈ ಕವಿ ಮುಳುಗುವದಿಲ್ಲ. ಎಲ್ಲವನ್ನು ಸಂಯಮದಿಂದ ನೋಡುವನು. ಪ್ರತಿಯೊಂದಕ್ಕೂ ಅಷ್ಟೇ ಮಹತ್ವ ಕೊಡುವನು. ಶೃಂಗಾರವನ್ನು ಸಂಯಮದಿಂದ ಬಳಸುವನು. ಹೇಳಬೇಕಾದ ವಿಷಯ ತಿಳಿಪಡಿಸಲು ಉಪಯೋಗಿಸಿರುವ ಅಲಂಕಾರಗಳು ಹೆಚ್ಚಾಗಿಲ್ಲ. ಉಪಮೆ, ರೂಪಕ, ಸ್ವಭಾವೋಕ್ತಿ, ಅನುಪ್ರಾಸಗಳಿಗೆ ಅವಕಾಶ ಸಿಕ್ಕಿದೆ. ಆದರೆ ಉತ್ಪ್ರೇಕ್ಷೆ, ಅತಿಶಯೋಕ್ತಿಗಳಿಗೆ ಹೆಚ್ಚು ಸ್ಥಳ ನೀಡಿಲ್ಲ. ಇಷ್ಟೊಂದು ಸಂಯಮದಿಂದ ತೂಗಿ ತೂಗಿ ಬರೆಯಲು ಕನಕದಾಸ ಭಕ್ತಕವಿಯಾಗಿದ್ದನೆಂಬ ಮಾತು ಸ್ಪಷ್ಟವಾಗುವುದು. ಈ ಮಾತನ್ನು ಮೋಹನ ತರಂಗಿಣಿ, ರಾಮಧಾನ್ಯ ಚರಿತ್ರ, ಹರಿಭಕ್ತಿಸಾರದಲ್ಲೂ ಕಾಣುತ್ತೇವೆ.

ಈ ಕಾವ್ಯವನ್ನು ಓದುತ್ತಿದ್ದಂತೆ ನಮಗೆ ಹರಿಶ್ಚಂದ್ರ ಕಾವ್ಯದ ನೆನಪಾಗುವುದು ಹರಿಶ್ಚಂದ್ರನಂತೆ ನಳ, ಚಂದ್ರಮತಿಯಂತೆ ದಮಯಂತಿ ಕಷ್ಟಪಟ್ಟದ್ದನ್ನು, ವಿಶ್ವಾಮಿತ್ರನಂತೆ ಕಲಿ, ನಕ್ಷತ್ರಿಕನಂತೆ ಪುಷ್ಕರ ಕಷ್ಟಕೊಟ್ಟಿದ್ದನ್ನಿಲ್ಲಿ ಕಾಣುತ್ತೇವೆ. ಎರಡೂ ಕಡೆಗೆ ಕೊನೆಗೆ ಸುಖಾಂತವಾಗುವುದು. ದಮಯಂತಿ ತನ್ನೆಲ್ಲ ಸದ್ಗುಣಗಳಿಂದ ಮಹಾಸತಿಯಾಗಿ ಕಂಡರೆ ನಳ ತನ್ನ ಗಾಂಭೀರ್ಯ, ವಿನಯ

ಸಹನೆ ಗುಣಗಳಿಂದ ನಮ್ಮ ಅಂತಃಕರಣವನ್ನು ಮಿಡಿಯುವನು, ಕರುಣಾ ಹೃದಯಿಗಳನ್ನಾಗಿ ಮಾಡುವನು.

ಕನ್ನಡ ರಾಮಾಯಣ ಮಹಾಭಾರತಗಳನ್ನೋದಿ ಅರಗಿಸಿ ಕರಗಿಸಿಕೊಂಡು ಸುಲಿದ ಬಾಳೆಯಹಣ್ಣಿನಂತಿರುವ ಕನ್ನಡದಲ್ಲಿ, ಭಕ್ತಿರಸ ಸಾಗರದಲ್ಲಿ ಹಿತಮಿತವಾಗಿ ಹೇಳಿದ್ದರ ಫಲ ಈ ಕಾವ್ಯ ಪಂಡಿತರಿಗೂ ಪಾಮರರಿಗೂ ಎಲ್ಲ ಕಾಲಕ್ಕೂ ಪ್ರಿಯವಾಗಿರಲು ಕಾರಣವಾಗಿದೆ. ಇಲ್ಲಿ ಬಂದಿರುವ ಬದುಕಿನ ಮೌಲ್ಯಗಳು ಜಗತ್ತಿನೆಲ್ಲ ಜನಾಂಗಕ್ಕೂ ದಾರಿದೀಪವಾಗಿವೆ. ಕಾವ್ಯದ ಹರಹು ಚಿಕ್ಕದಾದರೂ ಸ್ಫೋಟಕ ಗುಣ ಹೆಚ್ಚಿದೆ.

ಈ ಕಾವ್ಯದ ಕೆಲವೆಡೆಗೆ ಬಂದಿರುವ ಸಾಲುಗಳು ಪ್ರತಿನಿತ್ಯ ಪಠಿಸುವಂತಿವೆ. ವೇದ, ಗಾದೆಗಳಂತೆ ಜ್ಞಾನ ಮತ್ತು ಅನುಭವದಿಂದ ಕೂಡಿಕೊಂಡದ್ದನ್ನು ಕಾಣಬಹುದಾಗಿದೆ.

೧) ಚಿತ್ತವೆನಗೊಬ್ಬನಲಿ ಸಿಲುಕಿತು ಮರಳಿಪಡೆ ಕಮಲಾಕ್ಷಗಳವಲ್ಲ
೨) ನೆಳಲು ತನುವಿನ ಬಳಿಯಲಲ್ಲದೆ ಚಲಿಸುವುದೆ ತಾ ಬೇರೆ
೩) ತೋರಮಾಣಿಕವೆಂದು ಪಿಡಿದರೆ ಭೂರಿಕೆಂಡವಿದಾಯ್ತು
೪) ಮುಂಗೈಕಂಕಣಕೆ ಕುಲದೀಪ ಕನ್ನಡಿಯೇಕೆ
೫) ತನ್ನ ಪುಣ್ಯದ ಹಾನಿ ತಾನಿದಕಿನ್ನು ಮಾಡುವದೇನು

ಕವಿ ಕೊನೆಯಲ್ಲಿ ಹೇಳುವದನ್ನು ಗಮನಿಸಿರಿ :

ಮೇದಿನಿಯೊಳೀ ಪುಣ್ಯಚರಿತೆಯ
ನಾದರರದಿ ಬರೆದೋದಿ ಕೇಳುವ
ಸಾಧುಸಜ್ಜನರಾದವರಿಗಹುದಖಿಲ ಕೈವಲ್ಯ
ವೇದಗೋಚರ ಕೃಷ್ಣ ವರಪುರ
ದಾದಿಕೇಶವನಮರವಂದಿತ
ನಾದಿನಾರಾಯಣನು ಸಲಹುವನಖಿಳ ಸಜ್ಜನರ ॥

ಈ ಕೃತಿ ಉಳಿದುದನ್ನು ಕೊಡದಿದ್ದರೂ ಒಳ್ಳೆ ನಡೆನುಡಿ, ಭಾಷಾ ಶುದ್ಧತೆ ಸಂಸ್ಕೃತಿ ನೀಡುವುದರಲ್ಲಿ ಯಾವ ಸಂಶಯವಿಲ್ಲ.

# ನಳಚರಿತ್ರೆಯ ಜನಪ್ರಿಯತೆ : ಒಂದು ವಿವೇಚನೆ

**ಡಾ॥ ಎಸ್. ವಿದ್ಯಾಶಂಕರ**

ಹರಿದಾಸ ಪರಂಪರೆಯಲ್ಲಿ ಪುರಂದರದಾಸರ ನಂತರ ಹೆಸರಿಸಬಹುದಾದ ಇನ್ನೊಂದು ಪ್ರಮುಖ ಹೆಸರೆಂದರೆ ಕನಕದಾಸರದು, ದಾಸಕೂಟದಲ್ಲಿ ದೇಸಿಗೆ ಆದ್ಯತೆ. "ಕನಕದಾಸರ ಗರಡಿಯಲ್ಲಿ ಸಂಸ್ಕೃತ ಕನ್ನಡಕ್ಕೆ ಕೈಂಕರ್ಯವೆಸಗುತ್ತಿರುವಂತೆ ಕಾಣುತ್ತದೆ. ಕವಿಯ ಮನೋಧರ್ಮ ಕಾರಣವಾಗಿ ಸಂಸ್ಕೃತ ಕನ್ನಡ ಜಾಯಮಾನಕ್ಕೊಗ್ಗಿಕೊಂಡು ದೇಶಿಯತೆಯನ್ನು ಮೆರೆದಿದೆ."[1] ಪ್ರೊ॥ ದೇ. ಜವರೇಗೌಡರ ಈ ಅಭಿಪ್ರಾಯ ಕನಕದಾಸರ ಕೀರ್ತನೆಗಳಿಗಷ್ಟೇ ಅನ್ವಯವಾಗದೆ ಅವರ ಇತರ ಕೃತಿಗಳಿಗೂ ಹೊಂದಿಕೆಯಾಗುತ್ತದೆ. ಕನಕದಾಸರು ಜನಸಾಮಾನ್ಯನಿಗೆ ಪ್ರಿಯವಾಗುವ ಕಥಾವಸ್ತುವನ್ನೇ ಆಯ್ಕೆ ಮಾಡಿಕೊಂಡಿರುವರು. 'ಮೋಹನ ತರಂಗಿಣಿ' ರತಿ–ಪ್ರದ್ಯುಮ್ನರ ಕಥೆಯಾದರೂ ಕೃಷ್ಣ ಕಥೆ. ಪೌರಾಣಿಕ ಕಥಾವಸ್ತುವಿನಲ್ಲಿ ಸಮಕಾಲೀನತೆಯನ್ನು ಮೈಗೂಡಿಸಹೊರಟ ಕನಕದಾಸರು 'ಮೋಹನ ತರಂಗಿಣಿ'ಯಲ್ಲಿ ವಿಜಯನಗರದ ಅರಸು ಕೃಷ್ಣ ದೇವರಾಯನ ಹಾಗೂ ಅವನ ಆಡಳಿತದಲ್ಲಿನ ಜನರ ಬದುಕನ್ನು ಬಿಂಬಿಸಿರುವರು. 'ನಳಚರಿತ್ರೆ'ಯೂ ಪೌರಾಣಿಕ ಕೃತಿ. ವಿಧಿಯ ಕಾಟದಿಂದ ಬಳಲಿದ ನಳಚಕ್ರವರ್ತಿಯ ಕಥೆ ಜನಸಾಮಾನ್ಯರ ನೆಲೆಯಲ್ಲಿ ಅತ್ಯಂತ ಜನಪ್ರಿಯ. ವ್ಯಕ್ತಿಯ ಬದುಕಿನ ಏರಿಳಿತಗಳಿಗೆ, ಕಷ್ಟ–ಸುಖಗಳಿಗೆ ನಳನ ಕಥೆಯು ಹೊಂದಿಕೆಯಾಗುವುದರಿಂದ, ಅದು ಬದುಕಿನ ಒಂದು ಜೀವಂತ ಸತ್ಯವನ್ನು ಪ್ರತಿಮಿಸುವುದರಿಂದ ಈ ಪೌರಾಣಿಕ ಕಥಾವಸ್ತು ಜನತೆಯ ಬದುಕಿನಲ್ಲಿ ಹಾಸುಹೊಕ್ಕಾಗಿದೆ. 'ರಾಮಧಾನ್ಯ ಚರಿತ್ರೆ' ಒಂದು ರೂಪಕ ಕೃತಿ, ಆಕಾರದಲ್ಲಿ ಪುಟ್ಟದು. ರಾಗಿ ಹಾಗೂ ಬತ್ತಗಳ ನಡುವೆ ಸ್ಪರ್ಧೆ ನಡೆದು, ಬಡವರ ಪಾಲಿನ

---

೧. ನಳಚರಿತ್ರೆ (ಸಂ. ಪ್ರೊ॥ ದೇ. ಜವರೇಗೌಡ) ಪೀಠಿಕೆ. ಪು. ೨೮

ನಿತ್ಯ ಆಹಾರವಾದ ರಾಗಿಗೆ ಜಯವಾದುದು ಇಲ್ಲಿನ ಕಥಾವಸ್ತು. ಕನಕದಾಸರ ಹಾಡುಗಳು ಹಾಗೂ ಕಾವ್ಯಗಳು ಜನಪರವಾಗಿರುವುದರಿಂದ ಅವರ ಜನಪ್ರಿಯತೆ ಹೆಚ್ಚಿದೆ ಎಂದು ಹೇಳಬಹುದು.

'ನಳಚರಿತ್ರೆ'ಯು ೯ ಸಂಧಿ ೪೮೧ ಭಾಮಿನಿ ಷಟ್ಪದಿಗಳನ್ನೊಳಗೊಂಡ ದೇಸೀ ಖಂಡಕಾವ್ಯ. ಕನ್ನಡದಲ್ಲಿ ಈ ಕಥಾವಸ್ತುವನ್ನೊಳಗೊಂಡ ಮೊದಲ ಕೃತಿ ಚೌಂಡರಸನ (ಕ್ರಿ.ಶ. ೧೩೦೦) ನಳಚಂಪು. ಆದರೆ ಇದು ಜನಾದರಣೆ ಪಡೆಯಲಿಲ್ಲದ ಕಾರಣ ಕನಕದಾಸರ 'ನಳಚರಿತ್ರೆ' ಆ ಸ್ಥಾನ ತುಂಬಲು ಹುಟ್ಟಿಕೊಂಡಿತು. ನಳನ ಕಥೆ ವೇದದಷ್ಟೇ ಪ್ರಾಚೀನವಾದುದೆಂದೂ, 'ಶಾತಪಥ ಬ್ರಾಹ್ಮಣ'ದಲ್ಲಿ ಹದಿಮೂರನೆಯ ಖಂಡದಲ್ಲಿ ನಳನ ಹೆಸರು ಉಲ್ಲೇಖಗೊಂಡಿದೆಯೆಂದೂ ವಿದ್ವಾಂಸರು ಅಭಿಪ್ರಾಯ ಪಡುವರು. ವಾಗ್ ಪರಂಪರೆಯಲ್ಲಿ (Oral Traditon) ಅತ್ಯಂತ ಪ್ರಸಿದ್ಧಿಯಾಗಿದ್ದ ನಳನ ಕಥೆಯು ಕುರು ಪಾಂಡವರ ಕಥೆ 'ಜಯ'ವೆಂಬ ನಾಮಧೇಯದಿಂದ ಅಂಕುರಿಸಿ, ಅದು ನಳೋಪಾಖ್ಯಾನದ ತಳಹದಿಯ ಮೇಲೆ ಮುಗಿಲುದ್ದ ಬೆಳೆಯಿತಲ್ಲದೆ ಅದನ್ನು ತನ್ನ ಗರ್ಭದಲ್ಲಿ ಸೇರಿಸಿಕೊಂಡಿತು–ಎಂದು ಪ್ರೊ॥ ದೇ. ಜವರೇಗೌಡರು ಅಭಿಪ್ರಾಯ ಪಡುವರು.[2]

ಕನಕದಾಸರ 'ನಳಚರಿತ್ರೆ'ಗೆ ಮೂಲ ಸಂಸ್ಕೃತ ಮಹಾಭಾರತದ ವನಪರ್ವದಲ್ಲಿ ೨೮ ಅಧ್ಯಾಯುಗಳಲ್ಲಿ ವಿಸ್ತಾರವಾಗಿ ಹೇಳಿರುವ 'ನಳೋಪಾಖ್ಯಾನ'. ಮೂಲದಲ್ಲಿ ಕಾಮ್ಯಕವನದಲ್ಲಿದ್ದ ಧರ್ಮರಾಜನು ಇಂದ್ರಲೋಕಕ್ಕೆ ಹೋಗಿದ್ದ ಅರ್ಜುನನನ್ನು ಕುರಿತು ಚಿಂತಿಸುತ್ತಾ ತಮಗೆ ಒದಗಿದ ಕಷ್ಟಗಳನ್ನು ನೆನೆದು ದುಃಖಿಸುತ್ತಲಿದ್ದಾಗ ಬೃಹದಶ್ವನೆಂಬ ಮುನಿ ನಳನ ಕಥೆಯನ್ನು ಧರ್ಮರಾಜನಿಗೆ ತಿಳಿಸಿ ಅವನನ್ನು ಸಮಾಧಾನಪಡಿಸುವನು. ಕನಕದಾಸರ 'ನಳಚರಿತ್ರೆ'ಯಲ್ಲಿ ಬರುವಂತೆ ನಳಮಹಾರಾಜನ ಕಥೆಯನ್ನು ಕೌಂತೇಯನಿಗೆ ರೋಮಶ ಮಹಾಮುನಿಯು ತಿಳಿಸುವನು. ಅದನ್ನೇ 'ಶ್ರೀಯರಸವರಪುರದ ಚೆನ್ನಗರಾಯನಂಕಿತಮಾಗಿ ಪೇಳುವೆ' ಎಂದು ಕನಕದಾಸರು ಹೇಳುವರು (೧.೬).

ಕನಕದಾಸರ 'ನಳಚರಿತ್ರೆ'ಯ ಮಹಾಭಾರತದ ನಳೋಪಾಖ್ಯಾನವನ್ನು

೨. ಹೆಚ್ಚಿನ ವಿವರಗಳಿಗೆ ನೋಡಿ : ನಳಚರಿತ್ರೆ (ಸಂ. ಪ್ರೊ॥ ದೇ. ಜವರೇಗೌಡ) ಪೀಠಿಕೆ ಪು. ೫–೧೪.

ಅನುಸರಿಸಿದ್ದರೂ ಮೂಲದಲ್ಲಿನ ಕೆಲವು ವಿಷಯಗಳನ್ನು ಕೈಬಿಡಲಾಗಿದೆ ; ಕೆಲವು ಹೊಸ ಅಂಶಗಳನ್ನು ಸೇರ್ಪಡೆ ಮಾಡಲಾಗಿದೆ ; ಕಥೆಯ ಹಲವು ಸನ್ನಿವೇಶಗಳಲ್ಲಿ ಸಣ್ಣ ಪುಟ್ಟ ವ್ಯತ್ಯಾಸ ಮಾಡಲಾಗಿದೆ[3]. ಈ ಎಲ್ಲ ಬದಲಾವಣೆಗಳೂ ಓದುಗನನ್ನು ಗಮನದಲ್ಲಿಟ್ಟುಕೊಂಡು ಮಾಡಲಾಗಿದೆ. ಈ ಬದಲಾವಣೆಗಳಿಂದಾಗಿ ಕಾವ್ಯದಲ್ಲಿನ ಸಂದರ್ಭ–ಸನ್ನಿವೇಶಗಳು ಕಳೆಗೂಡಿವೆ; ಪಾತ್ರಗಳು ಇನ್ನಷ್ಟು ಸ್ಫುಟಗೊಂಡಿವೆ. ದಮಯಂತಿಗೆ ಸೋದರರಿದ್ದ ವಿಷಯದ ಪ್ರಸ್ತಾಪ, ದಮಯಂತಿಯ ಸ್ವಯಂವರ ಕಾಲದಲ್ಲಿ ದಿಕ್ಪಾಲಕರು ನಳನಿಗೆ ಕೊಟ್ಟವರಗಳ ಪ್ರಸ್ತಾಪ ಅನವಶ್ಯಕವೆಂದು ಕನಕದಾಸರು ಕೈಬಿಟ್ಟಿರುವರು. ನಳನು ಹಂಸದರ್ಶನಕ್ಕೆ ಮುನ್ನ ಬೇಟೆಗೆ ಹೋಗುವುದು, ಇಂದ್ರನ ಸಂದೇಶವನ್ನು ದಮಯಂತಿಗೆ ನಳನು ತೆಗೆದುಕೊಂಡು ಹೋಗುವುದಕ್ಕೆ ಮೊದಲು ದೇವತಾಸ್ತ್ರೀಯರು ದಮಯಂತಿಗೆ ಇಂದ್ರನಲ್ಲಿ ಪ್ರೇಮವನ್ನುಂಟು ಮಾಡಲು ಬರುವುದು, ನಳ–ದಮಯಂತಿಯರ ಪುನಸ್ಸಮಾಗಮವಾದ ಮೇಲೆ ನಳನು ಪುಷ್ಕರನ ಜೊತೆ ಯುದ್ಧ ಮಾಡುವುದು–ಇವು ಮೂಲದಲ್ಲಿಲ್ಲದ ಸನ್ನಿವೇಶಗಳು. ದಮನಮುನಿಯ ಸಲಹೆಯಂತೆ ಯಾಗವನ್ನು ಮಾಡಲು ಭೀಮರಾಜನಿಗೆ ಮಕ್ಕಳಾದುದು. ನಳನು ತನ್ನ ಪಟ್ಟಣದ ಬಳಿಯ ಉಪವನದಲ್ಲೇ ಸುವರ್ಣಮಯವಾದ ಹಂಸವನ್ನು ನೋಡಿದುದು, ನಾರದನ ಮಾತು ಕೇಳಿ ಇಂದ್ರನು ದಮಯಂತಿಯ ಸ್ವಯಂವರಕ್ಕೆ ಹೊರಟಿದ್ದ ನಳನನ್ನು ದಾರಿಯಲ್ಲಿಯೇ ಸಂಧಿಸಿದುದು, ಇಂದ್ರನ ವರದಿಂದ ನಳನು ದಮಯಂತಿಯ ಅಂತಃಪುರವನ್ನು ನಿಜರೂಪದಿಂದ ಸೇರಿದುದು, ನಳನನ್ನು ಕರುಣಿಸಬೇಕೆಂದು ದಮಯಂತಿ ಇಂದ್ರಾದಿಗಳನ್ನು ಬೇಡಿದುದು, ಸ್ವಯಂವರವನ್ನು ಮುಗಿಸಿಕೊಂಡು ಹೊರಟಿದ್ದ ಇಂದ್ರಾದಿಗಳನ್ನು ಸ್ವಯಂವರಕ್ಕೆ ಹೊರಟಿದ್ದ ಕಲಿ ದ್ವಾಪರನೊಡನೆ ಸಂಧಿಸಿದುದು, ಮೂತ್ರವಿಸರ್ಜನೆ ಮಾಡಿದ ನಳನು ಆಚಮನ ಮಾಡದೆ ಸಂಧ್ಯಾದಿ ಕಾರ್ಯಗಳಲ್ಲಿ ತೊಡಗುವುದು. ಹಾವಿನ ಬಾಯಿಂದ ಬಿಡಿಸಿದ ಬೇಡನು ದಮಯಂತಿಯನ್ನು ಕಾಮಿಸಲು ಆಕೆ ಅವನನ್ನು ಸುಟ್ಟುಬಿಡುವುದು–ಇವೇ ಮೊದಲಾದ ಸನ್ನಿವೇಶಗಳು ಸ್ವಲ್ಪ ವ್ಯತ್ಯಾಸ ಹೊಂದಿ 'ನಳಚರಿತ್ರೆ'ಯಲ್ಲಿ ವರ್ಣಿತವಾಗಿವೆ.

'ನಳಚರಿತ್ರೆ'ಯಲ್ಲಿ ಅತ್ಯಂತ ಸ್ಫುಟವಾಗಿ ಮೂಡಿರುವ ಪಾತ್ರವೆಂದರೆ

---

೩. ವಿವರಗಳಿಗೆ ದಯಮಾಡಿ ನೋಡಿ : ನಳಚರಿತ್ರೆ (ಸಂ. ಎಚ್. ಎಂ. ಶಂಕರ ನಾರಾಯಣರಾವ್) ಪೀಠಿಕೆ ಪು. xix-xxi

ದಮಯಂತಿಯದು. ಒಂದು ವಿಧದಲ್ಲಿ ಕಾವ್ಯದಲ್ಲಿ ಪ್ರಧಾನ ಪಾತ್ರ ನಳನದಲ್ಲ, ದಮಯಂತಿಯದು. ಕಾವ್ಯವನ್ನೆಲ್ಲಾ ಸಾಧ್ವಿ ದಮಯಂತಿಯೇ ಆವರಿಸಿಕೊಂಡಿರುವಳು. ಆದರ್ಶ ನಾರಿಯ ಪಾತ್ರ ಚಿತ್ರಣದಲ್ಲಿ ಕನಕದಾಸರ ಪ್ರತಿಭೆ ಎದ್ದುಕಾಣುವಂತಿದೆ. 'ನಳಚರಿತ್ರೆ' ಯೆಂದು ಕೃತಿನಾಮವಿದ್ದರೂ ದಮಯಂತೀ ಚರಿತ್ರೆ ಎಂದು ಕೃತಿನಾಮವಿದ್ದರೆ ಚೆನ್ನಿತ್ತು ಎಂಬನಿಸಿಕೆ ಸಹೃದಯರ ಮನದಲ್ಲಿ ಉಂಟಾಗುವುದು ಸಹಜ. ಕೃತಿಯ ಜನಪ್ರಿಯತೆಗೆ ದಮಯಂತಿ ಪಾತ್ರವೂ ಕಾರಣವಿರಬಹುದು. ತನ್ನ ಗಂಡನನ್ನು ಮರಳಿ ಪಡೆಯಲು ದಮಯಂತಿ ಪಟ್ಟ ಬವಣೆಯ ಚಿತ್ರ ನಳಚರಿತ್ರೆಯಲ್ಲಿ ಸೊಗಸಾಗಿ ನಿರೂಪಿತವಾಗಿದೆ.

ದಮಯಂತಿ ಮರ್ತ್ಯಮಾನವಿಯಲ್ಲ ; ಯಾಗಪುತ್ರಿ, ದಮನ ಮಹರ್ಷಿಯ ಸಲಹೆಯಂತೆ ಭೀಮನು ಯಾಗವನ್ನು ಮಾಡಲು ಲೋಕಸುಂದರಿಯಾದ ಮಗಳು ಜನಿಸಿದಳು. ಅವಳೇ ದಮಯಂತಿ. ಧರಣೀಪಾಲಕರ ಚರಿತ ಪ್ರಸಂಗದಲ್ಲಿ ನಳಮಹಾರಾಜನ ಶೀಲ, ಸೌಂದರ್ಯ, ಸಂಪತ್ತು, ಬುದ್ಧಿಶಕ್ತಿ, ಗುಣಸಂಪನ್ನತೆಯನ್ನು ಕವಿ ಜನರು ಹೊಗಳಿದಾಗ ದಮಯಂತಿ ಅದನ್ನು ಕೇಳಿ ಅವನಿಗೆ ಮನವೊಲಿದವಳು. ಅವಳ ರೂಪ ಲಾವಣ್ಯಾದಿಗಳನ್ನು ನಾರದನಿಂದ ಕೇಳಿ ತಿಳಿದ ದೇವೇಂದ್ರನ ಮನಸ್ಸಿನಲ್ಲೂ ಅವಳನ್ನು ವರಿಸುವ ಬಯಕೆ ಮೊಳೆಯೊಡೆಯಿತಂತೆ. ಕನಕದಾಸರು ನಿರೂಪಿಸುವಂತೆ ದೇವೇಂದ್ರನು ರಂಭೆ, ಊರ್ವಶಿಯರೇ ಮೊದಲಾದ ಸ್ವರ್ಗಕನ್ಯೆಯರನ್ನು ಕರೆಯಿಸಿ ದಮಯಂತಿಯನ್ನು ಉಪಾಯವಾಗಿ ನನಗೆ ಒಲಿಯುವಂತೆ ಮಾಡಿ ಎಂದು ಹೇಳಿ ಅವರ ಜೊತೆ ಬೆಲೆಬಾಳುವ ಶ್ರೇಷ್ಠ ವಸ್ತುಗಳನ್ನು ಕಾಣಿಕೆಯಾಗಿ ಕಳುಹಿಸುವನು. ದಮಯಂತಿಯ ಸ್ವಯಂವರಕ್ಕೆ ದೇವೇಂದ್ರನೇ ಸ್ವತಃ ಯಮ, ವರುಣ, ವಾಯವ್ಯರ ಜೊತೆಗೂಡಿ ಹೊರಡುವನು. ಮಾರ್ಗಮಧ್ಯೆ ನಳನ ಭೇಟಿಯಾಗಿ ದೇವೇಂದ್ರನು ಅವನನ್ನು ತನಗಾಗಿ ದಮಯಂತಿಯನ್ನು ಒಲಿಸುವಂತೆ ಕೇಳಿಕೊಳ್ಳುವನು. ಅಷ್ಟೇ ಅಲ್ಲ, ಸಾಕಾರವಾಗಿ ದಮಯಂತಿಯ ಮುಂದೆ ಹೋಗಿ ನಿಲ್ಲುವ ವರವನ್ನೂ ಅನುಗ್ರಹಿಸುವನು.

ದಮಯಂತಿಯ ಪಾತಿವ್ರತ್ಯ ಅಮೋಘವಾದುದು. ಅವಳು ಭಾರತದ ಆದರ್ಶ ನಾರೀಮಣಿ. ಗಂಡನನ್ನು ದೈವವೆಂದು ಆರಾಧಿಸಿ ಗಂಡನ ಕ್ಷೇಮ ಚಿಂತನೆಯಲ್ಲಿಯೇ ಸದಾ ಮಗ್ನಳಾಗಿರುತ್ತಿದ್ದ ಅವಳ ಚಿತ್ರ 'ನಳಚರಿತ್ರೆ'ಯಲ್ಲಿ ಮನೋಜ್ಞವಾಗಿ ಬಂದಿದೆ. ಕಾಡಿನಲ್ಲಿ ಸರ್ಪನ ಬಾಯಿಗೆ ಸಿಕ್ಕಿ ಸಾಯುತ್ತಿದ್ದ

ತನ್ನನ್ನು ಬಿಡಿಸಿದ ಬೇಡನ ಬಗೆಗೆ ಅವಳಿಗೆ ಗೌರವವಿದೆ. ಬೇಡನು ಅವಳನ್ನು ತನ್ನ ಸತಿಯಾಗೆಂದು ಕೇಳಿದಾಗ ಅವನನ್ನು ಅವಳು, ಮೂಲದಲ್ಲಿ ಬಂದಿರುವಂತೆ, ತನ್ನ ಪಾತಿವ್ರತ್ಯಬಲದಿಂದ ಸುಟ್ಟುಬಿಡುವುದಿಲ್ಲ. ಅದಕ್ಕೆ ಬದಲಾಗಿ ಅವನ ಮದನೋನ್ಮಾದವನ್ನು 'ಪ್ರಾಣರಕ್ಷಿಸಿದ ನೀನು ತಂದೆಗೆ ಸಮಾನ' ಎಂದು ಹೇಳಿ ನಿವಾರಿಸುವಳು. ಅಷ್ಟೇ ಅಲ್ಲ, ತನಗೆ ಕೋಪ ಬಂದರೆ ಶಪಿಸುವುದಾಗಿ ಅವನಿಗೆ ಬೆದರಿಕೆಯೊಡ್ಡುವಳು (೫.೩೧). ಇವಳ ಪಾತಿವ್ರತ್ಯ ಮಹಿಮೆಗೆ ಕಾಡಿನಲ್ಲಿರುವ ಮರುಳ ಬಳಗ, ಭೂತವೇತಾಳಗಳು ತೊಲಗಿದವು ; ಶರಭ, ಮೊಲ, ಕಾಡಾನೆ, ಸಿಂಹಗಳು ಅಲ್ಲಿಂದ ಅದೃಶ್ಯವಾದವು (೫.೩೩) ಪತಿಯು ತನ್ನನ್ನು ಭೀಕರವಾದ ಕಾಡಿನಲ್ಲಿ ತ್ಯಜಿಸಿ ಹೋದಾಗ ಭಯಭೀತಳಾದ ದಮಯಂತಿಗೆ ಮುನಿಗಳು ಕಾಣಿಸಿಕೊಂಡು ಅಂಜದಿರೆಂದು ಸಮಾಧಾನಿಸಿ, ಗಂಡ, ರಾಜ್ಯ, ಸಂಪತ್ತು, ಮಕ್ಕಳು ನಿನಗೆ ಮರಳಿ ದೊರೆಯುವರು ಎಂದು ಅಭಯ ನೀಡಿ ಅದೃಶ್ಯರಾಗುವರು (೫.೩೭). ಕಾಡಿನಲ್ಲಿ ಆನೆಗಳನ್ನು ಕಂಡು ಹೆದರಿದ ವ್ಯಾಪಾರಿಗಳಿಗೆ ಧೈರ್ಯ ತುಂಬಿ ಅಚ್ಯುತನನ್ನು ನೆನೆಯುವಳು. ಕೂಡಲೇ ಆನೆಗಳು ತೊಂದರೆ ಮಾಡದೆ ಕಾಡಿಗೆ ಮರಳಿದವು (೫.೫೦). ದೈವಸಂಕಲ್ಪವೊ ಎಂಬಂತೆ ದಮಯಂತಿ ತನ್ನ ಸ್ವಂತ ಚಿಕ್ಕಮ್ಮನ ಆಶ್ರಯ ಪಡೆಯುವಳು (೫, ೫೪–೬೦). ಆ ಮೂಲಕ ದಮಯಂತಿ ಕ್ಷೇಮವಾಗಿ ತಂದೆಯ ಮನೆ ಸೇರುವಳು.

ಅಗಲಿದ ಪತಿಯನ್ನು ಮತ್ತೆ ಕೂಡಲು ದಮಯಂತಿ ತೋರಿದ ಜಾಣ್ಮೆಯು ಮೆಚ್ಚುವಂತಹದು. ತನ್ನ ಪತಿ ರಾಜತೇಜವನ್ನು ಬಿಟ್ಟು ಬೇರೆ ರೂಪು ಧರಿಸಿರುವನೆಂದು ತಿಳಿದ ದಮಯಂತಿಯು ನಳನನ್ನು ಹುಡುಕಲು ಹೊರಟ ಬ್ರಾಹ್ಮಣರನ್ನು ಕರೆದು ನೀವು ರಾಜಸಭೆಗಳಿಗೆ ಹೋಗಿ ಅಲ್ಲಿ "ಕಾಡಿನಲ್ಲಿ ಸತಿಯು ಉಟ್ಟ ಸೀರೆಯಲ್ಲಿ ಅರ್ಧವನ್ನು ಕೊಂಡು ಸತಿಯನ್ನು ತ್ಯಜಿಸಿ ಹೋದವರುಂಟೆ?" ಎಂದು ಹೇಳಿ, ಅದಕ್ಕೆ ಯಾರು ಉತ್ತರಿಸುವರೋ ಅವರ ಮಾತನ್ನು ನೀವು ನನಗೆ ಬಂದು ತಿಳಿಸಿ–ಎಂದು ಆದೇಶಿಸುವಳು. ತನ್ನ ಪತಿ ಋತುಪರ್ಣರಾಯನ ಆಸ್ಥಾನದಲ್ಲಿ ಬಾಹುಕನೆಂಬ ಹೆಸರಿನಲ್ಲಿ ರಾಜನ ಪ್ರಾಣಮಿತ್ರನಾಗಿರುವನೆಂಬುದನ್ನು ತಿಳಿದ ದಮಯಂತಿ ತಂದೆಯ ಅಪ್ಪಣೆ ಪಡೆದು ತನಗೆ ಮರಳಿ ಸ್ವಯಂವರವೆಂದು ಬೇಕೆಂದೇ ಸುದ್ದಿ ಹಬ್ಬಿಸುವಳು. ಈ ತಂತ್ರ ಫಲಿಸಿ, ಋತುಪರ್ಣರಾಯನು ಸ್ವಯಂವರಕ್ಕೆ ಹೊರಟಾಗ ಬಾಹುಕ ಅವನಿಗೆ ಸಾರಥಿಯಾಗುವನು. ಬಾಹುಕನೇ ನಳನಿರಬಹುದೆಂಬ ಸಂದೇಹ ಬಂದು

ದಮಯಂತಿ ತನ್ನ ಮಕ್ಕಳನ್ನು ಅವನ ಬಳಿ ಕಳುಹಿಸುವಳು. ಮಕ್ಕಳ ಮೇಲಣ ಪ್ರೀತಿಯನ್ನು ನಳನು ಕಂಬನಿದುಂಬಿ ವ್ಯಕ್ತಪಡಿಸುವನು. ದಮಯಂತಿಗೆ ಈಗ ಅವನು ತನ್ನ ಪತಿಯೆಂಬುದು ದೃಢವಾಗುತ್ತದೆ. ಅವಳು ತಂದೆಯ ಅನುಮತಿ ಪಡೆದು ಬಾಹುಕನನ್ನು ತನ್ನಲ್ಲಿಗೆ ಕರೆಯಿಸುವಳು. ಅವನ ಪಾದಗಳಿಗೆ ನಮಸ್ಕರಿಸುವಳು. ತಾನು ನಿಜ ಸಂಗತಿಯನ್ನು ತಿಳಿಯಲು ಹೂಡಿದ ತಂತ್ರವನ್ನು ಅವನಿಗೆ ತಿಳಿಸುವಳು. ಎಷ್ಟೇ ಕಷ್ಟಗಳು ತನ್ನ ಮೇಲೆ ಕವಿದುಬಂದರೂ ತಾಳ್ಮೆಗೆಡದೆ, ಧೈರ್ಯಗುಂದದೆ ಅವೆಲ್ಲವನ್ನು ಸ್ಥಿರಚಿತ್ತದಿಂದ ಎದುರಿಸಿದ ದಮಯಂತಿಯ ಮನೋಭಾವ ಮೆಚ್ಚುವಂತಹದು. ಧೈರ್ಯದೊಂದಿಗೆ ಸಮಯೋಚಿತ ಜಾಣ್ಮೆ ಅವಳು ಮರಳಿ ಪತಿಯನ್ನು ಪಡೆಯಲು ಹೇಗೆ ನೆರವಾಯಿತೆಂಬುದು ಉದ್ಬೋಧಕವಾಗಿದೆ.

ದಮಯಂತಿಯ ಪಾತ್ರದ ಮುಂದೆ ನಳನ ಪಾತ್ರ ಉಜ್ವಲವಾಗಿಲ್ಲದಿದ್ದರೂ ತೀರಾ ಕಡೆಗಣಿಸಲ್ಪಟ್ಟಿಲ್ಲ. ನಳನು ನಾಯಕನಾಗಿರುವುದರಿಂದ ಅವನದು ಧೀರೋದಾತ್ತ ಪಾತ್ರ. ದೇಶಸಂಚಾರಮಾಡುತ್ತಾ ಬಂದ ಬ್ರಾಹ್ಮಣರಿಂದ ದಮಯಂತಿಯ ರೂಪ ಗುಣಾತಿಶಯಗಳನ್ನು ಕೇಳಿ ಮೆಚ್ಚಿ ಅವಳನ್ನು ಮನದಲ್ಲೇ ಮೋಹಿಸುವನು. ಪ್ರೇಮಿಗಳನ್ನು ಒಂದುಗೂಡಿಸಲು ಕಾವ್ಯದಲ್ಲಿ ರಾಜಹಂಸದ ಬಳಕೆಯಾಗಿದೆ. ಬೇಟೆಯ ನೆಪದಲ್ಲಿ ಪುರವಳಯದ ಉದ್ಯಾನವನದ ಕೊಳದ ತೀರದಲ್ಲಿ ರಾಜನು ವಿಶ್ರಮಿಸಿದ್ದಾಗ ಶುಭ್ರತೇಜದ ರಾಜಹಂಸವೊಂದು ಕಾಣಿಸಿಕೊಳ್ಳುತ್ತದೆ. ನಳನು ಅದನ್ನು ಹಿಡಿಯಲು, ಬೆದರಿದ ರಾಜಹಂಸವು ತನ್ನನ್ನು ಕೊಲ್ಲದೆ ಪ್ರಾಣಸಹಿತ ಬಿಡುವಂತೆ ಬಗೆಬಗೆಯಾಗಿ ಪ್ರಾರ್ಥಿಸುತ್ತದೆ. ಅದರ ನಡವಳಿಕೆಗೆ ಮೆಚ್ಚಿದ ನಳ ಅದನ್ನು ಕೊಲ್ಲದೆ ಬಿಡುವನು. ಈ ಉಪಕಾರಕ್ಕೆ ಪ್ರತ್ಯುಪಕಾರ ಮಾಡಬಯಸಿದ ಹಂಸವು ಅಪ್ರತಿಮ ಸುಂದರಿಯಾದ ದಮಯಂತಿಯು ನಿನಗೊಲಿಯುವಂತೆ ಮಾಡುವೆನೆಂದು ಹೇಳಿ ವಿದರ್ಭದ ರಾಜಕುಮಾರಿ ದಮಯಂತಿಯ ಬಳಿಗೆ ಬಂದು ನಳನನ್ನು ಹೊಗಳಿ, 'ಜಗತ್ತಿನಲ್ಲಿ ನಿಮಗೀರ್ವರಿಗೂ ಸರಿಗಾಣೆ ; ರೂಪ–ಸೌಂದರ್ಯಗಳಲ್ಲಿ ಈರ್ವರೂ ಸಮನಾಗಿರುವಿರಿ' ಎನ್ನುವುದು ದಮಯಂತಿ ತನ್ನ ಮನದ ತಾಪವನ್ನು ರಾಜಹಂಸಕ್ಕೆ ತಿಳಿಸಿ ನಳಮಹಾರಾಜನಿಗೆ ತನ್ನ ದೀನಸ್ಥಿತಿಯನ್ನು ನಿವೇದಿಸುವಂತೆ ಕೇಳಿಕೊಳ್ಳುವಳು. ರಾಜಹಂಸವು ನಳನಲ್ಲಿಗೆ ಬಂದು 'ದಮಯಂತಿಯನ್ನು ನಿನಗೆ ಒಲಿಸಿ ಬಂದೆನು ; ತನ್ನ ಭಾಷೆ ಸಂದಿತು ; ನೀನು ಆ ಕಾಂತೆಯನ್ನು ಮದುವೆಯಾಗು' ಎಂದು ಹೇಳುವುದು. 'ನಳಚರಿತ್ರೆ'ಯಲ್ಲಿ ರಾಜಹಂಸದ

ಕಾರ್ಯಭಾರ ಕಾವ್ಯದ ನಡಿಗೆಗೆ ಅನಿವಾರ್ಯವೆಂಬಂತಿದೆ. ರಾಜಹಂಸವು ರಾಜನು ತನಗೆ ಮಾಡಿದ ಉಪಕಾರಕ್ಕೆ ಪ್ರತಿಯಾಗಿ ದಮಯಂತಿಯ ಬಳಿ ದೌತ್ಯವಾಗಿ ಅವರನ್ನು ಒಂದುಗೂಡಿಸುವ ಪ್ರಮುಖ ಪಾತ್ರ ನಿರ್ವಹಿಸುತ್ತದೆ. ರಾಜಹಂಸವು ಮಾತನಾಡುವುದು, ಉಪಕಾರಕ್ಕೆ ಪ್ರತ್ಯುಪಕಾರ ಸಲ್ಲಿಸುವುದು ಲೌಕಿಕವಾಗಿ ಅಸಹಜವಾಗಿ ತೋರಿಬಂದರೂ ಕಾವ್ಯಸತ್ಯವಾಗಿ, ಸುಮಧುರವಾಗಿ ಕಲಾತ್ಮಕವಾಗಿ ಚಿತ್ರಿತವಾಗಿದೆ.

ದೇವೇಂದ್ರನು ನಳನನ್ನು ತನ್ನ ಪ್ರೇಮಸಂದೇಶಕನನ್ನಾಗಿ ದಮಯಂತಿಯ ಬಳಿಗೆ ಕಳುಹಿಸಿದ ಸಂದರ್ಭ ಕನಕದಾಸರ ಸ್ವಂತ ಕಲ್ಪನೆ. ಇದರಿಂದಾಗಿ ನಳನಿಗೆ ತನ್ನನ್ನು ಪ್ರೀತಿಸಿರುವ ದಮಯಂತಿಯ ಮನದಾಳದ ಪ್ರೇಮದ ಬೆಲೆ ತಿಳಿಯುವುದು. ದಮಯಂತಿಯ ಮನಸ್ಸನ್ನು ಪರೀಕ್ಷಿಸಲು 'ದೇವೇಂದ್ರನೊ ಪ್ರಖ್ಯಾತ ಪುರುಷ ; ಆತ ನಿನ್ನನ್ನು ಬಯಸುವುದೂ ಕೃತಪುಣ್ಯ ; ಅವನಿಗಿಂತ ಭುವಿಯ ನರರು ಅಧಿಕರೆ? ಅವರಲ್ಲಿ ಪ್ರೀತಿಯೇಕೆ? ಬಿಡು, ದೇವೇಂದ್ರನ ಕೈ ಹಿಡಿದು ನೀನು ಸುಖಿಯಾಗು' ಎನ್ನುವನು. ಬೇಕೆಂದೇ 'ನಳನು ನಿನ್ನನ್ನು ಒಲಿವನೆ? ರಾಜರುಗಳಲ್ಲಿ ಅವನು ಶ್ರೇಷ್ಠನೆ?' ಎಂದು ಸಂದೇಹ ವ್ಯಕ್ತಪಡಿಸುವನು. ಆ ಮಾತು ಕೇಳಿ ಸಹಿಸದ ದಮಯಂತಿ ಆ ನರೇಂದ್ರಗೆ ಸರಿಯೆ ಮನುಮುನಿ ದಾನವಾಮರರು? ನಿಮಗೀ ಹೀನವೃತ್ತಿಯ ಮಾತದೇಕೆ? ನಾನು ನಿಷಧಪತಿಯೇ ಪತಿಯೆಂದು ಭಾವಿಸಿರುವೆನು. ಅವನು ನನ್ನ ಮೇಲೆ ಕರುಣಿಸಿದರೆ ಸರಿ. ಇಲ್ಲದಿದ್ದರೆ ಅವನಿಗಾಗಿ ನಾನು ಪ್ರಾಣಬಿಡುವೆನು. ನನಗೆ ಫಲ ಸಿದ್ಧಿಸಲು ಇದೇ ಸಂಕಲ್ಪ–ಎಂದು ಕಂಬನಿದುಂಬಿ ನುಡಿಯುವಳು. ಇನ್ನು ಪರೀಕ್ಷೆ ಸಾಕೆಂದು ನಳ ನಿಜರೂಪುದೋರುವನು. ರಾಜಹಂಸವನ್ನು ರಾಯಭಾರಿಯಾಗಿ ಕಳುಹಿಸಿದ್ದನ್ನು ತಿಳಿಸುವನು. ನಾಯಕ–ನಾಯಕಿಯರ ಪ್ರೇಮದ ಬಂಧಗಟ್ಟಿಯಾಗಲು ಇಂತಹ ಪರೀಕ್ಷೆಗಳು ಸಹಾಯಕಾರಿ. ಒರೆಹಚ್ಚಲ್ಪಟ್ಟಾಗಲೇ ಪ್ರೇಮದ ಗಾಢತೆಯ ಪರಿಚಯವಾಗುವುದು. ಕವಿ ಇದನ್ನು ಬಲ್ಲವನಾದ ಕಾರಣ ಈ ಸನ್ನಿವೇಶವನ್ನು ಕಲ್ಪಿಸಿ ಪಾತ್ರಗಳ ಸ್ವಭಾವವನ್ನು ಸ್ಫುಟಗೊಳಿಸಿರುವನು.

ನಳನು ಸರ್ವಸ್ವವನ್ನೂ ಜೂಜಿನಲ್ಲಿ ಕಳೆದುಕೊಂಡು ವನವಾಸದಲ್ಲಿ ದಮಯಂತಿಯೋರ್ವಳನ್ನೇ ಬಿಟ್ಟು ಹೋದದು ಸರಿಯೆ? ಇದಕ್ಕೆ ಕನಕದಾಸರಲ್ಲಿ ಸಮರ್ಪಕವಾದ ಉತ್ತರವಿದೆ. ಪರಸ್ಪರ ಅಗಲಿಕೆ–ವಿರಹ ದಂಪತಿಗಳ ಪ್ರೇಮವನ್ನು ಇನ್ನಷ್ಟು ಗಟ್ಟಿಗೊಳಿಸಿದೆ, ಮಧುರಗೊಳಿಸಿದೆ. ಈ ಅಗಲಿಕೆ ಕಾವ್ಯದ ಬೆಳವಣಿಗೆಯ ದೃಷ್ಟಿಯಿಂದ ಅನಿವಾರ್ಯ, ವಿವೇಕಿಯೂ, ಧೈರ್ಯಸ್ಥಳೂ ಆದ ದಮಯಂತಿ

ಹೇಗೋ ತಂದೆಯ ಮನೆಯನ್ನು ಸೇರಿಕೊಳ್ಳುವಳೆಂಬ ನಂಬುಗೆ ನಳನದು. ಸುಕೋಮಲೆಯೂ ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದವಳೂ ಆದ ದಮಯಂತಿಯು ಕಾಡಿನಲ್ಲಿ ದಿಕ್ಕೇಡಿಯಂತೆ ಅಲೆಯುವುದು ನಳನಿಗೆ ಬೇಡವಾದದ್ದು. ಅವಳ ಸಂಕಟವನ್ನು ಜೊತೆಯಲ್ಲಿದ್ದು ನೋಡಲಾರ. ಹೀಗಾಗಿ ಅವನು ಅವಳನ್ನು ಕಾಡಿನಲ್ಲಿ ಬಿಟ್ಟುಹೋದ. ಬಿಟ್ಟುಹೋದ ಮೇಲೆ ಅವನು ಸ್ವಸ್ಥನಾಗಿರಲಿಲ್ಲ. ದಮಯಂತಿಗೆ ಏನಾಯಿತೊ ಎಂಬ ಕಳವಳ, ಚಿಂತೆ ಸದಾ ಅವನನ್ನು ಕಾಡುತ್ತಿರುತ್ತದೆ.

'ನಳಚರಿತ್ರೆ'ಯ ಪ್ರಸಿದ್ಧಿಗೆ ಅದು ಲೋಕಸಂಗತಿಗಳನ್ನು, ನಂಬಿಕೆಗಳನ್ನು ಅಳವಡಿಸಿಕೊಂಡಿರುವುದೂ ಒಂದು ಮುಖ್ಯ ಕಾರಣ. ವ್ಯಕ್ತಿಯ ಏಳು ಬೀಳುಗಳಿಗೆ 'ವಿಧಿ' ಕಾರಣವೆಂಬ ನಂಬುಗೆ ಜನಪದರದು. ಈ ನಂಬುಗೆಯನ್ನು 'ನಳಚರಿತ್ರೆ' ಪ್ರತಿನಿಧಿಸುತ್ತದೆ. ನಳ-ದಮಯಂತಿಯರ ಮಧುರ ದಾಂಪತ್ಯವನ್ನು ಒಡೆಯುಲು ಇಲ್ಲಿ 'ವಿಧಿ' ಕಲಿಯು ರೂಪ ತಾಳಿದೆ. ಕಾವ್ಯದಲ್ಲಿ ನಿರೂಪಿತವಾಗಿರುವಂತೆ ಇಂದ್ರ, ಯಮ, ವರುಣ, ವಾಯು-ಇವರಿಂದ ಮುಖಭಂಗಿತನಾದ ಮೇಲೆ ಕಲಿಯ ಮುಳಿಸು ಇನ್ನಷ್ಟು ಕ್ರೂರವಾಗುತ್ತದೆ. ಶುದ್ಧಾಚಮನ ಮಾಡದೆ ನಳನು ನೀರು ಕುಡಿದಾಗ ಅವನ ಬಾಳಿನಲ್ಲಿ ಕಲಿಯ ಪ್ರವೇಶವಾಗುವುದು. ಕಲಿ ಪುಷ್ಕರನ ನೆರವು ಪಡೆದು ಅವನಿಂದ ಜೂಜಿನ ವ್ಯಾಜದಲ್ಲಿ ನಳನ ರಾಜ್ಯ ಕೋಶಗಳೆಲ್ಲವನ್ನೂ ಕಸಿದುಕೊಳ್ಳುವುದು. ನಳನು ಮಕ್ಕಳನ್ನು ಮಾವನ ಮನೆಗೆ ಕಳುಹಿಸಿ ದಮಯಂತಿಯೊಡನೆ ಕಾಡಿಗೆ ನಡೆಯುವನು. ಮುಂದೆ ಒಡ್ಡಿಬರುವ ಕಷ್ಟಪರಂಪರೆಗಳು ದಂಪತಿಗಳ ಮನಸ್ಸನ್ನು ಪರೀಕ್ಷಿಸಲೆಂದೇ ಬಂದಂತಿವೆ. ಕಾಡಿನಲ್ಲಿ ಬರುತ್ತಿರುವಾಗ ಜಗನ್ಮೋಹನ ಪಕ್ಷಿಗಳು ಧರೆಗಿಳಿಯುತ್ತಿರುವುದನ್ನು ಕಂಡ ನಳ ಅವನ್ನು ಹಿಡಿಯಲು ತನ್ನ ಹಚ್ಚಡವನ್ನು ಬೀಸುವನು. ಆ ಪಕ್ಷಿಗಳು ಅದನ್ನು ಆಕಾಶಕ್ಕೆ ಕೊಂಡೊಯ್ದುವು. ನಳನು ನಿರ್ವಾಣದಲ್ಲಿ ನಿಂತಿರಲು ದಮಯಂತಿ ತನ್ನ ಸೀರೆಯ ಸೆರಗನ್ನು ಹರಿದು ಮಾನಮುಚ್ಚಲು ವಸ್ತ್ರವನ್ನು ಕೊಡುವಳು. ನಿಷಧಾಧಿಪತಿ ವಸ್ತ್ರಹೀನನಾಗಿ ನಿಂತು ಮಾನಮುಚ್ಚಲು ಪತ್ನಿಯ ಸೀರೆಯ ಸೆರಗನ್ನು ಆಶ್ರಯಿಸಬೇಕಾದುದು ವಿಧಿಲೀಲೆ! ಇಂತಹ ಸಂದರ್ಭಗಳು-ಸನ್ನಿವೇಶಗಳು ಜನ ಸಾಮಾನ್ಯರ ಭಾವಕೋಶವನ್ನು ಮೀಟುವುದರಿಮದ ಕಾವ್ಯ ನಿರೀಕ್ಷೆ ಮೀರಿದ ಜನಪ್ರಿಯತೆ ಪಡೆಯುತ್ತದೆ. ಕಾರ್ಕೋಟಕನ ವಿಷದಂಶನದಿಂದ ನಳನ ರೂಪಪರಿವರ್ತನೆಯಾಗುವುದು ನಳನ ಪಾಲಿಗೆ ಆ ಕ್ಷಣಕ್ಕೆ ದೌರ್ಭಾಗ್ಯವೆನ್ನಿಸಿದರೂ ಪರಸ್ಪರ ಸಂಬಂಧ ಹೊಂದಿರುವ

ಅವು ದೈವ ನಿಯೋಜಿತ ಸಂಕಲ್ಪಗಳೇ ; ಕಥೆಯ ಬೆಳವಣಿಗೆಗೆ ಪೂರಕವಾದವುಗಳೇ. ನಳನಿಗೆ ಅಜ್ಞಾತವಾಸಕ್ಕೆ ಅವನ ವಿಕೃತರೂಪ ನೆರವಾಗುವುದು. ಅಷ್ಟೇ ಅಲ್ಲ, ಸರ್ವಾಂಗದಲ್ಲಿ ವಿಷ ವ್ಯಾಪಿಸಿರುವವರೆವಿಗೆ ಶತ್ರುವಿನ ಬಾಣ, ಜಲ, ಅಗ್ನಿ, ಸರ್ಪ, ರೋಗ–ಇವೇ ಮೊದಲಾದವುಗಳ ಭಯವಿಲ್ಲದೆ 'ವಜ್ರಾಂಗಿ'ಯಾಗಿ ನಳ ಮೆರೆಯುವನು. ಕಲಿಯ ಕಾಡುವ ಕೈಯ ಕಾಟ ನಿಂತಾಗ ಅವನಿಗೆ ಶುಭ ಪರಂಪರೆ. ನಳ ಪಕ್ಷಿಗಳನ್ನು ನೆನೆಯಲು ವಸ್ತ್ರ ಮರಳಿ ಬರುವುದು. ಅದನ್ನು ಧರಿಸಿದ ಕೂಡಲೇ ನಳನ ವಿಕೃತ ರೂಪು ಮಾಯವಾಗುವುದು. ಇದೇ ಅಲ್ಲವೆ ವಿಧಿಲೀಲೆ ! ಕಲಿ ಕಾಡಿದರೂ ವಿಚಲಿತವಾಗದ ಮನಸ್ಸು ನಳನದು. ಅಂತೆಯೇ ಕಲಿ ನಳನನ್ನು ಬಹುವಾಗಿ ಕಾಡಿ, ಇನ್ನು ಕಾಡುವುದು ಬೇಡವೆಂದಾಗ ನಳನಿಗೆ ತಲೆಬಾಗುವುದು. ತನ್ನ ಇಷ್ಟೆಲ್ಲ ಕಷ್ಟಗಳಿಗೆ ಕಾರಣನಾದ ಕಲಿಯ ಮೇಲೆ ಕೋಪ ಬಂದರೂ ನಳ ಶಪಿಸದೆ ಮನ್ನಿಸುವನು.

ಸಂಕ್ಷಿಪ್ತತೆ ಕನಕದಾಸರ ಶೈಲಿಯ ಜೀವಾಳ. 'ಮೋಹನ ತರಂಗಿಣಿ' ಬರೆದ ಕವಿಯೇ ಇದನ್ನು ಬರೆದನೆ ? ಎಂಬ ಸಂದೇಹ ಬರುವಷ್ಟು ಸಂಕ್ಷಿಪ್ತತೆ 'ನಳಚರಿತ್ರೆ'ಯಲ್ಲಿ ಕಂಡು ಬರುತ್ತದೆ. 'ನಳಚರಿತ್ರೆ'ಯಲ್ಲಿ ದಮಯಂತಿ ಹಾಗೂ ನಳರ ಪಾತ್ರ ಸ್ಫುಟವಾಗಿ ಬಂದಿದೆ. ಪಾತ್ರಗಳ ಅಂತರಂಗ ವಿಶ್ಲೇಷಣೆಯನ್ನು ಕವಿ ಮಾಡುವುದರಿಂದ ಪಾತ್ರಗಳ ವ್ಯಕ್ತಿತ್ವದ ಪರಿಚಯ ಓದುಗರಿಗಾಗುತ್ತದೆ. ಕವಿ ವರ್ಣನಾಪ್ರಧಾನ ಕಾವ್ಯವಾಗಿ 'ನಳಚರಿತ್ರೆ'ಯನ್ನು ಬರೆದಿಲ್ಲ. 'ಮೋಹನ ತರಂಗಿಣಿ'ಗೂ ಈ ಕೃತಿಗೂ ಇರುವ ವ್ಯತ್ಯಾಸ ಈ ದೃಷ್ಟಿಯಿಂದ ಸ್ಪಷ್ಟಗೊಳ್ಳುತ್ತದೆ. ಕಾವ್ಯದಲ್ಲಿ ಬರುವ ವರ್ಣನಾ ಭಾಗಗಳೂ ಲಂಬಿಸಿಲ್ಲ, ಹಿತ–ಮಿತವಾಗಿವೆ. ದಮಯಂತಿಯ ವಿರಹ (ಅ. ೩೭–೪೪), ದಮಯಂತಿಯು ಹೊಂಬಣ್ಣದ ಹಂಸೆಯನ್ನು ಹಿಡಿಯುವ ದೃಶ್ಯ (೨. ೩೩–೩೪), ಕಲಿಪುರುಷನ ವರ್ಣನೆ (೪. ೪), ದಮಯಂತಿಯ ಶೋಕ (೫. ೨೩–೨೫), ಸರ್ಪ ಕಚ್ಚಿದ್ದರಿಂದ ರೂಪಳಿದ ನಳನ ವರ್ಣನೆ (೬. ೧೪). ಋತುಪರ್ಣನ ನಗರಿಯನ್ನು ಪ್ರವೇಶಿಸಿದ ಸುದೇವನ ವರ್ಣನೆ (೮. ೨೪) –ಇಲ್ಲೆಲ್ಲಾ ವರ್ಣನೆಗಳು ಕವಿಪ್ರತಿಭೆಯ ಭಾವಸಾಮ್ರಾಜ್ಯದ ನುಡಿಚಿತ್ರಗಳಾಗಿವೆ.

ಕನಕದಾಸರಿಗೆ ಉಪಮಾಲಂಕಾರ ಹೇಳಬೇಕಾದ್ದನ್ನು ಅರ್ಥವತ್ತಾಗಿ ಹೇಳಲು ಒಂದು ಅತ್ಯುತ್ತಮ ಸಾಧನ. ಕವಿಗೆ ಈ ಅಲಂಕಾರದ ಹೊರತಾಗಿ ಬೇರೊಂದರ ಬಗೆಗೆ ಆಸಕ್ತಿಯಿಲ್ಲ. 'ಗಗನ ವೀಧಿಯ ತಾರಕೆಯವೋಲ್'

(೧. ೨೧), 'ಕಲಿಗಳನು ಮುರಿದಿಡುವ ಸಿಂಹಕೆ ನರಿಗಳಿದಿರೇ" (೨. ೧೪), 'ದೀಪನಿದಿರಲಿ ತಮದ ಹಾವಳಿಯೆ' (೪.೮), 'ಎಳೆಯ ಬಾಳೆಯ ಸುಳಿಯು ಅನಲನ ಜ್ವಳದ ಹೊಯ್ಲಲಿ ನಿಂದವೋಲ್' (೫. ೨), 'ಕತ್ತಲೆ ಬಿಗಿದಂದವನೀತಳವ ಪೆಟ್ಟಿಗೆ ಮುಚ್ಚುವಂದದಲಿ' (೫. ೪೩), 'ಹಿಮಕರನ ನುಂಗುವ ರಾಹುವಿನವೋಲ್' (೫.೨೭), 'ಮುಂಗೈಗಂಕಣಕೆ ಕನ್ನಡಿಯೇಕೆ?' (೭. ೪), 'ಗಾಳಿ ಮುರಿದೌಕಿದಡೆ ಘನ ಮೇಘಾಳಿ ನಿಲುವುದೆ?' (೯. ೩೨)–ಇವೇ ಮೊದಲಾದ ಉಪಮೆಗಳು ಕಾವ್ಯದಲ್ಲಿ ವರ್ಣನೆಯ ಸಂದರ್ಭದಲ್ಲಿ ಅರ್ಥವನ್ನು ಮಿನುಗಿಸಿವೆ.

ಕನಕದಾಸರ 'ನಳಚರಿತ್ರೆ'ಯ ಭಾಷೆ ನಾರಣಪ್ಪನ ಗಂಡುಭಾಷೆ. ಭಾವಾಭಿವ್ಯಕ್ತಿಗೆ ಕನಕದಾಸರು ಸರಳವಾದ ಪದಪ್ರಯೋಗ ಮಾಡುವರು. ಹೀಗಾಗಿ ಓದುಗರ ಗ್ರಹಿಕೆಗೆ ಕಾವ್ಯ ನಿಲುಕುತ್ತದೆ. ಭಾವಾಭಿವ್ಯಕ್ತಿಗೆ ಕವಿ ಬಳಸುವ ಛಂದಸ್ಸು ಪ್ರಮುಖ ಸಾಧನ. ಕನಕದಾಸರು ಭಾಮಿನಿಯನ್ನು ಕುಮಾರವ್ಯಾಸನಂತೆ ನಿರಾಯಾಸವಾಗಿ ಬಳಸುವರು. ನಳಚರಿತ್ರೆಯ ಪದ್ಯಗಳ ಲಾಲಿತ್ಯ ಕಿವಿಗೆ ಇಂಪಾಗಿದೆ. ಯಾವುದೇ ಪದ್ಯ ತೆಗೆದುಕೊಂಡರೂ ಸುಲಲಿತ ಗತಿ, ಭಾವಾಭಿನಯ ಸಹೃದಯನ ಮನಸ್ಸಿಗೆ ಗೋಚರವಾಗುತ್ತದೆ. ಎಲ್ಲೂ ಪದ್ಯಗಳ ಬಂಧನಲ್ಲಿ ಕೃತಕತೆ ಕಂಡುಬರುವುದಿಲ್ಲ. ನಾರಣಪ್ಪನ ಪ್ರಭಾವಕ್ಕೆ ಕನಕದಾಸರು ಒಳಗಾಗಿರುವಂತೆ ತೋರುತ್ತದೆ. ನಾರಣಪ್ಪನ ಭಾವ, ಭಾಷೆ, ಪದಪುಂಜ, ಉದ್ಗಾರ ವಾಚಿಗಳು ಕೃತಿಯುದ್ದಕ್ಕೂ ಕಂಡುಬರುತ್ತವೆ. (ಉದಾಹರಣೆಗೆ ೨, ೧೭, ೨. ೨. ೧೯, ೩, ೩೨, ೩, ೩೫, ೪. ೨೩, ೨೨, ೨೪, ೨೭, ೨೮ ; ೫. ೫, ೫, ೩೦– ಈ ಪದ್ಯ ಭಾಗಗಳನ್ನು ಪರಿಶೀಲಿಸಬಹುದು). 'ನಳಚರಿತ್ರೆ'ಯ ಜನಪ್ರಿಯತೆಗೆ ಭಾಮಿನಿಯ ನಾದದ ಸೊಗಸು, ಶಬ್ದಚಿತ್ರಗಳು ಕಟ್ಟಿಕೊಡುವ ಕಸುವಿನಿಂದ ಕೂಡಿದ ಪದಪುಂಜಗಳು, ಭಾವಾಭಿನಯವನ್ನು ಪ್ರದರ್ಶಿಸುವ ಕಾವ್ಯದ ಹದವಾದ ದೇಸೀ ಶೈಲಿ, ಶಬ್ದಾರ್ಥಕ್ಕೆ ಕಳೆಗೊಡುವ ಉಪಮೆಗಳು ಕಾರಣವೆನ್ನಬಹುದು.

ತ್ಯಾಗಮೂಲವೂ ನಿಸ್ವಾರ್ಥಪರವೂ ಆದ ಪ್ರೇಮಕ್ಕೆ ನಳ–ದಮಯಂತಿಯರು ಸಂಕೇತವಾಗಿರುವರು, 'ನಳಚರಿತ್ರೆ' ಪುಟ್ಟ ಕಾವ್ಯವಾಗಿದ್ದರೂ ಇಲ್ಲಿ ಚಿತ್ರಿತವಾಗಿರುವ ನಳ–ದಮಯಂತಿಯರ ಪ್ರೇಮ ಲೋಕಕ್ಕೆ ಆದರ್ಶವಾಗಿದೆ. ಪ್ರೇಮ ಪರಿಶುದ್ಧವಾದುದು ; ತ್ಯಾಗಮೂಲವಾದ ಪ್ರೇಮ ಆದರಣೀಯವಾದುದು; ಪರಸ್ಪರ ಆಗಲಿಕೆಯಲ್ಲಿ, ಕಷ್ಟದ ಕೋಟಲೆಯಲ್ಲಿ ಪ್ರೇಮ

ಪುಟವಿಕ್ಕಿದ ಚಿನ್ನದಂತೆ ಶೋಭಾಯಮಾನವಾದುದು–ಎಂಬ ದರ್ಶನ ಈ ಖಂಡಕಾವ್ಯದ ಮೂಲಕ ಅಭಿವ್ಯಕ್ತಗೊಳ್ಳುತ್ತದೆ.

# ನಳ ಚರಿತ್ರೆಯಲ್ಲಿ ಪಾತ್ರಚಿತ್ರಣ

**ಜ್ಯೋತಿ ಹೊಸೂರ**

ಕನ್ನಡದ ಅತ್ಯಂತ ಜನಪ್ರಿಯ ಮತ್ತು ವಿದ್ವಾಂಸಪ್ರಿಯ ಕಾವ್ಯಗಳಲ್ಲಿ ಕನಕದಾಸರ ನಳಚರಿತ್ರೆಯು ಅಗ್ರಗಣ್ಯವಾಗಿದೆ. ಆದರ್ಶ ದಂಪತಿಗಳ ಕಥಾವಿಷಯ, ಮೌಲ್ಯಗಳಿಗಾಗಿ ಬದುಕಬೇಕೆಂಬ ಜೀವನದರ್ಶನದ ಪ್ರತಿಪಾದನೆ, ಸಹಜ ಘಟನಾವಳಿಗಳೊಂದಿಗೆ ನಿರರ್ಗಳವಾಗಿ ಮುಂದುವರಿಯುವ ಕಥನಶೈಲಿ, ಸರಳ ಸುಂದರ ಭಾಷೆಯ ಬಳಕೆ, ಪರಿಣಾಮಕಾರಿಯಾದ ಪಾತ್ರಚಿತ್ರಣ ಇವೆಲ್ಲವುಗಳ ಸಾರ್ಥಕ ಸಮ್ಮಿಳನ ಇವು ನಳಚರಿತ್ರೆಯ ಜನಪ್ರಿಯತೆ ಮತ್ತು ವಿದ್ವಾಂಸಪ್ರಿಯತೆಗಳೆರಡಕ್ಕೂ ಮೂಲಕಾರಣಗಳಾಗಿವೆ.

ಯಾವುದೊಂದು ಕಾವ್ಯದಲ್ಲಿಯ ಕಥಾವಸ್ತು ಮತ್ತು ಅದು ಬಿತ್ತರಿಸುವ ಜೀವನ ಮೌಲ್ಯಗಳು ಆ ಕಾವ್ಯದಲ್ಲಿಯ ಪಾತ್ರಗಳನ್ನೇ ಮುಖ್ಯವಾಗಿ ಅವಲಂಬಿಸಿರುತ್ತವೆ. ನಳಚರಿತ್ರೆಯಲ್ಲಿಯ ಪಾತ್ರಗಳೂ ಈ ಮಾತನ್ನು ಸಮರ್ಥಿಸುತ್ತವೆ.

ಪ್ರೇಮವು ಪರಿಶುದ್ಧಗೊಂಡು ಬೆಳಗಬೇಕಾದರೆ ಪ್ರೇಮಿಗಳ ಬದುಕಿನಲ್ಲಿ ವಿರಹ, ಕಷ್ಟ ಸಹಿಷ್ಣುತೆ, ಸಹನಶೀಲತೆ, ತ್ಯಾಗ, ವಿಶ್ವಾಸ, ನಿಷ್ಠೆ, ಮಿಲನಕಾತರತೆ, ಪ್ರಯತ್ನಾದಿಗಳು ಅತ್ಯಗತ್ಯವೆಂಬುದರ ವ್ಯಕ್ತರೂಪವಾಗಿ ನಳಚರಿತ್ರೆಯ ನಳ–ದಮಯಂತಿಯರ ಪಾತ್ರಗಳು ಕವಿ ಕನಕದಾಸರಿಂದ ಚಿತ್ರಣಗೊಂಡಿವೆ. ಆದ್ದರಿಂದ ನಳ–ದಮಯಂತಿಯರ ಪಾತ್ರಗಳೇ ನಳಚರಿತ್ರೆ ಕಾವ್ಯದ ಜೀವಜೀವಾಳ. ಕಲಿಪುರುಷ ಮತ್ತು ಪುಷ್ಕರ ಇಬ್ಬರೂ ಖಳನಾಯಕರು. ಹತ್ತರಷ್ಟು ಪೋಷಕ ಪಾತ್ರಗಳಿದ್ದು, ಇವುಗಳಲ್ಲಿ ಅರ್ಧದಷ್ಟು ಅಲೌಕಿಕ ಪಾತ್ರಗಳು ಅವಾಸ್ತವವಾಗಿರುವುದು ಸರ್ವ ಸಾಮಾನ್ಯ. ಆದರೆ, ಇಲ್ಲಿಯ ಅಲೌಕಿಕ ಪಾತ್ರಗಳೂ ಸಾಂಕೇತಿಕ ಅರ್ಥ ಅಭಿವ್ಯಕ್ತ ಮಾಡುವ ಸಾಮರ್ಥ್ಯ ಹೊಂದಿರುವುದು ಒಂದು ವೈಶಿಷ್ಟ್ಯ. ಹಾಗೆ ನೋಡಿದರೆ. ನಳ–ದಮಯಂತಿರನ್ನೊಳಗೊಂಡು ಎಲ್ಲ ಪಾತ್ರಗಳೂ ಸಾಂಕೇತಿಕತೆಯನ್ನೊಳಗೊಂಡಿರುವಂತೆ ಕಂಡು ಬರುವುದು.

ನಳನು ನಿಷಧನಗರದ ವೀರಸೇನ ರಾಜನ ಮಗ. ರೂಪ, ಗುಣ, ಶೌರ್ಯಾದಿಗಳಲ್ಲಿ ಉಪಮಾತೀತ. ವಿದರ್ಭನಗರದ ಭೀಮನೃಪನ ಮಗಳು ದಮಯಂತಿಯೂ ರೂಪ, ಗುಣ, ಶೀಲಗಳಲ್ಲಿ ಅನನ್ಯಳು. ಪ್ರಾಸಂಗಿಕವಾಗಿ ಇಬ್ಬರೂ ಪರಸ್ಪರರ ರೂಪ, ಗುಣ, ಶೀಲಾದಿಗಳನ್ನು ಕೇಳಿ ತಿಳಿದು, ಮೋಹಕ್ಕೊಳಗಾಗುತ್ತಾರೆ. ಹಂಸಪಕ್ಷಿಗಳ ದೌತ್ಯದಿಂದ ಪರಸ್ಪರರ ಮೋಹ ಪ್ರೇಮವಾಗಿ ಪರಿವರ್ತನಗೊಂಡು ನಿಷ್ಠೆಯಾಗಿ ಗಟ್ಟಿಗೊಂಡು ಇಬ್ಬರೂ ಮದುವೆಯಾಗಲು ತವಕಿಸುತ್ತಾರೆ. ಸ್ವಯಂವರ ಏರ್ಪಟ್ಟು ಇಂದ್ರಾದಿಗಳ ಪ್ರಯತ್ನಗಳು ವಿಫಲಗೊಂಡು, ತಪಸ್ಸು, ನಿಷ್ಠೆಗಳಿಂದಾಗಿ ದೇವಿಯ ವರಪಡೆದ ದಮಯಂತಿಯು ನಳನೊಂದಿಗೆ ಲಗ್ನವಾಗುತ್ತಾಳೆ. ಇಂದ್ರನಿಂದ ವಿಷಯ ತಿಳಿದ ಕಲಿಪುರುಷ ನಳನನ್ನು ಅಡವಿಗಟ್ಟುವ ಪ್ರತಿಜ್ಞೆಗೈಯ್ಯುತ್ತಾನೆ. ಹೊಂಚಿ ಕುಳಿತು, ಸಮಯ ಸಾಧಿಸಿ, ನಳನ ದೇಹ ಪ್ರವೇಶಿಸಿದ ಕಲಿಪುರುಷ ಪುಷ್ಕರನೊಂದಿಗೆ ನಳನನ್ನು ದ್ಯೂತಕ್ಕೆ ಆಹ್ವಾನಿಸಿ, ಎಲ್ಲವನ್ನೂ ಸೋಲುವಂತೆ ಮಾಡುತ್ತಾನೆ. ಮಕ್ಕಳನ್ನು ತಂದೆಯೆಡೆಗೆ ಕಳುಹಿಸಿದ ಪತಿವ್ರತೆ ದಮಯಂತಿ ಪತಿಯನ್ನು ಹಿಂಬಾಲಿಸಿ ವನವಾಸಕ್ಕೆ ಹೋಗುತ್ತಾಳೆ. ಸುಕೋಮಲೆ ದಮಯಂತಿಯ ಕಷ್ಟ ನೋಡಲಾರದೆ, ತನ್ನ ತಂದೆಯೆಡೆಗೆ ಹೋಗಲೆಂದು ಬಯಸಿ, ರಾತ್ರಿ ಮಲಗಿದಾಗ ಅವಳನ್ನು ಅಡವಿಯಲ್ಲಿ ಬಿಟ್ಟು ನಳನು ಮುಂದೆ ಹೋಗುತ್ತಾನೆ. ಅಲ್ಲೊಂದು ಕಡೆ ಕಾರ್ಕೋಟಕ ಸರ್ಪದ ವಿಷಬಾಧೆಯಿಂದ ವಿಕೃತರೂಪದ ಬಾಹುಕನಾಗಿ ಋತುಪರ್ಣ ರಾಜನಲ್ಲಿ ಊಳಿಗಕ್ಕೆ ನಿಲ್ಲುತ್ತಾನೆ. ಇತ್ತ ದಮಯಂತಿಯು ಹಲವು ರೀತಿಯಿಂದ ಹಲುಬಿ, ಕಷ್ಟ ಕಾರ್ಪಣ್ಯ ಸಹಿಸುತ್ತ ಚೇದಿನಗರ ಸೇರಿ ಅಲ್ಲಿಯ ರಾಜಕುಮಾರಿಯ ಸೈರಂಧ್ರಿಯಾಗಿ, ಸೇವೆಗೆ ನಿಲ್ಲುತ್ತಾಳೆ. ಮಗಳ ಶೋಧನೆಯಲ್ಲಿದ್ದ ಭೀಮನೃಪಾಲನು ವಿಷಯ ತಿಳಿದು ಅಲ್ಲಿಂದ ಅವಳನ್ನು ಕರೆಯಿಸಿಕೊಳ್ಳುತ್ತಾನೆ. ತಂದೆಯಲ್ಲಿಗೆ ಮರಳಿದ ದಮಯಂತಿ ಪತಿಗಾಗಿ ಹಂಬಲಿಸುತ್ತಾಳೆ. ಭೋಗ–ಭಾಗ್ಯ ತೊರೆದು ತಪಸ್ವಿನಿಯ ನಿಷ್ಠುರ ಜೀವನ ಸಾಗಿಸುತ್ತಾಳೆ. ಹಲವು ಉಪಾಯಗಳನ್ನು ಯೋಚಿಸಿ, ನಳನು ವಿದರ್ಭನಗರಕ್ಕೆ ಬರುವಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾಳೆ. ಪತಿಯ ಮುಂದೆ ತನ್ನ ನಿಷ್ಕಲ್ಮಷ ಮನಸ್ಸಿಗೆ ವಾಯುವಿನ ಸಾಕ್ಷಿನುಡಿಸುತ್ತಾಳೆ. ಈ ಮಧ್ಯೆ ನಳನ ನಿಷ್ಠೆಗೆ ಮೆಚ್ಚಿದ ಕಲಿಪುರುಷನು ಅವನ ಶರೀರದಿಂದ ಹೊರಟುಹೋಗುತ್ತಾನೆ. ನಳನು ಕಾರ್ಕೋಟಕ ಸರ್ಪ ಹೇಳಿದಂತೆ ಮಾಡಿ, ತನ್ನ ಮೊದಲಿನ ಸುಂದರ ರೂಪ ಪಡೆಯುತ್ತಾನೆ. ಸತಿ–ಪತಿಗಳು ದೀರ್ಘ ವಿರಹದ ನಂತರ ಒಂದಾಗಿ ಹಿಗ್ಗುತ್ತಾರೆ.

ಆನಂತರ ನಳನು ಪುಷ್ಕರನನ್ನು ಸೋಲಿಸಿ, ಮತ್ತೆ ತನ್ನ ರಾಜ್ಯ ಪಡೆದು, ಸುಖದಿಂದ ಧರೆಯನ್ನು ಆಳುತ್ತಾನೆ. ಇದಿಷ್ಟು ನಳಚರಿತ್ರೆ ಕಥೆಯ ಅತ್ಯಂತ ಸ್ಥೂಲರೂಪ. ಕನಕದಾಸನು ಈ ಕಥೆಯ ಹಂದರದಲ್ಲಿ ನಳ–ದಮಯಂತಿಯರ ಪಾತ್ರಗಳನ್ನು ಜೀವ ತುಂಬಿ, ಭಾವತುಂಬಿ ಚಿತ್ರಿಸಿದ್ದಾನೆ. ಪಾತ್ರಗಳ ನಡೆ–ನುಡಿಯ ಮೂಲಕ ಚಿರ ಮೌಲ್ಯಗಳನ್ನು ಪ್ರತಿಪಾದಿಸಿದ್ದಾನೆ. ದಮಯಂತಿ ಎಂಬ ಹೆಸರೆತ್ತಿದೊಡನೆ ಪಾತಿವ್ರತ್ಯದ ಸಾಕಾರ ಮೂರ್ತಿ ಎಂಬಂಥ ಚಿತ್ರ ಮೂಡಿನಿಲ್ಲುವಂತೆ ಅವಳ ಪಾತ್ರ ರೂಪಿಸುವಲ್ಲಿ ಕವಿ ಸಾರ್ಥಕತೆ ಸಾಧಿಸಿದ್ದಾನೆ.

ನಳ ಈ ಕಾವ್ಯದ ನಾಯಕ. ನಿಷಧ ನಗರದ ದೊರೆ, ಸುಂದರರಲ್ಲಿ ಸುಂದರ ವೀರಾಧಿವೀರ, ಸದ್ಗುಣಶೀಲ. ಇಂಥ ಆಕರ್ಷಕ ಅರಸನ ವಿಷಯ ಕೇಳಿ ತಿಳಿದ ರಾಜಕುಮಾರಿ ದಮಯಂತಿ ಮನಸೋತಿದ್ದು, ವರಿಸಲು ನಿರ್ಧರಿಸಿದ್ದು, ತನ್ನ ನಿರ್ಧಾರವನ್ನು ನಿಷ್ಠೆಯನ್ನಾಗಿ ಗಟ್ಟಿಗೊಳಿಸಿದ್ದು ಸ್ವಯಂವರದಲ್ಲಿಯ ಆತಂಕಗಳನ್ನು ತನ್ನ ತಪಸ್ಸಿನಿಂದ ಎದುರಿಸಿ ಯಶಸ್ವಿಯಾದದ್ದು ಮುಂತಾದ ಘಟನೆಗಳೆಲ್ಲ ತರುಣ ದೊರೆ ನಳನ ಮನಾಕರ್ಷಕ ವ್ಯಕ್ತಿತ್ವದ ಸ್ಪಷ್ಟ ಚಿತ್ರ ತೆರೆದು ತೋರಿಸುತ್ತವೆ. ಇಂದ್ರಾದಿ ದೇವತೆಗಳು ದಮಯಂತಿಯನ್ನು ಒಲಿಸಿಕೊಂಡು ಪತ್ನಿಯನ್ನಾಗಿ ಮಾಡಿಕೊಳ್ಳಲು ಎಷ್ಟು ಪ್ರಯತ್ನಿಸಿದರೂ ಮನಸ್ಸು ಬದಲಿಸಲಾರದಷ್ಟು ನಳನ ರೂಪು, ಗುಣಗಳು ಅವಳನ್ನು ಸೆಳೆದಿದ್ದವೆಂಬುವನ್ನು ಗಣಿಸಿದಾಗ ಆ ದೊರೆಯ ಘನ ವ್ಯಕ್ತಿತ್ವ ಇನ್ನಷ್ಟು ನಿಚ್ಚಳವಾಗುತ್ತದೆ.

"ತ್ಯಾಗಮೂಲವೂ ನಿಸ್ವಾರ್ಥಪರವೂ ಆದ ಪ್ರೇಮಕ್ಕೆ ನಳ ಸಂಕೇತವಾಗಿದ್ದಾನೆ. ಅವನ ಪ್ರೇಮ ಪರರಿಂದ ಪ್ರತಿಪ್ರಯೋಜನವನ್ನು ಅಪೇಕ್ಷಿಸುವಂಥದಲ್ಲ. ಪ್ರಪಂಚದಲ್ಲಿ ಬಿರುದು ಬಾವಲಿಗಳನ್ನು ತ್ಯಾಗಮಾಡಿದವರಿದ್ದಾರೆ ; ರಾಜ್ಯತ್ಯಾಗ ಮಾಡಿದವರಿದ್ದಾರೆ ; ಆದರೆ ಪ್ರೇಮ ತ್ಯಾಗಕ್ಕೂ ಸಿದ್ಧರಾದ ಜನ ಹಲವರಿಲ್ಲ. ಪ್ರೇಮದೌತ್ಯದ ಪ್ರಸಂಗದಲ್ಲಿ ಪುನಸ್ಸ್ವಯಂವರದ ಪ್ರಕರಣದಲ್ಲಿ ಅವನು ನಡೆದುಕೊಂಡ ರೀತಿ, ಪ್ರಕಟಿಸಿದ ಪ್ರಾಮಾಣಿಕತೆ, ತೋರಿಸಿದ ಧೈರ್ಯ ನಳನೊಬ್ಬನಿಗೆ ಮಾತ್ರ ಸಾಧ್ಯ. ಹೆಜ್ಜೆ ಹೆಜ್ಜೆಗೂ ವಿಧಿ ಅವನ ಸತ್ಯವನ್ನು ತ್ಯಾಗಮನೋಭಾವವನ್ನು ಪರೀಕ್ಷಿಸಿ ಸೋತಿದೆ."[1]

೧. ಡಾ. ದೇ. ಜವರೇಗೌಡ : ನಳಚರಿತ್ರೆ (೧೯೬೫) ರಾಜ್ಯಸಮಿತಿ, ಶ್ರೀ ಕನಕದಾಸ ನಾಲ್ಕನೆಯ ಶತಮಾನೋತ್ಸವ, ಬೆಂಗಳೂರು. ಪುಟ ೨೮.

ಸ್ವಯಂವರದಲ್ಲಿ ಕೊನೆಗೊಮ್ಮೆ ನಳನನ್ನು ವರಿಸಿದ ದಮಯಂತಿಯ ವಿವಾಹ ಅವನೊಂದಿಗೆ ಸಡಗರದಿಂದ ಸಾಂಗವಾಗುತ್ತದೆ. ದಂಪತಿಗಳಿಬ್ಬರೂ ಸುಖ–ಸಂತೋಷಗಳಿಂದ ರಾಜ್ಯವಾಳುತ್ತ ಸಕಲ ಭೋಗ ಭಾಗ್ಯಗಳನ್ನು ಅನುಭವಿಸುತ್ತ ಕೆಲವು ವರ್ಷ ಕಳೆಯುತ್ತಾರೆ. ಗಂಡು, ಹೆಣ್ಣು ಮಕ್ಕಳನ್ನು ಪಡೆಯುತ್ತಾರೆ. ಇಲ್ಲಿಯವರೆಗಿನ ನಳ ದಮಯಂತಿಯರ ಜೀವನ ಕ್ರಮ ನೇರ–ಸರಳ. ಅಂತೆಯೇ ಅವರ ಪಾತ್ರಗಳ ನಿರ್ವಹಣೆಯಲ್ಲೂ ಅದೇ ಸರಳತೆ.

ಕಲಿಪುರುಷನ ಪಾತ್ರ ಪ್ರವೇಶದೊಂದಿಗೆ ಈ ದಂಪತಿಗಳ ಪ್ರಶಾಂತ ಜೀವನಸಾಗರ, ಇನ್ನೊಮ್ಮೆ ಅಲ್ಲೋಲ ಕಲ್ಲೋಲವಾಗುತ್ತದೆ. ಜೀವನದಲ್ಲಿ ಹೊಸ ತಿರುವು ಕಾಣಿಸಿಕೊಳ್ಳುತ್ತದೆ. ವಿವಾಹ ಸಮಯದಲ್ಲೊಮ್ಮೆ ಅವರಿಬ್ಬರೂ ಸತ್ತ್ವ ಪರೀಕ್ಷೆಗೊಳಗಾಗಿದ್ದುದರಿಂದ ಈಗ 'ಇನ್ನೊಮ್ಮೆ' ಪದ ಬಳಸಬೇಕಾಗಿದೆ. ವಿವಾಹ ಸಮಯದಲ್ಲಿ ಒದಗಿದ ಆ ಇಕ್ಕಟ್ಟಿನ ಪ್ರಸಂಗದ ಸಂಕಟಕ್ಕೆ ಬೇರೆಯವರ ದುರ್ಬುದ್ಧಿ ಕಾರಣವೆಂಬುದನ್ನು ಈ ಸಮಯದಲ್ಲಿ ಅರಿತುಕೊಳ್ಳುವುದು ಅವಶ್ಯವಿದೆ. ಅವರ ಇನ್ನು ಮುಂದಿನ ಜೀವನದಲ್ಲಿಯ ಆಗುಹೋಗುಗಳಿಗೆ ಹೆಚ್ಚಾಗಿ ಅವರೇ ವೈಯಕ್ತಿಕವಾಗಿ ಕಾರಣರಾಗುತ್ತಾರೆ.

ಕಲಿಪುರುಷ ಅಲೌಕಿಕ ವ್ಯಕ್ತಿ. ಮಾನವರ ಮನೋರಂಗದಲ್ಲಿರುವ ಚಂಚಲ. ಸ್ವಭಾವದ ಮನೋದೌರ್ಬಲ್ಯದ ವ್ಯಕ್ತರೂಪವೇ ಈ ಕಲಿಪುರುಷನೆನ್ನಬಹುದು ಅಂತೆಯೇ ಕಲಿಪುರುಷನದು ಸಾಂಕೇತಿಕ ಪಾತ್ರ, ನಳನನ್ನು ಕೆಡಿಸಲು ಅರ್ಕಪತ್ರದ ಮರದ ಮೇಲೆ ಹಲವು ದಿನ ಹೊಂಚಿ ಕುಳಿತು, ಅವನಲ್ಲಿ ಪ್ರವೇಶಿಸಿ ಕೆಡಿಸಲು ಅವಕಾಶಕ್ಕಾಗಿ ಕಾಯುತ್ತಲಿದ್ದನು. ನಳ ತನ್ನ ನಿತ್ಯದ ವ್ರತದಲ್ಲಿ ತಪ್ಪಿ ಶುದ್ಧಾಚಮನವಿಲ್ಲದೆ ನೀರು ಕುಡಿದ ತಕ್ಷಣವೇ ಈತ ಅವನ ದೇಹ ಪ್ರವೇಶಿಸುತ್ತಾನೆ, ತನ್ನ ಕಾರ್ಯಾರಂಭ ಮಾಡುತ್ತಾನೆಂಬುದಾಗಿ ಕವಿ ಹೇಳುತ್ತಾನೆ. ಆದ್ದರಿಂದಲೇ ಕಲಿಪುರುಷನೆಂದರೆ ಮನೋದೌರ್ಬಲ್ಯಕ್ಕೆ ಚಿತ್ತಚಾಂಚಲ್ಯಕ್ಕೆ ಸಂಕೇತವೆಂದು ಹೇಳಬೇಕಾಗುತ್ತದೆ. ನಿಷ್ಠೆಯ ಸಡಿಲಿಕೆ, ಅವನತಿಯ ದಾರಿಯಲ್ಲಿ ಪ್ರವೇಶಿಕೆಯೆಂಬುದಕ್ಕೆ ನಳನ ಈ ಪ್ರಸಂಗವೇ ಉದಾಹರಣೆ.

ಕಲಿಪುರುಷನ ಪ್ರವೇಶದ ಅನಂತರದ ನಳರಾಜನ ಪಾತ್ರ ತನ್ನ ಧೀರೋದಾತ್ತತೆಯನ್ನು ಕಳೆದುಕೊಳ್ಳುತ್ತದೆ. ಸಪ್ತ ವ್ಯಸನಗಳಲ್ಲೊಂದಾದ ದ್ಯೂತದಿಂದಾಗಿ ರಾಜ್ಯ ಕೋಶಗಳನ್ನು ಕಳೆದುಕೊಳ್ಳುವುದರೊಂದಿಗೆ ಅವನಿಗೆ ಕಷ್ಟ ಪರಂಪರೆಗಳು ಎದುರಾಗಲಾರಂಭಿಸುತ್ತವೆ. ಈ ಕಷ್ಟಗಳನ್ನು ಎದುರಿಸುವ ಪ್ರಸಂಗದಲ್ಲಿಯ ನಳರಾಜನ ಒಂದೆರಡು ಕೃತಿಗಳು ಅವನ ವ್ಯಕ್ತಿತ್ವದ

ಹಿರಿಮೆಯನ್ನು ಕಡಿಮೆ ಮಾಡುತ್ತವೆ.

ದಮಯಂತಿ ಪತಿಯೇ ಪರದೈವ ಎಂದು ನಂಬಿದ ಸಾಧ್ವಿ. ಎಲ್ಲವನ್ನೂ ಸೋತು ನಿಂತಾಗ ಪತಿಗೆ ಧೈರ್ಯ ಹೇಳುವ ಧೀರೆ. ಪತಿಯೊಂದಿಗೆ ನೆರಳಾಗಿ ಬದುಕು ಬಯಸಿ ನಳನು ಬೇಡವೆಂದರೂ ವನವಾಸಕ್ಕೆ ಬಂದವಳು. ಅಂಥವಳನ್ನು ಕಟ್ಟಾರಣ್ಯದಲ್ಲಿ ಮಲಗಿದಾಗ ನಡುರಾತ್ರಿಯಲ್ಲಿ ಒಬ್ಬಳನ್ನೇ ಬಿಟ್ಟು ಹೊರಡುತ್ತಾನೆ. ಕುಸುಮಕೋಮಲೆಯಾದ ತನ್ನ ಪತ್ನಿ ಅರಣ್ಯದ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸದೇ ಅವಳು ತನ್ನ ತವರು ಮನೆಗೆ ಹೊರಟು ಹೋಗಲೆಂಬ ಸದುದ್ದೇಶವೇ ಈ ನಳನ ಕೃತ್ಯದ ನಿಜವಾದ ಹಿನ್ನೆಲೆ. ಆದರೆ, ನಡುರಾತ್ರಿಯ ಸಮಯದಲ್ಲಿ ಅಡವಿಯಲ್ಲಿ ಒಬ್ಬಳನ್ನೇ ಬಿಟ್ಟಾಗ ಅವಳು ಜೀವಭಯವಿಲ್ಲದೆ ತವರು ಮನೆ ಸೇರುತ್ತಾಳೆಂಬ ಬಗೆಗೆ ಖಚಿತತೆ ಎಲ್ಲಿದೆ? ಅನಂತರ ಅವಳು ಅತ್ಯಂತ ಭೀಕರ ಪ್ರಸಂಗಗಳನ್ನು ಎದುರಿಸಿ ಚೇದಿ ನಗರವನ್ನು ಸೇರಿ, ದಿನಗಳೆಯಲಾರಂಭಿಸಿದ್ದು ಅವಳ ಪಾಲಿಗೆ ಮರುಜನ್ಮ.

ಇದಕ್ಕೂ ಮೊದಲಿನ, ರಾಜಮೋಹನ ಪಕ್ಷಿಗಳನ್ನು ಮೋಹಿಸಿದ ಪ್ರಸಂಗವೂ ನಳನ ಚಿತ್ತಚಾಂಚಲ್ಯ ಸೂಚಿಸುತ್ತದೆ. ಪರಿಣಾಮ ಲೆಕ್ಕಿಸದ ನಳನ ಕೃತಿಗಳು ಅವನ ಮುಗ್ಧತೆ ತೋರಿಸುತ್ತದೆ.

ಅಡವಿಯಲ್ಲಿ ಪತ್ನಿಯನ್ನು ಬಿಟ್ಟು ಮುನ್ನಡೆದ ನಳನ ಜೀವನ ಪ್ರವಾಹ ಪತಿತ ಜೀವನವಾಗಿದೆ. ದಮಯಂತಿಯ ಬಗೆಗೆ ಹೆಚ್ಚಿನ ಕಾಳಜಿ ವ್ಯಕ್ತ ಪಡಿಸದಿರುವಿಕೆ, ಕಳೆದುಕೊಂಡ ರಾಜ್ಯ ಪಡೆಯಲು ಉಪಾಯಗಳನ್ನು ಯೋಚಿಸದಿರುವಿಕೆ ಈ ಮಾತಿಗೆ ಸಾಕ್ಷಿಯಾಗಿದೆ.

ಋತುಪರ್ಣ ರಾಜನ ಹತ್ತಿರ ಹೋಗಿ ತನ್ನ ಅಶ್ವ ವಿದ್ಯೆ ಪ್ರದರ್ಶಿಸಿದ್ದು, ಅವನಿಂದ ಪ್ರಾಸಂಗಿಕವಾಗಿ ಆಕೆ ಹೃದಯ ಅರಿತುಕೊಂಡದ್ದು ; ಅವನ ಪ್ರವಾಹಪತಿತ ಜೀವನದಲ್ಲಿಯ ಮಹತ್ತ್ವದ ಘಟನೆಗಳಾಗಿವೆ ; ಅವನಲ್ಲಿಯ ಸುಪ್ತ ಸ್ವಂತಿಕೆಯ ನಿದರ್ಶನಗಳಾಗಿವೆ. ಇನ್ನುಳಿದ ಎಲ್ಲ ಘಟನೆಗಳೂ ದೈವ ನಿಯಾಮಕಗಳಾಗಿವೆ.

ನಳನ ಪಾತ್ರ ಚಿತ್ರಣದಲ್ಲಿ ಇನ್ನೂ ಕೆಲವು ಸದ್ಗುಣಗಳನ್ನು ಕವಿ ತೋರಿಸಿಕೊಟ್ಟಿದ್ದಾನೆ. ನಳನು ದಮಯಂತಿಯ ಬಗೆಗೆ ಪೂರ್ಣ ಪ್ರೇಮವುಳ್ಳವನು. ಅವನದು ನಿಷ್ಕಲ್ಮಷ ಪ್ರೇಮ. ಅವಳು ಪುನಸ್ಸ್ವಯಂವರಕ್ಕಾಗಿ ಸಿದ್ಧಳಾಗಿದ್ದಾಳೆಂಬುದನ್ನು ತಿಳಿದಾಗಲೂ ಅವಳ ಹಿತವನ್ನೇ ಬಯಸಿದವನು. ಅಶ್ವವಿದ್ಯೆಯಲ್ಲೂ ಪಾಕವಿದ್ಯೆಯಲ್ಲೂ ಅಪ್ರತಿಮ ಚತುರ. ಇವೆರಡೂ

ವಿದ್ಯೆಗಳಿಂದಾಗಿಯೇ ದಮಯಂತಿಯೊಂದಿಗೆ ಪುನರ್ಮಿಲನ ಮತ್ತು ರಾಜ್ಯ ಪ್ರಾಪ್ತಿ ಸಾಧ್ಯವಾಯಿತೆಂಬುದನ್ನು ಕವಿ ಸೂಚ್ಯವಾಗಿ ತೋರಿಸಿ ಕೊಟ್ಟಿದ್ದಾನೆ. ವಿಕೃತ ರೂಪದ ಬಾಹುಕನಾಗಿದ್ದಾಗ ತನ್ನೆಡೆಗೆ ಬಂದ ಮಕ್ಕಳನ್ನು ತೆಗೆದೆತ್ತಿಕೊಂಡು ತನ್ನ ಪರಿಸ್ಥಿತಿಗಾಗಿ ಕಣ್ಣೀರು ಸುರಿಸುವ ಸನ್ನಿವೇಶ ಮಕ್ಕಳ ಬಗೆಗಿನ ಅವನ ಪಿತೃವಾತ್ಸಲ್ಯವನ್ನು ಎತ್ತಿ ತೋರಿಸುತ್ತದೆ.

ಒಟ್ಟಿನಲ್ಲಿ, ನಳರಾಜನು ಉದ್ವೇಗರಹಿತ ಪೂರ್ಣ ಪ್ರೇಮಿಯಾಗಿ, ಮುಗ್ಧ ಭಾವದ ಪತಿಯಾಗಿ, ಅಶ್ವವಿದ್ಯಾಚತುರನಾಗಿ, ದೈವ ನಿಯಾಮಕ ವ್ಯಕ್ತಿತ್ವದ ವೀರನಾಗಿ ಒಂದಡೆಗೆ ಚಿತ್ರಣಗೊಂಡಿದ್ದಾನೆ. ಅವನ ವ್ಯಕ್ತಿತ್ವ ಪತನಕ್ಕೆ, ಕಷ್ಟನಷ್ಟಗಳಿಗೆ ಮೂಲಕಾರಣ ವ್ರತಭಂಗ ಮತ್ತು ಅದಕ್ಕೆ ಹಿನ್ನೆಲೆ ಮನೋದೌರ್ಬಲ್ಯ ಎಂಬುದನ್ನು ಸೂಚ್ಯವಾಗಿ ತೋರಿಸಲಾಗಿದೆ.

ದಮಯಂತಿ ಮಾತ್ರ ಯಾವ ಕೊರತೆಗಳೂ ಇಲ್ಲದ ಪರಿಪೂರ್ಣ ಪತಿವ್ರತೆಯಾಗಿ ನಳಚರಿತ್ರೆಯಲ್ಲಿ ಚಿತ್ರಣಗೊಂಡಿದ್ದಾಳೆ. ಆ ಪಾತಿವ್ರತ್ಯಕ್ಕಾಗಿ ಅವಳು ಸಹಿಸಿದ ಕಷ್ಟ ಕೋಟಲೆಗಳ ಗಾತ್ರ ಭಯಾನಕ.

ದಮಯಂತಿಯ ಸೌಂದರ್ಯಕ್ಕೆ ಮಾರುವೋಗದ ದೇವದಾನವರಿಲ್ಲ. ದೇವೇಂದ್ರ ಅವಳನ್ನು ಒಲಿಸಿಕೊಳ್ಳಲು ಹೂಡುವ ಉಪಾಯಗಳು ಒಂದಲ್ಲ, ಎರಡಲ್ಲ. ಹೀಗಿದ್ದರೂ ನಳನನ್ನು ಮಾನಸಿಕವಾಗಿ ಒಮ್ಮೆ ವರಿಸಿದ ದಮಯಂತಿಯ ಪ್ರೇಮ ಯಾವ ಪ್ರಲೋಭನೆಗಳಿಗೂ ಜಗ್ಗದೇ ಅಚಲವಾಗಿ ನಿಲ್ಲುತ್ತದೆ. ಅವಳ ಈ ಅಚಲತೆ ಕೊನೆಯವರೆಗೂ 'ಏಕಪ್ರಕಾರ'.

ನಳನು ರಾಜ್ಯ-ಕೋಶಗಳನ್ನೆಲ್ಲ ಕಳೆದುಕೊಂಡಾಗ ಅವನನ್ನು ಸಂತೈಸಿ. ನೆರಳಾಗಿ ವನವಾಸಕ್ಕೆ ಬಂದಿದ್ದ ಸಾಧ್ವಿ ದಮಯಂತಿಯನ್ನು ಅರಣ್ಯದಲ್ಲಿ ಒಬ್ಬಳನ್ನೇ ಬಿಟ್ಟು ಹೋದಾಗಲೂ ಅವನ ಬಗೆಗೆ ಒಂದೂ ಕೆಟ್ಟ ಮಾತನ್ನಾಡಿದವಳಲ್ಲ. ಪ್ರತಿಯಾಗಿ ತನ್ನ ದುರ್ದೈವಕ್ಕಾಗಿ ಮರುಗಿದವಳು. ಅರಣ್ಯದಲ್ಲಿ ಎದುರಾದ ಪ್ರಸಂಗಗಳನ್ನೆಲ್ಲ ತನ್ನ ಪತಿನಿಷ್ಠಾ ಮನಸ್ಸಿನ ದೃಢತೆಯಿಂದ ಮತ್ತು ಪಾತಿವ್ರತ್ಯದ ಬಲದಿಂದ ಎದುರಿಸಿದ ಧೀರೆ. ಎಂಥ ಭಯಂಕರ ವಿಪತ್ತು ಬಂದರೂ ಪತಿಗೆರಡು ಎಣಿಸದ ಸಂಯಮಿ. ಚೇದಿ ನಗರದಲಿ ಸೈರಂಧ್ರಿಯಾಗಿ ಕಾರ್ಯ ಮಾಡುವಾಗಲೂ ಪತಿಯ ಪುನರ್ಮಿಲನದ ಚಿಂತೆ. ತಂದೆಯ ಪ್ರಯತ್ನದಿಂದ ತವರುಮನೆ ಸೇರಿದ ಮೇಲಂತೂ ದಮಯಂತಿಯ ಜೀವನ ಒಬ್ಬ ತಪಸ್ವಿನಿಯ ಜೀವನವಾಗುತ್ತದೆ. ಅವಳ ಆ ತಪಸ್ಸು ಅವಳಿಗೆ ಆತ್ಮಬಲನೀಡುತ್ತದೆ. ಪತಿಯ ಶೋಧನೆ ಹಾಗೂ ವಿಕೃತ ರೂಪದ ಪತಿಯನ್ನು

ಪರೀಕ್ಷಿಸಲು ಅವಳು ಹೂಡುವ ತಂತ್ರಗಳು, ಉಪಾಯುಗಳೂ ಯಶಸ್ವಿಯಾಗುತ್ತವೆ. ಅವಳ ಪರಿಶುದ್ಧ ಪ್ರೇಮ; ಪತಿಯ ಮಿಲನಕ್ಕಾಗಿ ಅವಳ ಕಾತುರತೆ, ಪ್ರಯತ್ನ, ಆ ಪ್ರಯತ್ನದಲ್ಲಿ ಅಳವಡಿಸಿದ ಉಪಾಯಗಳು ದಮಯಂತಿಯ ಕ್ರಿಯಾಶೀಲ ಪಾತಿವ್ರತ್ಯದ ಹಿರಿಮೆಯನ್ನು ಸಾರಿ ಸಾರಿ ಹೇಳುತ್ತವೆ.

ವಿಕೃತರೂಪದ ಬಾಹುಕನೇ ತನ್ನ ಪತಿಯೆಂಬುದಾಗಿ ವಿವಿಧ ಪರೀಕ್ಷೆಗಳಿಂದರಿತ ದಮಯಂತಿ ರಕ್ಷಿಸೆಂದು ಪಾದಗಳಿಗೆರುವುದು ಅವಳ ಪಾತಿವ್ರತ್ಯದ ಹಿರಿಮೆಯನ್ನು ಜಗಜ್ಜಾಹೀರುಗೊಳಿಸುವ ಪ್ರಸಂಗವಾಗಿದೆ. ಪುನಸ್ಸ್ವಯಂವರದಿಂದಾಗಿ ಗಲಿಬಿಲಿಗೊಂಡ ನಳನ ಮನಸ್ಸಿಗೆ ಸಮಾಧಾನ ನೀಡಲು ತನ್ನ ಸದುದ್ದೇಶದ ಹಿನ್ನೆಲೆಯನ್ನು ಅವಳು ಪರಿಪರಿಯಾಗಿ ವಿವರಿಸಬೇಕಾಗುತ್ತದೆ. 'ಆದಿಯಲಿ ಯೌವ್ವನದ ನಿನಗೊಪ್ಪಿಸಿದೆನಲ್ಲದೆ ತನುಮನೋವಾಕ್ಕಾಯ ಕರ್ಮಂಗಳಲಿ ತಾನೆರಡ ನಿನಗೆ ನೆನೆದವಳಲ್ಲ, ನೀನೇ ನನಗೆ ಗತಿ' ಎಂಬುದಾಗಿ ತನ್ನ ನಿಷ್ಠೆ ವ್ಯಕ್ತಪಡಿಸುತ್ತಾಳೆ. ಯಮ, ವರುಣ, ವಾಯು, ಇಂದ್ರ ಮತ್ತು ಮದನಜನಕರ ಸಾಕ್ಷಿ ನೀಡುತ್ತಾಳೆ. ಕೂಡಲೆ ಆಕಾಶದಲ್ಲಿ ವಾಯು 'ದಮಯಂತಿ ಲೋಕಪಾವನೆಯಿದಕೆ ಸಂಶಯವೇಕೆ ಪಾಲಿಸು ಸತಿಯ' ಎಂದು ನುಡಿಯುತ್ತಾನೆ. ಆಗ ನಳನು ಪಕ್ಷಿಗಳನ್ನು ನೆನೆದು ತನ್ನ ಮೊದಲಿನ ವಸ್ತ್ರಗಳನ್ನು ಧರಿಸುವುದರೊಂದಿಗೆ ಪೂರ್ವದ ದಿವ್ಯರೂಪ ಪಡೆದು ದಮಯಂತಿಯನ್ನು ಸ್ವೀಕರಿಸುತ್ತಾನೆ. ದಮಯಂತಿಯ ಪರಿಶುದ್ಧ ಪಾತಿವ್ರತ್ಯವನ್ನು ಬಿತ್ತರಿಸುವ ಈ ಪ್ರಸಂಗ ಪರಮ ದಿವ್ಯವಾಗಿದೆ.

ಒಟ್ಟಂದದಲ್ಲಿ ದಮಯಂತಿಯ ಪಾತ್ರ ಅತ್ಯಂತ ಉದಾತ್ತವಾಗಿ ಚಿತ್ರಣಗೊಂಡಿದೆ. ಪಾತಿವ್ರತ್ಯದ ಪರಿಪೂರ್ಣ ಪಾತ್ರವಿದಾಗಿದೆ. ಪಂಚ ಪತಿವ್ರತೆಯರೆಂದು ಪುರಾಣ ಪ್ರಸಿದ್ಧರಾಗಿರುವ ಸೀತಾ, ತಾರಾ, ಅಹಲ್ಯಾ, ಮಂಡೋದರಿ ಇವರೆಲ್ಲರೂ ಜೀವನದ ಬೇರೆ ಬೇರೆ ಪ್ರಸಂಗಗಳಲ್ಲಿ ತಮ್ಮ ಗಂಡಂದಿರ ಬಗ್ಗೆ ಬಿರುನುಡಿಗಳನ್ನಾಡಿದುದನ್ನು ನಾವು ಕಾಣುತ್ತೇವೆ. ದಮಯಂತಿಯ ವ್ಯಕ್ತಿತ್ವದಲ್ಲಿ ಅಂಥ ಯಾವೊಂದು ಪ್ರಸಂಗವನ್ನೂ ನಾವು ಕಾಣಲಾರೆವು. ಕಷ್ಟ–ನಷ್ಟಗಳನ್ನು ಅನುಭವಿಸಿ, ವಿರಹದಲ್ಲಿ ಬೆಂದು ಪರಿಶುದ್ಧವಾದ ದಮಯಂತಿಯ ವ್ಯಕ್ತಿತ್ವ ಚೊಕ್ಕ ಚಿನ್ನವಾಗಿದೆ.

"ನಳ ಚರಿತ್ರೆಯ ಪ್ರಮುಖ ಪಾತ್ರಗಳೆರಡೂ ಪರಸ್ಪರರಿಗಾಗಿ ಮಾಡುವ ತ್ಯಾಗ, ಕಷ್ಟ ಪರಂಪರೆಗಳನ್ನು ಎದುರಿಸುವ ಸ್ಥೈರ್ಯ ಇತ್ಯಾದಿಗಳು

ಪ್ರಶಂಸನೀಯವಾಗಿವೆ. ದಮಯಂತಿಯ ಪಾತಿವ್ರತ್ಯ ಪರಮ ದಿವ್ಯವಾಗಿದೆ ; ಅಸಾಮಾನ್ಯವಾಗಿದೆ. ನಳನ ಪಾತ್ರಕ್ಕಿಂತಲೂ ದಮಯಂತಿಯ ಪಾತ್ರ ಹೆಚ್ಚು ಆಕರ್ಷಕವಾಗಿದೆ. ಅವಳೇ ಇಡೀ ಕಾವ್ಯದ ಕೇಂದ್ರವಾಗಿದ್ದಾಳೆ. ದಮಯಂತಿಯನ್ನು ಅಡವಿಯಲ್ಲಿ ಬಿಟ್ಟು ಹೋಗುವುದರಿಂದ ನಳನು ಪಲಾಯನವಾದಿಯೆಂಬ ಅಪವಾದಕ್ಕೆ ಆಸ್ಪದವಾದರೂ ಇದೆ. ಆದರೆ ದಮಯಂತಿಯು ನಡೆಯಲ್ಲಿ ನುಡಿಯಲ್ಲಿ ಎಳ್ಳಷ್ಟೂ ಕೆಸರಿಲ್ಲದ ಪರಮ ಪವಿತ್ರಳಾಗಿ ಚಿತ್ರಣಗೊಂಡಿದ್ದಾಳೆ. ಅವಳ ಈ ಪವಿತ್ರತೆಯ ಪಾತ್ರ ಚಿತ್ರದ ಹಿನ್ನೆಲೆಯಲ್ಲಿ "ಸತಿಗೆ ಪತಿಯೇ ಪರದೈವ" ಎಂಬಂಥ ಗಂಡುಜಾತಿ ನಿರ್ಮಿತ ಮಹಾವಾಕ್ಯದ ಪ್ರಭಾವ ಕವಿಯು ಸುಪ್ತಚೇತನದಲ್ಲಾದರೂ ಇದ್ದಿರಬಹುದು. ಅಂತೆಯೇ ಬಾಹುಕನ ಬಾಯಿಯಿಂದ 'ಪತಿಯ ತಪ್ಪೆಣಿಸುವ ಸತಿ ಪತಿವ್ರತೆಯೆ' (೮–೨೧) ಎಂಬ ಮಾತನ್ನು ಕವಿ ನುಡಿಸಿದ್ದಾನೆ. ಆದ್ದರಿಂದ ಪುರುಷ ಪ್ರಾಬಲ್ಯದ ಭಾರತೀಯ ಪರಂಪರೆಯನ್ನು ಮೀರಿ, ಸತಿ–ಪತಿಗಳಿಬ್ಬರಲ್ಲೂ ಪವಿತ್ರ ಪ್ರೇಮ ಸಮಾನವಾಗಿರಬೇಕೆಂಬ ದೃಷ್ಟಿ ಕನಕದಾಸರಲ್ಲಿ ಇಲ್ಲವೆಂಬ ನಿರ್ಣಯಕ್ಕೆ ಬರಬೇಕಾಗುತ್ತದೆ. ಆದರೂ ಪುರುಷ ದಬ್ಬಾಳಿಕೆಯನ್ನು ಪ್ರತಿಪಾದಿಸುವ ಒಲವು, ಲವಲೇಶವೂ ಈ ಕವಿಯಲ್ಲಿ ಇಲ್ಲವೆಂಬುದು ಮಾತ್ರ ಸಮಾಧಾನದ ವಿಷಯ."೧

ಇನ್ನುಳಿದ ಪಾತ್ರಗಳೆಲ್ಲವೂ ಪೋಷಕ ಪಾತ್ರಗಳಾಗಿವೆ, ಇವುಗಳಲ್ಲಿ ಪ್ರಮುಖವಾಗಿರುವ ಕಲಿಪುರುಷನ ಪಾತ್ರದ ಬಗ್ಗೆ ಹಿಂದೊಮ್ಮೆ ಪ್ರಾಸಂಗಿಕವಾಗಿ ವಿವರಿಲಾಗಿದೆ. ಪುಷ್ಕರನ ಪಾತ್ರವಂತೂ ಕಲಿಪುರುಷನ ಕೈಗೊಂಬೆಯಾಗಿ ಚಿತ್ರಣಗೊಂಡು ನಳನ ವ್ಯಕ್ತಿತ್ವಕ್ಕೆ ಮೆರುಗನ್ನು ನೀಡಿದೆ.

ಋತುಪರ್ಣ ರಾಜನು ಔಚಿತ್ಯರಹಿತ ಭೋಗಲಾಲಸೆಯ ಅರಸರ ಪ್ರತಿನಿಧಿಯಾಗಿದ್ದಾನೆ. ನಳರಾಜನಲ್ಲಿಯ ವಿದ್ಯಾಶಕ್ತಿ ಮತ್ತು ಬುದ್ಧಿಶಕ್ತಿಗಳ ಪ್ರದರ್ಶನಕ್ಕೆ ಅನುಕೂಲ ಸನ್ನಿವೇಶ ಈ ಪಾತ್ರದಿಂದ ನಿರ್ಮಾಣವಾಗಿದೆ.

ನಳ–ಮಯಯಂತಿ ಮಾನವರಾದರೂ ತಮ್ಮ ನಿಸ್ವಾರ್ಥ ಮತ್ತು ತ್ಯಾಗಪೂರ್ಣ ಪ್ರೇಮದಿಂದಾಗಿ ದೇವಸ್ವರೂಪರಾಗಿ ಚಿತ್ರಣಗೊಂಡಿದ್ದಾರೆ. ದೀರ್ಘ ವಿರಹದಿಂದ ಮನಸ್ಸಿನ ಸಹನ ಶಕ್ತಿ ಹೆಚ್ಚಿದೆ ; ಸಂಯಮ ಬಲಗೊಂಡಿದೆ. ಕಷ್ಟಸಹಿಷ್ಣುತೆ, ಸಂಯಮಯುಕ್ತ ನಡತೆಗಳಿಂದಾಗಿ ಅಮರರಾಗಿದ್ದಾರೆ. ಇವರ

---

೧. ಜ್ಯೋತಿ ಹೊಸೂರು : ಕನಕದಾಸ ಜೀವನ ವಿಚಾರ (೧೯೮೩) ಕಾಲಗತಿ ಪ್ರಕಾಶನ, ರಾಯಭಾಗ, ಪುಟ ೪೬

ಇಂಥ ಅಮಾನವೀಯ ಗುಣಗಳ ಉತ್ಕರ್ಷ ಪ್ರತಿಪಾದನೆಗಾಗಿ ಪವಾಡ ಶಕ್ತಿಯ ದೇವ–ಮಾನವ ಪಾತ್ರಗಳು ಮತ್ತು ವಾಕ್ ಶಕ್ತಿಯ ಸರ್ಪ, ಪಕ್ಷಿ ಇತ್ಯಾದಿರೂಪದ ಪಾತ್ರಗಳು ಕೆಲವು ಈ ಕಾವ್ಯದಲ್ಲಿವೆ. ಈ ಪಾತ್ರಗಳು ಮತ್ತು ಅವುಗಳಿಂದಾದ ಪವಾಡ ಪ್ರಸಂಗಗಳು ಇಂದಿನ ವೈಚಾರಿಕ ಧೋರಣೆಯ ವಿಮರ್ಶಕರಿಗೆ ಮೂಢತನವೆನ್ನಿಸುವುದು ಸಹಜ. ಈ ಅಲೌಕಿಕ ಪಾತ್ರಗಳಲ್ಲಿ ಹೆಚ್ಚಿನ ಪಾತ್ರ ಸಾಂಕೇತಿಕತೆಯನ್ನು ಧ್ವನಿಸಲು ಪ್ರಯತ್ನಿಸುವುದರಿಂದ ಇವೆಲ್ಲ ಅಷ್ಟು ಅವಾಸ್ತವವಾಗಿಲ್ಲವೆಂಬುದು ಸಮಾಧಾನದ ಸಂಗತಿ. ಅಲ್ಲದೆ, ಇವೆಲ್ಲ ಪಾತ್ರಗಳೂ ಮುಖ್ಯ ಪಾತ್ರಗಳ ಪೋಷಣೆಗೆ ಸಮರ್ಪಕ ನೆರವು ನೀಡುವಲ್ಲಿ ಯಶಸ್ವಿಯಾಗಿರುವುದರಿಂದ ಕಾವ್ಯ ಪರಿಣಾಮಕಾರಿಯಾಗಿದೆ. ನಳಚರಿತ್ರೆಯ ಕಥಾ ನಿರೂಪಣೆ ಮತ್ತು ಪಾತ್ರ ನಿರ್ವಹಣೆ ಪರಸ್ಪರ ಪೂರಕವಾಗಿ ಸಾರ್ಥಕತೆ ಸಾಧಿಸಿವೆ. ಕಾವ್ಯದ ಒಟ್ಟು ಸ್ವರೂಪ ಸುಂದರವಾಗಿದೆ. ತತ್ಪರಿಣಾಮದಿಂದಾಗಿ ನಳಚರಿತ್ರೆ ಜನಪ್ರಿಯತೆ ಗಳಿಸಿದೆ, ವಿದ್ವಾಂಸರ ಮೆಚ್ಚುಗೆಗೂ ಪಾತ್ರವಾಗಿದೆ.

# ಮೋಹನ ತರಂಗಿಣಿ : ಶಿಲ್ಪ ಮತ್ತು ಬಂಧ

**ಕುಮಾರಚಲ್ಯ**

ಶಿಲ್ಪ ಮತ್ತು ವಿನ್ಯಾಸ (structure) ಕಾವ್ಯವಸ್ತುವಿನ ಜೋಡಣೆಗೆ ಸಂಬಂಧಿಸಿದ್ದು. ಒಂದು ಕೃತಿಯ ಶಿಲ್ಪವನ್ನು ಕುರಿತು ವಿವರಿಸುವಾಗ ಅದರ ಬಂಧವೂ (texture) ಮುಖ್ಯವೆನಿಸುತ್ತದೆ. ಶಿಲ್ಪವು – ಕಥೆಯ ಆಯ್ಕೆ, ಅಳವಡಿಕೆ, ಉದ್ದೇಶಗಳನ್ನು ಒಳಗೊಂಡಿರುತ್ತದೆ. ಬಂಧವು – ಛಂದಸ್ಸು, ಭಾಷೆ ಮುಂತಾದ ಅಂಶಗಳನ್ನು ಕುರಿತದ್ದು. ಕಾವ್ಯದಲ್ಲಿ ಕಥೆಯ ಶಿಲ್ಪ ಮತ್ತು ಭಾಷೆಯ ಶಿಲ್ಪ ಎರಡೂ ಇದ್ದು, ಮೊದಲನೆಯದು ವಸ್ತುವಿನ ಅಂತರಾಳದಲ್ಲಿ ಬೆರೆತಿದ್ದರೆ, ಮತ್ತೊಂದು ಬಾಹ್ಯ ಹೆಣಿಗೆಯಾಗಿರುತ್ತದೆ. ಕೃತಿಯೊಂದರಲ್ಲಿ ಇವೆರಡರ ಸುಸಂಬದ್ಧತೆ ಏರ್ಪಟ್ಟಿದ್ದರೆ ಕಲಾಕೃತಿಯೊಂದರ ವ್ಯವಸ್ಥಿತವಾದ ಕಥಾಸಂವಿಧಾನವನ್ನು ಗುರುತಿಸಬಹುದು. ಕನ್ನಡ ಸಾಹಿತ್ಯ ವಿನ್ಯಾಸ, ಬಂಧ – ಇವುಗಳ ಮಧ್ಯೆ ವ್ಯತ್ಯಾಸವಿರುವುದನ್ನು ಕಂಡುಕೊಳ್ಳಲು ಸ್ವಲ್ಪ ಮಟ್ಟಿನ ಗೊಂದಲ ಉಂಟಾಗುತ್ತದೆ. 'ರೂಪ' ಎಂಬುದು ಪ್ರಕಾರ, ಮಾಧ್ಯಮ ಎಂಬ ಅರ್ಥವನ್ನ ಹೊಂದಿದೆ. ಕಾವ್ಯವಸ್ತು ಬೇರೆ ಬೇರೆ ರೂಪ – ವಿನ್ಯಾಸಗಳಲ್ಲಿ ಬೆಳೆಯಬಹುದು. ಆದ್ದರಿಂದ, ರೂಪವು ಶಿಲ್ಪ ಮತ್ತು ಬಂಧವನ್ನು ಒಳಗೊಂಡೇ ಇರುತ್ತದೆ. Structure 'ಶಿಲ್ಪ' ಎಂಬುದರ ಬದಲಾಗಿ 'ಸಂರಚನೆ' ಎಂದೂ, Texture ಗೆ 'ಬಂಧ' ಎಂಬುದರ ಬದಲಾಗಿ 'ನೆಯ್ಗೆ' ಎಂದೂ ವಿಮರ್ಶಕರು ಬಳಸಿದ್ದಾರೆ. ಈ ಲೇಖನದಲ್ಲಿ ಶಿಲ್ಪ ಮತ್ತು ಬಂಧ ಎಂಬುದನ್ನು ಸ್ವೀಕರಿಸಿ, ಇತರ ಸಂವಾದಿ ಪದಗಳ ಬಗ್ಗೆ ಹೆಚ್ಚು ಚರ್ಚೆ ಅಥವಾ ಸ್ಪಷ್ಟನೆಗಾಗಿ ತೊಡಗದೆ, ಶಿಲ್ಪ ಮತ್ತು ಬಂಧಗಳಿಗಿರುವ ಅರ್ಥವ್ಯಾಪ್ತಿಯ ಹಿನ್ನೆಲೆಯಲ್ಲಿ ಕನಕದಾಸರ 'ಮೋಹನ ತರಂಗಿಣಿ' ಕೃತಿಯ ಕಥಾವಸ್ತು, ಪಾತ್ರಸೃಷ್ಟಿ, ಜೋಡಣೆ, ನಿರೂಪಣಾಕ್ರಮ – ಇವುಗಳನ್ನು ಕುರಿತು ವಿವೇಚಿಸಿದ್ದೇನೆ.

ಯಾವುದೇ ಒಂದು ಕೃತಿ ವಸ್ತು, ಪಾತ್ರ, ಘಟನೆ, ನಿರೂಪಣೆ – ಈ ಅಂಶಗಳಿಂದ ಹೊರತಾಗಿರುವುದಿಲ್ಲ. ವಸ್ತುವಿಗೆ ಅನುಗುಣವಾಗಿ ಕಥೆ, ನಾಯಕ

– ಪ್ರತಿನಾಯಕರ ಆಯ್ಕೆ, (ಕೆಲವೊಮ್ಮೆ ಪ್ರತಿನಾಯಕನಿಲ್ಲದೆ ಒಂದೇ ಪಾತ್ರ ಕೃತಿಯ ಕೇಂದ್ರ ವಿಷಯವಾಗಬಹುದು) ಅವರಿಬ್ಬರ ನಡುವೆ ನಡೆಯುವ ಹೋರಾಟ, ಇವೆಲ್ಲದರ ಚಿತ್ರಣದಿಂದಾಗಿ ಕಥಾ ಸಂವಿಧಾನಕ್ಕೆ ಒಂದು ಆಕಾರ ಬರುತ್ತದೆ. ಶಿಲ್ಪದ ಸ್ಪಷ್ಟ ತಿಳಿವಳಿಕೆಗಾಗಿ ರಾಮಾಯಣ, ಭಾರತದಂಥ ಮಹಾಕಾವ್ಯಗಳನ್ನು ಗಮನಿಸಬಹುದು. ಇವೆರಡೂ ಗಾತ್ರದಲ್ಲಿ ಮತ್ತು ಗುಣದಲ್ಲಿ ಬಹಳ ದೊಡ್ಡ ಗ್ರಂಥಗಳು. ರಾಮಾಯಣದ ಕಥೆ ಒಬ್ಬ ನಾಯಕ – ಪ್ರತಿನಾಯಕನಿಗೆ ಸಂಬಂಧಿಸಿದ್ದು. ರಾಮನೇ ಅಲ್ಲಿಯ ಕೇಂದ್ರ ಪಾತ್ರ. ಆತನ ಕಥೆಯ ಜೊತೆ ಹಲವು ಉಪಕಥೆಗಳು ಬಂದರೂ ಮುಖ್ಯ ಕಥೆಯ ಸೂತ್ರ ಕೆಡುವುದಿಲ್ಲ. ಆದರೆ, ಈ ಮಾತು ಮಹಾಭಾರತಕ್ಕೆ ಅನ್ವಯಿಸುವುದಿಲ್ಲ. ಅಲ್ಲಿ ಬರುವ ಸುಮಾರು ಪಾತ್ರಗಳು ನಾಯಕನೆನಿಸುವ ಅರ್ಹತೆಯುಳ್ಳವು. ಅವುಗಳಲ್ಲಿ ನಾಯಕ ಯಾರು ? ಪ್ರತಿನಾಯಕ ಯಾರು? ಎಂದು ನಿರ್ಧರಿಸುವುದೇ ಕೆಲವೊಮ್ಮೆ ಕಷ್ಟ. "ಕತೆ ಪಿರಿದಾದೊಡಂ ಕತೆಯ ಮೆಯ್ಗೆಡಲೀಯದೆ ಮುಂ ಸಮಸ್ತ ಭಾರತಮಪೂರ್ವಮಾಗೆ ಸಲೆ ಪೇಳ್ದ ಕವೀಶ್ವರರಿಲ್ಲ" ಎಂದ ಪಂಪನಿಗೆ ಭಾರತದ ಯುದ್ಧದಲ್ಲಿ ಅದ್ವಿತೀಯ ಪರಾಕ್ರಮವನ್ನು ತೋರಿದ ಅರ್ಜುನನೇ ನಾಯಕನೆನಿಸಿದ. ರನ್ನನಿಗೆ ಭೀಮ, ಕುಮಾರವ್ಯಾಸನಿಗೆ ಕೃಷ್ಣ – ಹೀಗೆ ಕವಿಗಳು ರೂಪಿಸುವ ನಾಯಕರಲ್ಲಿ ಯಾರನ್ನು ಒಪ್ಪಬೇಕು, ಯಾರನ್ನು ಬಿಡಬೇಕು ಎಂಬ ಸಂದಿಗ್ಧತೆ ಸಂಭವಿಸುತ್ತದೆ. ಈ ಬಗೆಯಲ್ಲಿ ಪಾತ್ರಗಳನ್ನು ಸೃಷ್ಟಿಸುವಾಗ ಕವಿ ಒಂದು ನಿರ್ದಿಷ್ಟ ದೃಷ್ಟಿ, ಉದ್ದೇಶ, ಧೋರಣೆ, ನಂಬಿಕೆಗಳಿಗೆ ಬದ್ಧನಾಗಿರುತ್ತಾನೆ. ಉದಾ : ಪಂಪ–ರನ್ನರು ಅರ್ಜುನ–ಭೀಮರನ್ನು ನಾಯಕರನ್ನಾಗಿ ರೂಪಿಸುವಾಗ ಅರಿಕೇಸರಿ – ಸತ್ಯಾಶ್ರಯರ ವ್ಯಕ್ತಿತ್ವಕ್ಕೆ ಮಾರುಹೋಗಿ, ಆಶ್ರಯದಾತರನ್ನು ಕೃತಿಯ ನಾಯಕರೆಂದೇ ಪರಿಗಣಿಸಿದರು. ಇಂಥ ನಾಯಕಪ್ರಧಾನವಾದ ಮಹಾಕಾವ್ಯಗಳಲ್ಲಿ ಮುಖ್ಯ ಕಥೆಯ ಜೊತೆ ಬೆರೆತುಬರುವ, ಹಾಗೂ ಸ್ವತಂತ್ರ ಕಥೆಗಳಾಗಿ ಬೆಳೆಯುವಷ್ಟು ಗಟ್ಟಿಯಾದ ಉಪಾಖ್ಯಾನಗಳು (ಶಕುಂತಲೋಪಾಖ್ಯಾನ, ಯಯಾತಿ ಕಥೆ, ವಶಿಷ್ಠ ವಿಶ್ವಾಮಿತ್ರರ ಕಥೆ) ಬರುತ್ತವೆ. ಆಗ ಕಥೆಗೆ ಸಂಬಂಧಿಸಿದ ಸಾವಯವ ಅಂಶಗಳನ್ನು ಸರಿದೂಗಿಸುವ ಪ್ರಯತ್ನವನ್ನು ಕವಿ ಎಚ್ಚರಿಕೆಯಿಂದ ಮಾಡಬೇಕಾಗುತ್ತದೆ. ಏಕೆಂದರೆ ಸಂದರ್ಭಕ್ಕೆ ಉಚಿತವಾಗಿ ಹೊಂದಿಸಿಕೊಳ್ಳಬೇಕಾದ ಉಪಕಥೆಗಳ ಕಡೆಗೇ ಕವಿಮನಸ್ಸು ಹೊರಳಿ, ಮುಖ್ಯ ಕಥೆಯ ಬಗ್ಗೆ ಹಿಡಿತ ಸಾಧಿಸಲಾರದೆ ಕಥಾ ನಿರೂಪಣಾಕ್ರಮ ತಪ್ಪಿ 'ಶಿಥಿಲ ಶಿಲ್ಪ' ಮತ್ತು 'ಶಿಥಿಲ ಬಂಧ' ಏರ್ಪಡುವ ಸಾಧ್ಯತೆಗಳಿರುತ್ತವೆ.

ಕಥಾಶಿಲ್ಪ ಸಡಿಲಗೊಳ್ಳುವುದರಿಂದ ಕಾವ್ಯದೊಳಗೆ ಅಳವಡಬೇಕಿರುವ ಐಕ್ಯತೆಗೆ ಭಂಗಬರುತ್ತದೆ. ಈ ಬಗೆಯ ದೋಷಗಳಿಗೆ ಅವಕಾಶಕೊಡದೆ ಕಾವ್ಯ ಯಾವ ಮಟ್ಟದ ಏಕಸೂತ್ರತೆಯನ್ನು ಉಳಿಸಿಕೊಂಡಿದೆ ಎಂಬುದರ ಮೇಲೆ ಕಥಾವಸ್ತುವಿನ ಬೆಳವಣಿಗೆಯನ್ನು ಗುರುತಿಸಬೇಕಾಗುತ್ತದೆ.

ಪುರಾಣ ಕಥೆಗಳು ಕೂಡ ರೂಪ ಮತ್ತು ಸತ್ವದಲ್ಲಿ ಮಹಾಕಾವ್ಯದಷ್ಟೇ ಜನಪ್ರಿಯವಾದುವುಗಳು. ಈಚಿನ ಅಭಿಪ್ರಾಯದಂತೆ ಅವು ಕೇಳಿ ಮರೆಯುವ ಕಥೆಗಳಲ್ಲ. ಲೇವಿಸ್ಟ್ರಾಸ್ ಪುರಾಣ ಕಥೆಗಳನ್ನು ಶಿಲ್ಪಾತ್ಮಕ (Structural) ದೃಷ್ಟಿಯಿಂದ ವಿಶ್ಲೇಷಿಸಬೇಕು ಎನ್ನುತ್ತಾನೆ. ಆ ಮೂಲಕ ಪುರಾಣ ಪಡೆದುಕೊಂಡಿರುವ ಸಾಂಕೇತಿಕ ಅರ್ಥವನ್ನು ತಿಳಿಯಬಹುದು ಪ್ರಾಗ್ರೂಪ ವಿಮರ್ಶೆ (Archetypal criticism) ಕೂಡ ಇಂತಹ ಅಂಶಗಳನ್ನು ಕುರಿತೇ ಚರ್ಚಿಸುತ್ತದೆ. ಪುರಾಣರೂಪದ ವಸ್ತುವಿನಲ್ಲಿ ಬೆಳೆಯುತ್ತದೆ. ಅಲ್ಲದೆ ದೇವತೆ – ರಾಕ್ಷಸ ಸಮೂಹ, ಅವರ ಹೋರಾಟ, ಸಾವು, ಮರುಜನ್ಮ, ಕನಸುಗಾರಿಕೆ, ಅದ್ಭುತಲೋಕ ಸೃಷ್ಟಿ, ಅತಿಮಾನುಷ ಘಟನೆಗಳು, ಧಾರ್ಮಿಕ ನಂಬಿಕೆಗಳು – ಇವುಗಳೆಲ್ಲ ಬೆರೆತಿರುತ್ತದೆ. ಈ ಎಲ್ಲಾ ಅಂಶಗಳು ಯಾವ ಪ್ರಮಾಣದಲ್ಲಿ ಬೆರೆತಿವೆ ಎಂಬುದನ್ನು ಶಿಲ್ಪಾತ್ಮಕ ಅಧ್ಯಯನ ಕ್ರಮದಲ್ಲಿ ವಿವೇಚಿಸಲಾಗುವುದು.

ಮೋಹನ ತರಂಗಿಣಿ ಪುರಾಣ ಮೂಲದ ಕಥೆಗಳನ್ನು ಆಧರಿಸಿ, ಕೃಷ್ಣನನ್ನು ಕೇಂದ್ರ ಪಾತ್ರವಾಗಿರಿಸಿಕೊಂಡು ಸಮಗ್ರತೆಯನ್ನು ಸಾಧಿಸಿದೆ. ಅನೇಕ ಕಥಾ ಪ್ರಸಂಗಗಳನ್ನು ಒಳಗೊಂಡೂ ಒಂದೇ ಸೂತ್ರದಲ್ಲಿ ಅಳವಡಿಸಿಟ್ಟಿರುವ ಕೃತಿ ಹೀಗಾಗಿ ರಾಮಾಯಣದ ಕಥಾನಾಯಕನನ್ನು ಗುರುತಿಸುವಷ್ಟೇ ಸುಲಭವಾಗಿ ಇಲ್ಲಿಯ ನಾಯಕನನ್ನು ಗುರುತಿಸಬಹುದು. ಇತರ ಪಾತ್ರಗಳಲ್ಲಿಲ್ಲದ ಉದಾತ್ತ ಗುಣವನ್ನು ಕೃಷ್ಣನಲ್ಲಿ ಕವಿ ಕಂಡುಕೊಂಡಿದ್ದಾನೆ. ಆದ್ದರಿಂದ ಕೃಷ್ಣನೇ ಇಲ್ಲಿಯ ಕಥಾನಾಯಕ. ಈ ಸಮರ್ಥನೆಗಾಗಿಯೆ ರಾಮಾಯಣ – ಮಹಾಭಾರತಗಳ ವಿಚಾರವನ್ನು ಪ್ರಸ್ತಾಪಿಸಲಾಯಿತು. ಕೃಷ್ಣನ ಸಂದೇಶವನ್ನು ಸಾರುವುದಕ್ಕಾಗಿಯೇ ಮಹಾಭಾರತದ ರಚನೆಯಾಯಿತು ಎಂಬ ಸಾಂಪ್ರದಾಯಕ ವಾದವೊಂದಿದೆ. ಮಹಾಭಾರತದ ಕೊನೆಯಲ್ಲಿ ಕೃಷ್ಣನ ಜೀವನ ಚರಿತ್ರೆಯನ್ನು ಸಮಗ್ರವಾಗಿ ವಿವರಿಸುವ 'ಹರಿವಂಶ'ವೆಂಬ ಭಾಗವನ್ನು ಸೇರಿಸಲಾಗಿದೆ. ಕನಕದಾಸರು ಮಹಾಭಾರತದ ಕಥೆಯನ್ನು ಆಧರಿಸಿದ್ದರೂ ಅಲ್ಲಿ ಬರುವ ಕೃಷ್ಣನ ಜೀವನಚರಿತೆಯನ್ನು ಸಂಪೂರ್ಣವಾಗಿ ಸ್ವೀಕರಿಸದೆ ಅನಿರುದ್ಧನ ಕಾರಣಕ್ಕಾಗಿ ಬಾಣಾಸುರನನ್ನು ಸಂಹರಿಸುವ ಪ್ರಸಂಗವನ್ನು ಆಯ್ದುಕೊಂಡು, ಭಾಗವತದಲ್ಲಿ

ಬರುವ ಪ್ರದ್ಯುಮನ ಕಥೆ ; ಶಂಬರಾಸುರನ ವಧೆ – ಇವುಗಳ ಜೊತೆ ಹರಿವಂಶ, ವಿಷ್ಣು ಪುರಾಣ, ಸ್ಕಂದ ಪುರಾಣ ಮೊದಲಾದ ಆಕರಗಳಿಂದ ತೆಗೆದುಕೊಂಡ ಕಥಾಸಾರವನ್ನು ಬೆರೆಸಿ ಮೋಹನ ತರಂಗಿಣಿಯನ್ನು ರಚಿಸಿದ್ದಾರೆ. ಯಾವುದೇ ಒಂದು ಮೂಲ ಕಥೆಗೂ ಪೂರ್ಣವಾಗಿ ಕವಿ ಜೋತುಬಿದ್ದಿಲ್ಲ. ಬೇರೆ ಕವಿಗಳ ಪ್ರಭಾವಕ್ಕೆ ಒಳಗಾಗದ ಸ್ವಂತ ಪ್ರತಿಭೆಯನ್ನು ಕನಕದಾಸರು ಮೆರೆದಿದ್ದಾರೆ. ಈ ಕಾವ್ಯವನ್ನು ಶ್ರೀ ಕೃಷ್ಣಚರಿತೆ ಎಂದು ಹೇಳಿದ್ದರೂ ಕೃಷ್ಣನ ಪಾತ್ರವನ್ನು ವೈಭವೀಕರಿಸಿಲ್ಲ. ಕಾಮ–ರತಿ, ಶಂಬರಾಸುರ, ಬಾಣಾಸುರ, ಉಷಾ – ಅನಿರುದ್ಧರ ಪಾತ್ರಗಳನ್ನೂ ವಿಶಿಷ್ಟ ರೀತಿಯಲ್ಲಿ ಚಿತ್ರಿಸಿದ್ದಾರೆ. ಕಥೆ ಆರಂಭಕ್ಕೂ ಕೊನೆಗೂ ಸಹಜವಾದ ಸಾಮಂಜಸ್ಯವಿದೆ. ದ್ವಾರಕೆಯಲ್ಲಿ ಕಥೆ ಆರಂಭಗೊಂಡು ಬಾಣಾಸುರನ ಸಂಹಾರವಾದ ಬಳಿಕ ಉಷಾ – ಅನಿರುದ್ಧರನ್ನು ದ್ವಾರಕೆಗೆ ಕರೆತರುವುದರೊಂದಿಗೆ ಕೊನೆಗೊಳ್ಳುತ್ತದೆ. ಇಲ್ಲಿಯ ಕಥಾಸೂತ್ರದ ಮೊದಲು ಮತ್ತು ಕೊನೆಯನ್ನು ಹಿಡಿದಿರುವ ಕೈ ಕೃಷ್ಣನದು. ಅದರಲ್ಲಿ ಸೇರಿಸಿರುವ ಪಾತ್ರಗಳು ಹಲವು. ಆ ಎಲ್ಲ ಪಾತ್ರಗಳೂ ಏಕಸೂತ್ರಬದ್ಧವಾಗಿವೆಯೇ ಹೊರತು ಪ್ರತ್ಯೇಕವಾಗಿಲ್ಲ. ಹೀಗಾಗಿ ಕೃಷ್ಣನ ಕಥೆ ಕೃತಿಯ ಸಮಗ್ರ ಶಿಲ್ಪವನ್ನು ಉಳಿದ ಪಾತ್ರಗಳ ಸಂಯೋಜನಾಕ್ರಮ ಕೃತಿಯ ಸಾವಯವ ಶಿಲ್ಪವನ್ನು ಅಚ್ಚುಕಟ್ಟಾಗಿ ರೂಪಿಸಿದೆ.

ಮೋಹನ ತರಂಗಿಣಿಯ ಪ್ರಮುಖ ಕಥಾ ಘಟ್ಟಗಳಿವು :

೧. ಪ್ರದ್ಯುಮ್ನ ಜನನ, ಕಾಮದಹನ, ಮಾರ ಜನನ, ಶಂಬರಾಸುರವಧೆ, ರತಿ ವಿವಾಹ.

೨. ಅನಿರುದ್ಧ ಜನನ, ಉಷಾ ಅನಿರುದ್ಧರ ಸಮಾಗಮ,

೩. ಬಾಣಾಸುರ ಅನಿರುದ್ಧನನ್ನು ಸೆರೆಹಿಡಿಯುವುದು, ಕೃಷ್ಣ – ಬಾಣಾಸುರರ ಕಾಳಗ.

ಮೇಲಿನ ಕಥಾಪ್ರಸಂಗಗಳು ಎಲ್ಲೂ ಪರಸ್ಪರ ಸಂಬಂಧವನ್ನು ಕಡಿದುಕೊಳ್ಳುವುದಿಲ್ಲ. ಪ್ರದ್ಯುಮ್ನನ ಜನನ ಭಾಗದ ವರ್ಣನೆ ಸಂಪೂರ್ಣ ಕನಕದಾಸರ ಸ್ವಂತರಚನೆ, ಕೃಷ್ಣ ರುಕ್ಮಿಣಿಯರಿಗೆ ಪ್ರದ್ಯುಮ್ನನೆಂಬ ಮಗ ಹುಟ್ಟುವುದು, ಆತನನ್ನು ಶಂಬರ ಅಪಹರಿಸಿ ಸಮುದ್ರದಲ್ಲಿ ಹಾಕುವುದು. ಆ ಮಗುವನ್ನು ಒಂದು ಮೀನು ನುಂಗುವುದು, ಬಳಿಕ ಶಂಬರನ ಅರಮನೆಯಲ್ಲಿ ಬೆಳೆದು ಶಂಬರನನ್ನು ಕೊಲ್ಲುವುದು, ಪ್ರದ್ಯುಮ್ನ ರತಿಯರ ವಿವಾಹ – ಈ ಕಥಾಪ್ರಸಂಗಗಳು ಭಾಗವತ, ಹರಿವಂಶ, ವಿಷ್ಣುಪುರಾಣ ಮೊದಲಾದ ಕಡೆ

ದೊರೆಯುತ್ತವೆ. ಭಾಗವತದಲ್ಲಿ ಕಾಮನು ರುಕ್ಮಿಣಿಯಲ್ಲಿ ಪ್ರದ್ಯುಮ್ನನಾಗಿ ಜನಿಸಿದನು ಎಂದು ಹೇಳಲಾಗಿದೆಯಷ್ಟೆ. ಆದರೆ ಮೋಹನ ತರಂಗಿಣಿಯಲ್ಲಿ ರುಕ್ಮಿಣಿಯ ಅತೀತವಾದ ಪುತ್ರಾಕಾಂಕ್ಷೆ, ಮಗುವಿನ ಜನನ, ಅಪಹರಣ, ಅದಕ್ಕಾಗಿ ರುಕ್ಮಿಣಿ ವಿಲಾಪಿಸುವುದು – ಈ ಎಲ್ಲ ಸನ್ನಿವೇಶಗಳ ನಿರ್ಮಾಣದಲ್ಲಿ ಕನಕದಾಸರ ಕವಿ ಪ್ರತಿಭೆ ಬೆಳಗಿದೆ. ಪ್ರದ್ಯುಮ್ನನ ಹುಟ್ಟು ಮುಂದೆ ಸಂಭವಿಸಬಹುದಾದ ಒಂದು ಕ್ರಿಯೆಯ ಸೂಚನೆಯಾಗಿದೆ :

‘ದರ್ಪಕ ಹರನಿಂದ ತನು ದಗ್ಧವಾದ ಕಂ
ದರ್ಪ ನಿನ್ನಯ ಬಸಿಱೊಳಗೆ
ಬರ್ಪನು ನಾ ಕೊಟ್ಟ ವರದೊಳು ತುಸುಮಾತ್ರ
ತಪ್ಪದು ಕೇಳಾಯತಾಕ್ಷಿ ॥

ಎಂದು ಕೃಷ್ಣ ಹೇಳಲು ಮುಖ್ಯ ಕಾರಣ ‘ನೀ ಪಾಲಿಸಬೇಕು ನನಗೊರ್ವ ಕಂದರ್ಪ । ರೂಪಾಂತ ವರಕುಮಾರಕ’ ಎಂಬ ರುಕ್ಮಿಣಿಯ ಬೇಡಿಕೆ. ಈಗಾಗಲೇ ಕಾಮ ಸತ್ತಿರುವುದು, ಆತ ಮತ್ತೆ ಹುಟ್ಟುವನೆಂಬ ವಿಚಾರವನ್ನು ಈ ಸಾಲುಗಳಲ್ಲಿ ಸೂಚ್ಯವಾಗಿ ತಿಳಿಸಲಾಗಿದೆ. ಸಾವು ಮತ್ತು ಮರುಹುಟ್ಟನ್ನು ಕುರಿತು ಕತೆ ಹೇಳುವಾಗ ಕವಿ ಹಿನ್ನೋಟದ (Flashback) ತಂತ್ರವನ್ನು ಬಳಸಿಕೊಂಡಿದ್ದಾನೆ.

ಶತಪತ್ರದಳಲೋಚನೆ ಕೇಳು ಹರನಿಂದೆ
ಹತನಾದ ಕಂತು ರುಕ್ಮಿಣಿಯ
ಸುತನಾಗಿ ಹುಟ್ಟಿ ಮುಂಗೆಲಸಕ್ಕೆ ಬಯಲಾದ
ಕತೆಯ ಬಿತ್ತರಿಪೆ ನಿನ್ನೊಡನೆ ॥

ಸುಜ್ಞಾನವಧೂಟಿಗೆ ಕಥೆ ಹೇಳುವ ಕ್ರಮದಿಂದಾಗಿ ಮೋಹನ ತರಂಗಿಣಿಯಲ್ಲಿ ಒಬ್ಬ ನಿರೂಪಕ ಮತ್ತು ಶ್ರೋತೃ ಹುಟ್ಟಿಕೊಂಡಂತಾಗುತ್ತದೆ :

‘ಕೃತಿವೇಳ್ದ ಕನಕದಾಸೋತ್ತಮ ಕೇಳ್ದವ । ಳತಿ ಸುಜ್ಞಾನವಧೂಟಿ’

ಎಂದು ಕವಿ ಪೀಠಿಕಾಭಾಗದಲ್ಲಿ ತಿಳಿಸಿದ್ದಾನೆ. ಪ್ರದ್ಯುಮ್ನನ ಜನನವನ್ನು ಕುರಿತ ಕಥೆಯಿಂದ ಕಾವ್ಯವನ್ನು ಮೊದಲು ಮಾಡಿ, ಆತನನ್ನು ಯಾರೊ ರಾಕ್ಷಸರು ಕದ್ದೊಯ್ದರೆಂಬ ವಿಷಯದವರೆಗೆ ಕಥೆಯನ್ನು ತಂದು ನಿಲ್ಲಿಸುತ್ತಾರೆ. ಮತ್ತೆ ಈ ಕಥೆ ಮಾರಜನನ ಪ್ರಸಂಗದಲ್ಲಿ ಮುಂದುವರಿಯುತ್ತದೆ. ಈ ಮಧ್ಯೆ ಕಾಮದಹನ ಪ್ರಸಂಗವೆಂಬ ಅತೀ ಮುಖ್ಯ ಘಟನೆ ಸಂಭವಿಸಿರುತ್ತದೆ. ಕಾಮನ ಸಾವಿನ ಅನಂತರದ ಬದುಕನ್ನು ಕುರಿತ ವಿವರಣೆಯನ್ನು ನೀಡುವುದಕ್ಕಾಗಿ ಕವಿ ಕಾಮದಹನದ ಕಥೆಯನ್ನು ದೀರ್ಘವಾಗಿ ಹೇಳಿದ್ದಾನೆ. ಮನ್ಮಥನೇ

ಪ್ರದ್ಯುಮ್ನನಾಗಿ ಜನಿಸಿದ್ದಾನೆಂದು ಸುಜ್ಞಾನವಧೂಟಿಗೆ ನಿರೂಪಕ ತಿಳಿಸಬೇಕಿರುವುದರಿಂದ, ಕಾವ್ಯದ ಮೊದಲಿಗೆ ಯಾವ ಕಥೆಯನ್ನು ಹೇಳಲು ಆರಂಭಿಸಿದ್ದನೊ ಅದನ್ನು ನಿಲ್ಲಿಸಿ ಆ ಕಥೆಯ ಪೂರ್ವ ವೃತ್ತಾಂತವನ್ನು ಶ್ರೋತೃವಿನ ಎದುರು ಮಂಡಿಸುತ್ತಾನೆ. ಕಥಾ ಚೌಕಟ್ಟಿನ ದೃಷ್ಟಿಯಿಂದ ಹಿನ್ನೋಟ ತಂತ್ರ ಈ ಕಾವ್ಯದಲ್ಲಿ ಯಶಸ್ವಿಯಾಗಿದೆ. ಕಾಮ–ರತಿ–ಪ್ರದ್ಯುಮ್ನರಿಗೆ ಸಂಬಂಧವನ್ನು ಕಲ್ಪಿಸುವಾಗ ಬೇರೆ ಬೇರೆ ಆಕರಗಳಲ್ಲಿ ಇರುವ ಕಥೆಯನ್ನು ಸುಸಂಗತವಾಗಿ ಕವಿ ಬದಲಾಯಿಸಿಕೊಂಡಿದ್ದಾನೆ. ಹಾಗೆಯೇ ಅನಗತ್ಯವೆನಿಸಿದ ಅಂಶಗಳನ್ನು ಬಿಟ್ಟಿದ್ದಾನೆ. ಹರಿವಂಶದಲ್ಲಿ ಶಂಬರಾಸುರ ಮಗುವನ್ನು ಕದ್ದೊಯ್ದು ಸಮುದ್ರದಲ್ಲಿ ಎಸೆಯುವುದಿಲ್ಲ. ತನ್ನ ಹೆಂಡತಿ ಮಾಯಾದೇವಿಗೆ ಕೊಡುತ್ತಾನೆ. ಮಾಯಾವತಿಯನ್ನು ಶಂಬರಾಸುರನ ಹೆಂಡತಿ ಎಂದು ಪರಿಗಣಿಸಿದರೆ ಮರುಹುಟ್ಟು ಪಡೆವ ಮನ್ಮಥ ಅಥವಾ ಪ್ರದ್ಯುಮ್ನನನ್ನು ಮಾಯಾವತಿ (ರತಿ) ವಿವಾಹ ಮಾಡಿಕೊಳ್ಳುವ ಅಗತ್ಯ ಬೀಳುವುದಿಲ್ಲ. ಹಾಗೆ ಆದರೆ ಪ್ರದ್ಯುಮ್ನನ ಜನನ ಕೇವಲ ಶಂಬರಾಸುರನ ವಧೆಗಾಗಿಯೇ ಆದದ್ದು ಎಂದು ಭಾವಿಸಬೇಕಾಗುತ್ತದೆ. ಆದ್ದರಿಂದ ಮಾಯಾವತಿ ಶಂಬರಾಸುರ ಮಡದಿ ಎಂಬ ವಿಚಾರವನ್ನು ಕೈಬಿಡಲಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಜನ್ಮಜನ್ಮಾಂತರಗಳವರೆಗೆ ಹರಿದುಬರುವ ಚಿರಂತನ ಪ್ರೇಮವನ್ನು ಪ್ರತಿಪಾದಿಸಲು ಕಾಮ ಮತ್ತು ರತಿಯರ ಪ್ರಸಂಗವನ್ನು ವಿಶಿಷ್ಟವಾಗಿ ಹೆಣೆಯಲಾಗಿದೆ. ಈ ಹಿನ್ನೆಲೆಯಲ್ಲಿ ಕಾಮದಹನವಾದ ಬಳಿಕ ಶೋಣಿತಪುರಕ್ಕೆ ಬರುವ ರತಿ ಶಂಬರನ ಒತ್ತಾಯಕ್ಕೆ ಮಣಿದು ಒಲಿಯದೆ, ಆತನ ಅರಮನೆಯಲ್ಲಿ ಅಡಿಗೆಯವಳಾಗಿ ನಿಲ್ಲುತ್ತಾಳೆ. ಆ ವೇಳೆಗೆ ಶಂಬರಾಸುರ ನೀರಿನಲ್ಲಿ ಎಸೆದ ಮಗುವನ್ನು ಒಂದು ಮೀನು ನುಂಗಿರುತ್ತದೆ, ಆ ಮೀನನ್ನು ಬೆಸ್ತ ರಾಜನ ಪಾಕಶಾಲೆಗೆ ತಂದುಕೊಡುತ್ತಾನೆ. ಮೀನಿನಲ್ಲಿದ್ದ ಆ ಮಗುವಿನ ತೇಜಸ್ಸನ್ನು ಗಮನಿಸಿದ ರತಿಯಲ್ಲಿ ಅವ್ಯಕ್ತ ವಾತ್ಸಲ್ಯ ಮೂಡುತ್ತದೆ. ಆ ಮಗು ಬೆಳೆದು ಯುದ್ಧಕಲೆಯನ್ನು ಕಲಿತು ಶಂಬರನನ್ನು ಕೊಲ್ಲುತ್ತಾನೆ. ಮುಂದೆ ಪ್ರದ್ಯುಮ್ನನ ಜೊತೆ ರತಿ ದ್ವಾರಕೆಗೆ ಬಂದು, ನಾರದರಿಂದ ಎಲ್ಲ ವೃತ್ತಾಂತವನ್ನು ತಿಳಿದ ಬಳಿಕ ರತಿ ಪ್ರದ್ಯುಮ್ನರ ವಿವಾಹ ನಡೆಯುತ್ತದೆ. ಈ ಕಥೆಯಲ್ಲಿ ಅಸಂಭಾವ್ಯವೆನಿಸುವ ಕಲ್ಪನೆಗಳಿವೆ. ಇವುಗಳನ್ನು ಕಾವ್ಯದೊಳಗಿನ ದೋಷಯುಕ್ತ ಅಂಶಗಳೆಂದು ಭಾವಿಸದೆ, ಕವಿ ನಿರೂಪಿಸುವ ಕಥೆಯ ಜೊತೆ ಇವು ಹೊಂದಿಕೊಂಡು ಬಂದು, ಇಂಥ ಘಟನೆಗಳು ಸಂಭವಿಸಿರಬಹುದು ಎಂಬ ನಂಬಿಕೆಯನ್ನು ಓದುಗನಲ್ಲಿ ಉಂಟುಮಾಡಿದೆಯೇ ಎನ್ನುವುದು ಮುಖ್ಯವಾಗುತ್ತದೆ.

ಏಕೆಂದರೆ ಬದುಕಿನಲ್ಲಿ ಕಾಣುವ ವಾಸ್ತವಿಕ ಸತ್ಯಕ್ಕಿಂತ ಕಾವ್ಯಸತ್ಯ ಭಿನ್ನವಾದುದಾಗಿರುತ್ತದೆ. ಇಂತಹ ಇನ್ನೊಂದು ಘಟನೆ ಉಷಾ–ಅನಿರುದ್ಧರ ಕಥೆಯಲ್ಲಿ ಬರುತ್ತದೆ. ಕನಸಿನಲ್ಲಿ ಬಂದು ಕೂಡಿದವನೊಂದಿಗೇ ವಿವಾಹವಾಗುವ ಪ್ರಸಂಗ ಅದು ಮನಶ್ಶಾಸ್ತ್ರದ ದೃಷ್ಟಿಯಿಂದ ವಿವೇಚಿಸಿದಾಗ ಇಂತಹ ವಿಚಾರಗಳ ಬಗ್ಗೆ ಸಂಭವನೀಯ ಕಾರಣಗಳನ್ನು ಕಂಡುಕೊಳ್ಳಬಹುದೇನೋ !

ಮೊದಲ ಘಟ್ಟದ ಕಥೆಯನ್ನು ಕನಕದಾಸರು ಬಹಳ ಎಚ್ಚರಿಕೆಯಿಂದ ಹೊಂದಿಸಿ, ಕ್ರಮವರಿತು ನಿರೂಪಿಸಿದ್ದಾರೆ. ಕಾವ್ಯದ ಶಿಲ್ಪ ಮತ್ತು ಬಂಧ ಕೃತಿಯ ಆರಂಭದಲ್ಲಿಯೇ ವ್ಯವಸ್ಥಿತವಾಗಿರುವುದರಿಂದ ಮುಂದಿನ ಕಥೆ ನೇರವಾಗಿ, ಸರಾಗವಾಗಿ ಸಾಗುತ್ತದೆ. ಅನಿರುದ್ಧನ ಜನನ, ಉಷಾ – ಅನಿರುದ್ಧರ ಪರಿಣಯ ಮೊದಲಾದ ಪ್ರಸಂಗಗಳು, ಕಾಮ ರತಿ–ಪ್ರದ್ಯುಮ್ನರ ಕಥೆಯಂತೆ ಅಳವಡಿಕೆಗೆ ಸಂಬಂಧಿಸಿದ ಗೊಂದಲವನ್ನು ಓದುಗರ ದೃಷ್ಟಿಯಲ್ಲಿ, ಸೃಷ್ಟಿಸುವುದಿಲ್ಲ.

ಉಷಾ–ಅನಿರುದ್ಧರ ಪ್ರಣಯ ಕಥೆಯಲ್ಲಿ ಶೃಂಗಾರ ವರ್ಣನೆಗೆ ಹೆಚ್ಚು ಅವಕಾಶ ದೊರೆತಿದೆ. ಶೋಣಿತಪುರದ ಅರಸ ಬಾಣಾಸುರನ ಮಗಳು ಉಷಾದೇವಿ. ಆಕೆಯ ಪ್ರಿಯ ಸಖಿ ಚಿತ್ರಲೇಖೆ. ಪಾರ್ವತಿಯ ವರದಿಂದ ಉಷೆಗೆ ಕನಸಿನಲ್ಲಿ ಪ್ರಿಯಕರನ ಸಮಾಗಮವಾಗುತ್ತದೆ. ವಿರಹದಿಂದ ಬಳಲಿದ ಆಕೆಗೆ ಚಿತ್ರಲೇಖೆ ಸಹಾಯ ಮಾಡುತ್ತಾಳೆ. ಉಷಾ–ಅನಿರುದ್ಧ ಸಮಾಗಮವಾಗುತ್ತದೆ. ಇದರಿಂದ ಕುಪಿತನಾದ ಬಾಣಾಸುರನು ಅನಿರುದ್ಧನನ್ನು ಬಂಧಿಸುತ್ತಾನೆ. ನಾರದರಿಂದ ಈ ವಿಷಯವನ್ನು ತಿಳಿದ ಕೃಷ್ಣ ಶೋಣಿತಪುರದ ಮೇಲೆ ದಾಳಿ ಮಾಡಿದಾಗ ಹರನ ಸೈನ್ಯದೊಡನೆ ಕಾಳಗ ನಡೆಯುತ್ತದೆ. ಅಂತ್ಯದಲ್ಲಿ ಬಾಣಾಸುರನಿಗೂ ಕೃಷ್ಣನಿಗೂ ಯುದ್ಧ ನಡೆದು ಬಾಣಾಸುರನನ್ನು ಶಿವ ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಉಷಾ – ಅನಿರುದ್ಧನನ್ನು ಕೃಷ್ಣ ದ್ವಾರಕೆಗೆ ಕರೆತಂದು ವಿವಾಹ ಮಾಡುತ್ತಾನೆ. ಮೇಲಿನ ಈ ಕಥೆ ಯಾವುದೇ ತೊಡಕಿಲ್ಲದೆ ಬೆಳೆಯುವುದರಿಂದ ದಟ್ಟವಾದ ವರ್ಣನೆಯನ್ನು ನೀಡಲು, ಅರ್ಥಪೂರ್ಣ ಹೋಲಿಕೆಗಳುಳ್ಳ ಸನ್ನಿವೇಶಗಳನ್ನು ಸೃಜಿಸಲು, ಪಾತ್ರಗಳ ಮಧುರ ಭಾವನೆಗಳನ್ನು ಪ್ರಕಟ ಪಡಿಸಲು ಹೆಚ್ಚಿನ ಅವಕಾಶ ಕವಿಗೆ ದೊರೆತಿದೆ. ಯಾವ ಪಾತ್ರವನ್ನೂ ಮಿತಿಮೀರಿ ಚಿತ್ರಿಸಿಲ್ಲ. ಈ ಕಾವ್ಯ ಕೃಷ್ಣಚರಿತೆ ಎಂದು ಕವಿ ಹೇಳಿದ್ದರೂ ಇದು ಕನಕದಾಸರಲ್ಲಿರುವ ಭಕ್ತಿಯ ಪ್ರಕಟಣೆಯೇ ಹೊರತು ಕೃಷ್ಣನ ಪಾತ್ರವನ್ನು ಉದಾತ್ತೀಕರಿಸಿದ್ದೇನೆ ಎಂಬ ದಾರ್ಷ್ಟ್ಯವಿಲ್ಲ. ಏಕೆಂದರೆ ಇಲ್ಲಿ ಇರುವ ಯಾವ

ಪಾತ್ರಕ್ಕೂ ಪ್ರಮುಖ ಸ್ಥಾನವನ್ನು ಕಲ್ಪಿಸಿಲ್ಲ. ಎಲ್ಲ ಪಾತ್ರಗಳಿಗೂ ಸಮಾನ ಅವಕಾಶ ಕಲ್ಪಿಸಿರುವುದರಿಂದ ಕಥಾಶಿಲ್ಪ ಸುಸಂಬದ್ಧವಾಗಿದೆ.

ಲೇಖನದ ಆರಂಭದಲ್ಲಿ ಪ್ರಸ್ತಾಪಿಸಿದಂತೆ 'ಭಾಷೆ' ಬಂಧಕ್ಕೆ ಸಂಬಂಧಿಸಿದ ವಿಷಯ. ಅದು ಕಾವ್ಯದಲ್ಲಿ ಶಾಸ್ತ್ರೀಯವಾಗಿ ಮಾತ್ರ ಬಳಕೆಗೊಳ್ಳದೆ ಕಲಾತ್ಮಕತೆಯಿಂದ ಕೂಡಿರಬೇಕು. ಆಗ ಮಾತ್ರ ಶಬ್ದ ಮತ್ತು ಅರ್ಥ ಸಂಯೋಜನೆ ಹದವಾಗಿ ಬೆರೆಯುತ್ತದೆ. ಶ್ರೇಷ್ಠ ಕವಿ ತನ್ನ ಪರಿಪಕ್ವ ಅನುಭವಗಳನ್ನು ಅಭಿವ್ಯಕ್ತಿಸುವಾಗ ಭಾಷೆಯನ್ನು ಶಾಸ್ತ್ರೀಯ ನಿಟ್ಟಿನಿಂದ ಪರಿಗಣಿಸದೆ ಅದನ್ನು ಕಲೆ ಎಂದೇ ತಿಳಿಯುತ್ತಾನೆ. ಆ ಮೂಲಕ ಸಹೃದಯವನ್ನು ಮುಟ್ಟಬೇಕೆಂಬ ಹಂಬಲ ಅವನಿಗಿರುತ್ತದೆ. ಇಲ್ಲದಿದ್ದರೆ ಸಾಮಾನ್ಯ ಭಾವನೆಗಳನ್ನಷ್ಟೇ ಹೊರಹಾಕುವ ಅವಸರದಲ್ಲಿ ಶಬ್ದವ್ಯಭಿಚಾರವನ್ನು ಎಸಗಬಹುದು. ಅದನ್ನೇ ಸರಳ ಅರ್ಥದಲ್ಲಿ ವಾಗಾಡಂಬರ ಎನ್ನುವುದು. ಭಾವನೆಗಳಿಗೆ ಆಕಾರವನ್ನು ತಂದುಕೊಡಬೇಕಾದರೆ ಭಾಷೆಯನ್ನೇ ಆಶ್ರಯಿಸಬೇಕಾಗುತ್ತದೆ. ಕಾವ್ಯವೊಂದರ ಅರ್ಥ ಶರೀರವನ್ನು (Semantic Structure) ತಿಳಿಯುವುದೆಂದರೆ, ಭಾವನೆಗಳನ್ನು ನಿರ್ದಿಷ್ಟ ಸ್ತರಗಳಲ್ಲಿ ಸಂರಕ್ಷಿಸಿಟ್ಟಿರುವ ಭಾಷೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವುದು. ಮೋಹನ ತರಂಗಿಣಿಯಲ್ಲಿ ಈ ಬಗೆಯ ಭಾಷಿಕ ಎಚ್ಚರವಿದೆ. ಕನಕದಾಸರ ಕೀರ್ತನೆಯಷ್ಟೇ ಸುಲಭವಾಗಿ, ಸುಭಗವಾಗಿ ಅರ್ಥವಾಗುವ ಪದ್ಯಖಂಡಗಳಿವೆ. ಸಾಂಗತ್ಯ ಛಂದೋರೂಪ ಕಥೆಯ ಸುಲಲಿತ ನಡೆಗೆ ಪೂರಕವಾಗಿ ಬಳಕೆಗೊಂಡಿದೆ. ಸಾಮಾನ್ಯ ಶ್ರೋತೃವರ್ಗ ತನ್ನೆದುರಿಗಿದೆ ಎಂದು ಭಾವಿಸಿಕೊಂಡು ಕಾವ್ಯ ರಚನೆ ಮಾಡಿರುವುದರಿಂದ ಜಟಿಲ ಅಭಿವ್ಯಕ್ತಿಕ್ರಮ ಇಲ್ಲಿಲ್ಲ. ಈ ಕೃತಿ ಕನಕದಾಸರೇ ಹೇಳುವಂತೆ 'ವಡಿ ಪ್ರಾಸ ಗುಣ ನೇಮವುಚಿತಾರ್ಥ ಲಕ್ಷಣವಿಡಿಕಿಜೆದಿಹ ಭಾವಚಿತ್ರ' ಮೂಲತಃ ಮೋಹನ ತರಂಗಿಣಿ ಶೃಂಗಾರರಸ ಪ್ರಧಾನವಾದ ಕಾವ್ಯ. ಅಲ್ಲಿ ಪ್ರಣಯದ ಉತ್ಕಟ ಭಾವನೆಗಳು, ವಿಲಾಸಯುಕ್ತ ಜೀವನ ಚಿತ್ರಗಳು, ಸಮೃದ್ಧವಾದ ನಗರ ವರ್ಣನೆ ಇದೆ. ಉದಾ :

೧. ಹೊಳೆವ ಕೆಂಬಲ್ಲು ಚೆಂದುಟಿ ಕಂಬು ಕಂಠ ಕೌಂ
ಕುಟಿ ಕೋಮಲತ್ವ ನುಣ್ಮೊಲೆಯ
ಸ್ಥಳದಲ್ಲಿ ಮೊಗವಿಟ್ಟು ಮುಂಡಾಡಿ ಸೊಗ ಮೆಯ್ಯೊ
ಳಳವಟ್ಟು ಸಾವುದಚ್ಚರಿಯೆ ॥

೨. ನೀರನು ಬಿಟ್ಟಿರಲಪ್ಪುದೆ ಮತ್ಸ್ಯಾವ
ತಾರ ನೀನೆಂದು ನೀರೆಯರು
ರಾರಾಜಿಸುತಿಪ್ಪ ಕುಂಕುಮ ಜಲದೊಳು
ನಾರಾಯಣನನದ್ದಿದರು ॥

೩. ಸೋಮಸೂರಿಯವೀಥಿ ವೀಥಿಯಿಕ್ಕೆಲದಲ್ಲಿ
ಹೋಮನಿರ್ಮಿತ ಸೌಧದೋಳಿ
ರಾಮಣೀಯತೆವೆತ್ತ ಕಳಸದಂಗಡಿಯಿರ್ದು
ವಾ ಮಹಾ ದ್ವಾರಕಾಪುರದೆ ॥

ಮೋಹನ ತರಂಗಿಣಿ ಶೃಂಗಾರ ಪ್ರಧಾನ ಕಾವ್ಯ ಎಂಬುದರಲ್ಲಿ ಎರಡು ಮಾತಿಲ್ಲ. ಕೆಲವೊಮ್ಮೆ ಔಚಿತ್ಯವನ್ನು ಮೀರಿ ನಿಂತ ವರ್ಣನೆಗಳಿವೆ. ಆದರೂ ಮಾನವೀಯ ಅಂತಃಕರಣವನ್ನು ಮೀಟುವ ದೃಶ್ಯಗಳಿವೆ. ಪ್ರದ್ಯುಮ್ನನನ್ನು ಶಂಬರಾಸುರ ಕದ್ದೊಯ್ದಾಗ ರುಕ್ಮಿಣಿ ಮಾಡುವ ವಿಲಾಪ ಓದುಗರ ಮನಸ್ಸನ್ನು ಮಿಡಿಯುವಂತಿದೆ :

ಎಣ್ಣೆ ತಲೆಗೂಡಿದುದಿಲ್ಲ ನೊರೆವಾಲು
ಬೆಣ್ಣೆ ಮೆಲ್ಲಿಸಿದುದಿಲ್ಲ
ಕಣ್ಣೆವೆ ಹಳಚಿ ನೋಡಿದುದಿಲ್ಲ ಮಗನ ಲಾ
ವಣ್ಯ ಏನೆಂದಳಲಿದಳು ॥
ಹಾಲಿಗೆ ಹಂಬಲಿಸುವನಲ್ಲ ಬಿಡದಂಬೆ
ಗಾಲಿಕ್ಕಿ ತೆರಳುವನಲ್ಲ
ಕಾಲು ಬಲಿದು ದಟ್ಟಡಿಯಿಡುವವನಲ್ಲ
ಬಾಲನೆಲ್ಲಿಗೆ ಹೋದನವ್ವ ॥

ಇಂಥ ಕರುಣಾರಸ ಪ್ರಧಾನವಾದ ಭಾಗಗಳು ಮತ್ತು ವೀರರಸದ ಪ್ರಸಂಗಗಳು ಅಪೂರ್ವ ರೀತಿಯಲ್ಲಿ ಕಡೆಯಲ್ಪಟ್ಟಿವೆ. ಇಲ್ಲಿ ತಂತ್ರಬದ್ಧವಾದ ಅಭಿವ್ಯಕ್ತಿಕ್ರಮ ಉದ್ದೇಶಪೂರಕವಾಗಿ ನಿರ್ಮಾಣವಾಗಿಲ್ಲ. ಹಿನ್ನೋಟ ಕ್ರಮದಲ್ಲಿ ಸುಜ್ಞಾನವಧೂಟಿಗೆ ಕಥೆ ಹೇಳಿದರೂ, ಅದು ಶ್ರೋತೃ ಸಂಪ್ರದಾಯಕ್ಕೆ ಅನುಸಾರವಾಗಿ ಕಥೆ ಹೇಳುವ ಮಾದರಿಯಾಗಿದೆ. ಆದ್ದರಿಂದ ಮಹಾಭಾರತದ

ಕಥೆಯಂತೆ ನಿರೂಪಣಾಕ್ರಮ ಬಿಗಿಯಾಗುವುದಿಲ್ಲ. ಅಲ್ಲಿ ಸೂತಮುನಿ ಶೌನಕಾದಿ ಮಹರ್ಷಿಗಳಿಗೆ ಮೊದಲು ಹೇಳಿದ ಕಥೆಯನ್ನು ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ. ಇಂಥ ಕಡೆ ಇಬ್ಬರು ನಿರೂಪಕರು ಇರುವುದರಿಂದ ಯಾವ ಕಥೆಯನ್ನು ಯಾರು ಯಾರಿಗೆ ಹೇಳಿದರು ಎಂಬುದನ್ನು ತಿಳಿಯುವುದು ಕಷ್ಟ. ಮೋಹನ ತರಂಗಿಣಿಯಲ್ಲಿ ಬರುವ ನಾರದ ಸಂಭವಿಸಿದ ಘಟನೆಯ ಹಿಂದಿನ ಕಥೆಯನ್ನು ಹೇಳುತ್ತಾನೇ ಹೊರತು, ಕವಿಯಂತೆ ಸಮಗ್ರ ಕಥೆಯ ನಿರೂಪಕನಾಗುವುದಿಲ್ಲ. ಕಾವ್ಯದುದ್ದಕ್ಕೂ ದೇಸೀಯ ಭಾಷಾ ಬಂಧ ಹಾಸು ಹೊಕ್ಕಾಗಿ ಹರಡಿದೆ. ಸಮೃದ್ಧ ಸಾಹಿತ್ಯಾಂಶಕ್ಕಂತೂ ಕೊರತೆಯಿಲ್ಲ. ವಿಸ್ತಾರವಾದ ಕವಿಯ ಜೀವನಾನುಭವದಿಂದ ಹುಟ್ಟಿದ ಈ ಕಾವ್ಯ ಕೇವಲ ಧರ್ಮಸಂಬಂಧಿ ವಿಚಾರಗಳನ್ನು ಪ್ರತಿಪಾದಿಸದೆ, ಸಾರ್ವಕಾಲಿಕ ಜೀವನ ಮೌಲ್ಯಗಳನ್ನು ಎತ್ತಿ ಹಿಡಿದಿದೆ. ಈ ಕಾವ್ಯದಲ್ಲಿ ಬಳಕೆಗೊಂಡಿರುವ ಪದಬಂದ, ಧ್ವನಿ ಪೂರ್ಣ ವಾಕ್ಯಸರಣಿ, ವರ್ಣಸಾಂಗತ್ಯ, ಅರ್ಥಪೂರ್ಣ ಉಪಮೆಗಳ ಬಳಕೆ ಇತ್ಯಾದಿ ವಿಚಾರಗಳನ್ನು ಕುರಿತು ಸಾಹಿತ್ಯಕವಾಗಿ ಭಾಷಾತ್ಮಕವಾಗಿ ಪರಿಭಾವಿಸುವ ಸಾಧ್ಯತೆಗಳ ಕಡೆ ಈ ಕೃತಿ ಬೆರಳುಮಾಡುತ್ತದೆ. ಈ ಲೇಖನದ ವ್ಯಾಪ್ತಿಗೆ ಎಲ್ಲಾ ಅಂಶಗಳನ್ನು ಒಳಗುವಮಾಡಿಕೊಂಡು ಚರ್ಚಿಸಲು ಸಾಧ್ಯವಾಗುವುದಿಲ್ಲ. ಶಿಲ್ಪ ಮತ್ತು ಬಂಧದ ದೃಷ್ಟಿಯಿಂದ ಒಂದು ಕಾವ್ಯವನ್ನು ಹೇಗೆ ವಿಶ್ಲೇಷಿಸಬಹುದು ಎಂಬ ಬಗ್ಗೆ ಕೆಲವು ಸ್ಥೂಲ ತಾತ್ವಿಕ ಚರ್ಚೆಗಳನ್ನು ಮಾತ್ರ ಈ ಲೇಖನದಲ್ಲಿ ಮಾಡಲಾಗಿದೆ.

# ಭಕ್ತಿ ಸಾಹಿತ್ಯದ ಹಿನ್ನೆಲೆಯಲ್ಲಿ 'ಹರಿಭಕ್ತಿಸಾರ'

**ಸೀತಾರಾಮ ಜಾಗೀರ್‌ದಾರ್**

'ಹರಿಭಕ್ತಿಸಾರ' ಕವಿ ಕನಕದಾಸರ ತುಂಬ ಜನಪ್ರಿಯ, ಸರ್ವಜನಾದರಣೀಯ ಹಾಗೂ ಸರಳ ಶೈಲಿಯಲ್ಲಿರುವ ಭಾಮಿನಿಷಟ್ಪದಿಯಲ್ಲಿ ಬರೆದ ಸುಂದರ ಶತಕಗ್ರಂಥ. ಇದು ಹರಿಭಕ್ತಿಯ ಹಿರಿಮೆ ಗರಿಮೆಗಳನ್ನು ಹಾಗೂ ಆತ್ಮನ ಅನಿತ್ಯತಾಭಾವ ಮತ್ತು ಅನನ್ಯವಾದ ಶರಣಾಗತಿಯನ್ನು ಪ್ರದರ್ಶಿಸಿರುವ ಭಕ್ತಿಸಾರ :

> ಭಕ್ತಿಸಾರದ ಚರಿತೆಯನು ಹರಿ
> ಭಕ್ತರಾಲಿಸುವಂತೆ ರಚಿಸುವೆ
> ಯುಕ್ತಿಯಲಿ ಬರೆದೋದಿದವರಿಷ್ಟಾರ್ಥ ಸಿದ್ಧಿಪುದು ।
> ಮುಕ್ತಿಗಿದು ನೆಲೆದೋರುವುದು ಹರಿ
> ಭಕ್ತರಿದ ಲಾಲಿಪುದು ನಿಜಮತಿ
> ಭಕ್ತಿಗೊಲಿವಂದದಲಿ ರಕ್ಷಿಸು ನಮ್ಮನನವರತ ॥[೧]

ಹರಿಭಕ್ತರು ಹರಿಯ ಭಕ್ತಿಯನ್ನು ಕೇಳಲೆಂದು, ಅವರ ಭಕ್ತಿಗೆ ಇದು ಮುಕ್ತಿಯ ನೆಲೆಯಾಗಲೆಂದು, ಆಸಕ್ತಿಯಿಂದ ಈ ಕಾವ್ಯವನ್ನು ರಚಿಸುವೆ. ಇದನ್ನು ಯಾರು ಪ್ರತಿಮಾಡುತ್ತಾರೊ – ಇಷ್ಟದಿಂದ ಓದುತ್ತಾರೊ – ಅವರಿಗೆ ಅವರ

---

೧. 'ಹರಿಭಕ್ತಿಸಾರ' ಕೃತಿ ಅನೇಕರಿಂದ ಆಗಾಗ ಪ್ರಕಟಿಸಲ್ಪಟ್ಟಿದೆ :

(ಅ) ಉಡುಪಿಯ 'ಪಾವಂಜೆ ಗುರುರಾವ್ ಅಂಡ್ ಸನ್ಸ್' ಎಂಬ ಪ್ರಕಾಶಕರು ಇದರ ೧೪ಕ್ಕೂ ಹೆಚ್ಚು ಆವೃತ್ತಿಗಳನ್ನು ತಂದಿದ್ದಾರೆ.

(ಆ) ಹರಿಭಕ್ತಿಸಾರ – ಕನ್ನಡ ಸಾಹಿತ್ಯ ಪರಿಷತ್ತು ಇದರ ಮೂರು ಆವೃತ್ತಿಗಳನ್ನು ತಂದಿದೆ.

(ಇ) ಹರಿಭಕ್ತಿಸಾರ. (ಸಂ. ಪರಮೇಶ)

(ಈ) ಹರಿಭಕ್ತಿಸಾರ (ಜನಪ್ರಿಯ ಕನಕ ಸಂಪುಟ, ಸಂ. ಪ್ರೊ. ದೇಜಗೌ, ಪ್ರೊ. ಎಲ್. ಎಸ್. ಎಸ್. ರಾವ್, ಡಾ. ಡಿ. ಕೆ. ಹಕಾರಿ ಹಾಗೂ ಡಾ. ಎಚ್. ಜೆ. ಲಕ್ಕಪ್ಪಗೌಡ) ಕ. ಸಂ. ನಿರ್ದೇಶನಾಲಯ, ಬೆಂಗಳೂರು.

ಇಷ್ಟಾರ್ಥಗಳು ಸಿದ್ಧಿಸುತ್ತವೆ. ಈ ಕಾವ್ಯ ಮುಕ್ತಿಗೆ ನೆಲೆತೋರುವುದು, ಕಾರಣ ಇದನ್ನು ಪ್ರೀತಿಯಿಂದ ಲಾಲಿಸಬೇಕು (ಕವಿಃ ಕರೋತಿ ಕಾವ್ಯಾನಿ ಲಾಲಯತ್ಯುತ್ತಮೋ ಜನಃ). ನಮ್ಮ ಬುದ್ಧಿ ಭಕ್ತಿಗೆ ಒಲಿಯುವಂತೆ ಸದಾ ನಮ್ಮನ್ನು ರಕ್ಷಿಸು ದೇವ ಎಂದಿದ್ದಾರೆ – ಕನಕದಾಸರು. 'ಹರಿಭಕ್ತಿಸಾರ' ಕೃತಿಯ ಆಶಯ ಏನೆನ್ನುವುದು ಇಲ್ಲಿ ಸ್ಪಷ್ಟವಿದೆ.

'ಭಕ್ತಿ' ಭಾರತೀಯರ ಜೀವನದಿಯಲ್ಲಿ ಅನಂತ ಕಾಲದಿಂದಲೂ ಹರಿಯುತ್ತಿರುವ ಗಂಗೆಯಮುನಿಯರ ರಸಸಲಿಲ. ಆ ಬದರಿ, ಆ ಕೇದಾರ, ಆ ಕೈಲಾಸ, ಆ ಹಿಮಾಲಯದ ಗಿರಿಸಾನುಪಂಕ್ತಿಗಳಲ್ಲಿಯೆ ಹುಟ್ಟಿ ಹರಿಯುತ್ತಿರುವ, ಜನಸಾಗರವನ್ನು ಸೇರೆ ಸೇರುತ್ತಿರುವ, ಮಹಾನ್ ನಿರ್ಝರ. ಭಕ್ತಿಯ ಮೂಲ ನಮಗೆ ಇನ್ನೂ ಸಿಕ್ಕಿಲ್ಲ. ಅದರ ನಿಜಸ್ವರೂಪ ಹೀಗೆ ಹೀಗೆ ಎಂದು ಹೇಳಲು ಬರುವುದಿಲ್ಲ. ವೇದ್ಯ, ಉಪನಿಷತ್ತು ಮತ್ತು ಪುರಾಣ ಈ ಎಲ್ಲ ಕಾಲಗಳಲ್ಲಿಯೂ ಅದರ ಅಸ್ತಿತ್ವ ನಮಗೆ ಕಂಡು ಬರುತ್ತದೆ :

೧. ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೇ – ಋ. ೧೦–೧೫೬. ೩

೨. ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ ।
ತದನ್ತರಾ ಸರ್ವಾದೇವತಾಃ ॥–ಋ. ಐತರೇಯ ಬ್ರಾಹ್ಮಣ–೧

– ಕಠೋಪನಿಷತ್ತು

೩. ವಿಜ್ಞಾನ ಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ
ಸೋಽಧ್ವನ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂಪದಮ್ ॥

೪. ಓಂ॥ ಶಂ ನೋ ಮಿತ್ರಃ ಶಂ ವರುಣಃ ॥ ಶಂ ನೋ ಭವತ್ಯರ್ಯಮಾ ॥
ಶಂ ನೋ ಇನ್ದ್ರೋ ಬೃಹಸ್ಪತಿಃ ॥ ಶಂ ನೋ ವಿಷ್ಣುರುರು ಕ್ರಮಃ ॥
ನಮೋ ಬ್ರಹ್ಮಣೇ ॥ ನಮಸ್ತೇ ವಾಯೋ ॥ ತ್ವಮೇವ ಪ್ರತ್ಯಕ್ಷಂ
ಬ್ರಹ್ಮಾಸಿ॥ ತ್ವಾಮೇವ ಪ್ರತ್ಯಕ್ಷಂ ಬ್ರಹ್ಮವದಿಷ್ಯಾಮಿ ॥ ಋತಂ
ವದಿಷ್ಯಾಮಿ ॥ ಸತ್ಯಂ ವದಿಷ್ಯಾಮಿ ॥ ತನ್ಮಾಮವತು ॥ ತದ್ವಕ್ತಾರಮ
ವತು ॥ ಅವತು ಮಾಮ್ ॥ ಅವತು ವಕ್ತಾರಮ್ ॥

– ತೈತ್ತಿರಿಯೋಪನಿಷತ್

'ವಿಷ್ಣು' ದೇವತೆ ಎಂದು, ದೇವತೆಗಳೆಲ್ಲವೂ ಒಂದೇ ಎಂದು, ದೇವನೊಬ್ಬ ಹಲವು ನಾಮಗಳೆಂದು, ಉಪನಿಷತ್ ಕಾಲದಲ್ಲಿಯೆ ಗುರುತಿಸಲಾಗಿದೆ :

೧. ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ
ಏಕಂ ಸತ್ ವಿಪ್ರಾ ಬಹುಧಾ ವದನ್ತಿ । –ಋವೇ. ೧,೧೬೩, ೪೬

೨. ಯೋ ದೇವಾನಾಂ ನಾಮಧಾ ಏಕವವ – ಋವೇ. ೧೦, ೮೨, ೩

ಸರ್ವನಾಮವಂತನು ವಿಷ್ಣು. ಎಲ್ಲದಕ್ಕೂ ಆ ವಿಷ್ಣು ಆಶ್ರಯ. ಎಲ್ಲ ಸೃಷ್ಟಿಯೂ ಆ ವಿಷ್ಣುವಿನ ಮೂಲಕವೇ ಹುಟ್ಟಿದ್ದು :

೧. ಸಪ್ತಾರ್ಧಗರ್ಭಾ ಭುವನಸ್ಯರೇತೋ ವಿಷ್ಣೋ ತಿಷ್ಠನ್ತಿ ಪ್ರವಿಶಾವಿಧರ್ಮಣಿ ॥ ಋವೇ. ೧, ೧೬೪, ೩೬

೨. ಇತಿ ಹಿ ವಿಷ್ಣೋರ್ಲಿಙ್ಗಮ್ – ಮಧ್ವಾಚಾರ್ಯ ಬ್ರಹ್ಮಸೂತ್ರ ಭಾಷ್ಯ.

ಆಚಾರ್ಯತ್ರಯರು, ವಚನಕಾರರು ಮತ್ತು ಸಂತರು, ಕನಕದಾಸರು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಕಾಲಿರಿಸುವ ಹೊತ್ತಿಗೆ ಆಗಲೆ ಹುಟ್ಟಿ ಹಲವು ಶತಮಾನಗಳೇ ಆಗಿ ಹೋಗಿತ್ತು. ಕವಿ ತನ್ನ ಪರಿಸರದ ಕೂಸು. ಕನಕದಾಸರೂ ಇದಕ್ಕೆ ಹೊರತಲ್ಲ. ಅವರಲ್ಲೂ ವಿದ್ವದ್ಕವಿಗಳಲ್ಲೊಬ್ಬರಾದ ಕನಕದಾಸರು ತಮ್ಮ ಮೇಲೆ ಬೀರಿದ ಸಂಸ್ಕೃತ ಕನ್ನಡ ಸಾಹಿತ್ಯ ಕೃತಿಗಳ ಪ್ರಭಾವವನ್ನು ಅಲ್ಲಲ್ಲಿ ಪ್ರತಿಫಲಿಸಿದ್ದರೆ – ಅಲ್ಲಿನ ವಿಚಾರ ಧಾರೆಗಳನ್ನು ತಮ್ಮ ಮನೋಮುಕುರದಲ್ಲಿ ಪ್ರತಿಬಿಂಬಿಸಿಕೊಂಡಿದ್ದರೆ – ಆಶ್ಚರ್ಯ ಪಡುವಂತಹದೇನಿಲ್ಲ. 'ವಿಷ್ಣು' 'ವಿಷ್ಣುವಿನ ಅವತಾರಗಳು' ಎಲ್ಲವೂ ಹರಿಸ್ವರೂಪ; ನಾಮಾಮೃತ ಸಮುದ್ರ. ಆ ವಿಷ್ಣುವನ್ನು ಕನಕದಾಸರು ತಮ್ಮ ಆರಾಧ್ಯ ದೇವತೆಯೆಂದು ಎಲ್ಲ ಬರವಣಿಗೆಗಳಲ್ಲೂ ಸಾರಿದ್ದಾರೆ ; ಪ್ರಸ್ತುತ 'ಹರಿಭಕ್ತಿಸಾರ'ದಲ್ಲೂ ೧೦೮ ಪದ್ಯಗಳಲ್ಲಿ "ರಕ್ಷಿಸು ನಮ್ಮನನವರತ" ಎಂದು ಪರಮಾತ್ಮನನ್ನು ಪ್ರಾರ್ಥಿಸಿದ್ದಾರೆ ಮತ್ತು ಕೊನೆಯಲ್ಲಿ ಮೂರು ಮಂಗಳ ಪದ್ಯಗಳನ್ನು ಹೇಳಿದ್ದಾನೆ[೨].

ಭಾಗವತೋತ್ತಮರಾದ ಕನಕದಾಸರು ಹರಿದಾಸ ವೇದಿಕೆಗೆ ಬರುವ ಮುಂಚೆಯೇ ಈ ವೇದಿಕೆ ಸಹಸ್ರಾರು ವರ್ಷಗಳಿಂದ ಲಕ್ಷಾವಧಿ ಭಕ್ತರಿಗೆ ಆಸರೆಯಾಗಿನಿಂತ ವೇದಿಕೆಯೆಂಬುದು ಇತಿಹಾಸದ ಪುಟಗಳನ್ನು ಇನಿತು

೨. ಈ ಮಂಗಳ ಪದ್ಯಗಳಿಗೆ ಬೇರೆ ಅಂಕೆಗಳನ್ನು ಕೊಟ್ಟಿರುವುದು ಓದುಗನಲ್ಲಿ ಒಂದು ಬಗೆಯ ಗೊಂದಲವನ್ನು ಸೃಷ್ಟಿಸುತ್ತದೆ. ಇವು ಕನಕದಾಸರು ಬರೆದುವೊ ಅಥವಾ ಬೇರೆ ಯಾರಾದರೂ ಬರೆದು ಸೇರಿಸಿದವೊ ಹೀಗೆ ಎಂದು ಹೇಳಲು ಬರುವುದಿಲ್ಲ. 'ರಕ್ಷಿಸು ನಮ್ಮನನವರತ' ಎಂಬ ಮುದ್ರಿಕೆಯು ೧೦೨ ಪದ್ಯಗಳವರೆಗೆ ಮಾತ್ರ ಕಂಡುಬರುತ್ತದೆ ; ಮುಂದಿನ ಪದ್ಯಗಳನ್ನೂ ಮೂಲ ಕೃತಿಗೆ ಸೇರಿಸಿದಂತೆ ಈ ಮೂರು ಮಂಗಳ ಪದ್ಯಗಳನ್ನೂ ಸೇರಿಸಬಹುದಾಗಿತ್ತು. ಮಂಗಲಾಚರಣವು ಆದಿಯಲ್ಲಿ ಮಧ್ಯದಲ್ಲಿ ಮತ್ತು ಅಂತ್ಯದಲ್ಲಿ ಬರುವುದು ಲೋಕರೂಢಿ. ಬೇಲೂರ ಕೇಶವದೇವರ ಸ್ತುತಿ ಇವುಗಳಲ್ಲಿ ಇರುವುದರಿಂದ ಮೂಲಕೃತಿಯಿಂದ ಇವನ್ನು ಜನತೆ ಆಗಾಗ ಬಳಸುವುದರಿಂದ ಬೇರೆ ಎಂಬ ಭಾವವು ನಿಂತಿತೆ? ಕೆಲವರು ಇವುಗಳನ್ನು ಸಂಪೂರ್ಣ ಕೈಬಿಟ್ಟಿದ್ದಾರೆ ; ಇತ್ತೀಚಿನ ಆವೃತ್ತಿಗಳಲ್ಲಿ.

ತೆರೆದರೆ ಕಂಡುಬರುತ್ತದೆ. ಕ್ರಿ.ಪೂ. ೩೧೦೧ ವರ್ಷಕ್ಕೆ ಸರಿಹೊಂದುವ ಕಲಿವರ್ಷದಲ್ಲಿ ಕೃಷ್ಣ ಬದುಕಿದ್ದ. ಏಕೆಂದರೆ ಆಗ ಮಹಾಭಾರತ ಯುದ್ಧವು ಜರುಗಿತ್ತೆಂದು ಐಹೊಳೆಯ ಶಾಸನವು ತಿಳಿಸುತ್ತದೆ.[೩] ಈ ಕೃಷ್ಣನನ್ನು ಜನತೆ ದೈವದ ಪಟ್ಟಕ್ಕೇರಿಸಿ ವಿಷ್ಣುವಿನ ಅವತಾರವೆಂದು ಪರಿಗಣಿಸಿದುದು ಕ್ರಿ. ಪೂ. ಸುಮಾರು ಮೂರನೆಯ ಶತಮಾನಕ್ಕಿಂತ ಮುಂಚೆ.[೪] ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ವಾಸುದೇವನನ್ನು ವಿಷ್ಣುವಿನೊಂದಿಗೆ ಸಮೀಕರಿಸಿದುದು ಕಂಡುಬರುತ್ತದೆ.[೫] ಕೃಷ್ಣ, ಸಂಕರ್ಷಣ, ರಾಮ, ಕೇಶವ ಹಾಗೂ ಜನಾರ್ದನ ದೇವತೆಗಳ ಮತ್ತು ದೇವಾಲಯಗಳ ಉಲ್ಲೇಖಗಳು ಪತಂಜಲಿ ಋಷಿಗಳ ಭಾಷ್ಯದಲ್ಲಿ ಕಂಡುಬರುತ್ತದೆ. ಭಾಗವತದ ಉಲ್ಲೇಖವೂ ಬಂದಿದ್ದು ಅದೂ ಸಾಕಷ್ಟು ಪುರಾತನವೆಂಬುದು ಸ್ಪಷ್ಟ.[೬] ವಾಸುದೇವನಿಗೆ ದೇವಾಲಯವಿದ್ದ ಸಂಗತಿಯೊಂದು ಶಾಸನದಿಂದ ತಿಳಿದು ಬರುತ್ತದೆ[೭]. ಅರ್ಥಶಾಸ್ತ್ರದಲ್ಲಿ ಕೃಷ್ಣ ಕಂಸರ ಕಥಾನಕದ ಪ್ರಸ್ತಾಪವಿದೆ. ವಿಷ್ಣು (ಅಪ್ರತಿಹತ) ದೇವನಿಗೆ ದೇವಾಲಯಗಳನ್ನು ಕಟ್ಟಿಸುವ ಬಗ್ಗೆ ಆದೇಶಗಳು–ನಿರ್ದೇಶನಗಳು ಇವೆ.[೮] ಕ್ರಿ. ಪೂ. ೨ನೆಯ ಶತಮಾನದ ಹೊತ್ತಿಗೆ ವಿಷ್ಣು, ವಾಸುದೇವ, ರಾಮ, ಸಂಕರ್ಷಣ ಹಾಗೂ ಕೇಶವ – ಈ ಎಲ್ಲ ಒಂದು ದೇವತೆಯ ಸ್ವರೂಪಗಳು. ಆ ಭಗವಂತನು ಅನಂತ, ದಯಾಮಯ, ಅಮರ ಮತ್ತು ಅವನ ಬಳಿಯಲ್ಲಿ ಶಾಶ್ವತವಾದ ಆನಂದವನ್ನು ಪಡೆಯುವುದೇ ಮುಕ್ತಿ. ವಿಷ್ಣುವೇ ಭಗವಂತ ; ವಿಷ್ಣುವಿನ 'ಧರ್ಮವೇ ವೈಷ್ಣವಧರ್ಮ' ಅಂತೆಯೆ ಭಗವಂತನ ಧರ್ಮ 'ಭಾಗವತ'. ಅರ್ಥಾತ್ ವೈಷ್ಣವಧರ್ಮ ಹಾಗೂ ಭಾಗವತಧರ್ಮ ಇವು ಒಂದೇ ಧರ್ಮದ ಎರಡು ಹೆಸರುಗಳು. ವೇದ, ರಾಮಾಯಣ, ಮಹಾಭಾರತ ಹಾಗೂ ಪುರಾಣಗಳಲ್ಲಿ ಆದಿ, ಮಧ್ಯ ಹಾಗೂ ಅಂತ್ಯಗಳಲ್ಲಿ ವಿಷ್ಣು ಸ್ತುತಿ ಇದೆಯೆಂದೆ

---

೩. ಎಪಿ. ಇಂ. ಸಂ. ೬, ಐಹೊಳೆಯಲ್ಲಿರುವ ರವಿಕೀರ್ತಿಯ ಶಾಸನ. ಈ ಶಾಸನದ ಕಾಲ ಕ್ರಿ.ಶ. ೬೩೪ (ಶಾ. ಶ. ೫೫೬ ಮತ್ತು ಕಲಿವರ್ಷ ೩೭೩೫)

೪. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಡಾ. ಎಂ. ಚಿದಾನಂದಮೂರ್ತಿ) ಪು. ೧೬೨ (೧೯೬೬)

5. India As Known To panini (Dr. V. S. Agrawala) pp. 361-362

೬. ಅದೇ. ಪು. ೩೬೨

೭. ಎಪಿ. ಇಂ. ಸಂ. XXII, ನಗರಿ ಶಾಸನ, ಪು. ೧೯೮ ಇತ್ಯಾದಿ.

೮. ಅರ್ಥಶಾಸ್ತ್ರ, II. ೪ (ಸಂ. ಡಾ. ಶಾಮಾಶಾಸ್ತ್ರಿ).

ಹರಿವಂಶವು ಸಾರಿದೆ ;

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ಕಥಾ

ಅದಾವನ್ತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥[೯]

ಸಾಮಾನ್ಯವಾಗಿ ತತ್ವ ಚಿಂತನ ಎಲ್ಲೋ ಕೆಲವರಿಗೇ ಇಷ್ಟವಾಗಿ ತೋರುತ್ತದೆ. ಆದರೆ ಹೆಚ್ಚು ಜನ 'ತೃಪ್ತಜೀವನ' ನಡೆಸುವುದರಲ್ಲೇ ಇಷ್ಟಪಡುತ್ತಾರೆ. ಇಲ್ಲದ್ದನ್ನು ಕಟ್ಟಿಕೊಂಡು ಏನೂ ಮಾಡಬೇಕಾಗಿರುವುದಿಲ್ಲ. ಎಲ್ಲೋ ಒಬ್ಬ ಮೈತ್ರೇಯೀ, ಒಬ್ಬ ಜಾಬಾಲ (ಸತ್ಯಕಾಮಜಾಬಾಲ), ಜಾನಶ್ರುತಿ ಪೌತ್ರಾಯಣ (ಈತ ಶೂದ್ರ) ಎಂಬವನೂ ಒಬ್ಬ. ಎಲ್ಲರಿಗೂ ಎಲ್ಲವನ್ನು ಅರ್ಥಮಾಡಿಕೊಳ್ಳುವ ತಾಕತ್ತಾದರೂ ಎಲ್ಲಿ ಇರುತ್ತದೆ? ಶತಮಾನಗಳಲ್ಲಿ ಭಾಗವತಧರ್ಮ ಪ್ರವಹಿಸಿಕೊಂಡು ಬಂದಿತು. ಬಾದಾಮಿಯಲ್ಲಿ ವೈಷ್ಣವ ಗುಹೆಯನ್ನು ಕೊರೆಯಿಸಿದ ಮಂಗಲೇಶ ಚಕ್ರವರ್ತಿ ತನ್ನನ್ನು 'ಮಹಾಭಾಗವತ'[೧೦] 'ಪರಮಭಾಗವತ' ಮತ್ತು 'ಪರಮ ಮಾಹೇಶ್ವರ' ಎಂದು ಮುಂತಾಗಿ ಹೇಳಿಕೊಂಡಿದ್ದಾನೆ. ಭಾಗವತ ಧರ್ಮ ಕರ್ನಾಟಕದಲ್ಲಿ ಇದ್ದಿತೆನ್ನುವದರಲ್ಲಿ ಸಂಶಯವಿಲ್ಲ. ಅತ್ತಿಮಬ್ಬೆಯ ಲಕ್ಕುಂಡಿಯ ಶಾಸನದಲ್ಲಿ ಆ ಊರಿನಲ್ಲಿ 'ವೈಷ್ಣವಗೀತೆ ಮನೋಹರರು' ಇದ್ದರೆಂದು ಬರೆದಿದೆ.[೧೧] ಭಾಗವತಧರ್ಮ, ಕರ್ನಾಟಕಕ್ಕೆ, ಕನ್ನಡ ಜನತೆಗೆ, ಬಹಳ ಪ್ರಾಚೀನ ಕಾಲದಿಂದ ಪರಿಚಿತ. ವಿಠ್ಠಲನ ಅಸ್ತಿತ್ವ ಕರ್ನಾಟಕದಲ್ಲಿ ಕ್ರಿ.ಶ. ೫–೬ನೆಯ ಶತಮಾನಕ್ಕೆ ಮುಂಚೆಯೆ ಇದ್ದುದು ಅವಿಧೇಯನ ಪಂಡರಂಗಪಲ್ಲಿ (ಪಂಢರಪುರ) ಶಾಸನದಲ್ಲಿ ಸ್ಪಷ್ಟವಿದೆ;[೧೨] ರಂಗನನ್ನು 'ವಸುಧಾಧಿಪತಿ' ಎಂದು ಅದರಲ್ಲಿ ಬರೆದಿದೆ.

ಈ ಭಾಗವತಧರ್ಮ ಶ್ರೀವೈಷ್ಣವ ಪಂಥದ ರಾಮಾನುಜಾಚಾರ್ಯರಿಂದ ಹಾಗೂ ಸಂಪೂರ್ಣದ್ವೈತವನ್ನು ಪ್ರಸಾರಗೈದ ಮಧ್ವಾಚಾರ್ಯರಿಂದ ಇನ್ನಷ್ಟು ಸಾಂದ್ರವಾಗಿ ಜನತೆಯಲ್ಲಿ ಬೇರೂರಿತು. ಶ್ರೀ ಶಂಕರಭಗವತ್ಪಾದರ ನಿರ್ಗುಣ ಬ್ರಹ್ಮವೂ ಇದರಲ್ಲಿ ಐಕ್ಯವಾದುದು ಮಹಾನುಭಾವ ಪಂಥದಿಂದ ವಿಶದವಾಗಿದೆ.

---

೯. ಹರಿವಂಶ, iii. ೩೨೩, ೩೪

೧೦. (a) IA. III, p. 305

(b) ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೬೯ ಹಾಗೂ ಪು. ೪೬೪ (ಪೂರ್ವೋಕ್ತ).

೧೧. (a) ಅದೇ. ಪು. ೧೬೫

(b) B. K. I. I. Pt. I (S.I.I. Vol. XI) No. 52, ಕ್ರಿ. ಶ. ೧೦೦೭

೧೨. MAR 1929

ಭಗವಂತನು ಭಾಗವತರನ್ನು ಸಲಹುತ್ತಾನೆ. ತನ್ನ ಮಡದಿ ಲಕ್ಷ್ಮಿಗೂ ತಿಳಿಯದ ಹಾಗೆ ಓಡಾಡಿ ಭಕ್ತರನ್ನು ಆತ ಸಲಹುತ್ತಾನೆ. ಅಂತಹ ಆತ ನಮ್ಮನ್ನು ಸದಾ ರಕ್ಷಿಸಬೇಕು. ಇದೇ ಆತ್ಮಪ್ರಾರ್ಥನೆ ಕನಕದಾಸರ ಕೆಳಗಿನ ಪದ್ಯದಲ್ಲಿ ಸುವ್ಯಕ್ತ ;

ಸಾಗರನ ಮಗಳರಿಯದಂತೆ ಸ
ರಾಗದಲಿ ಸಂಚರಿಸುತಿಹ ವು
ದ್ಯೋಗವೇನು ನಿಮಿತ್ತ ಕಾರಣವಿಲ್ಲ ಲೋಕದಲಿ ।
ಭಾಗವತರಾದವರ ಸಲಹುವ
ನಾಗಿ ಸಂಚರಿಸುವುದು ಈ ಭವ
ಸಾಗರದಿ ಮುಳುಗಿಸದೆ ರಕ್ಷಿಸು ನಮ್ಮನನವರತ ॥

ಸಾಧನಾನಿರತರಾದ ಕನಕದಾಸರು ಪರಮಾತ್ಮನಲ್ಲಿ ಯಾವ ಬಗೆಯ ಭಕ್ತಿಯನ್ನು ಅಭಿವ್ಯಕ್ತಿಪಡಿಸಿದರು ಈ ಪ್ರಶ್ನೆಗೆ ಅವರ ಸಾಹಿತ್ಯದಲ್ಲಿ ಕೀರ್ತನೆಗಳು ಮತ್ತು 'ಹರಿಭಕ್ತಿಸಾರ' ವಿಶೇಷ ಬೆಳಕನ್ನು ಚೆಲ್ಲುತ್ತವೆ.

ಅಧ್ಯಾತ್ಮ ಪಥದಲ್ಲಿ ಅವರದು ಭಾಗವತ ಮನೋಧರ್ಮ, ಭಾಗವತದಲ್ಲಿ ಭಕ್ತಿಯುಳ್ಳ ಅವರು ಅದರ ಸಂಗತಿಗಳನ್ನು ಅಲ್ಲಿಯ ತತ್ವವನ್ನು ಜಿಗಿಲ್ತು ಹಿಡಿದಿದ್ದಾರೆ. ಭಾಗವತದಲ್ಲಿ ಭಕ್ತಿಯನ್ನು ಒಂಬತ್ತು ವಿಧವಾಗಿ ವಿವರಿಸಿದೆ :

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ ॥[೧೩]

ಹರಿಭಕ್ತಿಸಾರದಲ್ಲಿ ಕನಕದಾಸರು ತಮ್ಮ ಪಥವನ್ನು ಹೀಗೆ ವಿವರಿಸಿದ್ದಾರೆ:

ಕೇಳುವುದು ಹರಿಕಥೆಯ ಕೇಳಲು
ಹೇಳುವುದು ಹರಿಭಕ್ತಿ ಮನದಲಿ
ತಾಳುವುದು ಹಿರಿದಾಗಿ ನಿನ್ನಯ ಚರಣಸೇವೆಯಲಿ ।
ಊಳಿಗವ ಮಾಡುವುದು ವಿಷಯವ
ಹೂಳುವುದು ನಿಜಮುಕ್ತಿಕಾಂತೆಯ
ನಾಳುವುದು ಕೃಪೆಮಾಡಿ ರಕ್ಷಿಸು ನಮ್ಮನನವರತ ॥

ದಾಸರ ಈ ಪದ್ಯ ಮೇಲಿನ ಭಾಗವತದ ಪದ್ಯಕ್ಕೆ ಕನ್ನಡದಲ್ಲಿ ಸರಳವ್ಯಾಖ್ಯಾನವನ್ನು ಬರೆದಂತಿದೆ. ಶ್ರವಣ, ಕೀರ್ತನ, ಸ್ಮರಣ, ಅರ್ಚನ, ವಂದನ, ಚರಣಸೇವನ, ದಾಸ್ಯ (ಊಳಿಗವ ಮಾಡುವುದು), ಸಖ್ಯ (ವಿಷಯ

---

೧೩. ಭಾಗವತ, ೭–೫–೨೩.

ಹೂಳುವುದು[೧೪]) ಹಾಗೂ ನಿಜಮುಕ್ತಿ ಕಾಂತೆಯನಾಳುವುದು. 'ನಿಜಮುಕ್ತಿ' ಆತ್ಮನಿವೇದನೆಯಲ್ಲಿದೆ. ಮುಕ್ತಿಯು ದೊರೆಯಬೇಕಾದರೆ ಆತ್ಮನಿವೇದನೆಯು ಬೇಕೇಬೇಕು. ಸಂಪೂರ್ಣ ಸಮರ್ಪಣಾವಸ್ಥೆ ಇರದಿದ್ದರೆ ಚಂಚಲತೆಗೆ ಎಡೆದೊರೆತು ವಿಹ್ವಲಕ್ಕೆ ಕಾರಣವಾಗುತ್ತದೆ. ವಿಹ್ವಲತೆ ವಿಷಾದಕ್ಕೆ ಎಡೆಕೊಡುತ್ತದೆ. ವಿಷಾದ ನೋವಿಗೆ ನೆಲೆಯಾಗುತ್ತದೆ. ನೋವು ಅಸಹನೀಯ. ಅಸಹನೀಯತೆ ವಿನಾಶಕ್ಕೆ ಕಾರಣವಾಗುತ್ತದೆ. ಆದುದರಿಂದ ಸಹನೆ–ಸಹಿಸುವುದು–ಭಕ್ತಿಯಲ್ಲಿ ಅನಿವಾರ್ಯ. ಅರ್ಥಾತ್ ವ್ಯಕ್ತಿ ಗಟ್ಟಿಮನಸ್ಸಿನಿಂದ ಆತ್ಮ ಸಮರ್ಪಣೆಯನ್ನು ಮಾಡಿಕೊಳ್ಳಬೇಕಾಗುತ್ತದೆ. ತನ್ನ ಆರಾಧ್ಯದೇವತೆ ಹಾಗೂ ಅದರ ಸಹಸ್ರರೂಪಗಳನ್ನು ಬಿಟ್ಟು ಇತರ ದೇವತೆಗಳನ್ನು ಅವುಗಳ ಸ್ವರೂಪವನ್ನು ತ್ಯಜಿಸಬೇಕಾಗುತ್ತದೆ. ವೀರಶೈವದ ಪರಿಭಾಷೆಯಲ್ಲಿ, ಷಟ್ಸ್ಥಲಸಿದ್ಧಾಂತದ ಮಾರ್ಗದಲ್ಲಿ, ಈ ಭಕ್ತಿಯನ್ನು ನಿಷ್ಠಾ ಭಕ್ತಿ ಇಲ್ಲವೆ 'ಮಹೇಶ್ವರ ಸ್ಥಲ' ಎಂದು ಹೇಳಬಹುದು. ನಿಷ್ಠೆ ಏಕೆ ಅವಶ್ಯಕವೆಂದರೆ ಮನುಷ್ಯನಿಗೆ ಸಾಮಾನ್ಯವಾಗಿ ಆರಂಭದಲ್ಲಿರುವ ಉತ್ಸಾಹ ಶ್ರದ್ಧೆಗಳು ಕಾಲಕ್ರಮದಲ್ಲಿ ಕಡಿಮೆಯಾಗಿ ಕೊನೆಗೆ ಅದೃಶ್ಯವೇ ಆಗಬಹುದೆಂದು ಹೇಳಬಹುದು.

ಬಸವಣ್ಣನವರು "ಬರಬರ ಭಕ್ತಿ ಮರೆಯಾಯಿತ್ತು ಕಾಣಿರಣ್ಣಾ ! ಮೊದಲ ದಿನ ಹಣೆಮುಟ್ಟಿ, ಮರುದಿನ ಕೈಮುಟ್ಟಿ ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ, ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ, ಅಲ್ಲದಿದ್ದರೆ ನಡುನೀರಲದ್ದುವ ನಮ್ಮ ಕೂಡಲಸಂಗಮದೇವ" ಎಂದು ಹೇಳಿದ್ದಾರೆ. ಮತ್ತೆ ಈ ನಿಷ್ಠೆಯು ಹೇಗಿರಬೇಕೆಂದರೆ ಇನ್ನೊಂದು ವಚನದಲ್ಲಿ ಹೀಗೆ ವಿವರಿಸಿದ್ದಾರೆ :

ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ ; ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ ; ಛಲಬೇಕು ಶರಣಂಗೆ ಪರದೇವವನೊಲ್ಲೆನೆಂಬ ; ಛಲಬೇಕು ಶರಣಂಗೆ ಲಿಂಗಜಂಗಮ ಒಂದೆಂಬ ; ಛಲಬೇಕು ಶರಣಂಗೆ ಪರವಾದಿ ನಿಗ್ರಹದಲ್ಲಿ ; ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ. ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವಯ್ಯ.

---

೧೪. 'ವಿಷಯವ ಹೂಳುವುದು' ಈ ಘಟಕ ತುಂಬ ಧ್ವನಿಪೂರ್ಣವಾಗಿದೆ. ಇಲ್ಲಿ ವಿಷಯವನ್ನು ನಾಶಮಾಡುವ ಎಂಬ ಅರ್ಥವು ಮೇಲುನೋಟಕ್ಕೆ ಸರಿಯೆಂದು ಕಾಣಬಹುದು. ಆದರೆ ಇಲ್ಲಿನ ಅರ್ಥ ಇದಕ್ಕೆ ವಿಪರೀತವಾಗಿದೆ. ವಿಷಯ = ಆಶ್ರಯ ಮತ್ತು ಹೂಳುವುದು = ನೆಡುವುದು – ಈ ಅರ್ಥಗಳನ್ನು ಗ್ರಹಿಸಿದರೆ ಇಲ್ಲಿ 'ಸಖ್ಯ' ಎಂಬ ಭಕ್ತಿಯು ಧ್ವನಿಸುತ್ತದೆ. "ವಿಷಯ ಆಶ್ರಯೇ ಕ್ಷಿಪಾಯಾಂ ಕ್ಷೇಪಣಂ = Refuge and Inducing" ಎಂಬ ಅರ್ಥಗ್ರಹಣೆಯು ಅವಶ್ಯ.

ಭಕ್ತನು ಹೀಗೆ ವೀರವ್ರತಾಚಾರಿಯಾಗಿ ಸಾಧನೆಯನ್ನು ಮಾಡದಿದ್ದರೆ, ಆತ ತನ್ನ ಮೈ, ಮನಸ್ಸು, ಕಣ್ಣು, ಕೈ ಹಾಗೂ ಕಿವಿ ಅರ್ಥಾತ್ ಇಂದ್ರಿಯಗಳನ್ನು ಆರಾಧ್ಯ ದೇವತೆಯ ಆರಾಧನೆಯಲ್ಲಿ ಮೀಸಲಾಗಿರಿಸದೆ ನಡೆದುಕೊಂಡರೆ ವ್ರತಭಂಗವಾಗುತ್ತದೆ. ಮನುಷ್ಯನ ಇಂದ್ರಿಯಗಳು ಮನಬಂದತ್ತ ಹರಿಹಾಯುತ್ತವೆ. ಬ್ರಹ್ಮರ್ಷಿಯಾಗಲು ಹೊರಟ ವಿಶ್ವಾಮಿತ್ರ ಮೇನಕೆಯಲ್ಲಿ ಸಂಸಾರವನ್ನು ಹೂಡಿದ! ಸಾಧಕನಿಗೆ ಒದಗುವ ಭಂಗಗಳು ವಿಚಿತ್ರವಾದುವು. 'ಶ್ರೇಯಾಂಸಿ ಬಹು ವಿಘ್ನಾನಿ' ಎಂಬುದು ಲೋಕೋಕ್ತಿ. ಈ ವಚನ ವಾಙ್ಮಯದ ಪರಿಚಯ ಕನಕದಾಸರಿಗೆ ಇದ್ದಿತು. ಒಂದು ಉದಾಹರಣೆಯಿಂದ ಇದು ಸ್ಪಷ್ಟವಾಗಬಹುದು:

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನಿಸಿರದೆ ॥
ಎಂಜಲೆಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೆ ದೇವ ರಕ್ಷಿಸು ನಮ್ಮನನವರತ ॥

ಕನಕದಾಸರ ಈ ಪದ್ಯವನ್ನು ಬಸವಣ್ಣನವರ ವಚನದೊಂದಿಗೆ ಹೋಲಿಸಿ ನೋಡೋಣ:

ಹಾಲೆಂಜಲು ಪೆಯ್ಯನ ; ಉದಕವೆಂಜಲ ಮತ್ಸ್ಯದ ;
ಪುಷ್ಪವೆಂಜಲು ತುಂಬಿಯ, ಎಂತು ಪೂಜಿಸುವೆನಯ್ಯಾ
ಶಿವಶಿವ ಎಂತು ಪೂಜಿಸುವೆ ?
ಈ ಎಂಜಲವನತಿಗಳೆವಡೆ ಎನ್ನಳವಲ್ಲ
ಬಂದುದ ಕೈಕೊ, ಕೂಡಲಸಂಗಮದೇವಾ ॥[೧೫]

'ಹಾಲು ಕರುವಿನ ಎಂಜಲು' ಮತ್ತು 'ಹಾಲೆಂಜಲು ಪೆಯ್ಯನ' ಇವುಗಳಲ್ಲಿ ಇರುವ ಭಾವ ಒಂದೇ. ಇಬ್ಬರ ಪ್ರಶ್ನಿಸುವ ಬಗೆಯೂ ಒಂದೇ. ಈ ಮಾಹೇಶ್ವರ ಭಕ್ತಿಯ ಸ್ಥಲದಲ್ಲಿ ನಿಂತ ಕನ್ನಡದ ಇನ್ನೊಬ್ಬ ಶ್ರೇಷ್ಠಕವಿ ಹರಿಹರ ಎರಡು ಶತಕಕಾವ್ಯಗಳನ್ನು ಬರೆದಿದ್ದಾನೆ. ಅವೆಂದರೆ 'ರಕ್ಷಾಶತಕ' ಮತ್ತು 'ಪಂಪಾಶತಕ'. 'ಹರಿಹರನ ಈ ಎರಡೂ ಶತಕಗಳು ಅವನ ನೇರವಾದ ಆತ್ಮಕಥನಗಳಾಗಿವೆ.

---

೧೫. ಬಸವಣ್ಣನವರ ಷಟ್‌ಸ್ಥಳದ ವಚನಗಳು (ಸಂ. ಪ್ರೊ. ಶಿ. ಶಿ. ಬಸವನಾಳ) ಪು. ೨೩೭. ಈ ಬಗೆಯ ವಚನಗಳು ಬಸವಣ್ಣನವರ ವಚನಗಳಲ್ಲಿ ಇನ್ನೂ ಕೆಲವಿದೆ.

ಅವನು ಹಂಪೆಯ ವಿರೂಪಾಕ್ಷನಲ್ಲಿ ತಳೆದ ಭಕ್ತಿ ಭಾವಾವೇಶವಾಗಿ ವೀರನಿಷ್ಠೆಯಾಗಿ ಸಮರ್ಪಣೆಯಾಗಿ ಹೊರಹೊಮ್ಮಿದೆ'. ಪ್ರಸ್ತುತ ನಮಗೆ 'ರಕ್ಷಾಶತಕ' ಮುಖ್ಯವಾದ ಕೃತಿ. 'ರಕ್ಷಾಶತಕ' ೧೦೧ ಪದ್ಯಗಳಲ್ಲಿ ಪ್ರತಿಯೊಂದು ಪದ್ಯವೂ 'ಪಂಪಾಪುರದರಸ ವಿರೂಪಾಕ್ಷ ರಕ್ಷಿಪುದೆನ್ನಂ' ಎಂದು ಪರಮಾತ್ಮನನ್ನು ಸ್ತುತಿಸುವ ಸ್ತುತಿಯಾಗಿದೆ. ಸ್ರಗ್ಧರಾ ಮಹಾಸ್ರಗ್ಧರಾ ಛಂದೋಬಂಧಗಳಲ್ಲಿ ಈ ಸ್ತುತಿ ತರಂಗಿಣಿಯು ಹರಿದಿದೆ. ಸ್ರಗ್ಧರಾ ಮಹಾಸ್ರಗ್ಧರಾ ಛಂದೋಬಂಧಗಳಲ್ಲಿ ಈ ಸ್ತುತಿ ತರಂಗಿಣಿಯು ಹರಿದಿದೆ. ಭಕ್ತಿರಸದ ಉತ್ಕಟತೆ – ತನ್ಮಯತೆಗಳು, ಕೊರಗು – ಕಳವಳಗಳು ಮತ್ತು ಉದ್ಗಾರ ಪುನರುಕ್ತಿಗಳ ವಿಶಿಷ್ಟವಾದ ಶೈಲಿ, ಓದುಗನಲ್ಲೂ ಆ ತನ್ಮಯತೆಯನ್ನು ಸೃಷ್ಟಿಸುತ್ತದೆ. ಸಂಸಾರ ಹೇಯಭಾವ ಇಲ್ಲಿ ತುಂಬಿತುಳುಕಿದೆ. ಈ ನರಜನ್ಮ ಜೀವನದಲ್ಲಿ ಏನೇನು ಅವಸ್ಥೆ ಪಟ್ಟಿದೆ ಏನೇನು ಯೋನಿಯಲ್ಲಿ ಸಂಚರಿಸಿದೆ ಮತಿವಿಕಳತೆಯಿಂದ ಎಷ್ಟೆಷ್ಟು ಕಷ್ಟಪಟ್ಟಿದೆ – ಪಡುತ್ತಲಿದೆ ಎಂಬುದನ್ನು ಕವಿ ವಿವರಿಸಿದ್ದಾನೆ. ಆ ಪದ್ಯಗಳನ್ನು ಓದುವಾಗ ಉಂಟಾಗುವ ಆನಂದವೇ ಬೇರೆ ॥

ಶ್ರೀಮದ್‌ಗಂಗಾತರಂಗಾವೃತ ವಿಮಲಜಟಾಜೂಟ ಸರ್ವೇಶ ಗೌರೀ
ವಾಮಾಂಗಾಲಿಂಗನಾಲಿಂಗಿತ ಘನಮಹಿಮೋದಾರಚಾರಿತ್ರ ಚಂಚತ್
ಸೋಮಾರ್ಧೋತ್ತಂಸ ಸಂಸಾರಜಲಧಿವಡಬಾಕಾರಸಾಕಾರ ಭಕ್ತಿ
ಪ್ರೇಮಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥
ತಿರುಗುತ್ತೆಂಬತ್ತು ನಾಲ್ಕುಂ ದಶಶತಶತಜನ್ಮಂಗಳೊಳ್ ಪುಟ್ಟಿ ನಿಮ್ಮೊಂ
ದಿರವಂತಿಂತುಟೆಂದೇನುಮನಜೆಯದೆ ಮಣ್ಣಾಗಿ ಕಲ್ಲಾಗುತುಂ ದು
ರ್ಧರಗುಲ್ಮಂ ಭೂರೀಭೂಜಂ ಪುಳುಖಗ – ಮೃಗವಾಗುತ್ತುಮೆಂತಕ್ಕೆಬಂದೆಂ
ನರಜನ್ಮಕ್ಕಯ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥
ಬಸಿಱೊಳ್ ಮಾಸೊತ್ತಿ ನೆತ್ತರ್ ಪೆಸರಿಸಿಕರುಳಿಂ ಸುತ್ತಿ ಮೂತ್ರಂ ಪುರೀಷಂ
ಮುಸುಕಿಟ್ಟೆಲ್ಲಂಗದೊಳ್ ಕೆತ್ತಿರಲುದರಶಿಖಿಜ್ವಾಲೆಯಿಂದತ್ತಮಿತ್ತಂ
ಕುಸಿಯುತ್ತುಂ ಪಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ ಬಂದಾ
ಯಸಮಂ ಚಿತ್ತಯ್ಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪುದೆನ್ನಂ ॥
ಏನೆಂಬೆಂ ಬಾಲ್ಯದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷದ್ಮಿಂ ತೊ
ಯ್ದಾನಾರೆಂದೇನುಮಂ ಭಾವಿಸದೆ ಬಧಿರನಂತಂಧನಂತಿರ್ದು ಮತ್ತಂ
ನಾನಾ ಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆ ನಿನ್ನಾಱಿ ನಿನ್ನಾಱಿನಯ್ಯೋ
ಆನಂದಾಂಬೋಧಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪುದೆನ್ನಂ ॥

ಪಿರಿದೊಂದಜ್ಞಾನದಿಂ ಯೌವನ ವಿಕಳತೆ ಮೈದೋಱಿ ಕಾಂತಾನಿವಾಸಾಂ
ತರದೊಳ್ ಶ್ವಾನಂಗೆ ಹೀಹಂದಿಗೆ ಕಪಿಗೆಣೆಯಾಗಿರ್ದು ಬೇಳಾಗುತಂತತ್
ಕರಣಕ್ಕಾಳಾಗಿ ಹಾಳಾಗುತೆ ಬಱಿದೊಱೆವೋದೆಂ ಬಳಲ್ದೆಂ ಬಿಗುರ್ತೆಂ
ಮರುಳಾದೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪುದೆನ್ನಂ ॥

ಹರಭಕ್ತಿ ರಸತರಂಗಿಣಿ ಹೀಗೆಯೇ ಈ ಕಾವ್ಯದಲ್ಲಿ ನೂರು ಪದ್ಯಗಳಾಚೆ ಹರಿದಿದೆ. ಕೊನೆಯಲ್ಲಿ ಹರಿಹರ ಹೀಗೆ ಸಮಾಪ್ತಿಗೈದಿದ್ದಾನೆ.

ಭರದಿಂ ಕೇಳ್ದೋದುವಾನಂದದೊಳತಿಶಯದಿಂ ಮೆಚ್ಚಿ ಲಾಲಿಪ್ಪವರ್ಗಾ
ದರದಿಂ ನಿತ್ಯಾಯುವಂ ಸಂಪದವನಭವನೀಯುತ್ತುಮಿರ್ಕೆಂದನೂನಂ
ಧರೆಯೊಳ್ ಕೈಕೊಂಡು ರಕ್ಷಾಶತಕವನೊಲವಿಂ ಪ್ರೇಮದಿಂ ನಚ್ಚಿಪೇಳ್ದಂ
ಹರಿದೇವಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥

ಇದೇ ಪಂಪಾಪುರ (ಹಂಪೆಯ) ಸ್ಥಳದಲ್ಲಿ ಎಲ್ಲರ ಭಕ್ತಿ ಜನದ ನಾಲಗೆಯ ಮೇಲೆ, ಶಿವಾಲಯಗಳ ಪ್ರಾಕಾರಗಳಲ್ಲಿ, ಈ ನಾದದ ನದೀ ಹರಿಯುತ್ತಿತ್ತೊ ಅಲ್ಲಿಯೆ ಹರಿಹರನ ಅನಂತರ ಸುಮಾರು ೨೮೦ ವರ್ಷಗಳ ಅವಧಿ ದಾಟಿದ ಮೇಲೆ ಕನಕದಾಸರು ವಿಜಯನಗರದ ದೊರೆ ಕೃಷ್ಣದೇವರಾಯನ ಸಮಕಾಲೀನರಾಗಿ ಬಾಳಿ ಬದುಕಿದರು. ಕವಿ ಪರಿಸರದ ಕೂಸು. "ರಕ್ಷಿಪುದೆನ್ನಂ, ರಕ್ಷಿಪುದೆನ್ನಂ, ರಕ್ಷಿಪುದೆನ್ನಂ' ನಾದದ ಮೋಹಕಶಕ್ತಿ ಕನಕದಾಸರ ಮುಖಾಂತರ ಭಾಮಿನೀಲಯದಲ್ಲಿ "ರಕ್ಷಿಸು ನಮ್ಮನನವರತ, ರಕ್ಷಿಸು ನಮ್ಮನನವರತ, ರಕ್ಷಿಸು ನಮ್ಮನನವರತ" ಎಂದು ಮರುವುಟ್ಟು ಪಡೆದಿದೆ:

ತರಳತನದಲಿ ಕೆಲವು ದಿನದುರು
ಭರದ ಗರ್ವದಿ ಕೆಲವುದಿನ ಮೈ
ಮರೆದು ನಿಮ್ಮಡಿಗೆರಗದಾದೆನು ವಿಷಯ ಕೇಳಿಯಲಿ
ನರಕಭಾಜನನಾಗಿ ಕಾಮಾ
ತುರದಿ ಪರಧನ ಪರಸತಿಗೆ ಮನ
ಹರಿದ ಪಾಪವ ಕಳೆದು ರಕ್ಷಿಸು ನಮ್ಮನನವರತ ॥

ಈಗಲೋ ಈ ದೇಹವಿನ್ನಾ್ಯ
ವಾಗಲೋ ನಿಜವಿಲ್ಲವೆಂಬುದ
ನೀಗ ತಿಳಿಯದೆ ಮಡದಿ ಮನೆವಾರ್ತೆಯೆಂದೆಂಬ
ರಾಗಲೋಭದಿ ಮುಂದಣ

ತಾಗುಬಾಗುಗಳರಿಯೆ ನಿನ್ನ ಸ
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ॥

ಮಾ(ಸು)[೧೬] ರಕ್ತದ ಮಡುವಿನಲಿ ನವ
ಮಾಸ ಜನನಿಯ ಜಠರದೊಳಗಿರು
ವಾ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು
ನೀ ಸಲಹಿದವನಲ್ಲವೇ ಕರು
ಣಾ ಸಮುದ್ರನು ನೀನಿರಲು ಕಮ
ಲಾಸನನಹಂಗೇಕೆ ರಕ್ಷಿಸು ನಮ್ಮನನವರತ ॥

ಬಲುಮೃಗವು ಮರ ಪಕ್ಷಿಕೀಟಕ
ಜಲಚರರೌಘದಿ ಜನಿಸಿದೆನು ಕೋ
ಟಲೆಗಳೊಳಿಸಬೇಡಕಟ ಮಾನವನಾದ ಬಳಿಕಿನ್ನು
ಕೊಲಿಸದಿರು ಯಮನಿಂದ ಮುರಹರ
ಒಲಿದು ನಿನ್ನನು ಭಜಿಸುವವರಿಗೆ
ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ॥

ಲೋಕದೊಳಗತ್ಯಧಿಕವೆನಿಸುವ
ಕಾಗಿನೆಲೆಯಾದಿ ಕೇಶವ

---

೧೬. 'ಮಾಂಸ' ಎಂದು ಉಪಲಬ್ಧ ಎಲ್ಲ ಪ್ರತಿಗಳಲ್ಲೂ ಇದೆ. ಈ ಶಬ್ದವನ್ನು ಸ್ವೀಕರಿಸಿದರೆ ಪ್ರಾಸ ಕೆಟ್ಟು ಹೋಗುತ್ತದೆ. 'ಹೆರಿಗೆಯಸತ್ತೆ' ಇದಕ್ಕೆ 'ಮಾಸು' 'ಮಾಸ್ಮ' ಎಂದು ಹೇಳುತ್ತಾರೆ. 'ಮಾಸು' ಅರ್ಥವಾಗದ ಯಾರದೊ ಕೈಯ್ಯಲ್ಲಿ 'ಮಾಂಸ' ಎಂಬ ಪ್ರತಿನಿಧಾನಕ್ಕೆ ಎಡೆಕೊಟ್ಟಿದೆ. 'ಮಾಸು' ಶಬ್ದವನ್ನು ಸ್ವೀಕರಿಸಿದರೆ ಪ್ರಾಸಕ್ಕೆ ಸರಿಹೋಗುತ್ತದೆ. 'ಬಿಂದು' ಬಂದರೆ ವೃಷಭಪ್ರಾಸ. ಪದ್ಯದ ಮಿಕ್ಕ ಐದು ಪಾದಗಳಲ್ಲಿ ಇರುವ ಪದ್ಧತಿಯು ಇಲ್ಲೂ ಇರಬೇಕು. ಆದುದರಿಂದ 'ಮಾಂಸ' ಎಂಬುದು ಸರಿಯಲ್ಲ. ಇಡಿಯ ಕಾವ್ಯದಲ್ಲಿ ಎಲ್ಲೂ ಪ್ರಾಸ ತಪ್ಪಿಲ್ಲವೆಂಬುದನ್ನೂ ಗಮನಿಸಬೇಕು. ಕೆಲವು ತಾಳವೋಲೆಯ ಪ್ರತಿಗಳಲ್ಲಿ 'ಮಾಸು' ಎಂಬ ಪಾಠವೇ ಉಪಲಬ್ಧವಿದೆ. ಈ ಸಂದರ್ಭದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ K ೨೨೫ನೆಯ ನಂಬರಿನ ಹಸ್ತಪ್ರತಿಯನ್ನು ದಯವಿಟ್ಟು ನೋಡಿರಿ. ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಸಂ. ೪, ಸಂಖ್ಯೆ : ೨೦೧೮ : K ೨೨೫/೨

ತಾರ್ಕ್ಷ್ಯಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು
ಜೋಕೆಯಲಿ ಬರೆದೋದಿ ಕೇಳ್ದರ
ನಾಕುಲದಿ ಮಾಧವನು ಕರುಣಿಪ
ಶ್ರೀಕಮಲವಲ್ಲಭನು ಮಿಗೆ ಬಡದಾದಿಕೇಶವನು ॥

'ಹರಿಹರ' ಮತ್ತು 'ಕನಕದಾಸರ' ಈ ಕಾವ್ಯಗಳ ಆಶಯ ಒಂದೇ ಆಗಿದೆ. ಅದೆಂದರೆ ಆರಾಧ್ಯದೇವತೆಗಳು ಅವರನ್ನು ರಕ್ಷಿಸಬೇಕು. ಹರಿಹರನದು ನಾರಿಕೇಳಪಾಕ, ಕನಕರದು ದ್ರಾಕ್ಷಾಪಾಕ. ಎರಡೂ ಸವಿಯಾದ ವಸ್ತುಗಳು. ಮುಕ್ತಿಗೆ ಒಬ್ಬನದು ಹರದ್ವಾರ, ಇನ್ನೊಬ್ಬನದು ಹರಿದ್ವಾರ !

ಭಕ್ತಸ್ಥಲ, ಮಾಹೇಶ್ವರಸ್ಥಲ, ಪ್ರಸಾದಿಸ್ಥಲ, ಪ್ರಾಣಲಿಂಗಿಸ್ಥಲ, ಶರಣಸ್ಥಲ ಮತ್ತು ಐಕ್ಯಸ್ಥಲ ಎಂಬ ಆರುಸ್ಥಲಗಳಲ್ಲಿ ಭಕ್ತನು ಯಾವುದೇ ಸ್ಥಲದಲ್ಲಿ ನಿಂತರೂ ಅವನಲ್ಲಿ ಆ ಆರೂಸ್ಥಲಗಳು ಪ್ರವಹಿಸಿ ಹರಿದಿವೆ, ಬಸವಾದಿ ಪ್ರಮಥರ ವಚನಗಳನ್ನು ಪರಿಶೀಲಿಸಿದರೆ ಇದು ಸುವ್ಯಕ್ತ.[೧೭] ಹೀಗೆಯೆ ಹರಿದಾಸಪಂಥದಲ್ಲೂ ಭಕ್ತರ ನವವಿಧ ಭಕ್ತಿಯಲ್ಲಿ ನಿರತನಾದವನು ಯಾವುದೇ ಒಂದರಲ್ಲಿ ಹೆಚ್ಚು ಸ್ಥಾಯಿಯಾಗಿ ಇರುವುದು ಕಂಡರೂ ಅವರ ಸಾಧನೆಯಲ್ಲಿ ಇನ್ನುಳಿದ ಹಲವು ಬಗೆಗಳೂ ಮುಖ್ಯ ಪ್ರವಾಹದಲ್ಲಿ ಲೀನವಾಗಿ ಹರಿಯುತ್ತಿರುತ್ತವೆ. ಭಕ್ತಿಯು ೧೧ ವಿಧ, ೯ ವಿಧ, ಪಂಚವಿಧ, ಚತುರ್ವಿಧ, ತ್ರಿವಿಧ ಮತ್ತು ದ್ವಿವಿಧ ಎಂದು ಮುಂತಾಗಿ ವಿದ್ವಾಂಸರಿಂದ ಬೇರೆ ಬೇರೆ ರೀತಿಯಲ್ಲಿ ಇನಿತು ವಿಭಜಿಸಿ ವಿವರಿಸಲ್ಪಟ್ಟಿದೆ :

ಗುಣಮಹಾತ್ಮ್ಯಾಸಕ್ತಿ – ರೂಪಾಸಕ್ತಿ – ಪೂಜಾಸಕ್ತಿ, ಸ್ಮರಣಾಶಕ್ತಿ, ದಾಸ್ಯಾಶಕ್ತಿ – ವಾತ್ಸಲ್ಯಾಸಕ್ತಿ – ಕಾಂತಾಸಕ್ತಿ – ಆತ್ಮವೇದನಾಸಕ್ತಿ – ತನ್ಮಯತಾಸಕ್ತಿ – ಪರಮವಿರಹಾಸಕ್ತಿ – ರೂಪಾ ಏಕಧಾ ಅಪಿಏಕಾದಶಧಾಭವತಿ ॥[೧೮]

'ಭಕ್ತಿ' ಒಂದೇ ಆದರೂ ಅದು ಹನ್ನೊಂದು ಬಗೆಯದ್ದು ಎಂದು ವ್ಯಕ್ತವಾಗುತ್ತದೆ. ಪರಮಾತ್ಮನ ಗುಣಮಹಾತ್ಮೆಯಲ್ಲಿ ಆಸಕ್ತಿ, ಅವನ ರೂಪದಲ್ಲಿ ಆಸಕ್ತಿ, ಅವನ ಪೂಜೆಯಲ್ಲಿ ಆಸಕ್ತಿ, ಅವನ ಸ್ಮರಣೆಯಲ್ಲಿ ಆಸಕ್ತಿ. ಅವನ ದಾಸ್ಯದಲ್ಲಿ ಇರುವ ಆಸಕ್ತಿ, ಅವನ ಸಖ್ಯದಲ್ಲಿ ಆಸಕ್ತಿ, ಅವನ ವಾತ್ಸಲ್ಯದಲ್ಲಿ

---

೧೭. ಬಸವಣ್ಣನವರ ವಚನಗಳು (ಸಂ. ಪ್ರೊ. ಶಿ. ಶಿ. ಬಸವನಾಳ) ಗ್ರಂಥದಲ್ಲಿ ಆರೂ ಸ್ಥಲಗಳನ್ನು ನೋಡಿ.

೧೮. ನಾರದಭಕ್ತಿ ಸೂತ್ರ (ಲೇ : ಸೋಮನಾಥನಂದ) ಸೂ : ೮೨, ಪು. ೧೧೩

ಆಸಕ್ತಿ, ಅವನ ಕಾಂತೆಯಂತೆ ಬದುಕುವ ಅರ್ಥಾತ್ ಸತೀಭಾವದಲ್ಲಿ ಆಸಕ್ತಿ, ಅವನಿಗೆ ತನ್ನನ್ನು ಅರ್ಪಿಸಿಕೊಳ್ಳುವಲ್ಲಿ ಎಂದರೆ ಆತ್ಮ ನಿವೇದನದಲ್ಲಿ ಆಸಕ್ತಿ, ತನ್ಮಯತೆಯಲ್ಲಿ ಆಸಕ್ತಿ ಮತ್ತು ಅವನ ಅಸ್ತಿತ್ವ ತನ್ನಿಂದ ದೂರವಾಗಿದೆ ಎನ್ನಿಸಿದಾಗ ತದ್‌ವಿರಹಾಸಕ್ತಿ ಹೀಗೆ ಹಲವು ಭಾವಗಳಲ್ಲಿ ಪರಮಾತ್ಮನ ಮೇಲಿನ ಪ್ರೇಮ ವ್ಯಕ್ತವಾಗುವುದು, ಕನಕದಾಸರು 'ಭಕ್ತಿಶ್ಚ ತತ್‌ಸಾಧನಂ' ಎಂದು ಜೀವನ ನಡೆಸಿದರು; ನಿರ್ಹೇತುಕ ಪ್ರೇಮದಿಂದ ತಮ್ಮ ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಣೆಮಾಡಿ ಕೇವಲ 'ದಾಸೋಹಂ' ಎಂದು ಬದುಕಿದರು :

ಶ್ರೀಮದುತ್ಸಹದೇವನುತ ಶ್ರೀ
ರಾಮ ನಿನ್ನಯ ಚರಣಸೇವಕ
ಪ್ರೇಮದಿಂದ ಸಾಷ್ಟಾಂಗವೆರಗಿಯೆ ಮಾಳ್ಪೆ ಬಿನ್ನಪವ ।
ಈ ಮಹಿಮೆಯೊಳೀವರೆಗೆ ನಾವು ಸು
ಕ್ಷೇಮಿಗಳು ನಿನ್ನಯ ಪದಾಬ್ಜ
ಕ್ಷೇಮ ವಾರ್ತೆಯನರುಹಿ ರಕ್ಷಿಸು ನಮ್ಮನನವರತ ॥

ಭಕ್ತಿಯು ಪ್ರೇಮರೂಪವಾದದ್ದು :

ಸಾತ್ವಿಸ್ಮಿನ್ ಪರಮ ಪ್ರೇಮರೂಪಾ ॥[೧೯]

ಆ ಭಗವಂತನ ಪ್ರೇಮದಲ್ಲಿ ಅವರು ಲೌಕಿಕ ಹಾಗೂ ವೈದಿಕ ವ್ಯಾಪಾರಗಳನ್ನು ತ್ಯಜಿಸಿ– ನಿರೋಧಿಸಿ – ಭಗವಂತನಲ್ಲಿ ಅನನ್ಯಭಾವದಿಂದ – ಭಕ್ತಿಯಿಂದ – ಪ್ರಾರ್ಥಿಸಿದರು ; ಅವನ ಗುಣಗಾನ ಮಾಡಿದರು ; ಹೀಗೆ ಮಾಡುವಾಗ ಅವರು ವಿಷ್ಣುವಿನ ಅವತಾರಗಳೆಲ್ಲವನ್ನೂ ಒಂದೇ ಎಂದು ಭಾವಿಸಿದರು :

ಕ್ಷೀರವಾರಿಧಿಶಯನ ಶಾಂತಾ
ಕಾರ ವಿವಿಧ ವಿಚಾರ ಗೋಪೀ
ಜಾರ ನವನಿತಚೋರ ಚಕ್ರಾಧಾರ ಭವದೂರ
ಮಾರಪಿತ ಗುಣಹಾರ ಸರಸಾ
ಕಾರ ರಿಪುಸಂಹಾರ ತುಂಬುರು
ನಾರದ ಪ್ರಿಯ ವರದ ರಕ್ಷಿಸು ನಮ್ಮನನವರತ ॥

---

೧೯. ಅದೇ ಸೂತ್ರ : ೨, ಪು. ೨

ತಾಮರಸದಳನಯನ ಭಾರ್ಗವ
ರಾಮ ಹಲಧರರಾಮ ದಶರಥ
ರಾಮ ಮೇಘಶ್ಯಾಮ ಸದ್ಗುಣಧಾಮ ನಿಸ್ಸೀಮಾ ।
ಸಾಮಗಾನ ಪ್ರೇಮ ಕಾಂಚನ
ದಾಮಧರ ಸುತ್ರಾಮವಿನಮಿತ
ನಾಮ ರವಿಕುಲಸೋಮ ರಕ್ಷಿಸು ನಮ್ಮನನವರತ ॥

'ಶಾಂತಾಕಾರ' ಎಂದಾಗ ನಮ್ಮ ಮುಂದೆ ವಿಷ್ಣುವಿನ ಸ್ತುತಿ :

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ
ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಙ್ಗಮ್
ಲಕ್ಷ್ಮೀಕಾನ್ತಂ ಕಮಲನಯನಂ ಯೋಗಿಭಿರ್ಧ್ಯಾನಗಮ್ಯಂ
ವಂದೇವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಮ್ ॥

ಮುಂದೆನಿಂತು ಆ ಪರಮಾತ್ಮನ ಗುಣ ಹಾಗೂ ರೂಪಗಳ ಸಾಕ್ಷಾತ್ಕಾರವಾಗುತ್ತದೆ. 'ಗೋಪಿಜಾರ' 'ನವನೀತಚೋರ' ಕೃಷ್ಣಾವತಾರದ ಲೀಲೆಗಳನ್ನು ಓದುಗನಿಗೆ ನೆನಪಿಗೆ ತರುತ್ತದೆ. ಗೋಪಿಯರ ಪ್ರೇಮ ಕಾಯಾ ವಾಚಾ ಮನಸಾ ಪರಮಾತ್ಮನಲ್ಲಿ ಅರ್ಪಿಸಿದ ಭಕ್ತಿಯಾಗಿತ್ತು. ಅವರು ತಮ್ಮನ್ನು ತಾವು ಸಂಪೂರ್ಣ ಅರ್ಪಿಸಿಕೊಂಡು ಭಗವಂತನ ಸಾನಿಧ್ಯವೇ ಜೀವ ; ಅವನ ಅಗಲುವಿಕೆಯೆ ಮರಣ ; ಮೀನು ನೀರಿನಿಂದ ಹೊರಬಂದರೆ ವಿಲಿವಿಲಿ ಒದ್ದಾಡುವಂತೆ ಒದ್ದಾಡಿದರು – ವ್ಯಾಕುಲಪಟ್ಟರು. ನಾರದರು 'ಸರ್ವದಾ ಸರ್ವಭಾವೇನ ನಿಶ್ಚಿಂತೈಭಗವಾನೇವ ಭಜನೀಯ' ಎಂಬ ಸರ್ವಸಮರ್ಪಣಾ ಭಾವಕ್ಕೆ, 'ಅಖಿಲಾಚಾರ' ಅವನಿಗೆ ಸೇರಿದುದು ಎಂದೂ ಅವನ ವಿಸ್ಮರಣೆ ವ್ಯಾಕುಲತೆಗೆ ಕಾರಣ ಎನ್ನುವುದಕ್ಕೆ ಉದಾಹರಣೆಯಾಗಿ ಗೋಪಿಯರನ್ನೇ ಉಲ್ಲೇಖಿಸಿದ್ದಾರೆ :

ಯಥಾ ವಜ್ರಗೋಪಿಕಾನಾಮ್ ॥[೨೦]

ಭಕ್ತಿ ಪ್ರಪಂಚದಲ್ಲಿ ಗೋಪಿಯರಿಗೆ ಅಗ್ರಸ್ಥಾನ. ಸ್ವತಃ ಕೃಷ್ಣನೇ ಭಾಗವತದಲ್ಲಿ

---

೨೦. ಅದೇ ಸೂ. ೨೧ ಪು. ೨೬

ಆ ಗೋಪಿಯರ ಬಗ್ಗೆ ಅವರ ಪ್ರೇಮದ ಬಗ್ಗೆ ವಿಶೇಷ ಆದರ ಗೌರವ ಇದ್ದವನಾಗಿದ್ದ ಸಂಗತಿಯನ್ನು ತಿಳಿಸಿದ್ದಾನೆ. ಆ ಗೋಪಿಯರು ಕೃಷ್ಣನನ್ನು ತಮ್ಮ ಪ್ರಾಣವೆಂದೇ ಭಾವಿಸಿ ಸಕಲ ಲೌಕಿಕ ಸಂಬಂಧಗಳನ್ನು ತ್ಯಜಿಸಿ ಅವನನ್ನೇ ಆರಾಧ್ಯ ದೈವವೆಂದು, ಸರ್ವಶ್ರೇಷ್ಠನಾದ ಪರಮಾತ್ಮನೆಂದು ಮನಸ್ಸಿನಲ್ಲಿ ನಿರಂತರ ಧ್ಯಾನಿಸುವರೆಂದು ಹೇಳಿದ್ದಾನೆ. ಈ ಕೃಷ್ಣನನ್ನು ಕನಕದಾಸರೂ ಪರಮಾತ್ಮನೆಂದೇ ಸ್ತುತಿಸಿದ್ದಾರೆ :

ವೇದಗೋಚರ ವೇಣುನಾದ ವಿ
ನೋದ ಮಂದರ ಶೈಲಧರ ಮಧು
ಸೂದನಾಚ್ಯುತ ಕಂಸದಾನವರಿಪು ಮಹಾಮಹಿಮ ।
ಯಾದವೇಂದ್ರ ಯಶೋನಂದನ
ನಾದಬಿಂದು ಕಳಾತಿಶಯ ಪ್ರ
ಹ್ಲಾದರಕ್ಷಕ ವರದ ರಕ್ಷಿಸು ನಮ್ಮನನವರತ ॥

ಎಲ್ಲರಲಿ ನೀನಾಗಿ ಸುಮನಸ
ರಲ್ಲಿ ಅತಿಹಿತನಾಗಿ ಯಾದವ
ರಲ್ಲಿ ಬಾಂಧವನಾಗಿ ದಾನವರಲ್ಲಿ ಹಗೆಯಾಗಿ ।
ಕೊಲ್ಲಿಸಿದೆ ಭೀಮಾರ್ಜುನರ ಕೈ
ಯಲ್ಲಿ ಕೌರವ ಕುಲವನೆಲ್ಲವ
ಬಲ್ಲಿದನು ನೀನಹದು ರಕ್ಷಿಸು ನಮ್ಮನನವರತ ॥

ಬಲಿಯ ಬಂಧಿಸಿ ಮೊರೆಯಿಡುವ ಸತಿ
ಗೊಲಿದು ಅಕ್ಷಯವಿತ್ತು ಕರುಣದಿ
ಮೊಲೆಯನುಣಿಸಿದ ಬಾಲಿಕೆಯ ಪಿಡಿದಸುವನಪಹರಿಸಿ
ಶಿಲೆಯ ಸತಿಯಳ ಮಾಡಿ ತ್ರಿಪುರದ
ಲಲನೆಯರ ವ್ರತಗೆಡಿಸಿ ಕೂಡಿದ
ಕೆಲಸವುತ್ತಮವಾಯ್ತು ರಕ್ಷಿಸು ನಮ್ಮನನವರತ ॥

ಕೃಷ್ಣಾವತಾರ, ರಾಮಾವತಾರ, ನೃಸಿಂಹಾವತಾರ, ವರಾಹಾವತಾರ ಮುಂತಾಗಿ ಹಲವು ಅವತಾರಗಳಲ್ಲಿ ಪರಮಾತ್ಮನು ತನ್ನ ಭಕ್ತರನ್ನು ರಕ್ಷಿಸಿದ

ಸಂಗತಿಗಳನ್ನು ಕನಕದಾಸರು ವಿವರಿಸಿ – ಅವರನ್ನು ರಕ್ಷಿಸಿದ ಹಾಗೆ – ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸಿದ್ದಾರೆ. ಕೆಲವೊಂದು ಪದ್ಯಗಳಲ್ಲಿ ವ್ಯಾಜಸ್ತುತಿಯ ಮುಖಾಂತರ ಪರಮಾತ್ಮನ ರಕ್ಷಣೆಯನ್ನು – ಅದು ಅವನೇ ರಕ್ಷಿಸಬೇಕೆಂದು ಸ್ತುತಿಸಿ – ದ್ವಿಧಾ ಭಕ್ತಿಯಲ್ಲಿ ಮಾರ್ಜಾಲ ಭಕ್ತಿಯನ್ನು ಅಭಿವ್ಯಕ್ತಪಡಿಸಿದ್ದಾರೆ. 'ಹರಿಭಕ್ತಿಸಾರ' ಕೃತಿಯ ಎಲ್ಲ ಪದ್ಯಗಳ ಸ್ಥಾಯೀಭಾವವು ಅದಾಗಿದೆ ; ವ್ಯಾಜಸ್ತುತಿ, ಮಾರ್ಜಾಲಭಕ್ತಿ ಹೀಗಿದೆ ಅವರ ಇನ್ನೊಂದು ಪದ್ಯದಲ್ಲಿ:

ಮಗನ ಕೊಂದವನಾಳುವಂತಾ
ಸುಗುಣೆಯರು ಹದಿನಾರು ಸಾವಿರ
ಸೊಗಸುಗಾತಿಯರವರ ಮೋಹನ ಬಲೆಗೆ ವಿಟನಾಗಿ ।
ಬಗೆಬಗೆಯ ರತಿಕಲೆಗಳಲಿ ಕೂ
ರುಗುರನಾಟಿಸಿ ಮೆರೆದು ನೀನೀ
ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ ॥

ಪರಮಾತ್ಮನ ಶೃಂಗಾರದಲ್ಲಿ 'ಕಾಮಕ್ರೋಧ ಅಭಿಮಾನವೆಂಬ' ತ್ರಿರೂಪಭಂಗಗಳನ್ನು ತ್ಯಜಿಸಿ–ನಿತ್ಯದಾಸ್ಯ ನಿತ್ಯಕಾಂತಾಭಕ್ತಿಯ ಮೂಲಕ ಮುಕ್ತಿಯನ್ನು ಆಶಿಸಿದರು :

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ।
ಏನಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ ದೇವರಕ್ಷಿಸು ನಮ್ಮನನವರತ ॥
ಕೇಳುವುದು ಕಡುಕಷ್ಟ ಕಷ್ಟದ
ಬಾಳುವೆಯ ಬದುಕೇನು ಸುಡುಸುಡು
ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು ।
ಬಾಳಬೇಕೆಂಬವಗೆ ನೆರೆ ನಿ
ನ್ನೊಳಿಗವ ಮಿಗೆಮಾಡಿ ಭಕ್ತಿಯೊ
ಳಾಳಿ ಬದುಕುವುದುಚಿತ ರಕ್ಷಿಸು ನಮ್ಮನನವರತ ॥

"ಪ್ರಪಂಚದ ಕೆಲಸದಲ್ಲಿ ನಿರತರಾಗಿರುವಾಗಲೂ ಭಗವಂತನ ಗುಣಗಳನ್ನು ಕೇಳುತ್ತಾ ಕೀರ್ತನೆ ಮಾಡುತ್ತಾ ಇರಬೇಕು" ಎಷ್ಟೇ ಭಕ್ತರಾದರೂ ಪ್ರಪಂಚದ

ಯಾವುದಾದರೊಂದು ಕಾರ್ಯದಲ್ಲಿ ಮನುಷ್ಯ ತನ್ನನ್ನು ತಾನು ತೊಡಗಿಸಿಕೊಳ್ಳಬೇಕಾಗುತ್ತದೆ. ಕೆಲವರು ಮನೆಯ ಕೆಲಸವನ್ನು ಮಾಡಬೇಕಾಗಬಹುದು, ಮತ್ತೆ ಕೆಲವರು ಹೊಟ್ಟೆಗಾಗಿ ಹೆರವರ ಕೆಲಸದಲ್ಲಿ ನಿರತರಾಗಿರಬಹುದು. ಒಟ್ಟಾರೆ ಯಾವುದೇ ಕಾರ್ಯದಲ್ಲಿ ಮನುಷ್ಯ ನಿರತನಾದರೂ ಆ ಎಲ್ಲವನ್ನೂ ಭಗವಂತನಿಗೆ ಅರ್ಪಿಸಿ ಅವನ ಚಿಂತನೆಯಲ್ಲಿ ನಿರತನಾಗಿರಬೇಕು. ಇದನ್ನು ನಾರದರು 'ಲೋಕೇಽಪಿ ಭಗವದ್ಗುಣ ಶ್ರವಣಕೀರ್ತನಾತ್" ಎಂದು ಹೇಳಿದ್ದಾರೆ, ಕನಕದಾಸರು ಇದನ್ನು ಹೀಗೆ ಕನ್ನಡದಲ್ಲಿ ಭಟ್ಟಿ ಇಳಿಸಿದ್ದಾರೆ :

ಅಳಿವ ಒಡಲನು ನೆಚ್ಚಿ ವಿಷಯಂ
ಗಳಿಗೆ ಕಾತುರನಾಗಿ ಮಿಗೆ ಕಳ
ವಳಿಸಿ ಕಾಲನ ಬಳಿಗೆ ಹಂಗಿಗನಾಗಿ ಬಾಳುವರೆ ।
ತಿಳಿದು ಮನದೊಳು ನಿನ್ನ ನಾಮಾ
ವಳಿಯ ಜಿಹ್ವೆಗೆ ತಂದು ಪಾಪವ
ಕಳೆದ ಬದುಕೇ ಲೇಸು ರಕ್ಷಿಸು ನಮ್ಮನನವರತ ॥

ದೇಹಧಾರಕನಾದ ಮನುಷ್ಯ ಲೋಕದಲ್ಲಿ ಬಹುಬಗೆಯ ಮೋಹದ ಬಲೆಗೆ ದಿಢೀರನೆ ಪಕ್ಕಾಗಿ ಮುಕುತಿಗೆ ಬಾಹಿರನಾಗುತ್ತಾನೆ. ಈ ದೇಹಗಳು, ಈ ಸಂಸಾರಗಳು, ಮೋಹ ಬಂಧಗಳು ಎಂದರಿಯದೆ ಮತಿಗೆಟ್ಟ ಮನುಷ್ಯನನ್ನು ಮಹಾಸಾಹಸಿ ಎನ್ನಬಹುದೆ? ಸಾಹಸಿ ಎಂದು ಹೇಳುವುದು ಒಂದು ಸಟೆಯ ಕಂತೆ. ಇದನ್ನೇ ದಾಸರು ಹೀಗೆ ಹೇಳಿದ್ದಾರೆ :

ದೇಹಧಾರಕನಾಗಿ ಬಹುವಿಧ
ಮೋಹದೇಳಿಗೆಯಾಗಿ ಮುಕುತಿಗೆ
ಬಾಹಿರನು ತಾನಾಗಿ ವಿಷಯಾದಿಗಳಿಗೊಳಗಾಗಿ ।
ದೇಹವೀ ಸಂಸಾರವೆನ್ನದೆ
ಮೋಹಿಸುವ ಮತಿಗೇಡಿ ಮಾನವ
ಸಾಹಸಿಯೆ ಸಟೆಮಾತು ರಕ್ಷಿಸು ನಮ್ಮನನವರತ ॥

ಭಕ್ತನಾದ ವ್ಯಕ್ತಿ ಸ್ತ್ರೀ, ಧನ ಹಾಗೂ ನಾಸ್ತಿಕರ ಚರಿತ್ರೆಯನ್ನು ಅರ್ಥಾತ್ ಕಾಮ, ಕಾಂಚನ ಮತ್ತು ನಾಸ್ತಿಕರ ವಿಷಯವನ್ನು ಕೇಳಬಾರದು.

ಸ್ತ್ರೀ ಧನ ನಾಸ್ತಿಕಚರಿತ್ರಂ ನ ಶ್ರವಣೀಯಮ್ ॥[೨೧]

---

೨೧. ಪೂರ್ವೋಕ್ತ, 'ನಾರದ ಭಕ್ತಿಸೂತ್ರ' ಸೂತ್ರ ೬೩, ಪು. ೮೨

ಕನಕದಾಸರು 'ಹರಿಭಕ್ತಿಸಾರ'ದಲ್ಲಿ ಈ ಮಾತನ್ನೂ ನಿರೋಧಿಸಿಯೆ ಇದ್ದಾರೆ; ಮತ್ತು ಪರಮಾತ್ಮನ ಅಸ್ತಿತ್ವವನ್ನು ಎಲ್ಲೆಡೆ ಇದೆಯೆಂದು ಒಪ್ಪಿ, ಜೀವನದ ಅಲ್ಪತ್ವವನ್ನು ಹೇಳಿ, ಮಂಗಳ ಹಾಡಿದ್ದಾರೆ.

ಮೊದಲು ಜನನವನರಿಯೆ ಮರಣದ
ಹದನ ಕಡೆಯಲಿ ತಿಳಿಯೆ ನಾ ಮ
ಧ್ಯದಲಿ ನೆರೆನಾನಿಪುಣನೆಂಬುದು ಬಳಿಕ ನಗೆಗೇಡು ।
ಮೊದಲು ಕಡೆ ಮಧ್ಯಗಳ ಬಲ್ಲವ
ಮದನ ಜನಕನು ನೀನು ನಿನ್ನಯ
ಪದಯುಗವ ಬಯಸುವೆನು ರಕ್ಷಿಸು ನಮ್ಮನನವರತ ॥

ಇನ್ನು ಒಂದು ಮಂಗಳ ಗೀತೆ ಹೀಗಿದೆ.

ಮಂಗಳಂ ಸರ್ವಾದಿಭೂತಗೆ
ಮಂಗಳಂ ಸರ್ವವನು ಪೊರೆವಗೆ
ಮಂಗಳಂ ತನ್ನೊಳಗೆ ಲೋಕವ ಲಯಿಸಿಕೊಂಬವಗೆ ।
ಮಂಗಳಂ ಸರ್ವಸ್ವತಂತ್ರಗೆ
ಮಂಗಳಂ ಸತ್ಯಸ್ವರೂಪಗೆ
ಮಂಗಳಂ ಸಿರಿಗೊಡೆಯ ಚೆನ್ನಿಗರಾಯ ಕೇಶವಗೆ ॥

ಭಾರತ, ತದಂತರ್ಗತ ಕರ್ನಾಟಕ, ಭೂ ಭಾಗದಲ್ಲಿ ಭಕ್ತಿಯ ಸಾಧನೆಗೆ 'ಹರಿಭಕ್ತಿಸಾರ' ಭಕ್ತನಿಗೆ ಒಂದು ಕೈದೀವಿಗೆ; ಅದು ಭಕ್ತಿರಸಗಂಗೆಯ ಪುಣ್ಯಾಂಬುಸಾರ.

# ಕನ್ನಡದಲ್ಲಿ ಕೀರ್ತನ ಸಾಹಿತ್ಯ ಮತ್ತು ಕನಕ ಕೀರ್ತನೆಗಳು

**ಎಂ. ಜೈಕುಮಾರ್**

ಸರ್ವಶಕ್ತವಾದೊಂದು ದೇವರ ಪರಿಕಲ್ಪನೆ, ಅದರ ಆರಾಧನೆ ಹಾಗೂ ಸ್ತುತಿಗಳು ಎಲ್ಲ ಮಾನವ ಸಂಸ್ಕೃತಿಗಳಲ್ಲಿ ಕಂಡು ಬರುವ ಒಂದು ಪ್ರಮುಖ ಅಂಶ. ತಾನು ಅರ್ಥ ಮಾಡಿಕೊಳ್ಳಲಾಗದ ಅದಮ್ಯ ಪ್ರಾಕೃತಿಕ ಶಕ್ತಿಗಳು ಅಥವಾ ಮಾನಸಿಕ ಚಿತ್ತ ವೃತ್ತಿಗಳಿಗೆ ದೈವತ್ವವನ್ನು ಆರೋಪಿಸಿದಂದೇ, ಮನುಷ್ಯನು ಅವುಗಳನ್ನು ಒಲಿಸಿಕೊಳ್ಳಲು ಹಾಗೂ ಅವುಗಳ ಕೃಪೆ ಪಡೆಯಲು ಸ್ತುತಿಪಾಠ ಪ್ರಾರಂಭಿಸಿದನು. ಅವನ್ನು ಕೀರ್ತಿಸಿ ಹಾಡಿಹೊಗಳಿದನು. ಇಂತಹ ಕೀರ್ತನೆಗಳು ಸಂಸ್ಕೃತಿಗಳ ಪ್ರಾಥಮಿಕ ಹಂತದಲ್ಲಿ ಭಯ ಪ್ರೇರಿತವಾಗಿದ್ದಿರಬಹುದು. ಆದರೆ ಮಾನವ ಸಂಸ್ಕೃತಿಗಳು ಪ್ರವರ್ಧಮಾನಕ್ಕೆ ಬಂದು ಉಂಟಾದ ದೈವೀ ಶಕ್ತಿಯ ಅನುಭಾವ, ಉನ್ನತ ತತ್ತ್ವಚಿಂತನ ಆಧ್ಯಾತ್ಮಿಕ ವಿಚಾರ ಲಹರಿ, ಜೊತೆಗೆ ಮನುಕುಲದ ಏಳ್ಗೆಯ ಕಳಕಳಿ ಇವುಗಳಿಂದ ಕೀರ್ತನೆಗಳ ಮಹತ್ತ್ವ ಉನ್ನತವಾಗಿದೆ. ಮಾನವ ಸಂಸ್ಕೃತಿಗಳು ಉಚ್ಛ್ರಾಯಸ್ಥಿತಿಯಲ್ಲಿರುವಾಗ ಮನುಷ್ಯರು ತಮ್ಮ ಮಿತಿಗಳನ್ನು ಅರಿತುಕೊಂಡು ಬಾಳುವುದಕ್ಕೆ, ತಾವು ಸರ್ವಶಕ್ತರು ಎಂಬ ಭ್ರಮೆಯಿಂದ ಅತಿರೇಕವಾಗಿ ವರ್ತಿಸದಂತೆ ಮಾಡುವುದಕ್ಕೆ ಆತನಿಗೂ ಹಿರಿದಾದ ಒಂದು ಶಕ್ತಿಯು ಇರುವುದನ್ನು ಸದಾ ನೆನಪಿನಲ್ಲಿರುವಂತೆ ನೋಡಿಕೊಳ್ಳುವುದಕ್ಕೆ ಈ ಸ್ತುತಿ – ಕೀರ್ತನೆಗಳ ಕೊಡುಗೆ ಗಣನೀಯವಾದುದು.

ಭರತ ಖಂಡದಲ್ಲಿ ಈ ಭಗವದ್ ಸಂಕೀರ್ತನೆಯ ಹರವನ್ನು ಗಮನಿಸಿದಾಗ ಇದು ವೈದಿಕ ಸಾಹಿತ್ಯದಿಂದ ಹಿಡಿದು ಜಾನಪದ ಗೀತೆಗಳವರೆಗೂ ವ್ಯಾಪಿಸಿರುವುದನ್ನು ಕಾಣುತ್ತೇವೆ. ಭಗವಂತನ ಸ್ತೋತ್ರಗಳು, ಭಗವಂತನ ಅನಂತ ನಾಮಸ್ಮರಣೆ, ಸುಪ್ರಭಾತ, ಪೂಜಾಮಂತ್ರಗಳ ರೂಪದಲ್ಲಿ ಹರಡಿರುವ ಬಹುಪಾಲು ಕೀರ್ತನೆಗಳು ಮೊದ ಮೊದಲು ಗೀರ್ವಾಣ ಭಾಷೆ ಎನಿಸಿಕೊಂಡ ಸಂಸ್ಕೃತದಲ್ಲಿ ರಚಿತವಾಗಿ ಪ್ರಚುರವಾದವು. ಅವುಗಳು ರಚನೆಯಾದ ಕಾಲಕ್ಕೆ ಅವೂ ಭಕ್ತಿ ಸ್ಫೂರ್ತವಾದ ದಟ್ಟ ಅನುಭಾವದಿಂದ

ಪ್ರೇರಿತವಾದ ರಚನೆಗಳೇ ಆಗಿರುತ್ತಿದ್ದವು. ಮುಂದೆ ಈ ರಚನೆಗಳು ಪಠನೆಗಷ್ಟೇ ಸೀಮಿತವಾದಾಗ ಆರಾಧನಾ ವಿಧಿಗಳಲ್ಲಿ ಭಗವಂತ ಮತ್ತು ಭಕ್ತನ ನಡುವೆ ಮಧ್ಯವರ್ತಿಯೊಬ್ಬನ ಪ್ರವೇಶವಾದಾಗ, ಸಂಸ್ಕೃತ ಭಾಷೆಯ ಜನಸಾಮಾನ್ಯರಿಂದ ದೂರವಾದಾಗ ಈ ಸ್ತೋತ್ರಗಳ ಹಿಂದಿನ ಅನುಭಾವ ಮತ್ತು ಭಕ್ತಿಗಳ ಸಂವಹನೆ ಆಗುವುದರ ಬದಲು ಅವುಗಳಿಗೆ ಯಾವುದೋ ನಿಗೂಢತೆ ಮಂತ್ರಶಕ್ತಿ ಆರೋಪವಾಗಲಾರಂಭಿಸಿದುವು. ದೇವಶಕ್ತಿಯ ಪಾರಮ್ಯವನ್ನು ಹಾಡಿ ಸದಾ ಒಳಿತನ್ನೇ ಕುರಿತು ಆಲೋಚಿಸುವಂತೆ ನೀತಿ ಧರ್ಮಗಳಿಗೆ ಬದ್ಧರಾಗಿ ಜೀವಿಸುವಂತೆ ಜನಸಾಮಾನ್ಯರಿಗೆ ಬೋಧಿಸುವಂಥ ಕಾರ್ಯವು ಇಲ್ಲವಾಗಿ, ಭಗವಂತ ಭಯ ಪ್ರಚೋದಕನಾಗಿ ಸ್ತೋತ್ರಗಳು ಮಂತ್ರ ನಿಗೂಢವಾಗಿ ಜನತೆಯಲ್ಲಿ ಮೂಢ ಭಕ್ತಿಯನ್ನು ಪ್ರೇರಿಸುವ ಒಂದು ಶೋಷಕವರ್ಗದ ಬಾಹುಳ್ಯವುಂಟಾಯಿತು.

ಇಂತಹ ಸಂದರ್ಭಗಳು ಉಂಟಾದಾಗ ಜನತೆಯನ್ನು ಸರಿದಾರಿಗೆ ಕೊಂಡೊಯ್ಯುವಂತಹ ಎರಡು ಧಾರ್ಮಿಕ ಆಂದೋಲನಗಳು ಕನ್ನಡನಾಡಿನಲ್ಲಿ ನಡೆದವು. ಒಂದು ವಚನಕಾರರ ವಚನವಾಙ್ಮಯ ಇನ್ನೊಂದು ಹರಿದಾಸರ ದಾಸವಾಙ್ಮಯ. ಭಗವಂತನ ಬಗ್ಗೆ ಭಯವು ನೀಗಿ ಭಕ್ತಿ ಅನುಭಾವಗಳು ಜನಸಾಮಾನ್ಯರಲ್ಲಿ ಮೂಡುವಂತೆ ಮಾಡುವ, ವೇದೋಪನಿಷತ್ತುಗಳಲ್ಲಿ ನಿರೂಪಿತ ತತ್ತ್ವವನ್ನು ಕನ್ನಡದಲ್ಲಿ ಪ್ರತಿಪಾದಿಸುವ ಭಾಷೆಯ ಕಾರಣದಿಂದಾಗಿ ಕನ್ನಡಿಗರು ಈ ವಿಶಿಷ್ಟಾನುಭವಗಳಿಗೆ ಎರವಾಗದಂತೆ ಮಾಡುವ ಸತ್ಕಾರ್ಯ ಈ ಎರಡೂ ಆಂದೋಲನಗಳಿಂದ ಆಗಿದೆ. ಇವೆರಡರಲ್ಲಿ ಕಾಲದ ದೃಷ್ಟಿಯಿಂದ, ಆದ್ಯಪ್ರವರ್ತನೆಯ ದೃಷ್ಟಿಯಿಂದ ಹಾಗೂ ಪ್ರಭಾವದ ದೃಷ್ಟಿಯಿಂದ, ವಚನಸಾಹಿತ್ಯ ಹಿರಿದಾಗಿ ನಿಲ್ಲುತ್ತದೆ. ಜನಭಾಷೆಯನ್ನು ದೇವಭಾಷೆಯ ಮಟ್ಟಕ್ಕೆ ಏರಿಸಿದ ಶರಣರು ಜನತೆ ಹಾಗೂ ದೇವರ ನಡುವಿನ ಮಧ್ಯವರ್ತಿಗಳನ್ನು ನಿವಾರಿಸುವ ಕಾರ್ಯವನ್ನು ಮಾಡಿದರಲ್ಲದೆ ಸಮಾಜದ ಎಲ್ಲ ವರ್ಗಗಳ ಜನರನ್ನು ಒಳಗುಮಾಡಿಕೊಂಡು ಧಾರ್ಮಿಕ ಆಂದೋಲನದೊಂದಿಗೆ ಸಾಮಾಜಿಕ ಕ್ರಾಂತಿಯನ್ನೂ ಸಾಧಿಸಿದರು. ಸಾಹಿತ್ಯದ ದೃಷ್ಟಿಯಿಂದಲೂ ವಚನ ಸಾಹಿತ್ಯ ಕನ್ನಡ ಸಾಹಿತ್ಯದ ಪ್ರಮುಖ ಆಂದೋಲನ.

'ಕೀರ್ತನೆ'ಗಳು ಎಂದು ನಾವಿಂದು ಗುರುತಿಸುವ ಸಾಹಿತ್ಯಪ್ರಕಾರವನ್ನು ಹರಿದಾಸರ ಕೀರ್ತನೆಗಳನ್ನು ಮನದಲ್ಲಿರಿಸಿಯೇ ನಿರ್ದೇಶಿಸುತ್ತೇವೆ. ಈ ಕೀರ್ತನೆಗಳ ಬೀಜಾಂಕುರವೂ ವಚನ ಸಾಹಿತ್ಯದ ಕಾಲದಲ್ಲಿಯೇ ಆಗಿದೆ.

"ಕ್ರಿ.ಶ. ೧೨ನೇ ಶತಮಾನದಲ್ಲಿ ಇಡೀ ಭಾರತೀಯ ಸಾಹಿತ್ಯಕ್ಕೆ ವಚನವೆಂಬ ಅಭೂತಪೂರ್ವ ಕಾಣಿಕೆಯನ್ನು ಕೊಟ್ಟ ಶಿವದಾಸರು ತಮ್ಮ ಕಾಲಕ್ಕೆ ಅಥವಾ ತತ್ಪೂರ್ವಕ್ಕೆ ಕನ್ನಡದಲ್ಲಿಲ್ಲದಿದ್ದ ಹಾಡುಗಳನ್ನು ಬರೆಯಲೂ ಮೊದಲಿಗರಾದರು. ಶಿವಶರಣರು ಬರೆದ ಈ ಹಾಡುಗಳು ಪಲ್ಲವದಿಂದ ಕೂಡಿದ ಬೇರೆ ಬೇರೆ ರಾಗಗಳಲ್ಲಿ ಹಾಡಲು ಅನುವರಿತು ರಚಿತವಾದ ಗೇಯಕೃತಿಗಳು. ಮುಂದೆ ೧೫-೧೬ನೇ ಶತಮಾನಗಳಲ್ಲಿ ಹರಿದಾಸರು ಯಾವ ಕೀರ್ತನ ಸಾಹಿತ್ಯ ಪ್ರಕಾರದಿಂದ ಇಡೀ ದಕ್ಷಿಣ ಭಾರತದ ಸಂಗೀತ ಮತ್ತು ಸಾಹಿತ್ಯ ಪ್ರಪಂಚಗಳೆರಡಲ್ಲೂ ಅದ್ವಿತೀಯ ಕೀರ್ತಿಯನ್ನು ಗಳಿಸಿದರೊ ಆ ಕೀರ್ತನ ಪ್ರಕಾರಕ್ಕೆ ೧೨ನೇ ಶತಮಾನದ ಬಸವಾದಿ ಶಿವದಾಸರ ಈ ಗೀತಾ ಪ್ರಕಾರವು ಮೂಲವು ಮಾದರಿಯು ಆಯಿತು."*

ವಚನಗಳ ರಚನೆಯೊಂದಿಗೆ ಹಾಡಿ ತನ್ಮಯವಾಗಬಲ್ಲ ಶಿವ ಗೀತಗಳನ್ನೂ ರೂಪಾಂಶ, ಗೇಂಯಾಂಶಗಳೆರಡರಲ್ಲೂ ಹರಿದಾಸರ ಪದಗಳಿಗೆ ಮಾದರಿಯಾಗುವಂತೆ ರಚಿಸಿಕೊಟ್ಟ ಕೀರ್ತಿ ಶಿವಶರಣರದ್ದಾಗಿದೆ.

ಈ ತರಹದ ಶಿವಗೀತೆಗಳ ರಚನೆಗೆ ಸ್ಫೂರ್ತಿಯನ್ನು ವಿದ್ವಾಂಸರು ಬೇರೆ ಬೇರೆ ಮೂಲಗಳಿಂದ ಗುರುತಿಸುತ್ತಾರೆ. ಕನ್ನಡದ ಕವಿರಾಜಮಾರ್ಗಕಾರ ಹೇಳಿದ 'ಬೆದೆಂಡೆ'ಯ ತರಹದ ಹಾಡುಗಬ್ಬವೊಂದು ಕನ್ನಡದಲ್ಲಿ ಪ್ರಚಲಿತವಿದ್ದು ಅದನ್ನು ದೈವಪರ ಗೀತೆಗಳ ರಚನೆಗೆ ಅಳವಡಿಸಿಕೊಂಡಿರಬಹುದು ಎಂಬುದು ಒಂದು ಅಭಿಪ್ರಾಯ. ತಮಿಳು ಶೈವರ 'ತೇವಾರಂ' ಎಂಬ ತಮಿಳು ಸ್ತೋತ್ರಗಳ ಪ್ರಭಾವ ಎಂಬುದು ಇನ್ನೊಂದು ಅಭಿಪ್ರಾಯ. ಸಂಸ್ಕೃತ ಮಂತ್ರಗಳೊಂದಿಗೆ ಅದಕ್ಕೆ ಸರಿಸಮಾನವಾಗಿ ತಮಿಳಿನ ಪ್ರಬಂಧಗಳನ್ನು ಹಾಡುವ ವಾಡಿಕೆ ಕ್ರಿ.ಶ. ೧೧೧೭ರಲ್ಲಿಯೆ ಇತ್ತೆಂದು ಗುರುತಿಸಲಾಗಿದೆ.

ವಚನಕಾರರ ಕಾಲದಲ್ಲಿ ಅಲ್ಲೊಂದು ಇಲ್ಲೊಂದು ಎಂಬಂತೆ ಶಿವಗೀತೆಗಳಾಗಿ ಕೀರ್ತನೆಗಳ ರಚನೆ ಆದರೂ ಅದೊಂದು ಮಹಾಪೂರದಂತೆ ಹೆಬ್ಬೊಳೆಯಾಗಿ ಹರಿದದ್ದು ೧೫-೧೬ನೇ ಶತಮಾನದಲ್ಲಿ ಹರಿಕೀರ್ತನವು ಕನ್ನಡಿಗರ ಮನೆ ಮನೆಗಳಲ್ಲಿ 'ದೇವರ ನಾಮ'ವಾಗಿ ನಲಿಯುವಂತೆ ಕೀರ್ತನೆಗಳನ್ನು ಅಪೂರ್ವ ಸತ್ತ್ವಭರಿತವಾಗಿ ಹರಿದಾಸರು ರಚಿಸಿಕೊಟ್ಟರು. ತಮ್ಮ ಧರ್ಮ ಪ್ರಚಾರದೊಂದಿಗೆ ಸಮಾಜ ಸುಧಾರಣೆ, ಸದಾಚಾರ ಸನ್ಮತಿಗಳನ್ನು

* ಶಿವದಾಸ ಗೀತಾಂಜಲಿ – ಎಲ್. ಬಸವರಾಜು

ಹರಡುವ ಅತ್ಯುತ್ತಮ ಸಾಧನವಾಗಿ ಅವರು ಕೀರ್ತನೆಗಳನ್ನು ಶಕ್ತಿಯುತವಾಗಿ ಬಳಸಿಕೊಂಡರು.

ಐತಿಹಾಸಿಕವಾಗಿ ಶ್ರೀನರಹರಿತೀರ್ಥರನ್ನು ದಾಸಕೂಟದ ಮೂಲ ಪುರುಷರನ್ನಾಗಿ ಗುರುತಿಸಲಾಗುತ್ತದೆ. ಇವರು ೧೩ನೇ ಶತಮಾನದ ಕೊನೆಯ ಭಾಗದಲ್ಲಿದ್ದವರು. ಆದರೂ ಕನ್ನಡದಲ್ಲಿ ಧಾರ್ಮಿಕವಾಙ್ಮಯವನ್ನು ರಚಿಸಬೇಕೋ ಬೇಡವೋ ಎಂಬ ಬಗ್ಗೆ ಬ್ರಾಹ್ಮಣ ಕವಿಗಳ ಮನೋವೃತ್ತಿ ೧೫ನೇ ಶತಮಾನವದವರೆಗೆ ದೃಢವಾದಂತೆ ಕಂಡುಬರುವುದಿಲ್ಲ. ೧೫ನೇ ಶತಮಾನದ ಶ್ರೀ ಪಾದರಾಯರು ಈ ಪರಂಪರೆಗೆ ಮೊದಲಿಗರಾದರು. ಬಹುಪಾಲು ಕೀರ್ತನಕಾರರು ಇವರನ್ನೇ ದಾಸಕೂಟದ ಹಿರಿಯರೆಂದು ಸ್ಮರಿಸುತ್ತಾರೆ.

‘‘ಶ್ರೀಪಾದರಾಜರು (ಮರಣ ೧೪೮೦) ತಮಿಳುನಾಡಿನ ಶ್ರೀರಂಗದಲ್ಲಿದ್ದವರು. ಶ್ರೀರಂಗವು ರಾಮಾನುಜ ಸಂಪ್ರದಾಯದ ವೈಷ್ಣವರಿಗೆ ಭೂವೈಕುಂಠ. ಆಳ್ವಾರರ ಪಾಶುರಗಳ ಸಂಕಲನ ನಡೆದದ್ದು ಇಲ್ಲಿಯೇ ಪ್ರಚಾರ ನಡೆದದ್ದು ಇಲ್ಲಿಯೇ''* ಈ ಪಾಶುರಗಳ ಪ್ರಭಾವ ಶ್ರೀಪಾದರಾಜರ ಮೇಲೆ ಆಗಿರಬಹುದು. ಇದೇ ಸಮಯದಲ್ಲಿ ತಮಿಳು ನಾಡಿನಲ್ಲಿ ಸಾಹಿತ್ಯ ಪ್ರಧಾನವಾದ ‘ಇಯರ್’ ಎಂಬ ಪ್ರಕಾರವೂ, ಗೇಯ ಪ್ರಧಾನವಾದ ‘ಇಶೈ’ ಎಂಬ ಪ್ರಕಾರವೂ ಬಳಕೆಗೆ ಬಂದವು. ಈ ‘ಇಶೈ’ ಎಂಬ ಪ್ರಕಾರದ ಪ್ರಭಾವ ದಾಸ ಸಾಹಿತ್ಯದ ಕೀರ್ತನೆಗಳ ರಚನೆಯ ಕಡೆಗೆ ಶ್ರೀಪಾದರಾಜರ ಮನಸ್ಸನ್ನು ಸೆಳೆದಿರಬಹುದು ಎಂದು ವಿದ್ವಾಂಸರು ಊಹಿಸುತ್ತಾರೆ.

ಕನ್ನಡದಲ್ಲಿ ಕೀರ್ತನ ಸಾಹಿತ್ಯ ಪರಂಪರೆಯನ್ನು ವಿವಿಧ ಘಟ್ಟಗಳನ್ನಾಗಿ ನೋಡಬಹುದು. ದಾಸವಾಙ್ಮಯವನ್ನೇ ಶ್ರೀ ರಾ. ಸ್ವಾ. ಪಂಚಮುಖಿಯವರು ನಾಲ್ಕು ಘಟ್ಟಗಳಾಗಿ ವಿಭಜಿಸುತ್ತಾರೆ.

(೧) ಮಧ್ವಾಚಾರ್ಯರ ಕಾಲದ ನರಹರಿತೀರ್ಥರ ನೇತೃತ್ವದ ಸಾಹಿತ್ಯ

(೨) ಕೃಷ್ಣದೇವರಾಯನ ಕಾಲದ ವ್ಯಾಸ, ಪುರಂದರ ಕನಕರ ರಚನೆಗಳು

(೩) ವಿಜಯದಾಸ ಮುಂತಾದ ದಾಸವೃಂದದ ಕೀರ್ತನೆಗಳು

(೪) ಪ್ರಾಣೇಶ ಗುರುಪ್ರಾಣೇಶ ಮುಂತಾದವರ ರಚನೆಗಳು.

ಕೆ.ಜಿ. ಶಾಸ್ತ್ರಿಗಳವರು ದಾಸಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಎರಡು ಪ್ರಮುಖ ಘಟ್ಟಗಳನ್ನು ಗುರುತಿಸುತ್ತಾರೆ.

---

* ಪುರಂದರ ಸಾಹಿತ್ಯ ದರ್ಶನ ಸಂಪುಟ–೪ ಪ್ರಸ್ತಾವನೆ ಪು–೩

(೧) ನರಹರಿ ತೀರ್ಥರಿಂದ ಪುರಂದರ ಕನಕದಾಸರ ಜೀವಿತ ಕಾಲದವರೆಗಿನ ಅವಧಿ.

(೨) ವಿಜದಾಸರ ತರುವಾಯದ ಅವಧಿಯ.

ಶ್ರೀಪಾದರಾಜರು, ಶ್ರೀವ್ಯಾಸರಾಯುರು, ಶ್ರೀವಾದಿರಾಜರು, ಪುರಂದರದಾಸರು, ಕನಕದಾಸರು, ಮಹಿಪತಿರಾಯರು ಶ್ರೀ ರಾಘವೇಂದ್ರ ತೀರ್ಥರು, ಶ್ರೀ ವಿಜಯದಾಸರು, ಪಂಗನಾಮದ ತಿಮ್ಮಣ್ಣದಾಸರು, ಪ್ರಸನ್ನ ವೆಂಕಟದಾಸರು, ಗೋಪಾಲದಾಸರು, ಜಗನ್ನಾಥದಾಸರು ಶ್ರೀ ವ್ಯಾಸತತ್ವಜ್ಞರು, ಹೆಳವನಕಟ್ಟೆ ಗಿರಿಯಮ್ಮ, ಶ್ರೀ ದವಿಠಲದಾಸರು ಇವರು ಪ್ರಸಿದ್ಧ ಕೀರ್ತನಕಾರರು.

ದಾಸ ಸಂಪ್ರದಾಯದಲ್ಲಿ ಮಠಾಧಿಪತಿಗಳಾದ ಯತಿವರ್ಯರೂ, ಅವರಿಂದ ದಾಸದೀಕ್ಷೆ ಹಾಗೂ 'ಅಂಕಿತ'ವನ್ನು ಪಡೆದು ಮತ ಹಾಗೂ ನೀತಿಪ್ರಸಾರವನ್ನೇ ಜೀವಿತ ಕಾರ್ಯವಾಗಿ ಮಾಡಿಕೊಂಡ ದಾಸರು – ಹೀಗೆ ಎರಡು ವರ್ಗಗಳವರು ಕಂಡುಬರುತ್ತಾರೆ. ಶ್ರೀನರಹರಿ ತೀರ್ಥ, ಶ್ರೀಪಾದರಾಜರು, ಶ್ರೀ ವ್ಯಾಸರಾಯರು, ಶ್ರೀವಾದಿರಾಜರು, ಶ್ರೀ ರಾಘವೇಂದ್ರ ಸ್ವಾಮಿಗಳವರು ಪೀಠಸ್ಥಯತಿಗಳು. ಶ್ರೀ ಪುರಂದರದಾಸ, ಶ್ರೀ ಕನಕದಾಸ ಮುಂತಾದವರು ಎರಡನೆಯ ವರ್ಗದವರು. ಹೆಳವನಕಟ್ಟೆ ಗಿರಿಯಮ್ಮ ನಂತರದ ಹರಿಭಕ್ತೆ. ತಾನೆ "ಹೆಳವನಕಟ್ಟೆರಂಗ" ಎಂಬ ಅಂಕಿತವನ್ನಿಟ್ಟುಕೊಂಡು ಕೀರ್ತನೆ ರಚಿಸಿರುವುದೂ ಉಂಟು.

ಕನ್ನಡದ ಕೀರ್ತನ ಸಾಹಿತ್ಯ ಹರಿದಾಸಾದಿಗಳ ರಚನೆಯಿಂದ ಸ್ಫೂರ್ತವಾಗಿ ಇತರ ಮತಗಳ ಕವಿಗಳ ಲೇಖನಿಯಿಂದ ಹೊರಹೊಮ್ಮಿರುವುದನ್ನು ನಾವು ಗುರುತಿಸಬಹುದು. ೧೫ನೇ ಶತಮಾನದಲ್ಲಿ ಜೀವಿಸಿದ್ದ ನಿಜಗುಣ ಶಿವಯೋಗಿಗಳು ಕೈವಲ್ಯ ಪದ್ಧತಿಯ ಹಾಡುಗಳನ್ನು ರಚಿಸಿದ್ದಾರೆ. ಈತನ ಸಮಕಾಲೀನನಾದ ಮುಪ್ಪಿನ ಷಡಕ್ಷರಿಯ "ಸುಬೋಧಸಾರ" ಭಕ್ತಿ ಭಾವದ ಕೀರ್ತನೆಗಳ ಸಂಕಲನ. ಬೆಂಗಳೂರಿನ ಸರ್ಪಭೂಷಣ ಶಿವಯೋಗಿ ಅಥವಾ ಸಪ್ಪಣ್ಣನ ಕೆಲವಾರು ಕೀರ್ತನೆಗಳು ಪ್ರಸಿದ್ಧವಾಗಿದೆ. ಇವಿಷ್ಟು ವೀರಶೈವಕೀರ್ತನಕಾರರ ರಚನೆಗಳಾದರೆ, ಶ್ರೀವೈಷ್ಣವ ಸಂಪ್ರದಾಯದ ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಭಾರತಿ ತಿರುಮಲಾರ್ಯ ಇವರುಗಳು ಹಾಡುಗಳನ್ನು ರಚಿಸಿರುತ್ತಾರೆ. 'ಅಣ್ಣನ ಪದಗಳು' ಎಂಬ ಹೆಸರಿನಲ್ಲಿ ಪ್ರಸಿದ್ಧವಾದ ಹಾಡುಗಳು ಜೈನಕವಿ ರತ್ನಾಕರವರ್ಣಿಯಿಂದ ರಚಿತವಾದವು. ಇದರಂತೆಯೇ ಭಾಗವತ ಸಂಪ್ರದಾಯದ ಲಕ್ಷ್ಮೀಶನು ಹಾಡುಗಳನ್ನು ರಚಿಸಿರುತ್ತಾನೆ.

ಹತ್ತೊಂಬತ್ತನೆ ಶತಮಾನದ ಕ್ರಿಸ್ತಪರ ಹಾಡುಗಳಲ್ಲಿ ಹರಿದಾಸ ಕೀರ್ತನೆಯ ಪ್ರಭಾವವನ್ನು ಗುರುತಿಸಬಹುದಾಗಿದೆ.

ಅಧ್ಯಯನದ ದೃಷ್ಟಿಯಿಂದ ಕೀರ್ತನಸಾಹಿತ್ಯದ ಈ ಬಗೆಯ ವಿವಿಧ ಘಟ್ಟಗಳನ್ನು ಗುರುತಿಸಬಹುದಾದರೂ "ವಿಶಿಷ್ಟ ಶಕ್ತಿ ಮತ್ತು ಸಾಂಸ್ಕೃತಿಕ ಪ್ರಭಾವದ ದೃಷ್ಟಿಯಿಂದ ನೋಡಬಹುದಾದುದು ಒಂದೇ ಘಟ್ಟ : ಅದೆಂದರೆ ಪುರಂದರದಾಸ ಯುಗ.'*

ಇನ್ನು ಕೀರ್ತನೆಗಳ ಲಕ್ಷಣವನ್ನು ಕುರಿತು ನೋಡೋಣ. ಎಲ್ಲ ಕೀರ್ತನೆಗಳಲ್ಲೂ ಗೇಯತೆ ಪ್ರಮುಖ ಅಂಶವಾದ ಕಾರಣ ಆರಂಭದಲ್ಲಿ ಪಲ್ಲವಿ, ಕೆಲವೊಮ್ಮೆ ಅನುಪಲ್ಲವಿಗಳು ಬರುತ್ತವೆ. ತದನಂತರ ಒಂದು ನುಡಿ ಪಲ್ಲವಿಯ ಪುನರಾವರ್ತನೆ ಮತ್ತೊಂದು ನುಡಿ ಪಲ್ಲವಿಯ ಪುನರಾವರ್ತನೆ ಬರುತ್ತ ಹೋಗುತ್ತವೆ. ಕೀರ್ತನೆಯ ಪೂರ್ಣಭಾವ ನಿರೂಪಿತವಾಗುವವರೆಗೂ ಈ ನುಡಿಗಳು ಬರುತ್ತವೆ. ಕೊನೆಯ ನುಡಿಯಲ್ಲಿ ದೈವಸ್ತುತಿಯಾಗಿ 'ಅಂಕಿತ' ಒಳಗೊಳ್ಳುತ್ತದೆ. ಈ ನುಡಿಗಳು ಒಂದೊಂದೇ ಸಾಲಿನವಾಗಿರಬಹುದು ಅಥವಾ ಎರಡು ಎರಡು ಸಾಲಿನವಾಗಿರಬಹುದು, ಮೂರು ಮೂರು ಸಾಲಿನವಾಗಿರಬಹುದು. ಹೀಗೆ ಒಂಬತ್ತು ಸಾಲಿನವರೆಗೆ ನುಡಿಗಳನ್ನುಳ್ಳ ಕೀರ್ತನೆಗಳಿವೆ.

'ನಾ ಡೊಂಕಾದರೇನೋ....' ಎಂಬ ಕೀರ್ತನೆಯಲ್ಲಿ ನುಡಿಗಳು ಒಂದೊಂದು ಸಾಲಿನವು. 'ನೀನ್ಯಾಕೋ ನಿನ್ನ ಹಂಗ್ಯಾಕೋ' ಎಂಬ ಕೀರ್ತನೆಯಲ್ಲಿ ನುಡಿಗಳು ಎರಡೆರಡು ಸಾಲಿನವು. 'ಕೃಷ್ಣನ ನೋಡಿದೆ ಸರ್ವೋತ್ಕೃಷ್ಟನ ಪಾಡಿದೆ' ಎಂಬುದರಲ್ಲಿ ೩–೩ ಸಾಲಿನ ನುಡಿಗಳಿವೆ. ಹೆಚ್ಚಿನ ಕೀರ್ತನೆಗಳಲ್ಲಿ ನುಡಿಗಳ ಸಾಲು ೪–೪. 'ಕೇಶವನೊಲುಮೆ ಆಗುವ ತನಕ....' ಎಂಬ ಕೀರ್ತನೆಯಲ್ಲಿ ೮–೮ ಸಾಲಿನ ನುಡಿಗಳಿವೆ. ಆಡಿದನೋ ರಂಗ ಅದ್ಭುತದಿಂದಲಿ ಕಾಳಿಂಗನ ಫಣಿಯಲಿ' ಎಂಬ ಕೀರ್ತನೆಯಲ್ಲಿ ಪ್ರತಿಯೊಂದು ನುಡಿಯಲ್ಲಿ ೯–೯–ಸಾಲುಗಳು ಬರುತ್ತವೆ. ಆದಿಪ್ರಾಸ ನಿಯತ. ನುಡಿಗಳಲ್ಲಿ ಉತ್ಸಾಹ, ಮಂದಾನಿಲ ಲಲಿತಲಯಗಳು ಇಲ್ಲವೆ ಅದಕ್ಕೆ ಸಂವಾದಿಯಾದ ಅಂಶಗಣಗಳು ಬರುತ್ತವೆ. ಬಹುಪಾಲು ಕೀರ್ತನೆಗಳು ರಾಗ, ತಾಳ

---

* ಡಾ॥ ತಿಪ್ಪೇರುದ್ರಸ್ವಾಮಿ, "ಕರ್ನಾಟಕ ಸಂಸ್ಕೃತಿ ಸಮೀಕ್ಷೆ", ಪು. ೩೫೫

ನಿರ್ದೇಶನದೊಂದಿಗೆ ದೊರೆಯುತ್ತವೆ.

ರೂಪಾಂಶದಂತೆಯೇ ವಸ್ತುವಿನ ದೃಷ್ಟಿಯಿಂದ ಹಾಗೂ ಹೊತ್ತು ತರುವ ಭಾವದ ದೃಷ್ಟಿಯಿಂದ ಈ ಕೀರ್ತನೆಗಳು ಅನೇಕ ಬಗೆಯ ವಿಭಜನೆಗೆ ಅನುವು ಮಾಡಿ ಕೊಡುವಂತಿವೆ.

ದಾಸರು ಮಾಧ್ವಮತದ ತತ್ತ್ವಗಳನ್ನು ದೃಢವಾಗಿ ನಂಬಿ ಅನುಸರಿಸುವರಾದ ಕಾರಣ ಮತತತ್ತ್ವಗಳನ್ನು ತಿಳಿಗನ್ನಡದಲ್ಲಿ ಹಿಡಿದಿರಿಸುವ ಕಾರ್ಯವನ್ನು ಮಾಡುತ್ತಾರೆ. ಈ ಕಾರಣದಿಂದ ಹರಿಸರ್ವೋತ್ತಮತ್ವ, ಹರಿನಾಮಮಹತ್ವ ಹರಿದಾಸರುಗಳ ಹಿರಿಮೆ–ಸ್ತುತಿ, ಅವತಾರತ್ರಯ, ದ್ವೈತಸಿದ್ಧಾಂತಸಾರ ಮುಂತಾದ ಪ್ರಮೇಯಗಳನ್ನು ಪ್ರತಿಪಾದನೆ ಮಾಡುವ ಕೀರ್ತನೆಗಳನ್ನು ರಚಿಸಿದ್ದಾರೆ. ಇದಲ್ಲದೆ ಭಾಗವತ ಮನೋಧರ್ಮದಲ್ಲಿ ಸ್ತುತಿಮಾಲಿಕೆಗಳನ್ನು ರಚಿಸಿರುತ್ತಾರೆ. ದಶಾವತಾರಸ್ತುತಿ, ದೈವಸ್ತುತಿ, ಯತಿಸ್ತುತಿ, ಹರಿದಾಸ ಸ್ತುತಿಗಳನ್ನು ಮಾಡಿರುತ್ತಾರೆ. ದಾಸರು ಭಾಗವತ ಸಂಪ್ರದಾಯದಂತೆ ಅನೇಕ ತೀರ್ಥಕ್ಷೇತ್ರಗಳಿಗೆ ಹೋಗಿ ದೇವದರ್ಶನ ಮಾಡುವುದು ರೂಢಿ. ಹೀಗಾಗಿ ಆಯಾಕ್ಷೇತ್ರದ ಮುಖ್ಯ ದೇವರನ್ನು ಹಾಡಿ ಹೊಗಳಿ ಕೀರ್ತನೆ ರಚಿಸಿರುತ್ತಾರೆ. ಭಗವಂತನ ಸಾಕಾರ ಸೌಂದರ್ಯವನ್ನು ಕಂಡು ಮುಗ್ಧರಾಗುವ ಭಕ್ತಿ ತನ್ಮಯತೆಯಲ್ಲಿ ತಾದಾತ್ಮ್ಯವನ್ನು ಕಾಣುವ ಈ ದಾಸರು ಭಗವಂತನನ್ನು ವಿವಿಧ ಭಾವಗಳಲ್ಲಿ ವಿವಿಧ ನಿಲುವುಗಳಲ್ಲಿ ಆರಾಧಿಸಿ ಸ್ತುತಿಸಿ ಕೀರ್ತನೆ ರಚಿಸಿರುತ್ತಾರೆ. ಒಮ್ಮೊಮ್ಮೆ ಅನನ್ಯ ಶರಣರಾಗಿ ದೀನರಾಗಿ ದಾಸರಾಗಿ ದಾಸಾಸ್ಯರ ದಾಸರಾಗಿ ಹಾಡುತ್ತಾರೆ. ಒಮ್ಮೊಮ್ಮೆ 'ಎನಗೂ ಆಣೆ ರಂಗ ನಿನಗೂ ಆಣೆ' ಎಂದು ಸ್ನೇಹಿತರಂತೆ ಸಲುಗೆ ತೋರುತ್ತಾರೆ. ಒಮ್ಮೊಮ್ಮೆ ಅತಿಮಧುರ ಭಾವದಿಂದ ಗೋಪಿಕಾ ಸ್ತ್ರೀಯರಂತೆ ಹರಿಸ್ವಾಮಿಯನ್ನು ನೆನೆದು ಪುಳಕ ತೋರುತ್ತಾರೆ. ಹರಿವಿದಾವತೆಗೆ ವಿರಹವೇದನೆ ತೋರುತ್ತಾರೆ. ಹರಿಲೀಲಾವಿನೋದಕ್ಕೆ ಒಳಗಾದ ಮುಗುದೆಯರ ಭಾವವನ್ನು ಕೀರ್ತನೆಗಳಲ್ಲಿ ತೋರುತ್ತಾರೆ. ಇದೇ ದಾಸರು ಯಶೋದೆಯಂತೆ ಹರಿಯಲ್ಲಿ ವಾತ್ಸಲ್ಯ ತೋರಿ ಮುದ್ದು ಕೃಷ್ಣನ ತುಂಟ ತೊದಲುಗಳನ್ನು ರಸಮಯ ಕೀರ್ತನೆಗಳನ್ನಾಗಿಸುತ್ತಾರೆ. 'ಗುಮ್ಮನ ಕರೆಯದಿರೆ' 'ಅಮ್ಮಾ ನಿಮ್ಮ ಮನೆಗಳಲ್ಲಿ ರಂಗನ ಕಾಣಿರೇನೆ' 'ಪೋಗಾದಿರೆಲೋ ರಂಗ' ಇವೆಲ್ಲಾ ಇಂತಹ ಪ್ರಸಿದ್ಧ ಕೀರ್ತನೆಗಳು. ಒಂದೊಂದು ಮನೆಯ ಹಸುಕಂದಯ್ಯಗಳಲ್ಲಿ ಮುದ್ದುಕೃಷ್ಣ ಸಾಕಾರವಾಗುವಂತೆ ಸಾಮಾನ್ಯ ತಾಯೊಬ್ಬಳು ಲೋಕೋತ್ತರ ಮಾತೆ ಯಶೋದೆಯ ಸುಂದರ

ಅನುಭವಗಳಲ್ಲಿ ಪಾಲ್ಗೊಳ್ಳುವಂತೆ ಕೀರ್ತನೆಗಳು ಮೂಡುತ್ತವೆ. ಶಾಸ್ತ್ರಪ್ರಮೇಯದ ಕೃತಿಗಳಿಗಿಂತಲೂ ಇಂತಹ ಕೃತಿಗಳೇ ಕೀರ್ತನೆಯನ್ನು ಜನಸಾಮಾನ್ಯರ ಮನದಾಳಕ್ಕೆ ಇಳಿಸಿದವಾಗಿವೆ.

ವೈಯಕ್ತಿಕ ಆರ್ತತೆ, ಅನುಭಾವಗಳೂ ದಾಸರ ಕೀರ್ತನೆಗಳಾಗಿ ಹೊಮ್ಮದೇ ಇಲ್ಲ. ಆತ್ಮ ನಿವೇದನೆ ಅಪರೋಕ್ಷಾನುಭಾವಗಳೂ ಕೀರ್ತನೆಗಳಾಗಿ ಹೊರಹೊಮ್ಮಿವೆ.

'ಸಾಕು ಸಾಕು ಮನುಜ ಸೇವೆಯು ರಂಗಯ್ಯ'

'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೇ' ಎಂಬ ಕೀರ್ತನೆಗಳು

'ಬಂಧುಗಳು ಎನಗಿಲ್ಲ ಬದುಕಿನಲ್ಲಿ ಸುಖವಿಲ್ಲ

ನಿಂದೆಯಲಿ ನೊಂದೆನೈ ನೀರಜಾಕ್ಷ' – ಎಂಬ ಮಾತು, 'ಗಿಳಿಯು ಪಂಜರದೊಳಿಲ್ಲ ಎಂಬ ಸಾವಿನ ಪ್ರತಿಮೆ ಇವುಗಳಲ್ಲಿನ ಆತ್ಮ ನಿವೇದನೆ ಆರ್ತತೆ ಮನಸೆಳೆಯುತ್ತವೆ. 'ಗಿಳಿಯು ಪಂಜರದೊಳಿಲ್ಲ' ಎಂಬ ಕೀರ್ತನೆಯನ್ನು ಪುರಂದರದಾಸರು ತಮ್ಮ ಮಗಳೊಬ್ಬಳು ತೀರಿಕೊಂಡಾಗ ಹಾಡಿದರೆಂದು ಹೇಳುವುದುಂಟು. ಇದೇರೀತಿ 'ಬಾಗಿಲನು ತೆರೆದು' ಎಂಬ ಕೀರ್ತನೆಯನ್ನು ಉಡುಪಿಯಲ್ಲಿ ಕೃಷ್ಣದರ್ಶನವಾಗದಿದ್ದಾಗ ಕನಕದಾಸರು ಹಾಡಿದರೆಂಬ ಮಾತಿದೆ.

ಹಾಗೆಯೆ ಭಕ್ತಿ ಅನುಭಾವದಲ್ಲಿ ತಾವು ಕಂಡು ಉಂಡ ಸುಖವನ್ನೂ ದಾಸರು ಹಾಡಿ ಕುಣಿದಿರುತ್ತಾರೆ. 'ಸ್ವಾನಂದದ ಸುಖ ಏನೆಂದ್ಹೇಳಲಿ ಕೌತುಕ. ಒಡೆದು ಹೇಳುವುದಲ್ಲ ಹಿಡಿದು ತಾ ಕೊಡಲಿಕ್ಕಿಲ್ಲ.' ಎಂದು ಒಬ್ಬರು ಹಾಡಿದರೆ ಮತ್ತೊಬ್ಬರು 'ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು ; ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು' ಎಂದು ಗೆಜ್ಜೆ ಕಟ್ಟಿ ಕುಣಿದಿದ್ದಾರೆ.

ಹರಿದಾಸರು ಬದುಕನ್ನು ದೂರನಿಂತು ನೋಡಿದವರಲ್ಲ. ದಂಡಿಗೆ ಬೆತ್ತ ಹಿಡಿದರೂ ಸಂಸಾರದಲ್ಲಿದ್ದೇ ಉಂಛ ವೃತ್ತಿಯನ್ನು ಆಶ್ರಯಿಸಿ ಭಗವಂತನ ಹಿರಿಮೆ ಅರಿತು ಬಾಳಿದವರು. ಜನರ ನಡುವೆಯೇ ಬಾಳಿ ಅವರ ನಡುವೆಯೇ ಓಡಾಡಿ ಅವರ ಬದುಕನ್ನು ನಿಕಟವಾಗಿ ಕಂಡವರು. ಸ್ವಾಭಾವಿಕವಾಗಿಯೇ ಸದಾಚಾರದ ಉಪದೇಶವನ್ನು ನೀಡಿ ಸಾಮಾಜಿಕ ಡಂಭಾಚಾರ ಕೀಳು ದೈವಗಳ ಆರಾಧನೆ ಮುಂತಾದವನ್ನು ಟೀಕಿಸಿ ಲೋಕದ ಡೊಂಕನ್ನು ತಿದ್ದಿರುತ್ತಾರೆ.

'ಮುತ್ತು ಬಂದಿದೆ ಕೇರಿಗೆ' 'ಅನುಭವದಡುಗೆ ಮಾಡಿ' 'ಕಲ್ಲುಸಕ್ಕರೆ ಕೊಳ್ಳಿರೋ' 'ಭಜಿಸಿ ಬದುಕೆಲೊ ಮನುಜ' ಮುಂತಾದ ಕೀರ್ತನೆಗಳಲ್ಲಿ ಜನರ

ಮನವನ್ನು ಹರಿಭಕ್ತಿಗೆ ಒಲಿಸುವ ಕಾರ್ಯವಿದೆ. 'ಗುರುವಿನ ಗುಲಾಮನಾಗುವ ತನಕ' 'ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ' ಎಂಬಂತಹ ಕೀರ್ತನೆಗಳಲ್ಲಿ ಉಜ್ವಲ ಜೀವನ ದರ್ಶನವಿದೆ. ಮೃದುವಾಗಿ ಮನವೊಲಿಸಿ ಜೀವನ ತತ್ವ ಹೇಳುವ ಈ ದಾಸರು ಕಟುವಾಗಿ ಸಮಾಜದ ವಿಮರ್ಶೆ ಮಾಡಬಲ್ಲರು. ವಾಗ್ದಂಡನೆಯಿಂದ, ದಾರಿತಪ್ಪಿದವರನ್ನು ಸರಿದಾರಿಗೆ ತರಬಲ್ಲರು 'ನೋಡಿ ಮರುಳಾಗದಿರು ಪರಸತಿಯರಾ' 'ಕದವ ಮುಚ್ಚಿದಳಿದಕೋ' 'ಕುಲ ಕುಲವೆಂದು ಹೊಡೆದಾಡದಿರಿ' 'ಹ್ಯಾಗೆ ನೀ ದಾಸನಾದೆ ಪ್ರಾಣಿ' 'ಉದರ ವೈರಾಗ್ಯವಿದು' ಮುಂತಾದ ರಚನೆಗಳಲ್ಲಿ ಸಮಾಜದ ಕಟು ವಿಡಂಬನೆ ಇದೆ.

ಬದುಕಿನಲ್ಲಿ ಮೈಗೂಡಿಸಿಕೊಳ್ಳಬೇಕಾದ ಅನೇಕ ಸಾರ್ವತ್ರಿಕ ಸಂದೇಶಗಳನ್ನು ದಾಸರು ಬಿತ್ತಿದ್ದಾರೆ. 'ಧರ್ಮವೇ ಜಯವೆಂಬ ದಿವ್ಯಮಂತ್ರ' 'ಸತ್ಯವೆಂಬುದೇ ಸ್ನಾನ ಉಪವಾಸ ಜಪನೇಮ' 'ಮಾನವ ಜನ್ಮ ದೊಡ್ಡದು' 'ಈಸಬೇಕು ಇದ್ದು ಜೈಸಬೇಕು' 'ತಲ್ಲಣಿಸದಿರು ಕಂಡ್ಯ ತಾಳು ಮನವೇ' ಮುಂತಾದ ಕೀರ್ತನೆಗಳು ಬದುಕಿನ ಮಹತ್ವವನ್ನು ತಿಳಿಸಿಹೇಳುವುದೇ ಅಲ್ಲದೆ ಕಷ್ಟ ಬಂದಾಗ ಅವನ್ನು ತಾಳಿಕೊಳ್ಳುವ ಶಕ್ತಿಯನ್ನು ನೀಡಬಲ್ಲವಾಗಿವೆ.

ಈ ಕೀರ್ತನ ಸಾಹಿತ್ಯದಲ್ಲಿ ಎರಡು ಉಜ್ವಲ ತಾರೆಗಳೆಂದರೆ ಪುರಂದರದಾಸರು ಮತ್ತು ಕನಕದಾಸರು. ಪುರಂದರದಾಸರು ಸಾವಿರಗಟ್ಟಲೆ ಕೀರ್ತನೆಗಳನ್ನು ರಚಿಸಿ 'ದಾಸರೆಂದರೆ ಪುರಂದರದಾಸರಯ್ಯ' ಎನಿಸಿಕೊಂಡರು. ಕೀರ್ತನ ಸಾಹಿತ್ಯದಲ್ಲಿ ಅವರ ಕಾಲವನ್ನು 'ಪುರಂದರದಾಸರಯುಗ'ವೆಂದೇ ಗುರುತಿಸುತ್ತೇವೆ. ಕನಕದಾಸರ ಕೀರ್ತನೆಗಳ ಸಂಖ್ಯೆ ನೂರರ ಆಚೆ ಈಚೆ. ಆದರೆ ಕಾವ್ಯಗುಣದಲ್ಲಿ ಪುರಂದರದಾಸರಿಗಿಂತ ಒಂದು ಕೈಮಿಗಿಲು ಎನಿಸಿಕೊಂಡ ಉಜ್ವಲ ಪ್ರತಿಭಾಶಾಲಿ. ಪ್ರಮುಖವಾಗಿ ಬ್ರಾಹ್ಮಣ ಅದರಲ್ಲೂ ಮಾಧ್ವ ಪಂಗಡದವರ ಕ್ಷೇತ್ರವಾದ ಈ ದಾಸಕೂಟದಲ್ಲಿ ಏಕೈಕ ಬ್ರಾಹ್ಮಣೇತರ ವ್ಯಕ್ತಿ ಶ್ರೀ ಕನಕದಾಸರು. ಅವರ ವೈರಾಗ್ಯ, ಅನನ್ಯಭಕ್ತಿ ಹಾಗೂ ಉಜ್ವಲ ಪ್ರತಿಭೆ ವ್ಯಾಸರಾಯರಂಥವರು ಇವರಿಗೆ ದೀಕ್ಷೆ ನೀಡುವಂತೆ ಮಾಡಿತು. ಕನಕದಾಸರ ಕೀರ್ತನೆಗಳು ಇಲ್ಲಿಯವರೆಗೆ ಉಳಿದುಕೊಂಡು ಬಂದಿರುವುದಕ್ಕೆ ಪ್ರತಿಭಾಪಕ್ಷಪಾತಿಗಳಾದ ಸಹೃದಯ ವರ್ಗವಷ್ಟೇ ಅಲ್ಲ ಕನಕದಾಸರ ಪ್ರತಿಭೆಯ ವಿಶೇಷ ಶಕ್ತಿಯೂ ಮುಖ್ಯ ಕಾರಣ. ಎಲ್ಲ ದಾಸರುಗಳಂತೆ ಹರಿಪಾರಮ್ಯವನ್ನು ಒಪ್ಪಿ ಅದೇ ಮಾರ್ಗದಲ್ಲಿಯೇ ಕೀರ್ತನೆಗಳನ್ನು ರಚಿಸಿದ್ದರೂ ವಿಚಾರಪರತೆಯಲ್ಲಿ ಮಿಕ್ಕೆಲ್ಲರಿಗೂ ಮಿಗಿಲು. ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಕಾರ್ಯನಿರತರಿರುವ, ಆದರೆ ತಮ್ಮ ಮನದ

ವಿಚಾರಗಳನ್ನು ಕಾವ್ಯಕ್ಷೇತ್ರದಲ್ಲಿ ದಾಖಲು ಮಾಡಲಾಗದಿರುವ ಬಹುಸಂಖ್ಯಾತ ಕೆಳವರ್ಗಗಳ ಮುಖವಾಣಿ ಎಂಬಂತೆ ವಿಶಿಷ್ಟ ರೀತಿಯಲ್ಲಿ ತಮ್ಮ ವಿಚಾರಗಳನ್ನು ಕನಕದಾಸರು ದಾಖಲು ಮಾಡುತ್ತಾರೆ. ಅವರ ರಾಮಧಾನ್ಯ ಚರಿತೆಯೊಂದೇ ಸಾಕು ಇದಕ್ಕೆ ಉತ್ತಮ ನಿದರ್ಶನ. ಕೀರ್ತನೆಗಳಲ್ಲೂ ಅವರ ವಿಚಾರಧಾರೆ ಇದೇ ಧಾಟಿಯನ್ನು ಕೆಲವೊಮ್ಮೆ ತೋರುತ್ತದೆ. 'ಆರು ಹಿತವರು ಎಂದು ನಂಬಬೇಡ' ಎಂಬ ಕೀರ್ತನೆಯನ್ನೇ ತೆಗೆದುಕೊಳ್ಳಿ. ತಂದೆ–ತಾಯಿ–ಮಗ–ಮಡದಿ ಎಂದು ಏನೆಲ್ಲಾ ನಂಬಿಕೆಯ ಬಂಧಗಳನ್ನು ನಾವು ಹೆಣೆದುಕೊಂಡಿರುತ್ತೇವೆ. ಆ ನಂಬಿಕೆಗಳ ಬುಡವನ್ನು ಅಲುಗಾಡಿಸಿ ನಮ್ಮನ್ನು ವಿಚಾರಪರವನ್ನಾಗಿಸುತ್ತದೆ ಈ ಕೀರ್ತನೆ. ಇದೇರೀತಿ 'ಬಂದಿದೆ ದೂರು ಬರಿದೆ ಪಾಂಡವರಿಗೆ ಕೊಂದವರಿವರು ಕೌರವರೆಂಬಪಕೀರ್ತಿ' ಎಂಬ ಕೀರ್ತನೆಯಲ್ಲಿ, ಶಕುನಿ, ಭೀಷ್ಮ, ದ್ರೋಣ, ಕರ್ಣ, ಶಲ್ಯ, ಕೌರವ ಇವರೆಲ್ಲಾ ಕುರುವಂಶನಿರ್ಮೂಲನಕ್ಕೆ ಎಷ್ಟೆಷ್ಟು ಕಾರಣ ಎಂಬುದನ್ನು ಒಂದೊಂದೇ ನುಡಿಗಳಲ್ಲಿ ಬಿಡಿಸಿ ತೋರಿಸಿಕೊಡುತ್ತಾರೆ. ಕಡೆಗೆ ತನ್ನ ಪರದೈವ ಆದಿ ಕೇಶವನನ್ನೇ ಕುರಿತು ಸಂಶಯವಿಲ್ಲದ ಕುರುಬಲವನೇ ಕೊಂದ ಹಿಂಸಕನಾದಿ ಕೇಶವನೋ ಪಾಂಡವರೋ ಎಂಬ ಮಾತನ್ನು ಹೇಳುತ್ತಾರೆ. ಜಾನಪದದಲ್ಲಿರುವ 'ಕಡ್ಡಿತುಂಡು' ಮಾತಿನ ಸತ್ಯ ನಿಷ್ಠುರತೆ ಇವರ ನುಡಿಗಳಲ್ಲಿ ಕಾಣುತ್ತದೆ. ಎಲ್ಲ ದಾಸರುಗಳು ಒಂದು ರೀತಿಯಲ್ಲಿ ವಿಚಾರ ಮಾಡಿದರೆ ಇವರ ವಿಚಾರಗಳ ತಿರುವೇ ಬಹಳ ವಿಶಿಷ್ಟ. 'ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೇ' ಎಂಬ ಕೀರ್ತನೆಯಲ್ಲಿ ಆರಂಭದಲ್ಲಿ ದಶಾವತಾರ ಸ್ತುತಿಯನ್ನೇ ಸಾಂಪ್ರದಾಯಿಕವಾಗಿ ಮಾಡುತ್ತಾ ಬಂದರೂ ಕೊನೆಯ ಸಾಲು ಮಿಂಚು ಹೊಡೆದಂತೆ ಬರುತ್ತದೆ. 'ಇನ್ನೆಷ್ಟು ಕಾಲ ನೀನಿಲ್ಲಿ ಮಲಗಿದ್ದರೂ ನಿನ್ನನೆಬ್ಬಿಸುವರೊಬ್ಬರನೂ ಕಾಣೆ' ಉಡುಪಿ ಕೃಷ್ಣನನ್ನೇ ಪೂರ್ವದಿಂದ ಪಶ್ಚಿಮಕ್ಕೆ ತಿರುಗಿಸಿದರೆಂಬ ಐತಿಹ್ಯವಿರುವ ದಾಸರು ಮಲಗಿರುವ ದೇವರನ್ನು ಎಬ್ಬಿಸಬಲ್ಲ ಸತ್ವಶಾಲಿಗಳು ಇಲ್ಲ ಎಂದು ಕಳವಳ ತೋರುತ್ತಾರೆ.

'ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರು ಈ ಧರೆಯೊಳಗೆ ಒಬ್ಬರನು ಕಾಣೆ'

ಎಂಬ ಪದ್ಯ ಪುರಾಣ ಪ್ರಸಿದ್ಧ ಪ್ರಸಂಗಗಳನ್ನು ಬೇರೆ ರೀತಿಯಲ್ಲಿ ವ್ಯಾಖ್ಯಾನಿಸುತ್ತದೆ. ದೇವರೆಂದಾಕ್ಷಣ ಮಾಡಿದ್ದೆಲ್ಲ ವಿಮರ್ಶಾತೀತ ಎಂದು ದಾಸರು ಭಾವಿಸಿದಂತಿಲ್ಲ. ದೇವರ ಕಾರ್ಯಗಳನ್ನು ವಿನೂತನವಾಗಿ ವಿಮರ್ಶಿಸಿಬಿಡುತ್ತಾರೆ.

ಕಾಗಿನೆಲೆ ಆದಿಕೇಶವನಲ್ಲಿ ಅನನ್ಯ ಭಕ್ತಿ ವ್ಯಕ್ತಪಡಿಸುವ ದಾಸರು ಕೊನೆಯಲ್ಲಿ ಹೇಳುವ ಮಾತು ನೋಡಿ :

"ವರಕಾಗಿನೆಲೆಯಾದಿ ಕೇಶವನ ಭಜಿಸಿದರೆ
ತಿರಿವೆನೆಂದರೆ ತಿರುಪೆ ಕೂಳ್ಪಟ್ಟದ್ಯೆ ಕೃಷ್ಣ ॥"

ಕೃಷ್ಣನನ್ನೇ ನಂಬಿ ವೈರಾಗ್ಯಕ್ಕಿಳಿದ ದಾಸರಿಗೆ ಯಾವ ಕೆಟ್ಟ ಅನುಭವವಾಗಿ ಈ ಮಾತು ಹೊಮ್ಮಿತೋ ದೇವರನ್ನು ನಂಬಿ ಭಜಿಸಿದರೂ ತಿರುಪೆ ಕೂಳು ಹುಟ್ಟದು ಎಂದು ಅನ್ನಿಸಿತೋ ತಿಳಿಯದು.

ಅನುಭಾವ ರಂಗದಲ್ಲೂ ಇವರ ತನ್ಮಯತೆ ಅಧಿಕ. ಹರಿದಾಸ ವೃತ್ತಿಯನ್ನು ಕೈಗೊಂಡರೂ ಇವರು ಸಂಸಾರದಲ್ಲಿಯೇ ಇದ್ದು ದಾಸರಾದವರಲ್ಲ. ಪೂರ್ಣ ವೈರಾಗ್ಯದಲ್ಲಿ ಬಾಳಿದವರು. ಆದಕಾರಣ 'ತನುನಿನ್ನದು ಜೀವನ ನಿನ್ನದು ಅನುದಿನದಲಿ ಬಹ ಸುಖದುಃಖ ನಿನ್ನದು' ಎಂದು ಸರ್ವ ಸಮರ್ಪಣ ಭಾವವನ್ನು ತೋರುತ್ತಾರೆ. ತಳ್ಳಂಕ ವ್ಯಾಕುಲತೆ ಮುಸುಗಿದಾಗ 'ತಲ್ಲಣಿಸದಿರು ಕಂಡ್ಯ ತಾಳು ಮನವೇ ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ" ಎಂದು ಸಮಾಧಾನ ಕಂಡುಕೊಳ್ಳುತ್ತಾರೆ. ಲೋಕಕ್ಕೂ ಒಂದು ಉತ್ತಮ ಸಾಂತ್ವನದ ಮಾತನ್ನು ನೀಡುತ್ತಾರೆ.

ಪ್ರಸ್ತುತ ಗ್ರಂಥವಿಡೀ ಕನಕದಾಸರ ಸಮಗ್ರ ವಿಮರ್ಶೆಯನ್ನು ಒಳಗೊಳ್ಳುವುದರಿಂದ ಆಮೂಲಾಗ್ರ ವಿಮರ್ಶೆಗೆ ನಾನು ತೊಡಗುವುದಿಲ್ಲ. ಒಟ್ಟಾರೆ ಕೀರ್ತನ ಸಾಹಿತ್ಯದಲ್ಲಿ ಕನಕದಾಸರ ಸ್ಥಾನವನ್ನು ಕುರಿತು ಹೇಳುವಾಗ ಆ ಬಗ್ಗೆ ಕೆಲವು ವಿಮರ್ಶೆಗಳನ್ನು ಉಲ್ಲೇಖಿಸಿ, ಪರಿಶೀಲಿಸಿ ಈ ಪ್ರಬಂಧವನ್ನು ಮುಕ್ತಾಯಗೊಳಿಸುತ್ತೇನೆ.

ಕನಕದಾಸರು ಕೀರ್ತನಕಾರರಷ್ಟೇ ಅಲ್ಲ ಕವಿಗಳು ; ಇದು ಅವರ ವಿಶಿಷ್ಟತೆ. ಅವರ ಕೃತಿಗಳಲ್ಲಿ ಸಾಂಪ್ರದಾಯಿಕ ಕೃತಿರಚನಕಾರರಿಗಿಂತ ಭಿನ್ನವಾದ ಹಾಗೂ ಅಪೂರ್ವವಾದ ವಿಚಾರಶೀಲತೆ ಕಂಡು ಬರುತ್ತದೆ. ಇದು ಅವರ ಅನನ್ಯತೆ.

"ಪುರಂದರ ದಾಸರ ಕೀರ್ತನೆಗಳ ಸಂಖ್ಯೆಗೆ ಹೋಲಿಸಿದರೆ ಕನಕದಾಸರ ಕೀರ್ತನೆಗಳು ಅತ್ಯಲ್ಪವಾಗಿ ಕಾಣುತ್ತವೆ ; ಆದರೆ ಕನಕದಾಸರ ಕೀರ್ತನೆಗಳ ಸತ್ವವನ್ನು ಗಮನಿಸಿದರೆ, ಅವು ಪುರಂದರದಾಸರ ಕೀರ್ತನೆಗಳ ಸತ್ವದೊಂದಿಗೆ ಸಮಸ್ಪರ್ಧಿಯಾಗಬಲ್ಲವು. "ಹಾಗೆ ನೋಡಿದರೆ ಪುರಂದರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಒಂದು ಕೈ ಮಿಗಿಲಾಗಿಯೇ ಇರುವಂತೆ

ತೋರುತ್ತದೆ" ಎಂದು ಡಾ॥ ಜಿ.ಎಸ್. ಶಿವರುದ್ರಪ್ಪನವರು ಹೇಳುತ್ತಾರೆ.[೧] "ಕನಕದಾಸನಲ್ಲಿ ವಿಚಾರ ಸ್ವಾತಂತ್ರ್ಯ ಹೆಚ್ಚು. ಜನಜೀವನ ಜನಭಾಷೆಯ ಅರಿವು ಹೆಚ್ಚು." "ಸಮಾಜ ವಿಮರ್ಶೆ ಮತ್ತು ಜನಜೀವನ ಚಿತ್ರಕ್ಕೆ ಮಿಗಿಲಾದ ಎಷ್ಟೊ ಕೀರ್ತನೆಗಳಿವೆ. ಅವುಗಳಲ್ಲಿ ಕನಕದಾಸರು ಸಮಾಜದ ಕುಂದುಕೊರತೆಗಳನ್ನು ಮುಚ್ಚುಮರೆಯಿಲ್ಲದೆ ಕೆಡೆನುಡಿದಿದ್ದಾನೆ. ಅವನ ಕಳಕಳಿ ನೈಜ, ಮಾತು ಹರಿತ, ನಿರೀಕ್ಷಣೆ ತೀವ್ರ ಎಂಬುದು ತಿಳಿಯುತ್ತದೆ" ಎಂದು ರಂ. ಶ್ರೀ. ಮುಗಳಿ ಅವರು ಹೇಳಿದ್ದಾರೆ.[೨]

ದಾಸಸಾಹಿತ್ಯದಲ್ಲಿ ಪುರಂದರದಾಸರು ಮತ್ತು ಕನಕದಾಸರು ಬಹಳ ಜನಪ್ರಿಯವಾಗಿರುವುದು ಅವರು ತೋರುವ ಸಾಮಾಜಿಕ ಕಳಕಳಿಯಿಂದಾಗಿ, ಅಪೂರ್ವ ವಿಮರ್ಶನ ಧೈರ್ಯ ತೋರುವ, ಇದರಲ್ಲೂ ಅಂದಿನ ಸಮಾಜದ ಬಹುಸಂಖ್ಯಾತ ವರ್ಣಗಳ ವ್ಯಕ್ತಿಗಳ ಚಿಂತನ ರೀತಿಯನ್ನೇ ದಾಖಲಿಸುವ ಕನಕದಾಸರು ಈ ದೃಷ್ಟಿಯಲ್ಲಿ ಪುರಂದರದಾಸರಿಗೂ ಒಂದು ಕೈಮಿಗಿಲು. ಈ ಅಂಶವನ್ನೇ ನಿಸ್ಪೃಹತೆಯಿಂದ ಡಾ॥ ಶಿವರುದ್ರಪ್ಪನವರೂ ಶ್ರೀ ಮುಗಳಿ ಅವರೂ ತಿಳಿಸಿರುತ್ತಾರೆ.

ಆದರೆ ಇತ್ತೀಚೆಗೆ ಕೆಲವಾರು ವಿಮರ್ಶಕರು ಕನಕದಾಸರ "ಗುಣಮನೆ ದೋಷದವೊಲುದ್ಭಾಸಿಸುವ" ರೀತಿಯ ವಿಮರ್ಶೆಗಳನ್ನು ಮಾಡಿರುವುದು ವಿಷಾದನೀಯ.

ಇಂತಹ ಒಂದು ವಿಮರ್ಶೆಯನ್ನು ಶ್ರೀ ಎಚ್. ಎಸ್. ವೆಂಕಟೇಶ ಮೂರ್ತಿಗಳು 'ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ' ಮಾಲಿಕೆಯ 'ಕೀರ್ತನಕಾರರು' ಗ್ರಂಥದಲ್ಲಿ ಮಾಡಿರುವುದು ಕಂಡುಬರುತ್ತದೆ. ಅದನ್ನೇ ಇಲ್ಲಿ ನಾನು ಪರಿಶೀಲಿಸಬಯಸುತ್ತೇನೆ.

ಇಪ್ಪತ್ತನೆಯ ಶತಮಾನದ ವಿಮರ್ಶಕರು ಭಾವುಕತೆ ಇರುವ ಕೃತಿಗಳಿಗಿಂತಲೂ ವಿಚಾರಪರ ಕೃತಿಗಳನ್ನು ಹೆಚ್ಚು ಮಾನ್ಯ ಮಾಡುವುದು ಕಂಡುಬರುತ್ತದೆ. ಇಂತಹ ಸಂದರ್ಭದಲ್ಲಿ ೧೬ನೇ ಶತಮಾನದಲ್ಲಿಯೇ ಅಪೂರ್ವ ವಿಚಾರಶೀಲತೆಯನ್ನು ತೋರಿದ ಶ್ರೀ ಕನಕದಾಸರನ್ನು ಕುರಿತು 'ಕವಿ'ಯ ಎಚ್ಚರ ಅವರನ್ನು ಪುರಂದರರಷ್ಟು ತನ್ಮಯರಾಗಿ ಭಾವದಲ್ಲಿ ತೊಡಗುವುದಕ್ಕೆ

೧. 'ಪರಿಶೀಲನ', ಜಿ.ಎಸ್. ಶಿವರುದ್ರಪ್ಪ, ಪು. ೭೯

೨. 'ಕನ್ನಡ ಸಾಹಿತ್ಯ ಚರಿತ್ರೆ', ರಂ. ಶ್ರೀ. ಮುಗಳಿ.

ಬಿಡುವುದಿಲ್ಲ" ಎಂಬ ಮಾತು ಆಶ್ಚರ್ಯತರಿಸುತ್ತದೆ. ಅದೇನೇ ಇರಲಿ 'ತನು ನಿನ್ನದು ಜೀವನ ನಿನ್ನದು' 'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ' ಮುಂತಾದ ಹಾಡುಗಳನ್ನು ಕೇಳಿದ ಮೇಲೂ ಈ ಮಾತು ಒಪ್ಪಲು ಬರುವುದಿಲ್ಲ.

ಕುಲ ಕುಲ ಕುಲವೆನ್ನುತಿಹರು
ಕುಲವಾವುದು ಸತ್ಯಸುಖವುಳ್ಳ ಜನರಿಗೆ ?

ಈ ಕೀರ್ತನೆಯನ್ನು ಕುರಿತು ಹೇಳುತ್ತ ಶ್ರೀ ವೆಂಕಟೇಶಮೂರ್ತಿಯವರು "ಕನಕದಾಸರು ಆದಿಕೇಶನ ಭಕ್ತರಿಗೆ ಕುಲವಾವುದು ಎಂದಾಗ ಆ 'ಭಕ್ತ' ಎಂಬ ಪದ ಒಳಗೊಳ್ಳುವ ಸಮುದಾಯ ಕನಕರ ದೃಷ್ಟಿಯ ಭಕ್ತರಲ್ಲದೆ ಕೆಳವರ್ಗವನ್ನು ಹೊರಗಾಗಿಸುತ್ತದಲ್ಲ ಎಂಬ ಆಳವಾದ ನೋವು ಉಳಿಯಲೇಬೇಕಾಗುತ್ತದೆ" ಎಂದಿದ್ದಾರೆ.[೧] ಈ ಆಳವಾದ ನೋವಿಗೆ ವೆಂಕಟೇಶಮೂರ್ತಿಯವರು ಕೃತಿಯನ್ನು ಅರ್ಥಮಾಡಿಕೊಂಡಿರುವ ವಿತಂಡ ರೀತಿ ಕಾರಣವೇ ಹೊರತು ಕನಕದಾಸರು ಸುತರಾಂ ಅಲ್ಲ ಎಂದೇ ಹೇಳಬೇಕು. ಕನಕದಾಸರು ಮಠ ಕಟ್ಟಿದವರಲ್ಲ ಅಥವಾ ಇವನು ಭಕ್ತ ಆದ್ದರಿಂದ ಕುಲಜ ಇಲ್ಲದಿದ್ದರೆ ಕುಲಹೀನ ಎಂದು ಹೇಳುವ ಪ್ರಯತ್ನ ಮಾಡಿಲ್ಲ. ಅದೇ ಪದ್ಯದಲ್ಲಿ ಕನಕದಾಸರು 'ಆತ್ಮ ಯಾವ ಕುಲ ಜೀವ ಯಾವ ಕುಲ' ಎಂಬ ಪ್ರಶ್ನೆ ಎತ್ತಿದ್ದಾರೆ. ಕುಲದ ಭ್ರಮೆಯಲ್ಲಿರುವವರ ಬುಡ ಅಲುಗಾಡಿಸುವಂತಹ ಪ್ರಶ್ನೆಯಿದು. ಕೇವಲ ಮನುಷ್ಯರಲ್ಲಿ ಪ್ರಪಂಚದ ಅನಂತ ಜೀವಕೋಟಿಯನ್ನು ವ್ಯಾಪಿಸುವ ವಿಚಾರಧಾರೆಯಿದು. 'ಜಲವೇ ಸಕಲಕುಲಕ್ಕೆ ತಾಯಲ್ಲವೇ ಜಲದ ಕುಲವನೇನಾದರೂ ಬಲ್ಲಿರಾ?' ಎಂದು ಇನ್ನೊಂದು ಪದ್ಯದಲ್ಲಿ ಪ್ರಶ್ನೆ ಮಾಡಿದ್ದಾರೆ. ಎಲ್ಲ ಜೀವರಾಶಿಗಳಿಗೂ ನೀರೇ ತಾಯಿ, ಹಾಗಿದ್ದರೆ ಅದರ ಜಾತಿ ಯಾವುದು ಹೇಳಿ ನೋಡೋಣ – ಬಹಳ ಸಾರಭೂತವಾದ ಪ್ರಶ್ನೆ ಏನಿದರರ್ಥ ! "ಅವರು ಅಂದಿಗೆ ನಡೆಯುತ್ತಿದ್ದ ಕುಲಾಚಾರ ಅದರ ಬಗೆಗಿನ ವಾದ ವಿವಾದಗಳನ್ನು ಕಂಡು, ಕೇಳಿ ಹೇಸಿ ನಕ್ಕು ಕುಲದ ಬಗ್ಗೆ ಶಾಶ್ವತ ಚೊಕ್ಕ ವಿವರಣೆ ನೀಡಿದ್ದಾರೆ."[೨] ಇನ್ನೂ ವಿವರಿಸಿ ಹೇಳಬೇಕೆಂದರೆ ಕುಲ ಎನ್ನುವ ಕಲ್ಪನೆಯೇ ಗ್ರಾಹ್ಯವಲ್ಲ ಸರಿಯೂ ಅಲ್ಲ ಎಂದು ಹೇಳುವ ಉದ್ದೇಶ ಅವರದು.

ಅದೇ ಪದ್ಯದಲ್ಲಿ ಬರುವ 'ಕೆಸರಿನ ತಾವರೆ' 'ಪಶುಮಾಂಸದೊಳುತ್ಪತ್ತಿ ಕ್ಷೀರ' ಎಂಬ ಮಾತುಗಳು ಶ್ರೀ ವೆಂಕಟೇಶಮೂರ್ತಿಯವರು ಗ್ರಹಿಸಿರುವಂತೆ

೧. ಸಾಮಾನ್ಯನಿಗೆ ಸಾಹಿತ್ಯಚರಿತ್ರೆ. ಕೀರ್ತನಕಾರರು. ಪು. ೩೭, ಅದೇ ಪು. ೯೪
೨. ಕನ್ನಡ ಕವಿ ದೃಷ್ಟಿಯಲ್ಲಿ ಕುಲವಿಚಾರ – ರಾಜಪ್ಪ, 'ಅಧ್ಯಯನ', ಪು – ೭೮

ಸಂಕೇತಗಳಲ್ಲ. ಬಹಳ ವಾಸ್ತವವಾದ ದೃಷ್ಟಾಂತಗಳು. ಕೆಸರಿನಲ್ಲಿಳಿದು ಕಮಲ ತೆಗೆದುಕೊಳ್ಳುವಾಗ ಅಥವಾ ಮಾಂಸದಲ್ಲಿ ಹುಟ್ಟಿದ ಹಾಲನ್ನು ಸೇವಿಸುವಾಗ ಮಡಿ ಬಗ್ಗೆ ಚಕಾರ ಎತ್ತುವುದಿಲ್ಲ. ಆದರೆ ಮನುಷ್ಯ ಮನುಷ್ಯರಲ್ಲಿ ಏಕೆ ಭೇದ ಮಾಡುತ್ತೀರಿ ? ಎಂಬುದು ಇಲ್ಲಿನ ಪ್ರಶ್ನೆ. ಇಂಗ್ಲಿಷಿನಲ್ಲಿ ಯಾವುದೇ ಬರಹವನ್ನು ಅರ್ಥಮಾಡಿಕೊಳ್ಳುವಾಗ "Harmonic Construction" ಎಂಬ ಮಾತಿದೆ. ಇಡೀ ಬರಹದ ಉದ್ದೇಶಿತಾರ್ಥವನ್ನು ಗ್ರಹಿಸಬೇಕೇ ಹೊರತು ಎಲ್ಲೊ ಒಂದು ಸಾಲು ತೆಗೆದುಕೊಂಡು ಅಪಾರ್ಥ ಮಾಡಬಾರದು ಎಂದು ಅದರ ಅರ್ಥ. ಅದೇ ಮಾತನ್ನು ಇಲ್ಲಿ ಹೇಳಬಹುದು.

ವರ್ಣ ವ್ಯವಸ್ಥೆಗಿಂತಲೂ ಅತಿಹೀನವಾದ ವ್ಯವಸ್ಥೆ ಇನ್ನೊಂದಿಲ್ಲ. ವರ್ಗ ವ್ಯವಸ್ಥೆಯಲ್ಲಾದರೂ ಒಬ್ಬ ಬಡವ ಶ್ರೀಮಂತನಾಗುವ ಸಾಧ್ಯತೆ ಇದೆ. ಹಾಗೆ ಸಾಹುಕಾರನೂ ಬಡವನಾಗಿರುವ ನಿದರ್ಶನವಿದೆ. ವರ್ಣವ್ಯವಸ್ಥೆ ಹಾಗಲ್ಲ ಹುಟ್ಟಿನಿಂದ ಒಮ್ಮೆ ಒಟ್ಟಿನ ಕುಲ ನಿರ್ಣಯವಾಯಿತೆಂದರೆ ಇನ್ನು ಜೀವಮಾನದಲ್ಲಿ ಆತ ಅದರಿಂದ ಮುಕ್ತನಿಲ್ಲ. ಭಾರತದ ಪರಿಸ್ಥಿತಿಯಲ್ಲಿ ವರ್ಣ–ವರ್ಗ ಎರಡೂ ಒಟ್ಟೊಟ್ಟಿಗೆ ಇರುತ್ತವೆ. ಕೆಳವರ್ಣದವರೇ ಕೆಳವರ್ಗದಲ್ಲಿ ಹೆಚ್ಚಾಗಿ ಇರುತ್ತಿದ್ದರು. ಇಂತಹ ಸಂದರ್ಭದಲ್ಲಿ, "ವರ್ಣ ವ್ಯವಸ್ಥೆಯ ಬಗ್ಗೆ ಕನಕದಾಸರು ತೋರಿದ ನಿಚ್ಚಳ ವಿಮರ್ಶೆ, ವರ್ಗವ್ಯತ್ಯಾಸದ ಬಗ್ಗೆ ವ್ಯಕ್ತವಾಗಿಲ್ಲ"[೧] ಎಂದು ವೆಂಕಟೇಶಮೂರ್ತಿಯವರು ಹೇಳುತ್ತಾರೆ. ಇಡೀ ಪ್ರಾಚೀನ ಕನ್ನಡ ಸಾಹಿತ್ಯದಲ್ಲೇ ವರ್ಗ–ಸಂಘರ್ಷದ ಬಗ್ಗೆ ಒಂದು ಕಾವ್ಯವನ್ನೇ ಬರೆದಿರುವ ಏಕೈಕ ವ್ಯಕ್ತಿ ಕನಕದಾಸರು. ಅವರಿಗೆ ಈ ಬಗೆಯ ವಿಮರ್ಶೆಯೆ !? ಕನಕದಾಸರು ವರ್ಣವ್ಯವಸ್ಥೆ ಕುರಿತು ಮಾತಾಡಿದಾಗಲೆಲ್ಲಾ ವರ್ಗ ವ್ಯವಸ್ಥೆಯ ವಿರುದ್ಧವಾಗಿಯೇ ಮಾತುಗಳನ್ನಾಡಿದ್ದಾರೆ. ಇದರೊಂದಿಗೆ ಇನ್ನೊಂದು ಮಾತು ಹೇಳಬೇಕಾಗುತ್ತದೆ. ಭಗವಂತನ 'ಭಕ್ತ'ರಾದ ಕಾರಣ ಮಾತ್ರಕ್ಕೆ ವ್ಯಾಸರ ಶಿಷ್ಯರಾದ ಮಾತ್ರಕ್ಕೆ ಕನಕದಾಸರು ಮೇಲು ವರ್ಗಕ್ಕೆ ಸೇರಿಬಿಟ್ಟಂತೆ ಎಲ್ಲೂ ತೋರುವುದಿಲ್ಲ. ಮಿಕ್ಕ ದಾಸರು ದೇವರಿಗೆ ಮಾತ್ರ ದಾಸರಾಗಿದ್ದಾರೆ. ಕನಕದಾಸರು 'ದಾಸದಾಸರ ಮನೆಯ ದಾಸ'ರಾಗಿ ಬಾಳಿರುತ್ತಾರೆ. ಹರಿಯ ಮಹಿಮೆ ತಪ್ಪಿಹೋದರೆ,

"ಸಣ್ಣ ಶಾಲ್ಯೋದನ ಬೆಣ್ಣೆ ಕಾಸಿದ ತುಪ್ಪ
ಚಿನ್ನದ ಹರಿವಾಣದಲಿ ಭೋಜನ"

---

೧. ಅದೇ ಪು : ೧೪೩

ತಪ್ಪಿ ಹೋಗುತ್ತದೆ ಆದ್ದರಿಂದ "ಇಟ್ಹಾಂಗೆ ಇರುವೆನೋ ಹರಿಯೇ" ಎಂದು ಹರಿದಾಸರೊಬ್ಬರು ಹಾಡಿದರೆ, ಕನಕದಾಸರು ಬಾಳಿದ್ದು ಹೀಗೆ :

"ತೊತ್ತು ತೊಂಡನಾಗಿ ಬಾಗಿಲ ಕಾಯ್ವೆ
......................................
ಎಂಜಲ ಹರಿವಾಣಂಗಳ ಬೆಳಗುವೆ
....................................
ಮೀಸಲೂಳಿಗ ನಾ ಮಾಡಿಕೊಂಡಿರುವೆ
ಶೇಷಪ್ರಸಾದ ಉಂಡುಕೊಂಡಿರುವೆ."

ಆದ್ದರಿಂದ ಅವರಿಗೆ 'ಸಾಕಿನ್ನು ಮನುಜ ಸೇವೆ ರಂಗಯ್ಯ' ಎಂದಾಗಲಿ 'ವರಕಾಗಿನೆಲೆಯಾದಿ ಕೇಶವನ ಭಜಿಸಿದರೆ. ತಿರಿವೆನೆಂದರೆ ತಿರುಪೆ ಕೂಳ್ದುಟ್ಟದೈ' ಎಂದಾಗಲಿ ಅನ್ನಿಸಿದ್ದರೆ ಆಶ್ಚರ್ಯವೇನಲ್ಲ. ಕನಕದಾಸರು ಕೆಳವರ್ಗದಲ್ಲೇ ಒಳವರ್ಗ ಕಾಣಬಯಸಿದರು ಎಂದು ಅಪಾರ್ಥ ಮಾಡಿದರೆ ಅದಕ್ಕಿಂತ ತಪ್ಪು ಇನ್ನೊಂದಿಲ್ಲ.

ವೆಂಕಟೇಶಮೂರ್ತಿ ಅವರ ಇನ್ನೊಂದು ವಿಮರ್ಶೆ : "ಕನಕದಾಸರ ಅತ್ಯುತ್ತಮ ಕೃತಿಗಳು ತಮ್ಮ ಪ್ರಾಮಾಣಿಕ ಭಾವದ ತುಂಬುಮೊರೆಯಿಂದ, ಕೆಲವು ಅರ್ಥವತ್ತಾದ ಉಪಮಾನಗಳ ಸಹಾಯದಿಂದ ಸೂಕ್ಷ್ಮವಾದ ಚಿಂತನೆಗಳ ಗ್ರಹಿಕೆಯಿಂದ ತಮ್ಮಷ್ಟಕ್ಕೆ ಒಂದು ಅಖಂಡತೆಯನ್ನು ಸಾಧಿಸುತ್ತವಾದರೂ, ಪುರಂದರದಾಸರ ಗಿಳಿಯು ಪಂಜರದೊಳಿಲ್ಲ, ಹರಿಕುಣಿದ, ಗುಮ್ಮನ ಕರೆಯದಿರೆ. ಕದವ ಮುಚ್ಚಿದಳಿದೆಕೊ ಮೊದಲಾದ ಕೃತಿಗಳಂತೆ ತಮ್ಮ ಪ್ರತಿಮಾನಿಷ್ಠತೆಯಿಂದ ಅರ್ಥನಾದವನ್ನು ಆಕಾರಗೆಡದಂತೆ, ಹಿಗ್ಗಿಸಿಕೊಳ್ಳಬಲ್ಲ ಸಾಮರ್ಥ್ಯವನ್ನೂ ಪಡೆಯದೇ ಹೋಗುತ್ತದೆ."[೧] ಕನಕದಾಸರು ಪುರಂದರರ ಪಡಿಯಚ್ಚಂತೆ ಬರೆಯದೇ ಹೋದರೆ ಅದು ಗುಣವೇ ಹೊರತು ದೋಷವಲ್ಲ. ಅವರ ಭಿನ್ನತೆ, ವಿಚಾರಪರತೆಯೇ ಅವರ ವಿಶಿಷ್ಟತೆ. ಆ ಕಾರಣದಿಂದಲೇ ಅವರು ಹರಿದಾಸ ಸಾಹಿತ್ಯದಲ್ಲಿ ಸೋಪಜ್ಞರಾಗಿ ಸ್ಮರಣೀಯರಾಗಿರುವುದು. ಕನಕದಾಸರನ್ನು ಅಳೆಯುವುದಕ್ಕೆ ಪುರಂದರದಾಸರನ್ನು ಅಳತೆಗೋಲಾಗಿ ತೆಗೆದುಕೊಳ್ಳಬಾರದು. ತೌಲನಿಕವಾಗಿ ಇಬ್ಬರು ದಾಸರನ್ನು ವಿಮರ್ಶಿಸುವುದಾದರೆ ಡಾ॥ ಜಿ.ಎಸ್. ಶಿವರುದ್ರಪ್ಪನವರ ಈ ಮಾತುಗಳನ್ನು ನೋಡಿ :

---

೧. ಅದೇ ಪು : ೯೫.

"ಪುರಂದರದಾಸರ ಕೀರ್ತನೆಗಳಲ್ಲಿಯಂತೆ ಮುಖ್ಯವಾದ ಕಾವ್ಯಗುಣ ಕೇವಲ ಪಲ್ಲವಿಯಲ್ಲಿ ಮಡುಗಟ್ಟಿ ಉಳಿದ ಚರಣಗಳಲ್ಲಿ ಅದರ ಸಮರ್ಥನೆ ತರ್ಕವಾಗಿಯೋ ಅಥವಾ ಪಲ್ಲವಿಯಲ್ಲಿನ ಧ್ವನಿಯನ್ನು ವಾಚ್ಯವಾಗಿ ವಿವರಿಸುವ ಪದ್ಧತಿಯಲ್ಲಿಯೋ ಪರ್ಯವಸಾನವಾಗುವುದು ಕನಕದಾಸರಲ್ಲಿ ಕಡಿಮೆ."[೨]

ಒಟ್ಟಿನಲ್ಲಿ ಕನಕದಾಸರನ್ನು ಕೀರ್ತನಕಾರರಲ್ಲಿ ಅನನ್ಯರನ್ನಾಗಿ ಮಾಡಿದ ಗುಣಗಳನ್ನು ಶ್ರೀ ವರದರಾಜರಾಯರ ಮಾತುಗಳಲ್ಲಿ ಹೀಗೆ ಸಂಗ್ರಹಿಸಬಹುದು: "ಕನಕದಾಸರ ಕೆಚ್ಚುನುಡಿ ಭಕ್ತಿಪಾರಮ್ಯ, ರಹಸ್ಯತತ್ತ್ವ, ವಿಶಾಲದೃಷ್ಟಿಗಳು ಅವರ ಕೀರ್ತನೆಯ ಮುಖ್ಯ ಲಕ್ಷಣಗಳು. ಇವುಗಳನ್ನು ಪುನಃ ಪುನಃ ಓದಿ ತಿಳಿಯಬಹುದೇ ಹೊರತು ಒಮ್ಮೆ ಪಠಿಸಿ ಬಿಡುವಂತಿಲ್ಲ. ಕನಕದಾಸರ ಕೀರ್ತನೆಗೆ ಕೊನೆ ಮೊದಲಿಲ್ಲ. ಅವರ ನಡೆ ಆಧ್ಯಾತ್ಮಿಕ ಲೋಕದಲ್ಲಿ ಒಂದು ಮುನ್ನಡೆ ; ಅವರ ನುಡಿ ಮಾನವ ಕೋಟಿಗೆ ಒಂದು ಕನ್ನಡಿ.[೩]

---

೨. 'ಪರಿಶೀಲನ' ಜಿ. ಎಸ್. ಶಿವರುದ್ರಪ್ಪ. ಪು. ೭೦

೩. ಡಾ॥ ಜಿ. ವರದರಾಜರಾವ್., 'ಪಡಿನುಡಿ', ಪು. ೧೦೦–೧೦೧

# ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯಮೌಲ್ಯ

**ಶ್ಯಾಮಸುಂದರ ಬಿದರಕುಂದಿ**

ನಡುಗನ್ನಡ ಸಾಹಿತ್ಯ ಗಮನಾರ್ಹ ದಾಸ –ಕವಿಗಳಲ್ಲಿ ಒಬ್ಬರಾದ ಕನಕದಾಸರು ಮೂಲತಃ ಕವಿ ಸ್ವಭಾವದವರು. ನೂರಾರು ಕೀರ್ತನೆಗಳ ರಚನೆಯಿಂದ ಇವರು ದಾಸ ಶ್ರೇಷ್ಠರಾಗಿಯೂ, ಜನಸಾಮಾನ್ಯರ ಪ್ರೀತಿ–ಆದರಗಳಿಗೆ ಪಾತ್ರರಾಗಿದ್ದಾರೆ. 'ಕವಿ' ಮತ್ತು 'ದಾಸ' ಇವೆರಡೂ ಕನಕದಾಸರ ಸೃಜನಶೀಲ ವ್ಯಕ್ತಿತ್ವದ ಅಭಿನ್ನ ಮುಖಗಳು, ಅಭಿನ್ನವೇಕೆಂದರೆ, ಅವು ಪರಸ್ಪರ ವಿರೋಧ ದಿಕ್ಕಿನಲ್ಲಿ ಹರಿಯದೆ ಒಂದಕ್ಕೊಂದು ಪೂರಕವಾಗಿ ವ್ಯಕ್ತವಾದವು ಎಂಬುದಕ್ಕಾಗಿ. ಜೀವಂತ ಸಂವೇದನೆಯೊಂದರ ಕ್ರಮಶಃ ಬೆಳವಣಿಗೆಯ ಎರಡು ಹಂತಗಳನ್ನು ಇವು ತೋರಿಸುವಂತಹವಾಗಿವೆ. ಈ ನಮ್ಮೆದುರಿಗಿರುವ ಕನಕದಾಸರ ಒಟ್ಟು ಸಾಹಿತ್ಯವು 'ಭಕ್ತಿ' ತತ್ತ್ವದ ಬೆಲೆಯ ಮೇಲೆ ನಿಂತು ಸಾರ್ಥಕ ಜೀವನದ ಬಗೆಗಿನ ವಿವಿಧ ಕಲ್ಪನೆಗಳನ್ನೂ ಧಾರ್ಮಿಕಾಚರಣೆಯ ಸಾಧ್ಯತೆಗಳನ್ನೂ ಮತ್ತು ಬಾಳಿನ ದೃಢ ನಂಬಿಕೆಯ ಭಾವ ವಿಲಾಸಗಳನ್ನೂ ಪ್ರಸ್ತುತಪಡಿಸುವಂತಹವಾಗಿವೆ.

ದಣ್ಣಾಯಕ ವೃತ್ತಿಯಲ್ಲಿದ್ದ ತಿಮ್ಮಪ್ಪನಾಯಕ, ರಕ್ತಗತವಾದ ಕುರುಬ ಪ್ರವೃತ್ತಿಗಳಿಂದ ಬಿಡಿಸಿಕೊಂಡು ಸಂಸ್ಕೃತ ಕವಿತೆಯ ಅಲೌಕಿಕತೆ, ಧಾರ್ಮಿಕ ಸಾಹಿತ್ಯದ ಸಂಸ್ಕಾರಗಳಿಂದ ಪ್ರಭಾವಿತನಾಗಿ ಶಿಷ್ಯ ಸಂಪ್ರದಾಯದೊಂದಿಗೆ ತನ್ನನ್ನು ಗುರುತಿಸಿಕೊಂಡವನು ಹೀಗಾಗಿ ಕೆಳಜಾತಿ–ವರ್ಗದ ಅಶಿಕ್ಷಿತರು ಗಾಢವಾಗಿ ನಂಬಿ ನೆಚ್ಚುವಂತಹ ಗ್ರಾಮ್ಯ ದೇವತೆಗಳ ಬಗ್ಗೆ ತಿಮ್ಮಪ್ಪನಾಯಕನಿಗೆ ಎಂದಿನಿಂದಲೂ ಸದಭಿಪ್ರಾಯ ಮೂಡಲಿಲ್ಲ. ಅಶಿಕ್ಷಿತತನದೊಂದಿಗೆ ಸುಲಭವಾಗಿ ಮೈಗೂಡುವ ಮೌಢ್ಯ, ಹಿಂಸಾಚರಣೆ, ಅಮಾನವೀಯ ನಡೆ–ನುಡಿಗಳಿಂದ ಬುದ್ಧಿಪೂರ್ವಕವಾಗಿ ದೂರವುಳಿದ ತಿಮ್ಮಪ್ಪನಾಯಕ. ತನ್ನ ಕಾಲದ ಮತ್ತು ತನ್ನ ಪರಿಸರದ ಸುಧಾರಣಾವಾದೀ ಮನುಷ್ಯನಾಗಿಯೇ ಬೆಳೆದನು. ಸಾಂಗತ್ಯದಂತಹ ದೇಸೀ ಛಂದೋಬಂಧದ 'ಮೋಹನ ತರಂಗಿಣಿ' ಷಟ್ಪದೀ ರೂಪದ 'ಹರಿಭಕ್ತಿಸಾರ' ಹಾಗೂ 'ನಳಚರಿತೆ' ಮತ್ತು 'ರಾಮಧಾನ್ಯ ಚರಿತೆ'ಗಳನ್ನು ನಾವೀಗ ಕನಕದಾಸರ

ಕೃತಿಗಳೆಂದು ಕರೆಯುತ್ತಿದ್ದರೂ ಇವುಗಳ ಕರ್ತೃ 'ತಿಮ್ಮಪ್ಪನಾಯಕ'ನೆಂದೇ ಹೇಳುವುದಕ್ಕೆ ವಿಶೇಷ ಕಾರಣವೊಂದಿದೆ : ಮನೆತನದ ವೃತ್ತಿಯನ್ನು ಅನಾಯಾಸ ಮುಂದುವರಿಸಿದ ನಾಯಕನಿಗೆ ಲೋಕಾನುಭವ, ಲೌಕಿಕಾನುಭವ ಬೇಕಾದಷ್ಟು ಲಭಿಸಿತು. ಈ ವೃತ್ತಿಯ ದೆಸೆಯಿಂದಾಗಿ ಈ ನಾಯಕನಿಗೆ ಸಾಂಪ್ರದಾಯಿಕ ಧರ್ಮದ ಶಿಷ್ಟಜನಗಳೊಂದಿಗೆ ಸಂಪರ್ಕ, ಸಂಸ್ಕಾರ ಸಹಜವಾಗಿ ದೊರಕಿದವು, ಸಂಸ್ಕೃತ, ಕನ್ನಡ ಕವಿಗಳ ಅಧ್ಯಯನದ ಅನುಕೂಲವೂ ಸಿಕ್ಕಿತು. ಅಂತೆಯೇ ಶಿಷ್ಟಜನ ಪ್ರಿಯವಾದ ಕಾವ್ಯ ಕೃತಿಗಳನ್ನು ರಚಿಸುವ ಅವಕಾಶವನ್ನು ತಿಮ್ಮಪ್ಪನಾಯಕ ಕಲ್ಪಿಸಿಕೊಂಡನು.

ತಿಮ್ಮಪ್ಪನಾಯಕನ ಕಾವ್ಯವಸ್ತು, ಭಾಷಾಭಿವ್ಯಕ್ತಿ ಶಿಷ್ಟಮಟ್ಟದವಾಗಿದ್ದರೂ ಆತನ ತುಡಿತವೆಲ್ಲವೂ ಮೇಲ್‌ವರ್ಗದ ನಂಬಿಕೆಗಳನ್ನೇ ಎತ್ತಿಹಿಡಿಯುವಂತಹದೇನಾಗಿರಲಿಲ್ಲ. ಆತನ ಖಂಡಕಾವ್ಯವಾದ 'ರಾಮಧಾನ್ಯ ಚರಿತೆ'ಯು ಧ್ವನಿಸುವ ರಾಗಿಯ ಹೆಚ್ಚಳ, ಭತ್ತದ ಕಿರಿಮೆಯ ಪ್ರತಿಪಾದನೆಯು ತಿಮ್ಮಪ್ಪನಾಯಕ ಅಂದು ಎದುರಿಸಿದ ಸಾಮಾಜಿಕ ವಿಷಮತೆಯನ್ನು ದಾಖಲಿಸುವಂತಿದೆ. ತನ್ನ ಪ್ರತಿಭೆ ಮತ್ತು ಬುದ್ಧಿಪೂರ್ವಕ ಪರಿಶ್ರಮದಿಂದ ತಿಮ್ಮಪ್ಪನಾಯಕನಿಗೆ ಶಿಷ್ಟ ಸಂಪ್ರದಾಯಕ್ಕೆ ಪರಿವರ್ತಿತನಾಗುವುದು ಸಾಧ್ಯವಾದರೂ ಸಮಾಜದ ರೂಢಿಗತ ವ್ಯವಸ್ಥೆಯ ಅಡ್ಡಿ–ಆತಂಕಗಳಿಂದಾಗಿ ಆತ ಕೆಲವು ಕಷ್ಟಗಳನ್ನೂ ಎದುರಿಸಬೇಕಾಯಿತು. ಆತನು ಅನುಭವಿಸಿದ ಮಾನಸಿಕ ನೋವು 'ಕನಕದಾಸ'ರ ಕೀರ್ತನೆಗಳಲ್ಲಿ ವ್ಯಕ್ತವಾಗಿದೆ. ವ್ಯಾಸರಾಯರ ಶಿಷ್ಯನಾಗಿ ದಾಸ ದೀಕ್ಷೆ ಪಡೆದ ಮೇಲೂ ಮೇಲ್ಜಾತಿಯ ಕುಹಕಿಗಳಿಂದ ಆತನು ಕಿರುಕುಳಕ್ಕೆ ಒಳಗಾದನೆಂಬ ಬಗ್ಗೆ ಐತಿಹ್ಯರೂಪದ ಮಾರ್ಮಿಕ ಕತೆಗಳಿವೆ. ಕನಕದಾಸರ ಸತ್ತ್ವ, ಶೀಲ, ಪ್ರತಿಭೆ ಅಸ್ಖಲಿತವಾದವು ; ಅಂತೆಯೇ ಆತ ಸಾಮಾಜಿಕವಾಗಿ ಎದುರಿಸಿದ ಎಲ್ಲ ಕ್ಷುಲ್ಲಕ ಅಡ್ಡಿ ಆತಂಕವನ್ನೂ ಗೆದ್ದರು : ದಾಸನಾಗಿ ಇಡೀ ಸಮಾಜಕ್ಕೇ ಬೋಧಿಸಿದರು. ಅವರ ವ್ಯಕ್ತಿತ್ವ ಸುಲಭವಾಗಿ, ಕೇವಲ ವೈರಾಗ್ಯದ ಕಾರಣಕ್ಕಾಗಿ ದಾಸತ್ವ ಹೊಂದಲಿಲ್ಲ ; ಲೌಕಿಕವಾಗಿಯೂ ಹೋರಾಡಿ ಆ ಹೊಸ ಸ್ವರೂಪವನ್ನು ಪಡೆದರೆಂಬುದು ಗಮನಾರ್ಹ. ಈ ಹೋರಾಟದ ಕಾರಣದಿಂದಾಗಿಯೇ ಕನಕದಾಸರ ಕೀರ್ತನೆಗಳಲ್ಲಿ ಉಳಿದ ದಾಸರ ಸಾಹಿತ್ಯದಲ್ಲಿ ಕಾಣದಂತಹ ವಿಚಾರ ಸೊಬಗು, ಪ್ರಖರವಾದ ಅನುಭವ ನಿವೇದನೆ, ವಿಶಿಷ್ಟ ಭಾಷಾಶೈಲಿ ಕಾಣಸಿಗುತ್ತವೆ. ಅವರ ಕೀರ್ತನೆಗಳ ಸಾಹಿತ್ಯ ಮೌಲ್ಯ ಕೂಡ ಅನನ್ಯವಾಗಿ ಕಾಣುವುದು ಈ ಕಾರಣಕ್ಕಾಗಿಯೇ.

ದಾಸ ಸಾಹಿತ್ಯ, ಕಾವ್ಯ ಮಾಧ್ಯಮವನ್ನು ಅನುಸರಿಸಿತು ; ಕಾವ್ಯಧರ್ಮವೇ ಅದಕ್ಕೆ ಪ್ರಮುಖವಲ್ಲ. ಜನಸಾಮಾನ್ಯರಲ್ಲಿ ನೆಲೆಸಿದ ಭೋಗ ಜೀವನದ ಆಸೆ, ತನ್ನತನದ ಕೊರತೆಯನ್ನು ನೀಗಿಸಿ ನಿಜವಾದ ಸುಖದ ಕಲ್ಪನೆಯನ್ನು ಮನಗಾಣಿಸುವುದಾಗಿದೆ. ಉತ್ತಮವಾದ ಮೌಲ್ಯವನ್ನು ಜೀವನದಲ್ಲಿ ಅಳವಡಿಸಿಕೊಳ್ಳುವ ದಿಸೆ ತಮ್ಮ ಕಾಲದಲ್ಲಿ ಉಬ್ಬರಿಸಿ ಬಂದ ಆರ್ಥಿಕ ಸಮೃದ್ಧಿಯ ಬಗೆಗೇ ಬೇಸರವಿತ್ತು ಏಕೆಂದರೆ ಆ ಸಮೃದ್ಧಿಯು ಜನಮನದಲ್ಲಿ ಅಜ್ಞಾನವನ್ನು, ಸ್ವಾರ್ಥವನ್ನು ಹಬ್ಬಿಸಿತೇ ಹೊರತು ಮಾನವತೆಯ ನಿಚ್ಚಳ ಸ್ವರೂಪವನ್ನಲ್ಲ. ತಪ್ಪುಹಾದಿಗುಂಟ ಹೊರಟ ಸಮಕಾಲೀನರನ್ನು ಸರಿಯಾದ ಹಾದಿಗೆ ತರುವ ಅಗತ್ಯವನ್ನು ದಾಸರು ಮನಗಂಡರು. ಇದನ್ನು ಸಾಧಿಸಲಿಕ್ಕಾಗಿ ಅವರು ತಮ್ಮ ಸಾತ್ವಿಕ ಶಕ್ತಿಯನ್ನು ಮತ್ತು ಪ್ರತಿಭಾ ಮತಿಯನ್ನು ವಿನಿಯೋಗಿಸಿದರು. ಭಕ್ತಿಯ ಮಾರ್ಗದಲ್ಲಿ ಜನರನ್ನು ಕರೆದೊಯ್ಯುವಾಗ ಎದುರಾಗುವಾಗ ವೈರುಧ್ಯಗಳ ಬಗೆಗೆ ದಾಸರಿಗೆ ಸ್ಪಷ್ಟವಾದ ಎಚ್ಚರವಿದೆ. ಅಂತೆಯೇ ಅವರ ಸಾಹಿತ್ಯದಲ್ಲಿ ನಮಗೆ ಭಕ್ತಿಯ ಸಹಜ ಸ್ಫುರಣೆಯಾದ ಸ್ತುತಿ, ಪ್ರಶಂಸೆ, ತನ್ಮಯತೆಯ ಧ್ಯಾನ, ಒಣ ಉಪದೇಶಗಳ ಏಕತಾನತೆ ಕಾಣಬರುವುದಿಲ್ಲ. ಒಂದು ಸಜೀವ ಚೇತನ, ಸ್ಪಂದನೆಯ ಸಂವೇದನೆ ದಾಸರ ರಚನೆಗಳಲ್ಲಿ ಕಾಣಿಸುತ್ತದೆ. ಕನಕದಾಸರಂತೂ ವೈಯಕ್ತಿಕವಾಗಿ, ಸಾಮಾಜಿಕವಾಗಿ ಎದುರಿಸಿದಂತಹ ವಿರೋಧಾಭಾಸಗಳು ಅನೇಕ. ಅವರು ಅಂತಹ ಅನುಭವಗಳಿಗೆಲ್ಲ ಕೀರ್ತನೆಯ ಮಾಧ್ಯಮವನ್ನು ಬಳಸಿಕೊಂಡರು. ಆದುದರಿಂದ ಕನಕದಾಸರ ಕೀರ್ತನೆಗಳಲ್ಲಿ ಕೇವಲ ಧಾರ್ಮಿಕ, ಆಧ್ಯಾತ್ಮಿಕ ಜೀವನ ಮಾರ್ಗದ ಏಕತಾನದ ಧೋರಣೆ ಮಾತ್ರ ಕಾಣದೆ, ಬೆಳೆವಣಿಗೆಯೂ ಕಾಣುತ್ತಿರುತ್ತದೆ. ಜೀವಂತ ಸಾಹಿತ್ಯದ ಎಲ್ಲ ಲಕ್ಷಣಗಳು ಅಂದರೆ ವಸ್ತು, ಭಾಷಾಭಿವ್ಯಕ್ತಿಗಳ ಹಾರ್ದಿಕವಾದ ಹೊಂದಾಣಿಕೆಯೊಂದು ನಮಗೆ ಅವರಲ್ಲಿ ಕಾಣಸಿಗುತ್ತದೆ.

ಕನಕದಾಸರು ರಚಿಸಿದ ಕೀರ್ತನೆಗಳ ನಿರೂಪಣಾ ಧಾಟಿಯನ್ನು ಗಮನಿಸಿದಾಗ, ಅವು ನಾಲ್ಕು ಬಗೆಯ ಭಾವಾರ್ಥದ ವಿಧಾನವನ್ನು ಅನುಸರಿಸಿದುದು ಕಾಣುತ್ತದೆ : ೧. ಸ್ವಗತದ ಧಾಟಿಯಲ್ಲಿ, ತನ್ನ ಮನಸ್ಸು–ಅಂತರಾತ್ಮವನ್ನು ಕುರಿತು ಹೇಳಿಕೊಂಡಂತಹ ಕೀರ್ತನೆಗಳು. ೨. ಆರಾಧ್ಯದೈವವಾದ 'ಕಾಗಿನೆಲೆಯಾದಿಕೇಶವ'ನನ್ನು ಉದ್ದೇಶಿಸಿ ಹೇಳಿರುವ ಮಾತುಗಳು. ೩. ತನ್ನ ಸುತ್ತಲಿನ ದಾಸರು, ಭಕ್ತರು, ಸಾಧಕರುಗಳನ್ನು ಸಂಬೋಧಿಸಿ ಹೇಳಿದ ಸಾಂದರ್ಭಿಕ ಹೇಳಿಕೆಗಳು. ೪. ಘೋಷಣಾರೂಪದಲ್ಲಿ ಯಾರಿಗೂ–ಎಲ್ಲರೂ ಕೇಳುವಂತೆ

ಹೇಳಿದ ಮಾತುಗಳು. ಅಂತರಂಗ-ಬಹಿರಂಗಗಳೆರಡರಲ್ಲೂ ಹರಿಭಕ್ತನಾಗಿ ವ್ಯಕ್ತಿತ್ವ ರೂಪಿಸಿಕೊಂಡಿದ್ದ ಕನಕದಾಸರು ವಿವಿಧ ಸಮಯದಲ್ಲಿ ಅಂದು ಹೇಳಿದ ಕೀರ್ತನೆಗಳಲ್ಲಿ ಈ ವೈವಿಧ್ಯವಿರುವುದರಿಂದ ಅವುಗಳಲ್ಲಿ ಸಾಹಿತ್ಯದ ಉತ್ತಮ ಲಕ್ಷಣಗಳು, ಶೈಲಿಯ ವೈಲಕ್ಷಣಗಳು ಮೈಗೂಡಿವೆ. ಈ ನಿಟ್ಟಿನಿಂದ ಕನಕದಾಸರ ಕೀರ್ತನೆಗಳನ್ನು ವಿಶ್ಲೇಷಿಸಿದಾಗ ಸಾಹಿತ್ಯದ ಸೊಬಗು-ಸೊಗಡು ಎದ್ದು ಕಂಡೀತು.

**'ತಲ್ಲಣಿಸದಿರು ಕಂಡ್ಯ ತಾಳು ಮನವೆ'**

'ಸ್ವಗತ'ದ ಧಾಟಿಯಲ್ಲಿರುವ ಹಲವು ಕೀರ್ತನಗಳು ಕನಕದಾಸರು ಹರಿಭಕ್ತನಾಗಿ ರೂಪುಗೊಳ್ಳುತ್ತಿರುವ ಹಂತದಲ್ಲಿ ಅವರಿಂದ ರಚಿತವಾಗಿರಬಹುದಾಗಿದೆ. ಪ್ರವೃತ್ತಿ ಜನ್ಯವಾದ ಆಸೆಗಳು ಮಾಮೂಲೀ ಜೀವನದ ಸುಖ-ಸಂತಸದ ಕಡೆಗೆ ಎಳೆಯುತ್ತಿದ್ದರೆ, ಉದಾತ್ತ ಆಲೋಚನೆಗಳು ಕನಕದಾಸನನ್ನು ಭಕ್ತಿ, ಅನುಭಾವದ ಕಡೆಗೆ ಎಳೆಯುತ್ತಿವೆ. ಈ ದ್ವಂದ್ವಗಳನ್ನು ಗೆಲ್ಲುವುದಕ್ಕೆ ಕೆಲವಾರು ದಿನಗಳ ಪ್ರಯತ್ನ ಸಾಲದು ; ಹಲವು ವರ್ಷಗಳ ಸಾಧನೆಯೇ ಬೇಕು. ಸಾಧಕನು ಭಗವದ್‌ಭಕ್ತಿಯಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ನಿರಂತರ ಯತ್ನದಲ್ಲಿರುವಾಗ ಮನಸ್ಸಿಗೆ ಉಂಟಾಗುವ ಆತಂಕ, ತಲ್ಲಣ ಕಳವಳ-ಕಸಿವಿಸಿಗಳು ಅಸಹನೀಯ. ಸಾಧಕನನ್ನು ಇವು ಕ್ಷಣಿಕ ಹತಾಶೆಗೆ ಒಳಪಡಿಸಬಹುದು. ಆದರೆ ಅವನಲ್ಲಿ ಚಿಂತನಶಕ್ತಿ ಇದ್ದು, ಅಚಲವಾದ ಶ್ರದ್ಧಾಪೂರ್ಣ ನಿಲುವಿಗವನು ತಲುಪಿರುವುದರಿಂದ ಒದಗಿಬಂದ ಎಂತಹದೇ ಕಳವಳ ಭಕ್ತನನ್ನು ಪರಮಾತ್ಮನ ಅಮೂರ್ತವಾದ, ಆದರೆ ಅಗಾಧವಾದ ಶಕ್ತಿಯ ಕಡೆಗೇ ಒಯ್ಯುತ್ತದೆ. ಸಾಧಕನಲ್ಲಿ ಉಂಟಾಗುವ ಈ ಪ್ರತಿಕ್ರಿಯೆಯನ್ನು ಕನಕದಾಸರು ಕವಿಯಾಗಿ ವ್ಯಕ್ತಪಡಿಸುವುದನ್ನು, ದಾಸನಾಗಿ ಇದಕ್ಕೆ ಪ್ರತಿಕ್ರಿಯಿಸುವುದನ್ನು

'ತಲ್ಲಣಿಸದಿರು ಕಂಡ್ಯ ತಾಳುಮನವೆ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ'

ಎಂಬಂತಹ ಕೀರ್ತನೆಯಲ್ಲಿ ಮನಗಾಣುತ್ತೇವೆ. ಕಾಗಿನೆಲೆಯಾದಿ ಕೇಶವನನ್ನು ನೆರೆ ನಂಬಿದುದಾಯಿತು. ಆದರೆ ಅವನು ತನ್ನನ್ನು 'ಕಾಯು'ವನೆ, ಕೈಬಿಡುವನೆ, ಎಂಬ ತೊಳಲಾಟ ಒಳಗೆ, ಏಕಾಕಿತನದ ಕಾದಾಟವೂ ಕನಕದಾಸರನ್ನು ಹತಾಶಗೊಳಿಸಿದೆ. ತನ್ನ ಮನಸ್ಸಿನ ಈ ಸ್ಥಿತಿ ಕೇವಲ ಭ್ರಮೆ ; ನಿಜದಲ್ಲಿ ಕಾಗಿನೆಲೆಯಾದಿ ಕೇಶವನು ಸಹಜವಾಗಿ ಎಲ್ಲರನ್ನು ಕಾಯತ್ತಿರುವನು ಎಂಬ ಸತ್ಯ ಅವನ ಬುದ್ಧಿಗೆ ಗೋಚರವಾಗಿದೆ, ಮನದ ಆತಂಕ, ಬುದ್ಧಿಯ ಪರಿಹಾರ

ಇವೆರಡೂ ಪ್ರಸ್ತುತ ಕೀರ್ತನದಲ್ಲಿ ಹುಟ್ಟಿ ಬೆಳೆಯುವ ರೀತಿಯು ಅಭ್ಯಸನೀಯವಾಗಿದೆ.

ಬೆಟ್ಟ, ಕಾಡು ನದಿಗಳಂತಹ ಏಕಾಂಗಸ್ಥಿತಿಯ ಪ್ರಾಕೃತಿಕ ವಸ್ತುಗಳ ಪ್ರಸ್ತಾಪವಿದೆ. ಇಲ್ಲಿ ವೃಕ್ಷಕ್ಕೆ ನೀರೆರೆದವರು ; ಪಕ್ಷಿಗಳಿಗೆ ಅನ್ನವಿತ್ತರು ; ಕಪ್ಪೆಗಳಿಗೆ ಆಹಾರ ತಂದಿತ್ತವರು ಯಾರು–ಎಂಬುದು ಇಲ್ಲಿಯ ಸಾಮಾನ್ಯ ಪ್ರಶ್ನೆ ; ಅಥವಾ ಕುತೂಹಲ ದಾಸರ ಅರಿವಿಗೆ ಕಂಡ ಉತ್ತರವೆಂದರೆ– 'ಹುಟ್ಟಿಸಿದ ದೇವ ತಾ ಹೊಣೆಗಾರ'ನಾಗಿರುವುದರಿಂದ ಪಾಲನೆ–ಪೋಷಣೆಯ ಕಾರ್ಯವನ್ನು 'ಗುಟ್ಟಾಗಿ ಮಾಡಿದ್ದಾನೆ'. ಇದು ನಿಸ್ಸಂದೇಹ ನಂಬಿಕೆ. ಪ್ರತಿಯೊಂದು ಚರಾಚರ ವಸ್ತುವನ್ನೂ ಸೃಷ್ಟಿಸಿದವನೇ ಎಲ್ಲವನ್ನೂ ಸಲಹುವನು ಎಂಬ 'ಧೈರ್ಯ' ಭಕ್ತನಿಗೆ ಬಂದಿದೆ. ಇನ್ನು ಯಾವ ಆತಂಕವೂ ಯಾರಿಂದಲೂ ಇಲ್ಲ. 'ನಾನು ಒಂಟಿ, ಅಸಹಾಯಕ' ಎಂಬ ಅಳುಕು ಸಲ್ಲದು. ಭಕ್ತನಾದ ತಾನಿನ್ನು ಆದಿಕೇಶವನನ್ನು ತನ್ಮಯತೆಯಿಂದ ಭಜಿಸುವುದಷ್ಟೇ ಗುರಿ. ಈ ಸಂಕಲ್ಪವು ಕೀರ್ತನೆಯಲ್ಲಿ ಮೈದುಂಬಿದ ಬಗೆ ಹಾರ್ದಿಕವಾಗಿದೆ. ದೃಷ್ಟಾಂತಗಳ ಸೊಬಗೇ ಅಪೂರ್ವ. ಸಮಸ್ತ ಪ್ರಕೃತಿಯನ್ನು ಹೆತ್ತ ತಾಯಿಯಂತೆ ಹಾಗೂ ರಕ್ಷಿಸುವ ತಂದೆಯಂತೆ ಆ 'ಸ್ವಾಮಿ' ಮೇರು ಹೊಣೆಯನ್ನು ಭಕ್ತನು ಶೋಧಿಸುವ ಕ್ರಮದಲ್ಲೇ ಭಕ್ತನ ಸಹೃದಯತೆ ಸೂರೆಗೊಂಡಿದೆ. ತಾನು ಅಬಲ, ತನ್ನಂತೆ ಇತರ ಮೂಕ ವಸ್ತುಗಳೂ ಅಬಲ. ನಿಜ. 'ಬಲ್ಲಿದ'ನಾದ ಕಾಗಿನೆಲೆಯಾದಿ ಕೇಶವರಾಯನಿರುವದರಿಂದ ಅಬಲತೆಗೆ ಯಾವ ಬಾಧೆಯೂ ತಾಗದೆಂಬ ನಂಬಿಕೆ ಕೀರ್ತನೆಯಲ್ಲಿ ದೃಢವಾಗಿ ಬೆಳೆದಿದೆ. ಭಾವದ ಇಂಗಿತವು ಭಾಷೆಯಲ್ಲಿ ಸಾಕಾರಗೊಂಡ ಬಗೆಯಲ್ಲಿ ಕನಕದಾಸರ ಕಲ್ಪಕಶಕ್ತಿ ಅಗಾಧ ಕುಸುರಿ ಕೆಲಸ ಮಾಡಿದೆ :

'ನೆಚ್ಚದಿರು ಸಂಸಾರ, ನೆಲೆಯಲ್ಲವೀ ಕಾಯ
ಅಚ್ಯುತನ ನಾಮವಿದು ನೆನೆದು ಸುಖಿಯಾಗೊ'
'ಸಂಸಾರ ಸಾಗರವನುತ್ತರಿಸುವೊಡೆ
ಕಂಸಾರಿನಾಮವೊಂದೆ ಸಾಕು ಮನವೆ'
'ದಾನಧರ್ಮವ ಮಾಡಿ ಸುಖಿಯಾಗು ಮನವೆ
ಹೀನ ವೃತ್ತಿಯಲಿ ನೀ ಕೆಡಬೇಡ ಮನವೆ

ಈ ಮೊದಲಾದ 'ಸ್ವಗತ' ಮನವರಿಕೆಗಳಲ್ಲಿ ಸಾಧಕನು ಆರಂಭ ಕಾಲದ ತನ್ನ ಚಂಚಲ ಮನಸ್ಸಿಗೆ ಶ್ರದ್ಧೆ–ನಂಬಿಕೆಯ ತಳಹದಿ ಹಾಕಿಕೊಳ್ಳುವ ಭಾವಗಳೇ ಅಡಗಿವೆ. ಮನಸ್ಸಿನ ಹೊಯ್ದಾಟಗಳನ್ನು ಸೂಚಿಸುವಂತಹ ವಿಷಯಗಳ

ಪ್ರಸ್ತಾಪವಿದೆ ಇಲ್ಲಿ. ವೈರಾಗ್ಯದ ಸುಗುಣಗಳನ್ನು ಕೆಡಿಸುವಂತಹ ಲೌಕಿಕ ದುರ್ಗುಣಗಳನ್ನು ನಿವಾರಿಸಿಕೊಳ್ಳುವ ಹೊಣೆ ತನ್ನದು, ಆ ಪ್ರಯತ್ನದಲ್ಲಿರುವುದೇ ಸಾಧಕ ಧರ್ಮ. ಈ ದಿಶೆಯಲ್ಲಿಯ ಸಂಕಲ್ಪದ ಅನಿಸಿಕೆ ಮತ್ತೆ ಮತ್ತೆ ಬಂದಿದೆ ಅನೇಕ ಕಡೆಗೆ. ಆದರೆ ಅದರಲ್ಲೂ ಒಂದು ಕ್ರಮವಿದೆ. ಅದೇನೆಂದರೆ ಶುದ್ಧ ಭಕ್ತಿ, ಪಕ್ವವೈರಾಗ್ಯ, ಸದ್ಗುಣಗಳ ಆವಾಹನೆಗಳಿಗೆ ಎದುರು ಬೀಳುವ ಅನಿಷ್ಟಗಳನ್ನು ಕನಕದಾಸರು ಅಭಿನಯಪೂರ್ವಕವಾಗಿ ಪ್ರಸ್ತಾಪಿಸುತ್ತಾರೆ. ಅವುಗಳನ್ನು ವಿಮರ್ಶೆಗೆ ಒಳಪಡಿಸುತ್ತಾರೆ. ಕೊನೆಗೆ ತೀರ್ಮಾನದ ಪ್ರಕಟನೆ.

"ನಾನಾ ಜನ್ಮದಿ ಬಂದ ನಾಟಕದ ಬೊಂಬೆಯಿದು"

ಎಂದು ದೇಹದ ಪ್ರವೃತ್ತಿ ಜನ್ಯ ಸ್ವಭಾವಕ್ಕೆ ಕನಕದಾಸರು ಕಲ್ಪಿಸಿದ ರೂಪಕ, ಅವರ ಮನೋಧರ್ಮ ವೈರಾಗ್ಯಕ್ಕೆ ಪರಿವರ್ತಿತವಾದುದರ ದ್ಯೋತಕ.

'ತನು ನಿನ್ನದು, ಜೀವನ ನಿನ್ನದೊ...'

ಕನಕದಾಸರು ನೆರೆನಂಬಿದ 'ಕಾಗಿನೆಲೆಯಾದಿ ಕೇಶವ'ನನ್ನು ಆರಾಧ್ಯದೈವವಾಗಿ ಪ್ರತಿಯೊಂದು ಕೀರ್ತನದಲ್ಲಿ ಸ್ಮರಿಸಿದ್ದಾರೆ. ಹೀಗಾಗಿ ಅದು 'ಅಂಕಿತ' (ಮುದ್ರಿಕೆ) ಮಾತ್ರವಾಗಿ ಬಂದಿಲ್ಲ, ಕನಕದಾಸರ ಆತ್ಮಸಾಕ್ಷಿಯಾಗಿಯೂ ಅದು ಪಾತ್ರವಹಿಸುತ್ತದೆ. ಆರಾಧ್ಯದೈವವನ್ನು ಸಂಬೋಧಿಸಿ ದಾಸರು ಹೇಳಿರುವ ಮಾತುಗಳಲ್ಲಿ ಭಾವಗೀತೆಯ ಹೃದಯಂಗಮ ಗುಣಗಳು ಧಾರಾಳವಾಗಿ ವ್ಯಕ್ತವಾಗಿವೆ. ಪರಮಾತ್ಮನಲ್ಲಿಯ ಈ ಗಾಢ ನಂಬಿಕೆಗೆ ಸರ್ವಾರ್ಪಣ ಬುದ್ಧಿಯ ಪ್ರೇರಣೆ ಇದೆ.

'ತನು ನಿನ್ನದು, ಜೀವನ ನಿನ್ನದೊ
ಅನುದಿನದಲಿ ಬಾಹೋ ಸುಖ ದುಃಖ ನಿನ್ನದಯ್ಯ'

ಎಂಬಲ್ಲಿ, ಪಂಚೇಂದ್ರಿಯಗಳ ಮೂಲಕ ತನಗೆ ದಕ್ಕುವ ಅನುಭವಗಳೆಲ್ಲ, ತನ್ನವಲ್ಲ ; 'ಕಾಯಜಪಿತ ಕಾಗಿನೆಲೆಯಾದಿಕೇಶವ'ನದೆಂಬುದರ ಸಮರ್ಥನೆ ಇದೆ. '....ಕೇಶವರಾಯ, ನೀನಲ್ಲದೆ ನರರು ಸ್ವತಂತ್ರರೆ?' ಎಂದು ಕೇಳಿರುವಲ್ಲಿ ತನ್ನನ್ನು ಶ್ರೀಹರಿಗೆ ಕೊಟ್ಟುಕೊಂಡಿರುವುದರ ಒಪ್ಪಿಗೆಯಿದೆ. ಈ ಸರ್ವಾರ್ಪಣ ತತ್ತ್ವವು ಕನಕದಾಸರಿಗೆ ಲಭಿಸಿದ್ದು ಭಾಗವತ ಧರ್ಮದ ಸಂಸ್ಕಾರದಿಂದ. ಭಾಗವತ ಧರ್ಮದ ಮನೋಭಾವವನ್ನು ಕನಕದಾಸರು ಈ ಮುಂಚೆಯೆ, 'ಹರಿಭಕ್ತಿಸಾರ'ದ ನೂರಹತ್ತು ಹೃದ್ಯಭಾವದ ಷಟ್ಪದಿಗಳಲ್ಲಿ ನಿವೇದಿಸಿದ್ದುಂಟು. ಅದೇ ತತ್ತ್ವದ ರೂಪಕ ಕಾವ್ಯವಾಗಿ 'ರಾಮಧಾನ್ಯ ಚರಿತೆ'ಯನ್ನು ಬರೆದಿದ್ದಾರೆ. ಕ್ರಮೇಣ ದಾಸನಾಗಿ ಬೆಳೆಬೆಳೆದಂತೆ ಕನಕನಾಯಕನಲ್ಲಿ ಸರ್ವಾರ್ಪಣ ದೃಷ್ಟಿಯು

ಮಾಗಿರುವುದನ್ನು, ಫಲವತ್ತಾಗಿ ಕಂಗೊಳಿಸುವುದನ್ನು ಕಾಣಬಲ್ಲೆವು.

ಸರ್ವಾರ್ಪಣ ದೃಷ್ಟಿಯ ಈ ಕೀರ್ತನೆಗಳಲ್ಲಿ ಭಾವನಿರ್ಭರತೆಯೇ ಮುಖ್ಯಾಂಶ. ಉತ್ಸಾಹಶೀಲವಾಗಿ, ಶ್ರೀಮಂತ ಶಬ್ದಗಳಲ್ಲಿ (ಆದರೆ ನಿರಾಡಂಬರವಾಗಿ) ಹೊರಬರುವ ಈ ದೃಷ್ಟಿಯು ಉಪಮೆ-ರೂಪಕಗಳನ್ನು ತನ್ನ ಒಡಲಲ್ಲಿರಿಸಿಕೊಂಡುದನ್ನು ಗಮನಿಸಬೇಕು. ಪಂಚೇಂದ್ರಿಯಗಳ ಪಂಚವಿಧದ ಸುಖಗಳನ್ನು ಬಣ್ಣಿಸುವಾಗ ಕನಕದಾಸರು ನೀಡುವ "ನವಮೋಹನಾಂಗಿಯರ ರೂಪ", "ಗಂಧ-ಕಸ್ತೂರಿ ಪರಿಮಳದ ಲೇಪನ", "ಕಡುರುಚಿಯ ಷಡುರಸದ ಅನ್ನ"-ಈ ಮುಂತಾದ ರಮ್ಯ ನಿದರ್ಶನಗಳು ಲೌಕಿಕದಲ್ಲಿ ಕಾಣುವಂತಹವೇ. ಕನಕದಾಸರು ರಸಿಕರಾಗಿ ಅವುಗಳನ್ನೆಲ್ಲ ಅನುಭವಿಸಿದವರೇ. ಆದರೆ ಅವು "ಮಾಯಾಪಾಶದ ಬಲೆಯೊಳಗೆ ಸಿಲುಕಿಸುವಂತಹ ಪಂಚೇಂದ್ರಿಯಗಳು" ಎಂಬ ಅರಿವು ಅವರಿಗಿರುವುದೇ ವಿಶೇಷ. ಕಾಮಸುಖಕ್ಕೆ ತನ್ನನ್ನು ಎಳಸುವ ಸಂಚು ಮತ್ತು ಅದರಿಂದ ಮುಕ್ತಿಗೊಳಿಸುವ ಹೊಣೆ-ಶ್ರೀಹರಿಯದೇ ಎಂಬ ತೀರ್ಮಾನಕ್ಕೆ ಬರುವಲ್ಲಿ ಕನಕದಾಸರ ವ್ಯಕ್ತಿತ್ವ ಬೆಳೆದುದರ ಅನುಭವ ನಮಗೂ ಆಗುತ್ತದೆ. ಭಾವಗೀತೆಯು ಒಂದು ಅಮೂರ್ತ-ಅವ್ಯಕ್ತ ಭಾವದ ನೆಲೆಯಿಂದ ಆರಂಭವಾಗಿ ಮೂರ್ತವೂ ಸ್ಪಷ್ಟವೂ ಆದ ವಾಸ್ತವಿಕ ಅನುಭವಗಳನ್ನು ಮೈಗೂಡಿಸಿಕೊಂಡು ಧನ್ಯತೆ, ಕೃತಕೃತ್ಯತೆಯ ಹಾರ್ದಿಕಭಾವದವರೆಗೆ ಬೆಳೆಯುವ ಕಾವ್ಯವಸ್ತು. ಈ ವಿಧಾನವನ್ನು ಕನಕದಾಸರು ಕೀರ್ತನೆಗಳಲ್ಲಿ ಸಹಜವಾಗಿ ಸಾಧಿಸಿದ್ದಾರೆಂಬುದಕ್ಕೆ-

'ಆವ ಸಿರಿಯಲಿ ಎನ್ನ ಮರೆತೆ, ದೇವ ಜಾನಕೀ ರಮಣ ಪೇಳು'

'ನನ್ನಿಂದ ನಾನೇ ಜನಿಸಿ ಬಂದೆನೆ ದೇವ, ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ,'

'ಬಂದೆವಯ್ಯ ಗೋವಿಂದ ಶೆಟ್ಟಿ ನಿನ್ನ ಹರಿವಾಣ ತೀರ್ಥ ಪ್ರಸಾದ ಉಂಟೆನಲಾಗಿ'

'ಆರು ಬದುಕಿದರಯ್ಯ ಹರಿ ನಿನ್ನ ನಂಬಿ, ತೋರು ಈ ಧರೆಯೊಳಗೆ ಒಬ್ಬರನೂ ಕಾಣೆ ಕೃಷ್ಣ'

'ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ'

'ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೇ ಕೂಗಿದರು ಧ್ವನಿ ಕೇಳಲಿಲ್ಲವೆ ನರಹರಿಯೆ?'

'ಏನೆಂದು ಕೊಂಡಾಡಿ ತುತಿಸಲೋ ದೇವ, ನಾನೇನು ಬಲ್ಲೆ ನಿನ್ನಯ ಮಹಿಮೆ ಘನವ'

'ಎಳ್ಳು ಕಾಳಿನಷ್ಟು ಭಕ್ತಿ ಎನ್ನೊಳಗಿಲ್ಲ......ಮೊರೆ ಹೊಕ್ಕೆನಿಂದು, ಕಾಯ್ದುಕೊಳ್ಳೋ ದೇವಾದಿದೇವೋತ್ತಮ"

–ಈ ಮುಂತಾದ ಕೀರ್ತನೆಗಳನ್ನು ನಿದರ್ಶನವಾಗಿ ನೀಡಬಹುದು.

ಭಾವಗೀತೆಯ ಸಾವಯವ ರಚನಾಗುಣವನ್ನು ಕನಕದಾಸರು ಈ ಕೀರ್ತನಗಳಲ್ಲಿ ಯಶಸ್ವಿಯಾಗಿ ಸಾಧಿಸಿದ್ದಾರೆ. ಅಂತೆಯೆ, ಒಂದು ಮೂಲಭಾವವು–ಆರಂಭದಿಂದ ಅಂತ್ಯದವರೆಗೆ ಕೀರ್ತನೆಯ ಶಿಲ್ಪದಲ್ಲಿ ತರ್ಕಬದ್ಧವಾಗಿ–ಸುಸಂಬದ್ಧವಾಗಿ ಬೆಳೆದು ಬರುವ ಬಗೆಯನ್ನು ಓದಿ ಅನುಭವಿಸಬಲ್ಲೆವು. 'ಎಳ್ಳು ಕಾಳಿನಷ್ಟು ಭಕುತಿ ಎನ್ನೊಳಗಿಲ್ಲ' ಎಂಬ ಆತ್ಮಪರಿಶೀಲನೆಯ ಕೀರ್ತನೆಯಲ್ಲಿ ಕನಕದಾಸರು ಬಳಸಿರುವ ಆರುಬಗೆಯ ದೃಷ್ಟಾಂತಗಳು ಕ್ರಮಬದ್ಧವಾಗಿ ಬೆಳೆದು ಬರುತ್ತವೆ. ತನ್ನ ಭಕ್ತಿಕ್ರಿಯೆಯು ಅಂತರಂಗದಲ್ಲಿ ಪ್ರಾಮಾಣಿಕವಾಗಿ ನೆಲೆಗೊಂಡಿರದೆ, ಕೇವಲ ಅನುಕರಣೆಯ ಮಟ್ಟದಲ್ಲಿ, ಅದೂ ತೋರಿಕೆ (ಡಾಂಭಿಕ) ರೀತಿಯಲ್ಲಿ ಮಾತ್ರ ಇರುವುದನ್ನು ಕನಕದಾಸರು ಟೀಕಿಸಿಕೊಂಡಿದ್ದಾರೆ.

೧. ಬೆಳ್ಳಕ್ಕಿಯ ಡಂಭತನ, ೨. ಗುಂಡುಮುಳುಕನ ಹಕ್ಕಿಯ ಸ್ನಾನ, ೩. ಮಂಡೂಕ (ಕಪ್ಪೆಯ)ನ ಧ್ಯಾನ, ೪. 'ಗಾಣದೆತ್ತಿನ ಪ್ರದಕ್ಷಿಣೆ, ೫. ಮಾಣಿಕ್ಯದ ರಾಶಿಯಲ್ಲಿ ಅಣಿಮುತ್ತು ಹುಡುಕುವ ಐವರು ಅಂಧಕರು, ೬. ಇಕ್ಕುಳದ ಕೈಲಿ ಸಿಕ್ಕು ಕಾದಕಬ್ಬಿಣದ ಸಿಡಿಮಿಡಿತನ–ಈ ದೃಷ್ಟಾಂತಗಳ ಪಟ್ಟಿಯು "ಕಳ್ಳರಿಗೆ ಕಳ್ಳನಂತೆ" ಇರುವ ತನ್ನ ಬಗೆಗಿನ ಉಪಮೆಗೆ ಸಮಾನಧರ್ಮ ಒದಗಿಸುವಂತಿದೆ. ಇವೆಲ್ಲವುಗಳು ಸೃಷ್ಟಿಸಿದ ಸಾವಯದ ಶಿಲ್ಪ, ಕನಕದಾಸರ ಆಶಯದ ಪ್ರತೀಕವಾಗಿ ಮನಸ್ಸಿನಲ್ಲಿ ಮೂಡುತ್ತದೆ. ಮೌಢ್ಯದ ಭಕ್ತಿ, ರೂಢಿಗೆ (ಜಾಡಿಗೆ) ಬಿದ್ದ ಆಚರಣೆಯ ಅರ್ಥಹೀನತೆ, ಅರಿವಿನ ಕೊರತೆಯ ಧ್ಯಾನ ಅಥವಾ ಭಕ್ತಿ ಸಂಪೂರ್ಣವ್ಯರ್ಥ ಎಂಬ ಅಂಶವು ಇಲ್ಲಿ ಪ್ರತೀತಿಗೊಳ್ಳುವುದು. ಕೊನೆಯಲ್ಲಿ 'ಹೊಕ್ಕಳ ಹೂವಿನ ಬಾಡದಾದಿ ಕೇಶವ'ನಲ್ಲಿ ಮೊರೆಯಿಡುವ ಮಾತು ಅನನ್ಯವಾಗುವುದಕ್ಕೆ ಅದರಲ್ಲಿ ಅಡಗಿದ ಶ್ಲೇಷಾರ್ಥದ ಸೊಗಸು ಕಾರಣ. ಇಲ್ಲಿಯ 'ಹೂವು' ವಿಷ್ಣುವಿನ ಹೊಕ್ಕಳಲ್ಲಿ ಹುಟ್ಟಿದುದು. ಅದು ಎಂದಿಗೂ ಬಾಡಲಾರದಂತಹದು (ಸದಾ ತಾಜಾ) ಎಂಬರ್ಥಕ್ಕೆ ಅವಕಾಶವಿರುವಂತೆ, ಆ ಹೂವು 'ಬಾಡಗ್ರಾಮದ ಕೇಶವನದು' ಎಂಬ ಸದಭಿಮಾನದ ಅರ್ಥ ಮನಸೆಳೆಯುವಂತಹದೇ. ಈ ಬಗೆಯಲ್ಲಿ ಅರ್ಥಧ್ವನಿ ಹೊಮ್ಮಿಸುವಂತಹ ಕೀರ್ತನಗಳನ್ನು ರಚಿಸುವ ಕನಕದಾಸರು ಸಾಹಿತ್ಯದ ನಾಡಿಮಿತವನ್ನು ಹಾಡಿನಲ್ಲಿ ಅನುರಿಸುತ್ತಾರೆ. ಕಾವ್ಯಕೌಶಲದ ಈ ಸಾಧನೆ, ಅವರ ಕವಿಹೃದಯ ಮತ್ತು ಕವಿಬುದ್ಧಿಯ ಫಲಿತಾಂಶವೇ ಆಗಿದೆ.

ಭಕ್ತನಲ್ಲಿ ಎದ್ದುಕಾಣುವ ಆತ್ಮಶೋಧನೆಯ ಪರಿ ಭಗವದ್ ಭಕ್ತಿಯ ಆರಂಭ ಕಾಲದ ಲಕ್ಷಣ ಸ್ವವಿಮರ್ಶೆಯ ಈ ಶಕ್ತಿ ಕನಕದಾಸರಲ್ಲಿ ಸಾಕಷ್ಟು ಸಲ ಕಾಣಿಸಿಕೊಂಡಿದೆ. ವಿಚಿತ್ರವೆಂದರೆ ಅವರು ಹೆರವರ ಭರ್ತ್ಸನೆಗೂ ನಿಂದೆಗೂ ಸಹ ಬಲಿಯಾದುದು. ಇದೇ ಹೊತ್ತಿಗೆ ಕೊಂಚಮಟ್ಟಿಗೆ 'ಅಹಂಕಾರ'ವೂ ಅವರನ್ನು ಕಾಡಿರಬೇಕು. ಅಂತೆಯೆ–

"ದಾಸದಾಸರ ಮನೆಯ ದಾಸಿಯರ ಮಗ ನಾನು
ಸಾಸಿರನಾಮದೊಡೆಯ ರಂಗಯ್ಯನ ಮನೆಯ"

ಎಂಬ ಕೀರ್ತನೆಯಲ್ಲಿ ತಾನು 'ಶಂಕುದಾಸ, ಮಂಕುದಾಸ, ಮರಳುದಾಸ, ಬಡದಾಸ, ಕುರುಬದಾಸ, ಮಾದಿಗದಾಸ, ಆಳಿನಾಳಿನದಾಸ' ಎಂದು ಮುಂತಾಗಿ ಆತ್ಮನಿಂದನೆ ಮಾಡಿಕೊಂಡಿದ್ದಾರೆ. ಅಹಂಕಾರದ ಸಂಪೂರ್ಣನಿವಾರಣೆಯೇ ಈ ಕೀರ್ತನೆಯ ಆಶಯ. ಅಹಂಕಾರ ನಿರಸನದ ಭಾವವನ್ನವರು ಪ್ರಾಸಬದ್ಧನುಡಿಗಟ್ಟಿನಲ್ಲಿ, ಅರ್ಥ ಸ್ವಾರಸ್ಯ, ಸಂದರ್ಭದ ಔಚಿತ್ಯ ಸಮೇತವಾಗಿ ವ್ಯಕ್ತ ಮಾಡುತ್ತಿರುವದರಿಂದ ಇಲ್ಲಿ ವಿನಯ ಸಾಕಾರಗೊಂಡಿದೆ. ಕನಕನನ್ನು 'ಕುರುಬ' ಎಂದು ನಿಂದಿಸಿದವರಿಗೆ ಇಲ್ಲಿ ದೊರಕುವ ಉತ್ತರವೆಂದರೆ–ತಾನು ತನ್ನೊಡೆಯನ ಪಾಲಿಗಷ್ಟೇ ದಾಸನಲ್ಲ ; ಕೇಶವನನ್ನು ಛಲದಿಂದ ಭಜಿಸುವವರ "ಮನೆಯ ಮಾದಿಗದಾಸ" ಎಂಬ ವಿಧೇಯ ಭಾವ. ಇದು ನುಡಿಯಿಂದ ನುಡಿಗೆ ದಟ್ಟವಾಗುತ್ತ, ಭಕ್ತನ ಹೃದಯದ ಸಂಪೂರ್ಣ ಪರಿವರ್ತಿತ ಸ್ಥಿತಿಯನ್ನು ನಮ್ಮೆದುರು ತೋರಿಸುವಂತಿದೆ. 'ದಾಸ' ಪದವು ಹೊಮ್ಮಿಸುವ ವಿವಿಧ ಮಗ್ಗುಲಿನ ಅರ್ಥಗಳನ್ನು ಕೀರ್ತನೆ ನಿವೇದಿಸುತ್ತದೆ. 'ಎನಗಿಂತ ಕಿರಿಯರಿಲ್ಲ ; ಶಿವ ಭಕ್ತರಿಗಿಂತ ಹಿರಿಯರಿಲ್ಲ' ಎಂಬ ಬಸವಣ್ಣನವರ ವಿನಯವಂತಿಕೆಯ ವಚನದಷ್ಟೇ, ಕನಕದಾಸರ ಈ ಕೀರ್ತನೆಯೂ ಮನವನ್ನು ತೀವ್ರವಾಗಿ ತಟ್ಟುತ್ತದೆ, ಮುಟ್ಟುತ್ತದೆ.

"ಈಶ ನಿನ್ನ ಚರಣಭಜನೆ ಆಸೆಯಿಂದ ಮಾಡುವೆ
ದೋಷರಾಶಿ ನಾಶಮಾಡೊ ಶ್ರೀಶ ಕೇಶವ"

ಎಂಬ ಭಜನೆಯ ಧಾಟಿಯ ಹಾಡು, ಕನಕದಾಸರ ಆರಾಧ್ಯದೈವದ ನಾಮಸ್ತೋತ್ರವೇ ಆಗಿದೆ. ಗಾಯಿತ್ರೀ ಜಪದ ಒಂದಂಗವಾಗಿ ವೈದಿಕರು ಪಠಿಸುವ ಶ್ರೀಹರಿಯ ೨೪ ನಾಮಗಳನ್ನು ಕನಕದಾಸರು ಈ ಹಾಡಿನಲ್ಲಿ ಅಳವಡಿಸಿದ್ದಾರೆ. (ಬ್ರಾಹ್ಮಣ ಸ್ತ್ರೀಯರು 'ಗಾಯಿತ್ರೀಜಪ'ವಿಲ್ಲದೆ ಶುಚಿರ್ಭೂತರಾಗಿ ಹಾಡಿಕೊಳ್ಳುವ, ಸಾಂಪ್ರದಾಯಿಕ ಗೀತೆಯು ಇದಾಗಿದೆ. ಅನುಪ್ರಾಸದ ಸೊಗಸು, ಪದಗಳ ಔಚಿತ್ಯಪೂರ್ಣ ಸಂಯೋಜನೆಯ ಈ ಹಾಡು, ಸುವ್ವಿ (ಲಾಲೀಪದ)

ಮಟ್ಟುವಿನಲ್ಲಿದ್ದು ಹೆಣ್ಣುಮಕ್ಕಳು ಇದನ್ನು ರಾಗಪೂರ್ಣವಾಗಿ ಹಾಡಬಲ್ಲರು. ಭಕ್ತನ ಮೈಮನಸ್ಸಿಗೆ ಏಕಾಗ್ರತೆಯ ಶಕ್ತಿಯನ್ನು ನೀಡಬಲ್ಲ ಹಾರ್ದಿಕ ಹಾಡು ಇದು. ತಾನು ಅಪ್ಪತಪ್ಪಿ ಮಾಡಿರಬಹುದಾದ ಪಾಪದ ಪರಮಾರ್ಜನೆಗಾಗಿ ಕ್ಷಮೆ ಯಾಚಿಸುತ್ತ ಭಕ್ತಿ–ಜ್ಞಾನ–ವೈರಾಗ್ಯಗಳ ಮನಸ್ಥಿತಿಗಾಗಿ ಬೇಡುತ್ತ ಬೆಳೆಯುವ ಇಲ್ಲಿಯ ಭಾವನಾವರಣ ಮನಸ್ಸನ್ನು ತಲ್ಲೀನಗೊಳಿಸುವಂತಿದೆ. ಹೇಗೇ ಯಾಂತ್ರಿಕವಾಗಿ ಪಠಿಸಿದರೂ ಸಹ, "ಕವಿದುಕೊಂಡು ಇರುವ ಪಾಪ । ಸವೆದು ಹೋಗುವಂತೆ ಮಾಡಿ । ಜವನ ಬಾಧೆಯನ್ನು ಬಿಡಿಸೊ ತ್ರಿವಿಕ್ರಮ" ; "ಸಂಚಿತಾರ್ಥ ಪಾಪಗಳು ಕಿಂಚಿತಾದ ಪೀಡೆಗಳು । ಮುಂಚಿತಾಗಿ ಕಳೆದು ಪೊರೆಯೊ । ಸ್ವಾಮಿ ಅಚ್ಯುತ" ಎಂಬಂತಹ ಪದ–ಪದಾರ್ಥ ಹೊಂದಾಣಿಕೆಯು ಪಠಿಸುವರ ಮನದಾಳಕ್ಕೆ ಇಳಿದು ಮತ್ತೆ ಮತ್ತೆ ಗುಣುಗುಣಿಸುವಂತೆ ಮಾಡುವುದಲ್ಲದೆ ಮೂಲ ಆಶಯದ ಗ್ರಹಿತಾರ್ಥಕ್ಕೆ ಸೆಳೆದೊಯ್ಯುತ್ತದೆ. ಚಿಂತನಾರ್ಥವುಳ್ಳ ಕಾವ್ಯವನ್ನು ಮಂತ್ರಕ್ಕೆ ಒಗ್ಗಿಸಿಕೊಳ್ಳುವ ಪ್ರತಿಭಾಶಕ್ತಿ ಕನಕದಾಸರಂಥವರಿಗೆ ಮಾತ್ರ ಶಕ್ಯವೆಂಬುದು ಶ್ಲಾಘನೀಯ.

"ನೀ ಮಾಯೆಯೊಳಗೋ, ನಿನ್ನೊಳು ಮಾಯೆಯೋ, ನೀ ದೇಹದೊಳಗೋ ನಿನ್ನೊಳು ದೇಹವೋ ಹರಿಯೆ" ಎಂದು ಅನುಮಾನದ ಧಾಟಿಯಲ್ಲಿ ಪ್ರಶ್ನೆ ಎತ್ತುವ ಕನಕದಾಸರು ಮೂರ್ತ (ಗೋಚರ) ಅಮೂರ್ತ (ಅಗೋಚರ) ವಿಚಾರಗಳನ್ನು ಕೀರ್ತನದ ತುಂಬ ಮುಖಾಮುಖಿ ಮಾಡುತ್ತಿದ್ದಾರೆ. ಬಯಲು–ಆಲಯ ; ನಯನ–ಬುದ್ಧಿ ; ಸಕ್ಕರೆ–ಸವಿ ; ಜಿಹ್ವೆ–ಮನಸ್ಸು–ಹೀಗೆ ಪರಸ್ಪರ ಹೊಂದಾಣಿಕೆಯುಳ್ಳ ವಸ್ತು ಮತ್ತು ಪರಿಣಾಮದ ಸಾರ್ಥಕ ಸಂಬಂಧಗಳಲ್ಲಿ ಯಾವುದು ಯಾವುದರಲ್ಲಿ ಅಡಕವಾಗಿದೆ ಎಂಬ ತರ್ಕ ಬಗೆಹರಿಸಲಾಗದ್ದು. 'ಬೀಜ–ವೃಕ್ಷನ್ಯಾಯ'ದಂತೆ ಅಪರಿಹಾರ್ಯವಾದ ಈ ತರ್ಕ, ಅನುಮಾನದ ಹಂತದಲ್ಲಿ ಉಳಿಯುವದರಲ್ಲೇ ಬದುಕಿನ (ಅನುಭಾವಸ್ಥಿತಿ) ಸ್ವಾರಸ್ಯವಿದೆ. ಭಿನ್ನವಾಗಿ ಕಂಡರೂ ಅಭಿನ್ನವಾಗಿ ಹೊಂದಿಕೊಂಡಿರುವ ಈ ವಸ್ತು–ಪರಿಣಾಮಗಳಿಗೆಲ್ಲ ಶ್ರೀಹರಿಯೇ ಮೂಲ, ಶಾಶ್ವತನೆಲೆಯಾಗಿದ್ದಾನೆಂಬ ತೀರ್ಮಾನ ಈ ಕೀರ್ತನೆಯದು. 'ಎಲ್ಲ ನಿನ್ನೊಳಗೊ' ಎಂದು ಕೊನೆಗೆ ಒಪ್ಪಿಕೊಳ್ಳುವಲ್ಲಿ ಧನ್ಯತೆಯ ಭಾವವಿದೆ ; ಪರಿಹಾರ ದೊರೆತ ಸಮಾಧಾನವಿದೆ. 'ಅಸಮಭವ'ನನ್ನು ನೆಚ್ಚಿ ಮೆಚ್ಚಿ ಶ್ರದ್ಧೆಯಿಂದ ಸೇವಿಸಬೇಕೆಂಬ ಏಕೋಭಾವದ ಆಶಯವನ್ನು ನಾಟಕೀಯ ಶೈಲಿಯಲ್ಲಿ ಮಂಡಿಸುವ ಕನಕದಾಸರ ರೀತಿಯು ಭಕ್ತನನ್ನು ಚಿಂತನೆಗೆ ಒಳಪಡಿಸುತ್ತದೆ.

'ತನು ನಿನ್ನದು, ಜೀವನ ನಿನ್ನದು' ಎಂಬ ನೆರೆನಂಬಿದ್ದರೂ ಶ್ರೀಹರಿಯು (ಪರಮಾತ್ಮ) ತನಗಿಂತ (ಆತ್ಮ)ಲೂ ಭಿನ್ನನು–ಎಂಬ ದ್ವೈತಭಾವ ಕನಕದಾಸರಲ್ಲಿ ಮನೆ ಮಾಡಿದೆ. ಈ ಭೇದದ ಅರಿವಿನಿಂದ ಎಷ್ಟೋ ಕೀರ್ತನೆಗಳಲ್ಲಿ ಮಾನವನಾಗಿ ತಾನು ಎಸಗುವ ತಪ್ಪು–ತಡೆಗಳಿಗೆ ದೇವರೇ ಕಾರಣ ಎಂಬ ಭಾವವ್ಯಕ್ತವಾಗಿದೆ. "ನನ್ನಿಂದ ನಾನೇ ಜನಿಸಿ ಬಂದೆನೆ ದೇವ, ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ ನಿನ್ನದು ತಪ್ಪೊ, ಎನ್ನದು ತಪ್ಪೊ ಪರಮಾತ್ಮ" ಎಂದು ಪ್ರಶ್ನಿಸುತ್ತ ಒಂದು ಕೀರ್ತನದುದ್ದಕ್ಕೂ ಕನಕದಾಸರು 'ಕಾಯಿಜಪಿತ ಕಾಗಿನೆಲೆಯಾದಿಕೇಶವ'ನನ್ನು ಸಲಿಗೆಯ ಧಾಟಿಯಲ್ಲಿ ತರಾಟೆ ತೆಗೆದುಕೊಳ್ಳುತ್ತಾರೆ. ಪರಮಾತ್ಮನನ್ನು ಅಷ್ಟವಿಧಾರ್ಚನೆಯಲ್ಲಿ ಸೇವಿಸುವ ಭಕ್ತನು ಮೈತ್ರಿ (ಸಖ್ಯ) ಭಾವದಿಂದ ಸಲಿಗೆ ತೋರುವುದೂ ಭಕ್ತಿಯ ಒಂದು ಹಾರ್ದಿಕ ಅಭಿವ್ಯಕ್ತಿ. ಭಕ್ತನೂ ಹರಿಯಷ್ಟೇ ಶಕ್ತ. ಭಕ್ತಿಯು ಅವನಲ್ಲಿ ಆತ್ಮ ವಿಶ್ವಾಸವನ್ನು ಬಲಿಸಿದೆ. ಈ ಬಲದಿಂದ ಹರಿಯನ್ನು ಹಕ್ಕಿನಿಂದ ಪ್ರಶ್ನಿಸುವ, ಬೇಡಿಕೆಗಾಗಿ ಒತ್ತಾಯಿಸುವ ಗುಣ ಅವನಲ್ಲಿ ಬೆಳೆದಿದೆ. "ಹೇರನೊಪ್ಪಿಸಿದ ಮೇಲೆ ಸುಂಕವೇತಕೆ ದೇವ?" ಎಂದು, ನಾಣ್ಣುಡಿಯ ಉದಾಹರಣೆ ನೀಡುತ್ತ ಶ್ರೀಹರಿಯನ್ನು ಪ್ರಶ್ನಿಸುವ ಕನಕದಾಸರು 'ತನು–ಮನಗಳಿಂದಾದ ತಪ್ಪು, ಮಾನವೀಯವಾದುದು ಅವನ್ನು ಎಣಿಸದೆ ಕಾಯಯ್ಯ' ಎಂದು ವಿನಂತಿಸುತ್ತಾರೆ. ಕೀರ್ತನೆಯ ತುಂಬ ಪ್ರಸ್ತಾಪವಾಗುವ ಲೌಕಿಕ ದೃಷ್ಟಾಂತಗಳು ನಿಸ್ಸಹಾಯಕತೆ, ದೌರ್ಬಲ್ಯ ಅಕಸ್ಮಿಕಗಳ ಮಂಡನೆಯಿಂದ ಕೂಡಿವೆ. ತರ್ಕಪೂರ್ಣವಾದ ಈ ಮಂಡನೆಗಳಲ್ಲಿ ಆತ್ಮ ಭಾವವನ್ನು ಮೇಳವಿಸಿರುವುದು ಕನಕದಾಸರ ಕಾವ್ಯಸಾಧನೆ.

"ಆರು ಬದುಕಿದರಯ್ಯ ಹರಿ ನಿನ್ನ ನಂಬಿ
ತೋರು ಈ ಧರೆಯೊಳಗೆ ಒಬ್ಬರನು ಕಾಣೆ ಕೃಷ್ಣ"

ಎಂಬ ಸವಾಲನ್ನು ಒಡ್ಡುವ ಕನಕದಾಸರು ಕೃಷ್ಣಾವತಾರದಲ್ಲಿ ಶ್ರೀಹರಿಯು ದುಷ್ಟ ಸಂಹರಣ, ಶಿಷ್ಟ ಸಂರಕ್ಷಣ ಮಾಡಿದುದನ್ನು ನೆನೆಯುತ್ತಾರೆ. ಇದು 'ನಿಂದಾಸ್ತುತಿ'ಯ ಹಾಡು. ವ್ಯತಿರಿಕ್ತ ಅಂಶಗಳನ್ನೇ ನಮೂದಿಸುತ್ತ ಕೃಷ್ಣನ ಧಾರ್ಮಿಕ ನಿಲುವುಗಳನ್ನು ಬೆಂಬಲಿಸುವ ಧಾಟಿಯಲ್ಲಿ ಕವಿಯೊಬ್ಬನ ಕಲ್ಪನಾವಿಲಾಸದ ಕೆಲವು ಪರಿಗಳು ವ್ಯಕ್ತವಾಗಿವೆ.

"ಊರಿಗೆ ಬಂದರೆ ದಾಸಯ್ಯ ನಮ್ಮ
ಕೇರಿಗೆ ಬಾ ಕಂಡ್ಯ ದಾಸಯ್ಯ'

ಎಂಬ ಪಲ್ಲವಿಯುಳ್ಳ ಕೀರ್ತನೆಯಲ್ಲಿ ಬಾಲಕೃಷ್ಣನ ಲೀಲೆಗಳ ಸ್ಮರಣೆ

ತುಂಬಿದೆ. 'ದಾಸಯ್ಯ'ನ ರೂಪದ ಬಾಲಕೃಷ್ಣನು ನಂದಗೋಕುಲದಲ್ಲಿ ಎಸಗಿದ ಸಾಹಸ–ಮೋಹಕ ಲೀಲೆಗಳನ್ನು ಕನಕದಾಸರು ನೆನೆಯುವಲ್ಲಿ ಭಾವನಿರ್ಭರತೆ ತುಂಬಿದೆ. ಗೋವುಗಳನ್ನು ಕಾಯ್ದವನು, ಈಗ ತನ್ನನ್ನು ಕಾಯಬೇಕೆಂಬ ಹಾರೈಕೆ ಕೀರ್ತನದಲ್ಲಿ ತುಂಬಿದೆ. ಕೃಷ್ಣನ ಸುಂದರವಾದ ಭಾವಚಿತ್ರವೊಂದನ್ನು ಶಬ್ದಚಿತ್ರದಲ್ಲಿ ಪಡಿಮೂಡಿಸುವಲ್ಲಿ ಕನಕದಾಸರು ಸಫಲರಾಗಿದ್ದಾರೆ.

**'ಮುತ್ತು ಬಂದಿದೆ ಕೇರಿಗೆ, ಜನರೇ ಕೇಳಿ...'**

ತಿಮ್ಮಪ್ಪನಾಯಕ ಸ್ವಯಂಪ್ರೇರಣೆಯಿಂದ ದಾಸನಾಗಿ, ವೈರಾಗ್ಯ, ಜ್ಞಾನ ಭಕ್ತಿಯ ಸಾಧನೆಗಳಲ್ಲಿ ತೊಡಗಿದರೂ ವೈಯಕ್ತಿಕ ಮೋಕ್ಷದ ಗಳಿಕೆ ಅವರ ಧ್ಯೇಯವಾಗಿರಲಿಲ್ಲ. ಪ್ರತಿಯೊಬ್ಬ ವ್ಯಕ್ತಿ ಹೇಗೆ ಪರಮಾತ್ಮನ ಅಧೀನನೋ ಹಾಗೆಯೆ ಮನುಷ್ಯ, ತನ್ನ ಪರಿಸರ–ಪರಿಸ್ಥಿತಿಗಳ ಋಣದಲ್ಲಿ ಇರತಕ್ಕವನು. ತನ್ನ ಪರಿಸರವನ್ನು ದುಷ್ಟ ಪ್ರವೃತ್ತಿಗಳಿಂದ, ಅನ್ಯಾಯ ಅಕ್ರಮಗಳಿಂದ ವಿಮೋಚನೆಗೊಳಿಸುವುದು ಹೊಣೆಗಾರ ವ್ಯಕ್ತಿಯ ವಿವೇಕ. ಅಂತರಂಗದಷ್ಟೇ ಬಹಿರಂಗದ ಜೀವನವೂ ನಿರ್ಮಲವಾಗಿರಬೇಕೆಂಬ ಕಳಕಳಿಯುಳ್ಳ ಕನಕದಾಸರು ಹಲವಾರು ಕೀರ್ತನೆಗಳ ಮೂಲಕ, ತಮ್ಮ ಸಹವರ್ತಿಗಳಾದ ದಾಸರನ್ನು, ಭಕ್ತರನ್ನು ಮತ್ತು ಸಮಾಜದ ಬೇರೆ ಬೇರೆ ಜನರನ್ನು ಸಂಬೋಧಿಸಿ ನಿವೇದಿಸಿದ ನೀತಿ ಮಾತುಗಳು ಮನನೀಯವಾಗಿವೆ. ಸಂಬೋಧನೆಯ ಈ ಶೈಲಿ ಆತ್ಮೀಯವಾಗಿದೆ ; ಮನವಿಯ ಧಾಟಿ ಎದ್ದುಕಾಣುತ್ತದೆ. ಅನುನಯದ ವಿಧಾನವನ್ನು ಕನಕದಾಸರು ಬಳಸಿದುದು ಅವರ ದಾಸ ಮನೋಭಾವಕ್ಕೆ ಉಚಿತವಾಗಿದೆ.

ಶ್ರೀಕೃಷ್ಣನ ನಾಮ, ಸ್ವರೂಪ, ಮಹಿಮಾಶಕ್ತಿಯನ್ನು "ಮುತ್ತು" ಎಂದು ಕೀರ್ತಿಸುವ ಕನಕದಾಸರು "ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ" ಎಂದು ಆತ್ಮೀಯವಾಗಿ ಬಿನ್ನವಿಸುತ್ತಾರೆ. ಮುತ್ತು–ಅಪರೂಪದ, ಬೆಲೆಯುಳ್ಳ, ಪ್ರೀತ್ಯಾ–ಸ್ಪದವಸ್ತು. ಕೃಷ್ಣನ ವ್ಯಕ್ತಿತ್ವ ಅಮೂಲ್ಯ ಮುತ್ತಿನಷ್ಟೇ ಮೋಹಕವಾದುದು. "ಜ್ಞಾನವೆಂಬೊ ದಾರದಲ್ಲಿ ಪೋಣಿಸುವ ಮುತ್ತು" ಎಂಬ ಉಪಮೆ, ಕನಕದಾಸರ ಧ್ಯೇಯವನ್ನು ಪ್ರಕಟಪಡಿಸುತ್ತದೆ. ಪ್ರತಿಯೊಂದು ಪಂಕ್ತಿಯಲ್ಲಿ 'ಮುತ್ತು' ಪುನರುಕ್ತಿಗೊಳ್ಳುವ ಕ್ರಮದಲ್ಲೇ ಅದರ ನಾದವು ಅನುರಣನಗೊಳ್ಳುವಂತೆ ಅರ್ಥಶಕ್ತಿಯೂ ಮನಸ್ಸನ್ನು ತಾಕಿ ಭಾವನೆಯ ಹಾರ್ದಿಕ ಅಲೆಗಳನ್ನು ಎಬ್ಬಿಸುತ್ತದೆ.

ಕನಕದಾಸರು ಸುತ್ತಮುತ್ತಲೂ ಇದ್ದ ಅಜ್ಞಾನಿಗಳನ್ನು, ಅರೆಜ್ಞಾನಿಗಳನ್ನು ಡಂಭಾಚಾರಿಗಳನ್ನು, ದುಃಖಿತರಾದ ಪ್ರಾಪಂಚಿಕರನ್ನು ಕಂಡಾಗಲೆಲ್ಲ

ಸಂದರ್ಭೋಚಿತವಾಗಿ ಉಪದೇಶ ನೀಡಿದ್ದಾರೆ. ಈ ಬೋಧನೆಗಳಲ್ಲಿ ಎದ್ದುಕಾಣುವ ಅಂಶವೆಂದರೆ–ಹೃದಯಕ್ಕೆ ವೇದ್ಯವಾಗುವ ನಿತ್ಯಜೀವನದ ನಿದರ್ಶನಗಳು. "ನಾನು–ನೀನು ಎನ್ನದಿರೊ. ಹೀನಮಾನವ, ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ" ಎಂಬ ಕೀರ್ತನೆಯಲ್ಲಿ ಕಾಮ, ಕರ್ಮ, ಕುಲಗಳ ಮಾಯಾ ಬಂಧನದಲ್ಲಿ ಸಿಲುಕಿರುವ ಮಾನವ ಮಾಯೆ (ಅಜ್ಞಾನ)ಯಿಂದ ಬಿಡಿಸಿಕೊಳ್ಳಬೇಕೆಂಬ ಮನವಿ ಇದೆ. ನಿದರ್ಶನಗಳೆಲ್ಲ 'ದೈಹಿಕ' ಸ್ವರೂಪದವಾಗಿದ್ದು, ದೇಹಕ್ಕಿರುವ ಇತಿ–ಮಿತಿ ಮತ್ತು ಮಾನವರಿಗಿರುವ ಏಕರೂಪದ ಮೈಲಿಗೆಯ ಬಗ್ಗೆ ನೇರ ತಿಳುವಳಿಕೆ ಇದೆ. ಪ್ರಾಸಾನುಪ್ರಾಸಗಳ ಪದ ಸಂಯೋಜನೆಯಿಂದ ಉಪದೇಶದ ಮಾತುಗಳು ಮಂತ್ರದ ಪ್ರಭಾವವನ್ನು ಮತ್ತು ಕಾವ್ಯದ ಕಮನೀಯತೆಯನ್ನು ಒಟ್ಟಿಗೇ ನೀಡುತ್ತ ಕೇಳುಗನ ಮನಸ್ಸನ್ನು ಸೆಳೆಯುತ್ತವೆ.

"ಏನು ಇಲ್ಲದ ಎರಡು ದಿನದ ಸಂಸಾರ, ಜ್ಞಾನದಲಿ ದಾನಧರ್ಮವ ಮಾಡಿರಯ್ಯ" –ಕೀರ್ತನೆಯಲ್ಲಿ ಹತ್ತು ವಿಧದ ಸದಾಚಾರ, ಸುಸಂಸ್ಕೃತಿಯ ನೇರ ಪ್ರಸ್ತಾಪವಿದೆ. ಒಂದೆಡೆ ಸಂಸಾರದ ನಿಸ್ಸಾರತೆಯ ಬಗ್ಗೆ ತೀವ್ರವಾದ ಬೇಸರ ಹುಟ್ಟುವ ಭಾವ ಸೃಷ್ಟಿಸಿ, ಜೀವನದ ಅನಿತ್ಯತೆ, ನಶ್ವರತೆಗಳು 'ಸದಾಚಾರ'ದಿಂದ ಪರಿವರ್ತನೆ ಹೊಂದಿ ಬದುಕಿಗೆ ಸಾರ್ಥಕಭಾವ ಬರುವವೆಂಬ ಆಶಯವನ್ನು ಸೂಚಿಸುತ್ತಾರೆ. ಸದಾಚಾರವೊಂದೇ ಪ್ರತಿಯೊಬ್ಬನನ್ನು ಸಹನೀಯ ಮಾನವನನ್ನಾಗಿ ರೂಪಿಸಬಲ್ಲದು. ಅಂತಹದರ ಕೊರತೆಯಿಂದಾಗಿಯೇ ಬದುಕು ಭೌತಿಕವಾಗಿ ಅನಿತ್ಯವಾಗಿರುವಂತೆ ಮಾನಸಿಕವಾಗಿಯೂ ಅಸಹ್ಯವಾಗಿದೆ. ಸಾಮಾಜಿಕ ನೀತಿಯ ಒಂದು ಉಪಾಯವಾಗಿ ಕನಕದಾಸರು ಪ್ರತಿಪಾದಿಸುವ ಸುಖೀಜೀವನದ ಹತ್ತು ಸೂತ್ರಗಳು ಸಿರಿವಂತ ವರ್ಗದ ವ್ಯಕ್ತಿಗಳನ್ನೇ ಉದ್ದೇಶಿಸಿರುವುದು ಗಮನಾರ್ಹ. ಸ್ವತಃ ಜೀವನದ ಸ್ವಾರಸ್ಯ ಕೆಡಿಸಿಕೊಳ್ಳುವ ಸಿರಿವಂತರು ಉಳಿದವರಲ್ಲಿ ಆರ್ಥಿಕ ಕೊರತೆ, ಅಸಮಾನತೆ ಉಂಟುಮಾಡಿ ಸಾಮಾಜಿಕ ಜೀವನ ದುರ್ಭರಗೊಳಿಸುತ್ತಾರೆ. ಅವರ ಲೋಭ, ಮೋಹ, ಮದ ಈ ದುರ್ಗುಣಗಳಿಗೆ ಕನಕದಾಸರು ಚಿಕಿತ್ಸೆ ನೀಡಿದ್ದಾರೆ. ಇಲ್ಲಿ ದುರಾಗ್ರಹ, ಆಕ್ರೋಶಗಳಿರದೇ ಅನುನಯದ ಸೌಮ್ಯಧಾಟಿ ಇರುವುದನ್ನು ಗಮನಿಸಬೇಕು. ದಾಸರು ಪ್ರತಿನಿತ್ಯ ಮನೆಮನೆಗಳಿಗೆ ಭೇಟಿ ನೀಡಿ ಕೀರ್ತನೆ ಹಾಡುತ್ತಿದ್ದುದರಿಂದ ಜನಗಳ ನೇರ ಸಂಪರ್ಕ ಸಹಜವಾಗಿ ಒದಗುತ್ತಿತ್ತು. ಎದುರಿಗಿರುವ ವ್ಯಕ್ತಿಯ ಗುಣ–ಧರ್ಮ, ಸ್ಥಾನ–ಮಾನಗಳನ್ನು ಪರಿಗಣಿಸಿಯೇ ದಾಸರು ಬೋಧನೆಯ

ಭಾಷೆ–ಧಾಟಿಯನ್ನು ರೂಪಿಸುತ್ತಿದ್ದರು. ಉದಾಹರಣೆಗೆ–ಅವಗುಣದ ಮೂಢಭಕ್ತ, ಲೋಭಿಯಾದ ಸಿರಿವಂತ, ಡಂಭಾಚಾರಿಯಾದ ಹರಿಭಕ್ತ. ಅಜ್ಞಾನಿಯಾದ ದುರ್ವ್ಯಸನಿ, ದಾನ–ಧರ್ಮ ಮರೆತ ಸ್ವಾರ್ಥಿ–ಇತ್ಯಾದಿ. ಈ ಪ್ರತಿಯೊಬ್ಬನ ಹಿನ್ನೆಲೆ–ಮನಸ್ಥಿತಿ ಬೇರೆಬೇರೆಯಾಗಿರುವುದು ಸಹಜ. ಅವರವರ ಸಂಸ್ಕಾರ, ತಪ್ಪು–ತಡೆಗಳು ಮನಹೊಕ್ಕ ರೀತಿಗಳೂ ಭಿನ್ನಭಿನ್ನ. ಆಗ ಸಮಯ, ಸಂದರ್ಭಾನುಸಾರ ದಾಸರೂ ಬೋಧನಾ ಚಿಕಿತ್ಸೆಯನ್ನು (ರೋಗನಿದಾನ) ಬದಲಿಸಬೇಕಿದ್ದುದು ಸಮ್ಮತ, ಹೀಗಾಗಿ–ಪರರನ್ನು ಉದ್ದೇಶಿಸಿ ನಿವೇದಿಸುವ ಕೀರ್ತನೆಗಳಲ್ಲಿ ಅನುನಯ, ಸೌಜನ್ಯಪೂರ್ಣ ಮನವರಿಕೆ ಧಾಟಿ ಎದ್ದು ಕಾಣುತ್ತದೆ. ಇಂಥಲ್ಲಿ ವಕ್ರೋಕ್ತಿಗಿಂತ ಸ್ವಭಾವೋಕ್ತಿಯೇ ಸಹಜವಾದುದು. ಆದರೆ ಒರಟು ಅಲ್ಲದ, ಭಾವೋದ್ರೇಕಗೊಳಿಸುವ ಭಾಷೆಗೆ ಹೊರತಾಗಿ ಮೃದುಪದಗಳನ್ನು, ಒಲವಿನ ಉದಾಹರಣೆಗಳನ್ನು ಬಳಸಿದುದರಲ್ಲಿ ಕನಕದಾಸರ ಕವಿಗುಣ ವ್ಯಕ್ತವಾಗಿದೆ.

"ಡಿಂಬಿನೊಳಗೆ ಪ್ರಾಣವಿರಲು ಕಂಬಸೂತ್ರ ಗೊಂಬೆಯಂತೆ ಎಂದಿದ್ದರೊಂದು ದಿನ ಸಾವು ತಪ್ಪದು" ಎಂಬ ಪಲ್ಲವಿಯ ಕೀರ್ತನೆಯ ತುಂಬ ವಾಸ್ತವದ ನಿದರ್ಶನಗಳೇ ತುಂಬಿವೆ. ಇಲ್ಲಿಯ ಕೆಲವು ಸಾದೃಶ್ಯಗಳು ಉಂಟುಮಾಡುವ ಪರಿಣಾಮದಿಂದ ದೇಹದ ನಶ್ವರತೆ, ಬದುಕಿನ ತಾತ್ಕಾಲಿಕತೆಯ ಆಶಯ ಹೆಚ್ಚು ಮನದಟ್ಟಾಗುವುದು. "ಸುಟ್ಟು ಸುಟ್ಟು ಸುಣ್ಣದ ಹರಳಾಯಿತೀ ದೇಹ", "ಅಳ್ಳಾಚಾರಿ ಗೊಂಬೆಯಂತೆ ಆಡಿಹೋಗುವ ದೇಹ," "ಹಳ್ಳ ಹರಿದು ಹೋಗುವಾಗ ನೀರಗುಳ್ಳೆ ಒಡೆಯುವಂತೆ" "ಉಳ್ಳಿಯ ಪೊರೆಯಂತೆ ಸಂಸಾರದಾಟವು" ಎಂಬ ಸಹಜ ಸಾದೃಶ್ಯಗಳು ನೂತನವೂ ಆಗಿವೆ ; ಭಾವವ್ಯಂಜಕತೆಯನ್ನು ಸಾಧಿಸಿವೆ. ಡಿಂಬಿನೊಳಗೆ ಪ್ರಾಣ ಹೊಂದಿದ ಮನುಷ್ಯನ ಸ್ಥಿತಿ 'ಕಂಬಸೂತ್ರ ಗೊಂಬೆಯಂತೆ. ಇದಕ್ಕೆ ಪೂರಕ ಅರ್ಥ ನೀಡುವಂತೆ ಬಂದ ಬರುವ ಮುಂದಿನ ಹೋಲಿಕೆಗಳನ್ನು ಪರಿಭಾವಿಸಬೇಕು. ಅವೆಲ್ಲ ಕ್ಷುದ್ರ ಅಥವಾ ಅನಿತ್ಯವನ್ನೇ ಸೂಚಿಸುತ್ತಿವೆ. ನಿರಾಸೆಯ ದಟ್ಟ ಭಾವ ತುಂಬಿದ್ದರೂ ಕೀರ್ತನೆಯ ಕೊನೆಗೆ ಬರುವ "ವಸ್ತುಪ್ರಾಣನಾಯಕ"ನಾದ ಆದಿಕೇಶವನನ್ನು ನಂಬಿದರೆ ಬದುಕಿಗೆ ಅಸ್ಖಲಿತ ನೆಮ್ಮದಿ, ಘನತೆ ದೊರಕುವುದು. ಈ ವೈದೃಶ್ಯವನ್ನು ಎತ್ತಿ ತೋರುವುದಕ್ಕೆ ಕನಕದಾಸರು ಕೀರ್ತನೆಯುದ್ದಕ್ಕೂ ನೇತ್ಯಾತ್ಮಕ ಧಾಟಿಯಲ್ಲಿ ಹೆಣ್ಣು, ಹೊನ್ನು, ಮಣ್ಣುಗಳ ಸುತ್ತಲೂ ಅಲಂಕಾರವಾಗಿ ಬರುವ ಸಾಮಾನ್ಯ ವಸ್ತುಗಳನ್ನು ತಿರಸ್ಕಾರದಿಂದ ಅಲ್ಲಗಳೆಯುತ್ತಾರೆ.

"ಹ್ಯಾಂಗೆ ನೀ ದಾಸನಾದೀ ಪ್ರಾಣಿ..............ಹೀಂಗೆ ಸಂಸಾರದೊಳು ಮೂಗನಂದದಿ ಭಂಗ ಪಡುವವ" ಎಂಬ ಕೀರ್ತನೆಯಲ್ಲಿ ಸಹ ದಾಸನೊಬ್ಬನ 'ಸಾಧನೆ'ಯ ನಿರರ್ಥಕತೆಯನ್ನು ಟೀಕೆಗೆ ಒಳಪಡಿಸಿದ್ದಾರೆ. ಇಲ್ಲಿಯ ವ್ಯಂಗ್ಯ-ವಿಡಂಬನೆ ನೇರವಾಗಿದೆ, ಹರಿತವಾಗಿದೆ. "ತಲೆ ಹುಳಿತ ನಾಯಂತೆ" ಎಂಬ ಉಪಮೆ ; "ಬತ್ತಿಹೋಯಿತು ನದಿ ಬತ್ತವ ಬೆಳೆಯದೆ", "ಸುತ್ತ ಕತ್ತಲೆ ಚಿಂತೆ, ಮತ್ತೆ ಭಯದ ಭ್ರಾಂತಿ-ಎಂಬ ಸಾದೃಶಗಳ ಧ್ವನಿಪೂರ್ಣತೆ ಡಾಂಭಿಕ ದಾಸನ ವ್ಯಕ್ತಿ ಚಿತ್ರವನ್ನು ಕಣ್ಣಿಗೆ ಕಟ್ಟಿಸುತ್ತವೆ. ಇಪ್ಪತ್ತೊಂದು ನುಡಿಗಳ ಈ ಹಾಡು, ಹಂಗಿಸುವ ಧಾಟಿಯಲ್ಲಿ ಸಾಗಿದರೂ ಅದರ ಹಿಂದಿರುವ ಕನಕದಾಸರ ಕಳಕಳಿ ಮನೋಜ್ಞವಾದುದು. ಪ್ರಸ್ತುತ ಕೀರ್ತನೆ, ಅಂದಿನ ತೋರಿಕೆಯ ದಾಸ'ರಿಗೆ ಮಾತ್ರವಲ್ಲ ; ಇಂದಿನ 'ದೇಶಭಕ್ತ' ವೇಷದ ರಾಜಕಾರಣಿಗಳಿಗೆ, ಸುಸಂಘಟಿತ ಸಂಬಳದ ನೌಕರರಿಗೂ ಅನ್ವಯವಾಗುವಂತಿದೆ. ಒಳಗಿನ ಸತ್ಯ, ಸತ್ತ್ವದಿಂದ ಮಾತ್ರ ಒಬ್ಬ ವ್ಯಕ್ತಿಯು ಇತರರಿಗೆ ಉಪಯುಕ್ತನೂ ಸಾಮಾಜಿಕವಾಗಿ ಅರ್ಥಪೂರ್ಣನೂ ಆಗಬಲ್ಲನೆಂಬ ಕನಕದಾಸರ ತಿಳುವಳಿಕೆ ಸಾರ್ವಕಾಲಿಕವಾದುದು.

**'ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ'**

ಕನಕದಾಸರ ಕೀರ್ತನೆಗಳ ನಿರೂಪಣಾಧಾಟಿಯು ನಾಲ್ಕನೆಯ ನಮೂನೆಯು, ಘೋಷಣಾ ಸ್ವರೂಪದ್ದು. ಕೇಳುಗರಾದ ಎಲ್ಲ ನಮೂನೆಯ, ಎಲ್ಲ ಕಾಲದ ಜನರನ್ನೂ ಸಂಬೋಧಿಸಿದ ಧಾಟಿ ಇದು. ಈ ಬಗೆಯ ನಿವೇದನೆಯುಳ್ಳ ಕೀರ್ತನೆಗಳಲ್ಲಿ ಕನಕದಾಸರ ಲೋಕಜ್ಞಾನದ ವ್ಯಾಪ್ತಿ ಮತ್ತು ಮನೋಭಾವದ ಪರಿಪಕ್ವತೆ ಎದ್ದು ಕಾಣುತ್ತದೆ. ನನ್ನದು, ನಿನ್ನದು, ತನ್ನದು ಎಂಬ ಸೀಮಿತತೆ ಮೀರಿ ಎಲ್ಲರೂ ಒಂದೇ ಎಂಬ ಸಾಮೂಹಿಕ ಅರಿವಿನ ಭಾವನೆ ಇಂಥಲ್ಲಿ ಒಡೆದು ಕಾಣುತ್ತದೆ. ಸ್ವತಃ 'ನಿತ್ಯಜ್ಞಾನಿ' ಯಾದ ಮೇಲೆ, 'ಸತ್ಯವಂತರ ಸಂಗ' ಪಡೆದ ಮೇಲೆ ಕನಕದಾಸರು ಈ ಬಗೆಯ ನಿರೂಪಣಾ ರೀತಿಯನ್ನು ಅಳವಡಿಸಿಕೊಂಡಂತೆ ಕಾಣುತ್ತದೆ. ಎಲ್ಲ ಕಾಲದ ಮಾನವರ ಪ್ರವೃತ್ತಿ ಅಥವಾ ವರ್ತನೆಗಳನ್ನೇ ಕನಕದಾಸರು ಇಂಥಲ್ಲಿ ಸಾದೃಶವಾಗಿ ಬಳಸಿಕೊಂಡಿದ್ದಾರೆ. ವಸ್ತುನಿಷ್ಠ ವಿಶ್ಲೇಷಣೆ ಇಲ್ಲಿರುವದರಿಂದ, ದಾಸನು ದ್ರಷ್ಟಾರನಾಗಿರುವದರ ಕಲ್ಪನೆ ಓದುಗನಿಗಾಗುವುದು.

ವ್ಯಕ್ತಿಯ ಗುಣ-ಶೀಲಗಳಲ್ಲಿ ಬದಲಾವಣೆಯುಂಟಾಗಿ, ಆ ಮೂಲಕ ಅವನು ಜ್ಞಾನಿಯಾಗಿ, ಆನಂತರ ದೈವಬಲ ದೊರಕಿಸಿಕೊಳ್ಳಬಲ್ಲನೆಂಬ ನಂಬಿಕೆ

ಕನಕದಾಸರದು. ದುಷ್ಟಪ್ರವೃತ್ತಿಗಳಿಂದ ತುಂಬಿದ್ದ ತಮ್ಮ ಪರಿಸರಕ್ಕೆ ಎಚ್ಚರಿಕೆ ನೀಡಲು ಅವರು ಈ ಧಾಟಿಯನ್ನು ಬಳಸಿಕೊಂಡಂತಿದೆ. ಕಣ್ಣೆದುರು ಕಂಡ ಅನಿಷ್ಟಗಳ ಬಗ್ಗೆ, ಅನೀತಿ ಅಕ್ರಮಗಳ ಬಗ್ಗೆ ಮನನೊಂದು ಮಾನವತೆಯ ಹಿರಿಮೆಯನ್ನು ಸಮಾಜದ ಪ್ರತಿಯೊಬ್ಬನೂ ಸಾಧಿಸಿಕೊಳ್ಳಬಲ್ಲನೆಂಬ ವಿಶ್ವಾಸ, ಕಳಕಳಿ ಕನಕದಾಸರದು. ಸಮಾಜಮುಖಿಯಾದ ಈ ಕೀರ್ತನೆಗಳನ್ನು ಕನಕದಾಸರು ಸಮುದಾಯದ ಮಧ್ಯದಲ್ಲಿ ನಿಂತು ಸಂಚರಿಸಿ ಹಾಡುತ್ತಿದ್ದಿರಬೇಕು.

"ಕುಲಕುಲವೆನ್ನುತಿಹರು । ಕುಲವ್ಯಾವುದು ಸತ್ಯಸುಖವುಳ್ಳ ಜನರಿಗೆ" ಎಂದು ಪ್ರಶ್ನಿಸುತ್ತ ಅಂತರಾತ್ಮನಲ್ಲಿ ಕೇಶವನು ಒಲಿದು ನೆಲೆಸಿದ ಮೇಲೆ ಆತ್ಮಕ್ಕಾಗಲಿ, ಜೀವಕ್ಕಾಗಲಿ, ಕುಲಕ್ಕಾಗಲಿ ಯಾವ ಮೈಲಿಗೆಯೂ ಇಲ್ಲ ಎಂದು ದೃಢವಾಗಿ ಹೇಳುತ್ತಾರೆ. ಈ ಕೀರ್ತನೆಯಲ್ಲಿ ಬಳಕೆಯಾದ ಮೂರು ವಾಸ್ತವಿಕ ದೃಷ್ಟಾಂತಗಳು – "ಬಿಸಜನಾಭನಿಗರ್ಪಿತವಾದ ತಾವರೆ"–ಕೆಸರಲ್ಲಿ ಹುಟ್ಟಿದುದು; "ಭೂಸುರರು ಉಣ್ಣುವ ಕ್ಷೀರವು"–ಹಸುವಿನ ಮಾಂಸದಲ್ಲಿ ಉತ್ಪತ್ತಿಯಾದುದು; ಅದೇ ಭೂಸುರರು ಮಡಿಯಲ್ಲಿರುವಾಗ ಪೂಸಿಕೊಳ್ಳುವ ಸುಗಂಧಿತ ಕಸ್ತೂರಿ, "ಮೃಗಗಳ ಮೈಯಲ್ಲಿ" ಹುಟ್ಟಿದುದು. ಇವುಗಳ ಪ್ರಸ್ತಾಪದ ಕ್ರಮದಲ್ಲಿಯೇ ವ್ಯಂಜಕತೆ ಇದೆ. ಇಲ್ಲಿಯ ವಾದದ ಶೈಲಿ ತರ್ಕನಿಷ್ಠವಾಗಿದೆ. 'ನಾರಾಯಣನಾಗಲಿ, ಪರಶಿವನಾಗಲಿ ಯಾವ ಕುಲದವರು ? ಎಂದು ಪ್ರಶ್ನಿಸುವಲ್ಲಿ ಪ್ರಾಮಾಣಿಕ ಉತ್ತರವೇ ಅಡಕವಾಗಿದೆ. ಭೌತಿಕ ವಸ್ತುಗಳ ಪ್ರಾಕೃತಿಕ ಸಹಜತೆಯೊಂದಿಗೆ ಆರಂಭವಾಗುವ ದೃಷ್ಟಾಂತಗಳು ಅಮೂರ್ತವೂ ಕಾಲ್ಪನಿಕವೂ ಆದ ಆತ್ಮ ತತ್ತ್ವೇಂದ್ರಿಯ, ಅಂತರಾತ್ಮಗಳವರೆಗೆ ಚಲಿಸುತ್ತವೆ. ಈ ಬೆಳವಣಿಗೆ ಕನಕದಾಸರ ವಿಚಾರ ಪ್ರಣಾಳಿಕೆಯ ನಿಖರತೆಗೆ ಮಾದರಿಯಾಗಿದೆ. ಕೀಳರಿಮೆಯಿಂದ ನೊಂದ, ಅವಹೇಳನದಿಂದ ಗಾಸಿಗೊಂಡ ಇತರ ಹರಿದಾಸರುಗಳಲಿ ವಿಶ್ವಾಸಾರ್ಹತೆ ಕುದುರಿಸಲು ಕನಕದಾಸರು ಈ ಕೀರ್ತನೆಯನ್ನು ರಚಿಸಿದಂತೆ ತೋರುತ್ತದೆ. ಅವರ ಆಶಯ ಪರಿಣಾಮಕಾರಿಯಾಗಿ ಕೆಲಸ ಮಾಡಿದೆ.

ಇಹದ ಭೋಗ–ಭಾಗ್ಯಗಳ ಬಗೆಗೆ, ದೇಹದ ನಶ್ವರತೆ, ಬಂಧು–ಬಾಂಧವರ ಜತೆಗಿನ ಬಾಂಧವ್ಯದ ಬಗೆಗೆ ಹರಿದಾಸರುಗಳು ವ್ಯಕ್ತಪಡಿಸಿದ ಜಿಗುಪ್ಸೆ, ಅವರು ಇಹ ಜೀವನವನ್ನೇ ಇಡಿಯಾಗಿ ನಿರಾಕರಿಸುತ್ತಿದ್ದಾರೆಂಬ ಮಟ್ಟಿಗೆ ಪುನರಾವರ್ತನೆಗೊಂಡಿದೆ. ಆದರೆ ಪ್ರಮುಖ ಹರಿದಾಸರ ಕೀರ್ತನೆಗಳನ್ನು ಗಮನವಿಟ್ಟು ನೋಡಿದಾಗ ದಾಸರ ಇಹಲೋಕದ ನೋಟ, ಸಂಪೂರ್ಣವಾಗಿ ನೇತ್ಯಾತ್ಮಕದ್ದಲ್ಲವೆಂಬುದು ಎದ್ದು ಕಾಣುತ್ತದೆ. ಅವರು ನಶ್ವರತೆಯ ಬಗೆಗೆ

ಎಚ್ಚರಿಸುವ ಪ್ರಯತ್ನ–ಕೆಲವು ಸಲ ಉತ್‌ಪ್ರೇಕ್ಷಿತ ಮಟ್ಟದಲ್ಲಿ–ಮಾಡಿದ್ದಾರೆಯೆ ಹೊರತು, ಸಂಸಾರ ಜೀವನವನ್ನು ಅಲ್ಲಗಳೆದಿಲ್ಲ. ಆಸೆ–ಆಮಿಷಗಳ ಅತಿರೇಕಕ್ಕೆ ಮನುಷ್ಯ ಬಲಿಯಾಗಕೂಡದೆಂಬ ಎಚ್ಚರಿಕೆಯೇ ಅಲ್ಲಿ ಮುಖ್ಯವಾಗಿದೆ. ಅದು ವಿವೇಕದ ಎಚ್ಚರ, ವಿವೇಕದ ಪ್ರಚೋದನೆಗಾಗಿ.

"ಎಂದಿದ್ದರೀ ಕೊಂಪೆ, ಎನಗೆ ನಂಬಿಕೆಯಿಲ್ಲ,
ಮುಂದರಿತು ಹರಿಪಾದ ಹೊಂದುವುದು ಲೇಸು"

ಎಂಬ ಪಲ್ಲವಿಯ ಕೀರ್ತನೆಯನ್ನು ಪರಿಭಾವಿಸಿದಾಗ, ದೇಹದ ನಶ್ವರತೆ ಕೇವಲ ವೈರಾಗ್ಯದ ಕಣ್ಣಿಗೆ, ಅನುಭಾವದ ವಿವೇಕಕ್ಕೆ ಗೋಚರಿಸುವಂತಹದಲ್ಲ; ಅದು ವಾಸ್ತವದಲ್ಲಿ ಸಹಜವಾಗಿ ಅನುಭವಕ್ಕೆ ಬರುವ ಸಂಗತಿ ಎಂಬುದು ಮನದಟ್ಟಾಗುವುದು. ಬಾಹ್ಯಾಡಂಬರವನ್ನು ಅಲ್ಲಗಳೆದು ಅಂತರಂಗದ ಸತ್ತ್ವ ಬೆಳೆಯಿಸುವತ್ತ ಮಾನವನು ಹವಣಿಸಬೇಕೆಂಬ ತಿಳುವಳಿಕೆ ಇಲ್ಲಿ ಹೃದ್ಯವಾಗಿ ಬೆಳೆದಿದೆ. ದೇಹವನ್ನು 'ಕೊಂಪೆ'ಗೆ ಹೋಲಿಸುವಲ್ಲಿ ಬೇಸರದ ಭಾವವಿದೆ. ಕೊಂಪೆ ಗುಡಿಸಿಲು ಬೆಲೆಬಾಳುವುದಲ್ಲ. ಅದರ ತೊಲೆ, ಜಂತಿ, ಹೊದಿಕೆ, ಗವಾಕ್ಷ (ಬಾಗಿಲು), ಬಣ್ಣದ ಅಲಂಕಾರ ಎಲ್ಲವೂ ತಾತ್ಕಾಲಿಕ. ಕೊಂಪೆ ಗುಡಿಸಿಲಿನ ಈ ಪ್ರತಿಯೊಂದು ಅಂಗವನ್ನು ನರದೇಹದ ಅಂಶಗಳಾದ ಎಲುವು, ಚರ್ಮ, ನರ, ಇಂದ್ರಿಯ, ಮತ್ತು ವೇಷ–ಭೂಷಣಗಳಿಗೆ ಉಪಮೆಯಾಗಿಸುವ ರೀತಿಯೇ ಕೀರ್ತನೆಯ ಆಶಯವನ್ನು ಭಾವಪೂರ್ಣವೂ ವಿಚಾರಪೂರ್ಣವೂ ಆಗಿಸಿದೆ. ಹೀಗಾಗಿ ಕೀರ್ತನೆಯ ಒಟ್ಟು ರೂಪವು ಕೇಳುಗರ ಮನಸ್ಸಿನ ಮೇಲೆ ಬೀರುವ ಪ್ರಭಾವ ಅಸಾಧಾರಣವಾದುದು. ಕೊಂಪೆಯ ಸಹವಾಸವನ್ನು ಸುಖ, ಶಾಶ್ವತವೆಂದು ಭ್ರಮಿಸದೇ "ಇಂಪಿನಲಿ ಕಾಗಿನೆಲೆಯಾದಿಕೇಶವನನ್ನು ಸೊಂಪಿನಲಿ ನೆನೆದು ಸುಖಿಯಾಗೊ ಮನುಜಾ" ಎಂದು ಕನಕದಾಸರು ಪ್ರಾಸಪೂರ್ಣ ಪದಪುಂಜಗಳಲ್ಲಿ ಸೂಚಿಸುವ ಪರಿಹಾರ ಅಲೌಕಿಕವಾದುದು. ದೇಹದ ನಶ್ವರತೆಯ ಬಗೆಗೆ ಅತ್ಯಂತ ಲೌಕಿಕವೂ ಪರಿಣಾಮಕಾರಿಯೂ ಆದೊಂದು ಹೋಲಿಕೆ ನೀಡಿ, ಬುದ್ಧಿ–ಭಾವಗಳೆರಡನ್ನೂ ಸೆರೆ ಹಿಡಿಯುವಲ್ಲಿ ಕನಕದಾಸರು ಸಫಲರಾಗಿದ್ದಾರೆ.

"ವರಕವಿಗಳ ಮುಂದೆ ನರಕವಿಗಳು ವಿದ್ಯೆ ತೋರಬಾರದು ಈ
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು...."

ಎಂದು ಆರಂಭವಾಗುವ ಸಾಮಾನ್ಯ ನೀತಿ–ನಡವಳಿಕೆಯ ಹಾಡು.

ಅರ್ಥಪೂರ್ಣವಾದ ಪ್ರಾಸ, ಅನುಪ್ರಾಸಗಳ ಸೊಗಸಿನಿಂದ ಮನಸ್ಸಿನಲ್ಲಿ ತಕ್ಷಣ ಪರಿಣಾಮ ಬೀರುವದರೊಂದಿಗೆ, ಬಹುಕಾಲ ನೆನಪಿನಲ್ಲಿ ಮನೆಮಾಡಿಬಿಡುತ್ತದೆ. ಇಲ್ಲಿಯ ಪ್ರತಿಯೊಂದು ಮಾತು ನಾಣ್ಣುಡಿಯ ಸಂಕ್ಷಿಪ್ತತೆ–ಉಪಮಾನಿಷ್ಠತೆ, ಉಕ್ತಿಸೌಂದರ್ಯ, ಲೋಕಾನುಭವದ ಸಹಜ ನಿದರ್ಶನಗಳಿಂದ ನೇರವಾಗಿ ನಾಟುವಂತಿದೆ.

'ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ಹಿಟ್ಟಿಗಾಗಿ......'

ಪದ್ಯವಂತೂ ಕನಕದಾಸರ ಲೋಕದೃಷ್ಟಿಯ ಸಹೃದಯ ಅವಲೋಕನ. ಹೊಟ್ಟೆ–ಬಟ್ಟೆ–ಹಿಟ್ಟುಗಳ ಗಳಿಕೆಯಲ್ಲಿಯೇ ಸದಾಕಾಲ ತೊಡಗಿರುವ ಮಾನವನ ಪಾಡು ವ್ಯರ್ಥ ಎಂಬುದು ಅನುಭಾವಿಗಳ, ಅಲೌಕಿಕವಾದಿಗಳ ಸಾಮಾನ್ಯ ಅಭಿಮತ. ಇದನ್ನು ಪೂರ್ಣ ಒಪ್ಪದೆ, ಅಲ್ಲಗಳೆಯದೆ ಕನಕದಾಸರು ತೋರ್ಪಡಿಸಿದ ವಿಚಾರ ವಿಶಿಷ್ಟವಾಗಿದೆ. ಈ ಕೀರ್ತನೆಯಲ್ಲಿ ಲೌಕಿಕರು ಹೊಟ್ಟೆಪಾಡಿಗಾಗಿ ಮಾಡುವ, ಶ್ರಮಿಸುವ ಕ್ರಿಯೆಗಳ ಬಗ್ಗೆ ವ್ಯಂಗ್ಯ ಬಳಸದ ದಾಸರು, "ಸನ್ಯಾಸಿ, ಜಂಗಮ, ಜೋಗಿ, ಜಟ್ಟಿ ಮೊಂಡ, ಬೈರಾಗಿ ! ನಾನಾ ವೇಷಗಳೆಲ್ಲ ಹೊಟ್ಟೆಗಾಗಿ ಬಟ್ಟೆಗಾಗಿ" ಮಾಡುವ ಕರ್ಮಗಳನ್ನು ಮಾತ್ರ ಕಟಕಿ ಮಾತಿನಿಂದ ತಿವಿಯುತ್ತಾರೆ. ಮಾನವರ ನಾನಾ ವರ್ತನೆಗಳ ಪಟ್ಟಿ ನೀಡುವ ದಾಸರ ಧಾಟಿ ಏಕತಾನತೆಯಿಂದ ತುಂಬಿದ್ದರೂ ಸೂಕ್ಷ್ಮವಾಗಿ ಗಮನಿಸಿದಾಗ ಇಲ್ಲಿ ಅನುಕಂಪ, ಸಹಾನುಭೂತಿಯ ಜತೆ ಕೋಪ, ಅಸಹನೆ, ವಿರೋಧ, ಇರಿಸು ಮುರಿಸಿನ ಪ್ರತಿಕ್ರಿಯೆಯೂ ವ್ಯಕ್ತವಾಗುವುದು. ಕ್ಷಣಿಕ ಸುಖಕ್ಕಾಗಿ 'ಏನೇನೋ' ಮಾಡುವುದನ್ನು (ಅಜ್ಞಾನದಿಂದ, ಅನಿವಾರ್ಯದಿಂದ) ಬಿಟ್ಟು ಶಾಶ್ವತವಾದ ಆನಂದ (ಮುಕ್ತಿ)ಕ್ಕಾಗಿ "ಉನ್ನಂತ ಕಾಗಿನೆಲೆಯಾದಿ ಕೇಶವನ ಧ್ಯಾನವನು ಮನಮುಟ್ಟಿ ಮಾಡುವುದು" ಕನಕದಾಸರ ಮಾರ್ಗ. ನಿರ್ವಿಕಾರವಾಗಿ ವ್ಯಕ್ತವಾದ ಈ ಸೂಚನೆಯ ಹಿಂದಿನ ನಿಷ್ಠುರತೆ ವಿಚಾರವಂತನಲ್ಲಿ ಲಜ್ಜೆ, ಆತ್ಮವಿಮರ್ಶೆ ಮೂಡಿಸುವುದಂತೂ ನಿಜ.

# ಕನಕದಾಸರ ಕೀರ್ತನೆಗಳ ಶಬ್ದಶಿಲ್ಪ

**ಕೆ. ವಿ. ನಾರಾಯಣ**

ಕನಕದಾಸರು ರಚಿಸಿದ ಸಾಹಿತ್ಯದ ಭಾಷಿಕ ಸ್ವರೂಪವನ್ನು ಚರ್ಚಿಸುವುದಕ್ಕೆ ಮುನ್ನ ಕೆಲವು ಹಿನ್ನೆಲೆಯ ವಿವರಗಳನ್ನು ಗಮನಿಸುವುದು ಅವಶ್ಯ. ಮಧ್ಯಕಾಲೀನ ಸಾಹಿತ್ಯವೆಂದು ನಾವೀಗ ಗುರುತಿಸುತ್ತಿರುವ ಕೃತಿ ಸಮೂಹದ ಲಕ್ಷಣಗಳನ್ನು ಒಂದೇ ನೆಲೆಯಲ್ಲಿ ಇರಿಸಿ ವಿವರಿಸುವುದು ಕಷ್ಟ. ಆದರೂ ಕನಕದಾಸರ ಕೃತಿಗಳ ಭಾಷಿಕ ಲಕ್ಷಣಗಳ ವಿವರಣೆಗೆ ಅನುವಾಗುವಷ್ಟು ಕೆಲವು ಸಾಮಾನ್ಯ ವಿವರಗಳನ್ನು ಗುರುತಿಸಿಕೊಳ್ಳುವುದು ಸಾಧ್ಯ.

ಮಧ್ಯಕಾಲೀನ ಕಾವ್ಯಬಂಧಗಳು ಬಹುಮಟ್ಟಿಗೆ ವಿವೃತ. ಆದಿ ಅಂತ್ಯಗಳಿದ್ದರೂ ನಡುವಣ ವಿಸ್ತಾರ ಮಾತ್ರ ಅನಿಯತ. ಅನಿಯತ ಎಂದಾಗ ನಿರ್ದಿಷ್ಟ ವಿನ್ಯಾಸಕ್ಕೆ ಬದ್ಧವಾಗದೆ ನಡೆದ ಚಲನೆ ಎಂಬುದಷ್ಟೇ ಅರ್ಥ. ಈ ಲಕ್ಷಣದ ನೇರ ಪರಿಣಾಮವೆಂದರೆ ಕೃತಿಯನ್ನು ಹಿಗ್ಗಿಸುವುದು ಹಾಗೂ ಸಂಗ್ರಹಿಸುವುದು ಸಾಧ್ಯವಾದದ್ದು ; ಜೊತೆಗೆ ಇಡಿಯಾಗಿ ಕೃತಿಯನ್ನೆ ಮತ್ತೊಂದು ಛಂದೋರೂಪದಲ್ಲಿ ವಿನ್ಯಾಸಗೊಳಿಸಲೂ ಸಾಧ್ಯವಾದದ್ದು. ಇದು ಶ್ರೋತೃ ಪರಂಪರೆಗೆ ಬದ್ಧವಾದ ಎಲ್ಲ ಕಾವ್ಯಗಳ ಸಾಮಾನ್ಯ ನೆಲೆಗಟ್ಟು. ಭಾರತೀಯ ಶ್ರವ್ಯಕಲೆಯಾದ ಸಂಗೀತದ ಸ್ವರೂಪವನ್ನು ಗಮನಿಸಿದರೆ ಮಧ್ಯಕಾಲೀನ ಕಾವ್ಯಬಂಧಗಳ ವಿವೃತತೆಯನ್ನು ಗ್ರಹಿಸಲು ಸೂಕ್ತ ಮಾದರಿ ದೊರೆಯುತ್ತದೆ. ಈ ಬಗೆಯ ಕಾವ್ಯಬಂಧಗಳಲ್ಲಿ ಭಾಷೆ ಸಾಮಾನ್ಯವಾಗಿ ವಿವರಣೆಗೆ ನಿರೂಪಣೆಗೆ ಅಭಿಮುಖವಾಗಿರುತ್ತದೆ ; ಜೊತೆಗೆ ಹೆಚ್ಚು ಪಾರದರ್ಶಕವಾಗುತ್ತದೆ ; ಎಂದರೆ ಹೇಳಬೇಕಾದುದರ ಕಡೆಗೆ ಗಮನ ಸೆಳೆದು ಹೇಳುತ್ತಿರುವ ಬಗೆಯ ಕಡೆಗೆ ಹೆಚ್ಚು ಗಮನ ಹರಿಯದಂತೆ ರೂಪಗೊಳ್ಳುತ್ತದೆ. ಭಾಷೆ ಸ್ವಾಭಿಮುಖವಾಗುವುದು, ತನ್ನೆಡೆಗೆ ಗಮನ ಸೆಳೆಯುವಂತೆ ಅಲಂಕೃತಗೊಳ್ಳುವುದು ಸಾಧ್ಯವಿದ್ದಷ್ಟೂ ಕಡಿಮೆಯಾಗುತ್ತದೆ.

ಈ ಹಿನ್ನೆಲೆಯಲ್ಲಿ ಕನಕದಾಸರ ಕೃತಿಗಳ ಭಾಷೆಯ ಸ್ವರೂಪವನ್ನು

ಗ್ರಹಿಸಲು ಯತ್ನಿಸಬಹುದು. ಚರ್ಚೆಯ ಸೌಲಭ್ಯಕ್ಕಾಗಿ ಇಬ್ಬರು ಕನಕದಾಸರನ್ನು ಗುರುತಿಸಿಕೊಳ್ಳೋಣ. ಒಬ್ಬ ಕಥಕ ಮತ್ತೊಬ್ಬ ಕೀರ್ತನಕಾರ. ಈ ಮಾತುಗಳನ್ನು ವ್ಯಾವಹಾರಿಕವಾದ ನೆಲೆಯಲ್ಲಿ ಬಳಸಿಲ್ಲ. ಕೀರ್ತನೆಗಳನ್ನು ರಚಿಸಿದ ಕನಕದಾಸರಲ್ಲೂ 'ಕಥಕ' ಸ್ವರೂಪವಿದೆ. ಹಾಗೆಯೇ ಕಥನ ಪ್ರಧಾನ ಕೃತಿಗಳಲ್ಲೂ 'ಕೀರ್ತನಕಾರ'ರ ಅಂಶವಿದೆ. ಈ ಇಬ್ಬರೂ ಕನಕದಾಸರ ರಚನೆಗಳಲ್ಲಿ ಸಮಾನವಾದ ರೂಪಸಂಬಂಧವಾದ ಸಂಗತಿಗಳನ್ನು ಮೊದಲು ಗಮನಿಸಬಹುದು.

ಮಾತ್ರಾಲಯ ಹಾಗೂ ಅಂಶಲಯಗಳೆರಡನ್ನೂ ತಮ್ಮ ಕೃತಿಗಳಲ್ಲಿ ಕನಕದಾಸರು ಬಳಸಿದ್ದಾರಷ್ಟೆ. ಇವುಗಳಲ್ಲಿ ಯಾವುದೇ ಲಯವಿರಲಿ, ಆ ರಚನೆಯ ಪದ್ಯ ಇಲ್ಲವೇ ಚರಣಗಳು ಎರಡು ಬಗೆಯ ಚೌಕಟ್ಟುಗಳನ್ನು ಹೊಂದಿರುತ್ತವೆ. ಒಂದು ಲಯದ ಬಂಧವಾದರೆ ಇನ್ನೊಂದು ವರ್ಣಿತ ಇಲ್ಲವೇ ಕಥಿತ ವಸ್ತು. ಈ ಎರಡೂ ಚೌಕಟ್ಟುಗಳಿಗೆ ಅನುಗುಣವಾದ ಸೂಕ್ತ ಭಾಷಾಶರೀರದ ನಿರ್ಮಾಣವೇ ಕವಿಯಾಗಿ ಕನಕದಾಸರ ಮುಖ್ಯ ಆಸಕ್ತಿಯಾಗುತ್ತದೆ. ಎಂದರೆ ಇಲ್ಲಿ ನಿಯಂತ್ರಕವಾಗಿ ಕೆಲಸ ಮಾಡುವುದು ಲಯದ ಬಂಧ. ಆ ಬಂಧದ ಸಾಧ್ಯತೆಗಳು, ಅಂತಸ್ಥವಾಗಿರುವ ಒಂದು ಮಿತಿಯ ಸ್ವಾತಂತ್ರ್ಯ ಇವಿಷ್ಟು ಭಾಷೆಗೆ ಪ್ರಥಮ ಹಂತದ ಕಾವ್ಯತ್ವವನ್ನು ಒದಗಿಸುತ್ತವೆ.

ಲಯದ ಬಂಧದೊಂದು ಮಾದರಿಯನ್ನು ನೋಡೋಣ. ಮಾತ್ರಾಲಯದ ಭಾಮಿನಿ ಷಟ್ಪದಿಯನ್ನು ಕನಕದಾಸರು ತಮ್ಮ ಕೃತಿಗಳಲ್ಲಿ ಬಳಸಿದ್ದಾರೆ. ಭಾಮಿನಿಯ ಓಟದ ನಿಯತತೆಯಲ್ಲಿ ೩–೪ ಮಾತ್ರೆಯ ಲಯವನ್ನು ಪರಿವೃತ್ತಿಗೊಳಿಸುವಷ್ಟು ಮಾತ್ರ ಸ್ವಾತಂತ್ರ್ಯವಿರುತ್ತದೆ. ಉಳಿದಂತೆ ಸಿಗುವ ಸ್ವಾತಂತ್ರ್ಯವೆಲ್ಲ ನಡುಗನ್ನಡ ಲಕ್ಷಣಗಳಿಂದ ಒದಗಿ ಬರುವಂಥದು. ನಡುಗನ್ನಡ ಪ್ರತ್ಯಯಗಳ ರೂಪಬಾಹುಳ್ಯ ಮತ್ತು ಅವುಗಳ ಮುಕ್ತ ಪ್ರಸಾರ ಇಲ್ಲಿ ಗಮನಿಸಬಹುದಾದ ಒಂದು ನಿದರ್ಶನ, ಸಪ್ತಮಿ ವಿಭಕ್ತಿಯ ಪ್ರತ್ಯಯ ಇ / ಒಳು / ಒಳಗೆ / ಅಲಿ / ಅಲ್ಲಿ ಹೀಗೆ ಐದು ರೂಪಗಳಲ್ಲಿ ಬಳಕೆಯಾಗಬಹುದು. ಒಂದು, ಎರಡು ಮತ್ತು ಮೂರು ಮಾತ್ರೆಗಳ ರೂಪಸಾಧ್ಯತೆಯ ಜತೆಗೆ ಪ್ರಾಸದ ಪ್ರಶ್ನೆಯನ್ನು ಪರಿಹರಿಸಿಕೊಳ್ಳಲು ಇಲ್ಲಿ ಪರ್ಯಾಯಗಳೂ ಒದಗುತ್ತವೆ. ಇದಲ್ಲದೆ ಪದಕೋಶದಲ್ಲಿ, ಅದರಲ್ಲೂ ನಾಮಪದ ಕೋಶದಲ್ಲಿ ಆಯ್ಕೆಯ ಸಾಧ್ಯತೆ ಇರುವುದರಿಂದಲೂ ಲಯದ ಕೋರಿಕೆಗಳನ್ನು ಪೂರೈಸಲು ಸಾಧ್ಯವಾಗುತ್ತದೆ. ಉದಾ : ಲಕ್ಷ್ಮೀಶ, ಲಕ್ಷ್ಮೀಪತಿ, ಲಕ್ಷ್ಮೀರಮಣ

ಈ ಪದಗಳಲ್ಲಿ ಆಯ್ಕೆ ಮುಖ್ಯವಾಗಿ ಲಯದ ನೆಲೆಯದ್ದು ತಾನೇ? ಈ ಆಯ್ಕೆ ಕಾವ್ಯಾತ್ಮಕವಾಗಿ ನಿಯೋಗವನ್ನು ಪಡೆಯುವುದು ಕನಕದಾಸರಲ್ಲಿ ಅಪರೂಪ.

ಇಷ್ಟು ಮಾತುಗಳ ಹಿನ್ನೆಲೆಯಲ್ಲಿ ಕೀರ್ತನೆಗಳನ್ನು ಗಮನಿಸಬಹುದು. ಇಲ್ಲಿನ ಚರ್ಚೆಗೆ ಹರಿಭಕ್ತಸಾರವನ್ನೂ ಕೀರ್ತನೆ–ಸ್ತೋತ್ರ ಎಂಬ ಅರ್ಥದಲ್ಲಿ– ಎಂದು ಪರಿಗಣಿಸಲಾಗಿದೆ. ಕೀರ್ತನೆಗಳ ಬಂಧ ಹಾಗೂ ಶಿಲ್ಪ ನಿಯತವಾದುದು. ಇದು ವಸ್ತು ಹಾಗೂ ಲಯ ಎರಡಕ್ಕೂ ಅನ್ವಯಿಸುವ ಮಾತು. ಪಲ್ಲವಿ ಅನುಪಲ್ಲವಿಗಳು ಭಾಷಿಕರಚನೆ ಹಾಗೂ ಅರ್ಥಸಾಧ್ಯತೆಗಳೆರಡರಲ್ಲೂ ಕೀರ್ತನೆಯ ಮುಂದಿನ ಚರಣಗಳನ್ನು ನಿಯಂತ್ರಿಸುತ್ತವೆ. ಇಲ್ಲಿ ಕನಕದಾಸರು ಪಡೆದುಕೊಂಡಿರುವ ಸ್ವಾತಂತ್ರ್ಯ ಚರಣಗಳ ಸಂಖ್ಯೆಯನ್ನು ಅನಿಯತಗೊಳಿಸುವುದರಲ್ಲಿದೆ. ಹೀಗಾಗಿ ಸಂವೃತ ಬಂಧವನ್ನು ತೋರಿಕೆಯ ವಿವೃತತೆಗೆ ವರ್ಗಾಯಿಸಿದಂತಾಗಿದೆ. ಇದಲ್ಲದೆ ಭಾಷಿಕ ರಚನೆಯ ಹಂತದಲ್ಲೂ ಕನಕದಾಸರು ಕೆಲವು ಸಾಧ್ಯತೆಗಳನ್ನು ಬಳಸಿ ಕೀರ್ತನೆಯ ಶಿಲ್ಪಕ್ಕೆ ವಿವೃತತೆಯನ್ನು ತಂದು ಕೊಡಲು ಯತ್ನಿಸುತ್ತಾರೆ. ಪುರಾಣ, ಮಹಾಕಾವ್ಯಗಳು ಮತ್ತು ಭಾಗವತ– ಇವುಗಳ ಕಥಾಭಾಗಗಳನ್ನೂ ಪೂರ್ವಾವಲೋಕಿಸಲು ಸಾಧ್ಯವಾಗುವಂಥ ವಾಕ್ಯಗಳು ಅವರ ಕೀರ್ತನೆಗಳಲ್ಲಿ ಬರುವುದನ್ನು ಇಲ್ಲಿ ನಿದರ್ಶನವಾಗಿ ಉಲ್ಲೇಖಿಸಬಹುದು. ಇಂಥ ಕಡೆ ಕಥನವನ್ನು ನಿರ್ವಹಿಸುವ ವಿಧಾನದಲ್ಲಿ ನಾವೀನ್ಯವಿರುತ್ತದೆ. ಸಾಮಾನ್ಯ ಕಥನದಲ್ಲಿ ವಾಕ್ಯಗಳು, ಮಾತುಗಳು ಕಥಾಭಾಗವನ್ನು ವಿವರಿಸುವ ಕೊಂಡಿಗಳಾಗಿ ಕೆಲಸಮಾಡುತ್ತವೆ. ಆದರೆ ಕೀರ್ತನೆಗಳಲ್ಲಿ ಕಥನದ ಉಲ್ಲೇಖ ಬಂದರೆ ಅವು ವ್ಯಾಖ್ಯಾನವನ್ನು ರೂಪಿಸುವ, ಆ ಮೂಲಕ ಪಲ್ಲವಿಯ ಮುಖ್ಯಧಾಟಿಗೆ ನೆರವಾಗುವ ಸತ್ಯವನ್ನು ಕಟ್ಟಿಕೊಡುತ್ತಿರುತ್ತವೆ.

> ಕರಿಪತಿಯ ಸರಸಿಯೊಳು ಮೊಸಳೆ ಪಿಡಿಯಲು ಭರದಿ
> ಪರಮಪುರುಷ ಜಗತ್ಪತಿಯೆನಲು
> ಗರುಡವಾಹನನಾಗಿ ಹರಿ ಬಂದವನ ಕಾಯ್ದು....

ಈ ಸಾಲು ಪ್ರಸಿದ್ಧ ಪ್ರಸಂಗವನ್ನು 'ಉಲ್ಲೇಖಿ'ಸುತ್ತದೆ ; ವಿವರಿಸುವುದಿಲ್ಲ. ಕೇವಲ ಕಥನವಷ್ಟೇ ಇಲ್ಲಿ ಮುಖ್ಯವಲ್ಲ. ಬದಲಿಗೆ ಹಾಗೂ ಜೊತೆಗೆ ಆ ಸಂದರ್ಭವನ್ನು ವ್ಯಾಖ್ಯಾನಿಸುವ ಆಸಕ್ತಿ ಕೂಡ ಇಲ್ಲಿದೆ. ಅಂದರೆ ಮೊಸಳೆಯನ್ನು ರಕ್ಷಿಸಿದ ಘಟನೆ ಮತ್ತೆ ಮತ್ತೆ ಬೇರೆ ಬೇರೆ ಪಾತ್ರಗಳ ಸಂದರ್ಭದಲ್ಲಿ

ಆವರ್ತವಾಗಬೇಕೆಂಬ, ಆಗುವುದೆಂಬ ಬಯಕೆ ಇಲ್ಲಿದೆ, ಈ ವ್ಯಾಖ್ಯಾನ ನೇರವಾಗಿ ಕೀರ್ತನೆಯ ಪಲ್ಲವಿಯ ಹೇಳಿಕೆಯನ್ನು ಸಮರ್ಥಿಸುತ್ತಿರುತ್ತದೆ. ಕಥನವನ್ನು ಎಲ್ಲ ಕಡೆಯೂ ಹೀಗೆ ಕ್ರಿಯಾಶೀಲವನ್ನಾಗಿಸಲು ಕನಕದಾಸರಿಗೆ ಸಾಧ್ಯವಾಗುವುದಿಲ್ಲ. ಇದು ಆ ಕ್ರಮದ ಮಿತಿಯೂ ಹೌದು ಎಂಬುದನ್ನು ಗಮನಿಸಬೇಕು.

'ಹರಿಭಕ್ತಿಸಾರ'ದ ಮೊದಲ ಹದಿನೈದು ಭಾಮಿನಿ ಷಟ್ಪದಿಗಳ ರಚನೆಯನ್ನು ಗಮನಿಸೋಣ ಉದಾಹರಣೆಗೆ :

ಅನುಪಮಿತ ಚಾರಿತ್ರ ಕರುಣಾ
ವನಧಿ ಭಕ್ತ ಕುಟುಂಬ ಯೋಗೀ
ಜನ ಹೃದಯ ಪರಿಪೂರ್ಣ ನಿತ್ಯಾನಂದ ನಿಗಮನುತ
ವನಜನಾಭ ಮುಕುಂದ ಮುರಮ
ರ್ದನ ಜನಾರ್ದನ ತ್ರೈಜಗತ್ಪಾ
ವನ ಸುರಾರ್ಚಿತದೇವ ರಕ್ಷಿಸು ನಮ್ಮನನವರತ ॥

ಈ ಷಟ್ಪದಿಗಳಲ್ಲಿ ಇಸು, ನಮ್ಮನು ಎಂಬ ಕನ್ನಡದ ಅಂಶಗಳಿವೆ ; ಜೊತೆಗೆ 'ರಕ್ಷಿಸು ನಮ್ಮನನವರತ' ಎಂಬ ವಾಕ್ಯ ಕನ್ನಡದ ವಾಕ್ಯರಚನೆಗೆ ಅನುಗುಣವಾಗಿದೆ. ಇಷ್ಟನ್ನು ಹೊರತುಪಡಿಸಿದರೆ ಉಳಿದ ಭಾಗವೆಲ್ಲ ಸಂಸ್ಕೃತ ಸಮಾಸ ಪದಗಳಿಂದ ತುಂಬಿದೆ. ಈ ಸಮಾಸಪದಗಳಲ್ಲಿ ಉಪ್ಪಡಣೆಗಳು ; ಸ್ತೋತ್ರಗಳು. ಈ ಸಮಾಸಪದಗಳಲ್ಲಿ ಭಾಷೆಗೆ ಉದ್ದೀಪನ ಶಕ್ತಿ ಇಲ್ಲ. ಅಂದರೆ ಆ ಪದಗಳು ಈಗಾಗಲೇ ಸಾಂಸ್ಕೃತಿಕವಾಗಿ ಪಡೆದಿರುವ ಅರ್ಥಪರಂಪರೆಗೆ ಮಾತ್ರ ಸೀಮಿತಗೊಳ್ಳುತ್ತವೆ.

ಆದರೆ ಮುಂದಿನ ಷಟ್ಪದಿಗಳನ್ನು ನೋಡಿ :

ಈಗಲೇ ಈ ದೇಹವಿನ್ನಾ
ವಾಗಲೋ ನಿಜವಿಲ್ಲವೆಂಬುದ
ನೀಗ ತಿಳಿಯದೆ ಮಡದಿಮನೆ ಮನೆವಾರ್ತೆಯೆಂದೆಂಬ
ರಾಗ ಲೋಭದಿ ಮುಳುಗಿ ಮುಂದಣ
ತಾಗುಬಾಗುಗಳರಿಯ ನಿನ್ನ ಸ
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ॥

ಇಲ್ಲಿ ಸಂಸ್ಕೃತ ಪದಗಳಿಲ್ಲವೆಂದಲ್ಲ. ದೇಹ, ನಿಜ, ವಾರ್ತೆ, ರಾಗ, ಲೋಭ, ಸಮಾಗಮ ಮುಂತಾದ ಪದಗಳಿವೆ. ಆದರೆ ಇಡೀ ಷಟ್ಪದಿ ಸಂವಾದದ

ಧಾಟಿಯನ್ನು ಪಡೆದುಕೊಳ್ಳುತ್ತದೆ. ದ್ವಿತೀಯ ಪುರುಷ ಸರ್ವನಾಮದ ರೂಪಗಳು–ಈ ಷಟ್ಪದಿಯಲ್ಲಿ 'ನಿನ್ನ' ಬಳಕೆಯಾಗದ ಷಟ್ಪದಿಗಳು ಬಹುಮಟ್ಟಿಗೆ ಇಲ್ಲವೇ ಇಲ್ಲ. ಅಂದರೆ ಈ ರಚನೆಗಳು ಸ್ತುತಿಸುವಾತ ಸ್ತುತ್ಯನನ್ನ ನೇರವಾಗಿ ಮುಖಮುಖಿಯಾಗಿ ಮಾತನಾಡಿಸುವ ಮಾದರಿಯನ್ನು ಅನುಸರಿಸುತ್ತವೆ. ಮೊದಲ ಹದಿನೈದು ಷಟ್ಪದಿಗಳಲ್ಲಿ 'ಸ್ತುತ್ಯ'ನಾದವನು ಸ್ಥಗಿತ, ಪರಂಪರಾಗತ ಚಿಂತನೆಯ ಚೌಕಟ್ಟನೊಡನೆ ಲಭ್ಯನಾದವನು. ಆದರೆ 'ಸಂವಾದ' ಧಾಟಿಯ ಷಟ್ಪದಿಗಳಲ್ಲಿ 'ಸ್ತುತ್ಯ'ನಾದವನು ಚಲನಶೀಲ, ಅವನೊಡನೆ ಭಕ್ತನ ಮಾತು ಕತೆ ನಡೆಯುತ್ತದೆ.

ಈ ಸಂವಾದದ ಧಾಟಿಯೇ ಕನಕದಾಸರ ಕೀರ್ತನೆಗಳ ಮುಖ್ಯ ನೆಲೆಯಾಗಿದೆ. 'ಕಾಯುವಾತ' ಹಾಗೂ 'ಮೊರೆ ಹೋಗುವಾತ' ಇವರು ಈ ಸಂವಾದದ ಮುಖ್ಯ ಪಾತ್ರಧಾರಿಗಳು. ಇವರಿಬ್ಬರ ಸಂದರ್ಭಗಳನ್ನು, ಸ್ವರೂಪಗಳನ್ನು ಭಾಷೆಯ ಮೂಲಕ ಕಟ್ಟಿಕೊಡುವುದು, ನಿಜಗೊಳಿಸುವುದು ಕೀರ್ತನೆಗಳ ಮುಖ್ಯ ಆಸಕ್ತಿಯಾಗುತ್ತದೆ. 'ಕಾಯುವಾತ'–ಇಲ್ಲಿ ದೇವರು–ನನ್ನು ಕೀರ್ತನೆಗಳು ಮಂಡಿಸುವುದು, ಲಭ್ಯ ಕಥಾನಕಗಳನ್ನು ಸೂಕ್ತವಾಗಿ ಬಳಸಿಕೊಳ್ಳುವ ಮೂಲಕ ಹಾಗೂ ವ್ಯಾಖ್ಯಾನಗಳ ಮೂಲಕ. ಇದರ ಮಾದರಿಗಳನ್ನು ಈಗಾಗಲೇ ನೋಡಿದ್ದೇವೆ. ಆದರೆ 'ಮೊರೆಹೋಗುವಾತ'–ಇಲ್ಲಿ ಭಕ್ತ–ನನ್ನು ಭಾಷೆಯ ಮೂಲಕವೇ ಗ್ರಹಿಸಿ ನಿಜವಾಗಿಸುವ ಕ್ರಮ ಕೀರ್ತನೆಗಳಲ್ಲಿ ಕಾಣುತ್ತದೆ.

> ಕ್ಷೀರದೊಳದ್ದು ನೀರೊಳಗದ್ದು
> ಹೇರನೊಪ್ಪಿಸಿದ ಮೇಲೆ ಸುಂಕ ಯಾವುದೋ ದೇವಾ ॥

ಈ ಸಾಲುಗಳಲ್ಲಿ ಮೊರೆಹೋಗುವಾತನ ಸಂದರ್ಭವನ್ನು ಅಸಹಾಯಕತೆ ಮತ್ತು ಶರಣ ಭಾವವನ್ನು ರೂಪಿಸಿ ಕೊಡಲಾಗಿದೆ. ಮತ್ತೆಮತ್ತೆ ಕನಕದಾಸರ ಕೀರ್ತನೆಗಳಲ್ಲಿ ಈ ಬಗೆಯೇ ಆವರ್ತಗೊಳ್ಳುತ್ತ ಹೋಗುತ್ತದೆ.

೧. ಜನನಿಯ ಜಠರದಿ ನವಮಾಸವು
ಘನತೆ ನೀ ಪೋಷಿಸುತಿರಲೆನ್ನ
ಜನಿಸಲಾರೆನೆ ಜನಿಸೆಂದಿಕ್ಕಳದಿಂದ
ವನಜಾಕ್ಷ ನೂಕಿದವನು ನೀನಲ್ಲವೆ ಕೃಷ್ಣ ॥

೨. ಪಟ್ಟೆನಾಮವ ಬಳಿದು ಪಾತ್ರೆ ಕೈಯಲಿ ಹಿಡಿದು
ಗುಟ್ಟಿನಲಿ ರಹಸ್ಯವ ಗುರುತರಿಯದೇ

ಕೆಟ್ಟಕೂಗನು ಕೂಗಿ ಬಗುಳಿ ಬಾಯಾರುವಂಥ
ಹೊಟ್ಟೆಗೇಡ ಮೃಗಗಳೆಲ್ಲ ಶ್ರೀವೈಷ್ಣವರೆ ಕೃಷ್ಣ ॥

೩. ಮಾಯಾಪಾಶದ ಬಲೆಯೊಳು ಸಿಕ್ಕಿ ತೊಳಲುವ
ಕಾಯ ಪಂಚೇಂದ್ರಿಯ ಗತಿ ನಿನ್ನದು
ಕಾಯಜಪಿತ ಕಾಗಿನೆಲೆಯಾದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೆ ॥

ಈ ಉದಾಹರಣೆಗಳು ಮೇಲಿನ ಮಾತನ್ನು ಸಮರ್ಥಿಸುವಂತಿವೆ. ಗಮನಿಸಬೇಕಾದ ಅಂಶವೊಂದಿದೆ. ಮೂರು ಕಡೆಗಳಲ್ಲಿ ಕಾಯುವಾತನ ನಿಜಕ್ಕಿಂತ, ಮೊರೆಹೋಗುವಾತನ ನಿಜವೇ ಮುಖ್ಯವಾದುದು. ಕಾಯುವವನ ಕ್ರಿಯಾಶೀಲತೆಯಾಗಲೀ, ಸ್ವಾತಂತ್ರ್ಯವಾಗಲೀ ಇಲ್ಲದ 'ಅಧೀನ' ಮಾನವಭಕ್ತನ ವಾಸ್ತವ ಈ ಕೀರ್ತನೆಗಳಲ್ಲಿ ರಾಚುತ್ತದೆ. ಈ ಮಾತಿಗೆ ಪೂರಕವಾಗಿ ಅವರ ಬೇರೆಬೇರೆ ಕೀರ್ತನೆಗಳಲ್ಲಿ ಬರುವ ಮೂರು ಉಲ್ಲೇಖಗಳನ್ನು ಗಮನಿಸಬಹುದು.

'ತಲ್ಲಣಿಸದಿರು ಕಂಡ್ಯಾ ತಾಳು ಮನವೇ'
'ನೆಚ್ಚದಿರು ಸಂಸಾರ ನೆಲೆಯಲ್ಲವೀ ಕಾಯ'
'ಎಲ್ಲಿರುವನೋ ರಂಗ ಎಂಬ ಸಂಶಯ ಬೇಡ'

ಈ ಸಾಲುಗಳು ಕಾಯುವವನ ಅಸ್ತಿತ್ವಕ್ಕಿಂತ ಮೊರೆಹೋಗುವವನ 'ತಲ್ಲಣ'ಗಳು ಮುಖ್ಯವಾಗುತ್ತವೆ. ಹಾಗಾಗಿ ಸ್ತೋತ್ರ ಸಾಹಿತ್ಯದ ನಂಬಿಕೆ ಇಲ್ಲಿ ಅಸಾಧ್ಯ. ಕೀರ್ತನೆಗಳು ಭಾಷಿಕ ರೂಪದಲ್ಲೇ ಹಾಗಾಗಿ ಸ್ತೋತ್ರಗಳಿಗಿಂತ ಭಿನ್ನ.

ಈ ಸಂವಾದ ರೂಪದ ಕೀರ್ತನೆಗಳಲ್ಲಿ ಬರುವ 'ನೀನು' ಕುತೂಹಲಕಾರಿ ಸಾಧ್ಯತೆಗಳನ್ನು ಹೊಂದಿದೆ. ಕೆಲವು ಕಡೆಗಳಲ್ಲಿ 'ನೀನು' ಕಾಯುವಾತನನ್ನು ಗಮನಿಸಿದರೆ, ಉಳಿದೆಡೆಗಳಲ್ಲಿ ಅದು ಭಕ್ತನ, ಮೊರೆಹೋಗುವವನ ಪ್ರತಿ ವ್ಯಕ್ತಿತ್ವವನ್ನು ಸೂಚಿಸುತ್ತದೆ. ಈ ಪ್ರತಿವ್ಯಕ್ತಿತ್ವ ಇಡಿಯಾಗಿ ಮಾನವ ಕುಲವನ್ನು ಪ್ರತಿನಿಧಿಸಬಲ್ಲ ಸಾಮರ್ಥ್ಯವನ್ನು ಹೊಂದಿದೆ. ಅದೂ ಅಂಥ ಅಪೇಕ್ಷೆಗಳನ್ನು ಪ್ರಕಟಿಸುತ್ತದೆ.

ಕಥನಕಾರ ಕನಕದಾಸರಿಗೂ ಕೀರ್ತನಕಾರ ಕನಕದಾಸರಿಗೂ ಇರುವ ವ್ಯತ್ಯಾಸ ಭಾಷಿಕವಾಗಿ ಮೈದಳೆಯುವುದು ಮೇಲೆ ಹೇಳಿದ ನೆಲೆಗಳಲ್ಲಿ ಕಥನಕಾರರಾಗಿ ಅವರು ಚೆನ್ನಾಗಿ ತಾಲೀಮು ಮಾಡಿದ ಸಂಗೀತಗಾರನಂತೆ, ಆದರೆ ಕಲಿತಿದ್ದಕ್ಕೆ ಮಾತ್ರ ಮಿತಗೊಳ್ಳುವಂತೆ ತೋರುತ್ತಾರೆ. ಅಲ್ಲಿ ಅವರು

ಬಳಸುವ ಕನ್ನಡ ಮಧ್ಯಕಾಲೀನ ಕನ್ನಡ ಕವಿಗಳೆಲ್ಲರಿಗೂ, ಅದರಲ್ಲೂ ದೇಸೀ ಬಂಧಗಳನ್ನು ಆಯ್ದುಕೊಳ್ಳುವವರಿಗೆ ಸಮಾನ. 'ಮೋಹನತರಂಗಿಣಿ'ಯ ಭಾಷೆಗೂ ಅಂಶಲಯದ ಯಾವುದೇ ಕನ್ನಡ ಕಾವ್ಯದ ಭಾಷೆಗೂ ಹೆಚ್ಚಿನ ವ್ಯತ್ಯಾಸಗಳು ಕಾಣುವುದಿಲ್ಲ.

ಆದರೆ ಕೀರ್ತನೆಗಳನ್ನು ರಚಿಸುವಾಗ ಕನಕದಾಸರು ಕನ್ನಡವನ್ನು ವರ್ಗಾಂತರಿಸಿ ಬಳಸುತ್ತಾರೆ. ಕೀರ್ತನೆಗಳ ದೇವ–ಮಾನವ ಸಂಬಂಧವನ್ನು ಪ್ರತಿನಿಧಿಸುವ ನೆಲೆಯಲ್ಲಿ ಭಾಷೆ ಹೊಸ ಚಹರೆಗಳನ್ನು ಪಡೆದುಕೊಳ್ಳುತ್ತದೆ. ಈ ಸಂಬಂಧದ ನಿಗೂಢತೆಯೇ ಮುಂಡಿಗೆಗಳ ಭಾಷೆಯಲ್ಲಿ ಮೈದಳೆಯುವುದು.

ಎಲ್ಲ ಕೀರ್ತನೆಗಳಲ್ಲೂ ಕನಕದಾಸರು ಈ ಮೀರುವಿಕೆಯನ್ನು ಸಾಧಿಸಿದ್ದಾರೆಂದು ಹೇಳಲಾಗದು. ಅಲ್ಲಿಯೂ ಪ್ರಮಾಣವಿಲ್ಲದ ಭಕ್ತಿಗಳಿಂದ, ಪಾರಂಪರಿಕ ಚಿಂತನೆಗಳಿಂದ ಸ್ಥಗಿತಗೊಂಡ, ಭಾವೋದ್ದೀಪಕವಲ್ಲದ ಸ್ತೋತ್ರಗಳ ಮಾದರಿ ತಲೆಹಾಕುವುದುಂಟು, ಆದರೆ ಮೀರುವಿಕೆ ಸಾಧ್ಯವಾಗುವಲ್ಲಿ ಮಾತ್ರ ಅವರ ಅನನ್ಯತೆ, ಅವರ ಕೀರ್ತನೆಗಳ ಭಾಷಿಕ ಸ್ವರೂಪದ ಮಹತ್ವ ಗೋಚರವಾಗುತ್ತದೆ.

# ಕಿಂಡಿಯಲ್ಲಿ ನೋಡಿದ ಕವಿತೆಗಳು

## (ಕನಕದಾಸರ ಕವಿತೆಗಳನ್ನು ಕುರಿತ ಚರ್ಚೆ)

**ಡಾ. ಕೆ. ಕೇಶವಶರ್ಮ**

ಯಾವುದೇ ಕಲಾಕೃತಿಯು ಸಂರಚನೆಯ ಕುರಿತಂತೆ ಮಾತಾಡುವಾಗ ಕೆಲವಂಶಗಳು ಮುಖ್ಯವಾಗುತ್ತವೆ :

೧. ಕೃತಿಯ ರಚನೆಯು ಅಂತರಂಗದ ಅಭಿವ್ಯಕ್ತಿಯಾಗಿದ್ದರೂ, ಅದರ ಜೊತೆಯಲ್ಲಿ, ಸಾಮಾಜಿಕ, ರಾಜಕೀಯ, ಆರ್ಥಿಕ ಸಂಗತಿಗಳು ಅಡಕವಾಗಿರುತ್ತವೆ. ಯಾಕೆಂದರೆ, ಕಲಾವಿದನೊಬ್ಬನು ಈ ರೀತಿಯ ನಿರ್ದಿಷ್ಟ ಸಂದರ್ಭಗಳಲ್ಲಿ ಬದುಕುತ್ತಿರುತ್ತಾನೆ. ಹೀಗಾಗಿ, ಕಲಾವಿದನ ಬದುಕು ಸಮಾಜದ ಒಟ್ಟು ಸಂದರ್ಭಗಳಿಂದ ನಿರ್ಮಿತವಾಗಿರುತ್ತದೆ. ಇದರರ್ಥ ಕವಿಯಾಗಲೀ ಕಲಾವಿದನಾಗಲೀ ನೇರವಾಗಿ ಚರಿತ್ರೆಗೆ ಬದ್ಧನಾಗಿರುತ್ತಾನೆಂದಲ್ಲ. ಅದರ ಬದಲಾಗಿ, ಚರಿತ್ರೆಯಲ್ಲಿ ಕಲಾವಿದನು ತೀರಾ ಸಹಜವಾಗಿ ರೂಪುಗೊಂಡಿರುತ್ತಾನೆಂದಷ್ಟೆ.

೨. ಸಾಹಿತ್ಯವು ಕೇವಲ ಸೂಚನೆಯಾಗಿದ್ದು, ಈ ಸೂಚನೆಯೂ ಸಾಮಾಜಿಕ ವರ್ಗ, ಆಯಾ ಸಮಾಜದ ದೃಷ್ಟಿಯನ್ನು ಹೊಂದಿರುತ್ತದೆ.

೩. ಸಾಹಿತ್ಯವು ತತ್ಕಾಲೀನ ಸಮಾಜವನ್ನು ಸರಳವಾಗಿ ಸ್ವೀಕರಿಸುವುದಿಲ್ಲ. ಕೃತಿಯಲ್ಲಿ ಅದಕ್ಕೊಂದು ಮೆರಗು ಸಿದ್ಧವಾಗಿರುತ್ತದೆ.

೪. ಕೃತಿಯ ರಚನೆಯಲ್ಲಿ ಕೃತಿಕಾರ ಮತ್ತು ಕೃತಿ ಎನ್ನುವ ಎರಡು ಅಂಶಗಳಿರುತ್ತವೆ. ಕೃತಿಯ ಜಗತ್ತಿನಲ್ಲಿ ಭಾಷೆಯೂ ಅದರದೇ ಆದ ಕ್ರಿಯಾತ್ಮಕ ಅಂಶವನ್ನು ಒಳಗೊಂಡಿರುತ್ತದೆ. ಇಲ್ಲಿ ಇದರೊಂದಿಗೆ ಬೇರೆ ಅಂಶಗಳೂ ಇವೆ. ಉದಾಹರಣೆಗೆ ವಯೋಲಿನ್ ಬಾರಿಸುವವನು ಮಾತಾಡುವುದಿಲ್ಲ. ವಯೋಲಿನ್ ನುಡಿಸುತ್ತಾನೆ. ಚಿತ್ರ ಬಿಡಿಸುವವನು ಬಣ್ಣಗಳನ್ನು ಬಳಸುತ್ತಾನೆ. ಹೀಗೆಯೇ ಒಬ್ಬ ಕೃತಿಕಾರ ಭಾಷೆಯನ್ನು ಉಪಯೋಗಿಸುತ್ತಾನೆ. ಅಂದರೆ : ಭಾಷೆಯು ಕೃತಿಕಾರನಿಗೆ ಒಂದು ವಾಹನವಲ್ಲ. ಅದೊಂದು ಕಲೆ.

ಒಂದು, ರೀತಿಗಳು ಕೃತಿಗಳು ಕೇಳಬಹುದಾದ ಕೃತಿಗಳು, ಇಲ್ಲಿ ಹೇಳುವವನು ಮತ್ತು ಕೇಳುವವನ ಸಂಬಂಧ ಸ್ಪಷ್ಟವಾಗಿರುತ್ತದೆ. ಹೇಳುವವನು ಮತ್ತು ಕೇಳುವವನು ಏಕಕಾಲಕ್ಕೆ ಸಂಧಿಸುತ್ತಾರೆ. ಇನ್ನೊಂದು ಬರಹ ಮಾಧ್ಯಮದ ಕೃತಿಗಳು. ಇಲ್ಲಿ ಕೃತಿಕಾರನ ಎದುರಿಗೆ ಅದನ್ನು ಸ್ವೀಕರಿಸುವವರು ಇರುವುದಿಲ್ಲ. ಆದುದರಿಂದ ಸಹಜವಾಗಿಯೇ ಬರಹಗಾರನು ಹೆಚ್ಚು ಸ್ವಾತಂತ್ರ್ಯವನ್ನು ಅನುಭವಿಸುತ್ತಿರುತ್ತಾನೆ. ಮೊದಲ ವರ್ಗದ ಕೃತಿಗಳಲ್ಲಿ ಕೃತಿಕಾರನು ಶಿಸ್ತುಬದ್ಧವಾಗಿ ನಡೆಯಬೇಕಾಗುತ್ತದೆ. ಆದರೆ ಇನ್ನೊಂದು ಬಗೆಯ ಕೃತಿಗಳಲ್ಲಿ ಕೃತಿಕಾರ ಭಾಷೆಯೊಂದಿಗೆ ನರ್ತನ ಮಾಡುತ್ತಾನೆ.

೬. ಬರಹಗಾರನ ವೈಯಕ್ತಿಕತೆ, ಅವನ ಸ್ವಂತಿಕೆಯು ಬರಹದಲ್ಲಿ ಅಭಿವ್ಯಕ್ತಿಯ ರೂಪವನ್ನು ತಾಳುವುದರಿಂದ ಸಹಜವಾಗಿಯೇ ಅವನ ದೃಷ್ಟಿಯೂ ಕೂಡಾ ಮುಖ್ಯವಾಗುತ್ತದೆ : ಕಿಟಕಿಯ ಮೂಲಕ ಹೊರ ಜಗತ್ತನ್ನು ನೋಡಿದಂತೆ.

೭. ಯಾವುದೇ ಕೃತಿಯನ್ನು ಓದುವಾಗಲೂ ನಮ್ಮ ಅನುಭವದ ಸಂಗತಿಯು ಮುಖ್ಯವಾಗುತ್ತದೆ.

೮.ವಾಸ್ತವವಾದಿಯೆನ್ನಬಹುದಾದ ಕೃತಿಗಳಲ್ಲಿಯೂ ಪರಿಪೂರ್ಣವಾದ ಸತ್ಯ ಇರುವುದಿಲ್ಲ. ಅಲ್ಲೊಂದು ಉದ್ದೇಶ ಇರುತ್ತದೆ, ಸೌಂದರ್ಯ ಇರುತ್ತದೆ.[1]

೨

ವಸಾಹತುಪೂರ್ವದ ಕನ್ನಡದ ಕವಿಗಳ ಬಗೆಗೆ ಚರ್ಚಿಸುವಾಗ ನಮಗೆ ಸಹಜವಾಗಿಯೇ ಆ ಕವಿಗಳ ಕುರಿತು ಒಂದೋ ವಿಪರೀತವಾದ ಆದರಾಭಿಮಾನವಿರುತ್ತದೆ. ಇಲ್ಲವೇ ನಿರಾಕರಣೆಯ ಧ್ವನಿಯು ಇರುತ್ತದೆ. ಇದಕ್ಕಿರುವ ಮುಖ್ಯ ಕಾರಣಯೆಂದರೆ ನಾವು ಸಿಲುಕಿಕೊಂಡಿರುವ ಆಧುನಿಕ ಚರಿತ್ರೆಯೇ ಆಗಿದೆ. ಈ ಆಧುನಿಕ ಚರಿತ್ರೆಯ ಮುಖಖೇಡಿತನದ ಹುಚ್ಚಾಟಕ್ಕೆ ಸಿಕ್ಕಿದ ನಮ್ಮ ಓದಿನ ಕ್ರಮವೂ ಕೂಡಾ ಪಶ್ಚಿಮದ ದಿಕ್ಕಿನ ಕಡೆಗೆ ಮುಖಮಾಡಿದೆ.[೨] ಸಾಂಸ್ಕೃತಿಕ ಒತ್ತಡವನ್ನು ಕಳೆದುಕೊಳ್ಳಲು ತೊಡಗುತಿರುವ ನಮ್ಮ ಪ್ರಕ್ರಿಯೆಯ ಹಂಬಲವೂ ಕೂಡಾ ಈ ರೀತಿಯಲ್ಲಿ ಸ್ವ–ಗುರುತಿನ ಹಂಬಲವಾಗಿ (self-identity) ಮಾರ್ಪಟ್ಟಿದೆ. ಇದರ ಪರಿಣಾಮವೆಂದರೆ–ಹಳೆಗನ್ನಡ ಕಾವ್ಯದ ಬಗೆಗಿನ ನಮ್ಮ ಓದಿನ ಕ್ರಮವೂ ಕೆಲವೊಮ್ಮೆ ಉತ್ಪ್ರೇಕ್ಷೆಯ ರೂಪವಾಗಿ, ಕನ್ನಡ ಕಾವ್ಯದ ಆದರಾಭಿಮಾನದ ತೀವ್ರತೆಯ ಕ್ರಿಯೆಯಾಗಿ ಮಾರ್ಪಟ್ಟಿದೆ. ಇದರಿಂದಾಗಿ ಆಧುನಿಕ ಜಗತ್ತಿಗೆ ಸಂಬಂಧಿಸದ ಹಳೆಗನ್ನಡದ ಕಾವ್ಯವೆಲ್ಲವೂ ದಿವ್ಯವಾಗಿ

ಅಷ್ಟೇ ಅಲ್ಲ, ನಮ್ಮೆಲ್ಲಾ ಸಮಸ್ಯೆಗಳಿಗೆ ಉತ್ತರಕೊಡುವ ವಾಗ್ದೇವತೆಯ ಪ್ರತೀಕವಾಗಿ ಕಾಣಿಸುತ್ತದೆ. ಕನ್ನಡದ ಬಹುತೇಕ ನವೋದಯದ ವಿಮರ್ಶಕರಲ್ಲಿ ಈ ರೀತಿ ಪ್ರತಿಕ್ರಿಯೆಯೂ ಕಾಣಿಸಿದೆ.

ಆಧುನಿಕ ವೈಚಾರಿಕ ಚೌಕಟ್ಟಿನಲ್ಲಿ ತುಂಬಿಕೊಂಡಿರುವ ಅನ್ಯಶಿಸ್ತಿನ ಮುಖಾಂತರ ಹಳೆಗನ್ನಡ ಸಾಹಿತ್ಯವನ್ನು ಅರ್ಥಮಾಡಿಕೊಳ್ಳುವ ರೀತಿಯೂ ಕನ್ನಡದ ವಿಮರ್ಶಾ ಬರಹ ಮತ್ತು ಓದಿನಲ್ಲಿ ಕಾಣಿಸಿಕೊಂಡಿದೆ. ಹಳೆಗನ್ನಡ ಕಾವ್ಯ 'ವಸ್ತುನಿಷ್ಠತೆ' ಇತ್ಯಾದಿ ಚರ್ಚೆಗಳೂ ಇದರ ಮೂಲಕ ಸಂಪ್ರಾಪ್ತವಾಗಿದೆ.[೩] ಈ ಪರಿಕ್ರಮದಲ್ಲಿ ಎಷ್ಟೋ ಬಾರಿ ನಮ್ಮ ಆಧುನಿಕ ವಿಚಾರಗಳಿಗೆ ಹಳೆಗನ್ನಡ ಕೃತಿಗಳನ್ನು ಕತ್ತರಿಸಿಡುವ ಕ್ರಮವೂ ಕೂಡಾ ಬಂದಿದೆ.

ಸದ್ಯ ಕನ್ನಡದಲ್ಲಿ ಕನಕದಾಸರ ಕೃತಿಗಳನ್ನು ಕುರಿತಂತೆ ಬಂದ ಮುಖ್ಯ ಚರ್ಚೆಗಳೂ ಮೇಲಿನ ಅಂಶಗಳಿಂದ ಪ್ರೇರಿತವಾಗಿವೆ. ಕನಕದಾಸರು ಕೃತಿಗಳನ್ನು ಕುರಿತಂತೆ ಬಂದ ಚರ್ಚೆಯ ಕೇಂದ್ರ ಬಿಂದುಗಳನ್ನು ಹೀಗೆ ಗುರುತಿಸಬಹುದು:

೧. ಕನಕದಾಸರ ಕವಿತೆಗಳಲ್ಲಿ ಶಬ್ದ ಚಿತ್ರಗಳಿವೆ ಮತ್ತು ಕನಕದಾಸರಿಗೆ ವಿಪುಲವಾದ ಲೋಕಾನುಭವವಿದೆ[4]

೨. ಕನಕದಾಸರು ತಮ್ಮ ಕವಿತೆಗಳಲ್ಲಿ ತತ್ಕಾಲೀನ ಸಮಾಜ ಸ್ಥಿತಿಯನ್ನು ವರ್ಣಿಸುತ್ತಾರೆ.[5]

೩. ದಾಸ ಸಾಹಿತ್ಯಕ್ಕೂ ತತ್ಕಾಲೀನ ರಾಜಕಾರಣಕ್ಕೂ ಸಂಬಂಧವಿದೆ.[6]

೪. ಕುಲದ ಬಗೆಗೆ ಕನಕದಾಸರು ಎತ್ತುವ ಪ್ರಶ್ನೆ ಅಮೂರ್ತವಾದ ವೈಚಾರಿಕ ವಿಷಯವಾಗಿರದೆ, ವಾಸ್ತವದನುಭವದ ಹಿನ್ನೆಲೆಯಿಂದ ಹುಟ್ಟಿ ಬಂದುದಾಗಿದೆ.[7]

೫. ಭಕ್ತಿ ಸಿದ್ಧಾಂತದ ಚೌಕಟ್ಟಿನ ಬದುಕಿಗೆ ಮಂತ್ರಮುಗ್ಧನಾದ ಕನಕದಾಸನು ಅಂಥ ಬದುಕಿನ ಅನುಕರಣೆಯ ಸಾಧನೆಯಲ್ಲಿ ಸಾಮಾನ್ಯವರ್ಗದ ಸಂವೇದನೆಗಳಿಂದ ದೂರವಾಗಬೇಕಾಯಿತು.[8]

೬. ಕನಕದಾಸರು ನಿಮ್ನಜಾತಿಗೆ ಸೇರಿದುದರಿಂದ ಅವರ ಕವಿತೆಗಳಲ್ಲಿ ಜಾತಿಯ ಬಗೆಗಿನ ನಿಲುವುಗಳು ವ್ಯಕ್ತವಾಗುತ್ತವೆ.[9]

೭. ಮೋಹನ ತರಂಗಿಣಿಯಲ್ಲಿ ಬರುವ ಅನೇಕ ವರ್ಣನೆಗಳು ವಿಜಯನಗರ ಸಾಮ್ರಾಜ್ಯ ಕುರಿತು ಹೇಳುತ್ತವೆ.[10]

ಕನಕದಾಸರ ಕವಿತೆಗಳನ್ನು ಕುರಿತು ಮುಖ್ಯವಾಗಿ ಬಂದಿರುವ ಈ ವಿಚಾರಗಳು ಕನ್ನಡದ ವಿದ್ವಾಂಸರು ಓದಿದ ಕ್ರಮಕ್ಕೆ ಸಂಬಂಧಿಸಿವೆ. ಈ ರೀತಿಯ

ವಿಮರ್ಶೆಯಲ್ಲಿ ನಡೆದಿರುವ ಅನುಸಂಧಾನದ ಪ್ರತಿಕ್ರಿಯೆಯೂ ವಾಸ್ತವವಾಗಿ ಕನಕದಾಸರ ಕವಿತೆಗಳು ಲಿಖಿತ ಪರಂಪರೆಗೆ ಸೇರಿದ ಅನಂತರ ನಡೆದ ಪ್ರತಿಕ್ರಿಯೆಯನ್ನು ಸೂಚಿಸುತ್ತವೆ. ಆದರೆ, ಇದಕ್ಕೆ ಕಾಲದ ಅಂತರವೂ ಕೂಡಾ ಬಂದಿದೆ. ಯಾಕೆಂದರೆ, ವಿಜಯನಗರ ಕಾಲದ ಸನ್ನಿವೇಶದಲ್ಲಿ ಕಾವ್ಯರಚಿಸಿದ ಕನಕದಾಸರ ಕಾವ್ಯಕ್ಕೆ ವಸಾಹತು ಕಾಲಘಟ್ಟದ ಅನಂತರ ದೊರೆತ ಪ್ರತಿಕ್ರಿಯೆಗಳಿವು.

ಕನಕದಾಸರ ಕೃತಿಗಳು ಎರಡು ಬಗೆಯವು : ಒಂದು ವಿಸ್ತೃತ ಚೌಕಟ್ಟು ಉಳ್ಳ ಮಹಾಕಾವ್ಯ ಮಾದರಿಯ ರಚನೆಗಳು 'ಮೋಹನ ತರಂಗಿಣಿ' 'ನಳಚರಿತೆ' ಕೃತಿಗಳು ಈ ಮಾದರಿಯವುಗಳು. ಇನ್ನೊಂದು ರೀತಿಯ ಕವಿತೆಗಳನ್ನು ಕೀರ್ತನೆಗಳೆಂದು ಗುರುತಿಸಲಾಗಿದ್ದು ಇದಕ್ಕೆ ಮೋಹನ ತರಂಗಿಣಿಯಂಥ ಮಹತ್ವಾಕಾಂಕ್ಷೆ ಇಲ್ಲ. ಒಬ್ಬನೆ ಕವಿಯು ಎರಡು ರೀತಿಯ ರಚನೆಗಳನ್ನು ಮಾಡಿದಾಗ, ಅವನ ಕವಿತೆಗಳನ್ನು ವಿರಚನೆಗೊಳಿಸುವುದು ಒಂದು ರೀತಿಯಿಂದ ಸಮಸ್ಯೆಯೇ ಆಗಿರುತ್ತದೆ. ಕನಕದಾಸರ ಈ ರೀತಿಯ ರಚನೆಗಳನ್ನು ಹೀಗೆ ಅರ್ಥೈಸಬಹುದು ;

೧. ಈ ರೀತಿಯ ರಚನೆಗೆ ಕಾರಣವಾದ ಸಾಮಾಜಿಕ, ರಾಜಕೀಯ, ಆರ್ಥಿಕ ಸಂಗತಿಗಳ ಹಿನ್ನೆಲೆಯಿಂದ.
೨. ಈ ರಚನೆಗಳ ಚೌಕಟ್ಟುಗಳ ಹಿನ್ನೆಲೆಯಿಂದ,
೩. ಕೃತಿಗಳು ಸೂಚಿಸುವ ಜಗತ್ತಿನ ಹಿನ್ನೆಲೆಯಿಂದ

ಈಗಾಗಲೇ ಸೂಚಿಸಲಾಗಿರುವಂತೆ ಯಾವುದೇ ಕೃತಿಯು ತನ್ನಷ್ಟಕ್ಕೆ ತಾನು ಸ್ವಯಂಭೂತವಾದುದಲ್ಲ. ಅದಕ್ಕೆ ರಾಜಕೀಯ, ಸಾಮಾಜಿಕ ಎನ್ನಬಹುದಾದ ಆಯಾಮವೊಂದೆ. ಮೇಲೆ ಉಲ್ಲೇಖಿಸಲಾಗಿರುವ ಕಾವ್ಯ ರಚನೆಯ ಹಿಂದಿನ ಮನಸ್ಸು ಪ್ರತ್ಯೇಕವಾದುದಲ್ಲ. ಒಂದೇ ಮನಸ್ಸು ಎರಡು ರೀತಿಯ ಕೆತ್ತನೆಯನ್ನು ಮಾಡಿದೆ. ಅಂದರೆ : ಮೂಲತಃ ಈ ರೀತಿಯ ಕೆಲಸಗಳು ಒಂದು ರೀತಿಯ ಉತ್ಪಾದನಾ ಸಂಬಂಧವನ್ನು ಹೊಂದಿದೆ. ಮಹಾಕಾವ್ಯದ ರಚನೆಯನ್ನು ಹೋಲುವ ಕೃತಿಗಳಲ್ಲಿ ಕನಕದಾಸರು ಸೂಚಿಸುವ ಜಗತ್ತು ಮತ್ತು ಕೀರ್ತನೆಗಳಲ್ಲಿ ಸೂಚಿಸುವ ಜಗತ್ತು ಒಂದರ್ಥದಲ್ಲಿ ಒಂದೇ ಆಗಿದೆ.

'ಮೋಹನ ತರಂಗಿಣಿ' ಮತ್ತು 'ನಳ ಚರಿತ್ರೆ' 'ಕೃತಿಯಲ್ಲಿರುವ ವಸ್ತು ಕೇವಲ ಲೌಕಿಕವಾದುದಲ್ಲ' 'ಮೋಹನ ತರಂಗಿಣಿ'ಯ ವಸ್ತು ಭಾಗವತದ್ದು, "ಪೌರಾಣಿಕವಾದ ಕಥಾವಸ್ತುವನ್ನು ಜನಪ್ರಿಯುವಾದ ಧಾಟಿಯುಲ್ಲಿ

ಕಾವ್ಯಮಯವಾದ ಶೈಲಿಯಲ್ಲಿ ನಿರೂಪಿಸಿರುತ್ತಾರೆ. ವಸ್ತುವಿನ ದೃಷ್ಟಿಯಿಂದ ಕನ್ನಡ ಕಾವ್ಯಗಳಲ್ಲಿ ಈ ಕೃತಿಗೆ ಒಂದು ಸ್ಥಾನ ಸಲ್ಲುತ್ತದೆ.” ಈ ಕೃತಿಯಲ್ಲಿ ಸೂಚಿತವಾದ ದಿಕ್ಕು ಪೌರಾಣಿಕ ಜಗತ್ತನ್ನು ಪ್ರತಿಫಲಿಸುತ್ತಿದ್ದರೂ ಇದು ಭ್ರಮೆಯ ಸಂಗತಿಯನ್ನು ಪ್ರತಿಪಾದಿಸುತ್ತದೆ. ಕನಕದಾಸರು ಲೌಕಿಕದಿಂದ ಆಗಮಿಕದ ಕಡೆಗೆ ಈ ಮೂಲಕ ಹೋಗುತ್ತಾರೆ. ಕನ್ನಡ ಸಾಹಿತ್ಯದಲ್ಲಿ ಹದಿಮೂರನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗೆ ಈ ರೀತಿಯ ಕಥನ ಕ್ರಮ ಮತ್ತು ಮರಳಿ ಮಹಾಭಾರತಕ್ಕೆ ಹೋಗುವಿಕೆಯನ್ನು ಕನ್ನಡ ಕವಿಗಳು ನೆರವೇರಿಸಿದರು. ಈ ರೀತಿಯ ಕಥನ ಕ್ರಮದಲ್ಲಿ ಮತ್ತೆ ಕೆಲವಂಶಗಳು ಮುಖ್ಯವಾಗಿವೆ :

೧. ಕನಕದಾಸರು ಮಹಾಭಾರತ ಮತ್ತು ಕೃಷ್ಣ ಕತೆಗೆ ತಮ್ಮ ಸಮಕಾಲೀನ ಸ್ಥಿತಿಯಿಂದ ಪ್ರತಿಕ್ರಿಯಿಸಿದ್ದಾರೆ.

೨. ಇದರಲ್ಲಿ ಕನಕದಾಸರ ವೈಯಕ್ತಿಕ ಗ್ರಹಿಕೆಯು ಪ್ರಧಾನವಾಗಿದೆ.

೩. ಈ ಕಾಲದಲ್ಲಿ ಒಟ್ಟು ಪೌರಾಣಿಕ ಪ್ರಪಂಚದ ಧಾಟಿಯಿದೆ. ಬಹುಶಃ ಆ ಕಾಲ ಸಮಾಜದಲ್ಲಿ ಅಂತಸ್ಥವಾಗಿದ್ದ ಅವಿಶ್ರಾಂತ ಸ್ಥಿತಿಯೂ ಇದಕ್ಕೆ ಕಾರಣವಾಗಿರಬಹುದು. ಯಾಕೆಂದರೆ, ಈ ಕಾವ್ಯಗಳ ಮುಖ್ಯ ಗುಣವೆಂದರೆ ‘ನೈತಿಕ ಪ್ರಸರಣ’.

೪. ಮಹಾಭಾರತ ಮತ್ತು ಪೌರಾಣಿಕ ಕತೆಗಳ ಅನುಕರಣೆಯು ಲೌಕಿಕವಾದ ಒಟ್ಟು ಸ್ಥಿತಿಗೆ ಉತ್ತರ ರೂಪವಾಗಿ ಸಿದ್ಧವಾದುದು.

ಕನಕದಾಸರ ‘ನಳಚರಿತ್ರೆ’ ಮತ್ತು ‘ಮೋಹನ ತರಂಗಿಣಿ’ ಎರಡೂ ಕೃತಿಯನ್ನು ಅನ್ವಯಿಸಿಕೊಂಡು ಕೆಲವು ಮಾತುಗಳನ್ನು ಮುಂದುವರಿಸ ಬಹುದಾಗಿದೆ. ಈ ಎರಡೂ ಕೃತಿಗಳಲ್ಲಿ ವೈಯಕ್ತಿಕ ಮತ್ತು ಸಾಮಾಜಿಕ ಪ್ರಕ್ರಿಯೆಗಳಿವೆ. ಉದಾಹರಣೆಗೆ, ‘ನಳಚರಿತ್ರೆ’ ಕೃತಿಯಲ್ಲಿ ಕನಕದಾಸರು ವ್ಯವಸ್ಥಿತ ಸಾಮ್ರಾಜ್ಯವೊಂದರ ಸ್ಥಿತಿಯಿಂದ ಕತೆಯನ್ನು ಹೇಳಲು ತೊಡಗುತ್ತಾರೆ.[12] ಹೀಗೆ ಪ್ರಾರಂಭವಾಗುವ ಕತೆಯಲ್ಲಿ ವ್ಯಕ್ತಿಯೊಬ್ಬನು ಪಡೆಯುವ ಅನೇಕ ಆಯಾಮಗಳೂ ಬರುತ್ತವೆ. ಅನಂತರದಲ್ಲಿ ಈ ಕಥಾನಕವು ಮತ್ತೆ ಅರಸನು ಸುಖವಾಗಿ ರಾಜ್ಯವಾಳುವ ಸ್ಥಿತಿಗೆ ಮುಕ್ತಾಯವಾಗುತ್ತದೆ[13]. ಈ ಮಧ್ಯೆ ಜರುಗುವ ಕ್ರಿಯೆಗಳೆಲ್ಲವೂ ಒಂದು ಉದ್ದೇಶಕ್ಕಾಗಿ ದುಡಿಯುತ್ತವೆ. ಈ ಉದ್ದೇಶ ಒಂದು ಜೀವನ ಸ್ಥಿತಿಯನ್ನು ಸೂಚಿಸುವಂತಹುದು. ಈ ರೀತಿಯ ಆಕೃತಿಯನ್ನು ಹೀಗೆ ನಿರ್ದೇಶಿಸಬಹುದು ; ಕನಕದಾಸರು ಹಳೆಯ ಕತೆಗಳಿಗೆ ಹೊಸದಾದ

ಆಕೃತಿಯನ್ನು ಕೊಡುವುದರಿಂದ ಹಳೆಯ ಕತೆಯ ಮೂಲ ಸಂಗತಿಗಳು ಬದಲಾಗುವುದಿಲ್ಲ. 'ನಳಚರಿತ್ರೆ'ಯನ್ನು ಅನ್ವಯಿಸಿಕೊಂಡು ಮಾತನ್ನು ಮುಂದುವರಿಸಬಹುದು. 'ನಳಚರಿತ್ರೆ'ಯಲ್ಲಿ ನಾಯಕ ಕೇಂದ್ರಿತ ಗುಣವಿದೆ. ಅಷ್ಟೇ ಅಲ್ಲ. ವಿವರಣಾತ್ಮಕವಾದ ಚಿತ್ರವಿದೆ. ನಳನಿಗೆ ಮತ್ತು ದಮಯಂತಿಗೆ ಆಗುವ ಬವಣೆಯನ್ನು ಕುರಿತು ಕತೆಯ ಚೌಕಟ್ಟಿನಲ್ಲಿ ಎರಡು–ಮೂರು ಕಡೆ ಸಮಸ್ಯೆಯು ಪುನರಾವರ್ತಿತವಾಗುತ್ತದೆ.[14] ಹೀಗಾಗಿ, ಕತೆಯ ಚೌಕಟ್ಟಿನಲ್ಲಿ ಈ ಕತೆಯು ಸ್ವರೂಪವು ತೀರಾ ಐಕ್ಯದ ಗುಣವನ್ನು ಹೊಂದಿರದ ಪುನರಾವರ್ತನೆಯನ್ನು ಒಳಗೊಂಡು ಬೆಳೆಯುತ್ತದೆ. ಈ ರೀತಿಯ ಕತೆಗಳನ್ನು ಕುರಿತು 'ಪ್ರಾಫ್' ಕೆಲವಂಶಗಳನ್ನು ಸೂಚಿಸುತ್ತಾನೆ :

೧. ಈ ರೀತಿಯ ಕತೆಗಳಲ್ಲಿ ಪಾತ್ರಗಳು ಅಚಲವಾದ ಗುಣವನ್ನು ಹೊಂದಿರುತ್ತವೆ. ಪಾತ್ರಗಳು ಕತೆಯಲ್ಲಿ ಮುಖ್ಯ ಅಂಶಗಳನ್ನು ಒಳಗೊಂಡಿದ್ದು ಅದರ ಮೂಲಕ ಕತೆಯಲ್ಲಿ ಅನಿವಾರ್ಯ ಘಟಕಗಳಾಗಿರುತ್ತವೆ. 'ನಳಚರಿತ್ರೆಯಲ್ಲಿ 'ನಳ ಮತ್ತು ದಮಯಂತಿ' ಪಾತ್ರದ ಕೆತ್ತನೆಯು ಈ ರೀತಿಯದು. ಈ ಪಾತ್ರಗಳು ನಿರ್ದೇಶಿಸುವ ಗುಣವನ್ನು ಪರಿಶೀಲಿಸಬಹುದು : ನಳನದು ಸಾತ್ವಿಕವಾದ ಗುಣ. ಆದರೆ ಸತ್ಯಕ್ಕಾಗಿ ದುಡಿಯುವ ಚೈತನ್ಯಶೀಲವಾದ ಈ ಪಾತ್ರಕ್ಕೆ ಆದರ್ಶದ ಗುಣವಿದೆ. ಹಾಗೆಯೇ ದಮಯಂತಿಯದು ಪಾತಿವ್ರತ್ಯದ ಮಹಿಮೆಯನ್ನು ಬಿತ್ತರಿಸುವಂತಹುದು. ಈ ಪಾತ್ರವು ಎದುರಿಸುವ ಸಮಸ್ಯೆಗಳಿಂದ ಈ ಗುಣಗಳು ವಿಜೃಂಭಿಸುತ್ತವೆ. ಭಾರತೀಯ ಸಂಸ್ಕೃತಿಯು ಈ ಮೌಲ್ಯಗಳನ್ನು ನಂಬುತ್ತದೆ. ಕನಕದಾಸರ ಪುನರ್–ನಿರ್ಮಾಣದ ಹಿಂದಿನ ತಾತ್ವಿಕತೆಯೂ ಕೂಡಾ ಈ ಗುಣಗಳನ್ನು ಎತ್ತಿ ಹೇಳುವುದಾಗಿದೆ. ಈ ರೀತಿಯ ತಾತ್ವಿಕ ನಂಬಿಕೆಯೂ ಸಮಾಜದಲ್ಲಿ ಗೈರುಹಾಜರಿಯಾದಾಗ ಅಥವಾ ಸಮಾಜವೊಂದು ಪಲ್ಲಟಗೊಳ್ಳುವ ಸ್ಥಿತಿಯು ಕಂಡು ಬರುವಾಗ ಸಾಮಾನ್ಯವಾಗಿ ಈ ರೀತಿಯ ಸಾಹಿತ್ಯ ನಿರ್ಮಾಣವಾಗುತ್ತದೆ.

೨. ಈ ರೀತಿಯ ಕಥಾನಕಗಳಲ್ಲಿ ಕ್ರಿಯೆಯು ತುಂಬಾ ಕಡಿಮೆ ಇರುತ್ತದೆ. ಕನಕದಾಸರ 'ಮೋಹನ ತರಂಗಿಣಿ' ಮತ್ತು 'ನಳಚರಿತ್ರೆ' ಎರಡೂ ಕೃತಿಗಳಲ್ಲಿಯೂ ಕ್ರಿಯೆಯು ಕಡಿಮೆ. ಕ್ರಿಯೆಗಳಲ್ಲಿ ವಿಭಜಿಸಿದರೆ, ಹೆಚ್ಚು ಸಂಖ್ಯೆಯ ಕ್ರಿಯೆಗಳು ಈ ಕೃತಿಗಳಲ್ಲಿ ಕಾಣಸಿಗುವುದಿಲ್ಲ.

೩.ಕೃತಿಗಳಲ್ಲಿ ಬರುವ ಕ್ರಿಯೆಗಳನ್ನು ಒಂದು ನಿರ್ದಿಷ್ಟ ಸಂದರ್ಭಗಳ ಹಿನ್ನೆಲೆಯಲ್ಲಿ ಗುರುತಿಸಲು ಸಾಧ್ಯವಾಗುತ್ತದೆ.

ಕನಕದಾಸರ 'ನಳಚರಿತ್ರೆ'ಯಲ್ಲಿ ಬರುವ ದಮಯಂತಿಗೆ ಎದುರಾಗುವ ಶಬರನ ಸನ್ನಿವೇಶವನ್ನು ಇಲ್ಲಿ ಲಕ್ಷಿಸಬಹುದು. (ಪು ೫–೩೦ ; ೩೨) ದಮಯಂತಿಯ ಪಾತ್ರದ ಜೊತೆಯಲ್ಲಿಯೇ ಅಂತಸ್ಥಗೊಂಡಿರುವ ಪಾತಿವ್ರತ್ಯದ ಮಹಿಮೆಗೆ ಪೂರಕವಾಗಿಯೇ ಈ ಸನ್ನಿವೇಶದ ವಿವರಗಳು ಬರುತ್ತವೆ.

೪. 'ಮೋಹನ ತರಂಗಿಣಿ' ಮತ್ತು 'ನಳಚರಿತ್ರೆ' ಕೃತಿಗಳ ಒಟ್ಟು ಆಕೃತಿಯು ಒಂದೇ ಮಾದರಿಯನ್ನು ಹೋಲುತ್ತದೆ. ನಿರ್ದಿಷ್ಟ ಆರಂಭ, ಅನಂತರ ಸಮಸ್ಯೆಗಳನ್ನು ಎದುರಿಸುವುದು. ಖಳನಾಯಕನ ಹನನ, ಸುಖವಾಗಿ ಮುಗಿಯುವ ಈ ರೀತಿಯ ಕಥನ ಕ್ರಮ ಭಾರತೀಯ ಕಥೆಗಳ ಲಕ್ಷಣವೂ ಹೌದು. 'ಮಂಗಳ'ವನ್ನು ಕುರಿತು ಚಿಂತಿಸುವ ಮತ್ತು ಲೌಕಿಕದ ಎಲ್ಲಾ ಸಂಕಟಗಳಿಗೂ ಪರಮಾರ್ಥದ ಮೊರೆ ಹೋಗುವ ಭಾರತೀಯ ಸಮಾಜದ ರೀತಿ–ರಿವಾಜುಗಳಿಗೆ ಈ ರೀತಿಯ ಕ್ರಮ ಬಹಳಷ್ಟು ಹೊಂದಾಣಿಕೆಯಾಗುತ್ತದೆ. ಭವದಲ್ಲಿ ಎದುರಿಸುವ ಎಲ್ಲಾ ಸಮಸ್ಯೆಗಳೂ ಸಜ್ಜನಿಕೆಯನ್ನು ಬೆಳೆಸುತ್ತವೆ. ಮನುಷ್ಯನು ಉದಾತ್ತನಾಗುವುದು ತನ್ನ ಸಚ್ಚಾರಿತ್ರ್ಯದಿಂದ. ಈ ಸಚ್ಚಾರಿತ್ರ್ಯವು ಸಮಸ್ಯೆಗಳನ್ನು ಎದುರಿಸುವುದರ ಮೂಲಕ ಅರ್ಥವತ್ತಾಗುತ್ತದೆಯೆಂದು ಭಾರತೀಯ ಸಂಸ್ಕೃತಿಯ ಮುಖ್ಯಧಾರೆಯು ನಂಬುತ್ತದೆ. ಈ ರೀತಿಯ ಸಂಸ್ಕೃತಿಯ ಸೃಜನಶೀಲ ಸಾಹಿತ್ಯವು ಈ ಗುಣವನ್ನು ಬಹಳಷ್ಟು ಮೈಗೂಡಿಸಿಕೊಳ್ಳುತ್ತದೆ. ಕನಕದಾಸರು ಈ ರೀತಿಯ ತಾತ್ತ್ವಿಕ ನಂಬಿಕೆಯಿಂದಲೇ ಶಾಬ್ದಿಕ ಮೆರಗನ್ನು ಕೊಟ್ಟು ಕೃತಿರಚನೆ ಮಾಡಿದ್ದರಿಂದ ಸಹಜವಾಗಿಯೇ ಕೃತಿಯಲ್ಲಿ ಭಾರತೀಯ ಸಂಸ್ಕೃತಿಯ ತಳಹದಿಯು ರೂಪಿತವಾಗಿದೆ.

ಕನಕದಾಸರ 'ಮೋಹನ ತರಂಗಿಣಿ' ಮತ್ತು 'ನಳಚರಿತ್ರೆ' ಕೃತಿಯಲ್ಲಿ ಸೂಚಿತವಾದ ಆದರ್ಶದ ಜಗತ್ತು ಕೂಡಾ ಇದರೊಂದಿಗೆ ಮುಖ್ಯವಾದದ್ದು. ಕನಕದಾಸರ ಕಾಲಘಟ್ಟವೇ ಒಂದು ವಿಶಿಷ್ಟ ಸಾಮಾಜಿಕ ನಂಬಿಕೆಯನ್ನು ಪಥೀಕರಿಸಿಕೊಂಡು ಬೆಳೆದಿರುವಂಥದ್ದು. ಲೌಕಿಕದ ಎಲ್ಲಾ ಉದಾಹರಣೆಗಳೂ ಆಧ್ಯಾತ್ಮಿಕ ಚೌಕಟ್ಟನ್ನು ವಿವರಿಸುವ ಸೂಚನೆಗಳಾಗಿ ಬಂದ ಕಾಲಘಟ್ಟವದು. ಈ ರೀತಿಯ ಚಾರಿತ್ರಿಕ ಚಕ್ರದ ಸುತ್ತ ತಿರುಗಿದ ಈ ಕಾಲಘಟ್ಟದಲ್ಲಿ ಬಂದ

ಹೆಚ್ಚಿನ ಕೃತಿಗಳು ಈ ರೀತಿಯ ಆದರ್ಶ ಲೋಕವನ್ನು ಚಿತ್ರಿಸುತ್ತವೆ[15] ಈ ಕಾಲಘಟ್ಟದ ಮುಖ್ಯ ಸಾಮಾಜಿಕ ತಿಳುವಳಿಕೆಯೆಂದರೆ–ಸಾಯುಜ್ಯ ಪದವಿಯನ್ನು ಪಡೆಯುವುದು.[16] 'ಸಾಯುಜ್ಯ' ಪದವಿಯನ್ನು ಪಡೆಯಲು ಭವವು ಯಾವ ಸಂಕಟಕ್ಕೂ ನಿಲುಕಬಹುದು ಎನ್ನುವ ತಾತ್ವಿಕ ಭಿತ್ತಿಯೆಡೆಗೆ ಹೊರಳುವ ಕಥಾನಕಗಳಲ್ಲಿ ಸಹಜವಾಗಿ ಭವದ ತೀವ್ರ ಸಿಲುಕಾಟವಿರುತ್ತದೆ. ಕನಕದಾಸರ ಚಿತ್ರಣದಲ್ಲಿ ಇದು ಸಹಜವಾಗಿ ಬರುತ್ತದೆ : ನಾಯಕ ಮತ್ತು ನಾಯಕಿಯರು ಭವದ ತೊಳಲಾಟಕ್ಕೆ ಸಿಕ್ಕಿ ನರಳುತ್ತಾರೆ. ಅವರಿಗೆ ವಿಸ್ತೃತವಾದ ಆದರ್ಶವೊಂದಿರುತ್ತದೆ. ಜನತೆಗೆ ದೊರೆತ ಹೊಸ ಆದರ್ಶದ ದೆಸೆಯಿಂದ ಇದು ಸಂಪ್ರಾಪ್ತವಾಗಿರಬೇಕು.[17] ಕತೆಯನ್ನು ಹೇಳುವಾಗ ತಾನೊಂದು ಪವಿತ್ರ ಕತೆಯನ್ನು ಹೇಳುತ್ತಿದ್ದೇನೆ ಎನ್ನುವುದನ್ನು ಪ್ರತಿಪಾದಿಸುವುದಕ್ಕೆ ಕನಕದಾಸರು 'ನಳಚರಿತ್ರೆ'ಯಲ್ಲಿ ಹೀಗೆ ಹೇಳುತ್ತಾರೆ.

"ಈ ಕಥೆಯನಾಲಿಸುವ ಜನರಿಗೆ
ಅನೇಕ ಸುಖ ಸಾಮ್ರಾಜ್ಯ ಪದವಿಯ
ನಾ ಕಮಲಲೋಚನನು ವರಪುರದರಸಪಾಲಿಸುವ" ॥ (೯–೭೧)

ಮತ್ತು

ಮೇದಿನಿಯೊಳೀ ಪುಣ್ಯ ಚರಿತೆಯ
ನಾದರಿಸಿ ಬರೆದೋದಿ ಕೇಳುವ
ಸಾಧು ಸಜ್ಜನರಾದವರಿಗಹುದಖಿಳ ಕೈವಲ್ಯ
ವೇದ ಗೋಚರ ಕೃಷ್ಣ ವರಪುರ
ದಾದಿ ಕೇಶವನಮರ ವಂದಿತ
ನಾದಿ ನಾರಾಯಣನು ಸಲಹುವನಖಿಳ ಸಜ್ಜನರ ॥ (೯–೭೨)

ಇಲ್ಲಿ ಪ್ರತಿಪಾದಿತವಾಗಿರುವ ಧ್ವನಿ ಮುಖ್ಯವಾಗಿ ಧಾರ್ಮಿಕವಾಗಿ ಇರುವಂಥದ್ದು, ಎರಡನೆಯದು ನಾಯಕ ಕೇಂದ್ರಿತ ಈ ಕೃತಿಯಲ್ಲಿ ಸಾಹಿತ್ಯಕ್ಕೆ ಕಾಲಮಾನಕ್ಕೆ ಅನುಸಾರವಾಗಿ ಪಾವಿತ್ರ್ಯದ ಸೋಂಕು ತುಂಬಿದೆ. ಅಂದರೆ ವಿಜಯನಗರ ಕಾಲದ ಕನ್ನಡ ಸಾಹಿತ್ಯದ ಪ್ರಕ್ರಿಯೆಯೆಂದರೆ ಅದು ನೈತಿಕ ಪ್ರಸರಣವನ್ನೇ ಸಾಮಾನ್ಯ ಉದ್ದೇಶವನ್ನಾಗಿ ಹೊಂದಿರುವುದು.[18] ಆಂಶಿಕವಾಗಿ ಉಲ್ಲೇಖಿಸಬೇಕೆಂದರೆ, ಈ ಕಾಲಘಟ್ಟದ ಸಾಹಿತ್ಯ ಅದಕ್ಕಿಂತ ಹಿಂದಿನ ಸಾಹಿತ್ಯ ಪ್ರಕಾರಕ್ಕಿಂತ ಭಿನ್ನವಾದುದು. ಸಾಹಿತ್ಯದ ಚೌಕಟ್ಟು, ಕಾವ್ಯವನ್ನು ಪ್ರಸ್ತಾವಿಸುವ

ರೀತಿ, ಕಾವ್ಯದ ವಸ್ತು ಇತ್ಯಾದಿಯೆಲ್ಲವೂ ಭಿನ್ನವಾದುದು. ಈ ಕಾಲದ ಸಾಹಿತ್ಯದಲ್ಲಿ ನಾಯಕರಿಗೆ ದೊರೆಯುವ ಸಮಾಧಾನ ಸಾರ್ವತ್ರಿಕ ಸಮಾಧಾನವೂ ಆಗಿರುವ ಸಂಭಾವ್ಯತೆಯಿದೆ. ಕನಕದಾಸರ ನಳಚರಿತ್ರೆಯಲ್ಲಿರುವ ಸಾವಾನ್ಯ ಚಹರೆಯೆಂದರೆ–ಈ ರೀತಿಯ ಸಾಮಾನ್ಯ ಜನತೆಯ ಸ್ವಗುರುತು. ಇದು ಕೃತಿಯಾಳದಲ್ಲಿ ಬೇರು ಬಿಟ್ಟು, ಕೃತಿಯ ಒಟ್ಟು ಸಂಗತಿಗಳನ್ನು ನಿರೂಪಿಸುತ್ತದೆ. 'ನಳಚರಿತ್ರೆ'ಯಲ್ಲಿ ಬರುವ 'ನಳ–ದಮಯಂತಿ'ಯರ ಸಂಕಟಗಳು ಒಂದು ಕಾಲಘಟ್ಟದ ಒಂದು ಸಂಸ್ಕೃತಿಯ ಸಂಕಟಗಳಾಗಿ ಬೇರುಬಿಡುವುದು. ಹೀಗೆ ವಿಜಯನಗರ ಕಾಲದ ಸನ್ನಿವೇಶದಲ್ಲಿ ಬಯಸಿದ ನಾಯಕ–ನಾಯಕಿಯರ ಸ್ಥಿತಿಯೇ ಹೀಗಿದೆ : ಕೃತಿ ಜಗತ್ತಿನಲ್ಲಿ ಸ್ವಾಯತ್ತವಾದ, ಆದರೆ ಕಾಲಬಯಸುವ ಸ್ಥಿತಿಯಲ್ಲಿ ಸಾರ್ವತ್ರಿಕವಾದ ಸಂಗತಿಯೂ ಕೂಡಾ ಇದಾಗಿದೆ.[೯]

ಈ ಮೊದಲೇ ಸೂಚಿಸಲಾಗಿರುವಂತೆ ಕನಕದಾಸರು 'ನಳಚರಿತ್ರೆ'ಯಂಥ ಕೃತಿಯಲ್ಲಿ ವಿಶಿಷ್ಟವಾಗಿ ಅನುಕರಣೆಯ ಕ್ರಿಯೆಯನ್ನು ಮಾಡುತ್ತಾರೆ. ಪ್ರಾಚೀನ ಜೀವನ ಮೌಲ್ಯದ ನಿರಂತರತೆಯು ಈ ರೀತಿಯ ಅನುಕರಣೆಯ ಒಂದು ಸ್ವರೂಪವಾಗಿ ನಳದಮಯಂತಿಯರ ಕತೆಯಲ್ಲಿ ರೂಪಿತವಾಗಿದೆ. ಇಲ್ಲಿ ಪ್ರತಿಪಾದಿತವಾಗಿರುವ ಪುಷ್ಕರನ ಕೇಡು ನಾಶವಾಗುವುದು ನಳನ ಉದಾತ್ತತೆಯಲ್ಲಿ. ಭಾರತೀಯ ವೌಲ್ಯ ಇದನ್ನು ನಂಬಿಕೊಂಡು ಬಂದಿದೆ. ಇನ್ನೊಂದು ಕನಕದಾಸರು ಪ್ರತಿಪಾದಿಸುವುದು ಅರಸು ಮನೆತನದಲ್ಲಿ ಯಾವ ರೀತಿಯಲ್ಲಿ ಕೇಡು, ಒಳ್ಳೆಯತನ, ಇತ್ಯಾದಿ ನುಸುಳಿಕೊಂಡಿವೆ ಎನ್ನುವುದನ್ನು. ಹೀಗಾಗಿ, ಕನಕದಾಸರ ಕೃತಿಯಲ್ಲಿ ಲೌಕಿಕ ಮತ್ತು ಆಗಮಿಕದ ಸ್ಪಷ್ಟ ಸೂಚನೆಯೂ ಕೂಡಾ ಹುದುಗಿದೆ. ಲೌಕಿಕದಲ್ಲಿ ಇರುವ ಒಳ್ಳೆಯತನ ಉಳಿಯುತ್ತದೆ. ಕೇಡು ನಾಶವಾಗುತ್ತದೆ ಎನ್ನುವುದನ್ನು ನಂಬುವ ಕನಕದಾಸರ ವೈಚಾರಿಕ ನೆಲೆಯು ಈ ಮೂಲಕ ಪ್ರತಿಷ್ಠಾಪನೆಗೊಳ್ಳುತ್ತದೆ.

ಕತೆಗಾರರಾದ ಕನಕದಾಸರು 'ಮೋಹನ ತರಂಗಿಣಿ' 'ನಳಚರಿತ್ರೆ' ಕೃತಿಯಲ್ಲಿ ನಾಯಕ–ನಾಯಕಿಯರ ಮೂಲಕ ವೌಲ್ಯದ ವಿಜೃಂಭಣೆಯನ್ನು ಪ್ರತಿಪಾದಿಸುತ್ತಾರೆ. ಹಾಗಾಗಿ, ಈ ಕೃತಿಗಳಲ್ಲಿರುವ ಮುಖ್ಯ ಸಂಗತಿಗಳೆಂದರೆ : ಕತೆಗಾರರಾದ ಕನಕದಾಸರು, ಕತೆಯ ಸ್ವರೂಪ ಮತ್ತು ಅದನ್ನು ಒಪ್ಪುವ ಸಾವಾಜಿಕರ ನಡುವೆ ಒಂದು ರೀತಿಯ ನಿರ್ದಿಷ್ಟ ಒಪ್ಪಂದವಿದೆ. ಸಾಮಾಜಿಕರಿಗಾಗಿ ಹೇಳುವ ಈ ರೀತಿಯ ಕತೆಯ ಚೌಕಟ್ಟು ಕೂಡಾ ಸಂವಹನಕ್ಕೆ ಅನುಕೂಲವನ್ನು ಕಲ್ಪಿಸುವಂತಹದು. ಆದರೆ ಕನಕದಾಸರು ಕೃತಿಗಳ

ಮೂಲಕ ತಮ್ಮ ಸೂಚನೆಗಳನ್ನು ಸೂಚಿಸುವಾಗ, ಅವರ ಗ್ರಹಿಕೆಯು ವ್ಯಕ್ತಿಯಾಗಿ ಪ್ರಮುಖ್ಯತೆಯನ್ನು ಪಡೆದಿದೆ.

ಸಾಮಾಜಿಕರು ನಂಬುವ ಮತ್ತು ಅವರ ಜೀವನಕ್ರಮಕ್ಕೆ ಅನುಸಾರವಾಗಿ ಕೃತಿಯ ಆದರ್ಶವು ಸೃಷ್ಟಿಯಾದಾಗ ಕೃತಿಯು ಬೇಗನೆ ತನ್ನನ್ನು ತಾನು ಬಿಟ್ಟು ಕೊಡುತ್ತದೆ. ಹನ್ನೆರಡನೆಯ ಶತಮಾನದ ಅನಂತರ ಕನ್ನಡದ ಸಾಹಿತ್ಯಕ್ಕೆ ಮೌಖಿಕ ಪರಂಪರೆಯ ಗುಣವೊಂದಿದೆ. ಈ ರೀತಿಯ ಮೌಖಿಕ ಪರಂಪರೆಯ ಗುಣವೊಂದಿರುವುದರಿಂದಲೇ ಇದಕ್ಕೆ ವಿವರಣಾತ್ಮಕಬಂಧವೂ ಸಾಧ್ಯವಾಯಿತು. ಕನಕದಾಸರ 'ನಳಚರಿತ್ರೆ', 'ಮೋಹನ ತರಂಗಿಣಿ' ಕೃತಿಗಳು ಈ ಬಗೆಯವು. ಈ ರೀತಿಯ ಕೃತಿಯ ನಾಯಕರಾಗಲೀ ಕೃತಿಯ ಆದರ್ಶವಾಗಲೀ ಜನಾಂಗದ ಆಸೆ, ಆಸಕ್ತಿಯನ್ನು ಈಡೇರಿಸುವಂತಿದ್ದರೆ ಸಾಮಾಜಿಕರು ಈ ರೀತಿಯ ಕೃತಿಯನ್ನು ಮೆಚ್ಚುತ್ತಾರೆ ಕೂಡಾ.

ಕನಕದಾಸರ 'ಮೋಹನ ತರಂಗಿಣಿ' ಮತ್ತು 'ನಳಚರಿತ್ರೆ' ಎರಡೂ ಕೃತಿಗಳಿಗೂ ಒಂದು ಸೈದ್ಧಾಂತಿಕ ಆದರ್ಶವಿದೆ. ಈ ಆದರ್ಶವನ್ನು ಕನಕದಾಸರು ಸಮಷ್ಟಿ ಪ್ರಜ್ಞೆಯ ಹಿನ್ನೆಲೆಯಲ್ಲಿ ಗ್ರಹಿಸುತ್ತಾರೆ. ಲುಕಾಕ್ಸನ ಪ್ರಕಾರ, ಈ ರೀತಿಯ ಕಾವ್ಯ ವಿಶಾಲವಾದ ಜಗತ್ತನ್ನು ಒಳಗೊಂಡಿದೆ. ಸಹಜವಾಗಿಯೇ ಈ ವಿಶಾಲ ಜಗತ್ತಿನಲ್ಲಿ ಕಾವ್ಯದ ನಿರೂಪಕ ಮತ್ತು ಕೇಳುಗ ಕ್ರಿಯಾತ್ಮಕವಾಗಿ ಮಿಲನ ಹೊಂದುತ್ತಾರೆ ಮತ್ತು ಘಟನೆಗಳಲ್ಲಿ ಭಾಗಿಯಾಗುತ್ತಾರೆ. ಕಾವ್ಯದ ಘಟನೆಗಳ ಜೊತೆಯಲ್ಲಿ ಓಡಾಡುವ ಕ್ರಿಯೆಯೂ ಒಂದು ಸಮಷ್ಟಿ ಪ್ರಜ್ಞೆಯ ನೆಲೆಯನ್ನು ಸೂಚಿಸುತ್ತದೆ.[21]

ಕಪಟರಾಳ ಕೃಷ್ಣರಾಯರು ಹೇಳಿರುವಂತೆ. "ಅಂತೂ ದಾಸ ಸಾಹಿತ್ಯವನ್ನು ಯಾವ ದೃಷ್ಟಿಯಿಂದ ನೋಡಿದರೂ ಅದಕ್ಕೆ ವೈಷ್ಣವ ಯತಿಗಳೇ ಮೂಲ ಕಾರಣವೆಂದೂ, ಆ ಯತಿಗಳಿಗೆ ರಾಜಾಶ್ರಯ ಕಾರಣಯೆಂದೂ ತಿಳಿಯುತ್ತದೆ."[22] ಇದರಿಂದಾಗಿ ಒಟ್ಟು ಸಾಮಾಜಿಕ ಬದಲಾವಣೆಯ ಪರಿಣಾಮವನ್ನು ಸೂಕ್ಷ್ಮವಾಗಿ ಗ್ರಹಿಸುತ್ತಿದ್ದ ಕನಕದಾಸರಿಗೆ 'ಮೋಹನ ತರಂಗಿಣಿ' 'ನಳಚರಿತ್ರೆ'ಯಂಥಾ ಕೃತಿರಚನೆ ಸಾಧ್ಯವಾಗುತ್ತದೆ. ಇದೊಂದು ಚಾರಿತ್ರಿಕ ಬದಲಾವಣೆಯ ಹಿನ್ನೆಲೆಯಲ್ಲಿ ರೂಪಿತವಾದ ಸತ್ಯ.

೩

ವಿಸ್ತೃತ ಕ್ಯಾನ್‌ವಾಸುಳ್ಳ 'ಮೋಹನತರಂಗಿಣಿ' 'ನಳಚರಿತ್ರೆ' ಯಂತಹ ಕೃತಿಯನ್ನು ರಚಿಸಿದ ಕನಕದಾಸರು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ.

'ಕಾಗಿನೆಲೆಯಾದಿಕೇಶವ'ನ ಅಂಕಿತವಿರುವ ಈ ಗೀತೆಗಳೂ ಕಾಲದ ಒತ್ತಾಸೆಯಿಂದಲೇ ಹುಟ್ಟಿರುವಂಥವುಗಳು.

ಈ ಕವಿತೆಗಳನ್ನು ಕುರಿತಂತೆ ಮತ್ತೆ ಸಂಗತಿಗಳನ್ನು ಪ್ರಸ್ತಾವಿಸಬಹುದು. ಕೇಳುವವರಿಗೆ ಅನುಕೂಲ ಕಲ್ಪಿಸುವ ಗೀತೆಗಳಿವು. ಸರಳವಾದ ಆಕೃತಿಯುಳ್ಳ ಈ ಗೀತೆಗಳು ಪುನರಾವೃತ್ತಿಯನ್ನು ಬಯಸುತ್ತವೆ. ಈ ಗೀತೆಗಳು ನಾಟಕೀಯ ನಿರೂಪಣೆಯ ಕ್ರಮವನ್ನು ಹೊಂದಿವೆ. ಹೆಚ್ಚಿನ ಸಂದರ್ಭಗಳಲ್ಲಿ ಆರಂಭದಲ್ಲಿ ಪ್ರಾಸವಿರುವ ಈ ಕವಿತೆಗಳು ಶೈಲಿಯ ಐಕ್ಯತೆಯನ್ನು ಸೂಚಿಸುತ್ತವೆ. ಜನಪದ ಕವಿಗಳೂ ಬಯಸುವ ಫಾರ್ಮುಲಾದಂತೆ ಇವು ಕೂಡಾ ತಮ್ಮ ಅಸ್ತಿತ್ವವನ್ನು ಪಡೆದುಕೊಂಡಿವೆ. ಹಾಡುವ ಅನುಕೂಲಕ್ಕೆ ತಕ್ಕಂತಿರುವ ಈ ಕವಿತೆಗಳ ಮಟ್ಟವನ್ನು ಮೌಖಿಕ ಪರಂಪರೆಯ ಮಟ್ಟುಗಳಲ್ಲಿಯೂ ಕಾಣಬಹುದು. ಕನಕದಾಸರ ಗೀತೆಗಳ ಈ ಚರ್ಚೆಗೆ ಪೂರಕವಾಗಿ ಒಂದು ಉದಾಹರಣೆಯನ್ನು ಕೊಡಬಹುದು :

ಯಮದೂತರಿನ್ನೇನ ಮಾಡುವರು. ಪೇಳೂ ।
ರಮೆಯರಸನೆ ನಿನ್ನ ಅರಿಕೆಯುಳ್ಳವರಿಗೆ ॥ ಪ ॥
ಮಂಡಲದೊಳಗೊಬ್ಬ ಜಾರಸ್ತ್ರೀಯಳು ತನ್ನ ।
ಗಂಡನರಿಕೆಯಿಂದ ವ್ಯಭಿಚಾರಗೈಯೆ ॥
ಮಂಡಲ ಪತಿಯೂ ಶೋಧಿಸಿ ಹಿಡಿದೆಳೆತಂದು ।
ಭಂಡು ಮಾಡಲು ಬೆದರುವಳೆ ಕೇಳೆಲೊ ಹರಿ ॥ ೧ ॥[23]

ಈ ರೀತಿಯ ಕೀರ್ತನೆಗಳನ್ನು (ಕೀರ್ತನೆಯೆಂದರೆ–ಹೊಗಳುವ ಕಾವ್ಯ, ಹೊಗಳುವ ಸಂಗೀತ ಮತ್ತು ಹಾಡಿನ ಮೂಲಕ ಆಚರಿಸುವ ಆಚರಣೆ)[24] ಜನಸಾಮಾನ್ಯರೆದುರು ಹಾಡುತ್ತಿದ್ದರು ಎಂದು ಈಗಾಗಲೇ ಗ್ರಹಿಸಲಾಗಿದೆ. ಹಾಡುವ ರಚನೆಯ ಸ್ವರೂಪವು ಸೂತ್ರಪ್ರಾಯವಾಗಿರುತ್ತದೆ. ಲಿಖಿತ ಪರಂಪರೆಯಲ್ಲಿ ಹೇಳುವವನ ಸಹಿ ಇರುತ್ತದೆ,[25] ಕೊಡುವ ರೀತಿಯ ಸ್ವರೂಪವು ಆಕಸ್ಮಿಕವಾದುದು ಅರ್ಥದ ಅನೇಕ ಆಯಾಮಗಳು ಈ ರಚನೆಗಳಲ್ಲಿ ದೊರೆಯುತ್ತವೆ. ಪರಿಪೂರ್ಣವಾದ ರೂಪದಲ್ಲಿ ವ್ಯಕ್ತವಾಗುತ್ತವೆ. ಹಾಡುಗಳು ಹಿಗ್ಗುವುದು ಹೀಗೆ. ಆಕಸ್ಮಿಕವಾಗಿ ಹುಟ್ಟಿದ ಕನಕದಾಸರ ಕೀರ್ತನೆಗಳಲ್ಲಿ ಮೌಖಿಕ ವರ್ಗಾಂತರವಿದೆ. ಅಂದರೆ : ಕೇಳುವವರಿಗೆ ಇದು ನೇರವಾಗಿ ತಲುಪಿ ಬಿಡುತ್ತದೆ.

ಅನಂತರ ಮತ್ತೊಂದು ಅಂಶವೆಂದರೆ, ತಕ್ಷಣಕ್ಕೆ ಈ ರಚನೆಯ ನಿರ್ಮಾಣವಾಗುತ್ತದೆ. ಹೀಗಾಗಿ ಮೌಖಿಕ ಸೃಷ್ಟಿ ಮತ್ತು ಮೌಖಿಕ ಅಭಿವ್ಯಕ್ತಿಯು

ಕನಕದಾಸರ ಕೀರ್ತನೆಗಳ ಲಕ್ಷಣವಾಗಿದೆ. ಮುದ್ರಿತ ಸಂಸ್ಕೃತಿಯೂ ಬಂದಾಗ ಈ ರೀತಿಯ ಮೌಖಿಕ ರಚನೆಯ ಸ್ವರೂಪವು ಒಂದೆಡೆಗೆ ಅಂಟಿಬಿಡುತ್ತದೆ. ಈ ರೀತಿಯಲ್ಲಿ ಮೌಖಿಕ ಪರಂಪರೆಯ ಕಾವ್ಯಸ್ಥಿತಿಯು ತತ್ಕಾಲೀನ ಸ್ಥಿತಿಯನ್ನು ದಾಟಿ ಒಂದೆಡೆಗೆ ಅಂಟುವಾಗ ಸಹಜವಾಗಿಯೇ ರಚನೆಯ ಸ್ವರೂಪವೂ ನಿರ್ದಿಷ್ಟವಾಗುತ್ತದೆ.

ಕನಕದಾಸರ ಕೀರ್ತನೆಗಳು ಈಗಾಗಲೇ ಹೇಳಿರುವಂತೆ ಶ್ರೋತೃವೃಂದವನ್ನು ಅವಲಂಬಿಸಿರುವಂತಹುದು. ಸಹಜವಾಗಿಯೇ ಈ ರೀತಿಯ ರಚನೆಯ ಬಿಟ್ಟು ಸ್ವರೂಪವು ಹೀಗಿದೆ : ಹೇಳುವವನು ಕೇಳುವವನು ಮತ್ತು ರಚನೆಯು ಏಕತ್ರ ಸ್ಥಿತಿಯಲ್ಲಿ ಒಂದಾಗುತ್ತಿರುತ್ತದೆ.[26] ಒಂದೇ ಕಾಲಕ್ಕೆ ಸಂಬಂಧಿಸಿದಂತೆ ಈ ರಚನೆಯು ಅಭಿವ್ಯಕ್ತವಾಗುತ್ತದೆ. ಸಹಜವಾಗಿಯೇ ಈ ರಚನೆಗಳಿಗೆ 'ಕಾಲ'ದ ಆಯಾಮ ಕೂಡಾ ಬಂದಿದೆ. ಮುದ್ರಿತ ಸಂಸ್ಕೃತಿಯು ರಚನೆಗಳನ್ನು ಕಾಲದ ಅಂತರದ ಆಚೆಗೆ ದಾಟುವಂತೆ ಮಾಡಿದ ಹಾಗೆಯೇ ಅದಕ್ಕೆ ಅನೇಕ ಅನ್ವಯಗಳು ರೂಪುಗೊಳ್ಳುತ್ತವೆ.

ಮೌಖಿಕ ಸಂಪ್ರದಾಯದ ರಚನೆಗಳಲ್ಲಿ ಸಹಜವಾಗಿಯೇ ಹೊಸ ರೀತಿಯ ನುಡಿಗಟ್ಟುಗಳು ತನ್ನ ಸಂದರ್ಭಕ್ಕೆ ಅನುಗುಣವಾಗಿ ರೂಪುಗೊಳ್ಳುತ್ತವೆ. ಕನಕದಾಸರ ರಚನೆಯೊಂದರಲ್ಲಿ ಇದನ್ನು ಕಾಣಬಹುದು : "ನೇಮವಿಲ್ಲದ ಹೆಣ್ಣೆ ಗಜುಗ ಬೆಳೆದ ಕಣ್ಣೆ."[೨೭]

ಸ್ತೋತ್ರರೂಪದ 'ಹರಿಭಕ್ತಿಸಾರ' ಮತ್ತು ಹಾಡಲು ಅನುಕೂಲ ಕಲ್ಪಿಸುವ 'ರಾಮಧಾನ್ಯ ಚರಿತ್ರೆ'ಯೂ ಕೂಡಾ ಈ ಮೊದಲು ಸೂಚಿಸಿದ ಅರ್ಥಗಳನ್ನು ಪ್ರತಿಪಾದಿಸುತ್ತವೆ.

೪

ಕನಕದಾಸರ ಒಟ್ಟು ಸಾಹಿತ್ಯವನ್ನು ಲಕ್ಷಿಸಿ ಮತ್ತೆ ಕೆಲವು ಅಂಶಗಳನ್ನು ಸ್ಪಷ್ಟ ಪಡಿಸಬಹುದು : ಎಲ್ಲಾ ಕೃತಿಗಳಲ್ಲಿಯೂ ಕನಕದಾಸರು ತಮ್ಮ ಗ್ರಹಿಕೆಯ ಮೂಲಕ ಒಟ್ಟು ಸಂದರ್ಭವನ್ನು ನಿರೂಪಿಸುತ್ತಾರೆ. ಇದರಲ್ಲಿ ಕನಕದಾಸರ ವೈಯಕ್ತಿಕ ದೃಷ್ಟಿ ಮತ್ತು ಚಾರಿತ್ರಿಕ ಸಂದರ್ಭದ ಪ್ರೇರಣೆಯು ಮುಖ್ಯವಾಗಿದೆ.

ಕನಕದಾಸರು ತಮ್ಮ ಕೃತಿಗಳ ಮೂಲಕ ಸೂಚಿಸುವ ನೆಲೆಯು ಒಟ್ಟು ಸಮಾಜದ ನಂಬಿಕೆಯನ್ನು ಪ್ರತಿಪಾದಿಸುವಂತಹುದು. ಇದರರ್ಥ ಕನಕದಾಸರು ತತ್ಕಾಲೀನ ಸಮಾಜವನ್ನು ತೀರಾ ಸರಳವಾಗಿ ಸ್ವೀಕರಿಸಿದ್ದಾರೆಂದಲ್ಲ. ಇದಕ್ಕೊಂದು ಅಲೌಕಿಕದ ಶಾಬ್ದಿಕ ಬೆಳಕು ಇದೆ.

ಕನಕದಾಸರು ಭಾಷೆಯನ್ನು ಕಲೆಯಾಗಿ ಬಳಸಿದಾಗ ಸಹಜವಾಗಿಯೇ ಇದಕ್ಕೊಂದು ಕ್ರಿಯಾತ್ಮಕ ಅಂಶವು ರೂಪಿತವಾಗಿದೆ.

ಕೇಳುವುದಕ್ಕೆ ಅನುಕೂಲವಾಗುವ ಕನಕದಾಸರ ಕವಿತೆಗಳು ಜನತೆಯ ಹೃದಯದಾಳದಲ್ಲಿ ಬೇರುಬಿಟ್ಟಿವೆ. ಇಂದಿಗೂ ಮೌಖಿಕ ಪರಂಪರೆಯಲ್ಲಿ ಅಂಶಸ್ಥವಾಗಿರುವ ಕನಕದಾಸರ ಕವಿತೆಗಳಲ್ಲಿ ಧಾಟಿಯೂ ಪ್ರಧಾನವಾಗಿ ವಿಜೃಂಭಿಸಿದೆ.

ಅಂತಿಮವಾಗಿ, ಕನಕದಾಸರು ಕಿಂಡಿಯ ಮೂಲಕವೇ ಜಗತ್ತನ್ನು ನೋಡಿದ್ದಾರೆ. ಹಾಗಾಗಿ, ಕನಕದಾಸರ ಕವಿತೆಗಳಲ್ಲಿ ಜಗತ್ತಿಗೆ ಕೂಡಾ ಕನಕದಾಸರ ದೃಷ್ಟಿಯಿದೆ. ಇದು ಲೌಕಿಕದಿಂದ ಅಲೌಕಿಕದ ಕಡೆಗೆ ಹೋಗುವಂತಹುದು.

## ಗ್ರಂಥಋಣ ಮತ್ತು ಅಡಿಟಿಪ್ಪಣಿಗಳು

1. ರೋಲಾಂಡ್ ಬಾರ್ತನ ವಿಚಾರಗಳ ಮುಖ್ಯ ಕೇಂದ್ರ ಈ ರೀತಿಯಲ್ಲಿದೆ. ವಿವರಗಳಿಗೆ ನೋಡಿ : Terence Hawkes 1985 Structuralism And Semiotics, Methuen & Co. Ltd. p. 106-122.
2. ಇದು ವಸಾಹತುಶಾಹಿ ಅನುಭವದ ಸ್ಥಿತಿಯಲ್ಲಿ ತೀರಾ ಸಹಜವಾಗಿ ಬಂದಿರುವಂಥದ್ದು. ಇಂಗ್ಲೀಷ್ ವಿದ್ಯಾಭ್ಯಾಸದ ಕ್ರಮ ನಮ್ಮ ಒಟ್ಟು ವೈಚಾರಿಕ ಚೌಕಟ್ಟನ್ನು ನಿರ್ದೇಶಿಸಿದೆ. ಆದರೆ, ಅಲ್ಲಲ್ಲಿ ಇದರಿಂದ ಬಿಡುಗಡೆಗೊಳ್ಳುವ ಪ್ರಯತ್ನವೂ ಆಗಿದೆ.
3. ವಸ್ತುನಿಷ್ಠತೆಯೆನ್ನುವುದು ಕೂಡಾ ಓದುಗನ ಓದಿನ ಕ್ರಮವನ್ನು ಅವಲಂಬಿಸಿದೆ. ವಸ್ತುನಿಷ್ಠೆಯ ಬಗೆಗಿನ ನಿಲುವು ಕೂಡಾ ಓದುಗನ ಅಭ್ಯಾಸ, ಆತನ ಅಭಿರುಚಿ ಇತ್ಯಾದಿ ಸಂಗತಿಗಳಿಂದ ರೂಪುಗೊಂಡಿರುತ್ತದೆ. 'ವಸ್ತುನಿಷ್ಠತೆ' ಎನ್ನುವುದು ಈ ಕಾರಣದಿಂದ ಕೃತಿಯಲ್ಲಿಯೇ ಇರುವುದಿಲ್ಲ.
4. ಸೀತಾರಾಮಯ್ಯ. ವಿ. (ಸಂ) 1987 ದಾಸ ಸಾಹಿತ್ಯ (ಕವಿಕಾವ್ಯ ಪರಂಪರೆ : 20) ಐ. ಬಿ. ಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು–9. ವಿಜಯನಗರದ ಈಚಿನ ಸಾಹಿತ್ಯ–ರಾಮಚಂದ್ರರಾವ್ ಎಸ್ ಕೆ (ಲೇಖನ) ಪು. 86
5. ಅದೇ ಕೆ. ಸಂಪದ್ಗಿರಿರಾವ್ ಅವರ–ದಾಸ ಸಾಹಿತ್ಯದ ಕೊಡುಗೆ (ಲೇಖನ) ಪು. 134.
6. ನಾಗರಾಜಪ್ಪ ಕೆ. ಜಿ. 1985 ಮರುಚಿಂತನೆ ಪ್ರಣತಿ ಪ್ರಕಾಶನ, ತುಮಕೂರು ಪು. 134.
7. ವೆಂಕಟೇಶಮೂರ್ತಿ ಎಚ್. ಎಸ್. 1975, ಕೀರ್ತನಕಾರರು ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ಪು. 134.
8. ಕೆ. ಜಿ. ನಾಗರಾಜಪ್ಪ : 1985, ಪು. 98.
9. ಹೆಚ್ಚಿನ ವಿಮರ್ಶಕರು ಈ ಅಂಶವನ್ನು ಗುರುತಿಸಿದ್ದಾರೆ.
10. ಕೆ. ಶ್ರೀಕಂಠಯ್ಯ ಅವರು ಈ ಕುರಿತು ವಿವರವಾಗಿ ಚರ್ಚಿಸಿದ್ದಾರೆ. ನೋಡಿ : ಶ್ರೀಕಂಠಯ್ಯ ಕೆ., 1983, ವಿಜಯನಗರದ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ, ಗೀತಾ ಬುಕ್ ಹೌಸ್, ಮೈಸೂರು, ಪು. 199-326.
11. ಚಿಕ್ಕಣ್ಣ ಕಾ. ತಾ (ಸಂ) 1982, ಕನಕ ಕಿರಣ, ಕಾಳಿದಾಸ ಸಾಂಸ್ಕೃತಿಕ ಸಂಘ, ವಿಜಯನಗರ, ಬೆಂಗಳೂರು–40. ಮೋಹನತರಂಗಿಣಿಯ ನೆಲೆಬೆಲೆ (ಲೇ) ಎಂ ಜೈಕುಮಾರ್ ಮತ್ತು ಹರಿದಾಸ ಹೃದಯ–ಡಾ. ಜಿ. ವರದರಾಜರಾವ್ ಅವರ ಕೃತಿಯಿಂದ.
12. 'ನಳಚರಿತ್ರೆಯಲ್ಲಿ ನಿಜಕತೆಯು ಪ್ರಾರಂಭವಾಗುವುದು ಹೀಗೆ :

"ಭೂತಳೇಂದ್ರರೊಳಧಿಕ ಬಲ ವಿ
ಖ್ಯಾತನರೂ ನಳ ಚಕ್ರವತಿಯು
ಭೂತಳವ ಪಾಲಿಸಿದ ತನ್ನ ವಿಮಲ ಚರಿತೆಯನು (೧–೧೮)

13. 'ನಳ ಚರಿತ್ರೆ'ಯಲ್ಲಿ ನಿಜಕತೆಯು ಹೀಗೆ ಮುಕ್ತಾಯವಾಗುತ್ತದೆ:

"ಅರಸು ಕುಲ ಪಾವನನು ನಳ ಭೂ
ವರನು ಸಿಂಹಾಸನದಿ ರಂಜಿಸಿ
ಧರೆಯನಾಳಿದ ವರಪುರದ ಚೆನ್ನಿಗನ ಕರುಣದಲಿ" (೯–೬೪)

14. ದಮಯಂತಿಯೂ ಮುನಿಗಳಲ್ಲಿ ಹೇಳುವ ಸನ್ನಿವೇಶದಲ್ಲಿ (೫–೩೬) ವೈಶ್ಯರಲ್ಲಿ ಹೇಳುವ ಸನ್ನಿವೇಶದಲ್ಲಿ (೫–೪೧) (೫–೪೯), ಚೇದಿದೇಶದ ರಾಣಿಯರಲ್ಲಿ ಹೇಳುವ ಸನ್ನಿವೇಶ (೫–೫೬) ಇತ್ಯಾದಿ.

15. ಕೆ. ಜಿ. ನಾಗರಾಜಪ್ಪ ಅವರು ಇದನ್ನು ಭಿನ್ನರೀತಿಯಲ್ಲಿ ಅರ್ಥೈಸುತ್ತಾರೆ. ಅವರ ಪ್ರಕಾರ, ಕನಕದಾಸರು ಮೇಲುವರ್ಗದ ಒಟ್ಟು ಚಿಂತನೆಗಳನ್ನು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. (ನಾಗರಾಜಪ್ಪ ಕೆ. ಜಿ. 1985, ಮರು ಚಿಂತನೆ, ಪ್ರಣತಿ ಪ್ರಕಾಶನ, ತುಮಕೂರು, ಪು. 114) ಆದರೆ, ಕೆ. ಜಿ. ನಾಗರಾಜಪ್ಪ ಅವರು ಕನಕದಾಸರ ಕೃತಿಗಳನ್ನು ಅರ್ಥಮಾಡಿಕೊಳ್ಳುವಾಗ ಬಳಸಿಕೊಂಡಿರುವ ಒಟ್ಟು ಮಾನದಂಡವು ಶ್ರೀ ಎಂ. ಎಸ್. ಶ್ರೀನಿವಾಸರ 'ಸಂಸ್ಕೃತೀಕರಣ' (Sanskritization)ತತ್ವವನ್ನು ಹೊಂದಿಕೊಂಡಿದ್ದು ; ಈ ಗ್ರಹಿಕೆಯನ್ನೇ ಮತ್ತೆ ಪರಿಶೀಲಿಸಬೇಕಾಗಿದೆ. ಯಾಕೆಂದರೆ ಎಂ. ಎಸ್. ಶ್ರೀನಿವಾಸರು ನಂಬುವ 'ಸಂಸ್ಕೃತೀಕರಣ' ಎಷ್ಟರ ಮಟ್ಟಿಗೆ ಸಮಂಜಸ? ಇನ್ನೊಂದು, ಸಂಸ್ಕೃತಿಕರಣದ ಚರ್ಚೆಯು ಸಮ್ಯಕ್ ಸ್ವರೂಪದ ಮೇಲ್ ಪದರವನ್ನು ಚರ್ಚಿಸುತ್ತದೆ. ಆದರೆ ಅದಕ್ಕೆ ಮೂಲವಾದ ಒಳಸ್ವರೂಪ (interstructure) ಭಿನ್ನವಾಗುತ್ತಾ ಹೋಗುತ್ತದೆ.

16. ವೈಷ್ಣವ ಧರ್ಮವು ನಾಲ್ಕು ಹಂತಗಳಿಂದ ಭಕ್ತಿಯ ತೊಡಗುವಿಕೆಯನ್ನು ನಂಬುತ್ತದೆ.:

1. ಸಾಲೋಕ್ಯ–ದೇವರಿಗೂ ಭಕ್ತರಿಗೂ ಒಂದೇ ಲೋಕದಲ್ಲಿ ಸ್ಥಾನ
2. ಸಾಮೀಪ್ಯ–ದೇವರ ಸಮೀಪ ಇರುವುದು
3. ಸಾಯುಜ್ಯ–ದೇವರನ್ನು ಸೇರುವುದು.
4. ಸಾರೂಪ್ಯ–ದೇವರ ರೂಪವನ್ನೆ ಹೊಂದುವುದು.

17. ವಿವರಗಳಿಗೆ ನೋಡಿ :

1. ಕೆ. ಶ್ರೀಕಂಠಯ್ಯ ಅವರ ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ (1983), ಗೀತಾ ಬುಕ್, ಮೈಸೂರು.

2. ಕಪಟರಾಳ ಕೃಷ್ಣರಾವ್ ಅವರ ಕರ್ನಾಟಕ ಸಂಸ್ಕೃತಿಯ ಸಂಶೋಧನೆ 1970 (ಉಷಾಸಾಹಿತ್ಯ ಮಾಲೆ, ಮೈಸೂರು, ಪು. 279)

18. ಈ ಕಾಲಘಟ್ಟದ ಮುಖ್ಯ ಕವಿಯಾದ ಕುಮಾರವ್ಯಾಸನೂ ಕಾವ್ಯವನ್ನೋದಿದರೆ ಪುಣ್ಯಸಿಗುತ್ತದೆಂದು ನಂಬುತ್ತಾನೆ.
19. ಉದಾಹರಣೆಗೆ 'ನಳ ಚರಿತ್ರೆ'ಯಲ್ಲಿ 'ನಳ'ನಿಗೆ ಅವನದೇ ಕ್ರಿಯಾ ಬಿಂದುವಿದೆ. ಆದರೆ, ಈ ರೀತಿಯ ತಾತ್ತ್ವಿಕತೆಯನ್ನು ಕಾಲದ ಹಿನ್ನೆಲೆಯಲ್ಲಿ ಗ್ರಹಿಸಿದರೆ 'ಕಾಲ'ದ ಒಟ್ಟು ಪರಿಣಾಮವನ್ನು ಇದರಲ್ಲಿ ಕಾಣಬಹುದುದಾಗಿದೆ.
20. Lukacs : Gearge 1971. The Theory of the novel Mit press, Cambridge.
21. ಹನ್ನೆರಡನೆಯ ಶತಮಾನದ ಅನಂತರದ ಮತ್ತು ಹದಿನಾರನೆಯ ಶತಮಾನದ ಮೊದಲಿನ ಕನ್ನಡ ಕಾವ್ಯ 'ಶ್ರಾವ್ಯ' ಮಾಧ್ಯಮವಾಗಿ ರೂಪುಗೊಂಡಿರುವಂಥದ್ದು. ಈವೊತ್ತಿಗೂ ಈ ಕಾಲ ಘಟ್ಟದ ಕಾವ್ಯಗಳಲ್ಲಿ ಹಳ್ಳಿಯಲ್ಲಿ ಹಾಡುವ ಪರಿಕ್ರಮವಿದೆ.
22. ಪೂರ್ವೋಕ್ತ, ಪು. 281.
23. ಕೃಷ್ಣಶರ್ಮ ಬೆಟಗೇರಿ ಮತ್ತು ಹುಚ್ಚುರಾವ ಬೆಂಗೇರಿ (ಸಂ.), 1972, ಕನಕದಾಸರ ಹಾಡುಗಳು, ಸಮಾಜ ಪುಸ್ತಕಾಲಯ, ಧಾರವಾಡ–I, ಪದ್ಯ ಸಂಖ್ಯೆ ೪೪.
24. ಕಿಟ್ಟೆಲ್ ಅವರು ನಿಘಂಟಿನಲ್ಲಿ ಈ ಅರ್ಥಗಳನ್ನು ಕೊಡುತ್ತಾರೆ. (ಮರಿಯಪ್ಪ ಭಟ್ ಎಂ. (1977–ಕಿಟ್ಟೆಲ್ ಕೋಶ (ಸಂ : II), ಮದರಾಸು ವಿವಿ. ಮದರಾಸು, ಪು. 455.
25. ಡೆರಡಾನ ಚರ್ಚೆಯು ಈ ರೀತಿಯಲ್ಲಿ ಸಾಗುತ್ತದೆ. ವಿವರಗಳಿಗೆ ನೋಡಿ : Antony Eastope 1983 Poetry As Discourse. Methuen, London.
26. ಈಚೆಗೆ ಕನ್ನಡ ಜಾನಪದ ಕ್ಷೇತ್ರದಲ್ಲಿ ಸಿದ್ಧಾಂತದ ಬಗೆಗೆ ಚರ್ಚೆಯಾಗುತ್ತಿದೆ. ತಾತ್ತ್ವಿಕವಾಗಿ ಈ ಸಿದ್ಧಾಂತವು ಅಭಿವ್ಯಕ್ತಿ–ಸ್ವರೂಪ ಮತ್ತು ಪ್ರೇಕ್ಷಕರ ಕುರಿತು ಯೋಚಿಸುತ್ತದೆ.
27. ಜವರೇಗೌಡ ದೇ. (ಸಂ) 1988. ಜನಪ್ರಿಯ ಕನಕ ಸಂಪುಟ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳುರು.

# ಕನಕದಾಸರ ಮುಂಡಿಗೆಗಳು

**ವೈ.ಸಿ. ಭಾನುಮತಿ**

ಬುದ್ಧಿಶಕ್ತಿಯ ಪ್ರದರ್ಶನ ಮಾನವನ ಮೂಲಪ್ರವೃತ್ತಿಗಳಲ್ಲೊಂದು. ಆತ ಹೆಚ್ಚು ಹೆಚ್ಚು ನಿಶಿತಮತಿಯಾದಂತೆಲ್ಲ ಈ ಬಗೆಯ ಅಭಿವ್ಯಕ್ತಿಗೆ ಬೇರೆ ಬೇರೆ ಮಾಧ್ಯಮಗಳನ್ನು ಕಂಡುಕೊಂಡ. ಜನಪದ ಒಗಟುಗಳು ಸೃಷ್ಟಿಯಾದದ್ದು ಇಂಥ ಒಂದು ಹಿನ್ನೆಲೆಯಲ್ಲಿಯೆ. ಮುಂದೆ ಒಗಟುಗಳು ಬುದ್ಧಿಯ ಕಸರತ್ತಾಗಿ, ಸವಾಲಾಗಿ, ಎದುರಾಳಿಯ ಬುದ್ಧಿಶಕ್ತಿಯನ್ನು ಪರೀಕ್ಷಿಸುವ ಒರೆಗಲ್ಲಾಗಿ ಸ್ಪಷ್ಟರೂಪ ಪಡೆದವು. ದೈನಂದಿನ ರಂಜನೆಯಲ್ಲಿ ಸ್ಥಾನಗಳಿಸಿಕೊಂಡವು.

ಒಗಟು ಅಥವಾ ಒಗಟಿನಂಥ ಸಮಸ್ಯಾತ್ಮಕ ಹೇಳಿಕೆಗಳು ಪ್ರಪಂಚದ ಎಲ್ಲ ಭಾಷೆಗಳಲ್ಲಿಯೂ ಕಂಡುಬರುತ್ತವೆ. ಗ್ರೀಕ್ ಪುರಾಣಗಳಲ್ಲಿ ಪ್ರಸಿದ್ಧವಾಗಿದ್ದ 'ಸ್ಫಿಂಕ್ಸ್' ಮನುಷ್ಯನ ತಲೆ ಸಿಂಹದ ದೇಹದಂಥ ವಿಚಿತ್ರಬಗೆಯ ರೂಪದೊಂದಿಗೆ ತನ್ನ ಸಮಸ್ಯಾತ್ಮಕ ಪ್ರಶ್ನೆಗಳಿಂದ ಜನರನ್ನು ಬೆದರಿಸುತ್ತಿತ್ತು. ಮಾನವನ ಬಾಲ್ಯ, ಯೌವನ, ಮುಪ್ಪು ಈ ಸ್ಥಿತ್ಯಂತರಗಳನ್ನು ಕುರಿತು ಸ್ಫಿಂಕ್ಸ್ ಒಡ್ಡಿದ ಸಮಸ್ಯೆಯೊಂದು ಪ್ರಚಲಿತವಿದೆ. ಈಡಿಪಸ್ ಸ್ಫಿಂಕ್ಸ್ ಕೇಳಿದ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ನೀಡಿ ಜಯಶೀಲನಾದಾಗ ಅದು ಆತ್ಮಾರ್ಪಣ ಮಾಡಿಕೊಂಡಿತೆಂದು ಕತೆ. ಅದೇನೆ ಇರಲಿ ಸ್ಫಿಂಕ್ಸ್ ಇಂಥ ಒಗಟಿಗೆ ಪ್ರತೀಕ.

ಭಾರತೀಯ ಸಂದರ್ಭಕ್ಕೆ ಬಂದಾಗ ವೇದಗಳಲ್ಲಿ ಕ್ವಚಿತ್ತಾಗಿಯಾದರೂ ಈ ತೆರನ ರಚನೆಗಳನ್ನು ಕಾಣಬಹುದು. ಋಗ್ವೇದದ

ಚತ್ವಾರಿ ಶೃಂಗಾಸ್ತ್ರಯೋಸ್ಯ ಪಾದಾ
ದ್ವೇಶೀರ್ಷೇ ಸಪ್ತ ಹಸ್ತಾಸೋ ಅಸ್ಯ
ತ್ರಿಧಾ ಬದ್ಧೋ ವೃಷಭೋರೋರ ವೀತಿ
ಮಹೋದೇವೋ ಮರ್ತ್ಯಮರ್ತ್ಯಾಂ ಆವಿವೇಶ*

---

* ಡಾ. ಕೆ. ಕೃಷ್ಣಮೂರ್ತಿಯವರ ಅನುವಾದ ಹೀಗಿದೆ :
ನಾಲ್ಕು ಕೊಂಬುಗಳು ಮೂರು ಕಾಲುಗಳು

ಎಂಬ ಶ್ಲೋಕವೊಂದು ಈ ನಿಟ್ಟಿನಲ್ಲಿ ಉತ್ತಮ ನಿದರ್ಶನ. ವೇದಗಳಲ್ಲಿ ಕಂಡು ಬರುವ ಇಂಥ ಸಮಸ್ಯೆಗಳಿಗೆ ಯಾಸ್ಕ ಮತ್ತು ದುರ್ಗಾಚಾರ್ಯರು 'ಪ್ರವಹ್ಲಿತ' ಎಂದು ಹೆಸರಿಸಿದ್ದಾರೆ. ಇದಕ್ಕೆ ಸಂವಾದಿಯಾಗಿ ಬೌದ್ಧರಲ್ಲಿ 'ಸಂಧಾಭಾಷಾ' ಎಂಬ ಮಾತು ರೂಢಿಯಲ್ಲಿದೆ. ಮಹಾಭಾರತದ 'ವ್ಯಾಸಗ್ರಂಥಿ' 'ಯಕ್ಷಪ್ರಶ್ನೆ'ಗಳು, ಬೇತಾಳ ಪಂಚವಿಂಶತಿಯಲ್ಲಿ ಬರುವ ಬೇತಾಳನ ಪ್ರಶ್ನೆಗಳು ಕೂಡ ಇದೇ ಸಾಲಿಗೆ ಸೇರುತ್ತವೆ.

ಜನಪದ ಸಾಹಿತ್ಯದಲ್ಲಿ ನಿಶ್ಚಿತರೂಪ ಪಡೆದಿದ್ದ ಒಗಟುಗಳ ತಾಂತ್ರಿಕತೆಗೆ ಮಾರುಹೋದ ಶಿಷ್ಟಕವಿಗಳು ತಮ್ಮ ಕಾವ್ಯಗಳಲ್ಲಿ ಅವುಗಳ ರೂಪಕತೆಯನ್ನು ವಿನ್ಯಾಸವನ್ನು ಬಳಸಿಕೊಂಡರು. ಚಿತ್ರಕಾವ್ಯಗಳಲ್ಲಿ ಶ್ಲೇಷೆ, ಚಮತ್ಕಾರ, ಗೂಢರೂಪದ ನಿರೂಪಣೆಗೆ ಆದ್ಯತೆ. ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕಂತಿ ಹಂಪರ ಸಮಸ್ಯೆ ಈ ದಿಸೆಯಲ್ಲಿ ಪ್ರಾಚೀನವಾದುದು. ಆ ಬಳಿಕದಲ್ಲಿ ಅಲ್ಲಮಪ್ರಭುಗಳ ಬೆಡಗಿನ ವಚನಗಳು, ದಾಸರ ಕೀರ್ತನೆಗಳು. ಸತ್ಯೇಂದ್ರಚೋಳನ ಸಾಂಗತ್ಯ, ಮರುಳೇಶ ಸಾಂಗತ್ಯ, ಕಲ್ಲೆಲಿಂಗೇಶ್ವರ ಚಾರಿತ್ರ ಇವೇ ಮೊದಲಾದ ಕಾವ್ಯಗಳಲ್ಲಿ ಒಗಟುಗಳ ಪದ್ಯರೂಪ ಎಡೆ ಪಡೆದಿವೆ. ಕಾವ್ಯ ಕೃತಿಗಳಲ್ಲಿ ಮರ ಗಿಡ ಬಳ್ಳಿಗಳನ್ನು ವರ್ಣಿಸುವಾಗ ಒಗಟುಗಳ ವಿನ್ಯಾಸವನ್ನು ಬಳಸಿಕೊಂಡಿದ್ದರೆ, ಅಲ್ಲಮಪ್ರಭು ಮತ್ತು ಹರಿದಾಸರಲ್ಲಿ ಅಧ್ಯಾತ್ಮ ನಿರೂಪಣೆಗೆ ಈ ತೆರನ ಗೂಢರೂಪದ ರಚನೆಗಳು ಸಾಧನವಾಗಿರುವುದನ್ನು ಗಮನಿಸಬೇಕು. ಹೀಗೆ ರಹಸ್ಯವಾಗಿ ಹೇಳುವಂಥ ಕ್ರಮಕ್ಕೆ ಒಗಟು, ಒಡಪು, ಬೆಡಗು, ಪ್ರಹೇಳಿಕೆ, ಮುಂಡಿಗೆ, ಭಾರೂಡ ಮೊದಲಾದ ನಾನಾ ಹೆಸರುಗಳಿವೆ. ಅಲ್ಲಮ ಪ್ರಭುಗಳು ತಮ್ಮ ವಚನಗಳನ್ನು ಬೆಡಗು ಎಂದು ವಿಶೇಷಿಸಿದ್ದಾರೆ. ಹರಿದಾಸರ ಧ್ಯೇಯೋದ್ದೇಶಗಳು ಅಲ್ಲಮರಿಗಿಂತ ಭಿನ್ನವಾಗಿಲ್ಲದಿದ್ದರೂ ಬೆಡಗಿಗೆ ಪರ್ಯಾಯವಾಗಿ ಇಲ್ಲಿ 'ಮುಂಡಿಗೆ' ರೂಪವನ್ನು ಬಳಸಲಾಗಿದೆ. ದಾಸಸಾಹಿತ್ಯದಲ್ಲಿ ಕನಕದಾಸ, ಪುರಂದರ ದಾಸ. ಪ್ರಸನ್ನ ವೆಂಕಟದಾಸ ಮತ್ತು ಭಾಗಣ್ಣದಾಸ ಇವರೇ ಮೊದಲಾದವರು ತಮ್ಮ ಕೃತಿಗಳಲ್ಲಿ ಆನುಷಂಗಿಕವಾಗಿ ಮುಂಡಿಗೆಗಳನ್ನು ತಂದಿದ್ದಾರೆ, ಇವುಗಳಲ್ಲಿ ಕನಕದಾಸರ ಮುಂಡಿಗೆಗಳಿಗೆ ವಿಶಿಷ್ಟಸ್ಥಾನವಿದೆ.

---

ಎರಡು ತಲೆ ಏಳು ಕೈಗಳು
ಮೂರೆಳೆಯಿಂದ ಕಟ್ಟಿದ ಎತ್ತು ಗುಟುರು ಹಾಕುತ್ತಿದೆ
ಅನಂತ ಮಹಿಮೆಯ ದೇವನು ಮರ್ತ್ಯಕ್ಕೆ ಇಳಿದಿದ್ದಾನೆ

'ಮುಂಡಿಗೆ' ಶಬ್ದನಿಷ್ಪತ್ತಿಯನ್ನು ಕುರಿತಂತೆ ವಿದ್ವಾಂಸರು ವಿವಿಧ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಬುರ್ಲಿ ಬಿಂದು ಮಾಧವ ಅವರು "ಕಟ್ಟಿಗೆಯ ದೊಡ್ಡ ತೊಲೆಯ ಎತ್ತಲು ಹೇಗೆ ಸುಲಭ ಸಾಧ್ಯವಲ್ಲವೋ ಹಾಗೆಯೇ ಕನಕನ ಈ ಜಾತಿಯ ಹಾಡುಗಳನ್ನು ಸುಲಭವಾಗಿ ಅರ್ಥಮಾಡಲು ಸಾಧ್ಯವಿಲ್ಲೆಂದೇ ಇವುಗಳಿಗೆ ಮುಂಡಿಗೆಗಳೆಂದು ಕರೆದಿರುವರು"[1] ಎಂದಿದ್ದಾರೆ. ಎಂ. ಚಿದಾನಂದಮೂರ್ತಿಯವರು ಪ್ರಾಚೀನ ಕರ್ಣಾಟಕದಲ್ಲಿ ದಿವ್ಯ ಮತ್ತು ಮುಂಡಿಗೆಯ ಬಗ್ಗೆ ವಿವೇಚಿಸುತ್ತ "ಮುಂಡಿಗೆ ಮತ್ತು ಮುಡಿಗೆಗಳೆರಡೂ ಸಮಾನಾರ್ಥಗಳು. ಎರಡಕ್ಕೂ ಟೊಪ್ಪಿಗೆ ಅಥವಾ ತಲೆಯ ಮೇಲಿನ ಉಡುಪು ಎಂಬುದು ಮೂಲಾರ್ಥ, ಇಬ್ಬರ ಮಧ್ಯೆ ವಾದವೊಂದು ಎದ್ದಾಗ ಅವರಲ್ಲಿ ಒಬ್ಬನು ತನ್ನ ತಲೆಯ ಮೇಲಿನ ಉಡುಪನ್ನು ತೆಗೆದು ಎಸೆದರೆ ಅದು ಸವಾಲಿನ ಸೂಚಕವಾಗಿದ್ದಿತು"[೧] ಎಂದು ಹೇಳಿ ಮುಂದುವರೆದು "ಹೀಗೆ ಮುಂಡಿಗೆ ಮತ್ತು ಮುಡಿಗೆಗಳು ಮೊದಲು ಶಿರೋವಸ್ತ್ರವನ್ನು ಸೂಚಿಸುತ್ತಿದ್ದು ಕ್ರಮೇಣ ಸವಾಲು ಎಂಬ ಅರ್ಥವನ್ನು ಪಡೆದವು"[೨] ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಆದರೆ ಮುಂಡಿಗೆ ಮತ್ತು ಮುಡಿಗೆ ಸಮಾನಾರ್ಥಕಗಳೆಂದು ಸ್ವೀಕರಿಸುವ ಮುನ್ನ ಕೆಲವೊಂದು ಅನುಮಾನಗಳು ಉದ್ಭವಿಸುತ್ತವೆ. ಮುಂಡಿಗೆ ಶಬ್ದ ಸಂಸ್ಕೃತ ಮುಂಡಕದ ತದ್ಭವ. ಕಿಟ್ಟೆಲ್ ಮುಂಡಕ ಎಂಬುದಕ್ಕೆ the lopped trunk or stem of a tree, a barber, the head ಎಂಬ ಅರ್ಥಗಳನ್ನು ಕೊಟ್ಟಿದ್ದಾರೆ. ಅಲ್ಲದೆ ಈ ಬಗೆಗೆ ಅತ್ಯಂತ ಪ್ರಾಚೀನ ಉಲ್ಲೇಖವೆನಿಸಿರುವ ಪಂಪಭಾರತದಲ್ಲಿ 'ಮುಡಿಗೆ' ಎಂಬ ಅಬಿಂದುಕ ರೂಪ ದೊರೆಯುವುದನ್ನು ಗಮನಿಸಬೇಕು. 'ಮುಂಡಿಗೆ' ರೂಪ ಪ್ರಥಮವಾಗಿ ಕಾಣಿಸಿಕೊಳ್ಳುವುದು ಬಸವಣ್ಣನವರಲ್ಲಿ. ಸಾಮಾನ್ಯವಾಗಿ ಸಬಿಂದುಕಗಳು ಅಬಿಂದುಕಗಳಾಗುತ್ತವೆಯೆ ಹೊರತು ಅಬಿಂದುಕಗಳು ಸಬಿಂದುಕವಾಗುವುದಿಲ್ಲ. ಬುರ್ಲಿಯವರು ಕಿಟ್ಟೆಲ್ ನೀಡಿರುವ The lopped trunk or stem of a tree ಎಂಬ ಅರ್ಥವನ್ನು ಆಧರಿಸಿ ನಿಷ್ಪತ್ತಿ ಮಾಡಿದ್ದಾರೆ. ಸದ್ಯದಲ್ಲಿ the head ಮೂಲವಾಗಿಟ್ಟುಕೊಂಡು ತಲೆಗೆ ಅಂದರೆ ಮಿದುಳಿಗೆ ಸಂಬಂಧಿಸಿದಂತೆ ಬುದ್ಧಿಪ್ರಧಾನವಾದ ರಚನೆಗಳನ್ನು ಮುಂಡಿಗೆ ಎಂದು ಕರೆಯಬಹುದು. "ಕನಕನು ಹೇಳಿದ ಬೆಡಗು ಕಂಡವರು ನೀವ್ । ಕೇಳಿತಿಳಿದು ನಿಮ್ಮ ಮನದಲ್ಲಿ ನೋಡಿ"[೩] "ಕಾಗಿನೆಲೆಯ ಕನಕದಾಸ ಹೇಳದಂಥ

---

೧. ಸಂಶೋಧನ ತರಂಗ ಭಾಗ–೧ : ೨. ಅದೇ

೩. ಕನಕದಾಸರ ಕೀರ್ತನೆಗಳು : ಸಂ. ಬಿ. ಶಿವಮೂರ್ತಿಶಾಸ್ತ್ರೀ, ಡಾ. ಕೆ.ಎಂ. ಕೃಷ್ಣರಾವ್ : ಪು ೨೦೩

ಮುಂ । ಡಿಗೆಯ ಬಲ್ಲನು ಆದಿಕೇಶವನೊಬ್ಬನು"[೪] "ಬಲ್ಲವರು ನೀವು ಪೇಳಿರಯ್ಯ ಭಾವದುಭಯಾರ್ಥವಿದು । ಎಲ್ಲರಿಗೆ ಸಮ್ಮತವಾದೀ ನಾಮ"[೫] ಎಂದು ಕನಕದಾಸರು ಬೆಡಗು, ಮುಡಿಗೆ, ದ್ವಂದ್ವಾರ್ಥ ಎಂಬ ಮೂರು ಶಬ್ದಗಳನ್ನೂ ಸಮಾನಾರ್ಥಕವಾಗಿ ಬಳಸಿದ್ದಾರೆ. ಈ ಹಿನ್ನೆಲೆಯಲ್ಲಿ ಮುಂಡಿಗೆ ಶಬ್ದದ ಅರ್ಥವ್ಯಾಪ್ತಿ ಸ್ಪಷ್ಟವಾಗುತ್ತದೆ.

ಸಾಮಾನ್ಯರಿಗೂ ಸುಲಭ ಗ್ರಾಹ್ಯವಾಗುವಂಥ ಕೀರ್ತನೆಗಳನ್ನು ರಚಿಸಿದ ಕನಕರು ಗೂಢವಾದ ಮುಂಡಿಗೆಗಳನ್ನು ರಚಿಸಲು ಪ್ರೇರಣೆಯೇನು ಎಂಬ ಪ್ರಶ್ನೆ ಸಹಜ. ಈ ಕುರಿತು ಬುರ್ಲಿಯವರು ಬಗೆಬಗೆಯ ಊಹೆಗಳನ್ನು ಮಾಡಿದ್ದಾರೆ. "೧. ಕೆಲವು ಪಾಂಡಿತ್ಯ ಪ್ರದರ್ಶನಕ್ಕಾಗಿ ಇರಬೇಕು. ೨. ಇನ್ನೂ ಕೆಲವು ಪಾಂಡಿತ್ಯ ಪರೀಕ್ಷೆಗಾಗಿಯೂ ಇದ್ದಂತೆ ಕಾಣುತ್ತವೆ. ೩. ಮತ್ತೆ ಕೆಲವು ಬುದ್ಧಿಪೂರ್ವಕವಾಗಿ ಗುಹ್ಯ ಭಾಷೆಯಲ್ಲಿ ಹೇಳಿದಂತೆ ಅನಿಸುವುದು. ೪. ಕೆಲವೊಮ್ಮೆ ಜ್ಞಾನಿಜ್ಞಾನಿಗಳ ಆಂತರಿಕ ಭಾಷೆಯಾಗಿ ಹೊರಹೊಮ್ಮಿದ್ದನ್ನೂ ಕಾಣಬಹುದು. ೫. ಆತ್ಮಾನುಭವ ಹಾಗೂ ತತ್ವಜ್ಞಾನವನ್ನು ವಿವರಿಸಿದ್ದನ್ನು ನೋಡಬಹುದು ೬. ಪಂಡಿತರನ್ನೂ ಪೌರಾಣಿಕರನ್ನೂ ಕೆಣಕಿದ ಕೆಲವು ಹಾಡುಗಳನ್ನು ಕಾಣಬಹುದು"[೧] ಮೇಲಿನ ಊಹೆಗಳಲ್ಲಿ ಕೆಲವು ಸತ್ಯಾಂಶಗಳಿದ್ದರೂ ಪ್ರಬಲವಾದ ಕಾರಣ ಬೇರೆಯೇ ಆಗಿದೆ. ಅಧ್ಯಾತ್ಮವನ್ನು ನೇರವಾಗಿ ಹೇಳದೆ ಜಟಿಲವಾಗಿ ಹೇಳಬೇಕೆಂಬ ಆಶಯ ಉಪನಿಷತ್ತಿನಲ್ಲಿದೆ. ಅಂತೆಯೆ ಅಧ್ಯಾತ್ಮವನ್ನು ಅಲ್ಪಮತಿಗೆ ಅಜ್ಞಾನಿಗೆ ಅವಿವೇಕಿಗೆ ಉಪದೇಶಿಸಬಾರದೆಂಬ ನಿಷೇಧ ಪರಂಪರಾನುಗತವಾಗಿ ಬಂದಿದೆ. ಪುರಂದರರು ತಮ್ಮ ಒಂದು ಕೀರ್ತನೆಯಲ್ಲಿ

ಪಾಪಿಗೇತಕೆ ಪರಮತತ್ವಬೋಧ
ಕೋಪಿಗೇತಕೆ ಸುಗುಣ ಶಾಂತ ಬುದ್ಧಿ
ಮೂಢಬಲ್ಲನೆ ಜ್ಞಾನ ದೃಢಭಕುತಿಯ
ಕಾಡಕಪಿ ಬಲ್ಲುದೇ ಮಾಣಿಕದ ಬೆಲೆಯ[೨]

ಎಂದು ವ್ಯಕ್ತಪಡಿಸಿರುವಲ್ಲಿ ಉಪನಿಷತ್ತಿನ ಇಂಗಿತವೆ ಮರುಕೊಳಿಸಿದೆ.

---

೪. ಅದೇ : ಪು. ೨೦೬ ೫. ಅದೇ ಪು. ೮೦೯

೧. ಕನಕದಾಸ ಪ್ರಶಸ್ತಿಗ್ರಂಥ : ಪು. ೪೭

೨. ಶ್ರೀ ಪುರಂದರದಾಸರ ಸಾಹಿತ್ಯ-೫, ಪು. ೯

ಕನಕದಾಸರ ಮುಂಡಿಗೆಗಳು ೨೦–೨೫ ಎಂದು ವಿದ್ವಾಂಸರ ಗಣತಿ. ಆದರೆ ಈ ಪಟ್ಟಿಯಲ್ಲಿ ಶ್ಲೇಷೆ, ಚಮತ್ಕಾರ, ವಾವೆ ಮತ್ತು ಗಟ್ಟಿ ಪದಗಳಂಥ ರಚನೆಗಳೂ ಸೇರಿವೆ ಎಂಬುದನ್ನು ಮರೆಯಬಾರದು. ಅವೆಲ್ಲವನ್ನೂ ಪೃಥಕ್ಕರಿಸಿದಾಗ ಶುದ್ಧಮುಂಡಿಗೆಗಳು ೧೦–೧೫ಕ್ಕಿಂತ ಏರುವುದಿಲ್ಲ. ವಚನಸಾಹಿತ್ಯ ಹಾಗೂ ದಾಸಸಾಹಿತ್ಯಗಳಿಗೆ ಕೆಲವೊಂದು ಸಾದೃಶ್ಯವಿರುವಂತೆ ಕನಕರ ಮುಂಡಿಗೆ ಹಾಗೂ ಅಲ್ಲಮರ ಬೆಡಗಿನ ವಚನಗಳಿಗೂ ಸಾಮ್ಯತೆ ಇರುವುದನ್ನು ಗುರುತಿಸಬಹುದು. ಮಾಯೆ, ಜ್ಞಾನ, ವಿವೇಕವನ್ನು ಕುರಿತಂಥ ಅಲ್ಲಮರ–

ನೀರಿನಲ್ಲದ ನೆಳಲಿಲ್ಲದ ಬೇರಿಲ್ಲದ ಗಿಡ ಹುಟ್ಟಿತ್ತು
ತಲೆಯಿಲ್ಲದ ಮೃಗ ಬಂದು ಮೇಯಿತ್ತಾ ಗಿಡುವ
ಕಣ್ಣಿಲ್ಲದಾತ ಕುರುಡನು ಕಂಡನಾ ಮೃಗವ
ಕೈಯಿಲ್ಲದ ವ್ಯಾಧನು ಎಚ್ಚನಾ ಮೃಗವ
ಕಿಚ್ಚಿಲ್ಲದ ನಾಡಿಗೊಯ್ದು ಸುಟ್ಟು ಬಾಣಸವ ಮಾಡಿ ಲಿಂಗಕರ್ಪಿತವಾಯಿತ್ತು
ಗುಹೇಶ್ವರ[೩]

ಎಂಬ ವಚನಕ್ಕೂ ಕನಕದಾಸರ

ಕಣ್ಣಿಲ್ಲದಾತನು ಕಂಡ ಪಿಡಿದ ಮೃಗ
ಕೈಯಿಲ್ಲದಾತನೆಚ್ಚ
ಮಣ್ಣಿಲಿ ಹೊರಳುವ ಕಾಲಿಲ್ಲದಾತನು
ಗಣ್ಯವಿಲ್ಲದೆ ಪಿಡಿದ ॥[೨]

ಎಂಬ ಸಾಲುಗಳಿಗೂ ನಿಕಟತೆಯಿದೆ. ಇದೇ ಭಾವ ಪುರಂದರರಲ್ಲಿ

ನೀರಿಲ್ಲದೆ ನೆರಳಿಲ್ಲದೆ ಬೇರಿಲ್ಲದೆ ಸಸಿ ಹುಟ್ಟಿ
ಹೂವಿಲ್ಲದೆ ಕಾಯಿಲ್ಲದೆ ಅದು ಫಲಕೆ ಬಂದು
ಕರವಿಲ್ಲದೆ ಕಾಲಿಲ್ಲದೆ ಕೊಯ್ವರಯ್ವರು ಆ ಹಣ್ಣನು
ಮರುಳಾಯಿತು ಮೂವತ್ತುಸಾವಿರ ಮಂದಿ

ಎಂದು ಬೇರೊಂದು ಸಂದರ್ಭದಲ್ಲಿ ಪ್ರಕಟಗೊಂಡಿದೆ. ಅಲ್ಲಮರ ಮತ್ತೊಂದು ವಚನ–"ಕಾಲಿಲ್ಲದ ಗಮನ ಕೈಯಿಲ್ಲದ ಸೋಂಕು ಬಾಯಿಲ್ಲದ ರುಚಿ ಭಾವವೆ

---

3. ಅಲ್ಲಮರ ಟೀಕಿನ ವಚನ : ಸಂ. ಇಮ್ಮಡಿ ಶಿವಬಸವಸ್ವಾಮಿ ಪು. 255

ಕರ್ಪುರವಾಗಿ ಪರಮದೇಹಿಯೆಂದು ಬೇಡುವ ಪರಮನ ತೋರಯ್ಯ ಗುಹೇಶ್ವರ" ಎಂಬುದಕ್ಕೆ ಸಂವಾದಿಯಾಗಿ ಕನಕರ–

ಕಾಲಿಲ್ಲದಾತನು ಹತ್ತಿದನಾ ಮರ ಚಂದಮಾಮ
ಕೈಯಿಲ್ಲದಾತನು ಕೊಯ್ದನು ಆ ಹಣ್ಣ ಚಂದಮಾಮ

ಎಂಬ ನುಡಿಗಳೂ ನಿಲ್ಲುತ್ತವೆ. ಇಂಥ ಕೆಲವು ಸಾದೃಶ್ಯಗಳಿಂದ ಅಲ್ಲಮರ ಬೆಡಗಿನ ವಚನದ ಪರಿಚಯ ಕನಕದಾಸರಿಗೆ ಇದ್ದಿರುವ ಸಾಧ್ಯತೆಯನ್ನು ತಳ್ಳಿಹಾಕಲಾಗದಿದ್ದರೂ ಅದರಿಂದ ಪ್ರಭಾವಿತರಾಗಿದ್ದಾರೆ, ಸ್ವೀಕರಿಸಿದ್ದಾರೆ ಎಂಬ ಮಾತನ್ನು ಹೇಳುವಂತಿಲ್ಲ. ಏಕೆಂದರೆ ಇವೆರಡಕ್ಕೂ ಸಮಾನ ಆಕರವಾಗಿ "ಅಪಾಣಿ ಪಾದೋಜ ವನೋ ಗೃಹೀತಾ ಪಶ್ಯತ್ಯಚಕ್ಷುಃ ಸಶ್ರುಣೋತ್ಯಕಣಃ" ಎಂಬ ಉಪನಿಷದ್ವಾಕ್ಯದ ಸಾರವೆ ಅಲ್ಲಮ ಹಾಗೂ ಕನಕರಲ್ಲಿ ತಂತಮ್ಮ ಧರ್ಮದ ಚೌಕಟ್ಟಿಗನುಗುಣವಾಗಿ ವ್ಯಕ್ತವಾಗಿದೆ.

ಕನ್ನಡ ಹರಿದಾಸ ಸಾಹಿತ್ಯದ ಪ್ರಭಾವ ಪರಿಣಾಮಗಳು ಮರಾಠಿಯ ಸಂತ ಸಾಹಿತ್ಯದ ಮೇಲೆ ಆಗಿರುವುದನ್ನು ವಿದ್ವಾಂಸರು ಈಗಾಗಲೆ ಗುರುತಿಸಿದ್ದಾರೆ. ಮುಂಡಿಗೆಗಳ ಪ್ರೇರಣೆಯಿಂದ ಮರಾಠಿಯಲ್ಲಿ ಭಾರೂಡಗಳು ಸೃಷ್ಟಿಯಾಗಿವೆ. ಭಾರೂಡ ಪ್ರಕಾರ ಮರಾಠಿಯಲ್ಲಿ ಜ್ಞಾನದೇವನ ಕಾಲದಿಂದಲೂ ಕಂಡುಬರುತ್ತದೆ. ಪುರಂದರ ಮತ್ತು ಏಕನಾಥರ ಸಾಹಿತ್ಯವನ್ನು ತೌಲನಿಕ ದೃಷ್ಟಿಯಿಂದ ನೋಡಿದ ಪಂಡಿತ ಆವಳೀಕರ್ ಅವರು "ಏಕನಾಥರ ಭಾರೂಡ ಹಾಗೂ ದಾಸರ ಮುಂಡಿಗೆ ಈ ಕಾವ್ಯ ಪ್ರಕಾರದಲ್ಲಿ ವಿಲಕ್ಷಣ ಸಾಮ್ಯವಿದೆ" ಎಂದಿದ್ದಾರೆ. ಹಾಗಾಗಿ ಕನಕರ ಮುಂಡಿಗೆಗಳಲ್ಲಿ ವ್ಯಕ್ತಪಟ್ಟ ಕೆಲವು ಅಂಶಗಳು ಭಾರೂಡದಲ್ಲಿಯೂ ಕಾಣಿಸಿಕೊಂಡಿದ್ದರೆ ಆಶ್ಚರ್ಯವಿಲ್ಲ.

ಮುಂಡಿಗೆಗಳನ್ನು ಕುರಿತು ಬಹು ಹಿಂದೆಯೆ ಬರೆದ ಬುರ್ಲಿ ಬಿಂದು ಮಾಧವ ಅವರು ಕನಕದಾಸರ ಅಂಧಕನನುಜನ, ರಮಣಿ ಕೇಳೆಲೆ, ಏನಿದೆತ್ತಣ ಬಯಕೆ, ಕೆಂಪು ಮೂಗಿನ ಪಕ್ಷಿ, ಸಹಜವಿದು ಈ ನುಡಿ, ಮುತ್ತುಗಳಾ ಹಣ್ಣು ಎಂದು ಆರಂಭಗೊಳ್ಳುವ ಮುಂಡಿಗೆಗಳನ್ನು ಅರ್ಥೈಸಿದ್ದಾರೆ. ಕನಕರ ಮುಂಡಿಗೆಗಳು ಮೇಲ್ನೋಟಕ್ಕೆ ಸರಳಭಾಷೆಯಲ್ಲಿ ರಚಿತವಾಗಿರುವಂತೆ ಕಂಡುಬಂದರೂ ಒಡಲಲ್ಲಿ ಹುದುಗಿರುವ ಅರ್ಥ ಮಾತ್ರ ಅಗಮ್ಯವಾದದ್ದು ಅನಂತವಾದದ್ದು :

ನಾನು ಮುಂದೋ ಸ್ವಾಮಿ ವಿಭೂತಿ ಮುಂದೊ
ಭೂಮಿ ಆಕಾಶ ಪೊತ್ತೊ ಆಕಾಶ ಭೂಮಿಯ ಪೊತ್ತೊ

ಭೂಮಿಯು ಮುಂದೊ ಆಕಾಶ ಮುಂದೋ ಸ್ವಾಮಿ
ತಿತ್ತಿ ಇಕ್ಕಳ ಪೊತ್ತೊ ಇಕ್ಕಳ ತಿತ್ತಿಯ ಪೊತ್ತೊ
ಇಕ್ಕಳ ಮುಂದೋ ತಿತ್ತಿಯು ಮುಂದೊ ಸ್ವಾಮಿ
ಬೀಜ ವೃಕ್ಷವು ಪೊತ್ತೊ ವೃಕ್ಷ ಬೀಜವು ಪೊತ್ತೊ
ಬೀಜವು ಮುಂದೊ ವೃಕ್ಷವು ಮುಂದೋ ಸ್ವಾಮಿ
ಗಂಡ ಹೆಂಡತಿ ಪೊತ್ತೊ ಹೆಂಡತಿ ಗಂಡನ ಪೊತ್ತೊ
ಗಂಡನು ಮುಂದೊ ಹೆಂಡತಿ ಮುಂದೊ ಸ್ವಾಮಿ
ಕನಕನು ಹೇಳಿದ ಬೆಡಗು ಕಂಡವರು ನೀವ್
ಕೇಳಿ ತಿಳಿದು ನಿಮ್ಮ ಮನದಲ್ಲಿ ನೋಡಿ

ಇಲ್ಲಿ ಭೂಮಿ–ಆಕಾಶ, ತಿತ್ತಿ–ಇಕ್ಕಳ, ಗಂಡ–ಹೆಂಡತಿ ಇವುಗಳ ಕಾರ್ಯ ಕಾರಣ ಸಂಬಂಧವು ಬೀಜವೃಕ್ಷನ್ಯಾಯದ ಮೂಲಕ ನಿರೂಪಿತವಾಗಿದೆ. ದಶಾವತಾರ ಕುರಿತ ಕನಕದಾಸರ ಮುಂಡಿಗೆಯಲ್ಲಿ ಕಂಡುಬರುವ ಚಮತ್ಕಾರ ಮೆಚ್ಚುವಂತಹುದು:

ಮಗುವಿನ ಮರುಳಿದು ಬಿಡದಲ್ಲ
ಈ ಜಗದೊಳು ಪಂಡಿತರಿದ ಬಿಡಿಸಿ
ನೀರನು ಕಂಡರೆ ಮುಳುಗುತಿದೆ
ಮೋರೆಯ ತೋರದೆ ಓಡುತಿದೆ
ಧಾರಿಣಿ ಅಲ್ಲಲ್ಲಿ ಅಳೆಯುತಿದೆ ದೊಡ್ಡ
ಭೈರವಾಕಾರದಿ ಕೂಗುತಿದೆ
ಪೊಡವಿಯ ಕೊಟ್ಟರೆ ಬಿಸುಡುತಿದೆ ತನ್ನ
ಕೊಡಲಿಯೊಳ್ ಭೂಪರ ಕಡಿಯುತಿದೆ
ಅಡವಿ ಕೋತಿಗಳ ಕೂಡುತಿದೆ
ಮಡದಿಯರನು ಹಿಡಿದೆಳೆವುತಿದೆ
ಉಟ್ಟಿದ್ದ ವಸ್ತ್ರವ ಬಿಸುಡುತಿದೆ ತನ್ನ
ದಿಟ್ಟ ತೇಜಿಯನೇರಿ ನಲಿಯುತಿದೆ
ಸೃಷ್ಟಿಯೊಳು ಭೂಸುರರು ಪೊರೆವ ಜಗ
ಜಟ್ಟಿಯಾದಿಕೇಶವರಾಯನಂತೆ ॥

ಈ ಮುಂಡಿಗೆಯನ್ನು ಹೀಗೆ ಗ್ರಹಿಸಬಹುದು ; ನೀರನು ಕಂಡರೆ ಮುಳುಗುತಿದೆ–ಮತ್ಸ್ಯಾವತಾರ, ಮೋರೆಯ ತೋರದೆ ಓಡುತಿದೆ–

ವರಾಹಾವತಾರ, ಧಾರಿಣಿ ಅಲ್ಲಲ್ಲಿ ಅಳೆಯುತಿದೆ–ವಾಮನಾವತಾರ, ದೊಡ್ಡ ಭೈರವಾಕಾರದಿ ಕೂಗುತಿದೆ–ನರಸಿಂಹಾವತಾರ, ಪೊಡವಿಯ ಕೊಟ್ಟರೆ ಬಿಸುಡುತಿದೆ ತನ್ನ ಕೊಡಲಿಯೊಳ್ ಭೂಪರ ಕಡಿಯುತಿದೆ ಪರಶುರಾಮಾವತಾರ, ಅಡವಿ ಕೋತಿಗಳ ಕೂಡುತಿದೆ–ರಾಮಾವತಾರ, ಮಡದಿಯರನು ಹಿಡಿದೆಳೆವುತಿದೆ–ಕೃಷ್ಣಾವತಾರ, ಉಟ್ಟಿದ್ದ ವಸ್ತ್ರವ ಬಿಸುಡುತಿದೆ–ಬೌದ್ಧಾವತಾರ, ತನ್ನ ದಿಟ್ಟ ತೇಜಿಯನೇರಿ ನಲಿಯುತಿದೆ–ಕಲ್ಕ್ಯಾವತಾರ. ಹೀಗೆ ಒಂದೊಂದು ಅವತಾರದ ಕ್ರಿಯೆಯ ಮೂಲಕ ಹರಿಪಾರಮ್ಯವನ್ನು ಎತ್ತಿ ಹಿಡಿದಿದ್ದಾರೆ. ಇದೇ ಭಾವ ಮುಂಡಿಗೆ ಎಂದು ಕರೆಯದಿದ್ದರೂ ಪುರಂದರರ ಕೀರ್ತನೆಯಲ್ಲಿಯೂ ವ್ಯಕ್ತವಾಗಿರುವುದು ಹೀಗಿದೆ :

ಏನಾಯಿತು ರಂಗಗೆ ನೋಡಿರಮ್ಮ ನಿ
ಧಾನಿಸಿ ಎನಗೊಂದು ಪೇಳಿರಮ್ಮ
ಪುಟ್ಟಿದಾರಭ್ಯ ಕಣ್ಣ ಮುಚ್ಚನಮ್ಮ–ತಾನು
ಎಷ್ಟಾದರೂ ಮೊಲೆಯುಣ್ಣನಮ್ಮ
ಸೊಟ್ಟಾದ ಮುಖ ಮೇಲಕ್ಕೆತ್ತನಮ್ಮ–ಹೀಗೆ
ಎಷ್ಟು ಹೇಳಲಿ ಬಾಯ ಮುಚ್ಚನಮ್ಮ
ಕಾಯ ಇದ್ದಂತಿದ್ದು ಹೆಚ್ಚಿತಮ್ಮ–ಹೆತ್ತ
ತಾಯಿಯ ಒಲವಿಲ್ಲದಾಯಿತಮ್ಮ
ನೋಯೆ ನೋಟಕ್ಕೆ ಅಬ್ಧಿ ಬತ್ತಿತಮ್ಮ–ಅವನ
ಬಾಯಿಯೊಳಗೆ ವಿಶ್ವ ತೋರಿತಮ್ಮ
ಅತ್ಯಂತ ಮಾತುಗಳನಾಡಿದನಮ್ಮ–ಮುಂದೆ
ಸತ್ಯವು ಕುದುರೆಯನೇರುವ ನಮ್ಮ
ನಿತ್ಯ ನಿರ್ದೋಷ ಪುರಂದರ ವಿಠಲ–ತನ್ನ
ಭಕ್ತರ ಸಲಹುವ ದೇವನಮ್ಮ ॥

ಇವು ಓದುಗರ ಭವಕೋಶವನ್ನು ವಿಸ್ತರಿಸುವಲ್ಲಿಯೂ ಸಹಾಯಕವಾಗಿವೆ. ಕನಕದಾಸರು ಉಪನಿಷತ್ತು. ಭಗವದ್ಗೀತೆಗಳನ್ನು ಆಳವಾಗಿ ಅಭ್ಯಾಸಮಾಡಿದಂತೆ ತೋರುತ್ತದೆ. ಅವುಗಳ ಸಂಸ್ಕಾರವನ್ನು ಮುಂಡಿಗೆಗಳಲ್ಲಿ ಗುರುತಿಸಬಹುದು, ಈ ಮಾತಿಗೆ ನಿದರ್ಶನವಾಗಿ ಜೀವ ಮತ್ತು ಆತ್ಮದ ಸ್ವರೂಪವನ್ನು ಕುರಿತ ಒಂದು ಮುಂಡಿಗೆ ನಿಲ್ಲುತ್ತದೆ. ಆತ್ಮಕ್ಕೆ ಅಳಿವಿಲ್ಲ, ಹುಟ್ಟು ಸಾವುಗಳಿಲ್ಲ. ದೇಹ ಹೋದರೂ ಜೀವ ಶಾಶ್ವತ. ಆತ್ಮವನ್ನು ಶಸ್ತ್ರ, ಅಗ್ನಿ, ನೀರು, ಗಾಳಿ ಯಾವುವೂ

ಸೋಂಕಲಾರವು ಎಂಬುದನ್ನು ವಿವರಿಸುವಾಗ ಭಗವದ್ಗೀತೆಯಲ್ಲಿ ಬರುವ ಶ್ಲೋಕಗಳು ಇಂತಿವೆ –

ನಾ ಜಾಯತೇ ಮ್ರಿಯತೇ ವಾ ಕದಾಚಿ
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ॥
ಅಜೋ ನಿತ್ಯಃ ಶಾಶ್ವತೋಯಂ ಪುರಾಣೋ ॥
ನ ಹನ್ಯತೇ ಹನ್ಯಮಾನೇ ಶರೀರೇ (೨–೨೦)
ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ (೨–೨೩)
ಅಚ್ಛೇದ್ಯೋ ಯಮದಾಹ್ಯೋಯಮ ಕ್ಲೇದ್ಯೋ ಶೋಷ್ಯ ಏವ ಚ
ನಿತ್ಯಃ ಸರ್ವಗತಃ ಸ್ಥಾಣುರಚಲೋಯಂ ಸನಾತನಃ ॥

ಎಂಬಲ್ಲಿನ ತತ್ತ್ವಜ್ಞಾನವನ್ನು ಕನಕದಾಸರು ಹೀಗೆ ಅಳವಡಿಸಿಕೊಂಡಿದ್ದಾರೆ–

ಓಹೊ ಎನ ಜೀವಾ ಮೈಯೆಲ್ಲಾ ನವಗಾಯ
ಗಾಯ ಕಟ್ಟುವರಿಲ್ಲ ಗಾಳಿ ಹಾಕುವರಿಲ್ಲ ॥
ಮಾಡಿಲ್ಲ ಮಳೆಯಿಲ್ಲ ಮರದ ಮ್ಯಾಲೆ ನೀರ ಕಂಡೆ
ಕಾಡು ಸುಡುವುದು ಕಂಡೆ ಬೂದಿಯ ಕಾಣಲಿಲ್ಲ ॥
ಬಿತ್ತಲಿಲ್ಲ ಬೆಳೆಯಲಿಲ್ಲ ನೆಟ್ಟು ನೀರ ತೋರಲಿಲ್ಲ
ಹೊತ್ತುಕೊಂಡು ತಿರುಗಿದರೆ ರೊಕ್ಕದಾ ಪ್ರಾಣಿಯನ್ನು ॥

ಮುಂದೆ ಈ ಮುಂಡಿಗೆ ಬೇರೊಂದು ಹಾದಿಯಲ್ಲಿ ಸಾಗುತ್ತದೆ. ಈ ರೀತಿ ಭಗವದ್ಗೀತೆಯನ್ನು ಅಧ್ಯಯನ ಮಾಡಿ, ಅರಗಿಸಿಕೊಂಡು ತಮ್ಮದೇ ಆದ ಕಾಣ್ಕೆಯನ್ನು ನೀಡಿರುವಲ್ಲಿ ಕನಕದಾಸರ ಸೋಪಜ್ಞತೆಯನ್ನು ಮನಗಾಣಬಹುದು. ಇವರ ಮುಂಡಿಗೆಗಳು ಅಮೂರ್ತವಾದ ಸಂಗತಿಗಳನ್ನು ಮೂರ್ತಗೊಳಿಸುತ್ತವೆ. ಇವು ನಾಳಿಕೇರ ಪಾಕದಂತೆ, ಸರಳವಾದ, ವಾಚ್ಯವಾದ ಅರ್ಥಕ್ಕಿಂತ ವಿಪರೀತವಾದ ವಿಶಿಷ್ಟವಾದ ಅಂತರಾರ್ಥವನ್ನು ಮುಂಡಿಗೆಗಳು ಪಡೆದಿರುತ್ತವೆ. ಇಲ್ಲಿ ಭಾವತೀವ್ರತೆಗಿಂತ ಬುದ್ಧಿ ತೀವ್ರತೆಯೆ ಪ್ರಧಾನವಾಗಿ ಕಂಡುಬರುತ್ತದೆ. ಚಾತುರ್ಯ, ಕಾಕು, ಕೌಶಲ, ಜಾಣತನಗಳು ಪ್ರಧಾನ ಪಾತ್ರ ವಹಿಸುತ್ತವೆ. ಮುಂಡಿಗೆಗಳಲ್ಲಿ ಕಂಡುಬರುವ ಜಟಿಲತೆಯನ್ನು ಕುರಿತಂತೆ ಅನೇಕ ಸಮಕಾಲೀನ ವಿದ್ವಾಂಸರು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿದ್ದಾರೆ. ಬೆಟಗೇರಿ ಕೃಷ್ಣಶರ್ಮರ "ಇಂತಹ ಮುಂಡಿಗೆಗಳ ಅರ್ಥವನ್ನು ಸರಿಯಾಗಿ

ಬಿಡಿಸಿ ಹೇಳುವ ಜನರು ದಾಸಪರಂಪರೆಯಲ್ಲಿ ಈಗ ಇಲ್ಲವೆಂದೇ ಹೇಳಬಹುದು. ಕೆಲಕೆಲವು ಪಂಡಿತರು ಅವುಗಳ ಅರ್ಥವನ್ನು ಹೇಳಲು ತಿಣುಕಾಡಿ, ಏನೇನೋ ಆಭಾಸಾರ್ಥಗಳನ್ನು ಹೇಳುವರಾದರೂ ಅವು ಕೇವಲ ಬುದ್ಧಿಯ ಕರಸತ್ತು ಎನಿಸುವುವು. ಉಚಿತ ತತ್ತ್ವ ರಹಸ್ಯವನ್ನು ಅವು ಹೊರಕ್ಕೆ ಹಾಕಲಾರವು" ಎಂಬ ಅಭಿಪ್ರಾಯಕ್ಕೆ ನಾವೂ ದನಿಗೂಡಿಸಬಹುದು.

# ಕನ್ನಡ ಸಾಹಿತ್ಯದಲ್ಲಿ ಕನಕದಾಸರ ಸ್ಥಾನ

**ಡಾ. ಡಿ. ಕೆ. ರಾಜೇಂದ್ರ**

೧

ಕನ್ನಡ ಸಾಹಿತ್ಯದಲ್ಲಿ ಕನಕದಾಸರ ಸ್ಥಾನ ಹೆಚ್ಚು ವೈಶಿಷ್ಟ್ಯದಿಂದ ಕೂಡಿದುದು. ಅದರಲ್ಲಿಯೂ ದಾಸಸಾಹಿತ್ಯದಲ್ಲಿಯಂತೂ ಇನ್ನೂ ಹೆಚ್ಚಿನ ರೀತಿಯದು. ಅವರ ವರ್ಣಮಯ ಬದುಕು, ಅದಕ್ಕನುಗುಣವಾದ ಸಾಹಿತ್ಯ ಸೃಷ್ಟಿ, ಕನ್ನಡ ಸಾಹಿತ್ಯದಲ್ಲಿ ಅವರಿಗೊಂದು ವಿಶೇಷಸ್ಥಾನವನ್ನು ದೊರಕಿಸಿ ಕೊಡುವಷ್ಟು ವಿಶಿಷ್ಟವಾದುದಾಗಿದೆ.

ಕನಕದಾಸರು ಕವಿ ಅಷ್ಟೇ ಅಲ್ಲ, ಕಲಿಯೂ ಹೌದು. ಕವಿ ಕಲಿಯಾಗಿ ಕೀರ್ತಿಗಳಿಸಿದ ಪಂಪನಿಗಿಂತ ಒಂದು ಕೈ ಮಿಗಿಲೆಂಬಂತೆ–ಸಂಸಾರಿಯಾಗಿ, ಸಂತನಾಗಿ, ದೊಡ್ಡ ಭಕ್ತನಾಗಿ, ಕೀರ್ತನಕಾರನಾಗಿ, ಎಲ್ಲಕ್ಕಿಂತ ಮಿಗಿಲಾಗಿ ಮಹಾರಸಿಕತೆಯನ್ನು ತೋರುವ ಕವಿಯಾಗಿ ಮೆರೆಯುವಂತೆಯೆ ಕೀರ್ತನೆಗಳ ಮೂಲಕ ದೊಡ್ಡ ಸಮಾಜ ಸುಧಾರಕನಾಗಿ ಹಾಗೂ ಆಧ್ಯಾತ್ಮಿಕ ಶಿಖರದ ತುತ್ತತುದಿಯನ್ನೇರಿದ ಸಿದ್ಧಪುರುಷನಾಗಿ ವಿಶೇಷ ಗಮನ ಸೆಳೆಯುತ್ತಾರೆ. ತಮ್ಮ ವೈಯಕ್ತಿಕ ಬದುಕಿನಲ್ಲಿ ಕಂಡ ಹಲವೆಂಟು ಏರಿಳಿತಗಳು. ಕಷ್ಟ ಸುಖಗಳು ಅವರನ್ನು ಆಧ್ಯಾತ್ಮಿಕತೆಯ ಕಡೆಗೆ ಹೊರಳಿಸಲು ಕಾರಣವಾದರೂ, ಕೇವಲ ಧ್ಯಾನಸ್ಥಿತಿಯಲ್ಲಷ್ಟೇ ಮೈಮರೆಯದೆ ವೈಚಾರಿಕತೆಯ ತುತ್ತತುದಿಗೂ ಅವರನ್ನು ಕೊಂಡೊಯ್ದು ಅದರ ವಾಸ್ತವಿಕತೆಯನ್ನು ಬಯಲು ಮಾಡುವುದರ ಮೂಲಕ ಹಲವರ ಕಣ್ಣು ತೆರೆಸಲು ಕಾರಣವಾದಂತೆ ಆದದ್ದು ಕನಕದಾಸರ ವ್ಯಕ್ತಿತ್ವದ ಒಂದು ವೈಶಿಷ್ಟ್ಯವೆಂದೇ ಹೇಳಬಹುದು.

ಕನಕದಾಸರು ಅಂದು ದಾಸಪಂಥದಲ್ಲಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಹೋರಾಟ ನಡೆಸಿದಂತೆ, ಇಂದು ಅವರಿಂದ ರಚಿತವಾದ ಸಾಹಿತ್ಯ ಅಂತಹುದೇ ಸಮಸ್ಯೆಯನ್ನು ಎದುರಿಸುವಂತಾಗಿದೆ. ಅವರ ಸಾಹಿತ್ಯ ಶಕ್ತಿಯನ್ನು ಸಮಸ್ಥಿತಿಯಲ್ಲಿ

ತೂಗಿನೋಡುವ ಕಾರ್ಯ ಸಾರ್ವತ್ರಿಕವಾಗಿ ನಡೆದಿಲ್ಲ ಎಂದೇ ಹೇಳಬಹುದು. ಉಳಿದ ಕೀರ್ತನಕಾರರಿಗಿಂತ ಒಂದು ವಿಶಿಷ್ಟಸ್ಥಾನವನ್ನು ಗಳಿಸಿಕೊಂಡು ಸಾಹಿತ್ಯ ಸೃಷ್ಟಿಯನ್ನು ಮಾಡಿದ ಅವರ ಪ್ರತಿಭೆಯ ಅಪೂರ್ವತೆಯನ್ನು ನಿರ್ಧರಿಸುವ ಕೆಲಸ ಇನ್ನೂ ಆಗಬೇಕಾಗಿದೆ. ಕನಕದಾಸರ ವೈಯಕ್ತಿಕ ಬದುಕು ಎಷ್ಟು ವೈಶಿಷ್ಟ್ಯಗಳ ಸಂಗಮವಾಗಿ ಹೊರ ಚಿಮ್ಮಿರುವುದು ಗಮನಿಸಬೇಕಾದ ಅಂಶ. ತನ್ನದಲ್ಲದ ಒಂದು ಕ್ಷೇತ್ರವನ್ನು ಪ್ರವೇಶಿಸಿ, ದೈವಪ್ರೇರಣೆಯಿಂದ ಹರಿದಾಸರ ಸಂಸರ್ಗವನ್ನು ಪಡೆದು ಹಲವು ಸಾಧನೆಗಳನ್ನು ಮಾಡಿದ ಕನಕದಾಸರ ಶಕ್ತಿ–ಪ್ರತಿಭೆ, ಕಾವ್ಯಕುಸುಮವಾಗಿ ಅರಳಿದ್ದು, ಆಧ್ಯಾತ್ಮಿಕ ಜ್ಯೋತಿಯಾಗಿ ಬೆಳಗಿದ್ದು, ವೈಚಾರಿಕತೆಯ ಕ್ರಾಂತಿಯಾಗಿ ಕಂಗೊಳಿಸಿದ್ದು–ಇವೆಲ್ಲ ಪವಾಡಸದೃಶವಾಗಿ ತೋರುತ್ತವೆ.

ಪ್ರಥಮತಃ ಕನಕದಾಸರು ಕವಿ ಹೃದಯವುಳ್ಳವರು. ದಾಸಪಂಥದಲ್ಲಿ ಕವಿಗಳೆನಿಸಿ ವಿಶಿಷ್ಟಸ್ಥಾನವನ್ನು ಪಡೆದವರು. ಕೀರ್ತನೆ ಮತ್ತು ಕಾವ್ಯ ಎರಡರಲ್ಲಿಯೂ ಜೀವಂತಿಕೆಯನ್ನು ಮೆರೆದವರು. ಅವರು ಒಳ್ಳೆಯ ಕೀರ್ತನಕಾರರಾಗಿ ತಮ್ಮ ಪ್ರತಿಭೆಯನ್ನು ಭಕ್ತಿಯ ಪರಾಕಾಷ್ಠತೆಯನ್ನು, ಸಾಮಾಜಿಕ ಕಾಳಜಿಯನ್ನು ತೋರಿರುವಂತೆಯೇ ಕವಿಗಳಾಗಿ ಕಾವ್ಯತ್ವದ ಸತ್ವವನ್ನು ಮೆರೆದಿದ್ದಾರೆ. ಉಳಿದ ಕೀರ್ತನಕಾರರ ಕೀರ್ತನೆಗಳಲ್ಲಿ ಕಾವ್ಯಗುಣ ಇದ್ದರೂ, ಸಾಮಾಜಿಕ ಕಾಳಜಿ ಹಾಗೂ ಭಕ್ತಿಯ ಆವೇಶ ಇದ್ದರೂ, ಕಾವ್ಯಗುಣ ಅವರಲ್ಲಿ ಸಂಚಾರಿಯಾದದ್ದೇ ಹೊರತು, ಕನಕದಾಸರಲ್ಲಿಯಂತೆ ಸ್ಥಾಯಿಯಾದುದಲ್ಲ. ಕನಕದಾಸರು ದಾಸಪಂಥವನ್ನು ಸೇರಿದ್ದು ಒಂದು ಆಕಸ್ಮಿಕ ಘಟನೆ ಎನ್ನಬಹುದು. ಅವರ ಜೀವನದಲ್ಲಾದ ಒಂದು ಮಹತ್ತರವಾದ ಘಟನೆ ಅದಕ್ಕೆ ಕಾರಣವೆನ್ನಬಹುದು. ಒಂದು ಪಕ್ಷ ಅವರು ದಾಸಕೂಟವನ್ನು ಸೇರದೆ ಇದ್ದಿದ್ದರೆ, ಅವರಿಂದ ಕೀರ್ತನೆಗಳ ರಚನೆಯಾಗುತ್ತಿರಲಿಲ್ಲ ಅಷ್ಟೆ, ಆದರೆ ಅವರ ಹೃದಯದಲ್ಲಿ ತುಡಿಯುತ್ತಿದ್ದ ಕವಿಪ್ರಜ್ಞೆಗೆ ಯಾವ ಅಡ್ಡಿಯೂ ಬರುತ್ತಿರಲಿಲ್ಲ. ನಿರಾತಂಕವಾಗಿ ಆ ಕಾವ್ಯಧಾರೆ ಹರಿಯುತ್ತಿತ್ತು. ಆ ದೃಷ್ಟಿಯಿಂದ ನೋಡುವಾಗ ಕನಕದಾಸರು ಹುಟ್ಟು ಕವಿಪ್ರತಿಭೆಯುಳ್ಳ ಕವಿ.

ಕನಕದಾಸರಲ್ಲಿ ಭಕ್ತಿ ಮತ್ತು ಕಾವ್ಯಶಕ್ತಿ ಎರಡೂ ಮೇಲುಗೈಯಾಗಿ ಬೆಸೆದುಕೊಂಡು ಬಂದಿವೆ. ಕೀರ್ತನೆಗಳಲ್ಲಿ ಹಾಗೂ 'ಹರಿಭಕ್ತಿಸಾರ'ದಲ್ಲಿ ಅವರ ಭಕ್ತಿಯ ಪರಾಕಾಷ್ಠತೆಯನ್ನು ಕಾಣಬಹುದಾದರೆ, ಅವರ 'ಮೋಹನ ತರಂಗಿಣಿ' 'ನಳಚರಿತ್ರೆ' ಹಾಗೂ 'ರಾಮಧಾನ್ಯ ಚರಿತೆ' ಇವುಗಳಲ್ಲಿ ಕಾವ್ಯಗುಣ ದಟ್ಟೈಸಿ

ಹರಿದಿರುವುದನ್ನು ಕಾಣಬಹುದು. ಮೊದಲನೆಯದರಲ್ಲಿ ತಮ್ಮ ಅಂತರಂಗವನ್ನು ತೋರಿಕೊಂಡಿದ್ದರೆ, ಎರಡನೆಯದರಲ್ಲಿ ಸಂಪೂರ್ಣ ಕವಿಯಾಗಿಯೇ ನಿಂತು ಕಾವ್ಯಶಕ್ತಿಯನ್ನು ಪ್ರದರ್ಶಿಸಿದ್ದಾರೆ. ಹೀಗಾಗಿ ಕನಕದಾಸರು ಒಬ್ಬ ಪರಿಪೂರ್ಣ ಭಕ್ತನೂ, ಕವಿಯೂ ಆಗಿ ಗಮನ ಸೆಳೆಯುತ್ತಾರೆ. ಅವರ ಈ ಎರಡೂ ಬಗೆಯ ಕೃತಿಗಳಲ್ಲಿ ಅದನ್ನು ಪರಿಶೀಲಿಸಬಹುದು.

ಮೊದಲು ಅವರ ಭಕ್ತಿಭಾವ ಸ್ಥಾಯಿಯಾಗಿ ರಚನೆಗೊಂಡಿರುವ ಕೀರ್ತನೆಗಳನ್ನು ಹಾಗೂ 'ಹರಿಭಕ್ತಿಸಾರ' ಕೃತಿಯನ್ನು ಪರಿಶೀಲಿಸಿ ಅನಂತರ ಕಾವ್ಯ ಪ್ರಜ್ಞೆ ಸ್ಥಾಯಿಯಾದ ಇನ್ನುಳಿದ ಕೃತಿಗಳನ್ನು ಪರಿಶೀಲಿಸಬಹುದು. ಈ ಬಗೆಯಾದ ವಿಂಗಡಣೆ ಒಂದರ್ಥದಲ್ಲಿ ಸಾಧುವಾದುದಲ್ಲವಾದರೂ, ಕೇವಲ ಅಧ್ಯಯನದ ಅನುಕೂಲಕ್ಕೆ ಮಾಡಿಕೊಳ್ಳಬಹುದಾದ್ದಷ್ಟೇ. ಏಕೆಂದರೆ ಕಾವ್ಯಪ್ರಜ್ಞೆ ಇಲ್ಲದ ಕೀರ್ತನೆಯಾಗಲೀ–ಕೃತಿಯಾಗಲಿ ಇಷ್ಟುಕಾಲ ಉಳಿದು ಬರಲು ಸಾಧ್ಯವಿಲ್ಲ ; ಉಳಿದು ಬಂದರೂ ಕವಿಯೊಬ್ಬನ ಹೆಸರನ್ನು ಇಷ್ಟು ಜನಪ್ರಿಯವಾಗಿ ಉಳಿಸಲು ಸಾಧ್ಯವಾಗುವುದಿಲ್ಲ.

೨

ವಚನಕಾರರಾಗಲೀ, ಕೀರ್ತನಕಾರರಾಗಲೀ ಭಕ್ತಿಭಾವ ಪ್ರೇರಿತರಾದವರು. ಆದರೆ ಅಷ್ಟಕ್ಕೇ ನಿಂತವರಲ್ಲ. ಆ ವಲಯವನ್ನು ಪ್ರವೇಶಿಸಬೇಕಾದರೆ ಬದುಕಿನ ಪರಿಶುದ್ಧತೆಯನ್ನು ಕಾಯ್ದುಕೊಳ್ಳುವುದು ಮುಖ್ಯ ಎಂದು ಸಾರಿದವರು. ಆ ಕಡೆಗೆ ಹೆಚ್ಚು ಒತ್ತುಕೊಟ್ಟವರು. ಹಾಗಾಗಿ ಮೊದಲು ಸಮಾಜದ ನಾನಾ ಬಗೆಯ ನಾನಾ ವರ್ಗದ ಜನರ ಸಣ್ಣತನಗಳನ್ನು ಎತ್ತಿತೋರಿ ಬಯಲಿಗೆಳೆದು ಅವುಗಳನ್ನು ದೂರ ಮಾಡಲು ಪ್ರಚೋದಿಸಿದವರು ಇವರುಗಳು. ಆ ಕಾರಣದಿಂದಾಗಿ ಇವರುಗಳ ಈ ಬಗೆಯ ರಚನೆಗಳಲ್ಲಿ ಸಾಮಾಜಿಕ ಪ್ರಜ್ಞೆ ದಟ್ಟವಾಗಿ ಹೊರಹೊಮ್ಮಿರುವುದನ್ನು ಕಾಣಬಹುದು.

ದಾಸ ಪರಂಪರೆಯಲ್ಲಿ ಕನಕದಾಸರು ಸಮಾಜದ ಕೆಳಗಿನ ಸ್ತರದಿಂದ ಬಂದವರು, ಅವರು ಆ ವಲಯವನ್ನು ಪ್ರವೇಶಿಸಿ, ಉಳಿದು ಕೀರ್ತಿಗಳಿಸಲು ಬಹಳ ಹೋರಾಟವನ್ನೇ ನಡೆಸಬೇಕಾಯಿತು. ಮೇಲ್ವರ್ಗದ ಒಬ್ಬ ವ್ಯಕ್ತಿ ಅಲ್ಲಿಯೇ ನಿಂತು ಈ ಕೆಳವರ್ಗದ ಆಗುಹೋಗುಗಳನ್ನು ಗಮನಿಸುವುದಕ್ಕೂ, ಅಲ್ಲಿಂದಲೇ ಮೇಲೇರಿ ಬಂದು ಮತ್ತೆ ಅದನ್ನು ನೋಡುವುದಕ್ಕೂ ಸಾಕಷ್ಟು ವ್ಯತ್ಯಾಸವಿರುತ್ತದೆ. ಕನಕದಾಸರು ಹಾಗೆ ಈ ಸಮಾಜವನ್ನು ನೋಡಿ ವಿಶಿಷ್ಟಾನುಭವಕ್ಕೆ

ಒಳಗಾದವರು. ಅಲ್ಲಲ್ಲಿಯ ನೆಲೆಬೆಲೆಗಳನ್ನು ಚೆನ್ನಾಗಿ ಅರಿತವರು. ಅವರ ಕೀರ್ತನೆಗಳಲ್ಲಿ ಅಂದಿನ ಸಮಾಜದ ಕೆಲವೊಂದು ಕೆಟ್ಟ ಪದ್ಧತಿಗಳನ್ನು ಕಿತ್ತೊಗೆಯುವ ಮನೋಧರ್ಮವಿದೆ. ಕೆಲವೊಂದು ಬರಡು ಭ್ರಮೆಗಳಿಂದ ಬಳಲುತ್ತಿದ್ದವರನ್ನು ತಿದ್ದುವ ಪ್ರಯತ್ನವಿದೆ, ನಿಜವಾದ ಧರ್ಮ ಯಾವುದು, ಸತ್ಯ ಯಾವುದು ಎಂಬುದನ್ನು ತೋರಿಸಿಕೊಡುವ ಋಜು ಮಾರ್ಗವಿದೆ. ಅವರು ತಮ್ಮ ಒಂದು ಕೀರ್ತನೆಯಲ್ಲಿ ಇಡೀ ಸಮಾಜದ ವಿವಿಧ ವರ್ಗದ, ವಿವಿಧ ಬಗೆಯ ಜನರನ್ನು ಪಟ್ಟಿ ಮಾಡಿದಂತೆ "ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ" ಎಂದು ಹೇಳುವಲ್ಲಿ ವಾಸ್ತವಿಕ ಸತ್ಯವನ್ನು ನಿರ್ಭಯವಾಗಿ ಹೇಳಿದ್ದಾರೆ. "ವೇದಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ ಬೋಧನೆಯ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಬೋಧನೆ ಮಾಡುವವರಿಂದಲೇ ಜಾತಿ ಮತಗಳ ಭೇದಭಾವ ಕಂಡು ಬಂದಾಗ ಅವರು ಅದನ್ನು ಕಟುವಾಗಿಯೇ ಟೀಕಿಸಿದ್ದಾರೆ. ಹೇಳುವುದೊಂದು, ಮಾಡುವುದೊಂದು ಆಗಬಾರದು, ನಿಜವಾದ ಸತ್ಯವನ್ನು ಶೋಧಿಸುವ ಕೆಲಸವನ್ನು ಮಾಡುವಂತೆ ಘೋಷಿಸಿದ್ದಾರೆ :

> ಕುಲಕುಲವೆನ್ನುತಿಹರು
> ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ
> ಕೆಸರೊಳು ತಾವರೆ ಪುಟ್ಟಲು ಅದ ತಂದು
> ಬಿಸಿಜನಾಭನಿಗರ್ಪಿಸಲಿಲ್ಲವೆ
> ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ
> ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ
> ಆತ್ಮಯಾವ ಕುಲ ಜೀವ ಯಾವಕುಲ
> ತತ್ವೇಂದ್ರಿಯಗಳ ಕುಲ ಪೇಳಿರಯ್ಯ
> ಆತ್ಮಾಂತರಾತ್ಮ ನೆಲೆಯಾದಿಕೇಶವನೊಲಿದ
> ಆತನೊಲಿದ ಮೇಲೆ ಯಾತರ ಕುಲವಯ್ಯಾ ॥

ಕನಕದಾಸರಲ್ಲಿ ಪೂರ್ವಾಪರ ಯೋಚಿಸುವ ಶಕ್ತಿಯಿದೆ. ತಾರ್ಕಿಕವಾಗಿ ವಿವೇಚಿಸಿ ತೀರ್ಮಾನಿಸುವ ಸಂಕಲ್ಪವಿದೆ. ಅದರಲ್ಲಿಯೂ ದೊಡ್ಡಭಕ್ತನೆನಿಸಿ ಮೆರೆಯುವಲ್ಲಿ ದೇವರ ಪ್ರತಿನಿಧಿಯೆಂಬಂತೆ ವರ್ತಿಸುವವರಲ್ಲಿ ಕಂಡು ಬರುವ ಕೀಳುತನದ ಬಗೆಗೆ ಅವರಿಗೆ ಅಷ್ಟೇ ತುಚ್ಛಭಾವನೆ ಇದೆ. ಎಲ್ಲವನ್ನು ತಿಳಿದವರು ಎಂದು ಹೇಳಿಕೊಳ್ಳುವ ಜ್ಞಾನಿಗಳು ಕೆಲವೊಂದು ಮೂಲಭೂತ ವಿಚಾರಗಳ

ಬಗ್ಗೆ ಅಜ್ಞಾನಿಗಳಾಗಿ ವರ್ತಿಸುವುದನ್ನು ಕಂಡಾಗ ಅವರು ಸಿಡಿದೇಳುತ್ತಾರೆ. ಮೇಲಿನಂತೆ ಪ್ರಶ್ನೆಗಳ ಮಳೆಗರೆಯುತ್ತಾರೆ. ಜಾತಿ ಮತಗಳ ತಿಕ್ಕಾಟವನ್ನು ಪ್ರಬಲವಾಗಿ ಮೇಲಿಂದ ಮೇಲೆ ಖಂಡಿಸುವುದನ್ನು ಕಂಡಾಗ, ಕನಕದಾಸರು ಅವರಿಂದ ಎಷ್ಟು ನೊಂದಿದ್ದಾರೆ ಎಂಬುದೂ ಸ್ಪಷ್ಟವಾಗುತ್ತದೆ. ಇಂತಹ ತುಳಿತಕ್ಕೆ ಒಳಗಾದರೂ ಲೆಕ್ಕಿಸದೆ. "ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಿ ಕೊಳ್ಳಬೇಡಿ ಹುಚ್ಚಪ್ಪಗಳಿರಾ" ಎಂದು ಅವರಿಗೆ ಎಚ್ಚರಿಕೆ ನೀಡಿ, "ಸತ್ಯವಂತರ ಮನುಜ ಸೇವೆಯು ರಂಗಯ್ಯ ಇನ್ನು । ಮನುಜ ಸೇವೆ ಮಾಡಿ ದಣಿದು ನೊಂದೆ ನಾನು" ಎಂದು ಹೇಳುವಲ್ಲಿ ಸಮಾಜ ಸುಧಾರಣೆಯಲ್ಲಿ ಕಂಡ ಕಹಿಯ ಅನುಭವದ ಪರಾಕಾಷ್ಠತೆ ವ್ಯಕ್ತವಾದರೂ "ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು । ಪದುಮನಾಭನ ಪಾದದೊಲುಮೆ ಎನಗಾಯಿತು ।" ಎಂಬಲ್ಲಿ ತೃಪ್ತಿಗೊಂಡ ಅವರ ಬದುಕು ಸಾಫಲ್ಯವನ್ನೇ ಕಂಡಿದೆ.

ಯಾವುದೇ ಪಂಥಕ್ಕೆ ಸಿಲುಕದ ಕನಕದಾಸರು, ಸಮಗ್ರ ಮಾನವ ಜೀವನದ ಏಳಿಗೆಗಾಗಿ ಹಾತೊರೆದವರು. ಅವರ ಅಂತಿಮ ಗುರಿ "ಪದುಮನಾಭನ ಪಾದದೊಲುಮೆ"ಯೇ ಆದರೂ, ಕನಕದಾಸರು ಮೂಲಭೂತವಾಗಿ ಸಮಾಜ ಸುಧಾರಣೆಯತ್ತ ಗಮನ ಹರಿಸಿದವರು. ತಮ್ಮ ಉದಾತ್ತ ವ್ಯಕ್ತಿತ್ವದಿಂದ ಅಧಿಕಾರಯುತವಾಗಿ ಕರೆನೀಡಿದವರು. ಸಮಾಜದಲ್ಲಿ ಸಮಾನತೆಯನ್ನು ತರಲು ಹಾತೊರೆಯುತ್ತಿದ್ದ ಅವರ ಮನದ ಅಳಲು ಅವರ ಎಲ್ಲ ಕೃತಿಗಳಲ್ಲಿಯೂ ವ್ಯಕ್ತಗೊಂಡಿರುವುದನ್ನು ಕಾಣಬಹುದು.

ಕನಕದಾಸರ ಕೀರ್ತನೆಗಳಲ್ಲಿ ಭಕ್ತಿಭಾವ, ಸಮಾಜ ಸುಧಾರಣೆ ಹಾಗೂ ವ್ಯಕ್ತಿತ್ವ ನಿರ್ಮಾಣಕ್ಕೆ ಅಗತ್ಯವಾದ ಅಂಶಗಳು ಘನೀಭೂತವಾಗಿ ವ್ಯಕ್ತಗೊಂಡಿದ್ದರೆ; ಅವರ 'ಹರಿಭಕ್ತಿಸಾರ'–ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಪರಿಣಾಮಕಾರಿಯಾಗಿ ಸಾರುವ ವೈಶಿಷ್ಟ್ಯಪೂರ್ಣವಾದ ಕೃತಿ, 'ರಕ್ಷಿಸು ನಮ್ಮನನವರತ' ಎಂಬ ಮುಕ್ತಾಯದಿಂದ ಕೂಡಿದ ನೂರ ಹತ್ತು ಭಾಮಿನಿ ಷಟ್ಪದಿಗಳನ್ನುಳ್ಳ ಈ ಕಿರುಕೃತಿ ಅಪೂರ್ವ ರೀತಿಯದು. 'ಹರಿಭಕ್ತಿಸಾರ'–ಹೆಸರೇ ಸೂಚಿಸುವಂತೆ ಭಕ್ತಿರಸ ತೊಟ್ಟಿಕ್ಕುವಂತಿದೆ. 'ಹರಿಭಕ್ತಿಸಾರದ ಚರಿತೆಯನ್ನು ಹರಿಭಕ್ತರಾಲಿಸುವಂತೆ ರಚಿಸುವೆ' ಎಂದು ಹೇಳುವಲ್ಲಿಯೇ ಅದರ ಉದ್ದೇಶ ಸ್ಪಷ್ಟವಾಗುತ್ತದೆಯಾದರೂ, ಕನಕದಾಸರು ಅಲ್ಲಿ ತಮ್ಮ ಅಂತರಂಗವನ್ನು ಬಿಚ್ಚಿ ಹೇಳಿರುವ ರೀತಿ ವಿಶಿಷ್ಟವಾದುದು. ಭಕ್ತ ಹೃದಯದ ಸಮರ್ಪಣ ಭಾವ ಹೃದಯಸ್ಪರ್ಶಿಯಾಗಿ ಒಂದೊಂದು ಪದ್ಯದಲ್ಲಿಯೂ ಗರಿಗೆದರಿದೆ : "ದೀನ ನಾನು ಸಮಸ್ತ ಲೋಕಕೆ

ದಾನಿ ನೀನು, ವಿಚಾರಿಸಲು ಮತಿಹೀನ ನಾನು, ನೆರೆ ಸುಜ್ಞಾನ ಮೂರುತಿ ನೀನು, ನಿನ್ನ ಸಮಾನರುಂಟೇ ದೇವ, ರಕ್ಷಿಸು ನಮ್ಮನನವರತ" ಎಂಬಂಥ ಪದ್ಯಗಳಲ್ಲಿನ ದೈನ್ಯ–ಭಕ್ತ ಭಗವಂತನ ನಡುವಣ ಮಧುರ ಸಂಬಂಧದ ದ್ಯೋತಕವಾಗಿದೆ. ಮನಕರಗುವಂತೆ ಕರುಣಾಪೂರ್ಣವಾಗಿ ಕಿವಿಗೆ ಬೀಳುವ ಆ ನುಡಿಗಳಲ್ಲಿ ಕಾವ್ಯತ್ವ ಕೆಲಸ ಮಾಡಿರುವುದನ್ನು, ಅದರೊಂದಿಗೆ ಕನಕದಾಸರ ಸಹಜವಾದ ಕವಿ ಪ್ರತಿಭೆ ವ್ಯಕ್ತಗೊಂಡಿರುವುದನ್ನು ಗುರುತಿಸಬಹುದಾಗಿದೆ.

'ಕೀರ್ತನೆಗಳು' ಹಾಗೂ 'ಹರಿಭಕ್ತಿಸಾರ' ಕನಕದಾಸರನ್ನು ದಾಸಪಂಥದಲ್ಲಿಯ ಭಕ್ತಿಸಾಗರದಲ್ಲಿ ಸ್ಥಾಯಿಯಾಗಿಸಿದರೆ, ಅವರ 'ಮೋಹನ ತರಂಗಿಣಿ' 'ನಳಚರಿತ್ರೆ' ಹಾಗೂ 'ರಾಮಧಾನ್ಯ ಚರಿತೆ' ಈ ಮೂರು ಕೃತಿಗಳು ಕನಕದಾಸರನ್ನು ಕವಿಯಾಗಿಸಿ ಕನ್ನಡ ಕವಿಗಳ ಸಾಲಿನಲ್ಲಿ ನೆಲೆಯೂರಿಸಿವೆ. ಇವುಗಳಲ್ಲಿ 'ಮೋಹನ ತರಂಗಿಣಿ' ಹಾಗೂ 'ನಳಚರಿತೆ' ಒಂದು ಚೌಕಟ್ಟಿನಲ್ಲಿ ನಿಲ್ಲುವ ಕೃತಿಗಳಾದರೆ, 'ರಾಮಧಾನ್ಯ ಚರಿತೆ' ಇವುಗಳಿಂದ ಭಿನ್ನವಾಗಿ ನಿಲ್ಲುವ ಕೃತಿ.

ಒಂದರ್ಥದಲ್ಲಿ 'ಮೋಹನ ತರಂಗಿಣಿ' ಹಾಗೂ 'ನಳಚರಿತ್ರೆ'–ಇವೆರಡೂ ಪ್ರೇಮಕಥೆಗಳು. ಶೃಂಗಾರ ಮೂಲವಾದ ಕಾವ್ಯಗಳು. ಭಕ್ತಪ್ರತಿಪಾದನೆಯ ಉದ್ದೇಶವಾಗಲೀ ಗುರಿಯಾಗಲಿ ಅದರ ಸುಳಿವಾಗಲಿ ಅಲ್ಲಿಲ್ಲ. ಭಕ್ತಿಭಾವವೇ ಮೈವೆತ್ತಂತೆ ಹೊರಬಂದಿರುವ 'ಹರಿಭಕ್ತಿಸಾರ' ಹಾಗೂ ಕೀರ್ತನೆಗಳ ಕರ್ತೃವಿನಿಂದಲೇ ಹೊರಬಂದಿರುವ ಈ ಕಾವ್ಯಗಳನ್ನು ಗಮನಿಸಿದಾಗ ಕವಿಯೊಬ್ಬನ ವಿಶಿಷ್ಟ ವ್ಯಕ್ತಿತ್ವದ ಅರಿವಾಗಿ ಆಶ್ಚರ್ಯಕ್ಕೂ ಕಾರಣವಾಗುತ್ತದೆ. 'ನೆಚ್ಚದಿರು ಸಂಸಾರ ನೆಲೆಯಲ್ಲವೀಕಾಯ' ಎಂದು ಹೇಳಿದ ಕನಕದಾಸರೇ 'ಮೋಹನ ತರಂಗಿಣಿ'ಯಲ್ಲಿ "ನುಣ್ಮೊಲೆಯ ಸ್ಥಳದಲ್ಲಿ ಮೊಗವಿಟ್ಟು ಮುಂಡಾಡಿ ಸೊಗ ಮೈಯೊಳಳವಟ್ಟು ಸಾವುದಚ್ಚರಿಯೆ" ಎಂದು ಬಣ್ಣಿಸುತ್ತಾರೆ.

ಕನಕದಾಸರಲ್ಲಿಯ ಶೃಂಗಾರಪ್ರಿಯತೆಯನ್ನು ಅವರ ಸಹಜ ಕವಿತ್ವವನ್ನು ತೋರಲು ಇದೊಂದೇ ಉದಾಹರಣೆ ಸಾಕೆನಿಸುತ್ತದೆ. ಶೃಂಗಾರದ ಕಾವ್ಯವೊಂದನ್ನು ರಸವತ್ತಾಗಿ ಬರೆಯುವ ಅವರ ಕವಿ ಹೃದಯಕ್ಕೆ ಭಕ್ತಿ ಭಾವ ಎಲ್ಲಿಯೂ ಅಡ್ಡಬಂದಿಲ್ಲ, ಅಡ್ಡಿಯಾಗಿಲ್ಲ. ಬಹಳ ತೆಳುವಾಗಿ ಬರುವ ಭಕ್ತಿಭಾವವನ್ನು ಮರೆಮಾಚಿ ಇಲ್ಲಿಯ ಶೃಂಗಾರ ಭಾವ ಮೆರೆದಿದೆ. ಇಲ್ಲಿ ಬರುವ ಕೃಷ್ಣ–ರುಕ್ಮಿಣಿ, ರತಿ–ಮನ್ಮಥ, ಉಷಾ–ಅನಿರುದ್ಧರ ಪ್ರೇಮಕಥೆಯ ಮೂಲಕ ಕವಿ ಕನಕದಾಸರು ಸಂತ–ಕೀರ್ತನಕಾರರೆಂಬುದನ್ನು ಸಂಪೂರ್ಣವಾಗಿ

ಮರೆತಿದ್ದಾರೆ ; ಕವಿಯಾಗಿ ಮೆರೆದಿದ್ದಾರೆ. 'ಮೋಹನ ತರಂಗಿಣಿ'ಯಲ್ಲಿ ಕನಕದಾಸರ ಕವಿಪ್ರಜ್ಞೆ ಎಲ್ಲಿಯವರೆಗೆ ವಿಸ್ತರಿಸಿದೆಯೆಂದರೆ, ಮಹಾಕಾವ್ಯದ ಹದಿನೆಂಟು ವರ್ಣನೆಗಳ ಗಂಟಿನಲ್ಲಿ ಸಿಕ್ಕಿಹಾಕಿಕೊಳ್ಳುವಷ್ಟು ಪ್ರಬಲವಾಗಿ ಅದು ಎಚ್ಚರಗೊಂಡಿದೆ. ಹಾಗಾಗಿ ಮೋಹನ ತರಂಗಿಣಿ ಪೌರಾಣಿಕ ವಸ್ತುವನ್ನೊಳಗೊಂಡ ಶೃಂಗಾರ ಕಾವ್ಯವಾಗಿ ಪ್ರಾಚೀನ ಕಾವ್ಯ ಪರಂಪರೆಯಲ್ಲಿ ನಡೆದು ಬಂದರೂ ಇದರ ವೈಶಿಷ್ಟ್ಯ ಉಳಿದಿರುವುದು, ಅಲ್ಲಿಯೂ ಸಮಕಾಲೀನ ಸಮಾಜದ ಸಹಜತೆಯನ್ನು ಸೆರೆಹಿಡಿದಿಡುವಲ್ಲಿ, ವಿಜಯನಗರ ಕಾಲದ ವೈಭವದ ಚಿತ್ರ ಕವಿ ಕನಕದಾಸರಿಂದ ಅದ್ಭುತವಾಗಿ ಮೂಡಿಬಂದಿದೆ. ಕವಿಯ ಸಮಕಾಲೀನ ಪ್ರಜ್ಞೆಗೆ ಅದು ಸಾಕ್ಷಿಯಂತಿದೆ. ವಿಷಯವನ್ನು ಒಟ್ಟುಗೂಡಿಸುವಲ್ಲಿ, ವಿಚಾರವನ್ನು ಪ್ರತಿಪಾದಿಸುವಲ್ಲಿ ಕನಕದಾಸರು ತೋರುವ ಜಾಣ್ಮೆ–ಪ್ರತಿಭೆ ವಿಶಿಷ್ಟವಾದುದು. 'ಮೋಹನ ತರಂಗಿಣಿ'ಯಲ್ಲಿ ಒಬ್ಬ ನಾಯಕ–ನಾಯಕಿಯನ್ನು ನಿರ್ದಿಷ್ಟವಾಗಿ ಗುರುತಿಸಲಾಗದೆ ಹೋದರೂ, ನವರಸಭರಿತವಾಗಿ, ಅಷ್ಟಾದಶವರ್ಣನೆಗಳಿಂದ ಪ್ರೇರಿತವಾಗಿಸಿ ಮಹಾಕಾವ್ಯದ ಚೌಕಟ್ಟಿಗೆ ತರಲೆಳಸಿದ ಕವಿ ಕನಕದಾಸರ ಪ್ರಯತ್ನ ಪೂರ್ಣ ಯಶಸ್ಸನ್ನು ಹೊಂದದೇ ಹೋದರೂ, ಅದು ರಸಭರಿತ ಶೃಂಗಾರಕಾವ್ಯವಾಗಿ ಕವಿಯೇ ಹೇಳಿಕೊಂಡಿರುವಂತೆ 'ಜೇನು ತುಪ್ಪದ ತೊರೆ' ಯಾಗಿ ಹೃದಯವನ್ನು ಗೆಲ್ಲಬಲ್ಲ ಕಾವ್ಯ.

'ಮೋಹನ ತರಂಗಿಣಿ'ಯಲ್ಲಿ ಕನಕದಾಸರ ಕವಿಪ್ರಜ್ಞೆ ಹೆಚ್ಚು ಎಚ್ಚರಗೊಂಡು ಕೆಲಸ ಮಾಡಿದಂತೆ ಕಂಡು ಬಂದರೆ ; 'ನಳಚರಿತ್ರೆ'ಯಲ್ಲಿ ಅದು ಗುಪ್ತವಾಗಿ ಪುಷ್ಪದೊಳಗಿನ ಸುಗಂಧದಂತೆ ಕಂಪಾಗಿ–ತಂಪಾಗಿ ಹರಡಿದೆ. ಎರಡು ಕಾವ್ಯಕೃತಿಗಳ ವಸ್ತುವೂ ಪ್ರೇಮಪ್ರೇರಿತವಾದುದೇ ಆದರೂ, ಮೋಹನ ತರಂಗಿಣಿಯ ಪ್ರೇಮ–ಶೃಂಗಾರ 'ನಳಚರಿತ್ರೆ'ಯಲ್ಲಿ ಸಂಯಮವನ್ನು ಸಾಧಿಸಿದೆ. ಅಲ್ಲಿ ಭೋಗ ಲಾಲಸೆಯಿಂದ ಕೂಡಿದ ಪ್ರೇಮ, ಇಲ್ಲಿ ತ್ಯಾಗಲಾಲಸೆಯಲ್ಲಿ ಪಕ್ವಗೊಂಡಂತೆ ಪರಿಪೂರ್ಣಗೊಂಡಿದೆ. ನಳದಮಯಂತಿಯರ ಪ್ರೇಮ ಅಮರ ಪ್ರೇಮವಾಗಿ ಅರಳಿರುವುದನ್ನು ಈ ಕೃತಿಯ ಉದ್ದಕ್ಕೂ ಕಾಣಬಹುದು. ಎಲ್ಲಿಯೂ ಅಪಸ್ವರ ಕೇಳಿ ಬರದೆ ನೈಜ ಪ್ರೇಮದ ಕಥೆಯಾಗಿ 'ನಳಚರಿತ್ರೆ' ಮನಸೆಳೆಯುತ್ತದೆ. ಅವರ ಪ್ರೀತಿ ಹಲವು ಸಂಕಷ್ಟಗಳ ನಡುವೆ ಸಿಕ್ಕಿದರೂ ಎಲ್ಲಿಯೂ ಸ್ವಲ್ಪವೂ ಕುಂದದೆ, ಕಲುಷಿತವಾಗಿದೆ. ಇನ್ನೂ ಇಮ್ಮಡಿಯಾಗುತ್ತಾ ಹೋಗುವುದು ಇಲ್ಲಿಯ ವೈಶಿಷ್ಟ್ಯವಾಗಿದೆ. ಒಂದೊಂದು ಪರೀಕ್ಷೆಗೆ ಒಳಗಾದಂತೆಲ್ಲಾ ಪುಟವಿಟ್ಟ ಚಿನ್ನದಂತೆ ಪರಿಶುದ್ಧವಾಗುತ್ತಾ ಹೋಗುವುದು

ಇಲ್ಲಿಯ ಪ್ರೇಮದ ಅಪೂರ್ವತೆ ಎನ್ನಬಹುದು. ಆ ದೃಷ್ಟಿಯಿಂದ ನೋಡುವಾಗ 'ಮೋಹನ ತರಂಗಿಣಿ' ಶೃಂಗಾರಮೂಲವಾದ ಪ್ರೇಮಕಥೆಯಾದರೆ, 'ನಳಚರಿತ್ರೆ' ಅಮರ ಪ್ರೇಮದ ಸ್ವಾರ್ಥ ರಹಿತವಾದ ಅಪೂರ್ವ ಕಥೆ.

ಕನಕದಾಸರು ಈ ಎರಡೂ ಕಾವ್ಯಗಳನ್ನು ನಿರ್ವಹಿಸಿರುವ ರೀತಿ ವಿಶಿಷ್ಟವಾದುದು. ಸಂಸಾರಿಯಾಗಿ, ಯೋಧನಾಗಿ, ಸಂತನಾದ ಕವಿ ಕನಕದಾಸರ ಜೀವನಾನುಭವ ವಿಶಿಷ್ಟ ಅದರಂತೆಯೇ ಅವರ ಕಾವ್ಯ ಕೂಡ. ಆಧ್ಯಾತ್ಮದ ತುತ್ತತುದಿಯನ್ನೇರಿದಂತೆಯೇ ಶೃಂಗಾರದ ರಸಘಳಿಗೆಗಳನ್ನು ಕಾವ್ಯವಾಗಿಸುವ ಅವರ ಪ್ರತಿಭೆ ಉಜ್ವಲವಾದುದು. ತ್ಯಾಗ–ಭೋಗಗಳ ಸಮನ್ವಯ ದೃಷ್ಟಿ ಕವಿ ಕನಕದಾಸರ ಕಾವ್ಯಪ್ರತಿಭೆಯಲ್ಲಿ ವ್ಯಕ್ತವಾಗುತ್ತದೆ. ಇದು ಕನ್ನಡ ಕವಿ ಪರಂಪರೆಯಲ್ಲಿ ಅಪರೂಪವಾದುದು. ಇವೆರಡನ್ನೂ ಒಬ್ಬನೇ ಕವಿ–ಅದೂ ಭಕ್ತ ಹಾಗೂ ಸಂತ ಕವಿ ಅಷ್ಟೇ ಸಮರ್ಥವಾಗಿ ಎರಡನ್ನೂ ನಿರ್ವಹಿಸಿರುವುದು ಕನಕದಾಸರ ಅಪ್ರತಿಮ ಕವಿ ಪ್ರತಿಭೆಗೆ ಸಾಕ್ಷಿಯಾಗಿದೆ. ವ್ಯಕ್ತಿಚಿತ್ರವನ್ನಾಗಲಿ ಪ್ರಕೃತಿ ಚಿತ್ರವನ್ನಾಗಲಿ ಅಥವಾ ಸನ್ನಿವೇಶ ಚಿತ್ರವನ್ನಾಗಲಿ ಹದವರಿತು ಚಿತ್ರಿಸಬಲ್ಲ ಕಲೆಗಾರಿಕೆ ಕನಕದಾಸರಿಗೆ ಸಿದ್ಧಿಸಿದುದಾಗಿದೆ. ಅಂತಹ ಒಂದೆರಡನ್ನಿಲ್ಲಿ ಗಮನಿಸಬಹುದು. ವಿವಾಹ ಮಂಟಪಕ್ಕೆ ಬರುವ ದಮಯಂತಿಯ ರೂಪವನ್ನು ಕವಿ ಹೀಗೆ ಚಿತ್ರಿಸುತ್ತಾನೆ :

ಕುಡಿತೆಗಂಗಳ ಸಿರಿಮುಡಿಯ ಬಡ
ನಡುವ ಸೆಳವತಿಬೆಡಗಿನಲಿ ಹೊಂ
ಗೊಡ ಮೊಲೆಯ ವೈಯ್ಯಾರದುಡುಗೆಯ ಸಿರಿಯ ಸಡಗರದ
ತೊಡರ ಝಣಝಣರವದ ಮೆಲ್ಲಡಿ
ಯಿಡುವ ಗಮನದ ಭರದಿ ಕಿರುಬೆಮ
ರಿಡುತ ಬಂದಳು ಸಖಿಯರೊಡನೆ ವಿವಾಹ ಮಂಟಪಕೆ ॥

ಹೆಣ್ಣಿನ ಅದ್ಭುತ ಶೃಂಗಾರವನ್ನೂ ರಸಿಕ ಕವಿಯಾಗಿ ವರ್ಣಿಸಬಲ್ಲ ಕನಕದಾಸರು ನಳನ ವಿಕಾರ ರೂಪವನ್ನು ಚಿತ್ರಿಸುವಲ್ಲಿಯೂ ಅಷ್ಟೇ ಅದ್ಭುತವನ್ನು ಮೆರೆದಿದ್ದಾರೆ :

ದೊಡ್ಡ ಹೊಟ್ಟೆಯ ಗೂನುಬೆನ್ನಿನ
ಅಡ್ಡಮೋರೆಯ ಗಂಟು ಮೂಗಿನ
ದೊಡ್ಡ ಕೈಕಾಲುಗಳ ವುದುರಿದ ರೋಮ ಮೀಸೆಗಳ
ಜಿಡ್ಡು ದೇಹದ ಗುಜ್ಜುಗೊರಲಿನ

ಗಿಡ್ಡರೂಪಿನ ಹರುಕು ಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥

'ಮಾರನಾಕಾರದ ನೃಪಾಲಕ ಕ್ರೂರರೂಪಾದನು.' ಕನಕದಾಸರು ಚಿತ್ರಿಸಿರುವ ಇಂತಹ ಒಂದೊಂದು ಚಿತ್ರವೂ ಭವ್ಯಾದ್ಭುತವಾದುದು. ಕ್ಲಿಷ್ಟತೆಯ ಸೋಂಕಿಲ್ಲದೆ ಸರಳತೆಯಲ್ಲಿಯೇ ಸಾರ್ಥಕತೆಯನ್ನು ತಂದುಕೊಡುವ ಕವಿಯ ಕೈ ಚಳಕ ಬೆರಗುಗೊಳಿಸುವಂತಹುದು. ಕನಕದಾಸರ ಕಾವ್ಯದ ಹಾಗೂ ಜನಪ್ರಿಯತೆಯ ಗುಟ್ಟು ಅದೇ ಆಗಿದೆ. ಕನ್ನಡ ಕಾವ್ಯಗಳ ಸಾಲಿನಲ್ಲಿ 'ನಳಚರಿತ್ರೆ'ಗೆ ಒಂದು ವಿಶಿಷ್ಟ ಸ್ಥಾನವಿದೆ. ಜನಪ್ರಿಯತೆಯ ದೃಷ್ಟಿಯಿಂದ ಇಂತಹ ಕೃತಿಗಳ ಸಂಖ್ಯೆ ತೀರ ವಿರಳ. ಕನಕದಾಸರ ಕಾವ್ಯ ಶಕ್ತಿ–ಪ್ರತಿಭೆ ಇಲ್ಲಿ ಮಯೂರ ನರ್ತನದಂತೆ ಗರಿಗೆದರಿ ಸಹಜವಾಗಿ ಮೈದೆರೆದುಕೊಂಡಿದೆ, ಅದರಂತೆಯೇ ಮೋಹಕವಾಗಿ ಮನ ಸೆಳೆಯುವ ಮೋಹಕಾಸ್ತ್ರವಾಗಿಯೂ ಹೊರಚಿಮ್ಮಿದೆ.

ಕನಕದಾಸರು 'ರಾಮಧಾನ್ಯಚರಿತೆ'ಯ ಮೂಲಕ ತೋರಿರುವ ವೈಶಿಷ್ಟ್ಯ ಅವರನ್ನು ಮತ್ತಷ್ಟು ಮೇಲಕ್ಕೆತ್ತಿದೆ. ಇದು ಒಂದು ಚಮತ್ಕಾರದ ಕಾಲ್ಪನಿಕ ವಸ್ತುವನ್ನೊಳಗೊಂಡ ಕೃತಿಯಾದರೂ, ಕನಕದಾಸರು ಮುಖ್ಯವಾಗಿ ಆ ಮೂಲಕ ಹೇಳ ಹೊರಟಿರುವ ಸಂದೇಶ ಮತ್ತು ಉದ್ದೇಶ ಸ್ಪಷ್ಟವಾದುದು. ರಾಗಿ ಮತ್ತು ಭತ್ತಗಳ ನಡುವೆ ಉಂಟಾಗುವ ಜಗಳ, ವಾಸ್ತವವಾಗಿ ಮೇಲು–ಕೀಳು ಎಂಬ ಭಾವನೆಯ ಹಿನ್ನೆಲೆಯನ್ನು ಪ್ರತಿನಿಧಿಸುವಂತಹುದೇ ಆಗಿದೆ. ರಾಘವನಿಗೂ, ರಾಗಿಗೂ ಸಂಬಂಧವನ್ನು ಕಲ್ಪಿಸುವುದರ ಮೂಲಕ ರಾಗಿಯ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವ ಪ್ರಯತ್ನವಾಗಲಿ ಮಹಾಭಾರತ ಪುರಾಣಗಳ ಹಿನ್ನೆಲೆಯನ್ನೊದಗಿಸುವುದರ ಮೂಲಕ ಅದರ ಗಾಂಭೀರ್ಯವನ್ನು ಹೆಚ್ಚಿಸುವ ಪ್ರಯತ್ನವಾಗಲಿ ಅಷ್ಟೊಂದು ಪರಿಣಾಮವೆನಿಸದಿದ್ದರೂ, ಕನಕದಾಸರ ಮೂಲೋದ್ದೇಶ ಅಲ್ಲಿ ಸ್ಪಷ್ಟವಾಗಿ ಅಭಿವ್ಯಕ್ತಿಗೊಂಡಿದೆ. ಇಲ್ಲಿ ಬರುವ ಪಾತ್ರಗಳು–ಕಾಡುಪ್ರಾಣಿಗಳಾಗಲಿ, ಊರು ಪ್ರಾಣಿಗಳಾಗಲಿ ಅಥವಾ ಮಾನವ ಪ್ರಾಣಿಗಳಾಗಲಿ ಆಗಿರದೆ ಧಾನ್ಯಗಳಾಗಿರುವುದು ಗಮನಾರ್ಹ. ಬಹುಶಃ ಇದೊಂದು ಅಪರೂಪದ ಅಪೂರ್ವ ಸಂಗತಿ ಎನ್ನಬಹುದು. ಕನಕದಾಸರ ಅಸಾಧಾರಣ ಕಲ್ಪನಾ ಪ್ರತಿಭೆಯ ಫಲವೇ 'ಶ್ರೀರಾಮಧಾನ್ಯಚರಿತೆ.' ಅಂದೂ (ಇಂದೂ) ಸಮಾಜದಲ್ಲಿ ತಾಂಡವವಾಡುತ್ತಿದ್ದ ಮೇಲು–ಕೀಳೆಂಬ ಭಾವನೆಯಿಂದ ಹದಗೆಟ್ಟ ಸಮಾಜವನ್ನು ಕಂಡು ನೊಂದ ಕನಕದಾಸರ ಅಂತರಂಗ ಮಿಡಿದ ನಾದವೇ ಈ ಕೃತಿ. ನರದೆಲಗ (ರಾಗಿ) ಮತ್ತು ವ್ರೀಹಿ (ಭತ್ತ) ಇವುಗಳ ನಡುವೆ ನಡೆಯುವ ಜಗಳದಲ್ಲಿ ಅದು ವ್ಯಕ್ತವಾಗಿರುವುದನ್ನು ಕಾಣಬಹುದು.

ಭತ್ತ : ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನ ಪರಮ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿದಿನವು ರಂಜಿಸುವ ದೇವರಿ
ಗತಿಶಯದ ನೈವೇದ್ಯ ತಾನೆಂದನಾ ವ್ರಿಹಿಗ ॥

ರಾಗಿ : ಸತ್ಯಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರು ರೋಗಿಗ
ಪತ್ಯ ನೀನಹೆ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕವೆಂದ ॥

ಅತ್ಯಂತ ಸ್ವಾರಸ್ಯವಾಗಿ ಹೀಗೆ ಮುಂದುವರಿಯುವ ಈ ಜಗಳ ಕೊನೆಗೆ "ದೇವರಿಗೆ ಪರಮಾನ್ನ ನೀ, ಮನುಜಾವಳಿಗೆ ಪಕ್ವಾನ್ನಮೀತನು" ಎಂಬ ತೀರ್ಮಾನದೊಂದಿಗೆ ಮುಕ್ತಾಯವಾಗುವ ಕಾವ್ಯ ಕನಕದಾಸರ ಹೊಸ ಬಗೆಯ ಸೃಷ್ಟಿ. ವಸ್ತು ಬೇರೆಯಾದರು ಅದರ ನಿರ್ವಹಣೆ ಗಂಭೀರ ಕಾವ್ಯದ ನಿರ್ವಹಣೆಯಂತೆಯೇ ಇದೆ. ಇದೊಂದು ಅಣಕು ಮಹಾಕಾವ್ಯವಾಗಿ, ವಿನೋದ ವಿಡಂಬನೆಗಳ ಮೂಲಕ ಸಮಾಜದಲ್ಲಿ ಆಳವಾಗಿ ಬೇರೂರಿದ್ದ ದೊಡ್ಡ ಪಿಡುಗೊಂದನ್ನು ಬುಡಮೇಲು ಮಾಡುವ ಕಾರ್ಯದಲ್ಲಿ ಪಾಲ್ಗೊಂಡಿದೆ. ಇಂತಹ ವಿಷಯುವನ್ನು ಕುರಿತು ಕೀರ್ತನೆಗಳಲ್ಲಿ ಸಾಕಷ್ಟು ಸ್ಪಷ್ಟವಾಗಿಯೇ ಮನದಟ್ಟಾಗಿಸಿದ್ದರೂ, ಕನಕದಾಸರು ಇಲ್ಲಿ ಅದನ್ನು ಮತ್ತೊಂದು ರೀತಿಯಲ್ಲಿ ಪರಿಣಾಮಕಾರಿಯಾಗಿಸುವ ಪ್ರಯತ್ನವೆಸಗಿದ್ದಾರೆ.

ವಚನಸಾಹಿತ್ಯದಲ್ಲಿ ಕಂಡುಬರುವ 'ಬೆಡಗಿನವಚನ'ಗಳಂತೆ ಕನಕದಾಸರು ಕೀರ್ತನೆಗಳ ಸಾಲಿನಲ್ಲಿ ರಚಿಸಿರುವ 'ಮುಂಡಿಗೆ'ಗಳು 'ಕನಕನ ಮುಂಡಿಗೆ' ಗಳೆಂದೇ ಪ್ರಖ್ಯಾತವಾಗಿವೆ. ಅವು ಕನಕದಾಸರ ಮತ್ತೊಂದು ಮುಖವನ್ನು ಪರಿಚಯಿಸುವಲ್ಲಿ ಯಶಸ್ವಿಯಾಗಿವೆ. 'ಕನಕದಾಸರ ಮುಂಡಿಗೆ'ಗಳಲ್ಲಿ ಚಮತ್ಕಾರದ ಜೊತೆಜೊತೆಯಲ್ಲಿಯೇ ಪಾಂಡಿತ್ಯ, ತತ್ವಜ್ಞಾನ, ಆತ್ಮಾನುಭವ ಮುಂತಾದವುಗಳು ಆಕರ್ಷಕವಾದ ರೀತಿಯಲ್ಲಿ ವ್ಯಕ್ತಗೊಂಡಿವೆ. ಉಳಿದವರ ಜಾಣ್ಮೆಯನ್ನು ಪರೀಕ್ಷಿಸುವ ಸವಾಲಾಗಿ ಇವು ಕಂಡು ಬರುತ್ತವೆ.

೩

ಕನಕದಾಸರ ಕೃತಿಗಳ ಸ್ಥೂಲವಾದ ಸಮೀಕ್ಷೆಯ ನಂತರ ಕನ್ನಡ ಕವಿಗಳ ಸಾಲಿನಲ್ಲಿ ಅವರ ಸ್ಥಾನವೇನು ? ಎಂಬುದರ ಒಂದು ವಿವೇಚನೆಯೂ ಅಗತ್ಯವೆನಿಸುತ್ತದೆ. ಇದುವರೆಗೆ ಗಮನಿಸಿದಂತೆ ಕನಕದಾಸರು ವಿಶಿಷ್ಟ ವ್ಯಕ್ತಿತ್ವದ, ಅದ್ಭುತ ಪ್ರತಿಭೆಯ ಕವಿ ಹಾಗೂ ಕೀರ್ತನಕಾರ ; ಅಷ್ಟೇ ಅಲ್ಲ ಸಂಸಾರಿಯಾಗಿದ್ದು, ಸಂತನಾಗಿ, ಜ್ಞಾನಿಯಾಗಿ ಮೆರೆದವನು. ಆ ಹಿನ್ನೆಲೆಯಲ್ಲಿ ಅವನ ಬಗ್ಗೆ ಹುಟ್ಟಿಕೊಂಡಿರುವ ಹಲವು ದಂತಕಥೆಗಳು ಕನಕದಾಸನೊಬ್ಬ ಭಕ್ತಶ್ರೇಷ್ಠ, ಕುಶಲಮತಿಯಾದ ಜ್ಞಾನಿ ಎಂಬುದರ ನಿದರ್ಶನಗಳಾಗಿವೆ. ವಿದ್ವದ್ಗೋಷ್ಠಿಯಲ್ಲಿ ಅವರು ಉತ್ತರಿಸಿದ 'ನಾನು ಹೋದರೆ ಹೋದೇನು' ಪ್ರಸಂಗವಾಗಲಿ, ಬಾಳೇ ಹಣ್ಣಿನ ಪ್ರಸಂಗವಾಗಲಿ, ಅಥವಾ ಶ್ರೀಕೃಷ್ಣದರ್ಶನಕ್ಕೆ ಅರ್ಚಕರಿಂದ ಅಡ್ಡಿಯಾದಾಗ ಅವನಿದ್ದೆಡೆಗೆ ಕಿಂಡಿಯ ಮೂಲಕ ಕೃಷ್ಣನೇ ದರ್ಶನ ಕೊಟ್ಟ ಪ್ರಸಂಗವಾಗಲಿ ಕನಕದಾಸರ ಅಪಾರ ಶಕ್ತಿಯ ಹಾಗೂ ಜ್ಞಾನ ಪ್ರತಿಭೆಗಳ ದ್ಯೋತಕವಾಗಿವೆ. ಬಹುಶಃ ಮಹಾಭಾರತ ಕಥೆಯನ್ನು ಬರೆಯುವಾಗ ಕುಮಾರವ್ಯಾಸ ಒದ್ದೆಯ ವಸ್ತ್ರವನ್ನು ಹೊದೆದು ಗದುಗಿನ ವೀರನಾರಾಯಣನ ಗುಡಿಯಲ್ಲಿ ಕುಳಿತು ಬರೆಯುತ್ತಿದ್ದು, ಆ ವಸ್ತ್ರ ಒಣಗಿದಂತೆ ಅವನ ಕಾವ್ಯ ಪ್ರತಿಭೆಯೂ ಕುಗ್ಗುತ್ತಿತ್ತು ಎಂಬಂಥ ದಂತಕಥೆಯನ್ನು ಬಿಟ್ಟರೆ ಇಷ್ಟೊಂದು ಪ್ರಮಾಣದ ದಂತಕಥೆಗಳು ಒಬ್ಬನೇ ಕವಿಯ ಬಗೆಗೆ ಇದ್ದಂತೆ ಕಾಣುವುದಿಲ್ಲ. ಕನಕದಾಸರು ಒಬ್ಬ ಶೂದ್ರ ಸಂತಕವಿಯಾಗಿ ಮೇಲೆ ಬಂದುದರಿಂದ, ಅವರು ಹೊಕ್ಕ ಹೊಸ ಕ್ಷೇತ್ರದಲ್ಲಿ ಹೋರಾಟ ನಡೆಸಬೇಕಾಗಿ ಬಂದುದರಿಂದ ಈ ಬಗೆಯ ದಂತಕಥೆಗಳಿಗೆ ಅವಕಾಶವಾಗಿರಬೇಕು. ಅಲ್ಲದೆ ಕನಕದಾಸರ ನೈಜ ಭಕ್ತಿ, ಜ್ಞಾನ ಹಾಗೂ ಕುಶಲ–ಮತಿತ್ವಕ್ಕೆ ಹಲವರು ಅಸೂಯೆ ಪಟ್ಟದ್ದು ಇದಕ್ಕೆ ಕಾರಣವಿರಬೇಕು, ಆದರೆ ಕನಕದಾಸರು ಇವೆಲ್ಲಕ್ಕೂ ಕಿವಿಗೊಟ್ಟರೂ, ಮನಗೊಡದೆ ತಮ್ಮ ಕೀರ್ತನೆಗಳ ಮೂಲಕವೇ ಸರಿಯಾಗಿ ಉತ್ತರಿಸಿ ಅವರನ್ನೆಲ್ಲ ತಣ್ಣಗಾಗಿಸಿದ್ದು ಅವರ ಅದ್ಭುತ ಪ್ರತಿಭೆಗೆ ಸಾಕ್ಷಿ. ಕನಕದಾಸರ ಕೀರ್ತನೆಗಳಲ್ಲಿ ಕಂಡುಬರುವ ತೀಕ್ಷ್ಣವಾದ ಅಭಿವ್ಯಕ್ತಿಗೆ ಅವರು ಎದುರಿಸಿದ ಘಟನೆಗಳೇ ಕಾರಣವೆನ್ನಬಹುದು. ಆದರೆ ಉಳಿದ ಕೀರ್ತನಕಾರರಿಗಾಗಲಿ, ಕವಿಗಳಿಗಾಗಲಿ ಇಂತಹ ಸಂದಿಗ್ಧ ಪರಿಸ್ಥಿತಿ ಇದ್ದುದು ಕಂಡುಬರುವುದಿಲ್ಲ.

ದಾಸಪಂಥದಲ್ಲಿಯ ಹಲವು ಹರಿದಾಸರಲ್ಲಿ ಎಲ್ಲರನ್ನು ಒಂದಾಗಿಸುವ ಅಥವಾ ಒಂದಾಗಿ ಭಾವಿಸುವ ಮಾತುಗಳು ಕೇಳಿ ಬರುತ್ತದೆಯಾದರೂ, ಅದು

ಕಾರ್ಯರೂಪದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಜಾತಿ ಮತಗಳ ಅಂತರವನ್ನು ತೊಡೆದು ಹಾಕುವ ಅಥವಾ ಕಡಿಮೆ ಮಾಡುವ ಪ್ರಯತ್ನ ಕೇವಲ ಪ್ರಯತ್ನವಾಗಿಯೇ ಕಂಡುಬರುತ್ತದೆ. ಅದು ಕನಕದಾಸರನ್ನೂ ಕಾಡಿತು ಎಂದಾಗ ಅದರ ಕರಾಳ ಸ್ವರೂಪದ ಬಗೆಗೆ ಯಾರಾದರೂ ಸುಲಭವಾಗಿ ಆಲೋಚಿಸಬಹುದು. ವ್ಯಾಸರಾಯರು ಅಥವಾ ಪುರಂದರದಾಸರಂತಹವರೊಬ್ಬಿಬ್ಬರು ಅವರನ್ನು ಅರ್ಥಮಾಡಿಕೊಂಡು– "ಕನಕದಾಸರ ಮೇಲೆ ದಯಮಾಡಲು ವ್ಯಾಸಮುನಿ ಮಠದ ಜನರೆಲ್ಲ ದೂರಿಕೊಂಬುವರು" ಎಂಬಂತಹ ಸಂದರ್ಭವನ್ನು ಬಿಟ್ಟರೆ ಮಿಕ್ಕವರೆಲ್ಲ ಅವರನ್ನು ಕಾಡಿದ್ದೇ ಹೆಚ್ಚು. ಹಾಗಾಗಿಯೇ ಅವರ ರಚನೆಗಳು ಹೆಚ್ಚು ಮೊನಚಾಗಿ, ಪರಿಣಾಮಕಾರಿಯಾಗಿ ಉಳಿದವರಿಗಿಂತ ಭಿನ್ನವಾಗಿ ಹೊರಹೊಮ್ಮಲು ಸಾಧ್ಯವಾಯಿತು.

ಆದರೆ ವೀರಶೈವ ಧರ್ಮದ ಹಿನ್ನೆಲೆಯಲ್ಲಾಗಲಿ ಅಥವಾ ವಚನ ಸಾಹಿತ್ಯದ ಸಂದರ್ಭದಲ್ಲಿಯಾಗಲಿ ಇಂತಹ ಪರಿಸ್ಥಿತಿ ಕಂಡುಬರುವುದಿಲ್ಲ. ಅವರು ಒಟ್ಟಾರೆ ಸಮಾಜ ಸುಧಾರಣೆಯತ್ತ ನಡೆದವರು. ಮೇಲು–ಕೀಳನ್ನು ನಿರ್ಮೂಲ ಮಾಡಲು ದೃಢ ಹೆಜ್ಜೆಯನ್ನಿಟ್ಟವರು. ಹಾಗಾಗಿ ಧಾರ್ಮಿಕ ವಿಚಾರಗಳಲ್ಲಿಯಾಗಲಿ. ಸಾಮಾಜಿಕ ವಿಚಾರಗಳಲ್ಲಿಯಾಗಲೀ ಅಲ್ಲಿ ಭಿನ್ನಾಭಿಪ್ರಾಯಗಳು ಉಂಟಾಗಲು ಸಾಧ್ಯವೇ ಆಗಲಿಲ್ಲ. ಎಲ್ಲರಿಗೂ ಸಮಾನಾವಕಾಶವನ್ನು ಕಲ್ಪಿಸುವ ಹಿನ್ನೆಲೆಯಲ್ಲಿ ಸಮಾನ ಚಿಂತನೆ–ಸಮಾನ ಅವಕಾಶಗಳು ಪ್ರಾಪ್ತವಾದುವು. ಇದರಿಂದಾಗಿ ಸಮಾಜದ ಯಾವುದೇ ವರ್ಗದಿಂದ, ಯಾವುದೇ ಸ್ಥಿತಿಯಿಂದ ಬಂದ ವ್ಯಕ್ತಿಯಾದರೂ ಅವನ ಮಾತಿಗೆ ಬೆಲೆ ಕೊಡುವ ಹಾಗೂ ಪರಸ್ಪರ ಗೌರವಿಸುವ ವಾತಾವರಣ ವೀರಶೈವ ಧರ್ಮದ ಹಿನ್ನೆಲೆಯಲ್ಲಿ ಉಂಟಾಗಿತ್ತು. ವೈದಿಕ ಧರ್ಮದ ಹಿನ್ನೆಲೆಯಲ್ಲಿ ದಾಸ ಸಾಹಿತ್ಯದ ಸಂದರ್ಭದಲ್ಲಿ ಕನಕದಾಸರು ಎದುರಿಸಿದ ಸಮಸ್ಯೆಗಳು, ಇಲ್ಲಿ ಕಂಡುಬರುವುದಿಲ್ಲ. ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿದ್ದ ಕೆಲವೊಂದು ಕಂದಾಚಾರಗಳನ್ನು, ಅಸಮತೆಯನ್ನು, ಮೂಢನಂಬಿಕೆಗಳನ್ನು ಕಿತ್ತೊಗೆಯಲು ಧರ್ಮದ ಮುಖಂಡರಾಗಿ ಬಸವಣ್ಣನವರು ಮತ್ತೆ ಅಂತಹ ಕೆಲವರು ಆಡಿದ ಮಾತುಗಳನ್ನು ಬಿಟ್ಟರೆ, ಉಳಿದವರಲ್ಲಿ ಅಂತಹ ಮಾತುಗಳು ಕೇಳಿ ಬರುವುದಿಲ್ಲ. ಕನಕದಾಸರಂತೆ ಅಲ್ಲಿ ಯಾವೊಬ್ಬ ಶರಣನೂ ತನ್ನ ಅಸ್ತಿತ್ವಕ್ಕಾಗಿ ಹೋರಾಟ ನಡೆಸಬೇಕಾದ ಸನ್ನಿವೇಶವೇ ಬರುವುದಿಲ್ಲ. ಕನಕದಾಸರ ಸಾಹಿತ್ಯದ ಕೊಡುಗೆಯಲ್ಲಿ ಕಂಡುಬರುವ ವೈಶಿಷ್ಟ್ಯಕ್ಕೆ ಇದೂ ಒಂದು ಕಾರಣವಾಗಿದೆ.

ಕನ್ನಡ ಸಾಹಿತ್ಯದ ಆರಂಭ ಕವಿಗಳಂತೆ ಕನಕದಾಸರು ಚಂಪುವಿನಲ್ಲಿ ಕಾವ್ಯರಚನೆ ಮಾಡಲಿಲ್ಲವಾದರೂ, ಕನ್ನಡದ ಆದಿಕವಿ ಪಂಪನಂತೆ ಕಲಿಯಾಗಿದ್ದು, ಕವಿಯಾಗಿ ಕೀರ್ತಿಗಳಿಸಿದವನು. ಪಂಪ, ಕನಕದಾಸರಂತೆ ಸಂತನೆನಿಸದಿದ್ದರೂ, ಧರ್ಮಶ್ರದ್ಧೆಯುಳ್ಳ ರಸಿಕ ಹಾಗೂ ಶೃಂಗಾರಪ್ರಿಯ ಕವಿ. ಕನಕದಾಸರು ತಮ್ಮ 'ಮೋಹನ ತರಂಗಿಣಿ'ಯಲ್ಲಿ ಅದನ್ನು ಮೆರೆದಿದ್ದರೆ, ಪಂಪ, ತನ್ನ ಧಾರ್ಮಿಕ ಕಾವ್ಯವಾದ 'ಆದಿಪುರಾಣ'ದಲ್ಲಿಯೇ– 'ನೀಲಾಂಜನೆಯ' ಹಾಗೂ 'ಶ್ರೀಮತಿ ವಜ್ರಜಂಘ'ರ ಸಂದರ್ಭದಲ್ಲಿ ಅದನ್ನು ಉತ್ತುಂಗ ಶಿಖರಕ್ಕೇರಿಸಿದ್ದಾನೆ. ಆ ಮಟ್ಟದ ಕೃತಿ ಇದಲ್ಲವಾದರೂ, ಸನ್ನಿವೇಶ ನಿರ್ಮಾಣ ಹಾಗೂ ಔಚಿತ್ಯ ಪ್ರಜ್ಞೆಯನ್ನು ತೋರುವಲ್ಲಿ ಕನಕದಾಸರು ಪಂಪನಿಗೆ ಹೆಗಲೆಣೆಯಾಗಿ ನಿಲ್ಲದಿದ್ದರೂ, ನಿರಾಶೆಯುಂಟುಮಾಡುವ ಕವಿಯಲ್ಲ, ಕನಕದಾಸರನ್ನು ಪಂಪನೊಂದಿಗೆ ತೂಗಿ ನೋಡುವುದೇ ಕೆಲವರಿಗೆ ಕಸಿವಿಸಿಯುಂಟು ಮಾಡಬಹುದುದಾದ ಸಂಗತಿಯಾಗಬಹುದಾದರೂ, ಕೆಲವೊಂದು ಸನ್ನಿವೇಶಗಳ ಚಿತ್ರಣ ಹಾಗೂ ವರ್ಣನೆಗಳು ಕನಕದಾಸರಿಗೆ ಕೀರ್ತಿಯನ್ನು ತಂದುಕೊಡಬಲ್ಲಂತಹವು. ಪಂಪನ 'ಆದಿಪುರಾಣ' ಧಾರ್ಮಿಕ ಕಾವ್ಯವಾದಂತೆ ಕನಕದಾಸರ 'ಮೋಹನ ತರಂಗಿಣಿ'ಯೂ ಒಂದರ್ಥದಲ್ಲಿ ದೈವೀಪಾತ್ರಗಳನ್ನೊಳಗೊಂಡ ಶೃಂಗಾರ ಕಾವ್ಯ. ಎರಡರಲ್ಲಿಯೂ ಪುರಾಣ ವಸ್ತುವನ್ನು ಕಾಣಬಹುದು. ಆದರೆ ಒಂದು 'ಚಂಪು' ಇನ್ನೊಂದು ಸಾಂಗತ್ಯ'. ಚಂಪುವಿನ ಚೌಕಟ್ಟಿನಲ್ಲಿ ಬರುವ ಬಂಧ, ಸಾಂಗತ್ಯದಲ್ಲಿ ತರಲಾಗುವುದಿಲ್ಲ ಎಂಬ ಅಂಶವನ್ನು ಮನಗಂಡು ಇವುಗಳ ಇತಿಮಿತಿಯನ್ನು ಗುರುತಿಸಬೇಕಾಗುತ್ತದೆ. ವಾಸ್ತವವಾಗಿ ಇವರಿಬ್ಬರ ತುಲನೆ ಸಮಂಜಸವಲ್ಲವೆನಿಸಬಹುದಾದರೂ 'ಸತ್ಕಾವ್ಯ'ದ ಸಾಲಿನಲ್ಲಿ ನಿಲ್ಲಬಲ್ಲ 'ಮೋಹನ ತರಂಗಿಣಿ' ಕಾವ್ಯಗುಣವನ್ನು ಧಾರಾಳವಾಗಿಯೇ ಪ್ರಕಟಿಸುತ್ತದೆ :

> ರಸಪೂರಿತ ಸುಪ್ರಬಂಧ ವಿಲಕ್ಷಣ
> ವೆಸೆವಂತೆ ಪೇಳ್ದಪೆನಿದನು
> ಹಸನಾದುದೆಂದು ಯೋಗ್ಯರು ತಲೆದೂಗಲು
> ಉಸಿರುವೆ ಹರಿಕೃಪೆಯಿಂದ ॥

ಎಂದು ಪೀಠಿಕೆಯಲ್ಲಿಯೇ ಹೇಳಿಕೊಂಡಿರುವ ಈ ಕವಿ ಅದನ್ನು ಹುಸಿಯಾಗಿಸಿಲ್ಲ. ಆದರೆ ಪಂಪನ ಕಾವ್ಯದಲ್ಲಿನ– "ನೋಡಿ ಕಣ್ತಣಿವಿನಂ ಅಪ್ಪಿ ತೋಳ್ ತಣಿವಿನಂ ಸುರತಾಮೃತ ಸೇವೆಯೊಳ್ ಮನಂ ತಣಿವಿನಂ ಆದಲಂಪು ಮಿಗೆ ಭೋಗಿಸಿದಂ ಸುರಲೋಕ ಸೌಖ್ಯಮಂ" ಮಟ್ಟದ ಬಿಗಿ

ಪ್ರಕಟವಾಗದೆ ಹೋದರೂ, ಉಷಾ–ಅನಿರುದ್ಧರ ಸಮಾಗಮ ಸಂದರ್ಭದಲ್ಲಿ ಬರುವ ಕನಸಿನ ಪ್ರಣಯ ಭೇಟಿಯೇ ಮೊದಲಾದ ಶೃಂಗಾರ ಸನ್ನಿವೇಶಗಳಲ್ಲಿ ಕವಿ ಕನಕದಾಸರು ತಾವು ಸಂತರೆಂಬುದನ್ನು ಸಂಪೂರ್ಣ ಮರೆತು, ಕಾವ್ಯರಚಿಸಿರುವುದು ಕಂಡುಬರುತ್ತದೆ. ಶೃಂಗಾರ ಕವಿಯಾಗಿ ಮೆರೆದಿರುವುದು ಕಂಡು ಬರುತ್ತದೆ :

ನಿದ್ರಾನ್ವಿತೆಯಾಗಿ ಕಣ್ದಿಟ್ಟಿಯೊಳಗನಿ
ರುದ್ಧನ ಕಂಡಮರ್ದಪ್ಪಿ
ಮುದ್ದಾಡಿ ಮುದ್ದು ಬಾಯೊಳಗಿಟ್ಟು ಚುಂಬಿಸು
ತಿದ್ದಳು ರತಿಶಾಸ್ತ್ರದಲಿ ॥
ಚಾಪಲಾಕ್ಷಿಯ ಪರವಶಭೀತು ಕಾಮೋ
ದ್ದೀಪನ ತಲೆದೋರೆ ಮಗುಳೆ
ರೂಪಕಂದರ್ಪನೆಂದೆನಿಸುವ ತನ್ನ ಪ್ರಾ
ಣೋಪನ ತಡವಿ ನೋಡಿದಳು ॥

ಪಂಪನದು 'ಚಂಪು', ಕನಕನದು 'ಸಾಂಗತ್ಯ', ಅದರ ಬಂಧವೇ ಬೇರೆ, ಇದರ ಚಂದವೇ ಬೇರೆ. ಆದರೂ ಕಾವ್ಯದ ಸ್ವಾದ, ರಸಿಕತೆಯ ಮೋದ ಇದ್ದೇಇದೆ. ಪ್ರಧಾನವಾಗಿ ಶೃಂಗಾರ ಕಾವ್ಯವೆನಿಸಿದ 'ಮೋಹನ ತರಂಗಿಣಿ'ಯಲ್ಲಿ ಕವಿ ಹೇಳಬೇಕಾದ್ದನ್ನು ಔಚಿತ್ಯವರಿತು ಸಂಕೋಚವಿಲ್ಲದೆ ಹೇಳಿದ್ದಾನೆ–ನಿಜವಾದ ಕಾವ್ಯವಾಗಿಸಿದ್ದಾನೆ.

ಕನಕದಾಸರ ಕಾವ್ಯದಲ್ಲಿ ಹೆಚ್ಚಿನ ವಿಶೇಷತೆ ಇರುವುದು ಅವರು ತೋರುವ ಸಮಕಾಲೀನ ಪ್ರಜ್ಞೆ ಹಾಗೂ ಸಾಮಾಜಿಕ ಪ್ರಜ್ಞೆಯಲ್ಲಿ, ಆರಂಭದ ಚಂಪೂ ಕವಿಗಳು ತಾವು ಕೈಗೆತ್ತಿಕೊಂಡ ವಸ್ತುವಿನ ಕಾಣದಿಂದಾಗಿ ಪ್ರಕಟಿಸಲಾಗದ ಹಲವಂಶಗಳನ್ನು ಅನಂತರದ ಕವಿಗಳು ಧಾರಾಳವಾಗಿ ತಮ್ಮ ಕೃತಿಗಳಲ್ಲಿ ಪ್ರಕಟಿಸಿರುವುದನ್ನು ಕಾಣಬಹುದು. ಅಲ್ಲದೆ ಅಂದಿನ ಸಾಹಿತ್ಯಿಕ ಸಂದರ್ಭವೂ ಅವರಿಗೆ ಅವಕಾಶ ಕೊಡಲಿಲ್ಲ ಎಂಬುದೂ ಸತ್ಯ. ಹಾಗಾಗಿ ಪಂಪ, ಪೊನ್ನ, ರನ್ನರಂತಹ ಕವಿಗಳೂ ಕೂಡ ಕೃತಿ ರಚನೆಯ ಸಂದರ್ಭದಲ್ಲಿ ಪೂರ್ಣ ಸ್ವಾತಂತ್ರ್ಯವನ್ನು ಮೆರೆಯಲಾಗಲಿಲ್ಲ. ಪಂಪ 'ವಿಕ್ರಮಾರ್ಜುನ ವಿಜಯ'ದಲ್ಲಿ ಮೆರೆದ ಸ್ವಾತಂತ್ರ್ಯವನ್ನು 'ಆದಿಪುರಾಣ'ದಲ್ಲಿ ಮೆರೆಯಲಾಗಲಿಲ್ಲ ಎಂಬುದೇ ಸಾಕು ಅಂದಿನ ಕಾವ್ಯದ ವಸ್ತು, ಸಾಹಿತ್ಯದ ಸಂದರ್ಭದಂತಹ ಅಂಶಗಳು ಕವಿಗಳಿಗೆ ಹೇಗೆ ಕಡಿವಾಣವಾಗಿತ್ತು ಎಂಬುದನ್ನು ತೋರುವುದಕ್ಕೆ. ಆದರೆ

ಅವು ವಸ್ತುನಿಷ್ಠ ಕಾವ್ಯವಾಗಿ ಪಂಡಿತವರ್ಗಕ್ಕೆ ಮೆಚ್ಚುಗೆಯಾದುವು ಎಂಬುದು ಸತ್ಯ ಸಂಗತಿ.

ವಚನಕಾರರಿಂದ ಆರಂಭವಾದ ಹೊಸ ಅಲೆಯೊಂದು ಸಮಗ್ರ ಕ್ರಾಂತಿಯನ್ನೇ ಉಂಟು ಮಾಡಿತೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಅದು ಮುಖ್ಯವಾಗಿ– ಕಾವ್ಯದ ವಸ್ತು, ಭಾಷೆ, ಅಭಿವ್ಯಕ್ತಿಯ ರೀತಿಯ ಮೇಲೆ ಉಂಟುಮಾಡಿದ ಪ್ರಭಾವ ಅತಿಶಯವಾದುದು. ಅದರ ಜೊತೆ ಜೊತೆಯಲ್ಲಿಯೇ ಕವಿಗಳಿಗೆ ಹೆಚ್ಚಿನ ಸ್ವಾತಂತ್ರ್ಯ ದೊರೆತದ್ದು ಮಹತ್ವದ ಸಂಗತಿ. ಹೀಗಾಗಿ ಧಾರ್ಮಿಕ ಚಿಂತನೆಯಷ್ಟೇ, ವ್ಯಕ್ತಿ ಸ್ವಾತಂತ್ರ್ಯದ ಕಡೆಗೂ ಅವರು ಗಮನ ಕೊಟ್ಟರು, ಸಾಹಿತ್ಯಪ್ರಪಂಚದಲ್ಲಿ ತುಂಬಿ ತುಳುಕಾಡುತ್ತಿದ್ದ ಪುರಾಣ ವಿಷಯಗಳು ಹಾಗೂ ರಾಜ ಮಹಾರಾಜರುಗಳ ವಿಷಯಕ್ಕೆ ಬದಲಾಗಿ ಮಾನವ ಸಂಬಂಧವಾದ ಯಾವುದೇ ವಿಷಯ ಸಾಹಿತ್ಯದ ವಸ್ತುವಾಗುವಂತಾದುದು ಮಾನವನ ವೈಚಾರಿಕ ಜಗತ್ತಿನ ಒಂದು ವೈಜಯಂತಿ.

ಸಮಕಾಲೀನ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ ಹಾಗೂ ವ್ಯಕ್ತಿಯ ಸಚ್ಚಾರಿತ್ರ್ಯವನ್ನು ಕುರಿತಾದ ವಿಷಯಗಳು ವಚನಕಾರರಿಂದ ಸಾಹಿತ್ಯದಲ್ಲಿ ಧಾರಾಳವಾಗಿ ಪ್ರಕಟಗೊಳ್ಳಲಾರಂಭಿಸಿತೆಂಬುದು ಗಮನಾರ್ಹ. ಇದು ಎಲ್ಲಾ ವಚನಕಾರರ ಹಾಗೂ ದಾಸರ ಕೃತಿಗಳಲ್ಲಿ ಸ್ಪಷ್ಟವಾಗಿ ವ್ಯಕ್ತಗೊಂಡಿರುವುದನ್ನು ಕಾಣುತ್ತೇವೆಯಾದರೂ, ಕನಕದಾಸರು ಕವಿಯಾಗಿ ತಮ್ಮ ಕೃತಿಗಳಲ್ಲಿಯೂ ಇದನ್ನು ಅಷ್ಟೇ ದಟ್ಟವಾಗಿ ಪ್ರಕಟಿಸಿರುವುದು ವಿಶೇಷ ಅಂಶವಾಗಿದೆ. ಹಿಂದಿನ ಕೃತಿಗಳಲ್ಲಿ ಕಾಣದ ಅಥವಾ ತೀರಾ ವಿರಳವೆನ್ನಬಹುದಾದ ಸಮಕಾಲೀನ ಜೀವನದ ಯಥಾವತ್ತಾದ ಚಿತ್ರಣ ಕನಕದಾಸರಲ್ಲಿ ಅತ್ಯಂತ ಸಹಜವಾಗಿ ಕಂಡುಬರುತ್ತದೆ. ಆ ದೃಷ್ಟಿಯಿಂದ ನೋಡುವಾಗ ಕನಕದಾಸರ 'ಮೋಹನ ತರಂಗಿಣಿ' ಒಂದು ಅದ್ವಿತೀಯವಾದ ಶ್ರೇಷ್ಠ ಕೃತಿ. ಕನಕದಾಸರ ಸಹಜ ಕಾವ್ಯಪ್ರತಿಭೆ ಇಲ್ಲಿ ಭೋರ್ಗರೆದು ಹರಿದಿರುವುದನ್ನು ಕಾಣಬಹುದು. 'ಮೋಹನ ತರಂಗಿಣಿ'ಯಲ್ಲಿ ದೈವೀ ಪಾತ್ರಗಳು ಬಂದರೂ–ಅಲ್ಲಿ ಶೃಂಗಾರವನ್ನು ಮೆರೆದಿರುವುದರ ಜೊತೆಗೆ, ಸಮಕಾಲೀನ ಬದುಕಿನ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸುವಲ್ಲಿ ಕನಕದಾಸರು ಪೂರ್ಣ ಯಶಸ್ವಿಯಾಗಿದ್ದಾರೆ ಅಥವಾ ಗಮನಿಸದೆಯೇ ಹೋಗಿರಬಹುದಾದ, ಗಮನಿದರೂ ನಿರ್ಲಕ್ಷಿಸಿರಬಹುದಾದ ಬಹುಸೂಕ್ಷ್ಮ ವಿಷಯುಗಳನ್ನು ಸೊಗಸಾಗಿ ಜೀವತುಂಬಿ ತಂದಿದ್ದಾರೆ. ವಿಜಯನಗರ ಕಾಲದ ರಸಿಕ ಶ್ರೀಮಂತ ಉಜ್ವಲದ ಬದುಕು ಕನಕದಾಸರಲ್ಲಿ

ಒಳ್ಳೆಯ ಕಾವ್ಯವಾಗಿದೆ. ಕವಿಗಿರಬೇಕಾದ ಸೂಕ್ಷ್ಮಮತಿ ಹಾಗೂ ಸೂಕ್ಷ್ಮದೃಷ್ಟಿಗಳೆರಡೂ ಕನಕದಾಸರಲ್ಲಿ ಎದ್ದು ಕಾಣುತ್ತವೆ. 'ಮೋಹನ ತರಂಗಿಣಿ'ಯ ೩-೪ನೆಯ ಅಧ್ಯಾಯದಲ್ಲಿ ಬರುವ ಪುರವರ್ಣನೆ ಕನಕದಾಸರನ್ನು ಒಬ್ಬ ವಿಶಿಷ್ಟ ಕವಿಯಾಗಿಸಿರುವಂತೆಯೇ ಒಬ್ಬ ಮಹಾನ್ ಕಲಾಕಾರನನ್ನಾಗಿಯೂ ಮಾಡಿದೆ. ವಿಜಯನಗರ ಸಾಮ್ರಾಜ್ಯದ ಸುವರ್ಣಯುಗದ ಬಣ್ಣನೆಯನ್ನು ಕವಿ ಕಣ್ಣಿಗೆ ನಾಟಿಸಿದ್ದಾನೆ :

ಸೋಮ ಸೂರಿಯ ವೀಥಿ ವೀಥಿಯಿಕ್ಕೆಲದಲ್ಲಿ  
ಹೇಮ ನಿರ್ಮಿತ ಸೌಧದೋಳಿ  
ರಮಣೀಯತೆವೆತ್ತ ಕಳಸದಂಗಡಿಯಿರ್ದು  
ವಾ ಮಹಾದ್ವಾರಕಾ ಪುರದೆ ॥  
ಭೋಜಿಪ ಕಪೂರ ಕಸ್ತೂರಿ ಜೀರ್ಣಜಿ  
ವಾಜಿ ಪುಣುಗು ಬಹು ತೈಲ  
ಸೋಜಿಗವಡೆದ ಸುಗಂಧದಂಗಡಿಗಳು  
ರಾಜಿಸುತ್ತಿರ್ದುವಿಕ್ಕೆಲದಿ ॥  
ಚಪ್ಪನ್ನ ದೇಶದ ನಾಣಿಯಂಗಳ ನೋಟ  
ತುಪ್ಪದ ಚಪಲ ಸೆಟ್ಟಿಗಳು  
ಒಪ್ಪವಡೆದು ಕುಳಿತಿರ್ದರು ಹಣ ಹೊನ್ನ  
ಕುಪ್ಪೆಯ ಮುಂದಿಟ್ಟುಕೊಂಡು ॥  
ಸುರಗಿ ಸೇವಂತಿಗೆ ಕುಂದ ಮಂದಾರ ಪಾ  
ದರಿ ಕಂಚಿ ಕಣಿಗಲೆ ದವನ  
ಬಿರಿದ ಕೆಂಜಾಜಿಯೆಂಬುವ ಪುಷ್ಪದಂಗಡಿ  
ಪರುಠವಿಸಿರ್ದುದೇನೆಂಬೆ ॥  
ಉತ್ತುತ್ತೆ ಖರ್ಜುರ ದ್ರಾಕ್ಷಿ ಸಕ್ಕರೆ ಬೆಲ್ಲ  
ಮೆತ್ತೈಸಿದ ಕಾಯಭಾಗ  
ಒತ್ತದೆ ಕಳಿತ ಸಮಸ್ತ ಪಣ್ಣಸರಂಗ  
ಳಿಕ್ಕೆಟಿದಲಿ ಮಾಱುತಿಹವು ॥

ಅಷ್ಟೇ ಅಲ್ಲ, ಅಲ್ಲಿಯ ಶ್ರೀಮಂತರ ಅಟ್ಟಹಾಸ ವೈಭವವೆಂದರೆ :

ಓರಂತೆ ಮರಕಾಲರು ಹಡಗಿನ ವ್ಯವ  
ಹಾರದಿ ಗಳಿಸಿದ ಹಣವ

ಭಾರ ಸಂಖ್ಯೆಯಲಿ ತೂಗುವರು ಬೇಡಿದರೆ ಕು
ಬೇರಂಗೆ ಕಡವ ಕೊಡುವರು ॥

ಅದರ ಜೊತೆ ಜೊತೆಯಲ್ಲಿಯೇ ಮಾನವ ಸ್ವಭಾವಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಚಿತ್ರಿಸಿರುವ ಬಗೆಯೂ ವಿಶಿಷ್ಟ ಬಗೆಯದಾಗಿದೆ.

ಅಷ್ಟಾದಶವರ್ಣನೆಗೆ ಸಿಕ್ಕಿಹಾಕಿಕೊಂಡ ಅನೇಕ ಪ್ರಾಚೀನ ಕವಿಗಳು ಅದರಿಂದ ಬಿಡಿಸಿಕೊಳ್ಳಲಾಗದೆ ಕಾವ್ಯವನ್ನು ಬರಡಾಗಿಸಿರುವ ಅಥವಾ ಹೊರೆಯಾಗಿಸಿರುವ ನಿದರ್ಶನಗಳೇ ಹೆಚ್ಚು. ಆದರೆ 'ಮೋಹನ ತರಂಗಿಣಿ'ಯಲ್ಲಿಯ ಅದರ ರೀತಿಯೇ ಬೇರೆ. ಕನಕದಾಸರು ಅಷ್ಟಾದಶ ವರ್ಣನೆಗಳನ್ನು ತಂದಿದ್ದರೂ ಅದರಲ್ಲಿ ಅವರು ಸಿಕ್ಕಿ ಹಾಕಿಕೊಂಡಿಲ್ಲ. ಬದಲಾಗಿ ಅದನ್ನು ಹೆಚ್ಚು ಚೇತೋಹಾರಿಯನ್ನಾಗಿ ಮಾಡಿದ್ದಾರೆ. ಕುಸರಿ ಕೆಲಸದ ಇಲ್ಲಿಯ ವರ್ಣನೆಗಳು ಕವಿಯ ಅದ್ಭುತ ಕಲಾಸೃಷ್ಟಿಯೇ ಆಗಿದೆ. ಕಾವ್ಯಕಲೆಯನ್ನು ಕನಕದಾಸರು ಇಲ್ಲಿ ವಿಶಿಷ್ಟ ರೀತಿಯಲ್ಲಿ ಮೆರೆದಿದ್ದಾರೆ. ಇಲ್ಲಿ ಬರುವ ದ್ವಾರಕಾಪುರ ವರ್ಣನೆಯಂತೂ ಕನಕದಾಸರ ವಾಸ್ತವಿಕ ಪ್ರಜ್ಞೆಯ ಜೀವಂತ ಸಾಕ್ಷಿ. ಮನೆಯ ಮುಂಭಾಗದಲ್ಲಿನ ತುಳಸೀಕಟ್ಟೆ, ಅದನ್ನು ಪೂಜಿಸುತ್ತಿರುವ ಸ್ತ್ರೀಯರು, ಹೋಮದಲ್ಲಿ ತೊಡಗಿರುವ ಬ್ರಾಹ್ಮಣರು, ಊಟದ ಮನೆಯ ಮುಂದೆ ಹೊಟ್ಟೆ ಮುಂದುಮಾಡಿ ಒಳನುಗ್ಗಲು ಹಾತೊರೆಯುತ್ತಿರುವವರ ಚಿತ್ರವೇ ಮೊದಲಾಗಿ ನೂರೆಂಟು ಅತ್ಯದ್ಭುತ ಚಿತ್ರಗಳನ್ನು ಕನಕದಾಸರು ತಮ್ಮ ಕಾವ್ಯದಲ್ಲಿ ಹಿಡಿದಿಟ್ಟಿದ್ದಾರೆ.

ಮಲ್ಲಿಗೆಯರಳಂತೆ ಬಿಜ್ಜೋಗರ ಮೊಸ
ಜ್ಜಿಗೆಳೆಯ ಬಹಳುಪ್ಪುಗಾಯಿ
ಘಲ್ಲಿಸಿ ಗಟ್ಟಿಯ ಕಟ್ಟಿದ ಪಿರಿಯರು
ಪುಲ್ಲಿಗೆಗಳು ತರತರಿಸೆ ॥
ರಸಾಯನವ ಚಪ್ಪಿರಿದು ನೀರ್ಮಜ್ಜಿಗೆ
ಹಸಗೆಯ್ದಿರಲೀಂಟಿದರು
ಪೊಸ ವಿಘ್ನರಾಜನ ಬಳಗವೆಂಬಂತೇಟಿ
ವಶವಲ್ಲದೆದ್ದರುತ್ಸವದಿ ॥
ಶರಧಿಯೊಳೊಗೆದ ಹೊಂದಾವರೆಯಂತಿರ್ಪ
ಪುರಮಧ್ಯದಲಿ ಕೃಷ್ಣರಾಯ
ಅರಮನೆ ಕನ್ನಿಕೆಯೆಂಬಂತೆ ಜನ ಮೋ
ಹರಿಸಲು ಕಣ್ಗೆ ರಂಜಿಸಿತು ॥

'ಮೋಹನ ತರಂಗಿಣಿ'ಯಲ್ಲಿ ಬರುವ ವನವಿಹಾರದ ವರ್ಣನೆ ಕನಕದಾಸರ ಸೋಪಜ್ಞತೆಗೊಂದು ಉಜ್ವಲ ಸಾಕ್ಷಿ. ಕನ್ನಡದ ಬಹುತೇಕ ಕವಿಗಳಲ್ಲಿ ಬರುವ ವರ್ಣನೆಗಳಂತಲ್ಲ ಇಲ್ಲಿಯ ವನವಿಹಾರ ವರ್ಣನೆ ; ಇದರ ಸೊಬಗೇ ಬೇರೆ. ಕನಕದಾಸರ ವಿಶಿಷ್ಟ ಪ್ರತಿಭೆ ಇಲ್ಲಿ ಜೀವಂತಗೊಂಡಿದೆ. ವನವಿಹಾರಕ್ಕೆಂದು ಬರುವ ಇಲ್ಲಿಯ ಅರಮನೆಯ ಹೆಂಗಸರು, ಕೇವಲ ರಾಣಿಯರಾಗಿ ಅಥವಾ ರಾಣಿವಾಸದ ಜಂಬಗಾರ್ತಿಯರಾಗಿ ವನವನ್ನು ಅಂದಗೆಡಿಸುವ ಸೊಕ್ಕುಗಾರ್ತಿಯರಲ್ಲ. ಅದನ್ನು ಕಂಡು, ಅದರ ಸೊಬಗನ್ನು ಉಂಡು ಆನಂದಿಸುವ ಪುಷ್ಪಪ್ರಿಯರು, ಪ್ರಕೃತಿ ಆರಾಧಕರು. ಅಷ್ಟೇ ಅಲ್ಲ ಕವಿ ಇನ್ನೂ ಮುಂದೆ ನಡೆದು, ಪ್ರಾಚೀನ ಕಾವ್ಯಕ್ಕಷ್ಟೇ ಕಟ್ಟುಬಿದ್ದವರು ಕಲ್ಪಿಸಿಕೊಳ್ಳಲೂ ಆಗದ ಸುಂದರ ಸಾಂಸಾರಿಕ ಚಿತ್ರವನ್ನು ಉಸಿರಾಡುವಂತೆ ಬಣ್ಣಿಸಿದ್ದಾನೆ. ಇಲ್ಲಿಯ ವನವಿಹಾರಿ ರಾಣಿಯರು ಬರಿಯ ವಿಲಾಸಿನಿಯರಲ್ಲ ಒಳ್ಳೆಯ ಗೃಹಿಣಿಯರು, ಗರತಿಯರು, ಅವರೆಲ್ಲರೂ ಸಂಸಾರದ ಹೊರೆ ಹೊತ್ತ ಸಾಮಾನ್ಯ ಹೆಂಗಸರಂತೆ ಕಂಡು ಬರುತ್ತಾರೆ. ವನವಿಹಾರದಲ್ಲಿದ್ದರೂ ಅವರೆಲ್ಲಾ ಅಡುಗೆಮನೆಯ ಜವಾಬ್ದಾರಿಯಲ್ಲಿ ಮುಳುಗಿದರಂತೆ ತೋರುತ್ತಾರೆ. ಕನಕದಾಸರ ವೈಶಿಷ್ಟ್ಯ ಇಲ್ಲಿ ಎದ್ದು ಕಾಣುತ್ತದೆ :

ಕೈದಣಿವ ತನಕ ನಾನಾ ಪುಷ್ಪಂಗಳ
ಕೊಯ್ದು ಪೊಟ್ಟಣವ ಕಟ್ಟಿದರು
ತೊಯ್ದರು ನೀರಾಟವನಾಡಿ ಸೊಬಗಾಂತು
ಐದೆಯರುಗಳು ಸಂತಸದಿ ॥
ಅಂಬೆ ಹಳದಿ ಕಾರ್ಗೆಣಸು ನೀರುಳ್ಳಿ ಕೊ
ತ್ತುಂಬರಿ ಕರಿಬೇವು ಸಹಿತ
ಸಿಂಬೆ ಕೂಗಲಿ ಪಿಪ್ಪಲಗಾ ಕೊಯ್ದರು
ನಿಂಬೆಯ ಕಜಿವಣ್ಣಗಳೊಡನೆ

ಇಂತಹ ಹಲವು ಹೊಸತನಗಳನ್ನು ಮೆರೆಯುವುದರ ಮೂಲಕ ಕನಕದಾಸರು ತಮ್ಮ ವಿಶಿಷ್ಟ ಪ್ರತಿಭೆಯನ್ನು ತೋರಿರುವುದರ ಜೊತೆಗೆ ಹೆಚ್ಚು ಆತ್ಮೀಯವಾಗಿಸಿದ್ದಾರೆ. ಏಕೆಂದರೆ ಕಣ್ಸೊಗ್ಗುವ, ಮನಮಿಡಿಯುವ ಇಂತಹ ಚಿತ್ರಗಳು ಕನ್ನಡ ಸಾಹಿತ್ಯದಲ್ಲಿ ಅಪರೂಪವೆಂದೇ ಹೇಳಬೇಕು. ಪಾಂಡಿತ್ಯ ಪ್ರದರ್ಶನ ಅಥವಾ ಸಾಂಪ್ರದಾಯಿಕ ವರ್ಣನೆಗಳಲ್ಲಿಯೇ ಕಾವ್ಯವನ್ನು

ನಡೆಸಿಕೊಂಡ ನಮ್ಮ ಹಲವು ಕವಿಗಳಿಗಿಂತ ಇಲ್ಲಿ ಕನಕದಾಸರು ತೀರ ಭಿನ್ನವಾಗಿಯೇ ನಿಲ್ಲುತ್ತಾರೆ.

* * *

ಪ್ರಾಚೀನ ಕವಿಗಳನ್ನು ಹೊರತು ಪಡಿಸಿ–ಸ್ವಲ್ಪಮಟ್ಟಿಗೆ ಕಾವ್ಯದ ರೂಪ, ರೀತಿ ಹಾಗೂ ಕಾಲವನ್ನು ದೃಷ್ಟಿಯಲ್ಲಿಟ್ಟುಕೊಂಡು ಕನಕದಾಸರಿಗೆ ಹತ್ತಿರವಾಗಬಹುದಾದ ರುದ್ರಭಟ್ಟ, ಕುಮಾರವ್ಯಾಸ, ರತ್ನಾಕರವರ್ಣಿ, ನಂಜುಂಡ ಕವಿ, ವಚನಕಾರರು ಹಾಗೂ ಕೀರ್ತನಕಾರರ ಜೊತೆಯಲ್ಲಿ ಕನಕದಾಸರನ್ನು ಇಟ್ಟು ನೋಡುವ ಪ್ರಯತ್ನ ಮಾಡಬಹುದು.

ಕನಕದಾಸರೂ ಕೂಡ–ಕುಮಾರವ್ಯಾಸ, ರುದ್ರಭಟ್ಟರಂತೆ, ಷಟ್ಪದಿಯಲ್ಲಿ ಕಾವ್ಯ ರಚಿಸಿದ್ದಾರೆ ; ರತ್ನಾಕರವರ್ಣಿ, ನಂಜುಂಡ ಕವಿಯರಂತೆ ಸಾಂಗತ್ಯದಲ್ಲಿ ಕೃತಿ ರಚನೆ ಮಾಡಿದ್ದಾರೆ. ಅಷ್ಟೇ ಅಲ್ಲ, ಅವರೀರ್ವರಂತೆ ಶೃಂಗಾರವನ್ನು ಮೆರೆದಿದ್ದಾರೆ. ರುದ್ರಭಟ್ಟ, ಕುಮಾರವ್ಯಾಸರಂತೆ ಶ್ರೀಕೃಷ್ಣಭಕ್ತಿಯನ್ನು ತೋರಿದ್ದಾರೆ. ವಚನಕಾರರು ಹಾಗೂ ಇತರ ಕೀರ್ತನಕಾರರಂತೆ ಸಾಮಾಜಿಕ ಪ್ರಜ್ಞೆಯನ್ನು, ಬೆಡಗಿನ ವಚನಗಳಂತೆ 'ಮುಂಡಿಗೆ'ಗಳನ್ನು ಬರೆದಿದ್ದಾರೆ. ಹಾಗೆಯೇ 'ರಾಮಧಾನ್ಯ ಚರಿತೆ' ಯಂತಹ ವಿಶಿಷ್ಟ ಕಾವ್ಯವಸ್ತುಗಳನ್ನೂ ನೀಡಿದ್ದಾರೆ.

ರುದ್ರಭಟ್ಟನ 'ಜಗನ್ನಾಥವಿಜಯ', ಕುಮಾರವ್ಯಾಸನ 'ಭಾರತ ಕಥಾಮಂಜರಿ' ಹಾಗೂ ಕನಕದಾಸರ 'ಹರಿಭಕ್ತಿಸಾರ' ಇವು ಮೂರೂ ಒಂದರ್ಥದಲ್ಲಿ ಶ್ರೀಕೃಷ್ಣ ಪಾರಮ್ಯವನ್ನು ಸಾರುವ ಕೃತಿಗಳು ಹಾಗೆಯೇ 'ಜಗನ್ನಾಥವಿಜಯ' ಹೊರತಾಗಿ ಉಳಿದೆರಡು ಷಟ್ಪದಿಯಲ್ಲಿ ರಚನೆಗೊಂಡ ಕೃತಿಗಳು.

ಕನಕದಾಸ–ಕುಮಾರವ್ಯಾಸರಿಗೆ ಹೋಲಿಸಿದರೆ, ರುದ್ರಭಟ್ಟ ಕವಿಗಿಂತ ಹೆಚ್ಚಾಗಿ ಪಾಂಡಿತ್ಯವುಳ್ಳವರು. ಅವರ ಬಂಧ ಬಿಗಿ 'ವೈಷ್ಣವ ಕಾವ್ಯ ರಸಾವರ್ಣಂ ತುಳುಕಾಡುಗೆ' ಎಂಬ ಆಸೆಯನ್ನು ಹೊತ್ತು ಕೃತಿ ರಚನೆಮಾಡಿದ್ದರೂ, ಅದು ಸಾಮಾನ್ಯನಿಗೆ ನಿಲುಕುವಂತಾದುದು ಕವಿಯ ಪಾಂಡಿತ್ಯ ಪ್ರದರ್ಶನದ ಕಾರಣದಿಂದಾಗಿ. ಶ್ರೀಕೃಷ್ಣನ ಜನನದಿಂದ–ಬಾಣಾಸುರನ ವಧೆಯವರೆಗೆ ಕಥೆ ಹಬ್ಬಿದ್ದರೂ, ಸ್ವಾರಸ್ಯವಾದ ಭಾಗಗಳನ್ನು ಒಳಗೊಂಡಿದ್ದರೂ, 'ನಾರಿಕೇಳ ಪಾಕದ' ಭಾಷಾ ಪ್ರೌಢಿಮೆಯಿಂದಾಗಿ ಕಾವ್ಯ ಸ್ವಾದನೆಗೆ ಅಡ್ಡಿಯಾಗುತ್ತದೆ. ವಿಮರ್ಶಕರು ಅಭಿಪ್ರಾಯಿಸುವಂತೆ : 'ಕವಿಯ ಕಾವ್ಯದಲ್ಲಿ ಆನಂದಕ್ಕೆ ವಸ್ತುವಿದೆ, ಅದನ್ನು ಕಷ್ಟಪಟ್ಟು ಪಡೆಯಬೇಕಾಗಿದೆ. ಕವಿಯ ರಚನೆ ದ್ರಾಕ್ಷಾರಸವಲ್ಲ 'ನಾರಿಕೇಳ ಪಾಕ' ಎಂಬ ಮಾತು ಸತ್ಯ.

ಆದರೆ ಈ ದೃಷ್ಟಿಯಿಂದ ನೋಡುವಾಗ–ಕನಕದಾಸರು ಹಾಗೂ ಕುಮಾರವ್ಯಾಸ ಬೇರೆಯಾಗಿಯೇ ನಿಲ್ಲುತ್ತಾರೆ. ಇವರ ಕಾವ್ಯ ರುದ್ರಭಟ್ಟನ ಕಾವ್ಯದಂತೆ ನಾರಿಕೇಳ ಪಾಕವಲ್ಲ, ದ್ರಾಕ್ಷಾರಸ. ಭಕ್ತಿಮಾರ್ಗಕ್ಕೆ ಭಾಷೆ ಪಾಂಡಿತ್ಯ ಅಡ್ಡಿಯಾಗದಂತೆ ಇವರಿಬ್ಬರೂ ನೋಡಿಕೊಂಡಿದ್ದಾರೆ. ಕುಮಾರವ್ಯಾಸ ಕೃಷ್ಣಭಕ್ತನೇ ಆದರೂ, ಕನಕದಾಸನಂತೆ ಸಂತನಲ್ಲ. ಅನುಭಾವಿಕವಿಯಲ್ಲ. ದೊಡ್ಡ ಕಥಾಸಾಗರದ ಹರಹಿನಲ್ಲಿ ಅವನು ಕೃಷ್ಣಭಕ್ತಿಯನ್ನು ಮೆರೆದವನು :

ತಿಳಿಯ ಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣಮೆಚ್ಚಲಿಕೆ
ಹಲವು ಜನ್ಮದ ಪಾಪರಾಶಿಯ
ತೊಳೆವ ಜಲವಿದು ಶ್ರೀಮದಾಗಮ
ಕುಲಕೆ ನಾಯಕ ಭಾರತಾಕೃತಿ ಪಂಚಮ ಶ್ರುತಿಯ ॥

ಎಂದು ಹೇಳುವಲ್ಲಿ ತನ್ನ ಕಾವ್ಯೋದ್ದೇಶವನ್ನೂ, ರೀತಿಯನ್ನು ಸ್ಪಷ್ಟಪಡಿಸುತ್ತಾನೆ, ಕುಮಾರವ್ಯಾಸ ಜನತೆಯ ಕವಿ. ಮಹಾಕಾವ್ಯದ ನಿರ್ವಹಣೆಯನ್ನು ಹೊತ್ತರೂ ಅವನು ಈ ನೆಲಕ್ಕೆ ಜಲಕ್ಕೆ ಬೆಲೆಕೊಟ್ಟ ಕವಿ. ಸರಳತೆಯಲ್ಲಿಯೇ ಸುಭಗತೆಯನ್ನು ಮೆರೆದ ಕವಿ. ಜನಭಾಷೆಯನ್ನು ಕಾವ್ಯಭಾಷೆಯಲ್ಲಿ ಬೆರೆಸಿ ಹೊಸ ರುಚಿಯನ್ನೂ, ಸತ್ವವನ್ನೂ ಮೂಡಿಸಿದ ಮೋಡಿಕಾರ, ಶ್ರೀಕೃಷ್ಣನ ಅದ್ಭುತ ಶಕ್ತಿಯನ್ನು, ಮಹಿಮೆ–ಹಿರಿಮೆಗಳನ್ನು ಕಾವ್ಯದಲ್ಲಿ ಅಂತರ್ಗತವಾದಂತೆ ವೈಶಿಷ್ಟ್ಯಪೂರ್ಣವಾಗಿ ಹೊರಹೊಮ್ಮಿಸಿದ ಜಾದೂಗಾರ. ಮಹತ್ತಿನೊಡನೆ ಜನಪ್ರಿಯತೆಯನ್ನು ಮೆರೆದ ಈ ಕವಿಯ ಕಾವ್ಯ 'ಮೈಯಲಿ ಮಿಂಚಿನ ಹೊಳೆ ತುಳುಕಾಡುವಂತೆ, ಮಾಡಬಲ್ಲ ಶಕ್ತಿಯುಳ್ಳದ್ದು. ಆದರೆ ಇದರ ವ್ಯಾಪ್ತಿಯೇ ಬೇರೆ.

ಕುಮಾರವ್ಯಾಸನ ಭಾರತದೊಂದಿಗೆ ಹೋಲಿಸಿದಾಗ ಕನಕದಾಸರ 'ಹರಿಭಕ್ತಿಸಾರ' ಕೇವಲ ೧೧೦ ಷಟ್ಪದಿಗಳುಳ್ಳ ಕಿರು ಕೃತಿ. ಆದರೆ ಕುಮಾರವ್ಯಾಸ ಕೃಷ್ಣ ಮಹಿಮೆಯನ್ನೂ, ಭಕ್ತಿಯನ್ನೂ ಇಡೀ ಕಾವ್ಯದಲ್ಲಿ ಹರಡಿರುವುದನ್ನು ಕನಕದಾಸರು ಈ ೧೧೦ ಪದ್ಯಗಳಲ್ಲಿ ರಸವತ್ತಾಗಿ ಬಣ್ಣಿಸಿದ್ದಾರೆ. ಸೂತ್ರಧಾರಿಯೆನಿಸಿದ ಕೃಷ್ಣನ ಮಹಿಮೆಯನ್ನು ಮೈಮರೆತು ಕೊಂಡಾಡಿದ್ದಾರೆ. ಕನಕದಾಸರು ಕವಿಯಾದರೂ ಸಂತ. ಆದರೆ ಕುಮಾರವ್ಯಾಸ ಸಂತನಲ್ಲ– ಕೃಷ್ಣಭಕ್ತ, ಕೃಷ್ಣಭಕ್ತಿಯನ್ನು ಮೆರೆಯುವುದಷ್ಟೇ ಅವನ ಉದ್ದೇಶವಲ್ಲ. ಅವನು

ಸಾಗಬೇಕಾದ ದಾರಿ ಸಾಗರದಷ್ಟು ದೊಡ್ಡದು. ಆದರೆ ಕನಕನದು ಹಾಗಲ್ಲ. ಉದ್ದೇಶ ನೇರ–ಸ್ಪಷ್ಟ. ಹಾಗಾಗಿ ಭಟ್ಟಿ ಇಳಿಸಿದಂತೆ ಅವನ ಭಾವನೆಗಳು ಮಡುಗಟ್ಟಿ ವ್ಯಕ್ತಗೊಂಡಿವೆ. ಕನಕದಾಸರ ಕಾವ್ಯಪ್ರತಿಭೆ ಹಾಗೂ ಭಕ್ತಿಯ ಅಮಲು ಇಲ್ಲಿ ಉಕ್ಕಿ ಹರಿದಿರುವುದನ್ನು ಕಾಣಬಹುದು. 'ಹರಿಭಕ್ತಿಸಾರ'ದ ಪ್ರತಿಯೊಂದು ಪದ್ಯವೂ 'ರಕ್ಷಿಸು ನಮ್ಮನನವರತ' ಎಂಬ ಅಂಕಿತದೊಡನೆ ಅಂತ್ಯಗೊಳ್ಳುವುದು ಒಂದು ವಿಶೇಷವಾಗಿದೆ ಅಷ್ಟೆ.

ಕುಮಾರವ್ಯಾಸ ಮಹಾಭಾರತದ ಪೀಠಿಕಾಭಾಗದಲ್ಲಿ ಮಹಾಭಾರತದ ಕಥೆಯನ್ನೂ, ಆ ಮೂಲಕ ಕೃಷ್ಣಕಥೆಯನ್ನೂ ಕೇಳಿದವರಿಗೆ ದೊರೆಯುವ ಹಲವು ಪುಣ್ಯದ ಒಂದು ಪಟ್ಟಿಯನ್ನು ಕೊಡುತ್ತಾನೆ :

ವೇದ ಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನ ಫಲ ಕೃ
ಚ್ಛಾದಿ ತಪಸಿನ ಫಲವು ಜ್ಯೋತಿಷ್ಟೋಮ ಯಾಗ ಫಲ ।
ಮೇದಿನಿಯನೊಲಿದಿತ್ತ ಫಲ ವ
ಸ್ತ್ರಾದಿ ಕನ್ಯಾದಾನ ಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ವರಿಗೆ ॥

ಕನಕದಾಸರು ತಮ್ಮ 'ಹರಿಭಕ್ತಿಸಾರ'ದ ಕೊನೆಯಲ್ಲಿ :

ನೂರು ಕನ್ಯಾದಾನವನು ಭಾ
ಗೀರತಿ ಸ್ನಾನವನು ಮಿಗೆ ಕೈ
ಯಾರೆ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು ॥
ಊರುಗಳ ನೂರಗ್ರಾಹಾರವ
ಧಾರೆಯೆರೆದಿತ್ತಂತೆ ಫಲ ಕೈ
ಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದವಗೆ ॥

ಎಂದು ಈ ಕಾವ್ಯದ ಫಲವನ್ನು ಹೇಳಿದ್ದಾರೆ. ಇಲ್ಲಿ ಸಹಜವಾಗಿಯೇ ಕನಕದಾಸರ ಮೇಲೆ ಕುಮಾರವ್ಯಾಸನ ಪ್ರಭಾವ ಆಗಿರಬಹುದೆಂಬ ಶಂಕೆ ಮೂಡಿರಬಹುದಾದರೂ ಅದು ಕವಿಯ ಪ್ರತಿಭೆಗೆ ಅಡ್ಡಬರುವಂತಹುದಲ್ಲ. ಇಲ್ಲಿ ಕನಕದಾಸರು ಭಕ್ತಿಸಾಗರದಲ್ಲಿ ಎಷ್ಟು ಮುಳುಗಿದ್ದಾರೆ ಎಂಬುದಕ್ಕೆ ಸಾಕ್ಷಿ : ತಮ್ಮ ಕೀರ್ತನೆಗಳಲ್ಲಿ ಸಮಾಜದ ಏರು ಪೇರನ್ನು, ಮೇಲು–ಕೀಳನ್ನು ಕುರಿತು ಕಟುವಾಗಿ ಟೀಕಿಸುವ ಕನಕದಾಸರು ಇಲ್ಲಿ 'ಕೈಯಾರೆ ಗೋವ್ಗಳ ಪ್ರೇಮದಿಂದಲಿ ಭೂಸುರರಿಗೊಲಿದು ಊರುಗಳ ನೂರಗ್ರಾಹಾರವ ಧಾರೆಯೆರೆದಿತ್ತಂತೆ ಫಲ

ಕೈಸೇರುವುದು ಹರಿಭಕ್ತಿಸಾರದ ಕಥೆಯ ಕೇಳ್ದವಗೆ' ಎಂದು ಮೈಮರೆತು ಹೇಳುತ್ತಾರೆ.

ಕುಮಾರವ್ಯಾಸನಲ್ಲಿಯ ಪ್ರಚಂಡ ಪ್ರತಿಭೆ ಕನಕದಾಸರಲ್ಲಿ ಕಂಡುಬರದಿದ್ದರೂ ಸ್ವೋಪಜ್ಞತೆಗೆ ಕೊರತೆ ಇಲ್ಲ. ಸಂತಕವಿಯಾದ ಕನಕದಾಸ 'ಹರಿಭಕ್ತಿಸಾರ'ದ ಸಂದರ್ಭದಲ್ಲಿ ಆ ಸ್ವೋಪಜ್ಞತೆಯನ್ನು ಮೆರೆದಿದ್ದಾನೆ :

ಎಂಟುಗೇಣಿನ ದೇಹ ರೋಮಗ
ಳೆಂಟು ಕೋಟಿಯ ಕೀಲ್ಗಳಿರುವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು
ನೆಂಟ ನೀನಿರ್ದಗಲಿದಡೆ ಒಣ
ಹೆಂಟೆಯಲಿ ಮುಚ್ಚುವರು ದೇಹವ
ಉಂಟೆ ಫಲ ಪುರುಷಾರ್ಥ ರಕ್ಷಿಸು ನಮ್ಮನನವರತ ॥
ಬೀಗ ಮುದ್ರೆಗಳಿಲ್ಲದೂರಿಗೆ
ಬಾಗಿಲುಗಳೊಂಬತ್ತು ಹಗಲಿರು
ಳಾಗಿ ಮುಚ್ಚದೆ ತೆರೆದಿಹುದು ಜೀವಾತ್ಮ ತಾನಿರುತ
ನೀಗಿಯೆಲ್ಲವ ಬಿಸುಟು ಬೇಗದಿ
ಹೋಗುತಿಹ ಸಮಯದಲಿ ಇವರವರ
ರಾಗಬಲ್ಲರೆ ನೀನೆ ರಕ್ಷಿಸು ನಮ್ಮನನವರತ ॥

ಕುಮಾರವ್ಯಾಸ ಭಾರತ ಕಥೆಯ ಸಾಗರ. 'ಹರಿಭಕ್ತಿಸಾರ' ಅದರಲ್ಲಿ ವ್ಯಕ್ತವಾಗುವ ಕೃಷ್ಣಭಕ್ತಿಯ ಒಂದು ಭಾಗ. ಇದಕ್ಕೆ ತನ್ನದೇ ಆದ ಮಿತಿ ಇದೆ. ಸಂತಕವಿ ಕನಕನ ದೃಷ್ಟಿಯೇ ಬೇರೆ. ಭಗವದ್ಭಕ್ತಿಯನ್ನು ಮೆರೆಯುವುದು. ಭಕ್ತ–ಭಗವಂತನ ಸಂಬಂಧ ಇಲ್ಲಿ ನೇರವಾಗಿ ವ್ಯಕ್ತಗೊಂಡಿದೆ :

ನಿನ್ನ ಸೂತ್ರದೊಳಾಡುವುವು ಚೈ
ತನ್ಯ ಸಚರಾಚರಗಳೆಲ್ಲವು
ನಿನ್ನ ಸೂತ್ರವು ತಪ್ಪಿದರೆ ಮುಗ್ಗುವುವು ಹೂಹೆಗಳು
ಇನ್ನು ನಮಗೆ ಸ್ವತಂತ್ರವೆಲ್ಲಿಯ
ದನ್ಯಕರ್ಮ ಸುಕರ್ಮವೆಲ್ಲ
ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮನನವರತ ॥

ಚಂಪುವಿನಲ್ಲಿ ಪಂಪ ಪ್ರಭಾವ ಬೀರಿದಂತೆ, ಸಾಂಗತ್ಯದಲ್ಲಿ ರತ್ನಾಕರವರ್ಣಿ, ರಗಳೆಯಲ್ಲಿ ಹರಿಹರ ಎದ್ದುಕಾಣುವಂತೆ, ಷಟ್ಪದಿ ಕವಿಗಳಲ್ಲಿ ಕುಮಾರವ್ಯಾಸ

ಅದ್ವಿತೀಯ ಎಂಬುದು ನಿಜವಾದರೂ ಅನಂತರ ಕವಿಗಳ ಸ್ವೋಪಜ್ಞತೆಯನ್ನು ತಳ್ಳಿಹಾಕುವಂತಿಲ್ಲ. ಕನಕದಾಸರು ಕುಮಾರವ್ಯಾಸನ ಪ್ರಭಾವಕ್ಕೆ ಪ್ರತ್ಯಕ್ಷವಾಗಿಯೋ–ಪರೋಕ್ಷವಾಗಿಯೋ ಒಳಗಾಗಿದ್ದರೂ ಅವನು ತನ್ನ ಸ್ವಂತಿಕೆಯನ್ನು ಮೆರೆದಿದ್ದಾನೆ. ಅದನ್ನು ಕನಕದಾಸರ 'ಹರಿಭಕ್ತಿಸಾರ'ದಂತೆಯೇ ಅವರ 'ನಳಚರಿತ್ರೆ'ಯಲ್ಲಿಯೂ ಕಾಣಬಹುದು. ಪಂಪ, ಕುಮಾರವ್ಯಾಸರಂತಹ ಕವಿಗಳನ್ನು ಅನುಕರಿಸುವುದು ಸುಲಭವಲ್ಲ–ತಪ್ಪೂ ಅಲ್ಲ. ಆದರೆ ಹಾಗೆ ಅನುಕರಿಸಿ ತಮ್ಮ ಸ್ವಂತಿಕೆಯನ್ನು ಉಳಿಸಿಕೊಳ್ಳುವುದು ದೊಡ್ಡ ವಿಷಯ. ಆ ದೊಡ್ಡಸ್ತಿಕೆಯನ್ನು ಕನಕದಾಸರ ಈ ಎರಡು ಕೃತಿಗಳಲ್ಲಿಯೂ ಕಾಣಬಹುದು.

ಅತ್ಯಂತ ಜನಪ್ರಿಯವಾದ 'ನಳಚರಿತ್ರೆ' ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕಾಣಿಸಿಕೊಂಡಿದ್ದು ಬಹು ಮೆಚ್ಚಿಗೆ ಗಳಿಸಿದ ಕಥೆಯಾಗಿದೆ. ಇಷ್ಟೊಂದು ಜನಪ್ರಿಯವಾದ ಈ ಕಥೆ ಹದಿಮೂರನೆಯ ಶತಮಾನದಲ್ಲಿಯೇ ಕನ್ನಡದಲ್ಲಿ ಚೌಂಡರಸನಿಂದ ರಚನೆಗೊಂಡರೂ, ಚೌಂಡರಸನ ಈ 'ನಳಚಂಪು' ಅಷ್ಟೊಂದು ಜನಪ್ರಿಯವಾಗಲಿಲ್ಲ. ಸುಮಾರು ಎಂಟುನೂರು ಪದ್ಯಗಳನ್ನುಳ್ಳ ಈ ಚಂಪೂ ಕೃತಿ ಕಥೆಯ ಸ್ವಾರಸ್ಯಕ್ಕೆ ತಕ್ಕಂತೆ ಅರಳದೆ, ವರ್ಣನೆಗಳ ಭಾರದಲ್ಲಿ ಸೊರಗಿದೆ. ಪಾತ್ರಗಳ ಪೋಷಣೆಯೂ ಹೇಳಿಕೊಳ್ಳುವಂತಹುದೇನಲ್ಲ. ಚಂಪುವಿನ ಬಿಗಿಯಲ್ಲಿ ಬೀಗಿ, ಪ್ರೌಢತೆಯನ್ನಷ್ಟೇ ಮೆರೆದಿದೆ.

ನಳಚರಿತೆಯ ವಸ್ತುವೇ ಅತ್ಯಂತ ಆಕರ್ಷಕವಾದುದು. ಸ್ವಾರಸ್ಯದಿಂದ ಕೂಡಿದುದು. ನಿಪುಣ ಕವಿಯ ಕೈಯಲ್ಲಿ ಅದು ಹೇಗೆ ಬೇಕಾದರೂ ಅರಳಿ ಪ್ರಶಂಸೆಗೆ ಪಾತ್ರವಾಗಬಲ್ಲ ಸತ್ವವುಳ್ಳದ್ದು, ಸಂಸ್ಕೃತ ಮಹಾಭಾರತದ ವನಪರ್ವದಲ್ಲಿ ವಿಸ್ತಾರವಾಗಿ ಹರಡಿರುವ ನಳೋಪಾಖ್ಯಾನವೇ ಕನಕದಾಸರ 'ನಳಚರಿತ್ರೆ'ಗೆ ಆಕರ. ಇದರ ಮೂಲ ಹಾಗೂ ಪೂರ್ವಕವಿಗಳಿಂದ ರಚನೆಗೊಂಡ ಕೃತಿಗಳನ್ನು ಕನಕದಾಸರು ನೋಡಿದ್ದರೂ, ತಮ್ಮದೇ ಆದ ವಿಶಿಷ್ಟ ಮುದ್ರೆಯನ್ನು ಅವರು ಈ ಕೃತಿಯಲ್ಲಿ ಒತ್ತಿದ್ದಾರೆ. ಮೂಲದಲ್ಲಿಲ್ಲದ ಎಷ್ಟೋ ಸ್ವಾರಸ್ಯವನ್ನು ತಮ್ಮ ಕಾವ್ಯದಲ್ಲಿ ತರುವುದರ ಮೂಲಕ ಅದನ್ನೊಂದು ಪರಿಪೂರ್ಣ ಸ್ವತಂತ್ರ ಕೃತಿಯನ್ನಾಗಿ ಮಾಡಿದ್ದಾರೆ. ಅವರು ಅನೇಕ ವಿಷಯಗಳಲ್ಲಿ ಹಿಂದಿನ ಕವಿಗಳಿಗೆ ಬಹುಮಟ್ಟಿಗೆ ಋಣಿ ಎಂದು ಹೇಳಬಹುದಾದರೂ, ಅವರ ಸ್ವತಂತ್ರ ಪ್ರತಿಭೆ ಮತ್ತು ಕಲ್ಪನಾ ಚಮತ್ಕಾರಗಳು ಕಾವ್ಯದಲ್ಲೆಲ್ಲ ಪ್ರಕಾಶಿಸುತ್ತವೆ. ರಂಭೆಯೇ ಮೊದಲಾದ ಅಪ್ಸರ ಸ್ತ್ರೀಯರು ಇಂದ್ರಾಜ್ಞೆಯ ಮೇರೆಗೆ ನಳನಿಗೆ ಮುಂಚೆಯೇ ದಮಯಂತಿಯ ಬಳಿಗೆ ಬಂದರೆಂಬುದು ದಾಸರ ಸ್ವಕಪೋಲಕಲ್ಪನೆ.

ದಮಯಂತಿಯ ಪ್ರೇಮೋತ್ಕರ್ಷವನ್ನೂ, ನಳನೃಪನ ಪ್ರಾಮಾಣಿಕತೆಯನ್ನೂ ಪರೀಕ್ಷಿಸುವ ಸಲುವಾಗಿ ಈ ಸಂದರ್ಭವನ್ನು ಕವಿ ಸೃಷ್ಟಿಸಿಕೊಂಡಂತೆ ಕಾಣುತ್ತದೆ. ದಮಯಂತಿ ಯಾಗಪುತ್ರಿಯೆಂದು ಹೇಳುವಲ್ಲಿ ಅಲೌಕಿಕವಾದ ಶಕ್ತಿಯ ಪ್ರಭಾವವಲಯದಲ್ಲಿ ಕಥೆಯನ್ನು ನಡೆಸುವ ಉದ್ದೇಶ ಕವಿಗಿತ್ತೆಂದು ಹೇಳಬಹುದಾಗಿದೆ. ಹೆಬ್ಬಾವಿನ ಪ್ರಸಂಗವಂತೂ ಕವಿಯ ಕಲ್ಪನಾ ಪ್ರತಿಭೆಗೆ ದ್ಯೋತಕವಾಗಿದೆ. ಇಲ್ಲಿಯ ದಮಯಂತಿ ಕ್ರೂರಿಯಲ್ಲ, ದ್ವೇಷಶೀಲೆಯಲ್ಲ. ಕೃತಘ್ನಳಲ್ಲ, ಶೀಘ್ರ ಕೋಪಿಯಲ್ಲ. ಹೆಸರಿಗೆ ತಕ್ಕಂತೆ ಸಂಯಮಶೀಲೆ ಎಂಬ ಅವಳ ಸಹಜಸ್ವರೂಪ ಈ ಪ್ರಕರಣದಲ್ಲಿ ಎದ್ದು ಕಾಣುತ್ತದೆ" ಎಂಬ ವಿಮರ್ಶಕರ ಮಾತು ಸ್ವೀಕಾರಾರ್ಹವಾಗಿದೆ. ಕವಿ ಕಾವ್ಯದುದ್ದಕ್ಕೂ ಸ್ವಂತಿಕೆಯನ್ನು ಮೆರೆದಿದ್ದಾನೆ. ಕನಕದಾಸರು ತಮ್ಮ ಸಹಜ ಪ್ರತಿಭೆಯಿಂದ ಇದನ್ನೊಂದು ಸರಳ–ಸುಂದರ ಕಾವ್ಯವನ್ನಾಗಿಸುವಲ್ಲಿ ಯಶಸ್ವಿಯಾಗಿದ್ದಾರೆ. ಇಲ್ಲಿ ಬರುವ ವರ್ಣನೆಗಳು, ಪಾತ್ರಚಿತ್ರಣ, ಕಥಾನಿರ್ವಹಣ ರೀತಿ, ಅದಕ್ಕೆ ತಕ್ಕ ಭಾಷೆ–ಇವುಗಳಲ್ಲಿ ತಮ್ಮ ಕಾವ್ಯ ಕಲೆಯನ್ನು, ವಿಶಿಷ್ಟ ಪ್ರತಿಭೆಯನ್ನು ತೋರಿದ್ದಾರೆ. 'ಭಾಮಿನಿ ಷಟ್ಪದಿ' ಇಲ್ಲಿ ಅವರ ಪ್ರತಿಭೆಯ ಪುಂಗಿನಾದಕ್ಕೆ ತಕ್ಕಂತೆ ನರ್ತಿಸಿದೆ. ಉಪಮೆಗಳ ಸಂದರ್ಭದಲ್ಲಿ ಕುಮಾರವ್ಯಾಸನ ಪ್ರಭಾವಕ್ಕೆ ಹೆಚ್ಚು ಒಳಗಾಗಿರುವುದು ಅಲ್ಲಲ್ಲಿ ಸ್ಪಷ್ಟವಾದರೂ ಮಿಕ್ಕ ವಿಷಯದಲ್ಲಿ ಅದನ್ನು ಮರೆಸಿ, ಕಾವ್ಯಪ್ರತಿಭೆಯನ್ನು ತೋರುವ ಶಕ್ತಿ ಕನಕದಾಸರಲ್ಲಿ ಕಂಡುಬರುತ್ತದೆ. ಒಂದು ಕಡೆ ದಮಯಂತಿಯನ್ನು ಕವಿ ಹೀಗೆ ಬಣ್ಣಿಸುತ್ತಾನೆ :

ಮಿಸುನಿಯೋಲೆಯ ಢಾಳ ಕದಪಿನೊ
ಳೆಸೆಯೆ ಮೇಲುದು ಜಾರೆ ಕುಚಭರ
ಕುಸಿಯೆ ನಡುವಲ್ಲಾಡೆ ಮಸಗಿದ ಮಂದಹಾಸದಲಿ ॥
ಎಸೆವ ಸೋರ್ಮುಡಿ ಭಾರದಲಿ ಬಾ
ಗಿಸಿದ ಕೊರಳಿನ ಕೈಯ ವೀಣೆಯ
ಬಿಸರುಹಾಕ್ಷಿಯ ಸೊಬಗ ಬಣ್ಣಿಸಲರಿಯೆ ನಾನೆಂದ ॥

ಕುಡಿತೆಗಂಗಳ ಸಿರಿಮುಡಿಯ ಬಡ
ನಡುವ ಸೆಳೆವತಿ ಬೆಡಗಿನಲಿ ಹೊಂ
ಗೊಡ ಮೊಲೆಯ ವೈಯ್ಯಾರದುಡುಗೆಯ ಸಿರಿಯ ಸಡಗರದ ॥
ತೊಡರ ಝಣಝಣ ರವದ ಮೆಲ್ಲಡಿ

ಯಿಡುವ ಗಮನದ ಭರದಿ ಕಿರು ಬೆವ
ರಿಡುತ ಬಂದಳು ಸಖಿಯರೊಡನೆ ವಿವಾಹ ಮಂಟಪಕೆ ॥

ಕಾನನದಲ್ಲಿ ಪತಿಯ ಕಾಣದೆ ಹಂಬಲಿಸುವ ದಮಯಂತಿಯ ಚಿತ್ರ ಕವಿಯ ವರ್ಣನಾ ವೈಖರಿಗೆ ಮತ್ತೊಂದು ನಿದರ್ಶನವಾಗುತ್ತದೆ :

ನಳಿನಮುಖಿ ಮೈಮುರಿದು ನಿದ್ರೆಯ
ತಿಳಿದು ಮೆಲ್ಲನೆ ನೋಡಿದಳು ಎಡ
ಬಲವನೀಕ್ಷಿಸಿ ಪತಿಯ ಕಾಣದ ಬಲಿದ ಮೂರ್ಛೆಯಲಿ ।
ಮಲಗಿದಳು ಮೈಮರೆದು ನಿಮಿಷಕೆ
ತಿಳಿದು ಕಾಣದೆ ಕಾತರದಿ ಹಂ
ಬಲಿಸಿ ಹಲುಬಿದಳಲ್ಲಿ ಗಿರಿತರುನಿಕರ ಮಧ್ಯದಲಿ ॥

ಕನಕದಾಸರು ಚಿತ್ರಿಸಿರುವ ನಳನ ವಿಕಾರರೂಪ ವರ್ಣನೆ ಅವರ ವರ್ಣನಾ ವೈಖರಿಗೆ ಮತ್ತೊಂದು ನಿದರ್ಶನ. ಅವರ ಸ್ವೋಪಜ್ಞತೆಗೆ ಒಂದು ಸ್ಪಷ್ಟಸಾಕ್ಷಿ :

ದೊಡ್ಡ ಹೊಟ್ಟೆಯ ಗೂನು ಬೆನ್ನಿನ
ಅಡ್ಡ ಮೋರೆಯ ಗಂಟು ಮೂಗಿನ
ದೊಡ್ಡ ಕೈಕಾಲುಗಳ ವುದುರಿದ ರೋಮ ಮೀಸೆಗಳ
ಜಿಡ್ಡುದೇಹದ ಗುಜ್ಜಗೊರಲಿನ
ಗಿಡ್ಡುರೂಪಿನ ಹರಕು ಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥

ಕನಕದಾಸರು ಯಾರಿಂದ ಎಷ್ಟೇ ಪ್ರಭಾವಿತರಾಗಿದ್ದಾರೆ ಎಂದು ಮಾತಿದ್ದರೂ, ಅವರ ಕಾವ್ಯ ಕುಮಾರವ್ಯಾಸ ಭಾರತದಷ್ಟೇ ಜನಪ್ರಿಯವಾಗಿದೆ. ಜನಮನ್ನಣೆ ಗಳಿಸಿದ ಕಾವ್ಯವಾಗಿದೆ. ಅಲ್ಲಿಯ ವಸ್ತು, ಅದರ ನಿರ್ವಹಣೆ ಹಾಗೂ ಅಲ್ಲಿ ಬರುವ ವರ್ಣನೆಗಳು ಎಂತಹವರನ್ನೂ ಸೆಳೆದುಕೊಳ್ಳಬಲ್ಲ ಮೋಹಕ ಶಕ್ತಿಯನ್ನು ಪಡೆದಿವೆ. ಇದಕ್ಕೆ ಮೇಲಿನ ಕೆಲವು ಪದ್ಯಗಳೇ ಸಾಕ್ಷಿ. ಸಣ್ಣ ಕಥಾವಸ್ತುವೊಂದಕ್ಕೆ ಒಳ್ಳೆಯ ಕಾವ್ಯದ ಚೌಕಟ್ಟನ್ನೂ, ಸ್ಥಾನವನ್ನೂ ಕೊಟ್ಟ ಯಶಸ್ಸು ಕನಕದಾಸರದ್ದು. ಚೌಂಡರಸನ ಕೈಯಲ್ಲಿ ಸೊರಗಿದ್ದ ಮೂಲೆಗುಂಪಾಗಿದ್ದ ಕಾವ್ಯವಸ್ತುವಿಗೆ ಜೀವಕಳೆಯನ್ನಿತ್ತ ಕೀರ್ತಿ ಕನಕದಾಸರಿಗೆ ನಿಸ್ಸಂದೇಹವಾಗಿ ಸಲ್ಲುತ್ತದೆ. ಯಾವುದೇ ಸನ್ನಿವೇಶವನ್ನು ಕಥಾವಸ್ತುವನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಶಕ್ತಿ ಅವರದ್ದು. ಶೈಲಿಯಲ್ಲಿ ಸರಳತೆ ಕಂಡು ಬಂದರೂ ಕಾವ್ಯ

ಸೌಂದರ್ಯಕ್ಕೆ ಕೊರತೆಯಿಲ್ಲ. ಕುಮಾರವ್ಯಾಸನಂತೆಯೇ ದೇಸೀಯ ಸೊಗಡು ಇಲ್ಲಿಯೂ ಕಂಡು ಬರುತ್ತದೆ. ಎಲ್ಲ ವಿಷಯದಲ್ಲೂ ಕುಮಾರವ್ಯಾಸನನ್ನು ಮೀರಿಸದಿದ್ದರೂ ಅವನೊಂದಿಗೆ ಮರ್ಯಾದೆಯ ಸ್ಥಾನವನ್ನು ಪಡೆಯಬಲ್ಲ ಅರ್ಹತೆ ಪಡೆದ ಕವಿ ಕನಕದಾಸರು.

ಕನಕದಾಸರ ಸೃಷ್ಟಿಯೇ ಆದ 'ರಾಮಧಾನ್ಯ'ದ ವಸ್ತುವನ್ನೊಳಗೊಂಡ ಕಾವ್ಯ ಕೂಡ ಷಟ್ಪದಿಯಲ್ಲಿಯೇ ರಚನೆಗೊಂಡಿರುವ ಕೃತಿ. ಇಲ್ಲಿ ಅವರು ಹೊಸ ಬಗೆಯ ಕಾವ್ಯವಸ್ತುವನ್ನು ಸೃಷ್ಟಿಸಿರುವುದಷ್ಟೇ ಅಲ್ಲದೆ ವೈಶಿಷ್ಟ್ಯವನ್ನು ಮೆರೆದಿದ್ದಾರೆ. ವಸ್ತು ಸಾಮಾನ್ಯದ್ದೇ ಆದರೂ, ನಿಶ್ಚಿತ ಉದ್ದೇಶದೊಂದಿಗೆ ಕಾವ್ಯ ಗಂಭೀರವಾಗಿಯೇ ಸಾಗಿದೆ :

ಅಲ್ಲಿ ನೆರೆದ ಮಹಾಮುನೀಶ್ವರ
ರೆಲ್ಲ ತರಿಸಿದರಖಿಳ ವಸ್ತುವ
ಬೆಲ್ಲ ಸಕ್ಕರೆ ಜೇನುತುಪ್ಪ ರಸಾಯನಂಗಳಲಿ ॥
ಭುಲ್ಲವಿಸಿ ರಚಿಸಿದ ಸುಭಕ್ಷ್ಯಗ
ಳೆಲ್ಲವನು ತುಂಬಿದರು ಹೆಡಗೆಗೆ
ಳಲ್ಲಿ ಜೋಡಿಸಿ ಹೊರಿಸಿ ತಂದರು ರಾಯನೋಲಗಕೆ ॥

ಧಾನ್ಯವನ್ನು ಕಥೆಯ ಪ್ರಮುಖ ಪಾತ್ರವಾಗಿಸಿ ಕಾವ್ಯ ರಚಿಸಿದ ಮೊದಲ ಕೃತಿ ಇದೆನ್ನಬಹುದು. –ಆ ಕೀರ್ತಿಯೂ ಕನಕದಾಸರಿಗೇ ಸಲ್ಲುವಂತಹುದು. ಹಲವು ಪೌರಾಣಿಕ ಪಾತ್ರಗಳನ್ನು ಬಳಸಿಕೊಂಡು, ಸಾಮಾಜಿಕ ಪ್ರಜ್ಞೆಯನ್ನು ಮೆರೆದಿರುವ 'ರಾಮಧಾನ್ಯ ಚರಿತೆ' ಕನಕದಾಸರ ಕಲ್ಪನೆಯ ಒಂದು ಬೃಹತ್‌ಸೃಷ್ಟಿ.

* * *

ಕನಕದಾಸರು ಷಟ್ಪದಿಯಲ್ಲಿ ಕಾವ್ಯ ರಚಿಸಿ ಕುಮಾರವ್ಯಾಸನನ್ನು ನೆನಪಿಗೆ ತರುವಂತೆ, ತಮ್ಮ ಪ್ರತಿಭೆಯನ್ನು ತೋರಿಸಿರುವಂತೆಯೇ 'ಮೋಹನ ತರಂಗಿಣಿ' ಕೃತಿ ರಚನೆಯ ಮೂಲಕ ಸಾಂಗತ್ಯ ಕವಿಗಳ ಸಾಲಿನಲ್ಲಿಯೂ ಗಮನ ಸೆಳೆಯಬಲ್ಲ ಕಾವ್ಯ ಪ್ರತಿಭೆಯನ್ನೂ ತೋರಿದ್ದಾರೆ. ಸಾಂಗತ್ಯ ಕವಿಗಳಲ್ಲಿ ಅಗ್ರಗಣ್ಯನಾದ ರತ್ನಾಕರವರ್ಣಿ, ನಂಜುಂಡರ ಕಾವ್ಯಗಳ ಸಾಲಿನಲ್ಲಿ ಕನಕದಾಸರ 'ಮೋಹನ ತರಂಗಿಣಿ'ಯನ್ನು ಇಟ್ಟು ನೋಡುವಾಗ ವಸ್ತುವಿನ ದೃಷ್ಟಿಯಿಂದ 'ಭರತೇಶ ವೈಭವ' ಹಾಗೂ 'ಮೋಹನ ತರಂಗಿಣಿ' ಒಂದರ್ಥದಲ್ಲಿ ಹತ್ತಿರವಾಗಬಲ್ಲ ಕೃತಿಗಳಾದರೆ, 'ಕುಮಾರ ರಾಮನ ಸಾಂಗತ್ಯ' ಮತ್ತೊಂದು ದೃಷ್ಟಿಯಿಂದ ಇವೆರಡಕ್ಕೂ ಹತ್ತಿರವಾಗಿ ನಿಲ್ಲಬಲ್ಲ ಕೃತಿ.

ಕನಕದಾಸರ ಮೋಹನ ತರಂಗಿಣಿ ಪ್ರಧಾನವಾಗಿ ಶೃಂಗಾರ ಕಾವ್ಯ.

ಪ್ರೇಮದ ಕಥೆ. ಅಲ್ಲಿ ಬರುವ ಕೃಷ್ಣ-ರುಕ್ಮಿಣಿ, ರತಿ-ಮನ್ಮಥ ಹಾಗೂ ಉಷಾ-ಅನಿರುದ್ಧರ ಶೃಂಗಾರ ಕಾವ್ಯದ ಮೂಲ ಸತ್ವವಾಗಿದೆ. ಇಲ್ಲಿ ಬರುವ ಶ್ರೀ ಕೃಷ್ಣನ ಮೂಲಕ ಭಕ್ತಿಯ ಸೋಂಕು ಕಂಡು ಬಂದರೂ ಗೌಣ. ರತ್ನಾಕರ ವರ್ಣಿಯ ಭರತೇಶನಿಗೂ ಶ್ರೀಕೃಷ್ಣನಿಗೂ ಹಲವಂಶಗಳಲ್ಲಿ ಸಾಮ್ಯವಿದೆ. ಶ್ರೀಕೃಷ್ಣನು ಹದಿನಾರು ಸಾವಿರ ಪತ್ನಿಯರನ್ನು ಹೊಂದಿ ಲೋಲುಪ್ತನಾಗಿರುವಂತೆ ತೋರಿದರೂ ಅವನು ಯೋಗಿ ಹಾಗೆಯೇ ಭರತ ತೊಂಬತ್ತಾರು ಸಾವಿರ ಪತ್ನಿಯರನ್ನು ಹೊಂದಿ 'ಗಣನೆಯಿಲ್ಲದ ಸುಖದೊಳೋಲಾಡಿದರೂ ಅದರಲ್ಲಿಯೇ ನಿಂತವನಲ್ಲ. ಆದರೆ ರತ್ನಾಕರನ ಪ್ರಕಾರ ಭೋಗವು ಯೋಗದ ಮೊದಲ ಮೆಟ್ಟಲು ಎಂಬ ಪ್ರತಿಪಾದನೆ . ಆ ಹಿನ್ನೆಲೆಯಲ್ಲಿ ರತ್ನಾಕರವರ್ಣಿ, ಭರತನ ಭೋಗಜೀವನವನ್ನು ಬಣ್ಣಿಸುವಾಗ ಶೃಂಗಾರವನ್ನೂ ಅದರ ತುತ್ತತುದಿಗೊಯ್ದಿದ್ದಾನೆ. ಆ ಮೂಲಕ ಇಡೀ ಕಾವ್ಯವನ್ನು ಶೃಂಗಾರಮಯವಾಗಿಸಿದ್ದಾನೆ.

ಕನಕದಾಸರ 'ಮೋಹನ ತರಂಗಿಣಿ'ಯ ಕಥಾವಸ್ತು ಇದಕ್ಕಿಂತ ಸ್ವಲ್ಪ ಬೇರೆಯಾದರೂ, ತಿರುಳು ಒಂದೇ-ಶೃಂಗಾರ ಪ್ರಧಾನ. ಅಲ್ಲಿ ರತ್ನಾಕರವರ್ಣಿ ತ್ಯಾಗ-ಭೋಗಗಳ ಸಮನ್ವಯವನ್ನು ಸಾಧಿಸುವ ದೃಷ್ಟಿ ತೋರಿದ್ದಾರೆ, ಇಲ್ಲಿ ಕನಕದಾಸರು ಜೀವನದಲ್ಲಿ ಭೋಗಕ್ಕೂ ಸ್ಥಾನವಿದೆ ಎಂಬುದನ್ನು ಹೇಳ ಹೊರಟಂತೆ ಕಾಣುತ್ತದೆ. ಸಂತಕವಿಯಾದ ಕನಕದಾಸರು ಒಂದು ಕಡೆ ಅಪಾರವಾದ ಭಕ್ತಿಯನ್ನು, ಅಧ್ಯಾತ್ಮವನ್ನು ಮೆರೆದಿರುವಂತೆಯೇ ಮತ್ತೊಂದು ಕಡೆ ಶೃಂಗಾರದೆಡೆಗೂ ಗಮನ ಕೊಟ್ಟಿರುವುದನ್ನು ನೋಡಿದರೆ ರತ್ನಾಕರವರ್ಣಿಯ ಮನೋಭಾವ ಕನಕರಲ್ಲಿಯೂ ಕಂಡು ಬರುತ್ತದೆ. ಅದೇನೇ ಇದ್ದರೂ ಶೃಂಗಾರ ಕವಿಗಳಾಗಿ ಇಬ್ಬರೂ ಮನಸೆಳೆಯುತ್ತಾರೆ. ಕಾವ್ಯವನ್ನು ರಸಮಯವಾಗಿಸುವಲ್ಲಿ ಇಬ್ಬರೂ ಸ್ಪರ್ಧಿಸಿದ್ದಾರೆಂಬಂತೆ ಸನ್ನಿವೇಶಗಳೂ, ವರ್ಣನೆಗಳೂ ಕಾವ್ಯದುದ್ದಕ್ಕೂ ಬರುತ್ತದೆ. ಇಲ್ಲಿಯ ಶೃಂಗಾರ ಶ್ರೀಮಂತಿಕೆಯನ್ನು ನೋಡುವಾಗ, ಕನಕದಾಸರು ಇದನ್ನು ತರುಣದಲ್ಲಿಯೇ ಇನ್ನೂ ಆಧ್ಯಾತ್ಮಿಕತೆಯ ಕಡೆಗೆ ಪೂರ್ಣವಾಲುವ ಮೊದಲೇ ರಚಿಸಿರುವರೆಂಬುದು ಸ್ಪಷ್ಟ. ಕನಕದಾಸರು ತರುವ ಶೃಂಗಾರ ವಿಲಾಸದ ಲಾಸ್ಯವನ್ನು ಈ ಪದ್ಯಗಳಲ್ಲಿ ನೋಡಬಹುದು :

ನಳಿನೋದ್ಭವ ಕೋಟಿ ವತ್ಸರ ತನುವಿಡಿ
ದಳಿದೊಡದೇನು ವೃಥಾಯ
ಸುಳಿಗುರುಳ ಬಲೆಯ ತೋಳ ತಕ್ಕೆಯೊಳೊಂದು

ಗಳಿಗೆ ಬಾಳಲು ಮುಕ್ತಿಯಹುದು ।
ಹೊಳೆವ ಕೆಂಬಲ್ಲು ಚೆಂದುಟಿ ಕಂಬು ಕಂಠ ಕೌಂ
ಕುಳ ಕೋಮಲತ್ವ ನುಣ್ಮೊಲೆಯ
ಸ್ಥಳದಲ್ಲಿ ಮೊಗವಿಟ್ಟು ಮುಂಡಾಡಿ ಸೊಗ ಮಯ್ಯೊ
ಳಳವಟ್ಟು ಸಾವುದಚ್ಚರಿಯೆ ॥

ಇದು ಕನಕದಾಸರ ವೈಖರಿಯಾದರೆ, ಶೃಂಗಾರ ರಸದಲ್ಲಿಯೇ ಮುಳುಗಿದ ರತ್ನಾಕರವರ್ಣಿಯ ವರ್ಣನಾವೈಖರಿ ಮತ್ತೊಂದು ಬಗೆಯದು ; ಮಲಗಿದ್ದ ಭರತನು ಬಳಿಯಿದ್ದ ಪದ್ಮಿನಿಯನ್ನು ಕಂಡು,

ಕಣ್ದೆರೆದಾಕ್ಷಣ ಬರಸೆಳೆದಾ ತೊಂಡೆ
ವಣ್ಣುಟಿಯಬಲೆಯನಪ್ಪಿ
ನಾಣ್ದಾಣ ಜುಮ್ಮೆನೆ ಚುಂಬಿಸಿ ಲಲನೆಗೆ
ಗೇಣ್ದೋರಿದನು ಸ್ವರ್ಗಸುಖವ ॥

ಇದು ರತ್ನಾಕರವರ್ಣಿ ಕಾವ್ಯದಲ್ಲಿ ಬರುವ ಶೃಂಗಾರರಸದ ಒಂದು ಬಿಂದು ಮಾತ್ರ. ಕುಮಾರವ್ಯಾಸನ ಮಹಾಭಾರತದಂತೆ ರತ್ನಾಕರ ವರ್ಣಿಯ ಕಾವ್ಯದ ಹರಹೂ ಬಹಳ ದೊಡ್ಡದು. ಆ ವಿಸ್ತಾರದಲ್ಲಿ ಇಂತಹ ವರ್ಣನೆಗಳ ರಾಗ ಅದೆಷ್ಟೋ ಇದೆ.

ಸಾಂಗತ್ಯ ಕವಿಗಳ ಸಾಲಿನಲ್ಲಿ ನಂಜುಂಡ ಕವಿಯೂ ಗಮನ ಸೆಳೆಯುವ ಕವಿ. ಅವನ 'ಕುಮಾರರಾಮ ಸಾಂಗತ್ಯ' ಕನ್ನಡದ ವಿಶಿಷ್ಟ ಕೃತಿಗಳಲ್ಲಿ ಒಂದು. ಇದೊಂದು ಐತಿಹಾಸಿಕ ಕಾವ್ಯವಾಗಿ ಬಾಳಿ–ಬದುಕಿ, ಭಾರತೀಯ ಇತಿಹಾಸದಲ್ಲಿ ಸೇರಿದ ವ್ಯಕ್ತಿಗಳನ್ನೊಳಗೊಂಡು ವಿಶೇಷ ಮನ್ನಣೆಗೂ ಪಾತ್ರವಾಗಿದೆ. ಕುಮಾರ ರಾಮನ ಕಥೆ ಕರ್ನಾಟಕದಲ್ಲಿ ಒಂದು ವಿಶಿಷ್ಟ ಸ್ಥಾನವನ್ನೂ ಪಡೆದಿದೆ. ಅದು ಕೂಡ 'ನಳಚರಿತ್ರೆ' 'ಕುಮಾರವ್ಯಾಸ ಭಾರತ' 'ಭರತೇಶ ವೈಭವ'ಗಳಂತೆ ಜನಪ್ರಿಯ ಕಾವ್ಯ–ಜನಾದರಣೀಯ ಕಾವ್ಯ, ಸಹಜವಾಗಿಯೇ ಇಲ್ಲಿ ಯುದ್ಧ ವರ್ಣನೆಯನ್ನು ಕಾಣಬಹುದು. ನಂಜುಂಡ ಕವಿ ಶೃಂಗಾರರಸವನ್ನು ಕಾವ್ಯದಲ್ಲಿ ರಸ ಮಿಡಿಯುವಂತೆ ತಂದಿರುವಂತೆಯೇ, ಯುದ್ಧ ವರ್ಣನೆಯನ್ನು ಅದ್ಭುತವಾಗಿಯೇ ತಂದಿದ್ದಾನೆ. ಕ್ಷತ್ರಿಯನಾದ ನಂಜುಂಡ ಕವಿಗೆ ಅದು ಸುಲಭ ಸಾಧ್ಯವಾಗಿರುವಂತೆಯೇ ಸ್ವತಃ ದಂಡನಾಯಕನಾಗಿದ್ದ ಕನಕದಾಸನಿಗೂ ಅದು ದಕ್ಕಿದ ವಿಷಯವಾಗಿದೆ.

ಯುದ್ಧವರ್ಣನೆಗೆ ಸಾಂಗತ್ಯ ಅಷ್ಟಾಗಿ ಒಗ್ಗಿಬಂದ ಛಂದಸ್ಸಲ್ಲ ಎಂಬುದು

ನಿಜವಾದರೂ, ಈ ಈರ್ವರೂ ಅದನ್ನು ಸ್ವಲ್ಪಮಟ್ಟಿಗೆ ಸುಳ್ಳಾಗಿಸಿದ್ದಾರೆ. ಮೃದು ಮಧುರ ಭಾವನೆಗಳ ಅಭಿವ್ಯಕ್ತಿಗೆ ಹೇಳಿ ಮಾಡಿಸಿದಂತೆಯೇ, ಯುದ್ಧವರ್ಣನೆಗೂ ಹೊಂದಿಕೊಳ್ಳಬಲ್ಲದೆಂಬುದನ್ನು ಸಾಬೀತು ಮಾಡಿದ್ದಾರೆ. ಶೃಂಗಾರ ವರ್ಣನೆಯಲ್ಲಿ ರತ್ನಾಕರವರ್ಣಿ, ಕುಮಾರವ್ಯಾಸ, ನಂಜುಂಡ ಕವಿಗಳೊಂದಿಗೆ ಸ್ಪರ್ಧಿಸಿರುವಂತೆಯೇ, ಯುದ್ಧವರ್ಣನೆಯಲ್ಲಿಯೂ ಕನಕದಾಸರು ಗಮನ ಸೆಳೆದಿದ್ದಾರೆ. ಕುಂಭಾಂಡನಿಗೂ–ಅನಿರುದ್ಧನಿಗೂ ನಡೆಯುವ ಯುದ್ಧವರ್ಣನೆಯ ಚಿತ್ರ ಕನಕದಾಸರಲ್ಲಿ ಹೀಗೆ ಬರುತ್ತದೆ :

ಬಾಗಿಲ ತಿವಿದು ನೂಂಕುವ ದಂತಶಿರವ ವಿ
ಭಾಗಿಸಿ ಕೂರ್ಗಣೆಯಿಂದೆ
ತಾಗಿಸಿಜೋದರ ತಲೆಯನಾಗಕಾಗಿಪ
ಸಾಗಿಸಿದನು ಕೇಳ ಕೆಳದಿ ॥
ತುಂಡುಗಳ್ ತುಟಿಗಚ್ಚಿ ಗಗನದೊಳ್ ಮಾತಾಡೆ
ಮುಂಡಗಳ್ ನೆಲೆದೊಳು ಕುಣಿಯೆ
ಕೊಂಡಾಡುತಿರ್ದುವು ಕುಶಲದಿ ಕುಸುಮ ಕೋ
ದಂಡಾತ್ಮಜನ ಪೌರುಷವ
ಅಜವಿಂಡ ಹೊಕ್ಕ ಹೆಬ್ಬುಲಿಯಂತೆ ಸೊಕ್ಕಿದ
ಗಜವಿಂಡ ಸಿಂಹ ಹೊಕ್ಕಂತೆ
ಭುಜಗ ಸಮೂಹವ ಖಗರಾಜ ಹೊಕ್ಕಂತೆ
ಕುಜನರ ಕುಟ್ಟಿಹಾಯ್ಕಿದನು ॥

ಮತ್ತೊಂದೆಡೆ 'ಬಂದುದು ಯಾದವ ಬಲ ನೆಲನೀದಂತೆ' ಎಂಬಂತಹ ಉಪಮೆಗಳ ಮಾಲೆಯಲ್ಲಿ ರಣರಂಗದ ಚಿತ್ರವನ್ನು ಸೊಗಸಾಗಿ ತಂದಿದ್ದಾನೆ. ಕಂದ–ವೃತ್ತಗಳಲ್ಲಿಯಂತಹ ಅಥವಾ ಷಟ್ಪದಿಯಲ್ಲಿಯಂತಹ ಬಿರುಸನ್ನು ಇಲ್ಲಿ ಕಾಣದೆ ಹೋದರೂ, ಸಾಂಗತ್ಯದಂತಹ ಸರಳ ಛಂದಸ್ಸಿನಲ್ಲಿಯೂ ಕವಿ ಪ್ರತಿಭೆಯನ್ನು ತೋರಿ ಪರಿಣಾಮಕಾರಿಯಾಗಿಸಿರುವುದು ಪ್ರಶಂಸನೀಯ. ನಂಜುಂಡನೊಂದಿಗೆ ಕನಕದಾಸರನ್ನು ತೂಗಿ ನೋಡುವುದಾದರೆ ಈ ವಿಷಯದಲ್ಲಿ ಇಬ್ಬರೂ ಸಮಬಲರಾಗಿಯೇ ನಿಲ್ಲುತ್ತಾರೆ :

ಬಿಡಲು ಮೈಯ್‌ದಡವಿ ಗಿಡಗ ಗಿಳಿವಿಂಡ
ಕೆಡಹಿ ಕೊಡಹಿ ಕೊಲುವಂತೆ
ಕಡುಗಲಿ ರಾಮನೆನಲು ಕೂರ್ಗಣೆಗಳು

ಬಿಡದೆ ಕೊಂದವು ರಿಪುಗಳನು ॥
ಕರಿಯ ಹಿಂಡನು ಕೇಸರಿ ಕದಳೀವನಾಂ
ತರವ ಕಾಡಾನೆ ಪೊಕ್ಕಂತೆ
ಧುರ ಧರಣಿಯೊಳು ಕೊಂದನು ಬರಿಕಯ್ದನು
ಸುರತಾಳಬಲವನಾರಾಮ ॥

ಕಾಕತೀಯ ರುದ್ರನು ದಂಡೆತ್ತಿ ಬಂದನೆಂಬ ವಿಷಯವನ್ನು ತಿಳಿದು ಕಂಪರಾಜನು ಕೋಪಗೊಳ್ಳುವ ಬಗೆಯನ್ನು ನಂಜುಂಡ ಕವಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ : "ಮೀಸೆ ಕುಣಿಯೆ ಮೈಯ್ಯ ರೋಮ ಕಾರಿಡೆ ಕಣ್ಣು । ಸೂಸೆ ಕಿಡಿಯ ಮೊಗ ಹೊಗೆಯೆ, ಘಾಸಿಯಾಗಲು ಗಂಟಿನಿಂ ಪುರ್ಬು ನೃಪಕ । ಟ್ಟಾಸುರವನು ತಾಳಿದನು ॥"

ದೇಪರಾಜನ 'ಸೊಬಗಿನ ಸೋನೆ', ಕನಕದಾಸರ 'ಮೋಹನತರಂಗಿಣಿ' ಯಂತೆಯೇ ಶೃಂಗಾರ ಕಾವ್ಯ. ಕವಿ ತನ್ನ ಕೃತಿಯ ಬಗೆಗೆ 'ಜಾಣರ ಮೆಚ್ಚು' 'ರಸಿಕರ ರಸಾಯನ' ಎಂದು ಮುಂತಾಗಿ ಕರೆದುಕೊಂಡಿದ್ದಾನೆ. ಇದೂ ಕೂಡ ಸಾಂಗತ್ಯ ಕೃತಿಯೇ. ಆದರೆ ಕವಿ ತಾನೇ ಹೇಳಿಕೊಂಡಿರುವಷ್ಟು ಉತ್ತಮ ಕೃತಿಯೇನೂ ಅಲ್ಲ. 'ರಸಿಕರ ರಸಾಯನ' ಎಂದು ಕವಿ ಹೇಳಿಕೊಂಡಿದ್ದರೂ, ಅದು ಹಲವು ಅನೌಚಿತ್ಯಗಳಿಂದಾಗಿ ಸೊರಗಿದೆ. ಹದಿನೆಂಟು ವರ್ಣನೆಗಳನ್ನು ತನ್ನ ಕಾವ್ಯದಲ್ಲಿ ತಂದರೂ ಕನಕದಾಸರು, ಲಾಲಿತ್ಯದ ಭಾಷಾ ಬಳಕೆಯಿಂದಾಗಿ ರಸಿಕರ ಎದೆ ಮಿಡಿಯುವಂತೆ ಮಾಡಿದ್ದಾರೆ. ಆದರೆ ದೇವರಾಜ ಅದರಲ್ಲಿ ಸಿಕ್ಕಿಹಾಕಿಕೊಳ್ಳುವುದರ ಜೊತೆಗೆ ಭಾಷಾ ಪ್ರೌಢಿಮೆಯಿಂದ ಕಾವ್ಯವನ್ನು ಬಳಲಿಸಿದ್ದಾರೆ. ಆ ವಿಷಯದಲ್ಲಿ ಕನಕದಾಸರು ಜಾಣರು. ಭಾವಕ್ಕೆ ತಕ್ಕ ಭಾಷಾ ಬಳಕೆ ಅವರ ಯಶಸ್ಸಿನ ಗುಟ್ಟು. ಇಲ್ಲಿ ದೇವರಾಜ ಪ್ರತಿಭೆಗಿಂತ ಪಾಂಡಿತ್ಯವನ್ನು ಹೆಚ್ಚಾಗಿ ಮೆರೆದಿದ್ದರೆ, ಅಲ್ಲಿ ಕನಕದಾಸರು ಪಾಂಡಿತ್ಯವನ್ನು ಬದಿಗೊತ್ತಿ ಪ್ರತಿಭೆಯನ್ನು ಧಾರಾಳವಾಗಿ ಮೆರೆದಿದ್ದಾರೆ. 'ಸೊಬಗಿನ ಸೋನೆ'ಯ ಕಥೆ 'ಮೋಹನ ತರಂಗಿಣಿ'ಯ ಕಥೆಯಂತೆ ಒಳ್ಳೆಯದೇ ಆದರೂ, ನಿರ್ವಹಣೆ ಹಾಗೂ ಔಚಿತ್ಯ ಪ್ರಜ್ಞೆಯ ಕೊರತೆಯಿಂದಾಗಿ ಕಾವ್ಯ ಕಳೆಗುಂದಿದೆ. ಕವಿ ಔಚಿತ್ಯ ಪ್ರಜ್ಞೆಯನ್ನು ಕಳೆದುಕೊಂಡಾಗ ಕಾವ್ಯ ಏನಾಗುತ್ತದೆ ಎಂಬುದಕ್ಕೆ ಇದು ಸಾಕ್ಷಿ.

ಕನಕದಾಸ, ಕುಮಾರವ್ಯಾಸ, ರತ್ನಾಕರವರ್ಣಿ ಹಾಗೂ ನಂಜುಂಡಕವಿ– ಈ ನಾಲ್ವರೂ ಕನ್ನಡದ ಜನಪ್ರಿಯ ಕವಿಗಳೆ. ಇವರಲ್ಲಿ ರತ್ನಾಕರವರ್ಣಿ 'ಭರತೇಶ ವೈಭವ'ದಲ್ಲಿ ಯೋಗ–ಭೋಗ ಸಮನ್ವಯವನ್ನು ಒಬ್ಬ ಚಕ್ರವರ್ತಿಯ ಕಥೆಯ

ಮೂಲಕ ಸಾಧಿಸಿ ಅದನ್ನೊಂದು ಶೃಂಗಾರ ಕಾವ್ಯವಾಗಿಸುವುದರ ಮೂಲಕ ಪ್ರಶಂಸೆಗೆ ಪಾತ್ರನಾದರೆ, ಉಳಿದ ಮೂವರು ಪ್ರಚಲಿತ ವಸ್ತುವನ್ನೇ ತೆಗೆದುಕೊಂಡು ಅದಕ್ಕೆ ತಮ್ಮ ಪ್ರತಿಭೆಯ ಚಿನ್ನದ ಮೆರಗನ್ನು ಕೊಡುವುದರ ಮೂಲಕ ಜನಾದರಣೀಯವಾದವರು. ಜನಪ್ರಿಯತೆಯ ದೃಷ್ಟಿಯಿಂದಲೂ ಈ ನಾಲ್ವರೂ ಜೊತೆ ಜೊತೆಯಲ್ಲಿಯೇ ನಿಲ್ಲುವಂತಹವರು. ಕಾವ್ಯದ ಸಂದರ್ಭಗಳಲ್ಲಿ ಹಾಗೂ ಕಾವ್ಯಗುಣದ ಸಂದರ್ಭಗಳಲ್ಲಿ ಒಬ್ಬೊಬ್ಬರು ಒಂದು ರೀತಿಯ ಮೇಲುಗೈ ಸಾಧಿಸಿದವರು. ಒಬ್ಬರು ಒಂದರಲ್ಲಿ ಹೆಚ್ಚು ಮಿಂಚುವಂತೆ ಕಂಡುಬಂದರೆ ಮತ್ತೊಬ್ಬರು ಮತ್ತೊಂದರಲ್ಲಿ ಅತಿಶಯುವಾಗಿ ಆಕರ್ಷಿಸುವಂತಹವರು. ಒಂದರಲ್ಲಿ ತಲೆದೋರಬಹುದಾದ ಕೊರತೆಯನ್ನು ಮತ್ತೊಂದರಲ್ಲಿ ತುಂಬಿಕೊಡುವ ಅಸಾಧಾರಣ ಪ್ರತಿಭಾಶಕ್ತಿಯುಳ್ಳ ಕವಿಗಳಿವರು. ಕನಕದಾಸರಲ್ಲಿ ಆ ಒಂದು ಶಕ್ತಿ ಹೆಚ್ಚಾಗಿಯೇ ಕಂಡು ಬರುತ್ತದೆ. ಕಾರಣ : ಕನಕದಾಸರ ವ್ಯಕ್ತಿತ್ವ ವಿಶಿಷ್ಟಬಗೆಯದು. ಅವರು ಬೆಳೆದು ಬಂದ ಹಿನ್ನೆಲೆ ಅವರ ಕಾವ್ಯಕ್ಕೆ ಒಂದು ಹೊಸ ಹಾಗೂ ವಿಶಿಷ್ಟ ಮೆರಗನ್ನು ತಂದಿತ್ತಿದೆ. ಅವರ ಅನುಭವ, ಭಾಷಾ ಬಳಕೆ, ಸನ್ನಿವೇಶ ನಿರ್ಮಾಣ, ನುಡಿಗಟ್ಟುಗಳ ಹಾಗೂ ನಾಣ್ಣುಡಿಗಳ ಬಳಕೆ ಇವುಗಳಿಂದಾಗಿ ಕೆಲವೊಂದು ರಚನೆಗಳಲ್ಲಿ ಅವರ ಕಾವ್ಯದ ವಿಶಿಷ್ಟತೆ ಎದ್ದು ಕಾಣುತ್ತದೆ. ಹಾಗೆಯೇ ಕೆಲವೆಡೆ ಪ್ರೌಢತೆಯನ್ನು ತೋರಿದ್ದರೂ. ಅದು ಎಲ್ಲಿಯೂ ಕಡಲೆಯ ಮಧ್ಯದ ಕಲ್ಲಾಗಿಲ್ಲ, ಬೆಲ್ಲವಾಗಿದೆ.

ಕನಕದಾಸರ ಕೀರ್ತನೆಗಳು ಸಂಖ್ಯೆಯ ದೃಷ್ಟಿಯಿಂದ ಹೆಚ್ಚಿಲ್ಲ. ಆದರೆ ಮೌಲ್ಯದ ದೃಷ್ಟಿಯಿಂದ ಹೆಚ್ಚಿನವು. ಕನಕದಾಸರ ಮನೋಧರ್ಮವನ್ನು ಪ್ರಕಟಗೊಳಿಸುವಲ್ಲಿ ಅವು ಸಫಲಗೊಂಡಿವೆ. ಕಂಡದ್ದನ್ನು ಕಂಡಂತೆ ಹೇಳುವ ಅವರ ಗುಣದಿಂದಾಗಿ, ಅವರ ಕೀರ್ತನೆಗಳಲ್ಲಿ ಕಂಡುಬರುವ ಮೊನಚು ಉಳಿದ ಕೀರ್ತನಕಾರರಲ್ಲಿ ಕಾಣಲಾರದಂತಹುದು. 'ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ' ಎಂಬ ಕೀರ್ತನೆಯಲ್ಲಿನ ಅವರ ಬಿಚ್ಚುನುಡಿ ಉಳಿದವರಲ್ಲಿ ಅಪರೂಪ. "ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು, ನಿರ್ಮಲಿಲ್ಲದ ಮನಸು ತಾ ಕೊಳಚೆ ಹೊಲಸು" ಮುಂತಾದ ಕೀರ್ತನೆಗಳಲ್ಲಿ ಕಂಡುಬರುವ ಮನೋಧರ್ಮ ವಿಶಿಷ್ಟವಾದುದು. "ಕರುಣ ಬಂದರೆ ಕಾಯೋ ಮರಣ ಬಂದರೆ ಒಯ್ಯೊ" ಎಂಬ ಜನಪದರ ದಿಟ್ಟ ನುಡಿಗಳಂತೆಯೇ ಗಟ್ಟಿಯಾದುದು, ಬಿರುಸಾದುದು. ಈ ದೃಷ್ಟಿಯಿಂದ ಉಳಿದ ಕೀರ್ತನಕಾರರಿಗಿಂತ ಇವರದ್ದು ಭಿನ್ನ ಶೈಲಿ. ಅಲ್ಲಿಯ ಭಾಷೆಯ ಸೊಗಡೇ ಬೇರೆ. ಗ್ರಾಮೀಣ ಪರಿಸರದಿಂದ,

ಆ ನೆಲದ–ಜಲದ ಒಡನಾಟದಿಂದ ಬಂದ ಈತನಲ್ಲಿ ಧಾರಾಳವಾದ ಜಾನಪದ ಸೊಗಡಿದೆ. ಅದು ಅವರ ಅನುಭವದ ಅಭಿವ್ಯಕ್ತಿಗೆ ವಿಶಿಷ್ಟತೆಯನ್ನು ತಂದಿತ್ತಿದೆ. ಅಷ್ಟೇ ಅಲ್ಲ, ಸಮಾಜದ ಕೆಳವರ್ಗದಿಂದ ಬಂದ ಈ ಕವಿಗೆ ಎಲ್ಲಾ ದೇವರುಗಳೂ ಬೇಕು. ಸಾಮಾನ್ಯವಾಗಿ ಗ್ರಾಮೀಣ ಜನರಲ್ಲಿ ಕಂಡುಬರುವ ಸರ್ವಧರ್ಮ ಸಮನ್ವಯ ದೃಷ್ಟಿ–ಧೋರಣೆಗಳು ಈ ಕವಿಯಲ್ಲಿಯೂ ಅಷ್ಟೇ ಸಹಜವಾಗಿ ಕಂಡುಬರುತ್ತವೆ. ಕನಕದಾಸರಿಗಿದ್ದಂತೆ ಉಳಿದ ಕವಿಗಳಿಗಾಗಲೀ ಅದರಲ್ಲಿಯೂ ಹರಿದಾಸರಿಗೆ ಈ ಒಂದು ಹಿನ್ನೆಲೆ ಇರಲಿಲ್ಲವೆಂಬುದು ಗಮನಾರ್ಹ. ಆ ಕಾರಣದಿಂದಾಗಿಯೇ ಕನಕದಾಸರ ರಚನೆಗಳು ಅವರ ಸಾಹಿತ್ಯದ ಮಧ್ಯೆ ಎದ್ದು ಕಾಣುತ್ತದೆ :

ಡೋಲಿನ ಮೇಲ್ಕಯ್ಯ ಭರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಟಾನ್ಯಾ
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನ್ಯಾ
ಚಲುವ ಕನಕಪ್ಪ ಕುಣಿದಾನ್ಯಾ ॥

ಪೂರ್ಣ ಜನಪದ ಧಾಟಿಯ ಈ ಕೀರ್ತನೆಯಲ್ಲಿ ಸರ್ವಧರ್ಮದ ಸಮನ್ವಯನ್ನೂ ಸಾಧಿಸಿರುವುದು ಕನಕದಾಸರ ವಿಶಿಷ್ಟ ಪ್ರತಿಭೆಯೇ ಆಗಿದೆ. ಹಾಗೆಯೇ, "ಏನೆಂದಳೇನೆಂದಳೋ, ನಿನ್ನೊಳು ಸೀತೆ ಹನುಮಯ್ಯ" ಎಂಬ ಪಲ್ಲವಿ ಕೋಲಾಟದ ಹಾಡಿನ ಪಲ್ಲವಿಯನ್ನು ಕೂಡಲೇ ನೆನಪಿಸುತ್ತದೆ. "ಊರಿಗೆ ಬಂದರೆ ದಾಸಯ್ಯ" ಎಂಬ ಹಾಗೂ ಪೂರ್ಣವಾಗಿ ಕೋಲಾಟದ ಹಾಡನ್ನೇ ಹೋಲುವ "

ಕೋಲು ಕೊಳಲು ಕೈಲಿ ದಾಸಯ್ಯ ನೀ
ಕಲ್ಲಿಗೆ ವರವಿತ್ತೆ ದಾಸಯ್ಯ
ಮಲ್ಲನ ಮರ್ದಿಸಿ ಮಾವನ ಮಡುಹಿದ
ನೀಲಮೇಘಶ್ಯಾಮ ದಾಸಯ್ಯ ॥

ಕೀರ್ತನೆಗಳನ್ನು ಗಮನಿಸಿದಾಗ ಕನಕದಾಸರ ಸಾಚಾ ಜಾನಪದ ಶೈಲಿ ವ್ಯಕ್ತವಾಗುತ್ತದೆ.

ಹರಿದಾಸರುಗಳಲ್ಲಿ ಭಕ್ತಿಭಾವಕ್ಕೆ ಸಂಬಂಧಿಸಿದಂತೆ, ಸಮಾಜೋದ್ಧಾರಕ್ಕೆ ಸಂಬಂಧಿಸಿದಂತೆ ಅವರ ರಚನೆಗಳಲ್ಲಿ ಸಮಾನತೆ ವ್ಯಕ್ತವಾದರೂ, ಮುಖ್ಯವಾಗಿ ಅಭಿವ್ಯಕ್ತಿಯಲ್ಲಿ ಕನಕದಾಸರು ಅವರುಗಳಿಂದ ಭಿನ್ನವಾಗಿಯೇ ನಿಲ್ಲುತ್ತಾರೆ. ಗ್ರಾಮೀಣ ಸೊಗಡನ್ನು ಸೂಸುವುದರ ಮೂಲಕ ವಿಶಿಷ್ಟತೆಯನ್ನು ತೋರುತ್ತಾರೆ.

ಆದರೆ ವಚನಕಾರರ ಸಾಲಿನಲ್ಲಿ ಗಮನಿಸುವಾಗ, ಕನಕದಾಸರು ಹೆಚ್ಚು ಕಡಿಮೆ ಸಮಸಮವಾಗಿಯೇ ನಿಲ್ಲಬಲ್ಲರು. ಭಕ್ತಿಮಾರ್ಗದ ದೃಷ್ಟಿಯಿಂದಲಾಗಲಿ, ಕಾವ್ಯಾಭಿವ್ಯಕ್ತಿಯ ಅಥವಾ ಕಾವ್ಯಮೌಲ್ಯದ ದೃಷ್ಟಿಯಿಂದಲಾಗಲಿ ಪರಸ್ಪರ ಹೆಚ್ಚು ಹೋಲುತ್ತಾರೆ. ಏಕೆಂದರೆ ಕನಕದಾಸರಂತೆಯೇ ವಚನಕಾರರೂ ಸಮಾಜದ ವಿವಿಧ ಕ್ಷೇತ್ರದಿಂದ ಬಂದವರು. ಬದುಕಿನಲ್ಲಿ ಹೆಚ್ಚು ಹೋರಾಟ ನಡೆಸಿದವರು. ವ್ಯವಸ್ಥೆಯೊಂದರ ವಿರುದ್ಧ ಹೋರಾಟ ನಡೆಸುತ್ತಾ ತಮ್ಮ ಅಸ್ತಿತ್ವಕ್ಕಾಗಿ ಧ್ವನಿಯೆತ್ತಿದವರು. ಜೊತೆಜೊತೆಯಲ್ಲಿಯೇ ಭಕ್ತಿಮಾರ್ಗದ ಸುಗಮದಾರಿಯನ್ನು ತೋರಿಸಿಕೊಟ್ಟವರು. ಒಂದು ಕಡೆ ಬಸವಣ್ಣನವರು 'ನಿಮ್ಮ ಶರಣರ ಮನೆಯ ಮಗ ನಾನಯ್ಯ' ಎಂದು ಹೇಳಿಕೊಂಡಿರುವಂತೆಯೇ ಕನಕದಾಸರು ಒಂದೆಡೆ, "ದಾಸದಾಸರ ಮನೆಯ ದಾಸಿಯ ಮಗ ನಾನು" ಎಂದು ತಮ್ಮ ದಾಸತ್ವದ ಬಗೆಗೆ ಹೇಳಿಕೊಳ್ಳುತ್ತಾರೆ. "ಆನು ಭಕ್ತನಲ್ಲಯ್ಯ ಆನು ವೇಷಧಾರಿಯಯ್ಯಾ" ಎಂಬಂತೆಯೇ ಕನಕದಾಸರಲ್ಲಿ ಬರುವ: "ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ" ಎಂಬ ವಾಸ್ತವಿಕ ಸತ್ಯವನ್ನು ಬಯಲು ಮಾಡುತ್ತಾರೆ :

ಹಲವು ಮಣಿಗಳ ಕಟ್ಟಿ ಕುಣಿಕುಣಿದಾಡಿ
ಉಂಡು, ತಾಂಬೂಲಗೊಂಡು, ಹೋಹುದಲ್ಲಾ !
ಹಲವು ಪರಿಯಲಿ ವಿಭೂತಿಯ ಹೂಸಿ
ಗುಣಾಡಂಬರದ ನಡುವೆ ನಲಿನಲಿದಾಡಿ
ತನು–ಮನ–ಧನವ ಸಮರ್ಪಿಸದವರ
ಕೂಡಲ ಸಂಗಮದೇವರೆಂತೊಲಿವನಯ್ಯಾ ?

**ಎಂದು ಬಸವಣ್ಣನವರು ಪ್ರಶ್ನಿಸಿದರೆ, ಕನಕದಾಸರು :**

ಪಟ್ಟೆನಾಮವ ಬಳಿದು, ಪಾತ್ರೆ ಕೈಲಿ ಪಿಡಿದು
ಗುಟ್ಟಿನಲಿ ರಹಸ್ಯದ ಗುರುತರಿಯದೆ
ಕೆಟ್ಟ ಕೂಗನು ಕೂಗಿ ಬೊಗಳಿ ಬಾಯಾರುವಂಥ
ಹೊಟ್ಟೆಗುಡ ಮೃಗಗಳೆಲ್ಲ ಶ್ರೀವೈಷ್ಣವರೆ ಕೃಷ್ಣ?

ಇವರಿಬ್ಬರ ಧೋರಣೆ ಒಂದೇ ಆದರೂ, ಭಾಷಾ ಬಳಕೆಯಲ್ಲಿ ಕನಕದಾಸರು ಇನ್ನೂ ಮುಂದೆ ಹೋಗುತ್ತಾರೆ. ಅವರ ಭಾಷೆಯ ಮೊನಚು ನೇರವಾಗಿ ತಿವಿದು ಎಚ್ಚರಿಸುವಂತಹುದು.

ಕನಕದಾಸರು ಬಂದ ನೆಲೆ ಸೆಲೆಯ ಕಾರಣದಿಂದಾಗಿ ಅವರ ಸಾಹಿತ್ಯದ ಸೊಗಸೇ ವಿಶಿಷ್ಟವಾಗಿ ಕಂಡುಬರುತ್ತದೆ. ಅದು ಅವರ ಸಾಹಿತ್ಯದ ಮೌಲ್ಯವನ್ನ ಹೆಚ್ಚಿಸಿದೆ :

ನಾವು ಕುರುಬರು ನಮ್ಮ ದೇವರೊ ಬೀರಯ್ಯ
ಕಾವ ನಮ್ಮಜ್ಜ ನರಕುರಿಯ ಹಿಂಡುಗಳ ॥
ಅಷ್ಟ ಮದ ಮತ್ಸರಗಳೆಂತೆಂಬ ಟಗರುಗಳಿ
ದೃಷ್ಟಿ ಜೀವಾತ್ಮನೆಂಬೊ ಆಡು
ಸೃಷ್ಟಿ ಪ್ರಸಿದ್ಧವೆಂತೆಂಬುವಾ ಹೋತಗಳು
ಕಟ್ಟಿ ಕೋಲಿನಲಿ ಇರುತಿರುವ ನಮ್ಮಜ್ಜ ॥

ಈ ಬಗೆಯ ರಚನೆ ಕನಕದಾಸರಂತಹ ಕವಿಗೆ ಮಾತ್ರ ಸಾಧ್ಯವಾಗುವಂತಹುದು, ಅದನ್ನು ಬಿಟ್ಟರೆ ಅಂತಹ ಪರಿಸರದಿಂದ ಬಂದಂತಹವರಿಗೆ ಮಾತ್ರ ಸಾಧ್ಯವಾಗಬಹುದಾದಂತಹುದು. ದಾಸಸಾಹಿತ್ಯದಲ್ಲಿ ಕನಕದಾಸರೊಬ್ಬರನ್ನು ಬಿಟ್ಟರೆ, ವಚನ ಸಾಹಿತ್ಯದ ಹಲವರಲ್ಲಿ ಇಂತಹ ವಿಶಿಷ್ಟತೆ ಸ್ವಲ್ಪಮಟ್ಟಿಗೆ ಕಂಡುಬರುತ್ತದೆ.

ದಾಸರಾಗಲಿ, ವಚನಕಾರರಾಗಲಿ ಬರಿಯ ಒಣ ತತ್ತ್ವವನ್ನಷ್ಟೇ ಬೋಧಿಸ ಹೊರಟವರಲ್ಲ. ನಡೆ–ನುಡಿಯ ಮಹತ್ವವನ್ನೂ ಕುರಿತು ಸಾರಿದವರು. ಇವುಗಳ ಹೊರತು ಮುಕ್ತಿ ಸಾಧ್ಯವಿಲ್ಲವೆಂಬುದನ್ನು ತಿಳಿಯಹೇಳಿದವರು. ಇವರಿಬ್ಬರಲ್ಲಿ ಹೇಳುವ ರೀತಿಯಲ್ಲಿ ವ್ಯತ್ಯಾಸ ಕಂಡುಬರುವುದೇ ಹೊರತು, ಉದ್ದೇಶದಲ್ಲಲ್ಲ:

ಏನು ಬರುವುದೋ ಸಂಗ । ಡೇನು ಬರುವುದೋ
ದಾನ ಧರ್ಮ ಮಾಡಿ ಬಹು ನಿ । ಧಾನಿ ಎನಿಸಿಕೊಳ್ಳು ಮನುಜ ॥
ಹೆಂಡಿರಿಲ್ಲ ಮಕ್ಕಳಿಲ್ಲ ಮಂಡೆ ತುಂಬ ಬಂಧು ಬಳಗ
ಕಂಡು ಬಿಡಿಸಿಕೊಂಬರಾರೊ ದಿಂಡಿಯಮನ ದೂತರೆಳೆಯ
ಬಂಡಿ ತುಂಬ ಇದ್ದ ಧನವು ಹಿಂದೆ ಉಳಿವುದಲ್ಲೊ ನಿನ್ನ
ಪೊಂದಿಕೊಂಡು ಬರುವ ವಸ್ತು ಕೀರ್ತಿ ಅಪಕೀರ್ತಿ ಎರಡೆ ॥

ಎಂದು ಕನಕದಾಸರು ಹೇಳಿದರೆ, ಬಸವಣ್ಣನವರಲ್ಲಿ ಅದು ;

ಸಂಸಾರವೆಂಬುದೊಂದು ಗಾಳಿಯ ಸೊಡರು,
ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯ ।
ಇದನೆಚ್ಚಿ ಕೆಡಬೇಡ–ಸಿರಿಯೆಂಬುದ ।
ಮಱೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವ ॥

ಪಂಚೇಂದ್ರಿಯಗಳು ಒಂದು ರೀತಿಯಲ್ಲಿ ಮಾನವನ ವೈರಿಗಳೂ ಹೌದು. ಅವು ಆತನನ್ನು ತಪ್ಪುದಾರಿಗೆ ಎಳೆಯುವ ಸಾಧನಗಳು. ಅವುಗಳನ್ನು ನಿಯಂತ್ರಿಸಲು ಆತ್ಮ ಸಂಯಮ ಬೇಕಾಗುತ್ತದೆ. ಅದರ ಕೊರತೆಯಿಂದ ಕೆಟ್ಟವರೇ

ಬಹುಮಂದಿ ಎಂಬ ವಿಚಾರವನ್ನು ಎಲ್ಲಾ ಸಾಧಕರೂ ವಿವಿಧ ರೀತಿಯಲ್ಲಿ ಹೇಳಿದ್ದಾರೆ. ಸರ್ವಜ್ಞ ಒಂದೆಡೆ ಅದನ್ನು :

ಕಣ್ಣು ನಾಲಗೆ ಮನವು ತನ್ನದೆಂದೆನಬೇಡ
ಅನ್ಯರು ಕೊಂದರೆನಬೇಡ । ಇವು ಮೂರು
ತನ್ನನೇ ಕೊಲ್ಲುವುವು ಸರ್ವಜ್ಞ ॥

ಎಂದು ಹೇಳಿದ್ದರೆ ; ಬಸವಣ್ಣನವರು ಬೇರೆ ಸಂದರ್ಭದ ಹಿನ್ನೆಲೆಯಲ್ಲಿ:

ಅತ್ತಲಿತ್ತಲು ಹೋಗದಂತೆ ಹೆಳವನ ಮಾಡಯ್ಯಾ ತಂದೆ :
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ ;
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ ;
ನಿಮ್ಮ ಶರಣರ ಪಾದವಲ್ಲದೆ
ಅನ್ಯ ವಿಷಯಕ್ಕೆಳಸದಂತೆ ಇರಿಸು, ಕೂಡಲ ಸಂಗಮದೇವ ॥

ಎಂದು ಭಗವಂತನಲ್ಲಿ ಪ್ರಾರ್ಥಿಸುತ್ತಾರೆ. ಸಾಧನೆಗೆ ಅಡ್ಡಿಯಾಗುವ ಈ ಇಂದ್ರಿಯಗಳ ಬಗ್ಗೆ ವಹಿಸಬೇಕಾದ ಎಚ್ಚರವನ್ನು ಹಾಗೂ ಅವುಗಳ ಸ್ವರೂಪವನ್ನೂ ಹೇಳಿದ್ದಾರೆ. ಆದರೆ ಕನಕದಾಸರಲ್ಲಿ ಇದು ಬೇರೊಂದು ರೀತಿಯಲ್ಲಿಯೇ ಬಣ್ಣಿತವಾಗಿದೆ. ಆ ಪಂಚೇಂದ್ರಿಯಗಳ ನೆರವಿನಿಂದಲೇ ಹೇಗೆ ಮಾನವ ಉದ್ಧಾರದ ಹಾದಿಯನ್ನು ಹಿಡಿಯಬಹುದು ಎಂಬುದನ್ನು ಹೇಳುವಲ್ಲಿ ವಿಶಿಷ್ಟತೆಯನ್ನು ಕನಕದಾಸರು ತೋರಿದ್ದಾರೆ :

"ಕಣ್ಣೇ ಕಾಮನ ಬೀಜ
ಕಣ್ಣಿನಿಂದಲೆ ನೋಡು ಮೋಕ್ಷ ಸಾಮ್ರಾಜ್ಯ
ಕಣ್ಣಿನ ಮೂರುತಿ ಬಿಗಿದು । ಒಳ
ಗಣ್ಣಿಂದಲೆ ದೇವರ ನೋಡಣ್ಣ ॥
ಮೂಗೆ ಶ್ವಾಸ ನಿಶ್ವಾಸ । ಈ
ಮೂಗಿನಿಂದಲೆ ಕಾಣೊ ಯೋಗ ಸನ್ಯಾಸ
ಮೂಗನಾದರೆ ವಿಶೇಷ । ಒಳ
ಮೂಗಿನಿಂದ ನೋಡಣ್ಣ ಲೀಲಾವಿಲಾಸ ॥
ಕಿವಿಯೆ ಕರ್ಮಕೆ ದ್ವಾರ । ಈ
ಕಿವಿಯಿಂದಲೆ ಕೇಳೋ ಮೋಕ್ಷಸಾರ
ಕಿವಿಯೆ ಕರ್ಮಕುಠಾರ । ಒಳ
ಗಿವಿಯಲ್ಲಿ ಕಾಣೊ ನಾದದ ಬೇರ ॥

ಕಿವಿ, ಕಣ್ಣು, ಮೂಗು ಮುಂತಾದ ಇಂದ್ರಿಯಗಳು ವ್ಯಕ್ತಿಯ ನಾಶಕ್ಕೆಂತೋ, ಅಂತೆಯೇ ಉದ್ಧಾರಕ್ಕೂ ಕಾರಣವಾಗಬಲ್ಲವು–ನೆರವಾಗಬಲ್ಲವು. ಆದರೆ ಅವನ್ನು ಬಳಸಿಕೊಳ್ಳುವ ಮಾರ್ಗವನ್ನು ಕಂಡುಕೊಳ್ಳಬೇಕು. ಹಿಂದಿನವರು ಯಾವುದನ್ನು ಮಾನವನ ಶತ್ರುಗಳೆಂದು ಹೇಳಿದ್ದರೋ, ಅವುಗಳಲ್ಲಿಯೇ ಮಿತ್ರತ್ವವನ್ನು ಕಾಣುವ ಬಗೆಯನ್ನು ಕನಕದಾಸರು ತೋರಿದ್ದಾರೆ.

ಕನಕದಾಸರ ಮತ್ತೊಂದು ವೈಶಿಷ್ಟ್ಯ ಕಂಡು ಬರುವುದು ಅವರು ರಚಿಸಿರುವ ಮುಂಡಿಗೆಗಳಲ್ಲಿ. ಇವುಗಳು ಕುಮಾರವ್ಯಾಸನಲ್ಲಿ ಬರುವ–

ವೇದ ಪುರುಷನ ಸುತನಸುತನ ಸ
ಹೋದರನ ಹೆಮ್ಮಗನ ಮಗನ ತ
ಳೋದರಿಯ ಮಾತುಳನ ಮಾವನನತುಳ ಭುಜಬಲದಿ
ಕಾದಿಗೆಲಿದವನಣ್ಣನವ್ವೆಯ
ನಾದಿನಿಯ ಜಠರದಲಿ ಜನಿಸಿದ
ನಾದಿಮೂರುತಿ ಸಲಹೊ ಗದುಗಿನ ವೀರನಾರಾಯಣ ॥

ಪದ್ಯಗಳಂತಹ ಹಾಗೂ ವಚನ ಸಾಹಿತ್ಯದಲ್ಲಿ ಬರುವ ಬೆಡಗಿನ ವಚನಗಳನ್ನು ಹೋಲುವಂತಹವು. ಬೌದ್ಧಿಕ ಕಸರತ್ತಿಗೆ ಎಡೆಮಾಡಿಕೊಡುವ ಇಂತಹ ಸಾಂಕೇತಿಕ ಶೈಲಿಯಲ್ಲಿ ಕನಕದಾಸರೂ 'ಮುಂಡಿಗೆ'ಗಳನ್ನು ರಚಿಸಿದ್ದಾರೆ.

ಬಾಯೊಳಗಿಹ ಗಂಡನ ನಿಜ ತಮ್ಮನ
ತಾಯ ಪಿತನ ಮಡದಿಯ ಧರಿಸಿದನ
ಸ್ತ್ರೀಯಳ ಸುತನ ಕೈಯಲಿ ಶಾಪಪಡೆದನ
ದಾಯಾದ್ಯನ ಮಗನ
ಸಾಯಕವದು ತೀವ್ರದಿ ಬರುತಿದೆ ಕಂಡು
ಮಾಯಾಪತಿ ಭೂಮಿಯನೊತ್ತಿ ತನ್ನಯ
ಬೀಯಗಾರನ ತಲೆಗಾಯಿದಂಥ
ರಾಯನ ಕರೆದು ತೋರೆ ರಮಣಿ ॥

ಈ ಬಗೆಯ ರಚನೆಗಳು ಜಾಣ್ಮೆ, ಚಮತ್ಕಾರ ಹಾಗೂ ಪಾಂಡಿತ್ಯ, ಪ್ರತಿಭೆಗಳಿಂದ ಕೂಡಿದವುಗಳು. ಗೂಢಾರ್ಥದಿಂದ ಕೂಡಿದ ಇವುಗಳನ್ನು ತಿಳಿಯಬೇಕಾದರೆ ಸಾಕಷ್ಟು ತಿಣುಕಬೇಕಾಗುತ್ತದೆ ; ಪೌರಾಣಿಕವಾದ ಹಾಗೂ ಅಧ್ಯಾತ್ಮದ ಸ್ಪಷ್ಟ ಪರಿಚಯವಿರಬೇಕಾಗುತ್ತದೆ. ಕನಕದಾಸರು ಕೀರ್ತನೆ, ಕಾವ್ಯರಚನೆಗಳ ಜೊತೆಗೆ ಇಂತಹ 'ಮುಂಡಿಗೆ'ಗಳನ್ನು ರಚಿಸುವುದರ ಮೂಲಕ

ಗಾಢವಾದ ಪಾಂಡಿತ್ಯವನ್ನೂ ಮೆರೆದಿದ್ದಾರೆ. ಹಲವು ಟೀಕಾಕಾರರ ಬಾಯಿ ಮುಚ್ಚಿಸುವುದಕ್ಕೂ ಇವು ಸಹಾಯಕವಾಗಿರಬೇಕು. ಆ ಮೂಲಕ ತಮ್ಮ ಬಹುಮುಖ ಪ್ರತಿಭೆಯನ್ನು ಕನಕದಾಸರು ತೋರಿದ್ದಾರೆ. ಕೀರ್ತನೆ, ಷಟ್ಪದಿ, ಸಾಂಗತ್ಯಗಳಂತಹ ಛಂದಸ್ಸಿನಲ್ಲಿ ಸರಳ ರಚನೆಯನ್ನು ಮಾಡಿ ಜನಪ್ರಿಯ ಕವಿಯಾದಂತೆಯೇ, 'ಮುಂಡಿಗೆ'ಗಳಂತಹ ರಚನೆಗಳ ಮೂಲಕ ಪಂಡಿತ ಕವಿಗಳ ಸಾಲಿನಲ್ಲಿಯೂ ಸ್ಥಾನ ಪಡೆದಿದ್ದಾರೆ.

* * *

ಕನಕದಾಸರ ವ್ಯಕ್ತಿತ್ವ ಮತ್ತು ಪ್ರತಿಭೆ ವಿಶಿಷ್ಟ ಬಗೆಯದು. ಅವರು ನಡೆದು ಬಂದ ಹಾದಿಯ ಹಿನ್ನೆಲೆಯಲ್ಲಿ ಅದಕ್ಕೊಂದು ವಿಶಿಷ್ಟ ಮಹತ್ವವಿದೆ–ಸತ್ವವಿದೆ ಹಾಗೂ ತತ್ವವೂ ಇದೆ. ಕನ್ನಡ ಸಾಹಿತ್ಯದ ಚಂಪೂ ಕವಿಗಳ ಸಾಲಿನಲ್ಲಾಗಲಿ; ಷಟ್ಪದಿ, ಸಾಂಗತ್ಯ ಅಥವಾ ಕೀರ್ತನಕಾರರ ಸಾಲಿನಲ್ಲಾಗಲಲಿ ಕನಕದಾಸರ ತಮ್ಮದೇ ಆದ ಸ್ಥಾನವನ್ನು ಕಾಯ್ದುಕೊಂಡು ಬಂದಿದ್ದಾರೆ. ಕೀರ್ತನಕಾರ, ಸಂತ, ಕವಿ ಹಾಗೂ ಕಲಿ ಎನಿಸಿದ ಕನಕದಾಸರ ಅನುಭವ ವ್ಯಾಪಕವಾದುದು, ವಿಶಿಷ್ಟ ರೀತಿಯದು. ಚಂಪೂ ಕವಿಗಳ ಸಾಲಿನಲ್ಲಿ ಪ್ರತಿಭೆಯಲ್ಲಿ ಕನಕದಾಸರಿಗಿಂತ ದೊಡ್ಡವರಿರಬಹುದು ; ಆದರೆ ಅವರಾರೂ ಇವರಂತೆ ಕೀರ್ತನೆಗಳನ್ನಾಗಲಿ, ಮುಂಡಿಗೆಗಳನ್ನಾಗಲಿ ರಚಿಸಿದವರಲ್ಲ ; ಸಂತರೆನಿಸಿಕೊಂಡವರೂ ಅಲ್ಲ. ಷಟ್ಪದಿ ಕವಿಗಳ ಗುಂಪಿನಲ್ಲಾಗಲಿ ಅಥವಾ ಸಾಂಗತ್ಯ ಕವಿಗಳ ಗುಂಪಿನಲ್ಲಾಗಲೀ ಇದೇ ಪರಿಸ್ಥಿತಿ. ವಚನಕಾರರ ಸಾಲಿನಲ್ಲಿ ಹಲವಂಶಗಳಲ್ಲಿ ಅವರಿಗೆ ಹೆಗಲೆಣೆಯಾಗಿ ನಿಲ್ಲಬಲ್ಲವರಾದರೂ, ಅವರಲ್ಲಿಯ ಬಹುತೇಕ ಮಂದಿಯಂತೆ ಕೇವಲ ವಚನಕ್ಕಷ್ಟೇ ಸೀಮಿತಗೊಳ್ಳದೆ ಕಾವ್ಯರಚನೆಗೂ ಕೈಹಾಕಿದ್ದು ಕನಕದಾಸರ ವಿಶಿಷ್ಟ ಪ್ರತಿಭೆಗೆ ಮತ್ತೊಂದು ನಿದರ್ಶನ. ದಾಸಪರಂಪರೆಯಲ್ಲಿ ಉಳಿದೆಲ್ಲ ಅಂಶಗಳ ಜೊತೆಗೆ ಕನಕದಾಸರು ತೋರಿದ ಕ್ರಾಂತಿಕಾರಕ ಮನೋಭಾವ ಅವರ ದಿಟ್ಟತನಕ್ಕೆ ಸಾಕ್ಷಿ. ಅವರ ಕೀರ್ತನೆಗಳಲ್ಲಿ ಕಂಡುಬರುವ ನಿರ್ಭಯ ಅಭಿವ್ಯಕ್ತಿ ಕನಕದಾಸರ ಸಾಹಿತ್ಯಕ್ಕೆ ಒಂದು ಅಪೂರ್ವತೆಯನ್ನು ತಂದುಕೊಟ್ಟಿದೆ : "ತೀರ್ಥವನು ಪಿಡಿದವರೆಲ್ಲ ತಿರುನಾಮ ಧಾರಿಗಳೆ, ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ" ಎಂಬಂತಹ ನುಡಿಗಳು ಆ ಕಾಲಕ್ಕೆ ಸಾಮಾನ್ಯವಾದುವುಗಳೇನೂ ಅಲ್ಲ.

ಭಾಷೆಯ ಬಳಕೆಯ ದೃಷ್ಟಿಯಿಂದ ಕನಕದಾಸರು ಕುಮಾರವ್ಯಾಸನಿಗೆ ಹತ್ತಿರವಾಗುವಂತೆಯೇ, ಸಾಂಗತ್ಯ ಕವಿಗಳ ಸಾಲಿನಲ್ಲಿ ಎದ್ದು ಕಾಣುವ ಸಿದ್ಧಿಯನ್ನು ಪಡೆದವರು. ಕೀರ್ತನಕಾರರ ಗುಂಪಿನಲ್ಲಿಯಂತೂ ಅವರದ್ದು

ವಿಶಿಷ್ಟ ಶೈಲಿ. ಹಲವೆಡೆ ಅವರು ಬಳಸಿರುವ ದಟ್ಟವಾದ ಗ್ರಾಮ್ಯ ಶೈಲಿಯಿಂದಾಗಿ ಅವರ ರಚನೆಗಳು ವಿಶೇಷ ಆಕರ್ಷಣೆಯನ್ನು ಹೊಂದಿರುವುದಷ್ಟೇ ಅಲ್ಲದೆ, ಪರಿಣಾಮ ಬೀರುವ ಶಕ್ತಿಯನ್ನೂ ಅಪೂರ್ವ ರೀತಿಯಲ್ಲಿ ಪಡೆದುಕೊಂಡಿವೆ. ಸಮಕಾಲೀನ ವಾಸ್ತವಿಕ ಚಿತ್ರಣವನ್ನು ಕೊಡುವಲ್ಲಿಯಾಗಲಿ, ಅಗತ್ಯವಾದೆಡೆಗಳಲ್ಲಿ ಸುಂದರವಾದ ವಿಸ್ತಾರ ವರ್ಣನೆಗಳನ್ನು ತರುವಲ್ಲಿಯಾಗಲಿ ಕನಕದಾಸರ ವಿಶಿಷ್ಟ ಪ್ರತಿಭೆ ಗರಿಗೆದರಿದುವುದನ್ನು ಕಾಣಬಹುದು. ಅಧ್ಯಾತ್ಮ–ಶೃಂಗಾರಗಳೆರಡನ್ನೂ ಏಕಕಾಲದಲ್ಲಿ ಮೆರೆಯುವಲ್ಲಿ ರತ್ನಾಕರವರ್ಣಿಗೆ ಸಮನಾದ ಪ್ರತಿಭೆಯನ್ನು ಕನಕದಾಸರು ತೋರಿದ್ದಾರೆ ; ಎಲ್ಲಿಯೂ 'ಸೊಬಗಿನ ಸೋನೆ'ಯು ದೇಪರಾಜನಂತೆ ಅನೌಚಿತ್ಯಕ್ಕೆ ಮಣೆ ಹಾಕಿಲ್ಲ.

ಕನಕದಾಸರ ಸಮಗ್ರ ಕೃತಿಗಳನ್ನು ಒಟ್ಟಾರೆ ಪರಿಶೀಲಿಸುವಾಗ ; ಕೀರ್ತನಕಾರ ಕನಕದಾಸರೇ ಬೇರೆ, ಕಾವ್ಯಗಳ ಕನಕದಾಸರೇ ಬೇರೆ ಎಂಬಂತೆ ಭ್ರಮೆ ಹುಟ್ಟಿಸುವ ವಿಶಿಷ್ಟ ಕಾವ್ಯ ಪ್ರತಿಭೆ ಅವರದ್ದು. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಕನಕದಾಸರ ಸ್ಥಾನ ವಿಶಿಷ್ಟವಾದುದು ; ಕೀರ್ತನಕಾರರ ಸಾಲಿನಲ್ಲಿ ಅಪೂರ್ವತೆಯನ್ನು ತೋರಿದಂತೆಯೇ ಕನ್ನಡ ಕವಿಗಳ ಸಾಲಿನಲ್ಲಿ ಸಮಾನವಾಗಿ ಸ್ಪರ್ಧಿಸಬಲ್ಲ ಸಾಮರ್ಥ್ಯದ ಕನಕದಾಸರು ; ಸಂತರ ಸಾಲಿನಲ್ಲಿ ತಮ್ಮ ಸಮತೋಲನ ಹಾಗೂ ಪಂಥಾತೀತ ಗುಣಗಳನ್ನು ಮೆರೆದು ಅದ್ವಿತೀಯರೆನಿಸಿದವರು.

ಇಷ್ಟಾದರೂ, ಕನಕದಾಸರ ಕಾವ್ಯ ಪ್ರತಿಭೆಗೆ ದೊರೆಯಬೇಕಾದ ಮನ್ನಣೆ ದೊರೆತಿಲ್ಲ. ಅವರ ಬಹುಮುಖ ಪ್ರತಿಭೆಗೆ ಸಲ್ಲಬೇಕಾದ ಗೌರವ ಸಂದಿಲ್ಲ. ಕಾವ್ಯ ಮೌಲ್ಯ, ಜೀವನ ಮೌಲ್ಯಗಳೆರಡನ್ನೂ ಸಂಗಮಗೊಳಿಸಿ ನೀಡಿದ ಈ ಕವಿಯ ಪ್ರತಿಭೆಗೆ ತಕ್ಕ ಗೌರವ ಸಲ್ಲುವ ಕಾಲ ಹತ್ತಿರವಾಗಲೆಂಬ ಅನಿಸಿಕೆ ಸಹಜವಾದದ್ದು.

## ಗ್ರಂಥಋಣ

೧. ಕನಕ ಸಾಹಿತ್ಯ ಚರಿತ್ರೆ–ರಂ. ಶ್ರೀ. ಮುಗಳಿ
೨. ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ–ತ. ಸು. ಶಾಮರಾಯ
೩. ನಳಚರಿತ್ರೆ–(ಸಂ.) ದೇ. ಜವರೇಗೌಡ
೪. ರಾಮಧಾನ್ಯ ಚರಿತೆ–(ಸಂ.) ದೇ. ಜವರೇಗೌಡ
೫. ಮೋಹನ ತರಂಗಿಣಿ ಸಂಗ್ರಹ–(ಸಂ.) ಬಿ. ಎಸ್. ಸಣ್ಣಯ್ಯ
೬. ಜನಪ್ರಿಯ ಕನಕ ಸಂಪುಟ–(ಸಂ.) ದೇ. ಜವರೇಗೌಡ
೭. ಹರಿದಾಸ ಸಾಹಿತ್ಯ–ಆರ್. ಎಸ್. ಪಂಚಮುಖಿ
೮. ಹರಿದಾಸ ಹೃದಯ–ಜಿ. ವರದರಾಜರಾವ್
೯. ದಾಸಸಾಹಿತ್ಯ ದರ್ಶನ–(ಸಂ.)ಎಚ್ಚೆಸ್ಕೆ
೧೦. ಕನಕದಾಸರು–ಎಸ್. ಕೆ. ರಾಮಚಂದ್ರರಾವ್
೧೧. ಪರಿಶೀಲನ–ಜಿ. ಎಸ್. ಶಿವರುದ್ರಪ್ಪ
೧೨. ಕನಕಸುಧೆ–ಪರಮೇಶ
೧೩. ಕರ್ನಾಟಕ ಜನಜೀವನ–ಬೆಟಗೇರಿ ಕೃಷ್ಣಶರ್ಮ
೧೪. ಹರಿದಾಸ ಸಾಹಿತ್ಯ ಸಾರ–ಜಿ. ವರದರಾಜರಾವ್
೧೫. ಕನಕಕಿರಣ–(ಸಂ.) ಕಾ. ತ. ಚಿಕ್ಕಣ್ಣ
೧೬. ಕವಿ ಕನಕದಾಸರು–ಕಟ್ಟಿ ಶೇಷಾಚಾರ್ಯ
೧೭. ಕವಿ ರಶ್ಮಿ–ಎನ್. ಬಿ. ಮುತಾಲಕರ
೧೮. ಕನ್ನಡ ವಿಶ್ವಕೋಶ.

# ಕನಕದಾಸರ ಸಾಹಿತ್ಯದ ಮೇಲೆ ಅವರ ಹಿಂದಿನ ಮತ್ತು ಅವರ ಸಮಕಾಲೀನ ಕವಿಗಳ ಪ್ರಭಾವ

ಎಂ. ವಿ. ಶ್ರೀನಿವಾಸಮೂರ್ತಿ

ಪರಂಪರೆ ಮತ್ತು ಸ್ವೋಪಜ್ಞತೆಯನ್ನು ಕುರಿತ ತಮ್ಮ ಪ್ರಸಿದ್ಧ ಲೇಖನದಲ್ಲಿ ಹೆಸರಾಂತ ಕವಿ, ವಿಮರ್ಶಕ ಟಿ. ಎಸ್. ಎಲಿಯಟ್ ಅವರು ಪ್ರತಿಯೊಬ್ಬ ಕವಿಗೂ ತನ್ನ ಹಿಂದಿನ ಸಾಹಿತ್ಯ ಪರಂಪರೆಯ ಋಣಭಾರ ಸಾಕಷ್ಟಿರುವುದನ್ನು ಕುರಿತು ಕೆಲವು ಮೌಲಿಕ ವಿಚಾರಗಳನ್ನು ಪ್ರತಿಪಾದಿಸಿದ್ದಾರೆ. ಕಲೆಯ ಭಾವ ಅವ್ಯೆಯಕ್ತಿಕ (ವ್ಯೆಯಕ್ತಿಕವಾದುದಲ್ಲ), ಕವಿ ತನ್ನನ್ನು ತಾನು, ತಾನು ಸೃಷ್ಟಿಸುತ್ತಿರುವ ಕಲಾನಿರ್ಮಿತಿಗೆ ಅಧೀನಪಡಿಸಿಕೊಂಡಲ್ಲದೆ ಈ ಅವ್ಯೆಯಕ್ತಿಕ ಸ್ಥಿತಿಯನ್ನು ತಲುಪಲು ಸಾಧ್ಯವಿಲ್ಲ. ತಾನು ಏನನ್ನು ಸೃಷ್ಟಿಸಬೇಕಾಗಿದೆ ಎಂಬುದು ಅವನಿಗೆ ತಿಳಿಯುವುದು, ಅವನು ತನ್ನನ್ನು ತಾನು ಸಮಕಾಲೀನ ಬದುಕಿನ ವಿವರಗಳಲ್ಲಿ ತೊಡಗಿಸಿಕೊಂಡಾಗ ಮಾತ್ರವಲ್ಲ, ತನ್ನ ಗತಕಾಲದ ಜೀವಂತ ಬದುಕಿನ ಅನುಭವಗಳನ್ನು ತನ್ನ ಸೃಷ್ಟಿಯಲ್ಲಿ ಅಳವಡಿಸಿಕೊಂಡಾಗ ಮಾತ್ರ.[1]

ಕನ್ನಡ ಸಾಹಿತ್ಯದಲ್ಲಿ ಸಮಕಾಲೀನ ಮತ್ತು ಪರಂಪರಾಗತ ಮೌಲ್ಯಗಳೆರಡಕ್ಕೂ ಒಟ್ಟಿಗೇ ಸ್ಪಂದಿಸಿ ಸಾಮಾನ್ಯ ಜನತೆಯ ಹಿತಕ್ಕಾಗಿ ದುಡಿದ ಎರಡು ತಂಡಗಳು ಪ್ರಮುಖವಾಗಿ ಎದ್ದು ಕಾಣುತ್ತವೆ. ಶರಣರು ಮತ್ತು ದಾಸರು ಹಿಂಡು ಹಿಂಡಾಗಿ ಈ ಮೌಲಿಕ ಕ್ರಾಂತಿಗಳಲ್ಲಿ ತಮ್ಮನ್ನು ತಾವು

---

1. The emotion of art is impersonal. And the Poet cannot reach this impersonality without surrendering himself wholly to the work to be done. And he is not likely to know what is to be done unless he lives in what is merely the present, but the present moment of the past, unless he is conscious, not of what is dead, but of what is already living ‘Tradition and Individual Talent’

- Selected Prose : T. S. Eliot, Ed John : Hayward Faber and Faber, 1959 p. 30.

ತೊಡಗಿಸಿಕೊಂಡಿದ್ದು ಆಂತರಿಕ ಅವಶ್ಯಕತೆ ಮತ್ತು ಸಾರ್ವಜನಿಕ ಒತ್ತಡ ಕಾರಣಗಳಿಂದಾಗಿ, ತಾವು ಕ್ರಾಂತಿಯನ್ನು ಮಾಡುತ್ತಿದ್ದೇವೆಂದು ತಿಳಿದೋ, ತಿಳಿಯದೆಯೋ ಒಟ್ಟಾರೆ ಹನ್ನೆರಡು ಮತ್ತು ಹದಿನೈದನೆಯ ಶತಮಾನಗಳಲ್ಲಿ ಈ ಬದಲಾವಣೆಯ ಬೀಜದ ಅಂಕುರಾರ್ಪಣೆಯಾಯಿತೆನ್ನುವುದು ಐತಿಹಾಸಿಕ ಸತ್ಯ. ಈ ಬದಲಾವಣೆಗಳ ಹಿಂದಿರುವ ವ್ಯಕ್ತಿಗಳು ಮತ್ತು ಶಕ್ತಿಯನ್ನು ಗಮನಿಸಿದರೆ, ಇದರಲ್ಲಿ ಸಾಮಾಜಿಕವಾಗಿ ಹಿಂದುಳಿದ, ಶೋಷಣೆಗೆ ಒಳಗಾದವರ ಸಿಂಹಪಾಲು ಇರುವುದನ್ನು ಗುರುತಿಸಬಹುದು. ಮುನ್ನೆಲೆಯಲ್ಲಿ ಬಸವಣ್ಣನವರಂಥ, ಪುರಂದರದಾಸರಂಥ ಮುಂದುವರಿದ ಜನಾಂಗದ ನಾಯಕತ್ವವನ್ನು ಗುರುತಿಸಬಹುದಾದರೂ, ಈ ಚಳುವಳಿಗಳೂ ಜ್ವಲಂತವಾಗಿರುವಂತೆ ನೋಡಿಕೊಳ್ಳುವಲ್ಲಿ ಇವರ ಹಿಂದೆ ಕೆಲಸ ಮಾಡಿದ ಹಲವು ಹತ್ತು ಸಾಮಾಜಿಕ ಸ್ತರಗಳನ್ನು ಕಡೆಗಣಿಸುವಂತಿಲ್ಲ ಮಾತ್ರವಲ್ಲ. ಈ ಎಲ್ಲ ಸಾಧನೆ ಸಿದ್ಧಿಗಳಿಗೆ ಅವರ ಪಾಲಿನ ಕೊಡುಗೆ ಮಹತ್ವವಾದುದು ಎಂಬುದನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ.

ಕನಕದಾಸರು ಬಾಡ ಗ್ರಾಮದ ಕುರುಬರ ಮನೆತನದಲ್ಲಿ ಜನಿಸಿ, ಪಾಳೆಯ ಗಾರರಾಗಿ ಆಡಳಿತ ನಡೆಸಿ ತಮ್ಮ ಕ್ಷಾತ್ರವನ್ನು ಮೆರೆದಿದ್ದರೂ ಅವರಿಗೆ ವ್ಯಾಸರಾಯರ ಶಿಷ್ಯರುಗಳಿಗಿದ್ದ ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆ ಇರಲಿಲ್ಲ. ಅವರ ಬಗ್ಗೆ ಇರುವ ದಂತಕಥೆಗಳನ್ನು ನಂಬಬಹುದಾದರೆ, ಅವರು ಏರಿದ ಎತ್ತರಕ್ಕೆ, ಅನುಭಾವಿ ಪ್ರಜ್ಞೆಗೆ ಅವರ ಅವಿಶ್ರಾಂತ ಸಾಧನೆಯೇ ಕಾರಣ ಎನ್ನಬಹುದು. ಅಹಂಕಾರನಿರಸನ, ಸರ್ವಾಂತರ್ಯಾಮಿತ್ವ ದರ್ಶನ ಇವುಗಳು ಅವರಿಗೆ ಅನುಭವಗಮ್ಯವಾಗಲು ಅವರ ಸಾಧನಶೀಲ ಮನೋಭಾವದೊಂದಿಗೆ ಅವರಿಗೆ ದೊರೆತ ವ್ಯಾಸರಾಯರಂಥ ಗುರುವಿನ ಬೆಂಬಲ ಮತ್ತು ಆಸರೆ, ಪುರಂದರದಾಸರಂಥ ದಾಸವರೇಣ್ಯರ ಸಹವಾಸಗಳೂ ಕಾರಣವಾಗಿದ್ದಿರಬೇಕು. ಈ ವೈಷ್ಣವ ಮಹಾಪೂರದಲ್ಲಿ ತಮ್ಮ ಭಾಗವತ ದೃಷ್ಟಿಯನ್ನು ಬಲವಾಗಿ ನಮ್ಮಿಕೊಂಡು ಕೀರ್ತನೆಗಳು ಮತ್ತು ಕಾವ್ಯಗಳ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಹರಿಹರ ಸಾಮರಸ್ಯವನ್ನು ಪ್ರತಿಪಾದಿಸುತ್ತಾ ಸಮಾಜದ ಕಣ್ತೆರೆಸಲು ಅವರ ಮೇಲೆ ಕುಮಾರವ್ಯಾಸನಂಥ ಮಹಾನ್ ಭಾಗವತ ಕವಿಯ ಪ್ರಭಾವವೂ ಹೇರಳವಾಗಿತ್ತೆಂಬುದಕ್ಕೆ ಅನೇಕ ಆಂತರಿಕ ನಿದರ್ಶನಗಳನ್ನು ಕೊಡಬಹುದು. ಹೀಗೆ ಕನಕದಾಸರ ವ್ಯಕ್ತಿತ್ವ ಮತ್ತು ಕಾವ್ಯಗಳ ಮೇಲೆ ಅವರ ಪರಂಪರಾಗತ ಕಾವ್ಯ ಪ್ರಜ್ಞೆ ಮತ್ತು ಸಮಕಾಲೀನ ಪ್ರಜ್ಞೆಗಳು ಪ್ರಭಾವ

ಬೀರಿವೆಯಾದರೂ ಇವೆಲ್ಲವನ್ನೂ ಸಮಾವೇಶಗೊಳಿಸಿಕೊಂಡ ಒಂದು ವಿಭಿನ್ನ, ವಿಶಿಷ್ಟ ವ್ಯಕ್ತಿತ್ವವನ್ನೂ ಅವರಲ್ಲಿ ನಾವು ಕಾಣಬಹುದಾಗಿದೆ.

**ಕೀರ್ತನೆಗಳು :** ಕನಕದಾಸರು ಕವಿಯಾಗಿ ಹೆಸರುಗೊಂಡು ಅನೇಕ ಕಾವ್ಯಗಳನ್ನು ರಚಿಸಿ ದಾಸಪರಂಪರೆಯಲ್ಲಿ 'ದಾಸರಲ್ಲಿ ಕವಿಗಳು' ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರೂ ಅವರ ಅಂತರಂಗ ಸಾಧನೆಯ, ಅನುಭಾವಿ ಪ್ರಜ್ಞೆಯ, ಸಾಮಾಜಿಕ ಕಳಕಳಿಯ, ಭಕ್ತಿ ಪಾರಮ್ಯದ ದರ್ಶನ ಮಾಡಿಸುವವು, ಅವರ ಕೀರ್ತನೆಗಳೇ. ನಾವು ಅವರನ್ನು ಪ್ರಮುಖವಾಗಿ ಗುರುತಿಸುವುದು ಒಬ್ಬ ದಾಸರನ್ನಾಗಿ, ದಾಸಕೂಟದ ಸದಸ್ಯರನ್ನಾಗಿ, ವ್ಯಾಸಮತದ ಒಬ್ಬ ಹಿರಿಯ ಪ್ರತಿನಿಧಿಯೆಂದಾಗಿ.

ಕನಕದಾಸರ ಕೀರ್ತನೆಗಳಲ್ಲಿ ಪುರಂದರರಂತೆ ಕೃಷ್ಣಪಾರಮ್ಯ, ಭಾಗವತ, ಮಹಾಭಾರತ–ರಾಮಾಯಣ ಮೊದಲಾದ ಮಹಾಕಾವ್ಯಗಳ ಪ್ರಭಾವ, ಪುರಾಣ ಪ್ರಪಂಚದ ವ್ಯಾಪಕ ಪರಿಚಯ, ಇವುಗಳನ್ನಲ್ಲದೆ ಕನ್ನಡ ಕವಿಗಳ ಅದರಲ್ಲೂ ಶರಣ ಕವಿಗಳ ಪ್ರಭಾವವನ್ನೂ ಗುರುತಿಸಬಹುದಾಗಿದೆ. ಕುಮಾರವ್ಯಾಸನಂತೂ ಅವರ ಕೀರ್ತನೆಗಳು ಮತ್ತು ಕಾವ್ಯಗಳ ತುಂಬೆಲ್ಲ ತನ್ನ ಅಚ್ಚಳಿಯದ ಪ್ರಭಾವವನ್ನು ಬೀರಿದ್ದಾನೆ ಎಂಬುದಕ್ಕೆ ಅನೇಕ ನಿದರ್ಶನಗಳನ್ನು ಕೊಡಬಹುದು.

"ಪುರಂದರದಾಸರ ಕೀರ್ತನೆಗಳ ಸಂಖ್ಯೆಗೆ ಹೋಲಿಸಿದರೆ ಕನಕದಾಸರ ಕೀರ್ತನೆಗಳು ಅತ್ಯಲ್ಪವಾಗಿ ಕಾಣುತ್ತವೆ. ಆದರೆ ಕನಕದಾಸರ ಕೀರ್ತನೆಗಳ ತತ್ವವನ್ನು ಗಮನಿಸಿದರೆ ಅವು ಪುರಂದರದಾಸರ ಕೀರ್ತನೆಗಳ ಸತ್ವಗಳೊಂದಿಗೆ ಸಮಸ್ಪರ್ಧಿಯಾಗಬಲ್ಲವು. ಹಾಗೆ ನೋಡಿದರೆ ಪುರಂದರದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಒಂದು ಕೈ ಮಿಗಿಲಾಗಿಯೇ ಇರುವಂತೆ ತೋರುತ್ತದೆ"[2] ಎಂಬ ವಿಮರ್ಶೆಯ ಮಾತನ್ನು ಗಮನಿಸಬಹುದು. ದಾಸವರೇಣ್ಯರಿಬ್ಬರನ್ನೂ 'ತೂಗಿನೋಡುವ ಈ ನೋಟದಲ್ಲಿ ವಿಮರ್ಶಕರ ಒಲವು ಸಹಜವಾಗಿಯೇ ಕವಿ ಕನಕದಾಸರ ಕಡೆಗೆ ಹೆಚ್ಚು ಒಲಿದಿದೆ ಎಂಬುದನ್ನು ಗುರುತಿಸಬಹುದು. ಪುರಂದರರಂತೆ ಕೃಷ್ಣನ ಮಹಿಮೆಯ ವರ್ಣನೆ, ರೂಪವರ್ಣನೆ, ಪವಾಡಸದೃಶ ಘಟನೆಗಳ ಹೆಗ್ಗಳಿಕೆ, ಪುರಾಣ ಇತಿಹಾಸ ಕಾವ್ಯಗಳ ಆಳವಾದ ಅಭ್ಯಾಸ ಪರಿಚಯಗಳ ತಿಳಿವಳಿಕೆ ಇವೆಲ್ಲವು ಕನಕದಾಸರಲ್ಲಿ

---

2. ಕನಕದಾಸರ ವಿಶಿಷ್ಟತೆ–ಪರಿಶೀಲನ–ಜಿ. ಎಸ್. ಶಿವರುದ್ರಪ್ಪ, ಉಷಾ ಸಾಹಿತ್ಯಮಾಲೆ ಮೈಸೂರು, ಪು. 102, 1967.

ಇರುವುದರ ಜೊತೆಗೆ, ತಮ್ಮ ಸ್ವಂತ ಅನುಭವದ ಕೆಲವು ಸಾಮಾಜಿಕ ನಿಲವು, ನೋಟಗಳತ್ತ ತಮ್ಮ ದೃಷ್ಟಿಯನ್ನು ಹರಿಸಿ ಅವರು ವಿಶಿಷ್ಟರಾಗಿದ್ದಾರೆ. ಉದಾಹರಣೆಗೆ–ಕುಲವನ್ನು ಕುರಿತ ಕನಕದಾಸರ ನಿಲುವನ್ನು ಗಮನಿಸಬಹುದು. ಎರಡು ಕೀರ್ತನೆಗಳಲ್ಲಿ ಹರಡಿದ ಅವರ ವಿಚಾರಧಾರೆ ಕುಲದ ಮೀಮಾಂಸೆಗೆ ಅವರು ಸಲ್ಲಿಸಿದ ವಿಶಿಷ್ಟ ಕಾಣಿಕೆಯಾಗಿದೆ. "ಕೆಸರಲ್ಲಿ ಹುಟ್ಟಿದ ತಾವರೆ ವಿಷ್ಣುವಿಗೆ ಅರ್ಪಿತವಾಗಲಿಲ್ಲವೆ? ಹಸುವಿನ ಮಾಂಸದಲ್ಲಿ ಹುಟ್ಟಿದ ಹಾಲು ಉಣ್ಣಲು ಯೋಗ್ಯವಲ್ಲವೆ? ಮೃಗದ ಮೈಯಲ್ಲಿ ಹುಟ್ಟಿದ ಕಸ್ತೂರಿ ಪೂಸಿಕೊಳ್ಳಲು ಯೋಗ್ಯವಲ್ಲವೆ? ಎಂದೆಲ್ಲ ಪ್ರಶ್ನಿಸಿ ನಾರಾಯಣ, ಅಗಜವಲ್ಲಭರು ಯಾವ ಕುಲದವರೆಂದು ಕೇಳುತ್ತಾರೆ. ಹೀಗೆ ಬೆಳೆಯುತ್ತಾ ಹೋಗಿ ಆತ್ಮ ಯಾವ ಕುಲ, ಜೀವ ಯಾವ ಕುಲ, ತತ್ವೇಂದ್ರಿಯಗಳು ಕುಲ ಯಾವುದು? ಆದಿಕೇಶವನೊಲಿದ ಮೇಲೆ ಯಾತರ ಕುಲವಯ್ಯ ಎನ್ನುತ್ತಾರೆ. ಕುಲವನ್ನು ಕುರಿತು ಮೇಲುಜಾತಿಯವರಾದ ಕವಿಗಳು ಸಹಾನುಭೂತಿಪರವಾದ ನಿಲವನ್ನು ತಳೆದಿರುವುದಕ್ಕೂ, ಸಾಮಾಜಿಕವಾಗಿ ಕೀಳೆನಿಸಿಕೊಂಡ ಕುಲದಲ್ಲಿ ಹುಟ್ಟಿದವರು ಅದರ ಬೇನೆಯನ್ನು ಅರಿತವರು ಅದನ್ನು ಕುರಿತು ಪ್ರಶ್ನಿಸುವುದಕ್ಕೂ ಅಂತರವಿದೆ. ಪಂಪನಲ್ಲಿ ಕರ್ಣ ತಾನು ಸೂತಪುತ್ರನೆಂದು ತಿಳಿದಿದ್ದಾಗ ತನ್ನನ್ನು ಕೆಣಕಿದ ದ್ರೋಣರಿಗೆ ಕೊಡುವ ಉತ್ತರದಲ್ಲಿರುವ ಆವೇಶ ಮತ್ತು ಸಹಜತೆ ಬೇರೆಡೆ ದೊರೆಯುವುದಿಲ್ಲ. "ಕುಲಮಿರ್ದುದೆ ಶರಸ್ತಂಭದೊಳಂ ಕುಲಂಕುಲಮಲ್ತು ಚಲಂಕುಲಂ, ಅಣ್ಮುಕುಲಂ ಅಭಿಮಾನಂ ಕುಲಂ" ಇಂಥ ಮಾತುಗಳು ಕ್ಷಾತ್ರಯುಗಕ್ಕೆ ಹೇಳಿ ಮಾಡಿಸಿದಂಥವು. 'ಸರಸಿಜಮನುವಿದ್ಧಂ ಶೈವಲೇನಾಪಿರಮ್ಯಂ' ಎಂದು ಕಾಳಿದಾಸ ಕ್ಷತ್ರಿಯ ಸಂಭವೆ ಶಕುಂತಲೆಯನ್ನೇ ಸಮರ್ಥಿಸಿಕೊಳ್ಳಬೇಕಾಯಿತು. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ಪ್ರೋತ್ಸಾಹದಿಂದ ಧೈರ್ಯ ಪಡೆದ ವಚನಕಾರರು, ಶಿವಶರಣರು ಕುಲವನ್ನು ಕುರಿತ ತಮ್ಮ ದಿಟ್ಟನಿಲವನ್ನು ಪ್ರತಿಪಾದಿಸಿದರು. 'ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ, ಜಲವೊಂದೆ ಶೌಚಮಜ್ಜನಕ್ಕೆ, ಕುಲವೊಂದೇ ತನ್ನತಾನರಿದವಂಗೆ' ಎಂದ ಬಸವಣ್ಣ, 'ಮನುಷ್ಯ ಜಾತಿ ತಾನೊಂದೆವಲಂ' ಎಂದ ಪಂಪ, 'ನಡುವೆ ಸುಳಿವ ಆತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ' ಎಂದಳು ಮಹಾದೇವಿಯಕ್ಕ. ಈ ಎಲ್ಲ ವಿಚಾರಗಳ ಹಿನ್ನೆಲೆಯಲ್ಲಿ ಕನಕದಾಸರ ಈ ಕೀರ್ತನೆಗಳನ್ನು ಗಮನಿಸಿದಾಗ ಅವರ ವೈಶಿಷ್ಟ್ಯ ಗಮನಕ್ಕೆ ಬರುತ್ತದೆ. ಶಿವ. ವಿಷ್ಣುವಿನ ಕುಲವನ್ನೇ ಪ್ರಶ್ನಿಸುವಷ್ಟು ತಾಕತ್ತು ಅವರಲ್ಲಿದೆ. 'ನೀನೆನ್ನಂತೊಮ್ಮೆ ಒಡಲುಗೊಂಡು ನೋಡಾ'

ಎಂದು ದೇವರ ದಾಸಿಮಯ್ಯ ಸವಾಲೆಸೆದಂತೆ ಕನಕದಾಸರು ತಮ್ಮ ಇಷ್ಟದೈವವನ್ನೂ ಕುಲದ ಒರೆಗಲ್ಲಿಗೆ ತಿಕ್ಕಿ ನೋಡಿದ್ದಾರೆ. ಹಾಗೆ ಆ ದೈವವನ್ನು ಎಲ್ಲರೂ ಒಪ್ಪಿಕೊಂಡಿರುವಾಗ ಅವನ ಭಕ್ತರಾದ ಮಾನವಕುಲಕ್ಕೆ ಈ ಕುಲದ ಕಳಂಕವನ್ನು ಅಂಟಿಸುವುದು ಸರಿಯೇ ಎಂಬುದು ಅವರ ಪ್ರಶ್ನೆ. ಜೀವಾತ್ಮ, ಪರಮಾತ್ಮಗಳ ಕುಲವನ್ನು ಯಾರೂ ಪ್ರಶ್ನಿಸುವುದಿಲ್ಲವೆಂದ ಮೇಲೆ ಈ ದೇಹಕ್ಕೆ ಯಾಕೆ ಈ ಬವಣೆ ಎನ್ನುವ ಪ್ರಶ್ನೆ ಅವರದು. ಕುಲದ ಹೆಸರಿನಲ್ಲಿ ಹೊಡೆದಾಡುವ ಅಲ್ಪಮತಿಗಳಿಗೆ, ಅವರ ವಿವೇಕದ ಉಪದೇಶ ಇದ್ದೇ ಇದೆ. 'ಹುಟ್ಟದ ಯೋನಿಗಳಿಲ್ಲ, ಮೆಟ್ಟದ ಭೂಮಿಗಳಿಲ್ಲ ಅಟ್ಟು ಉಣ್ಣದ ವಸ್ತುಗಳಿಲ್ಲ, ಜಲವೆ ಸಕಲ ಕುಲಕ್ಕೆ ತಾಯಲ್ಲವೆ' (ಡಾರ್ವಿನ್ನನ ವಿಕಾಸವಾದ ಅರಿವಿರುವಂತೆ ಕಾಣುತ್ತದೆಯಲ್ಲ ಕನಕದಾಸರಿಗೆ !) ಇತ್ಯಾದಿ ತಾರ್ಕಿಕ ನಿಲವನ್ನು ಪ್ರತಿಪಾದಿಸಿದ ಕನಕದಾಸರಿಗೆ ಪರಂಪರೆಯ ಅರಿವು ಇದ್ದೇ ಇದೆ ಎನಿಸುತ್ತದೆ. ಅಲ್ಲಲ್ಲಿ ಒಂದೊಂದು ದಿಟ್ಟದನಿ ಈ ಕುಲದ ಹೆಸರಿನಲ್ಲಿ ನಡೆಯುತ್ತಿರುವ ತಾರತಮ್ಯವನ್ನು ಪ್ರಶ್ನಿಸುತ್ತಲೇ ಬಂದಿದೆ. ಇಂಥ ದನಿಗಳಲ್ಲಿ ಕನಕದಾಸರ ದನಿಗೆ ವಿಶೇಷ ಮಹತ್ವವಿರುವುದು ಅವರ ಪರಿಸರದ ಹಿನ್ನೆಲೆಯಿಂದಾಗಿ.

'ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ' ಎಂಬ ಅವರ ಕೀರ್ತನೆಯಲ್ಲಿ ಸೃಷ್ಟಿಯ ರಹಸ್ಯವನ್ನು ಭೇದಿಸುವ ಪ್ರಯತ್ನವನ್ನು ಕಾಣುತ್ತೇವಾದರೂ ಬೀಜವೃಕ್ಷ ನ್ಯಾಯವನ್ನು ಪರಿಹರಿಸಲಾಗದೆ ಕೊನೆಗೆ ಶರಣಾಗತಿಯಲ್ಲಿ ಪರ್ಯವಸಾನವಾಗುತ್ತದೆ. ಬಯಲು – ಆಲಯ – ಇವೆರಡನ್ನೂ ಪರಿಭಾವಿಸುವ ನಯನ, ನಯನ – ಬುದ್ಧಿ – ಇವೆರಡನ್ನೂ ಆವರಿಸುವ ಹರಿ, ಸವಿ–ಸಕ್ಕರೆ–ಜಿಹ್ವೆ, ಮನಸ್ಸು–ಈ ಎಲ್ಲ ಅನುಭವಗಳಿಗೆ ಕಾರಣವಾದ ಹರಿಚಿತ್ರ, ಕುಸುಮ–ಗಂಧ–ಮೂಗು–ಈ ಇಂದ್ರಿಯಾನುಭವವನ್ನು ಅತೀಂದ್ರಿಯಗೊಳಿಸುವ ಕೇಶವ–ಹೀಗೆ 'ಅವರ ಕೀರ್ತನೆಯಲ್ಲಿ ಹೆಜ್ಜೆ ಹೆಜ್ಜೆಗೂ ವಿಸ್ತರಿಸುತ್ತಾ ಹೋಗುವ ಆಶ್ಚರ್ಯ ಮೂಲವಾದ ಜಿಜ್ಞಾಸೆ ತನ್ನ ವಿಚಾರದ ವಿಲಾಸದಿಂದ ತಾತ್ವಿಕ ಜಿಜ್ಞಾಸೆಯಲ್ಲದೆ ಸೌಂದರ್ಯದ ಜಿಜ್ಞಾಸೆಯೂ ಆಗಿ ಕಡೆಗೆ ಈ ಲೋಕದ ಮೂಲಭೂತ ವಿಸ್ಮಯದ ಹೊಳಹಿನಲ್ಲಿ ನಿಲುಗಡೆಯನ್ನೂ ಕಂಡುಕೊಳ್ಳುವ ರೀತಿ ಅಪೂರ್ವವಾಗಿದೆ'.

'ಜ್ಞಾನಂ ವಿಜ್ಞಾನ ಸಹಿತಂ' ಎಂಬ ತಿಳಿವಳಿಕೆಯ ಭಗವದ್ಗೀತೆಯ ಶ್ಲೋಕವೊಂದು ಇಂಥ ಆಲೋಚನೆಗೆ ಪ್ರೇರಣೆ ನೀಡಿದ್ದಿರಬಹುದು.

ಜ್ಞಾನಂತೇಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯ ಶೇಷತಃ
ಯಜ್ಞಾತ್ವಾ ನೇಹ ಭೂಯೋನ್ಯ ಜ್ಞಾನವ್ಯಮವ ಶಿಷ್ಯತೇ ॥
–ಅಧ್ಯಾಯ ೭–ಶ್ಲೋಕ ೨–ಜ್ಞಾನ ವಿಜ್ಞಾನಯೋಗ.

'ಕಲಿಸುಯೋಧನನ ಓಲಗದಿ ಕೆಡಹಿದಪಾದ' (ಭಜಸಿ ಬದುಕೆಲೇ ಮಾನವ ಕ. ಕೀ. ೨೯) ಕುಮಾರವ್ಯಾಸನ ಉದ್ಯೋಗ ಪರ್ವದ 'ಸೆಣಸು ಸೇರದ ದೇವನಿದಿರಲಿ । ಮಣಿಯುದಾತನ ಕಾಣುತವೆ ಧಾ । ರುಣಿಯನೊತ್ತಿದನುಂಗುಟದ ತುದಿಯಿಂದ ನಸುನಗುತ' ಎಂಬ ಸಾಲುಗಳನ್ನು ನೆನಪಿಗೆ ತರುತ್ತದೆ. 'ಶಿಲೆಯ ಸತಿಯಳ ಮಾಡಿ ಶುದ್ಧಮಾಡಿದ ಪಾದ' ಎಂಬ ಸಾಲು (ಅದೇ) ರಾಮಾಯಣದ ದಾಕ್ಷಿಣಾತ್ಯ ಪಾಠದ ಅರಿವು ಕನಕದಾಸರಿಗೆ ಇತ್ತೆಂಬುದನ್ನು ಸಮರ್ಥಿಸುತ್ತದೆ. ಉತ್ತರದ ಪಾಠದಲ್ಲಿ ಅಹಲ್ಯೆ ಗಾಳಿಯಾಗಿ ಆಶ್ರಮದಲ್ಲಿ ಅಲೆಯುತ್ತಿದ್ದರೆ, ದಕ್ಷಿಣದ ಪಾಠದಲ್ಲಿ ಶಿಲೆಯಾಗಿದ್ದಳೆಂದು ವರ್ಣಿತವಾಗಿದೆ. 'ಶಿಷ್ಟ ಹರಿಶ್ಚಂದ್ರನಿಗೆ ಮಸಣದಡಿಗೆಯಂತೆ' ಎಂಬ ವಿವರ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಹರಿಶ್ಚಂದ್ರ ಸಂಬಳಿಗೋಲನ್ನು ಹಿಡಿದು ವೀರಬಾಹುವಿನ ಶಿಷ್ಯನಾಗಿ ಶ್ಮಶಾನವನ್ನು ಕಾಯ್ದ ದೃಶ್ಯವನ್ನು ನೆನಪಿಗೆ ತರುತ್ತದೆ. 'ಭರದಿಂದ ಭೃಗುಮುನಿ ಬಂದು ಕೋಪಿಸಿ ಬೇಗ ಚರಣ ಒತ್ತಿದನ'–ಎಂಬ ಭೃಗು ಮುನಿಯ ಕಣ್ಣನ್ನು ವಿಷ್ಣು ಒಡೆದ ಕತೆ ಭವಿಷ್ಯೋತ್ತರ ಪುರಾಣದಲ್ಲಿದೆ.

ಎನ್ನ ಕಂದ ಹಳ್ಳಿಯ ಹನುಮ (ಪು ೯. ಕೀ. ೧೨) ಎಂಬ ಕೀರ್ತನೆಯಲ್ಲಿ ಕನಕದಾಸರ ಸಂಭಾಷಣಾ ಚಾತುರ್ಯವನ್ನೂ, ನಾಟಕೀಯ ವ್ಯಂಗ್ಯವನ್ನೂ ಗುರುತಿಸಬಹುದು. ರಾಮಲಕ್ಷ್ಮಣರ ಅರಮನೆಯ ವೈಭವದ ಬದುಕು–ಇಂದಿನ ವನವಾಸದ ಸರಳ ಕ್ಲಿಷ್ಟಕರ ಬದುಕು ಇವೆರಡರ ಹೋಲಿಕೆಯ ಮೂಲಕ ವೈಭವದ ಜೀವನ ಸರಳ ಜೀವನಕ್ಕೆ ಎಂದೂ ಎಡೆಮಾಡಿಕೊಡಬಹುದು ಎಂಬ ಎಚ್ಚರಿಕೆಯ ದನಿ ಇರುವಂತಿದೆ. ವಿಜಯನಗರದ ವೈಭವದ ಕಾಲದ ಅತಿಭೋಗ ಜನರನ್ನು ಎಲ್ಲಿ ವಿನಾಶದತ್ತ ಒಯ್ಯುವುದೋ ಎಂದು ಚಿಂತಿಸಿ ವೈರಾಗ್ಯವನ್ನು ಬೋಧಿಸಿ ಸರಳ ಜೀವನದೆಡೆಗೆ ಅವರ ಮನಸ್ಸನ್ನು ಹರಿಸುವತ್ತ ದಾಸರು ಮಾಡಿದ ಪ್ರಯತ್ನ ಅನನ್ಯವಾಗಿದೆ. ಶ್ರೀಮಂತರಾದ ಪುರಂದರದಾಸರಾಗಲಿ, ನಾಯಕರಾಗಿದ್ದ ಕನಕದಾಸರಾಗಲಿ ತಮ್ಮ ವೈಭವ, ಶ್ರೀಮಂತಿಕೆಯ ಬದುಕನ್ನು ತೊರೆದು ಸಾಮಾನ್ಯರಲ್ಲಿ ಸಾಮಾನ್ಯರಾಗಿ ಶ್ರೀಸಾಮಾನ್ಯನ ಬದುಕನ್ನು ಆರಿಸಿಕೊಂಡ ಹಿನ್ನೆಲೆಯಲ್ಲಿ ಈ ಕೀರ್ತನೆಯನ್ನು ಸಮಾಲೋಚಿಸುವುದು ವಿಹಿತವಾಗಿದೆ. ತುಪ್ಪ ಪಂಚಾಮೃತ–ಅಡವಿಗಡ್ಡೆ, ಕರ್ಪೂರವೀಳ್ಯ–ಕುರುಕು,

ಸುಪ್ಪತ್ತಿಗೆ ಮಂಚ–ಹುಲ್ಲು ಹಾಸಿಗೆ, ನವವಸ್ತ್ರ–ನಾರಸೀರೆ, ಹುವ್ವಿನಗಂಟು–ಜಡೆ, ಜವ್ವಾಜಿ ಕತ್ತುರಿ–ಭಸಿತ ಧೂಳು, ಕನಕರಥ–ಕಾಲುನಡಿಗೆ, ಛತ್ರಚಾಮರ–ಬಿಸಿಲು ಈ ವೈದೃಶ್ಯಗಳು ಶ್ರೀಮಂತಿಕೆ–ಬಡತನ ಇವುಗಳ ನಡುವಿನ ಕಂದರಕ್ಕೆ ಕನ್ನಡಿ ಹಿಡಿಯುವುದರ ಜೊತೆಗೆ ಇಂಥ ಸ್ಥಿತ್ಯಂತರವನ್ನು ಅನುಭವಿಸಿದ ರಾಮಲಕ್ಷ್ಮಣರಂಥವರ ಉದಾಹರಣೆ ಕಣ್ಣೆದುರಿರುವಾಗ ಈಗ ಇರುವ ಭೋಗವೇ ಶಾಶ್ವತ ಎಂದು ನಂಬಿ ಕೆಡಬೇಡಿ ಎಂದು ವೈಭವಯುಕ್ತ ವಿಜಯನಗರದ ಸಾಮಾನ್ಯತಾಶ್ರೀಗೆ ಎಚ್ಚರಿಕೆ ನೀಡುತ್ತಿರುವಂತಿದೆ ಈ ಕೀರ್ತನೆ. ಶರಣರ ಮಹೇಶ್ವರ ನಿಷ್ಠೆಯನ್ನು ಹೋಲುವ ವೈಷ್ಣವ ನಿಷ್ಠೆಯನ್ನು ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಪ್ರತಿಪಾದಿಸಿದ್ದಾರೆ. (ಪು. ೧೪–ಕೀ. ೧೮) 'ದಾಸೋಹ'ದ ಪರಿಕಲ್ಪನೆ ಶಿವಶರಣದಲ್ಲಿ ಇರುವಂತೆ ಹರಿದಾಸರಲ್ಲೂ ಇದೆ. ಇದಕ್ಕೆ ನಿದರ್ಶನವಾಗಿ ಕನಕದಾಸರ 'ಬಂಟನಾಗಿ ಬಾಗಿಲ ಕಾಯ್ವೆ ಹರಿಯ' (೧೭–೨೨) ಎಂಬ ಕೀರ್ತನೆಯನ್ನು ನೋಡಬಹುದು. 'ಮೀಸಲ ಊಳಿಗ ಮಾಡಿಕೊಂಡಿರುವೆ ದಾಸರ ದಾಸರಮನೆಯ' ಎಂಬ ವಾಕ್ಯ ಬಸವಣ್ಣನವರ 'ಶಿವಭಕ್ತರಿಗಿಂತ ಹಿರಿಯರಿಲ್ಲ, ಎನಗಿಂತ ಕಿರಿಯನಿಲ್ಲ' ಎಂಬ ಸಾಲುಗಳನ್ನು ನೆನಪಿಗೆ ತರುತ್ತದೆ(೯೬–೧೦೮). 'ಡೊಂಕುಬಾಲದ ನಾಯಕರೆ ನೀವೇನೂಟ ಮಾಡಿದಿರಿ' ಎಂಬ ಕೀರ್ತನೆಯಲ್ಲಿ ರಾಜಕೀಯ ವಿಡಂಬನೆ ಇರುವಂತೆ ತೋರುತ್ತದೆ. 'ಹಿರಿಯಹಾದಿಲಿ ಓಡುವಿರಿ ಕರೇ ಬೂದಿಯಲಿ ಹೊರಳುವಿರಿ' ಎಂಬ ಸಾಲುಗಳು ಮಾರ್ಮಿಕವಾಗಿವೆ. ಸಮಕಾಲೀನ ಬದುಕಿಗೆ ಹಿಡಿದ ಕನ್ನಡಿಯಂತಿದೆ ಈ ಸಾಲುಗಳು.

**ಮೋಹನ ತರಂಗಿಣಿ :–** ಅಚ್ಚಗನ್ನಡ ದೇಸಿಛಂದಸ್ಸಾದ ಸಾಂಗತ್ಯದಲ್ಲಿ ರಚಿತವಾದ 'ಮೋಹನ ತರಂಗಿಣಿ' ಕನಕದಾಸರು ತಮ್ಮ ಅನುಭವದ ಮೂಸೆಯಲ್ಲಿ ಪರಂಪರಾಗತವಾದ ಪೌರಾಣಿಕ ಕಥೆಯನ್ನು ಕರಗಿಸಿ ನಿರ್ಮಿಸಿದ ಹೊನ್ನ ಪುತ್ತಳಿಯಾಗಿದೆ. ಸ್ಕಂದ ಮಹಾಪುರಾಣ, ಮಹಾಭಾರತ, ಭಾಗವತ, ಹರಿವಂಶ, ವಿಷ್ಣುಪುರಾಣಗಳಲ್ಲಿ ಬರುವ ಮನ್ಮಥ–ರತಿಯರ ಬದುಕಿನಲ್ಲಿ ಎದ್ದ ಬಿರುಗಾಳಿ ಮತ್ತು ಅದರಿಂದ ಅವರು ಹೊರಬಂದ ಕತೆಯನ್ನು ತಮ್ಮದೇ ವಿಶಿಷ್ಟ ರೀತಿಯಲ್ಲಿ ಪಳಗಿಸಿದ್ದಾರೆ. ಶಿವನಿಂದ ಸುಟ್ಟುಹೋದ ಮನ್ಮಥ ಮರುಹುಟ್ಟನ್ನು ಪಡೆದು ರತಿಯನ್ನು ಮರಳಿ ಪಡೆಯುವ ಘಟನೆಯನ್ನು ಹಿನ್ನೆಲೆಯಾಗುಳ್ಳ ಈ ಕಾವ್ಯ ಮೂಲ ಕತೆಯಲ್ಲಿ ಇಲ್ಲದ ಅನೇಕ ಅಂಶಗಳನ್ನು ಒಳಗೊಂಡು ಒಮ್ಮೆಗೇ ಪುರಾತನ ಮತ್ತು ನೂತನಗಳನ್ನು ಹೊಯ್‌ಕಯ್ಯಾಗಿಸಿದ

ವಿನೂತನ ಕೃತಿಯಾಗಿದೆ. ದ್ವಾರಕೆಯನ್ನು ವರ್ಣಿಸುವ ಸಂದರ್ಭದಲ್ಲಿ ಪಂಪ ಬನವಾಸಿಯನ್ನು ವರ್ಣಿಸಿದಂತೆ ಕನಕದಾಸರು ವಿಜಯನಗರವನ್ನು ವರ್ಣಿಸಿ ಈ ಕಾವ್ಯ ಪ್ರಾಚೀನ ಪರಂಪರೆ ಮತ್ತು ಸಂಸ್ಕೃತಿಗಳು ಕನ್ನಡಿಗರ ಸ್ಮೃತಿಯಲ್ಲಿ ಸದಾ ಹಸಿರಾಗಿರುವಂತೆ ಮಾಡಿದ್ದಾರೆ. ಶಂಬರನಂಥ ರಾಕ್ಷಸನ ಹೃದಯದಲ್ಲೂ ಇರುವ ಮಾನವೀಯತೆ, ಬಾಣಾಸುರನಂಥ ಸಾಹಸಿಯಲ್ಲಿಯೂ ಇರುವ ಅನನ್ಯ ಶಿವಭಕ್ತಿ ಇವುಗಳ ಮೂಲಕ ತಮ್ಮ ವಿಶ್ವಧರ್ಮದ ಸಂದೇಶವನ್ನು ಸಾರಿದ್ದಾರೆ. ರುಕ್ಮಿಣಿಯಂಥ ಶ್ರೀಕೃಷ್ಣ ಭಾರ್ಯೆಗೂ ಬಂಜೆತನ ಹೇಗೆ ಕಾಡುತ್ತಿತ್ತು ಎಂಬುದನ್ನು ವರ್ಣಿಸಲು ತೊಡಗುವಾಗ ಜಾನಪದ ಗೀತೆಗಳಲ್ಲಿ ಕಂಡು ಬರುವ ತಾಯ್ತನದ ಹಂಬಲದ ಗೀತೆಗಳ ಸವಿಯನ್ನು ಕಾವ್ಯದ ಮೂಲಕ ಉಣಬಡಿಸಿದ್ದಾರೆ. 'ಹಾಲಿಗೆ ಹಂಬಲಿಸುವನಲ್ಲ ಬಿಡದಂಬೆಗಾಲಿಕ್ಕಿ ತೊಳಲುವನಲ್ಲ' ಮೊದಲಾದ ಸಾಲುಗಳೂ 'ಅತ್ತು ಕಾಡುವನಲ್ಲ ಮತ್ತೆ ಬೇಡುವನಲ್ಲ' ಮೊದಲಾದ ಸಾಲುಗಳನ್ನು ನೆನಪಿಸುತ್ತವೆ. ಶಿವ ಮನ್ಮಥನನ್ನು ಹಣೆಗಣ್ಣಿಂದ ಸುಡುವ ದೃಶ್ಯದ ವರ್ಣನೆಯಲ್ಲಿ ಹರಿಹರನ ಗಿರಿಜಾಕಲ್ಯಾಣದ ಪ್ರಭಾವವನ್ನು ಗುರುತಿಸಬಹುದು. ಬಾಣಾಸುರ ಹರನನ್ನು ಒಲಿಸಿಕೊಂಡು ವರವನ್ನು ಬೇಡುವಾಗ ತನ್ನನ್ನು ಗೆಲ್ಲುವಂತಹ ವೀರನನ್ನು ದಯಪಾಲಿಸು ಎಂದು ಕೇಳುವುದು ಆ ಕಾಲದ ಕ್ಷಾತ್ರಧರ್ಮವನ್ನು ಪ್ರತಿಬಿಂಬಿಸುವ ಘಟನೆಯಾಗಿದೆ. 'ಓಡಿಂ ಬೇಡಿಂ ಇದು ಚಾಗದ ಬೀರರ ಮಾತು ಕರ್ಣನಾ' ಎಂದು ಪಂಪ ಹೇಳಿದಂತೆ ಕೃಷ್ಣದೇವರಾಯನ ಕಾಲದ ವೀರ ಮತ್ತು ಚಾಗಗಳನ್ನು ಬಿಂಬಿಸುವ ಒಂದು ಪ್ರಸಂಗದಂತೆ ಈ ಸನ್ನಿವೇಶ ಕಂಡು ಬರುತ್ತದೆ. ಬಾಣಾಸುರನ ಮಗಳು ಉಷೆ ತನ್ನ ಸಖಿ ಚಿತ್ರಲೇಖೆಯೊಂದಿಗೆ ತಾನು ಕಂಡ ಕನಸಿನ ಮದನನನ್ನು ಕುರಿತು ವರ್ಣಿಸಿದಾಗ, ಅವಳು ಅನೇಕ ಚಿತ್ರಪಟಗಳನ್ನು ಬರೆದು ಕೊನೆಗೆ ಅನಿರುದ್ಧನ ಚಿತ್ರವನ್ನು ಬರೆದಾಗ ಉಷೆ ಇವನೇ ತನ್ನನ್ನು ಕನಸಿನಲ್ಲಿ ರಮಿಸಿದವನೆಂದು ಗುರುತಿಸುವ ದೃಶ್ಯದಲ್ಲಿ ಪಂಪನ ಆದಿಪುರಾಣದ ಶ್ರೀಮತೀ ಸ್ವಯಂವರ ಸಂದರ್ಭದಲ್ಲಿ ಪಂಡಿತೆ ಎಂಬ ದಾದಿ ಅವಳು ಸ್ವರ್ಗದಲ್ಲಿ ಸ್ವಯಂಪ್ರಭೆಯಾಗಿದ್ದಾಗ ಲಲಿತಾಂಗನೊಂದಿಗೆ ಅನುಭವಿಸಿದ ವಿಶಿಷ್ಟ ಏಕಾಂತ ಸುಖ ಚಿತ್ರಗಳನ್ನು ಚಿತ್ರಪಟದಲ್ಲಿ ಬರೆದು ಅದನ್ನು ತೂಗು ಹಾಕಿ ಕೊನೆಗೆ ವಜ್ರಜಂಘನನ್ನು ಪತ್ತೆ ಮಾಡಿ ಶ್ರೀಮತಿಯೊಂದಿಗೆ ಕೂಡಿಸಿದ ಚಿತ್ರ ನೆನಪಾಗುತ್ತದೆ. ಆದರೆ ಅಲ್ಲಿ ಬರುವ ಶೈಲೂಷ ವೇಷಗಳನ್ನು ಧರಿಸಿದ ಅಲೀಕ ದುರ್ದಂತರ ವಿಫಲ ಪ್ರಯತ್ನದ ನಾಟಕೀಯ ಸನ್ನಿವೇಶ ಇಲ್ಲಿ ಇಲ್ಲ.

ದ್ವಾರಕಾ ಶ್ರೀಕೃಷ್ಣನ ವಾಸಸ್ಥಾನವಾದರೆ ವಿಜಯನಗರ

ಶ್ರೀಕೃಷ್ಣದೇವರಾಯನ ವಾಸಸ್ಥಾನ. ಇಲ್ಲಿಯ ಸದೃಶೀಕರಣ ವಿಶಿಷ್ಟವಾಗಿದೆ. ಪೌರಾಣಿಕ ವಿಷಯಗಳನ್ನೂ ಸಮಕಾಲೀನಗೊಳಿಸುವುದಲ್ಲದೆ Mythಗೆ ಭೂಮಿಯ ತೊಡವನ್ನು ತೊಡಿಸಿ ಸಹಜಗೊಳಿಸಿದ್ದಲ್ಲದೆ ಸಮಕಾಲೀನ ಇತಿಹಾಸವನ್ನೂ ಕಾವ್ಯದಲ್ಲಿ ಅಳವಡಿಸಿ ಪಂಪಾದಿ ಚಂಪೂ ಕವಿಗಳಂತೆ ಇತಿಹಾಸ ಕಾವ್ಯವನ್ನು ರಚಿಸಿದ್ದಾರೆ, ಕನಕದಾಸರು. ಮಾರ್ಗಕಾವ್ಯವಲ್ಲದೆ ದೇಸಿಯಲ್ಲೂ ಇತಿಹಾಸ ಕಾವ್ಯ ರಚನೆ ಮಾಡಬಹುದೆಂಬುದನ್ನು ಸಾಬೀತುಗೊಳಿಸಿದ್ದಾರೆ. "ಕನಕದಾಸರ ಕೃತಿಗಳ ನಿಜವಾದ ವಿಶೇಷತೆ ಇರುವುದು ಅವುಗಳು ಪ್ರಕಟಿಸುವ ಸಮಕಾಲೀನ ಜೀವನದ ಚಿತ್ರಣದಲ್ಲಿ. ಸಾಮಾಜಿಕ ಪ್ರಜ್ಞೆ ಎಂದರೆ ಕೇವಲ ರಾಜ ಮಹಾರಾಜರ ಭೋಗ–ವೈಭವ ಜೀವನ ಪ್ರಜ್ಞೆ ಎನ್ನುವ ಭ್ರಮೆಯ ಗರಬಡಿದ ಎಷ್ಟೋ ಕವಿಗಳ ರಚನೆಯಿಂದ ಬೇಸತ್ತವರಿಗೆ ಕನಕದಾಸರ ಕೃತಿಗಳಲ್ಲಿ ಸಮಕಾಲೀನ ಜೀವನದ ಯಥಾವತ್ತಾದ ಸಹಜ ವರ್ಣನೆಗಳನ್ನು ಕಂಡು ನಿಜಕ್ಕೂ ಸಂತೋಷವಾಗುತ್ತದೆ"[4]

**ನಳ ಚರಿತ್ರೆ :** ಮಹಾಭಾರತದ ನಳೋಪಾಖ್ಯಾನ ಮತ್ತು ಶ್ರೀ ಹರ್ಷನ ನೈಷಧಗಳನ್ನು ಹಿನ್ನೆಲೆಯಾಗುಳ್ಳ 'ನಳಚರಿತ್ರೆ' ಕನಕದಾಸರ ಅಧ್ಯಯನಶಿಲ ಸಂಶೋಧನಾದೃಷ್ಟಿ ಮತ್ತು ವ್ಯಕ್ತಿವಿಶಿಷ್ಟ ಪ್ರತಿಭೆಗಳ ಸಂಗಮವಾಗಿದ್ದರೂ ಭಾಮಿನೀ ಷಟ್ಪದಿಯ ಅನುಕರಣೆಯಿಂದ ಹಿಡಿದು ವಸ್ತು ನಿರ್ವಹಣೆ, ಶೈಲಿಯವರೆಗೂ ಹಬ್ಬಿರುವ ಕುಮಾರವ್ಯಾಸನ ನೇರ ಪ್ರಭಾವಕ್ಕೆ ಒಂದು ಸ್ಪಷ್ಟ ನಿದರ್ಶನವಾಗಿದೆ.

'ನಳೋಪಾಖ್ಯಾನ' ಮಹಾಭಾರತಕ್ಕಿಂತ ಪ್ರಾಚೀನವಾದ ಜಾನಪದ ಕಥೆಯೆಂದೂ, ಇದು ಸೋಮದೇವನ ಕಥಾಸರಿತ್ಸಾಗರ, ಗುಣಾಢ್ಯನ ಬೃಹತ್ಕಥೆ, ಶಾತಪಥ ಬ್ರಾಹ್ಮಣ, ಋಗ್ವೇದ ಇವುಗಳಿಂದ ಪ್ರಭಾವಿತವಾದ, ಆರ್ಯೇತರ ಬುಡಕಟ್ಟಿನ ರಾಜರಾಣಿಯರ ಪ್ರೇಮಕಥೆಯ ಒಂದು ಪ್ರಕಟಿತ ರೂಪವೆಂದೂ ಸಾಧಾರವಾಗಿ 'ನಳಚರಿತ್ರೆ'ಯ ಸಂಪಾದಕರಾದ ಡಾ. ದೇ. ಜ. ಗೌ ಅವರು ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ.[5] ಮಾನವ ತನ್ನ ಮೌಲ್ಯ ನಿಷ್ಠೆಯಿಂದ ದೇವತೆಗಳನ್ನೂ ಹಿಂದಿಕ್ಕಬಲ್ಲನೆಂಬ ಮತ್ತು ಪ್ರೇಮ ಶುದ್ಧವಾಗಿದ್ದಲ್ಲಿ ಅಮರವಾದದ್ದೆಂಬ, ಅರಸನಾದವನು ಆಳಾಗಲೂ ಬಲ್ಲನೆಂಬ, ಮೌಲ್ಯಗಳನ್ನು ಪ್ರತಿಪಾದಿಸುವ ಈ ಕಥಾವಸ್ತು ತನ್ನ ಘಟನೆಗಳ ಬಾಹುಳ್ಯ ಮತ್ತು ವೈವಿಧ್ಯದಿಂದ

4. ಕನಕದಾಸರ ವಿಶಿಷ್ಟತೆ–ಜಿ. ಎಸ್. ಎಸ್.–ಪು. 107
5. ನಳಚರಿತ್ರೆ, ಸಂ. : ದೇಜಗೌ ಮುನ್ನುಡಿ, ವಿಶ್ವಕನ್ನಡ ಸಮ್ಮೇಳನ ಪ್ರಕಟಣೆ, 1985.

ರೋಚಕ ರಮಣೀಯವಾಗಿ ಪ್ರಾಚೀನ ಕಾಲದಿಂದ ಅರ್ವಾಚೀನದವರೆಗೂ ಸಾಗುತ್ತಾ ಬಂದಿದೆ. ರಾಜರುಗಳ ಸಪ್ತವ್ಯಸನಗಳಲ್ಲಿ ಒಂದಾದ ದ್ಯೂತವ್ಯಸನ ರಾಜರುಗಳ ಹಾಗೂ ಅವರನ್ನು ನಂಬಿದವರುಗಳ ಕಷ್ಟನಷ್ಟ ಪರಂಪರೆಯನ್ನೇ ತೆರೆಯುತ್ತದೆ ಎಂಬುದನ್ನು ಮನಮುಟ್ಟುವಂತೆ ವರ್ಣಿಸುವ ಈ ಕಥಾವಸ್ತು ಅನೇಕ ಬಗೆಯಲ್ಲಿ ಅನೇಕ ಕವಿಗಳಿಂದ ಚರ್ವಿತ ಚರ್ವಣವಾಗಿದ್ದರೂ ತನ್ನ ಹೊಸತನವನ್ನು ಕಳೆದುಕೊಂಡಿಲ್ಲ. ವ್ಯಾಸ ಮಹಾಭಾರತದ ವನಪರ್ವದಲ್ಲಿ ಇಪ್ಪತ್ತೆಂಟು ಅಧ್ಯಾಯಗಳಲ್ಲಿ ಹರಡಿರುವ ಈ ಕಥೆ, ಕುಮಾರವ್ಯಾಸನಲ್ಲಿ ಕೇವಲ ಮೂರು ಪದ್ಯಗಳಲ್ಲಿ ಮುಗಿದು ಹೋಗಿದೆ. ಕಾಳಿದಾಸ ಶಕುಂತಳೋಪಾಖ್ಯಾನವನ್ನು ಆಧರಿಸಿ ವಿಶ್ವವಿಖ್ಯಾತ ಶಾಕುಂತಲ ನಾಟಕವನ್ನು ರಚಿಸಿದಂತೆ ಕನಕದಾಸರು ನಳೋಪಾಖ್ಯಾನವನ್ನು ಆಧರಿಸಿ 'ನಳಚರಿತ್ರೆ'ಯನ್ನು ರಚಿಸಿದ್ದಾರೆ. ಈ ಕೃತಿಗೆ ಅವರು ಹಿಂದಿನ ಅನೇಕ ಕವಿಗಳಿಗೆ ಆಭಾರಿ. ಆದರೆ ಅವರು ತುಂಬಾ ಋಣಿಯಾಗಿರುವುದು ಕುಮಾರವ್ಯಾಸನಿಗೆ–ವಸ್ತುವಿಗಲ್ಲ, ವಿನ್ಯಾಸಕ್ಕೆ. ಮೂಲ ಮಹಾಭಾರತದಲ್ಲಿ ಬರುವ ಉಪದೇಶಾತ್ಮಕ ವಿವರಗಳನ್ನು ಬಿಟ್ಟು ಕಥೆಯ ಹಂದರವನ್ನು ಮಾತ್ರ ಸ್ವೀಕರಿಸಿದ್ದಾರೆ ಕನಕದಾಸರು. ನಳದ್ಯೂತದಲ್ಲಿ ಪುಷ್ಕರನಿಗೆ ಸೋಲುವುದು, ರಾಜ್ಯಪರಿತ್ಯಕ್ತನಾಗಿ ಹೆಂಡತಿಯೊಂದಿಗೆ ಕಾಡಿನಲ್ಲಿ ಅಲೆಯುವುದು, ಕಲಿಯ ಪ್ರಭಾವದಿಂದ ಉಟ್ಟ ಬಟ್ಟೆಯನ್ನೂ ಕಳೆದುಕೊಂಡು ಹೆಂಡತಿಯ ಸೀರೆಯಲ್ಲಿ ಅರ್ಧವನ್ನು ಪಡೆಯುವುದು, ಕಾರ್ಕೋಟಕನ ದಂಶನಕ್ಕೆ ಒಳಗಾಗಿ ವಿರೂಪಗೊಳ್ಳುವುದು, ತಲೆ ಮರೆಸಿಕೊಂಡು ಕೆಲವು ಕಾಲ ಇದ್ದು ನಂತರ ಅಶ್ವಹೃದಯವನ್ನು ಋತುಪರ್ಣನಿಗೆ ಹೇಳಿಕೊಟ್ಟು ಅವನಿಂದ ಅಕ್ಷಹೃದಯವನ್ನು ಪಡೆದು ಪುಷ್ಕರನೊಂದಿಗೆ ಮತ್ತೆ ಜೂಜಾಡಿ ಕಳೆದುಕೊಂಡದ್ದೆಲ್ಲವನ್ನೂ ಹಿಂದಕ್ಕೆ ಪಡೆಯುವುದು ಇವೇ ಮೊದಲಾದ ರೋಚಕ ಸನ್ನಿವೇಶಗಳನ್ನೊಳಗೊಂಡ ಈ ಕಥೆ ವನವಾಸ ಮತ್ತು ಅಜ್ಞಾತವಾಸಗಳ ಪರಂಪರೆಯಲ್ಲಿ ಸಾಗಿ ಬಂದ ಮತ್ತೊಂದು ಕಥೆಯಾಗಿದೆ. ರಾಮಾಯಣದಲ್ಲಿ ರಾಮಲಕ್ಷ್ಮಣರಿಗೆ ವನವಾಸವಾದರೆ ಸೀತೆಗೆ ಲಂಕೆಯಲ್ಲಿ ಕೆಲವು ಕಾಲ ಅಜ್ಞಾತವಾಸ, ಹದಿನಾಲ್ಕು ವರ್ಷ ವನವಾಸದಿಂದ ಹಿಂದಿರುಗಿದ ಮೇಲೂ ಸೀತೆಗೆ ಅಜ್ಞಾತವಾಸ ತಪ್ಪಲಿಲ್ಲ, ಮತ್ತೆ ಕಾಡಿಗೆ ಹೋಗಬೇಕಾಗುತ್ತದೆ. ರಾಜರುಗಳ ಅವಿವೇಕವನ್ನು (ಅದು ದಶರಥ ಇರಬಹುದು, ಧೃತರಾಷ್ಟ್ರ ಇರಬಹುದು) ಎತ್ತಿ ಹಿಡಿಯುವ ಈ ಘಟನಾ ಪರಂಪರೆಯ ವಸ್ತುವನ್ನೊಳಗೊಂಡ ಈ ಕಥಾ ವಸ್ತು ಬೇರೆ

ಬೇರೆ ರೂಪಧರಿಸಿ ನಮ್ಮ ಕಣ್ಮುಂದೆ ನಿಲ್ಲುತ್ತಾ ಬಂದಿದೆ. ಒಂದು ಮತ್ತೊಂದರಂತಿಲ್ಲ ಎಂಬ ಕಾರಣಕ್ಕಾಗಿ ಈ ವಸ್ತು ಚರ್ವಿತಚರ್ವಣ ಎನಿಸಿಲ್ಲ.

ಕನಕದಾಸರು ಕುಮಾರವ್ಯಾಸನಿಗೆ ಹೊತ್ತಿರುವ ಋಣಭಾರವನ್ನು ಪರಿಶೀಲಿಸಬಹುದು. ಪರಂಪರಾಗತ ದೇವದೇವತೆಯರ ಸ್ತುತಿಯಿಂದ ಹಿಡಿದು ಫಲಶ್ರುತಿಯವರೆಗೆ ಇದರ ಹರಹಿದೆ.

| **ಕುಮಾರವ್ಯಾಸ ಭಾರತ** | **ನಳಚರಿತ್ರೆ** |
|---|---|
| ತಾಯೆ ಬಿನ್ನಹವಿಂದು ನಿಮ್ಮಯ | ತಾಯೆ ಬಿನ್ನಹವಿಂದು ನಿಮ್ಮಯ |
| ರಾಯಸೋತನು ಜೂಜಿನಲಿ ಕುರು | ರಾಯ ಸೋತನು ಜೂಜಿನಲಿ ನಿ |
| ರಾಯ ಗೆಲಿದನು ಕೋಶವನು ಗಜತುರಗರಥ | ರ್ದಾಯದಲಿ ಪುಷ್ಕರನು ಗೆಲಿದನು |
| ಸಹಿತ | ಸಕಲ ರಾಜ್ಯವನು |
| ನೋಯಲಾಗದು ಹಲವು ಮಾತೇ | ನೋಯಲಾಗದು ಚಿತ್ತದಲಿ ನೆಲೆ |
| ನಾ ಯುಧಿಷ್ಠಿರ ನೃಪತಿಸೋತನು | ಬೀಯವಾದುದು ಸಿರಿಯುಯಿನ್ನಿದ |
| ತಾಯೆ ಭೀಮಾರ್ಜುನ ನಕುಲಸಹದೇವ | ರಾಯತವ ನೀವ್ ಬಲ್ಲಿರೆಂದನು |
| ನೀವ್ಸಹಿತ॥ | ವಿಪ್ರ ಕೈಮುಗಿದು ॥ |
| (ಸಭಾಪರ್ವ. ಸಂಧಿ ೧೪–ಪದ್ಯ ೫೦.) | (ಸಂಧಿ ೪–ಪದ್ಯ ೩೩) |
| **ಕುಮಾರವ್ಯಾಸ ಭಾರತ** | **ನಳಚರಿತ್ರೆ** |
| ಅರಳಿದಂಬುಜವನಕೆ ಮಂಜಿನ | ಕಮಲ ವನದಲಿ ಮಂಜು ಸುರಿದಾ |
| ಸರಿಯು ಸುರಿವಂದದಲಿ | ಕ್ರಮದ ಬಗೆಯಲಿ ಸತಿಯಳಿಗೆ ಮುಖ |
| ................ಮುಖ | ಕಮಲಬಾಡಿತು............... |
| ಸರಸಿರುಹ ಬಾಡಿತು......... ॥ | |
| (ಸಭಾಪರ್ವ–೧೪–೫೧) | |
| ಜನನವೇ ಪಾಂಚಾಲರಾಯನ | ಜನನವೇ ವರ ಭೀಮರಾಯನ |
| ಮನೆ ಮನೋವಲ್ಲಭರದಾರೆನೆ | ಮನೆಯೊಳಗೆ ನಳಚಕ್ರವರ್ತಿಯೆ |
| ಮನುಜಗಿನುಜರುಗಣ್ಯವೇಗೀರ್ವಾಣದಿಂ | ಇನಿಯನಗ್ಗದ ವೀರಸೇನನೆ |
| | ಮಾವನಾಗಿರಲು |
| | ವನದೊಳಿಭಕರಿಗಳಿಗೆ ತಾ ನಿಜ |
| ಎನಗೆ ಬಂದೆಡರೀ ವಿರಾಟನ | ತನುವ ತೆರಬೇಕೆಂಬ ಕಾರಣ |
| ವನಿತೆಯರುಗಳ ಮುಡಿಯ ಕಟ್ಟುವ | ತನಗಿರಲು ನೀವೇನ |
| | ಮಾಡುವಿರೆಂದಳಿಂದುಮುಖಿ ॥ |

ತನುವ ತಿಗುರುವಕಾಲನೊತ್ತುವ ಕೆಲಸ
ದುತ್ಸಾಹ ॥
(ವಿರಾಟಪರ್ವ ೩–೬೦)

(೫–೪೯)

ಇನ್ನು ಹುಟ್ಟದೆಯಿರಲಿ ನಾರಿಯ
ರೆನ್ನವೊಲು ಭಂಗಿತರು ಭುವನದೊ
ಳಿನ್ನು ಜನಿಸಲು ಬೇಡಗಂಡರು ಭೀಮಸನ್ನಿಭರು
ಎನ್ನವೊಲು ಪಾಂಡವರವೊಲ ಸಂ
ಪನ್ನ ದುಃಖಿಗಳಾರು ನವೆದರು
ಮುನ್ನಿನವರೊಳಗೆಂದು ದ್ರೌಪದಿ ಹಿರಿದುಹಲು
ಬಿದಳು ॥
(ವಿರಾಟ ಪರ್ವ ೩–೫೭)

ಏನನೆಂಬೆನು ತನ್ನ ಪುಣ್ಯದ
ಹಾನಿಯನು ಎಲೆ ತಾಯೆ ಲೋಕದ
ಮಾನಿನಿಯೊಳಾರುಂಟುಎನ್ನವೊಲ್
ತೊಳಲಿ ಬಳಲಿದರು
ದಾನವಾಮರರೊಳಗೆ ಕಾಣೆ ಸ
ಮಾನವನು ನಳನೃಪಗೆಯಿನ್ನಿದ
ಕೇನ ಮಾಡುವೆನೆನುತ ಕಂಬನಿದುಂಬಿದಳು
ತರುಣಿ ॥
(೮–೪)

'ಅಪಜಯ ನಾರಿಯ ಸೆರಗ ಹಿಡಿದನು' ಎಂಬಂಥ ರೂಪಕವನ್ನು ಹಾಗೆ ಭಟ್ಟಿಯಿಳಿಸಿದ್ದಾನೆ. 'ನೆಳಲುತನುವಿನ ಬಳಿಯೊಳಲ್ಲದೆ ಚಲಿಸುವುದೆ, ಮೂಗಿನಲಿ ಬೆರಳಿಟ್ಟು ಮುಕುಟವ ತೂಗಿದನು, ದಿನಪನಿದಿರಲಿ ತಮದ ಹಾವಳಿಯೆ, ಮದಕರಿಗೆ ನೊರಜಂತರವೆ' ಇತ್ಯಾದಿ ಅನೇಕ ಪದಪುಂಜಗಳೂ, ವಾಕ್ಯಪುಂಜಗಳು ಹೇರಳವಾಗಿ ಕುಮಾರವ್ಯಾಸನಿಂದ ಕನಕದಾಸರ ಬುಟ್ಟಿಗೆ ಬಿದ್ದಿವೆ. ಕನಕದಾಸರ ಕೈ ಕುಮಾರವ್ಯಾಸನ ಬೊಕ್ಕಣದಲ್ಲಿ ಎಂಬ ಮಾತು ಸತ್ಯವಾಗಿದೆ. ಇಷ್ಟೆಲ್ಲ ಋಣಭಾರವನ್ನು ಒಪ್ಪಿಕೊಂಡೂ ನಳಚರಿತ್ರೆ ಒಂದು ಸ್ವತಂತ್ರ ಕೃತಿಯಂತೆ ನಮ್ಮ ಮನ ಸೆಳೆಯುವುದು ಅಲ್ಲಲ್ಲಿ ಮೂಡಿರುವ ಸ್ವೋಪಜ್ಞತೆಯ ತಂಗುದಾಣಗಳಿಂದ.

ದಮಯಂತಿಯನ್ನು ನೋಡಿ ಬಣಜಿಗರು 'ಆರಿವಳು ವನಲಕ್ಷ್ಮಿಯೋ ಸುರನಾರಿಯೋ ಮಾರಾಂಗನೆಯೊ' ಎಂದು ಭಯಗೊಂಡು ಓಡಿದ ದೃಶ್ಯ, ಕಾರ್ಕೋಟಕ ಕಡಿದಾಗ ಸುಂದರನಾಗಿದ್ದ ನಳನೃಪ 'ದೊಡ್ಡ ಹೊಟ್ಟೆಯ ಗೂನುಬೆನ್ನಿನ ಅಡ್ಡ ವೋರೆಯು ಗಂಟು ಮೂಗಿನ, ದೊಡ್ಡ ಕೈ ಕಾಲುಗಳವುದುರಿದ ರೋಮ ಮೀಸೆಗಳ, ಜಿಡ್ಡುದೇಹದ ಗುಜ್ಜು ಗೊರಲಿನ ಗಿಡ್ಡು ರೂಪಿನ ಹರಕು ಗಡ್ಡದ ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ' ಇಂಥ ವರ್ಣನೆಗಳು ಕನಕದಾಸರ ಸ್ವೋಪಜ್ಞತೆಗೆ ನಿದರ್ಶನವಾಗಿವೆ. "ಅವರ ಕೀರ್ತಿ ಪ್ರತಿಷ್ಠಾಪನೆಗೆ ನಳಚರಿತ್ರೆಯೊಂದೇ ಸಾಕು. ಗದುಗಿನ ಭಾರತದಷ್ಟೇ

ನಳ ಚರಿತ್ರೆಯೂ ಜನಮಾನ್ಯತೆ ಪಡೆದಿದೆ."[೬] ಎಂಬ ಮಾತನ್ನು ಒಪ್ಪಬಹುದಾಗಿದೆ.

**ರಾಮಧಾನ್ಯಚರಿತ್ರೆ :** ಕನಕದಾಸರ ಸ್ವತಂತ್ರ ರಚನೆಯೆಂದು ಕಂಡುಬರುವ ಈ ಕೃತಿ ಅವರ ಕವಿತಾಶಕ್ತಿಯನ್ನು ವಿಜೃಂಭಿಸುವ ಕುಶಲ ಕರ್ಮವೇನಲ್ಲ. 'ರಾಗಿ ಎಂಬ ಶಬ್ದಕ್ಕೆ ರಾಘವ ಎಂಬುದು ಮೂಲವಿರಬಹುದೆಂಬಂತೆ ಭಾವಿಸಿದ ಅಪನಿಷ್ಪತ್ತಿಯ ನೆಲೆಗಟ್ಟಿನ ಮೇಲೆ ಕಟ್ಟಿದ ಸ್ವಚ್ಛಂದ ಕಲ್ಪನೆ ಇದರ ವಸ್ತು. ರಾಗಿಯ ಮಹಾತ್ಮೆಯನ್ನು ಎತ್ತಿ ಹಿಡಿಯಲು ಉದ್ದೇಶಪೂರ್ವಕವಾಗಿ ಹೆಣೆದ ಕತೆ ಇದು."[7] 'ಸಾಮಾನ್ಯ ಜಾನಪದ ಕಥೆಯ ಹಿನ್ನೆಲೆಯಿಂದ ಸಾಂಗತ್ಯದಲ್ಲೋ, ಅಥವಾ ಕೀರ್ತನೆಯ ಧಾಟಿಯಲ್ಲೋ ಬರೆದು ಇನ್ನೂ ಜನಪ್ರಿಯವನ್ನಾಗಿ ಮಾಡಬಹುದಾಗಿದ್ದ ಈ ವಸ್ತುವನ್ನು ಕನಕದಾಸರು ಯಾಕೆ ಇಂಥ ಪೌರಾಣಿಕ ಗಡಿಬಿಡಿಯ ಹಿನ್ನೆಲೆಯಲ್ಲಿ ಅದೂ ಷಟ್ಪದಿಯಲ್ಲಿ ಬರೆದರು ಎನ್ನುವ ಪ್ರಶ್ನೆಯೇ ಇದರ ವಿಶಿಷ್ಟತೆಯಾಗಿ ಕಾಡುತ್ತದೆ !' ಎಂಬ ವಿಮರ್ಶೆ ಕರಾರುವಾಕ್ಕಾಗಿದೆ. ಉತ್ತಮ ಜಾತಿಯವರು ಶ್ರೀಮಂತರು ಇವರ ಪೊಳ್ಳುತನ ಮತ್ತು ಬಡವರ ಗಟ್ಟಿತನ ಇವುಗಳನ್ನು ಪ್ರತಿಪಾದಿಸಲೆಂದೇ ಈ ಕೃತಿ ರಚನೆಯಾಗಿದೆ ಎಂದು ಭಾವಿಸುವ ವಿಮರ್ಶಕರೂ ಉಂಟು. ಆದರೆ ಪುರಾಣ ಮತ್ತು ಕಲ್ಪಕತೆಗಳ ಸಮ್ಮಿಶ್ರಣ ಪ್ರತಿಭೆಯ ಕೊರತೆಯಿಂದಾಗಿ ಬಂದು ಸಾಮಾನ್ಯ ಸಂವಾದವಾಗಿ ನಮ್ಮ ಮುಂದೆ ನಿಲ್ಲುತ್ತದೆಯೇ ಹೊರತಾಗಿ ಹೊಸದೇನನ್ನೂ ಹೇಳುವುದಿಲ್ಲ.

**ಹರಿಭಕ್ತಿಸಾರ :** ಪಾರಾಯಣ ಕಾವ್ಯವಾದ ಹರಿಭಕ್ತಿಸಾರ ೧೧೦ ನುಡಿಗಳ 'ರಕ್ಷಿಸು ನಮ್ಮನನವರತ' ಎಂದು ಪ್ರತಿಪದ್ಯದಲ್ಲೂ ಕೊನೆಯಾಗುವ ಒಂದು ಕಾವ್ಯ. ಹರಿಹರನ 'ರಕ್ಷಾಶತಕ'ವನ್ನು ಹೋಲುವಂತೆ ಕಾಣುವ ಈ ಕೃತಿ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ ಎಂಬುದನ್ನು ಬಿಟ್ಟರೆ ಕಾವ್ಯಮಯತೆಯಿಂದಾಗಿ ನಮ್ಮನ್ನು ಸೆಳೆಯುವಂಥದ್ದಲ್ಲ. ಒಬ್ಬ ಭಕ್ತನ ಹೃದಯದ ಆರ್ತನಾದವನ್ನು ಇದರಲ್ಲಿ ಗುರುತಿಸಬಹುದು. ಹರಿಹರನ ಭಕ್ತಿಯ ಪರಾಕಾಷ್ಠೆಯನ್ನು ಹೋಲುವ ಕೆಲವು ಪದ್ಯಗಳು ಸಹನೀಯವಾಗಿವೆ. ರಾಮಾಯಣ, ಭಾರತ, ಭಾಗವತಗಳ ಕತೆಗಳ ಮೂಲಕ ಹರಿಪಾರಮ್ಯವನ್ನು ಕುರಿತು ಹೇಳುವ ಈ ಸೋತ್ರಮಾಲಿಕೆ ಭರ್ತೃಹರಿ, ಹರಿಹರಾದಿಗಳಿಗೆ ಋಣಿಯಾಗಿರುವಂತೆ ಕಾಣುತ್ತದೆ.

6. ನಳಚರಿತ್ರೆ–ದೇ. ಜ. ಗೌ.–ಮುನ್ನುಡಿ ಪುಟ. 29
7. ಕನಕದಾಸರ ವಿಶಿಷ್ಟತೆ–ಜಿ. ಎಸ್. ಎಸ್.–ಪುಟ. 106

ಈವರೆಗಿನ ಸಮೀಕ್ಷೆಯಿಂದ ಕನಕದಾಸರು ಪರಂಪರೆಗೆ ಎಷ್ಟು ಋಣಿ, ಸಮಕಾಲೀನ ಸಾಹಿತ್ಯ ಅವರ ಮೇಲೆ ಬೀರಿದ ಪ್ರಭಾವ ಯಾವ ಬಗೆಯದು ಎಂಬುದನ್ನು ಗುರುತಿಸಬಹುದು. ಅವರ ಪುರಾಣದ ತಿಳಿವಳಿಕೆ ಅಗಾಧವಾದದ್ದು, ಮಹಾಕಾವ್ಯಗಳ ಸ್ಥೂಲ ಹಾಗೂ ಸೂಕ್ಷ್ಮ ಅಧ್ಯಯನ, ಸಂಸ್ಕೃತ ಸಾಹಿತ್ಯದ ಮತ್ತು ಕನ್ನಡದ ದೇಸಿ ಸಾಹಿತ್ಯದ ಅಗಾಧವಾದ ಜ್ಞಾನ ಮತ್ತು ಶರಣಸಾಹಿತ್ಯ ಮತ್ತು ದಾಸಸಾಹಿತ್ಯಗಳ ಮೌಲ್ಯಗಳ ಪುನರ್ನಿರ್ಮಿತಿಯ ಬಗೆಗಿನ ಕಾಳಜಿ, ಕುಮಾರವ್ಯಾಸನಂಥ ಭಾಗವತ ಕವಿಯ ಅಚ್ಚಳಿಯದ ಪ್ರಭಾವ ಇವೆಲ್ಲವನ್ನೂ ಅವರ ಕೃತಿಗಳು ಸಾರಿ ಹೇಳುತ್ತವೆ.

"ಅವರ ಷಟ್ಪದಿಗಳಲ್ಲಿ ಕುಮಾರವ್ಯಾಸನ ಪ್ರಭಾವವಿದೆ. ಅವರ ಕೀರ್ತನೆಗಳಲ್ಲಿ ಪುರಂದರದಾಸರ ಛಾಯೆಯಿದೆ. ಅವರ ಕನಕನ ಮುಂಡಿಗೆಗಳೆಂಬ ಕೆಲವು ರಚನೆಗಳಲ್ಲಿ ಬೆಡಗಿನ ವಚನಗಳ ಅನುಕರಣವಿದೆ. ಆದರೆ ಈ ನೆಳಲು ಬೆಳಕಿನ ನಡುವೆ ಕನಕದಾಸರು ತಮ್ಮ ತೇಜಸ್ಸನ್ನು ಕಳೆದುಕೊಂಡಿಲ್ಲ. ಅವರು ತಮ್ಮ ಕವಿ ವಿಶಿಷ್ಟವಾದ ಸಹಜ ಪ್ರತಿಭೆಯಿಂದ, ಮನಸ್ಸಿನ ಉದಾರತೆಯಿಂದ, ವಸ್ತು ವೈವಿಧ್ಯ ಮತ್ತು ಛಂದೋ ವೈವಿಧ್ಯಗಳಿಂದ ಸಮಕಾಲೀನ ಜೀವನ ಪ್ರಜ್ಞೆಯಿಂದ, ಪಂಥಬದ್ಧವಲ್ಲದ ಉದಾತ್ತ ವ್ಯಕ್ತಿತ್ವದಿಂದ ದಾಸಪರಂಪರೆಯಲ್ಲಿ ಮಾತ್ರವಲ್ಲದೆ ಕನ್ನಡ ಕವಿಗಳ ಪಂಕ್ತಿಯಲ್ಲಿಯೂ ವಿಶಿಷ್ಟವಾದ ಸ್ಥಾನವನ್ನು ಸಂಪಾದಿಸಿಕೊಂಡಿದ್ದಾರೆ.[8]

## ಗ್ರಂಥೃಋಣ


1. ಕನ್ನಡ ಸಾಹಿತ್ಯ ಚರಿತ್ರೆ – ಡಾ. ರಂ. ಶ್ರೀ ಮುಗಳಿ
2. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ – ಸಂಪುಟ–4, ಭಾಗ–2, ಬೆಂಗಳೂರು. ವಿವಿ
3. ಕರ್ಣಾಟಕಭಾರತ ಕಥಾಮಂಜರಿ – ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
4. ವಚನಧರ್ಮಸಾರ – ಎಂ. ಆರ್. ಶ್ರೀ.

8. ಕನಕದಾಸರ ವಿಶಿಷ್ಟತೆ – ಜಿ. ಎಸ್. ಎಸ್. ಪುಟ 111

5. ಪರಿಶೀಲನ – ಜಿ. ಎಸ್. ಎಸ್.
6. ಕನಕದಾಸರ ಕೀರ್ತನೆಗಳು – ನಾಲ್ಕನೆಯ ಶತಮಾನೋತ್ಸವ ಸಂಪುಟ
   ಸಂ : ಬಿ. ಶಿವಮೂರ್ತಿಶಾಸ್ತ್ರಿ. ಕೆ. ವಿ. ಕೃಷ್ಣರಾವ್
7. ನಳಚರಿತ್ರೆ – ಸಂ : ಡಾ. ದೇಜಗೌ.

8. ರಾಮಧಾನ್ಯಚರಿತೆ – ಸಂ : ಕೆ. ಸಿ. ಪಂಚಲಿಂಗೇಗೌಡ

9. ಹರಿದಾಸ ಸಾಹಿತ್ಯ – ರಾ. ಸ್ವಾ. ಪಂಚಮುಖಿ
10. ಕನಕದಾಸರು – ಕೆ. ವೆಂಕಟರಾಮಪ್ಪ
11. ಮೋಹನ ತರಂಗಿಣಿ ಸಂಗ್ರಹ – ಸಂ : ಬಿ. ಎಸ್. ಸಣ್ಣಯ್ಯ
12. ಮಹಾತ್ಮ ಕನಕದಾಸ ಪ್ರಶಸ್ತಿ – ನಾಲ್ಕನೆಯ ಶತಮಾನೋತ್ಸವ ಸಮಿತಿ
13. ಹರಿದಾಸ ಹೃದಯ – ಜಿ. ವರದರಾಜರಾವ್

# ಕನಕದಾಸರ ರಾಮಧಾನ್ಯ ಚರಿತೆ

**ಹ. ಕ. ರಾಜೇಗೌಡ**

ಕನ್ನಡನಾಡಿನ ಚರಿತ್ರೆಯಲ್ಲಿ ವಿಜಯನಗರದ ಸಾಮ್ರಾಜ್ಯ ಒಂದು ಸುವರ್ಣಯುಗ. ಉತ್ತರದಿಂದ ಒತ್ತಿಬಂದ ಮುಸಲರ ದಾಳಿಯಿಂದ ತತ್ತರಿಸಿದ ಹಿಂದೂರಾಜರು ಪುಡಿ ಪುಡಿಯಾಗಿ ಹೋಗಿದ್ದರು. ಒಂದು ಅತ್ಯಂತ ಪ್ರಾಚೀನ ರಾಜಪರಂಪರೆ, ಆ ಶಕ್ತಿಯನ್ನೆ ನಂಬಿದ್ದ ಭಾಷೆ, ಸಂಸ್ಕೃತಿಗಳು ಸರ್ವನಾಶವಾಗುವ ಸ್ಥಿತಿ ಒದಗಿತ್ತು. ಅಂತಹ ಸಮಯದಲ್ಲಿ ಹಕ್ಕ–ಬುಕ್ಕರೆಂಬ ಇಬ್ಬರು ಗ್ರಾಮೀಣ ಕುರುಬ ಸೋದರರು ಈ ಪ್ರಾಚೀನ ಪರಂಪರೆಯ ರಕ್ಷಕರಾಗಿ ಮೂಡಿಬಂದರು. ಛಿದ್ರ ಚಲ್ಲಾಪಿಲ್ಲಿಯಾಗಿದ್ದ ಹಿಂದೂ ರಾಜರಿಗೆ ಮತ್ತೆ ಚೇತನ ನೀಡಿ ಆಗಬಹುದಾಗಿದ್ದ ಅನಾಹುತವನ್ನು ತಪ್ಪಿಸಿದರು. ಹದಿನೈದನೆಯ ಶತಮಾನದ ಹೊತ್ತಿಗೆ ಈ ವಿಜಯನಗರ ಸಾಮ್ರಾಜ್ಯ ದೇಶವಿದೇಶಗಳಲ್ಲಿ ಪ್ರಖ್ಯಾತವಾಗಿತ್ತು. ದೇಶವಿದೇಶಗಳಿಂದ ಈ ವೈಭವವನ್ನು ಕಾಣಲು ಪ್ರವಾಸಿಗರು ಬಂದರು. ವಜ್ರವೈಢೂರ್ಯಗಳನ್ನು ಪೇಟೆಯಲ್ಲಿ ರಾಶಿಹಾಕಿ ಮಾರುವ, ಮನೆಗಳಿಗೆ ಬೀಗವೇ ಇಲ್ಲದ, ಧಾರ್ಮಿಕವಾಗಿ ಪ್ರಬುದ್ಧವಾದ ಸುಭಿಕ್ಷವಾದ ಸಾಮ್ರಾಜ್ಯವೊಂದರ ಸುಂದರ ಚಿತ್ರವನ್ನು ತಮ್ಮ ತಮ್ಮ ಪ್ರವಾಸ ಕಥನಗಳಲ್ಲಿ ಇಂಥ ಪ್ರವಾಸಿಗಳು ಹಿಡಿದಿಟ್ಟರು. ಈ ಮಹಾಸಾಮ್ರಾಜ್ಯಕ್ಕೆ ಕಿರೀಟ ಪ್ರಾಯವಾಗಿ ಬಂದವನು ಕೃಷ್ಣದೇವರಾಯ.

ಹನ್ನೆರಡನೆಯ ಶತಮಾನ ಕನ್ನಡ ನಾಡಿನ ಧಾರ್ಮಿಕ ಮತ್ತು ಸಾಹಿತ್ಯಕ್ಷೇತ್ರ ದಲ್ಲೊಂದು ಪರ್ವಕಾಲ. ಆವರೆಗೆ ಕೆಲವರೇ ಉತ್ತಮ ವರ್ಗದವರಿಗೆ ಮೀಸಲಾಗಿದ್ದ ಧರ್ಮ, ಸಂಸ್ಕೃತಿ, ಭಾಷೆಗಳ ಅಭಿವ್ಯಕ್ತಿಗೆ ಈ ಶತಮಾನದಲ್ಲಿ ಒಂದು ಮಹಾಮಾರ್ಗ ನಿರ್ಮಾಣವಾಯಿತು. ಎಲ್ಲ ಸ್ತರದ ಜನರ ಒಳಗಿರುವ ಶಕ್ತಿಯ ಅಭಿವ್ಯಕ್ತಿಗೆ ಇದು ಅನುವು ಮಾಡಿಕೊಟ್ಟಿತು. ಸಮಾಜದ ತಿರಸ್ಕೃತ ಕೆಳವರ್ಗ ಒಮ್ಮೆಲೇ ತನ್ನ ಶತಶತಮಾನಗಳ ಜಡತೆಯನ್ನು ಕೊಡವಿ ಎದ್ದು ನಿಂತಿತು. ಆವರೆಗೆ ಅರಮನೆಯ ಅಂದಣ ಬಿಟ್ಟಿಳಿಯದಿದ್ದ ಭಾಷೆ ಮನೆ ಮನೆಯ

ಮುಂದೆ ಬಂದು ನಿಂತಿತು. ಕೇವಲ ಯಕ್ಷ ಕಿನ್ನರ, ಮೇನಕೆ ತಿಲೋತ್ತಮೆ, ರಾಜ ರಾಣಿಯರ ಬೆನ್ನು ಬಿಡದಿದ್ದ ಕಲೆ ಸಾಹಿತ್ಯಗಳು ಧರೆಗಿಳಿದು ಹಳ್ಳಿ ಹಳ್ಳಿಯ ಓಣಿಯಲ್ಲಿ ಮೆರೆದವು. ಮಣ್ಣು, ಗೊಬ್ಬರ ಕಾವ್ಯದ ವಸ್ತುವಾದವು. ಇದು ನಿಜವಾಗಿಯೂ ಒಂದು ಮಹಾಕ್ರಾಂತಿ. ಸಾಮಾಜಿಕ ಹೊಸ ತಿರುವಿಗೆ ಕಾರಣವಾಯಿತು.

ವಿಜಯನಗರದ ಕಾಲದಲ್ಲಿ ವಿಶೇಷವಾಗಿ ಕೃಷ್ಣದೇವರಾಯನ ಕಾಲದಲ್ಲಿ ಮತ್ತೆ ಈ ಪ್ರವಾಹವನ್ನು ಕಾಣಬಹುದಾಗಿದೆ. ಆ ಕಾಲದಲ್ಲಿ ಕನ್ನಡನಾಡಿನ ಉದ್ದಗಲಕ್ಕೂ ಭಕ್ತಿ ಸಾಹಿತ್ಯದ ಮಹಾಪೂರ ಉಕ್ಕಿ ಹರಿಯಿತು. ನಮ್ಮ ನೆಲ, ಜಲ, ಕುರಿ, ಕೋಳಿ ರಾಗಿ ಬತ್ತಗಳು ಕಾವ್ಯದ, ಭಕ್ತಿಯ ವಸ್ತುಗಳಾದವು. ಹನ್ನೆರಡನೆಯ ಶತಮಾನದ ಶರಣರು ಶ್ರೀಸಾಮಾನ್ಯರ ಹತ್ತಿರಕ್ಕೆ ಧರ್ಮವನ್ನು ತಂದಂತೆ ಹದಿನೈದನೆಯ ಶತಮಾನದ ದಾಸರೂ ಶ್ರೀಸಾಮಾನ್ಯರ ಹತ್ತಿರಕ್ಕೆ ಭಕ್ತಿಯನ್ನು ತಂದರು. ಈ ಹಿನ್ನೆಲೆಯಲ್ಲಿ ಈ ಪರಂಪರೆಯಲ್ಲಿ ಬಂದವರು ಕನಕದಾಸರು. ಜನಸಾಮಾನ್ಯರ ಮಧ್ಯದಿಂದ ಬಂದ ಈ ವ್ಯಕ್ತಿಯ ಸಾಧನೆ ಸಿದ್ಧಿ ಅಪೂರ್ವವಾದವು, ವಿನೂತನವಾದವು. ತನ್ನ ಸುತ್ತಲಿನ ಬದುಕಿನ ಸಂಗತಿಗಳನ್ನೇ ಕಾವ್ಯದ, ಕೀರ್ತನೆಯ ವಿಷಯ ಮಾಡಿಕೊಂಡ ಜನತೆಯ, ಜನಪದಕವಿ ಕನಕದಾಸರು ಎಂದು ಹೇಳಿದರೆ ಅತಿಶಯೋಕ್ತಿಯಾಗುವುದಿಲ್ಲ.

ಈ ದೇಶದಲ್ಲಿ ಆರ್ಯಧರ್ಮ ಆರ್ಯಸಂಸ್ಕೃತಿಗಳು ಪ್ರಬಲವಾಗಿ, ಆಮೇಲೆ ಅವು ವೈದಿಕಧರ್ಮ ಸಂಸ್ಕೃತಿಗಳಾಗಿ ಬೆಳೆಯುತ್ತ ಡೇರೆಯಲ್ಲಿ ತಲೆತೂರಿಸಿದ ಒಂಟೆಯಂತೆ ಭಾರತೀಯ ಮೂಲಧರ್ಮ ಸಂಸ್ಕೃತಿಗಳನ್ನು ಮೂಲೆಗುಂಪಾಗಿಸಿದವು. ಹೀಗಾಗಿ ಒಂದು ಕಾಲದಲ್ಲಿ ಅತ್ಯುನ್ನತ ಸ್ಥಿತಿಯಲ್ಲಿದ್ದ ಈ ನಾಡಿನ ಜನಾಂಗಗಳು ಮತ್ತು ಅವರ ಸಂಸ್ಕೃತಿ, ಭಾಷೆ ಅನಾಗರಿಕ ಅನ್ನಿಸಿಕೊಂಡು ಅವಜ್ಞೆಗೆ ಒಳಗಾದವು. ಮುಂದೆ ಇಂತಹ ಜನಾಂಗಗಳಿಂದ ಬಂದ ಪ್ರತಿಭೆಗಳು ಬೆಳೆಯದಂತೆ ಈ ಜನ ನೋಡಿಕೊಂಡರು ಆಕಸ್ಮಿಕವಾಗಿ ಅಲ್ಲಿ ಇಲ್ಲಿ ಕಣ್ಣು ತಪ್ಪಿ ಮೇಲೆ ಬಂದ ಈ ವರ್ಗದ ಪ್ರತಿಭೆಗಳಿಗೆ ತಮ್ಮ ವರ್ಗದ ಗುರುವನ್ನೊ ಮಾರ್ಗದರ್ಶಕನನ್ನೊ ಸೃಷ್ಟಿಸಿ ಅಂಥ ನಿಜಪ್ರತಿಭೆಯನ್ನು ಶಕ್ತಿಯನ್ನು ಮರೆಮಾಡಿರುವುದೂ ಉಂಟು. ತಮ್ಮ ಪ್ರತಿರೋಧವನ್ನೂ ಮೀರಿ ನಡೆಯುವ ಶ್ರೀಸಾಮಾನ್ಯ ಪ್ರತಿಭೆಯನ್ನು ಹಲವು ಹತ್ತು ರೀತಿಯಲ್ಲಿ ಹಂಗಿಸಿ ಹಿಂಸಿಸಿರುವುದೂ ಉಂಟು. ಕನಕದಾಸರೂ ಕೂಡ ಈ ವರ್ಗ ಸಂಘರ್ಷದ ಬೇಲಿಯನ್ನು ಕಿತ್ತು ಬೆಳೆದು ಬಂದವರೆಂಬುದಕ್ಕೆ ಅವರ ಸಾಹಿತ್ಯದಲ್ಲಿ

ವಿಪುಲವಾದ ಉದಾಹರಣೆಗಳು ದೊರೆಯುತ್ತವೆ. ಅವುಗಳಲ್ಲಿ ರಾಮಧಾನ್ಯ ಚರಿತೆ ಈ ಸಂಘರ್ಷಕ್ಕೊಂದು ಜ್ವಲಂತ ಸಾಕ್ಷಿಯಾಗಿ ನಿಲ್ಲುತ್ತದೆ.

ಯಾವನೇ ವ್ಯಕ್ತಿ ತಾನೆಲ್ಲಿಯೇ ಜೀವನ ನಿರ್ವಹಣೆಗಾಗಿ ಕೆಲಸ ಮಾಡುತ್ತಿರಬಹುದು. ಯಾವುದೋ ಕಾರಣದಿಂದ ಬೇರೆಡೆಗೆ ವಲಸೆ ಹೋಗಿರಬಹುದು. ಆದರೆ ಯಾರೂ ತಾವು ಹುಟ್ಟಿದ ಪರಿಸರ, ಅಲ್ಲಿನ ರೀತಿ ನೀತಿ, ಆಹಾರ, ಪಾನೀಯಗಳು, ಪ್ರಕೃತಿ, ದೇವರುದಿಂಡರುಗಳನ್ನು ಮರೆಯುವಂತಿಲ್ಲ. ಬೇರೆ ಬೇರಲ್ಲಿಗೆ ವಲಸೆ ಹೋದ ಜನಾಂಗಗಳಲ್ಲಿ ಕೂಡ ಈ ರೀತಿಯಲ್ಲಿ ತಾವು ಬಿಟ್ಟು ಬಂದ ನೆಲದ ನೆನಪುಗಳ ಬಗೆಗಿನ ಕಥೆಗಳು ಹೇರಳವಾಗಿಯೇ ದೊರೆಯುತ್ತವೆ. ಕವಿ, ಕಲಾವಿದರಾದವರು ತಮ್ಮ ಸುತ್ತಲಿನ ಪರಿಸರವನ್ನು, ಜನಜೀವನವನ್ನು, ಆಹಾರ ಪಾನೀಯಗಳನ್ನು ತಮ್ಮ ಕೃತಿಗಳಲ್ಲಿ, ರಚನೆಗಳಲ್ಲಿ ಮೂಡಿಸಿಬಿಡುತ್ತಾರೆ. ಈ ದೃಷ್ಟಿಯಿಂದ ಕೂಡ ರಾಮಧಾನ್ಯಚರಿತೆಯ ಅಧ್ಯಯನ ಕುತೂಹಲಕಾರಿಯಾದುದಾಗಿರುತ್ತದೆ.

ಕನಕದಾಸರ ರಾಮಧಾನ್ಯ ಚರಿತೆ ೧೫೬ ಪದ್ಯಗಳ ಒಂದು ಚಿಕ್ಕ ಕೃತಿ. ಇದು ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಕನಕದಾಸರು ನಾಲ್ಕು ಕಾವ್ಯಗಳನ್ನು ರಚಿಸಿದ್ದಾರೆ. ಅವುಗಳೆಂದರೆ ನಳಚರಿತ್ರೆ, ರಾಮಧಾನ್ಯಚರಿತೆ, ಹರಿಭಕ್ತಿಸಾರ ಮತ್ತು ಮೋಹನ ತರಂಗಿಣಿ. ಕನಕದಾಸರ ಮೊದಲ ಕೃತಿ ಯಾವುದು ಎಂಬ ಬಗ್ಗೆ ಕೂಡ ವಿದ್ವಾಂಸರು ನಾನಾ ರೀತಿಯ ಅಭಿಪ್ರಾಯಗಳನ್ನು ನೀಡಿದ್ದಾರೆ. ಕೆಲವರು ಮೋಹನ ತರಂಗಿಣಿ ಕನಕದಾಸರ ಮೊದಲಕಾವ್ಯವೆಂದೂ, ಕೆಲವರು ನಳಚರಿತ್ರೆ ಮೊದಲ ಕಾವ್ಯವೆಂದೂ ಹೇಳಿದ್ದಾರೆ. ಮೋಹನ ತರಂಗಿಣಿಯಲ್ಲಿರುವ ಶೃಂಗಾರವನ್ನು ಗಮನದಲ್ಲಿಟ್ಟುಕೊಂಡು ಅನೇಕರು ಕವಿ ತನ್ನ ಯುವವಯಸ್ಸಿನಲ್ಲಿ ಈ ಕಾವ್ಯ ರಚಿಸಿರಬೇಕೆಂದು ಊಹಿಸಿದ್ದಾರೆನ್ನಿಸುತ್ತದೆ. ವಾಸ್ತವವಾಗಿ ಕವಿ ಮತ್ತು ಅವನ ಅನುಭವಗಳು ಪಕ್ವವಾದಾಗಲೇ ಕಾವ್ಯ ಮತ್ತು ಅದರಲ್ಲಿ ಬರುವ ವಿಷಯಗಳು ಉತ್ತಮವೆನಿಸುವುದು. ಆದುದರಿಂದ ಶೃಂಗಾರವಿಷಯಗಳನ್ನು ಆಧಾರವಾಗಿಟ್ಟುಕೊಂಡು ಕನಕದಾಸರು ಮೋಹನತರಂಗಿಣಿಯನ್ನು ಮೊದಲು ಬರೆದರೆನ್ನುವುದು ಸರಿಯಲ್ಲವೆನಿಸುತ್ತದೆ, ಈ ಕವಿಯ ಸಮಗ್ರ ರಚನೆಗಳನ್ನು ಕೀರ್ತನೆಗಳೂ ಸೇರಿದಂತೆ ಪರಿಶೀಲಿಸಿದಾಗ ಮೊದಮೊದಲು ಹಾಡುಗಳನ್ನು ರಚಿಸಿ, ಚಿಕ್ಕಚಿಕ್ಕ ಕಾವ್ಯ ರಚನೆಗೆ ಕೈಹಾಕಿ ಮಹಾಕಾವ್ಯದತ್ತ ತಿರುಗುವ ಕವಿಸಂಪ್ರದಾಯವೇ ಇಲ್ಲಿ ನಮಗೆ ಹೆಚ್ಚಾಗಿ ದೊರೆಯುತ್ತದೆ. ಅಲ್ಲದೆ ನಳಚರಿತ್ರೆಯನ್ನು ಬರೆದಾಗ ಕನಕದಾಸರಿಗೆ ಬಾಡವಾಗಲಿ, ಕಾಗಿನೆಲೆಯಾಗಲಿ

ತಿಳಿದಿರಲಿಲ್ಲವೆಂಬುದೂ ಇವುಗಳಿಂದ ವ್ಯಕ್ತವಾಗುತ್ತದೆ. ಆದುದರಿಂದ ನಳಚರಿತ್ರೆಯೇ ಕನಕದಾಸರ ಮೊದಲ ಕಾವ್ಯ ಎಂಬುದು ಖಚಿತವಾಗುತ್ತದೆ. ವರ್ಗ ವರ್ಣಗಳ ಆಗಿನ ಕಾಲದ ಸಾಮಾಜಿಕ ಪರಿಸ್ಥಿತಿಯಲ್ಲಿ ಕನಕದಾಸರ ಈ ರಚನೆ ಮೇಲುವರ್ಗದವರ, ತಾವೇ ಬರೆಯಲು ಹಕ್ಕಿನವರೆಂದು ತಿಳಿದ ಜನರ ಕಟಕಿಗೆ, ನಿಂದನೆಗೆ ಗುರಿಯಾಗಿರಬೇಕು, ಈ ರೀತಿಯ ಮನೋಭಾವದ ಜನರಿಗೆ ಉತ್ತರ ರೂಪದಲ್ಲಿ ರಾಮಧಾನ್ಯ ಚರಿತೆ ರೂಪುಗೊಂಡು ರಚನೆಯಾಗಿರುವ ಸಾಧ್ಯತೆಯೇ ಹೆಚ್ಚು. ಇಲ್ಲವಾದಲ್ಲಿ ಎಲ್ಲವನ್ನು ತ್ಯಜಿಸಿ ಸಂತನಾದ ಕನಕರಿಂದ ಈ ವಸ್ತುವಿನ ಕಾವ್ಯ ರಚನೆ ಸಾಧ್ಯವಿಲ್ಲ ಅನ್ನಿಸುತ್ತದೆ. ಈ ಎಲ್ಲ ದೃಷ್ಟಿಗಳಿಂದ ನಳಚರಿತ್ರೆ ಕನಕದಾಸರ ಮೊದಲ ಕಾವ್ಯ ಅದಕ್ಕೆ ಬಂದ ಪ್ರತಿಕ್ರಿಯೆಗಳಿಗೆ ರಾಮಧಾನ್ಯಚರಿತೆ ಉತ್ತರ ಎಂದು ಹೇಳುವುದೇ ಉಚಿತ.

ಕವಿ ಈ ಕಾವ್ಯದ ವಸ್ತುವನ್ನು ಕುರಿತಂತೆ ಇದು ಮಹಾಕಥೆ ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಅಲ್ಲದೆ ಇದನ್ನು ಇಡೀ ಜನಸ್ತೋಮ ಅರಿಯಬೇಕೆಂಬುದು ಕವಿಯ ಆಶಯ.

ರಾಮಧಾನ್ಯದ ಕೃತಿಯನೀ ಜನ
ಸ್ತೋಮವೆಲ್ಲಾದರಿಸುವಂದದಿ
ಭೂಮಿಗಚ್ಚರಿಯಾಗಿ ಪೇಳುವೆನೀ ಮಹಾಕಥೆಯ

ಈ ಕೃತಿ ಹಲವಾರು ದೃಷ್ಟಿಗಳಿಂದ ಪರಿಶೀಲನೆಗೆ ಅರ್ಹವಾಗಿದೆ. ಕನಕದಾಸರ ಕಾಲದ ಸಾಮಾಜಿಕ ಪರಿಸ್ಥಿತಿ, ಪರಿಸರ, ಜನಜೀವನ. ಯುದ್ಧಗಳು ಹೀಗೆ ಆಗಿನ ಕಾಲದ ಒಂದು ಒಟ್ಟು ಚಿತ್ರವನ್ನು ಇಲ್ಲಿ ಕಾಣಬಹುದಾಗಿದೆ. ಈ ಎಲ್ಲಕ್ಕಿಂತ ಮಿಗಿಲಾಗಿ ಶೋಷಿತ ವರ್ಗಕ್ಕೆ ಸೇರಿದ ಮಹಾಚೇತನವೊಂದು ತನ್ನ ವಿಕಸನದ ಹಾದಿಯಲ್ಲಿ ಅನುಭವಿಸಿದ ನೋವಿನ ಕಥೆಯೂ ಇಲ್ಲಿದೆ. ಇಲ್ಲಿನ ರಾಗಿಯ ಒಂದೊಂದು ಮಾತೂ ಈ ದೇಶದ ಪಟ್ಟಭದ್ರ ವ್ಯವಸ್ಥೆಯ ಕೋಟೆಗೆ ಇಟ್ಟ ಕೈಬಾಂಬುಗಳೆನ್ನಿಸುತ್ತದೆ. ಇದಕ್ಕೂ ಮಿಗಿಲಾಗಿ ಈ ಹೊತ್ತಿಗೂ ಇಂತಹ ಸಮಸ್ಯೆಗಳನ್ನು ಎದುರಿಸುತ್ತಿರುವ ಜನರಿಗೆ ಈ ಮಾತುಗಳು ಆತ್ಮಸ್ಥೈರ್ಯ ನೀಡುತ್ತವೆ. ವಿದ್ವತ್ತು, ಪ್ರತಿಭೆ, ಅರ್ಹತೆಗಳೆಲ್ಲ ತಮ್ಮ ಸ್ವತ್ತು ಎಂದು ತಿಳಿದ ಜನರ ಕುತಂತ್ರದ ಬಿಸಿ ಕವಿಗೆ ಹೆಜ್ಜೆ ಹೆಜ್ಜೆಗೂ ಚುಚ್ಚಿ ನೋಯಿಸಿರಬೇಕು. ಇದರಿಂದ ಮನನೊಂದ ಕನಕದಾಸರು ಈ ಜನರೊಂದಿಗೆ ಬೀದಿ ಜಗಳಕ್ಕಿಳಿಯಬೇಕಾದ ಪರಿಸ್ಥಿತಿಯಲ್ಲಿಯೂ ಕಾವ್ಯ ಮಾಧ್ಯಮದ ಮೂಲಕ ಉತ್ತರಿಸಿರುವುದು ಅವರ ಹೃದಯದಲ್ಲಿ ಎಳವೆಯಿಂದಲೂ ಬೀಜರೂಪದಲ್ಲಿದ್ದ

ಸಂತತ್ವದ ಪ್ರಭಾವವೆನ್ನಿಸುತ್ತದೆ.

ರಾಮಧಾನ್ಯ ಚರಿತೆಯ ಕಥೆ ಸಿಂಹಾವಲೋಕನ ಕ್ರಮದ ರಾಮಾಯಣದ ಕಥೆಯೆಂದು ಹೇಳಬಹುದಾಗಿದೆ. ರನ್ನ ಕವಿ ಮಹಾಭಾರತ ಕಥೆಯ ಕಡೆಯ ದಿನದ ಕಥೆಯನ್ನು ಹೇಳುತ್ತಾ ಇಡೀ ಮಹಾಭಾರತದ ಕಥೆಯನ್ನು ಸಿಂಹಾವಲೋಕನದಿಂದ ಹೇಳಿದ್ದೇನೆನ್ನುತ್ತಾನೆ. ಕನಕದಾಸರು ಈ ಮಾತು ಹೇಳದೆಯೇ ರಾಮನ ಕೃಪೆಗೆ ಪಾತ್ರವಾದ ರಾಗಿಯ ಈ ಕಥೆಯಲ್ಲಿ ಸಿಂಹಾವಲೋಕನ ಕ್ರಮದಲ್ಲಿ ರಾಮಾಯಣದ ಕಥೆ ಹೇಳಿದ್ದಾರೆ. "ಧರೆಯನೆಲ್ಲವ ಸೋತು ಜೂಜಲಿ ಕುರುಪತಿಗೆ ಕೈದಳಸಿ ತಮ್ಮಂದಿರ ಸಹಿತ ಧರ್ಮಜನು ಕಾಮ್ಯಕವನದೊಳಿರುತಿರಲು" ಒಂದು ದಿನ ಶಾಂಡಿಲ್ಯ ಮುನಿ ಅಲ್ಲಿಗೆ ಬಂದ. ಆಗ ಧರ್ಮರಾಯ "ನಿಮ್ಮ ದರುಶನದಿ ಪಾವನರು ನಾವಾದೆವೆಮಗಿನ್ನಾವ ಬುದ್ಧಿಯನರುಹುವಿರಿ" ಎಂದ. ಆಗ ಶಾಂಡಿಲ್ಯಮುನಿ "ರಘುಪತಿಯ ಗುಣಹಾರ ಧರ್ಮವ ಪಾಲಿಸಿದ ನರೆದಲೆಗ ವ್ರೀಹಿಯರ" ಪ್ರಸಂಗವಿದೆ ಎಂದ. ಅದಕ್ಕೆ ಧರ್ಮರಾಯ

ಎನಲು ರಾಮಚರಿತ್ರೆಯನು ನೀ
ವೆನಗೆ ಪೇಳಿದೊಡಾಲಿಸುವೆನೆನೆ
ಮನದೊಳಗೆ ತಾ ನಸುನಗುತ ಶಾಂಡಿಲನು ಯುಧಿಷ್ಠಿರಗೆ
ಅನುನಯದೊಳಾಧರಿಸಿ ರಘುನಂ
ದನನ ಚರಿತೆಯನರುಹಿ ಭೂಪನ
ಮನಸಿನಲ್ಲಿರುವಂತೆ ವಿಸ್ತರಿಸಿದ ರಾಮ ಕಥೆಯ ॥

ಕೇಳು ಕುಂತೀತನಯ ಎಂದು ಒಂಬತ್ತನೆಯ ಪದ್ಯದಲ್ಲಿ ರಾಮಾಯಣದ ಕಥೆಯನ್ನಾರಂಭಿಸಿದ ಕವಿ ಹದಿನೈದನೆಯ ಪದ್ಯದಲ್ಲಿ ವಿಭೀಷಣನಿಗೆ ಪಟ್ಟ ಕಟ್ಟುವುದರ ಮೂಲಕ ರಾಮಾಯಣವನ್ನು ಒಟ್ಟು ಎಂಟು ಭಾಮಿನಿಯಲ್ಲಿ ಮುಗಿಸುತ್ತಾನೆ. ಆ ಮೇಲೆ ತಾನು ಅಯೋಧ್ಯೆಗೆ ಹೊರಡುವುದಾಗಿ ರಾಮ ವಿಭೀಷಣನಿಗೆ ಹೇಳುತ್ತಾನೆ. ಆ ಕೂಡಲೇ ನಿಜ ಮಂತ್ರಿಯನ್ನು ಕರೆಸಿ ಸಮಾಲೋಚಿಸುತ್ತಾನೆ ವಿಭೀಷಣ. ರಾಮನ ಅಯೋಧ್ಯಾ ಪಯಣಕ್ಕೆ ಕುಬೇರನ ರಥವನ್ನು ತರಿಸುತ್ತಾನೆ. ರಾಮ ತನ್ನ ಪರಿವಾರ ಸಮೇತವಾಗಿ ಅಯೋಧ್ಯೆಯತ್ತ ಹೊರಡುತ್ತಾನೆ. ಲಂಕೆಯಿಂದ ಮುಚುಕುಂದ ಋಷಿಯ ಆಶ್ರಮಕ್ಕೆ ತಲುಪುವವರೆಗಿನ ಕಥೆಯನ್ನು ರಾಮ ಸೀತೆಗೆ ಆಯಾ ಸ್ಥಳ ಪರಿಚಯ ಮಾಡಿಕೊಡುವಷ್ಟು ಕಥೆಯನ್ನು ಎರಡೇ ಪದ್ಯಗಳಲ್ಲಿ ಹೇಳಿ ಕವಿ ಮುಗಿಸುತ್ತಾನೆ.

ಕನಕದಾಸರ ಸಂಗ್ರಹ ಕೌಶಲಕ್ಕೆ ಈ ಪದ್ಯ ನೋಡಬಹುದು :

ತಡೆಯದೈತಂದುಭಯಬಲ ಸಂ
ಗಡಿಸಿ ಬರುತಿರೆ ಮುಂದೆ ಸೇತುವ
ಮಡದಿಗೆಲ್ಲವ ತೋರಿಸುತ ನೆರೆಕಡಲ ದಾಂಟಿದರು
ನಡೆದು ರಾಮೇಶ್ವರದ ಬಳಿಯಲಿ
ಮೃಡನ ಪೂಜಿಸಿ ಭಕ್ತಿ ಭಾವದ
ಸಡಗರದಿ ವಾಲ್ಮೀಕಿಯಾಶ್ರಮಕೈದಿದನು ನೃಪತಿ ॥

ಮುಚುಕುಂದ ಋಷಿಯ ಆಶ್ರಮಕ್ಕೆ ರಾಮ ಬಂದುದ ಕೇಳಿ "ಬಂದು ಕಂಡರು ಸಕಲ ಮುನಿವರರು." ಇಲ್ಲಿ ಮುನಿಗಳೊಂದಿಗೆ ರಾಮ ಮಾತುಕತೆಯಾಡಿದ ವಿವರ ಕೆಲವು ಪದ್ಯಗಳಲ್ಲಿ ಬರುತ್ತದೆ. ಹೀಗೆ ರಾಮಾಯಣವನ್ನು ಸಂಗ್ರಹಿಸಿ ಹೇಳುವ ಸಂಪ್ರದಾಯ ಪರಂಪರೆಯಿಂದ ನಡೆದು ಬಂದುದು. ಏಳೆಂಟು ಪದ್ಯಗಳಲ್ಲಿ ಇಡೀ ರಾಮಾಯಣದ ಕಥೆಯನ್ನು ಹೇಳುವುದನ್ನು ಸಂಗ್ರಹ ರಾಮಾಯಣ ಎಂದು ಕರೆಯಲಾಗಿದೆ.

ಅಲ್ಲಿ ನೆರೆದ ಮಹಾಮುನೀಶ್ವರ
ರೆಲ್ಲ ತರಿಸಿದರಖಿಳವಸ್ತುವ
ಬೆಲ್ಲ ಸಕ್ಕರೆ ಜೇನುತುಪ್ಪ ರಸಾಯನಂಗಳಲಿ
ಭುಲ್ಲವಿಸಿ ರಚಿಸಿದ ಸುಭಕ್ಷಗ
ಳಲ್ಲಿ ಜೋಡಿಸಿ ಹೊರಿಸಿ ತಂದರು ರಾಮನೋಲಗಕೆ

ಋಷಿಗಳು ಹೊರಸಿತಂದ ವಿವಿಧ ಭಕ್ಷ್ಯ ಭೋಜ್ಯಗಳನ್ನು ಎಲ್ಲ ಸೈನಿಕರಿಗೆ ವೀರರಿಗೆ ಹಂಚಲಾಯಿತು. ಎಲ್ಲರೂ ತಿಂದು ತೇಗಿದರು. ಆಗ ರಾಮ ಅವರೆಲ್ಲರ ಪರವಾಗಿ ಆಂಜನೇಯನನ್ನು–

ಅನಿಲಸುತ ಬಾರೆಂದು ರಘುನಂ
ದನನು ಕರುಣದೊಳಿವರ ರುಚಿಯೆಂ
ತೆನಲು ಕರಗಳ ಮುಗಿದು ಬಿನ್ನೈಸಿದನು ರಘುಪತಿಗೆ

ಆಂಜನೇಯ ರಾಗಿಯ ತನಿಯ ಬಗ್ಗೆ ಪ್ರಶಂಸಿಸಿದ. ಆಗ ರಾಮ

ಎನಲು ರಾಮ ನೃಪಾಲ ಗೌತಮ
ಮುನಿಯನೀಕ್ಷಿಸಬೇಕು ತರಿ
ಸೆನಲು ಧ್ಯಾನವನೊಡನೆಯಾಲೋಚಿಸಿದರೀ ಹದನ
ಮನ ನಲಿದು ತಂತಮ್ಮ ಶಿಷ್ಯರ

ವಿನಯದಿಂದಲಿ ಕರೆಸಿ ತಾರೆಂ
ದೆನಲು ಮೆರೆದರು ತಳುವದವರನು ತಂದು ಸಭೆಯೊಳಗೆ ॥

ಕಥೆಯ ಈ ಭಾಗ ಮೂಲ ರಾಮಾಯಣದ್ದಾಗಿರದೆ ಕನಕದಾಸರ ಸ್ವಂತ ಸೃಷ್ಟಿಯಾಗಿದೆ. ಈ ಪರಿಕಲ್ಪನೆ ಕನಕದಾಸರಿಗೆ ಯಕ್ಷಗಾನದಿಂದ ಬಂದಿರಲೂಬಹುದು. ಜನಪದ ಸಾಹಿತ್ಯದಿಂದ ಬಂದಿರಲೂಬಹುದು.* ಸ್ವಂತ ಸೃಷ್ಟಿಯಾಗಿರಲೂಬಹುದು; ರಾಮಾಯಣದಿಂದ ಹೊರತಾದ ಈ ಉಪಕಥೆಯನ್ನು ಕವಿ ಇಲ್ಲಿ ಪ್ರಧಾನ ಕಥೆಯಾಗಿ ಮಾಡಿಕೊಂಡು ಅಂದಿನ ಸಾಮಾಜಿಕ ಪದ್ಧತಿಗಳಿಗೆ ಕನ್ನಡಿ ಹಿಡಿದಿದ್ದಾರೆ. ರಾಗಿ ರಾಮಸಂಪರ್ಕದಿಂದ ರಾಮಧಾನ್ಯವಾಗಿ ದೈವಸಾಕ್ಷಾತ್ಕಾರ ಹೊಂದಿದ ಈ ಕಥೆ ಕುರುಬ ಹುಡುಗ ಸಂತ ಕನಕದಾಸರಾಗಿ ದೈವಸಾನ್ನಿಧ್ಯಹೊಂದಿದ ಕಥೆಯೆಂಬುದರಲ್ಲಿ ಯಾವ ಅನುಮಾನವೂ ಕಂಡುಬರುವುದಿಲ್ಲ.

ಋಷಿಗಳು ತಮ್ಮ ತಮ್ಮ ಶಿಷ್ಯರಿಗೆ ಹೇಳಿ ಎಲ್ಲ ರೀತಿಯ ಆಹಾರ ಧಾನ್ಯಗಳನ್ನು ತರಿಸಿದರಷ್ಟೆ. ಅವರೆಲ್ಲ ಒಂದೊಂದೇ ಧಾನ್ಯವನ್ನು ತಂದು ರಾಮನ ಮುಂದಿರಿಸಿದರು. ಅಷ್ಟೇ ಅಲ್ಲ ತಮ ತಮಗೆ ಪ್ರಿಯವಾದ ಧಾನ್ಯವನ್ನೆ ಉತ್ತಮಧಾನ್ಯವೆಂದು ಹೊಗಳಿದರು. ರಾಮ ಅವುಗಳಲ್ಲಿ ಸತ್ವಯುತವಾದ ಒಂದೇ ಧಾನ್ಯವನ್ನು ತಿಳಿಸುವಂತೆ ಗೌತಮ ಮುನಿಯನ್ನು ಕೇಳಿಕೊಂಡ. ಗೌತಮಮುನಿ ನಮ್ಮ ದೇಶಕ್ಕೆ ನರೆದಲಗನೇ (ರಾಗಿ) ಅತ್ಯುತ್ತಮವಾದ, ಸತ್ವಯುತವಾದ ಧಾನ್ಯವೆಂದು ತನ್ನ ತೀರ್ಪನ್ನು ಹೇಳಿದ. ಇದರಿಂದ ಭತ್ತಕ್ಕೆ ಬಹಳ ಕೋಪಬಂದಿತು. ತನ್ನೆದುರಿಗೇ ಋಷಿಯೊಬ್ಬ ರಾಗಿಯನ್ನು ಮುಖ್ಯ ಧಾನ್ಯವೆಂದರೆ ಅದು ಹೇಗೆ ಸಹಿಸಲು ಸಾಧ್ಯ, ಭತ್ತ ಕೆರಳಿ ನುಡಿಯಿತು.

ಲೇಸನಾಡಿದ ಮುನಿಪ ಗೌತಮ
ದೋಷರಹಿತನು ಪಕ್ಷಪಾತವ
ನೀಸು ಪರಿಯಲಿ ಮಾಡುವರೆ ಶಿವಯೆಂದನಾವ್ರಿಹಿಗ ॥

---

* ಯಕ್ಷಗಾನ ಧೂಮ್ರಪತ್ರ ಪ್ರಸಂಗ, ಪಲಾಂಡುಚರಿತೆ ಹೊಗೆಸೊಪ್ಪು ಮತ್ತು ಈರುಳ್ಳಿ ಬಗೆಗಿನ ಕಥೆಗಳನ್ನು ಉದಾಹರಣೆಗೆ ನೋಡಬಹುದು. ಪುರಂದರದಾಸರ ರಾಗಿಯ ತಂದಿರಾ, ರಾಗಿಯ ಕೊಳ್ಳಿರೋ ಕೀರ್ತನೆಗಳನ್ನು ಕಾಣಬಹುದು. ಜನಪದ ಸಾಹಿತ್ಯದಲ್ಲಿ ಆಹಾರ ಧಾನ್ಯಗಳು ನಾಯಕರಾಗುವ ಅನೇಕ ಉದಾಹರಣೆಗಳು ದೊರೆಯುತ್ತವೆ. ಅವರೆಯನ್ನು ಪಾಂಡವರೆ ಬಿತ್ತಿ ಅದರ ರೂಪದಲ್ಲಿ ಉಳಿದಿದ್ದಾರೆ ಮುಂತಾದ ಕಲ್ಪನೆಗಳನ್ನು ನೋಡಬಹುದು.

ಎಲ್ಲ ಧರ್ಮದ ಸಾರವನು ನೀವ್
ಬಲ್ಲಿರರಿಯದೆ ಎಲ್ಲರನು ನೀ
ವಿಲ್ಲಿ ನುಡಿವಯುಪೇಕ್ಷೆಯುಂಟೇ ಸಾಕದಂತಿರಲಿ
ನೆಲ್ಲು ನಾನಿರೆ ಗೋಧಿ ಮೊದಲಾ
ದೆಲ್ಲ ಧಾನ್ಯಗಳಿರಲು ಇದರಲಿ
ಬಲ್ಲಿದನು ನರೆದಲಗನೆಂಬುದಿದಾವ ಮತವೆಂದ ॥

ಕನಕದಾಸರು ತಮ್ಮ ಸಾಧನೆಯ ಹಾದಿಯಲ್ಲಿ ಅನುಭವಿಸಿದ ಸಾಮಾಜಿಕ ತೊಡರುಗಳನ್ನು ರಾಮಧಾನ್ಯ ಪ್ರಸಂಗದ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆಂಬುದರಲ್ಲಿ ಅನುಮಾನವಿಲ್ಲ. "ಕನಕದಾಸನ ಮೇಲೆ ದಯಮಾಡಲು ವ್ಯಾಸಮುನಿಮಠಿಕರೆಲ್ಲರು ದೂರುತಿಹರು" ಎಂಬ ಕನಕದಾಸರ ಕೀರ್ತನೆಯೊಂದರ ಆರಂಭದ ಸಾಲುಗಳನ್ನು ಗಮನಿಸಬಹುದು.

ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕವಾಯಿತು ಇವರ ಸನ್ಯಾಸಿತನವೆಲ್ಲ
ಪೂರ್ತ್ಯಾಗಲೆಂದು ಯತಿ ನಗುತಲಿಹನು ॥

ಮೇಲಿನ ಮಾತುಗಳಲ್ಲಿ ಗೌತಮ, ವ್ಯಾಸರಾಯ, ಕನಕದಾಸ ಮತ್ತು ಮಠಿಕರನ್ನು ನೇರವಾಗಿ, ನಿಚ್ಚಳವಾಗಿಯೇ ಗುರುತಿಸಬಹುದಾಗಿದೆ. ತಾನು ಹೋದಲ್ಲೆಲ್ಲಾ ಶೂದ್ರ ಅನ್ನಿಸಿಕೊಂಡದ್ದರ ಪ್ರತಿಧ್ವನಿಯೇ ರಾಮಧಾನ್ಯ ಕಥೆಯಲ್ಲಿ ಮಿಡಿದಿದೆ ಎಂಬುದರಲ್ಲಿ ಸಂಶಯವಿಲ್ಲ. ವ್ಯಾಸರಾಯ ಗೌತಮನಾಗಿ ನರೆದಲಗ ಕನಕನಾಗಿ ಮಠಿಕರು ವ್ರೀಹಿಯಾಗಿ ಈ ಕಾವ್ಯದಲ್ಲಿ ಪ್ರತಿಕ್ರಿಯಿಸಿದ್ದಾರೆ. ಈ ಕ್ರಿಯೆ ಮತ್ತು ಪ್ರತಿಕ್ರಿಯೆಗಳನ್ನು ರಾಮಾಯಣದ ಕಥೆಯೊಳಗೆ ತಂದಿರುವುದರ ಔಚಿತ್ಯದ ಬಗ್ಗೆ ಕೆಲವರಿಗಾದರೂ ಸಂಶಯ ಉಂಟಾಗಬಹುದು. ರಾಮಾಯಣದ ಲೋಪಗಳಿಗೂ ಕವಿ ಇಲ್ಲಿ ಉತ್ತರ ಕೊಡುತ್ತಿದ್ದಾನೆ ಅನ್ನಿಸದಿರದು. ಉದಾಹರಣೆಗೆ ಶಂಭೂಕನು ತಪಸ್ಸಿಗೆ ಅರ್ಹನಲ್ಲ ಎಂಬುದು ರಾಮಾಯಣದ ಬ್ರಾಹ್ಮಣರ ವಾದ. ರಾಗಿ ಶೂದ್ರಾನ್ನವಾದುದರಿಂದ ಲೋಕದಲಧಿಕ ಭೋಜನವಲ್ಲವೆಂಬುದು ಅಕ್ಕಿಯ ವಾದ. ಕನಕದಾಸ ಕುರುಬನಾದುದರಿಂದ ಕಾವ್ಯ ರಚನೆಗೆ ಅರ್ಹನಲ್ಲ, ವ್ಯಾಸರಾಯನಿಂದ ತೀರ್ಥ ಪಡೆಯಲು ಅರ್ಹನಲ್ಲ ಎಂಬುದು ಮಠಿಕರ ವಾದ. ಈ ಮತೀಯ ಭಾವನೆಗಳಿಗೆ ಮಾರ್ದನಿಯೇ ರಾಮಧಾನ್ಯ ಚರಿತೆ.

ಈ ಘರ್ಷಣೆ ಅಲ್ಲಿಗೇ ಮುಗಿಯುವುದಿಲ್ಲ. ತನ್ನ ಬಗ್ಗೆ ತನ್ನೆದುರಿಗೇ ನಡೆಯುವ ಹೀಯಾಳಿಕೆಯನ್ನು ಎಂತಹ ಸಂಯಮಿಯೂ ಸಹಿಸಲಾರ. ರಾಗಿ ಅಲ್ಲಿ ನೆರೆದಿದ್ದ ಋಷಿಗಳ ಸಮೂಹ, ಸಾಕ್ಷಾತ್ ಶ್ರೀರಾಮ, ಇವರೆಲ್ಲರ ಸಮ್ಮುಖದಲ್ಲಿ ಅನುಚಿತವಾಗಿ ವರ್ತಿಸಿದಂತಾಗುತ್ತದೆಂದು ಸುಮ್ಮನಿದ್ದರೂ ಭತ್ತ ಕಾಲುಕೆರೆದು

ಏನೆಲವೊ ನರೆದಲೆಗ ನೀನು ಸ
ಮಾನನೆಯೆನಗಿಲ್ಲಿ ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚು ಕುಂದುಗಳ
ಜಾನಕೀಪತಿ ಸನಿಹದಲಿ ಕುಲ
ಹೀನ ನೀನು ಪ್ರತಿಷ್ಠ ಸುಡು ಮತಿ
ಹೀನ ನೀನೆಂದೆನುತ ಖತಿಯಲಿ ಬೈದು ಭಂಗಿಸಿದ ॥

ಇಂತಹ ಪ್ರಸಂಗದಲ್ಲಿಯೂ ಸುಮ್ಮನಿರುವುದು ಸಂಯಮವಾಗುವುದಿಲ್ಲ, ಹೇಡಿತನವಾಗುತ್ತದೆ. ಭತ್ತದ ಮೇಲಿನ ಮಾತುಗಳು ಕನಕದಾಸರ ಸಮಕಾಲೀನ ಸಾಮಾಜಿಕ ಸ್ಥಾನಮಾನಗಳ ಮೇಲೆ ಬೆಳಕು ಚೆಲ್ಲುತ್ತವೆ. ಕನಕ ಕಲಿಯಾಗಿ, ಕವಿಯಾಗಿ, ಸಂತನಾಗಿ ಬೆಳೆಯುತ್ತಾ ಕಡೆಯಪಕ್ಷ ಮಾನವೀಯತೆ ಮತ್ತು ಆತ್ಮಸಾಕ್ಷಿಯ ಹೃದಯದ ಕೃಷ್ಣದೇವರಾಯ, ವ್ಯಾಸರಾಯ ಇಂಥವರು ಆ ವ್ಯಕ್ತಿಗೆ ಸಲ್ಲಲೇಬೇಕಾದ ಸಾಮಾಜಿಕ ಗೌರವ ಸಲ್ಲಿಸಿದಾಗ ಹುಬ್ಬೇರುವ ವ್ಯಂಗ್ಯದ, ಕುಹಕದ ಭರ್ತ್ಸನೆಯ ಮಾತುಗಳನ್ನು ಕೇಳಿದಾಗ ಎಂತಹ ಸಾತ್ವಿಕ ಹೃದಯವೂ ನೋವಿನಿಂದ ಕುದಿಯದಿರದು. ಕನಕದಾಸರಿಗೂ ಅವರ ಜಾತಿ, ಅರ್ಹತೆಗಳನ್ನು ಕುರಿತು ಉತ್ತಮ ವರ್ಗದವರಿಂದ ಬಂದ ಬಿರುನುಡಿಗಳು ಮನ ನೋಯಿಸಿರಬೇಕು. ಸಹನೆಯ ಪರೀಕ್ಷೆಯನ್ನು ಮೀರಿ ಕೆರಳಿಸಿರಬೇಕು. ಆಗ ಅನಿವಾರ್ಯವಾಗಿ

ನುಡಿಯ ಕೇಳುತ ಕನಲಿ ಕಂಗಳು
ಕಿಡಿಮಸಗಿ ಖತಿಗೊಂಡು ನುಡಿದನು
ಸಿಡಿಲು ಘರ್ಜನೆಯಂತೆ ಸಭೆಯಲಿ ಜರಿದನಾ ವ್ರಿಹಿಯ
ನುಡಿಗೆ ಹೇಸದ ಭಂಡ ನಿನ್ನೊಳು
ಕೊಡುವರೇ ಮಾರುತ್ತರವ ಕಡು
ಜಡನಲಾ ನಿನ್ನೊಡನೆ ಮಾತೇಕೆಂದ ನರೆದಲಗ ॥

ಕನಕದಾಸರು ಮೇಲಿನ ತಮ್ಮ ಮಾತುಗಳಲ್ಲಿ ಸಿಡಿದೇಳುತ್ತಿರುವ ಸಮಾಜದ

ಕೆಳಸ್ತರದ ದನಿಯನ್ನು ಪ್ರತಿಬಿಂಬಿಸಿದ್ದಾರೆ. ತಲೆ ತಲಾಂತರಗಳಿಂದ ಬಗ್ಗಿ ಇನ್ನು ಬಗ್ಗಲಾರದೆ ಎದುರು ನಿಲ್ಲುವ ತೀರ್ಮಾನಕ್ಕೆ ಬಂದ ಸಮಾಜವೊಂದರ ಹೊಳಹನ್ನು ಈ ಮಾತುಗಳಲ್ಲಿ ಕಾಣಬಹುದಾಗಿದೆ. ಕನಲಿ ಖತಿಗೊಂಡು ಕಿಡಿಮಸಗಿದ. ಈ ಸಮಾಜದ ಸಿಡಿಲ ಘರ್ಜನೆ ಕೂಡ ನುಡಿಗೆ ಹೇಸದ ಭಂಡರ ಮೇಲೆ ಯಾವುದೇ ಪರಿಣಾಮ ಬೀರುವುದಿಲ್ಲ. ಅವರಿಗೆ ಕ್ರಾಂತಿಯ ಬೆಂಕಿಯನ್ನು ನಂದಿಸಿ ಬೂದಿಮಾಡಿ ಬೂದಿಯ ಮಹಿಮೆಯನ್ನು ಕೊಂಡಾಡುವ ಕಲೆ ಕರಗತವಾಗಿರುವ ಕಡುಜಡರೊಂದಿಗೆ ವಾದ ಹೂಡುವುದರಿಂದ ಪ್ರಯೋಜನವೇನು ಎಂಬ ಕಟುಸತ್ಯ ಕೂಡ ಕವಿಗೆ ಗೊತ್ತಿದೆ.

ಮುಂದೆ ನರೆದಲಗ ವ್ರಿಹಿಯರ ಮಧ್ಯೆ ಪರಸ್ಪರ ಒಂದು ವಾಗ್ಯುದ್ಧವೇ ನಡೆಯುತ್ತದೆ. ವ್ರಿಹಿಗ ನರೆದಲಗನನ್ನು ಶೂದ್ರಾನ್ನವೆಂದರೆ ನರೆದಲಗ ವ್ರಿಹಿಯನ್ನು ನೀನು ಹೆಣನ ಬಾಯಿನ ತುತ್ತು ಎಂದು ಹೀಯಾಳಿಸುತ್ತದೆ. ಈ ವಾದದಲ್ಲಿ ಆ ಹೊತ್ತಿನ ಸಾಮಾಜಿಕ ಆಚರಣೆಗಳು ರೀತಿ ನೀತಿಗಳು ನಿರೂಪಿತವಾಗಿವೆ. ಹುಟ್ಟು ಸಾವಿನ ಆಚರಣೆ, ಮದುವೆಮುಂಜಿಗಳು, ಮಳೆಬೆಳೆ, ಬಡವ ಬಲ್ಲಿದ ಇತ್ಯಾದಿ ಅನೇಕ ಸಂಗತಿಗಳು ಈ ಜಗಳದ ನೆಪದಲ್ಲಿ ಹೊರಬೀಳುತ್ತವೆ. ರಾಮಧಾನ್ಯ ಚರಿತೆಯ ಈ ಭಾಗ ಉತ್ತಮವಾದ ನಾಟಕೀಯತೆಗೊಂದು ಒಳ್ಳೆಯ ಉದಾಹರಣೆಯಾಗಿದೆ. ಇದರೊಂದಿಗೆ ಆ ಕಾಲದ ಜನಾಂಗಗಳೊಳಗಿನ ಸಂಗತಿಗಳನ್ನು ಈ ಜಗಳದ ನೆಪದಲ್ಲಿ ಹೊರಗೆಡಹುವುದು ಕವಿಯ ಉದ್ದೇಶವಾಗಿರುವಂತೆ ತೋರುತ್ತವೆ. ಈ ಸಾಮಾಜಿಕ ರೀತಿ ನೀತಿಗಳಿಗಾಗಿ ಕೆಳಗಿನ ಉದಾಹರಣೆಗಳನ್ನು ನೋಡಬಹುದು.

ಭತ್ತ : ಪರಿಮಳದ ಚಂದನದತರುವಿಗೆ
ಸರಿಯೆ ವೊಣಗಿದ ಕಾಷ್ಠಗೋವದು
ಕರೆದ ಹಾಲಿಗೆ ಕುರಿಯ ಹಾಲು ತರವೆ ಭಾವಿಸಲು
ಪರಮ ಸಾಹಸಿ ವೀರಹನುಮಗೆ
ಮರದ ಮೇಲಣ ಕಪಿಯು ತಾನು
ತರವೆ ಫಡ ನೀನೆನಗೆ ಸರಿಯೆ ಭ್ರಷ್ಟ ತೊಲಗೆಂದ ॥

ರಾಗಿ : ಸತ್ತವರ ಪ್ರತಿಬಿಂಬರೂಪನು
ಬಿತ್ತರಿಸಿ ಪಿತೃನಾಮಗಳ ನಿನ
ಗಿತ್ತುಮೂವರ ಪೆಸರಿನಲಿ ಕರೆಕರೆದು ದರ್ಭೆಯಲಿ
ನೆತ್ತಿಯನು ಬಡಿ ಬಡಿದು ಕಡೆಯಲಿ

ತುತ್ತನಿಡುವರು ಪಶುಗಳಿಗೆ ನೀ
ನೆತ್ತಿದೆಯಲಾ ತಮವ ಸುಡಬೇಕೆಂದ ನರೆದಲಗ ॥

ರಾಮಧಾನ್ಯ ಚರಿತೆಯ ಕಥೆ ಈ ಹಂತದಲ್ಲಿ ಬೇರೊಂದು ತಿರುವನ್ನು ಪಡೆಯುತ್ತದೆ. ನರೆದಲಗನ ವಾದವನ್ನು ಕೇಳಿ ಅಲ್ಲಿ ನೆರೆದ ಮುನಿಗಳು ಸ್ತಬ್ಧರಾಗುತ್ತಾರೆ, ಮಾತಿಲ್ಲದವರಾಗುತ್ತಾರೆ. ಆದರೆ ನರೆದಲಗ ಅವರನ್ನು ಕುರಿತು "ನಮಗೇನು ಬುದ್ಧಿಯನರುಹುವಿರಿ" ಎಂದು ಸಭೆಗೆ ಸವಾಲೆಸೆವಾಗ

ಮಸೆದುದಿತ್ತಂಡಕ್ಕೆ ಮತ್ಸರ
ಪಿಸುಣಬಲರತಿ ನಿಷ್ಠುರರು ವಾ
ದಿಸಲು ಕಂಡನು ನೃಪತಿ ಮನದಲ್ಲಿ ನೋಡಿ ನಗುತ್ತ
ಹಿಸುಣರಿವದಿರ ಮತ್ಸರವ ಮಾ
ಣಿಸುವ ಹದನೇನೆನುತ ಯೋಚಿಸಿ
ಯಸುರ ಮುನಿಪರ ನೋಡೆ ಗೌತಮ ಮುನಿಪಗಿಂತೆಂದ

ರಾಮನಿಗೆ ಈ ಮತ್ಸರದ ದಳ್ಳುರಿಯನ್ನು ಕಂಡು ಆಶ್ಚರ್ಯವಾಯಿತು. 'ಮಸೆದುದಿತ್ತಂಡಕ್ಕೆ ಮತ್ಸರ' ಎಂಬ ಮಾತು ವರ್ಣಸಂಘರ್ಷದ ಅನಾಹುತ ಪರಂಪರೆಯ ಮುನ್ನುಡಿಯಂತಿದೆ. ಈ ಹೊತ್ತಿಗೂ ವೇದಿಕೆಯ ಮೇಲೆ ಜಾತ್ಯಾತೀತ ಭಾಷಣ ಬಿಗಿದು ಒಳಗೆ ಇತರ ಜಾತಿಗಳ ಬಗ್ಗೆ ಮಸೆಯುವ ಇಂದಿನ ಸಮಾಜಕ್ಕೂ ಇದು ಅನ್ವಯಿಸುತ್ತದೆ. ತಮ್ಮ ತಮ್ಮ ಧರ್ಮದ ಬಗ್ಗೆ, ತಮ್ಮ ತಮ್ಮ ಜಾತಿಗಳ ಬಗ್ಗೆ ಈ ಜನರಿಗಿರುವ ಭಾವನೆಗಳಿಗೆ ಮುಕ್ತಾಯ ಹೇಳಲೇಬೇಕೆಂದು ಯೋಚಿಸಿದ ರಾಮ ಪರಿಹಾರೋಪಾಯವೊಂದನ್ನು ತಾನೆ ಸೂಚಿಸಿದ.

ಅರಸುಗಳು ನಾವೆಲ್ಲ ಭೂಮೀ
ಸುರರು ನೆರದಿಹ ದಾನವರು ವಾ
ಸರರು ನಮಗೀ ನ್ಯಾಯವನು ಪರಿಹರಿಸಲಳವಲ್ಲ
ಕರಸುವೆವು ಹರಿಹರ ವಿರಿಂಚಾ
ದ್ಯರನಯೋಧ್ಯೆಗೆ ಇವರ ಗುಣವಾ
ಧರಿಸಿ ಪೇಳ್ವರು ನಯದೊಳೆಂದನು ರಾಮ ನಸುನಗುತ ॥
ಪರಮ ಧಾನ್ಯದೊಳಿಬ್ಬರೇ ಇವರಿ
ರಲಿ ಸೆರೆಯೊಳಗಾರುತಿಂಗಳು ಹಿರಿದು
ಕಿರಿದೆಂಬಿವರ ಪೌರುಷವರಿಯಬಹುದಿನ್ನು ॥

ಶ್ರೀರಾಮನ ಈ ತೀರ್ಮಾನದಂತೆ ವ್ರಿಹಿಗ ಮತ್ತು ನರೆದಲಗರನ್ನು ಸೆರೆಯಲ್ಲಿಡಲಾಯಿತು. ರಾಮ ಅಯೋಧ್ಯೆಗೆ ತನ್ನ ಪಯಣವನ್ನು ಮುಂದುವರಿಸಿದ, ಮುಂದೆ ಅಲ್ಲಿನ ಕೆಲಸಕಾರ್ಯಗಳು ಅನಂತರ ಪಟ್ಟಾಭಿಷೇಕ ಮುಂತಾದವೆಲ್ಲ ನಡೆಯುವ ಹೊತ್ತಿಗೆ ಏಳುತಿಂಗಳುಗಳೇ ಕಳೆದವು. ಆಗ ರಾಮ ಸೆರೆಯಲ್ಲಿದ್ದ ವ್ರಿಹಿಗ, ನರೆದಲಗರನ್ನು ನೆನೆದು ಅಯೋಧ್ಯೆಗೆ ಕರೆತರಲು ಹನುಮಂತನಿಗೆ ಸೂಚಿಸಿದ, ಅದರಂತೆ ಅವರಿಬ್ಬರನ್ನು ಅಯೋಧ್ಯೆಗೆ ಕರೆತಂದರು. ಎಂದಿನಂತೆ ಸಭೆ ಸೇರಿತು. ಹರಿಹರವಿರಿಂಚಾದಿಗಳು ಸಹ ಬಂದರು

ವಸುಗಳಮರರು ಭುಜಂಗಾಮರ
ರಸುರ ಕಿನ್ನರ ಯಕ್ಷ ರಾಕ್ಷಸ
ಶಶಿರವಿಗಳಾದಿತ್ಯ ವಿದ್ಯಾಧರರು ಗುಹ್ಯಕರು
ವಸುಧೆಯಮರರು ಕ್ಷತ್ರಿಯರು ಜೋ
ಯಿಸರು ವೈಶ್ಯಚತುರ್ಥರುನ್ನತ
ಕುಶಲ ವಿದ್ಯಾಧಿಕರು ನೆರೆದು ನೃಪನ ಸಭೆಯೊಳಗೆ ॥

ರಾಮನು ಅಲ್ಲಿ ನೆರೆದಿದ್ದ ಘನತಪೋಮಹಿಮರನ್ನು ಕುರಿತು ಮನವ ವಂಚಿಸಲಾಗದೀ ಧರ್ಮವ ತಿಳಿದು ಹೇಳಿ ಎಂದು ಕೇಳಿದ. ಆದರೆ ಋಷಿಗಳಿಂದ ಅದು ಸಾಧ್ಯವಾಗಲಿಲ್ಲ. ಅವರು ಅನಿಮಿಷನತ್ತ ನೋಡಿದರು. ಆಗ ಜಂಬಾರಿ ನಸುನಗುತ ಸಾರ ಹೃದಯನು ನರೆದಲಗ ನಿಸ್ಸಾರನೀ ವ್ರಿಹಿ ಎಂದು ತೀರ್ಮಾನ ಹೇಳಿದ. ನಾರದ 'ಅಹುದು ಸುರಪನ ಮಾತು ನಿಶ್ಚಯವಹುದು ನರೆದಲಗನೆ ಸಮರ್ಥನು. ಬಹಳ ಬಲಯುತ ಸೆರೆಗೆ ತಳ್ಳಲು ಕಾಂತಿಗೆಡಲಿಲ್ಲ" ಎಂದು ಇಂದ್ರನ ತೀರ್ಮಾನವನ್ನು ಅನುಮೋದಿಸಿದನು. ನಾರದನೂ

ಎಲ್ಲ ನವಧಾನ್ಯದಲಿ ಈತನೆಲ್ಲ
ಬಲ್ಲಿದನು ಹುಸಿಯಲ್ಲ ಬಡವರ
ಬಲ್ಲಿದನಾರೈದು ಸಲುಹುವನಿವಗೆ ಸರಿಯುಂಟೆ
ನೆಲ್ಲಿನಲಿ ಗುಣವೇನು ಭಾಗ್ಯದಿ
ಬಲ್ಲಿದರ ಪತಿಕರಿಸುವನು ಅವ
ನಲ್ಲಿ ಸಾರವ ಕಾಣೆಯೆಂದನು ಕಪಿಲಮುನಿ ನಗುತ ॥

ಸುರರು ಮುನಿಗಳೆಲ್ಲರೂ ನರೆದಲಗನನ್ನೆ ಶಕ್ತನೆಂದು ಮೆಚ್ಚಿದುದರಿಂದ ರಾಮನಿಗೆ ಸಂತೋಷವಾಗಿ

ಕರೆದು ಕೊಟ್ಟನು ತನ್ನ ನಾಮವ
ಧರೆಗೆ ರಾಘವನೆಂಬ ಪೆಸರಾ
ಯ್ತಿರದೆ ವ್ರಿಹಿ ನಾಚಿದನು ಸಭೆಯಲಿ ಶಿರವ ಬಾಗಿಸಿದ ॥

ಇಷ್ಟೆಲ್ಲ ವಿಚಾರವಾದಿಯಾದ ನರೆದಲಗ ಅರ್ಥಾತ್ ಕನಕದಾಸರ ಮುಂದಿನ ಸ್ಥಿತಿಯನ್ನು ನೋಡಿ. ಈ ಜನ ಹೇಗೆ ಮತ್ತೆ ಅವರನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರೆಂಬುದು ನಮ್ಮ ಸಾಮಾಜಿಕ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ. ನಮ್ಮ ಹಿಂದಿನ ಕೆಳಸ್ತರದ ಜನರ ಮುಖಂಡರಂತಾಗಿದೆ.

ಹರುಷದೋರಿದ ಮನದಿ ನಲಿವುತ
ನರೆದಗಲನೈತಂದು ರಾಮನ
ಸಿರಿಚರಣಕಭಿನಮಿಪೆ ದೇವಾಸುರರು ಕೊಂಡಾಡೆ
ಹರಸಿ ಮುತ್ತಿನ ಸೇಸೆಯನು ಭೂ
ಸುರರು ಮಂತ್ರಾಕ್ಷತೆಯನಿತ್ತುಪ
ಚರಿಸಿದರು ರಾಗಿಯನು ಪೊಗಳಿದರಲ್ಲಿ ಮುನಿವರರು ॥

ಯಾವ ವ್ರಿಹಿಗನನ್ನು ನರೆದಲಗ ಈವರೆಗೆ ಅಲ್ಲಗಳೆದು ಜಯಗಳಿಸಿತೋ ಅದು ಮತ್ತೆ ಅದೇ ಕಾಲಿಗೆ ಬಿದ್ದು ಅದೇ ವ್ರಿಹಿಗ ಮಂತ್ರಾಕ್ಷತೆಯಾಗಿ ತಲೆಯ ಮೇಲೆ ಕುಳಿತದ್ದು ಎಂತಹ ವಿಪರ್ಯಾಸ.

ಈ ಸಂದರ್ಭದ ಇನ್ನೊಂದು ಚಿತ್ರವನ್ನೂ ಉಲ್ಲೇಖಿಸಬೇಕು. ಕನಕದಾಸರ ರಾಜಕೀಯ ಪ್ರಜ್ಞೆಗೆ ಈ ಘಟನೆ ಸಾಕ್ಷಿಯಾಗುತ್ತದೆ. ಸಭೆಯಲ್ಲಿ ತನಗೆ ಆದ ಮಾನಭಂಗದಿಂದ ತಲೆತಗ್ಗಿಸಿ ಕುಳಿತ ವ್ರಿಹಿಗನಿಗೆ ರಾಮ ಹೀಗೆ ಹೇಳುತ್ತಾನೆ.:

ಮರುಳೆ ಬಾರೈ ವ್ರಿಹಿಯೆ ಮನದಲಿ
ಕೊರಗಿ ಚಿಂತಿಸಲೇಕೆ ನಾವೀ
ನರೆದಲಗನತಿಶಯವ ಮಾಡಿದೆವೆಂದು ಕನಲಿದೆಯ
ಧರೆಗೆ ಹೊದ್ದಿದ ಕ್ಷಾಮಗಾಲದಿ
ಕರುಣದಿಂ ನಡೆ ತಂದು ಲೋಕವ
ಹೊರೆವನದು ಕಾರಣವೆ ಪತಿಕರಿಸಿದೆವು ಕೇಳೆಂದ ॥

ದೀನರಲಿ ದಾರಿದ್ರ ಜನದಲಿ
ನೀನು ನಿರ್ದಯನೆಂದೆವಲ್ಲದೆ
ಹೀನಗಳೆದವರಲ್ಲ ನಿನ್ನನು ನಾವು ಸಭೆಯೊಳಗೆ
ಮಾನುಷನು ನಮ್ಮೆಡೆಗೆ ನೀ ಸುರ
ಧೇನುವಿನ ಸಮ ನಿನ್ನ ಚಿತ್ರದಿ
ಹಾನಿದೋರಲದೇಕೆ ಬಿಡು ಬಿಡು ಚಿಂತೆ ಯಾಕೆಂದ ॥

ಕನಕದಾಸರಿಗೆ ಅಪಾರವಾದ ರಾಜಕೀಯ ಜ್ಞಾನವಿತ್ತೆಂಬುದನ್ನು

ರಾಮಧಾನ್ಯ ಚರಿತೆಯ ಮೇಲಿನ ಪದ್ಯಗಳು ಸ್ಪಷ್ಟಪಡಿಸುತ್ತವೆ. ರಾಗಿಯೇ ಅತ್ಯುತ್ತಮವಾದ ಧಾನ್ಯ ಎಂದು ಹರಿವಿರಿಂಚಿಗಳ ಎದುರೇ ತೀರ್ಮಾನವಾದರೂ ಬತ್ತವನ್ನು ಬಿಟ್ಟು ಕೊಡಲು ರಾಮ ತಯಾರಿಲ್ಲ. ಏನೋ ಕ್ಷಾಮಕಾಲದಲ್ಲಿ ಶ್ರೀಸಾಮಾನ್ಯರನ್ನು ರಕ್ಷಿಸುತ್ತದೆ ಎಂಬ ಕಾರಣಕ್ಕಾಗಿ ರಾಗಿಯನ್ನು ಹೊಗಳಿದೆವಲ್ಲದೆ ಬೇರೆಯಲ್ಲ ಎಂದು ಅಂತರಂಗದಲ್ಲಿ ಬತ್ತಕ್ಕೆ ಹೇಳುವ ರಾಮನ ಪಾತ್ರ ಓಟಿಗಾಗಿ ಶ್ರೀಸಾಮಾನ್ಯರನ್ನು ನೀವೇ ಧಣಿಗಳು ಎಂದು ಕೊಂಡಾಡುವ ನಮ್ಮ ಇಂದಿನ ರಾಜಕಾರಣಿಗಳಿಗೂ ರಾಮನಿಗೂ ಅಷ್ಟೇನೂ ವ್ಯತ್ಯಾಸ ಕಾಣುವುದಿಲ್ಲ. ರಾಗಿ ಮತ್ತು ಬತ್ತದ ಈ ಪ್ರಸಂಗ ರಾಮಧಾನ್ಯ ಚರಿತೆಯ ಪ್ರಮುಖವಾದ ಅಂಗವೆಂದರೆ ತಪ್ಪಲ್ಲ. ಈ ಇಡೀ ಪ್ರಸಂಗ ಅತ್ಯಂತ ನಾಟಕೀಯವಾಗಿದ್ದು ಸಮಕಾಲೀನ ಸಮಾಜದ ಒಂದು ವರ್ಗ ವೈದೃಶವನ್ನು ನೀಡುತ್ತದೆ. ಕುರುಬ ಜನಾಂಗದ ಹಕ್ಕ ಬುಕ್ಕರು ಕಟ್ಟಿದ ವಿಜಯನಗರ ಸಾಮ್ರಾಜ್ಯದಲ್ಲಿಯೆ ಅದೇ ಜನಾಂಗಕ್ಕೆ ಸೇರಿದ ಕನಕದಾಸರೇ ಶೂದ್ರ ಎನಿಸಿಕೊಳ್ಳಬೇಕಾದುದೇ ಒಂದು ಸಾಮಾಜಿಕ ವಿಪರ್ಯಾಸ ಮತ್ತು ಈ ದೇಶದ ದೊಡ್ಡದುರಂತವೆಂಬುದರಲ್ಲಿ ಎರಡನೆಯ ಮಾತಿಲ್ಲ.

ನಮ್ಮ ದೇಶದ ಸಾಮಾಜಿಕ ಇತಿಹಾಸವನ್ನು ಗಮನಿಸಿದ ಯಾರಿಗಾದರೂ ಶ್ರೀಸಾಮಾನ್ಯನ ಮೂಗಿಗೆ ತುಪ್ಪಹಚ್ಚಿ ಹೇಗೆ ದುಡಿಸಿಕೊಳ್ಳಲಾಗಿದೆ ಎಂಬುದು ತನಗೆ ತಾನೆ ಅನಾವರಣಗೊಳ್ಳುತ್ತಾ ಹೋಗುತ್ತದೆ. ಕನಕದಾಸರಿಗೆ ಸೇವೆಯಲ್ಲಿ ಉನ್ನತ ಹುದ್ದೆಯಿತ್ತಷ್ಟೆ. ಆ ಹುದ್ದೆಗೆ ಬೇರೆ ಉತ್ತಮವರ್ಗದವರೂ ಪ್ರಯತ್ನ ಪಟ್ಟಿರಬೇಕು. ಪರಿಸ್ಥಿತಿಯ ಒತ್ತಡ ಮತ್ತು ಅರ್ಹತೆಯ ಕಾರಣಗಳಿಂದಾಗಿ ಕನಕದಾಸರೆ ಆ ಪದವಿಗೆ ಆಯ್ಕೆಯಾಗಿರಬೇಕು. ರಾಮಧಾನ್ಯ ಚರಿತೆಯಲ್ಲಿನ ರಾಗಿಯ ಪ್ರಸಂಗಕ್ಕೂ ಕನಕದಾಸರ ಜೀವನಕ್ಕೂ ನಿಕಟವಾದ ಹೋಲಿಕೆ ಯಿರುವುದನ್ನೂ ಇಲ್ಲಿ ಕಾಣಬಹುದು. ರಾಮಾದಿಗಳು ಲಂಕೆಯಿಂದ ಕಪಿಸೇನೆಯೊಂದಿಗೆ ಬರುವ ವರ್ಣನೆಯಲ್ಲಿ ಕೃಷ್ಣದೇವರಾಯ ಸೇನೆಯೊಂದಿಗೆ ಬರುವ ಚಿತ್ರವನ್ನು ಕವಿ ಮನದಲ್ಲಿಟ್ಟುಕೊಂಡೇ ರಚಿಸಿದ್ದಾನೆ. ವೇದಿಕೆಯ ಮೇಲೆ ಸಂಬಂಧಾತೀತರಾಗಿ ಜಾತ್ಯತೀತರಾಗಿ ಮಾತನಾಡುವ ಜನರೇ ಹೇಗೆ ಅಂತರಂಗದಲ್ಲಿ ತಮ್ಮ ಜಾತಿಯ ಜನರ ಪರವಾಗಿರುತ್ತಾರೆಂಬುದಕ್ಕೆ ಈ ಪ್ರಸಂಗವೊಂದು ಜ್ವಲಂತ ಉದಾಹರಣೆಯಾಗಿ ನಿಲ್ಲುತ್ತದೆ.

ರಾಮಧಾನ್ಯ ಚರಿತೆಯಲ್ಲಿ ಕನ್ನಡ ನಾಡಿನ ಸಮಕಾಲೀನವಾದ ಅನೇಕ ಸಂಗತಿಗಳು ರೀತಿನೀತಿಗಳನ್ನು ಗುರುತಿಸಬಹುದು. ಕವಿ ಅಪ್ರಯತ್ನಪೂರ್ವಕವಾಗಿ

ತನ್ನ ಕಾಲದ ಸಮಾಜವನ್ನು ಪ್ರತಿನಿಧಿಸುತ್ತಾನೆ. ಈ ಹಿನ್ನೆಲೆಯಲ್ಲಿ ಆಗಿನ ಕಾಲದ ದವಸ ಧಾನ್ಯಗಳು, ವಿವಿಧ ರಾಜ್ಯಗಳು, ಸೈನಿಕ ಶಿಬಿರಗಳು ಇಂಥವನ್ನು ಗುರುತಿಸಬಹುದು. ರಾಮನ ಎದುರಿಗೆ ತಂದು ನಿಲ್ಲಿಸಿದ ಧಾನ್ಯಗಳ ವಿವರ ನೋಡಿ :

ನರೆದಲಗನಿದು ನೆಲ್ಲು ಹಾರಕ
ಬರಗು ಜೋಳವು ಕಂಬು ಸಾಮೆಯು
ಉರುತರದನವಣೆಯಿದು ನವಧಾನ್ಯವೆಂದೆನಲು ॥

ಕನ್ನಡನಾಡಿನ ಪ್ರಧಾನವಾದ ಆಹಾರ ಧಾನ್ಯಗಳನ್ನು ಕನಕದಾಸರು ಇಲ್ಲಿ ಕೊಟ್ಟಿದ್ದಾರೆ. ಹದಿನೈದನೆಯ ಶತಮಾನದ ಹೊತ್ತಿಗೆ ಕನ್ನಡನಾಡಿನಲ್ಲಿ ಗೋಧಿ ಇತ್ತಾದರೂ ಕವಿ ತನ್ನ ಪ್ರಧಾನ ಪಟ್ಟಿಯಲ್ಲಿ ಅದನ್ನು ಸೇರಿಸದೆ ಮುನಿಯೊಬ್ಬನ ಬಾಯಿಂದ ಹೆಸರಿಸಿರುವುದನ್ನು ನೋಡಿದರೆ ಕನ್ನಡನಾಡಿಗೆ ಗೋಧಿ ಹೊರಗಿನಿಂದ ಬಂದುದೆಂಬುದನ್ನು ತೋರಿಸುತ್ತದೆ.

ಕನಕದಾಸರು ತಮ್ಮ ಜೀವಿತ ಕಾಲದ ಬಹು ಭಾಗವನ್ನು ಯುದ್ಧಭೂಮಿಯಲ್ಲಿ ಕಳೆದವರು. ಸೇನೆಯೊಂದಿಗೆ ರಾಜ್ಯವನ್ನೆಲ್ಲಾ ಸುತ್ತಿದವರು. ಯುದ್ಧನಿರತರಾಗಿ ಅಲ್ಲಲ್ಲಿ ಬೀಡುಬಿಡುತ್ತಾ ಪಯಣಿಸುವ ಸೇನೆಯ ಚಿತ್ರಗಳು ಕನಕದಾಸರ ಕಾವ್ಯಗಳಲ್ಲಿ ವಾಸ್ತವವಾಗಿ ಮೂಡಿನಿಂತಿವೆ. ಅಲ್ಲಿನ ಸೇನಾ ಶಿಬಿರಗಳ ಇಂತಹ ಅನೇಕ ಚಿತ್ರಗಳನ್ನು ಕವಿ ತನ್ನ ಈ ಪುಟ್ಟ ಕಾವ್ಯದಲ್ಲಿ ನೀಡಿದ್ದಾನೆ.

ಆ ಮಹಾವನದೊಳಗೆ ಸುಭಟ
ಸ್ತೋಮವಿಳಿದುದು ಪಾಳೆಯದ ಸಂ
ಗ್ರಾಮದಿದಿರಲಿ ಗುಡಿಗುಡಾರಂಗಳು ವಿರಾಜಿಸಿತು ॥
ಹೊಡೆವ ತಮ್ಮಟೆ ಭೇರಿ ಡಮರುಗ
ಗಿಡಿಬಿಡಿ ದೌಡೆ ಡಿಂಡಿಮ ಢಕ್ಕೆ
ನುಡುವ ಶಂಖ ಮೃದಂಗ ಘನ ನಿಸ್ಸಾಳ ಮೊದಲಾದ ॥

ನೆಗಳಿದವು ಬೊಂಬಾಳ ದೀವಿಗೆ
ಝುಗಝುಗಿಪ ನವರತ್ನದೊಡುಗೆಯ
ಹೊಗರೊಗುವ ಕೈದುಗಳ ಸುಭಟರು ಮುಂದೆ ಸಂದಣಿಸೆ
ನೆಗಹಿ ಕರಗಳ ಪಾಠಕರು ಬಿರು

ದುಗಳ ಹೊಗಳಲು ಚೀರಿದವು ಕಹ
ಳೆಗಳು ರಭಸದಿ ಬಂದು ಹೊಕ್ಕನು ನೃಪತಿಯರಮನೆಯ ॥

ಕವಿಯ ಸಮಕಾಲೀನ ಭಾರತ ಮತ್ತು ಕರ್ನಾಟಕದಲ್ಲಿ ಯಾವ ಯಾವ ರಾಜ್ಯಗಳಿದ್ದುವೆಂಬುದನ್ನು ನೋಡಬಹುದು.

ಚೋಳ ಗುಜ್ಜರ ದ್ರವಿಡವಂಗ ವ
ರಾಳ ಚೋಟಕ ಸಿಂದು ಶಿಬ ನೇ
ಪಾಳ ಪಾಂಡ್ಯ ಮರಾಟ ಸಿಂಹಳ ಹೂಣ ಸವ್ವೀರಾ
ಲಾಳ ಮಗಧ ವಿದರ್ಭ ರುತು ಮಲೆ
ಯಾಳ ನಿಷಧ ಕಳಿಂಗ ವೆರ ಪಾಂ
ಚಾಲ ಬಹು ದೇಶಾಧಿಪತಿಗಳು ಬಂದರೊಗ್ಗಿನಲಿ ॥

ಮಾಳವಾಂಧ್ರ ಕರುಷವರ ನೇ
ಪಾಳ ಬರ್ಬರ ಮತ್ಸ್ಯನೃಪ ಬಂ
ಗಾಳ ಮಾಂಧ್ರ ಮರಾಟ ಕೋಸಲ ಕೊಡಗ ಕರ್ನಾಟ
ಗೌಳ ಕುಂತಳ ಕೃಕರಪತಿ ಬ
ಲ್ಲಾಳ ಕೊಂಕಣ ಚೀನ ಕೈಕೆಯ
ರಾಳ ಮೇಳದಿ ಬಂದು ಹೊಕ್ಕರು ನೃಪನ ವರಸಭೆಯ ॥

ಕರ್ನಾಟಕಕ್ಕೆ ಸಂಬಂಧಿಸಿದಂತೆ ಕವಿ ಕರ್ನಾಟ, ಕೊಂಕಣ, ತುಳುವ, ಹೊಯ್ಸಳ ಇತ್ಯಾದಿ ವಿಭಾಗಗಳನ್ನು ಗುರುತಿಸುತ್ತಾನೆ. ಆಗಿನ ಕಾಲಕ್ಕೆ ಭಾಷಾವಾರು ರಾಜ್ಯಗಳೊ ಪ್ರಾಂತಗಳೋ ಇರಲಿಲ್ಲವಾದರೂ ಒಂದು ಭಾಷೆಯನ್ನಾಡುವ ಜನರವೇ ಹಲವಾರು ರಾಜ್ಯಗಳಿದ್ದುವು. ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ೧೪ನೆಯ ಶತಮಾನದಲ್ಲೆ ಅಸ್ತಂಗತವಾದ ಹೊಯ್ಸಳ ದೇಶವನ್ನು ಇನ್ನೂರು ವರ್ಷಗಳ ನಂತರವೂ ಈ ಕವಿ ಸ್ಮರಿಸಿರುವುದು ತನ್ನ ತಾಯಿಭೂಮಿಯ ಅಭಿಮಾನದಿಂದ ಎಂದು ಹೇಳಿದರೆ ತಪ್ಪಾಗುವುದಿಲ್ಲ. ಏಕೆಂದರೆ ಯಾವನೇ ವ್ಯಕ್ತಿ ಜೀವನ ನಿರ್ವಹಣೆಗಾಗಿ ಎಲ್ಲಿ ಬೇಕಾದರೂ ಹೋಗಬಹುದು. ಅಂತಹ ಸಂದರ್ಭಗಳಲ್ಲಿಯೂ ಸಮಯ ಬಂದಾಗಲೆಲ್ಲಾ ತನ್ನ ತಾಯಿ ನೆಲವನ್ನು ಆತ ನೆನೆಯದಿರನು.

ರಾಮಧಾನ್ಯ ಚರಿತೆ ಒಂದು ಸಂಘರ್ಷದ ಹಿನ್ನೆಲೆಯ ಕಾವ್ಯ. ಸಾಮಾಜಿಕ ಚಿತ್ರಣ. ಸಮಾಜ ಮತ್ತು ಅದರ ಬದುಕಿಗೆ ಹಚ್ಚಿದ ಪೌರಾಣಿಕ ಲೇಪನ,

ಭಾಷೆಯ ದೃಷ್ಟಿಯಿಂದ ಕುಮಾರವ್ಯಾಸನಿಗೆ ಕನಕದಾಸರು ಋಣಿ ಎಂದು ವಿದ್ವಾಂಸರ ಅಭಿಪ್ರಾಯ. ಇಟ್ಟಿಗೆ ಸಿಮೆಂಟು, ಕಬ್ಬಿಣ ಮಾರುಕಟ್ಟೆಯಲ್ಲಿ ದೊರೆಯುತ್ತದೆ ನಿಜ. ಆದರೆ ಅದರಿಂದ ಒಂದು ಕಲಾತ್ಮಕ ಭವನ ಕಟ್ಟುವುದು ವ್ಯಕ್ತಿಗತ ಪ್ರತಿಭೆ. ಕನಕದಾಸರು ಅಂತ ಪ್ರತಿಭಾ ಸಂಪನ್ನರು ಎಂಬುದರಲ್ಲಿ ಎರಡನೆಯ ಮಾತಿಲ್ಲ. ಅವರ ಕಾವ್ಯಗಳು ಮತ್ತು ಕೀರ್ತನೆಗಳನ್ನು ಗಮನಿಸುವ ಯಾರಿಗಾದರೂ ಈ ಸತ್ಯ ಅರಿವಾಗದಿರದು. ಈ ದೃಷ್ಟಿಯಿಂದ ಕನಕದಾಸರ ರಾಮಧಾನ್ಯ ಚರಿತೆ ಹದಿನೈದನೆಯ ಶತಮಾನದ ಒಂದು ಸಾಮಾಜಿಕ ಆಂದೋಲನದ ಜೀವಂತ ಪ್ರತಿನಿಧಿಯಾಗಿ ನಿಲ್ಲುತ್ತದೆಂಬುದರಲ್ಲಿ ಸಂದೇಹವಿಲ್ಲ.

# ಕನಕದಾಸರ ಪದಗಳಲ್ಲಿ ಸಂಗೀತ

**ಪ್ರೊ: ಸಾ. ಕೃ. ರಾಮಚಂದ್ರರಾವ್**

ಕನಕದಾಸರ ರಚನೆಗಳಲ್ಲಿ ಬರುವ ಸಂಗೀತ ವಿವರಗಳನ್ನು ಪರಿಶೀಲಿಸುವಾಗ ಒಂದೆರಡು ವಿಚಾರಗಳನ್ನು ಮರೆಯಬಾರದು. ಕನಕದಾಸರಿದ್ದ ಕಾಲ ಯಾವುದು, ಆಗ ಬಳಕೆಯಲ್ಲಿದ್ದ ಸಂಗೀತದ ಸ್ವರೂಪವೇನು ಎಂಬುದನ್ನು ಗಮನಿಸಲೇಬೇಕಲ್ಲವೆ ? ಈಗಿನ ಹಲವಾರು ವಿದ್ವಾಂಸರು ಸಭೆಗಳಲ್ಲಿ ಕನಕದಾಸರ ಕೃತಿಗಳನ್ನು ವಿನಿಕೆ ಮಾಡುವಾಗ ಇದನ್ನು ಮರೆಯುತ್ತಾರೆ. ಅದಕ್ಕೆ ಅವರು ನೀಡುವ ಸಮಾಧಾನಗಳೂ ಉಂಟೆನ್ನಿ ಆಗಿನ ಸಂಗೀತ ಈಗಿನ ಜನರಿಗೆ ರುಚಿಸುವುದಿಲ್ಲ ಎಂಬುದೊಂದು, ದಾಸರ ಹಾಡುಗಳನ್ನು ಹೇಗೆ ಹಾಡಿದರೂ ಆಯಿತು, ಯಾವ ಹಾಡಿಗೆ ಯಾವ ರಾಗವನ್ನಾದರೂ ತಾಳವನ್ನಾದರೂ ಹೊಂದಿಸಲು ಬರುತ್ತದೆ ಎಂಬುದಿನ್ನೊಂದು.

ಇವೆರಡು ಸಮಾಧಾನಗಳೂ ಸರಿಯಲ್ಲ. ಆಗಿನ ಸಂಗೀತ ಹೇಗಿದ್ದಿತು ಎಂಬುದನ್ನು ಅರಿತುಕೊಂಡ ಮೇಲಲ್ಲವೆ ಅದು ಈಗಿನವರಿಗೆ ಹಿಡಿಸುವುದೋ ಇಲ್ಲವೋ ಎಂದು ಹೇಳಬರುವುದು ? ಕನಕದಾಸರು ಪದಗಳನ್ನು ಹಾಡುವಾಗ ಸಂಗೀತದ ಸ್ಥಿತಿ ಏನಾಗಿದ್ದಿತೆಂದು ತಿಳಿದುಕೊಳ್ಳುವ ಕಾತರ, ತಾಳ್ಮೆ, ಸಾಮರ್ಥ್ಯ, ನಿಷ್ಠೆ ಬಹುಮಂದಿಗೆ ಇರಲಾರದು. ಮತ್ತೆ, ಹಳೆಯದೆಲ್ಲ ಹಳಸಿದೆ ಎಂದು ಹೇಳಬಹುದೇ ? ಜನರ ನಡುವೆ ಕಾಲಕಾಲಕ್ಕೆ ಬದಲಾಯಿಸುತ್ತ ಇರುವ ಅಭಿರುಚಿಯೇನೋ ಇದೆ ; ಅದಕ್ಕೆ ಹಲವಾರು ಕಾರಣಗಳು. ಇವನ್ನು ನಾವು ಇಂಗ್ಲೀಷಿನಲ್ಲಿ Fad, Fashion, craze, Whimಎಂದೆಲ್ಲ ಹೇಳಬಹುದು. ತಾತ್ಕಾಲಿಕವಾದ ಬೆಲೆ ಇಂಥದಕ್ಕೆ. ಆದರೆ ಸಂಪ್ರದಾಯದ ಕಲೆಯಲ್ಲಿ ರುಚಿ ಸರ್ವಕಾಲಿಕವಾದದ್ದು. ಅದನ್ನು Taste ಅಥವಾ Relish ಎನ್ನುತ್ತೇವೆ. ಕಾಲ ಸಾಗಿದಂತೆ ಅದರ ಆಕರ್ಷಣೆಯಾಗಲಿ, ಪ್ರಸಕ್ತಿಯಾಗಲಿ ಮಾರ್ಪಡುವುದಿಲ್ಲ. ದಾಸಸಾಹಿತ್ಯದ ಹಿನ್ನೆಲೆಯಲ್ಲಿದ್ದ ಸಂಗೀತ ನಮಗೆ ಇಂದು ಅಪ್ರಸ್ತುತ ಎನ್ನಲಾಗದು.

ಆ ಕಾಲದ ಸಾಹಿತ್ಯವನ್ನು ಎತ್ತಿಕೊಂಡು ಹಾಡಬೇಕೆನ್ನುವವರು ಅದಕ್ಕೆ ಸಹಜವಾದ ಸಂಗೀತವನ್ನೂ ಮನದಟ್ಟು ಮಾಡಿಕೊಳ್ಳಬೇಕು. ಆ ಸಂಗೀತದ ಸ್ವರೂಪ, ಸ್ವಭಾವ, ಪ್ರಯೋಜನ ಮುಂತಾದುವನ್ನು ಗಣನೆಗೆ ತಂದುಕೊಳ್ಳದೆ, ಮನಸ್ಸಿಗೆ ಬಂದಂತೆ ಆ ಸಾಹಿತ್ಯಕ್ಕೆ ರಾಗನಿರ್ದೇಶನ, ಸ್ವರ ಸಂಯೋಜನೆಗಳನ್ನು ಮಾಡಿ ಜನರೆದುರು ಒರೆಯುವುದು ಸರಿಯೆ ?

ಇದನ್ನು ವಿವೇಚನೆ ಮಾಡಬೇಕೆಂದು ನನ್ನ ಬಿನ್ನಹ. ಅದರ ಅಗತ್ಯವನ್ನು ಒತ್ತಿ ಹೇಳಿ, ಅಲ್ಲಿರುವ ಸಮಸ್ಯೆಗಳನ್ನು ನನಗೆ ತಿಳಿದಮಟ್ಟಿಗೆ ಸ್ಪಷ್ಟಪಡಿಸಲೆಂದೇ ಈ ಬರಹ.

೧

ಕನಕದಾಸರಿದ್ದ ಕಾಲ ಯಾವುದು ? ಖಚಿತವಾಗಿ, ಕುರಿತೇಟಿನಂತೆ ಹೇಳಲಾಗದಿದ್ದರೂ, ಅವರು ವ್ಯಾಸತೀರ್ಥರ ಶಿಷ್ಯರು, ಪುರಂದರದಾಸರ ಸಮಕಾಲಿಕರು, ವಿಜಯನಗರ ಸಾಮ್ರಾಜ್ಯದ್ದು ಮೇಲುಗೈ ಆಗಿದ್ದಾಗ ಇದ್ದವರು ಎಂಬ ಸಂಗತಿಗಳನ್ನು ಗಮನಿಸಿದಾಗ, ೧೪೬೭ ಮತ್ತು ೧೫೬೫ ರ ನಡುವೆ ಬದುಕಿ ಬಾಳಿದವರು ಎಂದು ಹೇಳಲು ಅಡ್ಡಿಯಲ್ಲ. ಅವರಿದ್ದ ಪ್ರಾಂತ ಯಾವುದು? ಕನ್ನಡನಾಡೆಂಬುದು ನಿಶ್ಚಯವೇ. ಆಗ ಈ ನಾಡಿನಲ್ಲಿ ವಾಡಿಕೆಯಲ್ಲಿದ್ದ ಸಂಗೀತ ಯಾವುದು ? ಈಗ ಇಲ್ಲಿ ವಾಡಿಕೆಯಲ್ಲಿರುವ ಸಂಗೀತವಂತೂ ಅಲ್ಲ ! ಏಕೆಂದರೆ, ಈಗ ವಾಡಿಕೆಯಲ್ಲಿರುವ ಸಂಗೀತ ತ್ಯಾಗರಾಜರ ಕಾಲದಿಂದ, ಎಂದರೆ ೧೭೬೭–೧೮೪೭ ರಿಂದ, ಈಚೆಗೆ ಬೆಳೆದುಬಂದದ್ದುತಾನೆ ? ನಡುವೆ ಇನ್ನೂರು ವರ್ಷಗಳಷ್ಟು ಅಂತರವಿದೆ.

ಈ ಅಂತರದಲ್ಲಿ ಶಾಸ್ತ್ರೀಯ ಸಂಗೀತ ಒಂದು ನಿಶ್ಚಿತವಾದ ಘಟ್ಟವನ್ನು ಮುಟ್ಟಿತು ಎಂಬುದು ತಿಳಿದುಬಂದಿದೆ. ಮುಖ್ಯವಾಗಿ, ಆ ಕಾಲದಲ್ಲಿ ಬಳಕೆಯಲ್ಲಿದ್ದ ಇರದಿದ್ದ ರಾಗಗಳನ್ನೆಲ್ಲ ಒಂದು ಚೌಕಟ್ಟಿನಲ್ಲಿ ಕೂಡಿಸಿ, ಜನಕ ಮತ್ತು ಜನ್ಯರಾಗಗಳೆಂದು ವಿಭಾಗಮಾಡಿ, ವೇಂಕಟಮುನಿ ಮೇಳಕರ್ತಪದ್ಧತಿಯನ್ನು ಸಿದ್ಧಪಡಿಸಿದನು. ಇದು ನಡೆದದ್ದು ೧೬೭೦ರ ಸುಮಾರಿಗೆ. ಇದನ್ನು ನೋಡುವಾಗ, ಜನಕರಾಗಗಳೇ ಮೊದಲಿಂದ ಇದ್ದವು, ಅವುಗಳಿಂದ ಆನಂತರ ಹುಟ್ಟಿಕೊಂಡವು ಜನ್ಯರಾಗಗಳು ಎಂದು ಭಾವಿಸುವ ಸಂಭವವಿದೆ. ಆದರೆ ವಸ್ತುಸ್ಥಿತಿ ಹಾಗಲ್ಲ. ಈಗ ಜನ್ಯರಾಗಗಳೆನಿಸಿಕೊಳ್ಳುವ ಹಲವಾರು ರಾಗಗಳೇ ಈಗಿನ ಜನಕರಾಗಗಳಿಗೆ ಕಾರಣವಾದುವು. ನಿದರ್ಶನಕ್ಕೆ ನಾಟ್ಟ ತುಂಬ ಹಳೆಯ ರಾಗ : ಅದರಿಂದಲೇ ಚಲನಾಟವೆಂಬ ಮೇಳ

ಸಿದ್ಧವಾಯಿತು : ಈಗ ನಾಟ್ಟವನ್ನು ಚಲನಾಟಜನ್ಯ ಎಂದೇ ಹೇಳುತ್ತಾರೆ !

ಈ ಮೇಳಪದ್ಧತಿ ಮೈದಳೆಯುವ ಮೊದಲು ಮೇಳಗಳಿರಲಿಲ್ಲವೆಂದಲ್ಲ. ಹತ್ತೊಂಬತ್ತು ಮೇಳಗಳು ಮೊದಲೇ ಇದ್ದದ್ದು ವೇಂಕಟಮುನಿಯ ಒಕ್ಕಣೆಯಿಂದಲೇ ತಿಳಿದು ಬರುತ್ತದೆ. ಇವನ್ನು 'ಕಲ್ಪಿತ' ಎಂದು ವೇಂಕಟಮುನಿ ಕರೆಯುತ್ತಾನೆ. ಎಂದರೆ ಮೊದಲಿದ್ದ ರಾಗಗಳನ್ನು ಪರಿಷ್ಕರಿಸಿ ಶಾಸ್ತ್ರೀಯವಾದ ರೂಪವನ್ನು ಕೊಟ್ಟದ್ದು ಎಂದರ್ಥ. ಅವುಗಳೊಂದಿಗೆ 'ಕಲ್ಪ್ಯಮಾನ' (ಎಂದರೆ ಹೊಸದಾಗಿ ಮಾಡಿದವು) ಮತ್ತು 'ಕ್ಲಪಿಷ್ಯಮಾಣ' (ಮುಂದೆ ಮಾಡಲು ನೆರವಾಗುವುವು) ಎಂಬ ಐವತ್ತುಮೂರು ರಾಗಗಳನ್ನು ಸೇರಿಸಿ ಒಟ್ಟು ಎಪ್ಪತ್ತೆರಡು ಮೇಳಗಳ ಪಟ್ಟಿ ಮೈದಳೆಯಿತು.

ಇಲ್ಲಿ ಕಲ್ಪಿತ ಎಂಬ ಮಾತನ್ನು ನೋಡಿ, ಶಾಸ್ತ್ರಜ್ಞರು ತಮ್ಮ ಲೆಕ್ಕಾಚಾರಕ್ಕೆ ಸಿದ್ಧಪಡಿಸಿಕೊಂಡದ್ದು ಎಂದು ಆ ಮಾತಿನ ಅರ್ಥ. ಆಗಲೇ ಇದ್ದ ರಾಗಗಳು ಎಂದರ್ಥವಲ್ಲ. ಆದರೆ ರಾಗಗಳು ಆಗ ಇಲ್ಲವೆಂದಲ್ಲ. ರಾಗಗಳು ತುಂಬ ಹಿಂದಿನಿಂದಲೇ ಇವೆ. ವೇಂಕಟಮುನಿಯ ತಂದೆ ಗೋವಿಂದ ದೀಕ್ಷಿತರು ತಮ್ಮ 'ಸಂಗೀತಸುಧೆ' ಯಲ್ಲಿ ವಿದ್ಯಾರಣ್ಯರ ಕೊಡುಗೆಯನ್ನು ವಿವರಿಸುತ್ತ. 'ಪ್ರಚುರ ಪ್ರಯೋಗ'ವಿದ್ದ ಹಲವು ರಾಗಗಳನ್ನು ಹಿಡಿದು ಐವತ್ತು ಪರಿಷ್ಕೃತ ರಾಗಗಳನ್ನು ಸಿದ್ಧಪಡಿಸಿದರು ಎಂದು ಹೇಳಿದ್ದಾರೆ. ಇದು ೧೬೧೪ರ ಮಾತು. ಅವರ ಒಕ್ಕಣೆ 'ಆರಭ್ಯ ರಾಗಗಾನ್ ಪ್ರಚುರ ಪ್ರಯೋಗಾನ್' ಎಂದು ಮೊದಲಾಗುತ್ತದೆ. 'ಪ್ರಚುರಪ್ರಯೋಗ'ವೆಂದರೆ ಜನರ ನಡುವೆ ಬಳಕೆಯಲ್ಲಿದ್ದ ರಾಗಗಳು. ವೇಂಕಟಮುನಿಯ 'ಕಲ್ಪಿತ'ರಾಗಗಳು ಶಾಸ್ತ್ರಜ್ಞರ ಸೊತ್ತು. ಗ್ರಂಥ ಸಮರ್ಥನೆ ಅವಕ್ಕಿವೆ. ವಿದ್ಯಾರಣ್ಯರು ಅವಲಂಬಿಸಿದ ('ಆರಭ್ಯ' ಎನ್ನುವ ಮಾತಿಗೆ 'ಆಲಂಬ್ಯ' ಎಂದರ್ಥ) ರಾಗಗಳಾದರೋ ಜನರ ಪರಿಚಯದಲ್ಲಿ, ವ್ಯವಹಾರದಲ್ಲಿ ಇದ್ದವು. ವಿದ್ಯಾರಣ್ಯರೂ ಹದಿನೇಳು ಮೇಳಗಳನ್ನು ಪಟ್ಟಿಮಾಡಿದ್ದರಂತೆ. ಆದರೆ ಅವು ಬೇರೆ ಪ್ರಚುರ ಪ್ರಯೋಗದ ರಾಗಗಳು ಬೇರೆ.

ಇವೆಲ್ಲ ಪುರಂದರದಾಸರ, ಕನಕದಾಸರ ಕಾಲ ಮುಗಿದ ಮೇಲೆ ನಡೆದ ಸಂಗತಿಗಳು ಪುರಂದರದಾಸರ ಇಳಿವಯಸ್ಸಿನಲ್ಲಿ, ಬಹುಶಃ ಕನಕದಾಸರು ತೀರಿಕೊಂಡಮೇಲೆ ಬಯಕಾರ ರಾಮಯಾಮಾತ್ಯನ 'ಸ್ವರಮೇಳಕಳಾನಿಧಿ' ಹೊರಬಂದಿತು ; ೧೫೫೦ರಲ್ಲಿ. ಅದರಲ್ಲಿ ಆ ಕಾಲಕ್ಕೆ ಶಾಸ್ತ್ರಜ್ಞರು ಗೊತ್ತು ಪಡಿಸಿದ ರಾಗಲಕ್ಷಣಕ್ಕೂ, ಜನರ ನಡುವೆ ಬಳಕೆಯಲ್ಲಿದ್ದ ರಾಗ ನಿರೂಪಣೆಗೂ ವಿರೋಧವಿದ್ದಿತೆಂಬ ಮಾತು ಬರುತ್ತದೆ.

'ಸಂಗೀತಶಾಸ್ತ್ರೇ ಬಹುಧಾ ವಿರೋಧಃ
ಸಂತ್ಯೇವ ಲಕ್ಷ್ಯೇಷು ಚ ಲಕ್ಷಣೇಷು'

ಸ್ಥಿತಿ ಹೀಗಿದ್ದಿತೆನ್ನುವುದು ಪುಂಡರೀಕವಿಟ್ಠಲನ 'ಷಡ್ರಾಗಚಂದ್ರೋದಯ' ದಿಂದಲೂ ತಿಳಿದು ಬರುತ್ತದೆ ('ಸಂತ್ಯಸ್ಮಿನ್ ಬಹುಧಾ ವಿರೋಧಾ ಗತಯೋ ಲಕ್ಷ್ಯೇಚ ಲಕ್ಷ್ಯೆದಿತೇ')

ಒಂದು ರೀತಿಯಿಂದ, ಮುಂದೆ 'ಕಲ್ಪಿತ' ಎಂದೂ, 'ಪ್ರಚುರ ಪ್ರಯೋಗ' ಎಂದೂ ನಿರ್ದೇಶನ ಮಾಡಿದ ರಾಗಗಳಲ್ಲೇ ಗೊಂದಲವಿದ್ದಿತೆಂದು ಊಹಿಸಿಕೊಳ್ಳಬಹುದು, ಕನಕದಾಸರಾಗಲಿ, ಪುರಂದರದಾಸರಾಗಲಿ ಈ ಗೊಂದಲದ ಸಮಯದಲ್ಲೇ ಇದ್ದವರು. ಆದರೆ ಗೊಂದಲ ಶಾಸ್ತ್ರಜ್ಞರ ಪಾಲಿಗೆ ಅಷ್ಟೆ, ದಾಸರಿಗಾಗಲಿ ಜನರಿಗಾಗಲಿ ಗೊಂದಲವೇನು ಇರಲಿಲ್ಲ ; ಜನರಿಗೆ ಈ ಗೊಂದಲ ಈ ಹೊತ್ತಿಗೂ ಇಲ್ಲವೆನ್ನಿ !

ಪುರಂದರದಾಸರು ಶಾಸ್ತ್ರಜ್ಞರು ; ಸಂಗೀತದ ಸಿದ್ಧಾಂತ, ಪ್ರಯೋಗ ಎರಡನ್ನೂ ಬಲ್ಲವರು. ರಾಗಲಕ್ಷಣಗಳಿಗೂ ಲಕ್ಷ್ಯಪ್ರಬಂಧಗಳಿಗೂ ಹೊಂದಾಣಿಕೆ ಏರ್ಪಡಲು ಹೆಣಗಿದರು. ಅವರ ಪದಗಳಲ್ಲಿ ಕಾಣಬರುವ ರಾಗ ಲಕ್ಷಣ ಬಹುಮಟ್ಟಿಗೆ ಶಾಸ್ತ್ರಸಮ್ಮತವಾದದ್ದೇ. ಆದರೆ ಕನಕದಾಸರ ಪದಗಳನ್ನು ನೋಡುವಾಗ ಅವೇನು ರಾಗಲಕ್ಷಣಗಳಿಗೆ ಲಕ್ಷ್ಯವೆಂದು ಸಿದ್ಧವಾದಂತೆ ತೋರುವುದಿಲ್ಲ. ಬಹುಶಃ ಕನಕದಾಸರು ಸಂಗೀತಶಾಸ್ತ್ರವನ್ನ ಕುರಿತು ತಲೆಕೆಡಿಸಿಕೊಂಡವರಲ್ಲ ; ಸ್ವರಸಾಧನೆಮಾಡಿ ಕ್ರಮದಂತೆ ಸಂಗೀತವನ್ನೂ ಕಲಿತಿರಲಾರರು. ಆದರೆ ರಾಗಭಾವದ ಸೊಗಸನ್ನು ಚೆನ್ನಾಗಿ ಅರಿತಿದ್ದವರು, ಅವರು ಪದಗಳನ್ನು ರಚಿಸಿದ ಚೌಕಟ್ಟೇ ಬೇರೆಯೆನ್ನಬಹುದು.

ಆಗ ರಾಗವೆಂದರೆ ಶಾಸ್ತ್ರಜ್ಞರು ಲೆಕ್ಕಾಚಾರದಿಂದ ನಿರ್ಣಯ ಮಾಡಿದ ನಿರ್ದಿಷ್ಟ ಸ್ವರಸಂದೋಹ ಎಂಬ ಕಲ್ಪನೆಯೇನಿರಲಿಲ್ಲ : 'ರಂಜಕೋಜನಚಿತ್ತಾನಾಂ ಸರಾಗಃ ಕಥಿತೋ ಬುಧೈಃ' ಎನ್ನುವ ಮಾತು ದಿಟವಾಗಿದ್ದಿತು (ಈಗಲೂ ಸಾಮಾನ್ಯ ಜನರಿಗೆ ಇದೇ ದಿಟ). ಜನರಿಗೆ ರುಚಿಸಿದ್ದು ತಾನೆ 'ರಂಜಕ?' ; ರಂಜಕವಾದುದಕ್ಕೇ 'ಪ್ರಚುರ ಪ್ರಯೋಗ'. ಇಂಥ ರಾಗಗಳು ಬಳಕೆಯಲ್ಲಿದ್ದುದನ್ನೆ ದಾಸರು ಹಿಡಿದು ತಮ್ಮ ಪದಗಳನ್ನು ರಚಿಸಿದರು. ಆ ರಾಗಗಳು ಪದಗಳಲ್ಲಿ ಕಾಣಿಸಿಕೊಳ್ಳುವುದು ಪದಗಳ ಭಾವವನ್ನು ಎತ್ತಿಹಿಡಿಯಲೆಂದಷ್ಟೆ. ಅಲ್ಲಿ ಸಂಗೀತಕ್ಕೆ ಸೀಮಿತವಾದ ಸ್ಥಾನ.

೨

ಕನಕದಾಸರ ರಚನೆಗಳಲ್ಲಿ ಮೋಹನ ತರಂಗಿಣಿಯಂಥ ಸಾಂಗತ್ಯವನ್ನಾಗಲಿ, ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿಭಕ್ತಿಸಾರಗಳಂಥ ಭಾಮಿನೀಷಟ್ಪದಿಗಳನ್ನಾಗಲಿ ಇಲ್ಲಿ ಎತ್ತಿಕೊಳ್ಳುವ ಅಗತ್ಯವಿಲ್ಲ. ಅವು ಮುಖ್ಯವಾಗಿ ಕಾವ್ಯಪ್ರಕಾರಗಳು, ಛಂದೋರೂಪದವು, ಅವುಗಳನ್ನು ರಾಗವಾಗಿ ಹಾಡುವುದು ಸಾಧ್ಯವಾದರೂ, ಹಾಡುವವರು ತಮಗೆ ಬೇಕಾದಂತೆ ಹಾಡಬಹುದು ; ಇಂಥದೇ ರಾಗ, ಇದೇ ತಾಳವೆಂಬ ನಿರ್ಬಂಧವೇನಿರದು. ಸಂಗೀತಪದ್ಧತಿಯಂತೆ ಹಾಡುವುದಕ್ಕಿಂತ ವಾಚನ ಮಾಡುವುದು ಇಲ್ಲಿ ಹೆಚ್ಚು ಪರಿಣಾಮಕಾರಿಯಾದೀತು. ಇವು ಗೇಯಕಾವ್ಯಗಳಲ್ಲ. ಇಲ್ಲಿ ಶಬ್ದಕ್ಕಿದ್ದಷ್ಟೆ ಬೆಲೆ, ಇನ್ನೂ ಹೆಚ್ಚಿನ ಬೆಲೆ ಅರ್ಥಕ್ಕಿದೆ. ಇಲ್ಲಿ ಕಾವ್ಯಾಲಂಕಾರಗಳೂ ಕೆಲಸ ಮಾಡುತ್ತವೆ. ಕಡೆಗೆ, ಹಾಡದೆ ಹಾಗೆಯೇ ಓದಿದಾಗಲೂ ಕಾವ್ಯದ ಸೊಗಸೇನು ಮರೆಯಾಗುವುದಿಲ್ಲ. ಅಲ್ಲಿನ ಪದಬಂಧ ವಾಚನಕ್ಕೆ ಅನುಕೂಲವಾಗಿದೆ, ಮನೋಜ್ಞವಾಗಿದೆ.

ನಾವಿಲ್ಲಿ ಗಮನಿಸಬೇಕಾದುದು ಕನಕದಾಸರ ಪದಗಳನ್ನು. ಪುರಂದರದಾಸರಿಗೂ ಕನಕದಾಸರಿಗೂ ಇರುವ ಅಂತರವನ್ನು ನಾವು ಅರಿತುಕೊಳ್ಳಬೇಕು. ಪುರಂದರದಾಸರು ಕವಿಗಳಲ್ಲ, ಗಾಯಕರು. ಅವರು ಕನಕದಾಸರಂತೆ ಸ್ವತಂತ್ರ ಕಾವ್ಯ ಕೃತಿಗಳನ್ನೇನು ರಚಿಸಲಿಲ್ಲ ; ಅಷ್ಟುಮಾತ್ರವಲ್ಲ, ಅವರ ಪದಗಳಲ್ಲಿ ಕಾವ್ಯಾಲಂಕಾರಗಳನ್ನಾಗಲಿ ಛಂದೋರೂಪಗಳನ್ನಾಗಲಿ ನಾವು ಕಾಣುವುದು ಕಡಮೆಯೇ. ಸಾಮಾನ್ಯವಾಗಿ ಯತಿ, ಪ್ರಾಸ ಲಯ ಮೊದಲಾದುವುಗಳೇನೋ ಇರುತ್ತವೆ : ಆದರೆ ಅವನ್ನು ಕಾವ್ಯಕೃತಿಗಳೆನ್ನಲು ಬರುವುದಿಲ್ಲ. ಕನಕದಾಸರಾದರೆ ಸ್ವಭಾವದಿಂದಲೇ ಕವಿ ; ಕೃಷಿಯಿಂದಲೂ ಕವಿ. ಪದಗಳಲ್ಲೂ ಕವಿತ್ವದ ಪ್ರವೇಶ ಧಾರಾಳವಾಗಿ ಇದೆ. ಪುರಂದರದಾಸರ ತಾತ್ವಿಕ ನಿಲುವು. ಧರ್ಮದೃಷ್ಟಿ ಶಾಸ್ತ್ರ ಪರಿಚಯ ಇವೆಲ್ಲ ಪ್ರೌಢವೆನ್ನುವ ಬಗೆಗೆ ಸೇರುವುವು. ಕನಕದಾಸರ ಕಾವ್ಯಕೃತಿಗಳಲ್ಲಿ ಇವೆಲ್ಲವನ್ನು ನಾವು ಕಾಣುತ್ತೇವೆ. ಆದರೆ ಅವರ ಪದಗಳು ಬೇರೆ ಒಂದು ಗೋತ್ರಕ್ಕೇ ಸೇರಿದವು. ಬೇಕಿದ್ದರೆ ಅದನ್ನು ಜಾನಪದವೆನ್ನಿ.

ಈಗ ಜಾನಪದ ಎನ್ನುವ ಮಾತು ಬಹುಮಟ್ಟಿಗೆ ರಾಜಕಾರಣದ ಧೋರಣೆಗೆ ಪಕ್ಕಾಗಿ ತನ್ನ ಮೂಲಾರ್ಥವನ್ನೂ ಸ್ವಾರಸ್ಯವನ್ನೂ ಸಾರ್ಥಕತೆಯನ್ನೂ ಕಳೆದುಕೊಂಡಿದೆ. ಸಮಾಜದ ಒಂದು ವರ್ಗಕ್ಕೆ ಸೇರಿದಂತೆ ಈ ಮಾತಿನ ಬಳಕೆಯನ್ನು ನಾವು ಈಗೀಗ ಕಾಣುತ್ತೇವೆ. ಆದರೆ ಜಾನಪದ

ಜಾಯಮಾನ, ಜಾನಪದ ಸಂಸ್ಕೃತಿ ಜಾನಪದ ಕಲೆ ಎನ್ನುವಾಗ ಎಲ್ಲ ವರ್ಗದ ಎಲ್ಲ ಜನರಲ್ಲೂ ಬಳಕೆಯಲ್ಲಿರುವುದು ಎಂದೇ ಅರ್ಥ. ಈ ಮೊದಲು ಕೆಲವು ರಾಗಗಳನ್ನು 'ಪ್ರಚುರಪ್ರಯೋಗ' ಎಂದು ಬಣ್ಣಿಸಿದಾಗ ಜಾನಪದ ಮೂಲ ಎಂದೇ ತಾತ್ಪರ್ಯ.

ಇದರಲ್ಲಿ ಎರಡು ವಿವರಗಳಿವೆ. ಒಂದು, 'ಜಾನೇನ ಜನ್ಮನಾ ಪದ್ಯತೇ ಇತಿ' ಎಂಬ ವ್ಯುತ್ಪತ್ತಿಯಂತೆ, ಕ್ರಮವಾಗಿ ಕಲಿತದ್ದಲ್ಲದೆ, ಸ್ವಭಾವದಿಂದಲೇ ಸಿದ್ಧವಾದದ್ದು ಜಾನಪದ. ಹೆಂಗಸರು ಮುಂಜಾನೆ ಉದಯರಾಗ ಹಾಡುವಾಗ, ಮಕ್ಕಳನ್ನು ತೂಗಿ ಮಲಗಿಸುವಾಗ, ಬತ್ತ ಕುಟ್ಟುವಾಗ, ರಾಗಿ ಬೀಸುವಾಗ, ಗಂಡಸರು ಹೊಲ ಉಳುವಾಗ, ಭಾರ ಎತ್ತುವಾಗ, ನೀರು ಮೊಗೆಯುವಾಗ, ಮಕ್ಕಳು ಆಟವಾಡುವಾಗ ಹೀಗೆ ಹತ್ತು ಹಲವಾರು ಸಂದರ್ಭಗಳಲ್ಲಿ ಹಾಡುವುದಾದರೆ ಅವೆಲ್ಲ ಜಾನಪದವೇ. ಭಜನೆ, ಶೋಭಾನೆ ಪದಗಳೂ, ಹಸೆಹಾಡು ಇವೂ ಈ ಗುಂಪಿಗೇ ಸೇರಿದವು. ಕಡೆಗೆ ನಾಟಕ, ಬಯಲಾಟ ಯಕ್ಷಗಾನಗಳಲ್ಲಿ ಬರುವ ಹಾಡುಗಳೂ ಹೀಗೆ ಇರುವವೇ. ಇಲ್ಲಿ ಎಲ್ಲ ವರ್ಗದವರೂ ಸೇರುತ್ತಾರೆ.

ಇಲ್ಲೆಲ್ಲ ಹಾಡುವವರು ಸ್ವರಾಭ್ಯಾಸಮಾಡಿ, ಪದ್ಧತಿಯಂತೆ ಸಂಗೀತವನ್ನೇನು ಕಲಿತಿರುವುದಿಲ್ಲ. ಬಹುಮಟ್ಟಿಗೆ ಕೇಳ್ಮೆಯಿಂದಲೇ, ಅನುಕರಣೆಯಿಂದಲೇ ಅವರ ಸಂಗೀತವೆಲ್ಲ ಸಾಗುವುದು.

ಜಾನಪದವೆಂಬಲ್ಲಿ ಸೇರುವ ಇನ್ನೊಂದು ವಿವರ 'ಜನಸ್ಯ ಲೋಕಸ್ಯ ಪದಂ ಆಶ್ರಯಸ್ಥಾನಂ' ಎನ್ನುವುದು. ಸಾಮಾನ್ಯ ಜನರಿಗೆಲ್ಲ ಯಾವುದು ಒಂದು ನೆಲೆಯನ್ನು ಒದಗಿಸುವುದೋ ಅದು ಜಾನಪದ, ಅದೇ ಜಾನಪದ. ಒಂದೊಂದು ಪ್ರದೇಶದಲ್ಲಿ ಒಂದೊಂದು ಜಾನಪದ ಚೌಕಟ್ಟು. ಮತ್ತು ಜನರೆಲ್ಲರ ಅನಿಸಿಕೆಗಳು, ಆಶೋತ್ತರಗಳು, ಉತ್ಸಾಹ, ಧರ್ಮ–ಕರ್ಮ ಎಲ್ಲವನ್ನೂ ಸ್ಪಷ್ಟಗೊಳಿಸುವುದು ಜಾನಪದ ('ನಃ ಪದಂ ವಸ್ತು ಯಸ್ಯ') ಜನರೆಲ್ಲರ ದಿನನಿತ್ಯದ ಬದುಕೇ ಜಾನಪದದ ವಸ್ತು. ದಾಸರ ಪದಗಳಲ್ಲಿ ನಾವು ಕಾಣುವುದು ಇದನ್ನೇ. ಇದನ್ನು ಜಾನಪದ ಮೂಲವೆಂದರೆ ತಪ್ಪೇನು ?

ಜಾನಪದವಲ್ಲದ್ದೂ ಇದೆ ; ಅದನ್ನು 'ಶಿಷ್ಟ' ಎಂದು ಬೇರ್ಪಡಿಸುವುದೂ ಉಂಟು. ನಮ್ಮ ಸ್ಮೃತಿಗ್ರಂಥಗಳಲ್ಲಿ ಒಂದು ಮಾತು ಮತ್ತೆ ಮತ್ತೆ ಬರುತ್ತದೆ– 'ಜಾತಿಜಾನಪದಾನ್ ಧರ್ಮಾನ್ ಶ್ರೇಣೀಧರ್ಮಾಂಶ್ಚ ಧರ್ಮವಿತ್.' ಇಲ್ಲಿ ಜಾನಪದ ಧರ್ಮ, ಶ್ರೇಣೀಧರ್ಮ ಎಂದು ವಿಂಗಡಿಸಿ ಹೇಳಿದೆ. ಈ

ಸಂದರ್ಭದಲ್ಲಿ ಶ್ರೇಣಿಯೆಂದರೆ ಕಾರ್ಮಿಕರು, ಕರಕುಶಲ ಕಲಾಕಾರರು, ಪಂಡಿತರು, ಅಧಿಕಾರಿಗಳು, ಪುರೋಹಿತರು ಮೊದಲಾಗಿ ಬೇರೆ ಬೇರೆ ವರ್ಗಗಳಿಗೆ ಸೇರಿದವರು. ಆಯಾ ವೃತ್ತಿಗೆ ಅನುಕೂಲವಾದ ಧರ್ಮ ಶ್ರೇಣೀಧರ್ಮ ; ಪಂಡಿತರೋ ಪುರೋಹಿತರೋ ತಮ್ಮ ಮನೋವೃತ್ತಿಗೆ, ಉದ್ಯಮಕ್ಕೆ ಅನುಗುಣವಾಗಿ ಏರ್ಪಡಿಸಿಕೊಂಡದ್ದನ್ನು ಶ್ರೇಣೀ ಧರ್ಮವೆನ್ನೋಣ. ಆದರೆ ಅವರಿಗೂ ಹುಟ್ಟಿನಿಂದಲೇ ಬಂದ ಪ್ರವೃತ್ತಿಗಳಿರುವುವಷ್ಟೆ. ಅವನ್ನು 'ಜಾತಿ (ಎಂದರೆ ಹುಟ್ಟು) ಜಾನಪದ ಧರ್ಮ'ವೆಂದು ಕರೆದಿದ್ದಾರೆ.

ಕನಕದಾಸರದ್ದು ಜಾನಪದಸಂಗೀತ ಎನ್ನುವಾಗ, ಜನರ ನಡುವೆ ಸಹಜವಾಗಿ ಹರಡಿಕೊಂಡಿದ್ದ ಹಾಡುವ ಪರಿಕರಗಳನ್ನೇ ಅವರು ಬಳಸಿಕೊಂಡರು ಎಂದಷ್ಟೆ ಅರ್ಥ. ಹಸೆಹಾಡು, ಶೋಭಾನೆ ಪದ, ಭಜನೆ, ಲಾವಣಿ, ನಾಟಕ ಅಥವಾ ಬಯಲಾಟದ ಹಾಡು ಇವೆಲ್ಲ ಸಂಗೀತಪ್ರಕಾರಗಳೇ ; ಆದರೆ ಹಾಡುವವರಿಗೆ 'ಇದು ಈ ರಾಗ', 'ಈ ತಾಳ' ಎಂಬ ನಿಶ್ಚಿತ ತಿಳಿವಳಿಕೆ ಇರಬೇಕಾದುದಿಲ್ಲ. ಬಹುಮಟ್ಟಿಗೆ ಇರುವುದಿಲ್ಲ. ಆದರೂ ಅವರ ಹಾಡಿನಲ್ಲಿ ರಾಗ, ತಾಳಗಳು ಇದ್ದೇ ಇರುತ್ತದೆ ; ತುಂಬ ಸಂತೋಷವನ್ನೇ ತರುತ್ತವೆ. ಅವನ್ನು ನಾವು ಕೇಳುವಾಗಲೂ ಇದು ಇಂಥದೇ ರಾಗವೆಂದು ನಾವು ಗುರುತಿಸುವುದೂ ಎಷ್ಟೋವೇಳೆ ಕಷ್ಟವಾಗುತ್ತದೆ. ನನಗೆ ತಿಳಿದ ಹಲವು ರಾಗಗಳ ನೆರಳು ಒಂದರ ಮೇಲೊಂದು ಬಿದ್ದಿರುವುದೂ ಉಂಟು. ಕೆಲವು ರಾಗಗಳು ಬೆರಕೆಗೊಳ್ಳುವುದೂ ಉಂಟು. ಆದರೆ ನಮಗೆ ಹೀಗೆ ಒದಗುವ ತೊಂದರೆ ಸಾಮಾನ್ಯಜನರಿಗೆ ಒದಗುವುದಿಲ್ಲ. ಅವರಿಗೆ ಇದು ಯಾವ ರಾಗ, ಅದರ ಸ್ವರಸಂಚಾರ ಏನು, ಎಷ್ಟನೆಯ ಮೇಳ ಎಂಬೆಲ್ಲ ಕಳವಳವಿಲ್ಲ !

ಇಲ್ಲಿ ದೋಷ ಯಾರದ್ದು ? ನಮ್ಮದೇ ಎಂದು ನನ್ನ ಎಣಿಕೆ. ನಮ್ಮ ಮನಸ್ಸಿನಲ್ಲಿರುವ ರಾಗಲಕ್ಷಣಕ್ಕೆ, ನಾವು ಶಾಸ್ತ್ರದಿಂದಲೋ ಅಭ್ಯಾಸದಿಂದಲೋ ಗೊತ್ತುಮಾಡಿಕೊಂಡ ರಾಗಸ್ವರೂಪಕ್ಕೆ ಅನುಗುಣವಾಗಿಯೇ ದಾಸರ ಹಾಡು, ಹಸೆಯ ಹಾಡು, ಶೋಭಾನೆಯ ಪದ, ನಾಟಕದ ಹಾಡು ಇರಬೇಕೆಂದು ನಿರೀಕ್ಷಿಸುತ್ತೇವಲ್ಲ ? ನಮಗೆ ತಿಳಿದ ರಾಗಭಾವ ನಾವು ಕೇಳಿದ ಜಾನಪದ ಹಾಡಿನಲ್ಲಿ ಇದ್ದರೆ ಸರಿ; ಇಲ್ಲವಾದರೆ ಆ ಹಾಡಿನಲ್ಲಿ ರಾಗಭಾವವೇ ಇಲ್ಲ ಎಂದೋ ಹಾಡುವವರಿಗೆ ರಾಗಜ್ಞಾನವಿಲ್ಲ ಎಂದೋ ನಿಶ್ಚಯಿಸಿಬಿಡುತ್ತೇವೆ. ನಮಗೆ ತಿಳಿದ ರಾಗವೇ ರಾಗ, ಅದರ ಭಾವ ಎಂದು ನಮ್ಮ ಹಟ.

ಆದರೆ ನಮ್ಮ ರಾಗದ ಕಲ್ಪನೆ ಶಾಸ್ತ್ರೀಯವಾದದ್ದು. ನಾವು ಕೇಳುವ

ಹಾಡು ಶಾಸ್ತ್ರೀಯ ಚೌಕಟ್ಟಿಗೆ ಸೇರಿದ್ದಲ್ಲ ಎಂಬ ವಿವೇಚನೆ ಇರಬೇಕು. ಜಾನಪದಹಾಡಿನಲ್ಲಿ ನಾವು ಕಲ್ಪಿಸಿಕೊಂಡ ರಾಗಲಕ್ಷಣವನ್ನು ನಾವು ಕಾಣದಿದ್ದರೆ, ಆ ಹಾಡಿಗೆ ಸಹಜವಾದ ರಾಗಲಕ್ಷಣ ಬೇರೆ ಇರಬಹುದು ಅಲ್ಲವೆ ? ನಮ್ಮ ಪರಿಚಯದಲ್ಲಿರುವ ಯಾವ ರಾಗವನ್ನೂ ಅಲ್ಲಿ ಗುರುತಿಸಲಾಗದಿದ್ದರೆ, ಅದನ್ನು 'ಮಟ್ಟು' 'ಧಾಟಿ' ಎನ್ನುತ್ತೇವೆ. ಜಾನಪದ ಹಾಡಿಗಿರುವುದು 'ಮಟ್ಟೇ', 'ಧಾಟಿಯೇ', ಪರಿಷ್ಕೃತ ರಾಗವಲ್ಲ. ಇಂಥ ಜನಪ್ರಿಯವಾಗಿದ್ದ, ಪ್ರಚುರಪ್ರಯೋಗವಿದ್ದ ಮಟ್ಟುಗಳನ್ನೇ ವಿದ್ಯಾರಣ್ಯರಾಗಲಿ ವೇಂಕಟಮುನಿಯಾಗಲಿ ಅಲ್ಪಸ್ವಲ್ಪ ಮಾರ್ಪಡಿಸಿ, ಪರಿಷ್ಕರಿಸಿ, ಸಂಸ್ಕಾರಗೊಳಿಸಿ ರಾಗಗಳನ್ನಾಗಿ ಮಾಡಿಕೊಂಡರು. ಹೀಗೆ ಪರಿಷ್ಕರಿಸಲ್ಪಟ್ಟ ರಾಗಗಳೇ ನಮ್ಮ ಪರಿಚಯದಲ್ಲೀಗ ಇರುವುವು. ಈ ರಾಗಗಳಲೇ ತ್ಯಾಗರಾಜರೇ ಮೊದಲಾದವರು ಕೃತಿರಚನೆ ಮಾಡಿದರು.

ರಾಗಪರಿಷ್ಕಾರದ ಕೆಲಸ ಮುಗಿಯುವ ಮೊದಲೇ ಇದ್ದದ್ದು ದಾಸಸಾಹಿತ್ಯ, ಪುರಂದರದಾಸರ ಪದಗಳಲ್ಲಾಗಲೇ ಪರಿಷ್ಕಾರದ ಪ್ರಯತ್ನ ನಡೆದುದನ್ನು ಗುರುತಿಸಬಹುದು. ಈ ಕೆಲಸ ಶ್ರೀಪಾದರಾಜರಿಂದಲೇ ಮೊದಲಾಗಿದ್ದರೂ ಇದ್ದೀತು ; ಆದರೆ ಇದನ್ನು ಅಷ್ಟು ಮುಖ್ಯವೆಂದು ಅವರಾಗಲಿ ಪುರಂದರದಾಸರಾಗಲಿ ಭಾವಿಸಿರಲಾರರು. ಒಟ್ಟಾರೆ ದಾಸಸಾಹಿತ್ಯದಲ್ಲಿ ಬಹುಮಟ್ಟಿಗೆ ಮಟ್ಟುಗಳೇ ಮುಖ್ಯವೆನಿಸಿದವು ಎಂದರೆ ತಪ್ಪಾಗದು. ಕನಕದಾಸರ ಪದಗಳಂತೂ ಮಟ್ಟುಗಳಲ್ಲೇ ಮೈದಳೆದುವು.

ಮಟ್ಟುಗಳಲ್ಲಿ ರಾಗ ಇಲ್ಲ ಎಂದಲ್ಲ ; ಈಗ ನಮ್ಮ ರಾಗಲಕ್ಷಣಗಳಿಗೆ ಒಪ್ಪುವಂಥ ರಾಗನಿರೂಪಣೆಯನ್ನು ಅಲ್ಲಿ ನಾವು ಕಾಣಲಾರೆವು ಎನ್ನುವುದಂತೂ ದಿಟ. ಅದನ್ನು ಅಲ್ಲಿ ಕಾಣಬೇಕೆಂದು ನಾವು ಬಯಸುವುದೂ ತಪ್ಪು. ಕನಕದಾಸರು, ಪುರಂದರದಾಸರು ಬದುಕಿ ಬಾಳಿದ ಕಾಲದಲ್ಲಿ ಬತ್ತೀಸರಾಗಗಳೆಂಬ ಕಲ್ಪನೆಯಿದ್ದಿತು. ಬಸವಣ್ಣನವರ ಒಂದು ವಚನದಲ್ಲೂ ('ಬತ್ತೀಸರಾಗವ ಹಾಡಯ್ಯ') ಪುರಂದರದಾಸರ ಪದವೊಂದರಲ್ಲೂ ('ತುತ್ತೂರು ತೂರೆಂದು ಬತ್ತೀಸರಾಗದಲ್ಲಿ, ಚಿತ್ರವಲ್ಲಭ ತನ್ನ ಕೊಳಲನೂದಿದನು') ಇದರ ಉಲ್ಲೇಖವಿದೆ. ಆದರೆ ಈ ಮೂವತ್ತೆರಡು ರಾಗಗಳು ಯಾವುವು ಎಂದು ನೇರವಾಗಿ ಎಲ್ಲರೂ ಒಪ್ಪುವಂತೆ ಪಟ್ಟಿ ಮಾಡುವುದು ಕಷ್ಟ. ಪುರಂದರದಾಸರ ಪದದಲ್ಲಿ ಗೌಳಿ, ನಾಟ, ಆಹಿರಿ, ಗುರ್ಜರಿ, ಮಾಳವಿ, ಸಾರಂಗ, ಫಲಮಂಜರಿ, ದೇಶಾಕ್ಷಿ, ಇವು ಹೆಸರುಗೊಂಡಿವೆ. ಅವರ ಇನ್ನೊಂದು ಪದದಲ್ಲಿ (ನಳಿನಜಾಂಡ ತಲೆಯ ತೂಗಿ ಮೋಹಿಸುತಿರಲು') ಈ ರಾಗಗಳೊಂದಿಗೆ ಮಾರವ, ದೇಶಿ, ಭೈರವಿ, ಸಾವೇರಿ, ಪೂರ್ವಿಕಾಂಭೋಜಿ, ಪಾಡಿ, ಶಂಕರಾಭರಣ, ವರಾಳಿ, ಕಲ್ಯಾಣಿ,

ತೋಡಿ ಮುಖಾರಿ, ಯರಳಿ, ವಸಂತ, ಬೌಳಿ, ಧನಶ್ರೀ, ಸೌರಾಷ್ಟ್ರ, ಗುಂಡಕ್ರಿಯ, ರಾಮಕ್ರಿಯ, ಮೇಘ, ಕುರಂಜಿ ಎಂಬ ಇತರ ರಾಗಗಳ ಪ್ರಸ್ತಾಪವೂ ಇದೆ.

ಅಂತೂ ಐದಾರು ರಾಗಗಳನ್ನೂ ಬಿಟ್ಟು ಉಳಿದಂತೆ ಬತ್ತೀಸರಾಗಗಳಿಗೆ ಲೆಕ್ಕ ದೊರೆತಂತಾಯಿತು ಆದರೆ ಈ ರಾಗಗಳಲ್ಲಿ ಹಲವು ಈಗ ಬಳಕೆಯಲ್ಲೇ ಇಲ್ಲ, ಇನ್ನೂ ಕೆಲವು ರಾಗಗಳು ಈಗಿನ ಹೆಸರನ್ನೇ ತಳೆದಿದ್ದರೂ ಈಗಿನ ರಾಗಸ್ವರೂಪವೇ ಆಗಲೂ ಇದ್ದಿತು ಎಂಬ ನಿಶ್ಚಯವಿಲ್ಲ ಮೇಲಾಗಿ ಈಗ ಪರಿಚಿತವಾದ ರಾಗಗಳಲ್ಲೇ ದಾಸರ ಪದಗಳು ರಚಿತವಾಗಿದ್ದರೂ, ಆ ರಾಗಭಾವವೇ ಬೇರೆ, ಅದೇ ರಾಗಗಳಲ್ಲೇ ದಾಸರ ಪದಗಳು ರಚಿತವಾಗಿದ್ದರೂ, ಆ ರಾಗಭಾವವೇ ಬೇರೆ, ಅದೇ ರಾಗಗಳಲ್ಲಿ ಮುಂದೆ ತ್ಯಾಗರಾಜರೇ ಮೊದಲಾದವರ ರಚನೆಗಳ ರಾಗಭಾವವೇ ಬೇರೆ ಎಂಬುದನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ದಾಸರ ಪದಗಳಿಗೆ ರಾಗನಿರ್ದೇಶನ, ಸ್ವರಸಂಯೋಜನೆಗಳನ್ನು ಮಾಡುವವರು ಮುಗ್ಗರಿಸುವುದು ಇಲ್ಲಿಯೇ. ಬೇರೆ ಬೇರೆ ಸಂದರ್ಭಗಳಲ್ಲಿ ಒಂದೇ ರಾಗ ಹಲವು ಶೈಲಿಗಳಲ್ಲಿ ಒದಗಿ ಬರುತ್ತದೆ ಎನ್ನುವುದನ್ನು ಅವರು ಗಮನಿಸುವುದಿಲ್ಲ.

ಪುರಂದರದಾಸರ, ಅದಕ್ಕಿಂತ ಹೆಚ್ಚಾಗಿ ಕನಕದಾಸರ, ಹಾಡುಗಳಲ್ಲಿ ರಾಗಭಾವ ಇರುತ್ತದೆ. ಆದರೆ ಹಲವೊಂದು ವೇಳೆ ಇಂಥದೇ ರಾಗವೆಂದು ನಿರ್ಣಯವಾಗಿ ಹೇಳಲಾಗುವುದಿಲ್ಲ. ಯಾವೊಂದು ರಾಗದ ನೆರಳು ಕಂಡುಕೊಂಡರೂ, ಅದೇ ರಾಗದ ದಾರಿಯನ್ನು ಕಡೆಯವರೆಗೂ ಪದ ಹಿಡಿಯುತ್ತದೆ ಎಂಬ ನಂಬಿಕೆಯಿಲ್ಲ. ಹಾಡುವಾಗ ರಾಗಕ್ಕಿಂತ ಧಾಟಿ (ಮಟ್ಟು) ಮುಖ್ಯವಾಗುತ್ತದೆ. ರಾಗವಿದ್ದರೂ ಜಾನಪದ ಜಾಯಮಾನಕ್ಕೆ ಹೆಚ್ಚಾಗಿ ಒಗ್ಗುವ, ಬತ್ತೀಸರಾಗಗಳ ಎಣಿಕೆಗೆ ಸೇರುವ ರಾಗದ ಕಳೆಯೇ ಇರುತ್ತದೆ. ಅದರಲ್ಲಿ ಉದ್ದುದ್ದ ತಾನಗಳು, ತೀರ ನವುರಾದ ಗಮಕಗಳು, ಚಮತ್ಕಾರದ ದಾಟುಸ್ವರಗಳು ಇಂಥದೆಲ್ಲ ಇರುವುದಿಲ್ಲ.

೩

ಕನಕದಾಸರ ಪದಗಳನ್ನು ಹಾಡುವವರು ತೀರ ಕರ್ಮಠ ಸ್ವಭಾವದ, ಭಾವವಿರಕ್ತರಾದ ಸಂಗೀತವಿದ್ವಾಂಸರಾದರೆ ಪದಗಳ ಗೊತ್ತುಗುರಿಯೇ ಹಾರಿಹೋಗುವ ಸಂಭವವಿದೆ. ತ್ಯಾಗರಾಜರ ಕೀರ್ತನೆಗಳಲ್ಲಾದರೆ ಸಾಹಿತ್ಯದ ಭಾಗ ರಾಗಭಾವವನ್ನು ಹಿಂಬಾಲಿಸಿ ಬರುತ್ತದೆ ; ರಾಗನಿರೂಪಣೆಯೇ ಕೀರ್ತನೆಯ ಪ್ರಯೋಜನವೆಂದರೂ ತಡೆದೀತು. ಅಲ್ಲಿನ ಸಾಹಿತ್ಯವನ್ನು ಹಾಗೆಯೇ

ಓದಿದಾಗ ಭಾವ ಒದಗುವುದೇ ಇಲ್ಲ. ಆ ಮಾತುಗಳನ್ನು ಹಾಡಿದಾಗಲೇ ಭಾವ ಹೊರಹೊಮ್ಮುವುದು. ಆದರೆ ದಾಸರ ಪದಗಳನ್ನು ಹಾಡುವಾಗ ಪದಬಂಧದಲ್ಲೇ ಒಂದು ಭಾವ ಇದೆ ಎಂಬುದನ್ನು ಮರೆಯಬಾರದು. ಆ ಭಾವಕ್ಕೆ ಅನುಗುಣವಾಗಿಯೇ ರಾಗ ಇರಬೇಕು ಮತ್ತು ಭಾವವನ್ನು ಮರೆಮಾಚುವಂತೆ ರಾಗನಿರೂಪಣೆ ಇರಬಾರದು.

ಇಲ್ಲೊಂದು ತೊಡಕು. ರಾಗಕ್ಕೂ ಭಾವಕ್ಕೂ ಇರಬಹುದಾದ ನಂಟನ್ನು ಕುರಿತು ಎರಡು ಅಭಿಪ್ರಾಯಗಳಿವೆ. ಪ್ರತಿಯೊಂದು ರಾಗಕ್ಕೂ ಅದಕ್ಕೆ ವಿಶಿಷ್ಟವಾದ ಭಾವವೊಂದು ಇರುತ್ತದೆ ಎನ್ನುವುದೊಂದು ಅಭಿಪ್ರಾಯ. ಯಾವ ರಾಗದಿಂದ ಯಾವ ಭಾವವನ್ನಾದರೂ ಹೊರಡಿಸಬಹುದು ಎಂದು ಇನ್ನೊಂದು ಅಭಿಪ್ರಾಯ. ಎರಡೂ ಅಭಿಪ್ರಾಯಗಳು ಕೊಂಚ ಮಟ್ಟಿಗೆ ಸರಿಯೆ. ರಾಗಕ್ಕೊಂದು ಭಾವ ಎಂದಿರದಿದ್ದರೆ ಹೇಗೆ ? ಆದರೆ ಈ ರಾಗಕ್ಕೆ ಇದೇ ಭಾವ, ಈ ಭಾವದ ಅಭಿವ್ಯಕ್ತಿಗೆ ಇದೇ ರಾಗ ಎಂಬ ನಿರ್ಣಯವಿರಲು ಸಾಧ್ಯವಿಲ್ಲ. ಶ್ರುತಿಭೇದ, ಸ್ವರಸಂಚಾರ ವೈವಿಧ್ಯ ಮೊದಲಾದ ಸಾಧನಗಳಿಂದ ಯಾವೊಂದು ರಾಗದಿಂದ ಹಲವು ಭಾವಗಳನ್ನು ಹೊರಹೊಮ್ಮಿಸುವುದು ಸಾಧ್ಯ. ಆದರೆ ಹಾಗೆ ಹೊರಹೊಮ್ಮುವ ಭಾವಗಳೆಲ್ಲ ಸಂವಾದಿಭಾವಗಳಷ್ಟೆ. ತೋಡರಾಗ ಶೋಕಕ್ಕೂ ಆಗಬಹುದು, ಶೃಂಗಾರಕ್ಕೂ ಆಗಬಹುದು, ಆದರೆ ಶೃಂಗಾರದಲ್ಲಿ ವಿಪ್ರಲಂಭವಾದೀತು ಅಷ್ಟೆ. ಶೋಕ ಅದರಲ್ಲಿ ಹೇಗೂ ನುಸುಳಿಕೊಂಡು ಬರಬಹುದಲ್ಲ ?

ರಾಗದ ಭಾವವನ್ನು ನಿರೂಪಿಸುವಲ್ಲಿ ಪಡೆದ ಸಾಹಿತ್ಯದಲ್ಲಿ ಅಡಗಿರುವ ಭಾವ ನೆರವಾಗುತ್ತದೆ. ಮಾತಿಗಿರುವ ಭಾವ ಸೌಕರ್ಯ ಬರಿಯ ಸ್ವರಗಳಿಗಾಗಲಿ, ಸ್ವರಗಳಿಂದ ಆದ ರಾಗಕ್ಕಾಗಲಿ ಹೇಗೆ ಬಂದೀತು ? ಮಾತಿನ ಹಂದರದ ಮೇಲೆ ಸ್ವರಸಂಚಾರಗಳು ಹರಡಿಕೊಂಡಾಗಲೇ ಭಾವ ಗರಿಕೆದರಿ ಮೂಡುವುದು, ಮಾತಿಗೊಂದು ಅರ್ಥ ಎನ್ನುವುದು ಹೇಗೆ ಸಹಜವೋ. ಅರ್ಥಕ್ಕೊಂದು ಭಾವ ಎನ್ನುವುದೂ ಹಾಗೆಯೇ ಸಹಜ. ಅಷ್ಟೇ ಸಹಜವಾಗಿ ಭಾವಕ್ಕೆ ರಾಗ ಹೊಂದಿಕೊಳ್ಳಬೇಕು. ರಾಗದ ಸ್ವರಸಂಚಾರಕ್ರಮ ಸಾಹಿತ್ಯದ ಭಾವಪೋಷಣೆ ಮಾಡುವಂತಿರಬೇಕು, ಈ ಸ್ವಾರಸ್ಯವನ್ನು ಅರಿಯದವರು ದಾಸರ ಪದಗಳನ್ನು ಪರಿಣಾಮಕಾರಿಯಾಗಿ ಹಾಡಲಾರರು.

ಇನ್ನೊಂದು ವಿಚಾರವನ್ನೂ ಮನಸ್ಸಿಗೆ ತಂದುಕೊಳ್ಳಬೇಕು. ಒಬ್ಬ ದಾಸರ ಎಲ್ಲ ಪದಗಳನ್ನೂ ಒಂದೇ ಬಗೆಯಾಗಿ ಹಾಡುವುದು ಹೇಗೆ ಸಾಧ್ಯವಿಲ್ಲವೋ,

ಎಲ್ಲ ದಾಸರ ಪದಗಳನ್ನೂ ಒಂದೇ ಬಗೆಯಾಗಿ ಹಾಡುವುದೂ ಸಾಧ್ಯವಿಲ್ಲ. ಪುರಂದರದಾಸರ ಪದಗಳಲ್ಲಿರುವ ರಾಗದ ಬಿಗಿ ಕನಕದಾಸರ ಪದಗಳಲ್ಲಿ ಇರುವುದಿಲ್ಲ ; ಕನಕದಾಸರ ಪದಗಳಲ್ಲಿ ಭಾವಬಂಧುರತೆ ಹೆಚ್ಚಿನದು. ವ್ಯಾಸತೀರ್ಥರ ಪದಗಳಲ್ಲಿರುವ ಅರ್ಥಗೌರವ, ಭಾವಗಾಂಭೀರ್ಯ ಪುರಂದರದಾಸರ ಪದಗಳಲ್ಲಾಗಲಿ ಕನಕದಾಸರ ಪದಗಳಲ್ಲಾಗಲಿ ಕಾಣಸಿಗುವುದಿಲ್ಲ. ಮುಂದೆ ಬಂದು ದಾಸರು ರಾಗಕ್ಕಾಗಲಿ ಭಾವಕ್ಕಾಗಲಿ ಅಷ್ಟಾಗಿ ಗಮನ ಕೊಡದೆ ಪಾಂಡಿತ್ಯಕ್ಕೆ, ಉಪದೇಶಕ್ಕೆ, ಮತಪ್ರಕ್ರಿಯೆಗೆ ಒಲಿದವರು. ಅವರ ಪದಗಳು ಗೇಯಪದ್ಧತಿಯನ್ನು ಬಿಟ್ಟು ವಾಚನಪದ್ಧತಿಗೆ ಜಾರುವಂಥವು.

ಮೊದಲೇ ಹೇಳಿದಂತೆ ಪುರಂದರದಾಸರು ಕನಕದಾಸರಂತೆ ಕಾವ್ಯದ ಪದ್ಧತಿಯಲ್ಲಿ ರಚನೆಗಳನ್ನೇನು ಮಾಡಲಿಲ್ಲ. ಅವರು ರಚಿಸಿದ ಪದಗಳಲ್ಲಿ ಕೆಲವೊಮ್ಮೆ ಕಾವ್ಯದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ ಅನ್ನುವುದು ದಿಟ. ಆದರೆ ಕಾವ್ಯದ ಉದ್ದೇಶವಿಲ್ಲ. ಮತ್ತೆ ಅವರ ಪದಗಳೆಲ್ಲವೂ ರಾಗಬದ್ಧವಾಗಿ, ರಾಗಶುದ್ಧವಾಗಿ ಹಾಡುವುದಕ್ಕೆಂದೇ ಸಿದ್ಧವಾದವೂ ಅಲ್ಲ. ಹಲವು ಪದಗಳಲ್ಲಿ ರಾಗವಿರದೇ ಬರಿಯ ಧಾಟಿಯನ್ನೇ ಹಿಡಿದು ಹಾಡಬೇಕಾಗುತ್ತದೆ. ನಿದರ್ಶನಕ್ಕೆ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎನ್ನುವುದರ ಹಳೆಯ ನಿರ್ದೇಶನ 'ಲಾವಣಿಚಾಲ್' ಎಂದರೆ ಲಾವಣಿಯಂತೆ ಹಾಡಬೇಕು. ಆದರೆ ಕನಕದಾಸರು ಛಂದೋರೂಪದ ಕೃತಿಗಳನ್ನೇ ಬೇರೆಯಾಗಿ ರಚಿಸಿದರು. ಅವರು ಬಿಡಿಯಾಗಿ ಪ್ರಾಸಂಗಿಕವಾಗಿ, ಸಮಯಸ್ಫೂರ್ತಿಯಿಂದ ರಚಿಸಿದ ಪದಗಳು ಹಾಡುವುದಕ್ಕೆಂದೇ, ಸಿದ್ಧವಾದುವು, ಆ ಪದಗಳ ಸ್ವಾರಸ್ಯ ಮನದಟ್ಟಾಗುವುದು ಅವನ್ನು ಹಾಡಿದಾಗಲೇ.

೪

ಕನಕದಾಸರಾಗಲಿ ಪುರಂದರದಾಸರಾಗಲಿ ಇದ್ದ ಕಾಲದಲ್ಲಿ ಸಂಗೀತವೆಂಬ ಮಾತಿಗೆ ಈಗಿರುವಂತೆ ಸಂಕುಚಿತವಾದ ಅರ್ಥ ಇರಲಿಲ್ಲ. ಈಗ ಸಂಗೀತವೆಂದರೆ ಗಾಯನ, ಹಾಡಿಕೆ ; ಒಂದು ಹೆಜ್ಜೆ ಮುಂದೆ ಹೋಗಿ ಹಾಡಿಕೆಯೊಂದಿಗೆ ಸೇರಿಕೊಂಡು ಬರುವ ವಾದ್ಯವನ್ನೂ ಸಂಗೀತದ ವ್ಯಾಪ್ತಿಯಲ್ಲೇ ಸೇರಿಸುತ್ತಾರೆ. ಆದರೆ ಹಳೆಯ ಶಾಸ್ತ್ರಗ್ರಂಥಗಳಲ್ಲಿ 'ಗೀತಂ ವಾದ್ಯಂತಥಾ ನೃತ್ಯತ್ರಯಂ ಸಂಗೀತಮುಚ್ಯತೇ' ಎನ್ನುವ ನಿರ್ದೇಶನವಿದೆಯಷ್ಟೇ? ಹಾಡಿಕೆ, ವಾದ್ಯ, ಕುಣಿತ ಮೂರೂ ಕೂಡಿ ಸಂಗೀತವೆನಿಸಿಕೊಂಡ ಕಾಲವೊಂದು ಇದ್ದಿತು. ಈಗ ಕುಣಿತ ಸಂಗೀತಕ್ಕೆ ಹೊರತಾದುದು. ಕುಣಿತದಲ್ಲೇನೋ ಸಂಗೀತ

ಸೇರುತ್ತದೆ; ಸಂಗೀತದಲ್ಲಿ ಕುಣಿತ ಸೇರುವುದಿಲ್ಲ. ಹರಿದಾಸರ ಕಾಲದಲ್ಲಿ ಮೂರೂ ಸೇರಿಕೊಂಡಿದ್ದಿತು.

ಕನಕದಾಸರ 'ಹ್ಯಾಂಗೆ ನೀ ದಾಸನಾದಿ, ಪ್ರಾಣಿ' ಎನ್ನುವ ಪದದಲ್ಲಿ ಬರುವ ದಾಸರ ಕುಣಿತದ ವರ್ಣನೆ ನೋಡಿ :

'ಕಾಲುಗೆಜ್ಜೆಯ ಕಟ್ಟಿ, ಮೇಲೆ ಕರತಾಳ ಪಿಡಿದು
ಶ್ರೀಲೋಲನ ಗುಣ ಪೊಗಳಿ ನಟಿಸದೆಲೆ ॥ಹ್ಯಾಂಗೆ॥
ಕುಣಿದು ಹರೆಯ ಮುಂದೆ ಮಣಿದು ಸಜ್ಜನಪದಕೆ
ಅಣಿಮಾದ್ಯಷ್ಟಸಿದ್ಧಿ ಕೈಗೊಳ್ಳದವನಾಗಿ ॥ಹ್ಯಾಂಗೆ॥

ಆಗಿನ ಸಂಗೀತನಿರೂಪಣೆಯ ಸ್ಥಳ, ಕ್ರಮ, ಸಂದರ್ಭ, ಉದ್ದೇಶ ಎಲ್ಲವೂ ಈಗಿಗಿಂತ ಬೇರೆಯೇ. ದಾಸರು ಕೇರಿಗಳಲ್ಲಿ, ಮನೆಮನೆಗಳ ಮುಂದೆ, ದಾರಿಯಲ್ಲಿ ತಿರುಗಾಡುತ್ತ, ಊಂಛವೃತ್ತಿಯ ಸಲುವಾಗಿ ಹಾಡುತ್ತಿದ್ದರು; ಹಾಡುವಾಗ ಕಾಲಿಗೆ ಗೆಜ್ಜೆ, ಕುಣಿತಕ್ಕೆ ನೆರವಾಗಿ ಕೈಯಲ್ಲಿ ತಂಬೂರಿ, ಚಿಟಿಗೆ; ವಾದ್ಯವಾಗಿ. ಹಾಡುತ್ತ, ಕುಣಿಯುತ್ತ, ನಡೆಯುತ್ತಿದ್ದರು. ಹರಿದಾಸರ ಈ ಚಿತ್ರ ಸಾಂಪ್ರದಾಯಿಕವಾದುದೂ ಹೌದಷ್ಟೆ.

ಆಗ ಕುಣಿತವೆಂದರೆ ಈಗಿನ ಭರತನಾಟ್ಯದಂತೆ ಎಂದು ಭ್ರಮಿಸಬಾರದು. ಈಗಿನ ನೃತ್ಯಪದ್ಧತಿಗೆ ಈಗಿನ ಸಂಗೀತದಷ್ಟೂ ಹಳಮೆಯಿಲ್ಲ, ಶಾಸ್ತ್ರಾಧಾರವಿಲ್ಲ. ಪ್ರಚುರ ಪ್ರಯೋಗವಿಲ್ಲ. ಅದಿರಲಿ. ನೃತ್ಯವೆಂದರೆ ಭಾವಪ್ರಧಾನವಾದ ಅಭಿನಯ. ಅದಕ್ಕೆ ತಕ್ಕಷ್ಟು ತಾಳ, ಲಯ, ಇದೂ ಜಾನಪದಪ್ರಕಾರದ್ದೇ ; ಎಂದರೆ ರಾಗಭಾವದಂತೆಯೇ ಸ್ವಾತಂತ್ರ್ಯವಿದ್ದಿತು, ಕಟ್ಟುಪಾಡುಗಳಿರಲಿಲ್ಲ. ಪುರಂದರದಾಸರ ಪದಗಳಲ್ಲಿ ಕೆಲವು ನೃತ್ಯ ಪ್ರಧಾನವಾಗಿಯೇ ಇವೆಯಷ್ಟೆ ? ('ಹರಿ ಕುಣಿದ' 'ಕುಣಿದಾಡೋ ಕೃಷ್ಣ' 'ಆಡಿದನೋ ರಂಗ ಅದ್ಭುತದಿಂದಲಿ' 'ಆಡಿದ ರಂಗನಾಡಿದ ರೂಢಿಯೊಳಗೆ ಮಕ್ಕಳಂತೆ' 'ಆನಂದಸುಳಾದಿ' ಇತ್ಯಾದಿ) ಹಾಗೆಯೇ ಕನಕದಾಸರ ಪದಗಳಲ್ಲೂ ಕೆಲವು ನೃತ್ಯಪ್ರಧಾನವಾಗಿವೆ– 'ಊರಿಗೆ ಬಂದರೆ ದಾಸಯ್ಯ ಕೇರಿಗೆ ಬಾ ಕಂಡ್ಯ ದಾಸಯ್ಯ', 'ಬೊಂಬೆಯಾಟವನಾಡಿಸಿದ', 'ಎಳ್ಳುಕಾಳಿನಷ್ಟು ಭಕುತಿಯನ್ನೊಳಿಲ್ಲ' ಮುಂತಾದವು. ಇಲ್ಲಿ ನೃತ್ಯಪ್ರಧಾನವೆಂದರೆ ಹೆಜ್ಜೆಯ ಗತಿ, ಅದಕ್ಕಿಂತ ಹೆಚ್ಚಾಗಿ ಅಭಿನಯ.

ಹರಿದಾಸರಲ್ಲಿ ಆದ್ಯರಾದ ಶ್ರೀಪಾದರಾಜರು ತಮ್ಮ ಚಿಕ್ಕಂದಿನಲ್ಲಿ ಶ್ರೀರಂಗದಲ್ಲಿರುತ್ತ ಅಲ್ಲಿನ ಗುಡಿಯಲ್ಲಿ ಅರೈಯಾರರೆಂಬ ಗಾಯಕರು ತಂಬೂರಿಹಿಡಿದು, ಕಾಲಿಗೆ ಗೆಜ್ಜೆ ಕಟ್ಟಿ, ತಮಿಳು ಪಾಶುರಗಳನ್ನು ಹಾಡುತ್ತ,

ಅಲ್ಲಿನ ಭಾವಗಳನ್ನು ಅಭಿನಯ ತೋರಿಸುತ್ತ ಕುಣಿಯುತ್ತಿದ್ದುದನ್ನು ಕಂಡಿದ್ದರು. ಹಾಡಿಕೆ, ಕುಣಿತ, ವಾದಯ ಮೂರೂ ಕೂಡಿದ್ದ ಈ ಪದ್ಧತಿ ನಮ್ಮ ನಾಡಿಗೂ ಬಂದಿತು. ಹರಿದಾಸರ ಪದಗಳಲ್ಲಿರುವ ಪದಬಂಧ ಲಯಕ್ಕೂ ಅಭಿನಯಕ್ಕೂ ಒಗ್ಗುವಂತಿದ್ದು ಹಾಡಿಗೆ ತಾಳದ ಕಟ್ಟುಪಾಡು ಕೂಡಿಕೊಂಡು ಅಭಿನಯಕ್ಕೂ ಕುಣಿತಕ್ಕೂ ವಾದ್ಯಕ್ಕೂ ನೆರವಾಗುತ್ತದೆ.

ನಿದರ್ಶನಕ್ಕೆ ಸರಳವಾದ ಸ್ವರಸಂಚಾರಗಳೂ ಸರಳವಾದ ಲಯವೂ; ಅಭಿನಯಕ್ಕೆ ತಕ್ಕಂಥ ಭಾವವೂ ಉಳ್ಳ ಕನಕದಾಸರ

'ಈಶ ನಿನ್ನ ಚರಣ ಸೇವೆ
ಆಶೆಯಿಂದ ಮಾಡುವೇನು
ದೋಷರಾಶಿ ನಾಶಮಾಡೊ
ಶ್ರೀಶ ಕೇಶವ'

ಎಂದು ಮೊದಲಾಗುವ ಪದವನ್ನು ನೋಡಿ. ವಿಶ್ರಾಮಸ್ಥಾನದಲ್ಲಿ ರಾಗವನ್ನು ಎತ್ತಿ ತೋರಿಸಲೂ ಸಾಧ್ಯವಾಗುತ್ತದೆ. ಮತ್ತೆ

'ಈತನೀಗ ವಾಸುದೇವನು
ಲೋಕದೊಡೆಯ ದಾಸಗೊಲಿದು
ತೇರನೇರಿ ತೇಜಿ ಪಿಡಿದು ನಡಸಿದಾತ ।'

ಎಂಬ ಪದದ ಮಾತುಗಳಿಗೆ ಹೆಜ್ಜೆ ಹಾಕಲು ಎಷ್ಟು ಚೆನ್ನಾಗಿ ಬರುತ್ತದೆ. ಲಯುದ ಬಿಕ್ಕಟ್ಟು, ಗತಿಭೇದ ಕೆಲವೊಮ್ಮೆ ವಾದ್ಯಕ್ಕೆ ವಿಶೇಷವಾಗಿ ಹೊಂದಿಕೊಳ್ಳುತ್ತವೆ. ಅವರದ್ದೇ ಇನ್ನೊಂದು ಪದ–

'ಕಂಡೆ ನಾ ತಂಡತಂಡದ ಹಿಂಡು ದೈವ ಪ್ರಚಂಡ ರಿಪು–
ಗಂಡ ಉದ್ದಂಡ ನರಸಿಂಹನ ಕಂಡೆನಯ್ಯಾ' !

ಈ ಮಾತುಗಳಿಗೆ ಜೊತೆಯಾಗಿ ಮದ್ದಳೆ, ಚಂಡೆ, ಹಳಗ ಮೊದಲಾದ ಹಳೆಯ ವಾದ್ಯಗಳಿದ್ದರೆ ಸೊಗಸು. ಮೃದಂಗದಂಥ ಪರಿಷ್ಕೃತ, ಸಭ್ಯವಾದ್ಯ ಅಷ್ಟು ಪರಿಣಾಮಕಾರಿಯಾಗಲಾರದೇನೊ ।

ಡೊಳ್ಳು ಕನಕದಾಸರ ಕಾಲದಲ್ಲಿ ಹೆಚ್ಚು ಬಳಕೆಯಲ್ಲಿದ್ದ ವಾದ್ಯವೇ ; ಕನಕದಾಸರು ಕುರುಬರಾದರೆ, ಅವರ ದೇವರು ಬೀರೇ ದೇವರಾದರೆ ಡೊಳ್ಳು ಅವರಿಗೆ ಪ್ರಿಯವಾದ ವಾದ್ಯವೇ ಇರಬೇಕು. ಏಕೆಂದರೆ ಡೊಳ್ಳಿಗೆ ಹೇಳಿಟ್ಟಿದ್ದು ಬೀರೇದೇವರ ಹಾಡುಗಳು. ಡೊಳ್ಳಿನ ಕುಣಿತವೂ ಹಳೆಯದೇ. ಹಾಡಿಕೆ, ವಾದ್ಯ, ಕುಣಿತ ಮೂರೂ ಇಲ್ಲಿ ಕೂಡಿಕೊಳ್ಳುತ್ತವೆ. ಕನಕದಾಸರು 'ದೇವಿ ನಮ್ಮ ದ್ಯಾವರು

ಬಂದಾರು, ಬನ್ನೀರೆ, ನೋಡಬನ್ನೀರೆ' ಎಂಬ ಪದ ಸ್ವಾರಸ್ಯವಾದದ್ದು. ತ್ರಿಪದಿಯನ್ನು ಚತುಷ್ಪದಿಯಾಗಿ ಮಾರ್ಪಡಿಸಿಕೊಂಡು, ಡೊಳ್ಳಿನ ಕುಣಿತಕ್ಕೆ ಅಳವಡಿಸಿದ್ದಾರೆ. ದಶಾವತಾರವೈಭವವನ್ನು ಹಾಡುವ ಈ ಪದದ ಕಡೆಯ ಸೊಲ್ಲಿನಲ್ಲಿ ಸಂಗೀತವೆಂದರೆ ಹಾಡಿಕೆ, ವಾದ್ಯ ಕುಣಿತ ಮೂರೂ ಕೂಡುವುದನ್ನು ಕಾಣುತ್ತೇವೆ–

'ಡೊಳ್ಳಿನ ಮೇಲ್ ಕೈಯ ಬರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಟಾನ್ ಮ್ಯಾ ।
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ ಮ್ಯಾ ।'

ಕುಣಿತದ ಪಾತ್ರವಿರದ ಪದಗಳಲ್ಲೂ ಅಭಿನಯವಂತೂ ಇದ್ದೇ ಇರುತ್ತದೆ. ನೃತ್ಯಕ್ಕೆ ಪ್ರಧಾನವಾದುದು ಅಭಿನಯ ತಾನೆ ? 'ಕೇಶವನೊಲುಮೆಯು ಆಗುವ ತನಕ । ಹರಿದಾಸರೊಳಿರುತಿರು ಹೇ ಮನುಜ', 'ತನು ನಿನ್ನದು, ಜೀವನ ನಿನ್ನದು ರಂಗ, ಅನು ದಿನದಲ್ಲಿ ಬಾಹೊ ಸುಖದುಃಖ ನಿನ್ನದಯ್ಯ', 'ತಲ್ಲಣಿಸದಿರು ತಾಳು ಕಂಡ್ಯ ಮನವೆ, ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ' ಈ ಮೊದಲಾದ ಪದಗಳನ್ನು ಹಾಡುವಾಗ ಅಭಿನಯ ಮಾಡದಿದ್ದರೆ ಸೊಗಸುವುದಿಲ್ಲ. ಹೀಗೆಯೇ 'ಏನೆಂದಳೇನೆಂದಳೋ, ನಿನ್ನೊಳು ಸೀತೆ ಹನುಮಯ್ಯ', 'ಬಾಗಿಲನು ತೆಗೆದು ಸೇವೆಯನು ಕೊಡು, ಹರಿಯೆ', 'ತೊರೆದು ಜೀವಿಸಬಹುದೆ, ಹರಿ, ನಿನ್ನ ಚರಣ' ಮುಂತಾದ ಪದಗಳಲ್ಲಿ ರಾಗಭಾವವೂ ಅಭಿನಯ ಸಾಮಗ್ರಿಯೂ ಸೊಗಸಾಗಿ ಸೇರಿಬರುತ್ತವೆ.

ಕನಕದಾಸರ ಪದಗಳನ್ನು ಹಾಡುವಾಗ, ಪುರಂದರದಾಸರೆಂದಂತೆ, 'ತಿಳಿದು ಪಾಡಲಿಬೇಕು'. ಅವರ ಪದಗಳಲ್ಲಿ ಮಾತಿನ ಸೊಗಸು, ಲಯದ ಬಿಗಿ, ರಾಗದ ಸ್ವಾರಸ್ಯ, ಅಭಿನಯದ ಸೌಕರ್ಯ ಎಲ್ಲವೂ ಇವೆ. ಇವುಗಳಲ್ಲಿ ಯಾವುದೊಂದನ್ನು ಕೈಬಿಟ್ಟರೂ ಒಟ್ಟಾರೆ ಅಂದ ಕೆಡುತ್ತದೆ. ಅವರು ತಮ್ಮ ಮೋಹನ ತರಂಗಿಣಿ ಸಾಂಗತ್ಯವನ್ನು ಕುರಿತು ಹೇಳಿಕೊಂಡಿರುವ ಹೆಗ್ಗಳಿಕೆ ಅವರ ಪದಗಳಿಗೂ ಧಾರಾಳವಾಗಿ ಅನ್ವಯಿಸುತ್ತದೆ.

'ಹರಿಶರಣರಪೆಚ್ಚು ಬುಧಜನರಿಗೆ ಮೆಚ್ಚು
ದುರಿತವನಕೆ ಕಾಳ್ಕಿಚ್ಚು ವಿರಹಿಗಳಿಗೆದೆ ಗಿಚ್ಚು
ವೀರರ್ಗೆಪುಚ್ಚು ಕೇಳ್ವರಿಗಿದು ತನಿಬೆಲ್ಲದಚ್ಚು ।'

# ಸಂಗೀತ ಮತ್ತು ಕನಕದಾಸರು

**ಬಿ. ಎ. ಕೆ. ಶಾಸ್ತ್ರಿ**

ಐವತ್ತು–ಅರವತ್ತು ವರುಷಗಳ ಹಿಂದೆ ಪ್ರೈಮರಿ ಶಾಲೆಗಳಲ್ಲಿ ಪ್ರತಿ ದಿನವೂ ತರಗತಿಗಳು ಪ್ರಾರಂಭವಾಗುವ ಮುನ್ನ ನಡೆಯುತ್ತಿದ್ದ ಪ್ರಾರ್ಥನೆಯಲ್ಲಿ ನಮಗೆ ಉತ್ಸಾಹ ಕೊಡುತ್ತಿದ್ದ ಒಂದು ಹಾಡು–'ಈಶ ನಿನ್ನ ಚರಣ ಭಜನೆ' ಎಂದು ಪ್ರಾರಂಭವಾಗುತ್ತಿತ್ತು. ನಮ್ಮ ಉತ್ಸಾಹಕ್ಕೆ ಕಾರಣವಾಗಿದ್ದುದು ಅದರ ನಡೆ. ತ್ರಿಶ್ರದಲ್ಲಿದೆ. "ಮಾರ್ಚಿಂಗ್ ಟ್ಯೂನ್" ರೀತಿ ನಮಗೆ ಅನುಭವವಾಗುತ್ತಿತ್ತು. ಇದರ ಜೊತೆಗೆ ಕೊನೆಯ ಸಾಲಿನಲ್ಲಿ–'ಶ್ರೀಶಕೇಶವಾ ಅಥವಾ ಬಿಡಿಸು ಮಾಧವ' ಎಂಬ ಕಡೆಯ ಭಾಗವನ್ನು ಒಕ್ಕೊರಲಿನಿಂದ ಒತ್ತಿ ಒಗೆಯುವಂತೆ ಹಾಡುತ್ತಿದ್ದೆವು. ಆ ರೀತಿಹಾಡುವುದು ನಮಗೆ ಒಂದು ಖುಷಿ. ಮುಂದೆ ಮಿಡ್ಲ್ ಸ್ಕೂಲ್ ಸೇರಿದ ಮೇಲೆ ಪ್ರಾರ್ಥನೆಯಲ್ಲಿ ಇನ್ನೊಂದು ಹಾಡು– 'ದೀನ ನಾನು ಸಮಸ್ತ ಲೋಕಕೆ ದಾನಿ ನೀನು...' ಇತ್ಯಾದಿ. ಇಲ್ಲಿ ಕೊನೆಯ ಸಾಲಿನ 'ರಕ್ಷಿಸು ನಮ್ಮನನವರತ' ಬಂದಾಗ ಹಾಡುತ್ತಿದ್ದವರೂ ಹಾಡದಿದ್ದವರೂ ಎಲ್ಲರೂ ಸೇರಿಕೊಂಡು ಒಟ್ಟಿಗೆ ಸೇರಿ ಸೂರು ಅಲ್ಲಾಡುವ ಹಾಗೆ 'ರಕ್ಷಿಸು ನಮ್ಮನನವರತ' ಎಂದು ಕೂಗುತ್ತಿದ್ದುದು ನಮಗೇ ಒಂದು ಸಂತೋಷ. ಹುರುಪು.

ಇದೇ ಕಾಲದಲ್ಲಿ ನಮ್ಮ ಉಪಾಧ್ಯಾಯರೊಬ್ಬರ ಮನೆಯಲ್ಲಿ ಪ್ರತಿ ಶನಿವಾರ ಭಜನೆ. ಅವರ ವಿದ್ಯಾರ್ಥಿಗಳಾದ ನಾವು ಕೆಲವರು ಅದರಲ್ಲಿ ಪಾಲುಗೊಳ್ಳುತ್ತಿದ್ದು ಹಾಡುತ್ತಿದ್ದ ಕೀರ್ತನೆಗಳಲ್ಲಿ ಒಂದು–'ಕೇಶವನೊಲುಮೆಯು ಆಗುವ ತನಕ,' ಒಟ್ಟಿಗೆ ಮಂತ್ರ ಹೇಳುವ ರೀತಿಯಲ್ಲಿ ಆದರೆ ಒಂದು ಲಯವನ್ನು ಅನುಸರಿಸಿ ಹಾಡುತ್ತಿದ್ದೆವು. ಅದರಲ್ಲಿ ಕೆಲವು ಸಾಲುಗಳನ್ನು ಹಾಡುವಾಗ ಸ್ವಲ್ಪ ಹುರುಪು ಹೆಚ್ಚುತ್ತಿತ್ತು ಮತ್ತು ಆ ಸಾಲುಗಳು ಇಷ್ಟು ವರುಷಗಳಾದರೂ ನೆನಪಿನಲ್ಲಿವೆ. ನಿದರ್ಶನವಾಗಿ–

ನ್ಯಾಯವ ಬಿಟ್ಟನ್ಯಾಯವ ಪೇಳುವ
ನಾಯಿಗೆ ನರಕವು ತಪ್ಪೀತೆ
ತಾಯಿ ತಂದೆಗಳ ಬಲು ನೋಯಿಸಿದ

ನ್ಯಾಯಿಗೆ ಮುಕುತಿಯು ದೊರಕೀತೆ ಹೀಗೆ ಇನ್ನೂ ಅನೇಕ ಸಾಲುಗಳು ಆಗಾಗ ನೆನಪಿಗೆ ಬರುತ್ತವೆ.

ಇದರಂತೆ ನಮ್ಮ ಎದುರು ಮನೆಯಲ್ಲಿದ್ದ ವಯಸ್ಸಾದ ಹೆಂಗಸರು ಬೆಳಗಿನ ಜಾವದಲ್ಲಿಯೇ ಮನೆಯ ಮುಂದೆ ಸಾರಿಸಿ ಗುಡಿಸಿ ರಂಗೋಲೆ ಹಾಕುತ್ತಾ ಹಾಡುತ್ತಿದ್ದ ಗಜೇಂದ್ರ ಮೋಕ್ಷ, ಶ್ರಾವಣ ಶನಿವಾರಗಳಲ್ಲಿ ಊರಿನ ನಾನಾ ಭಾಗಗಳಿಂದ ಬಂದು ಊರು ಪ್ರದಕ್ಷಿಣೆ ಮಾಡುತ್ತಿದ್ದ ಭಜನೆ ತಂಡಗಳು ಹಾಡಿಕೊಂಡು ಹೋಗುತ್ತಿದ್ದ– 'ನೀ ಮಾಯಯೊಳಗೊ ನಿನ್ನೊಳು ಮಾಯೆಯೋ', ಅಥವಾ 'ತನು ನಿನ್ನದು ಜೀವನ ನಿನ್ನದು' ಮುಂತಾದ ಹಾಡುಗಳು, ಅವುಗಳನ್ನು ಹಾಡುತ್ತಿದ್ದ ವೈಖರಿ ಮುಂತಾದುವು ಇಂದಿಗೂ ಮನಸ್ಸಿನಿಂದ ಮಾಸಿಹೋಗಿಲ್ಲ.

ಈ ಹಾಡುಗಳನ್ನು ಯಾರು ರಚಿಸಿದರು ಎಂಬ ಸಂಗತಿ ಗೊತ್ತಿರಲಿಲ್ಲ. ಅವುಗಳ ರಾಗ ತಾಳಗಳೂ ಯಾವುವು ಎಂಬುದೂ ಅಂದು ತಿಳಿದಿರಲಿಲ್ಲ. ಅವುಗಳ ಮಟ್ಟುಗಳು ಕಿವಿಗೆ ಇಂಪಾಗಿದ್ದವು. ಹಿಡಿದು ಹಾಡಲು ಸುಲಭವಾಗಿದ್ದುವು. ಹಾಡಿನಲ್ಲಿದ್ದ ವಿಷಯಗಳೂ ಮತ್ತು ಹಾಡುವ ವಿಧಾನ ಎರಡೂ ಸ್ಫುರಿಸುವಂತಿದ್ದುವು. ಜೊತೆಗೆ ಅಂದಿನ ವಾತಾವರಣಕ್ಕೆ ಅನುಸಾರವಾಗಿ ಈ ಹಾಡುಗಳನ್ನು ಭಕ್ತಿಯಿಂದ ಹಾಡಿನಲ್ಲಿ ಭಗವಂತನ ದಯೆ ನಮಗೆ ಲಭಿಸುತ್ತದೆ, ಒಳ್ಳೆಯದಾಗುತ್ತದೆ ಮತ್ತು ನಮ್ಮ ಆಸೆಗಳೆಲ್ಲ ಕೈಗೂಡುತ್ತವೆ ಎಂಬ ದೃಢವಾದ ನಂಬಿಕೆ. ಆದುದರಿಂದ ಮನಸ್ಸಿಟ್ಟು ಹಾಡುತ್ತಿದ್ದುದರ ಫಲವಾಗಿ ಹಾಡುಗಳೂ ಮನಸ್ಸಿನಲ್ಲಿ ನೆಲೆಸಿದುದು ಸಹಜ.

ಈ ಹಾಡುಗಳನ್ನು ರಚಿಸದವರು ಕನಕದಾಸರು ಎಂದು ಹಿರಿಯರು ಹೇಳುತ್ತಿದ್ದುದನ್ನು ಕೇಳಿದ್ದೆವು. ಆದರೆ ಕನಕದಾಸರು ಯಾರು ಏನು ಎಂಬ ವಿವರಗಳನ್ನು ತಿಳಿಯುವ ಕುತೂಹಲ ಉಂಟಾದುದೂ, ತಿಳಿದುಕೊಂಡುದೂ ಬಹಳ ವರುಷಗಳ ಅನಂತರ. ಅಲ್ಲಿಯವರೆಗೂ ಅವರೂ ಪುರಂದರದಾಸರಂತೆ ಒಬ್ಬ ಭಕ್ತಶ್ರೇಷ್ಠರು ಎಂಬ ಸಂಗತಿ ಮಾತ್ರ ತಿಳಿದಿದ್ದಿತು. ಏಕೆಂದರೆ ಈ ಭಜನಗೋಷ್ಠಿಗಳಲ್ಲಿ ಕೇಳಿ ಬರುತ್ತಿದ್ದುದು ಪುರಂದರದಾಸ ಮತ್ತು ಕನಕದಾಸರ ಕೀರ್ತನೆಗಳೇ. ಇತರ ಅನೇಕ ಹರಿದಾಸರು ಆಗಿಹೋಗಿದಾರೆ ನಿಜ. ಅವರಲ್ಲಿ ಕೆಲವರು ರಚಿಸಿದ ಕೀರ್ತನೆಗಳು ಈ ಗೋಷ್ಠಿಗಳಲ್ಲಿ ಹಾಡಲಾಗುತ್ತಿರಬಹುದು. ಆದರೆ ಹಾಡುತ್ತಿದ್ದ ಈ ಭಜನೆ ಕೂಟದವರಿಗೆ ಗೊತ್ತಿದ್ದುದು ಈ ಎರಡು ಹೆಸರುಗಳೇ–ಪುರಂದರದಾಸ, ಕನಕದಾಸ ಇದರಿಂದ ಈ ಇಬ್ಬರು ಜನತೆಗೆ

ಎಷ್ಟು ಹತ್ತಿರವಾದವರು, ಪ್ರಿಯವಾದವರು ಎಂಬ ಅಂಶ ಸ್ಪಷ್ಟಪಡುತ್ತದೆ. ಕನಕದಾಸರ ಸಂಗೀತ ಕೈಂಕರ್ಯವನ್ನು ಈ ಹಿನ್ನೆಲೆಯಿಂದ ಪರಿಶೀಲಿಸಬೇಕಾಗಿದೆ.

ನಮ್ಮಲ್ಲಿ ಸಂಗೀತ ಎಂದರೆ ಕಛೇರಿ ವೇದಿಕೆಯ ಮೇಲೆ ಕೇಳಿಬರುವುದೇ ಸಂಗೀತ ಎಂಬ ತಪ್ಪು ಅಭಿಪ್ರಾಯವಿದೆ. ಸಂಗೀತ ಕಲೆ ಮನುಷ್ಯನ ಜೀವನದಲ್ಲಿ ಹೇಗೆ ವ್ಯಾಪಕವಾಗಿದೆ. ಪದರ ಪದರವಾಗಿ ಹೇಗೆ ಹರಡಿದೆ, ವಿವಿಧ ವರ್ಗಗಳಿಗೆ ಯಾವ ಯಾವ ರೀತಿ ಸಂತೋಷ ಉಂಟು ಮಾಡುತ್ತಿದೆ, ಮನಸ್ಸಿಗೆ ನೆಮ್ಮದಿ ಕೊಡುತ್ತಿದೆ ಎಂಬ ಅಂಶಗಳನ್ನು ಗಮನಿಸುವುದಿಲ್ಲ. ಆತನಿಗೆ ಸಂಗೀತ ಹೇಗೆ ಗೊತ್ತು, ಗುರುಗಳಾರು. ಸಂಪ್ರದಾಯವಾವುದು. ಬಿರುದು ಪ್ರಶಸ್ತಿಗಳೇನು ಬಂದಿವೆ, ಈ ರೀತಿ ಆಲೋಚನೆಗಳು ಬರುತ್ತವೆ. ಇವುಗಳ ಮಧ್ಯೆ ಸಂಗೀತ ಅಥವಾ ಹಾಡುಗಾರಿಕೆ ಮನುಷ್ಯರಿಗೆ ಸ್ವಭಾವ ಸಿದ್ಧವಾದುದು ಭಾವೋತ್ಕರ್ಷತೆಯ ಫಲವಾಗಿ ಹೃದಯದಿಂದ ಉಕ್ಕಿ ಬರುವಂತಹುದು ಎಂಬ ಅಂಶ ಮರೆತು ಹೋಗುವುದು. ಕನಕದಾಸರಿಗೆ ಸಂಬಂಧಿಸಿದಂಥೆ ಈ ಪ್ರಶ್ನೆಗಳನ್ನು ಪರಿಶೀಲಿಸುವ ಯತ್ನಮಾಡಬೇಕಾಗಿದೆ.

ಕನಕದಾಸರಿಗೆ ಸಂಗೀತ ತಿಳಿದಿತ್ತೇ ಎಂಬ ಪ್ರಶ್ನೆಯನ್ನೇ ಪರಿಶೀಲಿಸುವ. ಈ ಪ್ರಶ್ನೆ ಪುರಂದರದಾಸರ ಜಯಂತಿಯ ನಾಲ್ಕನೆಯ ಶತಮಾನೋತ್ಸವ ಸಂದರ್ಭದಲ್ಲಿಯೂ ಮೂಡಿ ಬಂದಿತು. ಈ ಪ್ರಶ್ನೆಗೆ ಉತ್ತರ ಕೊಡುವ ಮುನ್ನ ಒಂದು ಸಂಗತಿಯನ್ನು ನೆನೆಸಿಕೊಳ್ಳಬೇಕಾಗಿದೆ. ಪುರಂದರದಾಸರಂತೆಯೇ ಕನಕದಾಸರೂ ಹರಿದಾಸ ಪಂಥಕ್ಕೆ ಸೇರಿದವರು. ಈ ಪಂಥದಲ್ಲಿ ಭಜನೆಗೆ ಮುಖ್ಯ ಸ್ಥಾನವಿದೆ. ಭಗವದರ್ಚನೆಯಲ್ಲಿ ನವವಿಧ ಭಕ್ತಿಯೂ ಪ್ರದರ್ಶಿತವಾಗುತ್ತದೆ. ಈ ಒಂಬತ್ತು ರೀತಿಯ ಭಕ್ತಿಪ್ರದರ್ಶನದಲ್ಲಿ ಕೀರ್ತನ, ಸ್ಮರಣ ಮತ್ತು ಅರ್ಚನಗಳಿಗೆ ಸಂಗೀತ ಸಂಬಂಧವಿದೆ.

ನಾಮಸ್ಮರಣ ಹಾಗೂ ಕೀರ್ತನಗಳು ಕೇವಲ ಮಂತ್ರ ಜಪಿಸುವ ರೀತಿಯಲ್ಲಿ ಮಾಡುವಂತಹವಲ್ಲ. ರಾಗಬದ್ಧವಾಗಿ ನಿಬದ್ಧ ಮತ್ತು ಅನಿಬದ್ಧ ಎರಡೂ ರೂಪದಲ್ಲಿಯೂ ಮಾಡಲಾಗುವುದು. ನಿಬದ್ಧ ರೂಪದಲ್ಲಿದ್ದಾಗ ಹಾಡು. ಅರ್ಚನೆ ಮಾಡುವಾಗಲೂ ಹಾಡಿಗೆ ಸ್ಥಾನವಿದೆ. ಕೆಲವು ಸಂದರ್ಭದಲ್ಲಿ ಭಕ್ತನು ಕಾಲಿಗೆ ಗೆಜ್ಜೆ ಕಟ್ಟಿ ತನ್ಮಯನಾಗಿ ಹಾಡುತ್ತಾ ಕುಣಿಯುತ್ತಾ ಭಗವತ್ ಸ್ಮರಣೆ ಮಾಡುವ ಸಂದರ್ಭಗಳೂ ಇವೆ. ಆದಕಾರಣ ಈ ಭಕ್ತಿಪಂಥದಲ್ಲಿ ಹಾಡಿಗೆ ಅರ್ಥಾತ್ ಸಂಗೀತಕ್ಕೆ ಒಂದು ಮುಖ್ಯ ಸ್ಥಾನವಿದೆ ಎನ್ನಬಹುದು.

ಕನಕದಾಸರು ರಚಿಸಿ ಲಭ್ಯವಿರುವ ಕೀರ್ತನೆಗಳಲ್ಲಿ ಅರ್ಧಕ್ಕಿಂತ ಹೆಚ್ಚು ದೇವತಾ ಸ್ತುತಿ, ಭಕ್ತಿಗೆ, ಸುಮಾರು ಕಾಲು ಭಾಗದಷ್ಟು ನೀತಿಬೋಧೆಗೆ ಸಂಬಂಧಿಸಿವೆ. ಮಿಕ್ಕವು ಇತರ ವಿಷಯಗಳನ್ನೊಳಗೊಂಡಿವೆ. ಇದರಲ್ಲಿ ಅವರ ಒಗಟಿನ ರೀತಿಯ ಮುಂಡಿಗೆಗಳೂ ಸೇರಿವೆ. ಇದಲ್ಲದೆ ನಳಚರಿತ್ರೆ, ಹರಿಭಕ್ತಸಾರ ಇವುಗಳು ಪದ್ಯರೂಪದಲ್ಲಿದ್ದರೂ ಹಾಡಲಾಗುವಂತಹವು–ಕಾವ್ಯಗಾಯನ ಅಥವಾ ಗಮಕರೂಪದಲ್ಲಿ. ಹರಿಭಕ್ತಿಸಾರದ ಪದ್ಯಗಳಂತೂ ಎಂದೂ ಹಾಡುತ್ತಿದ್ದುವೆ ಇನ್ನು ಮೋಹನ ತರಂಗಿಣಿ ಸಾಂಗತ್ಯದಲ್ಲಿರುವ ಈ ಕಾವ್ಯ ಹಾಡಲುಚಿತವಾಗಿ ಇರುವಂತಹುದೇ. ಹೀಗೆ ನೋಡಿದರೆ ಕನಕದಾಸರ ರಚನೆಗಳಲ್ಲಿ ಸಂಗೀತವು ಹಾಸುಹೊಕ್ಕಾಗಿದೆ. ಇಷ್ಟಾದರೂ ಕನಕದಾಸರ ಗುರುಗಳಾರು ? ಅವರಿಗೆ ಸಂಗೀತ ಜ್ಞಾನವಿತ್ತೇ ಎಂಬ ಪ್ರಶ್ನೆಗಳೂ ಮೂಡಬಹುದು.

ಗುರುಗಳ ಬಗೆಗೆ ಹೇಳಬೇಕಾದರೆ ಕನಕದಾಸರು ಗುರುಕುಲವಾಸ ಪದ್ಧತಿಯಂತೆ ಸಂಗೀತಾಭ್ಯಾಸ ಮಾಡಿದವರಲ್ಲ. ಇದು ಕನಕದಾಸರೊಬ್ಬರಿಗೇ ಅಲ್ಲ. ಸಂಗೀತ ಕ್ಷೇತ್ರದ ಅನೇಕ ದಿಗ್ಗಜಗಳಿಗೂ ಅನ್ವಯಿಸುವುದು. ಗುರುಕುಲ ಪದ್ಧತಿ ಒಂದು ಆದರ್ಶ. ಲಾಂಛನ. ಆದರೆ ಆ ಪದ್ಧತಿಯಂತೆ ಅದರ ನಿಯಮ, ನಿಷ್ಠೆಗಳನ್ನು ಅನುಸರಿಸಿ ವಿದ್ಯೆ ಕಲಿತವರ ಸಂಖ್ಯೆ ಬಹು ಸ್ವಲ್ಪ. ತಜ್ಞಗುರುವಿನಿಂದ ಮಾರ್ಗದರ್ಶನ ಪಡೆದೋ ಅಥವಾ ಅದರಿಂದ ಪ್ರಭಾವಿತನಾಗಿಯೋ ವಿದ್ಯೆ ಕಲಿತವರ ಸಂಖ್ಯೆಯೇ ಹೆಚ್ಚು. ಈ ಹಿನ್ನೆಲೆಯಿಂದ ಕನಕದಾಸರ ಸಂಗೀತದಲ್ಲಿ ಮೊದಲನೆಯ ಪ್ರಭಾವವೆಂದರೆ ಅವನ ಮನೆ ಎಂದು ಹೇಳಬಹುದು. ಅದರಲ್ಲಿ ಅಂತಹ ವಿಶೇಷವೂ ಏನಿಲ್ಲ. ಸುಮಾರು ೫೦–೬೦ ವರುಷಗಳನ್ನು ಹಿಂದಿನವರಿಗೂ ನಮ್ಮ ದೇಶದ ಮನೆ ಮನೆಗಳಲ್ಲಿಯೇ ಸಂಗೀತದ ರಸ ತುಂಬಿರುತ್ತಿತ್ತು. ವಿವಿಧ ವೇಳೆಯಲ್ಲಿ ವಿವಿಧ ಸಂದರ್ಭಗಳಲ್ಲಿ ಕೊನೆಗೆ ಹಾಯಾಗಿ ಕಾಲ ಕಳೆವಾಗಲೂ ರಾಗ ರಾಗವಾಗಿ ಹಾಡುಗಳ ನಾದ ಕೇಳಿ ಬರುತ್ತಿತ್ತು. ಹುಟ್ಟಿದಾಗಿನಿಂದ ಮಕ್ಕಳು ಈ ರಸದ ಮಧ್ಯೆಯೇ ಬೆಳೆಯುತ್ತಿದ್ದರು. ಆ ನಾದದ ಇಂಪು ರಾಗಗಳ ರುಚಿ ಅವರ ಮನಸ್ಸಿನಲ್ಲಿ ನೆಲೆಸುತ್ತಿತ್ತು. ಮುಂದೆ ಅವರೊಂದಿಗೇ ಬೆಳೆದು ಬದುಕಿನ ಒಂದು ಭಾಗವಾಗುತ್ತಿತ್ತು. ಹೆಚ್ಚು ಆಸಕ್ತರಾದವರು ಬಾಲ್ಯದಿಂದ ಬಂದ ಈ ಅಭಿರುಚಿಯನ್ನು ಇನ್ನೂ ಸಮೃದ್ಧವಾಗಿ ಬೆಳೆಸಿಕೊಳ್ಳುತ್ತಿದ್ದರು. ಕನಕದಾಸರೂ ಸಮಾಜದಲ್ಲಿ ಪ್ರತಿಷ್ಠಿತವಾದ ಕುಟುಂಬ. ಆದುದರಿಂದ ಮನೆಯಲ್ಲಿ ಉತ್ತಮ ಸಾಂಸ್ಕೃತಿಕ ವಾತಾವರಣವಿದ್ದು ಬಾಲ್ಯದಿಂದಲೂ ಸಂಗೀತಾಭಿರುಚಿ ಬೆಳೆದು ಬಂದುದರಲ್ಲಿ ಆಶ್ಚರ್ಯವಿಲ್ಲ.

ಹೀಗೆ ಹಸನಾದ ಸಂಗೀತಾಭಿರುಚಿ ಉತ್ತಮಗೊಂಡು ಸಂಗೀತಜ್ಞಾನಕ್ಕೆ ರೂಪುಗೊಳ್ಳಲು ಕಾರಣರಾದವರು ಆತನ ಗುರುಗಳಾದ ವ್ಯಾಸರಾಜರು. ಕೃಷ್ಣದೇವರಾಯನ ಕಾಲದ ಒಂದು ಪ್ರಬಂಧದಲ್ಲಿ–'ಜಯ ಸಂಗೀತಾಗಮ ಅಭಿನವ ಭರತಂ ಮುನಿರೇ' ಎಂದು ವ್ಯಾಸರಾಯರನ್ನು ಸ್ತುತಿಸಲಾಗಿದೆ. ಸಂಗೀತ ಮತ್ತು ಭರತ ಶಾಸ್ತ್ರದಲ್ಲಿ ಉತ್ತಮ ಪಾಂಡಿತ್ಯ ಅವರದು. ಅಂತಹವರ ಸಾಮೀಪ್ಯ ಮತ್ತು ಸಹವಾಸಗಳೇ ಕಲಾಜ್ಞಾನವೃದ್ಧಿಯಾಗಲು ಸ್ಫೂರ್ತಿದಾಯಕ. ಇನ್ನು ಅವರಿಂದ ಮಾರ್ಗದರ್ಶನವೂ ದೊರಕಿದ ಮೇಲೆ ?

ಇನ್ನು ಕನಕದಾಸರಿಗೆ ಸಂಗೀತ ತಿಳಿದಿತ್ತೇ ಎಂಬ ಪ್ರಶ್ನೆಗೆ ಅವರು ಯಾವ ಸಂಗೀತ ಗ್ರಂಥವನ್ನೂ ಬರೆದಿಲ್ಲ ನಿಜ. ಇದು ಅನೇಕ ಸಂಗೀತ ವಿದ್ವಾಂಸರಿಗೂ ಅನ್ವಯಿಸುವುದು. ಆದರೆ ಅವರ ಸಂಗೀತದ ಜ್ಞಾನ ಏನು ಎಂಬುದನ್ನು ತಿಳಿದು ಕೊಳ್ಳಬೇಕಾದರೆ ಅವರ ಕೀರ್ತನೆಗಳನ್ನು ಪರಿಶೀಲಿಸಬಹುದು. ಹರಿದಾಸ ಪಂಥದವರ ಕೀರ್ತನೆಗಳೆಲ್ಲಾ ರಾಗ ತಾಳಬದ್ಧವಾಗಿ ಹಾಡಲೋಸುಗ ರಚಿತವಾದುದೇ. ಅವರಲ್ಲಿ ಕೆಲವರ ಕೀರ್ತನಗಳಲ್ಲಿ ಸಂಗೀತಕ್ಕೆ ಸಂಬಂಧಪಟ್ಟ ಶಬ್ದಗಳು ಕಂಡುಬರುತ್ತವೆ. ಬಹುತೇಕ ಉಪಮೆಯ ರೂಪದಲ್ಲಿ ಅಥವಾ ಸಂದರ್ಭ ವರ್ಣನೆಯಲ್ಲಿ. ಸಂಗೀತ ವಿಷಯವೇ ನೇರವಾಗಿ ಪ್ರಸ್ತಾಪಿತವಾಗುವುದಿಲ್ಲ. ಪುರಂದರದಾಸರ ಕೀರ್ತನೆಗಳಲ್ಲಿ ಮಾತ್ರ ಅಂತಹ ಪ್ರಸ್ತಾಪಬರುತ್ತದೆ. ಕನಕದಾಸರ ಕೀರ್ತನೆಗಳಲ್ಲಿಯೂ ಹೀಗೆ ಸಂದರ್ಭಾನುಸಾರ ಸಂಗೀತಕ್ಕೆ ಸಂಬಂಧಿಸಿದ ಕೆಲವು ಉಲ್ಲೇಖಗಳಿವೆ.

ನಿದರ್ಶನವಾಗಿ–'ಎನ್ನ ನುಡಿ ಹುಸಿಯಲ್ಲ ಈ ಜಗದೊಳು' ಎಂಬ ಕೀರ್ತನೆಯಲ್ಲಿ–ಸ್ವರಭೇದವಿಲ್ಲದಿಹ ಸಂಗೀತವಿಂಗೀತ ಎಂದಿದ್ದಾರೆ. ಯಾವ ಯಾವ ವಸ್ತುವಿನಲ್ಲಿ ಯಾವ ಯಾವ ಅಂಶವಿದ್ದರೆ ಲಕ್ಷಣ ಎಂಬುದನ್ನು ಸ್ಪಷ್ಟಪಡಿಸುವ ಕೀರ್ತನೆ ಇದು. ಇಲ್ಲಿ ಸಂಗೀತದ ಪ್ರಸ್ತಾವದ ಹಿನ್ನೆಲೆ ಇಷ್ಟೆ, ಏಳು ಸ್ವರಗಳಾಗಿ ರೂಪುಗೊಂಡ ನಾದಭೇದದಿಂದ ಮೇಳೈಸಿದಾಗ ಮಾತ್ರ ಅದು ಸಂಗೀತವಾಗುತ್ತದೆ. ಇಲ್ಲದಿದ್ದರೆ ಬರೇ ಶಬ್ದವಾಗುತ್ತದೆ.

ಅದರಂತೆ ಇನ್ನೊಂದು 'ಮರೆಯದಿರು ಮರೆಯದಿರು ಎಲೆ ಮಾನವ' ಎಂದು ಪ್ರಾರಂಭವಾಗುವ ಕೀರ್ತನೆ ಇದು ಮನುಷ್ಯರು ಅಹಂಕಾರ ಬಿಡಬೇಕೆಂದು ಸೂಚಿಸುವ ನೀತಿಬೋಧೆಯ ಕೀರ್ತನೆ : ಇದರಲ್ಲಿ ಒಂದೊಂದು ಗುಣಕ್ಕೂ ಆದರ್ಶಪ್ರಾಯರೆನಿಸುವ ವ್ಯಕ್ತಿಗಳನು ಹೇಳುತ್ತಾ–'ಹೀಗ್ಯಾರ ಹೋಲುವೆ ಹೇಳೆಲೊ ಮಾನವ' ಎಂದು ಕೇಳುತ್ತಾರೆ. ಇಲ್ಲಿ 'ರಾಗದಲಿ ತುಂಬುರನೊ'

ಎಂದು ಪ್ರಶ್ನೆಮಾಡುತ್ತಾರೆ. ದೇವಗಣಗಳಲ್ಲಿ ತುಂಬುರು ನಾರದರಿಗೂ ಸಂಗೀತಕ್ಕೂ ಇರುವ ನಿಕಟ ಸಂಬಂಧವು ಎಲ್ಲರೂ ಬಲ್ಲ ವಿಷಯವೇ. ರಾಗದಲ್ಲಿ ಅಂದರೆ ಸಂಗೀತದಲ್ಲಿ ತುಂಬುರನೆಂತಹ ಉನ್ನತ ಸ್ಥಾನದಲ್ಲಿರುವ ವ್ಯಕ್ತಿ ಎಂಬುದರ ಸೂಚ್ಯವಾಗಿ ಇಲ್ಲಿ ಸಂಗೀತಕ್ಕೆ ಸಂಬಂಧಪಟ್ಟ ಪದವನ್ನು ಉಪಯೋಗಿಸಲಾಗಿದೆ.

'ಏನು ಮಾಡಲಯ್ಯ ಬಯಲಾಸೆ ಬಿಡದು' ಎಂದು ಪ್ರಾರಂಭವಾಗುವ ಇನ್ನೊಂದು ಕೀರ್ತನೆಯಲ್ಲಿ– 'ಧಿಮ್ಮಿಡುವ ಘಣ ಘಣಯೆಂಬ ಘಂಟೆಯ ರವಕೆ' ಎಂಬುದಾಗಿ ಘಂಟೆಯ ರವದ ಪ್ರಸ್ತಾವವಿದೆ. ಈ ಕೀರ್ತನೆಯ ಪೂರಾವಸ್ತು–ಮನುಷ್ಯನ ವಿವಿಧ ಇಂದ್ರಿಯ ಚಾಪಲ್ಯಗಳು ಮತ್ತು ಅವುಗಳನ್ನು ನಿಗ್ರಹಿಸಲು ಕರೆ.

ಅನಂತರ– 'ಹರಿ ನಿನ್ನ ಪದಕಮಲ ಕರುಳದಂದಲಿ ಎನಗೆ'–ಎಂದು ಪ್ರಾರಂಭವಾಗುವ ಇನ್ನೊಂದು ಕೀರ್ತನೆಯಲ್ಲಿ

ಸಾರಿ ಹೊರಡುವ ಛತ್ರಿ ಭೇರಿ ತಮ್ಮಟೆಗಳು
ಭೋರೆಂಬ ವಾದ್ಯಗಳು ಹರಿಯೆ
ವೀರರಾಹುತ ಬಲದ ಭಾರವನು ತರಿದಹಂ
ಕಾರವನು ಮುರಿದೆ ಹರಿಯೆ ॥

ಈ ಕೀರ್ತನೆ ಕನಕದಾಸರ ಜೀವನದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾದುದನ್ನು, ಜ್ಞಾನೋದಯವಾದುದನ್ನು ಸೂಚಿಸುತ್ತದೆ. ಇಲ್ಲಿ ಬರುವ ಭೇರಿ ತಮ್ಮಟ ಮುಂತಾದ ವಾದ್ಯಗಳ ಹೆಸರುಗಳು ಪ್ರಾಸಂಗಿಕವಾಗಿ ಬಂದಿವೆ. ಇನ್ನೊಂದು 'ಹ್ಯಾಂಗೆ ನೀ ದಾಸನಾದಿ ಪ್ರಾಣಿ' ಎಂಬ ಕೀರ್ತನೆಯಲಿ–

ಕಾಲುಗೆಜ್ಜೆಯ ಕಟ್ಟಿ ಮೇಲೆ ಕರತಾಳ ಪಿಡಿದು
ಶ್ರೀಲೋಲನ ಗುಣಪೊಗಳಿ ನಟಿಸದಲೆ

ಎಂಬ ಸಾಲುಗಳು ಬರುತ್ತವೆ : ಇದು ಒಂದು ರೀತಿಯಲ್ಲಿ ಸಂಗೀತಕ್ಕೆ ನೇರನೇರವಾಗಿ ಸಂಬಂಧಪಡುತ್ತದೆ, ಹರಿದಾಸರು ಕಾಲಿಗೆ ಗೆಜ್ಜೆ ಕಟ್ಟಿ ಕೈಯ್ಯಲ್ಲಿ ತಾಳವಿಡಿದು ಭಾವೋತ್ಕರ್ಷದಿಂದ ನಾಮಕೀರ್ತನೆ ಮಾಡುತ್ತಾ ತನ್ಮಯರಾಗಿ ಕುಣಿವುದನ್ನು ಸೂಚಿಸುತ್ತದೆ. ಹಾಗೆಯೇ ಇನ್ನೂ ಅನೇಕ ಕೀರ್ತನೆಗಳಲ್ಲಿ ಸಂಗೀತಕ್ಕೆ ಸಂಬಂಧಪಟ್ಟ ಶಬ್ದಗಳು ಬಹುತೇಕ ಪ್ರಾಸಂಗಿಕವಾಗಿ ಕಂಡು ಬರುತ್ತವೆ. 'ಮರೆಯದಿರು ಮರೆಯದಿರು ಎಲೆ ಮಾನವ' ಎಂಬ ಹಾಡಿನಲ್ಲಿ– 'ಗೀತದಲಿ ಗಂಧರ್ವನೇ ನೀನು' ; 'ಮಗನೆಂದಾಡಿಸುವಳು ಮೊಗ ನೋಡಿ

ನಗುವಳು'–ಎಂಬ ಕೀರ್ತನೆಯಲ್ಲಿ– 'ಹೊನ್ನ ಘಂಟೆಯು ಘಣ ಘಣರೆನಲು'; 'ಎಲ್ಲಾರು ಮಾಡುವುದು ಹೊಟ್ಟೆಗಾಗಿ' ಎಂಬ ಕೀರ್ತನೆಯಲ್ಲಿ 'ತಾಳ ದಂಡಿಗೆ ಶೃತಿ ಮೇಳ ತಂಬೂರಿಗೊಂಡು ಸೂಳೆಯಂತೆ ಕುಣಿವುದು ಹೊಟ್ಟೆವಿಗಾಗಿ ಗೇಣು ಬಟ್ಟೆಗಾಗಿ' ಒಂದು ವಿಡಂಬನೆಯ ರೀತಿಯಲ್ಲಿ. ಹೀಗೆ ಇನ್ನು ಕೆಲವು ಕೀರ್ತನೆಗಳಲ್ಲಿ ಸಂಗೀತ ಸಂಬಂಧವಾದ ಶಬ್ದಗಳು ಬರುತ್ತದೆ. ಇದರಿಂದ ಕನಕದಾಸರಿಗೆ ಒಳ್ಳೆಯ ಸಂಗೀತ ಜ್ಞಾನವಿತ್ತೆಂಬ ವಿಷಯ ಸ್ಪಷ್ಟಪಡುತ್ತದೆ. ಸಂಗೀತ ಸಂಬಂಧವಾದ ಶಬ್ದಗಳು ನೇರವಾಗಿ ಬರದೆ ಉಪಮೆಯ ರೂಪದಲ್ಲಿಯೇ ಪ್ರಾಸಂಗಿಕವಾಗಿಯೇ ಬಂದರೂ, ಆ ಸಂದರ್ಭಕ್ಕೆ ಎಷ್ಟು ಉಚಿತ ರೀತಿಯಲ್ಲಿ ಬಳಸಲಾಗಿವೆ ಎಂಬುದನನು ನೋಡಿದಾಗ ಕನಕದಾಸರಿಗೆ ಇದ್ದ ಸಂಗೀತ ಜ್ಞಾನದ ಮಟ್ಟದ ಅರಿವು ನಮಗುಂಟಾಗುವುದು.

ಈ ಅಂಶವು ಅವರ ಮೋಹನ ತರಂಗಿಣಿಯಲ್ಲಿ ಇನ್ನೂ ಸ್ಪಷ್ಟಗೊಳ್ಳುತ್ತದೆ. ಅಲ್ಲಿ ಸಂಗೀತಕ್ಕೆ ಸಂಬಂಧಿಸಿದ ಅನೇಕ ಶಬ್ದಗಳನ್ನು ಸಂಗೀತದ ಹಿನ್ನೆಲೆಯಲ್ಲಿಯೇ ಬಳಸಲಾಗಿದೆ. ಇದರಲ್ಲಿ ಗಾಯನ, ವಾದ್ಯ, ರಾಗ ಮುಂತಾದವುಗಳ ಪ್ರಸ್ತಾಪವಿದೆ. ಅಲ್ಲದೆ ಅವುಗಳ ಪಾತ್ರವನ್ನು ನೇರವಾಗಿ ವರ್ಣಿಸಲಾಗಿದೆ.

ಮೋಹನ ತರಂಗಿಣಿಯ ೪, ೧೮, ೨೦ ಮತ್ತು ೨೨ನೇ ಸಂಧಿಗಳಲ್ಲಿ ಸಂಗೀತಕ್ಕೆ ಸಂಬಂಧಪಟ್ಟ ವರ್ಣನೆಗಳಿವೆ. ನಾಲ್ಕನೆಯ ಸಂಧಿಯಲ್ಲಿ ವಿವಿಧ ವಿದ್ಯೆಗಳನ್ನು ಪ್ರಸ್ತಾಪಿಸುವಾಗ ಪ್ರಾಸಂಗಿಕವಾಗಿ 'ವೀಣಾ ವಾದ್ಯ ತಂತಿಗೆ ಚರ್ಮ ವಾದ್ಯಕ್ಕೆ' ಎಂದು ಹೇಳಿದರೆ ಹದಿನೆಂಟನೆಯ ಸಂಧಿಯಲ್ಲಿ– 'ತರಳಾಕ್ಷಿ ತನ್ನೊಳು ಪಾಡುವರಿಲ್ಲೆಂದು ಕೊರಲೊಳಿಟ್ಟಳು ಕಂಡ ಸರವ । ಪೆರಳೊರ್ವ ವೀಣೆಗಾರ್ತಿಯರಿಲ್ಲವೆನುತವೆಡ ಬೆರಲೊಟ್ಟಳು ಮುದ್ರಿಕೆಯ । ಆಯತವಿಡುವ. ಸುಸ್ವರ ಷಡ್ಜ ಪಂಚಮ ಸ್ಥಾಯಿ ಸಂಚರ ಠಾಯ ನೇಮ । ಬಾಯಿದೆರೆಯೆ ನಾಣಿಲವುಂಟು ತಪ್ಪದ ಗೀತ ಗಾಯಕಿಗಳೊಪ್ಪಿದರು... ಹಸ್ತಿವಾವುಜ, ವೀಣೆ, ಮದ್ದಳೆ, ರಾವಣಹಸ್ತ, ಕಿನ್ನರಿ, ಜಾತ್ರೆ ಉಡುಕು ದುಸ್ತರ ಸ್ವರಮಂಡಲ...' ಎಂದು ಇನ್ನು ಸ್ವಲ್ಪ ವಿಸ್ತಾರವಾಗಿದೆ.

ಇಪ್ಪತ್ತೆರಡನೆಯ ಸಂಧಿಯಲ್ಲಿ 'ಪುಷ್ಪ ಸುಗಂಧ ಗಂಧಿಯರು ಬಂದರು ಬಾಣ ನುಪ್ಪಡವನು ಪಾಡುವೊಡೆ । ಮೇಳವ ಮಾಡಿ ದಂಡಿಗೆ ವಿಡಿವರು ಶುದ್ಧ ಸಾಳಗ ಸಂಕೀರ್ಣ ವಿಧದಿ । ಆಳಾಪ ಠಾಯೆನೇಮಗಳಿಂದೆ ನೂರೆಂಟು ತಾಳಗೀತಗಳ ಪಾಡಿದರು । ನಾರಣಿದೇಶಾಕ್ಷಿ ಗುರ್ಜರು ದೇವಗಾಂಧಾರಿ

ಗುಂಡಕ್ರಿಯೆಗಳಲಿ । ಆರಭಿ ಸಾಮಂತ ಮಲಹರಿಯಿಂದೆ । ಕೈವಾರಿಸಿ ಖಳನ ಪಾಡಿದರು' ಎಂದು ಇನ್ನೂ ಹೆಚ್ಚಿನ ಮಾಹಿತಿಯಿಂದ ಕೂಡಿದ ವರ್ಣನೆ ಇದೆ. ಇನ್ನು ಸಂಧಿ ಇಪ್ಪತ್ತೇಳರಲ್ಲಿ– 'ನೃತ್ಯದವರು ತಾಳಮೇಳ ಸಹಿತ ಬಂದು ಮತ್ತೇಭ । ಗಮನೆಯರಿರ್ದೆಡೆಗೆ । ವರರುದ್ರವೀಣೆ ಧನುರ್ವೀಣೆಗೆ ಜಂತ್ರ, ತುಂಬುರು ವೀಣೇ, ಕೂರ್ಮವೀಣೆಗಳ ಸ್ವರಮಂಡಲ ಮುಖ್ಯ ತಂತ್ರೀವಾದ್ಯದ ಹೆಣ್ಣು ನೆರೆದುದು ಕೋಮಲವೆರಲಿಂದ ತಂತ್ರಿಯ ಮುಟ್ಟಿ ರಾಮ ಕ್ರಿಯೆಯ ಬಾರ್ಜಿಸಿದರು... ಹೀಗೆ ಸಂಗೀತದ ವಿವರಣೆಗಳಿವೆ. ಇವು ನಾನಾ ಸಂದರ್ಭಗಳಲ್ಲಿ ಬಂದಿವೆ. ವಾರಾಂಗನೆಯರ ಮನೆಗಳು. ಉಷೆಯ ಅಂತಃಪುರ ಬಾಣಾಸುರನ ಅರಮನೆ ಮೊದಲಾದ ಸಂದರ್ಭಗಳಲ್ಲಿ ಈ ಸಂಗೀತದ ವರ್ಣನೆ ಕಂಡುಬರುತ್ತದೆ. ಅನಿರುದ್ಧನ ನಗರ ಶೋಧನೆಯ ಸಂದರ್ಭದಲ್ಲಿ ಕಂಡುಬರುವ– ಸ್ವಸ್ತ್ರೀಯರುಗಳ ಮೇಲಿನ ಭ್ರಾಂತಿ ಬಿಡಿಸುವ ಹಸ್ತಿನಿಯರು ಭರತಶಾಸ್ತ್ರದಲ್ಲಿ ಪ್ರೌಢೆಯರು ಒಬ್ಬಳು ಅನುಪಮ ಗಾಯಕಿ. ತನ್ನ ಪ್ರೌಢಿಮೆಯ ಬಗೆಗೆ ಹೆಮ್ಮೆ. ಇನ್ನೊಬ್ಬಳೂ ಅಂತೆಯೇ ಆದರೆ ವೀಣಾವಾದಕಿ. ಮುಂದಿನ ಸಾಲುಗಳು ಇವರ ಗಾನ ಅಥವಾ ವಾದನ ಕ್ರಿಯೆಯನ್ನು ವಿವರಿಸುವುದು. 'ಆಯತವಿಡುವಸುಸ್ವರ' ಇತ್ಯಾದಿ ಸಾಲುಗಳು ರಾಗಾಲಾಪನೆಗೆ ಸಂಬಂಧಪಟ್ಟವು. ಆಯತ, (ಆಯಿತ್ತ ಎನ್ನುವುದೂ ಉಂಟು) ರಾಗವಿಸ್ತಾರದ ಮೊದಲನೆಯ ಹಂತ, ರಾಹ ಸ್ವರೂಪವನ್ನು ಸ್ಥೂಲವಾಗಿ ಪರಿಚಯ ಮಾಡಿಸುವುದು ರಾಗಾಲಾಪನೆಯ ಈ ಹಂತಕ್ಕೆ ಶಾಸ್ತ್ರಗ್ರಂಥಗಳಲ್ಲಿ ಆಕ್ಷಿಪ್ತಿಕ ಎನ್ನುತ್ತಾರೆ. ಈ ಶಬ್ದದ ದೇಶೀಯ ರೂಪಾಂತರ ಆಯತ. ಮುಂದೆ ವಿಡುಪು ಎಂದಿದೆ. ಅದು ಎಡುಪು ಎಂದಿರ ಬೇಕು. ರಾಗಾಲಾಪನೆಯ ಮೊದಲನೆಯ ಆಕ್ಷಿಪ್ತಿಕಾ ಹಂತವಾದ ನಂತರ ಎರಡನೆಯದು ರಾಗವರ್ಧನಿ. ಇಲ್ಲಿ ರಾಗವು ಬಹು ಮುಖವಾಗಿ ಅರಳುತ್ತದೆ. ಅದರ ಆಕರ್ಷಣೀಯ ಹಾಗೂ ರುಚಿಕರ ಅಂಶಗಳನ್ನೆಲ್ಲಾ ಸ್ಪಷ್ಟಪಡಿಸುವ ಕ್ರಿಯ–ರಾಗವರ್ಧನಿ. ಇದರ ದೇಶೀಯ ರೂಪ– ಎಡುಪು. ಒಟ್ಟಿನಲ್ಲಿ ಈ ಜಾಣೆಯರು ಷಡ್ಜಪಂಚಮದ ಉತ್ತಮ ಹೊಂದಾಣಿಕೆಯಿಂದ ರಾಗವನ್ನು ಪೋಷಿಸಿ ಅನಿಬದ್ಧ ರಾಯ ಮುಂತಾದ ಪ್ರಕಾರಗಳಿಂದ ಹಾಡಿ ರಾಗದ ಅಂದವನ್ನು ಎತ್ತಿ ತೋರಿದರು.

ಅದರಂತೆ ವಾದ್ಯಗಳನ್ನು ನುಡಿಸುವ ಹೆಂಗಳೆಯರ ಮೇಳವೂ ಇದ್ದಿತು– ಬಹುಶಃ ಗಾಯಕಿಯರಿಗೆ ಒತ್ತಾಸೆಯಾಗಿ. ಅವರು ನುಡಿಸುತ್ತಿದುದೂ ವಿಧವಿಧ ತಂತ್ರೀವಾದ್ಯ ರಾಮಹಸ್ತ, ಕಿನ್ನರಿ, ಸ್ವರಮಂಡಲ ಇವರ ಲಯಕ್ಕೆ ಒತ್ತಾಸೆಯಾಗಿ

ನುಡಿಸಲಾದ ವಾದ್ಯಗಳು ಆವುಜ, ಮದ್ದಳೆ, ಉಡುಕು. ಇನ್ನೊಂದು ಅಂತಹದೇ ಸಂದರ್ಭ. ರಾಜಕುಮಾರಿ ಉಷೆಯ ಅಂತಃಪುರದಲ್ಲಿ ಗೆಳತಿಯರೊಂದಿಗೆ ಮನರಂಜನೆ ಮಾಡಿಕೊಳ್ಳುತ್ತಿದ್ದ ಸಂದರ್ಭ–ನೃತ್ಯದವರು. ತಾಳಮೇಳ ಸಹಿತ ಬಂದಿದಾರೆ. ಅನಂತರ ರುದ್ರವೀಣೆ, ಧನುರ್ವೀಣೆ, ತುಂಬುರುವೀಣೆ, ಕೂರ್ಮವೀಣೆ, ಸ್ವರಮಂಡಲವೆ ಮುಂತಾದ ವಾದ್ಯಗಳನ್ನು ನುಡಿಸುವ ಹೆಣ್ಣುಗಳು ಬಂದಿದಾರೆ. ಕೋಮಲ ಕೈಗಳಿಂದ ತಂತಿಯನ್ನು ಮುಟ್ಟಿ ಒಬ್ಬ ಚದುರೆ ರಾಮಕ್ರಿಯ ರಾಗವನ್ನು ನಿರೂಪಿಸುತ್ತಾಳೆ.

ಇದಕ್ಕಿಂತ ಹೆಚ್ಚಿನ ಸ್ವಾರಸ್ಯ ಸಂದರ್ಭ–ಬಾಣಾಸುರನನ್ನು ಎಬ್ಬಿಸುವುದು. ರಾಜಕಾರ್ಯವನ್ನೆಲ್ಲಾ ಮುಗಿಸಿ ರಾತ್ರಿಯೆಲ್ಲಾ ಸುಖವಾಗಿ ನಿದ್ರೆಮಾಡಿದ ಬಾಣಾಸುರನ ಮಲಗುವ ಮನೆಯ ಬಳಿಗೆ ಬಂದರು–ಪುಷ್ಪಸುಗಂಧಿಯರು–ಬಾಣನ ಉಪ್ಪವಡವನು ಪಾಡುವೊಡೆ. ಉಪ್ಪವಡ ಎಂದರೆ ಸುಪ್ರಭಾತ. ಹಿಂದೆ ರಾಜ ಮಹಾರಾಜರನ್ನು ಮೃದುವಾಗಿ ಹಾಡಿ ನಿದ್ದೆಯಿಂದೆಬ್ಬಿಸುವ ಸಂಪ್ರದಾಯುವಿದ್ದಿತು. ಆ ಹಾಡುಗಳನ್ನು ಉಪ್ಪವಡಗಳೆನ್ನುತ್ತಿದ್ದರು. ಈ ಪ್ರಮದೆಯರು ದಂಡಿಗೆಯನ್ನು ಸರಿಯಾಗಿ ಶ್ರುತಿಮಾಡಿ ಹಿಡಿದುಕೊಂಡು ಹಾಡಲಾರಂಭಿಸಿದರು. ಅವರು ಹಾಡಿದ ವಿಧಾನವು ಏನೆಂದರೆ ಶುದ್ಧ, ಸಾಳಗ, ಸಂಕೀರ್ಣ ವಿಧದಿಂದ. ಅಂದರೆ ಈ ವರ್ಗಗಳಿಗೆ ಸೇರಿದ ರಾಗಗಳನ್ನು ಹಾಡಿದರು. ಕರ್ನಾಟಕ ಸಂಗೀತದಲ್ಲಿ ಇಂದು ರಾಗಗಳನ್ನು ವಿಂಗಡಿಸಲು ಉಪಯೋಗದಲ್ಲಿರುವುದು ೭೨ ಮೇಳ ಪದ್ಧತಿ. ಅಂದರೆ ೭೨ ಪ್ರಧಾನ ರಾಗಗಳು ಮತ್ತು ಅವುಗಳಿಂದ ಹುಟ್ಟಿದ ಇತರ ರಾಗಗಳು. ಈ ಪದ್ಧತಿಯನ್ನು ರೂಪಿಸಿದವನು ವೇಂಕಟಮುನಿ. ೧೭ನೆಯ ಶತಮಾನದವನು. ಆದರೆ ಈ ಪದ್ಧತಿ ರೂಪಿತವಾಗುವುದಕ್ಕೂ ಹಿಂದೆ ಬೇರೆ ಬೇರೆ ರಾಗ ವರ್ಗೀಕರಣ ಪದ್ಧತಿ ಇದ್ದಿತು. ಅದರಲ್ಲಿ ಒಂದು ಶುದ್ಧಸಾಳಗ ಅಥವಾ ಛಾಯಾಲಗ ಮತ್ತು ಸಂಕೀರ್ಣ ಆಯಾ ಹೆಸರೇ ಸೂಚಿಸುವಂತೆ ಮೊದಲನೆಯದರಲ್ಲಿ ಹಿಂದಿನಿಂದ ನಿಜರೂಪವನ್ನು ಉಳಿಸಿಕೊಂಡು ಬಂದ ರಾಗಗಳು' ಎರಡನೆಯದರಲ್ಲಿ ಸ್ವಲ್ಪ ಬೇರೆ ರಾಗದ ಛಾಯೆಯುಳ್ಳ ರಾಗಗಳು, ಮೂರನೆಯದರಲ್ಲಿ ಎರಡೂ ಮೂರು ಕಲೆತಕೊಂಡ ರಾಗಗಳೂ ಇದ್ದುವು. ಇದು ಪ್ರಾಚೀನ ಪದ್ಧತಿ.

ಈ ಗಾಯಕಿಯರು ಈ ಮೂರೂ ವಿಭಾಗಗಳಿಂದ ಆಯಿದ ರಾಗಗಳನ್ನು ಹಾಡುತ್ತಾರೆ. ಅದಕ್ಕೆ ಪ್ರಾಚೀನ ೧೦೮ ತಾಳಗಳಿಂದ ಆಯ್ದ ತಾಳಗಳ ಚೌಕಟ್ಟಿನಲ್ಲಿ ರಚಿತವಾದ ಗೀತಗಳನ್ನು ವಿಧವಿಧವಾದ– ನಾರಣಿ ಅಥವಾ ನಾರಾಯಣಿ.

ದೇಶಾಕ್ಷಿ. ಗುರ್ಜರಿ, ದೇವಗಾಂಧಾರಿ ಗುಂಡಕ್ರಿಯೆ, ಅರಭಿ, ಸಾಮಂತ, ಮಲಹರಿ ರಾಗಗಳಲ್ಲಿ ಕೈವಾರಿಸಿ ಖಳನ ಪಾಡಿದರು'. ಇವೆಲ್ಲಾ ಪ್ರಾಚೀನ ರಾಗಗಳು ಅಂದು, ವಿಜಯನಗರ ಕಾಲದಲ್ಲಿ ಪ್ರಚಲಿತವಿದ್ದುವು.

ಇಲ್ಲಿ ಕನಕದಾಸರು ಅಂದು ಪ್ರಚಲಿತವಿದ್ದ ಸಂಗೀತದ ಬಗೆಗೆ ಒಂದು ಸ್ಥೂಲ ಚಿತ್ರ ನೀಡಿದಾರೆ. ಅವರ ಮೋಹನ ತರಂಗಿಣಿಯಲ್ಲಿ ಕೃಷ್ಣನ ದ್ವಾರಕಾನಗರ ಮತ್ತು ಬಾಣಾಸುರನ ಶೋಣಿತಪುರದ ವರ್ಣನೆಯಿಂದ ಕೂಡಿದ್ದರೂ, ಆ ವರ್ಣನೆಯೆಲ್ಲಾ ಅಂದು ಅವರು ಕಂಡ ಸುತ್ತಲಿನ ಪ್ರಪಂಚದ ವರ್ಣನೆಯೇ. ಬಹುತೇಕ ವಿಜಯನಗರದ ವರ್ಣನೆಯೇ. ಬೆಟಗೇರಿ ಕೃಷ್ಣಶರ್ಮರು ಇದೇ ಅಭಿಪ್ರಾಯಪಟ್ಟಿದಾರೆ ಅವರ 'ಕರ್ಣಾಟಕ ಜನಜೀವನದ'ಲ್ಲಿ. ಈ ಪುಸ್ತಕ ರಚನೆಯಲ್ಲಿ ಮೋಹನ ತರಂಗಿಣಿಯನ್ನು ಧಾರಾಳವಾಗಿ ಆಧರಿಸಿದ್ದಾರೆ. ಕನಕದಾಸರ ಈ ವರ್ಣನೆಗಳಲ್ಲಿ ಅಂದು ಪ್ರಚಲಿತವಿದ್ದ ಸಂಗೀತದ ಆಕಾರವೇ ಅಲ್ಲದೆ ಈ ಕಲೆಯಲ್ಲಿ ಅವರಿಗಿದ್ದ ಗಾಢವಾದ ಜ್ಞಾನದ ಅರಿವುಂಟಾಗುತ್ತದೆ. ಅವರು ಬಳಸಿರುವ ತಾಂತ್ರಿಕ ಶಬ್ದಗಳು ಮತ್ತು ಸಂದರ್ಭಗಳನ್ನು ಗಮನಿಸಿದಲ್ಲಿ ಕನಕದಾಸರಿಗೆ ಸಂಗೀತಕಲೆಯ ಒಳ್ಳೆಯ ಪರಿಚಯ ಇದ್ದುದು ಕಂಡುಬರುತ್ತದೆ. ಸಂಗೀತ ತಿಳಿಯದವರಿಗೆ ಆ ಶಬ್ದಗಳನ್ನು ಉಚಿತ ಸಂದರ್ಭಗಳಲ್ಲಿ ಬಳಸಲು ಸಾಧ್ಯವಾಗುತ್ತಿರಲಿಲ್ಲ. ರಾಗಗಳೇ ಅಲ್ಲದೆ ಕನಕದಾಸರು ಅಂದು ಬಳಕೆಯಲ್ಲಿದ್ದ ಅನೇಕ ವಾದ್ಯಗಳ ಹೆಸರುಗಳನ್ನೂ ಹೇಳಿದಾರೆ–ರಾವಣಹಸ್ತ, ಕಿನ್ನರಿ, ಸ್ವರಮಂಡಲ, ರುದ್ರವೀಣೆ, ಧನುರ್ವೀಣೆ, ಕೂರ್ಮವೀಣೆ, ಆಹುಜ, ಮದ್ದಳೆ ...ಇತ್ಯಾದಿ. ಇದರಲ್ಲಿ ಇಂದು ರಾವಣಹಸ್ತ ನಮ್ಮಿಂದ ಮರೆಯಾಗಿದೆ. ಆದರೆ ರಾಜಸ್ಥಾನದ ಜಾನಪದ ಮೇಳಗಳಲ್ಲಿ ಕಂಡುಬರುತ್ತದೆ. ಕಿನ್ನರಿಯೂ ಹಾಗೆಯೇ, ಒಂದು ಕಾಲದಲ್ಲಿ ಕರ್ನಾಟಕದಲ್ಲಿ ಕಿನ್ನರಿಯೂ ಪ್ರಧಾನ ತಂತ್ರೀ ವಾದ್ಯವಾಗಿತ್ತು. ಇಂದಿನ ವೀಣೆಯ ಸ್ಥಾನವನ್ನು ಪಡೆದಿತ್ತು. ಆದರೆ ಇಂದು ಜಾನಪದ ಸಂಗೀತದಲ್ಲಿ ಕೆಲವೆಡೆಗಳಲ್ಲಿ ಉಳಿದುಕೊಂಡಿದೆ. ರುದ್ರವೀಣೆ ಮತ್ತು ಸ್ವರಮಂಡಲಗಳೂ ಇನ್ನೂ ಬಳಕೆಯಲ್ಲಿವೆ. ಧನುರ್ವೀಣೆ ಮತ್ತು ರಾವಣಹಸ್ತ ಎರಡೂ ಹೆಚ್ಚು ಕಡಿಮೆ ಒಂದೇ ಬಗೆಯ ವಾದ್ಯಗಳು. ಕೂರ್ಮವೀಣೆ ಇಂದು ಭಾರತದಲ್ಲಿ ಮಾಯವಾಗಿದೆ. ಆದರೆ ಆಗ್ನೇಯ ಏಷ್ಯದ ಅದರಲ್ಲಿಯೂ ಇಂಡೋನೇಸಿಯಾ ಸಂಗೀತದಲ್ಲಿ ಕಂಡುಬರುತ್ತದೆ. ಆಹುಜವೂ ಭಾರತೀಯ ಸಂಗೀತ ಕ್ಷೇತ್ರದಿಂದ ಮರೆಯಾಗಿದೆ. ಆದರೆ ಮದ್ದಳೆಯು ಇನ್ನೂ ಯಕ್ಷಗಾನಗಳಲ್ಲಿ ಬಳಕೆಯಲ್ಲಿದೆ.

ಈ ವಿವರಗಳನ್ನು ಕೊಡುವ ಉದ್ದಿಶ್ಯವಿಷ್ಟೆ. ಕನಕದಾಸರಿಗೆ ಸಂಗೀತದಲ್ಲಿ ಇದ್ದ ತಿಳುವಳಿಕೆಯನ್ನು ಮನವರಿಕೆ ಮಾಡಿಕೊಡುವುದೇ ಅಲ್ಲದೇ ಈ ತಿಳುವಳಿಯು ಕೇವಲ ಶಾಸ್ತ್ರಗ್ರಂಥಗಳನ್ನು ಆಧರಿಸಿ ಉದಾಹರಿಸುವಂತಹುದಲ್ಲ. ಅಂದಿನ ನಿಜ ಸ್ಥಿತಿಯ ಬಗೆಗೆ ಇದ್ದ ತಿಳುವಳಿಕೆ. ಸಂಗೀತದ ಸಜೀವ ಸ್ವರೂಪವನ್ನು ತೋರುವಂತಹುದು ಎಂಬ ಅಂಶವನ್ನು ಸ್ಪಷ್ಟಪಡಿಸುವುದು. ಇಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿ ಇದೆ. ಅದು ಈ ಸಂಗೀತಜ್ಞಾನದ ಉದ್ದಿಶ್ಯ, ಕನಕದಾಸರ ಸಂಗೀತಜ್ಞಾನವು ಕೇವಲ ಕಚೇರಿಗಳಿಗೆ ಅಥವಾ ಪ್ರೌಢಿಮೆಯ ಪ್ರದರ್ಶನಮಾಡಲು ಬೆಳೆಯಿಸಿಕೊಂಡುದಲ್ಲ. ಅದರ ಬಳಕೆ– ಅವರ ತತ್ವಜ್ಞಾನ ನೀತಿಬೋಧೆಗಳ ಪ್ರಚಾರ ಮಾಧ್ಯಮವಾಗಿ ಉಪಯೋಗಿಸಿಕೊಂಡರು. ಹಾಡಿನ ರೂಪದಲ್ಲಿ ಸಂಗೀತವು ಭಾರತೀಯ ಸಮಾಜದಲ್ಲಿ ಪ್ರಾಚೀನಕಾಲದಲ್ಲಿ ರಕ್ತಗತವಾಗಿದೆ. ಒಂದು ಪದ್ಯವನ್ನು ಹೇಳಬೇಕಾದರೂ ರಾಗ ಸಹಿತ ಹಾಡುವ ರೀತಿಯಲ್ಲಿ ಕನಕದಾಸರು ತಮ್ಮ ಸಂಗೀತಜ್ಞಾನವನ್ನು ಈ ವಿಧದಲ್ಲಿ ಬಳಸಿಕೊಂಡರು. ತಾವು ರಚಿಸಿದ ನೂರಾರು ಕೀರ್ತನೆಗಳನ್ನು ರಾಗಬದ್ಧವಾಗಿ ಹಾಡಿ ಜನರ ಮನಗಳಲ್ಲಿ ಸಂಗೀತದ ಬೀಜವನ್ನು ಬಿತ್ತಿದರು.

ಹರಿದಾಸ ಪಂಥದಲ್ಲಿ ಹಲವಾರು ಮಂದಿ ಪ್ರಸಿದ್ಧರಾದವರು. ಅವರೆಲ್ಲಾ ಕೀರ್ತನೆಗಳನ್ನು ರಚಿಸಿ ಹಾಡಿ ತಮ್ಮ ಅಂತರಂಗಭಕ್ತಿಯನ್ನು ಅಭಿವ್ಯಕ್ತಪಡಿಸಿದ್ದಾರೆ. ಅವರಲ್ಲಿ ಬಹು ಮಂದಿಯ ಪ್ರಭಾವ ಒಂದು ಪ್ರಾಕಾರಕ್ಕೆ ಮಾತ್ರ ಸೀಮಿತವಾಯಿತು. ಆದರೆ ಪುರಂದರದಾಸ ಮತ್ತು ಕನಕದಾಸರ ಸ್ಥಿತಿ ಹಾಗಲ್ಲ, ಸಮಾಜದ ವಿವಿಧ ವರ್ಗಗಳಲ್ಲೆಲ್ಲಾ ವ್ಯಾಪಕರಾದವರು. ಕರ್ನಾಟಕದ ವಿವಿಧ ಮೂಲೆಗಳಲ್ಲಿದ್ದ ಭಜನ ಮಂದಿರಗಳಲ್ಲಿ, ಬಹುತೇಕ ಮನೆಗಳಲ್ಲಿ ಮೊಳಗುತ್ತಿದ್ದುದ್ದು ಈ ಇಬ್ಬರು ರಚಿಸಿದ ಕೀತರ್ನೆಗಳೇ. ಇದಕ್ಕೆ ಕಾರಣ ಇವರಿಬ್ಬರೂ ಲೋಕಸಂಚಾರಿಗಳು. ರಸವತ್ತಾದ ರಾಗಪೋಷಣೆಯಿಂದ ಭಾವಪೂರಿತವಾಗಿ ಅವರು ಹಾಡುತ್ತಿದ್ದ ಕೀರ್ತನೆಗಳು ಜನಗಳ ಕಿವಿಗೆ ಹಿತವೆನಿಸಿ, ಅವರನ್ನು ಆಕರ್ಷಿಸಿ. ಪ್ರತಿಪಾದಿಸಿದ ವಿಷಯಗಳಸಹಿತವಾಗಿ ಜನತೆಯ ಮನಸ್ಸಿನಲ್ಲಿ ನೆಲೆಸಿದುವು. ಕಲೆಯು ಜನತೆಯ ಮಧ್ಯೆ ಜೀವಂತವಾಗಿ ಬೆಳೆಯಲು ಕಾರಣರಾದರು. ಪುರಂದರದಾಸರು ಕರ್ನಾಟಕದ ಹೊರಗಡೆಯೂ ಇಡೀ ದಕ್ಷಿಣಭಾರತದಲ್ಲಿ ಸಂಚರಿಸಿ ವಿಜಯನಗರದಲ್ಲಿ ಹೊಸ ವರ್ಚಸ್ಸಿನಿಂದ ವೃದ್ಧಿಯಾದ ಪರಂಪರಾನುಗತ ರಾಗಗಳೂ ಮತ್ತು ನಿರ್ಮಿತವಾದ ಹೊಸ

ರಾಗಗಳನ್ನೂ ಜನತೆಯ ಮಧ್ಯೆ ಪ್ರಸರಿಸಲು ಕಾರಣರಾದರು. ಆದರೆ ಕನಕದಾಸರ ಸಂಚಾರ ಬಹುತೇಕ ಕರ್ನಾಟಕದಲ್ಲಿ. ಆದುದರಿಂದ ಅವರ ಕೀರ್ತನೆಗಳು ಕರ್ನಾಟಕದ ಹೊರಗೆ ಅಷ್ಟಾಗಿ ಕೇಳಿಬರುತ್ತಿಲ್ಲ.

ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಇಪ್ಪತ್ತು–ಇಪ್ಪತ್ತೈದು ರಾಗಗಳನ್ನು ಬಳಸಿದ್ದಾರೆ. ಅವೆಲ್ಲಾ ಅಚ್ಚ ಕರ್ನಾಟಕ ಸಂಪ್ರದಾಯಕ್ಕೆ ಸೇರಿದಂತಹವು. ಅದರಲ್ಲಿ ಕೆಲವು ರಾಗಗಳು ಅಂದರೆ–ಕಾಂಭೋಜ, ಮುಖಾರಿ, ಮೋಹನ, ಶಂಕರಾಭರಣ, ನಾಟ್ಯ, ಕಲ್ಯಾಣಿ ಮುಂತಾದುವು ಅವರಿಗೆ ಬಹು ಪ್ರಿಯವೆನಿಸುತ್ತದೆ. ಈ ರಾಗಗಳಲ್ಲಿ ಹೆಚ್ಚು ಸಂಖ್ಯೆಯ ಕೀರ್ತನೆಗಳು ರಚಿತವಾಗಿವೆ. ಇದಲ್ಲದೆ ಮಧ್ಯಮಾವತಿ, ಕೇದಾರಗೌಳ, ಪಂತವರಾಳಿ, ಧನ್ಯಾಸಿ. ರೇಗುಪ್ತಿ, ಸಾವೇರಿ, ನವರೋಜು, ಆರಭಿ, ಭೈರವಿ, ಶ್ರೀ ಸಾರಂಗ ಮುಂತಾದ ರಾಗಗಳಲ್ಲಿಯೂ ರಚಿತವಾಗಿವೆ. ಇವುಗಳನ್ನು ಅಳವಡಿಸಿದ ವಿಧಾನವೂ ಹೆಚ್ಚು ವ್ಯಾಪಕವಾಗುವ ರೀತಿಯಲ್ಲಿ ಎನ್ನಬಹುದು. ಉದಾಹರಣೆಗೆ ಅವರ–ಭಜಿಸಿ ಬದುಕೆಲೆ ಮಾನವ, ನೀ ಮಾಯೊಳಗೊ, ಆರು ಬದುಕಿದರಯ್ಯ ಹರಿ ನಿನ್ನ ನಂಬಿ ಕೀರ್ತನೆಗಳನ್ನು ನೋಡುವ. ಮೂರೂ ಕಾಂಬೋಧಿ ರಾಗದಲ್ಲಿ ರಚಿತವಾಗಿವೆ. ತಾಳ–ಖಂಡಚಾಪಿನ ಚೌಕಟ್ಟು. ಮೂರರ ರಾಗಹಂದರವೂ ಒಂದೇ ರೀತಿಯದು. ಅವರ ಅನೇಕ ಕೀರ್ತನೆಗಳು ಈ ವಿಧಾನವನ್ನು ಅನುಸರಿಸಿವೆ. ಇದಕ್ಕೆ ಕಾರಣವಿಷ್ಟೇ. ಕನಕದಾಸರು ಈ ಕೀರ್ತನೆಗಳನ್ನು ರಚಿಸಿದುದು ತಮ್ಮ ಹಿರಿಮೆಯನ್ನಾಗಲೀ, ಪಾಂಡಿತ್ಯವನ್ನಾಗಲೀ ಪ್ರದರ್ಶನ ಮಾಡುವುದಕ್ಕಲ್ಲ. ಅವುಗಳನ್ನು ಎಲ್ಲರೂ ಗ್ರಹಿಸಿ ಹಾಡಲೋಸುಗ ರಚಿತವಾದವು. ಆದಕಾರಣ ಅವುಗಳ ರಾಗ ಸಂಯೋಜನೆ ಮತ್ತು ತಾಳದ ನಡೆ ಸರಳವಾಗಿವೆ. ಯಾರು ಬೇಕಾದರೂ ಸುಖವಾಗಿ ಹಿಡಿದು ಹಾಡಬಹುದು. ಒಟ್ಟಿನಲ್ಲಿ ಅದು ರಾಜಾಸ್ಥಾನಕ್ಕಾಗಿ ಅಲ್ಲ, ವಿದ್ವತ್ ಗೋಷ್ಠಿಗಲ್ಲ, ಜನತೆಗೋಸ್ಕರ. ನೆಲಕ್ಕೆ ಹತ್ತಿರವಾದ ಸಂಗೀತ, ಕ್ಷೇತ್ರವನ್ನು ಹಸನುಮಾಡಿದ ಸಂಗೀತ. ಜನತೆಯಲ್ಲಿ ಆಸಕ್ತಿ ಮತ್ತು ಅಭಿರುಚಿ ಬೆಳೆಯಿಸಿದಂತಹುದು.

ಎರಡನೆಯ ಮಹಾಯುದ್ಧಕ್ಕೆ ಹಿಂದಿನ ವರುಷಗಳ ಅಂದರೆ ಈ ಅರ್ಧ ಶತಮಾನದ ಹಿಂದನವರೆಗೂ ಭಜನೆಗೋಷ್ಠಿಗಳಲ್ಲಿ ಹಾಗೂ ಮನೆಗಳಲ್ಲಿ ಕೇಳಿಬರುತ್ತಿದ್ದ ಕನಕದಾಸರ ಜನಪ್ರಿಯ ಕೀರ್ತನೆಗಳಲ್ಲಿ–ಮೋಹನರಾಗದ–ನಮ್ಮಮ್ಮ ಶಾರದೆ ಕಾಂಭೋಜಿ ರಾಗದ–ಹಿಂದೆ ಹೇಳಿದ ಮೂರು ಕೀರ್ತನೆಗಳೂ; ಮಖಾರಿ ರಾಗದ–ಹೂವ ತರುವವರ ಮನೆಗೆ ; ಅಹುದಾದರಹುದೆನ್ನಿ ;

ಬಿಲಹರಿರಾಗದ–ತಲ್ಲಣಿಸದಿರು ; ಕೇದಾರಗೌಳದ ತನುನಿನ್ನದು ; ಭೂಪಾಲ ರಾಗದ–ಏಳು ನಾರಾಯಣ : ಮಧ್ಯಮಾವತಿರಾಗದ–ಕುಲ ಕುಲವೆಂದು ; ಮತ್ತು ಇನ್ನೂ ಕೆಲವು ಕೀರ್ತನೆಗಳು ನೆನಪಿಗೆ ಬರುತ್ತವೆ. ಇವುಗಳನ್ನು ಹಾಡುತ್ತಿದ್ದ ಹೆಂಗಸರಿಗಾಗಲಿ, ಭಜನೆ ಮಾಡುವವರಿಗಾಗಲೀ ಅನೇಕ ಮಂದಿ ಸಂಗೀತ ಬಲ್ಲವರಲ್ಲ. ಪರಂಪರೆಯಿಂದ ಬಂದ ಈ ಕೀರ್ತನೆಗಳನ್ನು ಕಿವಿಯಿಂದ ಕೇಳಿ ಕಲಿತವರು. ಸಂಗೀತದ ನಿಯಮ ತಿಳಿಯದಿದ್ದರೂ ಅವರು ಹಾಡುತ್ತಿದ್ದ ರಾಗಗಳ ಆಕಾರ, ಸ್ವಚ್ಛವಾಗಿರುತ್ತಿತ್ತು, ಸರಳವಾಗಿರುತ್ತಿತ್ತು. ಅದರಲ್ಲಿ ಸ್ವಲ್ಪ ಸಂಗೀತ ಪರಿಚಯವಿದ್ದವರು ಅಭಿರುಚಿಯನ್ನು ಬೆಳೆಸಿಕೊಂಡು ಕನಕದಾಸರ ಇನ್ನೂ ಸ್ವಲ್ಪ ಪ್ರೌಢವಾದ ಕೀರ್ತನೆಗಳನ್ನು ಹಾಡುತ್ತಿದ್ದರು. ಅಂತಹ ಪ್ರೌಢವಾದ ಹಾಗೂ ಬಿಕ್ಕಟ್ಟಾದ ಕೀರ್ತನೆಗಳೂ ಇವೆ. ಆ ಕೊನೆಯಲ್ಲಿ ಜಾನಪದ ಮಟ್ಟುಗಳಲ್ಲಿ ಹಾಡಬೇಕಾದವೂ ಇವೆ.

ಇಲ್ಲಿ ನಾವು ನೆನೆಸಿಕೊಳ್ಳಬೇಕಾದ ಇನ್ನೊಂದು ವಿಷಯವಿದೆ. ಸಂಗೀತ ಕಲೆಯ ಬೆಳವಣಿಗೆಯಲ್ಲಿ ರಾಜಮಹಾರಾಜರುಗಳ ಮುಖ್ಯಪಾತ್ರವನ್ನು ವರ್ಣಿಸುವುದು ಒಂದು ಈಚಿನ ಸಂಪ್ರದಾಯವಾಗಿದೆ. ಸೂಕ್ಷ್ಮವಾಗಿ ಪರಿಶೀಲಿಸಿದರೆ ನಮಗೆ ಇನ್ನೊಂದು ಚಿತ್ರ ಕಾಣಬರುತ್ತದೆ. ರಾಜರುಗಳೂ ಸಂಗೀತದ ಕಲೆಗೆ ಪ್ರೋತ್ಸಾಹ ಕೊಟ್ಟದು ನಿಜ. ಆದರೆ ಅದು ದೊರೆತದ್ದು ಅವರ ಆಶ್ರಯ ಪಡೆದ ಕೆಲಮಂದಿಗೆ ಮಾತ್ರ. ಕಲೆಯ ಬೆಳವಣಿಗೆಯೂ ಅರಮನೆಯ ನೆರಳಿಗೇ ಸೀಮಿತವಾಯಿತು. ಆದರೆ ನಾಡಿನಲ್ಲಿ ಎಲ್ಲಾ ಕಲೆ ಬೆಳೆದ ಬಗೆ ಹೇಗೆ ? ಹಿಂದೆ ಆಸ್ಥಾನಗಳನ್ನು ಬೆಳಗಿದ ಅನೇಕ ಸಂಗೀತ ದಿಗ್ಗಜಗಳೂ ಸಹ ಗ್ರಾಮಾಂತರಗಳಿಂದ ಬಂದುದು ಗಮನಾರ್ಹ ವಿಷಯ. ನಾಡಿನ ಎಲ್ಲ ಭಾಗದಲ್ಲಿಯೂ, ಅದರಲ್ಲಿಯೂ ಪುಣ್ಯಕ್ಷೇತ್ರಗಳು, ಪ್ರಸಿದ್ಧ ದೇವಾಲಯಗಳಿದ್ದ ಊರುಗಳಲ್ಲಿ ಸಂಗೀತವು ಬದುಕಿನ ಅಂಗವಾಗಿ ಬೆಳೆದು ಮೊಳಗುತ್ತಿತ್ತು. ಹೀಗೆ ಸಂಗೀತವನ್ನು ಕಲಿತು ಸಾಧನೆಯಿಂದ ಇನ್ನೂ ಉತ್ತಮಪಡಿಸಿಕೊಂಡ ಕೆಲವರು ಸಾಹಸಿಗಳು ಕೀರ್ತಿ ಸಂಪಾದನೆಯ ದೃಷ್ಟಿಯಿಂದ ರಾಜಧಾನಿಗಳಿಗೆ ತೆರಳಿದರು. ಆದರೆ ನಾಡಿನ ವಿವಿಧ ಭಾಗಗಳಲ್ಲಿ ಬಲವಾಗಿ ಬೇರೂರಿದ್ದ ಫಲವಾಗಿ ಸಂಗೀತ ಕಲೆಯ ಬೆಳವಣಿಗೆಗೆ ಯಾವ ತೊಂದರೆಯೂ ಆಗಲಿಲ್ಲ. ಹೀಗೆ ನಾಡಿನ ನೆಲದಲ್ಲಿ ಬೇರೂರಿ ಜನತೆಯ ಮನಸ್ಸಿನಲ್ಲಿ ಸಂಗೀತ ಕಲೆಯು ನೆಲೆಸಿ ಬಹುಮುಖವಾಗಿ ಬೆಳೆಯಲು ಕಾರಣರಾದ ಕನಕದಾಸರು ಒಬ್ಬ ಸಂಗೀತ ಶಿಲ್ಪಿಗಳೆನ್ನಬಹುದು.

ಇಂದಿನ ಶಾಸ್ತ್ರೀಯ ಸಂಗೀತ ಕ್ಷೇತ್ರದ ಸ್ಥಿತಿಯನ್ನು ನೋಡಿದಲ್ಲಿ ಕನಕದಾಸರಂತಹ ಮಹನೀಯರ ಸೇವೆಯ ಮಹತ್ವವು ಅರ್ಥವಾಗುವುದು. ಇಂದು ಅದು ಜನತೆಯ ಸಂಪರ್ಕ ತಪ್ಪಿ ಬೇರಿಲ್ಲದ ಮರದಂತಾಗಿದೆ, ಸಮಾಜದ ಒಂದು ಪದರಕ್ಕೆ ಸೀಮಿತವಾಗಿ, ಕೃತಕಶಕ್ತಿವರ್ಧಕಗಳನ್ನು ಅಪೇಕ್ಷಿಸುವಂತೆ ಆಗಿದೆ. ಈ ಹಿನ್ನೆಲೆಯಲ್ಲಿ ತಲತಲಾಂತರದಿಂದ ಬಂದ ಸಂಗೀತವನ್ನು ಜನತೆಯ ಬದುಕಿನ ಅಂಗವಾಗಿ ಮಾಡಿ ಸಜೀವ ಕಲೆಯಂತೆ ಬೆಳೆದು ಬರಲು ಕಾರಣರಾದ ಕನಕದಾಸರ ಸೇವೆ ಸ್ಮರಣೀಯವಾದುದು.

# ಕನಕದಾಸರ ಕೃತಿಗಳಲ್ಲಿ ಜಾನಪದ ಅಂಶಗಳು

**ಡಾ. ಜೀ. ಶಂ. ಪರಮಶಿವಯ್ಯ**

## ೧

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ವಚನಸಾಹಿತ್ಯ ಮೊದಲನೆಯ ಘಟ್ಟದಲ್ಲಿ ಜನಸಾಮಾನ್ಯರ ಆಶೋತ್ತರಗಳಿಗೆ ಸ್ಪಂದಿಸಿದಂತೆಯೇ ಎರಡನೆಯ ಘಟ್ಟದಲ್ಲಿ ದಾಸಸಾಹಿತ್ಯ ಸ್ಪಂದಿಸುತ್ತದೆ. ದೃಷ್ಟಿ, ಧೋರಣೆ ಮತ್ತು ಪ್ರೇರಣೆಗಳಲ್ಲಿ ಈ ಎರಡು ಪಂಥಗಳಲ್ಲೂ ಮಿಡಿದಿರುವುದು ಒಂದೇ ನಾಡಿ. ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಜನರಲ್ಲಿ ಬಿತ್ತುತ್ತ ಸಮಾಜದ ಅಂಕುಡೊಂಕುಗಳನ್ನು ವಿಡಂಬಿಸುತ್ತ, ತಮ್ಮನ್ನೂ ಆತ್ಮ ವಿಮರ್ಶೆಗೆ ಗುರಿಪಡಿಸಿಕೊಳ್ಳುತ್ತ ವಚನಕಾರರೂ ಕೀರ್ತನಕಾರರೂ ತಮ್ಮ ಉದ್ದೇಶ ಸಾಧನೆಗೆ ಪೂರಕವಾಗುವ ಸಾಹಿತ್ಯವನ್ನು ಸೃಷ್ಟಿಮಾಡಿದರು. ಬಹುಪಾಲು ಸಾಮಾನ್ಯ ವರ್ಗದಿಂದಲೇ ಬಂದ ಇವರು ಸಾಹಿತ್ಯದಲ್ಲಿ ಸರಳತೆಯನ್ನು ಸಾಧಿಸಿ ಅದನ್ನು ಜನಸಾಮಾನ್ಯರ ಬಾಗಿಲಿಗೇ ಒಯ್ದರು. ಬದುಕಿನ ನಿಗೂಢ ಸತ್ಯಗಳನ್ನು ವಚನ ಹಾಗೂ ಕೀರ್ತನ ಮಾರ್ಗಗಳಿಂದ ಭೇದಿಸಿ ಜನತೆಗೆ ಆತ್ಮೋನ್ನತಿಯ ಮಾರ್ಗವನ್ನು ತೋರಿದರು. ಹೀಗೆ ಮಾಡುವಾಗ ಅವರ ಸಾಹಿತ್ಯ ನಿರ್ಮಿತಿಗೆ ಮೂಲ ಪರಿಕರವಾದದ್ದು ಜನಸಾಮಾನ್ಯರ ಬದುಕು. ಜನಜೀವನವನ್ನು ಹತ್ತಿರದಿಂದ ನೋಡಿ ಅದನ್ನು ತಮ್ಮ ಸಾಹಿತ್ಯದಲ್ಲಿ ಸೂರೆಮಾಡಿದರು. ಜನಪದ ಸಂಸ್ಕೃತಿ ಗಾಢವಾಗಿ ಈ ಎರಡೂ ಸಾಹಿತ್ಯ ದೃಷ್ಟಿಯಲ್ಲಿ ಬೆನ್ನೆಲುಬಾಗಿ ನಿಂತಿರುವುದರಿಂದಲೇ ಅದರ ಸೊಗಡು ಹೆಚ್ಚಿದೆ ; ಸೊಗಸು ಇಮ್ಮಡಿಸಿದೆ. ವಚನ ಹಾಗೂ ಕೀರ್ತನ ಸಾಹಿತ್ಯದಲ್ಲಿ ಸಾಮಾನ್ಯತಾಶ್ರೀ ಪಡೆದುಕೊಂಡ ಈ ಸ್ಥಾನ ಆ ಸಾಹಿತ್ಯಕ್ಕೆ ಒಂದು ಅರ್ಥಪೂರ್ಣತೆಯನ್ನು ತಂದುಕೊಟ್ಟಿದೆ.

ದಾಸಪರಂಪರೆಯ ಪ್ರಮುಖ ಕೀರ್ತನಕಾರರಾದ ಕನಕದಾಸರು ಜನಸಾಮಾನ್ಯ ವರ್ಗದಿಂದ ಬಂದ ಒಬ್ಬ ಸಂತಕವಿ. ಇವರ ಬದುಕಿನ ಹಿನ್ನೆಲೆ ಬಾಳಿ ಬದುಕಿದ ಪರಿಸರ ಇವರ ಸಾಹಿತ್ಯಕ್ಕೆ ಹೊಸ ಶಕ್ತಿಯನ್ನೂ, ಹೊಸ

ಆಯಾಮವನ್ನೂ ಒದಗಿಸಿದೆ. ಜನಪದ ಜೀವನದ ಸಮೃದ್ಧ ಅನುಭವಗಳನ್ನು ದಟ್ಟವಾಗಿ ತಮ್ಮ ರಚನೆಗಳಲ್ಲಿ ತುಂಬಿಕೊಟ್ಟಿರುವುದರಿಂದ ಇವರ ಸಾಹಿತ್ಯ ಹೆಚ್ಚು ಸತ್ವಪೂರ್ಣವೂ ವೈಶಿಷ್ಟ್ಯಪೂರ್ಣವೂ ಆಗಿದೆ. ಪ್ರತಿಭಾಸಂಪನ್ನರಾದ ಕನಕದಾಸರು ಕೇವಲ ಕೀರ್ತನೆಗಳಿಗೆ ಮಾತ್ರವೇ ತಮ್ಮ ಸಾಹಿತ್ಯ ನಿರ್ಮಿತಿಯನ್ನು ಸೀಮಿತಗೊಳಿಸಿದವರಲ್ಲ. ಸತ್ವಪೂರ್ಣವಾದ ಕಾವ್ಯಗಳನ್ನು ರಚಿಸುವುದರ ಮೂಲಕ ತಮ್ಮ ಹೆಗ್ಗಳಿಕೆಯನ್ನು ಮೆರೆದಿದ್ದಾರೆ. 'ರಾಮಧಾನ್ಯ ಚರಿತೆ'. 'ನಳಚರಿತ್ರೆ' ಮತ್ತು 'ಮೋಹನ ತರಂಗಿಣಿ' ಈ ಮೂರೂ ಕಾವ್ಯಗಳು ಕಥಾವಸ್ತುವಿನ ದೃಷ್ಟಿಯಿಂದ ಗಮನಾರ್ಹವಾದುವು. ಸುಪ್ರಸಿದ್ಧ ಕಥಾನಕಗಳನ್ನು ಕೈಬಿಟ್ಟು, ಜನಪದ ಕಥೆಗಳ ಚೌಕಟ್ಟಿಗೆ ಒಳಪಡುವ, ಬಹುಬೇಗ ಜನರ ಮನಸ್ಸನ್ನು ಸೂರೆಗೊಳ್ಳಬಹುದಾದ ವಸ್ತುಗಳನ್ನು ಆಯ್ಕೆಮಾಡಿಕೊಂಡಿರುವುದರಲ್ಲೇ ಅವರ ಜಾಣ್ಮೆಯನ್ನು ಗುರುತಿಸಬಹುದಾಗಿದೆ. 'ಹರಿಭಕ್ತಿಸಾರ' ಮತ್ತು ಕೀರ್ತನೆಗಳು ಭಾಗವತ ಪಂಥದ ದೃಷ್ಟಿಧೋರಣೆಗಳನ್ನು ಹೆಚ್ಚಾಗಿ ಮೈಗೂಡಿಕೊಂಡು ರಚಿತವಾದ ಸಾಹಿತ್ಯವೆನಿಸಿ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಬೋಧಿಸುತ್ತವೆ. ಪರಮ ಭಾಗವತರಾದ ಕನಕದಾಸರ ಕೃತಿಗಳಲ್ಲಿ ವಿಷ್ಣು ಪಾರಮ್ಯದ ದೃಷ್ಟಿಯೇ ಪ್ರಧಾನವಾದರೂ ಅದು ಕೇವಲ ಪ್ರಚಾರ ಸಾಹಿತ್ಯವಾಗಿಲ್ಲ. ಕಲೆಯಾಗಿ ಮೈವೆತ್ತಿರುವುದರಿಂದ ಅವರು ಕೀರ್ತನಕಾರರಲ್ಲಿ ಒಂದು ಪ್ರಮುಖ ಸ್ಥಾನವನ್ನು ಪಡೆದುಕೊಳ್ಳಲು ಸಾಧ್ಯವಾಗಿದೆ. ಕನಕದಾಸರು ತಮ್ಮ ಕಾವ್ಯಗಳಲ್ಲಿ ತುಂಬಿಕೊಟ್ಟಿರುವ ದಟ್ಟವಾದ ಜೀವನಾನುಭವ, ಕೌಶಲಪೂರ್ಣವಾದ ಕತೆಗಾರಿಕೆ, ಮನೋಜ್ಞವಾದ ವರ್ಣನೆಗಳು ಸರಳವೂ ಸುಲಭವೂ ಆದ ಶೈಲಿ ಒಂದು ಕಡೆ ಅವರ ವೈಶಿಷ್ಟ್ಯಕ್ಕೆ ಕಾರಣವಾದರೆ, ಇನ್ನೊಂದು ಕಡೆ ಅವರ ಕೀರ್ತನೆಗಳಲ್ಲಿ ಹಾಸುಹೊಕ್ಕಾಗಿರುವ ಜನಪದ ಜೀವನದ ಬಗೆಬಗೆಯ ಅನುಭವಗಳು ಕನಕರ ಹಿರಿಮೆಯನ್ನು ಸಾರುತ್ತವೆ. ಕನಕರ ಕೀರ್ತನೆಗಳಲ್ಲಿ ಕಂಡುಬರುವ ಜನಪದ ಸಂಸ್ಕೃತಿಯ ನೈಜಚಿತ್ರಣ ಅವರ ಕೀರ್ತನೆಗಳ ಸತ್ವವನ್ನೂ, ವೈವಿಧ್ಯವನ್ನೂ ಹೆಚ್ಚಿಸಿವೆ ಎನ್ನಬಹುದು.

## ೨

ಕನಕದಾಸರ ಕೀರ್ತನೆಗಳಲ್ಲಿನ ಜಾನಪದ ಅಂಶಗಳನ್ನು ಈ ಕೆಳಕಂಡಂತೆ ವರ್ಗೀಕರಿಸಿಕೊಳ್ಳಬಹುದು :

೧. ಜನಪದ ಗೀತೆಗಳ ಪ್ರಭಾವ

೨. ಜನಪದ ಸಂಗೀತದ ಪ್ರಭಾವ

೩. ಜನಪದ ಕಲೆಗಳ ಪ್ರಭಾವ

೪. ಜನಪದ ಸಂಪ್ರದಾಯಗಳ ಪ್ರಭಾವ

೫. ಜನಪದ ಗಾದೆ ಒಗಟುಗಳ ಪ್ರಭಾವ

ಕನಕದಾಸರು ಸಾಮಾನ್ಯವರ್ಗದಿಂದ ಬಂದವರು. ಜನರ ಕಲೆಗಳನ್ನು, ಹಾಡುಗಳನ್ನು ಹತ್ತಿರದಿಂದ ಕಂಡವರು, ಕೇಳಿ ನಲಿದವರು. ಜನಪದ ಗೀತೆಯ ಪ್ರಮುಖ ಪ್ರಕಾರಗಳಾದ ಕೋಲಾಟದ ಪದಗಳು, ಡೊಳ್ಳುಪದಗಳೂ, ತತ್ವಪದಗಳು ಅವರನ್ನು ವಿಶೇಷವಾಗಿ ಆಕರ್ಷಿಸಿವೆ. ಅವುಗಳ ಅರ್ಥಸೌಂದರ್ಯಕ್ಕೆ, ಲಯಮಾಧುರ್ಯಕ್ಕೆ ಅವರು ಮಾರುಹೋಗಿದ್ದಾರೆ. ತಾವೇ ಹಾಡಿದ್ದಾರೆ, ಕುಣಿದಿದ್ದಾರೆ, ಸವಿದಿದ್ದಾರೆ. ಆದುದರಿಂದ ಅವರ ಎಲ್ಲ ಕೀರ್ತನೆಗಳಲ್ಲೂ ಇಂಥ ಜಾನಪದೀಯ ರಚನೆಗಳ ಪ್ರಭಾವ ದಟ್ಟವಾಗಿ ಮೈಗೂಡಿಕೊಂಡಿದೆ. ವಿವಿಧ ಸಂಪ್ರದಾಯದ ಜನಪದ ಕಲಾಮೇಳಗಳನ್ನು ಹಾಡುಗಾರಿಕೆಯ ಸಂಪ್ರದಾಯಗಳನ್ನು ಅವರು ಬಲ್ಲವರಾಗಿದ್ದಾರೆ ಅವರ ಕೀರ್ತನೆಗಳಿಗೆ ಜನಪದ ಕವಿಗಳು ಋಣಿಯಾಗಿದ್ದಾರೆ. ಒಂದೆರಡು ನಿದರ್ಶನಗಳನ್ನು ಇಲ್ಲಿ ನೋಡಬಹುದು:

ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನ್ಯಾರಮ್ಮ ॥

ಎಂಬ ಪಲ್ಲವಿಯಿಂದ ಆರಂಭವಾಗುವ ಹಾಡು ನೀಲಗಾರ ಸಂಪ್ರದಾಯದಲ್ಲಿ ಗುರುತಿಸಲ್ಪಟ್ಟಿದೆ. ಮಂಟೇಸ್ವಾಮಿ ಸಂಪ್ರದಾಯದ ನೀಲಗಾರರು ತಮ್ಮ ಧಾರ್ಮಿಕ ಕಾವ್ಯವಾದ 'ಮಂಟೇಸ್ವಾಮಿ ಕಾವ್ಯ'ದ ಗಣಸ್ತುತಿಯನ್ನು ಈ ಹಾಡಿನಿಂದಲೆ ಆರಂಭಿಸುತ್ತಾರೆ. ಕನಕದಾಸರು ನೀಲಗಾರ ಸಂಪ್ರದಾಯವನ್ನು ಕಂಡವರು. ಏಕೆಂದರೆ ಈ ಸಂಪ್ರದಾಯ ಮೈಸೂರು, ಬೆಂಗಳೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಪ್ರಚಲಿತವಾಗಿದೆ. ಈ ಜನಪ್ರಿಯ ಗೀತೆ ಬಾಯಿಂದ ಬಾಯಿಗೆ ಹರಿದು ಜನಪದ ಕಾವ್ಯ ಸಂಪ್ರದಾಯವೊಂದರಲ್ಲಿ ಬೆರೆತುಹೋಗಿರುವುದು ಇಲ್ಲಿ ಗಮನಾರ್ಹ, ಮಂಟೇಸ್ವಾಮಿ ಕಾವ್ಯದ ಆರಂಭದ ಗಣಸ್ತುತಿ ಹೀಗಿದೆ–

ಅಮ್ಮಮ್ಮ ಸರಸ್ವತಿ ಚಿನ್ಮಯ ಮೂರುತಿ
ನಿಮ್ಮೊಳಗಿವನಾರಮ್ಮ–ಕಾಮಸುತನ ವೈರಿ
ಸಂಡಿಲ ಬೆನುಮಯ್ಯ–ನಮ್ಮಯ್ಯ ಗಣನಾಯಕ
ಉಟ್ಟುಪಟ್ಟಿದಟ್ಟಿ ಬಿಗಿದುಟ್ಟ ಚಲ್ಲಣ
ದಿಟ್ಟ ತಾ ಇವನಾರಮ್ಮ ॥

ಕನಕದಾಸರ ಕೀರ್ತನೆಯೊಂದು ಮೌಖಿಕ ಮೂಲದ ಜನಪದ ಸಾಹಿತ್ಯದಿಂದ ಬಂದು ಹೆಚ್ಚು ಜನಪ್ರಿಯತೆಯನ್ನು ಸಾಧಿಸಿಕೊಳ್ಳಲು ಮುಖ್ಯವಾದ ಕಾರಣ ಅದರಲ್ಲಿ ಅಡಕವಾಗಿರುವ ಜನಪದ ಸಂಗೀತದ ಮೂಲಲಯ ಹಾಗೂ ಅಲ್ಲಿ ಮೂಡಿನಿಲ್ಲುವ ಗಣಪತಿಯ ವೈಶಿಷ್ಟ್ಯಪೂರ್ಣವಾದ ಚಿತ್ರ. ಉಟ್ಟದಟ್ಟಿ, ಬಿಗಿದುಟ್ಟ ಚಲ್ಲಣ, ಹೊಟ್ಟೆಯ ಗಣನಾಥ, ಮೋರೆ ಕಪ್ಪಿನಭಾವದ, ಮೊರದಗಲ ಕಿವಿಯ, ಕೋರೆದಾಡೆಯ ಗಣನಾಥ ಅವನು ಈ ವರ್ಣನೆ ಜನಪದರ ಮನಸ್ಸಿನ ಮೇಲೆ ಚಿರಮುದ್ರೆಯನ್ನೊತ್ತುವಷ್ಟು ಸ್ವಾರಸ್ಯಕರವಾದುದು. ಅಲ್ಲದೆ ಜನಪದ ಭಾಷೆಯ ಬೆಡಗೂ ಇಲ್ಲಿನ ಆಕರ್ಷಣೆಗೆ ಪೂರಕವೆನಿಸುತ್ತದೆ.

ಕನ್ನಡ ಜನಪದ ಗೀತಸಾಹಿತ್ಯದಲ್ಲಿ ಡೊಳ್ಳಿನ ಹಾಡುಗಳಿಗೆ ಒಂದು ಪ್ರಮುಖ ಸ್ಥಾನವಿದೆ. ಡೊಳ್ಳನ್ನು ತಾಳಬದ್ಧವಾಗಿ ಬಡಿಯುತ್ತ ವೈವಿಧ್ಯಮಯವಾದ ಗೀತೆಗಳನ್ನು ಡೊಳ್ಳುಮೇಳದಲ್ಲಿ ಹಾಡಲಾಗುತ್ತದೆ. ಇದನ್ನು ಡೊಳ್ಳಿನ ಕೈಪಟ್ಟು ಎಂದು ಕರೆಯುತ್ತಾರೆ. ಸ್ವಾರಸ್ಯಕರವಾದ ಕಥನಗೀತೆಗಳೂ, ಬಿಡಿಹಾಡುಗಳೂ ಈ ಮೇಳದಲ್ಲಿ ಉಳಿದುಬಂದಿವೆ. ಡೊಳ್ಳಿನ ಸಮೇತ ಊರಾಡಲು ಹೋಗುವ ಕಲಾವಿದರು ಬೇರೆ ಬೇರೆ ಊರುಗಳಲ್ಲಿ ಹಂಚಿಹೋದ ತಮ್ಮ ಹೆಣ್ಣುಮಕ್ಕಳಿಗೆ ವರ್ಷಕ್ಕೊಮ್ಮೆ ತಮ್ಮ ಕುಲದೈವದ ದರ್ಶನ ಮಾಡಿಸುವ ವೈಖರಿಯ ಒಂದು ಪ್ರಸಿದ್ಧ ಪಲ್ಲವಿಯನ್ನು ಜಾನಪದ ಮೂಲದಿಂದ ಕನಕದಾಸರು ಸ್ವೀಕರಿಸಿದ್ದಾರೆ.

ದೇವಿ ನಮ್ಮ ದ್ಯಾವರು ಬಂದರು
ಬನ್ನಿರೇ ನೋಡ ಬನ್ನಿರೇ

ಎಂಬ ಸಾಲುಗಳಲ್ಲಿ ದೇವರನ್ನು ಊರಾಡಲು ತಂದು ತಮ್ಮ ತಮ್ಮ ಹೆಣ್ಣುಮಕ್ಕಳನ್ನು ಆತ್ಮೀಯತೆಯಿಂದ ಊರ ಮುಂದಕ್ಕೆ ಕರೆದು ದರ್ಶನ ಮಾಡಿಸುತ್ತಾರೆ. ಹೆಣ್ಣುಮಕ್ಕಳು ಆರತಿಯನ್ನು ತಂದು ತಮ್ಮ ಮನೆದೇವರ ಉತ್ಸವಮೂರ್ತಿಗೆ ವಂದಿಸಿ ಮೊರದಲ್ಲಿ ದವಸಧಾನ್ಯವನ್ನು ನೀಡಬೇಕು.

ಮೇಲಿನ ಚರಣಗಳು ಡೊಳ್ಳುಮೇಳದವರಲ್ಲಿ ಮಾತ್ರ ಪ್ರಚಲಿತವಿರದೆ, ನಾಗಮಂಗಲ, ಕುಣಿಗಲು, ಚನ್ನಪಟ್ಟಣ, ಚನ್ನರಾಯಪಟ್ಟಣ ಸುತ್ತಿನಲ್ಲಿ ಕಾಣಬರುವ ಭಾಗವಂತಿಕೆ ಮೇಳದಲ್ಲಿಯೂ ಜನಪ್ರಿಯವಾಗಿದೆ. ಇಲ್ಲಿಯೂ ದೀವಳಿಗೆಯಲ್ಲಿ ದೇವರೊಡನೆ ಊರಾಡಲುಹೋಗುವ ಸಂಪ್ರದಾಯವಿದೆ. ಆಯಾ ದೈವಗಳಿಗೆ ಹೊಂದಿಸಿಕೊಂಡು ಮುಂದೆ ಅನುಕೂಲಕ್ಕೆ ತಕ್ಕಂತೆ ಹಾಡನ್ನು ಬೆಳೆಸಿಕೊಂಡು ಹೋಗುತ್ತಾರೆ. ಕುರುಬರು ಬೀರಪ್ಪನನ್ನು ಕುರಿತಂತೆ ಹಾಡಿದರೆ

ವೈಷ್ಣವ ಮೂಲದ ಭಾಗವಂತಿಕೆ ಮೇಳದವರು ರಂಗನಾಥ, ಗರುಡಾಳ, ಬೇಟೆರಾಯ, ಹನುಮಂತ ಮೊದಲಾದ ದೈವಗಳ ಮಹಿಮೆಯನ್ನು ಕೊಂಡಾಡುತ್ತಾರೆ. ಕನಕದಾಸರು ತಮ್ಮ ಈ ಕೀರ್ತನೆಯಲ್ಲಿ ವಿಷ್ಣುವಿನ ಹತ್ತು ಅವತಾರಗಳ ಚಿತ್ರವನ್ನು ನೀಡುತ್ತಾರೆ. ಕೊನೆಯ ಪದ್ಯದಲ್ಲಿ ಇದೊಂದು ಡೊಳ್ಳುಪದ ಎಂಬಂತೆ 'ಡೊಳ್ಳು' 'ತಾಳ' ಮತ್ತು ಹಾಡುಗಾರರನ್ನೂ ಪ್ರಸ್ತಾಪಿಸುತ್ತಾರೆ :

ಡೋಳಿನ ಮೇಲ್ ಕೈಯ ಬರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಟಾನ್ಯ್ಯಾ
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ಯ್ಯಾ ॥

ಬರಮಪ್ಪ, ಶಿವನಪ್ಪ, ಹನುಮಪ್ಪ, ಕನಕಪ್ಪ ಎಂಬ ಹೆಸರುಗಳು ಡೊಳ್ಳುಮೇಳದ ಗ್ರಾಮೀಣ ಕಲಾವಿದರನ್ನೇ ನಿರ್ದೇಶಿಸಿ ಹೇಳಿದಂತಿದೆ. ಬ್ರಹ್ಮ, ಶಿವ, ಭಾಗವತೋತ್ತಮನಾದ ಆಂಜನೇಯ, ದಾಸಶ್ರೇಷ್ಠನಾದ ಕನಕದಾಸರನ್ನು ಹಿನ್ನೆಲೆಯಾಗಿಟ್ಟುಕೊಂಡು ಮಹಾವಿಷ್ಣುವಿನ ಅವತಾರಗಳ ಮಹಿಮೆಯನ್ನು ಬಣ್ಣಿಸಿರುವ ರೀತಿ ಜಾನಪದೀಯವಾದುದು. ಇಲ್ಲಿನ ಭಾಷಾಪ್ರಯೋಗವೂ ಹಾಡಿನ ಮಟ್ಟಿಗೆ, ಹಾಡಿನ ವಿಷಯಕ್ಕೆ ಹೊಂದಿಕೊಂಡು ಒಂದು ಜನಪದಗೀತೆ ಎಂಬಂತೆಯೇ ಮೂಡಿಬಂದಿದೆ. 'ಮೋಹನ ತರಂಗಿಣಿ', 'ಹರಿಭಕ್ತಿಸಾರ', 'ನಳಚರಿತ್ರೆ'ಗಳಂಥ ಶ್ರೇಷ್ಠ ಕೃತಿಗಳ ಈ ಪ್ರೌಢಕವಿ ಜನಪದ ಮೂಲದ ಗೀತೆಗಳನ್ನು ಅಭ್ಯಾಸಮಾಡಿ ಅವುಗಳಿಂದ ಪ್ರಭಾವಿತನಾಗಿ ಕೀರ್ತನೆಗಳ ಮೈಗೆ ಜಾನಪದ ಸೊಗಡಿನ ಲೇಪನಮಾಡಿ ಹಾಡಿರುವ ರೀತಿ ಮೆಚ್ಚುವಂತಿದೆ.

ಕನಕದಾಸರ ಮೇಲೆ 'ಡೊಳ್ಳಿನ ಪದಗಳ' ಪ್ರಭಾವ ಆದಂತೆಯೇ, ಕುರುಬ ಜನಾಂಗದ ಪ್ರಭಾವವೂ ಆಗಿರುವುದು ಅವರ ಕೀರ್ತನೆಗಳಿಂದ ಸ್ಪಷ್ಟವಾಗುತ್ತದೆ:

ನಾವು ಕುರುಬರು ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿಯ ಹಿಂಡುಗಳ ॥

ಎಂಬ ಪಲ್ಲವಿಯೊಡನೆ ಆರಂಭವಾಗುವ ಕೀರ್ತನೆ ಸ್ಪಷ್ಟವಾಗಿ ಕುರಿಸಾಕುವ ವೃತ್ತಿಯ ನೇರ ಅನುಭವವನ್ನು ತಂದುಕೊಡುತ್ತದೆ. ಕುರಿಕಾಯುವ ಕುರುಬ ತನ್ನ ಕುರಿಗಳ ಜೊತೆ ಮೇಕೆಗಳನ್ನೂ ಹೊಂದಿರುತ್ತಾನೆ. ಟಗರುಗಳೂ ಇರುತ್ತವೆ. ಕುರಿಯ ಹಿಂಡಿನ ಜೊತೆ ನಾಯಿಗಳೂ ಇರುತ್ತವೆ. ತೋಳ ಚಿರತೆಗಳು ಬಂದು ಹಿಂಡಿನ ಮೇಲೆ ಎರಗುವ ಸಾಧ್ಯತೆಯಿರುತ್ತದೆ. ಕಾಗಿನೆಲೆ ಆದಿಕೇಶವನೆಂಬ ಅಜ್ಜ ನರಕುರಿಗಳನ್ನು ಕಾಯುವ ವೈಖರಿ ಇದು :

ಅಷ್ಟಮದ ಮತ್ಸರಗಳೆಂಬ ಟಗರುಗಳು
ದೃಷ್ಟಿಜೀವಾತ್ಮನೆಂಬ ಆಡು
ಸೃಷ್ಟಿಪ್ರಸಿದ್ಧವೆಂತೆಂಬುವಾ ಹೋತಗಳು
ಕಟ್ಟಿಕೋಲಿನಲಿ ಇರುತಿರುವ ನಮ್ಮಜ್ಜ ॥

ಕೋಲನ್ನು ಹಿಡಿದ ಆದಿಕೇಶವನೆಂಬ 'ಅಜ್ಜ,' ಮರವೆಯಲಿ ಯಮನೆಂಬ ತೋಳ ಹೊಕ್ಕು ತರುಬಿ ಹಿಂಜಾಲದಲಿ ಕುರಿಯ ಮುರಿವುದ ಕಂಡು ಅರಿತೂ ಅರಿಯದ ಹಾಗೆ ಇರುತ್ತಾನೆ. ಇವನು ಅಷ್ಟು ಪ್ರಾಣಿಗಳಿಗೂ ಅಂಬಲಿ ಮಾಡಿ ಹೊಟ್ಟೆತುಂಬುವ ಹಾಗೆ ಎರೆಯುತ್ತಾನೆ. ಜೀವ ದೈವಗಳ ಸಂಬಂಧವನ್ನು ಚಿತ್ರಿಸುವಲ್ಲಿ ಕನಕದಾಸರು ಕುರಿಯ ಹಿಂಡಿನ ಪ್ರತಿಮೆಯನ್ನು ಅತ್ಯಂತ ಸಾರ್ಥಕವಾಗಿ ಇಲ್ಲಿ ಬಳಸಿಕೊಂಡಿದ್ದಾರೆ ಎಂಬುದು ಮುಖ್ಯವಾಗಿರುವಂತೆಯೇ, ಆ ವೃತ್ತಿಯ ಸಮಗ್ರ ವಿವರಗಳ ದಟ್ಟ ಅನುಭವವೂ ಇರುವುದು ಶ್ರುತವಾಗುತ್ತದೆ. ಜನಪದ ಜೀವನದ ಇಂಥ ನೈಜ ಚಿತ್ರಣವನ್ನು ನೀಡಲು ಕುರುಬನಾದ ಕನಕನಿಗೆ ಮಾತ್ರ ಸಾಧ್ಯ ಎಂಬುದರಲ್ಲಿ ಅನುಮಾನವಿಲ್ಲ.

ಕನಕದಾಸರಿಗೆ ಜೀವನದ ವಿವಿಧ ಕ್ಷೇತ್ರಗಳ ಅನುಭವ ದಟ್ಟವಾಗಿರುವುದು ಅವರ ಇತರ ಕೀರ್ತನೆಗಳಲ್ಲಿ ಕಂಡುಬರುತ್ತದೆ. 'ಎಲ್ಲಾರೂ ಮಾಡುವುದು ಹೊಟ್ಟೆಗಾಗಿ' ಎಂಬ ಕೀರ್ತನೆ ಹೊಟ್ಟೆಯಪಾಡಿನ ವಿವಿಧ ವೃತ್ತಿಗಳನ್ನು ಸುರುಳಿ ಸುರುಳಿಯಾಗಿ ಬಿಚ್ಚಿತೋರಿಸುತ್ತದೆ. ಜನಪದ ಜೀವನ ಬಗೆಗಳನ್ನು ಅತ್ಯಂತ ನೈಜವಾಗಿ ಚಿತ್ರಿಸುವ ರೀತಿ ಮೆಚ್ಚುವಂತಿದೆ.

ಅಂಗಡಿಗಳನ್ನು ಹೂಡಿ ವ್ಯಂಗ್ಯ ಮಾತುಗಳಾಡಿ
ಭಂಗಬಿದ್ದು ಗಳಿಸುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ
ಕುಂಟೆ ತುದಿಗೆ ಕೊರಡುಹಾಕಿ ಹೆಂಟೆಮಣ್ಣು ಸಮಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ಕೊಟ್ಟಣಾವ ಕುಟ್ಟಿಕೊಂಡು ಕಟ್ಟಿಗೆಯ ಹೊತ್ತುಕೊಂಡು
ಕಷ್ಟಮಾಡಿ ತಿಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ತಾಳ ದಂಡಿಗೆ ಶ್ರುತಿಮೇಳ ತಂಬೂರಿಗೊಂಡು
ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

–ಹೀಗೆ ಬದುಕಿಗಾಗಿ ಬಗೆಬಗೆಯಲ್ಲಿ ಹೋರಾಡುವ ಚಿತ್ರಗಳನ್ನು ನೀಡುವಲ್ಲಿ ಆಯಾ ಕಸುಬುಗಳ ವೈಶಿಷ್ಟ್ಯವನ್ನು ಸೂಕ್ಷ್ಮವಾಗಿ ಗಮನಿಸಿದ್ದಾರೆ. 'ಕುಂಟೆ', 'ಹೆಂಟೆ', 'ರೆಂಟೆ' ಮೊದಲಾದ ವ್ಯವಸಾಯ ಸಂಬಂಧವಾದ ಶಬ್ದಗಳನ್ನು

ಬಳಸುವಲ್ಲಿ ಇವರು ಇತರ ದಾಸರಿಗಿಂತ ಹೇಗೆ ಭಿನ್ನವಾದ ಅನುಭವಗಳನ್ನು ತಂದುಕೊಡುತ್ತಾರೆ ಎಂಬುದನ್ನು ಗಮನಿಸಬಹುದಾಗಿದೆ. 'ರೆಂಟೆ' ಅನೇಕ ಜೊತೆ ಎತ್ತುಗಳನ್ನು ಕಟ್ಟಿ ಹೊಲವನ್ನು ಹದಗೊಳಿಸುವ ಒಂದು ಮಾರಿನೇಗಿಲು. ಉತ್ತರ ಕರ್ನಾಟಕದ ಈ ವ್ಯವಸಾಯ ಸಾಧನವನ್ನು ಕನಕದಾಸರು ಬಲ್ಲವರಾಗಿದ್ದಾರೆ.

ಮೇಲಿನ ವ್ಯವಸಾಯದ ವಿವರಗಳ ಜೊತೆಗೆ 'ಕೊಟ್ಟಣ ಕಟ್ಟುವ', 'ಕಟ್ಟಿಗೆ ಮಾರಿ' ಜೀವಿಸುವ, ತಾಳತಂಬೂರಿ ದಂಡಿಗೆಗಳೊಡನೆ ಸೂಳೆಯರು ಮೇಳ ನಡೆಸುವ, ಕಲ್ಲುದೊಣ್ಣೆ ಹಿಡಿದು ಹಳ್ಳದಲ್ಲಿ ಕಾದುಕುಳಿತು ಕಳ್ಳತನಮಾಡುವ ಬಗೆಬಗೆಯ ಜೀವನ ವೃತ್ತಾಂತಗಳನ್ನು ತಮ್ಮ ಕೀರ್ತನೆಯಲ್ಲಿ ಸೆರೆಹಿಡಿದಿದ್ದಾರೆ.

ಕನಕದಾಸರು ಕೀರ್ತನೆಗಳಲ್ಲಿ ಅನೇಕ ಜನಪದಗೀತೆಗಳ ಮಟ್ಟುಗಳನ್ನು ನೇರವಾಗಿ ಬಳಸಿಕೊಂಡಿರುವುದನ್ನು ಕಾಣಬಹುದಾಗಿದೆ :

> ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ
> ಬಹುಜನರು ನೆರೆತಿಳಿದು ಪೇಳಿಮತ್ತಿದನು

> ಎಂಬ ಪಲ್ಲವಿ, ನೇರವಾಗಿ

> ಅಹುದ್ಹೇಳಿರಣ್ಣ ನೀವಲವೇಳಿರೊ
> ಬಲ್ಲಂಥ ಜಾಣರು ತಿಳಿದ್ಹೇಳಿರೊ

ಎಂಬ ಜನಪದ ಗೀತೆಯ ಸಂಬಂಧವನ್ನು ಪಡೆದುಕೊಳ್ಳುತ್ತದೆ.

> ಎಲ್ಲಿ ನೋಡಿದರಲ್ಲಿ ರಾಮ–ಇದ
> ಬಲ್ಲ ಜಾಣರ ದೇಹದಲ್ಲಿ ನೋಡಣ್ಣ

ಎಂಬ ಪಲ್ಲವಿಯೂ ಮೇಲಿನ ಸಾಲುಗಳ ಜೊತೆಗೆ ಹೊಂದಿಕೊಳ್ಳುವುದಲ್ಲದೆ ತತ್ತ್ವಪದವೊಂದರ ನೆನಪನ್ನು ತರುತ್ತದೆ.

> ಊರಿಗೆ ಬಂದರೆ ದಾಸಯ್ಯ । ನಮ್ಮ
> ಕೇರಿಗೆ ಬಾ ಕಂಡ್ಯ ದಾಸಯ್ಯ ॥

ಎಂಬ ಪಲ್ಲವಿ ತಮ್ಮ ಆರಾಧ್ಯದೈವವಾದ ಕೇಶವನನ್ನು ತನ್ನ ಬಳಿಗೆ ಬರಮಾಡಿಕೊಳ್ಳುವ ಬಗೆಯನ್ನು ಸೂಚಿಸುತ್ತದೆ. ಇದು ಕೋಲಾಟದ ಪದದ ಜಾಯಮಾನವನ್ನು ತನ್ನ ಲಯದಲ್ಲಿ ಹೊಂದಿದ್ದರೆ 'ಕೇರಿ ಕೇರಿ ತಿರುಗುತಾನೆ ನಮ್ಮ ಕೇರಿಗೇಕೆ ಬರವಲ್ಯೊ' ಎಂಬ ಕೋಲಾಟ ಪದದ ಭಾವವನ್ನೆ ಅಭಿವ್ಯಕ್ತಿಸುತ್ತದೆ. ಕಿನ್ನರಜೋಗಿಯೊಬ್ಬನನ್ನು ಮುಗ್ಧಹೆಣ್ಣೊಬ್ಬಳು ತನ್ನ ಕೇರಿಗೆ ಬರುವಂತೆ ಹಾರೈಸುವ, ಹಂಬಲಿಸುವ ಚಿತ್ರ ಇಲ್ಲಿ ಬರುತ್ತದೆ.

'ಮುತ್ತು ಬಂದಿದೆ ಕೇರಿಗೆ' ಎಂಬ ಕೀರ್ತನೆಯಲ್ಲಿ ಮುತ್ತು ಮಾರುವ ಶೆಟ್ಟಿ ಊರಿಗೆ ಬಂದ ಚಿತ್ರವಿದೆ, 'ಬಾಯಿನಾರಿದ ಮೇಲೆ ಏಕಾಂತವೆ' ಎಂಬ ಕೀರ್ತನೆಯಲ್ಲಿ 'ತಾಯಿ ತೀರಿದ ಮೇಲೆ ತೌರಾಸೆಯೆ' ಎಂಬ ಸಾಲಿನ ಮೂಲಕ ತೌರಪದಗಳ ಪ್ರಭಾವ ಎದ್ದುಕಾಣುತ್ತದೆ. 'ದಾನಧರ್ಮ ಮಾಡಿ ಸುಖಿಯಾಗು ಮನವೆ' ಎಂಬ ಕೀರ್ತನೆಯಲ್ಲಿ 'ಎಕ್ಕನಾತಿ ಎಲ್ಲಮ್ಮ ಮಾರಿದುರ್ಗಿಯು ಚೌಡಿ' ಮುಂತಾದ ನಾಡದೈವಗಳ ಪ್ರಸ್ತಾಪವನ್ನು ಮಾಡುವುದರ ಜೊತೆಗೆ ಅವುಗಳಿಗೆ ಸಂಬಂಧಿಸಿದ 'ಬಲಿ' 'ತಂಬಿಟ್ಟಿನ ಆರತಿ' 'ಬೇವಿನುಡುಗೆ'ಗಳ ವಿವರಗಳನ್ನೂ ನೀಡುತ್ತಾರೆ.

ಸಂಭ್ರಮದಲೊಂದ್ಹೊತ್ತು ನೇಮದಲ್ಲಿದ್ದು
ತಂಬಿಟ್ಟಿನಾ ದೀಪ ಹೊರಲೇತಕೆ
ಕೊಂಬುಹೋತ ಕುರಿಕೋಣನಾ ಬಲಿಗೊಂಬ
ಡೊಂಬಿದೈವಗಳ ಭಜಿಸದಿರು ಮನವೆ ॥
ಚಿಗುರೆಲೆ ಬೇವಿನ ಸೊಪ್ಪು ನಾರಸೀರೆ
ಬಗೆ ಬಗೆಯ ಶೃಂಗಾರಮಾಡಿ
ನೆಗೆನೆಗೆದು ಆಡಲು ಕುಣಿಯಲು ನಿನಗಿನ್ನು
ಮಿಗಿಲಾದ ಮುಕುತಿಯುಂಟೇ ಹುಚ್ಚು ಮನವೆ ॥

ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಪ್ರಸ್ತಾಪಿಸಿರುವ ಅನೇಕ ಜಾನಪದ ಅಂಶಗಳ ಸಾಲಿನಲ್ಲಿ ಜನಪದ ಪ್ರದರ್ಶಕ ಕಲೆಯಾದ ಗೊಂಬೆಯಾಟದ ವಿಷಯ ಪ್ರಮುಖವಾದುದು. ಅತ್ಯಂತ ಪ್ರಾಚೀನವಾದ ಈ ಕಲೆಯ ಬಗ್ಗೆ ಸಾಕಷ್ಟು ಪ್ರಾಚೀನ ಉಲ್ಲೇಖಗಳು ಲಭ್ಯವಾಗುತ್ತವೆ. ಸೂತ್ರದ ಗೊಂಬೆಯಾಟದ ಪ್ರಭಾವ ಕನಕದಾಸರ ಮೇಲೆ ಸಾಕಷ್ಟು ಆಗಿದೆ. ಧಾರವಾಡ ಜಿಲ್ಲೆಯ ಅಂತರವಳ್ಳಿ ಮುಂತಾದ ಕಡೆಗಳಲ್ಲಿ ಈಗಲೂ ಈ ಕಲೆ ಜೀವಂತವಾಗಿದ್ದು ಸಾಕಷ್ಟು ಜನಪ್ರಿಯವಾಗಿದೆ. ಈ ಕಲೆಯನ್ನು ತಮ್ಮ ಕೀರ್ತನೆಗಳಲ್ಲಿ ಮೇಲಿಂದ ಮೇಲೆ ಉಲ್ಲೇಖಿಸುವ ಕನಕದಾಸರು ಇದರ ಬಗ್ಗೆ ಹೆಚ್ಚು ಆಸಕ್ತಿಯನ್ನು ಹೊಂದಿದ್ದುದು ಕಂಡುಬರುತ್ತದೆ. ಸೂತ್ರದ ಗೊಂಬೆಯ ಒನಪು ಒಯ್ಯಾರ ಒಡವೆ ವಸ್ತ್ರಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ :

ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು
ಅಳ್ಳಾಚಾರಿಗೊಂಬೆಯಂತೆ ಆಡಿ ಹೋಯಿತು ॥

ಈ ಬದುಕು ಎಷ್ಟು ನಶ್ವರವಾದುದು, ಕ್ಷಣಿಕವಾದುದು ಎಂಬುದನ್ನು

ವಿಸ್ತರಿಸಿ ಹೇಳಲು ಕನಕದಾಸರು ಎತ್ತಿಕೊಂಡ ಉದಾಹರಣೆ ತುಂಬ ಅರ್ಥಪೂರ್ಣವಾದುದು. ಚೆನ್ನಾಗಿ ಅಲಂಕಾರಮಾಡಿದ ಈ ಗೊಂಬೆ ರಂಗದ ಮೇಲೆ ಕಾಣಿಸಿಕೊಂಡು ತನ್ನ ಪಾತ್ರ ಮುಗಿದಕೂಡಲೇ ಮೂಲೆಯಲ್ಲಿ ಒರಗುತ್ತದೆ. ಆ ಅಲಂಕಾರವನ್ನು, ಆ ವೈಭವವನ್ನು ಅನಂತರ ಯಾರು ಕೇಳಬೇಕು ! ಮಾನವಜೀವನ ಎಂಬುದು ಈ ಸೂತ್ರದ ಗೊಂಬೆಯ ಕ್ಷಣಕಾಲದ ಬದುಕಿನಂತೆ!

ಕನಕದಾಸರು ಸೂತ್ರದ ಗೊಂಬೆಯನ್ನು ಹೆಸರಿಸುವಾಗ 'ಅಳ್ಳಾಚಾರಿ ಗೊಂಬೆ' ಎನ್ನುತ್ತಾರೆ. ಸೂತ್ರದಗೊಂಬೆಯನ್ನು ತಯಾರಿಸುವವರು, ಅವುಗಳನ್ನು ಸಂರಕ್ಷಿಸಿ ಇಡುವವರು, ಆ ಕಲೆಗೆ ತಮ್ಮನ್ನು ಅರ್ಪಿಸಿಕೊಂಡವರು 'ಆಚಾರಿ'ಗಳೆಂದು ಕರೆಯಲ್ಪಡುವ ವಿಶ್ವಕರ್ಮ ಜನಾಂಗದವರು. ಈ ಕಲೆಯ ಮೂಲಪುರುಷನೇ ಒಬ್ಬ ಆಚಾರಿ. ಒಕ್ಕಲಿಗರ ಹೆಣ್ಣು ಮಗಳನ್ನು ಪ್ರೀತಿಸಿ ಲಗ್ನವಾದ ಇವನು ತಾನು ಪಡೆದ ಏಳು ಜನ ಗಂಡುಮಕ್ಕಳನ್ನು ಗೊಂಬೆ ಆಡಿಸುವ ವೃತ್ತಿಯಲ್ಲಿ ತೊಡಗಿಸಿದ. ಗೊಂಬೆಗಳನ್ನು ತಾನೇ ಮಾಡಿಕೊಟ್ಟ. ಈ ಏಳು ಜನ ಮಕ್ಕಳೂ ಗೊಂಬೆಗಳೊಡನೆ ಒಂದೊಂದು ದಿಕ್ಕಿಗೆ ಹೋಗಿ ಆ ಕಲೆಯನ್ನು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆಯೂರಿಸಿದರು. ಕರ್ನಾಟಕ, ಆಂಧ್ರ, ತಮಿಳುನಾಡು, ಕೇರಳ ಮೊದಲಾದ ದಕ್ಷಿಣದ ರಾಜ್ಯಗಳಲ್ಲದೆ ಪೂರ್ವದ ಹೊರದೇಶಗಳಿಗೂ ಈ ಕಲೆ ಹೋಯಿತು. ಈ ಕಲೆಗೂ ಅಳ್ಳಾಚಾರಿಗೂ ಇದ್ದ ಸಂಬಂಧದ ಪ್ರಥಮ ಉಲ್ಲೇಖ ಕನಕದಾಸರಲ್ಲಿ ಬಂದಿರುವುದು ಮಹತ್ವದ ವಿಷಯ.

ಮೇಲಿನ ಸಾಲುಗಳ ಜೊತೆಗೆ ಕನಕದಾಸರು ಈ ಸೂತ್ರದ ಗೊಂಬೆಯ ಬಗ್ಗೆ ಇನ್ನೂ ಅನೇಕ ಕಡೆ ಪ್ರಸ್ತಾಪಿಸುತ್ತಾರೆ.

ಡಿಂಬಿನೊಳು ಪ್ರಾಣವಿರಲು ಕಂಬಸೂತ್ರಗೊಂಬೆಯಂತೆ
ಎಂದಿದ್ದರೊಂದು ದಿನ ಸಾವು ತಪ್ಪದು

*  *  *

ನಾನಾ ಜನ್ಮದಲಿ ಬಂದ ನಾಟಕದ ಗೊಂಬೆಯಿದು

*  *  *

ಬೊಂಬೆಯಾಟವನಾಡಿಸಿದ ಮಹಾಭಾರತವ
ಅಂಬುಜಭವಾನಿಯರು ರಕ್ಷಿಸಲು
ಕುರುಭೂಮಿಯೆಂಬ ಪುರವೀಧಿ ರಂಜಿಸಲು
ಮರೆಯ ಮಾಯದ ಐದು ತೆರೆಯ ಹಾಕಿ

ಧರಣೀಶರೆಂಬ ನರಪ್ರತಿಮಗಳನಳವಡಿಸಿ
ನರನ ಹಯರಥದ ವಾಘೇಯ ಸೂತ್ರವಿಡಿದು
ಓದುವನು ನಾರದನು ವಾದ್ಯಕಾರನು ಶಂಭು
ಬಾದರಾಯಣನೆ ಕತೆಗಾರನು ॥

ಹೀಗೆ ಗೊಂಬೆಯಾಟದ ಎಲ್ಲ ಸ್ತರಗಳನ್ನೂ ವಿವರವಾಗಿಯೇ ಕನಕದಾಸರು ಹೇಳಿದ್ದಾರೆ. ಕತೆಗಾರ(ಭಾಗವತ), ವಾದ್ಯಗಾರ, ನರಪ್ರತಿಮೆಗಳು, ಮಾಯದ ಐದು ತೆರೆಗಳು, ಅದರಲ್ಲಿ ಪುರವೀಧಿಯ ಚಿತ್ರ ಮುಂತಾದ ಅಂಶಗಳು ಕನಕರು ಗೊಂಬೆಯಾಟವನ್ನು ತಮ್ಮ ಊರಿನಲ್ಲೇ ಬಾಲ್ಯದಿಂದಲೇ ನೋಡಿ ಹಿಗ್ಗಿರಬೇಕೆಂಬ ಅಂಶವನ್ನು ಸ್ಪಷ್ಟಪಡಿಸುತ್ತವೆ. ಈ ಗೊಂಬೆಯಾಟವನ್ನು ಸೂತ್ರದಗೊಂಬೆಯಾಟವೆಂದು ತಿಳಿದವರು ಹೇಳಿದರು. ಗ್ರಾಮೀಣರ ಬಾಯಲ್ಲಿ ಅದು 'ಪುತ್ಥಳಿಗೊಂಬೆ'ಯಾಟವಾಗಿದೆ. ಪುತ್ಥಲಿ ಎಂಬ ಸಂಸ್ಕೃತ ಶಬ್ದ ಕನ್ನಡದ 'ಗೊಂಬೆ'ಯೊಡನೆ ಇಲ್ಲಿ ಸೇರಿರುವುದು ಗಮನಾರ್ಹ. ಈಗಲೂ ಗ್ರಾಮಾಂತರ ಪ್ರದೇಶದಲ್ಲಿ ಇದು 'ಪುತ್ಥಳಿಗೊಂಬೆ'ಯಾಟವೆ. ಕನಕದಾಸರು ತಮ್ಮ ಕೀರ್ತನೆಯಲ್ಲಿ ಈ ಶಬ್ದಪ್ರಯೋಗ ಮಾಡಿದ್ದಾರೆ :

ಪುತ್ಥಳಿಬೊಂಬೆಯ ಚಿತ್ರದಿ ಬರೆದರೆ
ಮುತ್ತನು ಕೊಟ್ಟರೆ ನುಡಿದೀತೆ ॥

ಕನಕದಾಸರ ಕೀರ್ತನೆಗಳಲ್ಲಿ ಒಂದು ಕಡೆ 'ಕೇಳಿಕೆ' ಎಂಬ ಪ್ರಯೋಗವಿದೆ. ನಾಟಕಕ್ಕೆ ಸಂಬಂಧಪಟ್ಟಂತೆಯೇ ಈ ಶಬ್ದವನ್ನು ಅವರು ಪ್ರಯೋಗಿಸಿದ್ದಾರೆ. ಬೆಂಗಳೂರು ಜಿಲ್ಲೆಯ ಪೂರ್ವಪ್ರದೇಶಗಳಲ್ಲಿ ಕೋಲಾರ ಜಿಲ್ಲೆಯಲ್ಲಿ ಯಕ್ಷಗಾನ ಬಯಲಾಟಗಳನ್ನು 'ಕೇಳಿಕೆ' ಎಂದೇ ಕರೆಯುತ್ತಾರೆ. ಯಕ್ಷಗಾನಗಳನ್ನು 'ಆಟ' ಎನ್ನಲಾಗುತ್ತದೆ. ಬಯಲಿನಲ್ಲಿ ಆಡುವ ಆಟ ಬಯಲಾಟ. ಈ 'ಕೇಳಿಕಾ', ಕೇಳಿಕೆಯಾಗಿ ಉಳಿದು ಬಂದಿದೆ. ಇದೊಂದು ಅಪೂರ್ವವಾದ ಉಲ್ಲೇಖವೇ ಸರಿ.

ಜನಪದ ಸಂಸ್ಕೃತಿಯನ್ನು ಹೀರಿ ಬೆಳೆದ ಕನಕದಾಸರು ಸಹಜವಾಗಿ ತಮ್ಮ ಭಾಷೆಯಲ್ಲಿ ಜಾನಪದ ಮುದ್ರೆಯನ್ನು ಒತ್ತಿದ್ದಾರೆ. 'ಮಿಣಿ', 'ಊರೂಟ', 'ಕುಂಟೆ', 'ರಂಟೆ', 'ಗುಂಡು ಮಿಣಿಕು ಹಕ್ಕಿ' ಮುಂತಾದ ಶಬ್ದಗಳನ್ನು ಅವಲೋಕಿಸಿದರೇ ಸಾಕು ಜನಪದ ಭಾಷೆಯ ಅಪೂರ್ವ ಪ್ರಯೋಗಗಳು ಹೇಗೆ ಕೀರ್ತನೆಗಳಲ್ಲಿ ದಾಖಲಾಗಿ ನಮಗೆ ಖುಷಿಕೊಡುತ್ತವೆ ಎಂಬುದು ಸ್ಪಷ್ಟವಾಗುತ್ತದೆ. ಸಾಕಷ್ಟು ಜನಪ್ರಿಯ ಗಾದೆಗಳನ್ನೂ ಕನಕದಾಸರು

ಪ್ರಯೋಗಿಸುತ್ತಾರೆ :

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ
(ಮಂಗನ ಕೈಲಿ ಮಾಣಿಕ್ಯ ಕೊಟ್ಟಂತೆ)
ಕೋಣನಿದಿರಿಗೆ ಕಿನ್ನರಿಯ ಮೀಟಿದಂತೆ
(ಕೋಣನ ಮುಂದೆ ಕಿನ್ನರಿ ನುಡಿಸಿದಂತೆ)
ಕಾಣದವನಿಗೆ ಕನ್ನಡಿಯ ತೋರಿಸಿದಂತೆ
(ಕುರುಡನಿಗೆ ಕನ್ನಡಿಹಿಡಿದಂಗೆ)

ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಧಾರಾಳವಾಗಿ ಸೂರೆಮಾಡಿರುವ ಜನಪದ ಮಟ್ಟುಗಳು, ಹಾಡಿನ ಲಯಗಳು, ಗಾದೆಗಳು, ಸಂಪ್ರದಾಯಗಳು ಜನಪದ ಜೀವನದ ವಿವಿಧ ಸ್ತರಗಳು. ಅವರು ತಮ್ಮ ಪರಿಸರಕ್ಕೆ ಎಷ್ಟು ಋಣಿ ಎಂಬುದನ್ನು ತೋರಿಸುತ್ತವೆ. ಅವರ ಕೀರ್ತನೆಗಳು ಕೇವಲ ಕೇಶವ ಭಕ್ತಿಪ್ರಸಾರದ ನಿರ್ಜೀವ ರಚನೆಗಳಾಗಿರದೆ ಜನಪದ ಜೀವನದ ನಾಡಿಮಿಡಿತವನ್ನು ನಮ್ಮ ಹೃದಯಕ್ಕೆ ಮುಟ್ಟಿಸುವ ಜೀವಂತ ಗೀತೆಗಳೂ ಆಗಿವೆ.

೩

ಕನಕದಾಸರು ಕೀರ್ತನಕಾರರಾಗಿ ಒಳ್ಳೆಂಯ ಸ್ಥಾನವನ್ನು ಪಡೆದುಕೊಳ್ಳುವಂತೆಯೇ ಕವಿಯಾಗಿಯಾಗಿಯೂ ಗಮನಾರ್ಹ ಕೃತಿಗಳನ್ನು ರಚಿಸಿದ್ದಾರೆ ಎಂಬುದನ್ನು ಹಿಂದೆಯೇ ನೋಡಿದೆವು. 'ಹರಿಭಕ್ತಿಸಾರ'ವನ್ನು ಬಿಟ್ಟರೆ 'ರಾಮಧಾನ್ಯಚರಿತೆ', 'ನಳಚರಿತ್ರೆ' ಮತ್ತು 'ಮೋಹನ ತರಂಗಿಣಿ'–ಈ ಮೂರು ಕಾವ್ಯಗಳೂ ಕಥಾ ವೈವಿಧ್ಯದ ದೃಷ್ಟಿಯಿಂದ ಗಮನಾರ್ಹವಾಗಿವೆ. ರಾಮಧಾನ್ಯಚರಿತೆ ಒಂದು ರೀತಿಯ ಜಾನಪದ ಆವರಣದ ಹಿನ್ನೆಲೆಯಲ್ಲಿ ರಚಿತವಾಗಿ 'ರಾಗಿ' ಮತ್ತು 'ಭತ್ತ'ಗಳ ನಡುವಿನ ಸ್ಪರ್ಧೆಯನ್ನು ಆಧಾರವಾಗಿಟ್ಟುಕೊಂಡಿದೆ. ವಸ್ತುದೃಷ್ಟಿಯಿಂದ ಇದೊಂದು ವಿನೂತನ ಕೃತಿ. 'ನಳಚರಿತ್ರೆ' ಮಹಾಭಾರತದ ಉಪಾಖ್ಯಾನವಾಗಿದ್ದು, ರೇಖಾರೂಪದ ಮೂಲಕಥೆಯನ್ನು ಕನಕದಾಸರು ಆರಿಸಿಕೊಂಡು ಒಂದು ಸ್ವತಂತ್ರ ಕಾವ್ಯವನ್ನಾಗಿ ಬೆಳೆಸಿದ್ದಾರೆ. ಈ ಎರಡೂ ಕಾವ್ಯಗಳಲ್ಲಿ ಜಾನಪದ ಅಂಶಗಳು ವಿಶೇಷವಾಗಿ ಕಾಣದಿದ್ದರೂ ಕಥನಕಲೆಯ ದೃಷ್ಟಿಯಿಂದ ಸಹೃದಯರ ಮನಸ್ಸನ್ನು ಗೆದ್ದು ಕೊಳ್ಳುತ್ತವೆ.

ಕನಕದಾಸರ ಮೂರು ಕಾವ್ಯಗಳಲ್ಲಿ 'ಮೋಹನ ತರಂಗಿಣಿ' ಜಾನಪದ ಅಂಶಗಳನ್ನು ದಟ್ಟವಾಗಿ ಹೊಂದಿರುವ ಕೃತಿಯಾಗಿದೆ. ಭಾಗವತ ಪುರಾಣದಿಂದ

ಮೂಲವಸ್ತುವನ್ನು ಆಯ್ಕೆಮಾಡಿಕೊಂಡಿರುವ ಕನಕದಾಸರು ಇಲ್ಲಿಯೂ ಒಳ್ಳೆಯ ಜಾಣ್ಮೆಯನ್ನು ಮೆರೆದಿದ್ದಾರೆ. ಕಥಾಕುತೂಹಲದ ದೃಷ್ಟಿಯಿಂದ ಈ ಕಾವ್ಯ ಒಂದು ದೃಷ್ಟಿಯಿಂದ ರಂಜನೀಯವಾಗಿದ್ದರೆ ವರ್ಣನೆಗಳ ದೃಷ್ಟಿಯಿಂದ ಮತ್ತೊಂದು ಬಗೆಯಲ್ಲಿ ಕುತೂಹಲವನ್ನು ಕೆರಳಿಸುತ್ತದೆ. ಜನಜೀವನ ನಿರೂಪಣೆಯ ದೃಷ್ಟಿಯಿಂದ ಅತ್ಯಂತ ಮಹತ್ವದ ಕಾವ್ಯವೆನಿಸುತ್ತದೆ. ಇಲ್ಲಿ ಜಾನಪದದ ಪಾತ್ರವೇ ಪ್ರಮುಖವಾಗಿರುವುದರಿಂದ ಇದಕ್ಕೆ ಒಂದು ಹೊಸ ಆಯಾಮ ದೊರೆತಂತಾಗಿದೆ.

'ಮೋಹನ ತರಂಗಿಣಿ' ಎರಡು ಕಥೆಗಳು ಮೇಳವಿಸಿ ಆಗಿರುವ ಒಂದು ಕಾವ್ಯ. ಪ್ರದ್ಯುಮ್ನ ರತಿಯರ ಕಥೆಯಿಂದ ಆರಂಭವಾಗಿ ಅನಿರುದ್ಧ ಉಷೆಯರ ಕತೆಯಲ್ಲಿ ಪರಿಸಮಾಪ್ತಿಯನ್ನು ಕಾಣುತ್ತದೆ. ಈ ಎರಡೂ ಕತೆಗಳು ರಾಕ್ಷಸ ಪಾತ್ರಗಳ ಪ್ರವೇಶದಿಂದ ಜನಪದ ಕಥೆಯ ಆವರಣವನ್ನು ಪಡೆದುಕೊಂಡು ಸಂಕೀರ್ಣ ಕತೆಗಳ ಗುಂಪಿನಲ್ಲಿ 'ಅತಿಮಾನುಷ' ವರ್ಗದಲ್ಲಿ ಗುರುತಿಸಲ್ಪಡುತ್ತವೆ. ಪಕ್ಷಿಗಳು ಮರಿಗಳಿಗೆ ಗುಟುಕು ಕೊಡುವ ದೃಶ್ಯದಿಂದಲೇ ಕಾವ್ಯಕ್ಕೆ ಜನಪದ ಕಥೆಯ ನಡೆ ಸಾಧಿತವಾಗುತ್ತದೆ. ಮಕ್ಕಳಿಲ್ಲದ ರುಕ್ಮಿಣಿ ಪಕ್ಷಿಗಳಿಂದ ಸ್ಫೂರ್ತಿಪಡೆದು ಮಕ್ಕಳನ್ನು ಹಂಬಲಿಸುತ್ತಾಳೆ. ಮುಂದೆ ಪ್ರದ್ಯುಮ್ನ ಜನನವಾಗುತ್ತದೆ. ಶಂಬರಾಸುರ ಆ ಮಗುವನ್ನು ಹಂಬಲಿಸುತ್ತಾಳೆ. ಮುಂದೆ ಪ್ರದ್ಯುಮ್ನ ಜನನವಾಗುತ್ತದೆ. ಶಂಬರಾಸುರ ಆ ಮಗುವನ್ನು ಅಪಹರಿಸಿ ಆಕಾಶಮಾರ್ಗದಲ್ಲಿ ಕೊಂಡೊಯ್ಯುವಾಗ ಸಮುದ್ರಕ್ಕೆ ಎಸೆಯುತ್ತಾನೆ. ಮೀನೊಂದು ಆ ಮಗುವನ್ನು ನುಂಗಿ ಮುಂದೆ ಬೆಸ್ತನ ಕೈಗೆ ಸಿಗುತ್ತದೆ. ಶಂಬರಾಸುರನ ಅರಮನೆಗೇ ಆ ಮೀನನ್ನು ತಂದುಕೊಟ್ಟಾಗ ರತಿ ಆ ಮೀನಿನ ಅಡುಗೆ ಮಾಡಬೇಕಾಗುತ್ತದೆ. ಮೀನಿನ ಗರ್ಭದಲ್ಲಿದ್ದ ಮಗು ರತಿಯ ಕೈಗೆ ದೊರೆಯುತ್ತದೆ. ಯಾವ ಮಗು ಎಂದು ತಿಳಿಸದೆ ಶಂಬರಾಸುರನ ಅನುಮತಿ ಪಡೆದೇ ಮಗುವನ್ನು ರತಿ ಸಾಕುತ್ತಾಳೆ. ಅವನ ಅರಮನೆಯಲ್ಲೇ ಶತ್ರು ಬೆಳೆಯುತ್ತಾನೆ. ಮುಂದೆ ನಾರದಮುನಿಯಿಂದ ರಹಸ್ಯ ಬಯಲಾಗುತ್ತದೆ. ಶಂಬರಾಸುರ ಮತ್ತು ಮನ್ಮಥನಾದ ಪ್ರದ್ಯುಮ್ನರ ನಡುವೆ ಯುದ್ಧ ನಡೆದು ಶಂಬರಾಸುರ ಹತನಾದ.

ಮೊದಲನೆಯ ಭಾಗದ ಈ ಕಥಾ ಚೌಕಟ್ಟು ಜನಪದ ಸಂಕೀರ್ಣಕಥೆಯ ಎಲ್ಲ ಲಕ್ಷಣಗಳನ್ನೂ ಹೊಂದಿದೆ. ಜೊತೆಗೆ ಮುಂದೆ ತನ್ನನ್ನು ಕೊಲ್ಲುವನೆಂಬ ಭಯದಿಂದ ಮಗುವಿನ ಅಪಹರಣ, ಔದಾಸೀನ್ಯದಿಂದ ಸಮುದ್ರಕ್ಕೆ ಅಪಹೃತ ಮಗುವನ್ನು ಎಸೆಯುವುದು, ಮೀನು ಮಗುವನ್ನು ನುಂಗುವುದು, ಬೆಸ್ತ ಮೀನನ್ನು ಹಿಡಿದು ರಕ್ಕಸನಿಗೇ ಕೊಡುವುದು, ರಕ್ಕಸನಿಗೆ ಅರಿವಿಲ್ಲದೇ ಅವನ ನೆರಳಲ್ಲೇ

ಮಗು ಬೆಳೆಯುವುದು, ತಾನೇ ಆ ಮಗುವಿಗೆ ಶಸ್ತ್ರಾಸ್ತ್ರಗಳ ತರಬೇತಿ ನೀಡುವುದು, ಆ ಮಗುವೇ ತನ್ನ ವೈರಿಯೆಂದು ತಿಳಿದು ಇಬ್ಬರ ನಡುವೆ ಯುದ್ಧವಾಗುವುದು– ಅಲ್ಲಿ ಕಥಾನಾಯಕನಿಂದ ರಕ್ಕಸನ ಮರಣ ಹೀಗೆ ಸುಖಾಂತವಾಗಿ ಕತೆ ಮುಕ್ತಾಯವಾಗುವುದು–ಮುಂತಾದ ಆಶಯಗಳು (Motifs) ಈ ಕಥೆಯ ಹಂದರವನ್ನು ರಚಿಸುವುವು. ಅತಿಮಾನುಷ ವಿರೋಧಿ ಕತೆಗಳ ಸಾಲಿನಲ್ಲಿ ಇಂಥ ಕತೆಗಳು ಕನ್ನಡ ಜನಪದ ಕಥೆಗಳಲ್ಲಿ ಕಂಡುಬರುತ್ತವೆ. ಆದುದರಿಂದ ಪುರಾಣ ಮೂಲದಿಂದ ಕತೆಯನ್ನು ಆಯ್ಕೆಮಾಡಿಕೊಳ್ಳುವಲ್ಲಿಯೇ ಕನಕದಾಸರು ವೈಶಿಷ್ಟ್ಯವನ್ನು ಮರೆದಿದ್ದಾರೆ.

ಎರಡನೆಯ ಕಥೆ ಪ್ರದ್ಯುಮ್ನನ ಮಗನಾದ ಅನಿರುದ್ಧನಿಗೆ ಸಂಬಂಧಪಡುತ್ತದೆ. ಇದು ಬಾಣಾಸುರನ ಕಥೆ. ಬಾಣಾಸುರನ ಮಗಳು ಉಷೆ ಶ್ರೀಗೌರಿಯ ವರವನ್ನು ಪಡೆಯುವುದು. ತನ್ನ ಕನಸಿನಲ್ಲಿ ಕಂಡ ಸುಂದರಪುರುಷನನ್ನೇ ಅವಳು ಪತಿಯಾಗಿ ಪಡೆಯುವ ಬಗ್ಗೆ ತಿಳಿಸುವುದು, ಪ್ರದ್ಯುಮ್ನ ಉಷೆಯ ಕನಸಿನಲ್ಲಿ ಕಾಣಿಸಿಕೊಂಡು ರತಿಸುಖದಲ್ಲಿ ಅವಳೊಡನೆ ಬೆರೆಯುವುದು, ಅನಂತರ ಕನಸಿನಲ್ಲಿ ಕಂಡ ದಿವ್ಯ ಪುರುಷನನ್ನು ಹುಡುಕಿಬರಲು ಉಷೆಯ ಸಖಿ–ಚಿತ್ರಲೇಖೆ ಹೊರಡುವುದು. ಲೋಕಲೋಕಗಳನ್ನೆಲ್ಲ ಸುತ್ತಿ ಎಲ್ಲ ಸುಂದರ ಪುರುಷರ ಭಾವಚಿತ್ರವನ್ನು ತರುವುದು, ಅದರಲ್ಲಿ ಅನಿರುದ್ಧನ ಚಿತ್ರವನ್ನು ಗುರುತಿಸಿ ಉಷೆ ಅವನನ್ನು ಬಯಸುವುದು, ಚಿತ್ರಲೇಖೆ ತನ್ನ ಮಾಯಾವಿದ್ಯೆಯಿಂದ ದ್ವಾರಕೆಗೆ ಹೋಗಿ ಅನಿರುದ್ಧನನ್ನು ತನ್ನ ಬೆನ್ನಮೇಲೆ ಕೂರಿಸಿಕೊಂಡು ಆಕಾಶಮಾರ್ಗದಲ್ಲಿ ಬರುವುದು. ರಹಸ್ಯವಾಗಿ ಉಷೆ ಮತ್ತು ಅನಿರುದ್ಧರು ಗಾಂಧರ್ವ ವಿವಾಹ ಮಾಡಿಕೊಂಡು ಅಲ್ಲಿಯೇ ಉಳಿಯುವುದು. ಈ ರಹಸ್ಯ ಬಾಣಾಸುರನಿಗೆ ತಿಳಿದು ಅವರಿಬ್ಬರ ನಡುವೆ ಯುದ್ಧ ನಡೆದು ಬಾಣಾಸುರನ ವಧೆಯಾಗುವುದು–ಮುಂತಾದ ವಿವರಗಳನ್ನೊಳಗೊಂಡ ಈ ಕಥೆಯೂ ಸಹ ಅತಿಮಾನುಷ ವಿರೋಧಿ ಹಾಗೂ ರಮ್ಯಕಥೆಯ ಆವರಣವನ್ನು ಪಡೆದುಕೊಂಡಿದೆ. ಕಥೆ ಎಲ್ಲಿಯದೇ ಆದರೂ ಕನಕದಾಸರು ಆಯ್ಕೆಮಾಡಿಕೊಂಡ ಕಥಾವಸ್ತು ನೇರವಾಗಿ ಜಾನಪದದ ಆಶಯಗಳೊಡನೆ ಆಸಕ್ತಿಯನ್ನು ಕೆರಳಿಸುತ್ತದೆ. ಹೀಗೆ ಅತ್ಯಂತ ಸ್ವಾರಸ್ಯವಾದ ಸಂಕೀರ್ಣ ಕಥೆಗಳನ್ನು ಆಯ್ದು ಕನಕದಾಸರು ಮನೋಜ್ಞವಾದ ಕಾವ್ಯವೊಂದನ್ನು ರಚಿಸಿದ್ದಾರೆ. ಜಾನಪದ ಆವರಣ ಈ ಕಾವ್ಯಕ್ಕೆ ಒಂದು ಸೊಗಸಾದ ಹಿನ್ನೆಲೆಯನ್ನು ಒದಗಿಸಿದೆ ಎಂಬುದು ಸ್ಪಷ್ಟ.

ಮೋಹನ ತರಂಗಿಣಿ ಮನ್ಮಥನ ಪ್ರಸಂಗ, ಶಂಬರಾಸುರ ವಧೆ ಮತ್ತು ಬಾಣಾಸುರ ವಧೆ ಎಂಬ ಮೂರು ಮುಖ್ಯ ಪ್ರಸಂಗಗಳನ್ನು ಒಳಗೊಂಡ ಒಂದು ಕಥಾಗುಚ್ಛ. ಇವೆಲ್ಲ ಯಕ್ಷಗಾನ ಪ್ರಸಂಗಗಳೂ ಆಗಿದ್ದು ಕನಕದಾಸರು ತಮ್ಮ ಕಾಲದಲ್ಲಿ ಪ್ರಚಲಿತವಿದ್ದ ಬಯಲಾಟದ ಪ್ರಸಂಗಗಳಿಂದ ಪ್ರಭಾವಿತರಾಗಿರಲು ಸಾಧ್ಯ ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಕಥಾಸ್ವಾರಸ್ಯದ ದೃಷ್ಟಿಯಿಂದ ಹೀಗೆ 'ಮೋಹನ ತರಂಗಿಣಿ' ಗಮನಾರ್ಹವಾಗಿರುವುದೂ, ಅದರ ಸಮಗ್ರ ಶಿಲ್ಪ ಜಾನಪದೀಯ ಅಂಶಗಳನ್ನು ಅವಲಂಬಿಸಿರುವುದು ಅದರ ಒಂದು ಗುಣವಾದರೆ ಆ ಕಾವ್ಯದಲ್ಲಿ ವ್ಯಾಪಕವಾಗಿ ಹರಡಿಕೊಂಡಿರುವ ಜನಪದ ಜೀವನದ ವಿವರಗಳು ಮತ್ತೊಂದು ಪ್ರಧಾನ ಅಂಶವೆನಿಸುತ್ತದೆ. ಕನಕದಾಸರು ದ್ವಾಪರಯುಗದ ಕಥೆಯೊಂದನ್ನು ಸ್ವೀಕರಿಸಿದ್ದರೂ ಅದಕ್ಕೆ ಸಜೀವತೆಯನ್ನು ಕೊಡುವಲ್ಲಿ ತತ್ಕಾಲೀನ ಜನಜೀವನದ ರೀತಿನೀತಿಗಳನ್ನು ಧಾರಾಳವಾಗಿ ಎರಕಹೊಯ್ದು ಸುಂದರ ಪ್ರತಿಮೆಯಾಗಿ ಅದನ್ನು ಕಡೆದಿದ್ದಾರೆ. ಸ್ಥೂಲವಾದ ಮೂರ್ತಿಯ ಆಕೃತಿಗೆ ಬಗೆಬಗೆಯ ಅಲಂಕಾರಗಳ ಕುಸುರಿ ಕೆಲಸವನ್ನು ಮಾಡಿ ಆಕರ್ಷಕಗೊಳಿಸಿದಂತೆ ತಮ್ಮ ಕಾವ್ಯಕ್ಕೆ ಹೊಸ ಸತ್ವವನ್ನೂ ಸೌಂದರ್ಯವನ್ನೂ ಜನಜೀವನದ ಸಹಜ ಚಿತ್ರಣದಿಂದ ನೀಡಿದ್ದಾರೆ ಎನ್ನಬಹುದು. ತಮ್ಮ ಕಾಲದ ಕರ್ನಾಟಕದ ಪರಂಪರಾನುಗತ ಸಂಸ್ಕೃತಿಯ ವಿವಿಧ ಮಜಲುಗಳನ್ನು ಕಣ್ಣಿಟ್ಟುನೋಡಿ, ತಮ್ಮ ಸುತ್ತಣ ಪರಿಸರದಿಂದ ಪ್ರಭಾವಿತರಾಗಿ ಜನಪದ ಜೀವನದ ಆಚಾರವಿಚಾರಗಳನ್ನು, ಸಂಪ್ರದಾಯಗಳನ್ನು, ವಿವಿಧ ಕಸುಬುಗಳನ್ನು, ಜನಪದ ಕಲೆ ಸಾಹಿತ್ಯವನ್ನು, ಬೇಟೆ ಹಾಗೂ ವಿವಿಧ ವೃತ್ತಿಗಳನ್ನು ಹದವರಿತು ಬಳಸಿಕೊಂಡಿದ್ದಾರೆ. ಕೆರೆಕಟ್ಟೆಗಳ, ಅರವಟ್ಟಿಗೆಗಳ, ಗದ್ದೆಯ ಬಯಲುಗಳ ಮನೋಹರವಾದ ಪರಿಸರವನ್ನು ಕಾವ್ಯದ ಆರಂಭದಲ್ಲಿಯೇ ತಂದು, ಜನಜೀವನದ ನೆಮ್ಮದಿಯನ್ನೂ ಸಮೃದ್ಧಿಯನ್ನೂ ಮನದುಂಬಿ ಬಣ್ಣಿಸಿದ್ದಾರೆ. ಅವರು ಹೆಸರಿಸುವುದು ಸೌರಾಷ್ಟ್ರದ ವರ್ಣನೆಯಾದರೂ ಅದು ಸಹಜವಾಗಿ ಕರ್ನಾಟಕದ ಬದುಕೇ ಆಗಿದೆ. ಇಲ್ಲಿ ಕೆಲವು ನಿದರ್ಶನಗಳನ್ನು ಪರಿಶೀಲಿಸಬಹುದು. ದಾನಧರ್ಮ ಪರೋಪಕಾರಕ್ಕೆ ಹೆಸರಾದ ಸೌರಾಷ್ಟ್ರದಲ್ಲಿ–

ಕೆಱೆಬಾವಿಗಳಿಲ್ಲದಗ್ಗಡದೆಡೆಯಲ್ಲಿ
ತೊಱೆ ನೀರ ಕಂಬಿಯೊಳ್ ತರಿಸಿ

ನೆಱೆಧರ್ಮಿಷ್ಠರು ನಿರ್ಮಿತವನು ಮಾಡಿ
ದಱವಟ್ಟಿಗೆಗಳೊಪ್ಪಿದವು ॥ (೨–೨೬)

ಧರ್ಮಿಷ್ಠರಾದ ಜನ ಯಾತ್ರಾರ್ಥಿಗಳಿಗಾಗಿ ಅಲ್ಲಲ್ಲಿ ಅರವಟ್ಟಿಗೆಗಳನ್ನು ನಿರ್ಮಿಸಿ ದಾಹಶಮನವನ್ನು ಪೂರೈಸುವ ಪದ್ಧತಿ ಕರ್ನಾಟಕದ ಎಲ್ಲೆಡೆಯೂ ನಡೆದುಬಂದಿದೆ. ಈಗಲೂ ದೂರದ ತೀರ್ಥಕ್ಷೇತ್ರಗಳಿಗೆ, ಜಾತ್ರೆ ಉತ್ಸವಗಳಿಗೆ ಹೋಗುವ ಜನರಿಗಾಗಿ ಇಂಥ ಪುಣ್ಯಕಾರ್ಯಗಳನ್ನು ಎಸಗುತ್ತಾರೆ. ನೀರುಮಜ್ಜಿಗೆ, ಅಂಬಲಿ, ಪಾನಕ ಮುಂತಾದ ಪಾನೀಯಗಳನ್ನು ನೀಡಿ ಸಾರ್ಥಕ್ಯವನ್ನು ಪಡೆಯುತ್ತಾರೆ. ಅಡ್ಡೆಗಳಲ್ಲಿ ನೀರನ್ನು ಹೊತ್ತು ತಂದು ಅರವಟ್ಟಿಗೆಯಲ್ಲಿ ಸಂಗ್ರಹಿಸಿ ದಣಿದವರ ಬಾಯಾರಿಕೆಯನ್ನು ನಿವಾರಿಸುವ ಈ ಸಂಪ್ರದಾಯ ಜನಪದ ಸಂಸ್ಕೃತಿಯ ಒಂದು ಅಂಗ. ಕನಕದಾಸರ ಕಾಲಕ್ಕೆ ಇವು ಹೇರಳವಾಗಿಯೇ ಇರಬೇಕು. ಸೌರಾಷ್ಟ್ರದಲ್ಲಿ ಬಳಲಿ ಬಂದವರು ಅನ್ನಪಾನೀಯಗಳನ್ನು ಪಡೆದು ಸಂತೃಪ್ತರಾಗಿ ಮುಂದೆ ಹೋಗುತ್ತಿದ್ದರು ಎಂಬ ಚಿತ್ರವೊಂದು ಮನನೀಯವಾಗಿದೆ :

ಸಲ್ಲಿಲಿತೋಭಯತಟದ ಸಾಲ್ಮರದೊಳು
ಬೆಲ್ಲದ ಪಾನಕವೆಂದು
ಅಲ್ಲದ ಕೆನೆಮೊಸರಶನವ ಕರೆಕರೆ
ದೆಲ್ಲರಿಗುಣಬಡಿಸುವರು ॥ (೨–೩೨)

ಬೆಲ್ಲದ ಪಾನಕ, ಕೆನೆಮೊಸರನ್ನವನ್ನು ಕರೆಕರೆದು ಉಣಬಡಿಸಿದ ಉದಾರಿಗಳ ಚಿತ್ರ ಇದು. ಮುಂದೆ ವನಸಂಪತ್ತನ್ನು ವ್ಯವಸಾಯ ಸಂಪತ್ತನ್ನು ಅವರು ಬಣ್ಣಿಸುತ್ತಾರೆ. ಶಿವನ ಬಿಲ್ಲನ್ನು ಸಿಂಜಿನಿಯೆಂದು ಭಾವಿಸಿದಂತೆ ಬರಿಗಲ್ಲುಗಳಿಂದ ಕಟ್ಟಿದ 'ಕೆರೆಕಟ್ಟೆಗಳು' ಅಲ್ಲಿದ್ದುವು. ಗದ್ದೆಯನ್ನು ಕಾಯುವ ಯುವತಿಯರ ಚೆಲುವೇನು ! ಕಬ್ಬಿನ ಕೋಲುಗಳನ್ನು ಹಿಡಿದು ಆ ಯುವತಿಯರು ಗಿಳಿಗಳು ಗದ್ದೆಗೆ ಮುತ್ತದಂತೆ ನೋಡಿಕೊಳ್ಳುತ್ತಿದ್ದರು. ಕುಡುಗೋಲಿನಿಂದ ಕಬ್ಬನ್ನು ಕತ್ತರಿಸುವ ಯುವಕರ ಗುಂಪು, ಮಳಲೊಟ್ಟಿನಂಥ ಸಕ್ಕರೆ, ಬೆಲ್ಲದ ಚೌಕುಗಳು, ಅಲೆಯ ಮನೆಗಳ ಮುಂದೆ ರಾಶಿರಾಶಿಯಾಗಿದ್ದುವು. ದಾಳಿಂಬ, ಖರ್ಜೂರ, ದ್ರಾಕ್ಷಿಗಳ ತೋಟಗಳು, ಹಲಸು, ನೇರಲ, ಮಾವು, ಬೇವು, ಆಲ, ಅರಳೆ, ಬಿಲ್ವ, ನೆಲ್ಲಿಗಳಿಂದ ಕೂಡಿದ ಸಮೃದ್ಧಿಯ ನಾಡಿನ, ಜನಪದ ಜೀವನದ ನೆಮ್ಮದಿಯ ಪ್ರತೀಕವಾಗಿ ಅಲ್ಲಿ ಕಂಡುಬಂದವು.

ದಾನಧರ್ಮಕ್ಕೆ ಹೆಸರಾದ ಸೌರಾಷ್ಟ್ರದಲ್ಲಿ ಎಲ್ಲೆಲ್ಲಿ ನೋಡಿದರೂ ಅರವಟ್ಟಿಗೆಗಳು ಕಂಡುಬರುತ್ತಿದ್ದವು. ಆ ದ್ವಾರಾವತಿಯ ನಾಡಿನಲ್ಲಿ ಮಳೆಗಾಲದಲ್ಲಿ ಮಾತ್ರ ತುಂಬಿ ಬೇಸಗೆಯಲ್ಲಿ ಕಾಲುಹೊಳೆಯಾದವೆಂಬ ಅಪವಾದಕ್ಕೆಡೆ ಮಾಡದೆ ಕಾಲುವೆಗಳ ತೂಬಿಂದ ಹೊರಟ ನೀರು ಸದಾ ಇಳೆಯಗಲ ಚಲಿಸುವುದು. ಇಂಥ ನಾಡಿನಲ್ಲಿ ರಮಣಿಯರು :

ನಾಗವಲ್ಲಿಯಪರ್ಣ ಚೂರ್ಣಸುಕರ್ಪೂರ
ಪೂಗ ಸಂಭಾಗ ತಾಂಬೂಲ
ರಾಗಪೂರಿತ ಗಂಧಕುಸುಮಂಗಳಿಂದೆಲ್ಲ
ಭೋಗವೀವರು ಪಾರ್ವರಿಗೆ ॥

ಹೀಗೆ ಆರಂಭದಲ್ಲಿಯೇ ಸೌರಾಷ್ಟ್ರ ವರ್ಣನೆಯ ನೆಪದಲ್ಲಿ ಕನಕದಾಸರು ಸುಂದರ ಜನಜೀವನದ, ಸುಖಸಂತೃಪ್ತಿಗಳ, ಭೋಗಭಾಗ್ಯಗಳ ಮನೋಹರವಾದ ನಾಡಿನ ಚಿತ್ರವನ್ನು ನೀಡುತ್ತಾರೆ. ಆಗಿನ ವ್ಯವಸಾಯ ಪದ್ಧತಿ, ಜನೋಪಕಾರದೃಷ್ಟಿ, ಕೆರೆಕಟ್ಟೆ ಕಾಲುವೆಗಳ ವೈಖರಿ. ಅತಿಥಿಸತ್ಕಾರ, ತಾಂಬೂಲದ ಮೋಜುಗಳು– ಜಾನಪದದ ಹಿನ್ನೆಲೆಯನ್ನು ಪಡೆದುಕೊಳ್ಳುತ್ತವೆ.

ಕಾವ್ಯದ ಮುಂದಿನ ಭಾಗಗಳಲ್ಲಿ ಜಾನಪದ ಅಧ್ಯಯನಕ್ಕೆ ಪೂರಕವಾಗುವ ಅನೇಕ ಅಂಶಗಳು ಬರುತ್ತವೆ. ಜಾನಪದ ನಂಬಿಕೆಗಳ ಸಾಲಿನಲ್ಲಿ ಶಕುನಗಳ ಪಾತ್ರವೂ ದೊಡ್ಡದೇ. ಮದನನು ಶಿವನನ್ನು ವಿಚಲಿತಗೊಳಿಸಲು ಸಾಗುವ ಸಂದರ್ಭದಲ್ಲಿ ಕೆಲವು ಶಕುನಗಳು ತೋರಿಬರುವುದನ್ನು ಕವಿ ಸೂಚಿಸುತ್ತಾನೆ:

ತೋಜೆತು ವಾಮಸನೆಡಗಡೆಯಡದಿಂದೆ
ಹಾಜೆತು ಹಂಗ ದಕ್ಷಿಣಕೆ
ದೂಜೆತು ಬಲದ ಭಾಗದೆ ಪಲ್ಲಿ ಮುಂಗಟ್ಟಿ
ಪಾಜೆತುವಾಸುಗಿವಕ್ಕಿ ॥ (೬–೨೫)

ಎಡದೋಳುಹಾಜೆತು ವಾಮಲೋಚನ ಬೆಂ
ಬೆಡದಲುಗಿತು ಮುಂದೆ ನೋಡೆ
ಗಿಡುವೆದ್ದು ಸರಿದುದು ಮನ್ಮಥ ಬಲಗೂಡಿ
ನಡೆವಾಗಲೇನ ಹೇಳುವೆನು ॥(೬–೨೬)

ಕಾಗೆ, ಹಲ್ಲಿ, ಎಡದೋಳು, ಎಡಗಣ್ಣುಗಳ ಶಕುನ ಇಂದಿಗೂ ಜನತೆಯಲ್ಲಿ ಪ್ರಬಲ ನಂಬಿಕೆಗಳಾಗಿ ಉಳಿದುಬಂದಿರುವುದನ್ನು ಕಾಣಬಹುದು.

ಗಾದೆಗಳು ಜನಪದ ಸಾಹಿತ್ಯದ ಅತ್ಯಂತ ಸಾರವತ್ತಾದ ಭಾಗ. ಎಲ್ಲ ಪ್ರಾಚೀನ ಕವಿಗಳಲ್ಲೂ ಗಾದೆಗಳ ಬಳಕೆಯನ್ನು ಕಾಣಲಾಗುವುದಿಲ್ಲ. ಗಾದೆಗಳ ಬಳಕೆಯಿಂದ ಕಾವ್ಯದ ಶೈಲಿಗೆ ಓಜಸ್ಸು ಬರುತ್ತದೆ ; ಶಕ್ತಿ ಬರುತ್ತದೆ. ನಯಸೇನನಂಥ ಕವಿ ಗಾದೆಗಳ ಭಂಡಾರವನ್ನೇ ಸೂರೆಮಾಡಿರುವುದುಂಟು. ರಾಘವಾಂಕ ಕುಮಾರವ್ಯಾಸರು ಹದವರಿತು ಗಾದೆಗಳನ್ನು ಬಳಸುತ್ತಾರೆ. ಆಡುನುಡಿಯ ಸಹಜ ಸೌಂದರ್ಯ ಗಾದೆಗಳಿಂದ ವರ್ಧಿಸುತ್ತದೆ. ಕವಿ ಕನಕದಾಸರು 'ಮೋಹನ ತರಂಗಿಣಿ'ಯಲ್ಲಿ ಧಾರಾಳವಾಗಿ ಗಾದೆಗಳನ್ನು ಬಳಸಿ ತಮ್ಮ ಕಾವ್ಯಶೈಲಿಗೆ ವಿಶೇಷ ಸತ್ವವನ್ನು ತುಂಬಿದ್ದಾರೆ. ಕೆಲವು ಗಾದೆಗಳನ್ನು ಇಲ್ಲಿ ಉಲ್ಲೇಖಿಸಬಹುದು :

೧. ಕೊಡವಾಲು ಪುಳಿವೆರೆದಟಿವುದಲ್ಲದೆ ಪಾ
ಲ್ಗಡಲು ನಾಶವನೈದುವುದೆ (ಪು. ೨೯)
೨. ಸುಣ್ಣ ಕಲ್ಪುಡಿಗಟ್ಟಿ ಮಡುವಿನೊಳಿಟಿದಂತೆ (ಪು. ೭೬)
೩. ಆವಕಾಲವನಾದೊಡೆ ಮೀರಿ ಬಪ್ಪುದು
ಸಾವಕಾಲವ ಮೀಱಬಹುದೆ (ಪು. ೮೯)
೪. ತಲೆ ಬಲ್ಲಿತೆಂದು ಕಲ್ಲನೆ ಹಾಯಬೇಡ (ಪು. ೧೦೬)
೫. ಕರಗಸವೆತ್ತ ಕದಳಿಯೆತ್ತ (ಪು. ೧೦೯)
೬. ಪಾಪಕ್ಷಯಕ್ಕೆಂದು ಗಂಗೆಯೊಳ್ ಮಿಂದರೆ
ಪಾಪಿಯ ಮೊಸಳೆ ತಿಂದಂತೆ (ಪು. ೧೧೭)
೭. ಒಗೆತನ ಬಿಟ್ಟು ಹೋಹಾಗ ಹಾಲಿಗೆ ಹೆಪ್ಪ
ಮೊಗೆದಿಕ್ಕಿದವರಾರುಂಟು (ಪು. ೧೨೪)
೮. ಕಣ್ಣಿರಿಯದಿರ್ದೊಡೇನು ಕರುಳ್‌ಬಲ್ಲುದು (ಪು. ೧೮೧)
೯. ಕಂಡುದ ನುಡಿದರೆ ಕೋಪವೆ ? (ಪು. ೧೬೩)
೧೦. ಕನಸಿನ ಭತ್ತಕ್ಕೆ ಗೋಣಿಯನಾಂತರು (ಪು. ೩೮೪)
೧೧. ವಿಷಯಾತುರಗೆ ವಿವೇಕವಿಲ್ಲ (ಪು. ೪೨೮)
೧೨. ಎಳವಾಱ ಬಲ್ಪಿಗೆ ಬಂದರೆ ಸೀಗೆಯ
ಮೆಳೆಯೊಳು ಮಥನವೆ (ಪು. ೪೬೪)

ಇಂಥ ಸೊಗಸಾದ ಗಾದೆಗಳು 'ಮೋಹನ ತರಂಗಿಣಿ'ಯಲ್ಲಿ ಮೇಲಿಂದ ಮೇಲೆ ಬಳಕೆಗೊಂಡು ನಮ್ಮ ಮನಸ್ಸನ್ನು ಸೆಳೆದುಕೊಳ್ಳುತ್ತವೆ. ಆಯಾ ಸನ್ನಿವೇಶಕ್ಕೆ ವಿಶಿಷ್ಟ ಅರ್ಥ ಸೌಂದರ್ಯವನ್ನು ಒದಗಿಸುತ್ತವೆ. ಕನಕದಾಸರ ಶೈಲಿಯ

ಸಾಚಾತನಕ್ಕೆ ಇವು ಒಳ್ಳೆಯ ನಿದರ್ಶನಗಳಾಗುತ್ತವೆ.

ಜನಪದ ಸಾಹಿತ್ಯದಲ್ಲಿ ಸೋಬಾನೆಯ ಪದಗಳು ಒಂದು ಗಣ್ಯ ಸ್ಥಾನವನ್ನು ಪಡೆದುಕೊಳ್ಳುತ್ತವೆ. ಎಲ್ಲ ಮಂಗಳಕರ ಸಂದರ್ಭಗಳಲ್ಲೂ ಹೆಂಗಳೆಯರು ಸೋಬಾನೆಯನ್ನು ಹಾಡಿ ಆ ಸಂದರ್ಭಕ್ಕೆ ಒಂದು ಪವಿತ್ರ ಆವರಣವನ್ನು ಸೃಷ್ಟಿಸುತ್ತಾರೆ. ಮೋಹನ ತರಂಗಿಣಿಯಲ್ಲಿ ಈ ಸೋಬಾನೆಯ ಪ್ರಸ್ತಾಪ ಅನೇಕ ಕಡೆ ಬರುತ್ತದೆ :

ಕೆಳದಿ ಕೇಳ್ ಮಾಣಿಕ್ಯದಾರತಿಗಳ ತಂದು
ಬೆಳಗಿದರ್ ಪೊಂಬರಿವಾಣದಲಿ
ಕಳಸ ಕನ್ನಡಿ ತಂದ ಗೋಪಿಯರ್ ಶೋಭನ
ಗಳ ಪಾಡಿದರು ರಾಗದಲಿ ॥ (ಪು. ೧೯೦)

ಪ್ರದ್ಯುಮ್ನ ಮತ್ತು ರತಿಯರ ಮದುವೆಯ ಸಂದರ್ಭದಲ್ಲಿ ಮಾಣಿಕ್ಯದ ಆರತಿಯನ್ನು ಬೆಳಗಿ ಕಳಸ ಕನ್ನಡಿ ಸಮೇತ ನಿಂತ ಗೋಪಿಯರು ಆ ಮಂಗಳ ಸನ್ನಿವೇಶಕ್ಕೆ ಅನುಗುಣವಾಗಿ ಸೋಬಾನೆಯನ್ನು ಪಾಡಿದರು. ಮುಂದೆ ಅನಿರುದ್ಧ ಉಷೆಯರ ವಿವಾಹ ಸಂದರ್ಭವೂ ಬರುತ್ತದೆ. ಅಲ್ಲಿಯೂ ಸೋಬಾನೆಯ ಪ್ರಸ್ತಾಪ ಮಾಡಲು ಕವಿ ಮರೆಯುವುದಿಲ್ಲ.

ನೋಡಿದರ್ ಆಗಮೋಕ್ತಿಯಲಿ ಬಾಸಿಂಗವ
ಸೂಡಿದರ್ ತೊಂಡಿಲ ತಂದು
ಪಾಡಿದರ್ ಪರಮ ಶೋಭನದಿಂದ ಮದುವೆಯ
ಮಾಡಿದರ್ ಮಣಿಯ ಮಂಟಪದೆ ॥ (ಪು. ೫೮೧)

ಮದುವೆಯ ಸಂದರ್ಭವಲ್ಲದೆ ಇತರ ಶುಭಸಂದರ್ಭದಲ್ಲೂ ಸೋಬಾನೆಗಳನ್ನು ಹಾಡುತ್ತಿದ್ದರೆಂಬುದು ಈ ಕೆಳಗಿನ ಪದ್ಯಗಳಿಂದ ವ್ಯಕ್ತವಾಗುತ್ತದೆ–

ಬಾಣ ಪಂಚಕ ರತಿದೇವಿಗೆ ಪೊಂಬರಿ
ಯಾಣದಿಂದಾರತಿ ಬೆಳಗೆ
ಮಾಣದೆ ಧವಳ ಶೋಭನವ ಪಾಡಿದರು ಗೀ
ರ್ವಾಣ ನಾರಿಯರ ಕೀಟ್ಬಿಡಿಸಿ ॥

ಪ್ರದ್ಯುಮ್ನ ರತಿಯರ ಮೆರವಣಿಗೆಯ ಸಂದರ್ಭದಲ್ಲಿ ಹೊಂಗಳಸ ಕನ್ನಡಿ ಹಿಡಿದ ವಾರನಾರಿಯರು ಧವಳ ಸೋಬಾನೆಗಳನ್ನು ಹಾಡಿದ ಮೋಹಕ ಚಿತ್ರ ಇದು.

ವಿಶಿಷ್ಟ ಸಂದರ್ಭಗಳಲ್ಲಿ ಸೋಬಾನೆಯ ಪದಗಳ ಬಳಕೆಯನ್ನು ಪ್ರಸ್ತಾಪಿಸದೆ ಕವಿಗೆ ತೃಪ್ತಿಯಿಲ್ಲ. ಮದುವೆಯ ವರ್ಣನೆಯನ್ನಂತೂ ಸಾಕಷ್ಟು ವಿವರವಾಗಿಯೇ ನೀಡುತ್ತಾರೆ ಕನಕದಾಸರು. ನಾಲ್ಕುದಿನದ ಮದುವೆ ನಡೆಯುತ್ತಿದ್ದ ಕಾಲ ಅದು. ನೆನ್ನೆ ಮೊನ್ನೆಯವರೆಗೆ ಈ ಪದ್ಧತಿ ಜನಪದ ಜೀವನದಲ್ಲಿ ಕಂಡು ಬರುತ್ತಿತ್ತು. ಪ್ರದ್ಯುಮ್ನನ ಮದುವೆ ನಾಲ್ಕು ದಿನ ನಡೆಯಬೇಕಿತ್ತು, ಆದರೆ ಎಲ್ಲ ಶಾಸ್ತ್ರಗಳನ್ನೂ ಒಂದೇ ದಿನಕ್ಕೆ ಆಳವಡಿಸಿ ಮದುವೆಯ ಕಾರ್ಯವನ್ನು ಅವರು ಮುಗಿಸಿದರು. ಮದುವೆಯ ವಿವರಗಳಂತೂ ಇಂದಿಗೂ ಉಳಿದ ಸಂಪ್ರದಾಯಗಳಾಗಿ ತೋರಿಬರುತ್ತವೆ :

ನೆಟ್ಟನೆ ತೆರೆವಿಡಿದರು ಶಾಸ್ತ್ರವಿಧಿಯಿಂದೆ
ಮೆಟ್ಟಕ್ಕಿಯ ಮೇಲೆ ನಿಲಿಸಿ
ಶ್ರೇಷ್ಠರು ಮಂಗಳಾಷ್ಟಕದಿ ನಿರೀಕ್ಷಣೆ
ಗೊಟ್ಟರು ದಂಪತಿಗಳಿಗೆ ॥ (ಪು. ೧೯೦)

ಮಧುಪರ್ಕ ತಂಡುಲಾರೋಹಣ ಮೊದಲಾದ
ವಿಧಿಯಿಂದಲಾ ಪುರೋಹಿತರು
ವಧುವನನಲ ಸಾಕ್ಷಿಯೊಳಗೆ ಧಾರೆಯ
ಪದುಮಾಕ್ಷರೆಜೆದರುತ್ಸವದಿ ॥ (ಅದೇ)

ಶೂರ್ಪಸಾಮುದ್ರಿಕ ಗುಡ ಮುಖ್ಯದಾನವ
ವಿಪ್ರೋತ್ತಮರಿಗೆ ಕೊಟ್ಟು
ದರ್ಪಕ ರತಿಗೂಡಿ ತಾಯಮಂದಿರ ಕೈ
ತರ್ಪ ಸಂದರ್ಭವನೇನೆಂಬೆ ॥ (ಅದೇ)

ಪ್ರಣಯೋಪಚಾರಗಳಿಂದೆ ಸದ್ವಾದ್ಯಘೋ
ಷಣೆಯಿಂದೆ ಧವಳ ಶೋಭನದೆ
ಗುಣನಿಧಿ ಶ್ರೀಕೃಷ್ಣರಾಯರು ಸಕಲನಿ
ಬ್ಬಣಗೂಡಿ ಪೊಕ್ಕರಾಲಯವ ॥ (ಅದೇ)

ಮುತ್ತಿನ ಸೇಸೆಯೊಳೆಸೆವ ರತ್ನಂಗಳ
ತೆತ್ತಿರ್ದ ಹಸಿಯ ವಿಷ್ಟರದಿ
ಪತ್ತಿರ್ದ ದಂಪತಿಗಳ ವಿಗ್ರಹಂಗಳು
ತೆತ್ತಿಸಿದಂತೆ ಶೋಭಿಸಿದವು ॥ (ಪು. ೧೯೧)

ನೋಡಿದೊಡೊಂದೇ ದಿವಸಕ್ಕೈದೆ ದಿನನಾಲ್ಕ
ಜೋಡಿಸಿ ವೈವಾಹವಿಧದಿ
ಮಾಡಿದರ್ ಮಂಗಳೋತ್ಸವದಿಂದೆ ಹಣವನೀ
ಡಾಡಿದ ಕೃಷ್ಣ ಬ್ರಾಹ್ಮಣರ್ಗೆ (ಅದೇ)

ಸಡಗರದಿಂ ಕೃಷ್ಣ ಸರ್ವಜ್ಞ ಸಭೆಗೆ ಹೊ
ನ್ನುಡುಗೊರೆಗಳನಿತ್ತು ಬೀಳ್ಕೊಟ್ಟ
ಮಡದಿ ರುಕ್ಮಿಣಿಗೂಡಿ ಮದುಮಕ್ಕಳ ತಂದು
ಪೊಡಮಡಿಸಿದರು ನಾರದಗೆ॥

ಹೀಗೆ ಮದುವೆಯ ಯಾವ ವಿವರವನ್ನೂ ಬಿಡದೆ ಕಣ್ಣಿಗೆ ಕಟ್ಟುವ ಚಿತ್ರವನ್ನು ಬಿಡಿಸುತ್ತಾ ಸಾಗುತ್ತಾನೆ ಕವಿ. ಇದೊಂದು ಸೌರಾಷ್ಟ್ರದಲ್ಲಿ ನಡೆದ ದ್ವಾಪರಯುಗದಲ್ಲಿ ನಡೆದ ವಿವಾಹವಾಗಿರದೆ ಇಂದು ನಮ್ಮೆದುರೇ ಕರ್ನಾಟಕದಲ್ಲಿ ನಡೆದ ವಿವಾಹವಾಗಿ ತೋರುತ್ತದೆ.

ಎಪ್ಪತ್ತು ವರುಷದ ಮುಪ್ಪಿನ ಹಾರುವಯ್ಯ
ಮುತ್ತಿನ ಜನಿವಾರ ಕೊರಳಲ್ಲಿ । ಹಾಕಿಕೊಂಡು
ನಿಸ್ತ್ರಿಗೆ ಧಾರೆಎರೆದರು ॥

ಎಂಬ ಚಿತ್ರವೊಂದನ್ನು ಜನಪದ ಗೀತೆ ನೀಡುತ್ತದೆ. ಪ್ರದ್ಯುಮ್ನನ ಮದುವೆಯ ಸಂದರ್ಭದಲ್ಲಿಯೂ ಅಗ್ನಿಸಾಕ್ಷಿಯಾಗಿ ಪುರೋಹಿತರು ಪದುಮಾಕ್ಷನಿಗೆ ಧಾರೆ ಎರೆದ ಚಿತ್ರ ಲಭ್ಯವಾಗುತ್ತದೆ. ಮೆಟ್ಟಕ್ಕಿಯ ಮೇಲೆ ವಧೂವರರನ್ನು ನಿಲ್ಲಿಸುವುದು, ಅಡ್ಡ ತೆರೆ ಹಿಡಿಯುವುದು, ಹಸೆಯ ಮೇಲೆ ನಿಂತ ದಂಪತಿಗಳಿಗೆ ಸೇಸೆಯನ್ನು ಹಾಕುವುದು, ಪುರೋಹಿತರಿಗೆ ಹೊನ್ನ ಉಡುಗೊರೆ ನೀಡುವುದು, ಮದುಮಕ್ಕಳನ್ನು ಕರೆತಂದು ಗುರುಹಿರಿಯರ (ಇಲ್ಲಿ ನಾರದರಿಗೆ) ಪಾದಕ್ಕೆ ನಮಸ್ಕರಿಸುವಂತೆ ಮಾಡುವುದು–ಮುಂತಾದ ಸರ್ವವಿವರಗಳನ್ನೂ ಕನಕದಾಸರು ಇಲ್ಲಿ ಒದಗಿಸಿದ್ದಾರೆ.

'ಮೋಹನ ತರಂಗಿಣಿ'ಯ ಅತ್ಯಂತ ಗಮನಾರ್ಹವಾದ ಜಾನಪದ ಅಂಶಗಳಲ್ಲಿ 'ಜನಪದ ಕಲೆಗಳು', 'ಜನಪದ ಕ್ರೀಡೆಗಳು', 'ಜನಪದ ವಾದ್ಯಗಳು' ಮತ್ತು 'ಜನಪದ ಅಡುಗೆ'ಗಳಿಗೆ ಸಂಬಂಧಪಟ್ಟ ವಿವರಗಳು ಗಮನಾರ್ಹವಾಗಿವೆ.

ಜಲಕ್ರೀಡೆಯ ಪ್ರಸಂಗದಲ್ಲಿ ಕ್ರೀಡಾಮಂಟಪಕ್ಕೆ ಬಂದ ಶ್ರೀಕೃಷ್ಣ ಅದರ ಶಿಲ್ಪ ವೈಭವಕ್ಕೆ ಬೆರಗಾಗುತ್ತಾನೆ. ಚಿನ್ನದ ಪಾತ್ರೆಗಳನ್ನು ಹಿಡಿದು ನರ್ತಿಸುವ ಪುತ್ಥಳಿಗಳ ದೃಶ್ಯವೊಂದನ್ನು ಪ್ರಸ್ತಾಪಿಸುತ್ತಾರೆ. ಈಗಲೂ ಉತ್ತರ ಕನ್ನಡ ಮತ್ತು ಬೆಳಗಾಂ ಭಾಗಗಳಲ್ಲಿ ಕೊಡಗಳನ್ನು ಹಿಡಿದು ನರ್ತಿಸುವ ಸ್ತ್ರೀಯರ ಹಾಗೂ ಪುರುಷರಮೇಳಗಳು ಕಂಡುಬರುತ್ತವೆ. ಸಿದ್ಧಿಯರಲ್ಲಿ ಈ ಕೊಡದ ನೃತ್ಯ ತುಂಬ ಜನಪ್ರಿಯ. ಇಂಥ ನೃತ್ಯವೊಂದು ಕನಕದಾಸರ ಗಮನಕ್ಕೆ ಬಂದಿರಲು ಸಾಧ್ಯ. ಕೋಲಾಟ ಕರ್ನಾಟಕದಾದ್ಯಂತ ಕಂಡುಬರುವ ಕಲೆ. ಇದರ ಪ್ರಸ್ತಾಪವನ್ನೂ ಇಲ್ಲಿ ಮಾಡಲಾಗಿದೆ. ಬಾಣಾಸುರನ ಒಡ್ಡೋಲಗದಲ್ಲಿ ಕಡಗ ಪೆಂಡೆಗಳನ್ನು ಧರಿಸಿದ ನಟರು, ಮದ್ದಳೆಗಾರರು, ತಾಳದವರು, ಗೀತವಾದ್ಯ ವಿದ್ಯೆಯನ್ನು ಬಲ್ಲವರ ವಿವರ ಬರುತ್ತದೆ. ಅನಿರುದ್ಧನ ಬೇಟೆಯ ಸಂದರ್ಭದಲ್ಲಿ ಬೇಡಿತಿಯರ ಕುಣಿತದ ಬಣ್ಣನೆಯನ್ನು ಕವಿ ನೀಡುತ್ತಾರೆ. ಕಲ್ಲುಬಂಡೆಗಳ ಮೇಲೆ ದುಮ್ಮಿಕ್ಕಿ ನೃತ್ಯಮಾಡುವ ಬೇಡತಿಯರನ್ನು ಅನಿರುದ್ಧ ಕುತೂಹಲದಿಂದ ನೋಡುತ್ತಾನೆ. ಮದ್ದಾನೆಯ ದಂತದ ಒನಕೆಯನ್ನು ಮಾಡಿಕೊಂಡು ಅವರು ಬಿದಿರಕ್ಕಿಯನ್ನು ಕುಟ್ಟುತ್ತಾರೆ. ಹಾಗೆ ಕುಟ್ಟುವಾಗ 'ಸುವ್ವಿ' ಹಾಡನ್ನು ಒಯ್ಯಾರದಿಂದ ಹೇಳುತ್ತಾರೆ.

ಸುವ್ವಿ ಪೂರಿತಕಾಮ ಸುವ್ವಿ ಸದ್ಗುಣಧಾಮ
ಸುವ್ವಿ ಸುರೇಂದ್ರ ಲಲಾಮ
ಸುವ್ವಿ ಸಾರ್ವರಭೌಮ ಸುವ್ವಿ ರಾಘವರಾಮ
ಸುವ್ವಿ ಸಾಸಿರ ಪುಣ್ಯನಾಮ ॥

'ಸುವ್ವಿ' ಕಟ್ಟುವ ಪದಕ್ಕೆ ಸಂಬಂಧಿಸಿದ ಸೊಲ್ಲು. ಆ ಸೊಲ್ಲನ್ನು ಅಳವಡಿಸಿ ಕೃಷ್ಣ ನಾಮವನ್ನು ಭಜಿಸುವ ಸಂದರ್ಭವನ್ನು ಕಲ್ಪಿಸಲಾಗಿದೆ.

ಜನಪದ ಭಕ್ಷ್ಯಭೋಜ್ಯಗಳ ಬಗ್ಗೆಯೂ 'ಮೋಹನ ತರಂಗಿಣಿ' ಅಪಾರ ವಿವರಗಳನ್ನು ನೀಡುತ್ತದೆ.

ಜೇನು ಸಕ್ಕರೆ ಕ್ಷೀರ ರಸವಪ್ಪ ಫೇಣಿ ಸು
ಖೀನುಂಡೆ ವಡೆಗಾರಿಗೆಯ
ನಾನಾ ಭಕ್ಷ ಭೋಜ್ಯಂಗಳ ಪರಮಸು
ಮ್ಮಾನದೆ ಬಡಿಸಿದರೊಲಿದು ॥ (ಪು. ೫೪)

ಇಲ್ಲಿ ಜೇನು ಸಕ್ಕರೆ ಫೇಣಿ ವಡೆಗಳ ಸಾಲಿನಲ್ಲಿ 'ಸುಖೀನುಂಡೆ'ಯನ್ನೂ ಕನಕದಾಸರು ಪ್ರಸ್ತಾಪಿಸುವುದು ಗಮನಾರ್ಹ. ಎಳ್ಳಿನಿಂದ ಮಾಡುವ ಈ ಸಿಹಿ ಪದಾರ್ಥ ಗ್ರಾಮಾಂತರ ಪ್ರದೇಶಗಳಲ್ಲಿ ಇಂದಿಗೂ ಪಿತೃಪಕ್ಷದ ವಿಶೇಷ ಖಾದ್ಯವಸ್ತು. 'ಚಿಕ್ಕೀನುಂಡೆ' ಎಂಬ ಹೆಸರಿನಲ್ಲಿ ಇದು ಜನಪ್ರಿಯ. ಪಿತೃಗಳಿಗೆ ಎಡೆಯಿಡುವಾಗ ಕಜ್ಜಾಯ, ವಡೆ, ಚಿಕ್ಕೀನುಂಡೆಗಳು ಕಡ್ಡಾಯ. ಇವೆಲ್ಲಾ ನಮ್ಮ ಪ್ರಾಚೀನರ ವಿಶಿಷ್ಟ ಸಿಹಿ ತಿಂಡಿಗಳು. ನಮ್ಮ ಕಾವ್ಯಗಳಲ್ಲಿ ಕಜ್ಜಾಯ ಲಡ್ಡುಗಳ ಪ್ರಸ್ತಾಪ ಬಂದರೂ 'ಸುಖೀನುಂಡೆ' 'ವಡೆ'ಗಳ ಪ್ರಸ್ತಾಪ ವಿರಳ. ಕನಕದಾಸರು ಚಿಕ್ಕೀನುಂಡೆಯಂಥ ಸವಿಕಟ್ಟಾದ ಸಿಹಿತಿನಿಸನ್ನು ದಾಖಲುಮಾಡಲು ಮರೆತಿಲ್ಲ. ಇದಲ್ಲದೆ ಒಂದು ಕಡೆ ರೊಟ್ಟಿ ಬುತ್ತಿಯನ್ನು ಅವರು ಸೂಚಿಸುತ್ತಾರೆ :

ರಾಯ ನೀನಾರ ಬುತ್ತಿಗೆಚೀಟು ರೊಟ್ಟಿಯ
ಕಾಯ ಕೊಯ್ದಪೆ ಕೇಳು ॥ (ಪು. ೧೩೮)

ಶ್ರೀ ಕೃಷ್ಣನ ಭೋಜನದ ವೈಖರಿಯನ್ನು 'ಜಲಕ್ರೀಡೆ'ಯ ಸಂಧಿಯ ಆರಂಭದಲ್ಲಿ ವಿವರಿಸಲಾಗಿದೆ. ಊಟಕ್ಕೆ ನೀಡಲು ಬೋನಗಿತ್ತಿಯರು ನಿಯೋಜಿತರಾಗಿದ್ದಾರೆ. ಬಗೆಬಗೆಯ ಭಕ್ಷ್ಯಗಳನ್ನು ತಂದು ಪಂಕ್ತಿಯಲ್ಲಿ ಕುಳಿತ ಶ್ರೀಕೃಷ್ಣಾದಿಗಳಿಗೆ ಅವರು ನೀಡುತ್ತಾರೆ. ಆ ಭಕ್ಷ್ಯಗಳ ಹೆಸರೇ ನಮ್ಮ ಬಾಯಲ್ಲಿ ನೀರೂರಿಸುವಂತಿವೆ :

ಆಗಾಗಲೊಗ್ಗರಿಸಲು ಬಿಸಿವಡೆದ ಮೇ
ಲೋಗರ ಪಳಿದ್ಯ ಪಲ್ಯಗಳ
ರಾಕೇಂದು ವದನೆಯರೆಡೆಮಾಡುವ ಸುಪ್ರ
ಯೋಗವನೇನ ಬಣ್ಣಿಪೆನು ॥

ಬಂಗಾರದ ಪಾತ್ರೆಯ ಬಾಗಿದ ಹಿಡಿಗಳನ್ನು ಹಿಡಿದು ಅವರು ಬಡಿಸುತ್ತಿದ್ದ ಒಯ್ಯಾರ ವರ್ಣನಾತೀತ. ಶುಭ್ರವಾದ ಅಕ್ಕಿಯ ಅನ್ನ, ಸೊಗಸಾದ ತುಪ್ಪ, ತೊವ್ವೆ, ಪಳಿದ್ಯ, ಪಲ್ಲೆ, ತೋಯಾನ್ನ, ಪಾಯಸ ಅದಕ್ಕೆ ಸೊಗಸಾದ ತುಪ್ಪ, ಕೆಲವರಿಗೆ ನೀರು ಮಜ್ಜಿಗೆ ಅನಂತರ ಹೊನ್ನ ಹೂಜಿಗಳಲ್ಲಿನ ಪರಿಮಳಯುಕ್ತ ನೀರು-ಹೀಗೆ ಶ್ರೀಕೃಷ್ಣನ ಅರಮನೆಯ ಅಡುಗೆಗಳ ವೈಭವವನ್ನು ಕನಕದಾಸರು ಉತ್ಸಾಹದಿಂದ ವರ್ಣಿಸಿದ್ದಾರೆ ನಮ್ಮ ಸಾಂಪ್ರದಾಯಿಕ ಅಡುಗೆ ಪದ್ಧತಿಗೆ ಇವೆಲ್ಲ ಉತ್ತಮ ಉದಾಹರಣೆಗಳು.

ಅನಿರುದ್ಧನ ನಗರ ಶೋಧನೆಯ ಸಂದರ್ಭದಲ್ಲಿ ಸೂಳೆಗೇರಿಯ ಚಿತ್ರವೂ ಬರುತ್ತದೆ. ಮಧುಪಾನದ ವೈಖರಿ, ಸಂಡಿಗೆ, ಕಡಲೆಉಸಳೆ, ಕೋಳಿಯ ತತ್ತಿ,

ಅವಲಕ್ಕಿ, ಹುರಿಗಡಲೆಗಳು, ನಂಚಿಕೆಗಳು, ಚಿಪ್ಪಿನಲ್ಲಿ ಮಧುವನ್ನು ಕುಡಿಯುತ್ತ ಈ ನಂಚಿಕೆಗಳ ಸವಿ ನೋಡುತ್ತ ಮೋಜು ಮಾಡುವ ಒಂದು ಅದ್ಭುತ ದೃಶ್ಯವನ್ನು ಕನಕದಾಸರು ಇಲ್ಲಿ ನೀಡುತ್ತಾರೆ :

ಅಪ್ಪ ಕೊಳ್ಳೆಲವೊ ಅಗ್ರಜಕೊಳ್ಳೊ ಹಿಂಡಿಯ
ಸೊಪ್ಪಕೋ ಸುಲಿವಣ್ಣಳಿವಕೊ
ಚಿಪ್ಪಕೋ ಕುಡಿಯೆಂದು ಕುಡಿಸಿ ತಾ ಕುಡಿದು ಕೈ
ಚಪ್ಪಳೆಗೊಲೆದಾಡುತಿಹರು (ಪು. ೨೭೦)

ಕೇವಲ ಸಸ್ಯಾಹಾರವನ್ನು ಮಾತ್ರ ಪರಿಚಯಿಸದೆ ಮಾಂಸಾಹಾರವನ್ನೂ ಪ್ರಸ್ತಾಪಿಸಲು ಅನುಕೂಲವಾದ ಸನ್ನಿವೇಶ ಮೀನಿನ ಗರ್ಭದಲ್ಲಿ ಸೇರಿದ್ದ ಪ್ರದ್ಯುಮ್ನನನ್ನು ಗುರುತಿಸುವಲ್ಲಿ ಬರುತ್ತದೆ. ರತಿ ತನ್ನ ಗಂಡನನ್ನು ನುಂಗಿದ್ದ ಮೀನನ್ನು ಕತ್ತರಿಸಿ ಚೂರು ಮಾಡಿದಳು. ಸಂಡಿಗೆಯನ್ನು ಮಾಡಲು ಡಬ್ಬಣದಿಂದ ಚುಚ್ಚಿ ನಿಗಿನಿಗಿ ಕೆಂಡದಲ್ಲಿ ಚೆನ್ನಾಗಿ ಸುಟ್ಟಳು. ಈ ಮಾಂಸದಿಂದ ಶಂಬರಾಸುರನನ್ನು ಅವಳು ಉಪಚರಿಸಿ ಸಂತೃಪ್ತಿ ಪಡಿಸಿದಳು. ಆ ರುಚಿಕಟ್ಟಾದ ಮೀನಿನ ಊಟವನ್ನು ಮಾಡಿದ ಶಂಬರಾಸುರ,

ಅಡಬಲ್ಲ ಜಾಣೆ ನಾ ಮೆಚ್ಚಿದೆ ಅದಜೆಂದೆ
ಪಡೆದಳೆ ಪವಿತ್ರತೆ ಸ್ತ್ರೀಯ
ತಡಹುವದಿಲ್ಲ ನಿನ್ನಾಲಯದೊಳಗೆ ಎಂ
ಗಡವಾಗಿ ಸುಖಿಬಾಳೆಂದ ॥ (ಪು. ೧೫೦)

ಇಷ್ಟು ಸೊಗಸಾಗಿ ಅಡುಗೆ ಮಾಡಬಲ್ಲ ಸ್ತ್ರೀಯ ತಂಟೆಗೆ ಬರುವುದಿಲ್ಲ ಎಂದು ಅವನು ನುಡಿಯುತ್ತಾನೆ.

'ಮೋಹನ ತರಂಗಿಣಿ' ಜಾನಪದದ ಒಂದು ಪುಟ್ಟ ವಿಶ್ವಕೋಶ. ವ್ಯವಸಾಯ ಪದ್ಧತಿ (ಪು. ೫೨೧, ೫೮೩), ಜನಪದ ಕಥೆಗಳಲ್ಲಿ ಬರುವ ಕಲ್ಲುಗಾಣ ಮೊದಲಾದ ಶಿಕ್ಷೆಯ ವಿಧಾನಗಳು (ಪು. ೫೦೩), ವೇಷಭೂಷಣಗಳು (೪೫೭), ಶಕ್ತಿಪೂಜೆಯ ವಿಧಾನ (೨೯೮), ಮನೆಗಳ ಬಗೆಗಳು (೨೨೩– ೨೨೪), ಬೇಟೆಯ ವಿಧಾನಗಳು (೨೯೭) ಜೂಜಿನ ಬಗೆಗಳು (೨೯೭), ಜನಪದ ವಸ್ತು ವಿಶೇಷಗಳು (೩೭೦, ೩೮೧), ತಾಳಮದ್ದಲೆ (೩೦೦), ಅಲಂಕಾರಗಳು (೧೮೯), ಜನಪದ ದೇವತೆಗಳು (೪೦೨)–ಹೀಗೆ ಪಟ್ಟಿ ಮಾಡುತ್ತ ಹೋದರೆ ಕನಕದಾಸರು ಜನಪದ ಜೀವನ ವಿಧಾನವನ್ನು ಸೂಕ್ಷ್ಮವಾಗಿ ಬಲ್ಲವರಾಗಿದ್ದರು ಎಂಬುದು ಖಚಿತಪಡುತ್ತದೆ. ಜನಜೀವನದ ಇಷ್ಟೊಂದು

ಮಾಹಿತಿಗಳನ್ನು ತಂದಿರುವುದರಿಂದ ಕಾವ್ಯದ ಸೊಗಸು ಹೆಚ್ಚಿದೆ. ಜಾನಪದ ದೃಷ್ಟಿಯಿಂದ ಈ ಕಾವ್ಯಕ್ಕೆ ಒಂದು ಮಹತ್ವದ ಸ್ಥಾನ ಲಭ್ಯವಾಗುತ್ತದೆ.

ಕನಕದಾಸರ ಕೀರ್ತನೆಗಳು ಹಾಗೂ ಕಾವ್ಯಗಳು ಜಾನಪದ ಪ್ರಭಾವದಿಂದ ದೂರವಿರಲು ಸಾಧ್ಯವಿಲ್ಲ. ಏಕೆಂದರೆ ಈ ಕವಿ ಜನಪದರ ನಡುವೆಯೇ ಬಾಳಿ ಬದುಕಿದವನು. ಜನಪದ ಸಂಪ್ರದಾಯಗಳಲ್ಲಿ ನೇರವಾಗಿ ಬೆರೆತವನು. ಆದುದರಿಂದಲೇ ಅವನ ಕೃತಿಗಳಲ್ಲಿ ಜಾನಪದ ಹೇರಳವಾಗಿ ಕಂಡುಬಂದು ಕವಿಗೆ ಈ ದೃಷ್ಟಿಯಿಂದ ಒಂದು ಗಣ್ಯಸ್ಥಾನವನ್ನು ತಂದುಕೊಟ್ಟಿದೆ.

# ಕನಕದಾಸರ ಕೃತಿಗಳಲ್ಲಿ ವಿಡಂಬನೆ

**ಡಾ. ಪದ್ಮಾ ಶೇಖರ್**

ವಿಡಂಬನೆ ಸೂಕ್ಷ್ಮಜ್ಞನ ಸಹಜ ಪ್ರವೃತ್ತಿ. ಸಮಸ್ತ ದೋಷಗಳು ವಿಡಂಬಕನ ಬತ್ತಳಿಕೆಯ ಅಸ್ತ್ರಗಳು. ಮಾನವನೇನು ದೇವನೂ ಇವುಗಳಿಂದ ತಪ್ಪಿಸಿಕೊಳ್ಳಲಾರನು. ಈ ಅಸ್ತ್ರಗಳಲ್ಲಿ ರೊಚ್ಚಿನ ಕಾವಿರುತ್ತದೆ ; ಹಾಸ್ಯದ ಹೊನಲಿರುತ್ತದೆ ; ವ್ಯಂಗ್ಯದ ಮೊನಚಿರುತ್ತದೆ ; ಮಾರ್ಮಿಕ ಸತ್ಯದ ಧ್ವನಿಯಿರುತ್ತದೆ. ವಿಡಂಬಕ ಕವಿಮನದವನಾಗಿದ್ದರಂತೂ ಅದಕ್ಕೊಂದು ಹೊಸ ಛಾಪು, ಹುರುಪು, ತೀಕ್ಷ್ಣತೆಯ ಸೊಗಸು ಬರುತ್ತದೆ. ಯಶಸ್ವೀ ವಿಡಂಬನೆಯಲ್ಲಿ ಕಲಾವಂತಿಕೆ, ನ್ಯಾಯಬುದ್ಧಿ, ಆತ್ಮಶೋಧನೆಯ ಗುಣ ಇರುತ್ತದೆ. ಇದು "ಬರೀ ಭೂಮದ ಹಾಡಲ್ಲ, ಬೀಭತ್ಸವಲ್ಲ, ಬರೀ ಸಿಟ್ಟಿನ ರಗಳೆಯಲ್ಲ, ಸಿಟ್ಟಿನೊಡನೆ ಸ್ವಾಭಿಮಾನವನ್ನು ತುಸು ವಿನೋದವನ್ನು ಕೂಡಿಸಿದಾಗ ಹುಟ್ಟಿಬರುವ ಅಪಹಾಸವು (Ridicule) ಅಲ್ಲ. ವಿಡಂಬನೆಯ ಅಣಕಕ್ಕೆ ಸಮೀಪವಾಗಿದ್ದರೂ ಅದರಲ್ಲಿ ವಿನೋದದ ಅಂಶ ಇನ್ನೂ ಹೆಚ್ಚಾಗಿರುತ್ತದೆ, ಸಾತ್ವಿಕ ಕೋಪವೂ ತುಸುಮಟ್ಟಿಗೆ ಅದರಲ್ಲಿ ಕೂಡಿರುತ್ತದೆ. ಸ್ವಾಭಿಮಾನವು ಮಾತ್ರ ಅದೃಶ್ಯ. ವಿನೋದ ಸ್ವಾಭಿಮಾನ ಮತ್ತು ಕೋಪ ಈ ಮೂರರ ಸಮ್ಮಿಶ್ರಣದ ಮೇಲೆ ವಿಡಂಬನೆಯ ಸ್ವಭಾವ ಗುಣದ ನಿರ್ಣಯವಾಗುತ್ತದೆ".[೧] ಚತುರೋಕ್ತಿ ಬಹುಪಾಲು ವಿಡಂಬನೆಯ ಮೂಲಸೆಲೆ. ಇದನ್ನು ಅವಲಂಬಿಸಿಯೆ ಶಬ್ದಾರ್ಥ ಭಾವ ಶ್ಲೇಷಗಳು ಸಂದರ್ಭಕ್ಕನುಗುಣವಾಗಿ ಅನಂತ ರೂಪವನ್ನು ಧರಿಸುತ್ತ ಹೋಗುವುದನ್ನು ಗಮನಿಸಬಹುದು.

ವಿಡಂಬಕನ ಗುರಿ ಲೋಕದ ಡೊಂಕನ್ನು ತಿದ್ದುವುದು. ಸ್ವಾಸ್ಥ್ಯ ಸಮಾಜವನ್ನು ನಿರ್ಮಿಸುವುದು. ಹಾಗೆಂದು ಆತ ಉಪದೇಶ ಮಾಡಲಾರ. ಉಪದೇಶಗಳ ಪ್ರಭಾವ ಪರಿಣಾಮಗಳ ಹುಸಿ ಬೆದರಿಕೆಗಳನ್ನು ಅವನು ಚೆನ್ನಾಗಿ

---

೧. ಎಂ.ಎಸ್/ ಸುಂಕಾಪುರ, 'ಕನ್ನಡದಲ್ಲಿ ಹಾಸ್ಯ', ಧಾರವಾಡ, ೧೯೬೯, ಪು. ೮೦.

ಬಲ್ಲ. ಆದ್ದರಿಂದಲೇ ಮಾತಿನ ಪೆಟ್ಟು ಕೊಟ್ಟು ಮನಸ್ಸನ್ನೇ ಪರಿವರ್ತಿಸುವ ಹವಣಿಕೆ ಅವನದು. ಅವನು ಏಕಕಾಲದಲ್ಲಿ ಸಹೃದಯನು, ಸ್ವಚ್ಛ ಮನಸ್ಸಿನನು, ಆದರ್ಶದ ಹಂಬಲಿಕೆಯವನು, ಸರ್ವಹಿತ ಮುಖಂಡ ; ಸಮಾಜದ ಮಾನಸಿಕ ಜಗತ್ತಿನ ಜಾಲಗಾರ".[೨] ಇದೇ ಸಂದರ್ಭದಲ್ಲಿ ಟೆಲ್ಟನ್ ಹೇಳಿರುವ "A little wit and great deal of ill-nature will furnish a men for satire but the greatest instance of wit is to commend well" ಎಂಬ ಮಾತನ್ನು ನೆನಪಿಸಿಕೊಳ್ಳಬಹುದು. ಒಟ್ಟಾರೆ ಜೀವನದ ಲೋಪದೋಷಗಳನ್ನು ತಲಸ್ಪರ್ಶಿಯಾಗಿ ವಿಡಂಬಕ ಎತ್ತಿತೋರಿಸುವ ಸಾಹಸ ಮಾಡುತ್ತಾನೆ. ಹೀಗೆ ಮಾಡುವುದರಲ್ಲಿ ಅವನಿಗೆ ವಿಶೇಷ ಮನೋಧೈರ್ಯ ಇರಬೇಕಾಗುತ್ತದೆ. ಈ ಎಲ್ಲ ನಿಟ್ಟಿನಲ್ಲಿ ಕನಕದಾಸರು ನಮಗೆ ಅದ್ವಿತೀಯ ವಿಡಂಬಕರಾಗಿ ತಮ್ಮೆಲ್ಲ ಕೃತಿಗಳಲ್ಲಿ ಕಾಣಸಿಗುತ್ತಾರೆ.

ಕನಕದಾಸರು ದಾಸಶ್ರೇಷ್ಠರು. ಈ ಮಾತು ಇದ್ದಕ್ಕಿದ್ದಂತೆ ಮೂಡಿ ಬಂದುದಲ್ಲ ಅವರು ತಮ್ಮ ಸಾಧನೆ ಶ್ರಮದಿಂದ ಪಡೆದದ್ದು. ಪರಂಪರೆಯ ಶೂದ್ರತ್ವದ ನೋವನ್ನು ನಿವಾರಿಸಿಕೊಂಡು ಮಾನವತ್ವಗುಣಗಳಿಂದ ದೈವತ್ವವನ್ನು ಏರಿದ್ದರಿಂದ ಗಳಿಸಿಕೊಂಡದ್ದು. ಅವರ ಸೂಕ್ಷ್ಮಾವಲೋಕನದ ಕಣ್ಣಿಗೆ, ತಾನು ಕಂಡು ಅನುಭವಿಸಿದ ಜೀವನದ ನಾನಾ ನೋವಿನ ಹೆಜ್ಜೆಗಳು, ಸಮಾಜದ ವೈಷಮ್ಯ ವೈದೃಶ್ಯಗಳೂ ವಿಡಂಬಕ ವಸ್ತುಗಳಾಗಿ ಪರಿಣಮಿಸಿವೆ.

ಕನಕದಾಸರ ಕೀರ್ತನೆಗಳು ವಿಡಂಬನೆಗಳ ವಿಪುಲಾಗರ. ಅಲ್ಲೆಲ್ಲ ಅವರು ತಮ್ಮ ಅಂತರಂಗವನ್ನು ಶೋಧಿಸಿಕೊಳ್ಳುವುದರ ಜೊತೆಗೆ ತಮ್ಮ ಆರಾಧ್ಯ ದೈವವನ್ನು ಛೇಡಿಸಲು ಹಿಂದೆಗೆಯುವುದಿಲ್ಲ. 'ರಾಮಧಾನ್ಯ ಚರಿತ್ರೆ'ಯಂತೂ ವಿಡಂಬನೆಯ ಆಡುಂಬೊಲ. ಇವರ ಉಳಿದ ಕೃತಿಗಳಲ್ಲಿ ವಿಡಂಬನೆಯ ಹೊಳಹುಗಳಿದ್ದರೂ ಅವೆಲ್ಲ ಪ್ರಧಾನವಾಗಿ ಕನಕದಾಸರ ಭಕ್ತಿಯ ಪರಾಕಾಷ್ಠತೆ, ಧಾರ್ಮಿಕ ಪ್ರವೃತ್ತಿಗೇ ಹೆಚ್ಚು ಮೀಸಲಾದಂತೆ ತೋರುತ್ತದೆ. ಅವನ್ನೆಲ್ಲ ತಮ್ಮ ನಿಕಷಮತಿಯಿಂದ ಒರೆಹಚ್ಚಿ ವಿಡಂಬಿಸುವುದರ ಮೂಲಕ ಸತ್ಯವನ್ನು ಸಾರ್ವತ್ರಿಕವಾಗಿ ಬಯಲುಗೊಳಿಸಿದ್ದಾರೆ.

'ರಾಮಧಾನ್ಯ ಚರಿತ್ರೆ' ಮೇಲುನೋಟಕ್ಕೆ ರಾಗಿಯ ಶ್ರೇಷ್ಠತೆಯನ್ನು ಒತ್ತಿ ಹೇಳುವ ಭತ್ತದ ಅಹಂಕಾರವನ್ನು ಬಯಲಿಗಿಡುವ ಹಾಸ್ಯಮಯ ಸುಂದರ

---

೨. ಪೂರ್ವೋಕ್ತ ಪು. ೭೮

ಪುಟ್ಟ ಕಾವ್ಯ. ರಾಮನ ಪಾತ್ರವಿಲ್ಲಿ ನಿಮಿತ್ತ ಮಾತ್ರ. ಇವನಿಲ್ಲಿ ಒಂದರ್ಥದಲ್ಲಿ ನ್ಯಾಯ ಮೂರ್ತಿ, ದೈವಾಂಶದ ಪ್ರತಿರೂಪ. ಅವನೆದುರೇ ರಾಗಿಯ ಪರೀಕ್ಷೆ ನಡೆದದ್ದು ಅದರ ಮಹತ್ವಕ್ಕೆ ಸಾಕ್ಷಿ. ಇದಕ್ಕೊಂದು ದೈವತ್ವದ ಮುಖವನ್ನು ರೂಪಿಸಿ, ಅದರ ಸಾರ್ವತ್ರಿಕ ಮೇಲ್ಮೆಯನ್ನು ಅನಿವಾರ್ಯತೆಯನ್ನು ಮನದಟ್ಟು ಮಾಡಿಕೊಡುವುದೇ ಕವಿಯ ಆಶಯ. ಹಾಗೆ ನೋಡಿದರೆ ಇಲ್ಲಿಯ ರಾಗಿಯ ಮತ್ತು ಭತ್ತದ ಪಾತ್ರಗಳು ಕೇವಲ ಸಂಕೇತಗಳಷ್ಟೆ. ನಮ್ಮ ಸಾಮಾಜಿಕ ವ್ಯವಸ್ಥೆಯ ದುರಂತತೆಯ ಪ್ರತಿಬಿಂಬಗಳಿವು, ನಿರಂತರವಾಗಿ ನಮ್ಮನ್ನು ಬೆನ್ನಟ್ಟುತ್ತ ಬಂದಿರುವ ಭೂತಗಳು. ಮೇಲು ವರ್ಗದ ಪುರೋಹಿತಶಾಹಿತ್ವದ ಪ್ರತಿನಿಧಿಯಾಗಿ ಭತ್ತವೂ, ಕೆಳಸ್ತರದವರ ಪ್ರತಿನಿಧಿಯಾಗಿ ರಾಗಿಯೂ ಇಲ್ಲಿ ಚಿತ್ರಿತವಾಗಿವೆ. ಇವೆರಡೂ ಅತ್ಯಂತ ಮಾರ್ಮಿಕವಾಗಿ ಕಲಹವಾಡುತ್ತವೆ. ಇವುಗಳ ಮೂಲಕ ಕವಿ ಕನಕದಾಸರು ತಮ್ಮ ಕಾಲದ ಸಾಮಾಜಿಕ ವ್ಯವಸ್ಥೆಗೆ ಕನ್ನಡಿ ಹಿಡಿದಿದ್ದಾರೆ.

ರಾಗಿ ಭತ್ತಗಳ ಜಗಳ ಜರುಗುವುದೇ ಒಂದು ವಿಶಿಷ್ಟ ಸಂದರ್ಭದಲ್ಲಿ. ರಾವಣಾದಿ ರಕ್ಕಸರನ್ನು ಕೊಂದು, ಸೀತೆ ಲಕ್ಷ್ಮಣರೊಡಗೂಡಿ ಅಯೋಧ್ಯೆಗೆ ತೆರಳುವ ಮಾರ್ಗ ಮಧ್ಯದಲ್ಲಿ ರಾಮ ಗೌತಮಮುನಿಯ ಆಶ್ರಮದಲ್ಲಿ ಬೀಡುಬಿಟ್ಟ ಸನ್ನಿವೇಶದಲ್ಲಿ. ಹೊಸಧಾನ್ಯದ ಭಕ್ಷ್ಯದ ರುಚಿಗಾಗಿ ರಾಮನು ಒಡ್ಡಿದ ಬೇಡಿಕೆಗೆ ಗೌತಮರು ತರಿಸಿದ ನವಧಾನ್ಯಗಳಲ್ಲಿ ರಾಮ ಮೆಚ್ಚುಗೆ ಸೂಚಿಸಿದ್ದು, ಗೌತಮರು ಏಕಮೇವಾದ್ವಿತೀಯವೆಂದು ಹೊಗಳಿದ್ದು ರಾಗಿಯನ್ನು. ಸಹಜವಾಗಿ ಇದರಿಂದ ಭತ್ತಕ್ಕೆ ಕೋಪ. ಫಲವಾಗಿ ರಾಗಿಗೆ "ಕುಲಹೀನ", "ಶೂದ್ರಾನ್ನ", "ಮತಿಹೀನ" ಎಂಬ ಹಲವು ನಿಂದನೆಪೂರಿತ ತಿರಸ್ಕಾರಗಳ ಸುರಿಮಳೆ. ಶುಭ ಸಮಾರಂಭ, ಯಜ್ಞಯಾಗಾದಿಗಳಲ್ಲಿ ತನಗೆ ಸಲ್ಲುವ ಪ್ರಥಮ ಪ್ರಶಸ್ತ್ಯಗಳಿಂದ "ತಾ ಯೋಗ್ಯ" ಎಂಬುದು ಭತ್ತದ ಹೆಗ್ಗಳಿಕೆ. ಭತ್ತ ಹೇಳುವ ಈ ಒಂದೊಂದು ಮಾತಿನಲ್ಲೂ ಮೇಲುವರ್ಗದ ಉಚ್ಛ್ರಾಯ ಸ್ಥಿತಿ, ಸ್ವಾಮ್ಯಪ್ರವೃತ್ತಿ, ಒಣಹೆಮ್ಮೆ, ದುರಹಂಕಾರಗಳು ಮೊಳಗುತ್ತವೆ. ರಾಗಿಯೂ ಸುಮ್ಮನಿರುವುದಿಲ್ಲ. ತನ್ನ ನಿಸ್ವಾರ್ಥ ಮೂಲವನ್ನು ಬಯಲಿಗಿಡುತ್ತದೆ. ಭತ್ತವನ್ನು "ನುಡಿಗೆ ಹೇಸದ ಭಂಡ" ಎಂದು ಛೇಡಿಸುವ ಪರಿಯನ್ನು ಕನಕದಾಸರು ಹೀಗೆ ಕಂಡರಿಸಿದ್ದಾರೆ:

> ಸತ್ಯಹೀನನು ಬಡವರನು ಕ
> ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
> ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
> ಹೆತ್ತ ಬಾಣಂತಿಯರು ರೋಗಿಗೆ

ಪತ್ಯ ನೀ[ನಹೆ] ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ ॥

ಸತ್ತದಿನವಾರಭ್ಯ ಮನುಜರು
ಮತ್ತೆ ಕರ್ಮವ ಹೊತ್ತು ಪಿಂಡವ
ನಿತ್ತು [ತಪ್ಪದೆ ಮತ್ತೆ] ವಾಯಸಕುಲವ ಕರಕರದು
ತುತ್ತನಿಡುವರು ಎ[ಳ್ಳು] ದರ್ಭೆಗೆ
ತೆತ್ತಿಗನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದ ॥

('ರಾ. ಚ' ೪೫–೪೬)

ರಾಗಿಯ ಈ ಮಾತುಗಳಲ್ಲಿ ತುಂಬಿದ ಆತ್ಮಾಭಿಮಾನ, ಸರ್ವಕಾಲಕ್ಕು ಸರ್ವಜನರಿಗೂ ಬೇಕಾಗುವ ಅದರ ಅನಿವಾರ್ಯತೆ, ಬಡವಬಲ್ಲಿದ ಉಪೇಕ್ಷೆಗೆ ಹೊರತಾದ ನಿರಹಂಕಾರಿ ಸ್ವಭಾವಗಳನ್ನು ದರ್ಶಿಸಬಹುದು. ಹಾಗೆಯೇ ಭತ್ತದ ನಿರ್ದಯ ಕುಟಿಲಾತ್ಮಕ ಬುದ್ಧಿ, ಕೀರ್ತಿಶನಿಯ ಬೆಂಬತ್ತಿ ಹೋಗುವ ಲಜ್ಜಾಹೀನ ಮನೋಧೋರಣೆಗಳನ್ನೂ ತಿಳಿಯಬಹುದು. ಮುಂದೆ ರಾಮ ಅವೆರಡು ಧಾನ್ಯಗಳನ್ನು ಸೆರೆಹಾಕಿ ಮರುಪರೀಕ್ಷೆಗೊಡ್ಡುವುದು ; ಭತ್ತದ ಪೊಳ್ಳುತನ ರಾಗಿಯ ಗಟ್ಟಿತನ ಬೆಳಕಿಗೆ ಬರುವುದು ; ಕಪಿಲಮುನಿ ರಾಗಿಯನ್ನು "ಈತನೆ ಬಲ್ಲಿದನು ಆರೈದು ಸಲಹುವನಿವಗೆ ಸರಿಯುಂಟೆ" (ರಾಚ ೧೩೫) ಎಂದು ತೀರ್ಮಾನಿಸಿದ್ದು, ರಾಮ ಕನಲಿ, ಚಿಂತಿಸುವ ಭತ್ತಕ್ಕೆ ವಸ್ತುಸ್ಥಿತಿಯನ್ನು ಪರಿಚಯಿಸಿ, ಒಪ್ಪಿಸುವ ಮೂಲಕ ಸಮಾಧಾನ ಪಡಿಸುವುದು–ಹೀಗೆ ಕಥಾವಸ್ತು ಬೆಳೆದು ಮುಕ್ತಾಯವಾಗುತ್ತದೆ. ಕವಿಯ ಒಟ್ಟು ಆಶಯ ಲೋಕಕಲ್ಯಾಣವೇ ಆದ್ದರಿಂದ ರಾಗಿಯ ಮಹತ್ವವನ್ನು ಪ್ರಕಟಿಸುವಾಗಲೂ, ಭತ್ತವನ್ನೂ ಪೂರ್ಣರೂಪದಲ್ಲಿ ತಿರಸ್ಕರಿಸದೆ ಒಳಿತಿನ ತೆಕ್ಕೆಗೆ ತೆಗೆದುಕೊಳ್ಳುವ ದೂರದೃಷ್ಟಿ ಗೋಚರಿಸುತ್ತದೆ. ಆದ್ದರಿಂದಲೇ ಕನಕರಿಗೆ ವಿಡಂಬನೆಯಲ್ಲಿ ಸಮತೋಲನ ಕಾಯ್ದುಕೊಳ್ಳುವುದು ಸಾಧ್ಯವಾಗಿದೆ.

ಇಡೀ ಕಾವ್ಯ ಜಾತೀಯತೆ ಮತ್ತು ಅಸಮಾನತೆಯನ್ನು ಕ್ರಿಯಾತ್ಮಕವಾಗಿ ಸಾದರಪಡಿಸುತ್ತದೆ. ಇದಕ್ಕಾಗಿ ಕನಕದಾಸರು ಆಯ್ಕೆ ಮಾಡಿಕೊಂಡ ವಸ್ತು ಜನಪದರು ಬಲ್ಲಂತಹುದೆ. ಕಾರಣ ತನ್ನ ಸಂದೇಶ ಜನಸಾಮಾನ್ಯರಿಗೆ ತಲುಪಿಸುವ ಉದ್ದೇಶ ಕವಿಯದು. ಹೀಗಾಗಿ ಚಿರಪರಿಚಿತ ಲೋಕದಲ್ಲೇ ಕವಿ

ವ್ಯವಹರಿಸುತ್ತಾನೆ. ಆ ಮೂಲಕ ಬಡವರಲ್ಲಿ ಸುಪ್ತವಾಗಿರುವ ಮಾನವೀಯತೆಯನ್ನು ಮೆರೆಸಿ, ಅವರಲ್ಲಿ ಬೇರು ಬಿಟ್ಟಿರುವ ಹೀನಾಯ ಭಾವನೆಯನ್ನು ಮರೆಸಿ, ಶ್ರೀಮಂತರ ಕೊಬ್ಬನ್ನು ಮುರಿಯುವ ತಂತ್ರವನ್ನಿಲ್ಲಿ ಸಮರ್ಥವಾಗಿ ಯೋಜಿಸಿದ್ದಾನೆ. ಜನಪದರ ಆಡುನುಡಿಯೇ ಇಲ್ಲಿ ಬಳಕೆಯಾಗಿರುವುದೊಂದು ವಿಶೇಷ. ಏಕೆಂದರೆ ಒರಟು ಭಾಷೆ ಜಡ್ಡು ಹಿಡಿದ ಮನಸ್ಸನ್ನು ಭೇದಿಸಲು ಸರಿಯಾದ ಅಸ್ತ್ರ ಎಂಬ ನೈಜಭಾವನೆ ಕವಿಯದು. ಮನುಷ್ಯ ಒರಟು ನಡವಳಿಕೆಗೆ ಪ್ರತಿಕ್ರಿಯಿಸುವಷ್ಟು ಬೇಗ ಮೃದು ನಡವಳಿಕೆಗೆ ಬಾಗನು ಎಂಬ ಲೋಕಾನುಭವದ ಅರಿವೂ ಕವಿಗಿರುವುದನ್ನಿಲ್ಲಿ ಕಾಣಬಹುದು. ಆದ್ದರಿಂದಲೆ ಕನಕದಾಸರ ವಿಡಂಬನೆಯಲ್ಲಿ "ಕಹಿಯಿದೆ ವಿಷವಿಲ್ಲ, ಮೊನಚಿದೆ. ನೋವಿಲ್ಲ, ಹಠವಿದೆ ದ್ವೇಷವಿಲ್ಲ. ಕಾವಿದೆ ತಾಪವಿಲ್ಲ. ಕೋಪವಿದೆ ವೈರವಿಲ್ಲ, ಚುರುಕಿದೆ ಉರಿಯಿಲ್ಲ. ಎಲ್ಲಿಯೂ ಬ್ರಹ್ಮಶಿವರ ವೃತ್ತಿವಿಲಾಸರ ಮತಾಂಧತೆಯ ದೋಷ ಲೇಪವಿಲ್ಲ. ಕರ್ತವ್ಯ ಪ್ರಜ್ಞೆ, ಸತ್ಯನಿಷ್ಠೆ, ಲೋಕ ಕಾರುಣ್ಯ, ನೈತಿಕಶ್ರದ್ಧೆ, ಧರ್ಮಕೋಪ–ಇವು ಆ ವಿಡಂಬನೆಯ ಹಿಂದಿರುವ ಮೂಲಭೂತವಾದ ಪ್ರೇರಕ ಪ್ರವೃತ್ತಿ"[೧] ಗಳಾಗಿ ಸಮಾಜದ ಕಣ್ಣು ತೆರೆಸುವ ಪ್ರಯತ್ನ ನಡೆಸುತ್ತದೆ.

ಈ 'ರಾಮಧಾನ್ಯಚರಿತ್ರೆ' ಅಂದಿನ ವ್ಯವಸ್ಥೆಯ ತಾರತಮ್ಯಗಳಿಗೆ ಸಾಕ್ಷೀಭೂತವಾಗಿರುವಂತೆ ಕವಿಯ ಆತ್ಮಕಥೆಯೂ ಆಗಿದೆ ಎಂದು ತಿಳಿದಾಗ ಆ ವಿಡಂಬನೆಯ ವಸ್ತುವಿನ ಮೌಲ್ಯಕ್ಕೆ ವಿಶೇಷ ಅರ್ಥಪರಂಪರೆಗಳು ಸೃಷ್ಟಿಗೊಂಡುಬಿಡುತ್ತವೆ.

ಹುಟ್ಟಿನಿಂದ ಶೂದ್ರನಾಗಿ, ಸಿದ್ಧಿಯ ಮಾರ್ಗದಲ್ಲಿ, ಅವನು ಎದುರಿಸಿದ ಜಾತಿಯ ಪೆಡಂಭೂತದ ಬಾಧೆಯನ್ನಿದು ಖಚಿತಪಡಿಸುತ್ತದೆ. ಮಡುವುಗಟ್ಟಿದ್ದ ಆ ನೋವನ್ನು ಕವಿಮನ ಸಾಮಾನ್ಯ ಮಾತುಗಳಲ್ಲಿ ಕಲಾತ್ಮಕವಾಗಿಲ್ಲಿ ಕರಗಿಸಿದೆ. ಇಲ್ಲಿ ಕಥೆಯ ಕೇಂದ್ರ ಬಿಂದು ಯಾವುದೂ ಅಲ್ಲ. ಆದರೆ ಎಲ್ಲವೂ ಹೌದು. ಕಥಾನಾಯಕ ಯಾರೂ ಅಲ್ಲ ಎಲ್ಲರೂ ಹೌದು. ದೈವತ್ವ ಸಂಪಾದನೆ ಉನ್ನತವರ್ಗಕ್ಕೇ ಕಟ್ಟಿಟ್ಟ ಬುತ್ತಿಯಲ್ಲ. ಜೀವನ್ಮುಕ್ತನಿಗೆ ಅಂಟಿದ ನಂಟು ಅದು. ಸಾಧನೆಯ ಶ್ರಮದಿಂದ ಮಿಗಿಲಾಗಿ ಮಾನವೀಯ ತುಡಿತ ಮಿಡಿತಗಳಿಂದ ಯಾರೂ ದಕ್ಕಿಸಿಕೊಳ್ಳಬಹುದಾದುದು ಎಂಬ ಸಾರ್ವತ್ರಿಕ ಸಾರ್ವಕಾಲಿಕ ಜೀವನ ದರ್ಶನ ಪ್ರಸ್ತುತ ಕೃತಿಯಲ್ಲಿ ವ್ಯಕ್ತವಾಗುತ್ತದೆ.

---

೧. ದೇಜಗೌ (ಸಂ), 'ರಾಮಧಾನ್ಯ ಚರಿತ್ರೆ' " ಮುನ್ನುಡಿ, ಮೈಸೂರು, ೧೯೭೯. ಪು. ೧೦

ಶೃಂಗಾರವೆನ್ನಬಹುದಾದ ಪೌರಾಣಿಕ ವಸ್ತುಗಳನ್ನು ಆಯ್ದುಕೊಂಡು ಕನಕದಾಸರು, 'ಮೋಹನ ತರಂಗಿಣಿ', 'ನಳಚರಿತ್ರೆ' ಕೃತಿಗಳನ್ನು ರಚಿಸಿದ್ದಾರೆ. ದೈವತ್ವದ ಬಲಾಢ್ಯತೆಯನ್ನು ಸಾದರಪಡಿಸುವ ಕಾರಣಕ್ಕಾಗಿಯೇ ಹುಟ್ಟಿಕೊಂಡ ಈ ಕೃತಿಗಳು ಕಣ್ಣುಪಟ್ಟಿ ಕಟ್ಟಿಕೊಂಡ ಕುದುರೆಯಂತೆ ನೇರವಾಗಿ ಮುಕ್ತಾಯದ ಕಡೆಗೆ ಧಾವಿಸುತ್ತವೆ. ಕವಿ ಎಲ್ಲಿಯೂ ಸಾಮಾಜಿಕ ಚಿಂತನೆಯ ಚಾಳೀಸು ಇಲ್ಲಿ ಧರಿಸುವುದಿಲ್ಲವಾದ್ದರಿಂದ ವಿಡಂಬನೆ ಕ್ವಚಿತ್ತಾಗಿ ಕಾಣಿಸಿಕೊಂಡು, ಕಾಣಿಸಿಕೊಂಡಷ್ಟೇ ವೇಗದಲ್ಲಿ ಮರೆಯಾಗಿ ಬಿಡುತ್ತದೆ. ಆದರೂ ಈ ಕೃತಿಗಳೂ ಶುಷ್ಕ ಸರಕುಗಳೆನಿಸದೆ ಆತ್ಮೀಯತೆಯ ಆರ್ದ್ರತೆಯಲ್ಲಿ ಅದ್ದಿದ ರಸಪಾಕವಾಗಿ ಮಿಡಿಯುತ್ತವೆ.

"ಪರರ ದುಃಖವ ಪರಿಹರಿಸಿ ಮಿಗೆ ಪರರಿಗುಪಕಾರಾರ್ಥವೆಸಗಲು ಪರಮ ಪುಣ್ಯವದು" (ನಚ ೨–೪೯) ಎಂಬ ಮಾತಿನಲ್ಲಿ ಭಕ್ತಿ ಸಹಜ ಸ್ಥಿತಿಯಲ್ಲಿ ನಮ್ಮ ನಡೆ ನುಡಿಯಲ್ಲಿ ಉದ್ಭವವಾಗಬೇಕು. ಇಲ್ಲದಿದ್ದಲ್ಲಿ ಅದು ಡೊಂಬರಾಟದ ವೇಷದಂತಾಗುತ್ತದೆ ಎಂದು ಭಕ್ತಿಯ ಜನನವನ್ನು ಕನಕದಾಸರು ಬೆರಳುಮಾಡಿ ತೋರಿಸಿದ್ದಾರೆ. "ಇಲ್ಲಿ ಉಪದೇಶವಿಲ್ಲ, ಆದರೆ ಉಪದೇಶದ ಎಲ್ಲ ಗುಣವನ್ನು ಸಾಂದ್ರೀಕರಿಸಿಕೊಂಡಿದೆ. ಆದರೆ ದಮಯಂತಿಯ ದುಃಸ್ಥಿತಿಗೆ ಕಾರಣನಾದ ಕಲಿಯನ್ನು 'ಕುಟಿಲಾತ್ಮಕನ ನಿಸ್ಸಾರ ಹೃದಯನನು' (ನಚ ೪–೩) ಎಂದು ಛೇಡಿಸುವಲ್ಲಾಗಲಿ, ಕಾನನದಲ್ಲಿ ಕಾಣಸಿಕ್ಕ ಆಕೆಯನ್ನು ದೇವತೆಯೋ ಮಾಯಾರೂಪಿಯೋ ಎಂದು ಮೊದಲಾಗಿ ತಿಳಿದು ಬೆದರಿ ಓಡಿದ ವೈಶ್ಯರನ್ನು ಕುರಿತು "ಹೇಡಿ" (ನಚ ೫–೪೧)ಗಳೆಂದು ಜರಿಯುವುದಾಗಲಿ ಪರಿಣಾಮಕಾರಿಯಾದ ವಿಡಂಬನೆಗಳೆನಿಸವು. ಏಕೆಂದರೆ ಕಾವ್ಯದಲ್ಲಿ ವಿಡಂಬನಗಳು ಕರಗದೆ ಹೇಳಿಕೆ ರೂಪದಲ್ಲೇ ಉಳಿದುಬಿಟ್ಟಿವೆ. ಇದೇ ಅಂಶವನ್ನು 'ಮೋಹನ ತರಂಗಿಣಿ' ಕೃತಿಯಲ್ಲಿ ಬರುವ ವಿಡಂಬನೆಗಳಿಗೆ ಅನ್ವಯಿಸಬಹುದಾದರೂ 'ನಳಚರಿತ್ರೆ'ಗಿಂತ ಭಿನ್ನವಾಗಿ ಇಲ್ಲಿ ದೈವವನ್ನು ವಿಡಂಬಿಸುವ ಪೌರಾಣಿಕ ಪ್ರತಿಮೆಗಳು ಅಲ್ಲಲ್ಲಿ ಸುಳಿಯುವುದನ್ನು ಗಮನಿಸಬಹುದು.

ತನ್ನರಮನೆಗೆ ಬಂದ ರತಿಯನ್ನು ಕಂಡು ಮೋಹಿತನಾದ ಚಾಣಾಕ್ಷ ಶಂಬರ ತನ್ನ ಪತ್ನಿಯ ಮೂಲಕ ಆಕೆಯನ್ನು ಒಲಿಸಿಕೊಳ್ಳುವ ಪ್ರಯತ್ನ ನಡೆಸಿದಾಗ ಪತ್ನಿ ತನ್ನ ಗಂಡನಿಗೆ ಹೆಣ್ಣಿನ ಸ್ತ್ರೀತ್ವದ ಮಹತ್ತಿನ ಬಗೆಗೆ ಪರಿಚಯಿಸಿಕೊಡುವ ಸಂದರ್ಭದಲ್ಲಿ ಬಳಕೆಯಾಗಿರುವ ಪದ್ಯ ಕನಕದಾಸರ

ವಿಡಂಬನಶಕ್ತಿಗೆ ದಿವ್ಯನಿದರ್ಶನವಾಗಿದೆ :

ಮಂಡಲದೊಳು ಹದಿಬದೆಯ ಸಂಗವ ಮಾಡಿ
ಭಂಡ ತಾ ವಜ್ರಿಯ ನೋಡು
ಗಂಡನುಳ್ಳವಳಾಸೆ ಬೇಡೆಂದು ನೆರೆ ಬೇಡಿ
ಕೊಂಡೆಙಗಿದಳು ವಲ್ಲಭಗೆ ॥

(ಮೋ.ತ. ೨೫)

ಇಲ್ಲಿ ಅಹಲ್ಯೆಯನ್ನು ಮೋಹಿಸಿ ಭಂಡನಾದ ಇಂದ್ರನ ಕಥೆಯನ್ನು ಪ್ರತಿಮಿಸುವ ಮೂಲಕ ಪರಸ್ತ್ರೀ ಮೋಹಕ್ಕೊಳಗಾದವರ ಗತಿಯನ್ನು ತೋರಿಸಿ, ಅಂಥ ಮಂದಿಯನ್ನು ಎಚ್ಚರಿಸುವ ಧ್ವನಿ ಇದೆ. ಎಂಥ ಸನ್ನಿವೇಶಗಳನ್ನು ತರುವಾಗಲೂ ಉದ್ವೇಗ ವಶರಾಗದೆ ದೃಷ್ಟಾಂತಗಳನ್ನು ತಣ್ಣನೆ ಮುಂದಿಡುವ ಪರಿ ಹೃದ್ಯವಾಗಿದೆ.

ಈಗಾಗಲೆ ಸ್ಪಷ್ಟಪಡಿಸಿರುವಂತೆ ಕನಕದಾಸರದು ಕವಿಹೃದಯ; ರವಿ ಕಾಣದ್ದನ್ನು ಕವಿ ಕಾಣುವ ಪ್ರಯತ್ನವಿಲ್ಲಿಯದು. ಅದರಲ್ಲೂ ಸೂಕ್ಷ್ಮ ಸಂವೇದನಾಶೀಲರಾದ ಕನಕದಾಸರು ತೀಕ್ಷ್ಣ ಅವಲೋಕನದಿಂದ ವೈಯಕ್ತಿಕ ಹಾಗೂ ಸಾಮಾಜಿಕ ಬದುಕನ್ನು ಬಗಿದು ಶೋಧಿಸುವ, ಸತ್ಯದ ನೆಲೆಯನ್ನು ಹುಡುಕುವ ದಾರ್ಷ್ಟವನ್ನು, ಸಮಕಾಲೀನ ಪ್ರಜ್ಞೆಯನ್ನು ತಮ್ಮ ಕೀರ್ತನೆಗಳಲ್ಲಿ ಪ್ರಚುರಪಡಿಸಿದ್ದಾರೆ.

ಕನಕದಾಸರ ಕೀರ್ತನೆಗಳ ಮೂಲ ಸೆಲೆ ಭಕ್ತಿ. ಆದರೂ ದೈವಲೀಲಾವರ್ಣನೆ, ಆತ್ಮನಿವೇದನೆ ಹಾಗೂ ಸಾಮಾಜಿಕ ವಿಡಂಬನೆಯ ತ್ರಿವೇಣಿಸಂಗಮ ಅವರ ಕೀರ್ತನೆಗಳಲ್ಲಿ ಮಡುಗಟ್ಟಿದೆ. ದಾಸರೆಲ್ಲರ ಆಶಯವು ಇದೇ ಆಗಿದೆ. ಹೀಗಾಗಿ ಭಕ್ತಿ ಮತ್ತು ಜೀವನದರ್ಶನ ಜೊತೆಜೊತೆಯಾಗಿ ಕೀರ್ತನ ಸಾಹಿತ್ಯದಲ್ಲಿ ತಾವು ಪಡೆಯುವುದರಿಂದ ಭಗವಂತ ಮತ್ತು ಭಕ್ತನ ಒಳತೋಟಿಯನ್ನು ಅಂದಿನ ನಂಬಿಕೆಗಳೊಂದಿಗೆ ಸಮೀಕರಿಸಲ್ಪಟ್ಟಿರುವುದು ಸಹಜವೆ. ಹಾಗೆಂದು ಪೂರ್ಣವಾಗಿ ದೈವವಾದಿಗಳಲ್ಲ ; ವಿಧಿಬರಹಕ್ಕೆ ಜೋತು ಬಿದ್ದ ಪಲಾಯನವಾದಿ ಸಿದ್ಧಾಂತಿಯೂ ಅಲ್ಲ. ಮನುಷ್ಯಪ್ರಯತ್ನ ಬಹು ಮುಖ್ಯವೆಂದು ಪರಿಭಾವಿಸಿದವರು. ಆದ್ದರಿಂದಲೇ ಕನಕರ ಕೀರ್ತನೆಗಳು ಮರ್ತ್ಯ–ಅಮರ್ತ್ಯರ ಅಂತರಂಗ ಬಹಿರಂಗಗಳನ್ನು, ನೋವು–ನಲಿವುಗಳನ್ನು ವೈಯಕ್ತಿಕ ನಿಲುವುಗಳಿಂದ ವಿಮರ್ಶೆ ಮಾಡುತ್ತವೆ.

ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಜನರ ನಡವಳಿಕೆ, ಸಮಾಜದಲ್ಲಿ

ಬೇರುಬಿಟ್ಟ ರೂಢಿಗತ ಸಂಪ್ರದಾಯಗಳು, ಜಾತಿ ಮತ ವ್ಯವಸ್ಥೆಗಳು, ಬಡವ–ಬಲ್ಲಿದ, ಮೇಲು–ಕೀಳೆಂಬ ತಾರತಮ್ಯ, ಹಳಸಲು ಮೌಲ್ಯಗಳು, ಬದುಕಿನ ಆಡಂಬರ ಮೊದಲಾದ ವಿಚಾರಗಳನ್ನು ವಿಡಂಬಿಸಿರುವ ರೀತಿ ಅನನ್ಯವಾದುದು. ಹೀಗೆ ಮಾಡುವಾಗ ಇವರು ವಾಸ್ತವತೆಯ ಕಠೋರ ಸತ್ಯವನ್ನು ಪರಿಣಾಮಕಾರಿಯಾಗಿ ಅನಾವರಣಗೊಳಿಸುವ ಮೂಲಕ ಮಾನಸಿಕ ಕ್ಲೇಶವನ್ನು ಒರೆಗೆ ಹಚ್ಚುವ ಪ್ರಾಮಾಣಿಕ ಪ್ರಯತ್ನ ಮಾಡುತ್ತಾರೆ.

ಶೂದ್ರ ಕನಕರನ್ನು ಅಂದಿನ ಸಮಾಜ ಅವರ ಪಾಂಡಿತ್ಯ ಪ್ರತಿಭೆ ಅನುಭಾವಗಳ ಪ್ರಭಾವವನ್ನು ಕಂಡೂ ಮುಕ್ತವಾಗಿ ಸ್ವೀಕರಿಸಲು ಮುಂದಾಗಲಿಲ್ಲ, ಇದಕ್ಕೆ ಕೊಡುವ ಕಾರಣ ಒಂದೇ ಒಂದು, ಜಾತಿ. ಇದು ಕನಕದಾಸರನ್ನು ಆಳವಾಗಿ ಬಾಧಿಸಿತು. ಶೋಷಿತ ವರ್ಗದ ನೋವಿನ ದನಿಯ ಅರಿವೂ ಮೂಡಿತು. ತತ್ಪರಿಣಾಮವಾಗಿ ಅವರ ಸಾತ್ವಿಕ ರೋಷ ಎಚ್ಚೆತ್ತು, ಅಂಥ ಉಪ್ಪರಿಗೆಯ ಜನರ ಡೊಂಬರಾಟವನ್ನು ಕಂಡು ಕೆಂಡ ಕಾರುತ್ತದೆ ;

ಮಾತು ಮಾತಿಗೆ ಹರಿಯ ನಿಂದಿಸಿ ಸ
ರ್ವೋತ್ತಮ ಶಿವನೆಂದು ಸಾಧಿಸಿ
ಧಾತು ಗ್ರಂಥಗಳೆಲ್ಲ ತೋರಿಸಿ ವೇ
ದಾಂತ ಪ್ರಮಾಣಗಳ್ಹಾರಿಸಿ
ಸೋತು ಸಂಕಟಪಟ್ಟು
ನೀತಿ ಹೇಳುವ ಕೆಟ್ಟಜಾತಿಗಳಿಗಲ್ಲದೆ (ಕೀರ್ತನೆ ಸಂ. ೩೯)*೧

ಕೇವಲ ವೇದಾಗಮಗಳನ್ನು ಉದ್ಧರಿಸುತ್ತ, ನೈತಿಕ ಬಲವಿಲ್ಲದೆ, ಶೀಲಗೆಟ್ಟ ಮೇಲ್ವರ್ಗದ ಜನ ಜಾತಿಯ ಬಗ್ಗೆ ನೀತಿ ಹೇಳುವ ಮೂರ್ಖ ಸಾಹಸವನ್ನಿಲ್ಲಿ ಮಾಡುತ್ತಾರೆ. ಜಾತಿಯ ನಿರ್ಣಯ ಜ್ಞಾನದಿಂದಾಗಬೇಕು ; ಭಕ್ತಿಯಿಂದಾಗಬೇಕು; ಸತ್ಯದಿಂದಾಗಬೇಕೇ ಹೊರತು ಹೊಲಸು ದೇಹ ಹಾಗೂ ಮನವನ್ನು ಮುಂದಿಟ್ಟುಕೊಂಡು ಅಲ್ಲ, ಏಕೆಂದರೆ ಆತ್ಮ, ಜಿತೇಂದ್ರಿಯತ್ವ ಯಾರ ಸೊತ್ತೂ ಅಲ್ಲ. ಇದೆಲ್ಲ ಸಾಧನೆಗೆ ಸಂಬಂಧಿಸಿದ್ದು. ಹಾಗೆ ನೋಡಿದರೆ ಕುಲದ ನೈಜ

---

*೧ ಪಂಡಿತ ಬಿ. ಶಿವಮೂರ್ತಿ ಶಾಸ್ತ್ರೀ, ಡಾ. ಕೆ. ಎಂ. ಕೃಷ್ಣರಾವ್ ಸಂಪಾದಿತ 'ಕನಕದಾಸರ ಕೀರ್ತನೆಗಳು' ಕೃತಿಯಲ್ಲಿ ಬರುವ ಕೀರ್ತನೆಗಳ ಸಂಖ್ಯೆಯನ್ನೇ ಲೇಖನಕ್ಕೆ ಬಳಸಿಕೊಳ್ಳಲಾಗಿದೆ.

ಅರ್ಥವೇ ಮೇಲ್ವರ್ಗದವರಿಗೆ ತಿಳಿದಿಲ್ಲ. ಅವರ ಈ ಆಶಯ ಸರ್ವವ್ಯಾಪಿಯೂ ಸರ್ವಗ್ರಾಹಿಯೂ ಆಗಿ ನಮಗೆ ಹೀಗೆ ಕಾಣಸಿಗುತ್ತದೆ :

ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರು ಬಲ್ಲಿರ ॥
ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
ಅಟ್ಟು ಉಣ್ಣದ ವಸ್ತುಗಳಿಲ್ಲ
ಗುಟ್ಟು ಕಾಣಿಸ ಬಂತು ಹಿರಿದೇನು ಕಿರಿದೇನು
ನೆಟ್ಟನೆ ಸರ್ವಜ್ಞನ ನೆನಕಂಡ್ಯ ಮನುಜ ॥
ಜಲವೆ ಸಕಲ ಕುಲಕ್ಕೆ ತಾಯಲ್ಲವೆ
ಜಲದ ಕುಲವನೇನಾದರು ಬಲ್ಲಿರ ।
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲವೀ ದೇಹ
ನೆಲೆಯನರಿತು ನೀ ನೆನೆಕಂಡ್ಯ ಮನುಜ ॥
ಹರಿಯೇ ಸರ್ವೋತ್ತಮ, ಹರಿಯೇ ಸರ್ವೇಶ್ವರ
ಹರಿಮಯವೆಲ್ಲವೆನುತ ತಿಳಿದು ।
ಸಿರಿಕಾಗಿನೆಲೆಯಾದಿಕೇಶವರಾಯನ
ಚರಣಕಮಲವ ಕೀರ್ತಿಸುವನೆ ಕುಲಜ ॥

(ಕೀರ್ತನೆ. ಸಂ. ೧೬೭)

ಪಂಪ 'ಕುಲಂ ಕುಲಮಲ್ತು, ಚಲಂಕುಲಂ ಗುಣಂ ಕುಲಂ ಅಭಿಮಾನಮೊಂದೆ ಕುಲಂ ಅಣ್ಮು ಕುಲಂ' ಎಂದಿರುವುದನ್ನಿಲ್ಲಿ ನೆನಪಿಸಿಕೊಳ್ಳಬಹುದು. ಜನಪ್ರಿಯವಾದ ಈ ಕೀರ್ತನೆಯಲ್ಲಿಯೂ ಪಂಪನ ಧ್ವನಿ ಪ್ರತಿಧ್ವನಿಗೊಂಡಿದೆ. ಹುಟ್ಟಿನ ಮೂಲದಲ್ಲಾಗಲಿ ಬದುಕಿನ ರಹಸ್ಯದಲ್ಲಾಗಲಿ ಹಿರಿದು ಕಿರಿದು ಭಾವ ಸಲ್ಲದು. ನೀರಿನ ಗುಳ್ಳೆಯಂತೆ ಅನಿಶ್ಚಿತವಾದುದು ಅಶಾಶ್ವತವಾದುದು ದೇಹ. ಅಮರತ್ವ ಲಭ್ಯವಾಗುವುದು ಹರಿಯ ಕೀರ್ತನೆ ಮಾತ್ರದಿಂದ. ಇಂದು ಇದ್ದು ನಾಳೆ ಹೋಗುವ ಈ ದೇಹವ ಹೊತ್ತ ಮನುಷ್ಯ ಅಸ್ಪೃಶ್ಯನಂತೆ ವರ್ತಿಸುವುದು. ಕುಲದ ಆಧಾರದ ಮೇಲೆ ವ್ಯವಹಾರ ನಡೆಸುವುದು ಕನಕರ ದೃಷ್ಟಿಗೆ ಅಸಹ್ಯವಾಗಿ ಅಮಾನುಷವಾಗಿ ತೋರುತ್ತದೆ. ಆದ್ದರಿಂದಲೇ ಕುಲದ ಬಗೆಗಿನ ಕನಕರ ಈ ನುಡಿಮುತ್ತುಗಳೂ ಎಲ್ಲಾ ಕಾಲಕ್ಕು ಮೌಲ್ಯವಾಗಿ ಉಳಿಯುವಂಥವು. ಜೊತೆಗೆ ಈ "ಕೀರ್ತನೆಯ ಉಲ್ಲೇಖ ನಮ್ಮ ಸಾಮಾಜಿಕ ಚಿಂತನೆಯ ಸ್ವರೂಪವನ್ನು ಪ್ರಕಟಿಸಲು ನೆರವಾಗುತ್ತದೆ. ಯಾವ ಮೌಲ್ಯವ್ಯವಸ್ಥೆ

ಮತ್ತು ಮೌಲ್ಯಶ್ರೇಣಿಗಳಲ್ಲಿ ನಾವು ಬದುಕುತ್ತಿದ್ದೇವೋ ಅದು ಇಂಥ ಉಲ್ಲೇಖಗಳ ಮೂಲಕ ನಮಗೆ ಗೋಚರವಾಗುತ್ತದೆ."[೧] ಮುಂದುವರಿದು" ಪಿಸುಣಗಿನ್ನಧಿಕ ಹೊಲೆಯುಂಟೆ" ಎಂದು ಕನಕರು ಪ್ರಶ್ನಿಸುತ್ತಾರೆ. ಇಲ್ಲಿ "ಹೊಲೆಯ" ಪದ ಜಾತಿವಾಚಕವಲ್ಲ, ಕೃತ್ಯವಾಚಕ ಎಂಬುದನ್ನು ಗ್ರಹಿಸಬೇಕು ಹುಟ್ಟು–ಸಾವು ಎರಡೂ ಹೊಲೆಯನ್ನು ಆಧರಿಸಿಯೇ ನಿಲ್ಲುವಂಥದ್ದು ಎಂದು ವಾದಿಸುವ "ತೊಲಗುವರು ಕಡೆಕಡೆಗೆ ತಾ ಹೊಲೆ, ಹೊಲೆಯೆನುತ ಕಳವಳಿಸಿ ಮೂತ್ರದ ಬಿಲದೊಳಗೆ ಬಂದಿಹುದ ಕಾಣದೆ ಬರಿದೆ ಮನನೊಂದು ಜಲದೊಳಗೆ ಮುಳುಗಿದರೆ ತೊಲಗದು ಹೊಲಗೆಲಸವೀ ದೇಹದೊಳು ನೀ ನೆಲೆಸಿರಲು ಹೊಲೆಯುಂಟೆ" ಎಂಬ ವಾಕ್ಯವನ್ನು ನೋಡಿ. ಇಲ್ಲೆಲ್ಲಾ ಜಾತಿ ಜಾತಿಗಳಲ್ಲಿ ತಿರಸ್ಕೃತರಾದವರಿಗೂ ಪುರಸ್ಕಾರ ಕೊಟ್ಟದ್ದು ಕನಕರ ಹೆಮ್ಮೆ. ಈ ನಿಟ್ಟಿನಲ್ಲಿ ಉತ್ತಮರು ಆಚರಿಸುವ ಸಂಪ್ರದಾಯ ರೂಢಿಗತ ಪದ್ಧತಿಗಳಲ್ಲಿ ಕವಿ ಮೌಢ್ಯಗಳ ಮಹಾಪೂರವನ್ನು ಹೀನಮಾರ್ಗವನ್ನು ಕಾಣುತ್ತಾರೆಯೆ ಹೊರತು ಜನಪರ ಧೋರಣೆಯನ್ನಲ್ಲ. ಅಂಥ ರೀತಿ ರಿವಾಜುಗಳನ್ನು ಬೂಟಾಟಿಕೆಯ ನಡವಳಿಕೆಗಳನ್ನು ನವಿರಾದ ಹಾಸ್ಯದಿಂದ ಅಷ್ಟೇ ಮಾರ್ಮಿಕವಾಗಿ ಅಣಕಿಸುವುದನ್ನು ಕಾಣಬಹುದು.

"ನೇಮವಿಲ್ಲದ ಹೋಮ ಇನ್ನೇತಕೆ" (ಕೀ ಸಂ. ೩೧) ಎಂದು ನೇರವಾಗಿ ಪ್ರಶ್ನಿಸುವ ಕನಕರು ಶ್ರದ್ಧೆ ಆಸಕ್ತಿಯಿಲ್ಲದ ಕೇವಲ ಡಾಂಭಿಕತನದಲ್ಲಿ ವೃತ್ತಿಯನ್ನು ಪ್ರದರ್ಶಿಸುವುದನ್ನು ಟೀಕಿಸುವರು. ವಾರಕ್ಕೊಂದು ಉಪವಾಸ ಮಾಡುತ್ತ, ನೀರಲ್ಲಿ ಮುಳುಗು ಹಾಕುತ್ತ ಪಾಪ ಕಳೆಯುವ ಭ್ರಮೆಯಲ್ಲಿ ನಡೆದಾಡುವ ಮಂದಿ ನಾರಿಯರ ಸಂಗ ಬಿಡಲಾರದೆ ಒದ್ದಾಡುವ ರೀತಿ ಮಾತ್ರ ವಿಪರೀತ. ಇವರ ಪಾಲಿನ ಪೂಜೆ ಪುರಸ್ಕಾರಗಳು "ಕಳ್ಳರಿಗೆ ಕಳ್ಳನಂತೆ ಬೆಳ್ಳಕ್ಕಿಯಂದದಿ ಡಂಭ" (ಕೀ. ೭೮) ವಾಗಿ ಕಂಡಿದ್ದು ಸರಿಯೆ, ಏಕೆಂದರೆ ಇವರೆಲ್ಲ ಕಣ್ಣಿದ್ದು "ಗಾಣದೆತ್ತಿನಂತೆ ಕಣ್ಣು ಮುಚ್ಚಿ ಪ್ರದಕ್ಷಿಣೆ ಮಾಡಿ ಕಾಣದೆ ತಿರುಗು"ವ ವರ್ತನೆಯವರು. ಇವರ ಆಚಾರವಾದರೂ :

ಗುಂಡುಮುಳುಕನ್ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ
ಮಂಡೆ ಶೂಲೆ ಬಾಹೋದಲ್ತೆ ಗತಿಯಕಾಣೆನೊ ॥ (ಕೀ. ೭೮)

---

೧ (ಸಂ) ಕಾ. ತ. ಚಿಕ್ಕಣ್ಣ 'ಕನಕಕಿರಣ' ಬೆಂಗಳೂರು, ೧೯೮೨, ಪು. ೧೬೯.

ಸೋರೆಯೊಳಗೆ ಮದ್ಯತುಂಬಿ ಮೇಲೆ ತುಳಸಿ ಪುಷ್ಪಮಾಲೆ
ಗೀರು ಗಂಧ ಅಕ್ಷತೆಯ ಧರಿಸಿದಂತೆ ॥ (ಕೀ. ೧೦೪)

ಎಂಬ ರೀತಿಯವು. "ಈ ಜಗವೆಲ್ಲ ಈಶ್ವರಮಯ" ವೆಂದು ಅರಿತ ಮೇಲೆ ಆರೊಡನೆ ವೈರ? ಇದನ್ನರಿಯದೆ ದೇವರ ಹೆಸರುಗಳಿಗಾಗಿ ಹೋರಾಡುವ ವೇಷಧಾರಿ ಡಾಂಭಿಕದ ಬಾಹ್ಯಾಡಂಬರದ ದೊಂಬರಾಟವನ್ನು ನಿರ್ದಾಕ್ಷಿಣ್ಯವಾಗಿಲ್ಲಿ ಖಂಡಿಸಿದ್ದಾರೆ. ಅವರಲ್ಲಿನ ಮನದ ಕೊರತೆಯ, ಸತ್ಯದ ಕೊರತೆಯ ಅರಿವಿನ ಕೊರತೆಯ ಕಂಡು ಬೆರಗುಗೊಳ್ಳುತ್ತಾರೆ. ಇದು ಒಂದು ವರ್ಗದವರಿಗಷ್ಟೇ ಸೀಮಿತವಾದುದಲ್ಲ, ಎಲ್ಲ ವರ್ಗಕ್ಕೂ ಅನ್ವಯಿಸುತ್ತದೆ. ಇದನ್ನು ಕಂಡು ಕನಕದಾಸರು ವ್ಯಂಗ್ಯವಾಡಿದ್ದಾರೆ.

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ
ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ ॥

ಮೂಗ್ಹಿಡಿದು ನೀರೊಳಗೆ ಮುಳುಗಿ ಜಪತಪವ ಮಾಡಿ
ವೇದಶಾಸ್ತ್ರ ಪುರಾಣಗಳನೋದಿ ತಿಳಿದು
ಬಾಗಿ ಪರಸ್ತ್ರೀಯರಿಗೆ ಭ್ರಮಿಸಿ ಕಣ್ಣಿಡುವಂಥ
ನೀತಿ ತಪ್ಪಿದವರೆಲ್ಲ ದೇವ ಬ್ರಾಹ್ಮಣರೆ ಕೃಷ್ಣ ॥

ಪಟ್ಟೆನಾಮವ ಬಳಿದು ಪಾತ್ರೆಕೈಯಲ್ಲಿ ಪಿಡಿದು
ಗುಟ್ಟಿನಲಿ ರಹಸ್ಯವ ಗುರುತರಿಯದೆ
ಕೆಟ್ಟಕೂಗನು ಕೂಗಿ ಬಗುಳಿ ಬಾಯಾರುವಂಥ
ಹೊಟ್ಟೆಗುಡ ಮೃಗಗಳೆಲ್ಲ ಶ್ರೀ ವೈಷ್ಣವರೆ ಕೃಷ್ಣ ॥

ಲಿಂಗ ಲಿಂಗದೊಳಗಿರುವ ಚಿನ್ಮಯವ ತಿಳಿಯದೆ
ಲಿಂಗಾಂಗದಾ ನೆಲೆಯ ಗುರುತರಿಯದೆ
ಜಂಗಮ ಸ್ಥಾವರದ ಭಾವವನು ತಿಳಿಯದೆ
ಭಂಗಿ ಮುಕ್ಕುಗಳೆಲ್ಲ ಲಿಂಗವಂತರಹರೆ ॥

ಅಲ್ಲಾ ಖುದಾ ಎಂದು ಆತ್ಮದಲಿ ತಿಳಿಯದೆ
ಮುಲ್ಲಶಾಸ್ತ್ರದ ನೆಲೆಯ ಗುರುತರಿಯದೆ

ಜಳ್ಳು ಕೂಗನು ಕೂಗಿ ಬಗುಳಿ ಬಾಯಾರುವಂಥ
ಕಳ್ಳ ತುರುಕರಿಗೆಲ್ಲ ವೀರಸ್ವರ್ಗವುಂಟೆ ಕೃಷ್ಣ ॥

(ಕೀ. ಸಂ. ೧೨೬)

ಇಲ್ಲಿ ತಿಳಿಹಾಸ್ಯದ ಮೂಲಕ ವಿವಿಧ ವರ್ಗದವರ ಮತೀಯ ಆಚರಣೆಯನ್ನು ಕನಕರು ವಿಡಂಬಿಸಿದ್ದಾರೆ. ದೈವ ಸಾಕ್ಷಾತ್ಕಾರದ ಮಾರ್ಗವನ್ನರಿಯದೆ ಒದ್ದಾಡುವ ಜನರಿಗೆ ಇವೆಲ್ಲ ಪರಿಕರಗಳು ಅಗತ್ಯವಾಗುತ್ತವೆ. ಇವರೆಲ್ಲ ಭಕ್ತವೇಷ ತೊಟ್ಟ ಮುಖವಾಡದ ಜನರು. ಇವರ ವೇಷದಂತೆ ಇವರ ಪದ್ಧತಿಗಳೂ ಕೂಡ ಇರುತ್ತವೆ. ಎಲ್ಲ ಧರ್ಮದ ಮೂಲಸಾರ "ಅಹಿಂಸೋ ಪರಮೋ ಧರ್ಮಃ" ಎಂಬುದು. ವಿಪರ್ಯಾಸದ ಸಂಗತಿ ಎಂದರೆ ಶಾಸ್ತ್ರಾದಿಗಳೂ ಹಿಂಸೆ, ಬಲಿಪೂಜೆಯನ್ನು ಒಪ್ಪಿಕೊಂಡಿರುವುದು. ಇದನ್ನು ಗಮನಿಸಿದ ಕನಕರು, "ಕ್ಷೀಣಶಾಸ್ತ್ರಾರ್ಥವನು ಪರಿಗ್ರಹಿಸಿ ನಿಖಿಲ ಕುರಿಕೋಣಗಳ ತಲೆಯ ಚೆಂಡನು ಕುಟ್ಟಿಸಿ ಪ್ರಾಣಹತ್ಯವ ಮಾಳ್ಪುದಾವ ಸತ್ಕರ್ಮವೋ" (ಕೀ. ೧೩೨) ಎಂದು ನೋಯುತ್ತಾರೆ. ದೈವದ ತೃಪ್ತಿಗಾಗಿ ಬತ್ತವ ಮೆರವಣಿಗೆ ಮಾಡುವುದು, ಸಿಡಿಯೇರುವುದು, ಕೊರಳಲ್ಲಿ ತೊಗಲ ಬಿಲ್ಲೆಗಳನ್ನು ಕಟ್ಟಿಕೊಳ್ಳುವುದು, ಕೊಂಡ ಹಾಯ್ವುದು (ಕೀ. ೧೩೨) ಮೊದಲಾಗಿ ಕ್ರೂರ ವಿಕೃತ ಆಚರಣೆ ಮಾಡುವುದನ್ನು ಖಂಡಿಸುತ್ತಾರೆ, ಕೋಪಗೊಳ್ಳುತ್ತಾರೆ. ಇದರಿಂದ ದೈವತೃಪ್ತಿಯಾಗಲಿ ಮುಕ್ತಿಯ ನೆಲೆಯಾಗಲಿ ಕನಸಾಗುತ್ತದೆ ಎಂಬ ವಾಸ್ತವತೆಯನ್ನು ಪ್ರತಿಬಿಂಬಿಸುತ್ತಾರೆ. ಇವೆಲ್ಲ ಅಂದಿನ ಸಮಾಜದ ಸಾಂಸ್ಕೃತಿಕ ದಾಖಲೆಗಳಾಗಿ, ಮೂಢನಂಬಿಕೆಯ ಪಳೆಯುಳಿಕೆಗಳಾಗಿ ಗೋಚರಿಸುತ್ತವೆ.

ಮತಧರ್ಮಗಳು ಜನರನ್ನು ಭಾವುಕರನ್ನಾಗಿಸುತ್ತವೆ. ಜನರು ಅವಕ್ಕೆ ಭಯ ಭಕ್ತಿಯಿಂದ ಸ್ಪಂದಿಸುತ್ತಾರೆ. ಇವರ ದೌರ್ಬಲ್ಯವನ್ನು ಉತ್ತಮರು ಬಹು ಸುಲಭವಾಗಿ ಶೋಷಿಸುತ್ತಾರೆ ; ಪೋಷಿಸಿ ಬೆಳೆಸುತ್ತಾರೆ. ತಮ್ಮ ಸ್ವಾರ್ಥನಿಲುವಿಗೆ, ನೀಚತನಕ್ಕೆ ಮತೀಯ ಲೇಪವನ್ನು ಬಳಿದು ಆಕರ್ಷಿಸುತ್ತಾರೆ. ಇವರೊಡ್ಡಿದ ಬಲೆಗೆ ಎಳೆಮೀನಾಗಿ ಕೆಳವರ್ಗದವರು ಸಿಲುಕಿ ಬಿಡುತ್ತಾರೆ. ಅಷ್ಟರ ಪ್ರಮಾಣದಲ್ಲಿ ವೃತ್ತಿಪರರಾಗಿ ತಮ್ಮ ಕೆಲಸವನ್ನು ಮೇಲುಜಾತಿಯವರು ಸಾಧಿಸಿ ತೋರಿಸುತ್ತಾರೆ. ಅಂಥವರನ್ನು ಕನಕದಾಸರು ವಿಡಂಬಿಸಿರುವುದು ಮನೋಹರವಾಗಿದೆ :

ಮಂಡೆ ಬೋಳು ಮಾಡಿ ನಾವು
ಉಂಡೆಯನು ಬರೆದು ಕೆಡಸಿ
ಕಂಡ ಕಂಡವರ ಕೂಡಿ

ಭಂಡ ಜನ್ಮ ಹೊರೆಯುವವಗೆ ॥
ಅವರಿವರ ಕೈಯ ನೋಡಿ ಹ
ಲವು ಕೆಲವು ಮಾತನಾಡಿ
ಹಲವು ಹಂಬಲಿಸಿ ದಿನವ
ಕಳೆದು ಉಳಿದು ಬಾಳುವಗೆ ॥ (ಕೀ. ೧೯೧)

ಮೇಲುನೋಟಕ್ಕೆ ವಿಡಂಬನೆಯ ಚೂಪಾಗಲಿ ಕೊಂಕಾಗಲಿ ಇಲ್ಲಿಲ್ಲ. ಆದರೆ ಅಧ್ಯಾಹಾರ ಮಾಡಿಕೊಂಡಾಗ ಅದರ ಸೊಗಸು ಇಮ್ಮಡಿಸುತ್ತದೆ. ಸ್ವಭಾವೋಕ್ತಿಯೇ ಸೌಂದರ್ಯ ಇಲ್ಲಿ. ಈ ಕಲೆಗಾರಿಕೆ ಎಂಥವರನ್ನೂ ಸೆರೆ ಹಿಡಿಯುತ್ತದೆ. "ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" (ಕೀ. ೧೬೭) ಎಂದು ಪ್ರಾರಂಭವಾಗುವ ಕೀರ್ತನೆಯೂ ಅಷ್ಟೇ. ಲೋಕದ ವಿವಿಧ ವೇಷಗಳ ಮೂಲವನ್ನು ಮುಖಕ್ಕೆ ರಾಚಿದಂತೆ ತಿಳಿಸುತ್ತದೆ ಮಾತ್ರವಲ್ಲ ನಮ್ಮ ಜೀವನಕ್ರಮದ ಭಾಷಿಕ ದಾಖಲೆಯಾಗಿ ಗಮನಾರ್ಹವಾಗುತ್ತದೆ. ಉದಾಹರಣೆಗೆ ಶೆಟ್ಟಿಯ ಜೀವನ ಕ್ರಮವೊಂದನ್ನು ನೋಡಿ.

ಒಡೆದ ಮಡಕೆ ತಂದು ಅರೆದು ನಾಮವ ಮಾಡಿ
ಕೊಡುವೆ ನೀ ಕಾಸಿಗೆ ಒಂದೊಂದನು
ಒಡಲು ತುಂಬಿ ಮಿಕ್ಕ ಅನ್ನವ ಮಾರಿಸಿ
ಒಡವೆಯ ಗಳಿಸುವ ಕಡುಲೋಭಿಶೆಟ್ಟಿ ॥ (ಕೀ. ಸಂ. ३೮)

ಹೊಟ್ಟೆ ಹೊರೆಯುವುದಕ್ಕೆ ಯಾವ ತಂತ್ರವನ್ನು ಬೇಕಾದರೂ ಅನುಸರಿಸುತ್ತಾರೆ ಎಂಬುದಕ್ಕಿದು ನಿದರ್ಶನವಾಗಿದೆ.

ವಿಡಂಬನೆಯಲ್ಲೂ ವ್ಯಂಗ್ಯದ ಮಿಂಚನ್ನು ನಿಷೇಧ ಕ್ರಿಯಾರೂಪದಲ್ಲಿ ಬಳಸಿರುವುದು ಕನಕದಾಸರ ವಿಡಂಬನಾ ಶೈಲಿಯ ಒಂದು ವಿಶೇಷ.

ಶ್ರುತಿಶಾಸ್ತ್ರ ಪುರಾಣಗಳ ಓದುವನೆ ಶೂದ್ರ
ಅತಿಥಿಗಾದರಿಸುವವನೆ ಅತಿಲುಬ್ಧನು
ಪ್ರತಿದಿವಸ ಸಂಧ್ಯಾನವನು ಮಾಡುವನೆ ಪಾಪಿ
ಪತಿಯಾಜ್ಞೆಯಿಂದಿಹಳೆ ಪರಮಪಾತಕಿಯು ॥ (ಕೀ. ಸಂ. ೨೨೫)

ಒಂದೆಡೆ ಲೋಕವ್ಯವಹಾರದ ಬಗ್ಗೆ ರೋಷ, ಇನ್ನೊಂದೆಡೆ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಬೇಕಾದ ಮಾರ್ಗದರ್ಶನ–ಏಕಕಾಲದಲ್ಲಿ ಎರಡು ಆಶಯಗಳ ಬೆಸುಗೆ ಇಲ್ಲಿನದು. ಆದರೆ ಇಂಥ ಕೀರ್ತನೆಗಳ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ.

ಪ್ರತಿಯೊಬ್ಬನ ವ್ಯಕ್ತಿತ್ವ ವಿಕಸನಗೊಳ್ಳುವುದು, ರೂಪಿತಗೊಳ್ಳುವುದು ಅವನ ಸ್ವಭಾವ ಮತ್ತು ನಡುವಳಿಕೆಗಳಿಂದ, ಭಾಷೆ, ಕಲಿಕೆ, ಆಲೋಚನೆಗಳ ಎತ್ತರ ಬಿತ್ತರಗಳಿಂದ ಅವನು ಸಂಸ್ಕಾರಗೊಳ್ಳುತ್ತಾನೆ ; ಸುಸಂಸ್ಕೃತವಾಗುತ್ತಾನೆ. ಆದರೆ ಮೂಲತಃ ಮಹತ್ವಾಕಾಂಕ್ಷಿಯಾದ ಅವನು ಆಸೆಯ ಬೆನ್ನು ಹತ್ತುವನು ಇಲ್ಲವೆ ಬೆಂಬತ್ತಿ ಕಾಡುವ ಆಸೆಗೆ ಬಲಿಯಾಗುವನು. ಆಗವನ ಮನಸ್ಸು ವಿಶ್ವದೆಲ್ಲಾ ಒಳಿತು ತನ್ನದಾಗಬೇಕೆಂಬ ಅಪೇಕ್ಷೆಯನ್ನು ಹೊರುತ್ತದೆ. ಆ ಸುಖವನ್ನು ದೋಚುವ, ಬಲಾತ್ಕಾರದಿಂದಲಾದರೂ ಕೊಳ್ಳೆ ಹೊಡೆಯುವ ಪ್ರಯತ್ನಕ್ಕದು ಮುನ್ನುಗ್ಗುತ್ತದೆ. ತನ್ನ ನೆಲೆಬೆಲೆಯ ಅರಿವಿಲ್ಲದ ಅವನು ಸಂಯಮರಹಿತನಾಗಿ ಹಲವು ಪಾಡುಪಟ್ಟು ನರಳುತ್ತಾನೆ ; ಕೆಲವೊಮ್ಮೆ ಅಧಃಪತನಕ್ಕಿಳಿದು ವ್ಯಕ್ತಿತ್ವನಾಶನದ ಕಡೆಗೂ ಮುಖ ಮಾಡಿ ನಿಲ್ಲುವನು.

“ವಿಶ್ವಮಾನವ” ನಾಗಿ ಹುಟ್ಟುವ ಮನುಷ್ಯ ಪರಿಸರದ ಪ್ರಭಾವಕ್ಕೆ ತುತ್ತಾಗಿ ಕೇವಲ ಮಾನವನಾಗಿಬಿಡುವುದು, ಅರಿಷಡ್ವರ್ಗಗಳಿಗೆ ದಾಸಾನುದಾಸನಾಗುವುದು ಬದುಕಿನ ದುರಂತ. ಇದಕ್ಕೆ ಮನಃಶಾಸ್ತ್ರ ಕೊಡುವ ಹಲವು ಕಾರಣಗಳಲ್ಲಿ ‘ಸಂಗ’ ದೋಷವೂ ಒಂದು “ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ” ಎಂಬ ಸರ್ವಜ್ಞನ ನಾಣ್ಣುಡಿಯಾಗಲಿ, “ಸಗಣಿಯುವನ ಜೊತೆ ಸರಸವಾಡೋದಕ್ಕಿಂತ ಗಂಧದವನ ಜೊತೆ ಗುದ್ದಾಡೋದು ಲೇಸು” ಎಂಬ ಜನಪದವಾಣಿಯಾಗಲಿ ಈ ಸತ್ಯವನ್ನೇ ಪ್ರತಿಫಲಿಸುತ್ತವೆ. ನಮ್ಮ ಸುತ್ತಮುತ್ತ ಹಲವು ಬಗೆಯ ಊಸರವಳ್ಳಿ ಜನರಿರುತ್ತಾರೆ ; ಹಲವಾರು ಸ್ವಭಾವ ದೌರ್ಬಲ್ಯಗಳನ್ನು ಹೊಂದಿದವರಿರುತ್ತಾರೆ. ಕಡುಲೋಭಿಗಳು, ಮೂಢರು, ಮೂರ್ಖರು, ಅನ್ಯಾಯಿಗಳು, ಗುರುನಿಂದೆ–ಪರನಿಂದಕರು, ಗುರುಪತಿ–ಪರಸತಿ ಮೋಹಕರು, ಕೃತಘ್ನರು, ಚಾಡಿಕೋರರು ಮಾತಾ–ಪಿತದ್ರೋಹಿಗಳು ಮುಂತಾದವರು, ಇವರೆಲ್ಲರಲ್ಲೂ ನೀಚತನ ರಕ್ತಕಣಗಳಷ್ಟೇ ಸಹಜವಾಗಿ ಮೈಗೂಡಿರುತ್ತದೆ. ಆದ್ದರಿಂದಲೆ ಇವರನ್ನು “ಹುಲುಮಾನವರು” “ನೀಚಮಾರ್ಗಿ” ಗಳು ಎಂದು ಕನಕರು ಛೇಡಿಸುವುದರ ಜೊತೆಗೆ ಈ ಕಾಕನ್ನೂ ಬಳಸಿದ್ದಾರೆ:

ನ್ಯಾಯವ ಬಿಟ್ಟು ಅನ್ಯಾಯವ
ಪೇಳುವ ನಾಯಿಗೆ ನರಕವು ತಪ್ಪೀತೆ ॥ (ಕೀ. ಸಂ. ೨೫)
ಡೊಂಕು ಬಾಲದ ನಾಯಕರೆ
ನೀವೇನೂಟ ಮಾಡಿದಿರಿ
ಕಣಕಕುಟ್ಟೋ ಅಲ್ಲಿಗೆ ಹೋಗಿ

ಹಣಕಿ ಇಣಕಿ ನೋಡುವಿರಿ
ಕಣಕ ಕುಟ್ಟೋ ಒನಕೆಲಿ ಹೊಡೆದರೆ
ಕುಂಯಿ ಕುಂಯಿ ರಾಗವ ಪಾಡುವಿರಿ ॥ (ಕೀ. ಸಂ. ೧೦೮)

ಈ ಚಿತ್ರ ಮನುಷ್ಯನ ಚಪಲತೆ ಚಂಚಲತೆ ಆತ್ಮಾಭಿಮಾನರಹಿತ ನಡೆಯನ್ನು ಮನಮುಟ್ಟುವಂತೆ ಸೆರೆ ಹಿಡಿದಿದೆ. ಈ ಬಗೆಯ ಕೀರ್ತನೆಗಳಲ್ಲಿ ಕನಕರು ಮನುಷ್ಯನನ್ನು ನಾಯಿಯೊಂದಿಗೆ ಸಾದೃಶ್ಯಕಲ್ಪಿಸಿರುವುದು ಸ್ವಾರಸ್ಯಪೂರ್ಣ. ನಾಯಿ ಜನಪದರ ದೃಷ್ಟಿಯಲ್ಲಿ ನಾರಾಯಣನೂ ಹೌದು ; ಪ್ರಾಮಾಣಿಕತೆಗೆ ಇನ್ನೊಂದು ಹೆಸರೂ ಹೌದು, ಆದರೆ ಅದೇ ನಾಯಿ ಹೊಲಸು ತಿನ್ನುತ್ತದೆ ; ಸಿಕ್ಕಿದ್ದನ್ನು ಮೂಸುತ್ತದೆ ; ಅಂದಣವನ್ನೇರಿಸಿದರೂ ಹೊಲಸು ಕಂಡಲ್ಲಿ ಧುಮ್ಮಿಕ್ಕುವ ಚಂಚಲತೆ ತೋರುತ್ತದೆ. ಹೀಗೆಯೆ ಮಾನವ ಚೇತನ ಊರ್ಧ್ವಗಾಮಿಯಾದಾಗ ಮಾನವತ್ವದಿಂದ ದೈವತ್ವವನ್ನು ಸಂಪಾದಿಸಬಲ್ಲದು, ಅಧೋಗಾಮಿಯಾದಾಗ ಮಾನವತ್ವದಿಂದಲೂ ದೂರ ಸಿಡಿದು ಕೀಳಾಗಬಲ್ಲದು. ಕನಕದಾಸರು ಹೀಗೆ ಏಕಕಾಲದಲ್ಲಿ ಒಂದೇ ಪದದಲ್ಲಿ ಜೀವದ ಎರಡು ಮುಖವನ್ನು ದರ್ಶಿಸುವ, ಸಾಂಕೇತಿಸುವ ರೀತಿ ಮನೋಜ್ಞವಾಗಿದೆ ; ಧ್ವನಿರಮ್ಯವಾಗಿದೆ.

ಹೆರರಲ್ಲಿ ದೋಷವನ್ನು ಕಂಡು ಹಿಡಿಯುವುದು ಸುಲಭ. ತನ್ನ ಬೆನ್ನನ್ನು ತಾನು ಕಾಣುವುದು ಕಷ್ಟ. ಕನಕದಾಸರು ಇದಕ್ಕೆ ಹೊರಗು. ತಮ್ಮ ಅಂತರಂಗವನ್ನು ಶೋಧಿಸಿಕೊಳ್ಳಲು ಇವರು ಎಲ್ಲೂ ಹಿಂದು ಮುಂದು ನೋಡುವುದಿಲ್ಲ, “ಎನಗಿಂತ ಕಿರಿಯರಿಲ್ಲ” ಎಂಬ ಬಸವಣ್ಣನವರ ವಿನಯಕ್ಕೆ ಹತ್ತಿರ ನಿಲ್ಲುವ ಕನಕರು ಅಷ್ಟೇ ನಮ್ರತೆ, ನಿರ್ಲಿಪ್ತತೆಯಿಂದ “ನರಜನ್ಮ ಹುಳು ನಾನು” (ಕೀ. ೨೪) ಎಂದು ತಮ್ಮನ್ನು ತಾವು ಗುರುತಿಸಿಕೊಳ್ಳುತ್ತಾರೆ. ಹನುಮ ರಾಮನನ್ನು ಮುಟ್ಟಿದ ರೀತಿಯಲ್ಲಿ ಹರಿಯ ನಾಮದ ಬಲದಿಂದಬದುಕಿನ ಗುರಿಯನ್ನು ಮುಟ್ಟಲು ಯತ್ನಿಸುತ್ತಾರೆ. ಸರ್ವಸಂಗ ಪರಿತ್ಯಾಗಿಗಳಾಗ ಬಯಸಿದ ಕನಕರನ್ನು ಸಂಸಾರ ಕಟ್ಟಿಹಾಕುತ್ತದೆ, ಮಡದಿ ಮಕ್ಕಳ ಪಾಶ ಕೊರಳ ಸುತ್ತುತ್ತದೆ. ಅಲ್ಲಿಂದ ತನ್ನನ್ನು ಪಾರುಗೊಳಿಸುವಂತೆ ಇಷ್ಟದೈವಕ್ಕೆ ಮೊರೆಹೋಗುತ್ತಾರೆ. ಪರರ ಚಿತ್ತವೃತ್ತಿಯನ್ನರಿತು ಸೇವಕನಂತೆ ತಿರುಕನಂತೆ ನಿತ್ಯಕರ್ಮದಲ್ಲಿ ತೊಡಗುವ ಬದುಕನ್ನು ಸಾಕುಮಾಡೆಂದು ಬೇಡಿಕೆ ಸಲ್ಲಿಸುತ್ತಾರೆ. “ಆರಿಗಾದರೂ ಪೂರ್ವ ಕರ್ಮ ಬಿಡದು” (ಕೀ. ೪೯), “ಒಲ್ಲೆನೆಂದರಾಗುವುದೆ ಅಲ್ಲಿ ಪಡೆದು ಬಂದುದ’ (ಕೀ. ೬೪) ಎಂದು ಸಮಾಧಾನ ತಂದುಕೊಂಡಷ್ಟು ಜೀವ ಒದ್ದಾಡುತ್ತದೆ.

ಇಲ್ಲೆಲ್ಲ ಕನಕರ ಭಕ್ತಿಜೀವನದ ಆರಂಭದ ತೊಳಲಾಟವಿದೆ. ನಿತ್ಯಕಾರ್ಯವನ್ನು ಹೊಸದೃಷ್ಟಿಯಿಂದ ಅಳೆಯುವ ಪರಿಯಿದೆ. ಇಷ್ಟಾದರೂ ಲೌಕಿಕದಲ್ಲಿ ಮುಳುಗಿ ತೇಲುವ ಜೀವವನ್ನು ಕಂಡು ರೇಗುತ್ತಾರೆ.

ಹ್ಯಾಂಗೆ ನೀ ದಾಸನಾದಿ ಪ್ರಾಣಿ
ಹ್ಯಾಂಗೆ ದಾಸನಾಗಿ ಹೀಂಗೆ ಸಂಸಾರದೊಳು
ಮಂಗನಂದದಿ ಭವಭಂಗವ ಪಡುವವ ॥

(ಕೀ. ಸಂ. ೧೦೭)

ಇಲ್ಲಿ ಮಂಗನ ಸ್ವಭಾವ, ಸ್ವತಂತ್ರ ಪ್ರವೃತ್ತಿ, ಚಂಚಲತೆ, ಚಪಲತನವನ್ನು ಜೀವಿಗೆ ಸಾದೃಶ್ಯ ಕಲ್ಪಿಸಿರುವ ರೀತಿ ಪ್ರತಿಮಾತ್ಮಕವಾದ ಅರ್ಥಪರಂಪರೆ ಹೊರಹೊಮ್ಮಿಸುತ್ತದೆ. ತನ್ನ ಆದಿಯನ್ನರಿಯದೆ ತಲೆ ಹುಳಿತ ನಾಯಿಯಂತೆ ತಿರುಗುವ. ಹೊಟ್ಟೆಗಾಗಿ ಅಧಮರ ರಕ್ಷಣೆಗೆ ಮೊರೆ ಹೋಗುವ ಮಡದಿ ಮಕ್ಕಳನ್ನು ನಂಬುವ ಜೀವ–ಜೀವನಕ್ಕೆ ಸದ್ಗತಿ ದೊರೆಯುವುದಾದರೂ ಹೇಗೆಂದು ಕನಕರು ಇಲ್ಲಿ ಹಪಹಪಿಸುತ್ತಾರೆ. "ಸುತ್ತ ಕತ್ತಲ ಚಿಂತೆ ಮತ್ತೆ ಭಯದ ಭ್ರಾಂತಿ ಚಿತ್ತಜನಯ್ಯನು ದೊರೆವ ಬಗೆ ಕಾಣದೆ" ಒದ್ದಾಡುತ್ತಾರೆ. "ಗರುವತನ" ಹೊತ್ತು ಅಲೆವ "ಮಂಕುಜೀವ" ವನ್ನು ತಹಬದಿಗೆ ತರಲು ಯತ್ನಿಸುತ್ತಾರೆ. ಮುಂದೆ ಮನೆಮಠವನ್ನು ತೊರೆದು ದೈವದ ಹುಡುಕಾಟಕ್ಕೆ ತೊಡಗುವ ಕನಕದಾಸರಿಗೆ ದೈವಸಾಕ್ಷಾತ್ಕಾರ ಸುಲಭದಲ್ಲಿ ಆದಂತೆನಿಸುವುದಿಲ್ಲ. ಅಂಥ ಸಂದರ್ಭವೊಂದರಲ್ಲಿ ತೆಗೆದ ಉದ್ಗಾರವಿದು :

ಯಾಕಿಷ್ಟು ದಯವು ಇನಿತಿಲ್ಲ ಲೋಕಪಾವನ ಮೂರುತಿ
ಬೇಕೆಂದು ನಿನ್ನ ಪಾದವ ನಂಬಿದವರ ಪರಾಕು ಮಾಡುವುದುಚಿತವೇ

(ಕೀ. ಸಂ. ೪೩)

ಕಂಡೂ ಕಾಣದಂತೆ ದೈವವನ್ನು ಮೃದುವಾಗಿ ಈ ಮಾತುಗಳು ಛೇಡಿಸುತ್ತವೆ. ಭಕ್ತನ ಬೇಡಿಕೆಯನ್ನು ಮನ್ನಿಸುವುದು ಭಗವಂತನ ಕರ್ತವ್ಯ. ಇಲ್ಲದಿದ್ದಲ್ಲಿ ದೇವರೆಂದು ಕರೆಸಿಕೊಳ್ಳುವ ಅರ್ಹತೆ ದೇವನಿಗೂ ಇಲ್ಲ. ಸಿದ್ಧಿಯೂ ಯೋಗ್ಯತೆಯಿಂದಲೇ ಬಂದುದಾಗಿರಬೇಕೆಂಬ ಕನಕರ ವಾಂಛೆಯನ್ನು ನಾವಿಲ್ಲಿ ಕಾಣುತ್ತೇವೆ.

ಬಹುಶಃ ಕನಕರಲ್ಲಿ ಈ ಬಗೆಯ ದೃಷ್ಟಿಕೋನಗಳು ಗಾಢವಾಗಿದ್ದುದರಿಂದಲೇ ಅವರು ದೇವರು ಎಂಬ ಭಾವುಕತೆಯನ್ನು ದಾಟಿ ದೈವವನ್ನು ಪ್ರಶ್ನಿಸುತ್ತಾರೆ, ವಿಡಂಬಿಸುತ್ತಾರೆ ; ಅವನಿಂದಲೂ ಶಿಸ್ತನ್ನು

ನಿರೀಕ್ಷಿಸುತ್ತಾರೆ. ಅವರು ವಿಧಿಬರಹವನ್ನು ನಂಬಿದವರಲ್ಲ, ದೈವಬಲವನ್ನು ನಂಬಿದವರು. ತಮ್ಮಂತೆ ತಾನು ನಂಬಿದ ದೈವವೂ ಋಜುಮಾರ್ಗದಲ್ಲಿರಬೇಕೆಂಬುದು ಅವರ ಅಭೀಪ್ಸೆ, ಅವರ ಬಹುಪಾಲು ಕೀರ್ತನೆಗಳಲ್ಲಿ ಪುರಾಣ ಪ್ರಸಿದ್ಧ ಕಥನಗಳ ಪವಾಡ ಪ್ರಭಾವ ಪರಿಣಾಮಗಳ ಹುಸಿತನದ ಬಗೆಗೆ ಕಟಕಿಯಾಡುತ್ತಾರೆ. ಪುರುಷ–ಪ್ರಕೃತಿಯ ಸಮಾನತೆಯನ್ನು ದೈವಸ್ತರದಲ್ಲೂ ದರ್ಶಿಸುವ ವಿಶಾಲ ಮನೋಭಾವವನ್ನಿವರು ಪ್ರದರ್ಶಿಸುತ್ತಾರೆ. “ನಿನಗಿಂತ ಕುಂದೇನೋ ನಮ್ಮಮ್ಮ ಜಯಲಕ್ಷ್ಮಿ” (ಕೀ ೧೫) ಎನ್ನುವಲ್ಲಿ ಗಂಡು ಹೆಣ್ಣಿನ ಸಮಾನತೆಯ ಧೋರಣೆ ಹೆಡೆಬಿಚ್ಚಿದೆ. “ಆರು ಸಮಯಕ್ಕೊದಗಲಿಲ್ಲ ಮೋರೆಯನು ನೋಡುತ ಸುಮ್ಮನಿಹರೆಲ್ಲ” (ಕೀ. ೬೯) ಎಂಬ ಮಾತು ದೈವನಿರೀಕ್ಷೆಯ ಪರಿಯ ಅಸಹಾಯಕ ಪರಿಸ್ಥಿತಿಯನ್ನು ಎತ್ತಿ ಹಿಡಿದಿದೆ.

ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ
ಖ್ಯಾತಿಯಿಂದಲಿ ರಾವಣನ ಕೊಲ್ಲಿಸಿ
ಸೀತೆಯನು ತಂದು ಶ್ರೀರಾಮನಿಗೆ ಕೊಡಲವನ
ಪ್ರೀತಿಯಲಿ ಕೌಪೀನ ಬಿಡಿಸಲಿಲ್ಲ ಹರಿಯು ॥
..........................................................................
..........................................................................
ಸಾಸಿರ ನಾಮದ ಒಡೆಯಾದಿಕೇಶವನ
ಬೇಸರದೆ ಹೆಗಲ ಮೇಲಿರಿಸಿಕೊಂಡು
ಆಕಾಶಮಾರ್ಗದಲಿ ಚರಿಸುವ ಗರುಡನಿಗೆ
ನಾಸಿಕದ ಕೊನೆ ಡೊಂಕು ತಿದ್ದಲಿಲ್ಲ ಹರಿಯು ॥

(ಕೀ. ಸಂ. ೭೧)

ಸಹಾಯ ಮಾಡಿದವರನ್ನೇ ದೇವರು ಮರೆತು ಬಿಡುತ್ತಾನೆ. ಇನ್ನು ಸಾಮಾನ್ಯರ ಪಾಡೇನು? ಎಂಬ ಕೊಂಕು ಇಲ್ಲಿನದು. ಜವಾಬ್ದಾರಿ ತಪ್ಪಿಸಿಕೊಳ್ಳುವ ದೇವರು ಕನಕರ ದೃಷ್ಟಿಯಲ್ಲಿ ಅಪರಾಧಿಯೆ. ಕಾಯಬೇಕಾದವನು ಸದಾಕಾಲ ನಿದ್ರಾವಶನಾದರೆ ಹೊರಪ್ರಪಂಚದ ಅರಿವಾದರೂ ಅವನಿಗೇನು ತಿಳಿಯುತ್ತದೆ? “ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ ಜಗದೀಶವಿಖ್ಯಾತ ಪಶ್ಚಿಮ ರಂಗನಾಥ” (ಕೀ. ೮೦) ಎಂಬ ಇಡೀ ಕೀರ್ತನೆಯಲ್ಲಿ ವಿಷ್ಣುವಿನ ದಶಾವತಾರ ಲೀಲೆಗಳ ಬಣ್ಣನೆಯಿದೆ. ಇದು ವರದಿಯಂತೆ ತೋರುವುದಾದರೂ ಭಕ್ತನ ಹೃದಯದ ಅಕ್ಕರೆಯ ಕಾಳಜಿಯ ಜೊತೆಗೆ ದೈವದ ನಿಲವಿನ ಬಗ್ಗೆ ವಿಷಾದಪೂರ್ಣ

ವಿಡಂಬನೆಯ ಝಳಪಿದೆ. ಜಗತ್ತು ಅರಾಜಕತೆಯಲ್ಲಿ ನಲುಗುವಾಗ ನಿಶ್ಚಿಂತನಾಗಿ ನಿದ್ರಿಸುವ ದೇವರ ಸೋಂಬೇರಿತನ ಕರ್ತವ್ಯಹೀನತೆಯನ್ನು ಕಟುವಾಗಿ ವಿಮರ್ಶಿಸುತ್ತಾರೆ ಕನಕದಾಸರು. ಇದರಿಂದಾಗಿಯೆ ದೇವರೂ ಕನಕರಿಗೆ ಆದರ್ಶಪ್ರಾಯವೆನಿಸುವುದಿಲ್ಲ. ಗಾಂಭೀರ್ಯವಿಲ್ಲದ ಕೃಷ್ಣ ಗೋಪಿಕಾ ಸ್ತ್ರೀಯರೊಂದಿಗೆ ಆಡಿದ ಚೆಲ್ಲಾಟವಾಡಿದವನು (ಕೀ. ೧೪೯), ಎತ್ತಿದ ಅವತಾರಗಳಲ್ಲೆಲ್ಲ ಸೂತ್ರಧಾರನಾಗಿ ಮೋಸದಿಂದ ಲೋಕವನ್ನು ನಿಯಂತ್ರಿಸಿದವನು, ಇವನ ಮಾತೂ ನಟನೆಯಾಗುತ್ತದೆ–ಎಂದೆಲ್ಲ ಆರೋಪಿಸುವ ಕನಕದಾಸರು ಕಣ್ಣಿಗೆ ಹರಿಯ ಮಹಿಮೆಯನ್ನು ಅಳೆಯುವುದು ಸುಲಭವಲ್ಲ ಎಂಬ ವಸ್ತುಜ್ಞಾನವು ಇದೆ. "ಮುತ್ತು ಬಂದಿದೆ ಕೇರಿಗೆ ಜನರು ಕೇಳಿ ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ" (ಕೇ. ೧೩೯) ಎಂದು ಹೇಳುವಲ್ಲಿ ಮುತ್ತಿನ ಪರಿಶುದ್ಧತೆ, ನಿರ್ಮಲತೆ, ಭಕ್ತಿಯ ಅನನ್ಯಲಾಭವನ್ನು ಸಾಂಕೇತಿಸಲಾಗಿದೆ. ಕವಿಯ ಸಾದೃಶ್ಯಜ್ಞಾನ, ಚಾತುರ್ಯ ಉಕ್ತಿ ಮೋಹಕವಾಗಿ ಮನಸೆಳೆಯುತ್ತದೆ. ಇಷ್ಟಾದರೂ ಯಾರನ್ನು ನಂಬುವಂತಿಲ್ಲ, ಆಶ್ರಯಿಸುವಂತಿಲ್ಲ ಏಕೆಂದರೆ

ಜನಕೆ ಹಿತದವನೆಂದು ನಂಬಬಹುದೇ ಹಿಂದೆ
ತನಯ ಪ್ರಹ್ಲಾದನಿಗೆ ಪಿತ ಮುನಿದನು
ಜನನಿಯೇ ರಕ್ಷಿಪಳೆಂತೆಂಬೆನೆ ತಿಳಿದು ಆ ಕುಂತಿ
ತನಯ ರಾಧೇಯನಿಗೆ ಎರಡೆಣಿಸಿದ ಮೇಲೆ ॥

(ಕೀ. ಸಂ. ೧೧೪)

ಹೆತ್ತ ತಾಯಿ, ಹುಟ್ಟಿಸಿದ ತಂದೆಗಿಂತ ಹತ್ತಿರದವರಾರೂ ಇಲ್ಲ ಅವರು ಮುಳಿಯುವುದು ವಿಸಂಗತಿ ಆದರೂ ವಾಸ್ತವ ಸತ್ಯ. ಬರುವ ಎಡರು ಯಾರಿಂದಲೂ, ಯಾವ ರೂಪದಿಂದಲಾದರೂ ಬರಬಹುದು. ಪ್ರೇರಣೆಯಷ್ಟೇ ಮುಖ್ಯವಾಗಿ ದೈವಪರ ಚಿಂತನೆಯಲ್ಲಿ ತೊಡಗಿ ಸಾಧನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದೇ ಕ್ಷೇಮಕರವೆಂದು ಭಕ್ತರಿಗೆ ಕನಕರ ಸಂದೇಶವಾಚನ.

ಭಕ್ತನ ಸಾಧನೆಗೆ ಅಡ್ಡಿಯಾಗುವುದು ಸಂಸಾರ. ಇದು ಕನಕದಾಸರನ್ನು ಕಾಡಿದ್ದಿದೆ. ಇವರಿಗೆ ಸಂಸಾರದ ಬಗ್ಗೆ ಒಂದು ಬಗೆಯ ನಿಷ್ಠುರ ತಿರಸ್ಕಾರವಿದೆ. ಎಲ್ಲಿಯೂ ಪ್ರಗತಿಪರ ನಿಲುವು ಕಾಣಸಿಗದು. ಸಂಸಾರದಲ್ಲಿದ್ದು ಮೋಕ್ಷವನ್ನು ಸಂಪಾದಿಸಬಹುದೆಂದು ವಚನಕಾರರು ಸ್ಪಷ್ಟೀಕರಿಸಿದ್ದರೆ, ಕನಕರು ಸಂಸಾರ ಮುಕ್ತತೆಯನ್ನು ಪ್ರಯಾಸಪೂರ್ವಕವಾಗಿ ಒಪ್ಪಿದಂತೆ ತೋರುತ್ತದೆ. ಇವರು ಬದುಕನ್ನು "ದೊಡ್ಡ"ದಾಗಿ ಗ್ರಹಿಸುವ ಹಿಂದೆ ನೈಜತೆಯ ಕೊರತೆ ಇದೆ ಎಂದೇ

ಹೇಳಬೇಕಾಗುತ್ತದೆ. ಆಧುನಿಕ ಮನಸ್ಸಿಗೆ ಈ ಧೋರಣೆಯನ್ನು ಸಾರಾಸಗಟಾಗಿ ಒಪ್ಪುವುದು ಕಷ್ಟವಾಗುತ್ತದೆ. ಸಂಘಜೀವನಕ್ಕೆ ಹೊರತಾಗಿ ಮಾನವ ಜೀವಿಸಲಾರ ಅಲ್ಲವೆ?

ಅದರಲ್ಲೂ ಸತಿಯು ಪಾತ್ರದ ಬಗ್ಗೆ ಕನಕದಾಸರಿಗೆ ಕಸಿವಿಸಿ ಗುಮಾನಿಗಳಿರುವುದನ್ನು ನೋಡಿದರೆ ಅಚ್ಚರಿಯಾಗುತ್ತದೆ :

ಮಂಡಲದೊಳಗೊಬ್ಬ ಜಾರಸ್ತ್ರೀಯಳು ತನ್ನ
ಗಂಡನರಿಕೆಯಿಂದ ವ್ಯಭಿಚಾರಗೈಯೆ
ಮಂಡಲ ಪತಿಯು ಶೋಧಿಸಿ ಹಿಡಿದೆಳೆತಂದು
ಚಂಡಿ ಮಾಡಲು ಬೆದರುವಳೆ

(ಕೀ. ಸಂ. ೫೦)

ಗುರುಬಂಧು ಬುಧಜನರು ನಿಂತಗ್ನಿಸಾಕ್ಷ್ಯಾಗಿ
ಕರವಿಡಿದು ಧಾರೆಯನೆರೆದುಕೊಂಡ
ತರುಣಿ ಇನಿಯನ ಹರಣ ಹೋಗಲು ತಾ ಕಂಡು
ಬರುವುದಕ್ಕಂಜಿ ದಾರುಗತಿಯೆಂಬುವಳು

(ಕೀ. ಸಂ. ೭೦)

ಪತಿವ್ರತೆಯರೆಂಬುವರು ಶತಸಹಸ್ರಕೆ ಒಂದು
ಮಿತಿಮೀರಿ ಇಹರಯ್ಯ ಇತರ ಜನರು
ಮತಿಗೆಟ್ಟು ಮನಸೋತು ಅನ್ಯಪುರುಷರ ಕೂಡಿ
ಗತಿಗೆಟ್ಟು ಪೋಗುವರು ಪರಲೋಕ ತೊರೆದು

(ಕೀ. ಸಂ. ೧೭೨)

ಇವುಗಳು ಹೆಣ್ಣಿನ ಸ್ಥಾನಮಾನ ಮತ್ತು ಅಂದಿನ ಸಮಾಜದ ಧೋರಣೆಯನ್ನು ತಿಳಿಸುತ್ತವೆ. ಇಲ್ಲೆಲ್ಲ ಹೆಣ್ಣಿನ ಮನಸ್ಥಿತಿಯನ್ನು ಕನಕರು ರೋಚಕವಾಗಿ ವಿಡಂಬಿಸಿದ್ದಾರೆ ಎಂದುಕೊಂಡೂ ಹೆಣ್ಣಿನ ಬಗ್ಗೆ ಅವರ ಸಾಂಪ್ರದಾಯಿಕ ದೃಷ್ಟಿಕೋನವನ್ನು ಇವು ಪ್ರಶ್ನಿಸುವಂತೆ ಮಾಡುತ್ತವೆ. "ಸತಿಯಿಲ್ಲದ ಸಂಪದವು ಏಕೆ" ಎಂದು ಕೇಳುವ ಮಾತೂ ಕೇವಲ ಹೇಳಿಕೆಯಾಗುತ್ತದೆ. ಕೊನೆಗೆ ಆ ಸತಿಗೆ 'ಪತಿಯೆ ಗತಿ'ಯೆಂದು, ಪತಿಯ ನೆರಳಲ್ಲಿ ಅವನಾಜ್ಞೆಗೆ ಕಾದು ನಿಲ್ಲಬೇಕೆಂದು ತಾಕೀತು ಮಾಡುವುದನ್ನು ನೋಡಿದರೆ ಮೂಲಭೂತವಾದ ಅವರ ನಿಲವು ಯಾವ ರೀತಿಯದು ಎಂದು ನಿಚ್ಚಳವಾಗುತ್ತದೆ ; ಇಹವನ್ನು ಗ್ರಹಿಸುವ ಅವರ ದೃಷ್ಟಿಯನ್ನು ಗುಮಾನಿಯಿಂದ ಸ್ತ್ರೀವರ್ಗ ನೋಡುವಂತಾಗುತ್ತದೆ.

ಬಡತನ ಬಹುಕೆಟ್ಟದ್ದು. ಇದು ಕರ್ಮಫಲ ಇದನ್ನು ಭುಜಿಸಿ ಸವೆಸುವುದೇ ಶ್ರೇಯಸ್ಕರ. ಇದನ್ನರಿಯದೆ ಅವರಿವರ ಮರೆಹೊಕ್ಕು ಹಲುಬುವುದರಿಂದ ಬಡತನ ಹೋಗದು. "ಕಳ್ಳತನ ಮಾಡಿ ಒಡಲು ಹೊರೆಯಲು ಬೇಡ" (ಕೀ. ೩೬), "ಬಡತನ ಬಂದಾಗ ನೆಂಟರ ಬಾಗಿಲನು ಸೇರಬಾರದು" (ಕೀ. ೩೩), "ಸಿರಿಯ ಮೆಚ್ಚಿ ಮೆರೆಯದಿರು, ಬರಿದೆ ಹೊತ್ತು ಕಳೆಯದಿರು" (ಕೀ. ೩೨) ಮುಂತಾದ ಹೇಳಿಕೆಗಳನ್ನು ಬಡತನಕ್ಕೆ ಪೂರಕವಾಗಿರುವಂಥವು. ವಾಸ್ತವದಲ್ಲಿ "ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯುಷ್ಯದ ರಾಸಿಯನು ಅಳೆಯಿರಯ್ಯಾ" (ಕೀ. ೬೨) ಎಂಬ ಅರಿವು ಬೇಕು. ಕಿರಿದಾದ ಬದುಕಿನ ಅವಧಿಯಲ್ಲಿ ಸತ್ಯವನ್ನು ಕಾಣುವ, ಜ್ಞಾನದ ಬೆಳೆಯ ಫಸಲು ತೆಗೆಯುವಂತಾಗಬೇಕು. ನಮ್ಮ ಸಂಗಡ ಬರುವುದು "ಕೀರ್ತಿ ಅಪಕೀರ್ತಿ ಎರಡೆ". ಇಷ್ಟಕ್ಕಾಗಿ ಪರದಾಡುವ ಮಾನವರಿಗೆ ಕನಕದಾಸರ ಎಚ್ಚರಿಕೆಯ ಗಂಟೆ.

ಎನ್ನದೆಂದು ತನ್ನದೆಂದು ಹೊನ್ನುಹೆಣ್ಣು ಮಣ್ಣಿಗಾಗಿ
ಘನ್ನವಾಗಿ ಬಾಯಿ ಬಿಡುತ ಬಂದೆ ಮೋಹವಾ
ಸನ್ನುತದಲ್ಲಿ ಪರಹಿತಾರ್ಥ ಮಾಡಿ
ಪುಣ್ಯ ಪಡೆಯಿನಿತು ಮುಂದೆ ಕಿರುಕುಳದ ಕೂಪದಲಿ ಕೆಡಲುಬೇಡ ॥

(ಕೀ. ಸಂ. ೬೬)

ಈ ಮಾತುಗಳು ಸಂತನವಾಣಿಯಂತೆ ಜನಮನವನ್ನು ಜಾಗೃತಗೊಳಿಸುತ್ತದೆ. ಇದಕ್ಕಾಗಿ ಸತ್ಯವ್ರತ ಚಿತ್ತಶುದ್ಧಿ ತನುಶುದ್ಧಿ ಆತ್ಮನಿವೇದಕ ಶಕ್ತಿಗಳು ಬೇಕು, ಅಷ್ಟೆ. ಮನುಷ್ಯನನ್ನು ಹಾದಿ ತಪ್ಪಿಸುವುದು ಹಾಳು ಮಾಡುವುದು ಹಣ. ಇದು ಮಾನವನನ್ನು ಕ್ಷುದ್ರನನ್ನಾಗಿಸುತ್ತದೆ, ಅಹಂಕಾರಿಯನ್ನಾಗಿಸುತ್ತದೆ; ಹೀನನನ್ನಾಗಿಸುತ್ತದೆ: ದೀನನನ್ನಾಗಿಸುತ್ತದೆ. ಇಷ್ಟೆಲ್ಲಾ ವ್ಯಂಜಿಸುವ ಜಾಗೃತಮನಸ್ಕರಾಗಿರುವ ಕನಕದಾಸರಿಗೆ ತಾವು ಬಾಳಿದ ಸಾಮಾಜಿಕ ಪರಿಸರದಿಂದ ಪಾರಾಗುವುದು ಸಾಧ್ಯವಾಗಿಲ್ಲ. ವರ್ಣವ್ಯವಸ್ಥೆಯ ಬಗ್ಗೆ ಅವರು ತೋರಿದ ಪ್ರತಿಭಟನೆಯ ಸೊಲ್ಲು ಬೆನ್ನು ಬಿಡದ ಕರ್ಮಸಿದ್ಧಾಂತವನ್ನೋ ಇಲ್ಲವೆ ಅರ್ಥವ್ಯವಸ್ಥೆಯ ಅಸಮಾನತೆಯನ್ನೋ ಕಂಡು ಆಡಿದ ಮಾತುಗಳಾಗಿ ತೋರುತ್ತದೇ ವಿನಾ ಬೇರೆಯಲ್ಲ. ಅವರೆಲ್ಲಾ ಜಿಜ್ಞಾಸೆಯು" ಸಿರಿಯು ಸ್ಥಿರವಲ್ಲ" ಎಂಬ ವ್ಯಾಖ್ಯಾನದ ಕಡೆಗೆ ಮೊಗಮಾಡಿ ನಿಲ್ಲುವುದರಲ್ಲೇ ತೃಪ್ತಿಪಟ್ಟುಕೊಳ್ಳುತ್ತದೆ.

ಕನಕದಾಸರು ಹೆಣೆದುಕೊಂಡಿರುವ ಮಾನವ ಸಂಬಂಧಗಳನ್ನು ನವಿರಾಗಿ ವಿಡಂಬಿಸುವುದನ್ನು, ಮೂದಲಿಸುವುದನ್ನು ನೋಡಬಹುದು. "ಮಾನವ

ಮನೆಯೊಳಗೆ ಇರಬಹುದೆ ಕೋವಿದರು" (ಕೀ. ೧೧೧) ಎಂಬ ಕೀರ್ತನೆಯೊಂದು ಮಾವನ ಮನೆಯಲ್ಲಿ ಅಳಿಯನಿಗೆ ಸಿಗುವ ಆತಿಥ್ಯದ ಪ್ರಮಾಣವನ್ನು ಅಪಹಾಸ್ಯದ ಮೂಲಕ ವ್ಯಂಜಿಸುತ್ತದೆ.

ಒಂದೊಂದು ತಿಂಗಳು ಬಹುಮಾನ ನಡತೆಗಳು
ಒಂದೆರಡು ತಿಂಗಳೊಳಗೆ ಹಿತವಾದನೆ
ಒಂದೊಂದಭದ್ರನುಡಿ ಒಳಗೊಳಗೆ ಹುಟ್ಟಿದವು
ಸಂದೇಹವೇಕೆ ಸಂಸಾರಿಗಳಿಗೆ ॥

ನೆಂಟರು ಇನ್ನಷ್ಟುದಿನ ಇರಲಿ ಎನ್ನುವ ಭಾವನೆ ಇದ್ದಾಗಲೇ ಅವರು ಜಾಗವನ್ನು ಖಾಲಿ ಮಾಡುವುದು ಸೂಕ್ತ ಮತ್ತು ಜಾಣತನ. ಇಲ್ಲದಿದ್ದಲ್ಲಿ ಕುಡಿಯೊಡೆದ ಕುಹಕನುಡಿ ಹೆಮ್ಮರವಾಗಿ ಅವರ ಅಭಿಮಾನವನ್ನು ಸುಟ್ಟುಹಾಕಿ ಬಿಡುತ್ತದೆ. ಇಂಥ ಸಂದರ್ಭ ಕಂಡು ಕನಕದಾಸರು "ಭಾಮೆಯಳ ತಂದೆ ಮನೆಯಲಿ ಜೀವಿಪುದಕ್ಕಿಂತ ಸಾಯ್ವುದೇ ಲೇಸು" ಎಂಬ ಕಹಿಯನ್ನು ಪ್ರಕಟಿಸುತ್ತಾರೆ. ಅಲ್ಲದೆ ಹೀಗಿರುವುದಕ್ಕಿಂತ "ಗೋಪಾಳ ಲೇಸು" ಎಂದೂ ತೀರ್ಮಾನಿಸುತ್ತಾರೆ. ಮುಂದುವರಿದು :

ಪರರ ಸೇರಲುಬಹುದು ಪತಿತರಲ್ಲಿರಬಹುದು
ಕೊಲೆಪಾತಕರ ಗರಗಸಕೆ ಶಿರವೊಡ್ಡಬಹುದು
ತರುಣಿಯಳನೆಳೆತಂದ ಮನೆಯ ವಾಸದಕ್ಕಿಂತ
ತರುಗಿರಿ ಗುಹದಿ ಇದ್ದು ತಪಸಿಯಾಗಿರಬಹುದು ॥

ಎಂದು ಹೇಳಿರುವುದು ಸರ್ವಕಾಲಕ್ಕೂ ಅನ್ವಯವಾಗುವಂಥದ್ದು. ಹೀಗೆಯೆ ಕಲಿಯುಗದ ಮಹಿಮೆಯನು ಹೇಳುವ ಕೀರ್ತನೆಯಲ್ಲಿ (ಕೀ. ೧೭೨) ಕಲಿಯುಗದ ವೈಪರೀತ್ಯಗಳ ಪಟ್ಟಿ ಇದೆ. ಅತ್ತೆ ಸೊಸೆಯಾಗಿ, ಸೊಸೆ ಅತ್ತೆಯಾಗಿ ಪರಸ್ಪರ ಶೋಷಿಸುವುದು, ಪತಿಗೆ ಹೆಂಡತಿಯೆ ಗಂಡನಾಗಿ ವರ್ತಿಸುವುದು, ನೀಚರೇ ಅರ್ಥ ಸಂಪನ್ನರಾಗಿ ಮೆರೆಯುವುದು, ಹೆಚ್ಚಿದ ವೈರಿವರ್ಗ ಮುಂತಾದ ವಿಚಿತ್ರವಾದರೂ ನಿಜಸಂಗತಿಗಳನ್ನು ಧ್ವನಿಪೂರ್ಣವಾಗಿ ವಿಡಂಬಿಸಿದ್ದಾರೆ. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ಆರ್ಯೋಕ್ತಿಯ ಅನಿವಾರ್ಯತೆಯನ್ನು (ಕೀ. ೭೬) ಗ್ರಹಿಸಿ, 'ಮಗನಿಂದ ಗತಿಯುಂಟೆ ಜಗದೊಳು ನಿಗಮಾರ್ಥ ತತ್ತ್ವವಿಚಾರದಿಂದಲ್ಲದೆ' ಎಂದು ಪ್ರತಿಕ್ರಿಯಿಸುವ ಮೂಲಕ ರೂಢಿಗತ ನಂಬಿಕೆಯ ವಿರುದ್ಧ ಸದ್ದು ಮಾಡುತ್ತಾರೆ.

ಒಟ್ಟಿನಲ್ಲಿ ಕನಕದಾಸರು ಇಹವನ್ನು ತ್ಯಜಿಸಿ ಪರದತ್ತ ದಾಪುಗಾಲು ಹಾಕುವ ದಾರಿಯಲ್ಲಿ ತಮ್ಮ ಅನುಭವ-ಅನುಭಾವದ ಹೆಜ್ಜೆಗಳನ್ನು ಸಾಹಿತ್ಯಿಕ

ಕೃತಿಗಳಲ್ಲಿ ಮೂಡಿಸಿದ್ದಾರೆ. ಇವರ ಕೀರ್ತನೆಗಳಲ್ಲಿ ಕಂಡು ಬರುವ ವಿಡಂಬನೆಯೆ ಒಂದು ತೂಕವಾದರೆ, ವಿಡಂಬನೆಯ ಕೃತಿಯೆಂದೇ ಹೆಸರಾಗಿರುವ 'ರಾಮಧಾನ್ಯಚರಿತ್ರೆ'ಯೆ ಇನ್ನೊಂದು ತೂಕವಾಗಿ ಗಮನಾರ್ಹವಾಗುತ್ತವೆ. ಇಲ್ಲೆಲ್ಲ ನಿಚ್ಚಳವಾಗಿ ತಾವು ಬದುಕನ್ನು ಕಂಡುಂಡ ಬಗೆಯನ್ನು ಇವರು ಬಣ್ಣಿಸುತ್ತಾರೆ. ಹಾಗೆ ಮಾಡುವಾಗಲೆಲ್ಲ ಅವರ ಮಾತುಗಳಲ್ಲಿ ಅಭಿವ್ಯಕ್ತಿಯಲ್ಲಿ ವಿಡಂಬನೆ ಹಾಸು ಹೊಕ್ಕಾಗಿರುವುದು ಗೋಚರವಾಗುತ್ತದೆ. ವಿಡಂಬನೆಯೆ ಕನಕದಾಸರ ಕಾವ್ಯಶಕ್ತಿಯ ಜೀವಸೆಲೆ ಎಂದರೆ ಉತ್ಪ್ರೇಕ್ಷೆಯಲ್ಲ. ಅಷ್ಟರಮಟ್ಟಿಗೆ ನುಡಿಕಾಕನ್ನು ನೋಡಿದ್ದಕ್ಕೆಲ್ಲ ಕನಕದಾಸರು ಬಳಸುತ್ತಾರೆ. ಇಷ್ಟು ಸಾಂದ್ರವಾಗಿ ವಿಡಂಬನಕ್ರಿಯೆ ಕಾವ್ಯವಾಗಿರುವುದು ಕನ್ನಡ ಸಾಹಿತ್ಯದಲ್ಲಿ ಅಷ್ಟೇಕೆ ವಿಶ್ವಸಾಹಿತ್ಯದಲ್ಲಿ ದೊರೆಯುವ ವಿರಳ ಉದಾಹರಣೆಗಳಲ್ಲಿ ಇದೂ ಒಂದು.

# ಕನಕದಾಸರಲ್ಲಿ ಬಂಡಾಯದ ದನಿ

**ಡಾ. ಹಿ. ಶಿ. ರಾಮಚಂದ್ರೇಗೌಡ**

## ೧

### ೧. ೧ ಕನಕದಾಸರು

ಕನಕದಾಸರು ಕಾವ್ಯಮಾತ್ರವೆ, ದಾಸರು ಮಾತ್ರವೆ, ತಿಮ್ಮಪ್ಪ ಮಾತ್ರವೆ, ಆಗದಿರುವ ಕಾರಣಕ್ಕೆ ಅವರ ಬಗ್ಗೆ ಪುನಃ ಪುನಃ ಆಲೋಚಿಸಬೇಕಾಗುತ್ತದೆ. ಇದು ಕನಕದಾಸರ ಪುನರ್ ಚಿಂತನೆ ಎಂದರೆ ಅವರು ಅದಕ್ಕೆ ಬಹಳಮಟ್ಟಿಗೆ ವಸ್ತುವಾಗಿದ್ದಾರೆ ಎಂಬುದೆ ಆಗಿದೆ. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಹೀಗೆ ಕನಕದಾಸರು ಪುನರ್‌ಚಿಂತನೆಗೆ ಕಾರಣರಾಗುತ್ತಾರೆ ಎಂದರೆ ಅವರಲ್ಲಿ ಬೆಳೆಯುತ್ತಿರುವ ಘರ್ಷಣೆಗಳಿವೆ ಎಂದು ಅರ್ಥ. ಈ ಪರಿಸ್ಥಿತಿಯ ಮೇಲೆ ಕನಕದಾಸರು ಎರಡು ಸ್ಥಿತಿಯಲ್ಲಿ ನಮಗೆ ಗೋಚರಿಸುವರು :

೧. ಕನಕದಾಸರೆಂಬ ಅವರ ಚಾರಿತ್ರಿಕ–ಸಾಮಾಜಿಕ ಲೋಕೋಕ್ತಿ. ಇದು ಕನಕದಾಸರ ಜೀವನ ಮತ್ತು ಕಾವ್ಯಕ್ಕೆ ಸಂಬಂಧಿಸಿದ ಮಿಥ್ ಮತ್ತು ರಿಯಾಲಿಟಿಗೆ ಸೇರಿದ್ದು.

೨. ಕನಕದಾಸರ ಸಾಂಸ್ಕೃತಿಕ–ಧಾರ್ಮಿಕ ಅವಸ್ಥಾಂತರ. ಇದು ಅವರೇ ಒಡ್ಡಿಕೊಂಡ ಅವರ ಸಂಸ್ಕೃತೀಕರಣಕ್ಕೆ ಸಂಬಂಧಿಸಿದ ಪ್ರಕ್ರಿಯೆಗೆ ಸೇರಿದ್ದು.

ಈ ಎರಡರ ಮಧ್ಯೆಯ ಪ್ರತಿಭಟನೆ ಮತ್ತು ಸ್ವೀಕರಣ ಸ್ಥಿತಿಯೆ ನಮಗಿಂದು ದೊರೆಯುತ್ತಿರುವ ಕನಕ–ದಾಸರು, ಅಥವಾ ಅವರ ಕಾವ್ಯಗಳ ರೂಪದ ಅಭಿವ್ಯಕ್ತಿ.

### ೧. ೨. ಕನಕರ ಜೀವನ–ಕಾವ್ಯ ವೈರುಧ್ಯ ತುಲನೆ

ಕನಕದಾಸರ ಬಂಡಾಯ ದನಿಯನ್ನು ಗುರುತಿಸಲು ಅವರ ಕಾವ್ಯಗಳಷ್ಟೆ ಸಾಕಾಗದು. ಅವರ ಬಂಡಾಯಕ್ಕೆ ಪ್ರೇರಣೆಯಾಗಿದ್ದ ಅಂಶಗಳನ್ನು, ಅವು ಐತಿಹ್ಯ

/ ಪುರಾಣದಲ್ಲಿರಲಿ ವಾಸ್ತವತೆಯಲ್ಲಿರಲಿ ಪ್ರತೀಕ್ಷಿಸಲೇಬೇಕು. ನಮ್ಮ ಪರಂಪರೆಯಲ್ಲಿ ಉಪದೇಶ ಮತ್ತು ಬದುಕು ಅಗಲಕ್ಕೆ ಬಿರುಕುಗೊಂಡಿರುವುದರಿಂದ ನಮಗೆ ವ್ಯಕ್ತಿ–ವ್ಯಕ್ತಿತ್ವಗಳು ; ಸ್ವಂತ ಮತ್ತು ಸಂಸ್ಕೃತಿಗಳು ಅರ್ಥವಾಗದಿರುವ ಸನ್ನಿವೇಶದಲ್ಲಿ ಈ ಬಗೆಯ ಸ್ಪಷ್ಟತೆ ಅತ್ಯಂತ ಅನಿವಾರ್ಯವೆ.

ಭಾರತದ ಜಾತಿ ಮತ್ತು ಸಂಸ್ಕೃತಿ ಶ್ರೇಣಿಯಲ್ಲಿ ಏರುಮುಖ ಪ್ರಗತಿ (vertical progress) ಇದೆಯೆ ಹೊರತು ಭೂಮಿಯ ಮಟ್ಟ–ತುಂಬ ಹರಡಿಕೊಳ್ಳುವ ಪ್ರಗತಿಯ ಮಾದರಿಗಳು ಇಲ್ಲ. ಈ ಏರುಮುಖ ಪ್ರಗತಿ ಮತ್ತೊಂದು ಸಿದ್ಧ ಮತ್ತು ಸ್ತಬ್ಧ ಜಾತಿ ವ್ಯವಸ್ಥೆಯನ್ನು ತಲುಪುವುದಾಗಿದೆಯೆ ಹೊರತು ಅದರಾಚೆಗೆ ಭಾರತೀಯನು ಭಾವಿಸಿಕೊಳ್ಳುವುದಕ್ಕೆ ಏನೇನೂ ಇಲ್ಲ ಎನ್ನುವಷ್ಟರ ಮಟ್ಟಿನ ದೃಷ್ಟಿಹೀನತೆ, ಕ್ರಿಯಾಶೂನ್ಯ ಹಾಗೂ ಸತ್ವರಾಹಿತ್ಯ ಉಂಟಾಗಿದೆ. ಕರ್ನಾಟಕದ ಸಾಹಿತ್ಯ ಸಂದರ್ಭದಲ್ಲಿ ಹನ್ನೆರಡನೆಯ ಶತಮಾನದಲ್ಲಿ ವಚನಕಾರರಿಂದ ಇದರಲ್ಲಿ ಒಂದು ಬ್ರೇಕ್ ಉಂಟಾಯಿತು. ಆದರೆ ಅದೆ ಚಳುವಳಿ ಜಾತಿಯಾಗುವ ಭಯಕ್ಕೆ ಒಳಗಾಯಿತು. ನಮ್ಮ ಕಳಚಿಕೊಳ್ಳಲಾರದ ಜಾತಿ ಸರಪಳಿಯಲ್ಲಿ ಒಂದು ಕೊಂಡಿಯಾಗಿ ಮತ್ತೊಂದು ತೊಡಕು ಉಂಟಾಯಿತು. ಭಾರತಕ್ಕೆ ಅನ್ಯದೇಶೀಯ ಚಿಂತನ ಪರಿಭಾವಗಳ ಆಮದು ಆದಮೇಲೂ ಸ್ಥಿತಿ ಏನೂ ಬದಲಾಗಲಿಲ್ಲ. ಇಷ್ಟಿದ್ದೂ ಅಲ್ಲಲ್ಲಿ ಈಗಿರುವ ನಮ್ಮ ಪ್ರಗತಿಯ ಮಾದರಿಗಳು ಮುಗಿದಿವೆ. ನಮಗೆ ಬೇರೆಯದೆ ರೀತಿಯ ಮಾದರಿಗಳು ಬೇಕು ಎನ್ನುವ ವಾಸ್ತವತೆ ಕಣ್ಣಿಗೆ ಕಟ್ಟದೆ ಇರಲಿಲ್ಲ. ಅದರ ಫಲವೆ ನಾವೀಗ ವಿಷಯಗಳ ಕುರಿತು ಸಮಾಜವಾದಿ, ಸಮನ್ವಯವಾದಿ, ಬಂಡಾಯವಾದಿ ಹಾಗೂ ಪುನರ್‌ಸೃಷ್ಟಿವಾದಿ ಧೋರಣೆಗಳನ್ನು ನಮ್ಮ ಪರಂಪರೆಯ ಪರೀಕ್ಷೆಗೆ ಹಚ್ಚುತ್ತಿದ್ದೇವೆ. ಕನಕದಾಸರು ಕೂಡ ಈ ನಮ್ಮ ಕ್ಲೀಷೆಗಳಿಗೆ ಒಳಗಾಗಿದ್ದಾರೆ ; ಅದು ಅವರು ಬದುಕಿದ ಯುಗಧರ್ಮದ ಕಾರಣವಾಗಿದ್ದಿರಬಹುದು ಅಥವಾ ನಮ್ಮ ವಿಶ್ಲೇಷಣೆಯ ಒರೆ ಆಗಿರಬಹುದು.

### ೧. ೩. ಸಮಕಾಲೀನ ಆದ್ಯತೆಗಳು ಮತ್ತು ಕನಕದಾಸರು

ಅಂದು ಕನಕದಾಸರಿಗೆ ಇದ್ದ ಆದ್ಯತೆಗಳ ಬಗ್ಗೆ ಆಲೋಚಿಸದೆ ಅವರನ್ನು ಮುಟ್ಟುವುದು ಅಪಾಯ. ಹಾಗೆ ಮಾಡಿದರೆ ಕನಕದಾಸರು ನಮಗೆ ಕಾಣಬೇಕಾಗಿರುವುದಕ್ಕಿಂತ ಏನೇನೋ ಆಗಿ ಕಾಣಬಹುದು ; ಪಾರ್ವತಿಯನ್ನು

ಪಡೆದು ಹೊರಟ ರಾವಣ ಬೆನ್ನ ಹಿಂದೆ ಪಾರ್ವತಿಗೆ ಬದಲಾಗಿ ಬೇರೆ ಭಯಂಕರವನ್ನು ಕಂಡಂತೆ. ನಮ್ಮ ಚಿಂತನೆಯ ಫಲ ಹೀಗೆ ರಾವಣ ತಪ್ಪಿನ ಫಲದಂತೆ ನೆಗೆಟಿವ್ ಆಗಬಾರದು. ಕನಕದಾಸರ ಸಂದರ್ಭದಲ್ಲಿ ಇದ್ದ ಬದುಕುವ ಉತ್ತಮ ಮಾದರಿಗಳೆಂದರೆ ಎರಡೇ. ಒಂದು, ಶ್ರೇಷ್ಠವೆಂಬ ಬ್ರಾಹ್ಮಣ್ಯದ ಕಡೆಗೆ ಹೋಗುವುದು. ಎರಡು, ಸ್ಥಳ ಬಿಡದಿರುವುದು. ಪ್ರತಿಸ್ಥಳ ಪಲ್ಲಟದಲ್ಲಿ ರಾಜ, ಮಂತ್ರಿ ಡಣಾಯಕ ಆಗುವುದೆಂದಾಗ ಕೂಡ ಬ್ರಾಹ್ಮಣ್ಯವನ್ನು ಅನುಸರಿಸುವುದು ಅನಿವಾರ್ಯವಾಗಿತ್ತು. ತಿಮ್ಮಪ್ಪನಾಯಕ ಹಿಂದೆ ಹೋಗುವುದಿಲ್ಲವೆಂದಾದರೆ ತಿಮ್ಮಪ್ಪ > ಕನಕ ; ಕನಕನಾಯಕ > ಕನಕದಾಸ ಆಗುವುದೇ ಅಂದಿನ ಅನಿವಾರ್ಯ ಕ್ರಿಯೆಯಾಗಿತ್ತು. ಮೂಲವನ್ನು ತೊರೆದುಬಿಡುವ ಮತ್ತು ಅದೇ ಸಂದರ್ಭದಲ್ಲಿ ಮಹಿಮಾನ್ವಿತನಾಗುವ ನಿಯಮ ಮಾತ್ರವೆ ಪ್ರಗತಿ, ಬಂಡಾಯ ಅಥವಾ ಅಭಿವೃದ್ಧಿ ಆಗಿರುತ್ತಿತ್ತು.

### ೧. ೪. ಕನಕದಾಸರ ಬಂಡಾಯದ ಹಂತಗಳು

ಕನಕದಾಸರು ಮೂರು ಹಂತದಲ್ಲಿ ತಮ್ಮ ಮೂಲವನ್ನು ನಿರಾಕರಿಸಿದರು. ಆ ಮೂಲಕ ತಮ್ಮ ಸ್ಥಿತಿಗೆ ಬಂಡಾಯವಾಗಿ ಮೇಲೆ ಬಂದರು. ಭಾರತೀಯ ತಾತ್ವಿಕ ನಿಲುವಿನಲ್ಲಿ ಉತ್ತಮರು, ಕೊಳೆಯನ್ನು ತೊಳಕೊಂಡವರಾದರು. ಕನಕದಾಸರಾಗಲು ಮೂಲ ನೆಲೆಯಿಂದ ಹುಟ್ಟುವ ಮೊದಲೆ ಹೊರಬಿದ್ದು ವಿಶಿಷ್ಟರಾದರು. ಅವರು, ಬಹಳ ಕಾಲ ತಂದೆತಾಯಿಗಳಿಗೆ ಮಕ್ಕಳಾಗದೆ ಇದ್ದು; ತಿರುಪತಿ ವೆಂಕಟರಮಣನ ವರದಿಂದ ಹುಟ್ಟಿದವರೆಂದು ಐತಿಹ್ಯೀಕರಿಸಲಾಯಿತು. ಅಲ್ಲಿಂದಲೆ ಅವರು ಪರಿಶಿಷ್ಟತೆ ಕಳಚಿ ವಿಶಿಷ್ಟತೆಯ ಕಡೆಗೆ ಸಾಗಿದರು. ಮತ್ತೂ ಮುಂದುವರಿದಾಗ ನಾಯಕ, ನಿಧಿ ದೊರೆತ ಕನಕನಾಗಿ ಒಂದು ಜನಪದ ಪುರಾಣವೆ ಆದರು. ತಾವೇ ಒಂದು 'ಜನಪದ' ಹಾಗೂ ತಮ್ಮದೆ ಒಂದು 'ಜನಪದ'ವನ್ನು ಅವರು ಸೃಷ್ಟಿಸಿಕೊಂಡದ್ದು ಹೀಗೆ. ಹುಟ್ಟಿನಲ್ಲಿ ದಾಸನಾಗುವ, ಬದುಕಿನಲ್ಲಿ ದಾಸನಾಗುವ ಮತ್ತು ಕೆಟ್ಟಲ್ಲಿ ದಾಸನಾಗುವ, ಒಂದು ಶ್ರದ್ಧಾಪೂರ್ವಕ ಬಂಡಾಯದಲ್ಲಿ ಅವರು ಬೆಳೆದರು.

## ೨

### ೨. ೧. ಬಂಡಾಯವೂ ಕನಕದಾಸರೂ

ನಾವು ಈಗ ಬಂಡಾಯವನ್ನು ಪರಂಪರೆಯ ಹೊರಗೆ ನೋಡುತ್ತಿದ್ದೇವೆ. ಅದನ್ನು ಹೊರಗಿನ, ಒಂಟಿಯಾದ, ಭಾರತೀಯ ಪರಂಪರೆಗೆ ಜೋಡಿಸಿಕೊಳ್ಳದ

ಒಂದು ಧ್ವನಿ ಎಂತಲೊ, ವ್ಯವಸ್ಥೆ ಎಂತಲೊ ಪರಿಭಾವಿಸುತ್ತೇವೆ. ಇದಕ್ಕೆ ಕಾರಣ ನಮ್ಮ ಬಂಡಾಯ ಪರಿಕಲ್ಪನೆ ವರ್ಗ ಹೋರಾಟದ ಜೊತೆಗೆ ಸೀಮಿತಗೊಂಡಿರುವುದು. ಆದುದರಿಂದಲೆ ಅದು ಬಹಳ ತಾರ್ಕಿಕವಾದ ಮತ್ತು ಶುದ್ಧ ಎಡಪಂಥೀಯ ಪದವಾಗಿ ಬಂಡಾಯದ ಧ್ವನಿ ಎತ್ತುವುದು ಸಾಧ್ಯವೆ ಆಗಲಾರದು. ಎಂದ ಮಾತ್ರಕ್ಕೆ ಕನಕದಾಸರಲ್ಲಿಯ ಬಂಡಾಯವನ್ನು ಶ್ರಮಪಟ್ಟು ಸೃಷ್ಟಿಸಿ ಇಡಬೇಕೆಂದೇನೂ ಅಲ್ಲ. ಬಂಡಾಯವೆನ್ನುವುದು ಒಂದು ಪರಂಪರೆಯೊಳಗಿನ ಪ್ರತಿಭಟನೆಯ ಸ್ವರೂಪದಿಂದ ; ಆ ಸ್ವರೂಪದ ಅವಕಾಶ, ಬೇಡಿಕೆ ಮತ್ತು ನಿರೀಕ್ಷೆಯಿಂದ ಆರಂಭವಾಗುತ್ತದೆ. ಆಗ ಮಾತ್ರ ನಾವು ಕನಕದಾಸರೇ ಆದಿಯಾಗಿ ಯಾರನ್ನಾದರೂ ಸಮಸ್ಥಿತಿಯಲ್ಲಿ ಪರೀಕ್ಷಿಸಲು ಸಾಧ್ಯವಾಗುತ್ತದೆ.

**೨. ೨. ಸಾಮಂತತೆಯಿಂದ ಸಾರ್ವತ್ರಿಕತೆಗೆ**

ಕನಕದಾಸರು ಮೊದಲಿಗೆ ಬಂಡಾಯದ ಧ್ವನಿ ಆದದ್ದು ಸಾಮಂತತೆಯಿಂದ ಸಾರ್ವತ್ರಿಕತೆಗೆ ಬಂದಾಗ. ಅಂದರೆ, ಅವರ ಸಾಮಂತಿಕೆಯ ಅಹಂಕಾರ ಮುರಿದದ್ದು, ಸಂಪತ್ತಿನ ಹಂಚಿಕೆ ಮಾಡಿದ್ದು, ಅಲ್ಲಿಂದ ತಾವೇ ಭಾವಿಸಿಕೊಂಡಂತೆ ತನ್ನ ಸಾಮಂತಿಕೆಯ "ಅಹಂಕಾರಕ್ಕೆ" ಪ್ರತಿಭಟನೆಯಾದಾಗ. ಸಾಮಂತಿಕೆ ಸೋತಾಗ ಅದರ ನಂತರ ಬದುಕಲು ಸಾಧ್ಯವಿಲ್ಲವೆನಿಸಿದಾಗ. ತಕ್ಷಣದ ಬದುಕಿನ ಪರಿಹಾರ ಇಲ್ಲದಾದಾಗ. (ಭಾರತದ ಆವರಣದಲ್ಲಿ ಸುಲಭದ ಬದುಕೊಂದು, ಎಲ್ಲದರಿಂದ ಮೈಮರೆಯುವ ಬದುಕೊಂದು ತಾನೇತಾನಾಗಿ, ಪ್ರಚ್ಛನ್ನವಾಗಿ, ತೋರಿದಾಗ) ಇದು ಪ್ರಜ್ಞಾಸ್ಥಿತಿಯಲ್ಲಿ ನಡೆದ ಪ್ರತಿಭಟನೆ. ಆದರೆ ಇಲ್ಲಿ ಅವರು ಮುಂದುವರಿಯುವ ದಾರಿಯನ್ನು ಕಂಡುಕೊಳ್ಳಲಾಗಲಿಲ್ಲ. ಇದಕ್ಕೆ ಕಾರಣ ಒಂದು, ಭಾರತೀಯ ಪರಿಸ್ಥಿತಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಬರುವ ಪ್ರಾಥಮಿಕ ಮತ್ತು ಮೂಲಭೂತ ಅಡ್ಡಿ. ಅದೆಂದರೆ ತಾನು ಇರುವ ಮತ್ತು ಅನುಭವಿಸಿದ ಮಾನಸಿಕ ಚಿಂತನೆಯ ಸ್ತರದಲ್ಲೆ ತನ್ನ ಪ್ರಗತಿಯನ್ನು ಕಂಡುಕೊಳ್ಳಲು ಆಗದಿರುವುದು. ಎರಡು, ಇರುವುದರ ನಿರಾಕರಣೆ ಹಾಗೂ ಇಲ್ಲದುದರ ಕಡೆಗೆಭಾವಿಸಿಕೊಳ್ಳುವ ಆರ್ತತನ. ಭಾರತೀಯ ಜೀವನ ಮೌಲ್ಯವಾಗಿ ನಿರೂಪಿತವಾಗದ, ಜೀವನಕ್ರಮ ಆಗದ ನಿರ್ಬಂಧಿತ ಆವರಣ ಸೃಷ್ಟಿಯಾಗಿರುವುದು. ಕನಕದಾಸರೂ ಕೂಡ ಎಲ್ಲ ಶೂದ್ರ ಬಂಡಾಯಗಾರರಿಗೆ ಇರುವ ಪರಿಮಿತಿಯಂತೆ ತಮ್ಮ ವಾಸ್ತವದ ಆಘಾತಕ್ಕೆ ಪರಿಹಾರ ಅಥವಾ

ತರ್ಕವನ್ನಾಗಿ ಮೇಲು ಜಾತಿ ಜೀವನಧರ್ಮವನ್ನು ಆಹ್ವಾನಿಸಿಕೊಂಡರು. ಆ ಮೂಲಕ ತಮ್ಮ ಪ್ರಗತಿಯ ಬಂಡಾಯದ ಅಪೇಕ್ಷೆ ಪ್ರಗತಿಯೆ ಆಗಿರುವುದರಿಂದ ಅದನ್ನು ನಿರೀಕ್ಷಿಸಿದರು. ಹಾಗೆಂದು ಭಾರತೀಯ ಪ್ರಗತಿಚಲನೆಗೆ ಅವರು ಅಡ್ಡಿಯಾಗಲಿಲ್ಲ. ಹಿಂಬಡ್ತಿಯಂತೂ ಅಲ್ಲವೇ ಅಲ್ಲ, ಅದು. ಯಾಕೆಂದರೆ, ಇಪ್ಪತ್ತನೆಯ ಶತಮಾನದ ಕೊನೆಯ ಘಟ್ಟದ ಉಗ್ರ ಬಂಡಾಯಗಾರ ಅಥವಾ ಎಡಪಂಥಿಯ ಎನ್ನುವವನು ಕೂಡ ಗುಟ್ಟಿನಲ್ಲಿ 'ಭಾರತದ ಬ್ರಾಹ್ಮಣ್ಯವನ್ನು ವಿರೋಧಿಸಿ ಬದುಕಲು ಸಾಧ್ಯವಿಲ್ಲ' ಎಂದು ಪಿಸುಗುಡುವ ದುರಂತದಲ್ಲಿಯೇ ಇದ್ದಾನೆ. ವಿರೋಧವಾಗಿ ಕಂಡ ಧರ್ಮವನ್ನು ಕೂಡ ಅಂತರಂಗದಲ್ಲಿ ಆಚರಿಸುತ್ತಿದ್ದಾನೆ. ಕನಕದಾಸರು ತಮ್ಮ ಪರಿಸ್ಥಿತಿಯಲ್ಲಿ ತಮ್ಮನ್ನು ತಾವೇ ವಂಚಿಸಿ ಕೊಳ್ಳುವ ಇಂಥ ಅಕೃತ್ಯವನ್ನು ಮಾಡಲಿಲ್ಲ. ಅವರಿಗೆ ತಮ್ಮ ಮೂಲಸ್ತರದ ಸ್ಪಷ್ಟ ನಿರಾಕರಣೆಯ ಎದುರಿಗೆ ಪರಿಹಾರ, ಪರ್ಯಾಯ ಆಗಿ ಕಂಡದ್ದು ದಾಸನಾಗುವ ಧರ್ಮ. ಅವರ ಒಳಧ್ವನಿಯಲ್ಲಿ ಕಾಗಿನೆಲೆಯಾದಿಕೇಶವರಾಯನ 'ಕರೆ' ಆದದ್ದು ಹಾಗೆ. ಕುರುಬ > ತಿಮ್ಮಪ್ಪನಾಯಕ, ಕನಕ ನಾಯಕ > ಕನಕದಾಸ ಆದದ್ದು ಈ ಬಗೆಯಲ್ಲಿ ಅವರು ನಂಬಿದ ಸಾರ್ವತ್ರಿಕತೆಗಾಗಿ. ಇದಕ್ಕೆ ವಿರುದ್ಧವಾದ ಸಂಗತಿಗಳ ಬಗ್ಗೆ ಅಥವಾ ಅಡ್ಡಿಗಳ ಬಗ್ಗೆ ಕನಕದಾಸರು ಪ್ರತಿಭಟಿಸಿದ್ದು ತನ್ನ ಈ ನಂಬಿಕೆ ಮತ್ತು ನಡವಳಿಕೆಯಲ್ಲಿಯ ದೃಢತೆಗಾಗಿ. ಕನಕದಾಸರ ಬಂಡಾಯದ ಪರಿ ಇದು. ಅವರು ಬ್ರಾಹ್ಮಣ್ಯವನ್ನು ಅಲ್ಲಗಳೆಯುವುದು, ಚಿತ್ತವನ್ನು ಹೀಯಾಳಿಸುವುದು ಬಂಡಾಯ ಅಲ್ಲ. ಅವರು ದಾಸರಾಗುವ ಮತ್ತು ತನ್ನಂತೆ ನರೆದಲಗನನ್ನು ರಾಘವತ್ವದ ಕಡೆಗೆ ಕೊಂಡೊಯ್ಯುವ ಉನ್ನತೀಕರಣದ ಅಪೇಕ್ಷೆಗಾಗಿ.

**೨. ೩. ಉನ್ನತೀಕರಣ : ಕನಕ–ಕುವೆಂಪು ; ಭಾರತೀಯತೆ**

ನಮ್ಮ ಬ್ರಾಹ್ಮಣ್ಯ ಸುರಸಂಬಂಧಿ. ಆದ್ದರಿಂದ ಅದು ನಮ್ಮ ಎಲ್ಲ ದೈವಾಂಶಗಳಲ್ಲಿ ಆವಿರ್ಭವಿಸುತ್ತದೆ. ಭಾರತೀಯ ಉನ್ನತಿ ಮತ್ತು ಪ್ರೌಢಿಮೆಗಳೆಲ್ಲ ದೈವಸಂಬಂಧಿ ಆಗಿರುವುದರಿಂದ ಅವು ಮೊದಲು ಬ್ರಾಹ್ಮಣ್ಯದಲ್ಲೆ ಹುಟ್ಟುತ್ತವೆ, ಹಾಗೂ ಬೆಳೆಯುತ್ತವೆ. ಆದಕಾರಣವೆ ಪ್ರತಿಭೆ, ನೈಪುಣ್ಯತೆಗಳೆಲ್ಲ ಸುರ, ಭೂಸುರ, ಭೂಪತಿ ಹಾಗೂ ಭೂಒಡೆತನದಲ್ಲಿ ಕಂಡು ಬಂದು ನಂತರದ ವರ್ಗಗಳಲ್ಲಿ ಆಕಸ್ಮಿಕವೆನಿಸಿಕೊಳ್ಳುತ್ತವೆ. ಕೆಳ ಜಾತಿಯ ಯಾವ ಪ್ರತಿಭಾವಂತನಾದರೂ ಅವನು ದೈವಾಂಶ ಉಳ್ಳವನೆಂದು ಹೇಳಿಸಿಕೊಳ್ಳದಿದ್ದರೆ, ಆರೋಪಿಸಿಕೊಳ್ಳದಿದ್ದರೆ ಅಥವಾ

ತಾನೇ ನೇರವಾಗಿ ಅದನ್ನು ಸ್ವೀಕರಿಸದಿದ್ದರೆ ಅವನ ವ್ಯಕ್ತಿತ್ವ ಅಥವಾ ಅಭಿವ್ಯಕ್ತಿಗೆ ಮಾನ್ಯತೆ ಇರುವುದಿಲ್ಲ. ಈ ಒಂದು ಅವಾಂತರದಿಂದಾಗಿಯೆ ವಿಶ್ವಾಮಿತ್ರನಿಂದ ಆರಂಭಗೊಂಡು ಅನೇಕರು ಆ ಕಡೆಗೆ ಹೋಗಲು ಇನ್ನಿಲ್ಲದ ಪ್ರಯತ್ನವನ್ನು ನಡೆಸಿ ವಿಫಲರಾಗಿದ್ದಾರೆ. ಕಾರಣವಾಗಿ ತಿಮ್ಮಪ್ಪ ಕನಕದಾಸನಾಗದೆ ಔನ್ನತ್ಯದ ಹಿರಿಮೆ ಬರಲಾರದು. ಇದು ಕೇವಲ ಬದುಕಿನಿಂದಷ್ಟೆ ಸಾಧ್ಯವಾಗದು; ಹುಟ್ಟಿನಿಂದಲೆ ಸಾಧ್ಯವಾಗಬೇಕು. ಅದಾಗಿ ತಿಮ್ಮಪ್ಪ ತಿರುಪತಿ ಶ್ರೀವೆಂಕಟರಮಣ ದೇವರ ವರವಾಗಿ ಹುಟ್ಟಬೇಕಾಗುತ್ತದೆ. ಪರಿಣಾಮವಾಗಿ ಸಾಧನೆಯಲ್ಲಿ ಕೂಡ ಮೇಲಿನವರ ಸೇವೆಯನ್ನು ಅಗತ್ಯ ಮತ್ತು ಪವಿತ್ರವೃತ್ತಿಯನ್ನಾಗಿ ಒಪ್ಪಿಕೊಳ್ಳಬೇಕು. ಇದಕ್ಕಾಗಿ ಅವರು ತಮ್ಮ ವಾಸ್ತವದ ಹುಟ್ಟನ್ನೂ, ಬೆಳವಣಿಗೆಯನ್ನು ಕಳಚಿಕೊಳ್ಳಬೇಕಾಗುತ್ತದೆ. ಹಾಗೆ ಮಾಡುವಾಗ ತನ್ನ ನಿಜವಾದ ಹುಟ್ಟು ಮತ್ತು ಬದುಕನ್ನು ಪ್ರತಿಭಟಿಸಬೇಕಾಗುತ್ತದೆ. ಇದು ಆ ಸ್ತರದಲ್ಲಿ ಬಂಡಾಯ–ಅಭಿವೃದ್ಧಿ ಮತ್ತು ಮಾನವಿಯತೆ ಎನಿಸಿಕೊಳ್ಳುತ್ತದೆ. ಕನಕದಾಸರ ಗೀತೆಗಳಲ್ಲಾಗಲಿ, ರಾಮಧಾನ್ಯ ಚರಿತ್ರೆಯಲ್ಲಾಗಲಿ ಕಂಡುಬರುವ ಪ್ರತಿಭಟನೆ, ಬಂಡಾಯ ಈ ರೀತಿಯದು. ಅದನ್ನು ನಮ್ಮ ಓದುಗರು ಬ್ರಾಹ್ಮಣವಿರೋಧಿ ಎಂದಾಗಲೀ, ವರ್ಗ ಹೋರಾಟದ ಕರೆ ಎಂದಾಗಲಿ ಗ್ರಹಿಸುವುದು ಸರಿಯಲ್ಲ. ಇಂಥ ದೃಷ್ಟಿಕೋನ ಕನಕದಾಸರ ಜೀವನ ಮತ್ತು ಕೃತಿಯ ಮೇಲೆ ಮಾಡಿದ ಆರೋಪವಾಗುತ್ತದೆ.

**೨. ೪. ದರ್ಶನದ ಬೀಜ : ಕನಕ–ಕುವೆಂಪು**

ಹಾಗೆ ನೋಡಿದರೆ ಕುವೆಂಪು ಅವರ ‘ರಾಮಾಯಣದರ್ಶನಂ’ ಬೀಜ ಕನಕದಾಸರ ರಾಮಧಾನ್ಯಚರಿತ್ರೆಯಲ್ಲಿ : ಅರ್ಥಾತ್ ಕನಕದಾಸರಲ್ಲಿ ಇದೆ. ಸರಳಾರ್ಥದಲ್ಲಿ ಹೇಳುವುದಾದರೆ ಕನಕದಾಸರ ಪರಂಪರೆಯನ್ನು ಬಹು ದೊಡ್ಡದಾಗಿ ಹಾಗೂ ಮನೋಜ್ಞವಾಗಿ ಕುವೆಂಪು ಅವರು ಮುಂದುವರಿಸಿದ್ದಾರೆ. ಕನಕದಾಸರಲ್ಲಿ ಬೀಜವಮಾತ್ರವಾದ ರಾಗಿ ರೂಪಕಕ್ರಿಯೆ ರಾಮಾಯಣದರ್ಶನಂನಲ್ಲಿ ಮೊಳೆತು ಮಕ್ಕಳಾದ ವ್ಯಕ್ತಿಗಳಾದವರು ಮಹಾವ್ಯಕ್ತಿಗಳಾಗುತ್ತಾರೆ. ಹೀಗೆ ಬೀಜ ವೃಕ್ಷ ಸಂಬಂಧ ಕನಕ–ಕುವೆಂಪು ಅವರಲ್ಲಿ ಸೂತ್ರಧಾರಿತ್ವವನ್ನು ವಹಿಸಿದೆ. ರಾಗಿ ರಾಘವನ ಕಡೆಗೆ ಕನಕದಾಸರಲ್ಲಿ ಚಲಿಸುವಂತೆ ಆ ಸಂಸ್ಕೃತಿಯ ಮಹಾ ಪ್ರತಿನಿಧಿಯಾದ ರಾವಣನೇ ರಾಮತ್ವದ ಕಡೆಗೆ ‘ರಾಮಾಯಣ ದರ್ಶನಂ’ ನಲ್ಲಿ ಚಲಿಸುತ್ತಾನೆ. ಈ ಎರಡೂ ಕಡೆ

ವಸ್ತು ಆಶಯ ಮತ್ತು ವ್ಯಕ್ತಿ ಆಶಯಗಳಲ್ಲಿ ಹುಟ್ಟಿಕೊಂಡ ಬಾಹ್ಯಪ್ರತಿಭಟನೆ ಪರಂಪರೆಯ ಜೊತೆಗೆ ಹೊಂದಿಕೊಂಡು ಆಂತರಿಕ ಪ್ರತಿಭಟನೆ ಮತ್ತು ಘರ್ಷಣೆಯಾಗಿ ಪರಿಣಮಿಸುತ್ತದೆ. ಇದು ಸಮಾಜದಲ್ಲಿಯ ಪಾರಂಪರಿಕ ಘರ್ಷಣೆ ಮತ್ತು ಘರ್ಷಿತ ಜನವರ್ಗ ಮತ್ತು ಮೌಲ್ಯವನ್ನು ಮುಂದುವರಿಸಿಕೊಂಡು ಹೋಗುವ ನಿರಂತರ ಪ್ರಕ್ರಿಯೆ. ಈ ಬಗೆಯ ಸಾಂಘಿಕ ಘರ್ಷಣೆ ಮತ್ತು ಮುಂದುವರಿಕೆಯನ್ನು ಅರ್ಥಮಾಡಿಕೊಳ್ಳದ ವಿಮರ್ಶಕರು ಕುವೆಂಪು ಬ್ರಾಹ್ಮಣವಿರೋಧಿ ಎಂದೋ ಅಥವಾ ಅವರು 'ಶೂದ್ರಶಾಹಿಯಿಂದ ಪುರೋಹಿತಶಾಹಿಯ ಕಡೆಗೆ' ಚಲಿಸಿದ್ದಾರೆಂದೋ ಹೇಳಿಬಿಟ್ಟಿದ್ದಾರೆ. ಕನಕದಾಸರಿಗೂ ಇದೇ ಸುಲಭ ಆರೋಪವನ್ನು ಎರಡು ಸ್ಥಿತಿಯಲ್ಲಿ ಮಾಡಿಬಿಡಬಹುದು. ಒಂದು ತಿಮ್ಮಪ್ಪದಾಸನಾದ ಅವಹೇಳನ. ಮತ್ತೊಂದು ತನ್ನ ಜನಾಂಗಕ್ಕೆ ಹಾಗೂ ವಾಸ್ತವ ಬದುಕಿಗೆ ಮಾಡಿದ ಅಪಮಾನ. ಇನ್ನೂ ತೀರಾ ಆಚೆಗೆ ಹೋಗಿ ವರ್ಗ ಸಂಘರ್ಷ ಎಂದು ಸುಲಭೀಕರಿಸಲೂಬಹುದು.

### ೨. ೫. ಕಾಯುವ ಕಾಯಕ–ತಪಸ್ಸು–ಸಿದ್ಧತೆ

ನಮ್ಮ ತಲೆಮಾರಿನ ಶೂದ್ರರ ಸಿಟ್ಟು, ಅವಸರ, ಅರಾಜಕತೆ ವಿಚಾರವನ್ನು ಪ್ರಾಯೋಗಿಕಗೊಳಿಸದೆ ಧ್ವಂಸ ಮಾಡಿಬಿಟ್ಟಿವೆ. ಹಾಗಾಗಿ ಸಾಧನೆ–ತಪಸ್ಸು–ಸಿದ್ಧಿಗಳ ವಿಷಯದಲ್ಲಿ ನಾವು ಹಗುರವಾಗಿಯೆ ಮಾತನಾಡುತ್ತೇವೆ. ಕಾರಣ ಇವೆಲ್ಲ ಸಾಧನೆಗಳಿಗೆ ಮೂಲದ್ರವ್ಯವಾದ ಶ್ರದ್ಧೆ ನಮ್ಮಲ್ಲಿ ಕಾಣುತ್ತಿಲ್ಲ. ಹಾಗಾಗಿ ನಮ್ಮ ಹಿಂದಿನ ಸಾಹಿತ್ಯ, ಸಂಸ್ಕೃತಿ ಮತ್ತು ಪರಂಪರೆಗಳನ್ನು ವಿಶ್ಲೇಷಿಸುವಾಗ ನಾವು ನೇರವಾಗಿ ಅವುಗಳ ಮೇಲೆ ಬಿದ್ದುಬಿಡುತ್ತೇವೆ. ಕಾರಣವಾಗಿ ಶೀಲಸಂಬಂಧಿಯಾಗಿ ಅವುಗಳನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಕನಕದಾಸ–ಕುವೆಂಪು ಇವರನ್ನು ಅರ್ಥಮಾಡಿಕೊಳ್ಳುವಲ್ಲಿ ಕೂಡ ಇದೆ ಅಪಚಾರವನ್ನು ಮಾಡಿದ್ದೇವೆ.

ಭಾರತೀಯ ಸಾಂಸ್ಕೃತಿಕ ಇತಿಹಾಸದ ಸಂದರ್ಭದಲ್ಲಿ ಶೂದ್ರವೊ, ಬ್ರಾಹ್ಮಣವೊ ಆಂತರಿಕವಾಗದೆ ಯಾವುದಾದರೂ ಒಂದು ಹೊರಗೆ ನಿಂತಿದ್ದರೆ ಅದು ಖಂಡಿತ ನಾಶವಾಗಿ ಬಿಡುತ್ತಿತ್ತು. ಅದು ಜನಾಂಗಿಕ–ಸಾಂಸ್ಕೃತಿಕ ಕ್ರೂರತೆಯಾಗುತ್ತಿತ್ತು, ಅನೈಸರ್ಗಿಕವಾಗುತ್ತಿತ್ತು. "ಬಳಕೆಯ" ಒಂದೇ ಆಧಾರದ ಮೇಲೆ ಜನ, ಜಾತಿ, ವರ್ಗ, ಪರಿಸರ ಮತ್ತು ಪರಿಸ್ಥಿತಿಗಳನ್ನು ಸ್ವಂತಕ್ಕೆ

ವಿವೇಚಿಸುತ್ತಾ ಹೋದಾಗ ನಮ್ಮ ಭಾವನೆ, ಸಂಸ್ಕೃತಿ, ಸ್ಥಿತಿಗಳೆಲ್ಲ ಕ್ರೂರ ಅಸಹಜ ಮತ್ತು ಅಪಕ್ವವಾಗಿ ಬಿಡುತ್ತವೆ. ವಾಸ್ತವದಲ್ಲಿ ನವನಾಗರೀಕರಾದ ನಾವು ಮಾಡುತ್ತಿರುವ ದುರಂತವನ್ನು ಹಿಂದಿನ ಸಮಾಜ ಆಗಗೊಡಲಿಲ್ಲ. ಅದು ಸಹಜವಾಗಿ ತನ್ನ ಇತಿಮಿತಿಯಲಿ ನೈಸರ್ಗಿಕ ಸಾಮಾಜಿಕ ಪ್ರಕ್ರಿಯೆಗೆ ಅವಕಾಶ ಬಿಟ್ಟುಕೊಟ್ಟಿತು. ಪ್ರತಿಭಟನೆಯನ್ನು ಅಂತರಿಕವಾಗಿಯೆ ಉಳಿಸಿಕೊಂಡಿತು. ಕನಕದಾಸರು ಮತ್ತು ಕುವೆಂಪು ಮಾಡಿದ್ದು ಸಹ ಇದನ್ನೆ. ಬೇರೆ ಅನೇಕ ಕವಿಗಳು ಬದುಕಿನಲ್ಲಿ ಸಂಘರ್ಷವೇ ಇಲ್ಲ : ಬೆಳವಣಿಗೆಯೆ ಇಲ್ಲ ಎಂದು ಬರೆದದ್ದು, ಬದುಕಿದ್ದು ಉಂಟು. ಅವರ ಸ್ಥಿತಿಯಲ್ಲಿ ನಾವು ಕನಕದಾಸರನ್ನಾಗಲಿ, ಕುವೆಂಪು ಅವರನ್ನಾಗಲೀ ನೋಡಲು ಸಾಧ್ಯವಿಲ್ಲ. ಬದುಕುತ್ತಲೆ, ಬರೆಯುತ್ತಲೆ ಜೀವನ ಸಂಘರ್ಷದ ಅವಶ್ಯಕತೆಯನ್ನು ದರ್ಶಿಸಿದವರು. ಕನಕದಾಸರು ಕೆಲವೇ ನಿರ್ದಿಷ್ಟ ಘಟ್ಟಗಳಲ್ಲಿ ಘರ್ಷಿಸಿದ್ದಾರೆ. ಕುವೆಂಪು ತಮ್ಮ ಬದುಕಿನ ನಿರಂತರತೆಯಲ್ಲಿ ಘರ್ಷಿಸುತ್ತಾ ಹೋದವರು. ಏಕಲವ್ಯ, ಶಂಬೂಕ, ಹನುಮಂತ ಕೊನೆಗೆ ರಾವಣ ಹೀಗೆ ಹಲವರು ಸಂಘರ್ಷದಲ್ಲಿ, ವಯಸ್ಸಿನಲ್ಲಿ, ಸಾಧನೆಯಲ್ಲಿ ಹೊಸ ಬದುಕನ್ನು ಸೃಷ್ಟಿಸಿದವರು. ಕನಕದಾಸರಲ್ಲಿ ಇವರೆಲ್ಲರ ಮೂಲ ಧಾತುವೆನ್ನುವಂತೆ ರಾಗಿ ಆ ಕೆಲಸವನ್ನು ಮಾಡಿದೆ. ಶಂಬೂಕ ತಪಸ್ಸು ಮಾಡುವುದು, ಏಕಲವ್ಯ ಏಕಾಂಗಿಯಾಗಿ ಸಿದ್ಧನಾಗುವ ತಪಸ್ಸಿಗೂ ರಾಗಿ ತನ್ನ ಪರೀಕ್ಷೆಗಾಗಿ ಆರು ತಿಂಗಳು ಹಗೇವಿನಲ್ಲಿ ಕಾಯುವುದೂ ಬೇರೆ ಬೇರೆ ಅಲ್ಲ. ಇವು ಒಂದೇ ಪರಂಪರೆಯ ಬೇರೆ ಬೇರೆ ಕಾಲದ ಪ್ರತಿಭಟನೆಗಳು. ಉನ್ನತಿಯ ಸಾಧನೆ ಬಹುಮುಖವಾಗದೆ ಭಾರತೀಯ ಮನೋಧರ್ಮದಂತೆ ಊರ್ಧ್ವಮುಖವಾಯಿತು ಎಂಬ ಪರಿಮಿತಿಯನ್ನು ಬಿಟ್ಟರೆ 'ರಾಗಿ'–'ರಾವಣ' ಪೂರ್ಣತ್ವಕ್ಕಾಗಿ ನಡೆದ ಪ್ರತಿಭಟನೆ–ಬಂಡಾಯ ಮುಂದುವರಿದಿದೆ. ವಚನಕಾರರ ಮಟ್ಟದ ಮೌಲಿಕ ಪ್ರತಿಭಟನೆ ಕನಕದಾಸರದು ಆಗಲಿಲ್ಲವಾದರೂ ದಾಸಪಂಥದವರ ಪರಿಸ್ಥಿತಿಯಲ್ಲಿ ಕನಕದಾಸರ ಪ್ರತಿಭಟನೆ ದೊಡ್ಡದು ಎಂದೇ ಹೇಳಬೇಕು.

೩

### ೩. ೧. ಬಂಡಾಯ ಒಂದು ಪ್ರವೃತ್ತಿಮಾತ್ರ

ಬಂಡಾಯ ಒಂದು ಪದ್ಧತಿಯೂ ಅಲ್ಲ ಮೌಲ್ಯವೂ ಅಲ್ಲ, ಅದೊಂದು ಪ್ರವೃತ್ತಿ. ಗತಿಶೀಲತೆಯನ್ನು ಕಳೆದುಕೊಂಡ ಮತ್ತು ಚಲನಶೀಲ ಸಮಾಜವೊಂದರ ನಿರೀಕ್ಷಣೆಯ ಮಧ್ಯೆ ತಾತ್ಕಾಲಿಕವಾಗೊ, ಬಹಳಕಾಲದವರೆಗೊ ಹುಟ್ಟಿದ ಒಂದು

ನಡತೆ. ವಿಶಿಷ್ಟಾರ್ಥದಲ್ಲಿ ವಚನಚಳುವಳಿ, ಸರಳಾರ್ಥದಲ್ಲಿ ದಾಸಪಂಥ ಬಂಡಾಯ ಪ್ರವೃತ್ತಿಗಳು. ವಚನ ಚಳುವಳಿ ದೈವತ್ವದ ಪ್ರೌಢಿಮೆ ಮತ್ತು ಸಮಗ್ರೀಕರಣಕ್ಕೆ ಸಂಬಂಧಿಸಿದ್ದರೆ ದಾಸಪಂಥ ದೈವತ್ವದ ಸರಳೀಕರಣ ಮತ್ತು ಪಂಥ ಸ್ವಭಾವಕ್ಕೆ ಸೀಮಿತವಾಗಿದೆ. ಎರಡೂ ನಿರೀಶ್ವರವಾದಕ್ಕೆ ಪ್ರತಿಭಟನೆಗಳಾದರೂ ವಚನ ಚಳುವಳಿ ಸಾಮಾಜಿಕ–ಸಾಂಸ್ಕೃತಿಕ ಸಮಾನತೆಯ ಆಧಾರದ ಮೇಲೆ ಹುಟ್ಟಿಕೊಂಡದ್ದು. ದಾಸಪಂಥ ಸರಳ 'ಸಂಸ್ಕೃತೀಕರಣ' ಪ್ರಕ್ರಿಯೆಗಳಲ್ಲಿ ಒಂದು. ಕನಕದಾಸರ ಪ್ರತಿಭಟನೆ–ಬಂಡಾಯವನ್ನು ಈ ಪರಿವೇಶದ ಒಳಗೆ ನೋಡಬೇಕಾಗುತ್ತದೆ. ತನ್ನೊಳಗೆ ಮತ್ತು ಇತರ ಮೇಲು ಜಾತಿಯ ಶಿಷ್ಯರೊಳಗೆ ಕನಕದಾಸರು ಹೇಗೆ ಉನ್ನತವಾದರು, ಅದಕ್ಕಾಗಿ ಅವರು ಹೇಗೆ ಘರ್ಷಿಸಿದರು ಎಂಬುದೇ ಅವರ ಬಂಡಾಯ ಪ್ರವೃತ್ತಿ.

### ೩. ೨. ರಾಮಧಾನ್ಯ ಚರಿತ್ರೆ – ಬಂಡಾಯ

ಕನಕದಾಸರ ಬಂಡಾಯ ಪ್ರವೃತ್ತಿಗೆ ಮಾದರಿಯಾಗಿ ರಾಮಧಾನ್ಯ ಚರಿತ್ರೆಯನ್ನು ಹಲವು ವಿದ್ವಾಂಸರು ಉಲ್ಲೇಖಿಸುವರು. ಕನಕದಾಸರ ಕೀರ್ತನೆಗಳಲ್ಲಿ ಕೂಡ ಕೆಲವು ಅವರನ್ನು ಬಂಡಾಯಗಾರರನ್ನಾಗಿ ಪ್ರತಿನಿಧಿಸಿವೆ ಎಂದೂ ಹೇಳಲಾಗಿದೆ. ಬಂಡಾಯ ಹೀಗೆ ಬೇರೆ ಬೇರೆ ಭಾಗಗಳಲ್ಲಿ, ಇರುವುದು ಅಪೇಕ್ಷಣೀಯವಲ್ಲ. ಅದು ಒಬ್ಬ ವ್ಯಕ್ತಿಯ ಅಥವಾ ಒಂದು ಕೃತಿ ಅಖಂಡತೆಯಲ್ಲಿ ಸಂಭವಿಸಿದ್ದಾಗಿರಬೇಕು. ಈ ದೃಷ್ಟಿಯಿಂದ ನೋಡಿದಾಗ ಕನಕದಾಸರ ಹುಟ್ಟು–ಬದುಕೇ ಒಂದು ಬಂಡಾಯ ಪ್ರವೃತ್ತಿ ಎಂಬುದನ್ನು ನಾನು ಈ ಮೊದಲು ತಿಳಿಸಿದ್ದೇನೆ. ಅವರ ಕಾವ್ಯರೂಪದ ಬಂಡಾಯ ಯಾವ ಸ್ವರೂಪದ್ದು ಎಂಬುದಕ್ಕೆ 'ರಾಮಧಾನ್ಯ ಚರಿತ್ರೆ'ಯನ್ನೂ, ಅವರ ದಾಸತ್ವ ಉನ್ನತಿಯ ಸಂದರ್ಭದಲ್ಲಿ ಕೀರ್ತನೆಗಳಲ್ಲಿ ಹೇಗೆ ಬಂಡಾಯ ವ್ಯಕ್ತವಾಗಿದೆ ಎಂಬುದನ್ನಷ್ಟೆ ಇಲ್ಲಿ ಪರೀಕ್ಷಿಸಬೇಕಾಗಿದೆ. ಕನಕದಾಸರ ಮೂರು ಕಾವ್ಯ ಕೃತಿಗಳಲ್ಲಿ ರಾಮಧಾನ್ಯ ಚರಿತ್ರೆಯೂ ಒಂದು. ಮೋಹನ ತರಂಗಿಣಿ ಕೃಷ್ಣಚರಿತ್ರೆಯಾದರೆ ರಾಮಧಾನ್ಯ ಚರಿತ್ರೆ ರಾಮ ಮತ್ತು ರಾಮತ್ವವನ್ನು ಪಡೆಯುವ ರಾಗಿಯ ಪುರಾಣ ಅಥವಾ ಚರಿತ್ರೆ. ರಾಮ ಪ್ರಕ್ರಿಯೆ ನಾನಾ ಹಂತಗಳಲ್ಲಿ ಬೆಳೆಯುವುದರ ರೂಪಕವಾಗಿ ವ್ಯಕ್ತಿತ್ವ ಧರಿಸಿದೆ. ಕಥೆಯ ಬಹಳ ಭಾಗ ರಾಮನದೇ ಆದರೂ ಅದು ರಾಗಿಯ ರಾಮದೀಕ್ಷೆಗಾಗಿಯೆ ಹೆಣೆಯಲ್ಪಟ್ಟದ್ದು. ರಾಮ–ರಾಗಿ–ಕನಕದಾಸರು ಈ ಕೃತಿಯ ಅಖಂಡತೆಯೊಳಗೆ ಬೇರುಬಿಟ್ಟು ಬೆಳೆದಿದ್ದಾರೆ. ರಾಗಿ ಮತ್ತು ಕನಕದಾಸರು

ರಾಮನಲ್ಲಿ ತಮ್ಮನ್ನು ಕಂಡುಕೊಳ್ಳುವ ಕೃತಾರ್ಥತೆಗಾಗಿ ಕಾಯುತ್ತಿದ್ದಾರೆ. ಇದು ಒಟ್ಟಿಗೆ ರಾಗಿ ಮತ್ತು ಕನಕದಾಸರ ತಪಸ್ಸು ಅಥವಾ ಉನ್ನತ ಸಂಸ್ಕೃತಿಗೆ ಸಮಾನರಾಗಿ ಸ್ಪಂದಿಸುವ, ಬದುಕುವ ಹಠದ ಪ್ರತಿಭಟನೆ.

**೩. ೩. ರಾಮಧಾನ್ಯ ಚರಿತ್ರೆ–ದೇಜಗೌ ಮತ್ತು ಚಿ. ಮೂ.**

ರಾಮಧಾನ್ಯ ಚರಿತ್ರೆಯ ಧ್ವನಿಯನ್ನು ಗುರುತಿಸುವಾಗ ನಾನು ಡಾ. ದೇ. ಜವರೇಗೌಡರು ಮತ್ತು ಡಾ. ಎಂ. ಚಿದಾನಂದ ಮೂರ್ತಿಯವರ ಧ್ವನಿ ವಿಶ್ಲೇಷಣೆಯನ್ನು ಪರಿಶಿಲಿಸದೆ ಮುಂದೆ ಹೋಗಲಾಗದು. ಬೇರೆಯವರು ಈ ನಿಟ್ಟಿನಲ್ಲಿ ಬರೆದಿದ್ದರೂ ಈ ಇಬ್ಬರ ಲೇಖನಗಳು ಗಮನಾರ್ಹವಾಗಿವೆ ಎಂಬ ಕಾರಣಕ್ಕೆ ಅವರು ನಡೆದ ಹೆಜ್ಜೆ ಗುರುತುಗಳ ಹಿಂದೆ ನಡೆದು ಹೋಗುವುದು ಒಳಿತೆಂದು ಭಾವಿಸಿದ್ದೇನೆ.

**ಡಾ. ದೇ. ಜವರೇಗೌಡರು ೧. ಕನಕದಾಸರ ಕುರಿತು**

"ಹರಿದಾಸ ಪರಂಪರೆಯ ಮತ್ತು ದಾಸಸಾಹಿತ್ಯದ ಅಶ್ವಿನೀ ದೇವತೆಗಳಲ್ಲೊಬ್ಬರೆಂದೂ, ಯುಗಪ್ರವರ್ತಕರೆಂದೂ, ಕ್ರಾಂತಿಕಾರಕರೆಂದೂ ಖ್ಯಾತನಾಮರಾದ ಕನಕದಾಸರು.......ಯಾವ ಮತವನ್ನೂ ದ್ವೇಷಿಸದೆ, ಯಾವ ಮತಕ್ಕೂ ಅಂಟಿಕೊಳ್ಳದೆ, ಸರ್ವಮತಗಳನ್ನು ಏಕಪ್ರಕಾರವಾಗಿ ಗೌರವಿಸುತ್ತ, ಆತ್ಮೋದ್ಧಾರ ಸಾಧನೆಯ ಗುಂಗಿನಲ್ಲಿ ದೀನದಲಿತರ ಯೋಗಕ್ಷೇಮವನ್ನು ಮರೆಯದೆ, ಭಕ್ತಿಸಂಬಂಧವಾದ ಕೀರ್ತನೆಗಳ ಜೊತೆಗೆ ಶ್ರೇಷ್ಠವಾದ ಕಾವ್ಯಗಳನ್ನು ರಚಿಸುವುದರ ಮೂಲಕ ಜನಸೇವೆ ಜನಾರ್ಧನ ಸೇವೆಗಳೆರಡನ್ನೂ ಯಶಸ್ವಿಯಾಗಿ ಕೈಕೊಂಡ ಸಾಧಕ ಶ್ರೇಷ್ಠರು"

**೨. ರಾಮಧಾನ್ಯ ಚರಿತೆಯ ಕುರಿತು**

"ಇದೊಂದು ರೂಪಕ ಕತೆ (Allegory) ; ..............." "ಶತಶತಮಾನಗಳಿಂದ ಕಾಲಕಸವಾಗಿ ಹೇಯ ಜಂತುಗಳಂತೆ ಬಾಳುತ್ತಿರುವ ದಲಿತ ಜನರ, ಎಲ್ಲ ಯುಗಗಳ ಎಲ್ಲ ದೇಶಗಳ ನತದೃಷ್ಟ ನಿಮ್ನ ಜನಾಂಗಗಳ ಪ್ರತಿನಿಧಿಯಾಗಿ, ನರೆದಲೆಗನಾಗಿ ದಾಸರು ಖಂಡನೆಯ ಖಡ್ಗವೆತ್ತಿದ್ದಾರೆ.

"ಇದೊಂದು ಸುಂದರವಾದ ಮತ್ತು ಕಾಂತಿಯುತವಾದ ವಿಡಂಬನ ಕಾವ್ಯ. ಬಿಂಕಗುಳಿಗಳ ಮತಾಂಧರ ಮತ್ತು ಪಟ್ಟಭದ್ರ ಹಿತಾಸಕ್ತರ ಮೂಗುಕೆತ್ತಿ, ಅವರ ಓರೆಕೋರೆಗಳನ್ನು ತಿದ್ದಬೇಕೆಂಬುದೇ ಕವಿಯ ಪ್ರತಿಜ್ಞೆಯಾಗಿದೆ ; ಜೊತೆಗೆ

ಈ ಓರೆಕೋರೆಗಳು ಸಾಮಾನ್ಯರಿಗೆ ಗ್ರಹಿಕೆಯಾಗಿ ಅವರು ಎಚ್ಚತ್ತುಕೊಳ್ಳಬೇಕೆಂಬುದು ಅವನ ಗ್ರಹಿಕೆಯಾಗಿದೆ.

"ಕರ್ತವ್ಯಪ್ರಜ್ಞೆ, ಸತ್ಯನಿಷ್ಠೆ, ಲೋಕಕಾರುಣ್ಯ, ನೈತಿಕಶ್ರದ್ಧೆ, ಮೇಲಾಗಿ ಧರ್ಮ ಕೋಪ–ಇವು ಆ ವಿಡಂಬನೆಯ ಹಿಂದಿರುವ ಮೂಲಭೂತವಾದ ಪ್ರೇರಕ ಪ್ರವೃತ್ತಿಗಳು."

ಪೀಠಿಕೆಯಿಂದ : ಸಂ. ದೇ ಜವರೇಗೌಡ, ಪ್ರ : ಶ್ರೀ ಕನಕದಾಸ ನಾಲ್ಕನೆಯ ಶತಮಾನೋತ್ಸವ ರಾಜ್ಯ ಸಮಿತಿ, ೧೯೬೫.

**ಡಾ. ಎಂ. ಚಿದಾನಂದಮೂರ್ತಿಯವರು**

**೧. ಕನಕದಾಸರ ಕುರಿತು**

"………ಕನಕದಾಸ ಮೇಲ್ವರ್ಗದ ಜನ ತನ್ನನ್ನು ಒಪ್ಪಿಕೊಳ್ಳುವ ಮುನ್ನ ಅವರಿಂದ ತಿರಸ್ಕಾರ ಅವಹೇಳನಗಳನ್ನು ಅನುಭವಿಸಿದನೆಂಬಲ್ಲಿ ಅನುಮಾನ ಕಾಣದು ಅವನ ಜಾತಿ ಪೆಡಂಭೂತದಂತೆ ಅವನ ಜೀವನದುದ್ದಕ್ಕೂ ಕಾಡಿದ್ದರೆ ಆಶ್ಚರ್ಯವಿಲ್ಲ. ಈ ಹಿನ್ನೆಲೆಯಲ್ಲಿ ಅವನ ರಾಮಧಾನ್ಯ ಚರಿತ್ರೆ ಕೃತಿಯ ವಸ್ತು ಬಹು ಅರ್ಥಪೂರ್ಣವಾಗಿ ತೋರುತ್ತದೆ."

**೨. ರಾಮಧಾನ್ಯ ಚರಿತ್ರೆಯ ಕುರಿತು**

" 'ರಾಗಿ' ಎಂಬ ಹೆಸರನ್ನು ಭಾಷಿಕವಾಗಿ ವಿವರಿಸಲು ಮತ್ತು ಅದು ಬಡಜನರ ಆಧಾರ ಎಂಬುದನ್ನು ಸ್ಥಾಪಿಸಲು ಹುಟ್ಟಿಕೊಂಡ ಪುರಾಣ (Myth) ಇದು ಎಂಬಲ್ಲಿ ಅನುಮಾನವಿಲ್ಲ.

"ಈ ಕೃತಿಯ ಮಹತ್ವವನ್ನು ಮೂರು ಬಗೆಗಳಲ್ಲಿ ಗುರುತಿಸಬಹುದು.

೧. ಕನಕದಾಸರ ಆತ್ಮ ಚರಿತ್ರಾತ್ಮಕ ಕೃತಿಯಾಗಿ.

೨. ಅಲಿಗರಿ (allegory) ಕತೆಯಾಗಿ

೩. ವರ್ಗಹೋರಾಟವನ್ನು (class struggle) ಚಿತ್ರಿಸುವ ಕೃತಿಯಾಗಿ."

ಚಿದಾನಂದಮೂರ್ತಿಯವರ ಇನ್ನೂ ಕೆಲವು ಅಭಿಪ್ರಾಯಗಳನ್ನು ಕೆಳಗಿನಂತೆ ಸಂಗ್ರಹಿಸಬಹುದು.

೧. "ಎಲ್ಲ ಧಾನ್ಯಗಳಿಗಿಂತ ರಾಗಿಯೆ ಶ್ರೇಷ್ಠವೆಂಬ ರಾಮನ ತೀರ್ಮಾನ, ವ್ಯಾಸರಾಯರು ತಮ್ಮ ಶಿಷ್ಯರಲ್ಲೆಲ್ಲ ಕೆಳಜಾತಿಯ ಕನಕದಾಸನೇ ಶ್ರೇಷ್ಠ ಎಂದು ಎತ್ತಿ ಹಿಡಿದಿದ್ದನ್ನು ಸೂಚಿಸುವಂತೆ ತೋರುತ್ತದೆ."

೨.'ಶೂದ್ರಾನ್ನವಾದ ರಾಗಿಯೊಡನೆ ಕನಕದಾಸನು ತನ್ನಂತಹ ಕುಲಹೀನರನ್ನು ಸಮೀಕರಿಸಿರುವಂತಿದೆ.'

೩.'ಬತ್ತ ರಾಗಿಯನ್ನು ಕುಲಹೀನ ಶೂದ್ರಾನ್ನ ಎಂದು ಕುಚೋದ್ಯ ಮಾಡುವುದರಲ್ಲಿ ಕನಕದಾಸ ಮೇಲುವರ್ಗದವರಿಂದ ಪಡೆದ ಅನುಭವವಿದೆ.'

೪.'ರಾಗಿಯ ಮೂಲಕ ಮಾತ್ರವಲ್ಲದೆ ರಾಮನ ಬಾಯಿಯಲ್ಲಿಯೂ ಬತ್ತವನ್ನು ಅಲ್ಲಗಳೆಯಿಸುವುದರ ಮೂಲಕ ತನಗೆ ಗೊತ್ತಿಲ್ಲದೆಯೇ ಒಂದು ಬಗೆಯ ಮಾನಸಿಕ ಸಮಾಧಾನವನ್ನು ಅನುಭವಿಸಿರಬಹುದು'.

೫.'ಮಾನವೀಯತೆಯ ಪ್ರತಿಪಾದನೆ ಈ ಕತೆಯ ಪ್ರಮುಖ ಉದ್ದೇಶವಾಗಿದೆ.'

೬.'...ಇಲ್ಲಿನ ಸಮಸ್ಯೆ ಕೆಳಜಾತಿ ಮೇಲುಜಾತಿ ಅಥವಾ ಶೂದ್ರ ಶೂದ್ರೇತರ ಜಾತಿಗಳ ಕಲಹಕ್ಕೆ ಸಂಬಂಧಿಸಿದ್ದು, ಮತ್ತು ಅವರ ಜೊತೆ ಜೊತೆಗೇ ಬಡವ ಶ್ರೀಮಂತರ ಹೋರಾಟಕ್ಕೂ ಕೆಳವರ್ಗದವರ ಎಚ್ಚರ ಮತ್ತು ಪ್ರತಿಭಟನೆಗೂ ಸಂಬಂಧಿಸಿದ್ದು. ಆ ದೃಷ್ಟಿಯಿಂದ 'ರಾಮಧಾನ್ಯ ಚರಿತ'ದ ಕತೆ ಸೂಕ್ಷ್ಮ ವಿಶ್ಲೇಷಣೆಗೆ ಅರ್ಹವಾದುದು.'

'ರಾಗಿಯ ಸಿಡಿಲ ಗರ್ಜನೆ ಎಚ್ಚತ್ತ ಕೆಳಜನರ ಉತ್ಸಾಹ ಕೇಕೆ ; ಹೊಸದಾಗಿ ದೊರೆತ ಸ್ಥಾನಮಾನಗಳ ವಿಜಯಘೋಷವೂ ಆಗಿದೆ.'

**೩. ತಮ್ಮ ಈ ಲೇಖನ–ಅಭಿಪ್ರಾಯದ ಬಗ್ಗೆ ಹೇಳುತ್ತಾರೆ ;**

೧. ಬತ್ತರಾಗಿಗಳ ಜಗಳದ ಕತೆಯಲ್ಲಿ ಆಧುನಿಕ ಕಾಲದ ಸಂಗತಿಗಳನ್ನು ಆರೋಪಿಸಿ, ವಾಸ್ತವವಾಗಿ ಇಲ್ಲದ್ದನ್ನು ಹುಡುಕುವ ಪ್ರಯತ್ನವನ್ನು ನಾನು ಇಲ್ಲಿ ಮಾಡಿಲ್ಲ, ನನ್ನ ಮೇಲಿನ ವ್ಯಾಖ್ಯಾನಕ್ಕೆ, ಕೃತಿಯಲ್ಲಿಯೇ ಸ್ಪಷ್ಟ ಸೂಚನೆಗಳಿವೆ."

೨."ರಾಗಿಯ ವಿಜಯ ಜನಸಾಮಾನ್ಯರ ವಿಜಯವೂ ಹೌದು."

೩."ಹೀಗಾಗಿ 'ರಾಮಧಾನ್ಯ ಚರಿತೆ' ಕನಕದಾಸರ ಪೂರ್ಣಾಭಿವ್ಯಕ್ತಿಯ ಕೃತಿಯಾಗಿದೆ";

'ರಾಮಧಾನ್ಯ ಚರಿತ್ರೆಯ ಸಾಮಾಜಿಕ ಧ್ವನಿ' ಡಾಃ ಎಂ. ಚಿದಾನಂದ ಮೂರ್ತಿ "ಸುನಂದಾಭಿನಂದನ" ಎಂಬ ಅಭಿನಂದನ ಗ್ರಂಥದಿಂದ 'ಕನಕ ಕಿರಣ' ೧೯೮೨ ಕೃತಿಗೆ ಸಂ. ಕಾ.ತ. ಚಿಕ್ಕಣ್ಣ, ಪ್ರ : ಕಾಳಿದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು ಇವರು ಆಯ್ದುಕೊಂಡಿರುವುದರಿಂದ ಉದ್ಧೃತ ಪು. ೯೧–೧೦೦.

**ಡಾ. ಎಚ್. ಜೆ. ಲಕ್ಕಪ್ಪಗೌಡರು**

"........ಈ ಕ್ಷೇತ್ರದಲ್ಲಿ ಕೃಷಿಮಾಡಿದವರು ಬಹುಮಟ್ಟಿಗೆ

ಸಂಪ್ರದಾಯಶೀಲರಾದ ಪರಂಪರೆಯನ್ನು ಪ್ರಶ್ನಿಸದೆ ಒಪ್ಪಿಕೊಂಡ ನೋವು ಕಾವುಗಳಿಂದ ಸ್ಪಂದಿಸದ ಬಂಡಾಯ ದೃಷ್ಟಿಯಿಲ್ಲದ ಮೇಲುವರ್ಗದ ಜನ. ಇದಕ್ಕೆ ಒಂದೇ ಅಪವಾದ ಕನಕದಾಸರು." 'ಕನಕ ಕಿರಣ', ಪು. ೧೧೪, ೧೯೮೨

**ಶ್ರೀ ಜ್ಯೋತಿ ಹೊಸೂರ**

"ವರ್ಗ ಸಂಘರ್ಷವನ್ನು ಪ್ರತಿಪಾದಿಸುವ ವಿಷಯವನ್ನು ಆಯ್ದುಕೊಂಡು ಕಾವ್ಯ ರಚಿಸಿದ ಇನ್ನೊಬ್ಬ ಕವಿ ಹಳಗನ್ನಡ ಕಾಲದಲ್ಲಂತೂ ನಮಗೆ ಸಿಗುವುದಿಲ್ಲ."

'ಕನಕದಾಸ ಜೀವನ ವಿಚಾರ', ಜ್ಯೋತಿ ಹೊಸೂರ, ಪು. ೧೯, ೧೯೮೩

**ಕಾ. ತ. ಚಿಕ್ಕಣ್ಣ**

"ಈ ಸಮಾಜಕ್ಕಾಗಿ ಸಮಾಜ ನಿರ್ಮಿತ ಅಸಮಾನತೆಗಳ ನಿರ್ಮೂಲನಕ್ಕಾಗಿ ಮಾನವ ಧರ್ಮದ ಶ್ರೇಷ್ಠತೆಗಾಗಿ ಸಹಜವಾಗಿ ಸ್ಪಂದಿಸಿದ ಕೀರ್ತನಕಾರ, ಕವಿ–ಅವರು."

ಸಂಪಾದಕನ ಮಾತು 'ಕನಕಕಿರಣ' ೧೯೮೨

**ಡಾ. ಹಾ. ಮಾ. ನಾಯಕ**

"ಶಕ್ತಿಸಂಪನ್ನವಾದ ವ್ಯಕ್ತಿತ್ವ ಸಂಪ್ರದಾಯವನ್ನು ಮೀರಿ ಬೆಳೆಯುತ್ತದೆಂಬುದಕ್ಕೆ ಕನಕದಾಸರೊಂದು ಉಜ್ವಲ ಉದಾಹರಣೆ." ಮೆಚ್ಚು ಮಾತು 'ಕನಕಕಿರಣ'

ಸಂ. ಕಾ. ತ. ಚಿಕ್ಕಣ್ಣ, ೧೯೮೨

### ೩. ೪. ದೇ ಜ ಗೌ–ಚಿಮೂ, ಆಚೆ–ಈಚೆ

ಮೇಲಿನ ಲೇಖಕರು ಕನಕದಾಸರ ಬಂಡಾಯಕ್ಕೆ ಕಾರಣವಾದ ಅಂಶಗಳನ್ನು ಗುರುತಿಸಿದ್ದಾರೆ; ಅವರ ಬಂಡಾಯವನ್ನಲ್ಲ. ಅದನ್ನು ಸೂಕ್ಷ್ಮವಾಗಿ ವಿವೇಚಿಸ ಹೊರಟ ಪ್ರತಿ ಲೇಖಕ ತನ್ನ ಪರಿಮಿತಿಗೆ ಒಳಗಾಗಿ ಮತ್ತೇನನ್ನೋ ಹೇಳತೊಡಗುತ್ತಾನೆ. ನನಗೂ ಆ ಪರಿಮಿತಿ ಇದ್ದೇ ಇದೆ. ಡಾ. ದೇಜಗೌ ಅವರು ಕನಕದಾಸರ ಕೃತಿ ರಾಮಧಾನ್ಯ ಚರಿತೆಯನ್ನು ಬಹಳವಾಗಿ ಇಷ್ಟಪಟ್ಟಿದ್ದಾರೆ. ಆ ಕೃತಿಯ ಮತ್ತು ಕನಕದಾಸರ ಕುರಿತ ಅಭಿಪ್ರಾಯವೆ ಸಾಕ್ಷಿ. ಇನ್ನೂ ಮುಂದೆ ಹೋಗಿ ಅವರ ಬರವಣಿಗೆಯಲ್ಲಿ ಕನಕದಾಸರ ಬಂಡಾಯವನ್ನು ವಿಸ್ತರಿಸಿದ್ದಾರೆ ಎನಿಸುತ್ತದೆ. ಇನ್ನೂ ಮುಂದೆ ಹೋದ ಡಾ. ಚಿದಾನಂದಮೂರ್ತಿಯವರು ಕನಕದಾಸರನ್ನು ತಾವು ಬದುಕುತ್ತಿರುವ ಸಮಕಾಲೀನ ಸಾಮಾಜಿಕ ಚಿಂತನೆಗಳ ಜೊತೆಗೆ ಬಹುವಾಗಿ ಸಮೀಕರಿಸಿದ್ದಾರೆ. ಕನಕದಾಸರ ಬಂಡಾಯ ಶೂದ್ರ

ಶೂದ್ರೇತರ ಎನ್ನುವಷ್ಟು ಸರಳವಲ್ಲ. ಕನಕದಾಸರ ಮಾತಿನ ಪ್ರತಿಭಟನೆಯಂತೆ ನಮ್ಮ ಈ ಥರದ ವಿಮರ್ಶೆ ಕೂಡ ವಿಮರ್ಶೆಯ ಬಂಡಾಯ ಆಗಿ ಬಿಡಬಹುದಾದ ಸಾಧ್ಯತೆಗಳು ಹೆಚ್ಚು. ಕನಕದಾಸರ ರಾಮಧಾನ್ಯ ಚರಿತ್ರೆಯಾಗಲಿ ಅವರ ಕೆಲವು ಕೀರ್ತನೆಗಳ ಭಾಷೆ–ಭಾವ ಆಗಲಿ, ಅಷ್ಟಕ್ಕೆ ಅವರ ಬಂಡಾಯ ಸೀಮಿತವಾಗುವುದಿಲ್ಲ. ಅವರ ಒಟ್ಟು ಬದುಕೆ ; ಅವರು ಸ್ವೀಕರಿಸಿದ ಹಾಗೂ ತಿರಸ್ಕರಿಸಿದ ಒಟ್ಟು ಮೌಲ್ಯಾತ್ಮಕ ಬದುಕೇ ಬಂಡಾಯುವಾಗುತ್ತದೆ. ವೇಷಧಾರಿಗಳನ್ನು ವಿರೋಧಿಸುವುದಕ್ಕಿಂತ ತಾನು ದಾಸರ ದಾಸ, ಕೀಳುದಾಸ, 'ಕುನ್ನಿದಾಸ', 'ಮಾದಿಗದಾಸ' ಆಗುವ ಪರಿ ಕನಕದಾಸರು ತಮಗೆ ತಾವೇ ಒಂದು ಬಂಡಾಯದ ಪ್ರತಿಭಟನೆ ಆಗಿದ್ದಾರೆ. ಶೂದ್ರ ಸಮೂಹಕ್ಕೇ ಒಂದು ಭಯಂಕರ ಬಂಡಾಯ ಆಗಿದ್ದಾರೆ. ನಮ್ಮ–ನಿಮ್ಮೆಲ್ಲರ ಬಂಡಾಯ ಆಗಿದ್ದಾರೆ. ಬಂಡಾಯ ಮಾಡುವ, ಆ ಬಗ್ಗೆ ಮಾತನಾಡುವ, ಬರೆಯುವ ಸಂದರ್ಭದಲ್ಲಿ ಕನಕದಾಸರನ್ನು ಅಸ್ತ್ರ ಶಸ್ತ್ರವನ್ನಾಗಿ ಬಳಸಿಕೊಳ್ಳುವ ನಮ್ಮ ವ್ಯಕ್ತಿತ್ವದಲ್ಲಿ ಕನಕದಾಸರಂಥ ಅನೇಕ ಸಾಂಪ್ರದಾಯಿಕ ಬಂಡಾಯಗಾರರಿದ್ದಾರೆ ಅವರು ತಮ್ಮ ಮೂಲ ಜಾತಿಯನ್ನು ತಿರಸ್ಕರಿಸಿದಾಗ ಕೂಡ ದಾಸತ್ವವನ್ನು ಹೆಮ್ಮೆಯಿಂದ ಒಪ್ಪಿಕೊಂಡಾಗ ಕೂಡ ಅವರನ್ನು ನಮ್ಮವರೆಂದು, ನಮ್ಮ ವರ್ಗದ ಆದರ್ಶ ಪಿತೃವೆಂದು ಒಪ್ಪಿಕೊಳ್ಳುವಲ್ಲಿ ಕನಕದಾಸರು ಮತ್ತು ನಾವು ಮುಗ್ಧ ಬಂಡಾಯಗಾರರಾಗುತ್ತೇವೆ, ನಾವು ; ಬರೆಯುತ್ತಿರುವ ಜನ ಕನಕದಾಸರನ್ನು ನಮ್ಮ ಬಂಡಾಯಕ್ಕೆ ಅನ್ವಯಿಸಿಕೊಂಡರೆ ಅದೇ ನಮ್ಮ ಜನ ಅವರನ್ನು ಮಹಾತ್ಮರೆಂದು ಭಕ್ತಿಯಿಂದ ನಮಿಸುತ್ತಾರೆ. ಕನಕನ ಕಿಂಡಿಯ ಹೊರಗೆ ಅವರನ್ನು ಕಂಡಾಗ ಕೂಡ ನಮಗೆ ಏನೋ ಒಂದು ಬಗೆಯ ನೆಮ್ಮದಿ–ಸಿಟ್ಟು ಉಂಟಾಗುತ್ತದೆ. ಅವರನ್ನು ಕುರಿತು ಬರೆದು, ಆರಾಧಿಸಿ ಆಚರಿಸಿದರೆ ನಮಗೆ ನೆಮ್ಮದಿ–ಸಂತೋಷ ಆಗುತ್ತದೆ. ಈ ಅಖಂಡ ಭಾರತೀಯ ಸಂಘರ್ಷದ ಸಂದರ್ಭದಲ್ಲಿ ಕನಕದಾಸರು ಬಂಡಾಯಗಾರರು. ಅವರ ಬಂಡಾಯವನ್ನು ಅವರ ಕೃತಿಗಷ್ಟೆ ಸೀಮಿತಮಾಡಿ ಮಾತನಾಡುವುದು ಕನಕದಾಸರನ್ನು ಸರಿಯಾಗಿ ಅರ್ಥಮಾಡಿಕೊಂಡಂತೆ ಆಗುವುದಿಲ್ಲ.

**೩. ೫ ರಾಗಿ–ರಾಘವ ; ಕನಕದಾಸರು**

ರಾಗಿ ರಾಘವನಾಗುವ ಪ್ರಕ್ರಿಯೆ ಕನಕದಾಸರ ಜೀವನ ಪ್ರಕ್ರಿಯೆಯ ಸಂಕೇತ ಎನ್ನುವುದು ಸಂದರ್ಭಕ್ಕೆ ಸೂಕ್ತವಾದ ಚಿಂತನೆ ಹೌದು. ಒಟ್ಟಾಗಿ ಕನಕದಾಸರು–ರಾಗಿ ಮತ್ತು ಅವರ ಬದುಕು ಭಾರತೀಯ ಪರಂಪರೆಯೊಳಗೆ

ಸಿಡಿಸಿದ ಬಂಡಾಯಕ್ಕೆ ಸಂಕೇತವಾಗುತ್ತದೆ. ಆದಕಾರಣ ಕನಕದಾಸರ ಕೃತಿಗಳು ಅವರ ಬಂಡಾಯಕ್ಕೆ ಕೇವಲ ದಾಖಲಾದ ಉದಾಹರಣೆಗಳು. ಕನಕದಾಸರ ಸಾಹಿತ್ಯ–ಮೇಲ್ವರ್ಗದ ಒಳಕ್ಕೆ ಮಾಡುತ್ತಿರುವ ಪ್ರವೇಶವೇ ಒಂದು ಬಂಡಾಯ. ಅವರ ಬಗ್ಗೆಯ ದಂತಕಥೆಗಳು ಮತ್ತು ಆ ಸಂದರ್ಭಕ್ಕೆ ದೊರೆಯುತ್ತಿರುವ ಹೇಳಿಕೆ, ನುಡಿಗಟ್ಟು ಇತರರ ಹೇಳಿಕೆಗಳಿಂದ ಅದನ್ನು ತಿಳಿಯಬಹುದಾಗಿದೆ ಈ ಎಲ್ಲ ಸ್ಥಿತಿ–ಗತಿಗಳ ಪರಿಣಾಮವೆ 'ರಾಮಧಾನ್ಯ ಚರಿತ್ರೆ'. ಇಲ್ಲಿ ಬಂಡಾಯದ ಪ್ರಶ್ನೆ ಎಂದರೆ ಮಾನ್ಯತೆಯ ಪ್ರಶ್ನೆ : ಊಟದ ಪ್ರಶ್ನೆ ಅಲ್ಲ. ಕನಕದಾಸರದೂ ಇದೇ ಪ್ರಶ್ನೆಯಾಗಿತ್ತು ; ಈ ಪ್ರಶ್ನೆ–ಪರಿಹಾರದ ಪ್ರತಿಕ್ರಿಯೆಯೆ ಕಾವ್ಯ ಮೂಲ ಮತ್ತು ಸತ್ವ. ಗಮನಿಸಿ :

ವ್ರೀಹಿ : ಏನೆಲವೊ ನರೆದಲೆಗ
ನೀನು ಸಮಾನನೇಯೆನಗೆ
ಕುಲಹೀನ ನೀನು
ಮತಿಹೀನ ನೀನು
ನಿಕಾಕೃತ
ಶೂದ್ರಾನ್ನ
ಬಾಹಿರ
ನೀನಾವ ಮಾನ್ಯ
ಅಶುಭ
ಅಯೋಗ್ಯ
ಭ್ರಷ್ಟ
ರಾಜರಿಗೆ
ಶಿಶುಗಳಿಗೆ
ಬ್ರಹ್ಮನಿಗೆ
ಭೂಸುರರಿಗೆ
ಪುಣ್ಯಕ್ಕೆ
ಸೇಸೆಗೆ
ಶಾಸ್ತ್ರಕ್ಕೆ
ಗಂಧಾಕ್ಷತೆಗೆ
ಮಂತ್ರ–ತಂತ್ರಕ್ಕೆ

ಅಕ್ಷತೆಗೆ
ಮಂಗಳಕ್ಕೆ
ಸಿರಿಗೆ ಸಂಪತ್ತಿಗೆ–ನಾನು

| | | | |
|---|---|---|---|
| ಚಂದನ | ಸಮಾನ | x | ಕಟ್ಟಿಗೆ–ನೀನು |
| ಗೋಹಾಲು | ” | x | ಕುರಿಹಾಲು |
| ಹನುಮ | ” | x | ಕಪಿ |
| ಸುರನದಿ | ” | x | ಹಳ್ಳ |
| ಗರುಡ | ” | x | ಹದ್ದು |
| ಹಂಸ | ” | x | ಬಕ |
| ಕೋಗಿಲೆ | ” | x | ಕಾಗೆ |

ಸಿಡಿಲ ಘರ್ಜನೆಯಂತೆ ನುಡಿದನು ನರೆದಲೆಗ–
ಭಂಡ
ಕಡುಜಡ
ಸತ್ವಹೀನ
ಬಡವರ ವಿರೋಧಿ
ಪತ್ಯಾನ್ನ
ಹೆಣದತುತ್ತು
ನಿರರ್ಥಕ
ಸೇವಕ
ದುರಾತ್ಮ
ಹುಲುಧಾನ್ಯ
ನಿರ್ದಯಿ
ಮಧುಪಾನ
ದುರ್ಮತಿಗೇಡಿ
ನಪುಂಸಕ

ನರೆದಲೆಗನನ್ನು ಮುಂದಿಟ್ಟುಕೊಂಡು ಕನಕದಾಸರು ಇಲ್ಲಿ ಒಂದು ಧರ್ಮಯುದ್ಧವನ್ನೇ ಏರ್ಪಡಿಸಿದ್ದಾರೆ. ವಾಸ್ತವದಲ್ಲಿ ಕನಕದಾಸರು ಮೇಲುವರ್ಗದೊಡನೆ ನಡೆಸಿದ ಧರ್ಮಸಮಾನತೆಯ ಬಂಡಾಯ ಇದು. ತಾವು ಬದುಕಿದ್ದ ಕಾಲಘಟ್ಟದಲ್ಲಿಯ ಸಮಾನತೆ, ಮಾನ್ಯತೆ, ಯೋಗ್ಯತೆಗಳೆಂದರೆ

ಧಾರ್ಮಿಕವಾಗಿ ಇತರರಿಗೆ ಸಮಾನ ಹಾಗೂ ಮಾನ್ಯನಾಗುವುದೇ ಆಗಿತ್ತು. ನಾವು ಈಗ ಪರಿಭಾವಿಸುವ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸಮಾನತೆಯ ಮೌಲ್ಯಗಳು ಅಂದು ಹಣಿಕಿಯೆ ಇರಲಿಲ್ಲ. ಹಾಗಾಗಿ ಕನಕದಾಸರ ಸಂದರ್ಭ ಇವತ್ತಿನ ಸಮಾನತೆಯ ಸಂದರ್ಭಕ್ಕೆ ಸಮಾನ ನೆಲೆಯಲ್ಲಿ ತರ್ಕಿಸುವುದು ಯುಕ್ತವಾಗಲಾರದು. ವಚನ ಚಳುವಳಿಯ ಬಗ್ಗೆ ಮಾತನಾಡುವಾಗ ಬಸವಣ್ಣನವರು ಒಂದು ಧರ್ಮಕ್ಕೆ ಪ್ರತಿಯಾಗಿ ಮತ್ತೊಂದು ಧರ್ಮವನ್ನು ಒಂದು ಪೂಜೆಗೆ ಬದಲಾಗಿ ಮತ್ತೊಂದು ಪೂಜೆಯನ್ನು, ದಾರಕ್ಕೆ ಬದಲಾಗಿ ಭಾರಸಹಿತವಾದ ದಾರವನ್ನು ಯೋಚಿಸಿದರೆಂದೂ, ಆರೋಪ ಮಾಡುತ್ತೇವೆ. ಬಸವಣ್ಣನವರ ಅಥವಾ ವಚನ ಚಳುವಳಿಯ ಪರಿಮಿತಿ ಇದೇ ಆಗಿತ್ತೆಂದೂ. ವರ್ಗ ಸ್ವರೂಪದಲ್ಲಿ ಹುಟ್ಟಿದ ಚಳುವಳಿ ಈ ಪರಿಮಿತಿಯಿಂದಾಗಿ ಒಂದು ಜಾತಿಧರ್ಮವಾಗಿ ಮಾರ್ಪಟ್ಟಿತ್ತೆಂದೂ ಹೇಳುವುದುಂಟು. ಈ ಥರದ ಮಾತುಗಳು ಆ ಸಂದರ್ಭಕ್ಕೆ ಶೂನ್ಯವನ್ನು ಕುರಿತು ಆಡಿದಂತೆ ಆಗುತ್ತವೆ. ಇರುವ ಅವಕಾಶಗಳು ಮತ್ತು ಆದ್ಯತೆಗಳನ್ನು ಅವಲಂಬಿಸಿಯೆ ಮತ್ತೊಂದು ವ್ಯವಸ್ಥೆ ಮರುಹುಟ್ಟು ಪಡೆಯಬೇಕಾಗುತ್ತದೆಯೆ ಹೊರತು ಇಲ್ಲದವುಗಳಿಂದಲ್ಲ. ಕನಕದಾಸರ ಸಂದರ್ಭದಲ್ಲಿ ಕೂಡ ಉತ್ತಮ ಬದುಕು ಅಥವಾ ಪರ್ಯಾಯವೆಂದರೆ ಉತ್ತಮ ಧರ್ಮವೇ ಆಗಿತ್ತು. ಆ ಕಾರಣವಾಗಿಯೆ ಅವರು ಧಾರ್ಮಿಕ ಸಮಾನತೆ, ಕುಲಶ್ರೇಷ್ಠತೆ, ಮತಶ್ರೇಷ್ಠತೆ, ಕುಲಮಾನತೆ ಹಾಗೂ ಸ್ವೀಕೃತ ಕುಲಶೋಧನೆಯಲ್ಲಿ ತೊಡಗಿದರು. ಆದಿಕೇಶವನ ಭಕ್ತರಾದವರಿಗೆ ಯಾವ ಕುಲವೂ ಇಲ್ಲ, ಆದಿಕೇಶವನೆ ಎಲ್ಲ ಎಂಬ ಮಾತುಗಳನ್ನಾಡಿದರು. ರಾಮಧಾನ್ಯ ಚರಿತ್ರೆಯಲ್ಲಾಗಲೀ, ಅವರ ಕೀರ್ತನೆಗಳಲ್ಲಾಗಲಿ ಬ್ರಾಹ್ಮಣರನ್ನು ಅವರು ಭೂಸುರರು ಎಂದೇ ಕರೆಯುತ್ತಾರೆ. ಅವರಿಗೆ ಇರುವ ಅವಕಾಶಗಳನ್ನು ಎಂದೂ ಅವರು ಪ್ರಶ್ನಿಸುವುದಿಲ್ಲ. ಆ ಅವಕಾಶಗಳೂ ತಮಗೂ ಸೇರಿದವು ಎಂಬ ವಾದವೂ ಇಲ್ಲ. ತಾವೂ ಅವರಂತೆಯೆ ಶ್ರೇಷ್ಠರಾಗುವ ಹವಣಿಕೆ ಮಾತ್ರ ಇದೆ. ಈ ಬೇಡಿಕೆ ಒಬ್ಬ ಭಕ್ತನ ವಿನಯ ಸಂಪನ್ನನ ಬೇಡಿಕೆಗೆ ರಾಗಿ 'ರಾಘವ' ನಾಮ ಸಿಕ್ಕಿದ ಮೇಲೆ ಕೂಡ ಅದು ವ್ರೀಹಿಯನ್ನು ಹೀನಾಯವಾಗಿ ಕಾಣುವುದಿಲ್ಲ. ಕರೆದು ಮಾತನಾಡಿಸುತ್ತದೆ, ಸಮಾನತೆಯನ್ನು ಹಂಚಿಕೊಳ್ಳುತ್ತದೆ. ತಲೆಬಾಗಿನಿಂದ ವ್ರೀಹಿಯನ್ನು ಶ್ರೀರಾಮ ಕೂಡ ಸಮಾಧಾನ ಮಾಡುತ್ತಾನೆ. ನಿನ್ನನ್ನು ನಿಂದಿಸಲಿಲ್ಲ ರಾಗಿಗೆ ಇರುವ ವಿಶೇಷ ಸಾಮರ್ಥ್ಯವನ್ನಷ್ಟೆ ತಾನು ಹೇಳಿದೆ, ನೀನು ಯಥಾವಿಧಿ ಸುರರಿಗೆ, ಭೂಸುರರಿಗೆ, ಪೂಜೆ ವ್ರತಗಳೆಂಬ

ಶುಭಕ್ಕೆ ಬೇಕಾದವನು ಎಂದು ಹೇಳುತ್ತಾನೆ. ಈ ಮೂಲಕ ರಾಗಿಯಾಗಿ ಕನಕದಾಸರು ರಾಘವತ್ವವನ್ನು ಪಡೆದು ಸಮಾನ, ಮಾನ್ಯ ಆಗುತ್ತಿದ್ದಾರೆ. ಈ ಅರ್ಥದಲ್ಲಿ ರಾಮಧಾನ್ಯ ಚರಿತ್ರೆ ಮಾನ್ಯತೆ, ಸಮಾನತೆಗಾಗಿ ಸೃಷ್ಟಿಗೊಂಡ ಬಂಡಾಯ ಕೃತಿ ಎಂದೂ ಇದು ಕನಕದಾಸರ ಬಂಡಾಯದ ರೀತಿ ಎಂದೂ ಹೇಳಬಹುದಾಗಿದೆ.

೪

**೪. ೧. ಕೀರ್ತನೆಯಲ್ಲಿ ಬಂಡಾಯ : ಸ್ಥಿತಿ**

ನಮಗೆ ಕನಕದಾಸರ ಸಾಹಿತ್ಯದಲ್ಲಿಯ ಬಂಡಾಯದ ಇತಿಮಿತಿಗಳು ಗೊತ್ತಾಗುವುದು ಅವರ ಕೀರ್ತನೆಗಳಲ್ಲಿ. ಕಾವ್ಯಗಳಲ್ಲಿಯ ಬಂಡಾಯ ಧ್ವನಿಯನ್ನು ಗುರುತಿಸುವಾಗ ರಾಮಧಾನ್ಯಚರಿತ್ರೆಯೊಂದನ್ನು ಇಟ್ಟುಕೊಂಡು ಉಳಿದ ಅವರ ಕಾವ್ಯಗಳನ್ನು ಬಿಟ್ಟು ಬಿಡುತ್ತೇವೆ. ಇಲ್ಲಿ ಲೇಖಕನ ಪರಿಮಿತಿ ಎದ್ದು ಕಾಣುತ್ತದೆ. ಆಗ ನಮಗೆ ನರೆದಲೆಗ ಮತ್ತು ವ್ರೀಹಿಯ ಸಿಟ್ಟಿನ ಸಂವಾದವೇ ಬಂಡಾಯವೆನಿಸಿಬಿಡುತ್ತದೆ. ಇದು ಬಂಡಾಯದ ಬಗ್ಗೆ ನಮಗಿರುವ ಪರಿಮಿತ ಪರಿಕಲ್ಪನೆಯನ್ನೂ ಸೂಚಿಸುತ್ತದೆ. ನಮ್ಮ ಬರವಣಿಗೆಯನ್ನು ಓದುವವರಿಗೆ ಕನಕದಾಸರು ಹೀಗೇಕೆ ತಮ್ಮನ್ನು ಭಾಗಮಾಡಿಕೊಂಡರು ಎನಿಸುತ್ತದೆ. ನಾವು ಕನಕದಾಸರು ಕಾವ್ಯ, ಕೀರ್ತನೆ ಮತ್ತು ದೈವತ್ವದ ಕಡೆಗೆ ಹೊರಟಾಗಲೆ ಬಂಡಾಯಗಾರರಾದರು ಹೇಗೆ ಎಂಬುದನ್ನು ಗುರುತಿಸಬೇಕು. ಶೂದ್ರ ಕಾವ್ಯ ಬರೆದರೆ, ತಪಸ್ಸು ಮಾಡಿದರೆ ತಲೆಕೆಟ್ಟು ಹೋಗುತ್ತದೆ ಎಂದು ನಾನು ಹುಡುಗನಾಗಿದ್ದಾಗ ನಮ್ಮ ಕಡೆಯ ಜನ ಹೇಳುತ್ತಿದ್ದುದನ್ನು ಈಗಲೂ ಜ್ಞಾಪಿಸಿಕೊಳ್ಳುತ್ತೇನೆ. ನಾವು 'ಜನಪದ' ಸಂಬಂಧಿಯಾಗಿ ಆಲೋಚಿಸದಿದ್ದಾಗ ಕವಿಯ, ಹೋರಾಟಗಾರನ ನಿಜವಾದ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳುವಲ್ಲಿ ಸೋಲುತ್ತೇವೆ. ಕನಕದಾಸರ ಬಂಡಾಯ ಧ್ವನಿಯನ್ನು ಗುರುತಿಸುವಾಗ ಅವರನ್ನು ಒಂಟಿಯಾಗಿ ಅವರ ಪರಿಸರ–ಪರಿಸ್ಥಿತಿಯ ಹೊರಗೆ ತೆಗೆದುಕೊಳ್ಳುವುದರಿಂದ ನಾವು ಈ ಬಗೆಯ ಪರಿಮಿತಿಗೆ ಒಳಗಾಗುತ್ತೇವೆ.

ಕೀರ್ತನೆಗಳಲ್ಲಿ ಕನಕದಾಸರ ಕ್ರಮಗತಿಯ ಸಾಧನೆ–ಸಿದ್ಧಿಗಳ ಸ್ತರಗಳಿವೆ. ಅವು ಕನಕದಾಸರನ್ನು ಮೊದಲಿಂದ ಕೊನೆಯವರೆಗೆ ನಮಗೆ ಪರಿಚಯಿಸುತ್ತ ಹೋಗುತ್ತವೆ. ರಾಮಧಾನ್ಯಚರಿತ್ರೆಯಲ್ಲಿ ಕನಕದಾಸರ ಬಂಡಾಯ ಸಾಂಕೇತಿಕವಾಗಿ ನಿರೂಪಿಸಲ್ಪಟ್ಟಿದ್ದರೆ ಕೀರ್ತನೆಗಳಲ್ಲಿ ಸ್ಪಷ್ಟವಾಗಿ ಹಾಗೂ ನೇರವಾಗಿ ವ್ಯಕ್ತವಾಗಿದೆ.

ತಮ್ಮ ಮೂಲ, ಮೊದಲ ಧರ್ಮ–ವೃತ್ತಿ–ನಡತೆಯಲ್ಲಿ ಕನಕದಾಸರು

ಕೊರತೆಯನ್ನು ಕಾಣುವ ಮೂಲಕ ಅವರ ಬಂಡಾಯ ಆರಂಭವಾಗುತ್ತದೆ. ತಮ್ಮ ಅಧರ್ಮೀಯತೆಗೆ ತಾವೇ ಪರೀಕ್ಷೆಯಾಗುವ ಮೂಲಕ ಉದ್ದೇಶಿತ ಧರ್ಮದ ಕಡೆಗೆ ಕನಕದಾಸರು ತುಡಿಯುತ್ತಾರೆ ಮತ್ತು ಬೆಳೆಯುತ್ತಾರೆ. ಅವರ ಹೋರಾಟದ ಸ್ವಭಾವಕ್ಕೆ ಅವರದೆ ಆದ ಕೆಳಗಿನ ಪದ್ಯ ಸಾಂಕೇತಿಕವಾಗಿದೆ ಎಂಬುದು ನನ್ನ ಗ್ರಹಿಕೆ.

"ರಾಕ್ಷಸ ಕುಲದಲಿ ಜನಿಸಿತು ಕೂಸು ।
ರಾಧಾಕೃಷ್ಣರ ಭಜಿಸಿತು ಕೂಸು
ರಾಗ ದ್ವೇಷಗಳ ಬಿಟ್ಟಿತು ಕೂಸು
ರಾಮ ಪದವ ನೆನೆಯುವ ಕೂಸು ॥" ಕ. ದಾ. ಕೀ. ಪು. ೨

ಅವರ ಬಂಡಾಯದ ನೆಲೆ ಇನ್ನೂ ಸ್ಪಷ್ಟವಾಗುವುದು ಹೀಗೆ :

"ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ
ಕುಲವಿಲ್ಲದ ದಾಸ ಕುನ್ನಿದಾಸ ॥
ಮಲಹರ ರಂಗ ನಿನ್ನ ಮನೆಯ ಮಾದಿಗದಾಸ ।
ಸಲೆ ಮುಕ್ತಿಪಾಲಿಸೋ ಆದಿಕೇಶವರಾಯ" ॥ ಕ. ರಾ. ಹಾ. ಪು. ೨.೭

ಕನಕದಾಸರ ಹೆಚ್ಚಿನ ಕೀರ್ತನೆಗಳು ಭಕ್ತಿಪ್ರಧಾನವಾದವು. ಆದರೆ ಭಕ್ತಿ ಬಂಡಾಯ ಎನಿಸಿಕೊಳ್ಳುವುದಿಲ್ಲ, ಅದೊಂದು ಬಗೆಯ ಸಮರ್ಪಣೆ. ದೈವವಿರುದ್ಧ, ಕರ್ಮವಿರುದ್ಧ, ತಾಟಸ್ಥ್ಯದ ವಿರುದ್ಧ, ಜಾತಿವಿರುದ್ಧ, ವರ್ಗವಿರುದ್ಧ, ಹಿಂಸೆ ಅಥವಾ ನೋವು ವಿರುದ್ಧವಾದ ಚಟುವಟಿಕೆಯನ್ನು ನಾವಿಂದು ಬಂಡಾಯದ ದ್ರವ್ಯ ಎಂದು ಗುರುತಿಸಿಕೊಂಡಿದ್ದೇವೆ. ಇದು ಇವತ್ತಿನ ಸ್ಥಿತಿಗೆ ಪ್ರತಿಭಟನೆ. ಕನಕದಾಸರ ಸ್ಥಿತಿಯಲ್ಲಿ ನಿರೀಶ್ವರವಾದಕ್ಕೆ ಪ್ರತಿಭಟನೆಯಾಗಿ ಬಂದದ್ದು ಈಶ್ವರವಾದ. ಇದು ಭಾರತದ ಸ್ಥಿತಿಯಲ್ಲಿ ಹೊಸದಲ್ಲವಾದರೂ ದಾಸರ ಪಂಥದ ಅದರಲ್ಲೂ ಕನಕದಾಸರ ಸಂದರ್ಭದಲ್ಲಿ ಹೊಸದೆನಿಸಿದಂತೆ ತೋರುತ್ತವೆ. ಅದಕ್ಕಾಗಿಯೆ ಕನಕದಾಸರು ತಮ್ಮನ್ನು ಅದರಲ್ಲಿ ತೊಡಗಿಸಿಕೊಂಡರು. ಅವರು ತೊಡಗಿಸಿಕೊಂಡದ್ದು ಹೀಗೆ :

I ಸ್ಥಿತಿ :

೧. ಬ್ರಹ್ಮ **ಲಿಖಿತ ಮೀರಿ*** ಬಾಳ್ದರುಂಟೆ
**ನಿರ್ಮಲ ವೈಷ್ಣವರ** ವಿಧಿಸೋಂಕಲಿಹುದೆ.

---

* ಒತ್ತು ನನ್ನದು

೨. ಆವ ಬಲವಿದ್ದರೇನು **ದೈವಬಲವಿಲ್ಲದವಗೆ**
**ಶ್ರೀವಾಸುದೇವನ** ಬಲ ನಿಜವಾಗಿ ಇಲ್ಲದನಕ.

೩. **ಬಂಟನಾಗಿ** ಬಾಗಿಲಕಾಯ್ವೆ ಹರಿಯ
ವೈಕುಂಠ ಸೊಂಪಿನ ದಾಸರ ಮನೆಯ ॥

೪. **ಕೇಶವನೊಲುಮೆ** ಆಗುವತನಕ ಹರಿ ।
**ದಾಸರೊಳಿರುತಿರು** ಹೇ ಮನುಜ.

೫. **ಭಜಿಸಿ ಬದುಕೆಲೊ** ಮಾನವ
ಅಜಭವೇಂದ್ರಾದಿಗಳು ವಂದಿಸುವ **ಪಾದವನು** ॥

೬. ಬದುಕಿದೆನು ಬದುಕಿದೆನು **ಭವ** ಎನಗೆ ಹಿಂಗಿತು
ಪದುಮನಾಭನ **ಪಾದದೊಲಮೆ** ಎನಗಾಯಿತು ॥

೭. **ದಾಸನಾಗೊ ಭವಪಾಶನೀಗೋ ವಿಶೇಷನಾಗೊ**

೮. **ನೆಚ್ಚದಿರು ಸಂಸಾರ** ನೆಲೆಯಲ್ಲವೀ ಕಾಯ
**ಅಚ್ಯುತನ ನಾಮವನು** ನೆನೆದು ಸುಖಿಯಾಗೊ ॥

**II. ಸ್ಥಿತಿ ಸಮರ್ಥನೆ :**

೧. "ಒಡೆಯ ಬಾಡದಾದಿಕೇಶವನ ನುಡಿಗಳನ್ನು ಸ್ಮರಿಸಿ ಇಂಥ
**ದೊಡದೇವರ** ಮೊರೆಯ ಬಿದ್ದರೆ ಮುಕ್ತಿ ತಪ್ಪದು ॥

೨. ನಾನಾ ಜನ್ಮದಿ ಬಂದ **ನಾಟಕದ ಬೊಂಬೆಯಿದು** ॥

೩. **ದೇವ ಬ್ರಾಹ್ಮಣ** ಗುರು–ಹಿರಿಯರನ್ನು ಜರೆದು ॥

೪. **ಸಾರತತ್ವದಮತವು** ಮೀರಿ ಹೋಹುತಲಿದೆ ॥

೫. **ಪತಿವ್ರತೆಯರೆಂಬುವರು** ಶತಸಹಸ್ರದಲೊಂದು ॥

೬. **ವೇದವಿಪ್ರರು** ತಮ್ಮ ವೃತ್ತಿ ಸ್ವಾಸ್ಥ್ಯವ ಕಳೆದು
ಆಧಾರವಿಲ್ಲದೆ ತಿರಿದು ತಿನ್ನುವರು ॥

೭. **ಹರಿ–ಹರರ ಪೂಜೆಗಳು** ಹರಣಗಳಾದವು ।
ಉರಿ ಮೋರೆ ಚಾಮುಂಡಿ ಶಕ್ತಿಗಳಿಗೆ
ಕುರಿಕೋಣ ನೈವೇದ್ಯ ಧೂಪದೀಪಗಳಿಂದ
ಪರಮಭಕ್ತಿಯ ಮಾಡಿ ಪೂಜಿಸುವರಯ್ಯ ॥

೮. **ಎಕ್ಕನಾತಿ ಎಲ್ಲಮ್ಮ ಮಾರಿದುರ್ಗಿಚೌಡಿಯರ** ।
**ಅಕ್ಕರೆಯಿಂದಲಿ ಪೂಜೆ ಮಾಡಲೇಕೆ** ?

೯. **ತಂಬಿಟ್ಟಿನಾ ದೀಪ ಹೊರಲೇತಕೆ** ?
ಕೊಂಬು ಹೋತು ಕುರಿ–ಕೋಣನ ಬಲಿಗೊಂಬ
**ಕೊಂಬೆ ದೈವಗಳನು ಭಜಿಸದಿರು ಮನವೆ**

೧೦. ಜ್ಞಾನವಿಲ್ಲದೆ **ಹೀನದೈವವ** ಭಜಿಸಲು ।

೧೧. ಎಕ್ಕನಾತಿಯರು ಕಾಟಿಜಕ್ಕಣಿಯರು ಜಲಜೆಯರು ।
ಸೊಕ್ಕಿನಿಂದ **ಸೊಂಟ ಮುರುಕ ಮೈಲಾರ ದೇವರು** ॥
ಮಿಕ್ಕ ಮಾರಿ ಮಸಣಿ, ಚೌಡಿ ಭೈರವದೇವ ಮೊದಲಾದ
**ತಕ್ಕುದೇವರ ಗೊಡವೆ ಬೇಡ ನರಕತಪ್ಪದು** ।

..........................................................................

ಗಾಳಗೊಳರೆಲ್ಲ ಕೂಡಿ ತೊಳದೇವರ ಮಾತಕೇಳಿ ।
**ಹಾಳು ಮಾಡಿ ಕೈಯ್ಯೊಳಿದ್ದ ಹೊನ್ನು ಹಣಗಳ** ॥
**ಬಾಳುತಿಪ್ಪ ಕುರಿಯ ಕೋಣವ ಬೀಳು ಬೀಳು ಕೊರಳ ಕೊಯ್ಸಿ**।
**ಬೀಳಬೇಡಿ ನರಕಕೆಂದು ಹೇಳ ಬಂದೆನೊ** ॥"
ಸುತ್ತಲಿವರ ಮಾತುಕೇಳಿ ಗುತ್ತಿಯ ಎಲ್ಲಮ್ಮಗೊಲಿದು
ಬತ್ತಲಿಂದ ಬಂದವಳ ನೋಡಿ ಎಲ್ಲರು ॥
ಮತ್ತೆ ಬೇವಿನುಡುಗೆಯುಟ್ಟು ಮುಕ್ತಿ ತಾವು ಪಡೆವೆವೆಂಬ ।
**ತೊತ್ತು ಮಾಯಕಾರಿಯವಳಿಗೆ ಛೀ ಥೂ ಎಂಬದು**

೧೨. **ತಿರುಮಂತ್ರವನು ಭಜಿಸು ತಿರುಲಾಂಛನವ ಧರಿಸು** ।
**ಪರಮವೈಷ್ಣವರ ಪಂಕ್ತಿಯ ಸೇರುಮನವೆ** ॥

೧೩. **ತಿದ್ದುವ ಸದಮಲ ವೈಷ್ಣವ ಬರುತಿರೆ ಕಂಡು**
**ಎದ್ದು ನಮಸ್ಕರಿಸಲೊಲ್ಲೆ**............॥

೧೪. **ಮೊಲೆ ಬಿದ್ದ ಹೆಣ್ಣಿನೊಳು ಮೋಹಕ್ಕೆ ಸೊಗಸಹುದೆ** ।
**ಬೆಲೆ ಬಿದ್ದ ಸರಕಿನೊಳು** ಲಾಭವುಂಟೆ ?

೧೫. **ತಿರುಪತಿ** ಯಾತ್ರೆ ಮಾಡುವವ ಮಹಾತ್ಮ

## III ಪ್ರತಿಭಟನೆ !

೧. "ಕುಲಕುಲ ಕುಲವೆನ್ನುತಿಹರೊ ।
ಕುಲವಾವುದು ಸತ್ಯ ಸುಜನರಿಗೆ
**ಕೆಸರೊಳು ತಾವರೆ ಪುಟ್ಟಲು** ಅದತಂದು

**ಕುಸುಮನಾಭನಿಗೆ** ಅರ್ಪಿಸರೇನಯ್ಯ ॥
**ಪಶುವಿನ ಮಾಂಸದೊಳುತ್ಪತ್ತಿಕ್ಷೀರವ**
**ವಸುಧೆಯೊಳಗೆ ಭೂಸುರರುಣ್ಣರೇನಯ್ಯ**

.......................................................

ಆತ್ಮನಾವಕುಲ ಜೀವನಾವ ಕುಲ !"

೨. "ಕುಲ ಕುಲ ಕುಲವೆಂದು ಹೋರಾಡದಿರಿ ನಿಮ್ಮ ।
ಕುಲದ ನೆಲೆಯನೇನಾದರೂ ಬಲ್ಲಿರಾ ?"
(ಭೂಮಿ, ವಸ್ತು, ನೀರು ಇವಕ್ಕೆ ಕುಲವಿಲ್ಲ
ಆದರೆ ಅವು ಎಲ್ಲರಿಗೂ ಯೋಗ್ಯ–ಸಂಗ್ರಹ ನನ್ನದು)
**ಹರಿಯೇ ಸರ್ವೋತ್ತಮ ಹರಿಯೇ ಸರ್ವೇಶ್ವರ**
**ಹರಿಮಯವೆಲ್ಲವೆನುತ ತಿಳಿದು** ॥

೩. (i) **ಪೊಟ್ಟೆಗುಡುಮಗಳೆಲ್ಲ** ಪರಮ ವೈಷ್ಣವರೆ ?
(ii) **ಯೋಗತಪ್ಪಿದರೆಲ್ಲ** ದೇವ ಬ್ರಾಹ್ಮಣರೆ ?
(iii) **ಕಳ್ಳರಿಗೆ ತಾ** ವೀರ ಸ್ವರ್ಗ ದೊರಕುವುದೆ ?
(iv) **ಭಂಗಿಮುಕ್ಕುಗಳೆಲ್ಲ** ಲಿಂಗವಂತರಹುದೆ ?
(v) **ವೇಷಧಾರಿಗಳು** ಸಂನ್ಯಾಸಿಗಳು ಅಹುದೆ ? ಕ.ದಾ–ಹಾ.

ಈ ಮೂರೂ ಪ್ರತ್ಯೇಕ ಸಂದರ್ಭಗಳಲ್ಲಿ ಕನಕದಾಸರು ಹೇಗೆ ವರ್ತಿಸಿದ್ದಾರೆ ಎಂಬುದನ್ನು ಪರೀಕ್ಷಿಸಿ. ಮೊದಲ ಸ್ಥಿತಿಯನ್ನು ನೋಡಿದಾಗ ಅವರು 'ಬ್ರಹ್ಮಲಿಖಿತ' 'ದೈವಬಲ' ಬಂಟತನ', 'ಕೇಶವನ ಒಲುಮೆ', 'ದಾಸತನ', 'ವೈಷ್ಣವತ್ವ', ಪೂಜೆ ಮುಂತಾದವುಗಳನ್ನು ನಂಬಿ, ನಡೆದುಕೊಂಡು "ವಿಶೇಷನಾಗೊ" ಸ್ಥಿತಿಗೆ ಹೊರಟಿದ್ದಾರೆ. ಕಾರಣವಾಗಿ 'ಸಂಸಾರವನ್ನು ನೆಚ್ಚಿ', ಕಾಯವನ್ನು ನಂಬದೆ ಮುಂದೆ ಹೊರಟಿದ್ದಾರೆ. ಇವು ಅವರಿಗೆ "ಮೊಲೆ ಬಿದ್ದ ಹೆಣ್ಣು' ಬೆಲೆಬಿದ್ದ ಸರಕಿನ ಹಾಗೆ.

## ೪.೨ 'ಜನಪದ'ದಿಂದ 'ಜನಪದಕ್ಕೆ'

ಕನಕದಾಸರು ಇದ್ದ ಮೂಲಸ್ಥಿತಿಯಲ್ಲಿ ಭವ, ದಾಸತ್ವ, ಬಂಟತನ–ಈ ಮುಂತಾದವು ನಂಬಿಕೆಗಳೂ ಅಲ್ಲ, ಮೌಲ್ಯಗಳೂ ಅಲ್ಲ. ತಮ್ಮ ಮೂಲ ನಂಬಿಕೆ, ಹಾಗೂ ಧರ್ಮಕ್ಕೆ ಪ್ರತಿಯಾಗಿ, ಪ್ರತಿಭಟನೆಯಾಗಿ ಬಂದುವು. ಈ ಪ್ರತಿರೋಧವೆ ಕನಕದಾಸರ ಇಲ್ಲಿಯ ವ್ಯಕ್ತಿತ್ವ, ತನ್ನ ಮೂಲವನ್ನು ಬಿಡುತ್ತಿರುವ ಅನ್ಯ ಮೂಲವನ್ನು

ಅವಲಂಬಿಸುತ್ತಿರುವ ಮತ್ತು ಅದನ್ನು ತಲುಪಲು ಇರುವ ತೊಡಕುಗಳ ಜೊತೆಗೆ ಸ್ಪರ್ಧಿಸುತ್ತ ಆತಂಕ, ಕಳವಳದಲ್ಲಿ ಮುಳುಗಿದ್ದಾರೆ. ಅವರಿನ್ನೂ ಸಾಧನೆಯ ಒಂದು ಹಂತದಲ್ಲಿದ್ದಾರೆ. ಅದಕ್ಕೆ ಬೇಕಾಗುವ ಮೊದಲ ಅರ್ಹತೆ ಎಂದರೆ ತನ್ನ ಮೂಲವನ್ನು ನಿರಾಕರಿಸುವುದು ಅಥವಾ ನಿವಾರಿಸಿಕೊಳ್ಳುವುದು. ಇದು ಕೇವಲ ಆತ್ಮ–ದೇಹಗಳ ಸಮಸ್ಯೆಯಲ್ಲ 'ಜನಪದ ಬದಲಾವಣೆ'. ಒಂದು ಜನಪದದಿಂದ ಮತ್ತೊಂದು ಜನಪದಕ್ಕೆ ಸ್ಥಿತ್ಯಂತರ ಹೊಂದುವುದು. ಅಂದರೆ ರೂಢಿ ಮೂಲ (orientation)ವನ್ನೇ ಬದಲಾಯಿಸಿಕೊಳ್ಳುವುದು. ಇದು ಮೂಲ ಕಲಿತ ಬದುಕು, ಧರ್ಮ, ಸಂಸ್ಕೃತಿಯನ್ನೇ ಬದಲಿಸಿಕೊಳ್ಳುವ ವಿಷಯ, ಈ ಕೆಲಸವೆಂದರೆ ಅವುಗಳನ್ನು ನಂಬಿಕೆಯಿಂದ ಅಪನಂಬಿಕೆಗಳನ್ನಾಗಿ ಪರಿವರ್ತಿಸುವುದು ಮೊದಲನೆಯ ಹಂತದ ಕ್ರಿಯೆ. ತ್ಯಜಿಸುವುದು ಅಥವಾ ನಿರಾಕರಿಸುವುದು ಎರಡನೆಯ ಹಂತದ ಕ್ರಿಯೆ. ಮೂರನೆಯ ಹಂತದ ಕ್ರಿಯೆ ಅವುಗಳನ್ನು ಅಪಮೌಲ್ಯಗಳೆಂದು ಸಾಧಿಸಿ ಬೇರು ಮೂಲ ತೊಡೆದು ಹಾಕುವುದು. ನಾಲ್ಕನೆಯ ಹಂತದಲ್ಲಿ ತಾನು ಅಪಮೌಲ್ಯೀಕರಿಸಿದ ವಿಷಯಗಳಿಗೆ ಸಮಸಮವಾಗಿ ತಾನು ನಂಬಿ ಬಳಸುತ್ತಿರುವ ನಂಬಿಕೆ ಮೌಲ್ಯ–ಧರ್ಮವನ್ನು ಒತ್ತಿ ಒತ್ತಿ, ಎತ್ತಿ ಎತ್ತಿ ಹೇಳಿ ಸಮರ್ಥಿಸುತ್ತಾ ಹೋಗುವುದು. ಹೀಗಾದಾಗ ಮಾತ್ರ ಸಮರ್ಥ ಪರ್ಯಾಯ ಮತ್ತು ಅದರ ಸ್ವೀಕಾರ ಸಾಧ್ಯವಾಗುತ್ತದೆ. ತತ್ಸಂಬಂಧವಾಗಿಯೆ ಕನಕದಾಸರು ತಾವು ಬದುಕಿನ ಹಿಂದಿನ ಧರ್ಮಕೇಂದ್ರ–ದೈವಗಳನ್ನು 'ಡೊಂಬದೈವ', 'ಹೀನದೈವ', 'ಸೊಂಟಮುರುಕ', 'ಉರಿಮೋರೆ', 'ಏಕನಾತಿ' 'ಠಕ್ಕುದೇವ', 'ಛೀ ಥೂ ಎಂಬುವ' ದೈವ, ನಷ್ಟದ ಬಾಬತ್ತಿನ ದೈವಗಳೆಂದು ನಿರಾಕರಿಸುತ್ತಾರೆ. ಜೊತೆ ಜೊತೆಯಲ್ಲೆ ಕೇಶವನನ್ನು 'ದೊಡ್ಡ ದೇವರು' ಎಂದೂ ಆ ದೈವಸಂಬಂಧಿಗಳನ್ನು 'ದೇವ ಬ್ರಾಹ್ಮಣ' 'ಸಾರಸತ್ವದ ಮತ' 'ವೇದ ವಿಪ್ರರು' 'ಪರಮ ವೈಷ್ಣವ' 'ಸದಮಲ ವೈಷ್ಣವ' ಎಂದೂ ಹೇಳುತ್ತ "ತಿರುಮಂತ್ರವನು ಭಜಿಸು ತಿರುಲಾಂಛನವಧರಿಸು" ಎಂದೂ ನಿರ್ದೇಶಿಸುತ್ತಾರೆ. ದೇವ ಬ್ರಾಹ್ಮಣರನ್ನು ಜರಿಯುವುದು ಸರಿಯಲ್ಲವೆನ್ನುತ್ತಾರೆ. ಸದಮಲ ವೈಷ್ಣವರು ಬಂದರೆ ಎದ್ದು ನಮಸ್ಕರಿಸಬೇಕು ಎನ್ನುತ್ತಾರೆ, ಬೀರನ, ಮೈಲಾರನ, ಯಲ್ಲಮ್ಮನ ಪೂಜೆಯನ್ನು ಹಿಂದೆ ತಳ್ಳಿ 'ಹರಿಹರ ಪೂಜೆಗಳು ಹರಣಗೊಳ್ಳುತ್ತಿವೆ' ಎಂದು ಆತಂಕಗೊಳ್ಳುತ್ತಾರೆ. ಇದು ಅವರು ಅವರಿಗೇ ಪ್ರತಿಭಟನೆಯಾಗಿ, ಭಾರತದ ನಿರಂತರ ಪ್ರತಿಭಟನೆಯ ಒಂದು ಧ್ರುವವಾಗಿ ತಮ್ಮ ಉದ್ದೇಶಿತ ಕೇಂದ್ರವನ್ನು ಎಟುಕಿಸಿಕೊಳ್ಳುವ ಹೋರಾಟದಲ್ಲಿ ತೊಡಗಿದ್ದಾರೆ.

## ೪.೩ ವಿರಾಮದಿಂದ ಪರಿಣಾಮಕ್ಕೆ

ಕನಕದಾಸರ ಪ್ರತಿಭಟನೆಯ ಹಂತ ಅವರಿಗೆ ಅಡ್ಡಿ ಆತಂಕಗಳು ಎದುರಾದ ಪರಿಸ್ಥಿತಿ. ಅವರ ಕಠಿಣ ಪರಿಸ್ಥಿತಿ ಮತ್ತೆ ಮತ್ತೆ ಸಣ್ಣ ಪುಟ್ಟವರಿಂದ, ಮೂರ್ಖರಿಂದ ಪರೀಕ್ಷೆಗೆ ಒಳಗಾದ ಸ್ಥಿತಿ. ಇದು ಒಂದು ಬಗೆಯಲ್ಲಿ. ಭಾರತೀಯ ಶೂದ್ರ ಬ್ರಾಹ್ಮಣನಾಗುವಲ್ಲಿ, ಅರ್ಥಾತ್ ಗುರು ಪರಂಪರೆಗೆ ತಲುಪಬೇಕಾದಲ್ಲಿ ನಿರ್ವಹಿಸಲೇ ಬೇಕಾದ ಪವಾಡ–ಸದೃಶ ಜೀವನನಿರ್ಮಿತಿ ಪ್ರಕ್ರಿಯೆ ; ಪರಿಣಾಮವೆಂಬಂತೆ ಕನಕದಾಸರು ತಮಗೆ ಎದುರಾದ ತಾತ್ವಿಕ ಅರ್ಹತೆ ಅಥವಾ ನೆಲೆ. ಆ ಅಮೂರ್ತ ಸ್ವರೂಪವನ್ನು ಒಡೆಯಲು “ಆತ್ಮ ಯಾವ ಕುಲ ಜೀವವಾವ ಕುಲ!” ಎಂಬ ಸಾಮಗ್ರಿಯೊಡನೆ ಎದ್ದುನಿಲ್ಲುತ್ತಾರೆ. ಕುಲ ಅಷ್ಟೊಂದು ಸರಳ ಗ್ರಾಹ್ಯ ವಿಷಯ ಅದೇ ಕುಲದವರಿಗೂ ಅಸಾಧ್ಯ. ಅದು ಏಕಕಾಲದಲ್ಲಿ ಅರ್ಥ, ಸಂಸ್ಕೃತಿ, ಸಂಸ್ಥೆ ಮತ್ತೆ ಬೇರೇನೋ ಆಗಿರುತ್ತದೆ. ಆದ್ದರಿಂದ ಅದರ ಕಾರ್ಯಗಳನ್ನು ಕೈಗೆತ್ತಿಕೊಂಡು ಜಯ ಸಾಧಿಸಲು ಹೊರಡುತ್ತಾರೆ ಕನಕದಾಸರು. ಕುಲದ ಕಾರ್ಯಸ್ವಭಾವಗಳಾದ ‘ಪೊಟ್ಟೆಗುಡುಮ’ ತನ, ‘ಅಯೋಗ್ಯ ತನ’, ಕಳ್ಳಸ್ವಭಾವ, ‘ಭಂಗಿಮುಕ್ಕು’ತನ ಮತ್ತು ವೇಷಧಾರಿತ್ವವನ್ನು ಹಿಡಿದೆತ್ತಿ ಜಾಲಾಡುತ್ತಾರೆ. ಹೀಗೆ ಮಾತನಾಡುವಾಗ ಕೂಡ ಅವರು ಕುಲವನ್ನು ಸಾರಾಸಗಟು ನಿರಾಕರಿಸುತ್ತಿಲ್ಲ : ಇದು ಬಂಡಾಯಗಾರನ ಸ್ಥಿತಿ ಕೂಡ. ಆಚೆಗೆ ಹೋಗದೆ, ಒಳಕ್ಕೆ ಬರದೆ ತಳಮಳಿಸುವ, ಸಂದಿಗ್ಧಗೊಳ್ಳುವ ಪರಿಸ್ಥಿತಿ, ಇದೇ ಪರಿಸ್ಥಿತಿಯಲ್ಲಿ ಬೆಳೆದರೆ ಬಂಡಾಯಗಾರನೇ ಒಬ್ಬ ಮಹಾಶೋಷಕ ಆಗಬಹುದು. ಆದರೆ ಕನಕದಾಸರು ತಮ್ಮ ಮೂಲಕುಲವನ್ನು ಖಂಡಿತವಾಗಿ ನಿರಾಕರಿಸಿದ್ದಾರೆ. ಅವರು ಸ್ವೀಕರಿಸಹೊರಟಿರುವ ಕುಲದ ಮೂಲವನ್ನು ಮಾತ್ರ ಪ್ರಶ್ನೆ ಮಾಡುವುದಿಲ್ಲ. ಕೆಸರಿನ ಕಮಲ ಕುಸುಮನಾಭನಿಗೆ ಅರ್ಪಿತವಾಗುವ ಮೂಲಕ ಅದು ತನ್ನ ಮೂಲಕಳಂಕವನ್ನು ಕಳೆದುಕೊಳ್ಳುತ್ತದೆ : ಹಸುವಿನ ಮಾಂಸಮೂಲದಿಂದ ಬರುವ ಹಾಲು ಭೂಸುರರ ಉಪಯೋಗದಿಂದ ತನ್ನ ಮೂಲದ ಅಶುದ್ಧಿತ್ವವನ್ನು ಕಳೆದುಕೊಳ್ಳುತ್ತದೆ. ಹಾಗೆ ತಾವು ‘ಶ್ರೇಷ್ಠ ಪರಿಕಲ್ಪನೆಯ ಕೇಂದ್ರಸ್ಥಾನವಾದ ಆದಿಕೇಶವನ ಭಕ್ತ–ದಾಸ ಆಗುವ ಮೂಲಕ ತನ್ನ ಮೂಲ ಕಳಂಕವನ್ನು ಕಳೆದುಕೊಳ್ಳುತ್ತೇನೆ ಎಂದು ದೃಢವಾಗಿ ನಂಬಿದ್ದಾರೆ. ತಿಮ್ಮಪ್ಪ > ಕನಕ ; ಕನಕ > ಕನಕದಾಸ ; ಆಗುವ ಹಾಗೆ ಶ್ರೇಷ್ಠತೆ ಚಲನೆಯಲ್ಲಿ ಕನಿಷ್ಠತೆಗಳು ಕಳಚಿಕೊಳ್ಳುತ್ತವೆಂಬುದು ಕನಕದಾಸರ ಚಿಂತನೆಯಾಗಿದೆ.

ಧರ್ಮಾಂತರ ಪರಿಸ್ಥಿತಿಯಲ್ಲಿ ಮಾತ್ರ ಕನಕದಾಸರು ಬಂಡಾಯಗಾರರು. ಇರುವ ವ್ಯವಸ್ಥೆಯ ವಿರುದ್ಧ ದನಿ ಎತ್ತಿದ ಬಂಡಾಯಗಾರರಲ್ಲ. ಹಾಗೆ

ಯೋಚಿಸುವುದು ಮತ್ತು ವಿಮರ್ಶಿಸುವುದು ಅವರ ಬದುಕು–ಬರಹದ ಸಂದರ್ಭಕ್ಕೆ ಹೊರಗಡೆಯಿಂದ ನೋಡಿದಂತಾಗುತ್ತದೆ. ಇವತ್ತಿನ ಸಂದರ್ಭದಲ್ಲಿ ಶೂದ್ರ ಎಂದ ತಕ್ಷಣ ಅವನು ಅನೇಕ ತತ್ವಗಳಿಗೆ–ವಾದಗಳಿಗೆ ಗ್ರಾಸ ಅಥವಾ ಪ್ರತಿನಿಧಿ ಎಂದು ಭಾವಿಸುವಂತೆ ಕನಕದಾಸರನ್ನು ಭಾವಿಸಲಾಗದು. ಹಾಗೆ ಮಾಡಿದರೆ ಅವರ ಸಾಧನೆ ಮತ್ತು ವ್ಯಕ್ತಿತ್ವವನ್ನು ಅಪಮೌಲ್ಯೀಕರಿಸಿ (devaluate)ದಂತೆ. ಕೃತಿ–ವ್ಯಕ್ತಿತ್ವ ನ್ಯಾಯದ ಮೇಲೆ ಮಾತನಾಡುವುದಾದರೆ ಕನಕದಾಸರನ್ನು ತೀರಾ ಭಾಷಿಕವಾಗಿ ನೋಡಿದಂತೆ ಆಗುತ್ತದೆ.

**ಸಹಾಯಕ ಗ್ರಂಥಗಳು**

೧. ಕನಕದಾಸರ ಕೀರ್ತನೆಗಳು–ಸಂ. ಪಂಡಿತರತ್ನ ವಿದ್ಯಾವಾರಿಧಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ಡಾ. ಕೆ. ಎಂ. ಕೃಷ್ಣರಾವ್, ಪ್ರ. ರಾಜ್ಯ ಸಮಿತಿ ಶ್ರೀ ಕನಕದಾಸರ ನಾಲ್ಕನೆಯ ಶತಮಾನೋತ್ಸವ, ಮೈಸೂರು ಸರ್ಕಾರ, ಮೈಸೂರು ೧೯೬೫

೨. ಶ್ರೀ ಕನಕದಾಸರ ಹಾಡುಗಳು ಸಂ. ಶ್ರೀ ಕೃಷ್ಣಶರ್ಮ ಬೆಟಗೇರಿ, ಶ್ರೀ ಹುಚ್ಚರಾವ್ ಬೆಂಗೇರಿ, ಪ್ರ. ಸಮಾಜ ಪುಸ್ತಕಾಲಯ, ಧಾರವಾಡ, ೧೯೭೯

೩. ಕನಕದರ್ಶನ – ಡಾ. ವೆಂಕಟ್ರಾಯ ಆನಂದ ಶೆಟ್ಟಿ, ಪ್ರ. ಶ್ರೀ ದ್ವೈಪಾಯನ ಟ್ರಸ್ಟ್, ಮುಂಬಯಿ, ೧೯೭೪

೪. ಮಹಾತ್ಮ ಕನಕದಾಸ ಪ್ರಶಸ್ತಿ–ಪ್ರ. ರಾಜ್ಯ ಸಮಿತಿ, ಶ್ರೀ ಕನಕದಾಸರ ನಾಲ್ಕನೆಯ ಶತಮಾನೋತ್ಸವ, ರವೀಂದ್ರ ಕಲಾಕ್ಷೇತ್ರ, ಬೆಂಗಳೂರು.

೫. ಕನಕದಾಸರ ಪದಗಳು – ಲೇ: ಶ್ರೀ ಕಲಮದಾನಿ ಗುರುರಾಯರು, ಪು. ಎ. ಎಂ. ಕರಡಿ, ಹುಬ್ಬಳ್ಳಿ, ೧೯೬೫

೬. ನಳಚರಿತ್ರೆ–ಸಂ. ದೇ. ಜವರೇಗೌಡ, ಪ್ರ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ೧೯೮೫

೭. ರಾಮಧಾನ್ಯ ಚರಿತ್ರೆ–ಸಂ. ದೇ. ಜವರೇಗೌಡ, ರಾಜ್ಯಸಮಿತಿ ಶ್ರೀ ಕನಕದಾಸ ನಾಲ್ಕನೆಯ ಶತಮಾನೋತ್ಸವ, ರವೀಂದ್ರ ಕಲಾಕ್ಷೇತ್ರ, ಬೆಂಗಳೂರು, ೧೯೬೫.

೮. ಕನಕ ಕಿರಣ, ಸಂ ಕಾ. ತ. ಚಿಕ್ಕಣ್ಣ ಪ್ರ. ಕಾಳಿದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು, ೧೯೮೨

೯. ಕನಕದಾಸ ಜೀವನ ವಿಚಾರ–ಸಂ ಜ್ಯೋತಿ ಹೊಸೂರು. ಪ್ರ ಕಾಲಗತಿ ಪ್ರಕಾಶನ, ಬೆಳಗಾವಿ, ೧೯೮೩

# ಕನಕದಾಸನ ಕೀರ್ತನೆಗಳಲ್ಲಿ ಸಾಮಾಜಿಕ ಅಭಿವ್ಯಕ್ತಿ

**ಕಾ. ತ. ಚಿಕ್ಕಣ್ಣ**

೧

ಕನಕದಾಸನ ಸಾಮಾಜಿಕ ಕಾಳಜಿಗಳನ್ನು ವಿಚಾರಮಾಡುವ ಸಂದರ್ಭದಲ್ಲಿ ಪೂರಕವಾಗಿ ಎರಡು ಅಂಶಗಳನ್ನು ಗಮನಿಸುವುದು ಅವಶ್ಯಕವೆನಿಸುತ್ತದೆ. ಒಂದು ಅವನ ಕಾಲ ಅಥವಾ ಪರಿಸರ, ಎರಡು ಅವನ ದಾಸತ್ವ. ಹದಿನೈದನೆಯ ಶತಮಾನದ ಅಂಚಿನಲ್ಲಿ ಬಾಳಿದ ಸಂತನೊಬ್ಬನ ಸಾಮಾಜಿಕ ಪ್ರಜ್ಞೆಯನ್ನು ಇಪ್ಪತ್ತನೆಯ ಶತಮಾನದ ಅಂಚಿನಲ್ಲಿ ನಿಂತು ವಿಶ್ಲೇಷಿಸುವಾಗ, ಈ ಎರಡು ಅಂಶಗಳನ್ನು ನೆನಪಿಸಿಕೊಂಡೇ ಚರ್ಚೆ ಮಾಡಬೇಕೆಂಬುದು ಮಾತು. ಅಂದರೆ ಹದಿನೈದನೆಯ ಶತಮಾನಕ್ಕಿಂತ ಇಪ್ಪತ್ತನೆಯ ಶತಮಾನದ ನಮ್ಮ ನಡುವಿನ ಸಮಾಜ ಹೆಚ್ಚು ಸಂಕೀರ್ಣವೂ ಹೆಚ್ಚು ಸಿನಿಕವೂ ಆಗಿರುವುದರಿಂದ ನಾವು ನೋಡಬಯಸುವ ಸಾಮಾಜಿಕ ಸಂಗತಿಗಳನ್ನು ಅಷ್ಟೇ ಸೂಕ್ಷ್ಮವಾಗಿ, ಹೆಚ್ಚು ಹರಿತವಾಗಿ, ತೀವ್ರವಾಗಿ ಕಾಣಬಯಸುತ್ತೇವೇನೋ ಎಂಬ ಅನುಮಾನ ನನಗಿದೆ. 'ಏನೇ ಇರಲಿ, ಐದು ಶತಮಾನಗಳ ಹಿಂದೆ ಬಾಳಿಹೋದ ಸಂತ ಕವಿಯೊಬ್ಬನ ಸಾಮಾಜಿಕ ಚಿಂತನೆಯನ್ನು ಇಂದು ಪರಿಗಣಿಸುತ್ತಿದ್ದೇವೆ–ಎಂಬುವ ಮಾತೇ ಆ ಕವಿಯ, ಅವನ ಸಾಹಿತ್ಯದ ಹಿರಿಮೆಯನ್ನು ತಿಳಿಸುತ್ತದೆ. ಇದು ನಮ್ಮ ಸಾಮಾಜಿಕ ಪರಿಸರದ ಸಾಹಿತ್ಯವನ್ನು ಜೀವಂತವಾಗಿರಿಸಿಕೊಳ್ಳುವ ವಿಶ್ವಾಸವನ್ನು ತೋರಿಸುವ ಬಗೆಯೂ ಆಗಿರಬಹುದು.

ಕನ್ನಡ ಸಾಹಿತ್ಯ ಚರಿತೆಕಾರರು ಹೇಳುತ್ತಾರೆ : 'ಕನಕದಾಸನ ಜೀವನವೇ ಒಂದು ಮಹಾಕೃತಿಯಾಗಿತ್ತು. ಅವನ ಕೃತಿಗಳಲ್ಲಿ ಮಹೋನ್ನತಿ ಬೆಳಗಿದೆ. ಪುರಂದರದಾಸನಂತೆ ಆದರೂ ಅವನಿಗಿಂತ ಕೆಲಮಟ್ಟಿಗೆ ಬೇರೆಯಾಗಿ ಕನಕದಾಸ ತನ್ನ ಜೀವನ ಸಾಹಿತ್ಯಗಳ ಸಿದ್ಧಿಯಿಂದ ಕನ್ನಡಿಗರ ಚಿರಂತನವಾದ ಸಂಸ್ಕೃತಿ ದೀಪಗಳಲ್ಲಿ ಒಂದಾಗಿದ್ದಾನೆ."

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದು, ಜೀವನ ಮತ್ತು ಸಾಹಿತ್ಯಗಳ ಸಿದ್ಧಿಯಿಂದ ಕನಕದಾಸ ಚಿರಂತನವಾಗಿದ್ದಾನೆ ಎಂಬ ಮಾತು. ಬದುಕನ್ನು

ಸ್ಪಂದಿಸುವ ಸಾಹಿತ್ಯ ರೂಪುಗೊಂಡರೆ ಅದೊಂದು ಸಾಂಸ್ಕೃತಿಕ ದಾಖಲೆಯಾಗುತ್ತದೆ ಎಂಬ ಮಾತು. ಅಂದರೆ ಒಬ್ಬ ಲೇಖಕನ ಅನುಭವ ಮತ್ತು ಅಭಿವ್ಯಕ್ತಿ ಎರಡೂ ಹರಳುಗಟ್ಟಿದ್ದರೆ ಅವನ ರಚನೆ ಹೇಗೆ ಸಾರ್ವತ್ರಿಕವೂ ಸಾರ್ವಕಾಲಿಕವೂ ಆಗಬಹುದು ಎನ್ನುವುದಕ್ಕೆ ಕನಕದಾಸನ ರಚನೆಗಳು ನಮ್ಮ ಮುಂದಿದೆ. ನನ್ನ ಪ್ರಕಾರ ಕನಕದಾಸ ಕೇವಲ ಕೀರ್ತನೆಕಾರ ಆಗಿದ್ದರೆ ಅಥವಾ ಕೇವಲ ಭಕ್ತ ಮಾತ್ರ ಆಗಿದ್ದರೆ ಸಾಮಾಜಿಕವಾಗಿ ಈ ಮಾತನ್ನು ಹೇಳಲು ಬರುತ್ತಿರಲಿಲ್ಲ. ಅವನು ಕವಿಯೂ ಆಗಿದ್ದಾನೆ ಎಂಬುದರಲ್ಲೇ ಅವನ ಈ ಅನುಭವ ಮತ್ತು ಅಭಿವ್ಯಕ್ತಿಯ ನೆಲೆಗಳು ಗಟ್ಟಿಕೊಳ್ಳುತ್ತವೆ.

೨

ಕನಕದಾಸನ ಸಾಹಿತ್ಯವನ್ನು ಗಮನಿಸಿ ಅವನ ಒಟ್ಟು ನಿಲುವನ್ನು ಪರಿಭಾವಿಸುವಾಗ ಮೂಲಗಾಮಿಯಾಗಿ ಸುತ್ತುವ ಭಕ್ತನ ಕರ್ಮಸಿದ್ಧಾಂತದಿಂದ ಕವಿಯು ಆಚೆ ಬರಲು ಆಗದಿರುವುದನ್ನು ಕಾಣುತ್ತೇವೆ. ಮಣ್ಣಿನಲಿ ಬಂಧಿಸಿದ ದೇಹವ ಮಣ್ಣು ಕೂಡಿಸಬೇಡ ಎಂಬ ಕನಕದಾಸ ಇಹದ ಅರಿವಿದ್ದೂ ಪರದ ಕಡೆ ದಾಟಿ ಬಿಡುವಾಗ ಇದರ ಅನುಭವವಾಗುತ್ತದೆ. ಇಂಥ ತತ್ತ್ವವನ್ನು ಅವನು ಒಪ್ಪಿಯೂ ಸಾಮಾಜಿಕ ಬದುಕಿನ ಬಗ್ಗೆ ತೋರಿದ ಕಾಳಜಿ ಮಾತ್ರ ಅಪೂರ್ವವಾಗಿದೆ. ಇದು ಕನ್ನಡ ಭಕ್ತಿಪಂಥದ ಸಂದರ್ಭದಲ್ಲಿ ನಾವು ಕಾಣಬಹುದಾದ ವಿಶೇಷವಾದ ಮತ್ತು ವಿಭಿನ್ನವಾದ ಅಭಿವ್ಯಕ್ತಿ ಎನ್ನಬಹುದು.

ಈ ಮಾತನ್ನು ಇನ್ನಷ್ಟು ಸ್ಪಷ್ಟಗೊಳಿಸುವುದಕ್ಕಾಗಿ ಸ್ವಲ್ಪ ಹಿಂದೆ ಸರಿದು ವಚನಕಾರರ ಕಾಲವನ್ನು ಉಲ್ಲೇಖಿಸಬಹುದು.

ನಾವು ಸಾಮಾನ್ಯವಾಗಿ ವಚನ ಸಾಹಿತ್ಯ ಮತ್ತು ದಾಸಸಾಹಿತ್ಯಗಳೆರಡನ್ನು ಪರಸ್ಪರ ಹೋಲಿಸುತ್ತೇವೆ. ಈ ಎರಡರ ಮಧ್ಯೆ ಸಾಮ್ಯವನ್ನು ಕಾಣಬಯಸುತ್ತೇವೆ. ಇದೇ ಇಲ್ಲಿ ಪ್ರಶ್ನಾರ್ಹವಾಗುವುದು. ಸಾಮಾಜಿಕ ಮಹತ್ವದ ದೃಷ್ಟಿಯಿಂದ ನೋಡಿದಾಗ ಈ ಎರಡು ಪಂಥಗಳು ಪರಸ್ಪರ ಭಿನ್ನ. ಇವುಗಳ ಧಾರ್ಮಿಕ ಆಂದೋಳನ–ಆಂದೋಳನದ ಪರಿಭಾಷೆಯಲ್ಲಿಯೇ ಹೇಳಬೇಕಾದರೆ–ವಚನ ಕಾಯಕದ ಮಹತ್ವವನ್ನು ಮುಂದಿಟ್ಟುಕೊಂಡು ಪಡೆದ ವಿಶಾಲತೆ, ವೈವಿಧ್ಯಪೂರ್ಣತೆ, ಸಾಂಘಿಕ ಶಕ್ತಿ, ನಿಜನೆಲದ ವಾಸನೆ ದಾಸಸಾಹಿತ್ಯದಲ್ಲಿ ಇಲ್ಲ, ವಚನಕಾರರಲ್ಲಿ ಬಸವಣ್ಣ, ಪ್ರಭುದೇವ, ಅಕ್ಕಮಹಾದೇವಿ, ಸಿದ್ಧರಾಮ, ಮೊದಲಾದ ಪ್ರಸಿದ್ಧರ ಜೊತೆ ಜೊತೆಯಲ್ಲಿಯೇ ಸಮಸಮವಾಗಿ ವ್ಯಕ್ತಗೊಳ್ಳುವ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಆಯ್ದಕ್ಕಿ ಮಾರಯ್ಯ

ಮುಂತಾದವರನ್ನು ಮರೆಯುವಂತಿಲ್ಲ. ಇಲ್ಲಿಗೆ ಬಡವರು, ಬಲ್ಲಿದರು, ಮೇಲ್‌ಜಾತಿಯವರು ಕೆಳಜಾತಿಯವರು, ಅಷ್ಟೆ ಯಾಕೆ, ಕನಿಷ್ಠ ವೃತ್ತಿಯ ಹೆಂಗಸರು ಕೂಡ ಬಂದು ಕೂಡುತ್ತಾರೆ. ಕೂಡಿ ಈ ಚಳವಳಿಯಲ್ಲಿ ಸಮಪಾಲು ಪಡೆಯುತ್ತಾರೆ. ಆದರೆ ದಾಸಸಾಹಿತ್ಯಕ್ಕೆ ಈ ಮಾತು ಅನ್ವಯಿಸುವುದಿಲ್ಲ. ವಾಸ್ತವ ಬದುಕಿಗೆ ಮುಖಿಯಾಗದ ಬಾಳಾಟಕ್ಕೊಂದು ಕ್ರಿಯೆಯೇ ಇಲ್ಲದ [ಅಲ್ಲಿ ಕಾಯಕ ಆದಂತೆ] ಒಂದು ಬಗೆಯ ಹೊಂದಾಣಿಯ ಐಹಿಕ ಸಂಬಂಧವನ್ನು ಕಡಿದುಬಿಡು ಎಂದು ದೇವರಲ್ಲಿ ಮೊರೆಯಿಡುತ್ತ ಭಕ್ತಿಯ ಪಾರಮ್ಯವನ್ನು ಸಾರುತ್ತ ತತ್ತ್ವ ಪ್ರಶ್ನೆಗಷ್ಟೇ ಮಿತಿಗೊಂಡ, ಸಮಾಜದ ಇತರೆ ಶೂದ್ರವರ್ಗದ ದನಿಯನ್ನು ಒಳಗುಮಾಡಿಕೊಳ್ಳದಾದ ದಾಸಸಾಹಿತ್ಯದ ಪರಂಪರೆಯನ್ನು ಸಾಮಾಜಿಕ ಒರೆಗಿಟ್ಟು ನೋಡಿದಾಗ ಇದು ಸ್ಪಷ್ಟವಾಗುತ್ತದೆ.

ಹೀಗಾಗಿ ವಚನಸಾಹಿತ್ಯದ ಇದಿರಿಟ್ಟು ದಾಸಸಾಹಿತ್ಯವನ್ನು ನೋಡಿದರೆ ಇದೊಂದು ಪ್ರಬಲ ಚಳವಳಿಯಾಗುವುದಿರಲಿ ಆಶಯ ಆಯಾಮಗಳ ದೃಷ್ಟಿಯಿಂದಲೂ ಎಷ್ಟು ದುರ್ಬಲವಾದದ್ದು ಎಂದು ಗೊತ್ತಾಗುತ್ತದೆ. ಆದ್ದರಿಂದ ಸಮಾನ ಎಳೆ ಎಂದು ಗುರುತಿಸಬಹುದಾದ ಧಾರ್ಮಿಕ ಕಾರಣದಿಂದಲೂ ಇವೆರಡು ಪಂಥಗಳನ್ನು ಹೋಲಿಸುವುದು ಕೂಡ ಕಷ್ಟವಾಗುತ್ತದೆ.

ಆದರೆ ಇದಕ್ಕೆ ಅಪವಾದವೆಂಬಂತೆ ಕನಕದಾಸ ದಾಸಪರಂಪರೆಯನ್ನು ಒಪ್ಪಿಕೊಂಡು ಮತ್ತೆ ಆ ಪರಂಪರೆಯ ಜನ ಒಡ್ಡಿದ ವಿರೋಧಗಳನ್ನೆಲ್ಲ ಇದಿರಿಸುತ್ತಲೆ ಬೆಳೆದದ್ದು ನಮ್ಮ ಕುತೂಹಲವನ್ನು ಕೆರಳಿಸುವ ವಿಚಾರವಾಗಿದೆ.[೧] ಈ ಹಿನ್ನೆಲೆಯಲ್ಲಿ ಕನಕದಾಸನ ಮಹತ್ವವನ್ನು ಅರಿಯಲು ಸಾಧ್ಯಮಾಡಿಕೊಳ್ಳಬಹುದು.

೩

ಕನಕದಾಸ ವಿಜಯನಗರ ಸಾಮ್ರಾಜ್ಯದ ಅಪಾರ ವೈಭವದ ಅದ್ಭುತ ಶಕ್ತಿ–ಸಂಚಯನದ ಕಾಲದಲ್ಲಿ ಒಬ್ಬ ಪಾಳೇಗಾರನಾಗಿದ್ದನು. ಆ ಬದುಕಿನ ಎಲ್ಲ ಸವಲತ್ತುಗಳನ್ನು ಉಂಡವನು.[೨] ಆತ ರಸಿಕ, ಸಾಹಸಿ. ತನ್ನ ಕೆಲಸದಲ್ಲಿ ಶ್ರದ್ಧೆ

೧. ಸಾಮಾಜಿಕವಾಗಿ ಕೆಲವು ಕೀರ್ತನೆಗಳ ಕಾರಣಕ್ಕೆ ಪುರಂದರದಾಸನನ್ನು ನೆನಸಿಕೊಳ್ಳಬೇಕು. ಆದರೂ ಅನುಭವ ಮತ್ತು ಅಭಿವ್ಯಕ್ತಿಗಳೆರಡರ ಬೆಳಕಿನಲ್ಲಿ ಇದು ವಿಚಾರಾರ್ಹ ಸಂಗತಿಯೇ

೨. ಈ ಸವಲತ್ತಿನ ಫಲವಾಗೇ ಮುಂದೆ ಸಾಮಾನ್ಯ ಕೆಳವರ್ಗದವನೊಬ್ಬ ಈ ಮಾನಸಿಕ ಪ್ರಕ್ರಿಯೆಯಿಂದಲೇ ಇವನ ರಚನೆಗಳಿಗೆ ಶಕ್ತಿಬರಲು ಸಾಧ್ಯವಾಗಿರುವುದುಂಟು.

ರೂಢಿಸಿಕೊಂಡಿದ್ದವನು. ಇದೆಲ್ಲ ಅವನ ವಾಸ್ತವ ಬದುಕಿನ ಸ್ಥಿತಿ. ಅವನು ಕಂಡುಕೊಂಡಿದ್ದ ರೀತಿ. ಆ ಮೇಲಿನ ಘಟನೆಗಳು ಕನಕದಾಸನ ವಾಸ್ತವ ಬದುಕಿನ ಮೇಲೆ ಪರಿಣಾಮ ಬೀರುತ್ತವೆ. ಪ್ರೀತಿಯ ಅಪ್ಪ, ಅಕ್ಕರೆಯ ಅವ್ವ, ನೆಚ್ಚಿನ ಹೆಂಡತಿ (ಕೊನೆಗೆ ಮಗ ಕೂಡ ಅನ್ನುತ್ತಾರೆ) ಹೀಗೆ ಒಬ್ಬರಾದ ಮೇಲೆ ಒಬ್ಬರನ್ನು ಕಳೆದುಕೊಳ್ಳುತ್ತಾನೆ. ಇವು ಕನಕದಾಸನಲ್ಲಿ ಬಹು ಘಾಸಿಯುಂಟು ಮಾಡಿದ ಘಟನೆಗಳು ಮುಂದೊಮ್ಮೆ ಯುದ್ಧವೊಂದರಲ್ಲಿ ತಾನು ವಿಶ್ವಾಸವಿಟ್ಟಿದ್ದ ತೋಳ್ಬಲವೂ ನುಚ್ಚುನೂರಾಗುತ್ತದೆ. ಈ ಎಲ್ಲ ಆಘಾತಗಳ ಪರಿಣಾಮ ಕನಕದಾಸನಿಗೆ ಗೊಂದಲ ಹುಟ್ಟಿರಬೇಕು. ಹೀಗೆ ದಿಙ್ಮೂಢನಾದ, ಅತಂತ್ರ ಸ್ಥಿತಿಯಲ್ಲಿ ಕನಲಿದ ಕನಕದಾಸನಿಗೆ ಆ ಹೊತ್ತಿಗೆ ಪ್ರಭಾವಶಾಲಿಯಾಗಿದ್ದ ವ್ಯಾಸರಾಯನ ಮುಖಂಡತ್ವದ ವೈಷ್ಣವ ಧರ್ಮ ಸಹಜವಾಗಿ ಆಕರ್ಷಿಸಿತು. ಬದುಕಿನ ತಲ್ಲಣಕ್ಕೆ ಪ್ರತಿಸ್ಪಂದಿಸಿದ ಕನಕದಾಸ ದೈವಬಲಕ್ಕೆ ಶರಣಾಗಿರುವುದನ್ನು ನಾವು ಸುಲಭವಾಗಿ ಊಹಿಸಬಹುದು.

ಕನಕದಾಸನ ಬದುಕಿನಲ್ಲಿ ಆಗಿಹೋದ ಒಂದು ಆಕಸ್ಮಿಕ ತಿರುವು ಇದಾದರೂ ಅವನು ಸಂಘರ್ಷಮುಖಿಯಾದದ್ದು ಹೀಗೆ ಎಂಬುದು ಮುಖ್ಯವಿಚಾರ. ಅಪ್ಪ ತೋರಿಸಿದ್ದ ಭಕ್ತಿ, ನಿಷ್ಠೆ, ನಿಯಮಗಳನ್ನು ಮೊದಲಿನಿಂದಲೂ ರೂಢಿಸಿಕೊಂಡಿದ್ದ ಕನಕದಾಸ ಮನಸೋತು ಹರಿದಾಸತ್ವಕ್ಕೆ ಬದ್ಧನಾದರೂ ಅವನು ಇದಿರಿಸಬೇಕಾಗಿದ್ದ ಸಂಗತಿಗಳು ಬೇರೆಯೇ ಆಗಿದ್ದವು. ಅವನು ಹರಿದಾಸ ಪರಂಪರೆಗೆ ತನ್ನನ್ನು ಅರ್ಪಿಸಿಕೊಂಡರೂ ಆ ಪರಂಪರೆಯ ಜನ ಇವನನ್ನು ಒಪ್ಪಿಕೊಳ್ಳುವುದಕ್ಕೆ ಸಿದ್ಧವಾಗಲಿಲ್ಲ. ವೇದಶಾಸ್ತ್ರಗಳನ್ನು ಬೋಧಿಸಹೊರಟಿದ್ದ ದಾಸಪರಂಪರೆಗೆ ಶೂದ್ರ ವರ್ಗದಿಂದ ಬಂದ ಕನಕದಾಸ ಒಂದು ಆಶ್ಚರ್ಯವಾದ ಗೇಲಿಗೆ ವಸ್ತುವಾದ. ಅವನೊಳಗಿದ್ದ ಕವಿ ಒಳಗೊಳಗೇ ಗುನುಗುವುದನ್ನು ಬಿಟ್ಟು ಹೊರಬರುವುದು ಅಷ್ಟೇ ಅನಿವಾರ್ಯವಾಯಿತು.

ಹೀಗೆ ಒಂದು ಬಗೆಯ ಬದುಕಿನ ಹುಡುಕಾಟದಲ್ಲಿ, ಅದರ ಅನಿಶ್ಚಿತತೆಯ ತೀವ್ರ ತಳಮಳದಲ್ಲಿ ಕನಕದಾಸನ ಪಾರಮಾರ್ಥಿಕವಾದ ಹಂಬಲ ಶುರುವಾದರೂ ಅಷ್ಟೇ ಸಹಜವಾಗಿ ಈ ಮನುಷ್ಯ ಕುಲದ ಅನಿಷ್ಟ ಅಸಮಾನತೆಗೆ ಸ್ಪಂದಿಸದಿರುವುದು ಅವನಿಗೆ ಆಗಲಿಲ್ಲ. ಇಲ್ಲಿ ಎಂಥ ವಿಪರ್ಯಾಸವನ್ನು ಕಾಣುತ್ತೇವೆಂದರೆ ವಾಸ್ತವ ಬದುಕಿನಿಂದ ಭ್ರಮಾಲೋಕಕ್ಕೆ ಅರಸಿ ಹೋದ ಕನಕದಾಸ ಆ ಲೋಕದಲ್ಲೇ ನಿಂತು ಮತ್ತೆ ವಾಸ್ತವ ಬದುಕನ್ನು, ಅದನ್ನು ಕಿತ್ತು ತಿನ್ನುತ್ತಿರುವ ಪೈಶಾಚಿಕ ಚಾಳಿಯನ್ನು ಹೀಗಳೆಯುವುದು. ಒಂದು ಕಡೆ

ಸಮಾಜದ ಸುತ್ತಮುತ್ತಲಿನ ಬದುಕಿನತ್ತ ಚಿಂತಿಸುವ ಕವಿ. ಇದು ಕನಕದಾಸನಿಗೆ ಸಾಧ್ಯವಾಯಿತು. ಇದೇ ಅವನ ವಿಶಿಷ್ಟತೆ. ಕವಿ–ಭಕ್ತರಿಬ್ಬರ ಬಗೆಯನ್ನು ಅವನ ಕೀರ್ತನೆಗಳಲ್ಲಿ ಕಾಣುತ್ತೇವೆ. ಅಂದರೆ ಕನಕದಾಸನ ಮನಸ್ಸು ಮೂಲತಃ ವಿರಕ್ತಿಪರವಾದದ್ದಾದರೂ ಅವನೊಳಗಿನ ಕಥೆಗಾರನೊಬ್ಬ ಸದಾ ಜಾಗೃತ ಸ್ಥಿತಿಯಲ್ಲಿ ಇದ್ದದ್ದರಿಂದಲೇ ಅವನ ಅಭಿವ್ಯಕ್ತಿಗೆ ಅವನ ಅನುಭವವೇ ದ್ರವ್ಯವಾಗುತ್ತದೆ. ಮತ್ತು ಮುಖ್ಯ ಅಂದರೆ ಅದು ಅವನಿಗೆ ಸಹಜವಾಗುತ್ತದೆ. ಇತರೆ ದಾಸರ ರಚನೆಗಳಿಗಿಲ್ಲದ ಒಂದು ಬಗೆಯ ಅನನ್ಯತೆಯನ್ನು ಕನಕದಾಸನ ರಚನೆಗಳಿಗೆ ತಂದುಕೊಡುವುದು ಇದೇ.

೪

ಕನಕದಾಸ ಸಾಮಾಜಿಕ ಬದುಕನ್ನು ಒಬ್ಬ ಕವಿಯಾಗಿ ಗ್ರಹಿಸಿಕೊಂಡ ಕ್ರಮದಲ್ಲಿ ಅವನ ಕೀರ್ತನೆಗಳು ಯಶಸ್ವಿಯಾಗುತ್ತವೆ ಎಂಬುದು ಮುಖ್ಯ ಸಂಗತಿ.[೧] ಸಮಾಜದಲ್ಲಿ ತುಂಬಿ ತುಳುಕುತ್ತಿರುವ ಕಂದಾಚಾರ ಮೌಢ್ಯಗಳ ವಿಚಾರ ಬಂದಾಗ, ಬಡವ–ಬಲ್ಲಿದರೆಂಬ ಅಸಮಾನತೆಯನ್ನು ಕಂಡಾಗ, ಜಾತಿ ಎಂಬುದು ಬೆನ್ನು ಹಿಡಿದು ಕಾಡುವಾಗ ಅವನು 'ದಾಸನಾಗುವುದಿಲ್ಲ. ಈ ದಿಟ್ಟತನಕ್ಕೆ ಪ್ರೇರಣೆಯಾಗುವುದು ಅವನ ಅನುಭವ. ಆ ಅನುಭವವನ್ನು ಗ್ರಹಿಸಿಕೊಂಡ ಅವನ ಕವಿ ಹೃದಯ. ಅವನು ಸಂತನೇ ಆಗಿ ಉಳಿದು ಬಿಟ್ಟಿದ್ದರೆ ಈ ರಚನೆಗಳಿಗೆ ಒಂದು ಬಗೆಯ ಉತ್ಕಟತೆ, ಅರ್ಥಪೂರ್ಣತೆ ಬರಲು ಸಾಧ್ಯವಾಗುತ್ತಿರಲಿಲ್ಲ. ಇಂಥ ಸಂದರ್ಭಗಳಲ್ಲಿ ಕನಕದಾಸ ಮೊದಲು ಕವಿಯಾಗುತ್ತಾನೆ. ಅನಂತರ ದಾಸನಾಗುತ್ತಾನೆ ಅನ್ನುವುದು ಮುಖ್ಯ.[೨] ಈ ಮಾತನ್ನೂ ಕೀರ್ತನೆಯೊಂದರಿಂದಲೇ ಚರ್ಚಿಸಬಹುದು.

---

೧. "ಕನಕದಾಸರು ಹರಿದಾಸರಲ್ಲಿ ಕವಿ ಎಂಬ ಹೇಳಿಕೆ ಪ್ರಶ್ನಾರ್ಹವಾಗುತ್ತದೆ" ಎಂಬ ಎಚ್. ಎಸ್. ವೆಂಕಟೇಶಮೂರ್ತಿ ಅವರ ಕೀರ್ತನ ಸಾಹಿತ್ಯದಲ್ಲಿ ಕನಕದಾಸರ ಸ್ಥಾನ : ಒಂದು ತೌಲನಿಕ ಅಭ್ಯಾಸ" ಎಂಬ ಲೇಖನವನ್ನು ವಿವರಗಳಿಗೆ ನೋಡಬಹುದು. 'ಕನಕಕಿರಣ', ಸಂ : ಕಾ. ತ. ಚಿಕ್ಕಣ್ಣ.

೨. ಕೆ. ಜಿ. ನಾಗರಾಜಪ್ಪ ತಮ್ಮ ಮರುಚಿಂತನೆ ಪುಸ್ತಕದಲ್ಲಿ ಹೀಗೆ ಹೇಳುತ್ತಾರೆ : "ಇಲ್ಲಿ ವೈರಾಗ್ಯ ಇಲ್ಲವೆ ಆಧ್ಯಾತ್ಮಿಕವಾದ ವ್ಯಾಖ್ಯಾನ ಕಂಡು ಬರುವುದೇ ಹೊರತು ಸಾಧಕನಾಗಿ ಹುಟ್ಟು ಕುರುಬ ಜಾತಿಯವನಾಗಿ, ಸಮಾಜದಲ್ಲಿ ಅನುಭವಿಸಿದ ಸಿಹಿಕಹಿಯ ವೈಯಕ್ತಿಕವಾದ ಅನುಭವ ವ್ಯಕ್ತವಾಗುವುದಿಲ್ಲ. ಇವನಿಗೆ ಜಾತಿಯ ವಿಷಯದ ಸ್ಪಷ್ಟವಾದ ನಿಲುವಿಲ್ಲ......."

–ಈ ಹೇಳಿಕೆಯನ್ನು ಮೇಲಿನ ಸಂಗತಿಗಳ ಮತ್ತು ಮುಂದೆ ಚರ್ಚಿತವಾಗುವ ಸಂಗತಿಗಳ ಹಿನ್ನೆಲೆಯಲ್ಲಿ ಪರಿಶೀಲಿಸಬೇಕು.

ಕುಲಕುಲ ಕುಲವೆನ್ನುತಿಹರು
ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ॥
ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ ।
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ ॥
ಮೃಗಗಳ ಮೈಯಲ್ಲಿ ಪುಟ್ಟಿದ ಕಸ್ತೂರಿ
ತೆಗೆದು ಪೂಸುವರು ಭೂಸುರರೆಲ್ಲರು ।
ಬಗೆಯಿಂದ ನಾರಾಯಣನ್ಯಾವ ಕುಲದವ
ಅಗಜವಲ್ಲಭನ್ಯಾತರ ಕುಲದವನು ॥
ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ ।
ಆತ್ಮಾಂತರಾತ್ಮ ನೆಲೆಯಾದಿ ಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ ॥

ಕನಕದಾಸನು ಕೆಳಜಾತಿಯಲ್ಲಿ (ಕುರುಬರು) ಹುಟ್ಟಿಬಂದ ಕಾರಣಕ್ಕೆ ಅವನ ಜಾತಿಯೇ ಹೆಜ್ಜೆ ಹೆಜ್ಜೆಗೂ ಕಾಲ್ತೊಡಕಾಗಿದೆ, ಈ ಜಾತಿಯ ಸಮಸ್ಯೆಯನ್ನು ಆಮೂಲಾಗ್ರವಾಗಿಯೇ ಪರಿಗಣಿಸುತ್ತಾನೆ. ಈ ಸಮಸ್ಯೆ ಕವಿಯ ಮನಸ್ಸಿನಲ್ಲಿ ವ್ಯಕ್ತಗೊಳ್ಳುವ ಕ್ರಮವೇ ಅದು. ಸತ್ಯಸುಖವುಳ್ಳ ಜನರಿಗೆ ಕುಲ ಯಾವುದು ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಮೊದಲು ತಾವರೆ ಕೆಸರುಗಳ ಸಂಕೇತದ ಮೂಲಕ ಇದರ ನೆಲೆಯನ್ನು ಹುಡುಕಿ, ಆಮೇಲೆ ಪೂಜ್ಯರೆಂದು ಕರೆಸಿಕೊಳ್ಳುವವರ ಕುಲದ ಮೂಲವನ್ನು ಕೆದಕುತ್ತಾ ಅದರ ವ್ಯಾಪಕತೆಯನ್ನು ತೆರೆದು ತೋರಿಸುತ್ತಲೇ ಆಡುವವರ ಇಬ್ಬಂದಿತನವನ್ನು ಬಹು ಸೂಕ್ಷ್ಮವಾಗಿ ಆದರೆ ಸಶಕ್ತವಾಗಿ ದಾಖಲಿಸುತ್ತಾನೆ.

ಹೀಗೆ ಒಂದು ಬಗೆಯ ವಿಷಾದದ ದನಿಯಿಂದಲೇ*[೧] ಹೊರಡುವ ವಿಚಾರ ಕೊನೆಗೆ ಮನುಷ್ಯ ಕುಲದ ಉದ್ಧಾರದ ಕಡೆಗೆ ಚಾಚುವ ರೀತಿ

---

* ೧. 'ವಿಷಾದ ಮಾಡುವುದೂ ಒಳ್ಳೆಯದನ್ನು ಬಯಸುವ ಹೊರಳು ಸ್ಥಿತಿಯಲ್ಲಿ ಎಂಬುದನ್ನು ಗಮನಿಸಬೇಕು. ಕನಕದಾಸನ ಇಂಥ ದನಿಗಳನ್ನು ಅಲ್ಲಲ್ಲೇ ಕಾಣಬಹುದು.

೧. ಯಾತರವನೆಂದುಸಿರಲಿ ಜಗ
ನ್ನಾಥ ಮಾಡಿದನೊಂದ ನರರೂಪಯ್ಯ

ಗಮನಾರ್ಹವಾಗುತ್ತದೆ. ತಾವಷ್ಟೇ ಶ್ರೇಷ್ಠವೆಂದು ಗೋಡೆ ನಿರ್ಮಿಸಿಕೊಳ್ಳುತ್ತ ಮನುಷ್ಯ ಬದುಕನ್ನು ಕ್ರೂರ ವಿಷವರ್ತುಲಕ್ಕೆ ತಳ್ಳುತ್ತಿರುವ ಜನರಿಗೆ ಸತ್ಯಸುಖವುಳ್ಳ ಜನರಿಗೆ ಕುಲವ್ಯಾವುದು ಎಂದು ಕೇಳುತ್ತಾನೆ. ಸತ್ಯವಂತರು ಒಂದೇ ಸಮಾಜದಲ್ಲಿ ಮೇಲು–ಕೀಳು ಎಂಬ ಎರಡು ದಡದಲ್ಲಿ ಇರಲು ಸಾಧ್ಯವಿಲ್ಲ. ಅಂಥ ಜನ ಒಂದೇ ಆಗಿರುತ್ತಾರೆ, ಆಗಿರಬೇಕು ಎಂಬುದು ಕನಕದಾಸನ ನಿರೀಕ್ಷೆ. ಅಸಮಾನತೆ ಇಲ್ಲದ ಸಮಾಜ ನಿರ್ಮಾಣದ, ಮೇಲು ಕೀಳು ಎಂಬಿಲ್ಲದ ಮಾನವ ಜಾತಿಯ ಉದ್ಧಾರದ ಅಪೇಕ್ಷೆಯಲ್ಲಿ ಕವಿ ಮನುಷ್ಯ–ಮನುಷ್ಯ ನಡುವಣ ಸಂಬಂಧವನ್ನು ಒಂದು ಮೌಲ್ಯವಾಗಿಸುತ್ತಾನೆ. ಸಾವಿರ ನೋವುಂಡು ಸಹಿಸಿಕೊಂಡ ಮನಸ್ಸು ಆದರೂ, ಈ ಸಾಮಾಜಿಕ ಸತ್ಯದತ್ತವೇ ಕವಿಯ ಒಲವಾಗುತ್ತದೆ.

ಕನಕದಾಸನ ದನಿ ಕೇವಲ ವಿಷಾದಪೂರ್ಣವಾಗುವುದಿಲ್ಲ; ಅದರಲ್ಲಿ ಉದಾತ್ತ ಸಿಟ್ಟು ಇದೆ. ಇದೇ ಅವನ ಅಭಿವ್ಯಕ್ತಿಗೆ ಹೆಚ್ಚು ನಿಖರತೆಯನ್ನು ತಂದುಕೊಡುವುದು. ಈ ಜಾತಿಯ ಸಮಸ್ಯೆ ಉಪದೇಶ ಮಾತ್ರವಾದ ಸಾರ್ವತ್ರಿಕ ಜಾಡ್ಯವಾಗಷ್ಟೇ ಅವನಿಗೆ ಕಾಣುತ್ತಿಲ್ಲ. ಅವನಿಗಿದು ವೈಯಕ್ತಿಕ ಸಮಸ್ಯೆ ಆಗಿದೆ. ಅದು ಅವನಿಗೆ ಉಸಿರು ಕಟ್ಟಿಸುತ್ತಿರುವುದರಿಂದಲೇ ಜಾತಿಯ ಆಳ–ಅಗಲಗಳನ್ನು, ಅದರ ಸೋಗಿನಲ್ಲಿ ನಡೆದಿರುವ ಇಬ್ಬಂದಿತನವನ್ನು ಹೆಚ್ಚು ಸ್ಪರ್ಶಿಸಿ ಛಾಪಿಸುತ್ತಾನೆ.

ಈ ಮಾತನ್ನು ಇನ್ನೊಬ್ಬ ದಾಸರೊಂದಿಗೆ ಹೋಲಿಸಿ ನೋಡಬಹುದು. ಸಮಕಾಲೀನನಾದ ಪುರಂದರದಾಸನನ್ನೇ ತೆಗೆದುಕೊಳ್ಳೋಣ. ಇವನೂ ಜಾತಿಯ ವಿಚಾರಗಳನ್ನು ಅಲ್ಲಲ್ಲಿ ಆಡಿದ್ದಾನೆ.

"ಆವ ಕುಲವಾದರೇನು ಆವನಾದರೇನು ಆತ್ಮ ಭಾವವರಿತಮೇಲೆ"

*

"ಕುಲದ ಮೇಲೆ ಹೋಗಬೇಡ ಕುಲವಿಲ್ಲ ಜ್ಞಾನಿಗಳಿಗೆ"

*

ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ ।

---

೨. ಇಂದ್ರಿಯ ಸೂತಕದುರ್ಗಂಧ ಮಲಮೂತ್ರ ।
ಬಂದ ಠಾವಿನ ನಿಜ ಗುರುತನರಿಯೆ ।
ಬಂದದ್ದು ಬಚ್ಚಲಗುಣಿ ತಿಂದದ್ದು ಮೊಲೆಮಾಂಸ ?
ಅಂಧಕ ತನಗಿನ್ನೇತರ ಕುಲವಯ್ಯ ।

೩. ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ ।
ಅಟ್ಟಿ ಬಡಿಯುತಲಿಹರೊ ಕೃಷ್ಣ ॥

ಗಣಗಣ ಗಂಟೆಯ ಬಾರಿಸುವರಯ್ಯ । ತನುವಿನ ಕೋಪವೂ ಹೊಲೆಯಲ್ಲವೆ ।

ಪರಧನ ಪರಸತಿ ಹೊಲೆಯಲ್ಲವೆ । ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ । ಇದಕೇನು ಮದ್ದೋ ಪುರಂದರ ವಿಠಲ

*

–ಮುಂತಾದುವುಗಳನ್ನು ಗಮನಿಸಿ. ಅನುಭವಿಸಿ ಬಂದ ಉದ್ಗಾರ ಇಲ್ಲಿದೆ ಅನಿಸುವುದಿಲ್ಲ. ಆವ ಕುಲವಾದರೇನು ಎಂಬಲ್ಲಿಯಾಗಲೀ ಕುಲದ ಮೇಲೆ ಹೋಗಬೇಡ ಎಂಬಲ್ಲಿಯಾಗಲೀ ಪುರಂದರದಾಸ ಸಮಸ್ಯೆಯನ್ನು ಅನುಭವಿಸಿ ಮಾತನಾಡುತ್ತಿದ್ದಾನೆ ಅನಿಸುವುದಿಲ್ಲ. ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ ಇದಕೇನು ಮದ್ದೋ ಎನ್ನುವಲ್ಲಿ ಇದರ ಜಾರಿಕೆಯನ್ನು ಕಾಣಬಹುದು. ಉಪದೇಶ ಮಾತ್ರವಾದ ಮನಸ್ಸಿನ ಪ್ರತಿಕ್ರಿಯೆ ಇದು ಅನಿಸುತ್ತದೆ. ಇಂಥ ಕಡೆಯ ವಿಚಾರಗಳೆಲ್ಲ ಒಂದು ರೀತಿಯ ಹೇಳಿಕೆಯ ರೂಪದಲ್ಲಿ ಉಳಿದುಬಿಡುತ್ತವೆ. ಅದೇ ಕನಕದಾಸ "ಕುಲಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ" ಎಂಬಲ್ಲಿ ಅನುಭವದ ತೀವ್ರತೆಯನ್ನು, ನೇರತೆಯನ್ನು ಕಾಣುತ್ತೇವೆ. ಕಾರಣ ಕನಕದಾಸನಿಗೆ ಈ ಕುಲದ ವಿಚಾರ ಅಮೂರ್ತವಾದ ಕೇವಲ ವೈಚಾರಿಕ ಸಂಗತಿಯಾಗಿಲ್ಲ. ಅನುಭವ ಮತ್ತು ಅಭಿವ್ಯಕ್ತಿಗಳೆರಡೂ ಸಂಗಮಿಸಿ ಹರಳುಗಟ್ಟಿದ ಕ್ರಮದ ಪರಿಣಾಮವಿದು.

೫

ಕನಕದಾಸ ತನ್ನ ಅಭಿವ್ಯಕ್ತಿಗೆ ಪೂರಕವಾಗಿ ದುಡಿಸಿಕೊಳ್ಳುವ ಇನ್ನಿತರೆ ಅಂಶಗಳನ್ನು ಗಮನಿಸಬಹುದು. ದಾಸಪರಂಪರೆಯ ಇತರೆ ದಾಸರಿಗಿಂತ ಕನಕದಾಸ ಭಿನ್ನವಾದದ್ದು ಮಿಗಿಲಾದದ್ದು ಅವನ ಕೆಳಸ್ತರದಲ್ಲಿ ಹುಟ್ಟಿಬಂದ ಕಾರಣಕ್ಕೆ ಮತ್ತು ಅದಕ್ಕಾಗಿ ಅವಮಾನವನ್ನು ಇದಿರಿಸಬೇಕಾಗಿ ಬಂದ ಕಾರಣಕ್ಕೆ ಅಂತ ಹೇಳುವುದು ಕನಕದಾಸನಿಗೆ ನ್ಯಾಯ ನೀಡಿದಂತಾಗುವುದಿಲ್ಲ. ಅವನ ಜಾನಪದೀಯತೆ ಕೂಡ ಕೆಲಸ ಮಾಡುವ ರೀತಿಯಲ್ಲಿ ಈ ವಿಶೇಷತೆಯನ್ನು ಪರಿಗಣಿಸಬಹುದು. ಲೌಕಿಕ ಬದುಕಿನ ಕ್ಷಣಿಕತೆಯನ್ನು ಹೇಳುತ್ತಲೇ ಹೇಗೆ ಕವಿಯ ಈ ಜಾನಪದೀಯ ಮನಸ್ಸು ದುಡಿಯುತ್ತದೆ ಎಂಬುದಕ್ಕೆ ಈ ರಚನೆಗಳನ್ನು ಪೂರಕವಾಗಿ ನೋಡಬಹುದು.

"ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು

ನಿರ್ಮಲಿಲ್ಲದ ಮನಸು ತಾ ಕೊಳಚೆಹೊಲಸು"

*

"ಮೊಲೆ ಬಿದ್ದ ಹೆಣ್ಣಿನೊಳು ಮೋಹಕ್ಕೆ ಸೊಗಸಹುದೆ
ಬೆಲೆಬಿದ್ದ ಸರಕಿನೊಳು ಲಾಭವುಂಟೆ"

*

"ಬತ್ತಿ ಹೋಯಿತು ನದಿ ಬಿತ್ತದೆ ಬೆಳೆಯದೆ
ಅತ್ತರೆ ಬಹುದೇನೊ ಉತ್ತಮ ಫಲಸೂಸಿ"

*

ವೈದಿಕ ಬಂಧನಕ್ಕೆ ಬಿಗಿದುಕೊಳ್ಳಬೇಕಿದ್ದ ಸಂದರ್ಭದಲ್ಲೂ ಕನಕದಾಸ ತನ್ನ ಸ್ವತಂತ್ರ ನಿಲುವನ್ನು ವಿಮರ್ಶಕ ಗುಣವನ್ನು ಬಿಟ್ಟುಕೊಡುವುದಿಲ್ಲ. ಇಲ್ಲಿ ಕಲೆಗಾರನೊಬ್ಬ ಬದುಕಿನೊಳಗೆ ಚಿಪ್ಪುಕಟ್ಟಿಕೊಂಡ ಆಷಾಢಭೂತಿ ಜನರ ಮುಖವಾಡಗಳನ್ನು ವಿಕಾರಗೊಳಿಸದೆ ನೋಡುಗರಿಗೆ ಬಿಚ್ಚಿ ತೋರಿಸುವ ಕ್ರಮವಿದೆ. ನಮ್ಮೆಲ್ಲ ಮನಸ್ಸಿನೊಳಗೆ ಗೂಡುಕಟ್ಟಿಕೊಂಡಿರುವ ಈ ಹದ್ದು ಕಾಗೆ ನರಿ ನಾಯಿಗಳು ನಮ್ಮನ್ನು ಮನುಷ್ಯರಾಗಲು ಬಿಡುವುದಿಲ್ಲ. ಅವುಗಳನ್ನು ನಾವೇ ಸಲಹುತ್ತಿದ್ದೇವೆ. ಅವುಗಳನ್ನು ಕಳೆದುಕೊಳ್ಳುವುದೆಂದರೆ ನಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವುದೆಂದೇ ಅರ್ಥ. ಇದು ಸಮಾಜದಲ್ಲಿ ಪ್ರತಿಷ್ಠಿತರೆಂದುಕೊಂಡ ಜನರ ಬದುಕು. ಈ ಬದುಕನ್ನು ಕನಕದಾಸ ನಿಚ್ಚಳವಾಗಿ ಗುರುತಿಸಿ ಬಯಲು ಮಾಡುತ್ತಾನೆ.

'ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೇ'
'ನೀತಿ ತಪ್ಪಿದವರೆಲ್ಲ ದೇವ ಬ್ರಾಹ್ಮಣರೇ'
'ಹೊಟ್ಟೆಗುಡ ಮೃಗಗಳೆಲ್ಲ ಶ್ರೀವೈಷ್ಣವರೇ'
'ಭಂಗಿ ಮುಕ್ಕಗಳೆಲ್ಲ ಲಿಂಗವಂತರಹರೆ'
'ಜಳ್ಳು ಕೂಗನು ಕೂಗಿ ಬಗುಳಿ ಬಾಯಾರುವಂಥ ।
ಕಳ್ಳ ತುರುಕರಿಗೆಲ್ಲ ವೀರಸ್ವರ್ಗವುಂಟೆ'
'ವೇಷಧಾರಿಗಳೆಲ್ಲ ಸನ್ಯಾಸಿಗಳಾಗಬಲ್ಲರೆ'

ಮೌಢ್ಯ ಕಂದಾಚಾರಗಳು ಬಡಜನರ ಉದ್ಧಾರಕ್ಕೆ ಪೂರಕವಾಗಲಾರವು. ಅವರ ಅವಿರತ ಶೋಷಣೆ ತಪ್ಪದು. ಅವರಲ್ಲಿರುವ ಮೌಢ್ಯ ಹೋಗದೆ ತಿಳಿವಳಿಕೆ ಬಾರದು. ತಿಳಿವಳಿಕೆ ಇಲ್ಲದೆ ಜೀವನ ಸುಧಾರಿಸದು. ಜೀವನ ಸುಧಾರಿಸದೆ ಸಮಾಜ ತನ್ನ ಆರೋಗ್ಯಕರ ಸಮತೋಲನವನ್ನು ಕಾಪಾಡಿಕೊಳ್ಳದು. ಆದರೆ ಮೇಲೇರಿದ ಜನ ಕೆಳವರ್ಗದವರನ್ನು ಅಲ್ಲೇ ಉಳಿಸುವ ಕುತಂತ್ರದಲ್ಲಿ ಈ ಕ್ರಿಯೆ ನಿರಂತರಗೊಂಡಿದೆ ಕನಕದಾಸ ಇಂಥ ಸ್ವಾರ್ಥ ಬದುಕು

ಬೇಡವೆನ್ನುತ್ತಾನೆ. "ಎಲ್ಲಾರು ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ" ಎಂಬ ಇವನ ಕೀರ್ತನೆ ಸಮಾಜದ ಒಟ್ಟು ಬದುಕಿನ ಹಿಂದಿರುವ ಸ್ವಾರ್ಥವನ್ನು ಸಮರ್ಥವಾಗಿ ಚಿತ್ರಿಸುತ್ತದೆ. ಹಾಗಾದರೆ ಈ ಸಮಾಜವನ್ನು ಬೆಳೆಸುವ ಕುಡಿಗಳು ಹೇಗಿರಬೇಕು. ಇದಕ್ಕೆ ಕವಿಯ ಅಪೇಕ್ಷೆ ಇದು :

'ಸತ್ಯನೊಬ್ಬ ಮಗ ಶಾಂತನೊಬ್ಬ ಮಗ ।
ದುರ್ವೃತ್ತಿ ನಿಗ್ರಹನೊಬ್ಬ ಸಮಚಿತ್ತನೊಬ್ಬನು ॥
ಉತ್ತಮರೀ ನಾಲ್ಕು ಮಕ್ಕಳಿದ್ದ ಮೇಲೆ ।
ಹೆತ್ತರೇನು ಇನ್ನು ಹೆರದಿದ್ದರೇನಯ್ಯ॥

ಈ ಪದ್ಯದಲ್ಲಿರುವ ಕವಿಯ ಬಂಡಾಯ ಧ್ವನಿಯನ್ನು ಗಮನಿಸಬೇಕು. 'ಅಪುತ್ರಸ್ಯ ಗತಿರ್ನಾಸ್ತಿ' ಎಂದು ಅಖಂಡವಾಗಿ ನಂಬಿ ಬಂದ ಸಂಪ್ರದಾಯವನ್ನೇ ಪ್ರಶ್ನಿಸುತ್ತಾನೆ. ಒಳ್ಳೆಯ ಆಚಾರವಿಲ್ಲದ ಮನುಷ್ಯನಿಗೆ ಮಗನಿದ್ದರೂ ಸದ್ಗತಿ ಇಲ್ಲ ಎಂಬುದನ್ನು ಕನಕದಾಸ ಸ್ಪಷ್ಟವಾಗಿ ಹೇಳುತ್ತಾನೆ.

ಸ್ವಾರ್ಥಪರವಾದ ಮನುಷ್ಯ ಅದರ ಸಿದ್ಧಿಗಾಗಿ ಏನೆಲ್ಲ ಅನಿಷ್ಟ ಸಂಪ್ರದಾಯವನ್ನು ಹುಟ್ಟುಹಾಕಿಕೊಳ್ಳುತ್ತಾನೆ ಎಂಬುದನ್ನು ಕನಕದಾಸ ತಿಳಿಸಿದ್ದಾನೆ. ಮನಸ್ಸು ಮುಕ್ತಿಯನ್ನು ಪಡೆಯಬೇಕಾದರೆ ಇತರೆ ವಾಮಮಾರ್ಗಗಳನ್ನು ಬಿಡಬೇಕು. ಮುಕ್ತಿಯ ಪಡೆಯಬೇಕೆಂದರೆ ಮೇಗಣ ಲೋಕಕ್ಕೆ ತೆರಳುವುದೆಂದಲ್ಲ, ಕೆಟ್ಟವಿಚಾರಗಳಿಂದ ಮುಕ್ತವಾಗುವುದು ಎಂದು. ಇಂಥ ಮುಕ್ತಿಯನ್ನು ಬಯಸುವ ಮೌಢ್ಯತನವನ್ನು ಕನಕದಾಸ ಕೆದಕುತ್ತಾನೆ.

ಎಕ್ಕನಾತಿಯರ ಕಾಟ ಜಕ್ಕಿಯರು ಕನ್ಯೆಯರು ।
ಸೊಕ್ಕಿನಿಂದ ಸೊಂಟಮುರುಕ ಬೈರೇ ದೇವರು ॥
ಮಿಕ್ಕ ಮಾರಿ ಮಸಣಿ ಚೌಡಿ ಮೈಲಾರಿ ಮೊದಲಾದ । ಇಂಥ ತಕ್ಕು
ದೈವದ ಗೊಡವೆ ಬೇಡ ನರಕ ತಪ್ಪದು ॥

ಇಂಥ ಕಂದಾಚಾರದಿಂದ ಮನುಷ್ಯಕುಲ ಹಸನಾಗುವುದಿಲ್ಲ. ಮಾರಿ ಮಸಣಗಳ ಆಶ್ರಯಿಸುತ್ತಾ ಮನುಷ್ಯ ತಾನೂ ಕ್ರೂರಿಯಾಗುತ್ತಾನೆ. ಇಂಥ ಅನಾಚಾರ ಸಮಾಜಕ್ಕೆ ಕಂಟಕಪ್ರಾಯ ಎಂಬ ಎಚ್ಚರಿಕೆ ಅವನದು.

ತಮ್ಮ ಧರ್ಮಕ್ಕೆ ವಿರುದ್ಧವೆನಿಸುವ ಇತರ ಧರ್ಮಗಳ ಆಚರಣೆಯನ್ನು ನಂಬಿಕೆಗಳನ್ನು ಎಲ್ಲರೂ ಟೀಕಿಸಿದ್ದಾರೆ, ವಿಡಂಬಿಸಿದ್ದಾರೆ. ತಮ್ಮ ಧರ್ಮವೇ ಶ್ರೇಷ್ಠವೆಂದುಕೊಳ್ಳುವ ದ್ರಷ್ಟಾರರೆಲ್ಲ ತಮ್ಮದನ್ನು ಪ್ರಶ್ನಿಸಿಕೊಳ್ಳಲು ಹೋಗುವುದಿಲ್ಲ.

ಆದರೆ ಕನಕದಾಸ ಯಾವ ಧರ್ಮವನ್ನಾದರೂ ವಸ್ತುನಿಷ್ಠ ದೂರದಲ್ಲಿ ನಿಂತು ನೋಡಬಲ್ಲ. ಸಮಾನವಾಗಿ ಕಾಣಬಲ್ಲ ಹರಿಹರನನ್ನು ಒಂದೇ ರೀತಿಯಲ್ಲಿ ಗೌರವಿಸಬಲ್ಲ. ಇಂಥ ಅಪರೂಪದ ಮುಕ್ತ ವಿಚಾರಮಂಥನ ಆ ಕಾಲದ ಸಾಮಾಜಿಕ ಚಿಂತನೆಯು ಇತಿಹಾಸಕ್ಕೆ ನೆರವಾಗುತ್ತದೆ. ಬದುಕಿನ ಮೂಲನೆಲೆಯನ್ನು ಗುರುತಿಸಲು ಮತ್ತು ಬಲವುಳ್ಳವರ ಕುಟಿಲತೆಯನ್ನು ಹೊರಹಾಕಲು ಕನಕದಾಸ ಮಾಡಿದ ಈ ಬಗೆಯ ಪ್ರಯತ್ನ ಅವನಲ್ಲಿದ್ದ ನಿಷ್ಠುರ ಸಾಮಾಜಿಕ ಪ್ರಜ್ಞೆಯ ನೈಜ ಅಭಿವ್ಯಕ್ತಿ ಹೌದು. ಆದರೂ ತಾನುಂಡ ನೋವು ವಿಷಾದಗಳನ್ನು ಕೇವಲ ಆಕ್ರೋಶದ ಮಾತಾಡಿ ತೀರಿಸಿಕೊಳ್ಳದೆ ಅದನ್ನು ಸಾಹಿತ್ಯವಾಗಿಸಿ ಆ ಸಾಹಿತ್ಯದ ಮೂಲಕ ಈ ಸಾಮಾಜಿಕ ಜೀವನವನ್ನು ದರ್ಶಿಸಿದ ರೀತಿ ಗಮನಾರ್ಹವಾಗುತ್ತದೆ. ಇವತ್ತಿನ ಎಲ್ಲ ಆಧುನಿಕ ಸವಲತ್ತುಗಳನ್ನು ಬೆಂಬಲವಾಗಿಸಿಕೊಂಡು ಮಾತಾಡುವ ಕೆಳವರ್ಗದವನೊಬ್ಬನಿಗೂ ಇಂಥಾದ್ದೇನೂ ಇಲ್ಲದೆ ಅಂದು ಮಾತಾಡಿದ ಕನಕದಾಸನ ದನಿಗೂ ಇರುವ ಅಂತರವನ್ನು ಆಶಯವನ್ನು ಗಮನಿಸಬೇಕು.

೬

ಹೀಗೆ ವಿಚಾರಗಳನ್ನು ಶೋಧಿಸುತ್ತ ಜೀವನದ ಅರ್ಥ ಹುಡುಕತೊಡಗಿದ ಕನಕದಾಸನ ಜಾನಪದ ಮನಸ್ಸು ಕೊನೆಗೂ ವಾಸ್ತವಕ್ಕೆ ಒತ್ತು ಕೊಡಲಾಗದೆ, ಆಧ್ಯಾತ್ಮಿಕ ಗುಹ್ಯ ರಹಸ್ಯದಿಂದ ಬಿಡಿಸಿಕೊಳ್ಳದಾಯಿತು.

'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು.

*

ಆಸೆ ತರವಲ್ಲ ದಾಸನಾಗೋ । ಭವಪಾಶ ನೀಗೊ
ಶರೀರ ತಾನಲ್ಲ ತನ್ನದಲ್ಲ ॥

*

ಆವಬಲವಿದ್ದರೇನು ದೈವ ಬಲವಿಲ್ಲದವರಿಗೆ

–ಹೀಗೆ ವಿರಕ್ತಿಯ ತೊರೆ ಸ್ಥಾಯಿಯಾಗಿ ಹರಿಯುವುದನ್ನು ಕಾಣುತ್ತೇವೆ. ಕಣ್ಣು ಮುಚ್ಚಿಕೊಂಡು ಪರಂಪರೆಗೆ, ಬಂದ ಕರ್ಮಕ್ಕೆ ತಲೆಯೊಡ್ಡುವುದೊಂದೇ ಕಡೆಯ ದಾರಿ ಎಂಬ ಆತ್ಯಂತಿಕ ನಿಲುವಿಗೆ ಬರುವುದನ್ನು ಕಾಣುತ್ತೇವೆ. ಕನಕದಾಸನ ಜಾನಪದ ಮನಸ್ಸಿನ ಈ ಆರ್ತತೆ, ಶೋಧನೆ, ಹಂಬಲಿಕೆಗಳೆಲ್ಲ ಕೊನೆಗೊಮ್ಮೆ ವ್ಯಕ್ತಿನಿಷ್ಠವಾಗಿಬಿಡುತ್ತವೆ. 'ಆತ್ಮನಾವ ಕುಲ ಜೀವನಾವ ಕುಲ' ಎಂದು ಸಾರ್ವತ್ರಿಕವಾದ ಸವಾಲು ಹಾಕಿದವನು ಮುಂದೆ ಕಾಗಿನೆಲೆಯಾದಿ

ಕೇಶವನೊಲಿದ ಭಕ್ತರಿಗೆ ಕುಲವ್ಯಾವುದು–ಎಂಬಲ್ಲಿನ ಇದರ ಸೋಲನ್ನು ಕಾಣಬಹುದು. ಸಮಾಜದ ಆರೋಗ್ಯವನ್ನು ಬಯಸುವ ಕವಿ, ಭಕ್ತನಾದಾಗ ಆತ್ಮ ನಿರೀಕ್ಷಣೆಯಲ್ಲಿ ಸೀಮಿತವಾಗಿ ಬಿಡುತ್ತಾನೆ. ಪ್ರಾಯಶಃ ಕನಕದಾಸನ ಸಾಮಾಜಿಕ ಸಂದರ್ಭದಲ್ಲಿ ಅವನಲ್ಲಿದ್ದ ಕವಿ ಮತ್ತು ಭಕ್ತ ಇಬ್ಬರನ್ನೂ ಭಿನ್ನ ಮಾಡಿ ನೋಡಲಾಗದಿರುವುದೇ ನಮ್ಮ ಮುಂದಿನ ಮಾನದಂಡಕ್ಕೆ ಸಮಸ್ಯೆ ಆಗಲೂಬಹುದು. ಈ ಕವಿ ಮತ್ತು ಭಕ್ತ ಇಬ್ಬರನ್ನು ಭಿನ್ನ ಮಾಡಿ ನೋಡಿದರೂ ಯಾವುದೊಂದಾದರೂ ಏಕಪಕ್ಷೀಯವಾಗಿ ಬಿಡುವುದುಂಟು. ಇದೇ ಕನಕದಾಸನ ವೈಶಿಷ್ಟ್ಯಪೂರ್ಣವಾದ ಸಾಮರ್ಥ್ಯವಿರಬಹುದು.

ಏನೇ ಇರಲಿ, ಕನಕದಾಸ ಬದುಕಿದ ಪರಿಸರ ಮತ್ತು ಆ ಕಾಲದ ಧಾರ್ಮಿಕ ಸೆಳೆತಗಳನ್ನು ಈ ನೆಲಗುಣದ ಇತಿಹಾಸಕ್ಕೆ ಸಮೀಕರಿಸಿ ನೋಡಿದರೆ ಅಂದಿನ ಕನಕದಾಸನಿಂದ ಇಂದು ಇನ್ನೂ ಹೆಚ್ಚಿನದನ್ನು ನಿರೀಕ್ಷಿಸುವುದರಲ್ಲಿ ಅರ್ಥವಿಲ್ಲವೇನೋ, ದರಿದ್ರ ಮೌಲ್ಯ ವ್ಯವಸ್ಥೆಯ ಈ ನಾಡಿನಲ್ಲಿ ಹುಟ್ಟು ಪ್ರತಿಭೆಯನ್ನು ರೂಢಿಸಿಕೊಂಡು, ತನ್ನ ಜೀವನದ ಅರ್ಥ ಹುಡುಕಬಯಸಿದ, ತಾನು ನಿಂತ ನೆಲದ ವಿಪರ್ಯಾಸಗಳು ಇಲ್ಲವಾಗಬೇಕೆಂದು ಬಯಸಿದ ಕನಕದಾಸನ ನಿಜ ಬದುಕು, ಜೀವನ ಸಂದೇಶ ಈ ನಾಡಿನ ಕೆಳವರ್ಗದ ಸಾಮಾನ್ಯನೊಬ್ಬನ ಅಸಹಾಯಕತೆ, ತೊಳಲಾಟ, ದುರಂತಗಳೊಳಗೇ ಉಳಿದುಹೋದದ್ದು ನಾವು ಕಾಯ್ದಿಟ್ಟುಕೊಂಡ ಈ ಸಮಾಜ ವ್ಯವಸ್ಥೆಯೇ ಕಾರಣವಿರಬಹುದೆ ?

# ಕನಕದಾಸರ ಕೃತಿಗಳಲ್ಲಿ ಸಾಮಾಜಿಕ ನೆಲೆ

**ಡಾ. ಎಸ್. ಎಸ್. ಕೋತಿನ**

ಸಾಹಿತ್ಯಕ ಸಂದರ್ಭದಲ್ಲಿ ಸಾಮಾಜಿಕತೆಯ ಪರಿಕಲ್ಪನೆಯೇ ಒಂದು ಜಟಿಲವಾದ ಹಾಗೂ ಅತ್ಯಂತ ಸಂಕೀರ್ಣವಾದ ವಿಚಿತ್ರ ಪರಿಕಲ್ಪನೆ. ಸಮಾಜ ಎನ್ನುವುದು ಅಸಂಖ್ಯಾತ ಅಣುಗಳಿಂದ ರೂಪಗೊಂಡ ದ್ರವ ಹಾಗೂ ಘನವಸ್ತುಗಳಿಂದಲೇ ಹಲವಾರು ಸೂಕ್ಷ್ಮ ಹಾಗೂ ಸ್ಥೂಲ ಘಟಕಗಳಿಂದ ವಿಭಿನ್ನ ಸ್ತರದಲ್ಲಿ, ವಿಭಿನ್ನ ರೀತಿಯಲ್ಲಿ ಆಕರಗೊಂಡದ್ದು ; ಅದರಂತೆ ಬಾಹ್ಯಪರಿಸರದಿಂದಾಗಿ ಕಾಲಕಾಲಕ್ಕೆ ವಿವಿಧ ಹಂತಗಳಲ್ಲಿ ರೂಪ ವ್ಯತ್ಯಾಸಗೊಳ್ಳುತ್ತ ಹೋಗುವಂತಹದು. ಒಂದು ಸಮಾಜದಲ್ಲಿಯ ಆ ಎಲ್ಲ ಘಟಕಗಳ ಪರಸ್ಪರ ಕ್ರಿಯೆ–ಪ್ರತಿಕ್ರಿಯೆಗಳ, ಅವುಗಳ ಆಂತರಿಕ ವ್ಯಾಪಾರಗಳ ಹಾಗೂ ಅವುಗಳ ಒಟ್ಟು ಪರಿಣಾಮಗಳ ಸ್ವರೂಪ, ಒಬ್ಬ ಪ್ರಜ್ಞಾವಂತ ವ್ಯಕ್ತಿಗೆ ಒಂದು ಅತ್ಯಂತ ಕುತೂಹಲಕಾರಿಯಾದ ಸ್ವಾರಸ್ಯದ ವಿಷಯವೂ ಹೌದು. ಸಮಷ್ಟಿಯ ಹಿನ್ನೆಲೆಯಲ್ಲಿ ಹೇಳುವದಾದರೆ, ಒಂದು ಸಂಸ್ಕೃತಿಯ ಚೌಕಟ್ಟಿಗೆ ಒಳಪಟ್ಟು ಒಂದು ನಿರ್ದಿಷ್ಟ ಪ್ರದೇಶದ ಕಕ್ಷೆಯಲ್ಲಿ ಬಾಳುವ ಜನಾಂಗ ಒಂದು ಅಖಂಡ ಸಮಾಜವಾಗಿ ಗುರುತಿಸಿಕೊಳ್ಳುತ್ತದೆ ; ಅದರಂತೆ ಜಾತಿ–ಮತ–ಪಂಥ–ಧರ್ಮ ಮತ್ತು ಅವುಗಳ ವಿಶಿಷ್ಟವೆನ್ನಬಹುದಾದ ಸಂಸ್ಕೃತಿ–ಪರಂಪರೆಗಳಿಂದಾಗಿ ಆ ಒಟ್ಟು ಸಮಾಜವೇ ಪ್ರತ್ಯೇಕ ಅಸ್ತಿತ್ವವುಳ್ಳ ವಿಭಿನ್ನ ಘಟಕಗಳಾಗಿಯೂ ಕಾಣಿಸಿಕೊಳ್ಳುತ್ತದೆ. ಹಲವು ಜಾತಿ–ಮತ–ಧರ್ಮ ಇತ್ಯಾದಿಗಳಿಂದ ಕೂಡಿದ ಭಾರತೀಯ ಸಂಸ್ಕೃತಿಯ ಚಾರಿತ್ರಿಕ ಸಂದರ್ಭದಲ್ಲಿಯಂತೂ ಇದು ಇನ್ನೂ ಸ್ಪಷ್ಟವಾಗಿ ಗೋಚರಿಸುವಂತಹದು. ಇಂಥ ಅಖಂಡ ಸಮಾಜದ ಒಂದು ಘಟಕದ ಅಣುವೆನಿಸಿಕೊಳ್ಳುವ ವ್ಯಕ್ತಿ ಆ ಸಮಾಜದ ವಿವಿಧ ಘಟಕಗಳ ಜೊತೆಗೆ ಇಟ್ಟುಕೊಳ್ಳುವ ಭಾವನಾತ್ಮಕ, ವೈಚಾರಿಕ ಮತ್ತು ವ್ಯಾವಹಾರಿಕ ಸಂಬಂಧ, ಕ್ರಿಯೆ–ಪ್ರತಿಕ್ರಿಯೆಗಳ ಒಟ್ಟು ಪರಿಣಾಮ ಆ ವ್ಯಕ್ತಿಯ ಸಾಮಾಜಿಕ ಅನುಭವವಾಗಿ ಮತ್ತು ಆ ಪರಿಸರದಲ್ಲಿಯೇ ರೂಪಗೊಂಡ

ಆತನ ವ್ಯಕ್ತಿತ್ವದ ಬಹು ಮುಖ್ಯ ದ್ರವ್ಯವಾಗಿ ಪರಿಣಮಿಸುತ್ತದೆ. ಇದನ್ನೇ ಇನ್ನೂ ಬಿಡಿಸಿ ಹೇಳುವದಾದರೆ, ಒಂದು ನಿರ್ದಿಷ್ಟ ಸಮಾಜದ ಅಂದರೆ ಯಾವುದೇ ಜಾತಿ–ಮತ–ಧರ್ಮಕ್ಕೆ ಸಂಬಂಧಿಸಿದ ವ್ಯಕ್ತಿ ಆ ತನ್ನ ಸಮಾಜದ ಮೂಲಕವೇ ಪಡೆಯುವ ತೀರ ವೈಯಕ್ತಿಕ ಸ್ತರದ ಅನುಭವಗಳು ಒಂದಾದರೆ, ಅದೇ ವ್ಯಕ್ತಿ ತನ್ನ ಮತೀಯ ಸಮಾಜದ ಪ್ರತಿನಿಧಿಯಾಗಿ ಬೇರೊಂದು ಮತದ ಸಮಾಜದೊಂದಿಗೆ ವ್ಯವಹರಿಸುವ ಮತ್ತು ಸ್ಪಂದಿಸುವ ರೀತಿ ; ಪಡೆಯಬಹುದಾದ ಅನುಭವದ ಸ್ವರೂಪ ಇನ್ನೊಂದು ಬಗೆಯದು ; ಇನ್ನು ಅದೇ ವ್ಯಕ್ತಿ ಹಲವು ಘಟಕಗಳ ಸಮುದಾಯವಾದ ತನ್ನ ನಾಡಿನ ಒಟ್ಟು ಸಮಾಜಕ್ಕೆ, ಆ ಸಮಾಜದ ಹಿತಾಸಕ್ತಿಯನ್ನೇ ಕೇಂದ್ರವಾಗಿಟ್ಟುಕೊಂಡು ಅದರ ಸಮಸ್ಯೆಗಳನ್ನು, ಅದರ ಸ್ವರೂಪದ ಆಂತರ್ಯವನ್ನು ಪ್ರಜ್ಞಾಪೂರ್ವಕವಾಗಿ ಶೋಧಿಸುವ ಮತ್ತು ಅದರ ವ್ಯವಸ್ಥೆಗೆ ತನ್ನೆಲ್ಲ ಸಾಧ್ಯತೆಗಳೊಂದಿಗೆ ಪ್ರತಿಕ್ರಿಯಿಸುವ ರೀತಿ ಮತ್ತೂ ಬೇರೆಯಾಗಿರುತ್ತದೆ. ಒಂದು ಸಮಾಜದ ಮೂಲ ಘಟಕವೆನಿಸುವ ಒಬ್ಬ ವ್ಯಕ್ತಿಯ ಸೃಜನಶೀಲಪ್ರತಿಭೆ ಇಂಥ ಹಲವು ಬಗೆಯ ಮೃದುವಾದ ಸ್ಪರ್ಶ ಅಥವಾ ವ್ಯಗ್ರ ಆಘಾತಗಳಿಂದ ಚೇತರಿಸಿಕೊಂಡು ಕ್ರಿಯಾಶೀಲವಾದಾಗ ಈ ಎಲ್ಲ ನೆಲೆಯ ಸಾಮಾಜಿಕ ಅನುಭವಗಳು ವಿಭಿನ್ನ ರೀತಿಯಲ್ಲಿ ಆಕಾರಗೊಳ್ಳುತ್ತವೆ. ಇಂಥ ಸಾಮಾಜಿಕ ಅನುಭವದ ಅಭಿವ್ಯಕ್ತಿ ಸಾಮಾಜಿಕ ಸಂದರ್ಭ ಹಾಗೂ ಕವಿಯ ವೈಯಕ್ತಿಕ ಮನೋಧರ್ಮದಿಂದಾಗಿ ಭಾವನಾತ್ಮಕ ಇಲ್ಲವೆ ವೈಚಾರಿಕ ಮಟ್ಟದಲ್ಲಿ ಪ್ರತಿಫಲಿಸುತ್ತದೆ. ಆತನ ಅನುಭವ ವೈಯಕ್ತಿಕ ನೆಲೆಯದಾದಾಗ ಅಭಿವ್ಯಕ್ತಿಯಲ್ಲಿ ಭಾವನಾತ್ಮಕತೆ ಪ್ರಧಾನವಾಗುತ್ತದೆ ; ಸಾಮಾಜಿಕ ಹಿತಾಸಕ್ತಿಯ ನೆಲೆಯಲ್ಲಿಯದಾದರೆ ವೈಚಾರಿಕತೆ ಪ್ರಧಾನಗೊಳ್ಳುತ್ತದೆ ; ಆದ್ದರಿಂದ ಸಾಮಾಜಿಕ ಪ್ರಜ್ಞೆಯ ನೆಲೆಗಳನ್ನು ಒಳಗೊಂಡ ಯಾವುದೇ ಒಂದು ಕೃತಿ ಅಂದಿನ ಸಾಮಾಜಿಕ ಪರಿಸರದ ವ್ಯಕ್ತರೂಪವಾದಂತೆ ಆ ಕವಿಯ ವ್ಯಕ್ತಿತ್ವದ ಪ್ರಕಟರೂಪವೂ ಆಗಿರುತ್ತದೆ. ಹೀಗೆಂದ ಮಾತ್ರಕ್ಕೆ ಯಾವುದೇ ಕೃತಿಯ ಕೇಂದ್ರಪ್ರಜ್ಞೆ ಸಾಮಾಜಿಕವೇ ಎಂದಾಗಲಿ, ಆ ಕೃತಿಯಲ್ಲಿ ಪ್ರಕಟವಾದ ಸಾಮಾಜಿಕಪ್ರಜ್ಞೆಯೇ ಅದರ ಹೆಗ್ಗಳಿಕೆಯ ಲಕ್ಷಣವೆಂದಾಗಲಿ ಭ್ರಮಿಸಬೇಕಾಗಿಲ್ಲ. ಯಾವುದೇ ಕೃತಿ ಸಾಮಾಜಿಕ ಸಂದರ್ಭದಲ್ಲಿಯೇ ಮೂಡಿಬರುವದು ಅನಿವಾರ್ಯವಾದ್ದರಿಂದ ಸಾಮಾಜಿಕತೆಯ ಸೋಂಕಿಲ್ಲದೆ ಅದು ಹುಟ್ಟುವದೂ ಕಷ್ಟ, ಬದುಕುವದೂ ಕಷ್ಟ ಎಂಬುದು ಗಮನಿಸಬೇಕಾದ ವಿಷಯ.

ಹೀಗೆ ಹಲವು ನೆಲೆಗಳಲ್ಲಿ ಚೇತರಿಸಿಕೊಳ್ಳುವ ಕವಿಯ ಸಾಮಾಜಿಕ

ಪ್ರಜ್ಞೆ ಜಾತಿ–ಮತ–ಧರ್ಮ–ಪರಂಪರೆ ಸಂಸ್ಕೃತಿ, ಭಾಷೆ, ಜನಜೀವನದ ಸ್ಥಿತಿಗತಿ ಇತ್ಯಾದಿಗಳ ನೆಲೆಯಲ್ಲಿ, ವೈಯಕ್ತಿಕ ಅನುಭವ–ಸಂವೇದನೆಗಳ ನಿರೂಪಣೆಯಾಗಿ ಅಭಿಮಾನದ ಉತ್ಕಟ ವರ್ಣನೆಯಾಗಿ. ವಿಡಂಬನೆಯಾಗಿ, ವಿಮರ್ಶೆಯಾಗಿ, ಉಪದೇಶವಾಗಿ ಹಲವು ಬಗೆಯಲ್ಲಿ ಪ್ರಕಟಗೊಳ್ಳಬಲ್ಲದು. ಹೀಗೆ ಕಾವ್ಯದಲ್ಲಿ ಬಿಚ್ಚಿಕೊಳ್ಳುವ ಕವಿಯ ಸಾಮಾಜಿಕ ಪ್ರಜ್ಞೆಯ ಪದರುಗಳು ಸರೋವರದ ಅಲೆಗಳಂತೆ ಸಂಕೀರ್ಣ ಮತ್ತು ವಿಪುಲ. ಆದ್ದರಿಂದ ಕಾವ್ಯದಲ್ಲಿಯ ಸಾಮಾಜಿಕ ನೆಲೆಗಳ ಅನ್ವೇಷಣೆ ಮತ್ತು ವಿಮರ್ಶೆ ಆ ಕಾವ್ಯದ ಹಿಂದಿರುವ ಸಾಮಾಜಿಕ ಪ್ರೇರಣೆ–ಪ್ರಚೋದನೆಗಳ ಮೂಲಕವಾಗಿ, ಅಂದಿನ ಸಾಮಾಜಿಕ ಪರಿಸರ–ಪರಂಪರೆ ಅವುಗಳಿಗೆ ಸ್ಪಂದಿಸುವ ಕವಿಯ ಮನೋಧರ್ಮ ಇತ್ಯಾದಿಗಳ ಮೂಲಕವಾಗಿ ಮತ್ತು ಕವಿಯ ಅಭಿವ್ಯಕ್ತಿಯ ಹಿಂದಿರುವ ಒತ್ತಡ ಹಾಗೂ ಆತಂಕ ಇತ್ಯಾದಿಗಳ ಮೂಲಕ ನಡೆಯಬೇಕಾಗುತ್ತದೆ.

ಈ ಎಲ್ಲ ಹಿನ್ನೆಲೆಗಳಲ್ಲಿ ಕನಕದಾಸರ ಕೃತಿಗಳ, ವಿಶೇಷವಾಗಿ ಕಾವ್ಯಗಳಲ್ಲಿಯ ಸಾಮಾಜಿಕ ನೆಲೆಗಳ ಶೋಧನೆಗೆ ತೊಡಗಿದಾಗ ಅವರೊಬ್ಬರು, ದಾಸಸಾಹಿತ್ಯದ ಮಟ್ಟಗಳಂತೂ ಸರಿಯೆ, ಒಟ್ಟು ನಮ್ಮ ಕಾವ್ಯ ಪರಂಪರೆಯಲ್ಲಿಯೇ ವೈಯಕ್ತಿಕ ವೈಶಿಷ್ಟ್ಯಗಳನ್ನು ಉಳಿಸಿಕೊಂಡ ಒಬ್ಬ ಗಮನಾರ್ಹ ಕವಿಯಾಗಿ ನಿಲ್ಲುತ್ತಾರೆ. ಅದುವರೆಗಿನ ಹರಿದಾಸರ ಸೃಜನಶೀಲತೆ ಕೇವಲ ಕೀರ್ತನೆಗಳ ರಚನೆಗೆ ಮಾತ್ರ ಸೀಮಿತವಾಗಿದ್ದ ಸಂದರ್ಭದಲ್ಲಿ ಮತ್ತು ಆ ಎಲ್ಲ ಕೀರ್ತನೆಗಳು ತಮ್ಮ ಏಕತಾನತೆಯಿಂದ ಕಲಾತ್ಮಕತೆ ಮತ್ತು ಲವಲವಿಕೆಯನ್ನು ಕಳೆದುಕೊಳ್ಳುತ್ತಿದ್ದ ಸಂದರ್ಭದಲ್ಲಿ, ಕೀರ್ತನೆಗಳ ಜೊತೆಗೆ ಕಾವ್ಯಗಳನ್ನೂ ರಚಿಸುವ ಮೂಲಕ ಒಟ್ಟು ದಾಸಸಾಹಿತ್ಯ ಪರಂಪರೆಗೆ ಒಂದು ಮಿಗಿಲಾದ ಘನತೆಯನ್ನು ತಂದುಕೊಟ್ಟ ಅಪೂರ್ವ ಶ್ರೇಯಸ್ಸು ಕನಕದಾಸರದು. ಅಷ್ಟೇ ಏಕೆ, ಬೇರೆ ಬೇರೆ ನೆಲೆಗಳಲ್ಲಿ ಬೇರುಚಾಚಿದ ತಮ್ಮ ಸಾಮಾಜಿಕ ಪ್ರಜ್ಞೆಯ ಮೂಲಕ ನಮ್ಮ ಕನ್ನಡ ಕಾವ್ಯ ಪರಂಪರೆಗೆ ಒಂದು ಘನವಾದ ವೈಶಿಷ್ಟ್ಯವನ್ನು ತಂದು ಕೊಟ್ಟ ಶ್ರೇಯಸ್ಸು ಕೂಡ ಕನಕದಾಸರದು. ಅದರಲ್ಲೂ ಇಡಿ ಕಾವ್ಯದ ವಸ್ತುವನ್ನೇ ಒಂದು ರೂಪಕವನ್ನಾಗಿಸಿ ತಮ್ಮ ಸಾಮಾಜಿಕ ಎಲ್ಲ ಪ್ರಜ್ಞಾವಲಯಗಳನ್ನೂ ಪ್ರಚ್ಛನ್ನಗೊಳಿಸಿಕೊಡುವ ಅವರ ರೀತಿಯಂತೂ ನಮ್ಮ ಕಾವ್ಯ ಪರಂಪರೆಯಲ್ಲಿಯೇ ಅತ್ಯಂತ ಅಪೂರ್ವವಾದ ವೈಶಿಷ್ಟ್ಯ. ಹಾಗೆ ನೋಡಿದರೆ ಯಾವ ಕಾವ್ಯಕ್ಕೂ ಸಾಮಾಜಿಕತೆಯನ್ನು ಸಂಪೂರ್ಣವಾಗಿ ನಿರಾಕರಿಸುವುದು ಸಾಧ್ಯವಿಲ್ಲವೆಂದು ಒಪ್ಪಿಕೊಂಡರೂ, ಸಾಮಾಜಿಕ

ಸಂವೇದನೆಗಳನ್ನು ಹೀಗೆ ಕಾವ್ಯದಲ್ಲಿ ಕಲಾತ್ಮಕವಾಗಿ ಗೌಪ್ಯಗೊಳಿಸಿಕೊಡುವ ಕನಕದಾಸರ ಪ್ರತಿಭಾ ತಂತ್ರದಿಂದಾಗಿ ಅವರ ಕಾವ್ಯಗಳು ಪ್ರತ್ಯೇಕತೆಯನ್ನು ಕಾಪಾಡಿಕೊಳ್ಳುತ್ತವೆ ಎನ್ನುವದನ್ನು ಅಲ್ಲಗಳೆಯಲಾಗದು. ಪಂಪನಂಥ ಮಾರ್ಗ ಕವಿಗಳ ಲೌಕಿಕ ಕಾವ್ಯಗಳಲ್ಲಿ ಆಶ್ರಯದಾತರನ್ನು ಕಥಾನಾಯಕನಿಗೆ ಸಮೀಕರಿಸಿ ಹೇಳುವಲ್ಲಿ ಒಟ್ಟು ವಸ್ತುವೇ ಒಂದು ರೂಪಕವಾಗಿ ಕೆಲಸಮಾಡುತ್ತದೆಯೆಂದು ಹೇಳಿದರೆ ಈ ಸಂದರ್ಭದಲ್ಲಿ ಅದು ಕೇವಲ ಭ್ರಮೆಯಾಗಿ ಕಾಣಿಸಿಕೊಂಡಿತು. ಮೇಲಾಗಿ ಕನಕದಾಸರ ಕೃತಿಗಳಲ್ಲಿಯಂತೆ ಸಾಮಾಜಿಕತೆಯೇ ಅವುಗಳ ಕೇಂದ್ರಪ್ರಜ್ಞೆಯಾಗಿ ಕೊನೆಯವರೆಗೂ ಉಳಿಯುವದಿಲ್ಲ. ಪಂಪಾದಿ ಕವಿಗಳ ಕಾವ್ಯಗಳಲ್ಲಿ ಈ ಸಾಮಾಜಿಕತೆ ಆಕಸ್ಮಿಕ ; ಆನುಷಂಗಿಕ ; ಅಲ್ಲಿಷ್ಟು–ಇಲ್ಲಿಷ್ಟು ಮಿಂಚಿ ಮರೆಯಾಗುವಂತಹದು. ಜೈನ ಕವಿಗಳ ಪುರಾಣ ಕಾವ್ಯಗಳಲ್ಲಿ ಸಾರ್ವಕಾಲಿಕವೆನ್ನಬಹುದಾದ ಮಾನವನ ಮೂಲಭೂತ ಗುಣ–ಸ್ವಭಾವ, ರಾಗದ್ವೇಷಾದಿಗಳ ನಿರೂಪಣೆ ಮಾತ್ರ ಕಂಡುಬರುತ್ತದೆ ; ಅವೆಲ್ಲ ತಮ್ಮ ಧರ್ಮಪ್ರಚಾರವನ್ನೇ ಮುಖ್ಯ ಗುರಿಯನ್ನಾಗಿ ಮಾಡಿಕೊಂಡವುಗಳು. ಜಿನಸೇನ–ಬ್ರಹ್ಮಶಿವರ ಕೃತಿಗಳಲ್ಲಿಯ ದಟ್ಟವೆನ್ನಬಹುದಾದ ಸಾಮಾಜಿಕತೆ ಕೇವಲ ಪರಮತ ವಿಡಂಬನೆಗೆ ಮಾತ್ರ ಸೀಮಿತ.

ತಮ್ಮ ಧರ್ಮದ ಸ್ವರೂಪವನ್ನು ವಿವರಿಸುವ ಪ್ರಮುಖ ಉದ್ದೇಶ ಹೊಂದಿದ ಮುಂದಿನ ವೀರಶೈವ ಮತ್ತು ಬ್ರಾಹ್ಮಣ ಕವಿಗಳ ದೇಸಿಕಾವ್ಯಗಳಲ್ಲಿ ಸಾಮಾಜಿಕ–ಸಾಂಸ್ಕೃತಿಕ ಪರಿಸರ ಮತ್ತು ಪರಂಪರೆಯೊಂದಿಗೆ ಅಂದಿನ ಜೀವನದ ಸೊಗಸಾದ ಚಿತ್ರಗಳನ್ನು ತಮ್ಮ ಮತಸಂಬಂಧಿಯಾಗಿ ಕೊಡುವಲ್ಲಿಯೇ ತೃಪ್ತಿಪಟ್ಟುಕೊಂಡವುಗಳು ; ಅದರ ಆಚೆನದನ್ನು ಕುರಿತು ವೈಚಾರಿಕ ತಳಹದಿಯ ಮೇಲೆ ಸಾಮಾಜಿಕವಾಗಿ ಹೆಚ್ಚಿನದನ್ನು ಸಾಧಿಸಿಕೊಡುವ ಮಹತ್ವಾಕಾಂಕ್ಷೆ ಅವುಗಳದಲ್ಲ. ಹರಿಹರನಲ್ಲಿ ಮಾತ್ರ ಅಂದಿನ ಸಾಮಾಜಿಕ ವ್ಯವಸ್ಥೆಯ–ದುಷ್ಪರಿಣಾಮಗಳ ವಿರುದ್ಧ ನಿಷ್ಠುರ ಪ್ರತಿಕ್ರಿಯೆ, ಒಬ್ಬ ಬೆಂಗುಡಿಗನ ವ್ಯವಸ್ಥೆಯ–ದುಷ್ಪರಿಣಾಮಗಳ ವಿರುದ್ಧ ನಿಷ್ಠುರ ಪ್ರತಿಕ್ರಿಯೆ, ಒಬ್ಬ ಬೆಂಗುಡಿಗನ ಆವೇಶವಾಗಿ, ಆಕ್ರೋಶವಾಗಿ ಕೇಳಿಬರುತ್ತದೆ. ಆದರೆ ಅದೆಲ್ಲ ಮತೀಯ ಪರಿಧಿಯಲ್ಲಿಯೇ ರಿಂಗಣಗೈಯುತ್ತದೆ ; ಮೇಲಾಗಿ ಪರಮತೀಯರ ಬಗೆಗಿನ ಆತನ ರೋಷ ನಿಯಂತ್ರಣಗಳನ್ನು ಕಳೆದುಕೊಳ್ಳುತ್ತದೆ. ಅಂದರೆ ಆತನ ಸಾಮಾಜಿಕ ಪ್ರಜ್ಞೆ ಮುಖ್ಯವಾಗಿ ಮತೀಯ ಮೂಲದ್ದು.

ಹರಿದಾಸರ ಸಾಮಾಜಿಕ ಪ್ರಜ್ಞೆಯಂತೂ ಜನತೆಯಲ್ಲಿ ಭಕ್ತಿಯ

ಲೋಲುಪತೆಯನ್ನು ತುಂಬುವದರಲ್ಲಿಯೇ ತನ್ನ ಶಕ್ತಿಯ ಸಾರ್ಥಕತೆಯನ್ನು ಅನುಭವಿಸಿತು. ಸಾಮಾಜಿಕವಾಗಿ ಅದರ ಪರ್ಯಾಯ ಪ್ರಯೋಜನ ಏನೇ ಇದ್ದರೂ ಅವರ ಮೂಲ ಪ್ರೇರಣೆ ಸಾಮಾಜಿಕತೆಯಲ್ಲ. ಅವರೆಲ್ಲ ಒಂದು ಸ್ಥಗಿತ ವ್ಯವಸ್ಥೆಗೆ ಸಮರ್ಪಿಸಿಕೊಂಡದ್ದರಿಂದ ಹರಿದಾಸರಿಗೆ ಸಾಮಾಜಿಕ ಪರಿವರ್ತನೆ ಅಗತ್ಯವೆನಿಸಿರಲಿಲ್ಲ. ಆದ್ದರಿಂದ ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಅವರು ಮಾಡಿದ್ದು–ಪಿಸಿದು ಹೋದಲ್ಲೆಲ್ಲ ಹೊಲಿಗೆ ಹಾಕುವ, ಹರಿದು ಹೋದಲ್ಲೆಲ್ಲ ತೇಪೆ ಹಾಕುವ ಕೆಲಸವನ್ನು. ಆದ್ದರಿಂದ ಅವರ ಸಾಮಾಜಿಕ ಪ್ರಜ್ಞೆ ಮುಗ್ಧ ಅಜ್ಞಾನಿಗಳಿಗೆ ಮಾಡುವ ಉಪದೇಶದ ಮಟ್ಟಕ್ಕೊ, ಕಿಡಿಗೇಡಿಗಳಿಗೆ ಬೈದು ಬುದ್ಧಿಹೇಳುವ ಮಟ್ಟಕ್ಕೊ, ಇಲ್ಲವೆ ಸಾಮಾಜಿಕವಾಗಿ ಸೌಲಭ್ಯಗಳಿಂದ ವಂಚಿತರಾದ ದೀನರಿಗೆ ಕರ್ಮವಾದವನ್ನು ಮುಂದೆ ಮಾಡಿ ಸಾಂತ್ವನ ಸೂಚಿಸುವ ಮಟ್ಟಕ್ಕೊ ನಿಂತುಬಿಡುತ್ತದೆ.

ಒಟ್ಟಿನಲ್ಲಿ ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಹನ್ನೆರಡನೆಯ ಶತಮಾನದ ವೀರಶೈವ ಶರಣರನ್ನು ಮತ್ತು ಅವರ ಜೀವನ–ಸಿದ್ಧಾಂತ–ಹೋರಾಟಗಳಿಂದಲೇ ಪ್ರಚೋದಿತನಾದ ಹರಿಹರನನ್ನುಳಿದರೆ ಬೇರಾವ ಕವಿಗಳಲ್ಲಿಯೂ ವ್ಯಾಪಕವಾದ ಅರ್ಥದಲ್ಲಿ ಸಾಮಾಜಿಕ ನೆಲೆಗಳು ಸ್ಫುರಿಸುವುದಾಗಲಿ, ಸ್ಫೋಟಗೊಳ್ಳುವುದಾಗಲಿ ಕಾಣುವುದು ಕಷ್ಟ. ಮುಖ್ಯವಾಗಿ ಆಗಿನ ಕಾವ್ಯಪರಂಪರೆಯಲ್ಲಿ ಸಾಮಾಜಿಕ ಎನ್ನುವದೇ ಒಂದು ಕಾವ್ಯದ ಪ್ರಮುಖ ಲಕ್ಷಣವೆಂದಾಗಲಿ. ಮುಖ್ಯ ಮೌಲ್ಯಮಾಪನವೆಂದಾಗಲಿ ಆಗಿರಲಿಲ್ಲ. ಆದರೆ ಕನಕದಾಸರ ಕೃತಿಗಳಲ್ಲಿ, ವಿಶೇಷವಾಗಿ ಕಾವ್ಯಗಳಲ್ಲಿ ಸಾಮಾಜಿಕ ಪ್ರಜ್ಞೆಯೆ ಮೂಲಭೂತ ಆಶಯವಾಗುತ್ತದೆ. ಶರಣರನ್ನು ಬಿಟ್ಟರೆ ಬಹುಶಃ ನಮ್ಮ ಯಾವ ಕವಿಗಳೂ ಸಾಮಾಜಿಕವಾಗಿ ಅನುಭವಿಸಿರದ ಪರಿತಾಪವನ್ನು ಅನುಭವಿಸಿಯೂ ಅದರ ಅಭಿವ್ಯಕ್ತಿಯಲ್ಲಿ ಪ್ರಕಟಿಸಿದ ಸಂಯಮತೆಯೇ ಒಂದು ದೊಡ್ಡ ಆಶ್ಚರ್ಯ. ಬಹುಶಃ ಅವರ ಬದುಕಿನ ವಿನ್ಯಾಸ ಹಾಗೂ ಧೋರಣೆಯಲ್ಲಿಯೇ ಅದರ ಕಾರಣವನ್ನು ಗುರುತಿಸಬಹುದು. ಕನಕದಾಸರದು ವೈಭವದಿಂದ ವೈರಾಗ್ಯಕ್ಕೆ ತಿರುಗಿದ ಜೀವನವಾದರೂ ಅದು ಪುರಂದರದಾಸರ ಜೀವನದ ಮಾದರಿಯದಲ್ಲ. ಪುರಂದರದಾಸರು ತಮ್ಮ ಬದುಕಿನಲ್ಲಿ ಆಕಸ್ಮಿಕವಾಗಿ ಕಾಣಿಸಿಕೊಂಡ ದೈವಲೀಲೆಯ ವಿಚಿತ್ರವ್ಯಾಪಾರಕ್ಕೆ ಪಕ್ಕಾಗಿ ದಾಸರಾದ ಕುಲಜರು; ಕನಕದಾಸರು ಅಧಿಕಾರ–ಐಸಿರಿಗಳ ಮಧ್ಯದಲ್ಲಿಯೇ ಪ್ರಾಪಂಚಿಕ ಪೆಟ್ಟುಗಳನ್ನು ತಿಂದು ದೈವೀಕೃಪೆಯ ಆಹ್ವಾನವನ್ನೂ ಸ್ವೀಕರಿಸಿ ಹರಿದಾಸರಾದ

ಕೆಳಜಾತಿಯವರು. ಆದ್ದರಿಂದ ದಾಸಕೂಟವನ್ನು ಅಪ್ಪಿಯೂ ಆ ಸಮಾಜದಲ್ಲಿ ಶೂದ್ರನಾಗಿ ಬದುಕುವುದು ತಪ್ಪಲಿಲ್ಲ. ವ್ಯಾಸರಾಯರಿಂದ ದೀಕ್ಷೆ ದೊರೆಯಲಿ ಬಿಡಲಿ ಮಾನಸಿಕವಾಗಿ ವೈಷ್ಣವ ಮತವನ್ನು ಒಪ್ಪಿಕೊಂಡರೂ ವೈಷ್ಣವ ಸಮಾಜ ಕನಕದಾಸರನ್ನು ಒಪ್ಪಿಕೊಳ್ಳಲಿಲ್ಲ. ಮೂಲತಃ ಪಾಳೆಯಗಾರನಾಗಿ ಸಾಮಾಜಿಕವಾಗಿ ಮೇಲು ವರ್ಗದವರಾಗಿದ್ದ ಕನಕದಾಸರು ಜಾತಿಯಿಂದ ಕೆಳವರ್ಗದವರಾಗಿದ್ದರು. ಪಾಳೆಯಗಾರರಾಗಿದ್ದ ಕನಕದಾಸರಿಗೆ ದೈಹಿಕ ನೋವನ್ನು ಸಹಿಸಿ ಗೊತ್ತಿತ್ತೆ ಹೊರತು, ಕೆಳಜಾತಿಯವರಾಗಿಯೂ, ಅದುವರೆಗೂ ಇಂಥ ಮಾನಸಿಕ ಹಿಂಸೆಯನ್ನು, ಅವಮಾನವನ್ನು ಸಹಿಸಿ ಗೊತ್ತಿರಲಿಲ್ಲ. ಆದರೆ ಈಗ ಹಿಂಸೆ. ಅವಮಾನಗಳ ಒಳನೋವನ್ನು ಇತ್ತ ಮುಚ್ಚಿಕೊಳ್ಳಲೂ ಆಗದ ಅತ್ತ ಬಿಚ್ಚಿಕೊಳ್ಳಲೂ ಆಗದ ಒಂದು ವಿಕ್ಷಿಪ್ತ ಸ್ಥಿತಿಯಲ್ಲಿ ಹೊರಳಾಡಬೇಕಿತ್ತು.

ಹನ್ನೆರಡನೆಯ ಶತಮಾನದ ದಲಿತ ಶರಣರಿಗಿದ್ದ ಅಭಿವ್ಯಕ್ತಿಯ ಸ್ವಾತಂತ್ರವೂ, ಸ್ಥಗಿತ ವ್ಯವಸ್ಥೆಗೆ ತಾವಾಗಿಯೇ ಬದ್ಧರಾಗಿದ್ದ, ಕನಕದಾಸರಿಗೆ ಸಾಧ್ಯವಿರಲಿಲ್ಲ. ಯಾವದೇ ದಲಿತ ಶರಣರಿಗೆ ತಾವು ಒಪ್ಪಿಕೊಂಡ ಮತದ ಸಮಾಜದಲ್ಲಿಯೇ ತಾವು ಪರಕೀಯ ಪ್ರಜ್ಞೆಯನ್ನು, ಅವಮಾನವನ್ನು ಅನುಭವಿಸಬೇಕಾದ ಇಂಥ ಕೆಟ್ಟ ಪರಿಸ್ಥಿತಿ ಇರಲಿಲ್ಲ. ಶರಣರಂತೆ ಕನಕದಾಸರಿಗೆ ಸುಸಂಘಟಿತ ಸಾಮಾಜಿಕ ಆಂದೋಲನದ ಸಂದರ್ಭದ ಅವಕಾಶವೂ ಇರಲಿಲ್ಲ; ಭಕ್ತಿಚಳುವಳಿಯ ಅಂದಿನ ಸಂದರ್ಭದಲ್ಲಿ ಸಾಮಾಜಿಕ ಆಂದೋಲನಕ್ಕೆ ನಿಲ್ಲುವ ಹೋರಾಟದ ಪ್ರವೃತ್ತಿಯೂ ಕನಕದಾಸರದಾಗಿರಲಿಲ್ಲ. ಆದ್ದರಿಂದ ಪರಿಸರದೊಂದಿಗಿನ ಒಪ್ಪಂದದ ಮೂಲಕ ಸಮಸ್ಯೆಗಳನ್ನು ವೈಯಕ್ತಿಕವಾಗಿ ಎದುರಿಸಬೇಕಾಗಿತ್ತು. ಅವರು ಹರಿದಾಸರಾದದ್ದೂ ಆತ್ಮೋದ್ಧಾರಕ್ಕಾಗಿಯೇ ಹೊರತು ಹೋರಾಟಕ್ಕಾಗಿರಲಿಲ್ಲ. ಈ ಎಲ್ಲ ಇಕ್ಕಟ್ಟು ಬಿಕ್ಕಟ್ಟುಗಳ ಮಧ್ಯದಲ್ಲಿ ಬದುಕಬೇಕಿದ್ದ ಕನಕದಾಸರು ತಮ್ಮ ಸಾಮಾಜಿಕ ಅನುಭವಗಳ ಅಭಿವ್ಯಕ್ತಿಯಲ್ಲಿ ಒಬ್ಬ ಕವಿಯಾಗಿಯೂ ತುಂಬ ಎಚ್ಚರಿಕೆಯನ್ನು ವಹಿಸಬೇಕಾಗಿತ್ತು. ಇದೇ ಕಾರಣಕ್ಕಾಗಿ ತಮ್ಮ ಅನುಭವಗಳನ್ನು ಪೌರಾಣಿಕ ಕಥೆಗಳ ಅಥವಾ ಆವರಣದ ಮರೆಯಲ್ಲಿ ಮುಚ್ಚಿಕೊಟ್ಟಂತೆ ಕಂಡುಬರುತ್ತದೆ ಅವರ ಕಾವ್ಯಗಳಲ್ಲಿಯ ಸಾಂಕೇತಿಕತೆ ಅರ್ಥಪೂರ್ಣವಾಗಿ ಈ ಜವಾಬ್ದಾರಿಯನ್ನು ನಿರ್ವಹಿಸಿದಂತೆ ಕಂಡುಬರುತ್ತದೆ.

'ರಾಮಧಾನ್ಯಚರಿತೆ'ಯಲ್ಲಿಯ ನರೆದಲೆಗ ದಲಿತವರ್ಗದ, ಶೋಷಿತ ವರ್ಗದ ಪ್ರತೀಕ ಮಾತ್ರವಲ್ಲ, ಮೇಲುವರ್ಗದವರ ಶೂದ್ರನಾಗಿ ಬದುಕಬೇಕಾದ ಸ್ವತಃ ಕನಕದಾಸರ ವ್ಯಕ್ತಿತ್ವದ ಪ್ರತೀಕವೂ ಹೌದು. ಅದರಂತೆ ಆ ಕಾವ್ಯದಲ್ಲಿ

ಬರುವ ನೆಲ್ಲು ಕನಕದಾಸರನ್ನು ನಡೆಸಿಕೊಳ್ಳುತ್ತಿದ್ದ ಪ್ರತಿಷ್ಠಿತವರ್ಗದ ಪ್ರತೀಕವಾಗಿ ಒಟ್ಟು ಕಥೆಯೇ ಅವರ ಜೀವನವನ್ನು ಸಂಕೇತಿಸುತ್ತ ಬೆಳವಣಿಗೆಯನ್ನು ಹೊಂದುತ್ತದೆ. ಮೇಲುವರ್ಗದ ನೆಲ್ಲಿನ ಅಮಾನವೀಯ ವರ್ತನೆಯನ್ನು ಎದುರಿಸುವಾಗಲೂ ರಾಗಿ ತನ್ನ ನಿಯಂತ್ರಣವನ್ನು ಕಳೆದುಕೊಳ್ಳುವದಿಲ್ಲ. “ಬುಧರು ಜರೆದು ನಿರಾಕರಿಸಿ ಬಿಡಲಂತು ಶೂದ್ರಾನ್ನವಾದೆಯಲಾ’[೧] ಎನ್ನುವ ನೆಲ್ಲಿನ ಕುಲದ ಅಹಂಕಾರಕ್ಕೆ “ಸತ್ವಹೀನನು ಬಡವರನು ಕಣ್ಣೆತ್ತಿನೋಡೆ ಧನಾಢ್ಯರನು ಬೆಂಬತ್ತಿ ನಡೆವ ಉಪೇಕ್ಷೆ ನಿನ್ನದು” (ಪ. ೪೫), “...ನಮ್ಮಲಿ ಸಲ್ಲದೀಪರಿ ಪಕ್ಷಪಾತವದಿಲ್ಲ ಭಾವಿಸಲು ಬಲ್ಲಿದರು ಬಡವರುಗಳೆನ್ನದೆ ಎಲ್ಲರನು ರಕ್ಷಿಸುವೆ ನಿರ್ದಯನಲ್ಲ ನಿನ್ನಂತೆ, ಎಲೆ ಕುಟಿಲಾತ್ಮ ಹೋಗೆಂದ” (ಪ. ೪೮), ಎನ್ನುವ ನರೆದಲೆಗನ ಪ್ರತಿಕ್ರಿಯೆ ಅತ್ಯಂತ ಸತ್ವಪೂರ್ಣವೆನಿಸುತ್ತದೆ. ಕೊನೆಗೆ ನೆಲ್ಲಿನ ಅಬ್ಬರದ ಅನಾಗರಿಕ ವರ್ತನೆಗೆ ಜರ್ಜರಿತವಾದ ನರೆದಲೆಗ. “ನೋಡಿರೈ ಸಭೆಯವರು ದುರ್ಮತಿಗೇಡಿಯಿವನಾಡುವದ ನಾವಿನ್ನಾಡಿದರೆ ಹುರುಳಿಲ್ಲ” (೫೦) ಎನ್ನುವಲ್ಲಿ ಅಂದಿನ ಸಮಾಜದ ಕೆಳವರ್ಗದವರ ಅಸಹಾಯಕತೆಯನ್ನು ಮತ್ತು ಅಭಿವ್ಯಕ್ತಿಯ ಆತಂಕವನ್ನೂ ಸೂಚಿಸುವಂತಿದೆ. ಕೊನೆಗೆ ದಲಿತನಾದ ರಾಗಿ ತನ್ನ ಅಂತಃಸತ್ವದಿಂದ ಶ್ರೀರಾಮನ ಕೃಪೆಗೆ ಪಾತ್ರನಾಗಿ ‘ರಾಮಧಾನ್ಯ’ ಎಂಬ ಬಿರುದು ಪಡೆಯುವದು, ಸೋತು ಮುಖಹೀನವಾಗಿ ನಿಂತ ನೆಲ್ಲನ್ನು ಕುರಿತು ಸಾಂತ್ವನ ಹೇಳುವದು ಕನಕದಾಸರ ಇಂಗಿತವನ್ನು ವ್ಯಂಜಿಸುವಂತಿದೆ. ಕನಕದಾಸರ ಜೀವನಾನುಭವದ ಹಿನ್ನೆಲೆಯಲ್ಲಿ ನೋಡಿದರಂತೂ ಇಡಿ ಕಥಾನಕದ ನೆಯ್ಗೆಯಲ್ಲಿ ಅವರ ಆತ್ಮಕಥೆಯ ಎಳೆಗಳೇ ಹಾಸು ಹೊಕ್ಕಾಗಿ ಕಂಡುಬರುತ್ತವೆ.[೨] ಹಾಗೆ ನೋಡಿದರೆ ರಾಮಧಾನ್ಯಚರಿತ್ರೆಯ ಕಥಾವಸ್ತು ಅತ್ಯಂತ ಸರಳ, ಜನಪದ ಸಾಹಿತ್ಯದ ಹಿನ್ನೆಲೆಯಲ್ಲಿ ನೋಡಿದರಂತೂ ಸಾಮಾನ್ಯ ; ಒಬ್ಬ ಕೀರ್ತನಕಾರ ತನ್ನ ಕೀರ್ತನೆಯ ಮಧ್ಯದಲ್ಲಿ ಹೇಳಬಹುದಾದ ಒಂದು ಸಾಧಾರಣ ಉಪಕಥೆಯ ಮಾದರಿಯದು. ಆದರೆ ಅದು ಗರ್ಭೀಕರಿಸಿಕೊಂಡ ಕವಿಯ ವೈಯಕ್ತಿಕ ನೆಲೆಯಲ್ಲಿಯ ಸಾಮಾಜಿಕ ಪ್ರಜ್ಞೆಯಿಂದಾಗಿ ಇಂದಿಗೂ ತನ್ನ ವೈಶಿಷ್ಟ್ಯವನ್ನೂ ಅಸ್ತಿತ್ವವನ್ನು ಉಳಿಸಿಕೊಂಡ ಒಂದು ಮೌಲಿಕ ಕೃತಿ.

---

೧. ‘ರಾಮಧಾನ್ಯ ಚರಿತ್ರೆ’–ಸಂ : ದೇ. ಜವರೇಗೌಡ (೧೯೬೫) ಪದ್ಯ ೩೭. ಮುಂದೆ ಕಂಸಿನಲ್ಲಿ ಸೂಚಿಸಿದ ಸಂಖ್ಯೆಗಳು ಇದೇ ಕೃತಿಗೆ ಸಂಬಂಧಿಸಿದ ಪದ್ಯಗಳನ್ನು ಸೂಚಿಸುತ್ತವೆ.

೨. ಹೆಚ್ಚಿನ ವಿವರಕ್ಕಾಗಿ ನೋಡಿರಿ : “ಕನಕದಾಸರ ಕಾವ್ಯಗಳಲ್ಲಿ ವರ್ಗಪ್ರಜ್ಞೆ”–ಎಸ್.ಎಸ್. ಕೋತಿನ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೭೩–೨.

ನಳಚರಿತೆಯಲ್ಲಿ ಕಾಣಿಸಿಕೊಳ್ಳುವ ಕನಕದಾಸರ ಸಾಮಾಜಿಕ ಪ್ರಜ್ಞೆ ರಾಮಧಾನ್ಯ ಚರಿತ್ರೆಗಿಂತ ಇನ್ನೂ ಹೆಚ್ಚು ಪ್ರಚ್ಛನ್ನವಾದದ್ದು. ಕವಿಯ ವೈಯಕ್ತಿಕ ನೆಲೆಯ ಪರಿಧಿಯನ್ನು ಮೀರಿ ಸಮಾಜದ ಬದುಕಿನ ನೆಲೆಯಲ್ಲಿಯೇ ನಿಂತು ಆ ಸಮಾಜದ ಅನುಭವದ ಅನ್ವೇಷಣೆಗೆ ತೊಡಗುವಂತಹದು.

ನಳಚರಿತ್ರೆ ಮೇಲುನೋಟಕ್ಕೆ ಒಂದು ಆದರ್ಶ ದಾಂಪತ್ಯವನ್ನು ಚಿತ್ರಿಸುವ, ಜೂಜಿನ ಕೇಡನ್ನು ಬೋಧಿಸುವ, ಮಾನವ ಬದುಕಿನಲ್ಲಿ ದೈವದ ಪಾತ್ರವನ್ನು ಬಿಂಬಿಸುವ ಮತ್ತು ಬದುಕಿನಲ್ಲಿ ಮಾನವನ ಇತಿ–ಮಿತಿಗಳನ್ನು ತಿಳಿಸಿಕೊಡುವ ಒಂದು ರಮ್ಯ ಕಥೆ, ಆದರೆ ಕನಕದಾಸರ ಬದುಕು ಮತ್ತು ಮಹತ್ವಾಕಾಂಕ್ಷೆಯ ಕಲ್ಪನೆ ಇರುವ ಪ್ರಜ್ಞಾವಂತರಿಗೆ ಸಾಮಾಜಿಕ ವಿಕ್ಷಿಪ್ತ ನೆಲೆಗಳನ್ನು, ವರ್ಗಪ್ರಜ್ಞೆಯ ಒಳನೋಟವನ್ನು ಗುಟ್ಟಾಗಿ ಕಟ್ಟಿಕೊಡುವಂತಿದೆ. ತನ್ನ ಸಮಕಾಲೀನ ಸಮಾಜದಲ್ಲಿಯ ಅಸಮಾನತೆಗೆ ಮತ್ತು ಮೇಲುವರ್ಗದವರಿಂದ ನಡೆಯುತ್ತಿರುವ ಶೀತಲ ಶೋಷಣೆಯ ಕ್ರೂರ ಪರಿಣಾಮಗಳಿಗೆ ಮಾನವೀಯ ಅಂತಃಕರಣದಿಂದ ಸ್ಪಂದಿಸಿದ ಕನಕದಾಸರ ಉದ್ದೇಶ ಆ ಕಥೆಯ ಬಾಹ್ಯೋದ್ದೇಶವನ್ನು ಮೀರಿ ನಿಲ್ಲುವಂತಹದು ಎನಿಸುತ್ತದೆ. ಆದ್ದರಿಂದ ಕನಕದಾಸರು ತಮ್ಮ ಸಾಮಾಜಿಕ ಕಾಳಜಿಗಳನ್ನು ಪ್ರಕಟಿಸುವ ಎಲ್ಲ ಸಾಧ್ಯತೆಗಳನ್ನು ವ್ಯಾಸಭಾರತದ ಈ ನಳೋಪಾಖ್ಯಾನದಲ್ಲಿ ಗುರುತಿಸಿದಂತೆ ಕಂಡುಬರುತ್ತದೆ. ಅದರ ಕಥಾವಸ್ತುವನ್ನೂ ರೂಪಕಗೊಳಿಸಿ ಅದರ ಘಟನೆ–ಸನ್ನಿವೇಶ, ಪಾತ್ರ–ಸಂಭಾಷಣೆ ಇತ್ಯಾದಿಗಳನ್ನು ಅತ್ಯಂತ ಸಾಂಕೇತಿಕವಾಗಿ ಬಳಸಿಕೊಂಡಿದ್ದಾರೆ. ಆ ಮೂಲಕ ಆ ಉಪಾಖ್ಯಾನಕ್ಕೆ ಹೊಸ ಸಾಮಾಜಿಕ ಆಯಾಮವನ್ನು ಒದಗಿಸಿದ್ದಾರೆ. ಈ ಕಾರಣಕ್ಕಾಗಿಯೇ ಮೂಲದ ಎಲ್ಲ ಅಂಶಗಳನ್ನು ಒಂದು ವಿಶಿಷ್ಟ ರೀತಿಯಲ್ಲಿ ಗ್ರಹಿಸಿದಂತೆ, ಒಂದು ವಿಶೇಷ ಅನುಭವದ ಹಿನ್ನೆಲೆಯಲ್ಲಿ ಪರಿಭಾವಿಸಿದಂತೆ ಕಂಡುಬರುತ್ತದೆ.

ಕಾವ್ಯದ ಎಲ್ಲ ಪದರುಗಳನ್ನು ಒಂದೊಂದಾಗಿ ಬಿಚ್ಚಿನೋಡಿದಾಗ ಇಂದ್ರಾದಿ ದೇವತೆಗಳು ಯಜಮಾನ ವರ್ಗದ ಪ್ರತೀಕವಾಗಿ, ನಳದಮಯಂತಿಯರು ಕೆಳವರ್ಗದ ಪ್ರತೀಕವಾಗಿ ಕಾಣಿಸಿಕೊಳ್ಳುತ್ತಾರೆ, ಸ್ವರ್ಗಲೋಕದ ಇಂದ್ರ ತನ್ನ ಬೆಂಬಲಿಗರನ್ನು ಕಟ್ಟಿಕೊಂಡು ಭೂಲೋಕದ ದಮಯಂತಿಯನ್ನು ಕೂಡಿಕೊಳ್ಳಲು ಹಾಕುವ ಹೊಂಚು, ಹೂಡುವ ತಂತ್ರ ನಡೆಸುವ ಪಿತೂರಿಗಳೆಲ್ಲ ಮೇಲುವರ್ಗದವರು ವಿಷಯಾಸಕ್ತಿಗಾಗಿ ಕೆಳವರ್ಗದವರನ್ನು ನಯವಾಗಿ ಶೋಷಿಸುವ ವಿಭಿನ್ನ ಶೈಲಿಗಳನ್ನೇ

ಧ್ವನಿಪೂರ್ಣವಾಗಿ ಪ್ರದರ್ಶಿಸುವಂತಿವೆ.[೩]

ಇಂಥ ಉದ್ದೇಶದ ಅಗತ್ಯಕ್ಕಾಗಿಯೇ ಕನಕದಾಸರು, ಮೂಲ ಕಥೆಯಲ್ಲಿ ಅಂಥ ಎದ್ದು ಕಾಣುವ ಯಾವ ವಿಶೇಷ ಬದಲಾವಣೆಗಳನ್ನು ಮಾಡಿಕೊಂಡಿಲ್ಲವಾದರೂ, ಪ್ರಜ್ಞಾಪೂರ್ವಕವಾಗಿಯೇ ಮೂಲದಲ್ಲಿಲ್ಲದ ಕೆಲವು ಅಂಶಗಳನ್ನು ನೈಷಧೀಯ, ನಳ ಚಂಪುಗಳಿಂದ ಬಳಸಿಕೊಂಡಂತಿದೆ. ಇಂದ್ರ ದಮಯಂತಿಯನ್ನು ತನಗೆ ಒಲಿಯುವಂತೆ ಪ್ರೇರೇಪಿಸಲು ಅಪ್ಸರೆಯರನ್ನು ಕಳಿಸುವ ಸನ್ನಿವೇಶ ಇದಕ್ಕೆ ಒಂದು ಉತ್ತಮ ಉದಾಹರಣೆ. ದಮಯಂತಿಯ ಹತ್ತಿರ ಬಂದ ಆ ಸುರಸತಿಯರು "ಸುರರಾಯರಿಗೆ ಸತಿಯಾಗು ಮರ್ತ್ಯದ ರಾಯಸ್ಥಿರ ನರರ ನಚ್ಚದಿರು"[೪] ಎಂಬುದನ್ನು ವರ್ಗಭೇದವನ್ನು ಸೂಚಿಸಲೆಂದೇ ಬಳಸಿಕೊಂಡಿರುವದು ಸ್ಪಷ್ಟ. "ಅನಿಮಿಷಾಧಿಪ ತನಗೆ ದೇವಾಂಗನೆಯರಿರುತಿರೆ ಮನುಜಸತಿ ಪಾವನವೆ ಬರಿದೆ ದುರಾಸೆ ತನಗೇಕೆಂದಳಿಂದುಮುಖಿ" (III–೩) ಎಂಬುದು, ಇಂದ್ರನ ದೂತನಾಗಿ ಬಂದ ನಳ ತನ್ನ ನಿಜರೂಪವನ್ನು ತೋರಿದಾಗಲೂ ಅದನ್ನು ನಂಬಲಾಗದ ದಮಯಂತಿ "ನಾಕನಿಳಯರು ಕುಟಿಲವಿದ್ಯರನೇಕಮಾಯಾವಿದರು, ಧರೆಯೊಳು ಪ್ರಾಕೃತರು ನಾವ್ ನಿಮ್ಮ ನಂಬುವಪರಿಯದೆಂತೆಮಗೆ" ಎಂಬ ಪ್ರತಿಕ್ರಿಯೆ ಕೇವಲ ಕಾವ್ಯದ ರಮ್ಯತೆಗಾಗಿ ಬಂದವುಗಳಾಗಿ ಕಾಣುವದಿಲ್ಲ. ಇಂಥ ವರ್ಗವ್ಯತಾಸ ಮುಂದೆ ಕಲಿಯ ಮಾತುಗಳಿಂದ ಮತ್ತೂ ಖಚಿತಗೊಳ್ಳುವದು. ಹೀಗೆ ಅಪ್ಸರೆಯರು ನರರನ್ನು ಹಗುರಾಗಿ ಕಾಣುವುದು, ದಮಯಂತಿ ದೇವತೆಗಳ ಅಪಮೌಲ್ಯಗಳನ್ನು, ಅನೈತಿಕತೆಯನ್ನು ಎತ್ತಿಹೇಳುವುದು–ಇವೆಲ್ಲ ಸುರರ ಹಾಗೂ ನರರ ಅಂದರೆ ಸಮಾಜದ ವಿಭಿನ್ನ ವರ್ಗಗಳಲ್ಲಿ ನಡೆದ ತಿಕ್ಕಾಟ, ಯಜಮಾನ ವರ್ಗದ ಉಪಟಳವನ್ನು ಕುರಿತ ಸಾಮಾನ್ಯರ ಸಾತ್ವಿಕ ಪ್ರತಿಭಟನೆಯನ್ನು ಕಲ್ಪನೆಗೆ ತರುತ್ತವೆ. ಹಾಗೆಂದೇ ಮೂಲದಲ್ಲಿ ವಿಸ್ತೃತವಾಗಿ ಬರುವ ಇಂದ್ರಾದಿಗಳ ವರ್ಣನೆಯನ್ನು ಕನಕದಾಸರು ಉದ್ದೇಶಪೂರ್ವಕವಾಗಿಯೇ ಉಪೇಕ್ಷಿಸಿದ್ದಾರೆ. ಅನಿಮಿತ್ತ ದ್ವೇಷವನ್ನು ಸಾಧಿಸುವ ಕಲಿಯನ್ನು ತಡೆಯಲು ಇಂದ್ರಾದಿಗಳು ಮಾಡುವ ನಳನ ವರ್ಣನೆ ಮೂಲದಲ್ಲಿ ಹೆಚ್ಚು ಪ್ರಾಮಾಣಿಕವೆನಿಸಿದರೆ ಇಲ್ಲಿ ನಯವಂಚಕತೆ, ನುಸುಳಿ

---

೩. ಹೆಚ್ಚಿನ ವಿವರಣೆಗಾಗಿ ನೋಡಿ : ಅಲ್ಲೇ.

೪. ನಳಚರಿತ್ರೆ : ಸಂ–ದೇ, ಜವರೇಗೌಡ (೧೯೬೫), III–೩೦

ಮುಂದೆ ಕಂಸಿನಲ್ಲಿ ಸೂಚಿಸಿದ ಸಂಖ್ಯೆಗಳು ಇದೇ ಕೃತಿಗೆ ಸಂಬಂಧಿಸಿದ ಪದ್ಯಗಳ ಸಂಖ್ಯೆಯನ್ನೂ ಸೂಚಿಸುತ್ತವೆ.

ಕೊಳ್ಳುವಿಕೆಯೇ ಮುಂದಾಗಿ ಕಾಣಿಸಿಕೊಳ್ಳುತ್ತದೆ. ಮೂಲದಲ್ಲಿ–"ಸಕಲಗುಣ ಸಂಪನ್ನನಾದ, ಮಹಾಧರ್ಮಿಷ್ಠನಾದ–ಶಾಪಕೊಡಲು ಇಚ್ಛಿಸಿದ ಮಾತ್ರದಿಂದಲೇ–ಅಂತಹವನು ಅಗಾಧವಾದ, ಬಹಳ ವಿಶಾಲವಾದ, ಕಠಿಣತಮವಾದ ನರಕದಲ್ಲಿ ಬೀಳುತ್ತಾನೆ"[೫] ಎಂದು ಎನ್ನುವಷ್ಟರ ಮಟ್ಟಿಗೆ ಇಂದ್ರಾದಿಗಳ ಪ್ರಾಮಾಣಿಕತೆ ವ್ಯಕ್ತವಾಗುತ್ತದೆ, ಇಲ್ಲಿ "ಲೇಸನಾಡಿದೆ ಕಲಿಪುರುಷ ನಿನಗೀಸು ಪೌರುಷವುಂಟೆ, ನಮಗಿನ್ನಾ ಸರೋರುಹ ಗಂಧಿಯಲಿ ಮನವಿಲ್ಲ, ನಳನೃಪತಿ ಈ ಸಮಸ್ತ ಭೂಪಾಲರಲಿ ಸದ್ಭೂಷಣನು, ಶೌರ್ಯೋನ್ನತನು, ಕಮಲಾಸನನಿಗಳವಲ್ಲ ನಿನ್ನಲಿ ಹರಿವುದೇನು" (IV–೭), ಎಂದು ನಗುತ್ತ ಹೇಳುವ ಇಂದ್ರನ ಮಾತುಗಳಲ್ಲಿ ಪ್ರತಿಭಟನೆಗಿಂತ ಪ್ರಚೋದನೆಯೇ ಎದ್ದು ಕಾಣುತ್ತದೆ.

ಇನ್ನು ಇಂದ್ರಾದಿಗಳನ್ನು ಕುರಿತು ಕಲಿಪುರುಷ ಆಡುವ "ಅನಿಮಿಷರು ನೀವಧಿಕ ಬಲರಾವನಿತೆಯನು ಕೈಕೊಳ್ಳಲಾರದೆ ಜನಪ ನಳನೃಪಗಿತ್ತು ಬಂದಿರೆ ಹರ ಮಹಾದೇವ" (IV–೭) ಎಂಬ ಮಾತು ಮೂಲದಲ್ಲಿಯ "ದೇವಾನಾಂ ಮಾನುಷಂ ಮಧ್ಯೇಯತ್ಸಾ ಪತಿಮವಿನ್ದತ । ತತಸ್ತಸ್ಯಾಭವೇನ್ಯಾಯಂ ವಿಪುಲಂ ದಣ್ಡಧಾರಣಂ"[೬] ಎಂಬ ಮೂಲಶ್ಲೋಕದ ಭಾವಾನುವಾದವಾಗಿಯೇ ಬಂದಿದೆ. ಅಂದರೆ ಮೂಲದಲ್ಲಿಯ ಇಂಥ ಸನ್ನಿವೇಶ–ಸಂಭಾಷಣೆಗಳಲ್ಲಿಯೇ ಕನಕದಾಸರು ತಮ್ಮ ಸಾಮಾಜಿಕ ಧೋರಣೆಯನ್ನು ಈಡೇರಿಸಿಕೊಡುವ ಸಾಧ್ಯತೆಯನ್ನು ಗುರುತಿಸಿರಬಹುದು ; ಇಲ್ಲವೆ ತಮ್ಮ ಧೋರಣೆಗೆ ಪ್ರೇರಣೆ ಪಡೆದಿರಬಹುದು. ಅಂತೆಯೇ ಇಡಿ ಕಥೆಯನ್ನೇ ತಮ್ಮ ಸಾಮಾಜಿಕ ವಿಶಿಷ್ಟ ನೆಲೆಯ ಅಭಿವ್ಯಕ್ತಿಗೆ ಅನ್ವಯಿಸಿಕೊಂಡಿದ್ದಾರೆ.

ಹೀಗೆ ತಮ್ಮ ಧೋರಣೆಗೆ ಪೋಷಕವಾಗದ ಮೂಲದ ಕೆಲವು ಸನ್ನಿವೇಶಗಳನ್ನು ಮೊಟಕುಗೊಳಿಸುವ ಇಲ್ಲವೆ ನಿರಾಕರಿಸುವ ಕನಕದಾಸರು ತಮ್ಮ ಆಶಯಕ್ಕೆ ಅನುಕೂಲವಾದಾಗಲೆಲ್ಲ ಮೂಲಕ್ಕೆ ಹೆಚ್ಚಿನ ನಿಷ್ಠೆಯನ್ನು ತೋರುತ್ತಾರೆ. ಬೇಕಾದರೆ ಬೇರೆ ಮೂಲಗಳಿಂದ ಉಪಯುಕ್ತ ಅಂಶಗಳನ್ನು

---

೫. "ಏವಂ ಗುಣಂ ನಲಂ ಯೋವೈ ಕಾಮಯೇಚ್ಛಪಿತುಂ ಕಲೇ ।
ಕೃಚ್ಛ್ರೇಸ ನರಕೇ ಮಜ್ಜೇದಗಾಧೇ ವಿಮಲೇಹುದೇ ॥"
–ಶ್ರೀ ಮನ್ಮಹಾಭಾರತ, ಭಾಗ ೪, ಭಾರತದರ್ಶನ ಪ್ರಕಾಶನ ದ್ವಿ. ಮು ೧೯೭೭, ಅಧ್ಯಾಯ ೫೮, ಪದ್ಯ ೧೨ ; ಪು ೨೨೧೯

೬. ಅಲ್ಲೆ : ಅಧ್ಯಾ–೫೮, ಪದ್ಯ–೬ ಪುಟ : ೨೨೧೮

ಬಳಸಿಕೊಳ್ಳುತ್ತಾರೆ. ಆ ಮೂಲಕ ಯಾವ ಮೂಲಗಳಲ್ಲಿಯೂ ಇರಲಾರದ ಉದ್ದೇಶವನ್ನು ಈಡೇರಿಸಿಕೊಳ್ಳುತ್ತಾರೆ. ಹೀಗೆ ಪೌರಾಣಿಕವಸ್ತುವೊಂದಕ್ಕೆ ಸಾಮಾಜಿಕ ಉದ್ದೇಶಕ್ಕಾಗಿ ಮರುಹುಟ್ಟು ಕೊಡುವ ಅತ್ಯಂತ ಆಧುನಿಕ ಮತ್ತು ಪ್ರಗತಿಪರ ಧೋರಣೆಯನ್ನು ಬಹುಶಃ ಮೊದಲ ಬಾರಿಗೆ ಕನಕದಾಸರಲ್ಲಿ ಗುರುತಿಸುತ್ತೇವೆ. ಒಟ್ಟಿನಲ್ಲಿ ಮೂಲದ ರಮ್ಯತೆ ಹಾಗೂ ಮೌಲ್ಯಗಳ ಮೂಲಕ ಭಾವುಕವರ್ಗವನ್ನು, ವರ್ಗ ಪ್ರಜ್ಞೆಯನ್ನು ಪ್ರಚ್ಛನ್ನಗೊಳಿಸಿಕೊಡುವ ಮೂಲಕ ಬುದ್ಧಿಜೀವಿಗಳನ್ನು ಏಕಕಾಲಕ್ಕೆ ಸ್ಪಂದಿಸುವಂತೆ ಮಾಡುವ ಈ ಕಾವ್ಯ ಹರಿದಾಸರ ಕೈಯಲ್ಲಿಯ ಪಾಳೆಯಗಾರನ ಅಸ್ತ್ರದಂತೆ ಕ್ರಿಯಾಶೀಲವಾಗಿದೆ.

ಮೋಹನ ತರಂಗಿಣಿಯಲ್ಲಿಯಂತೂ ಕನಕದಾಸರ ಸಾಮಾಜಿಕ ಪ್ರಜ್ಞೆ ಮೊದಲಿನ ಎರಡೂ ಕಾವ್ಯಗಳಿಗಿಂತಲೂ ಹೆಚ್ಚು ತನ್ನ ಆಳ–ವಿಸ್ತಾರವನ್ನು ಹೆಚ್ಚಿಸಿಕೊಳ್ಳುತ್ತದೆ. ೪೨ ಸಂಧಿಗಳಷ್ಟು ವಿಸ್ತಾರವಾದ ಈ ಸಾಂಗತ್ಯ ಕೃತಿ ಮೇಲುನೋಟಕ್ಕೆ ಭೋಗಮೂಲವಾದ ಶೃಂಗಾರ ಕಾವ್ಯ ; ಹರಿಹರದಲ್ಲಿ ಅಭೇದವನ್ನು ಗುರುತಿಸಿಕೊಡುವದು ಅದರ ಪ್ರಮುಖ ಧೋರಣೆ. ಆದರೆ ಅವೆಲ್ಲವನ್ನು ಮೀರಿ ತನ್ನ ಸಮಕಾಲೀನ ಸಮಾಜದ ಎಲ್ಲ ನೆಲೆಗಳ ಅಂತಃಸ್ವರೂಪವನ್ನು ಪ್ರಕಟಿಸಬೇಕೆನ್ನುವ ಅದರ ಉತ್ಸಾಹ, ಅಂದಿನ ಸಾಂಸ್ಕೃತಿಕ ಸಮಸ್ಯೆಗಳನ್ನು ಶೋಧಿಸಿಕೊಡುವ ಅದರ ಪ್ರಯತ್ನ ವೈಚಾರಿಕ ಮಟ್ಟಕ್ಕೆ ನಿಲ್ಲದೆ ಕಳಕಳಿಯ ಆಳಕ್ಕೆ ಇಳಿಯುವಂತಹದು, ಇಲ್ಲಿಯ ಕವಿಯ ಸಾಮಾಜಿಕ ಪ್ರಜ್ಞೆ ಕವಿಯ ವೈಯಕ್ತಿಕ ಸ್ತರದ ಅಂದರೆ ತನ್ನ ಸಮಾಜದಿಂದ ತನಗೆ ಮಾತ್ರ ಒದಗಬಹುದಾದ ವ್ಯಕ್ತಿಗತ ಅನುಭವಗಳ ಅಂಚನ್ನು ಮೀರಿನಿಲ್ಲುವಂತಹದು. ಅಂದರೆ ಒಂದು ನಾಡಿನ ಸಮಗ್ರ ಸಂಸ್ಕೃತಿಯ ವಿಶಾಲ ವಿಸ್ತಾರಕ್ಕೆ ಹರಡಿಕೊಳ್ಳುವಂತಹದು. ಹೀಗಾಗಿ ಕನಕದಾಸರ ಮೋಹನತರಂಗಿಣಿ ಒಂದು ಶ್ರೀಮಂತ ಪರಂಪರೆಯನ್ನುಳ್ಳ ಸಮಕಾಲೀನ ಬದುಕಿನ ರೀತಿ–ನೀತಿ, ಶ್ರದ್ಧೆ–ಸಂಪ್ರದಾಯ, ನಂಬಿಕೆ–ಆಚರಣೆ, ಉಡಿಗೆ–ತೊಡಿಗೆ, ಸ್ವಭಾವ–ಪ್ರವೃತ್ತಿಯನ್ನು, ಒಟ್ಟು ಒಂದು ಸಂಸ್ಕೃತಿಯ ಅನಂತಪದರುಗಳ ಸಮಸ್ತ ಪಾರ್ಶ್ವಗಳ ಮನೋಹರವಾದ ಜೀವಂತ ಚಿತ್ರಣಗಳನ್ನು ಅದರ ಧಾರ್ಮಿಕ–ಶೈಕ್ಷಣಿಕ–ಆರ್ಥಿಕ, ರಾಜಕೀಯ ನೆಲೆಯಲ್ಲಿ ಒದಗಿಸಿಕೊಡುತ್ತದೆ. ಸೂಳೆಗೇರಿ, ಬೇಟೆಯ ವರ್ಣನೆಯನ್ನು ಮೊದಲುಗೊಂಡ ಇಂಥ ಸಾಮಾಜಿಕ ಜೀವನದ ವಿವರಗಳು ನಮ್ಮ ಪ್ರಾಚೀನ ಕಾವ್ಯಪರಂಪರೆಯಲ್ಲಿ ಮಾಮೂಲಿ ಎನಿಸುವಷ್ಟು ಹಳೆಯದು; ಆದರೆ ಕನಕದಾಸರ ವಿಶಿಷ್ಟ ಪರಿಭಾವನೆಯಿಂದಾಗಿ ಕೇವಲ ಒಂದು

ಕಾವ್ಯಪರಂಪರೆಯ ಅನುಕರಣೆಯಾಗುವದಿಲ್ಲ ; ಕವಿಯೊಬ್ಬನ ವರ್ಣನಾ ನೈಪುಣ್ಯದ ಪ್ರದರ್ಶನವಾಗಿ, ಚಾಪಲ್ಯವಾಗಿ, ಚಟವಾಗಿ ಕಾಣಿಸಿಕೊಳ್ಳುವುದಿಲ್ಲ; ಬದಲಾಗಿ ತಮ್ಮ ಸಮಕಾಲೀನ ಸಂಸ್ಕೃತಿಯ ವರ್ತಮಾನ ಹಾಗೂ ಭವಿಷ್ಯವನ್ನು ಕುರಿತ ಕವಿಯ ಚಿಂತನೆಗಳ ಸತ್ಫಲವಾಗಿ ಕಾಣಿಸಿಕೊಳ್ಳುತ್ತದೆ. “ಕೇಳುವ ಕೆಲವು ವಿದ್ಯಾರ್ಥಿಗಳಿಗೆ ವಸ್ತ್ರ ಕೂಮಿವೀಳೆಯವಿತ್ತು ಮುದದಿ ಅಳುಗೊಳಿಸಿ ಪ್ರತಿದಿವಸದಿ ತರ್ವಾಯ ಹೇಳುವ ವಿಬುಧರೊಪ್ಪಿದರು.”[೭] “ಸಣ್ಣವರಂಗಳನೋದಿಸುತಿರ್ಪ ಕಪೆಯ ಕೋಲಣ್ಣಗಳ್ ಚೌಪದಿಗವಿತೆ” (III-೪೧) ಎಂಬ ವಿವರಣೆ ಒಂದು ಸಂಸ್ಕೃತಿಯ ಶೈಕ್ಷಣಿಕ ಮೌಲ್ಯಗಳ ಮೇಲೆ ಎಂಥ ಪರಿಣಾಮಕಾರಿಯಾದ ಬೆಳಕು ಚೆಲ್ಲುತ್ತಿದೆ ಎನ್ನುವುದನ್ನು ಗಮನಿಸಬೇಕು.

ಮಹಿಳಾ ಸಂಸ್ಕೃತಿಯ ಚಿತ್ರವಂತೂ ಕನಕದಾಸರ ಪ್ರಗತಿಪರ ದೃಷ್ಟಿಗೆ ಬಹುದೊಡ್ಡ ನಿದರ್ಶನ. “ಕರ್ಮಕಾಂಡವ ತಿರಸ್ಕರಿಸಿ ತತ್ವಾರ್ಥದ ಮರ್ಮವನರಿದ ಪ್ರಾಜ್ಞೆಯರು ಧರ್ಮಾರ್ಥ ಕಾಮಮೋಕ್ಷಂಗಳ ಪಡೆದರು ಭರ್ಮಾಂಬರನ ಭಕ್ತಿಯಲಿ” (III–೩೯) ಇಷ್ಟರಮಟ್ಟಿಗೆ ಮಹಿಳೆಯರ ಧಾರ್ಮಿಕ–ಶೈಕ್ಷಣಿಕ ಸ್ವಾತಂತ್ರ್ಯವನ್ನು ಎತ್ತಿ ಹೇಳುವ ಮೂಲಕ ಒಂದು ಜನಾಂಗದ ಸಂಸ್ಕೃತಿಯ ಅಸಾಧಾರಣ ಔನ್ನತ್ಯವನ್ನು ಎತ್ತಿ ಹೇಳಿದ ಕಾವ್ಯ ಬ್ರಾಹ್ಮಣ ಸಾಹಿತ್ಯದ ಚರಿತ್ರೆಯಲ್ಲಿ ಮತ್ತೊಂದಿಲ್ಲ. ಅದರೊಂದಿಗೆ ಮಹಿಳೆಯರ ನಯ–ವಿನಯ–ಸೌಜನ್ಯಮಯವಾದ ರೀತಿ–ನಡಾವಳಿಕೆಯ ಕೌಟುಂಬಿಕ ಚಿತ್ರವೂ ಅಷ್ಟೇ ಅನನ್ಯ ಮತ್ತು ಆತ್ಮೀಯ. ಸುದೀರ್ಘ ಕಾಲದನಂತರ ಬಂದ ಪ್ರದ್ಯುಮ್ನನನ್ನು ಗುರುತಿಸಲಾಗದ ಕೃಷ್ಣನ ಅರಮನೆಯಗಾರ್ತಿಯರು ಪರಪುರುಷರನ್ನು ನೋಡಬಾರದೆಂದು ಒಳಹೋಗುವದು (XIII–೨೦), ಕೃಷ್ಣನೊಡನೆ ಬರುತ್ತಿದ್ದ ಬಲರಾಮನ ನುಡಿ ಕೇಳಿ ಹೆಂಗಳೆಯರೆಲ್ಲ ಭಯ–ಭಕ್ತಿಯಿಂದ ಎದ್ದು ಒಳಗೆ ನಡೆಯುವುದು (XIII–೨೮) ಇತ್ಯಾದಿಗಳು ಅಂದಿನ ಮಹಿಳಾ ಸಂಸ್ಕೃತಿಯ ಮೌಲ್ಯಗಳ ಮಾದರಿಗೆ ಒಂದೆರಡು ಉದಾಹರಣೆಗಳು.

ಧಾರ್ಮಿಕ ಆಚರಣೆ, ಸಂಪ್ರದಾಯ, ನಂಬಿಕೆಗಳ ನಿರೂಪಣೆಯಲ್ಲೂ ಈ ಕವಿಗೆ ಅಂಥದೇ ಶ್ರದ್ಧೆ, ಹೆರಿಗೆಯ ಸಂದರ್ಭದಲ್ಲಿ ಮಗುವನ್ನು ಮರದಲ್ಲಿಟ್ಟು

---

೭. ಮೋಹನ ತರಂಗಿಣಿ : ಸಂ–ಆರ್.ಸಿ. ಹಿರೇಮಠ, ಪ್ರ : ಕ.ವಿ.ವಿ. ಧಾರವಾಡ: (೧೯೭೩), –೭೩.

ಮುಂದಿನ ಎಲ್ಲ ಉದಾಹರಣೆಗಳನ್ನು ಇದೇ ಕೃತಿಯಿಂದ ಎತ್ತಿಕೊಳ್ಳಲಾಗಿದೆ.

ಗೋಮಯದಿಂದ ಎರೆಯುವದು, ಹೊಕ್ಕಳ ಹುರಿಕತ್ತರಿಸಿ ಮಾಂಸದ ಗಡಿಗೆಯನ್ನು ಹೂಳುವದು, ಬಾಣಂತಿಗೆ ಬೇವಿನರಸ ಕುಡಿಸುವದು–ಮಗುವಿಗೆ ಜೇನಿನ ರಸ ಸೀಪಿಸುವದು, ಜಾತಕ ಬರೆಸುವದು ಮುಂತಾದವುಗಳಿಂದ ಒಟ್ಟು ಕಾವ್ಯವೇ ಸಮಕಾಲೀನ ಸಂಸ್ಕೃತಿಯ ಸಮೃದ್ಧ ದಾಖಲೆಯಾಗಿ ನಿಲ್ಲುತ್ತದೆ ; ಕನಕದಾಸರ ಸೂಕ್ಷ್ಮ ನಿರೀಕ್ಷಣಾಶಕ್ತಿಗೆ ಸಾಕ್ಷಿಯಾಗುತ್ತದೆ ; ಕನಕದಾಸರು ಬದುಕನ್ನು ಅದೆಷ್ಟು ಗಾಢವಾಗಿ ಪ್ರೀತಿಸುತ್ತಿದ್ದರು ಎನಿಸುತ್ತದೆ : ನಮ್ಮ ಸಂಸ್ಕೃತಿಯ ಅದರಲ್ಲೂ ಜಾನಪದ ಸಂಸ್ಕೃತಿಯ ಜೊತೆಗೆ ಎಂಥ ಗಾಢ–ಪ್ರಗಾಢ ಸಂಬಂಧವನ್ನು ಹೊಂದಿದ್ದರು ಎನಿಸುತ್ತದೆ.

ಕನಕದಾಸರ ಸಾಮಾಜಿಕ ಪ್ರಜ್ಞೆ ತಮ್ಮ ಸಮಕಾಲೀನ ಬದುಕಿನ ವಿವಿಧ ಮುಖಗಳ ವಾಸ್ತವ ವಿವರಣೆಗೆ ತಮ್ಮನ್ನು ಸೀಮಿತಗೊಳಿಸಿಕೊಳ್ಳುವುದಿಲ್ಲ. ಆತ ಪ್ರಯೋಗಿಸುವ ಭಾಷೆಯಲ್ಲೂ ಅದು ಸೂಸಲಾಡುತ್ತದೆ. ನೆಲದ ಬದುಕಿನ–ಭಾಷೆಯ ದ್ರವ್ಯದಿಂದಲೇ ಸೃಷ್ಟಿಸಿಕೊಳ್ಳುವ ಉಪಮೆ, ದೃಷ್ಟಾಂತ, ರೂಪಕ ಮತ್ತು ನಾಣ್ಣುಡಿಗಳು ಕಾವ್ಯದ ರಕ್ತವಾಹಿನಿಗಳಾಗಿ ಇಡೀ ಕಾವ್ಯಕ್ಕೆ ಸಾಮಾಜಿಕ ಪ್ರಜ್ಞೆಯ ಜೀವಧಾತುವನ್ನು ಪೂರೈಸುತ್ತವೆ.–"ಊರ ಗುದ್ದಲಿಯ ತೋಡುವರೆ" (VI–೮), "ತಲೆ ಬಲ್ಲಿತೆಂದು ಕಲ್ಲನೇ ಹಾಯಬೇಡ' (VII–೨೩), 'ಒಗೆತನಬಿಟ್ಟು ಹೋಹಾಗ ಹಾಲಿಗೆ ಹೆಪ್ಪ ಮೊಗೆದವರಾರುಂಟು" (IX–೧೯), "ಇರಿದುಕೊಂಡರೆ ಹೊಟ್ಟೆ ತಿವಿದುಕೊಂಡರೆ ಕಣ್ಣು" (XXXV–೩೮) ಎಂಬಂಥವುಗಳನ್ನು ಉದಾಹರಣೆಗಾಗಿ ಸ್ಮರಿಸಿಕೊಳ್ಳಬೇಕು. ಕವಿಯ ಇಂಥ ಉತ್ಕಟ ಸಾಮಾಜಿಕ ಪ್ರಜ್ಞೆಯಿಂದಾಗಿಯೇ ಇಲ್ಲಿಯ ಪೌರಾಣಿಕ ಪಾತ್ರಗಳೆಲ್ಲ ಮಾನವೀಕರಣಗೊಂಡು ಒಂದು ಸಾಮಾಜಿಕ ಪರಿಸರದಲ್ಲಿ ಓಡಾಡಿ ಆಪ್ತವೆನಿಸುತ್ತವೆ. ಅವೆರಡರ ನಿಕಟ ಪರಿಚಯವಿದ್ದ ಕವಿ ಅವೆರಡರ ಅನಾಯಾಸ ಫಲಗಳನ್ನು ಒದಗಿಸುತ್ತಾನೆ.

ಒಟ್ಟಿನಲ್ಲಿ ಈ ಕಾವ್ಯದ ಮೂಲಭೂತ ಪ್ರೇರಣೆ ಮತ್ತು ಆಶಯ ಒಂದು ನಾಡಿನ ಅಖಂಡ ಸಂಸ್ಕೃತಿಯನ್ನು ಕುರಿತ ಹಿತಚಿಂತನೆ ಮತ್ತು ಆ ಸಂಸ್ಕೃತಿಯ ಕಳಕಳಿಯ ಜವಾಬ್ದಾರಿಗೆ ಸಂಬಂಧಿಸಿದ್ದು.

ವೈಭವದ ಅತ್ಯುನ್ನತ ಶಿಖರವನ್ನು ತಲುಪಿದ್ದ ವಿಜಯನಗರ ಸಾಮ್ರಾಜ್ಯದ ಒಬ್ಬ ಪಾಳೆಯಗಾರನಾಗಿ ಅದರೆಲ್ಲ ವೈಭವ–ಅಟ್ಟಹಾಸಗಳನ್ನು ಪ್ರತ್ಯಕ್ಷವಾಗಿ ಕಂಡು ಅನುಭವಿಸಿದ್ದ ಕನಕದಾಸರು ಒಬ್ಬ ದಾರ್ಶನಿಕ ಹಿತಚಿಂತಕರಾಗಿ ಅದರ ಒಳಗಿನ ಸಾವಾಜಿಕ ಬಿರುಕು ಹಾಗೂ ಹೊರಗಿನ ಆಘಾತದಿಂದ

ಒದಗಬಹುದಾಗಿದ್ದ ಭೀಕರ ದುರಂತ ಸುಳುಹನ್ನು ಕಂಡವರಾಗಿದ್ದರು. ಅದರಿಂದಾಗಿ ಅವರ ಸಾಂಸ್ಕೃತಿಕ ಪ್ರಜ್ಞೆ ಹಲವು ನೆಲೆಗಳಲ್ಲಿ ಕಾವ್ಯ ಮಾಧ್ಯಮದ ಮೂಲಕವಾದರೂ ಕಾರ್ಯಾಚರಣೆಗೆ ತೊಡಗಬೇಕಾದದ್ದು ಅನಿವಾರ್ಯವಾಗಿತ್ತು. ಆ ಕಾರ್ಯಾಚರಣೆಯ ಸ್ವರೂಪವನ್ನು ಮುಖ್ಯವಾಗಿ ಮೂರು ರೀತಿಯಲ್ಲಿ ಗುರುತಿಸಬಹುದು : ಮೊದಲನೆಯದಾಗಿ ತತ್ಕಾಲೀನ ಸಾಮ್ರಾಜ್ಯದ ಮತ್ತು ಸಂಸ್ಕೃತಿಯ ಔನ್ನತ್ಯವನ್ನು ತನ್ನ ಜನಾಂಗದ ಅರಿವಿಗೆ–ಅನುಭವಕ್ಕೆ ಅದರ ಬಗೆಗೆ ಅವರ ಗೌರವ–ಸ್ವಾಭಿಮಾನವನ್ನು ಚೇತರಿಸುವಂತೆ ಪ್ರೇರೇಪಿಸುವದು ; ಎರಡನೆಯದಾಗಿ ಅಂದಿನ ಸಮಾಜದಲ್ಲಿಯ ಆಂತರಿಕ ಕಲಹವನ್ನು ಎತ್ತಿ ಹೇಳಿ ಅದರಿಂದ ಮುಂದೆ ಸಂಭವಿಸಬಹುದಾದ ಅಪಾಯಗಳನ್ನು ಕಲ್ಪನೆಗೆ ತಂದುಕೊಟ್ಟು ಸಾಂಸ್ಕೃತಿಕವಾಗಿ ಕರ್ತವ್ಯದ ಪ್ರಜ್ಞೆಯನ್ನು ಮೂಡಿಸುವದು ; ಮೂರನೆಯದಾಗಿ ವರ್ಗಸಾಮರಸ್ಯ ಮತೀಯ ಸೌಹಾರ್ದತೆಯನ್ನು ಮೂಡಿಸಿ ಭಾವೈಕ್ಯತೆಯನ್ನು ಸಾಧಿಸುವದು. ಈ ಎಲ್ಲ ಪ್ರಜ್ಞಾವಲಯಗಳಿಗೆ ಅಖಂಡ ಸಾಂಸ್ಕೃತಿಕ ಪ್ರಜ್ಞೆ ಕೇಂದ್ರವಾಗುತ್ತದೆ.

ಗಮನಿಸಬೇಕಾದದ್ದೆಂದರೆ–ಒಂದು ಜನಾಂಗದ ಒಟ್ಟು ಸಂಸ್ಕೃತಿಯ ಪ್ರತಿನಿಧಿಯಾಗಿ, ಹಿತೈಷಿಯಾಗಿ ತಮ್ಮನ್ನು ಗುರುತಿಸಿಕೊಡುವ ಕನಕದಾಸರು ಮತೀಯ ಸೌಹಾರ್ದತೆಯ ಪ್ರಶ್ನೆ ಬಂದಾಗ ಮಾತ್ರ ಒಂದು ವಿಶಿಷ್ಟ ಮತದ ಅಂದರೆ ವೈಷ್ಣವ ಮತದ ಪ್ರತಿನಿಧಿಯಾಗಿ ಪಕ್ಷಪಾತಿಯಾಗಿ ನಿಲ್ಲುತ್ತಾರೆ. ಇಂಥ ಸಂದರ್ಭದಲ್ಲಿ ಅವರ ಪ್ರಜ್ಞೆ ಸಮತೋಲನ ಕಳೆದುಕೊಂಡು ಇತರ ಮತದೊಂದಿಗೆ ಪೈಪೋಟಿಗೆ ನಿಲ್ಲುತ್ತದೆ : ಹರಿಸರ್ವೋತ್ತಮತೆಯನ್ನು ಸ್ಥಾಪಿಸುವ ಪೇಚಾಟದಲ್ಲಿ ತನ್ನ ಮೂಲ ಉದ್ದೇಶವನ್ನು ಶಿಥಿಲಗೊಳಿಸುತ್ತದೆ : ಮತೀಯ ಸೌಹಾರ್ದತೆಯನ್ನು ಸಾಧಿಸುವಲ್ಲಿ ಒಟ್ಟಿನಲ್ಲಿ ವಿಫಲಗೊಳ್ಳುತ್ತದೆ. ಕೆಲವು ಸಂದರ್ಭದಲ್ಲಿಯಾದರೂ ಚಿಂತೆಯಿಲ್ಲ ಹರಿಹರರಲ್ಲಿ ಸಮಾನತೆಯನ್ನು ಎತ್ತಿ ಹೇಳುವ ಕವಿ ಅದೇ ಔದಾರ್ಯವನ್ನು ಆ ಎರಡೂ ಮತಗಳ ಸಮಾಜದಲ್ಲಿ ತೋರುವದಿಲ್ಲ. ವೀರಶೈವಧರ್ಮದ ಬಗೆಗಿರುವ ಸದ್ಭಾವನೆ ವೀರಶೈವ ಸಮಾಜದ ಬಗೆಗೆ ಕಾಣುವದಿಲ್ಲ. ಹೀಗಾಗಿ ವೀರಶೈವ ಸಮಾಜವನ್ನು ವೈಷ್ಣವ ಸಮಾಜದೊಂದಿಗೆ ಸ್ಪರ್ಧೆಗೆ ಇಳಿಸಿ ಎಲ್ಲ ಹಂತದಲ್ಲೂ ವೀರಶೈವರ ಮುಖಭಂಗವಾಗುವಂತೆ ಸಂಕೇತಗಳನ್ನು ಸಂಯೋಜಿಸುತ್ತಾನೆ.

ಕೃಷ್ಣ–ಬಾಣಾಸುರರ ಯುದ್ಧದ ಸನ್ನಿವೇಶದ ಪ್ರತಿಯೊಂದು ಹಂತವೂ ಇದನ್ನು ನಿಖರವಾಗಿ ಪ್ರತಿಪಾದಿಸುವಂತಿದೆ. ಯುದ್ಧದಲ್ಲಿ ಹರಭಕ್ತ

ಬಾಣಾಸುರನನ್ನು ಮೊದಲುಗೊಂಡು ಶಿವನ ಸೈನ್ಯವೆಲ್ಲ ಹಂತಹಂತವಾಗಿ ತತ್ತರಿಸುತ್ತ ಹತಬಲವಾಗುತ್ತ ಹೋಗುವದು. ಕೃಷ್ಣನ ಪರಿವಾರವೆಲ್ಲ ಹಂತ ಹಂತವಾಗಿ ವಿಜಯವನ್ನು ಸಂಪಾದಿಸುವದು, ವಾಗ್ಯುದ್ಧದಲ್ಲಿ ಶಿವನ ವಿಡಂಬನೆಯನ್ನೇ ಮುಂದುಮಾಡಿ ಶ್ರೀಹರಿಯ ನಿಂದಾಸ್ತುತಿ ಗೈಯುವದು, ಕೊನೆಗೆ ಸ್ವತಃ ಶಿವನೇ "ಕೇಶವನೆಡೆಗೆನ್ನೆಡೆಗೆ ಆವನೋರ್ವನು ದ್ವೇಷ ಬುದ್ಧಿಯ ಮಾಡಿದರೆ ದೋಷಸಂಭವಿಸುವದು" (೪೦–೮೬) ಎಂದು ತನ್ನ ಭಕ್ತನಾದ ಬಾಣಾಸುರನಿಗೇ ಎಚ್ಚರಿಕೆ ಕೊಡುವದು, "ಹರನೊಳು ವಿಶ್ವಾಸವನು ಬಿಡದಿರು, ಚಕ್ರಧರನೊಳು ಭಕ್ತಿಯ ರಚಿಸು" ಎಂದು ಮಂತ್ರಿ ಕುಂಭಾಂಡ ಬಾಣನಿಗೆ ವಿವೇಕ ಹೇಳುವದು–ಇವೆಲ್ಲ ಕನಕದಾಸರ ಮತೀಯ ಭಾವನೆಗೆ ನಿದರ್ಶನಗಳು. ಹೀಗೆ ಬಾಣಾಸುರನೇ ಅಪರಾಧಿ ಎನ್ನುವಂತೆ, ನಡೆದೆಲ್ಲ ಅನಾಹುತಗಳಿಗೆ ಆತನನ್ನೇ ಜವಾಬ್ದಾರನನ್ನಾಗಿ ಮಾಡುವ ಮೂಲಕ, ಅಂದಿನ ಏರುಪೇರುಗಳೀಗೆ ಜವಾಬ್ದಾರಿಯನ್ನಾಗಿಮಾಡಿ ವಿವೇಕ ಹೇಳಿದಂತಿದೆ.

ಆದರೆ ಬಾಣಾಸುರನ ಶಿವಪೂಜೆಯ ಸಂದರ್ಭದಲ್ಲಿ ವೀರಶೈವ ಧಾರ್ಮಿಕ ವಿಧಿ–ವಿಧಾನಗಳನ್ನು ಚಿತ್ರಿಸುವಲ್ಲಿ ಕನಕದಾಸರು ಪ್ರಕಟಿಸಿದ ಶ್ರದ್ಧೆ ಅಸಾಧಾರಣ ಮತ್ತು ಆಶ್ಚರ್ಯಕರ. "ಶಿರದೆಡೆಯೊಳಗಿರ್ದ ಶಿವಲಿಂಗ ದೇವರ ಪರಮವಸ್ತ್ರವ ಬಿಚ್ಚಿ ತಗೆದುವರರತ್ನಾಂಚಿತ ವೃಷಭಮುದ್ರೆಯನಿಟ್ಟುಕರಕಂಜದೊಳಗೆ ಸಾರ್ಚಿದನು" (೨೧–೨೨), "ಏಣಾಂಕಧರ ತನ್ನ ಭಕ್ತ ಕೀರ್ತಿಸುವ ಸುಜನವಾಕ್ಯಂಗಳ ಕೇಳ್ದು ಪ್ರಾಣಲಿಂಗದೊಳು ತಾನಾಗಿ ಮೈದೋರಿ ಬಾಣಾಸುರನ ಕಣ್ಮನಕೆ" ಎಂಬಲ್ಲಿಯ ಪೂಜಾ ಸಂದರ್ಭದ ಪ್ರಕ್ರಿಯೆ ಮತ್ತು ಪರಿಭಾಷೆ ಅತ್ಯಂತ ಗಮನಾರ್ಹ.

ಹೀಗೆ ರಾಮಧಾನ್ಯ ಚರಿತೆ, ನಳಚರಿತೆ ಹಾಗೂ ಮೋಹನ ತರಂಗಿಣಿಯಲ್ಲಿ ಸಾಂದ್ರವಾಗಿ ಕಾಣಿಸಿಕೊಳ್ಳುವ ಕನಕದಾಸರ ಸಾಮಾಜಿಕತೆಯ ಆಸಕ್ತಿ ಅವರದೇ ಇನ್ನೊಂದು ಕೃತಿ 'ಹರಿಭಕ್ತಿಸಾರ'ದಲ್ಲಿ ಪ್ರಕಟಗೊಳ್ಳುವದಿಲ್ಲ. ಆ ಕಾವ್ಯದ ಉದ್ದೇಶವೂ ಅದಲ್ಲ. ತಲೆಬರಹವೇ ಸೂಚಿಸುವಂತೆ ಸಾಧಕನೊಬ್ಬನ ಭಕ್ತಿಯ ಆವೇಶ, ಉತ್ಕಟತೆ, ಆರ್ತತೆ, ಆತ್ಮನಿರೀಕ್ಷೆ, ಆತ್ಮನಿವೇದನೆ ಇತ್ಯಾದಿಗಳನ್ನು ಒಳಗೊಂಡ ಈ ಚಿಕ್ಕ ಕೃತಿ ಕನಕದಾಸರ ಬದುಕಿನ–ಉದ್ದೇಶದ ಮತ್ತೊಂದು ಮಗ್ಗುಲನ್ನು ಅನಾವರಣಗೊಳಿಸುವಂತಹದು ; ಭಕ್ತಿಯ ಸ್ವರೂಪ ಅದರ ಅಲೌಕಿಕ ಪರಿಣಾಮವನ್ನು ಕಟ್ಟಿಕೊಡುವಂತಹದು. ಒಟ್ಟಿನಲ್ಲಿ ಈ ಕೃತಿ ದಾಸಕೂಟದ ಧೋರಣೆಗಳಲ್ಲಿ ಒಂದಾದ ಹರಿಭಕ್ತಿಯ ಪ್ರಸಾರಕ್ಕೆ ಬದ್ಧವಾದದ್ದು;

ಭಕ್ತಿ ಅದರ ಮೂಲ ಪ್ರೇರಣೆ. ಆದ್ದರಿಂದ ಸಾಮಾಜಿಕತೆಯ ನೆಲೆಯಿಂದ ಮಹತ್ವದ್ದೆನಿಸುವದಿಲ್ಲ.

ಸಾಮಾಜಿಕತೆಯ ದೃಷ್ಟಿಯಿಂದ ಕನಕದಾಸರ ಕೀರ್ತನೆಗಳ ಪಾತ್ರ ಕಡಿಮೆಯೂ ಅಲ್ಲ ಕಡೆಗಣಿಸುವಂತಹದೂ ಅಲ್ಲ. ಆದರೆ ಕೀರ್ತನೆಗಳಲ್ಲಿಯ ಸಾಮಾಜಿಕ ಪ್ರಜ್ಞೆ ಹಾಗೂ ಅದರ ನೆಲೆಗಳು ಪ್ರಕಟಗೊಳ್ಳುವ ರೀತಿ ಮತ್ತು ವಿನ್ಯಾಸ ಮಾತ್ರ ಕಾವ್ಯಗಳಿಗಿಂತ ಬೇರೆಯಾದದ್ದು. ಮುಖ್ಯವಾಗಿ ಕೀರ್ತನೆಗಳ ಸ್ವರೂಪವೇ ಕಾವ್ಯಗಳಿಗಿಂತ ಬೇರೆಯಾದದ್ದು. ಹಾಗೆ ನೋಡಿದರೆ ಅವುಗಳಲ್ಲಿ ಕಾವ್ಯಾಂಶ ಎಷ್ಟೇ ಇರಲಿ, ವಚನಗಳಂತೆ ಕೀರ್ತನೆಗಳೂ ಕೂಡ ಕಾವ್ಯವೆಂದು ಗಣಿಸಲ್ಪಡುವದಿಲ್ಲ. ಸಾಮಾಜಿಕ ಅಥವಾ ವೈಯಕ್ತಿಕ ಅನುಭವಗಳ ಅಭಿವ್ಯಕ್ತಿಗೆ ಪೌರಾಣಿಕ ವಿಷಯ–ಸಾಮಗ್ರಿಗಳನ್ನು ಪ್ರತಿಮೆ, ರೂಪಕ, ಉಪಮೆ, ದೃಷ್ಟಾಂತ, ಅರ್ಥಾಂತರನ್ಯಾಸಗಳ ರೂಪದಲ್ಲಿ ವ್ಯಂಜಕ ಸಾಮಗ್ರಿಯನ್ನಾಗಿ ಬಳಸಿಕೊಳ್ಳ ಬಹುದು ; ಆದರೆ ಒಂದು ಇಡೀ ಪೌರಾಣಿಕ ಕಥಾವಸ್ತುವನ್ನೇ ಸಾಮಾಜಿಕತೆಯ ರೂಪಕವನ್ನಾಗಿ ಬಳಸಿಕೊಳ್ಳುವದು ಕಷ್ಟ ; ಇಂಥ ತಂತ್ರ ಕೀರ್ತನೆ ಸ್ವರೂಪಕ್ಕೆ, ಗಾತ್ರಕ್ಕೆ ಒಗ್ಗುವಂತಹದೂ ಅಲ್ಲ ಕೀರ್ತನೆಗಳು ತಮ್ಮ ಸಾಮಾಜಿಕ ಅನುಭವ ಚಿಂತನೆಗಳನ್ನು, ಎಷ್ಟೇ ಕಲಾತ್ಮಕವೆಂದರೂ ತಮ್ಮ ಅಭಿದಾವ್ಯಾಪಾರದ ಮೂಲಕವಾಗಿಯೇ ನೇರವಾಗಿ, ವಾಚ್ಯವಾಗಿ ಪ್ರಕಟಿಸಬಲ್ಲವು. ಜನಸಾಮಾನ್ಯರನ್ನು ತಲುಪಬೇಕಾದದ್ದರಿಂದ ಅದು ಅವಶ್ಯವೂ ಆಗಿತ್ತು, ಭಾವನಿಷ್ಠವಾದ ಕೀರ್ತನೆಗಳು ವಸ್ತುನಿಷ್ಠ ಕಾವ್ಯಗಳಂತೆ ತನ್ನ ಅನುಭವಗಳನ್ನು ವಿಭಾವಾನುಭಾವಗಳ ಮೂಲಕ ರಸರೂಪದಲ್ಲಿ ಆಸ್ವಾದನೆಗೆ ತಂದುಕೊಡುವಂಥವುಗಳೂ ಅಲ್ಲ. ಆದರೆ ಕೀರ್ತನೆಗಳಿಗಿರುವ ಎಲ್ಲ ಮಿತಿಗಳು ವಚನಸಾಹಿತ್ಯಕ್ಕೆ ಇದ್ದರೂ, ಸಾಮಾಜಿಕ ವಿಪ್ಲವದಲ್ಲಿ ತಮ್ಮನ್ನು ಪ್ರತ್ಯಕ್ಷವಾಗಿ ತೊಡಗಿಸಿಕೊಂಡಿದ್ದ ಆ ವಚನಕಾರರಿಗೆ ಇದ್ದ ಭಾವಾತ್ಮಕ ಮತ್ತು ವೈಚಾರಿಕ ನೆಲೆಗಟ್ಟು ದಾಸರಿಗೆ ಇರಲಿಲ್ಲ. ಅಲ್ಲದೆ ಸಮಾಜದ ಹಲವು ಸ್ತರದಿಂದ ಹರಿದು ಬಂದ ಭಾಷೆ ಮೂಲ ಭಾಷಾಪ್ರವಾಹಕ್ಕೆ ಅದಮ್ಯ ಶಕ್ತಿಯನ್ನು ಪೂರೈಸಿದ ಕಾರಣ ಶರಣರ ಅಭಿವ್ಯಕ್ತಿಗೆ ಎಂಥ ಮಿತಿಗಳನ್ನೂ ಅತಿಕ್ರಮಿಸುವ ದಮ್ಮು ಪ್ರಾಪ್ತವಾಗಿತ್ತು ; ಹಿಂದೆಂದೂ ಇಲ್ಲದ, ತಾವೇ ಸಂಪಾದಿಸಿಕೊಂಡ, ಅಭಿವ್ಯಕ್ತಿಯ ಸ್ವಾತಂತ್ರ್ಯವೂ ಇತ್ತು. ಇಂಥ ಎಲ್ಲ ಅವಕಾಶಗಳಿಂದಲೂ ವಂಚಿತವಾಗಿದ್ದ ಕೀರ್ತನೆಗಳಿಗೆ ಕನಕದಾಸರ ಆಗಮನದಿಂದ ಹೆಚ್ಚಿನ ಇಂಬುದೊರೆತಂತಾಯಿತು.

ದಾಸರ ಭಾಷೆಗೆ, ಅಭಿವ್ಯಕ್ತಿಗೆ ಅದರ ಧಾರಣಶಕ್ತಿಗೆ ಒಂದು ಮಿತಿ ಇದ್ದಂತೆ

ದಾಸರ ಅಭಿವ್ಯಕ್ತಿಯ ವಿಷಯಕ್ಕೂ, ಅವರ ಆಶಯ ಧೋರಣೆಗಳಿಗೂ ಇದ್ದ ಮಿತಿಯನ್ನು ಮರೆಯುವಂತಿಲ್ಲ. ತಮ್ಮವರಲ್ಲದವರನ್ನು, ತಮ್ಮದಲ್ಲದ್ದನ್ನು ಕುರಿತು ಅಂದಿನ ದಾಸಕೂಟದವರಾಗಲಿ, ವ್ಯಾಸಕೂಟದವರಾಗಲಿ ತಲೆಕೆಡಿಸಿಕೊಳ್ಳಲು ಹೋದವರೇ ಅಲ್ಲ. ಅನ್ಯರೊಂದಿಗೆ ವ್ಯಾವಹಾರಿಕ ಸಂಪರ್ಕ ಇಟ್ಟುಕೊಂಡಂತೆ ಅನ್ಯರ ಬಗೆಗಿನ ಅವರ ಕಳಕಳಿಯೂ ವ್ಯಾವಹಾರಿಕವಾಗಿತ್ತು. ಹಾಗಾಗಿ ಅವರ ಕೀರ್ತನೆಗಳಲ್ಲಿ ಸಾಮಾಜಿಕ ವಲಯವಿಸ್ತಾರಗೊಳ್ಳುವ ಸಂದರ್ಭವೇ ಒದಗಿ ಬರಲಿಲ್ಲ. ಇಂಥ ಪ್ರಸಂಗದಲ್ಲಿ ಕನಕದಾಸರ ಪ್ರಜ್ಞೆ ವಿಶಾಲ ಅನುಭವದ ಬಿಸಿಯಿಂದಾಗಿ ಉಕ್ಕಿ ಹೊರಚೆಲ್ಲಿತು ; ವಿಸ್ತಾರಗೊಂಡು ಕ್ರಿಯಾಶೀಲವಾಯಿತು.

ಕನಕದಾಸರ ಕೀರ್ತನೆಗಳು ಅವರ ಬದುಕಿನ ವೈಯಕ್ತಿಕ ಅಂಶಗಳನ್ನು ಮೊದಲುಗೊಂಡು ಒಟ್ಟು ಸಮಾಜದ ಇತರ ಎಲ್ಲ ಸ್ತರಗಳ ಪಾರ್ಶ್ವಗಳೆಲ್ಲದರ ಶೋಧನೆಗೆ ತೊಡಗುವ ಮತ್ತು ಸಂಸ್ಕರಿಸುವ ಮಹತ್ವಾಕಾಂಕ್ಷೆಯನ್ನು ಪ್ರದರ್ಶಿಸುತ್ತವೆ. ತಮ್ಮ ಇತರ ಕಾವ್ಯಗಳಲ್ಲಿ ಸಾಮಾಜಿಕ ವಾಸ್ತವ ಅನುಭವಗಳ ನಿವೇದಕರಾಗಿ ಕಂಡರೆ, ಕೀರ್ತನೆಗಳ ಸಂದರ್ಭದಲ್ಲಿ ಸಮಾಜ ವಿಡಂಬಕರಾಗಿ ಕಾಣಿಸಿಕೊಳ್ಳುತ್ತಾರೆ. ಅಂದರೆ ಕಾವ್ಯದಲ್ಲಿ ಬರುವ ಸಾಮಾಜಿಕ ಪ್ರಜ್ಞೆ ಸಾಮಾನ್ಯವಾಗಿ ಒಂದು ಸಮಾಜದ ಗುಣ ದೋಷಗಳೆರಡರಿಂದಲೂ ಕೂಡಿಕೊಂಡು ವಿಮರ್ಶೆಯಾಗಿ ಪರಿಣಮಿಸುತ್ತದೆ. ಕೀರ್ತನೆಗಳಲ್ಲಿ ಸಾಮಾಜಿಕ ದೋಷಗಳೇ ಮುಂದಾಗಿ ಟೀಕೆಯ, ವಿಡಂಬನೆಯ, ಉಪದೇಶದ ರೂಪದಲ್ಲಿ ನಿಲ್ಲುತ್ತದೆ, ವಿಮರ್ಶೆಯಾಗುವದಿಲ್ಲ. ಒಟ್ಟಿನಲ್ಲಿ ಕನಕದಾಸರ ಕೀರ್ತನೆಗಳಲ್ಲಿ ತಮ್ಮ ವೈಯಕ್ತಿಕ ಗುಣದೋಷಗಳೊಂದಿಗೆ ಸಮಾಜದ ಮೇಲು–ಕೀಳು, ಬಡವ–ಬಲ್ಲಿದ, ಉಚ್ಚ–ನೀಚ ಇತ್ಯಾದಿಯಾಗಿ ಎಲ್ಲ ವರ್ಗಗಳ, ಮತಗಳ ತಳಬುಡವನ್ನೆಲ್ಲ ಸೋಸಿ ನೋಡಿದ್ದಾರೆ. ಮೇಲುವರ್ಗದವರ ಮತಾಂಧತೆ, ಅಹಂಕಾರ, ಪ್ರತಿಷ್ಠೆ. ಡಾಂಭಿಕತೆಯಂಥ ಪ್ರವೃತ್ತಿಗಳು, ಕೆಳವರ್ಗದವರ ಅಜ್ಞಾನ, ಅಂಧಶ್ರದ್ಧೆ, ಮೌಢ್ಯಗಳಂಥ ಅನಿಷ್ಟಗಳು ಅವರ ಕೀರ್ತನೆಯ ವಿಷಯಗಳಾಗುತ್ತವೆ. ಆದರೆ ಒಂದು ಸ್ಥಗಿತ ವ್ಯವಸ್ಥೆಯ ಹದ್ದುಬಂದಿಯಲ್ಲಿ ನಿಂತುಕೊಂಡೇ ಆ ಅಲ್ಲ ವಿಷಯಗಳಿಗೆ ಸ್ಪಂದಿಸುತ್ತಾರೆ. ವರ್ಣಾಶ್ರಮವನ್ನು, ಪುನರ್ಜನ್ಮ ಹಾಗೂ ಕರ್ಮವಾದವನ್ನು ಒಪ್ಪಿಕೊಳ್ಳುವ ಕನಕದಾಸರೂ ವರ್ಗಾತೀತ, ಜಾತ್ಯತೀತ ಸಮಾಜವನ್ನು ಆಶಿಸಿದವರಲ್ಲ. ಒಬ್ಬ ಕವಿಯಾಗಿಯೂ ಸ್ಥಗಿತ ವ್ಯವಸ್ಥೆಯನ್ನು ಎದುರು ಹಾಕಿಕೊಳ್ಳುವವರಲ್ಲ. ಅವರ ದೃಷ್ಟಿಯಲ್ಲಿ ಸಮಾಜವೆಂದ ಮೇಲೆ ಬಗೆಬಗೆಯ ಸ್ತರಗಳು, ವರ್ಗಗಳು ಅನಿವಾರ್ಯ; ಆದರೆ ಅವೆಲ್ಲ ಪರಸ್ಪರ

ಆಕ್ರಮಣಕ್ಕೆ ತೊಡಗದೆ, ಒಂದನ್ನೊಂದು ದೂಷಿಸದೆ–ಶೋಷಿಸದೆ, ಪರಸ್ಪರ ಅನ್ಯೋನ್ಯವಾಗಿ ಸೌಹಾರ್ದತೆಯಿಂದ ಬದುಕಬೇಕು; ಆ ಮೂಲಕ ಒಟ್ಟು ಸಮಾಜದಲ್ಲಿ ಭಾವೈಕ್ಯತೆ ಮೂಡಬೇಕು ಎಂಬುದು ಅವರ ಉದಾರ–ಸಾತ್ವಿಕ ಆಶಯವಾಗಿತ್ತು. ಅಂದಿನ ಸಮಾಜದ ಎಲ್ಲ ಸ್ತರಗಳಲ್ಲಿ ಅನಿಷ್ಟಗಳಿದ್ದರೂ ಮುರಿದು ಕಟ್ಟುವ, ಹರಿದು ಹೊಸೆಯುವ ಸಂದರ್ಭ ಅವರಿಗೆ ಅನಿವಾರ್ಯವೆನಿಸಲಿಲ್ಲ. ಬಹಳವಾದರೆ ಒಟ್ಟು ಸಮಾಜವನ್ನೇ ವೈಷ್ಣವ ಮುದ ಆವರಣಕ್ಕೆ ಒಳಪಡಿಸುವದು. ಬೆಂದ ಸಮಾಜವನ್ನು ಹರಿಭಕ್ತಿಯ ಜೋಗುಳಹಾಡಿ ಜೊಂಪು ತರಿಸಿ ಸಮಾಧಾನಪಡಿಸುವದಾಗಿತ್ತು. ತಮ್ಮ ವೈಯಕ್ತಿಕ ಇತಿಮಿತಿಗಳ ಹಿನ್ನೆಲೆಯಲ್ಲಿ ಅವರಿಗೆ ಇದುವೇ ವಿವೇಕ ಸಮ್ಮತವಾದ ಮಾರ್ಗವೂ ಆಗಿತ್ತು. ಇದರ ಪ್ರತಿಫಲವಾಗಿ ಬಹಳಷ್ಟು ಸಲ ಕನಕದಾಸರ ಕೀರ್ತನೆಗಳಲ್ಲೂ ನೈತಿಕ ಪ್ರಜ್ಞೆಗೆ ನಿದರ್ಶನವೆನ್ನುವಂತೆ–ಸುಳ್ಳುಹೇಳಬೇಡ, ಕಳವು ಮಾಡಬೇಡ, ಪರಧನ–ಪರಸ್ತ್ರೀಯರಿಗೆ ಆಸೆಪಡಬೇಡ, ಹೆಚ್ಚಿನದನ್ನು ಬಯಸಬೇಡ, ಪಡೆದದ್ದೆಲ್ಲ ಪೂರ್ವಜನ್ಮದ ಕರ್ಮಫಲ, ಹರಿಯನ್ನು ಆರಾಧಿಸುವ, ಮೋಕ್ಷವನ್ನು ಬಯಸು ಇತ್ಯಾದಿ ಮಾಮೂಲಿ ಎನ್ನುವಂಥ ಉಪದೇಶಗಳೂ ಕೇಳಿಬರುತ್ತವೆ. ಆದರೆ ಇಂಥ ಮಾತುಗಳು ಕೇವಲ ಉಪದೇಶದ ಮಟ್ಟಕ್ಕೆ ನಿಲ್ಲದೆ ಕಳಕಳಿಯಾಗಿ ನಿಲ್ಲುತ್ತದೆ.

ಇಂಥ ಸಾಮಾನ್ಯ ನೀತಿ–ಬೋಧೆಯನ್ನು ಮೀರಿಯೂ, ದಾಸಸಾಹಿತ್ಯದಲ್ಲಿಯೇ ಅಪರೂಪವೆನ್ನುವಂಥ ಸಾಮಾಜಿಕ ಸಮಸ್ಯೆಗಳನ್ನು ಕುರಿತ ತೀವ್ರ ಸಂವೇದನೆಗಳು, ಚಿಂತನೆಗಳೂ ಚುರುಕಾಗಿ ಸಿಡಿದುಬರುತ್ತವೆ. ಅದರಲ್ಲೂ ಕುಲದ ಪ್ರಶ್ನೆ ಬಂದಾಗಲೆಲ್ಲ ಕನಕದಾಸರು ನೊಂದಜೀವಿಯಾಗಿ, ಒಬ್ಬ ದಾರ್ಶನಿಕರಾಗಿ, ಕಳಕಳಿಯ ಪ್ರಜ್ಞಾವಂತರಾಗಿ ನಮ್ಮೆದುರು ನಿಲ್ಲುತ್ತಾರೆ. “ಕುಲಕುಲ ಕುಲವೆಂದು ಕುಲವೆನ್ನುತಿಹರು ಕುಲವ್ಯಾವುದು ಸತ್ಯಸುಖವುಳ್ಳ ಜನರಿಗೆ” ಎಂದು ಕೇಳಿ “ಆತ್ಮ ಯಾವಕುಲ ಜೀವ ಯಾವಕುಲ, ತತ್ವೇಂದ್ರಿಯ ಕುಲಪೇಳಿರಯ್ಯ” ಎಂಬ ತರ್ಕಬದ್ಧ ಪ್ರಶ್ನೆಗಳಿಂದ ಮೂಲಕ್ಕೆ ಕೈಹಾಕಿ ಜಾತೀಯತೆಯ ಆಹ್ವಾನಗಳನ್ನು ಎದುರಿಸುತ್ತಾರೆ. “ಕುಲಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ” ಎಂದು ನಿರುದ್ವಿಗ್ನರಾಗಿಯೇ ಪ್ರಶ್ನಿಸುತ್ತ “ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ” ಎಂದು ಉಚ್ಚಕುಲದವರು ತಮ್ಮನ್ನು ತಾವೇ ಮುಟ್ಟಿಕೊಂಡು ನೋಡುವಂತೆ ಮಾಡುತ್ತಾರೆ. ಹೀಗೆ ಹೇಳುವಾಗ ದಾಸರು ಶರಣರನ್ನು ನೆನಪಿಗೆ ತರುತ್ತಾರೆ.

ಅದರಂತೆ ತಂಡ ತಂಡದ ಹಿಂಡುದೈವದ ಆರಾಧನೆಯನ್ನು ಖಂಡಿಸಿ "ಎಕ್ಕಾತಿ ಎಲ್ಲಮ್ಮ ಮಾರಿ ದುರ್ಗಿಯು ಚೌಡಿ ಅಕ್ಕರೆಯಿಂದಲಿ ಪೂಜೆ ಮಾಡಲೇಕೆ......ಹೋತು ಕುರಿಕೋಣನಾ ಬಲಿಗೊಂಬ ಡೊಂಬಿದೈವಗಳ ಭಜಿಸದಿರು ಮನವೆ........ಜ್ಞಾನವಿಲ್ಲದೆ ಹೀನ ದೈವದ ಭಜಿಸಲು ಏನುಂಟು ನಿನಗಿನ್ನು ಎಲೆ ಹುಚ್ಚು ಮನವೆ" ಎಂದೆಲ್ಲಾ ಮುಗ್ಧ ಅಜ್ಞರ ಅಂಧಶ್ರದ್ಧೆ ಮೂಢನಂಬಿಕೆಗಳನ್ನು ಅಂತಃಕರಣದಿಂದ ಹರಳು ಕರಗುವಂತೆ ಹೇಳಿ ಧರ್ಮದ ನಿಜವಾದ ಮರ್ಮವನ್ನು ತಿಳಿಹೇಳುತ್ತಾರೆ. ಅದರಲ್ಲೂ ಇಲ್ಲಿಯ 'ಭಜಿಸದಿರು ಮನವೆ" "ಎಲೆ ಹುಚ್ಚುಮನವೆ" ಎಂಬ ಸಂಬೋಧನೆಗಳನ್ನು ನೋಡಬೇಕು. ಅಂದರೆ ಎಷ್ಟೋ ಸಲ ಇಡಿ ಸಮಾಜದ ಪ್ರತಿನಿಧಿಯಾಗಿ ಆ ಎಲ್ಲ ದೋಷಗಳನ್ನು ತಮ್ಮ ಮೇಲೆಯೇ ಆರೋಪಿಸಿಕೊಂಡು "ಆತ್ಮಬೋಧೆ" ಎನ್ನುವಂತೆ ಸಮಾಜಬೋಧೆಮಾಡುವ ಕನಕದಾಸರು ಅದರ ಬಗೆಗೆ ಇರಿಸಿಕೊಂಡ ಗಾಢವಾದ ಅವಿನಾಭಾವ ಸಂಬಂಧ ಅನನ್ಯವೆನಿಸುತ್ತದೆ.

ಗಮನಿಸಬೇಕಾದ ಇನ್ನೂ ಒಂದು ವಿಶೇಷವೆಂದರೆ, ಕನಕದಾಸರು– ಮೇಲು ವರ್ಗದವರ ಸ್ವಾರ್ಥಬದ್ಧವಾದ ದೋಷಗಳನ್ನು ನಿಷ್ಠುರವಾಗಿ, ನಿರ್ದಾಕ್ಷಿಣ್ಯವಾಗಿ ಎತ್ತಿ ಹೇಳುವ ಕನಕದಾಸರು–ಕೆಳವರ್ಗದವರ ಅನಾಗರಿಕ ದೋಷ ಮತ್ತು ವರ್ತನೆಯನ್ನು ಅತ್ಯಂತ ತಾಳ್ಮೆಯಿಂದ ಗ್ರಹಿಸಿ, ಅತ್ಯಂತ ಕನಿಕರದಿಂದ ನಿರೂಪಿಸುತ್ತಾರೆ. ಅಂದರೆ ಕನಕದಾಸರ ದೃಷ್ಟಿಯಲ್ಲಿ ತಿಳಿಯದೇ ಮಾಡುವ ಕೆಳವರ್ಗದವರ ಅಪರಾಧಗಳಿಗಿಂತ ತಿಳುವಳಿಕೆಯಿಂದ ಲೋಕಕಂಟಕರಾಗಿ ಮೇಲುವರ್ಗದವರು ಮಾಡುವ ಅಮಾನುಷ ಅಪರಾಧ ಸಮಾಜದ ಘೋರದುರಂತ.

ಇನ್ನೊಂದು ವಿಶೇಷವೆಂದರೆ ಮೋಹನ ತರಂಗಿಣಿಯಲ್ಲಿ ಕಂಡುಬರುವ ಮತಾಭಿಮಾನ, ಮತೀಯ ತಾರತಮ್ಯ ಕೀರ್ತನೆಗಳಲ್ಲಿ ಅವಕಾಶ ಪಡೆಯುವದು ಕಡಿಮೆ, ಯಾವುದೇ ಮತದ ದೌರ್ಬಲ್ಯಗಳಾದರೂ ಸರಿಯೆ ನಿಷ್ಪಕ್ಷಪಾತವಾಗಿ ಬಯಲಿಗೆಳೆಯಬಲ್ಲರು. "ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ' ಎಂಬ ಕೀರ್ತನೆಯಲ್ಲಿ "ಪಟ್ಟೆನಾಮವ ಬಳಿದು........ಗುಟ್ಟಿನಲ್ಲಿ ಜಪಿಸುವ ಗುಟ್ಟರಿಯದ ಕೆಟ್ಟ ಕೂಗನು ಕೂಗಿ ಹೊಟ್ಟೆ ಹೊರೆವಂಥ" ವೈಷ್ಣವರನ್ನು, "ಲಿಂಗಾಂಗದೊಳಗಿರುವ ಚಿನುಮಯವ ತಿಳಿಯದೆ, ಅಂಗಲಿಂಗದ ನೆಲೆಯ ಗುರುತರಿಯದೆ, ಜಂಗಮ–ಸ್ಥಾವರ ಹೊಲಬನರಿಯದ ಇಂಥ ಭಂಗಿ ಮುಕ್ಕುಗಳೆಲ್ಲ ಲಿಂಗವಂತರು ಅಹುದೆ ?" ಎಂದು ವೀರಶೈವರನ್ನು "ಅಲ್ಲಾ ಖುದಾ ಎಂಬ ಅರ್ಥವನು ಅರಿಯದೆ ಮುಲ್ಲಾಶಾಸ್ತ್ರದ ನೆಲೆಯ ಗುರುತರಿಯದೆ

ಕಳ್ಳಕೂಗನೆ ಕೂಗಿ ಬೊಗಳಿ ಬಾಯ್ದೆರೆವಂಥ ಕಳ್ಳರಿಗೆ ತಾ ವೀರ ಸ್ವರ್ಗದೊರಕುವದೆ ?" ಎಂದು ಮುಸ್ಲಿಮರನ್ನು, ಧರ್ಮದ ಅರಿವಿಲ್ಲದ ಬಹಿರಾಡಂಬರವನ್ನು ವಿಡಂಬಿಸುವ ರೀತಿಯನ್ನು ಮೇಲಿನ ಮಾತಿಗೆ ಒಂದೆರಡು ಉದಾಹರಣೆಯಾಗಿ ಸ್ಮರಿಸಬೇಕು. ಅವರ ಅರ್ಥಹೀನ ಆಚರಣೆಗಳನ್ನು ಆಯಾ ಮತಗಳ ಪ್ರಕ್ರಿಯೆಗಳಲ್ಲಿಯೇ, ಪರಿಭಾಷೆಯಲ್ಲಿಯೇ ಬಿಂಬಿಸುವ ರೀತಿಯಲ್ಲಿ ಕನಕದಾಸರು ಬೇರೆ ಮತ-ಧರ್ಮಗಳ ಸಮಾಜದೊಂದಿಗೆ ಇಟ್ಟುಕೊಂಡಿದ್ದ ಗಾಢಸಂಬಂಧ, ಮಧುರ ಬಾಂಧವ್ಯವನ್ನು ಕಂಡುಕೊಳ್ಳಬೇಕು. ಇದೆಲ್ಲವನ್ನು ನೋಡಿದಾಗ ಕನಕದಾಸರು ಒಬ್ಬ ಸಾತ್ವಿಕ ಸುಧಾರಣಾವಾದಿಗಳಾಗಿ ನಮ್ಮ ಗಮನ ಸೆಳೆಯುತ್ತಾರೆ. ಈ ಅವರ ಸಾತ್ವಿಕತೆ ಸುಪ್ತ ಶಾಖವಾಗಿ ಸಮಾಜದ ಶುಶ್ರೂಷೆ, ಚಿಕಿತ್ಸೆಗೆ ನಿಲ್ಲುತ್ತದೆ ; ಅಂತಾಗಿ ಸಮಾಜದ ಅನಾರೋಗ್ಯದ ಬಗ್ಗೆ ಅನುತಾಪಕ್ಕಿಂತ ಅನುಕಂಪ ಕಾಣಿಸಿಕೊಳ್ಳುತ್ತದೆ.

ವೈಷ್ಣವ ವೀರಶೈವ ಹಾಗೂ ಮುಸ್ಲಿಮ ಮತ-ಧರ್ಮಗಳ ಸಮಾಜವನ್ನು ಕುರಿತು ಇಷ್ಟೆಲ್ಲ ಹೇಳುವ ಕವಿ ಜೈನಸಮಾಜವನ್ನು ಕುರಿತು ಹಾಗೆ ಆಡಿಕೊಂಡಂತೆ ಕಂಡು ಬರುವದಿಲ್ಲ. ವೈಷ್ಣವ ಮತದೊಂದಿಗಿನ ಅದರ ಸಂಬಂಧ ವೀರಶೈವ ಮತದಂತೆ ಬಹುಶಃ ಒಂದು ಸಮಸ್ಯೆಯಾಗಿ ಕನಕದಾಸರನ್ನು ಕಾಡಿರಲಿಕ್ಕಿಲ್ಲ. ಅದರಂತೆ ಧರ್ಮದ ತಿರುಳರಿಯದ ಮುಸ್ಲಿಮರನ್ನು ಕುರಿತು ಹೇಳುವಾಗಲೂ "ಕಳ್ಳರಿಗೆ ತಾ ವೀರ ಸ್ವರ್ಗದೊರಕುವದೆ" ಎಂಬಲ್ಲಿಯ "ವೀರಸ್ವರ್ಗ" ಎಂಬ ಶಬ್ದವೂ ಅಂದಿನ ರಾಜಕೀಯ ಮತ್ತು ಸಾಂಸ್ಕೃತಿಕ ಸಂದರ್ಭದ ಹಿನ್ನೆಲೆಯಲ್ಲಿ ಚಿಂತನಾರ್ಹವಾಗಿದೆ.

ಒಟ್ಟಿನಲ್ಲಿ ಕನಕದಾಸರು ತಮ್ಮ ಸಮಕಾಲೀನ ಒಟ್ಟು ಸಮಾಜದ ಎಲ್ಲ ನೆಲೆಗಳ ಪ್ರಾಮಾಣಿಕ ಅನ್ವೇಷಣೆಗೆ ತೊಡಗಿ, ಆ ಎಲ್ಲ ನೆಲೆಗಳ ಸ್ವರೂಪವನ್ನು ಒಟ್ಟು ಸಾಂಸ್ಕೃತಿಕ ಹಾಗೂ ಮಾನವೀಯ ಪ್ರಜ್ಞೆಯ ಹಿನ್ನೆಲೆಯಲ್ಲಿ, ತಮ್ಮ ಪ್ರತ್ಯಕ್ಷ ಅನುಭವ-ಚಿಂತನೆ, ಕಳಕಳಿ-ಕಾಳಜಿಗಳ ಮೂಲಕ ಒಂದು ಘನವಾದ ಉದ್ದೇಶಕ್ಕಾಗಿ ಶೋಧಿಸಿ ಕೊಡುವದರಿಂದ, ಅವರ ಕೃತಿಗಳು ಇಂದಿಗೂ ಪ್ರಸ್ತುತವೆನಿಸುತ್ತವೆ. ನಮ್ಮ ಸಮಕಾಲೀನ ಸಾಮಾಜಿಕ ಹಾಗೂ ಸಾಹಿತ್ಯಿಕ ಸಂದರ್ಭದ ಹಿನ್ನೆಲೆಯಲ್ಲಿಯೂ ಹೊಸ ಹೊಸ ಅರ್ಥವನ್ನು ವ್ಯಂಜಿಸುತ್ತಲೇ ಅದರ ಹೆಚ್ಚಿನ ಹುಡುಕಾಟಕ್ಕೆ ಪ್ರೇರೇಪಿಸುತ್ತವೆ.

# ಕನಕನ ಸಾಮಾಜಿಕ ವಿಡಂಬನೆ

ಟಿ. ಮಹಾಬಲ ಅಡಿಗ

ಪರಂಪರಾಗತ ಮೂಢನಂಬಿಕೆಗಳನ್ನು ಸಮಾಜದಿಂದ ಕೀಳುವುದು ಕಷ್ಟದ ಕೆಲಸ. ಅಂಧಶ್ರದ್ಧೆಯು, ಜನತೆಯಲ್ಲಿ ಅಜ್ಞಾನದಿಂದ, ಶಾಸ್ತ್ರಗಳನ್ನು ವಿಚಾರಿಸದೆ ಆಚರಿಸಬೇಕು ಎಂಬ ನಂಬಿಕೆಯಿಂದ, ಶಾಸ್ತ್ರದಲ್ಲಿ ಹೇಳಿದುದನ್ನು ಬೇರೊಂದಾಗಿ ಅರ್ಥಮಾಡಿಕೊಳ್ಳುವುದರಿಂದ ಇಲ್ಲವೆ ಸ್ವಾರ್ಥದಿಂದ ಶಾಸ್ತ್ರಾರ್ಥವನ್ನು ಯಥಾರ್ಥವಾಗಿ ವ್ಯಾಖ್ಯಾನಿಸದೆ ಇರುವುದರಿಂದ ಉಂಟಾಗುತ್ತದೆ.

ಕಾಯಿಲೆಗಳು ಭೂತಪ್ರೇತಗಳ ಬಾಧೆಯಿಂದ ಉಂಟಾಗುವವು ಎನ್ನುವವರನ್ನು ಮೊದಲನೆಯ ವರ್ಗಕ್ಕೂ, ಬೈಬಲ್ಲಿನಲ್ಲಿ ಹೇಳುವುದಕ್ಕೆ ವಿರುದ್ಧವಾಗಿ ಹೇಳುವರೆಂದು ವಿಜ್ಞಾನಿಗಳನ್ನು ಶಿಕ್ಷಿಸಹೊರಟ ಜನತೆಯನ್ನು ಎರಡನೆಯ ವರ್ಗಕ್ಕೂ, ಪರಮ ವೈದಿಕರೆನಿಸಿಕೊಂಡು "ವಸುಧೈವ ಕುಟುಂಬಕಮ್" ಎನ್ನುವ ಶಾಸ್ತ್ರ ಓದಿ, 'ತತ್ವಮಸಿ'ಯ ಅರ್ಥ ತಿಳಿದು, 'ಸರ್ವಂ ಖಲ್ವಿದು ಬ್ರಹ್ಮಂ' ಎಂದು ಪಠಿಸುತ್ತಾ, ಬುದ್ಧಿಜೀವಿಯಾದ ಮಾನವಜನ್ಮ ದೊಡ್ಡದೆಂದೂ ದೇಹ ದೇಗುಲದಲ್ಲಿ ಪರಮಾತ್ಮ ನೆಲಸಿರುವುದರಿಂದ 'ಶಿವೋಹಂ' 'ಅಹಂ ಬ್ರಹ್ಮಾಸ್ಮಿ' ಎಂದು ಪ್ರತಿಯೊಬ್ಬನಿಗೂ ತನ್ನನ್ನು ಪವಿತ್ರವಾಗಿಸಿಕೊಂಡು ದೇವಮಾನವನಾಗುವ ಅವಕಾಶ ಇರುವುದೆಂದೂ ತಿಳಿಯುತ್ತಾ, ಸಭೆಸಮಾರಂಭಗಳಲ್ಲಿ "ಸರ್ವೇಜನಾಃ ಸುಖಿನೋಭವಂತು" ಎಂದು ಘೋಷಿಸಿ, ನಿಜ ಜೀವನದಲ್ಲಿ ಬಾಹ್ಯ ಮಡಿವಂತಿಕೆಯಿಂದ, ಮಾನವನನ್ನು ಮನೆಬಾವಿ ಮುಟ್ಟಲು ಬಿಡದೆ, ಕೀಳುಜಾತಿಯೆಂದು ಪ್ರಾಣಿಗಳಿಗಿಂತಲೂ ಹೀನವಾಗಿ ಕಾಣುವ ಜನತೆಯನ್ನು ಮೂರನೆಯ ವರ್ಗಕ್ಕೂ ಸೇರಿಸಬಹುದು.

ಅಜ್ಞಾನಿಗಳನ್ನು ತಿಳಿಯಹೇಳಿ ಸುಧಾರಿಸಬಹುದು. ಆದರೆ ತಿಳಿದೋ ತಿಳಿಯದೆಯೋ ಸ್ವಾರ್ಥದಿಂದಲೋ ಬಹಳ ಮುಂದುವರಿದ ಮೇಧಾವಿಗಳಂತೆ ನಟಿಸುತ್ತಾ ಅಂಧಶ್ರದ್ಧೆಯಿಂದ ಇರುವವರನ್ನು ತಿದ್ದುವುದು ಮಹಾಪ್ರಯಾಸದ ಕೆಲಸ. ಇಂಥ ಜನ, ಬಹುಮಂದಿ ಅಜ್ಞಾನಿಗಳಿರುವ ಯಾವುದೋ ಒಂದು

ಕಾಲದಲ್ಲಿ ಹುಟ್ಟಿಕೊಂಡ ಒಂದು ಮತದ ಕಟ್ಟುಪಾಡಿನಿಂದ, ಈ ವಿಜ್ಞಾನಯುಗದ ಲೋಕಾನುಭವದಿಂದ ಮುಂದುವರಿಯುತ್ತಿರುವ ಸಮಾಜವನ್ನು ನಿಯಂತ್ರಿಸಲು ನೋಡುವುದಾದರೆ ಅದು ಸಮಾಜಕ್ಕೆ ತಗಲಿರುವ ಒಂದು ಮೌಢ್ಯದ ಜಾಡ್ಯವಾಗುತ್ತದೆ. ಅಂಥ ಮೌಢ್ಯದ ಕಳೆಯನ್ನು ಕಿತ್ತು ಮಾನವೀಯತೆಯನ್ನು ಬೆಳೆಸಲು ಶ್ರಮಿಸಿದ ಭಾರತದ ಬಹುಮಂದಿ ಸಮಾಜ ಸುಧಾರಕರಲ್ಲಿ ವಿಡಂಬನೆಯಿಂದ ತನ್ನ ಧ್ಯೇಯವನ್ನು ಸಾಧಿಸಿ ಕೃತಕೃತ್ಯನಾದ ಕನ್ನಡ ನಾಡಿನ ಕನಕನ ಸ್ಥಾನ ವಿಶಿಷ್ಟವಾದುದು. ಭಾರತದಲ್ಲಿ ಆದಿಯಿಂದ ಈವರೆಗಿನ ಪ್ರಮುಖ ಸಮಾಜ ಸುಧಾರಕರ ಕಡೆಗೆ ಒಮ್ಮೆ ವಿಹಂಗಮ ದೃಷ್ಟಿ ಬೀರಿದರೆ, ಅದು ಕನಕನ ಸ್ಥಾನಮಾನಗಳನ್ನು ಊಹಿಸಲು ತುಂಬ ಸಹಾಯಕವಾಗುವುದು,

ಆರ್ಯರು ತಮ್ಮ ವರ್ಣ ಪದ್ಧತಿಯಂತೆ, ಕೊನೆಯ ವರ್ಣದವರನ್ನು ಮಾತ್ರ ಹಿಂದುಳಿದವರು ಎಂದು ಭಾವಿಸದೆ, ಅವರ ಆಗಮನಕ್ಕೆ ಮೊದಲೇ ಇಲ್ಲಿ ಇದ್ದು, "ಭಾರತ ಪುರಾತನ ಸಂಸ್ಕೃತಿ ಉಳ್ಳ ದೇಶ" ಎಂದು ಹೇಳಿಸಲು ಕಾರಣರಾದ ಆದಿವಾಸಿಗಳು ಹಾಗೂ ದ್ರಾವಿಡರನ್ನೂ ಅನಾರ್ಯರು (ಅಜ್ಞಾನಿಗಳು) ಎಂದು ಭಾವಿಸಿ ಶೂದ್ರರೆಂದೇ ಪರಿಗಣಿಸಿಕೊಂಡು ಬಂದರು. ಇದರಿಂದ ಭಾರತದಲ್ಲಿ ಬಹಳ ಹಿಂದಿನಿಂದಲೇ ಬಹು ಸಂಖ್ಯೆಯ ಒಂದು ವರ್ಗ ಹಿಂದುಳಿಯುತ್ತಾ ಬಂದಿದೆ ಎಂದು ಸ್ಪಷ್ಟವಾಗುತ್ತದೆ. ಆರ್ಯರ ನಿಯಮದಂತೆ ಮೊದಲ ವರ್ಣದವರು ಹುಟ್ಟಿನಿಂದಲೇ ದೈವಾನುಗ್ರಹಕ್ಕೆ ಪಾತ್ರರಾದ ಭೂಸುರರೂ, ಕೊನೆಯ ವರ್ಣದವರು ದುರದೃಷ್ಟಶಾಲಿಗಳಾದ ಶೂದ್ರರೂ ಆಗಿದ್ದರು. ಹಿಂದುಳಿದವರ ಮಾನವೀಯತೆಗೆ ಬೆಲೆಯೆ ಇರುತ್ತಿರಲಿಲ್ಲ ಕೇಳುವುದು ಕೋಗಿಲೆಯ ಸ್ವರವಾದರೂ, ಕಾಗೆ ! ಇನ್ನೇನು ! ಎಂಬಷ್ಟು ಅವರ ಕಡೆಗೆ ಉಪೇಕ್ಷೆ. ರತ್ನವೊಂದು ಕೆಸರಲ್ಲಿದ್ದರೆ, ಅದನ್ನು ಹೆಕ್ಕುವ ಯೋಚನೆ ಮಾಡದೆ, ಕೊಳೆಯಿದೆ ಎಂಬ ಕಾರಣದಿಂದ ಮತ್ತೂ ತುಳಿದು ಅಡಗಿಸುವುದೇ ಆಗಿನ ಜನದ ಪ್ರವೃತ್ತಿಯಾಗಿತ್ತು. ಮೇಲು ವರ್ಣದವರ ಸೇವೆ ಮಾಡುವುದೇ ಕೀಳುವರ್ಣದವರಿಗೆ ಭಾಗ್ಯ. ಹಿಂದುಳಿದವರನ್ನು ದುಡಿಸಿ ಪ್ರಯೋಜನ ಹೊಂದುವುದೇ ಮುಂದುವರಿದವರ ಆಗಿನ ಧರ್ಮ. ಹುಲಿಸಿಂಹಗಳ ಮರಿಗಳಾದರೂ ಕುರಿ ಹಿಂಡಿನೊಡನೆ ಬೆಳೆಯುತ್ತಾ ಬಂದಿದ್ದರೆ ತಮ್ಮತನವನ್ನು ಮರೆತು ಅವು ಕುರಿಗಳಂತೆಯೇ ವರ್ತಿಸುವ ಹಾಗೆ ಮುಂದುವರಿದವರ ಪ್ರಭಾವದಿಂದ ಸಾವಿರಾರು ವರ್ಷಗಳಿಂದ ಹಿಂದುಳಿದವರು ತಮ್ಮ ಮನುಷ್ಯತ್ವವನ್ನು ಕೂಡಾ ಮರೆತು ಪಶುಜೀವನ ನಡೆಸುತ್ತಾ ಬಂದಿದ್ದಾರೆ.

ಧರ್ಮದ ಹೆಸರಲ್ಲಿ ಬಲ್ಲಿದರು ಬಡವರ ಮನುಷ್ಯತ್ವವನ್ನು ಕಡೆಗಣಿಸಿ, ಸರ್ವಜೀವಿಗಳನ್ನು ಹಿಂಸಿಸಿ, ತಾವು ಸುಖಪಡುವುದನ್ನು ಕಂಡು ರೋಸಿ ಹೋದ ಬುದ್ಧ ಕ್ರಿ. ಪೂ. ಕೆಲವು ಶತಮಾನಗಳ ಮೊದಲು ಅವತರಿಸಿ "ದಯೆಯೇ ಧರ್ಮದ ಮೂಲ, ಅಹಿಂಸಾ ಪರಮೋ ಧರ್ಮಃ" ಎಂದು ಜಾತ್ಯತೀತವಾದ ಮಾನವ ಧರ್ಮವನ್ನು ಸಾರಿದ. ಅಶೋಕನು ಅದನ್ನು ಶಾಸನ ಮೂಲಕ ವಿಶ್ವಧರ್ಮವಾಗಿ ಬೆಳೆಸಿದ. ವೈದಿಕರ ಪೂರ್ವಾಗ್ರಹ ಪೀಡೆಗೊಳಗಾದ ಆ ಮತ ಶತಮಾನಗಳು ಉರುಳಿದಂತೆ ಕಳೆಗುಂದಿದಾಗ ಕ್ರಿ. ಶ. ೧೨ನೆ ಶತಮಾನದಲ್ಲಿ ಬಸವಣ್ಣ ಅವತರಿಸಿ ಬುದ್ಧನಂತೆಯೇ "ದಯೆಯಿಲ್ಲದ ಧರ್ಮ ಯಾವುದಯ್ಯಾ, ದಯೆಯೇ ಬೇಕು ಸಕಲಜೀವಿಗಳೆಲ್ಲರಲ್ಲಿ, ಇಲ್ಲದೆ ತಾನು ಹಾರುವನೆಂದರೆ ಕೂಡಲ ಸಂಗಮದೇವ ನಗುವನಯ್ಯಾ" ಎಂದು ಸಾರಿದ. ವೈದಿಕನಾದ ತಾನು ಜಾತೀಯತೆಯ ದ್ಯೋತಕವಾದ ಜನಿವಾರವನ್ನು ಕಡಿದು ಹಾಕಿ, ನಿಜವಾದ ವೈದಿಕ ಧರ್ಮದ ಸಾರವನ್ನು ಭಟ್ಟಿಯಿಳಿಸಿ ಸಿದ್ಧಗೊಳಿಸಿದ ವಚನಸಾರವನ್ನು ಅನುಭವ ಮಂಟಪದ ಭಕ್ತಿಯ ಕಟ್ಟೆ ಕಟ್ಟಿ ಹಿಂದುಳಿದವರಿಗೆ ಉಣಿಸಿ, ಮಾನವ ಸಮಾಜವನ್ನು ಉದ್ಧರಿಸಿ ಜಗಜ್ಯೋತಿಯಾದ.

ಬಸವೇಶ್ವರ ತೋರಿದ ಬೆಳಕಿನಿಂದ ಮಡಿವಂತಿಕೆಯ ಮಬ್ಬು ಕಳೆದು ಕಣ್ತೆರೆದ ವೈದಿಕ ಪೀಠಾಧಿಪತಿಗಳು, ತಮ್ಮ ಅಸ್ತಿತ್ವದ ಉಳಿವಿಗಾಗಿ ಹೊಸ ದಾರಿ ತುಳಿಯದೆ ನಿರ್ವಾಹ ಇಲ್ಲ ಎಂದು ಬಗೆದು, ವೈದಿಕ ಆಧಾರಗ್ರಂಥಗಳನ್ನು ಮೂಲದಲ್ಲಿ ಓದಿ ದ್ವೈತವನ್ನು ಅರ್ಥೈಸುವ ಸಂಸ್ಕೃತಪಂಡಿತರ ಕೂಟವನ್ನು 'ವ್ಯಾಸಕೂಟ'ವೆಂದೂ, ಅದರ ಸಿದ್ಧಾಂತಗಳನ್ನು ಜನಸಾಮಾನ್ಯರಲ್ಲಿ ಕೀರ್ತನೆ, ಸಂಗೀತ, ಸಾಹಿತ್ಯಗಳ ಮೂಲಕ ಕನ್ನಡದಲ್ಲಿ ಪ್ರಸಾರ ಮಾಡಬಲ್ಲ ಕೂಟವನ್ನು 'ದಾಸಕೂಟ'ವೆಂದೂ ಕರೆದು ಕಾರ್ಯಪ್ರವೃತ್ತರಾದರು. ಮಧ್ವಾಚಾರ್ಯರಿಂದ ಬೀಜಾವಾಪನೆಗೊಂಡ ದಾಸವಾಙ್ಮಯ, ನರಹರಿತೀರ್ಥನ ನಂತರ ಪುಷ್ಕಳವಾಗಿ ಬೆಳೆದು ಸಂಸ್ಕೃತಿಯ ಫಲ ಕೊಡಲಾರಂಭಿಸಿತು. ಪುರಂದರ ಕನಕರು ದಾಸಕೂಟದ ಆಶ್ವಿನಿ ದೇವತೆಗಳಂತೆ ಮೆರೆದು ಜಾತಿಭೇದವಿಲ್ಲದ ಜನ್ಮದ ನೆಲೆಬೆಲೆಗಳನ್ನು ಎತ್ತಿ ತೋರಿದರು. ಸರ್ವಜ್ಞ ಎಂಬ ಕವಿ ಸಮಾಜದ ಏರು ಪೇರುಗಳನ್ನು ವಚನವೆಂಬ ಶಸ್ತ್ರಚಿಕಿತ್ಸೆಯಿಂದ ಸರಿಪಡಿಸಿದನು. ಅನಂತರ ಐರೋಪ್ಯ ಮಿಷನರಿಗಳ ಸೇವೆ ಮತ್ತು ಇಂಗ್ಲೀಷ್ ವಿದ್ಯಾಭ್ಯಾಸ ಇಲ್ಲಿಯ ಅಜ್ಞಾನ ಮೂಢನಂಬಿಕೆಗಳಿಗೆ ಕೊಡಲಿ ಏಟುಕೊಟ್ಟಿತು. ಗಾಂಧಿಯ ಉದ್ಧಾರದ ಹೆದ್ದಾರಿಯಲ್ಲಿ ನಡೆಯುತ್ತ ಸರ್ವೋದಯದ ಕನಸು ಕಾಣುತ್ತ ಭಾರತವಿಂದು

ಜಾತ್ಯತೀತ ಪ್ರಜಾರಾಜ್ಯವಾಗಿರುವುದು ಬಹುಮಂದಿ ಸಮಾಜ ಸುಧಾರಕರ ಶ್ರಮದ ಫಲದಿಂದಾಗಿ ಆಗಿದೆ.

ಈ ರೀತಿ, ಚರಿತ್ರೆಯ ಅವಲೋಕನದಿಂದ, ಪಾಶ್ಚಾತ್ಯ ನಾಗರಿಕತೆಯ ಗಾಳಿ ಭಾರತಕ್ಕೆ ಸರಿಯಾಗಿ ಇನ್ನೂ ಬೀಸದಿರುವ ೧೬ನೇ ಶತಮಾನದಲ್ಲಿ ದ್ರಾವಿಡ ಸಂಪ್ರದಾಯದ ಕುರುಬ ಜಾತಿಯ (ನಿಷ್ಠಾವಂತರೆನಿಸಿಕೊಳ್ಳುವ ವೈದಿಕರ ದೃಷ್ಟಿಯಲ್ಲಿ ಒಬ್ಬ ಶೂದ್ರ !) ಕನಕ ಸಮಾಜೋದ್ಧಾರಕ್ಕಾಗಿ ಕೀರ್ತನೆ ಹಾಡುತ್ತಾ ಊರೂರು ಸುತ್ತಾಡುತ್ತಿರುವಾಗ ಮೇಲು ವರ್ಣದವರಿಂದ ಎಂತಹ ಪ್ರತಿಕ್ರಿಯೆ ಕಂಡು ಬಂದಿರಬಹುದು ಎಂದು ಊಹಿಸಲು ಕಷ್ಟವಾಗದು. ಜಾತೀಯತೆಯ ಮೇಲು ಕೀಳು ಭಾವನೆಯೇ ಸಮಾಜ ಸುಧಾರಕರ ತಲೆ ಚಿಟ್ಟು ಹಿಡಿಸುವಂತಹ ವಿಷಯ. ಕನಕನಿಗೂ ಅದರ ಬಾಧೆ ತಟ್ಟದೆ ಇಲ್ಲ. ಬಹುಕಾಲದಿಂದ ಬಟ್ಟೆಯಲ್ಲಿ ಉಳಿದು ಬಂದಿರುವ ಜಿಗಟು ಕೊಳೆಯುನ್ನು ಹೋಗಲಾಡಿಸುವಲ್ಲಿ ಆ ಬಟ್ಟೆಯನ್ನು ಒಂದಷ್ಟು ಘರ್ಷಣೆಗೆ ಒಳಗು ಮಾಡಬೇಕಾಗುವುದು ಅನಿವಾರ್ಯವಾಗಿರುವಂತೆ, ಚಿನ್ನದ ಕಶ್ಮಲ ಕಳೆಯಲು ಅದನ್ನು ಕರಗಿಸಿ ಬಡಿಯಬೇಕಾದ ಅಗತ್ಯದಂತೆ, ಕಿಲುಬು ಹೋಗಲು ಪಾತ್ರೆಯನ್ನು ಚೆನ್ನಾಗಿ ಕೆರೆಯಬೇಕಾದಂತೆ, ಮೇಲುವರ್ಣದವರೆಂದು ತನ್ನ ಮಾತನ್ನು ಉಪೇಕ್ಷಿಸುವ ಜನವನ್ನು ತಿದ್ದಲು ಕನಕ ಬರೇ ವಾಚ್ಯವಾಗಿ ಅವರಿಗೆ ಹೇಳದೆ, ಸೂಚ್ಯವಾಗಿ, ಕಟೂಕ್ತಿಯಾಗಿ, ವಕ್ರೋಕ್ತಿಯಾಗಿ, ವ್ಯಂಗ್ಯವಾಗಿ, ವಿಡಂಬನಾತ್ಮಕವಾಗಿ ಹೇಳಬೇಕಾಯಿತು.

ಹಾಗೆ ಒಬ್ಬ ವ್ಯಕ್ತಿ ಹೇಳಬೇಕಾದರೆ ಅವನಲ್ಲಿ ಅಂಥ ಕೆಚ್ಚು ಆತ್ಮವಿಶ್ವಾಸ, ಅಂತಃಸತ್ವ ಇರಬೇಕಾಗುತ್ತದೆ. ಹೌದು ! ಕನಕನೂ ಅಂಥ ಶಕ್ತಿ ಉಳ್ಳ ಒಬ್ಬ ಪವಾಡಪುರುಷ. ತನ್ನ ತಂದೆಯಂತೆ ತಾನೂ ವಿಜಯನಗರದ ಅಧೀನದ ಒಬ್ಬ ಮಾಂಡಲಿಕ. ತಿರುಪತಿ ತಿಮ್ಮಪ್ಪನ ಅನುಗ್ರಹದಿಂದ ಜನಿಸಿ, ತಿಮ್ಮಪ್ಪನೆಂದು ನಾಮಕರಣ ಹೊಂದಿದ್ದರೂ, ತಂದೆ–ತಾಯಿಗಳ ಪ್ರೀತಿಯ 'ಚಿನ್ನ' 'ಕನಕ' ಎಂಬ ಹೆಸರು ಸಾರ್ಥಕವಾಗುವಂತೆ ದೈವಾನುಗ್ರಹದಿಂದ ಭೂಮಿಯಲ್ಲಿ ಕೆಲವು ಕಡೆ ಅವನಿಗೆ ನಿಕ್ಷೇಪ ದೊರೆಯಲು, ಅದರಿಂದ ಕಾಗಿನೆಲೆಯ ಆದಿಕೇಶವ ದೇವಾಲಯ ಕಟ್ಟಿಸಿ, ಉಳಿದುದನ್ನು ದಾನಧರ್ಮ ಮಾಡಿ, 'ಕನಕನಾಯಕ' 'ಕನಕಪ್ಪ' ಎನ್ನಿಸಿದವನು. ಗರಡಿ ಸಾಧಕನಾದ ಯುದ್ಧವೀರ. ನಿಷ್ಠುರ ನ್ಯಾಯವಾದಿ, ಯಮಧರ್ಮನ ಅವತಾರ. ದೈವಪ್ರೇರಣೆಯಿಂದ ಭೋಗ ಬಿಟ್ಟು, ತ್ಯಾಗಿಯಾಗಿ ದಾಸೋಹಂಭಾವದಿಂದ, ದಾಸಕೂಟದ ಸದಸ್ಯನಾಗಿ 'ಮೋಕ್ಷಕ್ಕೆ ನಾನು

(ಅಹಂಕಾರ) ಹೋದರೆ ಹೋದೇನು' ಎಂದು ಹೇಳಿ, ದಾಸಕೂಟದ ಧ್ಯೇಯವಾದ ನಿಷ್ಕಾಮ ಸೇವೆಯ ಅಗತ್ಯವನ್ನು ಸೂಚಿಸಿ, ಉಳಿದವರು ಸಕ್ರಿಯವಾಗಿ ದುಡಿಯುವಂತೆ ಮಾಡಿದವನು. ವ್ಯಾಸರಾಯರನ್ನು ಗುರುವಾಗಿ ಸ್ವೀಕರಿಸಲು ಹೋದ ಮೊದಲ ಸಂದರ್ಶನದಲ್ಲಿಯೇ "ಕುರುಬನಿಗೆಂಥ ಕೋಣ ಮಂತ್ರವೊ?" ಎಂದು ಗುರು ಪರಿಹಾಸ ಮಾಡಿದಾಗ, "ಶಂಖದಿಂದ ಬರುವುದೇ ತೀರ್ಥ" ಎಂಬ ವಿಶ್ವಾಸದಿಂದ ಕೋಣಮಂತ್ರ ಜಪಿಸಿ ಯಮನ ಕೋಣವನ್ನು ಪ್ರತ್ಯಕ್ಷ ಮಾಡಿಕೊಂಡು ತನ್ನ ಯೋಗ್ಯತೆ ಪರಿಚಯ ಮಾಡಿಸಿಕೊಟ್ಟವನು. ಯಾರೂ ಇಲ್ಲದಲ್ಲಿ ತಿನ್ನಲು ಗುರು ಕೊಟ್ಟಿದ್ದ ಹಣ್ಣನ್ನು ತಿನ್ನದೇ, 'ದೇವರು ಎಲ್ಲೆಲ್ಲೂ ಇರುವನು' ಎಂದು ಎಲ್ಲರ ಕಣ್ಣು ತೆರೆಯಿಸಿದವನು, ಉಡುಪಿಯಲ್ಲಿ ಉಚ್ಚವರ್ಣದವರ ಆಕ್ಷೇಪದಿಂದ ದೇವರ ದರ್ಶನ ಸಿಗದಿರಲು ಹಿಂಬದಿಯಲ್ಲಿ ದೇವರನ್ನು ಭಜಿಸಿ, ತನ್ನ ಕಡೆಗೆ ತಿರುಗಿಸಿಕೊಂಡು, ದೇವರು ಭಕ್ತರಾಧೀನ ಎಂಬುದಕ್ಕೆ ಚಾರಿತ್ರಿಕ ದಾಖಲೆ ಉಂಟುಮಾಡಿದನು.

ಇಂಥ ಕನಕನಿಗೆ ವಿಜಯನಗರದ ರಾಜಾಶ್ರಯ ಅಲ್ಲದೆ, ಶ್ರೀಪಾದರಾಜ, ವ್ಯಾಸರಾಯ, ವಾದಿರಾಜರಂಥ ಪೀಠಾಧಿಪತಿಗಳ ಅನುಗ್ರಹದ ಬೆಂಬಲವಿತ್ತು.

"ಹರಿದಾಸ ಸಾಹಿತ್ಯವು ಕೀರ್ತನೆ, ಸುಳಾದಿ, ಉಗಾಭೋಗಗಳಿಗೆ ಮಾತ್ರ ಸೀಮಿತವಾಗಿರದೆ ಅದರ ಕೈ ಕಾವ್ಯ ಪ್ರಪಂಚಕ್ಕೂ ಚಾಚುವಂತೆ ಮಾಡಿದ ಶ್ರೇಯಸ್ಸು ಕನಕದಾಸರಿಗೆ."[1]

"ಕನಕದಾಸ ಯಾವ ಮತತತ್ವವನ್ನೂ ತಿರಸ್ಕರಿಸದೆ, ಯಾವ ದೇವರನ್ನೂ ಬಹಿಷ್ಕರಿಸದೆ, ವಿಷ್ಣು ಶಿವರಲ್ಲಿ ಭೇದವನ್ನೆಣಿಸದೆ, ಆತ್ಮಸಾಕ್ಷಾತ್ಕಾರ ಮಾಡಿಕೊಂಡು, ಕಾವ್ಯ ಕ್ಷೇತ್ರ, ಆಧ್ಯಾತ್ಮಿಕ ಕ್ಷೇತ್ರಗಳೆರಡರಲ್ಲೂ ಸಮಾನ ಖ್ಯಾತಿಗಳಿಸಿದ ಮಹಾನುಭಾವ"[2].

"ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಭಕ್ತಿಯ ಹೊಳೆಹರಿಸಿ, ಜನಮನೋಮಂದಿರದಲ್ಲಿ ಚಿರಸ್ಥಾಯಿಯಾದಂತೆ, ಮೋಹನ ತರಂಗಿಣಿ, ನಳಚರಿತ್ರೆ, ರಾಮಧಾನ್ಯಚರಿತ್ರೆ, ಹರಿಭಕ್ತಿಸಾರ ಎಂಬ ಕೃತಿಗಳನ್ನು ರಚಿಸಿ, ಕವಿಯಾಗಿ, ಕನ್ನಡ ಸಾಹಿತ್ಯ ಸಾಮ್ರಾಜ್ಯದಲ್ಲಿ ಚಿರಂತನರಾಗಿದ್ದಾರೆ."[೩]

---

೧. ಹರಿದಾಸ ಹೃದಯ–ಡಾ. ವರದರಾಜರಾವ್.

೨. ದೇ. ಜ. ಗೌ. – ನಳಚರಿತ್ರೆಯ ಪೀಠಿಕೆ.

೩. ಕಾವ್ಯಾನುಶೀಲನ – ರಾ. ಗೌ. ಪುಟ ೩೭.

ಈಶ ನಿನ್ನ ಚರಣ ಭಜನೆ । ಆಸೆಯಿಂದ ಮಾಡುವೇನು । ದೋಷರಾಶಿ ನಾಶ ಮಾಡೋ ಶ್ರೀಶಕೇಶವ ॥ ಎಂಬುದಾಗಿ ದೇವರ ದಾಸನಾಗಿ ಮೊದಲ ಕೀರ್ತನೆ ಹಾಡಿದ ಕನಕ, ಮುಂದೆ ಪುಂಖಾನುಪುಂಖವಾಗಿ ಆಶುಕವಿಯಾಗಿ ಅಲ್ಲಲ್ಲಿ ಹೊಳೆದ ಭಾವದಂತೆ ಕೀರ್ತನೆಗಳನ್ನು ಹಾಡಿದ್ದಾನೆ. ಅವನ ವಿಡಂಬನೆಯ ಮಾತುಗಳಲ್ಲಿ ಹಲವನ್ನು ಕೀರ್ತನೆಗಳಿಂದಲೂ, ಕೆಲವನ್ನು ಅವನ ಹರಿಭಕ್ತಿಸಾರದಿಂದಲೂ, ಸಂಗ್ರಹಿಸಬಹುದಾಗಿದೆ. ರಾಮಧಾನ್ಯ ಚರಿತ್ರೆಯೂ ಸಂಪೂರ್ಣ ವಿಡಂಬನೆಗಾಗಿಯೇ ಹುಟ್ಟಿಕೊಂಡಿದೆ. ಅವನ ಮುಂಡಿಗೆಗಳು ವಿದ್ವಾಂಸರ ಬುದ್ಧಿಗೆ ಸಾಣೆ ಹಿಡಿಯುವುದಕ್ಕಾಗಿಯೇ ಸಿದ್ಧಗೊಂಡವುಗಳು.

**ಕೀರ್ತನೆಗಳಲ್ಲಿ**

ಕನಕನಿಗೆ ಬಹುಮಂದಿ ಮತ್ಸರಿಗಳು ಕುಹತನದಿಂದ ಏನೇನೋ ನಿಂದೆಯ ಮಾತುಗಳನ್ನು ಹೇಳುತ್ತಿದ್ದಿರಬೇಕು. 'ಕೀಳಾದವನು ಹೇಳುವುದೇನು?" ಎಂದು ಅವರು ಅಲಕ್ಷಿಸುತ್ತಿರುವಾಗ, ತಾನು ದಾಸಾನುದಾಸ ಎನ್ನುವಲ್ಲಿ ಕನಕನಿಗೇನೂ ನಾಚಿಕೆಯಿಲ್ಲ :

ಮುಟ್ಟದಿರು ನಡೆಯೆಂದು ಜನರೆಲ್ಲರೂ ಎನ್ನ
ಅಟ್ಟಿ ಬಡಿಯುತ್ತಲಿಹರೋ ಕೃಷ್ಣಾ
ನಾವು ಕುರುಬರು ನಮ್ಮ ದೇವರೋ ಬೀರಪ್ಪ
ಕಾವ ನಮ್ಮಜ್ಜ ನರಕುರಿಯ ॥

ಕುಲವಿಲ್ಲದ ದಾಸ ಕುರುಬದಾಸ ನಾನಯ್ಯ ।
ಕಾಳಿದಾಸನ ಮನೆಯ ಕೀಳುದಾಸ ।
ಆಳುದಾಸನು ನಾನು ಮೂಳದಾಸ ।
ಆತ್ಮ ಯಾವ ಕುಲ, ಜೀವ ಯಾವ ಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯಾ ॥
ಆತ್ಮಾಂತರಾತ್ಮ ನೆಲೆಯಾದಿ ಕೇಶವ ।
ಪ್ರೀತನಾದ ಮೇಲೆ ಯಾತರ ಕುಲವಯ್ಯ ? ॥

ಮಾನವೀಯ ಮೌಲ್ಯವನ್ನು ಗಮನಿಸದೆ, ಹುಟ್ಟಿದ ಜಾತಿಯಿಂದ ಬೆಲೆ ಕಟ್ಟುವಿಕೆಯ ಬಗ್ಗೆ ಅವನ ಸವಾಲು ಹೀಗಿದೆ ;

ಕೆಸರೊಳು ತಾವರೆ ಪುಟ್ಟಲು ಅದ ತಂದು ।
ಬಿಸಜನಾಭನಿಗರ್ಪಿಸಲಿಲ್ಲವೆ ?
ಹಸುವಿನ ಮಾಂಸದೊಳುತ್ಪತ್ತಿಕ್ಷೀರವು ।
ವಸುಧೆಯೊಳಗೆ ಭೂಸುರರುಣಲಿಲ್ಲವೆ ?
ಮೃಗಗಳ ಮೈಯಲ್ಲಿ ಪುಟ್ಟಲು ಕಸ್ತೂರಿ ।
ತೆಗೆದು ಪೂಸುವರು ದ್ವಿಜರೆಲ್ಲರೂ ॥

–ಇದನ್ನು ಯಾರು ಅಲ್ಲಗಳೆಯಲು ಸಾಧ್ಯ ? ಒಂದು ಅಭಿಪ್ರಾಯದ ಸ್ಪಷ್ಟೀಕರಣಕ್ಕಾಗಿ, ಕನಕ ಪುಂಖಾನುಪುಂಖವಾಗಿ ನಿದರ್ಶನಗಳನ್ನು ಕೊಡಬಲ್ಲ. ಜಾತೀಯತೆಯ ಮೌಢ್ಯದ ಮುಸುಕು ಕಳೆಯಲು ಅವನ ಪ್ರಶ್ನೆ ಹೀಗಿದೆ :

ತಾನು ಕೀಳಾದವ ಸರಿ. ಆದರೆ ಮೇಲಾದವರಾರು ?

ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ ?
ನೀತಿ ತಪ್ಪಿದವರೆಲ್ಲ ದೇವ ಬ್ರಾಹ್ಮಣರೆ ಕೃಷ್ಣಾ ?
ಭಂಗಿ ಮುಕ್ಕುಗಳೆಲ್ಲ ಲಿಂಗವಂತರಹರೆ ಕೃಷ್ಣಾ ?
ವೇಷಧಾರಿಗಳೆಲ್ಲ ಸನ್ಯಾಸಿಗಳಾಗುವರೆ ಕೃಷ್ಣಾ ?
ಹೊಟ್ಟೆಗುಡ ಮೃಗಗಳೆಲ್ಲ ಶ್ರೀವೈಷ್ಣವರೆ ಕೃಷ್ಣಾ ?

ಶೀಲಕೆಟ್ಟು ಬಾಳುವ ದೈವದ್ರೋಹಿಗಳ ಸಹವಾಸಕ್ಕಿಂತ ಕನಕನಿಗೆ ತ್ರಿಕರಣ ಶುದ್ಧಿಯ ಭಕ್ತ ಜನದ ಸೇವೆಯೇ ಲೇಸು :

ಶೀಲವರಿತು ಭಕುತಿ ಮಾಳ್ಪ ಚಂ । ಡಾಲರ ಮನೆಯ ಬಾಗಿಲ ಕಾಯಿಸೆನ್ನ ॥ ವಾಸುದೇವ ಆದಿಕೇಶವರಾಯನ ದಾಸದಾಸ ದಾಸದಾಸರ ಮನೆಯ । ಮೀಸಲು ಊಳಿಗವನ್ನು ಮಾಡುವೆನು ॥

ಕನಕನ ವಿಡಂಬನೆಗಳು ಹುಟ್ಟಿಕೊಂಡುದು ಮುಖ್ಯವಾಗಿ ಕುಲದ ಮೇಲುಕೀಳು ಅಳಿಸುವುದಕ್ಕಾಗಿಯೇ ಆಗಿದೆ. ಊರೂರುಗಳಲ್ಲಿ ಸಂಚರಿಸುವಾಗ ಜಾತೀಯತೆ ದೋಷಗಳೇ ಕಣ್ಣಿಗೆ ಬೀಳುತ್ತಿದ್ದವು ಎಂದು ತೋರುತ್ತದೆ.

"ಒಂದೆ ಗಗನವನ್ನು ಕಾಣುವ, ಒಂದೆ ನೆಲವನ್ನು ತುಳಿಯುವ, ಒಂದೆಧಾನ್ಯವನ್ನು ಉಣ್ಣುವ, ಒಂದೆ ನೀರು ಕುಡಿಯುವ, ಒಂದೆ ಗಾಳಿಯನ್ನುಸಿರಾಡುವ ನರಜಾತಿಯಲ್ಲಿ ವೈಷಮ್ಯ ಬಂದುದು ಹೇಗೆ?"[೧] ಎಂಬುದು ಕನಕನನ್ನು ಕಾಡುತ್ತಿದ್ದ ಸಮಸ್ಯೆ. ಕುಲದ ಮೇಲುಕೀಳು ವಿಚಾರ ಬಂದಾಗ ಕೆಣಕಿದಂತಾಗಿ, ಅರಳುಬಡಿದಂತೆ ಪಟಪಟನೆ ಹೇಳಿಬಿಡುವನು :

೧. ಮಂಕುತಿಮ್ಮನ ಕಗ್ಗ – ಡಿ. ವಿ. ಜಿ.

ಕುಲಕುಲಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರಾ ಬಲ್ಲಿರಾ ?
ಹುಟ್ಟಿದಾ ಯೋನಿಗಳಿಲ್ಲ । ಮೆಟ್ಟಿದಾ ಭೂಮಿಗಳಿಲ್ಲ
ಅಟ್ಟು ಉಣ್ಣದಾ ವಸ್ತುಗಳಿಲ್ಲವೊ ॥

ಅದಕ್ಕಾಗಿಯೇ 'ಕನಕನನ್ನು ಕೆಣಕಬೇಡ' ಎಂಬ ಮಾತು ರೂಢಿಗೆ ಬಂದಿದೆ.

ತಿರುಪತಿಗೆ ಕನಕನು ಬರುವನೆಂದು ಸುದ್ದಿಯಿದ್ದು ಕನಕನು ಬಂದಾಗ ಗುರುತು ಸಿಗದೆ ಅಲ್ಲಿಯ ಮಹಂತನು ಕನಕನೊಡನೆಯೇ "ಕನಕದಾಸರೆಲ್ಲಿ?" ಎಂದು ಪ್ರಶ್ನಿಸಲು, "ಮುಂದೆ ಬರುವವರಿಗೆ ಹಿಂದೆ, ಹಿಂದೆ ಬರುವವರಿಗೆ ಮುಂದೆ" ಇದ್ದಾರೆ ಎಂದಾಗ, "ಇವನಾರೋ ಹುಚ್ಚ !" ಎಂದು "ಯಾತರವನು?" ಎಂದು ಪ್ರಶ್ನಿಸಿದಾಗ, 'ದೇವರ ಎದುರಲ್ಲಿಯೂ–ಭಕ್ತರಲ್ಲಿಯೂ ಭೇದ ಭಾವವೆ !' ಎಂದು ಸಿಡಿದೆದ್ದ ಕನಕ ವ್ಯಂಗ್ಯವಾಗಿಯೇ ಉತ್ತರಿಸಿದ:

ಯಾತರವನೆಂದುಸಿರಲಿ । ಜಗ
ನ್ನಾಥ ಮಾಡಿದನೊಂದು ನರರೂಪವಯ್ಯಾ ॥ ಪ ॥
ಇಂದ್ರಿಯ ಸೂತಕ ದುರ್ಗಂಧ ಮಲಮೂತ್ರ ।
ಬಂದ ಠಾವಿನ ನಿಜಗುರುತನರಿಯೆ ॥
ಬಂದದ್ದು ಬಚ್ಚಲಗುಣಿ । ತಿಂದದ್ದು ಮೊಲೆಮಾಂಸ ।
ಅಂಧಕ ತನಗಿನ್ಯಾತರ ಕುಲವಯ್ಯಾ ॥

ಒಂಭತ್ತು ರಂಧ್ರದೊಳೊಸರುವ ಹೊಲಸಿನ ।
ತುಂಬಿ ಹೊರಡುವ ಮಲ ತುಳುಕುತಲಿ ।
ಇಂಬಿಲ್ಲದ್ಹೊಲೆಗೊಂಡ । ಎಂಬೊಠಾವಿಲಿ ಬಂದ । ಡಂಬಕ
ತನಗಿನ್ಯಾತರ ಕುಲವಯ್ಯಾ ? ॥

ಕರುಳು ಖಂಡ ನರನಾರುವ ಚರ್ಮರೋ ।
ಹಿತ ಪಂಜರ ಹುರುಳಿಲ್ಲವೋ ।
ವರರುಹ ಹೊತ್ತು ತಿರುಗುವಂಥ । ತಿರುಕತನಗಿನ್ಯಾತರ
ಕುಲವಯ್ಯಾ ? ॥

ಉಚ್ಚವರ್ಣದವರು ಈ ಎಲ್ಲ ಹೊಲಸಿನಿಂದ ಹೊರತಾಗಿರುವರೆ? ಎಂಬ ಭಾವ.

ಕ್ರಾಂತಿಯ ಗಾಳಿಯಾಗಿ ಊರೂರು ಅಲೆಯುವಾಗ ಅವನಿಗೆ ಗೋಚರಿಸಿದ ಅರ್ಥ ತಿಳಿಯದ ಆಚಾರಗಳ ಬಗ್ಗೆ ಅವನು ಈ ರೀತಿ ಪ್ರಶ್ನಿಸಿರುತ್ತಾನೆ :

ನೇಮವಿಲ್ಲ ಹೋಮ ಇನ್ನೇತಕೆ ? । ರಾಮನಾಮವು
ಇರದ ಮಂತ್ರವ್ಯಾಕೆ ? ನೀರ ಮುಳುಗಲು ಯಾಕೆ ?
ನಾರಿಯಳ ಬಿಡಲ್ಯಾಕೆ ? ವಾರಕೊಂದುಪವಾಸ ಮಾಡಲ್ಯಾಕೆ ?
ಅಂಬರವ ತೊರೆಯಲ್ಯಾಕೆ ? ತಾಂಬೂಲ ಬಿಡಲ್ಯಾಕೆ ?
ದಂಬಕದ ವೃತ್ತಿಯಲಿ ಇರಲ್ಯಾತಕೆ ?
ಬಂದ ಪಾಪಗಳೆಲ್ಲ ನಿಲ್ಲದೇ ಕಳೆದಾವು ಚಂದಾದಿ ।
ನೆಲೆಯಾದಿ ಕೇಶವನ ನೆನೆಯೆ ॥

ಈ ಬಾಳು ನಶ್ವರ :

ಗಾಳಿಗೊಡ್ಡಿದ ಸೊಡರು ಈ ಸಂಸಾರ
ಸಂಸಾರ ಸಾಗರವನುತ್ತರಿಸುವೊಡೆ ಕಂಸಾರಿ
ನಾಮವೊಂದೇ ಸಾಕು.

ಆದುದರಿಂದ ಅರ್ಥತಿಳಿದು ಸಾರ್ಥಕ ಜೀವನ ನಡೆಸಬೇಕು :

ಪಂಚೇಂದ್ರಿಯಗಳೆಂಬ ಮಂಚಿಕೆಯ ಹಾಕಿರಯ್ಯಾ ।
ಚಂಚಲವೆಂಬ ಹಕ್ಕಿಯನ್ನು ಓಡಿಸಿರಯ್ಯ ।
ಉದಯಾಸ್ತಮಾನವೆಂಬೊ ಎರಡು ಕೊಳಗವಮಾಡಿ ।
ಆಯುಷ್ಯ ರಾಶಿಯನ್ನು ಅಳೆಯಿರಯ್ಯಾ ॥

ಎಂಬಲ್ಲಿ ಅವನ ಕಲ್ಪನೆ ಭವ್ಯವಾಗಿದೆ.

ಕಪಟತನವಿದ್ದು ಮಾಡುವ ಭಕ್ತಿ ವ್ಯರ್ಥ :

ವಿಪರೀತ ಕಪಟಗುಣ ಕಲುಷವಿದ್ದವರು
ಜಪವ ಮಾಡಿದರೇನು । ತಪವ ಮಾಡಿದರೇನು ?
ಸತ್ಯವಂತರ ಸಂಗವಿರಲು ತೀರ್ಥವೇತಕೆ ?
"ಆರಿಗಳವಲ್ಲಾತ್ಮ ಯೋಗಸಿದ್ಧಿ, ಸೇರಿ ಸುಜ್ಞಾನದಲಿ ಸವಿದುಂಬಗಲ್ಲದೆ?

ಜನನ ಮರಣ ವಿಚಾರದಿಂದ ಸಮಾಜವನ್ನು ಎಚ್ಚರಿಸಿ, ವ್ಯಕ್ತಿಗಳನ್ನು ಕರ್ತವ್ಯಕ್ಕೆ ಹಚ್ಚಿರುತ್ತಾನೆ :

ಎಲ್ಲಿಂದ ಬಂದೆ ? ಮುಂದೆತ್ತ ಪಯಣ ? ಇಲ್ಲಿ ನಿನಗೆಷ್ಟು ದಿನ ಆಲಸ್ಯ ಮರುಳೆ ? ಸಾಯುವಾಗ ಏನು ಬರುವುದೊ ? ಸಂಗಡೇನು

ಬರುವುದೋ ?

ಸಾರ್ಥಕ ಜೀವನಕ್ಕಾಗಿ :

ದಾನ ಧರ್ಮವ ಮಾಡಿ ಸುಖಿಯಾಗು ಮನವೆ ।
ಹೀನ ವೃತ್ತಿಯಲಿ ಕೆಡಬೇಡ ಮನವೆ ?

ಎಲ್ಲರೂ ಪರಮಾತ್ಮನ ಅಂಶವಾಗಿರುವಾಗ ನಾನು, ನೀನು ಎಂಬ ಭೇದವೇಕೆ?

ನಾನು ನೀನು ಎನ್ನದಿರೋ ಹೀನ ಮಾನವ ।
ಜ್ಞಾನದಿಂದ ನಿನ್ನ ನೀನು ತಿಳಿದು ನೋಡಲೊ ಪ್ರಾಣಿ ॥

ಎಂದು ಮೂದಲಿಸುತ್ತಾನೆ.

ಹೆಣ್ಣು, ಹೊನ್ನು, ಮಣ್ಣು ಮೂರು ನಿನ್ನದೇನೆಲೋ । ಅನ್ನದಿಂದ ಬಂದ ಕಾಯ ನಿನ್ನದೇನೆಲೊ ? । ಕಾಲ ಕರ್ಮ ಶೀಲ ನೇಮ ನಿನ್ನದೇನೆಲೊ? ಜಾಲವಿದ್ಯೆ ಬಯಲಮಾಯೆ ನಿನ್ನದೇನೆಲೊ ? । ಲೋಲ ಆದಿಕೇಶವನ ಭಕ್ತನಾಗೆಲೊ ॥ ಎಂದು ಜನರನ್ನು ಸನ್ಮಾರ್ಗಕ್ಕೆ ಹಚ್ಚುತ್ತಾನೆ.

ಸಮಾಜಕ್ಕೆ ಅವನ ಸವಾಲು ಹೀಗಿದೆ :

ಅಹುದಾದರಹುದೆನ್ನಿ । ಅಲ್ಲವಾದರಲ್ಲೆನ್ನಿ ॥
ದೇವರಿಲ್ಲದ ಗುಡಿಯು ಹಾಳು ಬಿದ್ದಂಗಡಿಯು ।
ಭಾವವಿಲ್ಲದ ಭಕುತಿಯದು ಕುಹಕ ಯುಕುತಿ ॥

ಈ ಧರೆಯ ಭೋಗವನ್ನು ಮೆಚ್ಚಿ ಹರಿಯ ಮರೆತು ಕೆಡುವವರು ಮೂಢರು:

"ಧರೆಯ ಭೋಗ ಕನಸಿನಂತೆ" ಎನ್ನುತ್ತಾ ತಿರುಕನ ಕನಸಿನ ಉದಾಹರಣೆಯಿಂದ ಹಗಲು ಕನಸು ಕಾಣುವವರ ಕಣ್ಣು ತೆರೆಯಿಸಿದ್ದಾನೆ.

"ಎಲ್ಲರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ" ಎಂದು ಎಲ್ಲರ ಡಂಭಾಚಾರದ ಗುಟ್ಟೊ ಅಷ್ಟೆ–ಸ್ವಾರ್ಥ ! ಎಂದು ಮಾರ್ಮಿಕವಾಗಿ ಹೇಳಿದ್ದಾನೆ.

ಎಂಥ ಶಕ್ತಿಯಿದ್ದರೂ ದೈವದೊಲ್ಮೆ ಇಲ್ಲವಾದರೆ ಪ್ರಯೋಜನವೇನು? ಜೀವನದ ಸಾರ್ಥಕತೆಗೆ ದೈವಭಕ್ತಿ, ಸದಾಚಾರ, ಸಕಾಲಿಕ ಸಾಧನೆಗಳ ಬಗೆಗೆ ಮಾರ್ಮಿಕವಾಗಿ ಹೇಳಿದ್ದಾನೆ :

"ಭಕ್ತಿಯಿಲ್ಲದ ನರಗೆ ಮುಕ್ತಿಯುಂಟೆ ? ಬಾಯಿ ನಾರಿದ ಮೇಲೆ ಏಕಾಂತವೆ ; ತಾಯಿ ತೀರಿದ ಮೇಲೆ ತವರಾಸೆಯೆ ? ಕಣ್ಣು ಕೆಟ್ಟ ಮೇಲೆ

ಕಡುರೂಪ ಚೆಲ್ವಿಕೆಯೆ ? ಬಣ್ಣಗುಂದಿದ ಮೇಲೆ ಬಹುಮಾನವೆ ? ಪುಣ್ಯ ತೀರಿದ ಮೇಲೆ ಪರಲೋಕ ಸಾಧನವೆ ? ಸುಣ್ಣವಿಲ್ಲದ ವೀಳ್ಯವದು ಸ್ವಾದುಮಯವೆ ? ಕಿಲುಬಿನಾ ಬಟ್ಟಲೊಳು ಹುಳಿ ಕಲಸಿ ಉಣಬಹುದೆ ? ಚಳಿಯುರಿಗೆ ಚಂದನದ ಲೇಪ ಹಿತವೆ ? ಮೊಲೆಬಿದ್ದ ಹೆಣ್ಣಿನೊಳು ಮೋಹಕ್ಕೆ ಸೊಗಸಹುದೆ ? ಬೆಲೆ ಬಿದ್ದ ಸರಕಿನೊಳು ಲಾಭವುಂಟೆ ? ಪಥ್ಯ ಸೇರಿದ ಮೇಲೆ ನಿತ್ಯ ಸುಖವೆನಬಹುದೆ ? ಸತ್ವ ತಗ್ಗಿದ ಮೇಲೆ ಸಾಮರ್ಥ್ಯವೆ ? ಪೃಥ್ವಿಯೊಳು ಕಾಗಿನೆಲೆಯಾದಿಕೇಶವ ನಿನ್ನ ಭಕ್ತಿಯೇ ಸರ್ವಸ್ವಕೆ ಕಾರಣವಲ್ಲವೆ?"

ಲೋಕಾನುಭವಿಯಾದ ಕನಕನಿಗೆ ವಿಷಯದ ಸಮರ್ಥನೆಗೆ ನಿದರ್ಶನಗಳಿಗಾಗಿ ಹುಡುಕಬೇಕಾಗಿಲ್ಲ :

"ಏನುಯಿಲ್ಲದ ಎರಡು ದಿನದ ಸಂಸಾರ"ದಲ್ಲಿ "ದಾನಧರ್ಮವ ಮಾಡಿರಯ್ಯಾ" ಎಂಬಲ್ಲಿ ಶಕ್ತರು ಅಶಕ್ತರನ್ನು ಕಾಣಬೇಕಾದ ದೃಷ್ಟಿಕೋನವನ್ನು ತೋರಿರುತ್ತಾನೆ.

"ಅಪುತ್ರಸ್ಯ ಗತಿರ್ನಾಸ್ತಿ"ಯೆಂದು ಶಾಸ್ತ್ರ ಹೇಳುವುದೆಂದು, ದುಷ್ಟಮಕ್ಕಳನ್ನು ಪಡೆದಲ್ಲಿ ಫಲವೇನು?

"ಮಗನಿಂದ ಗತಿಯುಂಟೆ ಜಗದೊಳು । ನಿಗಮಾರ್ಥಸಾರ ವಿಚಾರದಿಂದಲ್ಲದೆ ?"

"ಕಲಿಯುಗದ ಮಹಿಮೆಯನು ಕಂಡಷ್ಟು ಹೇಳುವೆನು" ಎಂದು ಹೇಳಿ, ಸಮಾಜದಲ್ಲಿ ಭ್ರಷ್ಟಾಚಾರಗಳ ಕಡೆಗೆಲ್ಲ ಬೆಳಕು ಬೀರಿದ್ದಾನೆ. ಕಷ್ಟದಿಂದ ನಿರಾಸೆಗೊಂಡವರಿಗೆ ಆತ್ಮವಿಶ್ವಾಸದ ನಿದರ್ಶನಗಳಿಂದ ನೆಮ್ಮದಿ ಒದಗಿಸಿದ್ದಾನೆ :

"ತಲ್ಲಣಿಸದಿರು ಕಂಡ್ಯ ತಾಳು ಮನವೆ । ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ."

ಎಲ್ಲವೂ ದೈವನಿಯಮದಂತೆ ನಡೆಯುವುದು ಚಿಂತಿಸಬೇಕಾಗಿಲ್ಲ :

"ಬೇಕೆಂದರೆ ಬಾರದು, ಒಲ್ಲೆನೆಂದರೆ ಹೋಗದು, ಏಕಂಜುವೆ ಎಲೊ, ಶ್ರೀಹರಿ ಕರುಣಿಸದಲೆ ಒಂದಾಗದು." "ಪ್ರಾಚೀನ ಕರ್ಮವಿದು ಬಿಡಲರಿಯದು, ಯೋಚನೆಯ ಮಾಡಿ ಬಳಲುವುದೇಕೆ ಮನುಜಾ ?"

ವಿರೋಧಾಭಾಸದ ಹಲವಾರು ಮಾತುಗಳಿಂದ ಜನತೆಯನ್ನು ವಿಚಾರಕ್ಕೆ ಹಚ್ಚಿದ್ದಾನೆ :

ಸಹಜವಿದು ಈ ನುಡಿಯು ಸಟೆಯ ಮಾತಲ್ಲ । ಮಹಿಯೊಳಗೆ ಪೇಳುವೆನು ವಿಹಿತ ವಾಕ್ಯಗಳ ಶ್ರುತಿಶಾಸ್ತ್ರ ಪುರಾಣಗಳನೋದುವವನೆ ಶೂದ್ರ

। ಅತಿಥಿಯಾದರಿಸುವನು ಅತಿಲುಬ್ಧನು । ಪ್ರತಿನಿತ್ಯ ಸಂಧ್ಯಾನ ಮಾಡುವವನೇ ಪಾಪಿ । ಪತಿಯಾಜ್ಞೆಯಿಂದಿಹಳೆ ಪರಮಪಾತಕಿಯು ॥

ಕನಕನ ಕೀರ್ತನೆಗಳಲ್ಲಿ ಸಾಕಷ್ಟು ವ್ಯಂಗ್ಯವಿದ್ದು ಉಕ್ತಿ ಚಾತುರ್ಯವಿದೆ:

"ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ । ಸುಜ್ಞಾನಿಗಳ ಕೂಡೆ ಜಗಳವೇ ಲೇಸು ॥" "ಹಳ್ಳಹರಿದು ಹೋಗುವಾಗ ಗುಳ್ಳೆ ಬಂದು ಒಡೆಯಿತಲ್ಲ" "ಉಳ್ಳಿಪೊರೆಯಂತೆ ಕಾಣೊ ಸಂಸಾರದ ಆಟ."

"ಕನಕನ ಕೀರ್ತನೆಗಳಲ್ಲಿ ಭಕ್ತಿ, ಕಾವ್ಯಶಕ್ತಿಗಳೆರಡೂ ಉನ್ನತಿಗೇರಿವೆ."[೧]

**ಹರಿಭಕ್ತಿಸಾರದಲ್ಲಿ**

"ಕನಕನ ಕೃತಿಗಳಲ್ಲಿ ಹರಿಭಕ್ತಿಸಾರ ಮೋಕ್ಷದ ದಾರಿಗೆ ದೀಪದಂತಿರುವ ಕೃತಿ." ಪ್ರಾಣಿಪಕ್ಷಿಗಳನ್ನಾದರೂ ಮುಟ್ಟಬಹುದು, ಮನೆಯೊಳಗೆ ಇರಗೊಡಿಸಬಹುದು, ಬುದ್ಧಿಜೀವಿಗಳಾದ ಮಾನವರು ಮಾತ್ರ ಮಾಡಿನಡಿಗೂ ಬರಬಾರದು. "ಬುದ್ಧಿವಂತ ಮೂಢರ ಕಟ್ಟಳೆಯಿದು." ಕಟುಮಾತು ಎಂಬ ಶಸ್ತ್ರದ ಅಲಗಿನಿಂದ ಶಸ್ತ್ರಕ್ರಿಯೆ ನಡೆಸಿ, ಜನಮನದ ಮಲಿನವನ್ನು ಕಳೆದು, ಅಲ್ಲಿ ಪರಮಾತ್ಮನ ಅಂಶವನ್ನು ಕಾಣಿಸಿದ್ದಾನೆ.

"ಕನಕನು ಆಚಾರವಿಚಾರಗಳ ಅಂತರವನ್ನೂ, ಬಹಿರಾಡಂಬರ ಬೂಟಾಟಿಕೆಯನ್ನೂ ಕಟುವಾಗಿ ಟೀಕಿಸಿರುವನು."[೨]

ತೊಲಗುವರು ತಾ ಕಡೆಕಡೆಗೆ ತಾ ಹೊಲೆ ।
ಹೊಲೆಯೆನುತ ಕಳಕಳಿಸಿ ಮೂತ್ರದ ।
ಬಿಲದೊಳಗೆ ಬಂದಿಹುದ ಕಾಣದೆ ಬಂದೆ ಮನನೊಂದು ॥
ಜಲದೊಳಗೆ ಮುಳುಗಿದರೆ ತೊಲಗದು ।
ಹೊಲೆಗೆಲಸವೀ ದೇಹದೊಳು ನೀ ।
ನೆಲಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ॥

"ಕೃಷ್ಣಾಜಿನ, ಪಟ್ಟೆ, ದರ್ಭೆ ಇತ್ಯಾದಿಗಳ ಸಂಪರ್ಕದಿಂದ ಸದಾ ಮಡಿತನ ನೆಲಸಿರುವುದಾದರೆ, ಪರಮಾತ್ಮನೇ ನೆಲಸಿರುವ ಮಾನವನನ್ನು ಹುಟ್ಟಿನಿಂದ ಹೊಲೆಯನೆನಬಹುದೆ? ದುರಾಚಾರದಿಂದ ಅಂಟುವ ಹೊಲೆತನವನ್ನು ನಿತ್ಯಸ್ನಾನದಿಂದ ತೊಳೆಯಬಹುದೆ ?" ಮಾರ್ಮಿಕವಾದ ಇಂಥ ಮಾತುಗಳಿಂದ ಸಮಾಜದಲ್ಲಿ ಒಳಿತಿಗಾಗಿ ಕ್ರಾಂತಿ ಆಗದೆ ಇದ್ದೀತೆ ?

1. ಸಾಹಿತ್ಯ ಚರಿತ್ರೆ – ತ. ಸು. ಶ್ಯಾಮರಾಯರು, ಮೇ. ರಾಜೇಶ್ವರಯ್ಯ.
೨. ಹರಿದಾಸ ಹೃದಯ – ಡಾ. ಜಿ. ವರದರಾಜರಾವ್

ಬರಿದಹಂಕಾರದಲಲಿ ತತ್ವದ ।
ಕುರುಹ ಕಾಣದೆ ನಿನ್ನ ದಾಸರ ।
ಜರೆದು ವೇದಪುರಾಣಗಳನೋದಿ ಫಲವೇನು ? ॥
ನರರ, ದುಷ್ಕರ್ಮದಲಿ ಮಾಡಿದ ।
ದುರಿತವಡಗಲು ನಿನ್ನ ನಾಮ ।
ಸ್ಮರಣೆಯೊಂದೇ ಸಾಕು ರಕ್ಷಿಸು ನಮ್ಮನನವರತ ॥

ವಿದ್ಯೆಯಿಂದ ವಿನಯ, ವಿನಯದಿಂದ ಯೋಗ್ಯತೆ, ಯೋಗ್ಯತೆಯಿಂದ ಧನಾರ್ಜನೆ, ಧನಾರ್ಜನೆಯಿಂದ ಧರ್ಮಾಚರಣೆ, ಧರ್ಮಾಚರಣೆಯಿಂದ ಸಮಾಜದಲ್ಲಿ ಸುಖಶಾಂತಿ ಲಭಿಸಬೇಕು. ಇದು ವೇದದ ಮಾತು. ಹಾಗಿರುವಾಗ, ವೇದಶಾಸ್ತ್ರಾದಿಗಳನ್ನು ಓದಿದವರೆಂದು ತೋರಿಸಿಕೊಳ್ಳುವ ಜನರಲ್ಲಿ, ಅದರ ಫಲವಾಗಿ ಮೂಡಬೇಕಾದ ಸೌಜನ್ಯವಿಲ್ಲದೆ ನಿಜವಾದ ಭಕ್ತಿಯ ಆಚರಣೆಯಿಂದ, ದೈವಾನುಗ್ರಹಕ್ಕೆ ಪಾತ್ರರಾದವರನ್ನು ಕೀಳುಜಾತಿಯೆಂದು ದೂಷಿಸುವುದು ಸರಿಯೆ?

ಅಂತರಂಗ ಶುದ್ಧಿಯಿಲ್ಲದೆ, ಬಹಿರಂಗ ಶುದ್ಧಿಗಾಗಿ, ಬಹಳ ಪೇಚಾಡುವ, ಹಬ್ಬಹುಣ್ಣಿಮೆಗಳಲ್ಲಿ ಎಲ್ಲಿಯಾದರೂ ಕೀಳುವರ್ಣದವರಿಗೆ ಊಟಹಾಕಿದಾಗ, ಅಲ್ಲಿನ ಎಂಜಲು ಶುದ್ಧಿಗಾಗಿ ಶ್ರಮಪಡುವ ಜನತೆಯ ಬಗ್ಗೆ ಕನಕನ ಮಾತು ಹೀಗಿದೆ :

ಎಂಜಲೆಂಜಲು ಎಂಬರಾ ನುಡಿ ।
ಎಂಜಲಲ್ಲವೆ ? ವಾರಿ ಜಲಚರ
ದೆಂಜಲಲ್ಲವೆ ? ಹಾಲು ಕರುವಿನ ಎಂಜಲೆನಿಸಿರದೆ ॥
ಎಂಜಲೆಲ್ಲಿಯದೆಲ್ಲಿಯುಂ ಪರ ।
ರೆಂಜಲಲ್ಲದೆ ಬೇರೆ ಭಾವಿಸ ।
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ ॥

ಕನಕನ ಅಂತರಂಗದ ಪರಿಚಯ, ಆಧ್ಯಾತ್ಮಿಕ ದೃಷ್ಟಿ ನೋಡಲು ಹರಿಭಕ್ತಿಸಾರ ಓದಬೇಕು.

## ರಾಮಧಾನ್ಯಚರಿತ್ರೆಯಲ್ಲಿ

"ಕನಕದಾಸರ ರಾಮಧಾನ್ಯಚರಿತ್ರೆ ಮತ್ತಾವುದೋ ಭಾವನಾ ವಿಶೇಷತೆಗೆ ಮಾಡಿಟ್ಟ ಅರ್ಥಾಂತರೋಕ್ತಿಯಾಗಿದೆ. ತಿಳಿಸಬಯಸುವ ವಿಷಯ ವೈಶಿಷ್ಟ್ಯವನ್ನು ಮನಂಬುಗುವಂತೆ ಚಿತ್ರಿಸಲು, ಬೇರೆ ವಿಷಯವನ್ನು ಅಳವಡಿಸಿಕೊಂಡ ಸಾಂಕೇತಿಕ

ರಹಸ್ಯಾರ್ಥವಾಗಿದೆ. ಅಂತೂ ಇದೊಂದು ಗೂಢಾರ್ಥದ್ಯೋತಕ ಕಥೆ, ರೂಪಕ ಕಾವ್ಯ (Allegorical Poem)"[1].

ರಾಮಧಾನ್ಯಚರಿತ್ರೆ ಒಂದು ವಿಡಂಬನಾತ್ಮಕ ಕಾವ್ಯ. ದೇವೇಂದ್ರನ ಸಭೆಯಲ್ಲಿ ತಾನು ಕೇಳಿದ ನರೆದಲೆಗ (ರಾಗಿ) ವ್ರೀಹಿ (ಬತ್ತ)ಯರ ವಿವಾದದ ಕಥೆಯನ್ನು, ಶಾಂಡಿಲ್ಯಮುನಿಗಳು, ಕಾಡಿನಲ್ಲಿ ದುಃಖಸಂತಪ್ತನಾದ ಧರ್ಮರಾಯನಿಗೆ ಸಂತೋಷವಾಗಲೆಂದು ಹೇಳಿದಂತೆ ಕಲ್ಪನೆಯಿದೆ.

ರಾಮಾಯಣದ ಕಥೆಯನ್ನು ಸಂಗ್ರಹವಾಗಿ ಹೇಳುತ್ತ ಕವಿ, ರಾಮನು ರಾವಣ ವಧಾನಂತರ ಅಯೋಧ್ಯೆಗೆ ಬರುತ್ತಿದ್ದಾಗ ಮುಚುಕುಂದನ ಆಶ್ರಮದಲ್ಲಿ, ಋಷಿಗಳಿತ್ತ ಸತ್ಕಾರ ಸ್ವೀಕರಿಸುವಲ್ಲಿ, ತಿಂಡಿ ತಯಾರಿಸಲು ಉಪಯೋಗಿಸಿದ ನವಧಾನ್ಯಗಳಲ್ಲಿ ಯಾವುದು ಶ್ರೇಷ್ಠ ಎಂದು ಪ್ರಶ್ನೆ ಬಂದಾಗ, ಒಬ್ಬೊಬ್ಬ ಋಷಿ ಒಂದೊಂದು ಧಾನ್ಯವನ್ನು ಹೊಗಳಲು ನರೆದಲಗನಿಗೂ ವ್ರೀಹಿಗೂ ತಮ್ಮ ಶ್ರೇಷ್ಠತೆ ವಿಚಾರದಲ್ಲಿ ಪ್ರಚಂಡ ವಾಗ್ಯುದ್ಧ ನಡೆಯುವುದು. ಇಲ್ಲಿ ಕನಕನು ರಾಗಿಯನ್ನು ಬಡವರ ಪ್ರತಿನಿಧಿಯಾಗಿಯೂ, ವ್ರೀಹಿಯನ್ನು ಬಲ್ಲಿದರ ಸಂಕೇತವಾಗಿಯೂ ಬಳಸಿಕೊಂಡು, ಸಮಾಜದ ಮೇಲುಕೀಳು ಜಾತೀಯ ಭಾವನೆಯನ್ನು ತೊಲಗಿಸುವ ಉದ್ದೇಶದಿಂದ ಅಪೂರ್ವವಾದ ಕೃತಿ ನಿರ್ಮಿಸಿರುತ್ತಾನೆ. ಕವಿಯ ಚಾತುರ್ಯದಿಂದ ಎರಡು ವಸ್ತುಗಳು ಮನುಷ್ಯರಂತೆ ವಾಸಿಸುವಾಗ ಕೇಳುವವರು ಮೂಕವಿಸ್ಮಿತರಾಗುವಷ್ಟು ಕಥೆಯ ಬೆಳವಣಿಗೆಯಲ್ಲಿ ನೈಜ ಸರಳತೆಗಳಿವೆ. ರಾಗಿಯ ಮಹತ್ವದ ಬಗ್ಗೆ 'ಪುರಂದರದಾಸ'ರೂ ಹಾಡಿದ್ದಾರೆ. "ರಾಗಿಯ ತಂದಿರ್ರ್ಯಾ ಭಿಕ್ಷಕೆ ರಾಗಿಯ ತಂದಿರ್ರ್ಯಾ । ಯೋಗ್ಯರಾಗಿ ಭೋಗ್ಯರಾಗಿ । ಭಾಗ್ಯವಂತರಾಗಿ ನೀವು ॥" 'ಸರ್ವಜ್ಞನೂ' "ರಾಗಿಯುನು ಉಂಬವ ನಿರೋಗಿ ಎಂದೆನಿಸುವನು । ರಾಗಿಯು ಭೋಗಿಗಳಿಗಲ್ಲ ಬಡವರಿ। ಗಾಗಿ ಬೆಳೆದಿಹುದು ಸರ್ವಜ್ಞ ॥"

"ಅಕ್ಕಿಯನು ಉಂಬುವನು ಹಕ್ಕಿಯಂತಾಗುವನು । ಸಿಕ್ಕುರೋಗದಲ್ಲಿ ವೈದ್ಯನಿಗೆ ರೊಕ್ಕವ । ನಿಕ್ಕುತ್ತಲಿಹನು ಸರ್ವಜ್ಞ ॥" ಎಂದಿರುತ್ತಾನೆ.

"ರಾಗಿ ರಾಜಾನ್ನ" ಎಂಬ ಗಾದೆಯೂ ಇದೆ.

---

1. ಕಾವ್ಯಾನುಶೀಲನ–ರಾ.ಗೌ., ಪುಟ ೫೩–೫೪

ಮತ್ತೊಂದು ದೃಷ್ಟಿಯಿಂದ ರಾಮಧಾನ್ಯಚರಿತ್ರೆ ಕನಕನ ಜೀವನವನ್ನೇ ಪ್ರತಿಬಿಂಬಿಸುತ್ತದೆ. ದೈವಕೃಪೆಗೆ ಪಾತ್ರನಾಗಿ ಅಂತಸ್ಸತ್ವ, ಧೈರ್ಯ ಮೇಧಾವಿತನವುಳ್ಳ, ಹೊಗಳಿಕೆ ತೆಗಳಿಕೆಗಳಿಗೆ ಮಾರುಹೋಗದ, ಸರಳಜೀವನ, ಉದಾತ್ತ ಧ್ಯೇಯದ ಛಲವುಳ್ಳ ಕನಕ, ಮೇಲುವರ್ಣ ಎಂಬ ಪ್ರತಿಷ್ಠೆಯ ಜನದಿಂದ ಕಿರುಕುಳ, ಪೂರ್ವಾಗ್ರಹ ಪೀಡೆ ಒದಗಿದರೂ, ಸ್ಥೈರ್ಯದಿಂದ ತನ್ನ ಧ್ಯೇಯ ಸಾಧನೆಯಲ್ಲಿ ಕೃತಾರ್ಥನಾಗಿದ್ದಾನೆ. ರಾಗಿಗೆ ಶ್ರೇಷ್ಠರ ಬೆಂಬಲವಿದ್ದಂತೆ, ಕನಕನಿಗೂ ಅರಮನೆ, ಗುರುಮನೆ, ಸಜ್ಜನ ಪಕ್ಷಪಾತಿಗಳ ಬೆಂಬಲವಿತ್ತು, ಸದಾಚಾರದ ಗತಿ, ಧೃತಿ, ಮತಿಗಳಿಂದ ಸಾಧಿಸಿದಲ್ಲಿ ಪ್ರತಿಯೊಬ್ಬರೂ ಗಣ್ಯರಾಗುವರು ಎಂಬಿತ್ಯಾದಿ ಧ್ವನಿಗಳು ರಾಮಧಾನ್ಯಚರಿತ್ರೆಯಿಂದ ಹೊರಹೊಮ್ಮುತ್ತವೆ. ನರೆದಲೆಗ ವ್ರೀಹಿಯರ ವಿಡಂಬನೆಯಿಂದ ಕೂಡಿದ ವಾದವೈಖರಿ ಗಮನಿಸಿ, ನಾವು ಬೇಕಾದಂತೆ ಅರ್ಥವಾಡಿಕೊಳ್ಳಬಹುದು, ವ್ರೀಹಿ, ನರೆದಲೆಗನನ್ನು ದೂಷಿಸುತ್ತಾ "ಕ್ಷಿತಿಯಮರರನ್ನು ಉಪನಯನದಲ್ಲಿ, ಸುವ್ರತ ಸುಭೋಜನದಲ್ಲಿ, ಮಂತ್ರಾಕ್ಷತೆಗಳಲ್ಲಿ, ಶುಭಶೋಭನದಲ್ಲಿ, ಅರಮನೆಯಲ್ಲಿ, ಪ್ರತಿದಿನವೂ ರಂಜಿಸುವ ದೇವರಿಗತಿಶಯದ ನೈವೇದ್ಯದಲ್ಲಿ, ಭಾಗಿ ನಾನು । ಜನಪರಿಗೆ, ಶಿಶುಗಳೀಗೆ, ಬಂಧುಬಾಂಧವರಿಗೆ, ಬ್ರಹ್ಮಸಮಾರಾಧನೆಗೆ, ಭೂಸುರರ ಮನೆಯಲ್ಲಿ ನಡೆಯುವ ಹರಿದಿವಸ ಉಪಾಸನೆಗಳಲ್ಲಿ ಯೋಗ್ಯ ನಾನು !, ಹೊಸ ಮನೆಯ ಪುಣ್ಯಾರ್ಚನೆಗೆ, ಹಸುಮಕ್ಕಳಿಗೆ, ಸೇಸೆಗೆ, ಗರುಡಿಯಲ್ಲಿ ಶಸ್ತ್ರಾಸ್ತ್ರ ಅರ್ಚನೆಗೆ, ಬ್ರಾಹ್ಮಣರ ಹಣೆಯ ಗಂಧಾಕ್ಷತೆಗೆ ಅತ್ಯವಶ್ಯ ನಾನು ! ಲೋಕದಲ್ಲಿ ನನಗಾರು ಸರಿ ! ನೀನೋ... ಬುಧರು ಜರೆದು ನಿರಾಕರಿಸಿದ ಶೂದ್ರಾನ್ನ ! ...ನೀನಾವ ಮಾನ್ಯ !" ಎಂದು ಉಬ್ಬಿ ಅವಹೇಳ ಮಾಡುತ್ತಾನೆ.

ಪರಿಮಳದ ಚಂದನದ ತರುವಿಗೆ ।
ಸರಿಯೆ ಒಣಗಿದ ಕಾಷ್ಠ, ಗೋವದು ।
ಕರೆದ ಹಾಲಿಗೆ ಕುರಿಯ ಹಾಲಂತರವೆ ಭಾವಿಸಲು ॥
ಪರಮ ಸಾಹಸಿ ವೀರಹನುಮಗೆ ।
ಮರದ ಮೇಲಣ ಕಪಿಯು ತಾನು
ತರವೆ ಫಡ ನೀನೆನಗೆ ಸರಿಯೆ ಭ್ರಷ್ಟತೊಲಗೆಂದ ॥

ಸುರನದಿಗೆ ಸರಿಯೆ ಕಾಡೊಳು ।
ಹರಿವ ಹಳ್ಳದ ನೀರು ಗರುಡನ ।

ಮರಿಗೆ ಹದ್ದಂತರವೆ ಹಂಸೆಗೆ ಬಕನು ಹೋಲುವುದೆ ॥
ಸರಸ ಮರಿ ಕೋಗಿಲೆಗೆ ವಾಯಸ ।
ನಣಕಿಸುವ ತೆರನಾಯ್ತು ಸಾಕಿ ।
ನ್ನರೆದಲೆಗ ! ನೀನಾವ ಮಾನ್ಯನು ಕಡೆಗೆ ತೊಲಗೆಂದ ॥

"ಮಾತಿನ ಸಮರ್ಥನೆಗೆ ಉದ್ದುದ್ದ ಸಾದೃಶಗಳ ಮಾಲಿಕೆ ! ವ್ರೀಹಿಯ ಆತ್ಮಪ್ರೌಢಿಮೆಯ ಆಡಂಬರ ಎದ್ದು ತೋರುವುದು ಭೋಗಜೀವಿಗಳ ಆಡಂಬರ ಅಹಂಕಾರವನ್ನು" ಕವಿ ಎತ್ತಿ ತೋರಿದ್ದಾನೆ.

ನರೆದಲೆಗ ಕನಲಿ ಕಂಗಳು ಕಿಡಿವುಸಗಿ, ಖತಿಗೊಂಡು ಸಿಡಿಲಗರ್ಜನೆಯಿಂದ ಮಾರುತ್ತರ ನೀಡುತ್ತಾನೆ :

"ಬಡವರನ್ನು ಕಣ್ಣೆತ್ತಿ ನೋಡದ, ಧನಾಢ್ಯರನ್ನು ಬೆಂಬತ್ತುವ, ಬಾಣಂತಿಯರಿಗೆ ಪಥ್ಯಾನ್ನವಹ, ಹೆಣದ ಬಾಯಿಗೆ ತುತ್ತಾದವ ನೀನು ! ಬಡವಬಲ್ಲಿದರಲ್ಲಿ ಪಕ್ಷಪಾತ ಮಾಡುವ ನಿರ್ದಯಿ ನೀನು ! ಮಳೆಯಿಲ್ಲದೆ ಕ್ಷಾಮಬಂದಾಗ ಪ್ರಾಣಿಗಳನ್ನು ಆದರಿಸಿ ಸಲಹುವವನು ನಾನು ! ಬಡವ ಬಲ್ಲಿದರೆನ್ನದೆ ಎಲ್ಲರನ್ನು ಸಮಾನರನ್ನಾಗಿ ರಕ್ಷಿಸುವವ ನಾನು ! ನಿನ್ನಿಂದಾಗಲಿ ನಿನ್ನ ಬಳಗದಿಂದಾಗಲಿ ಇದು ಸಾಧ್ಯವೆ ?" ಎಂದು ಮಿತ ಭಾಷಿ ನರೆದಲೆಗ ಮೌನವಾಗುತ್ತಾನೆ. ಬಡವರ ಸರಳತೆ, ಸೌಜನ್ಯ ಸಮತೆಗಳನ್ನು ಕವಿ ತೋರಿಸಿರುತ್ತಾನೆ.

ಆಡಬಹುದತಿಶಯವ ನೀ ಕೊಂ ।
ಡಾಡಿ ಕೊಂಬರೆ ಸಾಕು ಸಜ್ಜನ ।
ರಾಡಿದರೆ ಪತಿಕರಿಸಿ ಲಜ್ಜೆಗೆ ಸಿರವ ಬಾಗುವರು ॥
ನೋಡಿರೈ ಸಭೆಯವರು ದುರ್ಮತಿ ।
ಗೇಡಿಯಿವನಾಡುವುದ ನಾವಿ ।
ನ್ನಾಡಿದರೆ ಹುರುಳಿಲ್ಲ ಶಿವಶಿವ ಎಂದ ನರೆದಲೆಗ ॥

ಅವಿಚಾರಿಗಳ ವರ್ತನೆಗೆ ಪ್ರಾಜ್ಞರನ್ನೆ ಸಾಕ್ಷಿಕೊಟ್ಟು ಕನಕ ಉತ್ತರಿಸುತ್ತಾನೆ.

"ಕನಕನ ವಿಡಂಬನೆಯಲ್ಲಿ ಕಹಿಯಿದೆ–ವಿಷವಿಲ್ಲ ; ಮೊನಚಿದೆ–ನೋವಿಲ್ಲ; ಹಟವಿದೆ–ದ್ವೇಷವಿಲ್ಲ ; ಕಾವಿದೆ–ತಾಪವಿಲ್ಲ ; ಕೋಪವಿದೆ–ವೈರವಿಲ್ಲ ; ಚುರುಕಿದೆ–ಉರಿಯಿಲ್ಲ ; ಎಲ್ಲಿಯೂ ಬ್ರಹ್ಮಶಿವ ವೃತ್ತವಿಲಾಸರ, ಮತಾಂಧತೆಯ ದೋಷಲೇಪವಿಲ್ಲ. ಕರ್ತವ್ಯಪ್ರಜ್ಞೆ, ಸತ್ಯನಿಷ್ಠೆ, ಲೋಕಕಾರುಣ್ಯ ನೈತಿಕ ಶ್ರದ್ಧೆ ಮೇಲಾಗಿ

ಧರ್ಮಕೋಪ–ಇವು ಈ ವಿಡಂಬನೆಯ ಹಿಂದಿರುವ ಮೂಲಭೂತವಾದ ಪ್ರೇರಕ ಪ್ರವೃತ್ತಿಗಳು."[೧]

**ಮುಂಡಿಗೆಗಳಲ್ಲಿ**

"ಕನಕನಾಡಿದ ಗುಟ್ಟು ಆದಿಕೇಶವ ಬಲ್ಲ" ಎಂದು ಕನಕನೇ ಹೇಳಿದಂತೆ ಸಾಮಾನ್ಯರಿಗೆ ಅಸಂಬದ್ಧವಾಗಿ ಕಾಣುವ ಹಾಡುಗಳು ಸಾಂಕೇತಿಕ ಭಾಷೆಯನ್ನು ತಿಳಿದವರಿಗೆ, ಗಹನವಾದ ಆಧ್ಯಾತ್ಮಿಕ ತತ್ವಗಳೆಂದು ಅರ್ಥವಾಗುತ್ತದೆ. "ಕೀಳು ಜಾತಿಯ ಕುರುಬ ಏನು ಬಲ್ಲ ?" ಎಂಬವರಿಗೇ ಮುಂಡಿಗೆಯಾಗಿ ಈ ಮುಂಡಿಗೆಗಳು ಜನ್ಮತಾಳಿವೆ.

ಹಲವು ಜೀವವ ಒಂದೆಲೆ ನುಂಗಿತು । ಕಾಗಿ–ನೆಲೆಯಾದಿಕೇಶವ ಬಲ್ಲನೀ ಬೆಡಗ ॥

ಮೂವರೇರಿದ ಬಂಡಿ ಹೊರೆ ನೆರೆಯಿದು । ದೇವಕೀನಂದನನು ತಾನೊಬ್ಬ ಬಲ್ಲ ॥ಪ॥ ಆಡಿಪೊತ್ತವನೊಬ್ಬ ನೋಡಿ ತಿರುಗಿದನೊಬ್ಬ । ಓಡಾಡಿದನು ಒಬ್ಬ ಈ ಮೂವರು । ಆಡಿದಗೆ ಕಿವಿಯಿಲ್ಲ, ನೋಡಿದನ ಮಗ ಪಾಪಿ । ಓಡಾಡಿದವನೊಬ್ಬ ಓಡನಯ್ಯ ॥

**ಇತರ ಕೃತಿಗಳಲ್ಲಿ**

ಮೋಹನತರಂಗಿಣಿ ಕನಕನ ಬೃಹತ್ಕೃತಿ. ಕೃಷ್ಣದೇವರಾಯನ ಕಾಲದ ಸಮಾಜದ ವೀರ, ಭೋಗ (ಶೃಂಗಾರ), ಭಕ್ತಿಗಳು ಜನರ ಅಭಿರುಚಿಯ ವಿಷಯವಾಗಿದ್ದುದು ತಿಳಿಯುತ್ತದೆ. ಜೈನ, ವೀರಶೈವ ಕವಿಗಳು, ಸಾಂಗತ್ಯದಲ್ಲಿ ಬರೆಯುತ್ತಿದ್ದಂತೆ ಅವನೂ ಸಾಂಗತ್ಯದಲ್ಲಿ ಬರೆದಿರುತ್ತಾನೆ.

ಕನಕನ ಜೀವನದಲ್ಲಿ ಮೊದಲಿಂದ ಕೊನೆತನಕ ವೈವಿಧ್ಯವಿರುವಂತೆ ಅವನ ಕೃತಿಗಳಲ್ಲಿಯೂ ವೈವಿಧ್ಯವಿದೆ.

ಯುಗಪ್ರವರ್ತಕ ಮಹಾಕವಿಗಳಾದ ಹರಿಹರ ಕುಮಾರವ್ಯಾಸರು ಸಾಮಾನ್ಯರ ಹಿತದೃಷ್ಟಿಯಿಂದ, ದೇಸಿಯನ್ನೆ ಮೆರೆಸಿದಂತೆ, ಕನಕನೂ ಸರಳ ಸುಂದರಭಾಷೆಯಲ್ಲಿ ಸಾಂಗತ್ಯ ಷಟ್ಪದಿಗಳಲ್ಲಿ ಬರೆದು ಹೆಸರಾಗಿದ್ದಾನೆ.

"ಕನಕದಾಸರ ಗರಡಿಯಲ್ಲಿ ಸಂಸ್ಕೃತ ಕನ್ನಡಕ್ಕೆ ಕೈಂಕರ್ಯವೆಸಗುತ್ತಿರುವಂತೆ

---

೧. ರಾಮಧಾನ್ಯಚರಿತ್ರೆ, ಪೀಠಿಕೆ–ಪುಟ ೧೦–ದೇ. ಜ. ಗೌ.

ಕಾಣುತ್ತದೆ, ಅವನ ಶೈಲಿಯಲ್ಲಿ ಮೊಹರಂ ಹಬ್ಬದ ಆಡಂಬರವಿಲ್ಲ ಸಹಜ ಸೌಂದರ್ಯವಿದೆ. ಚಮತ್ಕಾರವಿಲ್ಲ–ಶೋಭೆಯಿದೆ. ಶಬ್ದ ದಾರಿದ್ರ್ಯವಿಲ್ಲ–ಆದರೆ ಲೋಭಿ ಎನ್ನುವಷ್ಟು ಹಿಡಿತವಿದೆ. ವಿನಯಶ್ರೀ ಕನಕನ ಶೈಲಿಯ ಜೀವಾಳ."[೧]

"ಭಾರತ ಸಮಾಜದಲ್ಲಿ ಜಾತಿಭೇದವಿದ್ದರೂ ಕರ್ನಾಟಕ ಸಾರಸ್ವತ ಪ್ರಪಂಚದಲ್ಲಿ ಭೇದವಿಲ್ಲ. 'ಬ್ರಾಹ್ಮಣ' ಲಕ್ಷ್ಮೀಶನ ಪಕ್ಕದಲ್ಲಿ 'ಲಿಂಗವಂತ' ಷಡಕ್ಷರಿಯೂ. 'ಜೈನ' ಪಂಪನೂ, 'ಕುರುಬ' ಕನಕನೂ, 'ಬಳೆಗಾರ' ರನ್ನನೂ ಸಮಾನಸ್ಕಂದರಾಗಿ ಕುಳಿತಿರುವರು.

"ಬ್ರಹ್ಮಸೂತ್ರ ತೋರಿಸಿಕೊಟ್ಟ ತತ್ವಕ್ಕಿಂತಲೂ, ಹೆಚ್ಚಿನ ಮಂದಿಗೆ ಮುಕ್ತಿಮಾರ್ಗವನ್ನು ತೋರಿದ 'ದಾಸ'ವಾಙ್ಮಯಕ್ಕೆ ಕನಕನು ಅಪೂರ್ವ ಕೃತಿಕಾಣಿಕೆಗಳನ್ನು ಕೊಟ್ಟು ಪುಣ್ಯವಂತನಾಗಿದ್ದಾನೆ. ಕರ್ನಾಟಕ ಸಂಗೀತಕ್ಕೆ ಪುರಂದರ–ಕನಕರ ಕೊಡುಗೆ ಅಮೂಲ್ಯವಾದುದು. ಹರಿಭಕ್ತಿಸಾರದ ಮೊರೆ, ಬರೇ ಕನಕನದಾಗಿರದೆ, ಸರ್ವ ಆಸ್ತಿಕ ಜನರದಾಗಿದೆ."[೨]

ಕನಕನು ಕವಿಯಾಗಿ ನಿರಹಂಕಾರಿ ಆದರೆ, ದೀನನಲ್ಲ, ಧೈರ್ಯಗೇಡಿಯಲ್ಲ, ಬಗ್ಗಿದರೂ ಕುಗ್ಗುವವನಲ್ಲ, ಆತ್ಮಪ್ರತ್ಯಯಬಾಹಿರನಲ್ಲ, ಹಿರಿಯ ಸ್ಥಾನವುಳ್ಳವನು. ಮಹಿಮಾವಂತ. ಚಿರಂಜೀವಿ–ಎಂಬ ಸಂಗತಿ ನಿರ್ಧಾರವಾಗಿದೆ. ನಡುಗನ್ನಡ ಕವಿ ಸಂದೋಹದಲ್ಲಿ ಅವನೂ ಒಬ್ಬ ಸ್ಮರಣೀಯ ಮಹನೀಯ."[೩]

ಮನುಷ್ಯನು ಉಪಕಾರ ಮಾಡುವುದರಿಂದ ಮಿತ್ರನೂ, ಅಪಕಾರ ಮಾಡುವುದರಿಂದ ವೈರಿಯೂ ಆಗುತ್ತಾನೆ. ಕನಕನಾದರೋ ಸಮಾಜಕ್ಕೆ ತನ್ನ ತನುಮನಧನಗಳನ್ನು ಧಾರೆಯೆರೆದವನು. ಡಿ.ವಿ.ಜಿ. ಅವರು ಎನ್ನುವಂತೆ, "ಲೋಕೋಪಕಾರದ ವಿಸ್ತೀರ್ಣವನ್ನು ಅಳೆದು ನೋಡಿದರೆ ಬಸವಣ್ಣ–ಅಲ್ಲಮರುಗಳಿಂದಲೂ, ಪುರಂದರ–ಕನಕರುಗಳಿಂದಲೂ ಆಗಿರುವಷ್ಟು ವೇದಾಂತ ತತ್ವಪ್ರಚಾರವು, ಅನೇಕ ಉಪನಿಷದ್ವ್ಯಾಖ್ಯಾತರುಗಳಿಂದ ಆಗಿಲ್ಲವೆಂದು ಧಾರಾಳವಾಗಿ ಹೇಳಬಹುದು. ಅವರಲ್ಲೂ ಕನಕನ ಸ್ಥಾನ ವಿಶಿಷ್ಟವಾದುದು."

ಎಲ್ಲ ಮಕ್ಕಳ ಹಿತಚಿಂತನೆ ಮಾಡುವ ತಾಯಿ, ತನ್ನ ಮುಂದುವರಿದ

---

೧. ನಳಚರಿತ್ರೆಯ ಪೀಠಿಕೆ–ದೇ. ಜ. ಗೌ.

೨. ಸಾಹಿತ್ಯ ಮತ್ತು ಜನಜೀವನ–ಡಿ.ವಿ.ಜಿ.–ಜೀವನ ಸೌಂದರ್ಯ ಮತ್ತು ಸಾಹಿತ್ಯ ಪುಟ–೧೨೭

೩. ಕನಕದಾಸನ ಶೈಲಿ– (ಶೈಲಿ–ಪುಟ ೩೫೪–೩೭೯) ಡಾ. ಎಸ್. ವಿ. ರಂಗಣ್ಣ

ಮಕ್ಕಳು ಹಿಂದುಳಿದವರ ಏಳಿಗೆಗಾಗಿ ಶ್ರಮವಹಿಸುವುದಾದರೆ, ಅಂಥವರಲ್ಲಿ ಹೆಚ್ಚಿನ ವಾತ್ಸಲ್ಯವನ್ನಿಡುವಂತೆ, ಸಮಾಜದಲ್ಲಿ ಹಿಂದುಳಿದವರ ಏಳಿಗೆಗಾಗಿ ಶ್ರಮಿಸಿದ ಕನಕನೂ ದೈವಾನುಗ್ರಹಕ್ಕೆ ಪಾತ್ರನಾದವನು. ಸರ್ವಾದರಣೀಯವಾದ ತನ್ನ ಅಮರ ಕೃತಿಗಳಿಂದ ಅವನೂ ಅಮರನು. ಅವನ ನಳಚರಿತ್ರೆಯು ವಿಡಂಬನೆಯಿಂದ ಸಮಾಜವನ್ನು ತಿದ್ದಿದ್ದರೂ, ಪುಣ್ಯಪ್ರದವಾದ ನೀತಿಯಿಂದ ಕೂಡಿದ್ದು, ಆಪತ್ತಿನಲ್ಲಿ ಧೈರ್ಯ, ನೆಮ್ಮದಿಗಳನ್ನು ಕೊಡುವಂಥದ್ದು. ಮಮ್ಮಟನು ಹೇಳುವ.

ಕಾವ್ಯಂ ಯಶಸೇರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾಸಮ್ಮಿತತಯೋಪದೇಶಯುಜೇ ॥

ಎಂಬ ಮಾತಿನಂತೆ, ಕನಕನ ಕೃತಿಗಳು ಎಂದೆಂದೂ ಅಮರಫಲವನ್ನು ಸಮಾಜಕ್ಕೆ ಕೊಡುವವುಗಳು. ಅವನ ಕೃತಿಗಳು ಜಾತೀಯತೆಯ ಕೆಸರಿಂದ ಉದಿಸಿದ ಕಮಲಗಳು ! ಕನಕನು ಕನ್ನಡ ನುಡಿಯ ಕೀರ್ತಿಧ್ವಜ !

ಸಿರಿಗನ್ನಡಂ ಗೆಲ್ಗೆ ! ಬಾಳ್ಗೆ !

## ಸಹಾಯಕ ಗ್ರಂಥಗಳು


೧. ಕನಕನ ಕೃತಿಗಳು– (i) ಮೋಹನ ತರಂಗಿಣಿ, (ii) ನಳಚರಿತ್ರೆ, (iii) ರಾಮಧಾನ್ಯ ಚರಿತ್ರೆ (iv) ಹರಿಭಕ್ತಿಸಾರ, (v) ಕೀರ್ತನೆಗಳು (vi) ಮುಂಡಿಗೆಗಳು.

೨. ಕನ್ನಡ ಸಾಹಿತ್ಯ ಚರಿತ್ರೆ–ರಂ. ಶ್ರೀ. ಮುಗುಳಿ.

೩. ಕನ್ನಡ ಸಾಹಿತ್ಯ ಚರಿತ್ರೆಯ ಸಮೀಕ್ಷೆ–ತ. ಸು. ಶಾಮರಾಯರು.

೪. ಜನಪ್ರಿಯ ಕನ್ನಡಸಾಹಿತ್ಯಚರಿತ್ರೆ– ತ. ಸು. ಶಾಮರಾಯ,–ಮೇ. ರಾಜೇಶ್ವರಯ್ಯ.

೫. ಕಾವ್ಯಾನುಶೀಲನ–ರಾ. ಗೌ.

೬. ಹರಿದಾಸ ಹೃದಯ–ಡಾ: ಜಿ. ವರದರಾಜರಾವ್.

೭. ಕನ್ನಡ ಸಂತರ ಪರಮಾರ್ಥಪಥ–ಅನುವಾದಕ–ಎಂ. ಎಸ್. ದೇಶಪಾಂಡೆ.

೮. ಕನಕದಾಸರ ಭಕ್ತಿಗೀತೆಗಳು–ಬೆಟಗೇರಿ ಕೃಷ್ಣಶರ್ಮ–ಹುಚ್ಚೂರಾವ್ ಬೆಂಗೇರಿ.

೯. ಕರ್ನಾಟಕದ ಹರಿದಾಸರು–ಎಚ್.ಕೆ. ವೇದವ್ಯಾಸ ಆಚಾರ್ಯ.

೧೦. ಹರಿದಾಸ ಬೋಧೆ–ಅಮೃತಮಹಾದೇವ–ಅಣ್ಣಿಗೇರಿ.

೧೧. ದಾಸರ ಕೀರ್ತನೆಗಳು–(ಸಂಗ್ರಹ)–ಶ್ರೀ ತೆ. ಮಂಜುನಾಥಯ್ಯ.

೧೨. ಶೈಲಿ–ಡಾಃ ಎಸ್.ವಿ. ರಂಗಣ್ಣ.

೧೩. ಜೀವನ ಸೌಂದರ್ಯ ಮತ್ತು ಸಾಹಿತ್ಯ–ಡಿ. ವಿ. ಜಿ.

೧೪. ಶ್ರೀ ಕನಕದಾಸರ ಹಾಡುಗಳು– ಶ್ರೀ ಕೃಷ್ಣಶರ್ಮ ಬೆಟಗೇರಿ. ಶ್ರೀ ಹುಚ್ಚೂರಾವ್ ಬೆಂಗೇರಿ.

# ಕನಕಸಾಹಿತ್ಯದಲ್ಲಿ ಹೆಣ್ಣಿನ ಪರಿಕಲ್ಪನೆ

**ಡಾ. ಸಂಧ್ಯಾ ರೆಡ್ಡಿ**

ಕನಕದಾಸರನ್ನು ಪುರಂದರದಾಸರೊಂದಿಗೇ ಕೀರ್ತನಕಾರರೆಂದು ಗುರುತಿಸಿದರೂ ಸಹ ಅವರೊಬ್ಬ ಗಮನಾರ್ಹ ಕವಿ ಎಂಬುದನ್ನು ಮರೆಯಬಾರದು. ಕೀರ್ತನೆಗಳನ್ನುಳಿದು ಅವರು ರಚಿಸಿದ ಕೃತಿಗಳ ಸಂಖ್ಯೆ ಐದು. ಇದರಲ್ಲಿ ಸಾಂಗತ್ಯದಲ್ಲಿ ರಚಿತವಾಗಿರುವ ಮೋಹನ ತರಂಗಿಣಿ ಹಾಗೂ ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿರುವ ನಳಚರಿತ್ರೆ ಪೌರಾಣಿಕ ಕಥಾವಸ್ತುವನ್ನೊಳಗೊಂಡ ಕಾವ್ಯಗಳು. "ಹರಿನಾಮ ಸಂಕೀರ್ತನೆ, ಭಕ್ತ–ಪರಮಾತ್ಮರ ಸಂಬಂಧ, ಸಾಧಕನ ಆತ್ಮಶೋಧನೆ, ಆರ್ತತೆ, ನಿರಾಶೆ, ಕಳವಳ, ಉದ್ವಿಗ್ನತೆ, ಸಂಶಯ, ಛಲ, ಆತ್ಮ ಸಮರ್ಪಣೆ, ಸಂಸಾರನಿರಸನ, ವೈರಾಗ್ಯ ವ್ಯಾಕುಲ ಇವೇ ಮೊದಲಾದ ಮಾನಸಿಕ ವ್ಯಾಪಾರಗಳು ಆತ್ಮಾನುಸಂಧಾನದ ರೀತಿ ನೀತಿಗಳು ಹರಿಭಕ್ತಿಸಾರದ ಸಾಮಗ್ರಿ. ಶ್ರೀರಾಮಚಂದ್ರನ ಚರಿತ್ರೆ, ರಾಗಿ_ಭತ್ತಗಳ ಜಗಳ ಹಾಗೂ ಅದು ಪರಿಹಾರಗೊಂಡ ರೀತಿಯ ನಿರೂಪಣೆ, ರಾಮಧಾನ್ಯ ಚರಿತ್ರೆಯ ವಸ್ತು. ಸಂಸಾರವೊಂದಿಗರಾಗಿ ಕಾರಣಾಂತರಗಳಿಂದ ಹರಿದಾಸರಾಗಿ ಪರಿವರ್ತನೆ ಹೊಂದಿದ ಕನಕದಾಸರು ಜೀವನಾನುಭವ ಹಾಗೂ ಸಾಮಾಜಿಕ ಪ್ರಜ್ಞೆಗಳನ್ನು ತಮ್ಮ ಕೃತಿಗಳಲ್ಲಿ ಅರ್ಥಪೂರ್ಣವಾಗಿ ಬಳಸಿಕೊಂಡಿದ್ದಾರೆ. ದಾಸರಾದ ನಂತರ ಅವರು ನಿತ್ಯಜೀವನದ ಘಟನೆಗಳ ಬಗ್ಗೆ ಯಾವ ಧೋರಣೆ ತಳೆದರು ಎಂಬುದನ್ನು ತಿಳಿಯುವ ದೃಷ್ಟಿಯಿಂದಲೂ ಇವರ ಕೃತಿಗಳ ಅಧ್ಯಯನ ಮುಖ್ಯವಾಗುತ್ತದೆ. ಕನಕದಾಸರು ಮೋಹನ ತರಂಗಿಣಿಯಂಥ ಶೃಂಗಾರಪರವಾದ ಕಾವ್ಯವನ್ನು ನಳಚರಿತ್ರೆಯಂಥ ಆದರ್ಶ ಪ್ರೇಮದ ಕಾವ್ಯವನ್ನು ರಚಿಸಿದ್ದಾರೆ ಎಂಬುದೂ ಸಹ ಗಮನಾರ್ಹ ಸಂಗತಿ. ಆದ್ದರಿಂದಲೇ ಅವರ ಹೆಣ್ಣಿನ ಪರಿಕಲ್ಪನೆ ಹೇಗಿರಬಹುದು ಎಂಬುದು ಕುತೂಹಲಕಾರಿಯಾದ ಅಧ್ಯಯನವಾಗುತ್ತದೆ.

ಮೋಹನ ತರಂಗಿಣಿಯಲ್ಲಿ ಹೆಸರಿಗೆ ತಕ್ಕಂತೆ ಶೃಂಗಾರರಸಭರಿತವಾದ ಸಂದರ್ಭಗಳು ಬಹಳವಾಗಿವೆ. ಶ್ರೀಕೃಷ್ಣ ಹಾಗೂ ರುಕ್ಮಿಣಿಯರ ವಿವಾಹೋತ್ತರ

ಪ್ರಣಯ ಶೃಂಗಾರ, ಪ್ರದ್ಯುಮ್ನ-ರತಿ, ಅನಿರುದ್ಧ-ಉಷಾ ಇವರ ಪ್ರಣಯ ಜೀವನ, ಕಾಮನನ್ನು ಕಳೆದುಕೊಂಡ ರತಿಯ ವಿಲಾಪ ಇವು ಈ ಕಾವ್ಯದ ಮುಖ್ಯ ಸಂದರ್ಭಗಳಾದರೂ ಪುರವರ್ಣನೆ ಸೂಳೆಗೇರಿಯ ವರ್ಣನೆ, ಜಲಕ್ರೀಡಾ ವರ್ಣನೆ ಮುಂತಾದ ಅಷ್ಟಾದಶ ವರ್ಣನೆಗಳ ಸಂದರ್ಭದಲ್ಲೆಲ್ಲ ಹೆಣ್ಣಿನ ಪ್ರಸ್ತಾಪವೇ ಮುಖ್ಯವಾಗಿರುವುದರರಿಂದ ಕನಕದಾಸರ ಹೆಣ್ಣಿನ ಪರಿಕಲ್ಪನೆಯನ್ನು ತಿಳಿಯಲು ಇವೂ ಮುಖ್ಯ ಆಧಾರಗಳಾಗುತ್ತವೆ. ಮುಖ್ಯ ಪಾತ್ರಗಳಾದ ರುಕ್ಮಿಣಿ, ರತಿ, ಉಷೆ ಹಾಗೂ ಅವಳ ಗೆಳತಿ ಚಿತ್ರಲೇಖೆಯರಂತೆ ಬೇಡಿತಿಯರು ಪುರಸ್ತ್ರೀಯರು ಹಾಗೂ ಪರಿಚಾರಿಕೆಯರೂ ಸಹ ಅಧ್ಯಯನದಲ್ಲಿ ಮುಖ್ಯವಾಗುತ್ತಾರೆ. ಏಕೆಂದರೆ ಶೃಂಗಾರರಸ ಓತಪ್ರೋತವಾಗಿ ಹರಿಯುವ ಈ ಕಾವ್ಯದಲ್ಲಿ ಕನಕದಾಸರು ತಮ್ಮ ವರ್ಣನೆಗಳನ್ನು ಪ್ರಮುಖ ಸ್ತ್ರೀ ಪಾತ್ರಗಳಿಗಷ್ಟೆ ಮೀಸಲಾಗಿಟ್ಟಿಲ್ಲ. ಅಷ್ಟೇ ಅಲ್ಲ, ಮೋಹನ ತರಂಗಿಣಿ ಕವಿಯು ಒಬ್ಬ ಚೆಲುವೆಯಾದ ಹೆಣ್ಣಿಗೆ ನಿರೂಪಿಸುತ್ತಿರುವ ಧಾಟಿಯಲ್ಲಿ ರಚಿತವಾಗಿದ್ದು ಪ್ರತಿಸಂಧಿಯ ಆರಂಭದಲ್ಲಿ ಕವಿಯು ಈ ಹೆಣ್ಣಿನೊಂದಿಗೆ ಮಾತಾಡುವ ಸಂಭಾಷಣಾ ರೂಪದ ಎರಡು ಪದ್ಯಗಳಿವೆ. ಈ ಹೆಣ್ಣನ್ನು ಕವಿ ವಿಧವಿಧವಾಗಿ ಸಂಬೋಧಿಸುವ ರೀತಿಯಲ್ಲಿ ಆತನ ಶೃಂಗಾರಪ್ರಿಯತೆ ಮತ್ತು ಸರಸ ಮನೋಭಾವ ವ್ಯಕ್ತವಾಗುತ್ತದೆ.

'ನನ್ನ ಎದೆಯೆಂಬ ಹೂವಿಗೆ ತುಂಬಿಯಂತಿರುವ ಕೂದಲುಳ್ಳ ಚೆಲುವೆಯೇ ಕೇಳು,

'ಮದನಾಗಮದ ಶ್ರೀಕಾರಗಳಂತಿರ್ಪ ಸುದತಿ...'

'ಜಾಣೆಯರನ್ನು ಕಂಡುಮನಸೋಲದಂತೆ ನನ್ನ ಚಿತ್ತವನ್ನು ಒತ್ತೆಗೊಂಡ ರಮಣೀಮಣಿಯೆ ಇಗೋ ಸಕ್ಕರೆಯಂಥ ನುಡಿಗಳನ್ನು ಕೇಳು"-ಹೀಗೆ ಈ ಕಾವ್ಯದ ಆರಂಭದಿಂದಲೇ ಕನಕ ಹೆಣ್ಣಿನ ವಿಧವಿಧವಾದ ವರ್ಣನೆಗೆ ತೊಡಗುತ್ತಾನೆ.

ಮೋಹನ ತರಂಗಿಣಿಯಲ್ಲಿ ಕಥೆ ನೆಪಮಾತ್ರಕ್ಕೆ, ಹೆಣ್ಣಿನ ಸೌಂದರ್ಯ ವರ್ಣನೆಯೇ ಪ್ರಮುಖ ಉದ್ದೇಶ ಎಂದು ಹೇಳಬಹುದಾದಷ್ಟು ಹೆಣ್ಣಿನ ವರ್ಣನೆ ಇಲ್ಲಿ ತುಂಬಿದೆ. ಸಾಂಪ್ರದಾಯಿಕವಾದ ವರ್ಣನೆ ನೂರಕ್ಕೆ ತೊಂಬತ್ತರಷ್ಟಿದ್ದರೂ ಈ ಚೌಕಟ್ಟಿನಲ್ಲಿಯೇ, ಕೆಲವು ಕಡೆ ಆತ ತೋರುವ ವೈಶಿಷ್ಟ್ಯ ಉಲ್ಲೇಖನೀಯ. ಈ ಮಾತಿಗೆ ಉದಾಹರಣೆಯಾಗಿ ಸೌರಾಷ್ಟ್ರ ವರ್ಣನೆಯ ಕೆಲವು ಪದ್ಯಗಳನ್ನು ನೋಡೋಣ.

ಸೀರೆಯ ನಿರಿಗೆಗೆ ಗಂಟು ಕಟ್ಟುತ್ತಾರೆ. ಕೈಗೆ ಕಂಕಣಗಳನ್ನು ಕಟ್ಟುತ್ತಾರೆ.

ತುರುಬು ಕಟ್ಟುತ್ತಾರೆ ಮತ್ತು ಎಲೆಯ ದೊನ್ನೆಯನ್ನು ಕಟ್ಟುತ್ತಾರೆ ಅಷ್ಟೆ. ಇವನ್ನುಳಿದು ಅಲ್ಲಿ ಕಟ್ಟುಕಟ್ಟು ಎಂಬ ಮಾತಿಲ್ಲ (೨–೨೩೭)

ಕೊಂಕುತನವೆಂಬುದು ಕೂದಲಲ್ಲಿ, ಮಧುಪಾನವೆನ್ನುವುದು ತೊಂಡೆಹಣ್ಣಿನಂಥ ತುಟಿಗಳಲ್ಲಿ, ಕಠಿಣತನವೆನ್ನುವುದು ರಮಣಿಯರ ಕುಂಭ ಕುಚಗಳಲ್ಲಿಯೇ ಹೊರತು ಬೇರೆಡೆಯಲ್ಲಿ ಇಂಥ ಶಬ್ದಗಳು ಹುಟ್ಟಲಾರವು– (೨–೨೪)

ಇದೇ ರೀತಿ ದ್ವಾರಕಾಪುರ ವರ್ಣನೆಯಲ್ಲಿ ಬರುವ ಕೆಲವು ವರ್ಣನೆಗಳು ಕೆಲಸದಲ್ಲಿ ತೊಡಗಿದ ಹೆಣ್ಣಿನ ಕಣ್ಣಿಗೆ ಕಟ್ಟುವಂಥ ಚಿತ್ರ ಕೊಡುತ್ತವೆ.

ಬಿಚ್ಚಿದ ಕೂದಲು, ಬೆವರುಹನಿಗಳು, ತುಂಬಿ ಬೀಳುತ್ತಿರುವ ಮುಖ, ಅದುರುವ ಮೊಲೆಗಳಿಂದ ಮತ್ತೂ ಮೋಹಕವಾಗಿ ಕಾಣುತ್ತಿದ್ದ ಗಂಧವನ್ನು ಅರೆಯುವ ಹೆಂಗಳೆಯರಿದ್ದ ಅಂಗಡಿಗಳು ಶೋಭಿಸಿದವು (೩–೧೪).

ಚೆಲುವಾದ ಸೂಳೆಯರ ತರುಣಿಯರ ಚಿಗುರುಮೊಲೆಗಳನ್ನು ನೋಡಿ ನಗುತ್ತ ಅವರ ಎಳೆಯ ಬೆರಳುಗಳ ಚಿಟುಕುಗಳನ್ನು ಒತ್ತಿ ಬಳೆ ಇಡಿಸುವ ಬಳೆಗಾರರು ಬೀದಿಯ ಎರಡೂ ಕಡೆಗೆ ಇದ್ದರು (೩–೨೩)

ಬೇಡಿತಿಯರ ವರ್ಣನೆಯಂತೂ ಕವಿಯ ಪ್ರತಿಭೆ ಹಾಗೂ ನವನವೀನ ಮತ್ತು ಸಹಜ ಚಿತ್ರಣಕ್ಕೆ ಅತ್ಯುತ್ತಮ ನಿದರ್ಶನವೆನ್ನಬಹುದು :

ಏರು ಹರಯದ ಕಪ್ಪಾದ ಶಬರಿಯರ ಚೆಲುವನ್ನು ನೋಡಿದರೆ ಚಂದ್ರನು ಅವರ ಕಣ್ಣಲ್ಲಿ ತನ್ನ ಕಾಂತಿಯನ್ನು ತುಂಬಿದಂತೆ ಕಾಣುತ್ತಿತ್ತು. (೧೯–೬೨)

ಮನ್ಮಥನ ಗುಡಿಯ ಬಾಗಿಲಿಗೆ ತೋರಣ ಕಟ್ಟಿದಂತೆ ಶಬರಿಯ ಮೈಮೇಲೆ ತಳಿರಿನ ಉಡುಗೆ ಶೋಭಿಸುತ್ತಿತ್ತು. (೧೯–೬೩)

ಪಟ್ಟಣದ ಹೆಣ್ಣುಗಳಿಗೆ ಹೆದರಿ ಕಾಡನ್ನು ಸೇರಿದರೂ ಈ ಬಟ್ಟ ಮೊಲೆಯ ಕಿರಾತೆಯರ ಹಿಂಸೆ ತಪ್ಪಲಿಲ್ಲವೆಂದು ಆ ಯತಿಗಳು ತೊಳಲಾಡಿದರು....(೧೯–೮೪) ಎಂದು ಹೇಳುವ ಮೂಲಕ ಬೇಡಿತಿಯರ ಆಕರ್ಷಕ ರೂಪಿನ ವರ್ಣನೆ ಮಾಡುತ್ತಾನೆ.

ಸ್ತ್ರೀ ವರ್ಣನೆಯ ಗೀಳು ಕನಕನಲ್ಲಿ ಎಷ್ಟು ಅಧಿಕವಾಗಿದೆ ಎಂದರೆ ಎಷ್ಟೋವೇಳೆ ಆತ ದೇವ ಮಾನವರೆಂಬ ಭೇದವನ್ನೂ ಮರೆತುಬಿಡುತ್ತಾನೆ.

ರುಕ್ಮಿಣಿಯು ತನಗೆ ಚೆಲುವಾದ ಸುಕುಮಾರನನ್ನು ಕರುಣಿಸಬೇಕು ಎಂದು ಶ್ರೀಕೃಷ್ಣನನ್ನು ಕೋರಿದಾಗ 'ನೀನು ಮಕ್ಕಳನ್ನು ಹಡೆದರೆ ಸಾಕು ನಿನ್ನ ಬಿರುಸು ಮೊಲೆಗಳು ಶಿಥಿಲಗೊಳ್ಳುವುವು' ಎಂದು ಕೆಣಕುತ್ತಾನೆ. (೪–೩೩)

ಶಿವನ ದರ್ಶನಕ್ಕೆ ಉಷೆ ಬಂದಾಗ 'ಮಾತನಾಡಿದ ಅವಳ ಬಾಯಿಯ

ಚೆಲುವನ್ನು ಕಂಡು ಶಿವನೂ ಮನಸೋತನು. ಆದರೂ ಕರುಣಾಮಯನೂ ನಿರ್ಮಲನೂ ಆದ ಭೂತೇಶನು ಮನದೊಳಗೆ ಕಾತರಿಸದೆ ತನ್ನ ಮಗಳಂತೆ ಅವಳನ್ನು ನೋಡಿದನು. (೨೫-೧೪)

ಹೊಂದಾವರೆಯ ಮೊಗ್ಗೆಗಳಂತಿರುವ ಉಷಾದೇವಿಯ ಕುಚಗಳ ಮಾಟವನ್ನು ಕಂಡು ಕಾಮಹರನಾದ ಪರಶಿವನನ್ನೊಬ್ಬನನ್ನುಳಿದು ಮಿಕ್ಕ ಸ್ವರ್ಗಮರ್ತ್ಯ ಪಾತಾಳ ಲೋಕದವರೆಲ್ಲ ವಿರಹವ್ಯಥೆಯಿಂದ ಬೆಂದುಹೋದರು. (೨೫-೧೫)

ಈ ಕಾವ್ಯದ ವಸ್ತುವಿಗೆ ತಕ್ಕಂತೆ ಕವಿ ವಿವಿಧ ಅವಸ್ಥೆಗಳ ಹೆಣ್ಣಿನ ಚಿತ್ರ ನೀಡುತ್ತಾನೆ. ಪ್ರೇಮ, ವಿರಹ, ಶೃಂಗಾರ, ತಾಯ್ತನ, ದುಃಖ, ನಿಯೋಗ...ಇತ್ಯಾದಿ,. ಆದರೆ ಈ ಯಾವ ಅವಸ್ಥೆಯ ಹೆಣ್ಣಿನ ಚಿತ್ರವೇ ಆಗಲಿ ಎಲ್ಲದರಲ್ಲು ಈತ ಹೆಣ್ಣಿನ ಮೋಹಕ ರೂಪದ ಬಲೆಯಲ್ಲಿಯೇ ಕಣ್ಣನ್ನು ಕೀಲಿಸುತ್ತಾನೆ. ಈ ವರ್ಣನೆಗಳು ತಮ್ಮ ಚೆಲುವಿಕೆ ಮತ್ತು ಸಹಜತೆಯಿಂದಾಗಿ ಮನಸೆಳೆಯುತ್ತವೆ. ಶಿವನ ಉರಿಗಣ್ಣಿನಿಂದ ದಗ್ಧವಾಗಿ ಹೋದ ಮನ್ಮಥನ ಬೂದಿಯಲ್ಲಿ ಹೊರಳಿ ಅಳುತ್ತಿರುವ ರತಿಯ ಚಿತ್ರ ಹೀಗಿದೆ : ಬೂದಿಯಿಂದ ಕೈಯಾರೆ ತಿಕ್ಕಿಬೆಳಗಿದರೆ ಹೊಳೆವ ಸುವರ್ಣದ ಪಾತ್ರೆಯಂತೆ, ಹಲುಬುವ ರತಿಯ ಎದೆಯಲ್ಲಿ ಭಸ್ಮಲೇಪಿತ ಕುಚಗಳು ಶೋಭಿಸಿದವು (೮-೨೨). 'ಪುಷ್ಪದ ಪರಾಗದಲ್ಲಿ ಬಿದ್ದೆದ್ದು ಬಂದ ಮರಿದುಂಬಿಯ ಬಿಳಿಯಬಣ್ಣದ ಗರಿಗಳಂತಿದ್ದ ಸಡಿಲಾದ ತುರುಬಿನ ಬೂದಿ ಹತ್ತಿದ ಗುಂಗುರುಕೂದಲು ಮುಖವನ್ನು ಮುಚ್ಚಿದವು' (೮-೨೩) 'ಅಬ್ಬಾ ಬಿಚ್ಚಿ ಹರವಿದ ಕೂದಲು ಮತ್ತು ಬಿರುಸು ಮೊಲೆಗಳು ತೆರೆದು ಕಾಣುತ್ತಿರುವುದನ್ನೂ ಲಕ್ಷಿಸದಂಥ ಪತಿಯ ಸಾವಿನ ದುಃಖ ಎಂಥದೋ, (೮-೨೪).

ಕನಕದಾಸ ತಾಯ್ತನದ ವಿವಿಧ ಭಾವಗಳನ್ನು ಬಹುಸಹಜವಾಗಿ ಚಿತ್ರಿಸುವುದನ್ನು ಆತನ ಕಾವ್ಯ ಹಾಗೂ ಕೀರ್ತನೆಗಳೆರಡರಲ್ಲೂ ಗುರುತಿಸಬಹುದು. ಎಳವೆಯಲ್ಲಿಯೇ ಶಂಬರಾಸುರನಿಂದ ಅಪಹೃತನಾದ ಪ್ರದ್ಯುಮ್ನ ರತಿಯನ್ನು ವಿವಾಹವಾಗಿ ದ್ವಾರಕಾ ಪಟ್ಟಣವನ್ನು ಪ್ರವೇಶಿಸುವಾಗ ರುಕ್ಮಿಣಿ ಹೀಗೆ ಅಂದುಕೊಳ್ಳುತ್ತಾಳೆ. ಚಿನ್ನದ ಪ್ರತಿಮೆಯಂತಿರುವ ಈತನನ್ನು ಅದಾವ ಪುಣ್ಯಾತ್ಮಳು ಹಡೆದಳೊ ನನ್ನ ಮಗನು ಇದ್ದಿದ್ದರೆ ಹೀಗೆಯೇ ಇರುತ್ತಿದ್ದ, (೧೩-೨೪).

'ಕಣ್ಣರಿಯದಿದ್ದರೂ ಕರುಳರಿಯಬಲ್ಲದೆಂಬಂತೆ ಆ ತಾಯಿ ಮನ್ಮಥನನ್ನು

ನೋಡಿದಳು ಎದೆಯಲ್ಲಿ ತೃಪ್ತಿಯಾಯಿತು. ಅವಳ ಮುಖ ಹುಣ್ಣಿಮೆಯ ಚಂದ್ರನಂತಾಯಿತು.' (೧೩–೨೫).

ಗರ್ಭಿಣಿ ಸ್ತ್ರೀಯು ವರ್ಣನೆಯುಂತೂ ಉಸಿರುಕಟ್ಟಿಸುವಷ್ಟು ಮೋಹಕವಾಗಿದೆ. ರತಿದೇವಿ ಗರ್ಭಿಣಿಯಾದುದನ್ನು ಕನಕ ಹೀಗೆ ವರ್ಣಿಸುತ್ತಾನೆ; ಹೊನ್ನಗೇದಗೆಯ ಹೊಡೆಯಂತೆ ಮೈಯಲ್ಲಿ ಬಸಿರು ಕಾಣಿಸಿಕೊಂಡಿತು' (೧೭–೨), 'ಮಗನನ್ನು ಪಡೆಯುವ ಹಂಬಲದಲ್ಲಿ ಕರ್ಪೂರತಾಂಬೂಲದ ರುಚಿಯನ್ನು ನೋಡದ ಅವಳ ಹಲ್ಲುಗಳು ಮಲ್ಲಿಗೆಯ ಮೊಗ್ಗೆಗಳಂತೆ ರಂಜಿಸಿದವು.' (೧೭–೩) 'ಗರ್ಭೋತ್ಪತ್ತಿಯ ಸಂತೋಷದಿಂದ ತಾಪತ್ರಯ ಕಳೆದು ಹೋಯಿತೆನ್ನುವಂತೆ ಆ ಕಮಲನೇತ್ರೆಯ ತ್ರಿವಳಿಗಳ ರೂಪವು ಮೈಯಲ್ಲಿ ಕರಗಿಹೋಯಿತು.' (೧೭–೬).

ಹೆಣ್ಣಿನ ವಿರಹ ವರ್ಣನೆ ಸಾಂಪ್ರದಾಯಿಕವಾಗಿದ್ದರೂ ಪರಿಣಾಮ ಕಳೆದುಕೊಂಡಿಲ್ಲ. ಉಷೆಯ ವಿರಹ ಜ್ವಾಲೆಯನ್ನು ವರ್ಣಿಸುವ ಕೆಲವು ಪದ್ಯಗಳನ್ನು ನೋಡೋಣ :

'ಅವಳ ವಿರಹ ಜ್ವಾಲೆಯನ್ನು ತಣಿಸಲು ಎದೆಯ ಮೇಲೆ ಪರಿಮಳೋದಕವನ್ನ ಚಿಮುಕಿಸಿದರೆ ಸುಣ್ಣದಕಲ್ಲಿಗೆ ನೀರೆರೆದಂತೆ ಸಪ್ಪಳ ಹೊರಟಿತು' (೨೭–೬೦).

'ವಿರಹ ತಾಪದ ಶಮನಕ್ಕೆಂದು ಅವಳನ್ನು ತಳಿರ ಮಂಟಪದಲ್ಲಿ ತಂದು ಮಲಗಿಸಿದಾಗ ಕಾಮನ ಹದವಾದ ಹೂಬಾಣ ನೆಟ್ಟು ಜೀವ ಕಂಗೆಟ್ಟು ಹೋಯಿತು. ಮೈಯುರಿಯಿಂದ ಮಗ್ಗುಲಿನ ತಳಿರು ತರಗೆಲೆಯಾಯಿತು..... ಮೈಗೆ ಲೇಪಿಸಿದ ಸಿರಿಗಂಧ ಕರಕಾಯಿತು.' (೨೮–೧೬–೧೭)

ಕೆಲವು ಸೌಂದರ್ಯ ವರ್ಣನೆಗಳು ಕನಕದಾಸನ ಸೌಂದರ್ಯಪ್ರಜ್ಞೆಯನ್ನು ಇನ್ನಿಲ್ಲದಂತೆ ಮನಗಾಣಿಸುತ್ತವೆ. ತಲೆಗೂದಲಿನ ವರ್ಣನೆ ಹೀಗಿದೆ : 'ಅರಳಿದ ಅವಳ ಮುಖಕಮಲದಲ್ಲಿಯ ಮಕರಂದ ಮತ್ತು ನೀರನ್ನು ಹೀರಿ ಸುಖಿಸಿದ ತುಂಬಿಗಳಂತೆ ಅವಳ ಕಪ್ಪಾದ ತಲೆಗೂದಲಿದ್ದವು. (೨೩–೨೮).

ಚಂದನಾದಿ ಸಮಸ್ತ ವಸ್ತುಗಳಿಗೆ ತನ್ನ ಮೈಯ ಸುವಾಸನೆಯನ್ನು ಕಡವಾಗಿ ಕೊಡುವಂತೆ ವನಲಕ್ಷ್ಮಿಯನ್ನು ಹೋಲುವ ಬಾಣಾಸುರನ ಪುತ್ರಿ ಶಿವನ ಒಡ್ಡೋಲಗಕ್ಕೆ ಬಂದಳು. (೨೪–೬೯)

'ಸೊಗಸಾದ ಅಡಕೆಗರಿಯೇ ಕಣ್ಣೆವೆಯಾಗಿದ್ದ ಚೆಲುವೆಯೊಬ್ಬಳು ಪಾತ್ರೆಯಲ್ಲಿ ನೀರು ಹಿಡಿದು ನಿಂತಿದ್ದಳು.'

....ರತಿದೇವಿಯು ತನ್ನ ದಾಸಾಳ ಹೂವಿನಂಥ ಬಾಯಿಂದ ನರುಗಂಪು

ಸೂಸುವಂತೆ ಕಾಮನೊಡನೆ ಮಾತನಾಡಿದಳು' (೧೬-೨೪). ಹೆಣ್ಣಿನ ಸೌಂದರ್ಯಕ್ಕೆ ಸರಿಸಾಟಿಯಾದುದು ಯಾವುದೂ ಇಲ್ಲ. ಇದರ ಆಕರ್ಷಣೆಯನ್ನು ತಪ್ಪಿಸಿಕೊಳ್ಳುವುದು ಕಷ್ಟ ಎಂಬುದನ್ನು ಕನಕ ಮನಗಂಡಿರಬೇಕು. ಈ ಅನುಭವವನ್ನು ನಾನಾ ವಿಧದಲ್ಲಿ ವ್ಯಕ್ತಪಡಿಸಿದ್ದಾನೆ-ಶಿವನ ದರ್ಶನಕ್ಕೆ ಹೊರಟ ಉಷೆಗೆ ಪರಿಚಾರಿಕೆಯರು ಉಡುಗೆ ತೊಡುಗೆ ಮಾಡುವ ಸಂದರ್ಭದ ವರ್ಣನೆಯ ಒಂದು ಪದ್ಯ ಹೀಗಿದೆ- 'ಸುಂದರಿಯರಾದ ಹೆಣ್ಣುಗಳೇನು ಮಹಾ ಎನ್ನುವ ಬಾಯಿಬಡುಕ ತಪಸ್ವಿಗಳನ್ನು ಎಲೆ ತಾಯೆ ಕೆಡೆದು ಮೆಟ್ಟು ಎನ್ನುತ್ತ ಅವಳಿಗೆ ಕಾಲ್ಕಡಗ ಮತ್ತು ತೋಡಗಳನ್ನು ತಂದು ತೊಡಿಸಿದರು' (೨೩-೪೬)

ಹೂಬಾಣಕ್ಕೆ ಸಾಟಿಯಾದ ಉಷಾದೇವಿಯ ಸಖಿಯರನ್ನು ಕಂಡ ವಿಟರು ಪಂಚಬಾಣಗಳ ಹೊಡೆತದಿಂದ ಬಾಣತಾಗಿದ ಹುಲ್ಲೆಗಳಂತೆ ಬಿದ್ದರು. (೨೪-೨೧)

ಹೆಣ್ಣಿನ ವರ್ಣನೆಯಲ್ಲಿ ಅನೇಕಸಲ ಕನಕದಾಸ ತನ್ನ ತುಂಟತನವನ್ನು ಮೆರೆಯುತ್ತಾನೆ. ಒಂದು ಸಂದರ್ಭದಲ್ಲಿ ಮನ್ಮಥನು ಹೀಗೆ ನುಡಿಯುತ್ತಾನೆ :

'ನನ್ನ ಮಡದಿಯ ದಟ್ಟವಾದ ಕೊಬ್ಬಿದ ಕುಚಗಳನ್ನು ನಟ್ಟ ದೃಷ್ಟಿಯಿಂದ ನೋಡುವ ನಾನು ಕಿಡಿಗಣ್ಣನಾದರೆ ಹೇಗೆ ತಾನೆ ನೋಡಬಲ್ಲೆನು'... (೬-೪೧).

ಕ್ರೀಡೆಯ ಸಂದರ್ಭದಲ್ಲಿ ಹೆಂಗಸರ ಚೇಷ್ಟೆಗಳ ವರ್ಣನೆ ಚೇತೋಹಾರಿಯಾಗಿದೆ.

'ಮತ್ಸ್ಯಾವತಾರ ತಾಳಿದ ನೀನು ನೀರನ್ನು ಬಿಟ್ಟಿರಲಾಗುವುದೆ ಎನ್ನುತ್ತ ಆ ಲಲನೆಯರು ರಾರಾಜಿಸುವ ಕುಂಕುಮ ಜಲದಲ್ಲಿ ನಾರಾಯಣನನ್ನು ಅದ್ದಿದರು (೧೪-೨೪). ಮನ್ಮಥ ರತಿಯನ್ನು ನೀರಲ್ಲಿ ನೂಕಿದಾಗ ಉಟ್ಟ ಹೊದಿಕೆಯ ಸೀರೆ ತೊಯ್ದು ಎದೆಯಲ್ಲಿ ಬಟ್ಟಮೊಲೆಗಳು ಶೋಭಿಸುತ್ತಿರಲು ರತಿದೇವಿ ನೀರಿನಿಂದ ಹೊರಬಂದು ಕೂದಲನ್ನು ಸರಿಪಡಿಸಿಕೊಳ್ಳುತ್ತ "ಮನ್ಮಥನೆ ನಿನ್ನ ಮೈಯಲ್ಲಿ ಹರನ ಉರಿಗಣ್ಣಿನಿಂದ ಬೆಂದ ಸಂತಾಪ ಹಾಗೂ ತುಂಬುಕುಚದ ತರುಣಿಯರ ವಿರಹದ ತಾಪವಿದೆ ತಂಪಾಗು" ಎಂದು ಆ ತಂಗೊಳದಲ್ಲಿ ನೂಕಿದಳು (೧೪-೭೮)

ಒಟ್ಟಿನಲ್ಲಿ ಈ ಕಾವ್ಯದಲ್ಲಿ ಕನಕನ ದೃಷ್ಟಿಯಲ್ಲಿ ಹೆಣ್ಣೆಂದರೆ ಸೌಂದರ್ಯದ ಪ್ರತೀಕ. ಉಷೆಯಾದರೇನು, ರತಿಯಾದರೇನು, ರುಕ್ಮಿಣಿಯಾದರೇನು ಇವರೆಲ್ಲ

ಮನ್ಮಥನ ಹೂ ಬಾಣಗಳೋ ಎಂಬಂಥ ಸೌಂದರ್ಯಾತಿಶಯವಿರುವವರು ಮಾತ್ರ. ಅವರಲ್ಲಿ ಯಾರಿಗೂ ವಿಶಿಷ್ಟ ವ್ಯಕ್ತಿತ್ವವಿಲ್ಲ. ಒಂದೇ ರೀತಿಯ ಸ್ತ್ರೀ ವರ್ಣನೆಗಳ ಭೋರ್ಗರೆತದಲ್ಲಿ ಈತ ಸ್ವಲ್ಪ ಗಮನವಿಟ್ಟು ಚಿತ್ರಿಸಿರುವ ಎರಡು ಮುಖ್ಯ ಪಾತ್ರಗಳೆಂದರೆ ರತಿ ಮತ್ತು ಚಿತ್ರಲೇಖೆ. ರತಿಯ ಪಾತ್ರಚಿತ್ರಣ ಅವಳ ಪ್ರೇಮಾತಿಶಯದ ಸ್ಪಷ್ಟ ಕಲ್ಪನೆ ನೀಡುತ್ತದೆ. ಶಿವನ ಉರಿಗಣ್ಣಿನಿಂದ ಸುಟ್ಟುಹೋದ ಮನ್ಮಥನು ನೆನೆದಾಗ ಮನದಲ್ಲಿ ಬರುವಂತೆ ಶಿವನಿಂದಲೇ ವರ ಪಡೆದು ಸುಟ್ಟುಹೋದವನ ಭಸ್ಮವನ್ನು ಶಿವನೇ ಧರಿಸುವಂತೆ ಮಾಡುವ ಮೂಲಕ ರತಿ, ಮನ್ಮಥನಿಗೆ ಪೂಜ್ಯತೆ ದೊರಕಿಸುತ್ತಾಳೆ. ಗಂಡನ ವಿಯೋಗವನ್ನು ಸಹಿಸಲಾರದೆ ಪ್ರಲಾಪಿಸುವ ಅವಳಿಗೆ ದುಃಖ ಮರೆತು, ಮನೆವಾರ್ತೆ ನೋಡಿಕೊ ಎಂದು ಸಖಿಯರು ಹೇಳಿದಾಗ 'ಸಂಸಾರವನ್ನು ಬಿಟ್ಟು ಹೋಗುವಾಗ ಹಾಲಿಗೆ ಹೆಪ್ಪು ಹಾಕಿದವರು ಯಾರು' ಎಂದು ಕೇಳುವಲ್ಲಿ ರತಿಯ ಅಪಾರ ಪತಿಪ್ರೇಮ ವ್ಯಕ್ತವಾಗಿದೆ. ಪತಿಯಿಲ್ಲದೆ ಯಾವ ವೈಭೋಗವೂ ಬೇಡ ಎಂದು ಅವಳು ಸಕಲ ವೈಭೋಗಗಳನ್ನು ತ್ಯಜಿಸಿ ಕಾಡಿಗೆ ತೆರಳುತ್ತಾಳೆ. ಶಂಬರಾಸುರ ಇವಳನ್ನು ಅಪಹರಿಸಿ ದಾಸಿಯಾಗಿಸಿದಾಗ ಮನ್ಮಥನು ಮರಳಿ ಜನ್ಮ ಪಡೆದು ತನ್ನ ಪತಿಯೇ ಆಗುವನೆಂಬ ದೇವವಾಣಿಯ ಮೇಲಿನ ಅಚಲ ವಿಶ್ವಾಸದಿಂದ ದೀರ್ಘಕಾಲ ಕಷ್ಟಗಳನ್ನು ತಾಳಿಕೊಂಡು ಪುನಃ ಮನ್ಮಥನನ್ನು ಮದುವೆಯಾಗುತ್ತಾಳೆ. ಕನಕ ರತಿಯ ಪಾತ್ರವನ್ನು ಆದರ್ಶ ಪ್ರೇಮಿಯನ್ನಾಗಿ ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾನೆ.

ಮೋಹನ ತರಂಗಿಣಿಯಲ್ಲಿ ಬೇರೆಲ್ಲ ಪಾತ್ರಗಳಿಗಿಂತ ಗಟ್ಟಿಯಾಗಿ ಚಿತ್ರಿತಗೊಂಡಿರುವ ಪಾತ್ರ ಚಿತ್ರಲೇಖೆ, ಬಾಣಾಸುರನ ಮಹಾಮಂತ್ರಿ ಕುಂಭಾಂಡನ ಮಗಳು ಹಾಗೂ ಬಾಣಾಸುರನ ಏಕೈಕ ಪುತ್ರಿ ಉಷೆಯ ಪ್ರಿಯಸಖಿ ಈ ಚಿತ್ರಲೇಖೆ. ಉಷೆಯ ಸ್ಮರತಾಪವನ್ನು ತಣಿಸಲು, ರಾತ್ರಿಕಳೆದು ಬೆಳಗಾಗುವುದರಲ್ಲಿ ಸ್ವರ್ಗ, ಮರ್ತ್ಯ, ಪಾತಾಳಲೋಕಗಳನ್ನೆಲ್ಲ ಅನ್ವೇಷಿಸಿ ಉಷೆಯ ಮನದನ್ನನಾದ ಅನಿರುದ್ಧನನ್ನು ಕರೆತಂದು ಒಲಿದ ಹೃದಯುಗಳ ಸಮಾಗಮವಾಗುವಂತೆ ಮಾಡುವ ಚಿತ್ರಲೇಖೆಯ ಸಾಹಸ ಪ್ರವೃತ್ತಿ, ಸ್ನೇಹಪರತೆ, ಮುಂದಾಲೋಚನೆ, ಚಾಕಚಕ್ಯತೆಗಳು ಬಹುವಾಗಿ ಗಮನ ಸೆಳೆಯುತ್ತವೆ. ಉಷೆಯ ಮನದನ್ನನಿಗಾಗಿ ಹುಡುಕುತ್ತಾ ದ್ವಾರಕಾಪುರಿಯನ್ನು ಪ್ರವೇಶಿಸಿ ಮನ್ಮಥನನ್ನು ನೋಡಿದ ಕೂಡಲೇ ಸಹಜವಾಗಿ ತಾನೇ ಮನ್ಮಥ ಬಾಧೆಗೆ ಈಡಾದಾಗ 'ಶಿವನು ಮನ್ಮಥನ ಗರ್ವವನ್ನು ಮೆಟ್ಟಿ ಭಸ್ಮಗೊಳಿಸಿದರೂ ಶ್ರೀಕೃಷ್ಣನು ಮತ್ತೆ ಇವನನ್ನೇಕೆ ಸೃಷ್ಟಿಸಿದೆ' ಎಂದು ಅಳುತ್ತಾಳೆ. ಕೊನೆಗೆ ಶಿವಮಂತ್ರವನ್ನು ಉಚ್ಚರಿಸಿ

ಸಾವರಿಸಿಕೊಳ್ಳುತ್ತಾಳೆ. ಗೆಳತಿಯ ಸ್ಮರತಾಪ ಶಮನಕ್ಕಾಗಿ ಕೊನೆಗೂ ಅನಿರುದ್ಧನ ಪತ್ತೆ ಹಚ್ಚಿ ಅವರ ಸಮಾಗಮವಾಗುವಂತೆ ಮಾಡಿದಾಗ, ತನ್ನ ಇಷ್ಟಾರ್ಥವನ್ನು ಈಡೇರಿಸಿದ ಗೆಳತಿಯನ್ನು ಬಿಗಿದಪ್ಪಿ 'ನಿನ್ನ ಋಣವನ್ನು ಎಷ್ಟು ಜನ್ಮದಲ್ಲಿ ತೀರಿಸುವೆನೋ' ಎಂದು ಉಷೆ ನುಡಿದಾಗ ಮೈಯನ್ನು ತುರಿಸಿದ ಕೈಗಳ ಋಣವನ್ನು ತೀರಿಸಬೇಕೆಂಬ ಶಾಸ್ತ್ರವುಂಟೆ ಎಂದು ಒಂದು ಮಾತಿನಲ್ಲಿ ತಮ್ಮಿಬ್ಬರ ಅವಿನಾಸಂಬಂಧವನ್ನು ಚಿತ್ರಲೇಖೆ ಸೂಚಿಸುತ್ತಾಳೆ. ಅನಿರುದ್ಧನಂತೂ 'ವಿವೇಕಯುತವಾಗಿ ಮಾಡಿದ ಯಜ್ಞ ಮೊದಲಾದ ಸತ್ಕರ್ಮಗಳ ಫಲವನ್ನೆಲ್ಲ ಧಾರೆ ಎರೆದು ಕೊಟ್ಟರೂ ನಾವು ಅವಳಿಂದ ಋಣಮುಕ್ತಲಾಗಲಾರೆವು. ಹುಟ್ಟಿದ ಮಕ್ಕಳಿಗೆ ಬೇಕಾದರೆ ಚಿತ್ರಲೇಖೆಯೆಂದು ಹೆಸರಿಡು' ಎಂದು ಹೃದಯತುಂಬಿ ನುಡಿಯುತ್ತಾನೆ. ಉಷಾ ಅನಿರುದ್ಧರ ಸಮಾಗಮದ ನಂತರವೂ ಚಿತ್ರಲೇಖೆಯ ಹೊಣೆಗಾರಿಕೆ ಮುಗಿಯುವುದಿಲ್ಲ. ಬಾಣಾಸುರ ಅನಿರುದ್ಧನನ್ನು ಹಿಡಿದು ತರುವುದಕ್ಕಾಗಿ ಆಳುಗಳನ್ನು ಅಟ್ಟಿ ಯುದ್ಧವೇ ಪ್ರಾರಂಭವಾದಾಗ ಅನಿರುದ್ಧನನ್ನು ರಕ್ಷಿಸುವುದಕ್ಕಾಗಿ ಚಿತ್ರಲೇಖೆಯೇ ಮಣಿಮಯವಾದ ರಣಯಂತ್ರ ನಿರ್ಮಿಸಿ ದಿವ್ಯಮಂತ್ರಶಕ್ತಿಯುಳ್ಳ ಶಸ್ತ್ರಾಸ್ತ್ರವನ್ನು ಕೊಟ್ಟು ಹರಸಿ ಕಳುಹಿಸುತ್ತಾಳೆ. ಇಲ್ಲೆಲ್ಲ ಚಿತ್ರಲೇಖೆಯ ಸಮಯಪ್ರಜ್ಞೆ, ಧೈರ್ಯ, ಅಚಲ ನಿಲುವುಗಳು ಮನಸೆಳೆಯುತ್ತವೆ. ಶ್ರೀಕೃಷ್ಣನೂ ಸಹ ಚಿತ್ರಲೇಖೆಯನ್ನು ಕುರಿತು ನೀನು ಮಾಡಿದ ಈ ಕೂಟವನ್ನು ಎಷ್ಟು ಹೊಗಳಿದರೂ ಸಾಲದು. ಅನಿರುದ್ಧನಿಗೆ ಜಗತ್ತಿನ ಕೋಮಲೆಯರ ಶಿರೋಮಣಿಯಾದ ಉಷೆಯನ್ನು ಕೂಡಿಸಿದೆ ಎಂದು ಪ್ರಶಂಸಿಸುತ್ತಾನೆ. ಚಿತ್ರಲೇಖೆಯ ಪಾತ್ರ ಕನಕದಾಸನನ್ನು ವಿಶೇಷವಾಗಿ ಸೆಳೆದಂತೆ ತೋರುತ್ತದೆ. ಏಕೆಂದರೆ ಮೋಹನ ತರಂಗಿಣಿಯ ಯಾವ ಪಾತ್ರಕ್ಕೂ ಕೊಡದಷ್ಟು ಪ್ರಾಮುಖ್ಯತೆಯನ್ನು ಇವಳ ಪಾತ್ರಕ್ಕೆ ಕೊಟ್ಟಿದ್ದಾನೆ. ಸ್ವತಃ ತನಗೂ ಮಧುರ ಭಾವನೆಗಳಿದ್ದರೂ ಅದನ್ನು ತೋರ್ಪಡಿಸಿಕೊಳ್ಳದೆ ಗೆಳತಿಯ ಆಸೆಯನ್ನು ಈಡೇರಿಸುವುದಕ್ಕಾಗಿ ನಿಸ್ವಾರ್ಥ ಪ್ರಯತ್ನ ಪಡುವ ಉದಾತ್ತ ಸ್ನೇಹಪರ ಹೆಣ್ಣಾಗಿ ಚಿತ್ರಲೇಖೆ ಚಿತ್ರಿತವಾಗಿದ್ದಾಳೆ. ಚಿತ್ರಲೇಖೆಯ ಪಾತ್ರದಲ್ಲಿ ಅವಳ ಜಾಣ್ಮೆ, ಸಹೃದಯತೆ, ಸ್ನೇಹಪರತೆ, ಸೌಂದರ್ಯದೃಷ್ಟಿ, ಅನಸೂಯಾ ಮನೋಭಾವಗಳಲ್ಲಿ ವ್ಯಕ್ತವಾಗಿವೆ.

ಕನಕದಾಸ ಚಿತ್ರಲೇಖೆಯಂತಹ ಹೆಣ್ಣಿನ ಪಾತ್ರವನ್ನು ಸೃಷ್ಟಿಸಿದರೂ ಮೋಹನ ತರಂಗಿಣಿಯಲ್ಲಿ ಒಟ್ಟಾರೆ ಆತ ಹೆಣ್ಣನ್ನು ಸೌಂದರ್ಯದ ಖನಿಯಾಗಿ ಕಂಡಿದ್ದಾನೆ. ಈ ಹೆಣ್ಣಿನ ವರ್ಣನೆ ಬಹಳ ಅತಿರೇಕದ್ದು ಉತ್ಪ್ರೇಕ್ಷೆಯದು ಎಂದು

ಬಹುಬಾರಿ ಅನ್ನಿಸಿದರೂ ಸೌಂದರ್ಯವನ್ನು ಗುರುತಿಸುವ ಕನಕದಾಸನ ರಸಿಕತೆ ಮತ್ತು ಧೋರಣೆ ಮೆಚ್ಚುಗೆಯಯಾಗುತ್ತದೆ. ಕನಕದಾಸರು ಸೌಂದರ್ಯಾರಾಧಕನಾಗಿದ್ದ ಕಾರಣದಿಂದಲೇ ಮನಮೋಹಕವಾದ, ನವೋನವೀನವಾದ ಹೆಣ್ಣಿನ ವರ್ಣನೆ ದೊರೆಯುವಂತಾಯಿತು ಎಂಬುದಂತೂ ಸತ್ಯ. 'ವ್ಯರ್ಥವಾಗಿ ಬ್ರಹ್ಮನ ಒಂದು ಕೋಟಿವರುಷಗಳವರೆಗೆ ಬದುಕಿದ್ದು ಸತ್ತರೇನು ? ಈ ಸುರುಳಿಗೂದಲ ಚೆಲುವೆಯ ತೋಳತೆಕ್ಕೆಯಲ್ಲಿ ಒಂದು ಗಳಿಗೆ ಬಾಳಿದರೆ ಸಾಕು ಮುಕ್ತಿ ದೊರೆಯುವುದು' ಎಂದು ನುಡಿದ ಅನಿರುದ್ಧನ ದನಿಯ ಜೊತೆ ಕನಕದಾಸನೂ ಧ್ವನಿಗೂಡಿಸಿರುವಂತೆ ತೋರುತ್ತದೆ.

ಮೋಹನತರಂಗಿಣಿಯ ಸ್ತ್ರೀವರ್ಣನಾ ಭೋರ್ಗರೆತಕ್ಕೆ ಪ್ರತಿಯಾಗಿ 'ನಳಚರಿತ್ರೆ' ಅತ್ಯಂತ ಸರಳ ಕಾವ್ಯ, ಇಲ್ಲಿ ಕಥಾ ನಿರೂಪಣೆಯಷ್ಟೆ ಕವಿಯ ಮುಖ್ಯ ಉದ್ದೇಶ, ಇಲ್ಲಿ ಬರುವ ಮುಖ್ಯ ಪಾತ್ರಗಳು ನಳ, ದಮಯಂತಿ ಇವೆರಡೇ...ಇದು ಪ್ರೇಮಕಥೆಯಾದರೂ ಶೃಂಗಾರಪ್ರಧಾನವಾದ ಕಾವ್ಯವಲ್ಲ, ದಮಯಂತಿಯ ಸೌಂದರ್ಯ ವರ್ಣನೆಗೆ ಇಲ್ಲಿ ಬೇಕಾದಷ್ಟು ಅವಕಾಶವಿದ್ದರೂ ಕವಿಗೆ ಅದು ಮುಖ್ಯವಲ್ಲ. ಪ್ರತಿಯಾಗಿ ಮೆಚ್ಚಿ ಮದುವೆಯಾದ ಪತಿಯಿಂದ ಅಗಲಿ ದೂರವಾದರೂ ಪುನಃ ಅವನನ್ನು ಪಡೆಯುವ ತನಕ ದಮಯಂತಿಯು ಅನುಭವಿಸುವ ದುಃಖ, ಕೋಟಲೆ ಹಾಗೂ ಆದರ್ಶ ಪ್ರೇಮವನ್ನು ಚಿತ್ರಿಸುವುದು ಕವಿಯ ಗುರಿ, ಹೀಗಾಗಿ ಇಲ್ಲಿ ದಮಯಂತಿಯ ಗುಣ, ಆದರ್ಶ, ಶೀಲಗಳ ಚಿತ್ರಣಕ್ಕೆ ಕೊಟ್ಟಷ್ಟು ಮಹತ್ವವನ್ನು ಕವಿ ಅವಳ ಬಾಹ್ಯ ಸೌಂದರ್ಯಕ್ಕೆ ಕೊಟ್ಟಿಲ್ಲ ದಮಯಂತಿಯ ವ್ಯಕ್ತಿತ್ವವನ್ನು ವರ್ಣಿಸುವ ಈ ಪದ್ಯವನ್ನು ನೋಡಬಹುದು;

ಗುಣದೊಳಗೆ ಶೀಲದಲ್ಲಿ ಮಾತಿನ
ಭಣಿತೆಯಲಿ ಗಾಂಭೀರ್ಯದಲಿ ವಿತ
ರಣದಲನುಪಮ ವಿದ್ಯೆಯಲಿ ಗುರುದೇವಭಕ್ತಿಯಲಿ
ಪ್ರಣುತಿಸಲು ಶರ್ವಾಣಿ ರತಿಯರಿ
ಗೆಣೆಯೆನಿಪ ಸುಂದರಿಗೆ ಮಿಕ್ಕಿನ
ಬಣಗು ಸತಿಯರು ಸರಿಯೆ ಲೋಕದೊಳೆಂದನಾ ಮುನಿಪ

ನಳನನ್ನೆ ಮದುವೆಯಾಗಬೇಕೆಂದು ಸಂಕಲ್ಪ ತಾಳಿದ ದಮಯಂತಿಯನ್ನು ದೇವಾಂಗನೆಯರು ಬಂದು ದೇವೇಂದ್ರನನ್ನು ವರಿಸುವಂತೆ ನಾನಾ ರೀತಿಯಲ್ಲಿ ಓಲೈಸಿದಾಗ "ಚಿತ್ತವೆನಗೊಬ್ಬನಲಿ ಸಿಲುಕಿತು ಮರಳಿಪೊಡೆ ಕಮಲಾಕ್ಷಗಳವಲ್ಲ" ಎಂದು ತನ್ನ ನಿರ್ಧಾರಕ್ಕೇ ಬದ್ಧವಾಗಿರುವಲ್ಲಿ ಅವಳ ದೃಢ ನಿಲುವು

ವ್ಯಕ್ತವಾಗುತ್ತದೆ–ಎಂಥ ಸಂದಿಗ್ಧ ಪರಿಸ್ಥಿತಿಯಲ್ಲೂ ಕಂಗೆಡದಿರುವುದು ದಮಯಂತಿಯ ಗುಣ. ಸ್ವಯಂವರ ಪ್ರಸಂಗದಲ್ಲಿ ದೇವೇಂದ್ರ, ಯಮ, ವರುಣ, ವಾಯುಗಳು ನಳನಂತೇ ಕಾಣಿಸಿಕೊಂಡಾಗ ಕಂಗೆಡದೆ ಮಂದಿರಕ್ಕೆ ಹೋಗಿ ಶಾರದೆಯನ್ನು ಸ್ತುತಿಸಿ ನಿಜವಾದ ನಳನನ್ನು ಕಂಡುಹಿಡಿಯುವ ಬಗೆಯನ್ನು ತಿಳಿದುಕೊಳ್ಳುತ್ತಾಳೆ.

ನಳನು ಜೂಜಿನಲ್ಲಿ ಸೋತಾಗ ಆತನನ್ನು ಸ್ವಲ್ಪವೂ ದೂಷಿಸುವುದಿಲ್ಲ. ನಳನ ಸದ್ಗುಣಗಳನ್ನು ಅವಳು ಸಂಪೂರ್ಣ ಅರಿತವಳು. ಆದ್ದರಿಂದಲೇ 'ಇದೆಲ್ಲವೂ ದೈವದ ಕರುಣೆ ತಪ್ಪಿದ ಪರಿಣಾಮ' ಎಂದಷ್ಟೆ ಹಲುಬುತ್ತಾಳೆ. ನಳನೊಂದಿಗೆ ಸಂತೋಷದಿಂದಲೇ ಕಾಡಿಗೆ ಹೊರಟ ದಮಯಂತಿಯ ಗುಣನಡತೆಗಳನ್ನು ಕವಿ ಹೀಗೆ ಪ್ರಶಂಸಿಸುತ್ತಾನೆ !...

ಏನನೆಂಬೆನು ಜೀಯ ಲೋಕದ
ಮಾನಿನಿಯೆ ದಮಯಂತಿ ಸತ್ಯ
ಜ್ಞಾನಿಯಲ್ಲಾ ಸತಿಯರಿಗೆ ಗುರು ಪತಿವ್ರತಾಗುಣದಿ

ಲಲಿತಹೇಮದ ತೂಗುಮಂಚದಿ ಹೊಳೆವ, ಮೇಲ್ವಾಸಿನಲಿ ಮಲಗುವ ಲಲನೆ ಬೆಂಕಿಯಲ್ಲಿ ಬಿದ್ದ ಬಾಳೆಯಂತೆ ಕಷ್ಟದಲಿ ಬೇಯುವುದನ್ನು ಕಂಡು ನಳ ಮರುಗಿದಾಗ–'ಮರುಗಲಿನ್ನೇಕರಸ ಬಿಡು ವಿಧಿ ಬರೆದ ಬರಹವ ತಪ್ಪಿಸಲು ಹರಿಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು.....' ಎಂದು ಧೈರ್ಯ ಹೇಳುತ್ತಾಳೆ. ತಂದೆಯ ಮನೆಗೆ ಹೋಗಿ ಸುಖವಾಗಿರುವಂತೆ ನಳನು ತಿಳಿಸಿದಾಗ ಅವಳು ಹೇಳುವ ಮಾತು ಅವಳ ಪತಿಪ್ರೇಮಕ್ಕೆ ಹಿಡಿದ ಕನ್ನಡಿ:

ನೆಳಲು ತನುವಿನ ಬಳಿಯೊಳಲ್ಲದೆ
ಚಲಿಸುವುದೆ ತಾ ಬೇರೆ ನಿಮ್ಮಡಿ
ನಳಿನದಲಿ ಸುಖದುಃಖವಲ್ಲದೆ ಬೇರೆ ಗತಿಯುಂಟೆ
ಹಳುವವೇ ಸಾಮ್ರಾಜ್ಯ ನಿನ್ನಡಿ
ನೆಳಲಿನಲಿ ನಾನಿರುವೆನಲ್ಲದೆ
ನಿಳಯವೇ ನನಗಡವಿ................. ॥

ಚೇದಿ ನೃಪನರಸಿಯ ಸೇವೆಗೆ ನಿಂತಾಗಲೂ ದಮಯಂತಿ ತಾನು ಅರಸುಕುಲದವಳೆಂದು ಬೀಗದೆ ನಮ್ರಳಾಗಿ ಇರಬಯಸುತ್ತಾಳೆ ; ದಮಯಂತಿಯ ಗುಣಗಳಲ್ಲಿ ಎಲ್ಲಕ್ಕಿಂತ ಹೆಚ್ಚು ಗಮನ ಸೆಳೆಯುವ ಅಂಶವೆಂದರೆ

ಆಕೆಯ ಕಾರ್ಯತತ್ಪರತೆ. ನಳನನ್ನು ಪತ್ತೆಹಚ್ಚುವುದಕ್ಕಾಗಿ ಅವಳು ಏರ್ಪಡಿಸುವ ಪುನಃಸ್ವಯಂವರ, ವಿರೂಪಗೊಂಡಿದ್ದ ವ್ಯಕ್ತಿ ನಳನೇ ಎಂಬುದನ್ನು ಪತ್ತೆ ಹಚ್ಚುವುದಕ್ಕಾಗಿ ಮಾಡುವ ಉಪಾಯಗಳು.... ಇಲ್ಲೆಲ್ಲ ದಮಯಂತಿಯ ಕಾರ್ಯಶೀಲತೆ ಬಹಳ ಚೆನ್ನಾಗಿ ವ್ಯಕ್ತವಾಗಿದೆ. ಕಾವ್ಯದ ಹೆಸರು ನಳಚರಿತ್ರೆಯೇ ಆದರೂ ಇಡೀ ಕಾವ್ಯದಲ್ಲಿ ಕಾರ್ಯಶೀಲೆಯಾಗಿರುವ ದಮಯಂತಿಯ ಪಾತ್ರವೇ ಹೆಚ್ಚು ಪರಿಣಾಮಕಾರಿಯಾಗಿದೆ.

ಮೋಹನ ತರಂಗಿಣಿಯ ನಂತರ ನಳಚರಿತ್ರೆಯನ್ನು ಗಮನಿಸುವಾಗ ಇಷ್ಟೊಂದು ಸಂಯಮ ಕನಕನಿಗೆ ಹೇಗೆ ಸಾಧ್ಯವಾಯಿತು ಎಂದು ವಿಸ್ಮಯವಾಗುತ್ತದೆ. ಕನಕನು ದಾಸನಾಗಿ ಪರಿವರ್ತನೆ ಹೊಂದಿ, ದಾಸಜೀವನದಲ್ಲಿ ಸಾಕಷ್ಟು ಕಾಲ ಪಳಗಿದ ಮೇಲೆ ಈ ಕೃತಿ ರಚನೆಯಾಗಿರಬಹುದು ಎಂಬ ಹೇಳಿಕೆ ಹೌದೆನಿಸುತ್ತದೆ, ಕನಕದಾಸನ ವೈಯಕ್ತಿಕ ಜೀವನದಲ್ಲಿ ಸಂಭವಿಸಿದ ಆತ್ಮೀಯ ಬಂಧುಗಳ ವಿಯೋಗವೂ ಈ ಪರಿವರ್ತನೆಗೆ ಕಾರಣವಾಗಿರಬಹುದು. ಒಟ್ಟಿನಲ್ಲಿ ವನಿತೆಯರೆಂದರೆ 'ಕೊಬ್ಬಿದ ಕುಚಗಳ'ರಮಣಿಯರಷ್ಟೆ ಎಂಬ ಭಾವ ಈ ಕಾವ್ಯದಲ್ಲಿ ಬದಲಾಗಿ ವನಿತೆ ಕಷ್ಟನಷ್ಟಗಳನ್ನು ಧೈರ್ಯದಿಂದ ಎದುರಿಸಿ, ಎರಡು ತೊಡರುಗಳನ್ನು ಪರಿಹರಿಸಿಕೊಳ್ಳುವ ಕ್ರಿಯಾಶೀಲೆಯೂ ಆಗಿರುತ್ತಾಳೆ ಎಂಬುದನ್ನು ಕನಕ ಗ್ರಹಿಸಿರುವಂತೆ ತೋರುತ್ತದೆ, ಕೀರ್ತನೆಗಳನ್ನು ರಚಿಸುವ ಕಾಲಕ್ಕೆ ಕನಕದಾಸ ಭವಬಂಧನಗಳ ವ್ಯಾಮೋಹವನ್ನು ಸಾಕಷ್ಟು ಕಳಚಿಕೊಂಡಿರಬೇಕು. ಆದ್ದರಿಂದಲೇ ಹೆಣ್ಣಿನ ಬಗ್ಗೆ ಒಂದು ನಿರ್ಲಿಪ್ತ ಭಾವನೆ ಬೆಳೆದಿರುವುದನ್ನು ಕನಕನ ಕೀರ್ತನೆಗಳಲ್ಲಿ ಗುರುತಿಸಬಹುದು. ಮೋಹನ ತರಂಗಿಣಿಯಲ್ಲಿ ಔಚಿತ್ಯ ಅನೌಚಿತ್ಯಗಳ ಪರಿವೆ ಇಲ್ಲದೆ ಹೆಣ್ಣಿನ ಅಂಗಾಂಗಗಳ ವರ್ಣನೆಯನ್ನು ಬಳಸುತ್ತಿದ್ದ ಕವಿ ಕೀರ್ತನೆಗಳಲ್ಲಿ ಹೆಣ್ಣನ್ನೇ ವಣಿಸುವಾಗಲೂ ಆಕೆಯ ಅಂಗಾಂಗಗಳ ವರ್ಣನೆ ಮಾಡಹೋಗುವುದಿಲ್ಲ. ಸರಸ್ವತಿಯ ವರ್ಣನೆ ಮಾಡುವ ಕವಿ ಮುಗ್ಧಮಗುವಿನಂತೆ ಸ್ತ್ರೀವರ್ಣನೆ ಮಾಡುತ್ತಾನೆ. ಇಷ್ಟಾಗಿಯೂ ಕವಿ ತಾನು ಸಂಪೂರ್ಣ ವಿರಕ್ತನೆಂದು ಸುಳ್ಳು ಸುಳ್ಳೇ ಹೇಳಿಕೊಳ್ಳುವುದಿಲ್ಲ. ಹೆಣ್ಣಿನ ರೂಪ ಸೌಂದರ್ಯಗಳು ಈಗಲೂ ತನ್ನನ್ನು ಆಕರ್ಷಿಸುತ್ತವೆ ಎಂಬ ಸತ್ಯವನ್ನು ವ್ಯಕ್ತಪಡಿಸುತ್ತ ಆ ಭಗವಂತನ ಲೀಲೆಗೆ ಅದನ್ನು ಆರೋಪಿಸುತ್ತಾನೆ. ತನು ನಿನ್ನದು... ಎಂಬ ಕೀರ್ತನೆಯಲ್ಲಿ 'ನವ ಮೋಹನಾಂಗೀರ ರೂಪವ ಕಣ್ಣಲಿ ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯಾ' ಎನ್ನುತ್ತಾನೆ. ಹೆಣ್ಣಿನ ಆಕರ್ಷಣೆಯನ್ನು ತಪ್ಪಿಸಿಕೊಳ್ಳುವುದು ಕಷ್ಟ ಎಂಬ ಅನಿಸಿಕೆ ಅನೇಕ ಕೀರ್ತನೆಗಳಲ್ಲಿ

ಪ್ರಸ್ತಾವಿತವಾಗಿದೆ. ಈ ರೀತಿ ಆಗದಂತೆ ಮಾಡು ಎಂದು ದೇವರಲ್ಲಿ ಮೊರೆ ಹೋಗುತ್ತಾನೆ ಕನಕ ! ' ದುರ್ಜನರ ಸಂಗ ಎಂದಿಗೊಲ್ಲೆನು ಹರಿಯೆ' ಎಂಬ ಕೀರ್ತನೆಯಲ್ಲಿ 'ಹಂಬಲಿಸಿ ಭವದ ಸುಖ ಮೆಚ್ಚಿದಾತನ ಸಂಗ ರಂಭ ಸ್ತ್ರೀಯರ ನೋಡಿ ಮೋಹಿಪನ ಸಂಗ ಬೇಡ' ಎನ್ನುತ್ತಾನೆ ಹರಿಭಕ್ತಿಯಲ್ಲಿ ಸಂಪೂರ್ಣವಾಗಿ ಲೀನವಾದ ಮನಸ್ಸಿಗೆ ಹೆಣ್ಣು ಅರುಚಿಕರ ವಸ್ತುವಾಗಿದ್ದಾಳೆ ಎಂಬುದನ್ನು ಅನೇಕ ಕೀರ್ತನೆಗಳಲ್ಲಿ ಪ್ರಸ್ತಾವಿಸಿದ್ದಾನೆ. "ಕೇಶವನೊಲುಮೆಯು ಆಗುವ ತನಕ' ಎಂಬ ಕೀರ್ತನೆಯಲ್ಲಿ 'ಅಂಗಜ ವಿಷಯಗಳನು ತೊರೆದಾತಗೆ ಅಂಗನೆಯರ ಸುಖ ಸೊಗಸೀತೆ, ಸುಖದುಃಖಗಳು ಹಿಂಗಿದ ಮನುಜಗೆ ಶೃಂಗಾರದ ಬಗೆ ಸೊಗಸೀತೆ' ಎನ್ನುತ್ತಾನೆ. ಭವಪ್ರಪಂಚದ ಆಕರ್ಷಣೆಗಳಲ್ಲಿ ರುಚಿ ಕಳೆದುಕೊಂಡ ಕನಕ ಇಷ್ಟುದಿನ ಜೀವನವನ್ನು ವ್ಯರ್ಥವಾಗಿ ಕಳೆದೆ ಎಂದು ಪಶ್ಚಾತ್ತಾಪವನ್ನೂ ವ್ಯಕ್ತಪಡಿಸಿದ್ದಾನೆ. 'ಏನು ಬರುವುದು' ಎಂಬ ಕೀರ್ತನೆಯಲ್ಲಿ 'ಎನ್ನದೆಂದು ತನ್ನದೆಂದು ಹೆಣ್ಣು ಹೊನ್ನು ಮಣ್ಣಿಗಾಗಿ ಘನ್ನವಾಗಿ ಬಾಯ ಬಿಡುತ ಬಂದೆ ಮೋಹನ' ಎಂದಿದ್ದಾನೆ. ಸಕಲವನ್ನು ಹರಿಯು ಪದತಲಕ್ಕೊಪ್ಪಿಸಿ ಹರಿಭಕ್ತಿಯೊಂದೇ ಜೀವನದ ಸಕಲಭಾಗ್ಯವೆಂದುಕೊಂಡ ಕನಕ :

ಭಾರ ನಿನ್ನದೊ ದೂರು ನಿನ್ನದೊ ಕೃಷ್ಣ
ನಾರಿ ಮಕ್ಕಳು ತನುಮನ ನಿನ್ನವಯ್ಯ
ಕ್ಷೀರದೊಳಗದ್ದು ನೀರೊಳಗದ್ದು ಗೋವಿಂದ
ಹೇರನೊಪ್ಪಿಸಿದ ಮೇಲೆ ಸುಂಕವೇತಕೆ ದೇವ ॥

ಎನ್ನುತ್ತಾನೆ. ಅದರೆ ಬಹುತೇಕ ಕೀರ್ತನೆಗಳಲ್ಲಿ ಕನಕ ಹೆಣ್ಣನ್ನು ಸಾಂಪ್ರದಾಯಿಕ ಚೌಕಟ್ಟಿನಲ್ಲಿಯೇ ನೋಡಿದ್ದಾನೆ. ಪತಿಭಕ್ತಿ, ಶೀಲಗಳೇ ಹೆಣ್ಣಿನ ಪರಮ ಧ್ಯೇಯವಾಗಿರಬೇಕು ಎಂದು ಕನಕ ಒಪ್ಪಿಕೊಂಡಿದ್ದಾನೆ.

ಹೇವವಿಲ್ಲದ ಹೆಣ್ಣು ಗಜುಗ ಬೆಳೆದ ಕಣ್ಣು
ಗಂಡಗಂಜದ ನಾರಿ ಅವಳೇ ಹೆಮ್ಮಾರಿ

ಸತ್ಯವಂತರ ಸಂಗವಿರಲು ಎಂಬ ಕೀರ್ತನೆಯಲ್ಲಿ

ಸೋತು ಹೆಣ್ಣಿಗೆ ಹೆದರಿ ನಡೆವ ಪುರುಷನ್ಯಾತಕೆ
ಸನ್ನೆಯನರಿತು ನಡೆಯದಿರುವ ಸತಿಯು ಯಾತಕೆ ॥

ಎಂದಿದ್ದಾನೆ. ಕೇಶವನೊಲುಮೆಯು ಆಗುವ ತನಕ ಎಂಬ ಕೀರ್ತನೆಯಲ್ಲಿ

'ಮಾನಿನಿಯ ಮನಸು ನಿಧಾನವಿರದಿರೆ
ಮಾನಾಭಿಮಾನಗಳುಳಿದೀತೆ'

ಎಂದು ಕೇಳುತ್ತಾನೆ. ಇಷ್ಟಾಗಿಯೂ ಕನಕ ಸಾಧನೆಯ ಪಥದಲ್ಲಿ ಹೆಣ್ಣು ಒಂದು ಕಂಟಕ ಎಂದು ಭಾವಿಸಿಲ್ಲ ಎಂಬುದು ಗಮನಾರ್ಹ.

ಸಂಸಾರ ಸಾಗರಮನುತ್ತರಿಸುವೊಡೆ
ಕಂಸಾರಿ ನಾಮವೊಂದೆ ಸಾಕು
ತನುವ ದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ
ವನಿತೆಯನು ಬಿಟ್ಟು ತಪವಿರಲು ಬೇಡ ॥

ಎಂಬ ಮಾತು ಕನಕನ ಅನುಭವದಿಂದ ಬಂದ ಮಾತು, ಕನಕದಾಸರ ಹೆಣ್ಣಿನ ಪರಿಕಲ್ಪನೆಯನ್ನು ವಿಶ್ಲೇಷಿಸಿದಾಗ ಒಟ್ಟಾರೆ ವ್ಯಕ್ತವಾಗುವ ಅಂಶವೇನೆಂದರೆ ಬಾಹ್ಯ ಸೌಂದರ್ಯದಿಂದಲೇ ಹೆಣ್ಣನ್ನು ಗುರುತಿಸುವ ಮೋಹನ ತರಂಗಿಣಿಯ ದೃಷ್ಟಿ, ನಳಚರಿತ್ರೆಯಲ್ಲಿ ಹೆಣ್ಣಿಗೆ ಒಂದು ನಿರ್ದಿಷ್ಟ ವ್ಯಕ್ತಿತ್ವವಿರುವುದನ್ನು ಅರ್ಥಮಾಡಿಕೊಳ್ಳುವ ಮಟ್ಟಕ್ಕೆ ಏರಿದೆ. ಕೀರ್ತನೆಗಳಲ್ಲಿ ಈ ಆಕರ್ಷಣೆಯ ಸತ್ಯವನ್ನು ಮನವರಿಕೆ ಮಾಡಿಕೊಂಡ ಹಾಗೂ ಪ್ರಾಪಂಚಿಕವಾದ ಎಲ್ಲ ಭೋಗಾಕರ್ಷಣೆಗಳೊಂದಿಗೆ ಹೆಣ್ಣಿನ ಆಕರ್ಷಣೆಯನ್ನೂ ಮೀರಬೇಕೆಂಬ ಆಕಾಂಕ್ಷೆಯಲ್ಲಿ ಪರ್ಯವಸಾನವಾಗಿದೆ.

[ಪ್ರಸ್ತುತ ಲೇಖನದಲ್ಲಿ ಮೋಹನತರಂಗಿಣಿಯ ಪದ್ಯಗಳನ್ನು ಉದಾಹರಿಸುವಾಗ ಡಾ. ಎಸ್. ಎಸ್. ಕೋತಿನ ಅವರ ಗದ್ಯಾನುವಾದವನ್ನೇ ನೀಡಲಾಗಿದೆ.]

## ಆಕರಗ್ರಂಥಗಳು :


| | |
|---|---|
| 1. ಹರಿದಾಸಹೃದಯ (೧೯೬೭) | ಡಾ. ಜಿ. ವರದರಾಜರಾವ್ ಪ್ರ. ಶಾರದಾ ಮಂದಿರ, ರಾಮಯ್ಯರ್ ರಸ್ತೆ ಮೈಸೂರು–೪. |
| 2. ಹರಿಭಕ್ತಿವಾಹಿನಿ (೧೯೮೩) | ಡಾ. ಜಿ. ವರದರಾಜರಾವ್ ಪ್ರ. ವಿಶ್ವಕನ್ನಡ ಸಮ್ಮೇಳನ, ೧೪–ಎ. ನೃಪತುಂಗ ರಸ್ತೆ, ಬೆಂಗಳೂರು–೫೬೦ ೦೦೨ |
| 3. ಜನಪ್ರಿಯ ಕನಕ ಸಂಪುಟ (ಶ್ರೀ ಕನಕದಾಸರ ಐದುನೂರನೇ ಜಯಂತ್ಯುತ್ಸವದ ನೆನಪಿಗಾಗಿ) (೧೯೮೮) | ಸಂ. ದೇ. ಜವರೇಗೌಡ ಎಲ್. ಎಸ್. ಶೇಷಗಿರಿರಾವ್ ದೇವೇಂದ್ರಕುಮಾರ ಹಕಾರಿ ಎಚ್. ಜೆ. ಲಕ್ಕಪ್ಪಗೌಡ, ಪ್ರ. ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–೫೬೦ ೦೦೨. |
| 4. ಮೋಹನ ತರಂಗಿಣಿ (ಕನಕದಾಸ ವಿರಚಿತ) (೧೯೭೪) | ಗದ್ಯಾನುವಾದ : ಡಾ. ಎಸ್. ಎಸ್. ಕೋತಿನ ಪ್ರ. ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–೧೮) |
| 5. ನಳಚರಿತ್ರೆ (ಕನಕದಾಸ ವಿರಚಿತ) (೧೯೮೫) | ಸಂ. ದೇ. ಜವರೇಗೌಡ ಪ್ರ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ೧೪–೩ಎ, ನೃಪತುಂಗ ರಸ್ತೆ. ಬೆಂಗಳೂರು–೫೬೦ ೦೦೨. |

# ಕನಕದಾಸರ ಸಾಹಿತ್ಯದಲ್ಲಿ ಐತಿಹಾಸಿಕ ಅಂಶಗಳು

**ರಾಗೌ**

ಕನಕದಾಸರ ಸಾಹಿತ್ಯದಲ್ಲಿ ಐತಿಹಾಸಿಕ ಅಂಶಗಳನ್ನು ಹುಡುಕುವಾಗ, ಎರಡು ರೀತಿಯಲ್ಲಿ ನೋಡುವುದು ಆವಶ್ಯಕ. ಕನಕದಾಸರ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ ವಿವರಗಳು ಒಂದು ಬಗೆಯವಾದರೆ, ಸಮಕಾಲೀನ ರಾಜಕೀಯಕ್ಕೆ ಸಂಬಂಧಿಸಿದ ವಿಷಯಗಳು ಇನ್ನೊಂದು ಬಗೆಯವಾಗುತ್ತವೆ. ವೈಯಕ್ತಿಕ ವಿವರಗಳಲ್ಲಿ ಸ್ಥಳ, ಕುಲ, ಕುಟುಂಬ ಗುರು, ದೊರೆತನ ಮುಖ್ಯವಾಗುತ್ತವೆ. ಕನಕದಾಸ ಸಂತನಾಗುವ ಪೂರ್ವದಲ್ಲಿ ಪಾಳೆಯಪಟ್ಟೊಂದರ ಅಧಿಪತಿಯಾದುದರಿಂದ, ಸಮಕಾಲೀನ ರಾಜಕೀಯದೊಡನೆ ಸಂಬಂಧ ಹೊಂದಿರುವುದನ್ನು ಕಾಣುತ್ತೇವೆ. ವಿಜಯನಗರದ ಕೃಷ್ಣದೇವರಾಯನ ಸಮಕಾಲೀನನಾಗಿ ಅವನ ಅಧೀನದಲ್ಲಿ ಕೆಲಸಮಾಡುತ್ತಿದ್ದ ಕನಕದಾಸ ಅವನೊಡನೆ ನೇರ ಸಂಪರ್ಕದಲ್ಲಿದ್ದಿರಬಹುದಾದ ಸಾಧ್ಯತೆ ಇದೆ. ಈ ಎಲ್ಲ ಅಂಶಗಳನ್ನೂ ಕೃತಿಗಳೇ ಒದಗಿಸುವ ಆಧಾರಗಳ ಮೂಲಕ ಪರಿಶೀಲಿಸಬಹುದು.

ಕನಕದಾಸರ ಕೃತಿಗಳಲ್ಲಿ, ಮುಖ್ಯವಾಗಿ 'ಮೋಹನತರಂಗಿಣಿ' ಮತ್ತು ಕೀರ್ತನೆಗಳಲ್ಲಿ ಕಾಗಿನೆಲೆಯ ಆದಿಕೇಶವ ಅಂಕಿತ ದೊರೆಯುತ್ತದೆ–ಇದರಿಂದ ಕನಕದಾಸರು ತಮ್ಮ ಜೀವಿತದ ಬಹುತೇಕ ಕಾಲವನ್ನು ಕಾಗಿನೆಲೆಯಲ್ಲಿ ಕಳೆದಿರಬೇಕೆಂದು ಸ್ಪಷ್ಟವಾಗುವುದು. ಹುಟ್ಟಿದ ಊರು ಬಾಡವಾದರೂ ಬಾಳಿದ ಸ್ಥಳ ಕಾಗಿನೆಲೆಯೆಂದು ಒಟ್ಟಾರೆ ಅಭಿಪ್ರಾಯ. ಆದರೆ ಉಳಿದ ಕೃತಿಗಳಲ್ಲಿನ ಪರಿಸ್ಥಿತಿಯೇ ಬೇರೆ. 'ರಾಮಧಾನ್ಯ ಚರಿತೆ'ಯ ಆರಂಭದಲ್ಲಿ 'ವರಪೌರ ಚನ್ನಿಗರಾಯ' ಮತ್ತು 'ವರಪುರದರಸು' ಎಂಬಿವುಗಳೂ, ಕೊನೆಯಲ್ಲಿ "ವರಪುರದಾದಿಕೇಶವನ ಚರಣದಂಕಿತವಾಗಿ ಪೇಳಿದ" ಎಂಬ ಮಾತೂ ಬರುತ್ತವೆ.[1] 'ನಳಚರಿತ್ರೆ'ಯ ಆದಿ–ಅಂತ್ಯಗಳಲ್ಲಿ "ವರಪುರದ ಚೆನ್ನಿಗರಾಯ–

1. ದೇ. ಜವರೇಗೌಡ (ಸಂ.), ರಾಮಧಾನ್ಯ ಚರಿತೆ. ಪದ್ಯ 1, 2 ಮತ್ತು 158

ನಂಕಿತಮಾಗಿ ಪೇಳುವೆ ಪ್ರಿಯದಿಂದಾಲಿಸುವ ಸುಜನರಿಗೀ ಮಹಾಕಥೆಯ" ಮತ್ತು "ವರಪುರದಾದಿದೇಶವನಮರವಂದಿತ" ಎಂಬ ಹೇಳಿಕೆಗಳಿವೆ.[2] 'ಹರಿಭಕ್ತಿಸಾರ'ದಲ್ಲಿಯೂ 'ಸುರಪುರನಿಲಯ ಚನ್ನಿಗರಾಯ' ಎಂಬ ಉಲ್ಲೇಖವಿದೆ; ಜೊತೆಗೆ 'ಕಾಗಿನೆಲೆಯಾದಿಕೇಶವನ' ಉಲ್ಲೇಖವೂ ಇದೆ. ಮಂಗಳ ಪದ್ಯದಲ್ಲಿ ಬರುವ "ಮಂಗಳಂ ಬೇಲೂರ ಚನ್ನಿಗರಾಯ ಕೇಶವನಿಗೆ"[3] ಎಂಬ ಮಾತು ಇಲ್ಲಿ ಗಮನಾರ್ಹ. ಇವುಗಳಲ್ಲಿ ವರಪುರ ಅಥವಾ ಬೇಲೂರ ಚನ್ನಿಗರಾಯನ ಅಂಕಿತವಿರುವುದನ್ನು ನೋಡಿದರೆ, ಬೇಲೂರು ಕನಕದಾಸರ ಇನ್ನೊಂದು ಕಾರ್ಯಕ್ಷೇತ್ರವಾಗಿರುವಂತೆ ತೋರುವುದು. ಬೇಲೂರಿನಲ್ಲಿದ್ದ ವೈಕುಂಠದಾಸರನ್ನು ಕನಕದಾಸ ಭೇಟಿಮಾಡಿದ್ದ ವಿಚಾರ ಸ್ಪಷ್ಟವೇ ಇದೆ. ಹೀಗಾಗಿ ಕನಕ ಇಲ್ಲಿ ಬಹಳಕಾಲ ವಾಸಮಾಡಿರಬೇಕು. ಉತ್ತರದ ಕಾಗಿನೆಲೆಯವರಾದ ಕನಕದಾಸರು ದಕ್ಷಿಣದ ಬೇಲೂರಿನ ಸಂಪರ್ಕಕ್ಕೆ ಬರಬೇಕಾದರೆ ವಿಶಿಷ್ಟ ಕಾರಣವೇ ಇರಬೇಕು. ಸೀತಾರಾಮ ಜಾಗೀರ್‌ದಾರ್ ತಮ್ಮ ಲೇಖನವೊಂದರಲ್ಲಿ, ಕೃಷ್ಣದೇವರಾಯನಿಂದ ಬೇಲೂರನ್ನು ಅಮರವಾಗಣಿಯಾಗಿ ಪಡೆದ ಬಾದಾಮಿಯ ಕೃಷ್ಣಪ್ಪನಾಯಕ ಇಲ್ಲಿಗೆ ಬರುವಾಗ, ಅವನ ಜೊತೆಯಲ್ಲಿ ಬಂದಂತಹ ದಂಡಿನ ಕುಟುಂಬಗಳಲ್ಲಿ ಕನಕನ ಕುಟುಂಬವೂ ಒಂದಾಗಿತ್ತೆಂದೂ, ಕೆಲಕಾಲದನಂತರ ಮತ್ತೆ ಸ್ವಗ್ರಾಮಕ್ಕೆ ತೆರಳಿರಬೇಕೆಂದೂ ಅಭಿಪ್ರಾಯಪಡುತ್ತಾರೆ.[4] ಇದು ವಿಚಾರಾರ್ಹ ವಿಷಯ, ಕನಕದಾಸರ ಕೀರ್ತನೆಗಳಲ್ಲಿ 'ಕಾಗಿನೆಲೆಯಾದಿಕೇಶವ' ಅಂಕಿತವಲ್ಲದೆ, 'ಬಾಡದಾದಿಕೇಶವ' 'ಚೆನ್ನಶ್ರೀರಂಗಪಟ್ಟಣದ ರಂಗೇಶ' 'ಬಂಕಾಪುರದ ಲಕುಮಿನರಸಿಂಹ' ಎಂಬ ಮಾತುಗಳೂ ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿ ಉಲ್ಲೇಖಿತವಾಗಿರುವ ಊರುಗಳ ಸಂಬಂಧ ಅವನಿಗಿತ್ತೆಂದು ತೋರುತ್ತದೆ.

ಕನಕದಾಸರು ಸಮಾಜದ ಕೆಳಸ್ತರಕ್ಕೆ ಸೇರಿದವರು. ಕೆಲವರು ಅವನನ್ನು ಬೇಡರವನೆಂದೂ, ಇನ್ನು ಕೆಲವರು ಕುರುಬರವನೆಂದೂ ಅಭಿಪ್ರಾಯಪಟ್ಟಿದ್ದಾರೆ; ಜೊತೆಗೆ 'ಕಬ್ಬಲಿಗ' ಗ್ರಹಿಕೆಯೂ ಇದೆ. ಬೇಡರವನೆಂಬುದಕ್ಕೆ ಆಧಾರಗಳು ದೊರೆಯವು. ಕನಕದಾಸರನ್ನು ಬೇಡ ಅಥವಾ ನಾಯಕರವನೆಂದು ಕರೆಯಲು 'ಕನಕನಾಯಕ' ಪದದಲ್ಲಿನ 'ನಾಯಕ' ಎಂಬುದು ಜಾತಿಸೂಚಕ ಎಂದು

---

2. ದೇ. ಜವರೇಗೌಡ (ಸಂ.), ಪು. 34 ಮತ್ತು 161
3. ಬಿ. ಶಿವಮೂರ್ತಿಶಾಸ್ತ್ರೀ ಮತ್ತು ಕೆ. ಎಂ. ಕೃಷ್ಣರಾವ್, ಹರಿಭಕ್ತಿಸಾರ, ಮಂಗಳಪದ್ಯ
4. ಪರಮೇಶ (ಸಂ.), ಕನಕಸುಧೆ, 1988, ಪು : 18-19

ತಿಳಿದದ್ದರಿಂದ ಆದ ತಪ್ಪು ಗ್ರಹಿಕೆಯೆಂದು ಕೆಲವರ ವಾದ.[5] ಕಬ್ಬಲಿಗ ಗ್ರಹಿಕೆಗೆ ಪುರಂದರದಾಸರ ಕೀರ್ತನೆಯೊಂದರಲ್ಲಿನ "ಕನಕದಾಸನು ಕಬ್ಬಲಿಗನೆಂದು ಅಣಕಿಸಿ ನುಡಿಯಬೇಡಿರಣ್ಣ" ಎಂಬ ಮಾತು ಕಾರಣವಾಗಿದೆ. ಇಲ್ಲಿಯೂ ಕುರುಬಜಾತಿಯನ್ನು ಕಬ್ಬಲಿಗ ಜಾತಿಯೆಂದು ತಪ್ಪಾಗಿ ಭಾವಿಸಿದ್ದರಿಂದ ಆದುದೆಂದು ಹೇಳಲಾಗಿದೆ[6] ಕನಕದಾಸರು ಕುರುಬರವನೆಂಬುದಕ್ಕೆ ಕೃತಿಗಳಲ್ಲಿಯೇ ಆಧಾರಗಳು ಸಿಗುವುದರಿಂದ ಇದೇ ಸರಿಯಾದುದೆಂದು ಕಾಣುತ್ತದೆ. ಇದಕ್ಕೆ "ನಾವು ಕುರುಬರು ನಮ್ಮ ದೇವರು ಬೀರಯ್ಯ, ಕಾವ ನಮ್ಮಜ್ಜ ನರಗುರಿಯ ಹಿಂಡುಗಳ"[7] ಎಂಬ ಮಾತನ್ನು ಉದಾಹರಿಸಬಹುದು. ಮಿಗಿಲಾಗಿ ಕನಕದಾಸರ ಒಂದು ಉಗಾಭೋಗದಲ್ಲಿ "ಕುರುಬರ ಕುಲದಲಿ ಜನಿಸಿದೆನಗೀಜನುಮದಲ್ಲಿ ಮುಕ್ತಿ ಎಂತು ತಂದೆ"[8] ಎಂದು ಸ್ಪಷ್ಟವಾಗಿರುವುದರಿಂದ ಭಿನ್ನಾಭಿಪ್ರಾಯಕ್ಕೆ ಎಡೆಯಿಲ್ಲವೆಂದೇ ತೋರುತ್ತದೆ.

ಕನಕದಾಸರಿಗೆ ಮೊದಲು 'ತಿಮ್ಮಪ್ಪ' ಎಂದು ಹೆಸರಿದ್ದಂತೆ ತಿಳಿಯುವುದು. ಈ 'ತಿಮ್ಮಪ್ಪ' 'ಕನಕನಾಯಕ'ನಾಗಿ ಮಾರ್ಪಟ್ಟಿದ್ದು ಒಂದು ವಿಶೇಷ. ಈ ಕುರಿತ ನಿಧಿಯ ಪ್ರಸಂಗ ಒಂದು ಪ್ರತಿಮೆಯಷ್ಟೆ. ಪಾಳೆಯಗಾರನಾಗಿದ್ದ ಕನಕನಿಗೆ ಧನಕನಕವಸ್ತು–ವಾಹನಗಳಿದ್ದುದು ಆಶ್ಚರ್ಯವೇನಲ್ಲ. ಹೀಗೆ ತನ್ನಲ್ಲಿದ್ದ ಐಶ್ವರ್ಯವನ್ನು ಸದ್ವಿನಿಯೋಗ ಮಾಡಿದ್ದರಿಂದ ಅವನಿಗೆ 'ಕನಕ' ಎಂದು ಹೆಸರು ಬಂದಿರಬಹುದು. ಇದಲ್ಲದೆ ಕೃತಿಗಳಲ್ಲಿ ಕನಕ ಕನಕಪ್ಪ ಎಂಬ ಹೆಸರುಗಳು ಕಂಡುಬರುವುದರಿಂದ, ಅವನ ಹೆಸರು ಇದಾಗಿರಲೂಬಹುದು : 'ದೇವಿ ನಮ್ಮ ದ್ಯಾವರು ಬಂದರು'[9] ಎಂಬ ಕೀರ್ತನೆಯಲ್ಲಿ 'ಕನಕಪ್ಪ' ಎಂದೇ ಅಂಕಿತವಿರುವುದು ಗಮನಾರ್ಹ.

ಕನಕದಾಸರ ಕೌಟುಂಬಿಕ ವಿವರಗಳು ಹೆಚ್ಚಾಗಿ ಸಾಂಪ್ರದಾಯಿಕ ಆಧಾರಗಳಿಂದ ದೊರೆಯುತ್ತವೆಯೇ ಹೊರತು, ಕೃತಿಗಳಿಂದಲ್ಲ. ಆದರೆ 'ಮೋಹನತರಂಗಿಣಿ'ಯಲ್ಲಿ 'ಕೃತಿವೇಳ್ದ ಕನಕದಾಸೋತ್ತಮ ಕೇಳ್ದವಳುರೆ ಸುಜ್ಞಾನವಧೂಟಿ' ಎಂಬ ಮಾತಿದೆ.[10] ಇದರ ಪ್ರಕಾರ ಕನಕದಾಸ ಹೇಳಿದ

5. ಜ್ಯೋತಿ ಹೊಸೂರ, ಕನಕದಾಸ ಜೀವನ ವಿಚಾರ, ಪು. 86
6. ಅದೇ. ಪು. 88-89
7. ಶ್ರೀಕನಕದಾಸರ ಹಾಡುಗಳು, ಕೀ 152
8. ಕನಕದಾಸರ ಕೀರ್ತನೆಗಳು, ಕೀ. 90
9. ಅದೇ. ಕೀ. 120
10. ಆರ್. ಸಿ. ಹಿರೇಮಠ (ಸಂ.) ಮೋಹನತರಂಗಿಣಿ, 2-1

ಕಥೆಯನ್ನು ಒಬ್ಬ ಹೆಣ್ಣು ಕೇಳಿದಳು ಎಂದು ಅರ್ಥವಾಗುವುದು. ಇದೇ ಗ್ರಂಥದಲ್ಲಿ 'ಮದ್ವಲ್ಲಭೆ' ಎಂದು ಸಂಬೋಧಿಸಿರುವುದರಿಂದ ಇವಳು ಅವನ ಹೆಂಡತಿ ಇರಬಹುದೆ ಎಂಬ ಸಂದೇಹ ಉಂಟಾಗುವುದು. ಕನಕದಾಸರಿಗೆ ಮಡದಿ ಮಕ್ಕಳು ಇದ್ದರೆಂಬುದಕ್ಕೆ ಕೆಲವು 'ಹರಿಭಕ್ತಿಸಾರ'ದ 'ಮಡದಿಯಾರೀ ಮಕ್ಕಳಾರೀ ಎಂಬುದನ್ನು ಉದಾಹರಿಸುತ್ತಾರೆ.[11] ಆದರೆ ಇದನ್ನು ಸಾರ್ವತ್ರಿಕವಾಗಿ ಹೇಳಿರಬಹುದಾದ ಸಾಧ್ಯತೆ ಇದೆ. ಮಡದಿ ಬಗೆಗೆ ಸಹಾಯಕವಾಗಿ 'ಮೋಹನ ತರಂಗಿಣಿ'ಯಲ್ಲಿ ಉಲ್ಲೇಖಿತವಾದ ಹೆಣ್ಣು ಆಧಾರವಾಗಬಹುದಾದರೂ, ಮಕ್ಕಳ ಬಗ್ಗೆ ಆಧಾರವಿಲ್ಲ. 'ಮೋಹನತರಂಗಿಣಿ'ಯ ಆ ಉಲ್ಲೇಖದಲ್ಲಿ ಕನಕನ ಹೆಂಡತಿಯ ರೂಪವನ್ನು ಕೆಲವರು ಕಂಡಿದ್ದಾರೆ.[12] ಮಗನ ಅಕಾಲಿಕ ಸಾವಿನಿಂದಾದ ಹೆಂಡತಿಯ ಲೋಕ ವಿಮುಖತೆಯನ್ನು 'ತರಂಗಿಣಿ'ಯಲ್ಲಿ ಬರುವ 'ರಹಿತಪ್ರಪಂಚೆ' ಮಾತಿನ ಮೂಲಕ ವಾಖ್ಯಾನಿಸಲಾಗಿದೆ.[13] ಮೊದಲು 'ತರಂಗಿಣಿಯಲ್ಲಿ ಉಲ್ಲೇಖಗೊಂಡಿರುವ 'ಹೆಣ್ಣು' ಕನಕನ ಹೆಂಡತಿ ಎಂದು ದೃಢಪಡಬೇಕಾಗಿದೆ : ಆವರೆಗೆ ಇವೆಲ್ಲ ಊಹೆಯಷ್ಟೆ.

ಕನಕದಾಸರ ಗುರುಗಳ ಪ್ರಸ್ತಾಪ ಇನ್ನೊಂದು ಮುಖ್ಯ ವಿಚಾರ. ಕನಕದಾಸರ ಗುರುಗಳು ವ್ಯಾಸರಾಯರೆಂಬುದು ಸ್ಪಷ್ಟವೇ ; ಕೆಲವರು ವಾದಿರಾಜರ ಹೆಸರನ್ನೂ ಹೇಳುತ್ತಾರೆ. ವಾದಿರಾಜರ ಉಲ್ಲೇಖ ಕನಕರ ಕೀರ್ತನೆಗಳಲ್ಲಿ ಬಂದಿರುವುದು ನಿಜ. ಕನಕ ಅವರನ್ನು ಕಂಡು ಅವರ ಸೇವೆಯನ್ನು ಕೈಗೊಂಡಿರಬಹುದಾದ ಸಾಧ್ಯತೆಯನ್ನು ಇದು ಹೇಳಬಹುದು. ವಾದಿರಾಜರನ್ನು ಕುರಿತು 'ಮೋಹನತರಂಗಿಣಿ'ಯಲ್ಲಿ 'ತ್ರಿವಿಕ್ರಮದಾಸಸ್ಯನಾದ' ಎಂದು ತನ್ನನ್ನು ಕರೆದುಕೊಂಡಿರುವುದರಿಂದ, ಅವರು ಗುರುವಾಗಿರಬಹುದೆಂದು ಸಂದೇಹ. ಸೋದೆಯಲ್ಲಿ ತ್ರಿವಿಕ್ರಮದೇವರನ್ನು ಪ್ರತಿಷ್ಠಿಸಿದ್ದರಿಂದ ವಾದಿರಾಜರಿಗೆ ಆ ಹೆಸರಿದೆ. ಕನಕ ಉಡುಪಿಗೆ ಬಂದಾಗ ವಾದಿರಾಜರನ್ನು ಭೇಟಿಮಾಡಿರಬಹುದು. ಆದರೆ ವ್ಯಾಸರಾಯರಂತೆ ವಾದಿರಾಜರು ನೇರಗುರುಗಳಾಗಿದ್ದರೆ ಎಂಬುದು ಪ್ರಶ್ನೆ. ಕನಕದಾಸರು ವ್ಯಾಸರಾಯ ಮತ್ತು

---

11. ಕನಕದಾಸಜೀವನವಿಚಾರ, ಪು. 59.
12. ಅದೇ ಪು. 58-59
13. ಅದೇ ಪು. 60.

ವಾದಿರಾಜ–ಈ ಇಬ್ಬರ ಕಾಲದಲ್ಲೂ ಬದುಕಿದ್ದರಿಂದ, ದಾಸಪರಂಪರೆಯನ್ನು ಒಪ್ಪಿಕೊಂಡು ಕೀರ್ತನೆಗಳನ್ನು ಬರೆದದ್ದರಿಂದ ವಾದಿರಾಜರೂ ಗುರುಗಳೆಂಬ ಅಭಿಪ್ರಾಯ ಬೆಳೆಯಲು ಕಾರಣವಾಗಿರಬೇಕು. ಕನಕದಾಸರ ಕೀರ್ತನೆಗಳಲ್ಲಿ ವ್ಯಾಸರಾಯರ ಉಲ್ಲೇಖ ಸಿಗುವುದು ಅಪರೂಪ. ಒಂದು ಕೀರ್ತನೆಯಲ್ಲಿ "ಕಾಟಕೆ ಕಾಸು ಕೊಟ್ಟವರು ರಾಯರ ಪಂಕ್ತಿ ಊಟವ ಬಯಸಿದಂತೆ ನಾ ಬೇಡಿದೆ" ಎಂಬ ಮಾತಿದೆ.[14] ಇಲ್ಲಿನ 'ರಾಯರ' ವ್ಯಾಸರಾಯರಿರಬೇಕು. ವ್ಯಾಸರಾಯರ ಶಿಷ್ಯನಾಗಿ ಕನಕನಿದ್ದನೆಂಬುದಕ್ಕೆ ಪುರಂದರದಾಸರ ಸುಪ್ರಸಿದ್ಧ ಕೀರ್ತನೆ ಬೇರೆ ಇದ್ದೇ ಇದೆ. ವ್ಯಾಸರಾಯ ಕನಕನನ್ನು ಶಿಷ್ಯನನ್ನಾಗಿ ಸ್ವೀಕರಿಸಿದಾಗ ತನ್ನವರ್ಗದ ಶಿಷ್ಯರಿಂದ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಪುರಂದರದಾಸರ "ಕನಕದಾಸನ ದಯಮಾಡಲು ವ್ಯಾಸಮುನಿ ಮಠದ ಜನರೆಲ್ಲ ದೂರಿ ಕೊಂಬುವರು" ಎಂಬ ಕೀರ್ತನೆ[15] ಈ ಸಂಘರ್ಷಕ್ಕೆ ಸಾಕ್ಷಿಯಾಗಿದೆ. ತೀರ್ಥ ಕೊಡುವಾಗ ಕನಕನನ್ನು ಕರೆಸಿದ್ದಕ್ಕೂ ವಿದ್ವಾಂಸರು ಆಕ್ಷೇಪಿಸಿದ ವಿಚಾರವನ್ನು ಪುರಂದರದಾಸರು ನಮೂದಿಸಿರುವರು. ಈ ಸಂದರ್ಭದಲ್ಲಿ ಕನಕನ ವ್ಯಕ್ತಿತ್ವವನ್ನು ಮನದಟ್ಟು ಮಾಡಿಕೊಡಲು ವ್ಯಾಸರಾಯ ಕೈಗೊಂಡೆರಡು ಪರೀಕ್ಷೆಗಳನ್ನು ಪುರಂದರರ ಪದ್ಯ ಹೇಳಿದೆ. ಹೀಗೆ ವ್ಯಾಸರಾಯರ ಶಿಷ್ಯನಾದಾಗ ಕನಕದಾಸ ಅನೇಕ ಕಿರುಕುಳಗಳಿಗೆ ಒಳಗಾಗಬೇಕಾಯಿತು. ಆದರೆ ಇಂತಹ ಪ್ರತಿರೋಧವನ್ನು ಜೀರ್ಣಿಸಿಕೊಳ್ಳುವಷ್ಟು ಶಕ್ತಿ ಕನಕನಿಗಿದ್ದುದರಿಂದಲೇ ಮೇಲೆ ಬರುವುದು ಸಾಧ್ಯವಾಯಿತು. ಆದ್ದರಿಂದಲೇ ಕನಕದಾಸರನ್ನು ಸುಲಭವಾಗಿ ನಿವಾರಿಸಿಕೊಳ್ಳಲು ಸಾಂಪ್ರದಾಯಿಕ ಪಂಡಿತರಿಗೆ ಸಾಧ್ಯವಾಗಲಿಲ್ಲ.

ಕನಕನು ವೈರಾಗ್ಯದತ್ತ ಪರಿವರ್ತನೆ ಹೊಂದಲು ಮೇಲಿಂದ ಮೇಲೆ ಒದಗಿದ ಆಘಾತಗಳು ಕಾರಣವಾದವು. ಈ ಹಿಂದೆಯೇ ತಂದೆಯನ್ನು ಕಳೆದುಕೊಂಡಿದ್ದ ಕನಕನ ಮೇಲೆ ತಾಯಿ ಮತ್ತು ಹೆಂಡತಿಯ ಸಾವು ತೀವ್ರತರವಾದ ಪರಿಣಾಮವನ್ನು ಬೀರಿರಬಹುದು. ಆದರೆ ಈ ಯಾವುದರ ಉಲ್ಲೇಖವೂ ಅವನ ಸಾಹಿತ್ಯದಲ್ಲಿ ದೊರೆಯದು. ಬದಲಾಗಿ ಯುದ್ಧದಲ್ಲಿ ಗಾಯಗೊಂಡು ಅನುಭವಿಸಿದ ನೋವು ಬದುಕಿನ ಬಗ್ಗೆ ಮರುಚಿಂತನೆ ಮಾಡಲು ಸಾಧ್ಯವಾದುದು ಮಾತ್ರ ಅವನ ಕೃತಿಗಳಲ್ಲಿದೆ. ಯುದ್ಧದಲ್ಲಿ ಗಾಯಗೊಂಡು

---

14. ಕನಕದಾಸರ ಕೀರ್ತನೆಗಳು ಕೀ. 150
15. ಜಿ. ವರದರಾಜರಾವ್(ಸಂ.) ಹರಿಭಕ್ತಿವಾಹಿನಿ, ಕೀ. 175

ಅನಿರೀಕ್ಷಿತ ಸಹಾಯ ಒದಗಿ ಬಂದುದರ ವಿಷಯವಾಗಿ ಕೀರ್ತನೆಗಳು ಪ್ರಸ್ತಾಪಿಸಿವೆ. ಉದಾಹರಣೆಗಾಗಿ ಈ ಸಾಲುಗಳನ್ನು ನೋಡಬಹುದು :

ಅರಿಗಳು ದಂಡೆತ್ತಿ ಬರಲು ನಾನವರೊಡನೆ
ಪರಿಪರೀ ಹೋರುತಿರಲು
ದುರುಳರೆನ್ನನ್ನು ಜಯಸಿ ಹರಿದಟ್ಟಿ ಬಂದೆನ್ನ
ಧರೆಗುರುಳಿದರೊ ಹರಿಯೆ ॥[16]
ಹೋದ ಜೀವನಕೆ ವೈದ್ಯನ ಸ್ಮರಣೆಯನ್ನಿಟ್ಟು
ವಾದಗುಣ ಬಿಡಿಸಿ ದಾಸನಮಾಡಿಕೊಂಡೆಯೊ ॥[17]

ಕನಕ ಪಾಳೆಯಗಾರರ ವಂಶದವನೆಂಬುದು ಒಂದು ಮುಖ್ಯ ವಿಚಾರ. ಕನಕನ ತಂದೆ ಬೀರಪ್ಪ ವಿಜಂಯುನಗರದ ದೊರೆಗಳಲ್ಲಿ ದಂಡನಾಯಕನಾಗಿದ್ದನೆಂಬುದು ಪ್ರತೀತಿ. ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿ ಇವರು ಚಿಕ್ಕ ಪಾಳೆಯಪಟ್ಟೊಂದನ್ನು ಆಳುತ್ತಿದ್ದರೆಂಬುದಕ್ಕೆ ಕನಕದಾಸರ ಕೀರ್ತನೆಗಳಲ್ಲಿಯೇ ಉಲ್ಲೇಖಗಳಿವೆ. "ದೊರೆತನವ ಬಿಡಿಸಿ ಸುಸ್ಥಿರಮಾರ್ಗ ತೋರಿಸಿದೆ". "ಮೊನೆಗಾರ ಧಣಿಯೆಂಬ ಧೈರ್ಯವ ಬಿಡಿಸಿ ಸೇವಕನ ಮಾಡಿಸಿದೆ", "ಕನಕ ದಳದಲಿ ಬಂದು ಕಲೆತನೆಂದರೆ ಪೌಜು ಕನಕುಮನಕಾಗುವುದು"[18]–ಇವು ಒಳ್ಳೆಯ ನಿದರ್ಶನಗಳಾಗಿವೆ. ಇವುಗಳಿಂದ ಅವನಿಗೆ 'ದೊರೆತನ' ವಿದ್ದುದೂ, ಅವನು ಅದರ 'ಧಣಿ'ಯಾಗಿದ್ದುದೂ ಸ್ಪಷ್ಟವಾಗುತ್ತದೆ : ಜೊತೆಗೆ ಕನಕ ಮಹಾಪರಾಕ್ರಮಿಯಾಗಿದ್ದುದ್ದು ತಿಳಿಯುತ್ತದೆ. ಪ್ರತ್ಯೇಕ ರಾಜವ್ಯವಸ್ಥೆ ಇದ್ದುದನ್ನು ಅವನ ಕೀರ್ತನೆಯ ಈ ವಿವರವೇ ಹೇಳುವುದು

ಸ್ವಾರಿ ಹೊರಟರೆ ಛತ್ರ ಭೇರಿಯು ನಗಾರಿಗಳು
ಭೋರೆಂಬ ಪೊಂಗಹಳೆ ಹರಿಯೆ
ಧೀರರಾಹುತರಾಣ್ಯ ಪರಿವಾರಲಂಕಾರ
ಭಾರವನು ತೆಗೆದೆಯೋ ಹರಿಯೆ ॥[19]

ಇಲ್ಲಿ ಸೂಚಿತವಾಗಿರುವ ಛತ್ರ, ನಗಾರಿ, ಕಹಳೆ, ರಾಹುತ, ಪರಿವಾರಗಳು ಅವನು ಪುಟ್ಟದೊಂದು ರಾಜ್ಯವನ್ನು ಆಳುತ್ತಿದ್ದನೆಂಬುದನ್ನು ದೃಢಪಡಿಸುತ್ತವೆ.

---

16. ಕನಕದಾಸರ ಕೀರ್ತನೆಗಳು, ಕೀ. 92
17. ಶ್ರೀ ಕನಕದಾಸರ ಹಾಡುಗಳು, ಕೀ. 174
18. ಅದೇ. ಕೀ. 173
19. ಅಲ್ಲೇ.

ಹೀಗೆ ಆಳುತ್ತಿದ್ದರೂ ವಿಜಯನಗರದ ಅರಸರಿಗೆ ಸಹಾಯಕರಾಗಿಯೇ ಇದ್ದರೆಂಬುದನ್ನು ಮರೆಯುವಹಾಗಿಲ್ಲ. "ಕಂದಾಯವನ್ನು ವಸೂಲು ಮಾಡುವುದು, ಕರೆಬಂದಾಗ ಅರಸರಿಗೆ ಯುದ್ಧಕ್ಕೆ ನೆರವಾಗುವುದು" ಬೀರಪ್ಪನ ಕೆಲಸವಾಗಿತ್ತೆಂದು ಹೇಳಲಾಗಿದೆ.[20] ಇದು ಕನಕದಾಸರ ಕಾಲಕ್ಕೂ ಮುಂದುವರೆದಿರಬಹುದು. ಕನಕನಿಗೂ ಕೃಷ್ಣದೇವರಾಯನಿಗೂ ನೇರಸಂಬಂಧವಿತ್ತೆಂಬುದಕ್ಕೆ 'ಮೋಹನತರಂಗಿಣಿ'ಯಲ್ಲಿ ಬರುವ ಇತಿಹಾಸ ಪ್ರಸಕ್ತಿಯೇ ನಿದರ್ಶನವಾಗಿದೆ.

ಕನಕದಾಸರು ಸಮಕಾಲೀನ ರಾಜಕೀಯ, ಸಾಮಾಜಿಕವಿಚಾರಗಳನ್ನು ತಮ್ಮ ಕೃತಿಗಳಲ್ಲಿ ಪ್ರಸ್ತಾಪಿಸಿದ್ದಾರೆ, ಮುಖ್ಯವಾಗಿ 'ಮೋಹನತರಂಗಿಣಿ'ಯನ್ನು ಗಮನಿಸಬೇಕು. ಇದರಲ್ಲಿ ನೇರವಾಗಿಯೇ ಈ ವಿಚಾರಗಳಿವೆ ; ಉಳಿದ ಒಂದೆರಡು ಕೃತಿಗಳಲ್ಲಿ ತುಂಬ ಸೂಚ್ಯವಾಗಿ ಸಾಂಕೇತಿಕವೆನ್ನುವಂತೆ ಇದರ ಉಲ್ಲೇಖವಿದೆ. ಕನಕದಾರ ಕೀರ್ತನೆಗಳಲ್ಲೂ ಕೆಲವು ಚಾರಿತ್ರಿಕ ಸಂಗತಿಗಳನ್ನು ಕಾಣಬಹುದು. ಅವು ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ವಿಚಾರಗಳೇ ಆಗಿವೆ ದಾಸನಾದ ಮೇಲೆ ತನ್ನ ಹಿಂದಿನ ಬದುಕನ್ನು ನೆನೆದು ವಿಷಾದಪಡುವ ರೀತಿಯಲ್ಲಿ ಇಂತಹ ರಚನೆಗಳು ಇವೆ. ಇವನ್ನು ಈ ಹಿಂದೆಯಷ್ಟೆ ಪರಿಶೀಲಿಸಿದ್ದೇವೆ. ಅವನ ಸೈನಿಕ ಜೀವನ, ಆ ಕುರಿತ ಅವನ ಅತೃಪ್ತಿ ಇಂತಹ ರಚನೆಗಳಲ್ಲಿ ಹೊಗೆಯಾಡುತ್ತದೆ.

ಕನಕದಾಸರು ವಿಜಯನಗರದ ಕಾಲದಲ್ಲಿ, ಅದರಲ್ಲೂ ಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ಇದ್ದವರು. ರಾಜಕೀಯ ಸಂಬಂಧವಾಗಿ ಕನಕ ಕೃಷ್ಣದೇವರಾಯನನ್ನು ಆಗಾಗ್ಗೆ ಭೇಟಿಮಾಡುತ್ತಿದ್ದಿರಬೇಕು. ಹೀಗಾಗಿ ವಿಜಯನಗರದ ವೈಭವವನ್ನು ಅವನು ಕಣ್ಣಾರೆ ಕಂಡಿರಲು ಸಾಧ್ಯ. ಈ ಅನುಭವವನ್ನು ಅವನು ತನ್ನ 'ಮೋಹನ ತರಂಗಿಣಿ'ಯಲ್ಲಿ ಬಿಡಿಸಲು ಯತ್ನಿಸಿರುವನು. ಇದು ವರ್ಣನೆ ರೂಪದಲ್ಲಿ ಮಾತ್ರ ಸಾಧ್ಯವಾಗಿದೆ. ಸಂಗತಿ ಅಥವಾ ಘಟನೆಗಳು ನೇರವಾಗಿ ಕಾಣಿಸಿಕೊಂಡಿಲ್ಲ. ವಿಜಯನಗರದ ವೈಭವದ ಬಿಡಿಚಿತ್ರಗಳನ್ನಷ್ಟೆ ಇಲ್ಲಿ ನೋಡುತ್ತೇವೆ. ಕನಕದಾಸರಿಗೂ ವಿಜಯನಗರಕ್ಕೂ ಇದ್ದ ನಿಕಟಸಂಬಂಧವನ್ನು ಈ ಚಿತ್ರಗಳು ದೃಢಪಡಿಸುತ್ತವೆ. ಆ ಕಾಲದ

20. ಎಚ್.ಎಂ. ಶಂಕರನಾರಾಯಣರಾವ್, ನಳಚರಿತ್ರೆಸಂಗ್ರಹ, ಪು. XIv
21. ರಂ. ಶ್ರೀ ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. 307

ಜನಜೀವನದ ಕೆಲವು ತುಣುಕುಗಳು ಇಲ್ಲಿ ದಾಖಲಾಗಿವೆ. ಪುರಾಣಕಥೆಯನ್ನು ಹೇಳುತ್ತಿದ್ದರೂ, ಅದರೊಳಗೆ ಸಮಕಾಲೀನ ಇತಿಹಾಸ ಪ್ರಸಕ್ತಿಯೇ ಕೆಲಸಮಾಡುವುದನ್ನು ಗುರುತಿಸುತ್ತೇವೆ. 'ಕೃಷ್ಣಚರಿತೆ' ಎಂದಿದನ್ನು ಕರೆದು 'ಕೃಷ್ಣದೇವರಾಯ ಚರಿತೆ' ಎಂಬ ಸೂಚ್ಯಾರ್ಥವನ್ನು ಅಪೇಕ್ಷಿಸಿರಬಹುದು.[22] ಆದರೆ ಕೃಷ್ಣದೇವರಾಯನ ರಾಜಕೀಯ ಸಾಧನೆಗಳೇನೂ ಇಲ್ಲಿ ಉಲ್ಲೇಖವಾಗಿಲ್ಲ. ಇಲ್ಲಿರುವುದು ಆ ಕಾಲದ ಒಂದು ವೈಭವದ ಚಿತ್ರ ಮಾತ್ರ. ಆ ಕಾರಣದಿಂದಲೇ ಇದು ಕೇವಲ ರಾಜಕೀಯ ಚಿತ್ರವಾಗಿರದೆ, ಸಾಮಾಜಿಕ ಚಿತ್ರವೂ ಆಗಿ ಪರಿಣಮಿಸಿದೆ.

ಕನಕದಾಸ ಪಾಳೆಯಗಾರನಾಗಿದ್ದುದರಿಂದ ವಿಜಯನಗರವನ್ನು ನೋಡುವ ಅನೇಕ ಅವಕಾಶಗಳಿದ್ದುವು. ಈ ಸ್ವಾನುಭವದ ಭಾಗವಾಗಿ ಇಲ್ಲಿನ ಸಮಕಾಲೀನ ವಿಚಾರಗಳು ಬಂದಿರುವ ಹಾಗೆ ಕಾಣುತ್ತದೆ, ಕವಿಯ ಸಾಮಾಜಿಕ ಪ್ರಜ್ಞೆಯ ಕುರುಹುಗಳಾಗಿ ಇಲ್ಲಿನ ರಾಜಸಭೆ, ಸಂಗೀತ, ನೃತ್ಯ, ಓಕುಳಿಯಾಟ, ಜಲಕ್ರೀಡೆ, ನವರಾತ್ರಿ, ಪುರರಚನೆ, ಯುದ್ಧವಿಧಾನ, ವನವಿಹಾರ, ಪುಷ್ಕರಣಿ, ಸತ್ರ, ಅಂಗಡಿಗಳ ವಿವರಗಳು ಬಂದಿವೆ. ಇವನ್ನು ಪರಿಶೀಲಿಸಿದಾಗ, "ಈ ಕಾವ್ಯ ಕಟ್ಟಡದ ಒಟ್ಟು ರಚನೆಯಲ್ಲಿ, ಕವಿ ತನ್ನ ಸಮಕಾಲೀನ ಜೀವನದ ಗಾರೆ ಇಟ್ಟಿಗೆ ಸುಣ್ಣ ಬಳಸಿದ್ದಾನೆ"[22] ಎಂದು ಹೇಳಬೇಕಾಗಿರುತ್ತದೆ. ಕರ್ನಾಟಕದ ಇತಿಹಾಸದಲ್ಲಿ ಶ್ರೀಕೃಷ್ಣದೇವರಾಯನ ಕಾಲವನ್ನು ರಾಜಕೀಯ–ಸಾಮಾಜಿಕ– ಸಾಂಸ್ಕೃತಿಕವಾಗಿ ಅತ್ಯುಚ್ಚಕಾಲವೆಂದು ಹೇಳಬಹುದು. ಇದಕ್ಕೆ ಕೆಲವು ಅಪೂರ್ವ ಮಾಹಿತಿಗಳು 'ಮೋಹನತರಂಗಿಣಿ'ಯಲ್ಲಿ ದೊರೆಯುತ್ತವೆ.

'ಮೋಹನತರಂಗಿಣಿ'ಯಲ್ಲಿ ಬರುವ 'ದ್ವಾರಕಾಪುರ'ದ ವರ್ಣನೆಯಲ್ಲಿ ವಿಜಯನಗರದ ವೈಭವವನ್ನು ಕಾಣಲು ಪ್ರಯತ್ನಿಸಲಾಗಿದೆ. ಇಲ್ಲಿ ತೊರೆ, ಅಗ್ರಹಾರ, ವೀರರಿಗೆ ಕೊಟ್ಟ ಪುರಗಳು, ಶಿವ ಮತ್ತು ವಿಷ್ಣು ದೇವಾಲಯಗಳು, ಸತ್ರಗಳು ಶೋಭಿಸುತ್ತಿದ್ದುವಂತೆ. ಕೆರೆ ಬಾವಿಗಳಿಲ್ಲದ ಕಡೆ ತೊರೆ ನೀರನ್ನು ಕಂಬಿಯಲ್ಲಿ ತರಿಸಿ ಮಾಡಿದ ಅರವಟ್ಟಿಗೆಗಳು ಇದ್ದುವೆಂದು ವರ್ಣನೆ. ಹಾಗೆಯೇ ಸಾಲುಮರಗಳ ಕೆಳಗೆ ಕರೆದು ಬೆಲ್ಲದ ಪಾನಕ ಕೊಡುವುದೂ ಇದ್ದಿತಂತೆ. ಆಲೆಯ ಮನೆಗಳು, ಜಪಶಾಲೆಗಳು, ಹೊಂಗಳಸದ ದೇವಾಲಯಗಳು, ಆನೆ

---

22. ಹಂಪನಾ ಮೋಹನ ತರಂಗಿಣಿ(ಸಂ. ಡಾ. ಎಸ್. ಎಸ್. ಕೋತಿನ) ಮುನ್ನುಡಿ ಪು.ಸ.

ಕುದುರೆಗಳ ವೈಹಾಳಿಯ ಬಯಲು ಸ್ಥಳಗಳೂ–ಇವೆಲ್ಲ ವಿಜಯನಗರದ ಚಿತ್ರಗಳೆಂಬುದರಲ್ಲಿ ಸಂಶಯವಿರಲಾರದು. ವಿಜಯನಗರದ ಕೋಟೆ, ಬೀದಿ, ಅಂಗಡಿ, ಮನೆ, ಅರಮನೆ ಮೊದಲಾದ ಚಿತ್ರಗಳನ್ನು ಕವಿ ಕೊಟ್ಟಿರುವುದು ಸರಿಯಾಗಿದೆ. ಅವನು ಕೊಟ್ಟಿರುವ ಅಂಗಡಿಯ ಮತ್ತು ವ್ಯಾಪಾರಿಗಳ ಕೆಲಸವು ಚಿತ್ರಗಳು ಹೀಗಿವೆ : ಹಲವು ಬಗೆಯ ಡಾಲು, ಗಂಡೆ, ಬಣ್ಣದವಸ್ತು, ರೇಶಿಮೆ ಬಟ್ಟೆ, ತೊಟ್ಟಿಲುಗಳಿದ್ದ ಅಂಗಡಿಯ ಸಾಲು : ವಜ್ರವೈಡೂರ್ಯ ಮುತ್ತು ರತ್ನಾಭರಣಗಳನ್ನು ಮಾಡುವ ಅಕ್ಕಸಾಲಿಗರ ಅಂಗಡಿಗಳು : ರತ್ನಗಳಿಗೆ ಸಾಣೆ ಹಿಡಿಯುವ ಸಾಣೆಗಾರರು ಮತ್ತು ಮುತ್ತಿಗೆ ಅಗಾಧ ಬೆಲೆ ಕಟ್ಟುವ ವ್ಯಾಪಾರಿಗಳು : ಹಣ ಬಂಗಾರದ ಕೊಪ್ಪರಿಗೆಗಳನ್ನು ಮುಂದಿಟ್ಟು ಕೊಂಡು ನಾನಾ ದೇಶದ ನಾಣ್ಯಗಳನ್ನು ಕಾಯುತ್ತ ಕುಳಿತ ಸೆಟ್ಟಿಗಳು : ಹಡಗಿನ ವ್ಯಾಪಾರದಲ್ಲಿ ಗಳಿಸಿದ ಹಣವನ್ನು ಭಾರಿ ಸಂಖ್ಯೆಯಲ್ಲಿ ತೂಕ ಮಾಡುವ ವ್ಯಾಪಾರಿಗಳು ಇತ್ಯಾದಿ. ಕೃಷ್ಣದೇವರಾಯನ ಕಾಲದಲ್ಲಿ ರಾಜ್ಯಕ್ಕೆ ಸಂದರ್ಶಿಸಿದ್ದ ಡೊಮಿಂಗೊ ಪಾಯಸ್ ವಿಜಯನಗರದ ಅರಮನೆ, ಉತ್ಸವ, ಮನೋರಂಜಕ ಕಾರ್ಯಕ್ರಮ ಮೊದಲಾದವುಗಳನ್ನು ವರ್ಣಿಸಿದ್ದಾನೆ. ಅವನು ವಿಜಯನಗರವನ್ನು ಕುರಿತು ಬರೆಯುತ್ತಾ ಒಂದು ಕಡೆ ಹೀಗೆ ಹೇಳಿದ್ದಾನೆ : "ಈ ನಗರದಲ್ಲಿ ಎಲ್ಲ ರಾಷ್ಟ್ರಗಳೂ ಎಲ್ಲ ಜನಾಂಗಗಳಿಗೂ ಸೇರಿದ ಜನಗಳನ್ನು ನೋಡಬಹುದು; ಇದಕ್ಕೆ ಇಲ್ಲಿ ನಡೆಯುವ ಅಗಾಧವಾದ ವ್ಯಾಪಾರವೂ ಬೆಲೆಯಾದ ಹರಳುಗಳೂ, ಅದರಲ್ಲಿಯೂ ವಜ್ರಗಳೂ, ಸಿಕ್ಕುವುದು ಕಾರಣವಾಗಿದೆ."[23] ಕನಕನ ಪೂರ್ವೋಕ್ತ ವರ್ಣನೆಯನ್ನು ಪಾಯಸ್‌ನ ಈ ಹೇಳಿಕೆಯು ಸಮರ್ಥಿಸುವುದನ್ನು ಕಾಣುತ್ತೇವೆ. ವಿಜಯನಗರದ ವೈಭವದ ಒಂದು ವಾಸ್ತವ ಚಿತ್ರ ದೊರಕಿದಂತಾಗಿದೆ.

ಕೃಷ್ಣದೇವರಾಯನಿಗೆ ಸಂಬಂಧಿಸಿದ ವೈಯಕ್ತಿಕ ವಿಚಾರಗಳು ಅಷ್ಟೇ ಮುಖ್ಯವಾಗಿವೆ– "ಶ್ರೀಕೃಷ್ಣದೇವರಾಯನ ಪಾದನಳಿನಕ್ಕೆ ಶಿರವಚಾಚಿದರು" (೪೧–೪೨) ಎಂಬುದರಲ್ಲಿ 'ಶ್ರೀಕೃಷ್ಣದೇವರಾಯ' ಎಂಬ ಉಲ್ಲೇಖ ನೇರವಾಗಿಯೇ ಬಂದಿದೆ. ಅವನು ಪರಾಕ್ರಮಿಯೂ ಸುಂದರನೂ ಆಗಿದ್ದನಂತೆ. ಕೃಷ್ಣದೇವರಾಯನ ತೇಜೋಮಯರೂಪದ ವರ್ಣನೆ "ಪರಿಪೂರ್ಣ ತೇಜೋಮಯ ಕೃಷ್ಣರಾಯನ ಸಿರಿಮೊಗಕಾಂತಿ" (೧೫–೯) ಎಂಬಲ್ಲಿ ಬಂದಿದೆ. ಕೃಷ್ಣರಾಯನ ಪ್ರಕಾಶಮಾನವಾದ ವ್ಯಕ್ತಿತ್ವದ ಮುಂದೆ ಉಳಿದ ರಾಜರು

---

೨೩. ಎಚ್. ಎಲ್. ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ, ಸಂಪುಟ ಎರಡು, ಪು. 369

ಮಂಕಾದರಂತೆ. ಬಹುಪರಾಕ್ರಮಿಯಾದ ಕೃಷ್ಣದೇವರಾಯನ ಒಂದು ಚಿತ್ರ "ಭುಜಬಲಭೀಮ ಸಾರುವಭೌಮಕೃಷ್ಣ" (೪೦-೬೪) ಎಂಬುದರಲ್ಲಿ ದೊರೆಯುತ್ತದೆ. ಇಲ್ಲಿನ 'ಸಾರುವಭೌಮ' ಮಾತು ಇತಿಹಾಸದ ಕೃಷ್ಣದೇವರಾಯನನ್ನೇ ಉದ್ದೇಶಿಸಿ ಹೇಳಿದ್ದೆಂಬುದು ಸ್ಪಷ್ಟ.[24] ಪಾಯಸ್ ಕೃಷ್ಣದೇವರಾಯನ ರೂಪವನ್ನು ಗಮನಿಸಿ "ರಾಜನು ಸುಮಾರು ಎತ್ತರವಾಗಿದ್ದು ಲಕ್ಷಣವಾಗಿದ್ದಾನೆ" ಎಂದು ಬರೆದಿರುವುದನ್ನು ಪರಾಕ್ರಮವನ್ನೂ ಗಮನಿಸಿ "Gallant and perfect in all things"[25] ಎಂದು ಹೇಳುವುದನ್ನು ಇಲ್ಲಿ ಹೋಲಿಸಿ ನೋಡಬಹುದು. ರತ್ನಮಯ ಮಂಟಪದ ಮಧ್ಯದ ಸಿಂಹಾಸನದಲ್ಲಿ ವಿಪುಲ ವೈಭವದಿಂದ ಶೋಭಿಸುತ್ತಿದ್ದ ಚಿತ್ರವನ್ನು "ವರರತ್ನ ಮಂಟಪ ಮಧ್ಯದ ಸಿಂಹವಿಷ್ಟರದಲ್ಲಿ ಶ್ರೀಕೃಷ್ಣರಾಯ ಪರಮೈಶ್ವರ್ಯದಿಂದೊಪ್ಪಿದ" (೩೬-೪) ಎಂಬುದರಲ್ಲಿ ಕಾಣುತ್ತೇವೆ. ಅರಮನೆಯ ದಂತದ ಸಭಾಮಂಟಪದಲ್ಲಿ 'ಸಿಂಹವಿಷ್ಟರದಲ್ಲಿ ಕುಳಿತು ಓಲಗ ನಡೆಸುತ್ತಿದ್ದ ವಿಚಾರವನ್ನು ಕವಿ ಇನ್ನೊಂದೆಡೆ (೩-೭೦) ಪ್ರಸ್ತಾಪಿಸಿದ್ದಾನೆ. ಕೃಷ್ಣದೇವರಾಯನ ಆಳಿಕೆ ಸುಖದಾಯಕವಾದುದೆಂದು ಇತಿಹಾಸ ಹೇಳುತ್ತದೆ, "ಕೃಷ್ಣ ಸುಖ ಸಾಮ್ರಾಜ್ಯವನಾಳಿದ ಮುದದೆ" (೪೨-೭೫) ಎಂಬ ಮಾತು ಇದನ್ನು ಸೂಚಿಸುತ್ತದೆ. ವಿಜಯನಗರವನ್ನು ವರ್ಣಿಸುತ್ತಾ "ಪ್ರಪಂಚದ ನಗರಗಳಲ್ಲಿ ಎಲ್ಲಾ ಸೌಕರ್ಯಗಳಿರುವ ನಗರವೆಂದರೆ ಇದು"[26] ಎನ್ನುವ ಪಾಯಸ್‌ನ ಮಾತನ್ನು ಇಲ್ಲಿ ಗಮನಿಸಬಹುದು.

ಕೃಷ್ಣದೇವರಾಯನಿಗೆ ಸಂಬಂಧಿಸಿದ ವಿವರಗಳಲ್ಲಿ ಅವನಿಗೆ ಮಗನಾದುದರ ಸೂಚನೆ ಸಿಗುವುದು ಒಂದು ಮುಖ್ಯ ಸಂಗತಿ. ಇದು ಕೂಡ ವರ್ಣನೆಯ ಭಾಗವಾಗಿಯೇ ಬಂದಿದ್ದರೂ, ಮಹತ್ವದ ಅಂಶವೆಂದು ತೋರುತ್ತದೆ. ಆ ಪದ್ಯ (೪-೭೦) ಹೀಗಿದೆ :

> ಜಗದೊಳು ಶ್ರೀಕೃಷ್ಣದೇವರಾಯಗೆ ಗಂಡು
> ಮಗನಾದ ಪರಮಸಂಭ್ರಮದಿ

---

೨೪. ಅದೇ ಪು. 362

೨೫. K.A. Neelakanta Sasthri, A History of South India p.278

೨೬. ಎಚ್.ಎಲ್. ನಾಗೇಗೌಡ, ಪ್ರವಾಸಿಕಂಡ ಇಂಡಿಯಾ, ಸಂಪುಟ ಎರಡು, ಪು. 369

ಅಗಣಿತ ವಿಧ್ಯಾಧಿಕರು ಬಂದಲಸದೆ
ಹೊಗರಿದರಬುಜಾಂಬಕನ ॥

ಇದರಲ್ಲಿ 'ಶ್ರೀಕೃಷ್ಣದೇವರಾಯ' ಎಂಬ ಮಾತು ಸ್ಪಷ್ಟವೇ ಇರುವುದರಿಂದ, ಅವನ ಪುತ್ರೋತ್ಸವವನ್ನೇ ಇದು ತಿಳಿಸುತ್ತಿರಬಹುದು. ಕೃಷ್ಣದೇವರಾಯನಿಗೆ ತಿರುಮಲರಾಯ ಎಂಬ ಮಗನಿದ್ದು, ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡನೆಂದು ಇತಿಹಾಸ ಹೇಳುತ್ತದೆ.[೨೭] ಪದ್ಯದಲ್ಲಿ ಸೂಚಿತನಾಗಿರುವ 'ಗಂಡುಮಗು' ಇವನೇ ಆಗಿರಬೇಕು. ಕೃಷ್ಣದೇವರಾಯನಿಗೆ ತಿರುಮಲದೇವಿ ಎಂಬ ಮಗಳೊಬ್ಬಳಿದ್ದು, ಅವಳು ಅಳಿಯ ರಾಮರಾಯನನ್ನು ವಿವಾಹವಾಗಿರುತ್ತಾಳೆ.

'ಜಲಕ್ರೀಡೆ' (ಸಂಧಿ ೧೪) ಭಾಗದಲ್ಲಿನ ಕೆಲವು ಚಿತ್ರಗಳು ವಿಜಯನಗರಕ್ಕೆ ಸಂಬಂಧಿಸಿವೆ. ಈ 'ಜಲಕ್ರೀಡೆ'ಯಲ್ಲಿ 'ಓಕುಳಿಯಾಟ' ಮುಖ್ಯವಾದುದು. ಇದರಲ್ಲಿ ಕೃಷ್ಣದೇವರಾಯ ಭಾಗವಹಿಸುತ್ತಿದ್ದನೆಂಬುದು ಗಮನಾರ್ಹ. ಓಕುಳಿಯಾಟ ಕೃಷ್ಣದೇವರಾಯನ ಪಟ್ಟಾಭಿಷೇಕವನ್ನು ನೆನಪಿಗೆ ತರುವಂತಿತ್ತು ಎಂಬುದನ್ನು "ಕೃಷ್ಣ ನಿನಗೆ ಪಟ್ಟಾಭಿಷೇಕವಿದೆಂಬಂತೆ" (೧೪–೨೫) ಎಂಬ ಸಾಲು ಹೇಳುತ್ತದೆ. ಜನರು ತಮ್ಮ ರಾಜನ ಮೇಲೂ ಓಕುಳಿಯನ್ನು ಸುರಿಯುತ್ತಿದ್ದುದು ವಿಶೇಷ. ತಮ್ಮ ಒಡೆಯನನ್ನು ಉತ್ಸಾಹಿಸಲು ಕೊಂಬು ಮತ್ತು ಜೀರ್ಕೊಳವೆಯಿಂದ ಓಕುಳಿಯನ್ನು ಎರಚಾಡುತ್ತಿದ್ದ ವಿವರಗಳನ್ನು ಪದ್ಯಗಳು ಕೊಡುತ್ತವೆ. ಚಿನ್ನದ ಹಂಡೆಗಳಲ್ಲಿ ಕುಂಕುಮರಸವನ್ನು ತುಂಬಿಕೊಂಡು ಹೆಂಗಳೆಯರು ಎರಚಾಡುತ್ತಿದ್ದುದು ಮೋಹಕವಾದುದು. ಓಕುಳಿಯಾಟದ ಸಂದರ್ಭದಲ್ಲಿ ಭೇರಿ, ಮದ್ದಳೆ, ಶಂಖ, ನಗಾರಿ, ಡಿಂಡಿಮ, ಡೋಲು, ತಂಬಟದ ಧ್ವನಿ ಮೊಳಗುತ್ತಿದ್ದುವೆಂದು ಕವಿಯ ಹೇಳಿಕೆ. ಈ ಸಡಗರದಲ್ಲಿ ರಾಜನನ್ನು ಒಳಗು ಮಾಡುತ್ತಿದ್ದುದನ್ನು ಕವಿ ವರ್ಣಿಸಿರುವನು (೧೪–೬೮) :

ನಮ್ಮೊಳು ನಾವೆ ಪೊಯ್ದಾಡುವುದೇಕೆಂದು
ಕಮ್ಮಲರ್ಗಂಧಗಂಧಿಯರು
ತಮ್ಮನಾಳುವ ಕೃಷ್ಣರಾಯನ ತುಡುಕಿದ
ಪೆರ್ಮೆಯನೇನ ಬಣ್ಣಿಪೆನು ॥

ಇದರಲ್ಲಿ 'ನಮ್ಮನಾಳುವ ಕೃಷ್ಣರಾಯ' ಎಂಬ ಮಾತು ಮುಖ್ಯವಾದುದು; ಇದು ಕೃಷ್ಣದೇವರಾಯನನ್ನು ಕುರಿತ ಮಾತೆಂಬುದರಲ್ಲಿ ಸಂಶಯವಿಲ್ಲ.

---

೨೭. ಅದೇ. ಪು. 283

ಜನಸ್ತೋಮದ ಸಂಭ್ರಮದಲ್ಲಿ ದೊರೆ ಕೃಷ್ಣದೇವರಾಯ ಪಾಲುಗೊಳ್ಳುತ್ತಿದ್ದ ವಿಶೇಷ ಸಂಗತಿಯ ಮೇಲೆ ಇದು ಬೆಳಕು ಚೆಲ್ಲುತ್ತದೆ. ಈ ಓಕುಳಿಯಾಟ ವಿಜಯನಗರದ ಕಾಲದಲ್ಲಿ ಆಚರಣೆಯಲ್ಲಿತ್ತೆಂದು ಹೇಳಬಹುದು.

'ಅನಿರುದ್ಧನ ನಗರಶೋಧನೆ' ಮತ್ತು 'ಅನಿರುದ್ಧನ ಬೇಟೆಯ ವರ್ಣನೆ'ಗಳಲ್ಲಿ ಕೂಡ ವಿಜಯನಗರಕ್ಕೆ ಸಂಬಂಧಿಸಿದ ವಿಷಯಗಳಿವೆ. ಅನಿರುದ್ಧ ನಗರ ಸಂಚಾರ ಸಮಯದಲ್ಲಿ ಕಂಡ ಚಿತ್ರಗಳು ವಾಸ್ತವವಾಗಿ ವಿಜಯನಗರದ ಚಿತ್ರಗಳೇ. ಇವುಗಳಲ್ಲಿ ಸುವರ್ಣ–ವೇದಿಕೆಯ ಶಾಲೆಗಳು. ಸಂಭ್ರಮಿಸುವ ಉಪ್ಪರಿಗೆಗಳು, ಸೂಳೆಗೇರಿಯ ಸೊಬಗು, ಚಂದ್ರಕಾಂತಶಿಲೆಯ ವೇದಿಕೆಗಳು ಮುಖ್ಯವಾದವು. ಇಲ್ಲಿನ ನಗರ ಕಾವಲುಗಾರರ ಚಿತ್ರ ಗಮನಾರ್ಹವಾದುದು. ಕೆರಗಳನ್ನು ಮೆಟ್ಟಿದ, ಉಡುಗೆಯ ಮೇಲೆ ನಡುಪಟ್ಟಿಧರಿಸಿ ಮತ್ತು ಅದರ ಮೇಲೆ ಕಿರುಗತ್ತಿಯನ್ನು ಕಟ್ಟಿದ, ಹೆದೆಯೇರಿಸಿದ ಬಿಲ್ಲುಗಳನ್ನು ಹೊಂದಿರುವ ತಳವಾರರು ಕಾವಲು ತಿರುಗುತ್ತಿದ್ದರೆಂದು ಕನಕದಾಸರು ಬರೆಯುತ್ತಾರೆ. ವಿಜಯನಗರದ ರಾತ್ರಿಗಸ್ತಿನ ಬಿಗಿವ್ಯವಸ್ಥೆಯನ್ನು ಇದು ಹೇಳುತ್ತಿರುವಂತೆ ತೋರುವುದು. ಅನಿರುದ್ಧನ ಬೇಟೆಯ ವರ್ಣನೆಯಲ್ಲಿ ವಿಜಯನಗರದ ರಾಜರು ಕೈಗೊಳ್ಳುತ್ತಿದ್ದ ಬೇಟೆಯ ವರ್ಣನೆಯ ಹಿನ್ನೆಲೆಯನ್ನು ಕೊಡುತ್ತಿರಬಹುದು. ದ್ವಾರಾವತಿಯಲ್ಲಿ ಹೆಸರಾಂತ ರಾಜಕುಮಾರರು ಜಾತಿ ಕುದುರೆಗಳನ್ನೇರಿ ಬೇಟೆಗೆ ಹೊರಡುತ್ತಿದ್ದರು (೯–೭) ಎನ್ನುವಲ್ಲಿ ವಿಜಯನಗರದ ಪ್ರಸಿದ್ಧ ರಾಜಕುಮಾರರ ವಿಷಯವೇ ಇರುವಂತಿದೆ. ಈ ರಾಜಕುಮಾರರ ಎಡಬಲದಲ್ಲಿ 'ಚಾಮರಛತ್ರವೆರಸಿ' (೧೯–೮) ಭಿಲ್ಲರ ಸಮೂಹ ಸಹ ನಡೆಯಿತೆಂದು ಕವಿ ಹೇಳುತ್ತಾನೆ. ಇಂತಹ ಕಡೆಗಳಲ್ಲಿ ರಾಜರ ವೈಹಾಳಿಯನ್ನು ಚಿತ್ರಿಸುವ ಕವಿಯ ಹವಣಿಕೆ ಇರಬಹುದು.

'ಮೋಹನತರಂಗಿಣಿ'ಯ ಯುದ್ಧವರ್ಣನೆಯಲ್ಲೂ ಕೆಲವು ವಾಸ್ತವ ಸಂಗತಿಗಳು ಇರಬಹುದು. ಉದಾಹರಣೆಗೆ 'ಪೆಟಲಂಬಿನವರು' (೩೬–೪೨) ಉಲ್ಲೇಖದಲ್ಲಿ ಕೆಲವರು ತುಬಾಕಿಯ ಉಪಯೋಗವನ್ನು ಕಂಡಿದ್ದಾರೆ : "ಪೆಟಲಂಬಿನವರ ಪಥಕಗಳನ್ನು ಹೇಳುವುದರಿಂದ ತುಬಾಕಿಯ ಉಪಯೋಗ ಆ ವೇಳೆಗೆ ಪ್ರಾರಂಭವಾಗಿದ್ದಿತೆಂದು ತಿಳಿಯಬಹುದು."[28] ರಕ್ಷಣಾವ್ಯವಸ್ಥೆಯನ್ನು ಗಮನಿಸುತ್ತಾ "ಮದ್ದುಗುಂಡಿನ ಪಡೆಯಿಂದ ಕೂಡಿತ್ತು[29]" ಎಂದು ಹೇಳುವ ನ್ಯೂನಿಜ್‌ನ ಹೇಳಿಕೆಯು ಇದನ್ನೇ ಸೂಚಿಸುತ್ತದೆ.

---

೨೮. ಮೋಹನತರಂಗಿಣಿ ಸಂ. ಎಸ್. ಎಸ್. ಕೋತಿನ, ಮುನ್ನುಡಿ, ಪು xii
೨೯. ಕರ್ಣಾಟಕದ ಪರಂಪರೆ, ಸಂಪುಟ ಎರಡು, ಪು. ೪೦

ಹಾಗೆಯೇ ಶ್ರೀಕೃಷ್ಣ ಬಾಣಾಸುರನ ಮೇಲೆ ಯುದ್ಧಕ್ಕೆ ಹೊರಟದ್ದರಲ್ಲಿ ನಿರ್ದಿಷ್ಟ ಚಾರಿತ್ರಿಕ ಸಂದರ್ಭವನ್ನು ಗುರುತಿಸಲಾಗಿದೆ. "ಶ್ರೀಕೃಷ್ಣದೇವರಾಯನು ಆದಿಲಶಾಹನ ವಶದಲ್ಲಿದ್ದ ರಾಯಚೂರು ಕೋಟೆಯನ್ನು ಮುತ್ತಿಗೆ ಹಾಕಿದ್ದನ್ನು ಮೆಲುಕುಹಾಕುತ್ತಾ ಕವಿ ಅದನ್ನು ಕೃಷ್ಣನು ಬಾಣಾಸುರನ ಮೇಲೆ ಯುದ್ಧಕ್ಕೆ ಹೊರಟ ಭಾಗದಲ್ಲಿ ಬೆಸೆಯುತ್ತಾನೆ."[30] ಈ ಅಭಿಪ್ರಾಯ ರೋಚಕವಾಗೇನೊ ಇದೆ. ಆದರೆ ಕೃತಿಯಲ್ಲಿ ಇದಕ್ಕೆ ಸೂಚನೆಗಳಿಲ್ಲ. ಇದು ಊಹೆ ಮಾತ್ರ. ಹೀಗೆ ಪ್ರತಿ ಪುರಾಣ ಘಟನೆಯನ್ನೂ ಐತಿಹಾಸಿಕವಾದ ಯಾವುದಾದರೂ ಘಟನೆಗೆ ತಳುಕು ಹಾಕುತ್ತಾ ಹೋದರೆ ಅದಕ್ಕೆ ಕೊನೆಯಿರುವುದಿಲ್ಲ. ಸೂಚನೆ ಸಿಕ್ಕಿದಾಗ ಮಾತ್ರ ಇತಿಹಾಸದ ಅರ್ಥವನ್ನೂ ನಿಷ್ಪನ್ನಗೊಳಿಸುವುದು ಸೂಕ್ತವೆನಿಸುತ್ತದೆ.

'ಮೋಹನತರಂಗಿಣಿ'ಯಲ್ಲಿ ಅನೇಕ ಐತಿಹಾಸಿಕ ಅಂಶಗಳಿವೆ ಎಂಬುದು ನಿಜ. ಅವು ಕಾವ್ಯದ ತುಂಬ ಚದುರಿಕೊಂಡಿವೆ ; ಕೆಲವು ಸಂಧಿಗಳಲ್ಲಿ ಸಾಂದ್ರವಾಗಿವೆ. ಆದರೆ ಇವು ರಾಜಕೀಯ ಸ್ವರೂಪದವು ಎನ್ನುವುದಕ್ಕಿಂತ ಸಾಮಾಜಿಕ ಅಥವಾ ಸಾಂಸ್ಕೃತಿಕ ಸ್ವರೂಪದವು ಎನ್ನುವುದು ಸರಿಯಾದುದು, ರಾಜಕೀಯ ಸಂಗತಿಗಳ ಪ್ರಸ್ತಾಪ ಕಡಿಮೆಯಿರುವುದು ಇದಕ್ಕೆ ಕಾರಣ. ಸಮಕಾಲೀನ ಜೀವನಕ್ಕೆ ಸ್ಪಂದಿಸಿದವರು ಕನಕದಾಸರು. ವಿಜಯನಗರದ ಅರಸರಲ್ಲಿ ಅಧಿಕಾರದಲ್ಲಿದ್ದುದರಿಂದ ವಿಜಯನಗರದ ವೈಭವವೂ ಕೃಷ್ಣದೇವರಾಯನ ಸ್ನೇಹವೂ ಅವನ ಅಂತರಂಗಕ್ಕೆ ಬಂದಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಆ ಸಂತೋಷವನ್ನು ತನ್ನ 'ಮೋಹನತರಂಗಿಣಿಯ'ಯಲ್ಲಿ ಹಂಚಿಕೊಂಡಿದ್ದಾನೆ. ಆ ಕೃತಿಯ ಕೃಷ್ಣನ ಪಾತ್ರದಲ್ಲಿ ಕೃಷ್ಣದೇವರಾಯನನ್ನು ಕಾಣುವುದರ ಮೂಲಕ ಸಮಕಾಲೀನ ಇತಿಹಾಸವನ್ನು ಅಭಿವ್ಯಕ್ತಿಸಿದೆನೆಂಬ ತೃಪ್ತಿಗೆ ಒಳಗಾಗಿರಬೇಕು. ವಿಜಯನಗರದ ಔನ್ನತ್ಯವನ್ನು 'ಮೋಹನತರಂಗಿಣಿ'ಯಲ್ಲಿ ಕೊಟ್ಟಂತೆ, ವಿಜಯನಗರದ ಅರಸರು ರಕ್ಕಸತಂಗಡಿಯಲ್ಲಿ ಸೋತು ಕೆಲಕಾಲ ತೊಂದರೆಗೊಳಗಾಗಿ ಮತ್ತೆ ಅಧಿಕಾರಕ್ಕೆ ಬಂದುದನ್ನು 'ನಳಚರಿತ್ರೆ'ಯಲ್ಲಿ ವರ್ಣಿಸಿರಬಹುದೆಂದು ಕೆಲವರ ಅಭಿಪ್ರಾಯವಾಗಿದೆ.[31]. ಇದು ನಿಜವಿರಬಹುದಾದರೂ, ವೈಯಕ್ತಿಕ ಜೀವನದ ನೋವಿನ ಅಭಿವ್ಯಕ್ತಿಯೂ 'ನಳಚರಿತ್ರೆ'ಯಲ್ಲಿ ಕೆಲಸಮಾಡಿರುವ ಸಾಧ್ಯತೆಯಿದೆ. ಇಷ್ಟಕ್ಕೆ "ಅವರು ಶ್ರೇಷ್ಠಸಾಹಿತಿಯಾದಂತೆ ಪ್ರಸಿದ್ಧ ಇತಿಹಾಸಕಾರರೂ ಆಗಿದ್ದಾರೆ"[32] ಎಂದು

30. ಮೋಹನತರಂಗಿಣಿ ಸಂ. ಎಸ್. ಎಸ್. ಕೋತಿನ, ಮುನ್ನುಡಿ ಪು. xii
31. ಬಿ.ಎಸ್. ಸಣ್ಣಯ್ಯ, ಮಹಾತ್ಮ ಕನಕದಾಸ ಪ್ರಶಸ್ತಿ, ಪು. 96
32. ಅದೇ. ಪು. 99

ಹೇಳುವುದು ಸರಿಯಲ್ಲ. ಅವರ ಒಂದೆರಡು ಗ್ರಂಥಗಳಲ್ಲಿ ಮುಖ್ಯವಾಗಿ 'ಮೋಹನತರಂಗಿಣಿ'ಯಲ್ಲಿ ಚರಿತ್ರಾಂಶಗಳು ಬಂದಿವೆಯೆಂಬುದು ನಿಜ. ಆದರೆ ಅವನ್ನು ಇತಿಹಾಸಕಾರನ ದೃಷ್ಟಿಯಿಂದ ಬರೆದವುಗಳಲ್ಲ. ಇತಿಹಾಸದ ಸಂವೇದನೆ ಇತ್ತೆಂದು ಮಾತ್ರ ಹೇಳಬಹುದು.

# ಕನಕದಾಸರಲ್ಲಿ ಪೌರಾಣಿಕ ಪ್ರಜ್ಞೆ

**ಮಳಲಿ ವಸಂತಕುಮಾರ್**

ಕನಕರು ನೆಲದೊಡಲ ಚೇತನ; ಅಪ್ಪಟ ಶೂದ್ರ ಸತ್ತ್ವ ಅವರಲ್ಲಿ ವಿಜೃಂಭಣೆಗೊಂಡಿದೆ. ಅವರು ಯೋಗಿ ಮಾತ್ರವಲ್ಲ ಕ್ರಾಂತಿಕಾರಿ ಕೂಡ. ಕ್ರಾಂತಿಯೋಗಿ ಎಂಬ ಮಾತು ಕನಕರಿಗೆ ಅನ್ವರ್ಥ. ವ್ಯಾಸರೂ, ಪುರಂದರದಾಸರೂ ಅವರನ್ನು ಮೆಚ್ಚಿ ಹಾಡಿ ಹೊಗಳಿದ್ದಾರೆ, ಶೂದ್ರನೊಬ್ಬ ಮಹಾಯೋಗಿಯಾಗಿ ಉತ್ತಮ ವರ್ಗಕ್ಕೆ ಸೇರಿದ ಸಂತರಿಂದ ಪ್ರಶಂಸೆಗೆ ಒಳಗಾಗುವ ಒಂದು ಐತಿಹಾಸಿಕ ದಾಖಲೆ ಇಲ್ಲಿ ಕಾಣಸಿಗುತ್ತದೆ. ಪುರಾಣದಲ್ಲಿ ವಿಶ್ವಾಮಿತ್ರರ ವಿಚಾರವನ್ನು ಬಿಟ್ಟರೆ ಬೇರೆ ಇಂತಹ ಪ್ರಸಂಗ ಕಂಡುಬರುವುದು ಬಹಳ ಅಪರೂಪ.

ತಪಸ್ಸು ಮತ್ತು ಜ್ಞಾನ ಹಿಂದೆ ಉತ್ತಮರು ಎನಿಸಿಕೊಂಡವರ ಸ್ವತ್ತಾಗಿತ್ತು ತಪಸ್ವಿಗಳ ವಿರುದ್ಧವಾದ ಆಂದೋಳನ ರಾಕ್ಷಸರಲ್ಲಿ ಕಂಡುಬಂತು. ಆದರೆ ದೊರೆತ ಫಲ ಉದ್ದೇಶಿತವಾಗಲಿಲ್ಲ. ತಪಸ್ವಿಗಳು ಆರಾಧನೆಗೂ ರಾಕ್ಷಸರು ನಿಂದನೆಗೂ ಗುರಿಯಾದರು. ತಪಸ್ಸಿನ ವರ್ಜನೆಯಾಗಲಿ, ಅದರ ವಿರುದ್ಧವಾದ ಪ್ರತಿಭಟನೆಯಾಗಲಿ ಅಜ್ಞಾನದ ಪ್ರತೀಕ. ತಪಸ್ಸನ್ನು ವಶಪಡಿಸಿಕೊಳ್ಳುವ ಕ್ರಿಯೆ ಜ್ಞಾನದ ದ್ಯೋತಕ. ಭೌತಿಕಬಲ ಸಂಪನ್ನರಾದ ಕನಕರು ಅದರ ಮತಿಯನ್ನು ಅರಿತಿದ್ದರು. ಹೀಗಾಗಿ ಅದನ್ನು ವರ್ಜಿಸಿ ಬೌದ್ಧಿಕ ಬಲವನ್ನು ಅವಲಂಬಿಸಿದರು. ಉತ್ತಮರ ಸ್ವತ್ತಾಗಿದ್ದ ತಪಸ್ಸನ್ನು ತಮ್ಮದಾಗಿಸಿಕೊಂಡು ಋಷಿತ್ವಕ್ಕೇರಿದರು. ನಿಜವಾದ ಬಂಡಾಯ ಋಷಿಗಳ ನಿಂದನೆಯಲ್ಲ. ಋಷಿತ್ವದ ಸಂಪಾದನೆ ಎಂಬುದನ್ನು ಸ್ವತಃ ಸಾಧಿಸಿ ತೋರಿಸಿದರು. ರಣರಂಗದಲ್ಲಿ ಹೋರಾಡಿ ಯಾವುದನ್ನು ರಜೋಗುಣ ಸಾಧಿಸಲಾರದೆ ಹೋಯಿತೊ (ಕನಕ ದಳದಲಿ ಕಲೆತನೆಂದರೆ ಫೌಜು ಕನಕುಮನಕಾಗುವುದು) ಅದನ್ನು ಸತ್ತ್ವಗುಣ ಗೆದ್ದುಕೊಂಡಿತು. 'ತಾಮಸ ಗುಣನಾಶ ಸಾತ್ತ್ವಿಕೋಲ್ಲಾಸ' ಎಂಬ ರಾಮಾನುಜಾ ಚಾರ್ಯರನ್ನು ಕುರಿತ ತಮ್ಮ ಸ್ತುತಿ ತಮಗೂ ಅನ್ವಯವಾಯಿತು. ಕುಲಾಂಧರ

ಮಧ್ಯೆ ಇದ್ದಾಗಲೂ ಆತ್ಮ ಯಾವ ಕುಲ ? ಜೀವ ಯಾವ ಕುಲ ? ಎಂಬ ಜಿಜ್ಞಾಸೆಯಿಂದಲೇ ಕುಲವನ್ನು ಮೆಟ್ಟಿನಿಂತ ಈ ವ್ಯಕ್ತಿಯ ತಾತ್ತ್ವಿಕ ದರ್ಶನೋತ್ಪನ್ನ ತರ್ಕ ಅನುಪಮವಾದುದು ; ಲೌಕಿಕದಿಂದ ಅಧ್ಯಾತ್ಮದತ್ತ ಸಾಗಿದುದು ಗಮನಾರ್ಹವಾದುದು.

ಅಧ್ಯಾತ್ಮದ ಕಡೆ ಸಾಗುವವನಿಗೆ ಪುರಾಣ ಪ್ರಜ್ಞೆಯ ಗಟ್ಟಿಯಾದ ಬೆನ್ನೆಲುಬಿರುತ್ತದೆ. ಭಾರತೀಯರಲ್ಲಿ ಅಧ್ಯಾತ್ಮ ಬಹಳವುಟ್ಟಿಗೆ ಪುರಾಣಪ್ರೇರಿತವಾದುದು. ಕನಕದಾಸರ ಆಧ್ಯಾತ್ಮ ಸಿದ್ಧಿಗೆ ಅವರಿದ್ದ ಕಾಲಧರ್ಮಗಳೂ ಕಾರಣವಾಗುತ್ತವೆ. ಉಚ್ಚ ನೀಚವೆಂಬ ಪರಿಕಲ್ಪನೆ ಮೂಡಿ ಬರುವುದು ಸಹ ಪರಿಸರದಿಂದ. ಹದಿನಾರನೆಯ ಶತಮಾನದ ಕನ್ನಡನಾಡು ಭಕ್ತಿಯ ಬೀಡು. ಆಗಿನ ಚಕ್ರವರ್ತಿ ಶ್ರೀಕೃಷ್ಣದೇವರಾಯ ಸ್ವತಃ ಭಕ್ತ, ವ್ಯಾಸಪೀಠವಂತೂ ಭಕ್ತಾಗ್ರೇಸರ ಕೇಂದ್ರಸ್ಥಾನವಾಗಿ ಭಗವತ್ ಕೀರ್ತನೆಗಳಿಂದ ಆವೃತವಾಗಿತ್ತು. ಹರಿದಾಸರು ಕೀರ್ತನೆಗಳಿಂದ ಭಗವತ್ ಮಹಿಮೆಯನ್ನು ಹಾಡಿ ಹೊಗಳುತ್ತಿದ್ದರು. ಹೀಗಾಗಿ ಅವರ ರಚನೆಗಳು ಪ್ರಧಾನವಾಗಿ ಪೌರಾಣೀಕ ಪ್ರತಿಮೆ, ಉಪಮೆ ಮತ್ತು ಸಾಮತಿಗಳಿಂದ ಕೂಡಿರುತ್ತಿದ್ದವು. ದಾಸರ ಅಂತರಂಗ ಮತ್ತು ಬಹಿರಂಗ ಜೀವನವನ್ನೆಲ್ಲ ಪೌರಾಣಿಕ ವಿಷಯಗಳು ಆವರಿಸಿದ್ದವು. ಅವರ ಜೀವನ ಧೋರಣೆಗಳಿಗೂ ಸಹಾ ಪುರಾಣವೇ ಮಾಧ್ಯಮವಾಯಿತು.

ಆದರೆ ಕನಕರು ಪುರಾಣವನ್ನು ಕೇವಲ ಪುರಾಣಕ್ಕಾಗಿ ತರಲಿಲ್ಲ. ಕಥೆಯ ಪುನರಾವರ್ತನೆ ಕನಕರ ಉದ್ದೇಶವಲ್ಲ. ಜೀವನದ ವಾಸ್ತವಿಕತೆಯ ಚಿತ್ರಕ್ಕೆ ಪುರಾಣದ ಚೌಕಟ್ಟು ಹಾಕಿದ್ದಾರೆ. ಸಮಕಾಲೀನ ಬದುಕು ಪುರಾಣ ಪ್ರಜ್ಞೆಯಲ್ಲಿ ಅಭಿವ್ಯಕ್ತಿಯನ್ನು ಪಡೆದಿದೆ. ಮೋಹನ ತರಂಗಿಣಿಯಂತಹ ಶೃಂಗಾರ ಕಾವ್ಯದಲ್ಲೂ ವಿಜಯನಗರದ ಇತಿಹಾಸ ಇಣುಕು ಹಾಕಿದೆ. ರಾಮಧಾನ್ಯ ಚರಿತ್ರೆಯಲ್ಲಿ ರಾಮ, ಗೌತಮ, ಹನುಮ ಮೊದಲಾದ ಪುರಾಣ ಪುರುಷರೇ ಪಾತ್ರಧಾರಿಗಳಾದರೂ ಸಹ ಅಲ್ಲಿ ಒತ್ತು ಬಿದ್ದಿರುವುದು ಬಡವರ ಆಹಾರವಾದ ರಾಗಿಗೆ. ಶ್ರೀಮಂತಿಕೆಯ ವಿರುದ್ಧವಾದ ಬಂಡಾಯ ಧ್ವನಿ ಇಲ್ಲಿ ಪುರಾಣಾಂತರ್ಗತವಾಗಿ ಮೊಳಗಿದೆ. ಭಗವತ್ ಕೀರ್ತನೆಗಳಲ್ಲೂ ಸಹ ಕುಲ ಕುಲ ಕುಲವೆಂದು ಹೊಡೆದಾಡಿದಿರಿ ನಿಮ್ಮ ಕುಲದ ನೆಲೆಯನ್ನೇನಾದರೂ ಬಲ್ಲಿರಾ? ಬಲ್ಲಿರಾ? ಎಂಬ ಸುಧಾರಣಾ ಭಾವ ವ್ಯಕ್ತವಾಗಿದೆ. ನಳಚರಿತ್ರೆಯಲ್ಲಿ ಇಂದ್ರ ಅಗ್ನಿ ವರುಣ, ಯಮ ಮೊದಲಾದ ದೇವತೆಗಳು ಪಾತ್ರಗಳಾಗಿ ಬಂದರೂ ಸಹ ಕೃತಿ ಮಾನವ ಪ್ರೇಮದ ಅಮರತ್ವವನ್ನು ಸಾರುತ್ತದೆ. ಕನಕದಾಸರ ಯಾವುದೇ ಕೃತಿ ಪೌರಾಣಿಕ

ಪ್ರಜ್ಞೆಯಿಂದ ಹೊರತಾಗಿಲ್ಲ. ಆದರೆ ಉಳಿದ ಕೃತಿಗಳಿಗಿಂತ ಮೋಹನ ತರಂಗಿಣಿ ಕೃತಿಯ ಪೌರಾಣಿಕ ಆವರಣ ವಿಸ್ತೃತವಾದುದು. ಸಮಸ್ತ ಬ್ರಹ್ಮಾಂಡವೇ ಇಲ್ಲಿನ ಕಾವ್ಯಕ್ಷೇತ್ರವಾಗಿದೆ. ಹರಿಹರ ಬ್ರಹ್ಮಾದಿಗಳು, ದೇವದಾನವರು, ಮತ್ತು ಇಲ್ಲಿನ ಪಾತ್ರವರ್ಗ. ದೇವ ದೈತ್ಯ ಮತ್ತು ಮರ್ತ್ಯ ಲೋಕಗಳಲ್ಲಿ ಕ್ರಿಯೆ ಜರುಗುತ್ತವೆ. ಭಾರತ, ಭಾಗವತ, ಹರಿವಂಶ, ವಿಷ್ಣುಪುರಾಣ ಮತ್ತು ಸ್ಕಂದ ಪುರಾಣಗಳಲ್ಲಿ ಇದರ ಕಥೆಯು ಬಿಳುಲುಗಳು ಚಾಚಿಕೊಂಡಿವೆ. ಇದನ್ನೊಂದು ಮಹಾಕಾವ್ಯವನ್ನಾಗಿ ಮಾಡುವ ಮಹದಾಸೆ ಕನಕದಾಸರಿಗೆ ಇದ್ದಂತೆ ತೋರುತ್ತದೆ. ಉನ್ನತ ಪೌರಾಣಿಕ ಕಲ್ಪನೆಯ ವಸ್ತುವನ್ನು ಆರಿಸಿಕೊಂಡಿರುವುದೇ ಇದಕ್ಕೆ ಸಾಕ್ಷಿಯಾಗಿದೆ.

ಕೃತಿ ಯಾವುದೇ ಆಗಲಿ, ವಸ್ತು ಯಾವುದೇ ಆಗಲಿ ಯಾವ ಪಾತ್ರವೇ ಆಗಲಿ ಅಲ್ಲಿ ಕನಕತನ ಒಂದುಂಟು. ದೇವರ ಆರಾಧಕರಾದರೂ, ಕನಕರು ದಾನವರನ್ನಾಗಲಿ, ಮಾನವರನ್ನಾಗಲಿ ಎಲ್ಲಿಯು ಕಳಪೆಗೈಯದೆ ಇರುವುದು ಗಮನಾರ್ಹವಾದುದು. ಸಾಮಾನ್ಯವಾಗಿ ಸಂಸ್ಕೃತ ಮಹಾಕಾವ್ಯಗಳಲ್ಲಿ ರಾಕ್ಷಸರನ್ನು ನೀಚರಂತೆಯೂ, ದೇವತೆಗಳನ್ನು ಉದಾತ್ತರಂತೆಯೂ ಚಿತ್ರಿಸಿ ದೇವತೆಗಳ ವ್ಯಕ್ತಿತ್ವವನ್ನ ವೈಭವೀಕರಿಸುವುದು ಕಂಡುಬರುತ್ತದೆ. ಆದರೆ ದಾನವರಲ್ಲಿನ ಉದಾತ್ತತೆಯನ್ನು ಪ್ರಕಾಶಗೊಳಿಸಿ ಪಾತ್ರಗಳಲ್ಲಿನ ಘನತೆಯನ್ನು ಹೆಚ್ಚಿಸಿದ್ದು ಕನಕರ ವೈಶಿಷ್ಟ್ಯ. ಇದಕ್ಕೆ ಅನೇಕ ನಿದರ್ಶನಗಳು ಮೋಹನ ತರಂಗಿಣಿಯಲ್ಲಿ ದೊರೆಯುತ್ತವೆ.

ಶಂಬರಾಸುರ ತನಗೆ ಪ್ರದ್ಯುಮ್ನನಿಂದ ಮರಣವಿದೆ ಎಂಬ ಭಯದಿಂದ ಆ ಶಿಶುವನ್ನು ಅಪಹರಿಸಿದರೂ ಸಹ ಅದನ್ನು ಕೊಲ್ಲಲಾರ. ಆ ಹಸುಗೂಸಿನ ಬಗ್ಗೆ ಅವನಿಗಿರುವ ಅಂತಃಕರಣ, ಮಾನವೀಯತೆ ಮತ್ತು ಉದಾರತೆಗಳು ಅನುಪಮವಾದುವುಗಳು. ತಾನೆ ಆ ಮಗುವಿಗೆ ಸಕಲ ಶಸ್ತ್ರಾಸ್ತ್ರ ವಿದ್ಯೆಗಳನ್ನು ಕಲಿಸುತ್ತಾನೆ. ಎಲ್ಲವನ್ನು ಕಲಿತ ಪ್ರದ್ಯುಮ್ನ ಶಂಬರನನ್ನು ಕೊಂದು ಬರುತ್ತಾನೆ. ಇಲ್ಲಿ ದಾನವತ್ವ ದೇವತ್ವವನ್ನು ಮೀರಿನಿಂತಿರುವುದನ್ನು ನೋಡುತ್ತೇವೆ.

ಕವಿಯ ಆರಾಧ್ಯ ದೈವವಾದ ಶ್ರೀಕೃಷ್ಣನೇ ಕೃತಿಯ ನಾಯಕ ಬಾಣಾಸುರ ಪ್ರತಿನಾಯಕ. ಆದರೆ ಬಾಣಾಸುರನಲ್ಲಿ ಖಳನ ಯಾವೊಂದು ಅಂಶವೂ ಕಂಡು ಬರುವುದಿಲ್ಲ. ಶಿವನೇ ಇವನ ಭಕ್ತಿಗೆ ಮೆಚ್ಚಿ ಬಂದು ಬಾಗಿಲು ಕಾದ. ಕಾವ್ಯದುದ್ದಕ್ಕೂ ಹರಿಭಕ್ತಿಯ ಪಾರಮ್ಯ ಕಂಡುಬಂದರೂ ಸಹ ಅಷ್ಟೇ ಪ್ರಾಧಾನ್ಯತೆಯನ್ನು ಹರಪೂಜೆಗೂ ಕೊಟ್ಟಿರುವುದರಲ್ಲಿ ಕನಕರ ಭಾಗವತ ದೃಷ್ಟಿ

ಎದ್ದು ಕಾಣುತ್ತದೆ. ಕೃಷ್ಣ ಕಥಾನಾಯಕನಾದರೂ ಆತನನ್ನು ಕರ್ನಾಟಕ ಸಾಮ್ರಾಜ್ಯದ ರಮಾರಮಣನೆನಿಸಿದ ಶ್ರೀಕೃಷ್ಣದೇವರಾಯನೊಂದಿಗೆ ಅಭೇದ್ಯವಾಗಿ ಹೋಲಿಸಿರುವುದು ಕಂಡುಬರುತ್ತದೆ. ಇಲ್ಲಿ ಕನಕರು ಪಂಪ ಪೊನ್ನ ರನ್ನರ ಮಾರ್ಗದಲ್ಲಿಯೇ ನಡೆದಿದ್ದಾರೆ. ಶ್ರೀಕೃಷ್ಣಚರಿತೆ ಎಂದು ಕರೆದಿರುವ ಈ ಕೃತಿಯಲ್ಲಿ ಚಿತ್ರಿತವಾಗಿರುವ ದ್ವಾರಕೆ ವಿಜಯನಗರದ ಪ್ರತಿಕೃತಿಯಾಗಿದೆ. ಕನಕರು ವಿಜಯನಗರದಲ್ಲಿ ಕಣ್ಣಾರೆ ಕಂಡ ಜೀವನವನ್ನು ಇಲ್ಲಿ ಎರಕ ಹೊಯ್ದಿದ್ದಾರೆ. ರಸ್ತೆಯ ಇಕ್ಕೆಲಗಳಲ್ಲಿ ಸಾಲು ಮರಗಳು, ತುಂಬಿತುಳುಕುವ ಕೆರೆ ಬಾವಿಗಳೂ, ಹರಿಯುವ ನದಿಗಳು, ಬೆಳೆದು ನಿಂತ ತೋಟಗಳು, ಕಬ್ಬಿನ ಗದ್ದೆಗಳು, ಬೆಲ್ಲವನ್ನು ತಯಾರಿಸುವ ಆಲೆಯ ಮನೆಗಳು, ಅತಿಥಿಗಳಿಂದ ತುಂಬಿರುವ ಧರ್ಮ ಛತ್ರಗಳು, ಅಗ್ರಹಾರಗಳು, ವೀರಮಾನ್ಯ ಪುರಗಳು ಅಂದಿನ ಕರ್ಣಾಟಕದ ಚಿತ್ರವನ್ನು ಕಣ್ಣಿಗೆ ಕಟ್ಟುತ್ತವೆ. ದಾರಿಯ ಪಕ್ಕದ ಮರದ ನೆರಳಿನಲ್ಲಿ ಬೆಲ್ಲದ ಪಾನಕವನ್ನೂ, ಕೆನೆಮೊಸರುಗಳಿಂದ ಕೂಡಿದ ಬುತ್ತಿಯನ್ನೂ ಅಲ್ಲಲ್ಲೆ ಇಟ್ಟುಕೊಂಡು ಪಯಣಿಗರನ್ನು ಕರೆದು ಪ್ರೀತಿಯಿಂದ ಉಣಬಡಿಸುವ ಚಿತ್ರ ಕರ್ಣಾಟಕದಲ್ಲಲ್ಲದೆ ಮತ್ತೆಲ್ಲಿ ಕಾಣಬೇಕು. ವಿಜಯನಗರದ ಕೋಟೆಕೊತ್ತಲಗಳು, ಅಂಗಡಿ ಸಾಲುಗಳು ಅಲ್ಲಿ ಚಿತ್ರಿತವಾಗಿವೆ. ಶ್ರೀಗಂಧ, ಬಿಳಿಯ ವಿಳ್ಯೇದೆಲೆ, ಹೂವು, ಕರ್ಪೂರ, ಕಸ್ತೂರಿ, ಜವಾಜಿ, ಪುನುಗು, ಬಗೆಬಗೆಯ ಪರಿಮಳ ತೈಲ, ಹಣ್ಣು ಹಂಪಲುಗಳನ್ನು ಮಾರುವ ವಿವಿಧ ಅಂಗಡಿ ಸಾಲುಗಳು, ಧನ ಧಾನ್ಯಗಳ ಅಂಗಡಿ ಬೀದಿಗಳೂ, ಕಂಚುಗಾರ, ಕೈದುಗಾರ ಸಂಚುಗಾರ ಮೊದಲಾದ ವೃತ್ತಿಗನುಗುಣವಾದ ಪ್ರತ್ಯೇಕ ಕೇರಿಗಳು ವಿಜಯನಗರದ ಇತಿಹಾಸವನ್ನು ಬಿಂಬಿಸುತ್ತವೆ. ಬಟ್ಟೆ ಅಂಗಡಿಗಳು, ಹಣಹೊನ್ನ ಕುಪ್ಪೆಯ ಮುಂದಿಟ್ಟುಕೊಂಡವರು ಅಲ್ಲಿ ಕಂಡು ಬರುತ್ತಾರೆ. ಇವು ಪೌರಾಣಿಕತೆಯಿಂದ ಪೃಥಕ್ಕರಿಸಿದಾಗ ಅಂದಿನ ನಗರದ ನಾಗರಿಕತೆ ಸಂಸ್ಕೃತಿ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಬಿಂಬಿಸುತ್ತವೆ :

> ಭೋಜಿಪ ಕರ್ಪೂರ ಕಸ್ತೂರಿ ಜೀಣಗ ಜವಾಜಿ ಪುಣುಗು ಬಹು ತೈಲ
> ಸೋಜಿಗವಡೆದ ಸುಗಂಧದಂಗಡಿಗಳೂ ರಾಜಿಸುತಿರ್ದುವಿಕ್ಕೆಲದಿ
> ಚಪ್ಪನ್ನ ದೇಶದ ನಾಣೆಯಂಗಳ ನೋಟ ತಪ್ಪದ ಚಪಲ ಸೆಟ್ಟಿಗಳು
> ಒಪ್ಪವಡೆದು ಕುಳಿತಿರ್ದರು ಹಣ ಹೊನ್ನ ಕುಪ್ಪೆಯ ಮುಂದಿಟ್ಟುಕೊಂಡು ॥

ಇದೂ ಅಲ್ಲದೆ :

> ಕಳೆವೆತ್ತ ವಾರನಾರಿಯರ ಕನ್ನಿಕೆಯರ
> ಮೊಳೆಮೊಲೆಗಳ ನೋಡಿನಗುತ

ಎಳೆವೆರಲ್ಗಳ ಚಿಟುಕೊತ್ತಿ ಕೈದೊಡಿಸುವ
ಬಳೆಗಾರರಿರ್ದರಿಕ್ಕೆಲದಿ ॥

ಇಂತಹ ಕಡೆಗಳಲ್ಲಿ ಜನಸಾಮಾನ್ಯರಲ್ಲಿ ವ್ಯಕ್ತವಾಗುತ್ತಿದ್ದ ರಸಿಕತೆಯ ಬದುಕನ್ನು ಕನಕರು ಸೆರೆ ಹಿಡಿದಿರುವುದು ಕಂಡುಬರುತ್ತದೆ.

'ಮಲ್ಲಿಗೆಯರಳಂತೆ ಬಿಚ್ಚೋಗರ, ಮೊಸರೊಳ್ಳೆಯ ಬಹುಳುಪ್ಪುಗಾಯಿ, ಗಲ್ಲಿಸಿ ಗಟ್ಟಿಯು ಕಟ್ಟಿದ ಪಿರಿಯರು ಪುಲ್ಲಿಗೆಗಳು ತರತರಿಸೆ' ಊಟ ಮಾಡಿದರಂತೆ. ಭೋಜನದ ವಿಷಯದಲ್ಲಿಯೂ ಜನರ ರಸಿಕತೆ ಶ್ರೀಮಂತವಾಗಿತ್ತು ಎಂಬುದನ್ನು ಇದು ತೋರಿಸುತ್ತದೆ. ಇದೂ ಅಲ್ಲದೆ ಆಗಿನ ಕಾಲದಲ್ಲಿ ವಾರಾಂಗನೆಯರ ಸಂಸ್ಕೃತಿಯು ಮಟ್ಟ ಇಂದಿಗಿಂತ ಉತ್ತಮವಾಗಿತ್ತೆನ್ನುವಂತೆ ಕಾಣುತ್ತದೆ. ನೃತ್ಯ ಗಾಯನ ಮತ್ತು ವಾದನ ಕಲೆಗಳಲ್ಲಿ ಅವರು ಪರಿಣತಿಯನ್ನು ಪಡೆದು ರಸಿಕರನ್ನು ರಂಜಿಸುತ್ತಿದ್ದರೆಂದು ಕನಕರು ಹೇಳುತ್ತಾರೆ. ಬದುಕಿನ ಬಗೆಗೆ ವಿಶೇಷ ಒಲವನ್ನು–ಪ್ರೀತಿಯನ್ನು ಬೆಳಸಿಕೊಂಡ ಕವಿ ಒಂದು ಕಾಲಕ್ಕೆ ಅದರ ಎಲ್ಲ ರಸ ರುಚಿಗಳನ್ನು ಉಂಡು ಬಿಟ್ಟವನಾದ್ದರಿಂದ ಅವನು ಉಸಿರು ಬಿಟ್ಟರೂ ಸಾಕು ಬದುಕಿನ ಒಗ್ಗರಣೆಯ ವಾಸನೆ ಗಮ್ಮೆಂದು ಹೊಡೆದು ಓದುಗನ ಎದೆಯಲ್ಲಿ ರಸದ್ರವಿಸುವಂತೆ ಮಾಡುತ್ತದೆ." (ಎಸ್. ಎನ್. ಕೋತಿನ, ಉಪೋದ್ಘಾತ, ಮೋಹನ ತರಂಗಿಣಿ, ಪು ೧೮) "ಮೋಹನ ತರಂಗಿಣಿಯಲ್ಲಿ ಕಾಣಿಸಿಕೊಳ್ಳುವ ಪಾತ್ರಗಳೆಲ್ಲವೂ ಪೌರಾಣಿಕವಾಗಿದ್ದರೂ ಅವೆಲ್ಲ ನೆಲದ ಮಕ್ಕಳಾಗಿಯೇ ಕಾಣಿಸಿಕೊಂಡು ಓದುಗರೊಡನೆ ಆತ್ಮೀಯತೆಯ ಸಂಬಂಧವನ್ನು ಬೆಳಸಿಕೊಳ್ಳುತ್ತವೆ. ಪೌರಾಣಿಕ ಕಥೆಗೆ ಸಹಜವಾದ ಅಲೌಕಿಕ ಸನ್ನಿವೇಶ, ಅದ್ಭುತ ಪವಾಡ, ಅವಾಸ್ತವ ಸನ್ನಿವೇಶಗಳು ಕಾಣಿಸಿಕೊಂಡರೂ ಪಾತ್ರಗಳ ಸ್ವಭಾವ ಪ್ರವೃತ್ತಿಗಳು ಹಾಗೂ ಅವುಗಳ ಬದುಕು ಭಾವನೆಗಳು ಅತ್ಯಂತ ಸಹಜವಾಗಿ ಮಾನವೀಯವಾಗಿ ಮೂಡಿ ಬಂದಿದೆ." (ಅದೇ ಪು. ೧೫) ಸಾಂಗತ್ಯದಂತಹ ಅಪ್ಪಟ ದೇಸೀಯ ಹಾಡುಗಬ್ಬದಲ್ಲಿ ಕಾವ್ಯ ಕಟ್ಟಲು ತೊಡಗಿದ ಕವಿಯ ಮನೋಧರ್ಮ ಜನಪರವಾದುದೆಂದು ಬೇರೆ ಹೇಳಬೇಕಾಗಿಲ್ಲ. ನಳದಮಯಂತಿ ಕಾವ್ಯರಚನೆಗೆ ಭಾಮಿನಿ ಷಟ್ಪದಿಯನ್ನು ಆರಿಸಿಕೊಂಡ ಹಿನ್ನೆಲೆಯಲ್ಲೂ ಇದನ್ನೇ ಕಾಣಬಹುದಾಗಿದೆ.

ಯಥಾಪ್ರಕಾರ ಇಲ್ಲಿಯೂ ಪುರಾಣದ ಕಥೆಯೇ ಇದ್ದರೂ ಸಹ ಅದು ಭಾರತೀಯ ಸಂಸ್ಕೃತಿಯ ತಳಹದಿಯ ಮೇಲೆ ನಿಂತಿದೆ. ಪರಿಶುದ್ಧ ಪ್ರೇಮ

ಮತ್ತು ಪಾತಿವ್ರತ್ಯ ಧರ್ಮಗಳು ಅನನ್ಯ ರೀತಿಯಲ್ಲಿ ಪ್ರತಿಬಿಂಬಿತವಾಗಿವೆ. ಮುಖ್ಯವಾಗಿ ಮಾನವತ್ವ ದೇವತ್ವವನ್ನು ಮೀರಿ ನಿಲ್ಲುವ ಘಟನೆ ಕೃತಿಯ ಮಹತ್ವದ ಅಂಶವಾಗುತ್ತದೆ. ಈಗಾಗಲೆ ನಳನಿಗೆ ಒಲಿದಿದ್ದ ದಮಯಂತಿಯನ್ನು ತಮಗೆ ಒಲಿಯುವಂತೆ ಮಾಡೆಂದು ನಳನನ್ನು ಕೇಳುವಾಗ ದೇವತೆಗಳು ತಮ್ಮ ದೇವತ್ವದ ಉನ್ನತಿಕೆಯನ್ನು ಕಳೆದುಕೊಂಡು ಅಲ್ಪರಾಗುತ್ತಾರೆ. ನಳ ತನ್ನ ಉದಾರ ಗುಣದಿಂದ ಮಾನವರ ಘನತೆಯನ್ನು ಉನ್ನತಿಗೆ ಕೊಂಡೊಯ್ಯುತ್ತಾನೆ. ದಮಯಂತಿಯಾದರೋ ದೇವತೆಗಳೇ ಒಲಿದುಬಂದರೂ ಸಹ ಅವರಿಗೆ ಆಸೆ ಪಡದೆ ತಾನು ಮೊದಲು ಪ್ರೀತಿಸಿದ ನಳನನ್ನೇ ಮದುವೆಯಾಗಲು ನಿರ್ಧರಿಸುತ್ತಾಳೆ. ಇಲ್ಲಿ ದಮಯಂತಿಗೆ ನಳನ ಬಗ್ಗೆ ಇದ್ದ ಪ್ರೇಮ ಯಾವ ಕಾರಣಕ್ಕೂ ಯಾವ ಸಂದರ್ಭದಲ್ಲಿಯೂ ಕಲುಷಿತಗೊಳ್ಳದೆ ಚ್ಯುತವಾಗದೆ ಉಳಿಯುತ್ತದೆ, ಈ ಪ್ರೇಮ ಮತ್ತು ಪಾತಿವ್ರತ್ಯದ ಪ್ರಕಾಶಕ್ಕೆ ವಿಧಿ ಒಂದು ಸಮರ್ಥ ಮಾಧ್ಯಮವಾಗಿ ಬರುತ್ತದೆ. ಕಷ್ಟ ಬಂದಾಗಲೂ ಸಹ ಸತ್ಯವಂತರು ಪಥಭ್ರಾಂತರಾಗುವುದಿಲ್ಲ ಎಂಬುದನ್ನು ಇದು ನಿರೂಪಿಸುತ್ತದೆ.

ಅಧ್ಯಾತ್ಮದ ಪ್ರಬಲ ಧ್ವನಿಗಳನ್ನೊಳಗೊಂಡಿರುವ ಹರಿಭಕ್ತಿಸಾರದ ಹೆಸರೇ ಸೂಚಿಸುವಂತೆ ಹರಿಯ ಲೀಲಾಶಕ್ತಿಗಳನ್ನು ಸ್ತುತಿಸುವ ಕೀರ್ತನೆಗಳಾಗಿದ್ದರೂ ಸಹ ರೂಪಾಂಶದಲ್ಲಿ ಶತಕಗಳಾಗಿವೆ. ಹರಿ ಸರ್ವೋತ್ತಮತ್ವವನ್ನು ಪೌರಾಣಿಕ ಚಿತ್ರಗಳ ಮೂಲಕ ಕಡೆದಿದ್ದಾರೆ. ಹರಿಹರ ಬ್ರಹ್ಮಾದಿಗಳು ಒಂದೇ ಎಂಬ ಭಾಗವತ ಪ್ರಜ್ಞೆ ಇಲ್ಲಿಯೂ ವ್ಯಕ್ತವಾಗಿದೆ. ಸಾಮಾನ್ಯವಾಗಿ ಶತಕಗಳು ನೀತಿ ಮತ್ತು ತತ್ತ್ವಗಳ ಪ್ರತಿಪಾದನೆಯಿಂದ ಕೂಡಿದ ವೈಯಕ್ತಿಕ ಭಾವನೆಗಳಾಗಿವೆ, ಹರಿಭಕ್ತಿ ವಿವಿಧ ಮಜಲುಗಳಲ್ಲಿ ರೂಪತಾಳಿವೆ. ಸತ್ಯ ಧರ್ಮ ಮುಂತಾದ ಜೀವನಮೌಲ್ಯಗಳು ಅದರ ಹಿನ್ನೆಲೆಯಲ್ಲಿವೆ. ಜೀವ ಮತ್ತು ದೇಹಗಳು ಅನಿಶ್ಚಿತವಾದುವು : ಆದರೆ ಭಗವಂತನ ಇರುವಿಕೆಯಿಂದಾಗಿ ಅವು ಸುಂದರವಾಗಿವೆ ಎನ್ನುತ್ತಾರೆ. ಬಾಹ್ಯಶುದ್ಧಿಗಿಂತ ಅಂತರಂಗದ ಶುದ್ಧಿಗೆ ಮಹತ್ವಕೊಡುವ ಕನಕದಾಸರು,

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲುಕರುವಿನ
ಎಂಜಲೆನ್ನಿಸದೆ ಎಂಜಲೆಲ್ಲಿಯದು ॥

ಎಂದು ಪ್ರಶ್ನಿಸುತ್ತಾರೆ. ಹೀಗೆ ಮೇಲುನೋಟಕ್ಕೆ ಹರಿಸ್ತುತಿಗಳಂತಿರುವ

ಈ ಪುಟ್ಟ ಭಾವಗೀತೆಗಳಲ್ಲೂ ಸಹ ಒಂದು ಮಟ್ಟದ ವಿಚಾರದ ನೆಲೆಗಟ್ಟನ್ನು ಗುರುತಿಸಬಹುದಾಗಿದೆ.

ಪಾಂಡಿತ್ಯದ ಪ್ರದರ್ಶನಕ್ಕೊ, ಚಮತ್ಕಾರಕ್ಕೊ, ಒಗಟಿನ ಅರ್ಥದ ವ್ಯಾಮೋಹಕ್ಕೊ, ವಿಚಾರದ ಜಿಜ್ಞಾಸೆಗೋ ಅಥವಾ ತತ್ತ್ವಜ್ಞಾನಾಭಿವ್ಯಕ್ತಿಗೊ ಹಂಬಲಿಸಿ ರಚಿತವಾಗಿರುವ ಮುಂಡಿಗೆಗಳಲ್ಲಿ ಪುರಾಣ ಸಂಗತಿಗಳು ಅಡಿಗಿಕೊಂಡಿವೆ. ವಿಷ್ಣುವಿಗೆ ಅನ್ವಯವಾಗುವ ಒಂದು ಮುಂಡಿಗೆ ಹೀಗಿದೆ :

> ಅಂಧಕ[೧]ನನುಜನ[೨] ಕಂದನ[೩] ತಂದೆಯ[೪]
> ಕೊಂದನ[೫] ಶಿರದಲ್ಲಿ ನಿಂದವನ[೬]
> ಚಂದದ ವಡೆದನ[೭] ನಂದನೆಯಳ[೮]ನಲ
> ವಿಂದ ಧರಿಸಿರ್ದ ಮುಕುಂದನಿಗೆ ॥

ಕೇವಲ ಚಮತ್ಕಾರ ಪ್ರಧಾನವಾದ ಇದನ್ನು ಬುರ್ಲಿ ಬಿಂದು ಮಾಧವರಾಯರು ಹೀಗೆ ಅರ್ಥೈಸಿದ್ದಾರೆ :

೧ ಧೃತರಾಷ್ಟ್ರ, ೨ ಪಾಂಡುರಾಜ, ೩ ಧರ್ಮರಾಯ, ೪ ಯಮ, ೫ ಈಶ್ವರ, ೬ ಚಂದ್ರ, ೭ ಸಮುದ್ರರಾಜ, ೮ ಲಕ್ಷ್ಮಿ, ೯ ವಿಷ್ಣು.

ಆದರೆ ಇಲ್ಲಿ ಪುರಾಣದ ಹೆಸರುಗಳನ್ನು ಅರಸಬಹುದಲ್ಲದೆ ಬೇರೆ ಯಾವ ಗಹನ ವಿಚಾರವೂ ಹುದುಗಿಲ್ಲ.

ಕನಕದಾಸರ ಕೃತಿಗಳಲ್ಲೆಲ್ಲ ವೈಚಾರಿಕತೆ ದಟ್ಟವಾಗಿ ಮಡುಗಟ್ಟಿ ನಿಂತಿರುವುದು ರಾಮಧಾನ್ಯಚರಿತೆಯಲಿ. "ಎಂಥ ಲೌಕಿಕ ವಸ್ತುವನ್ನಾರಿಸಿಕೊಂಡರೂ ಅದನ್ನು ಪೌರಾಣಿಕ ಅಥವಾ ಇತಿಹಾಸ ಪ್ರಸಿದ್ಧವಾದ ಕಥೆಯ ಪ್ರಣಾಳಿಯಲ್ಲಿ ಹಾಯಿಸಬೇಕೆನ್ನುವ ಚಟ ಯಾವ ಕವಿಯನ್ನು ಬಿಟ್ಟಿದ್ದಲ್ಲ. ಕೃತಿಯ ನಾಮಕರಣದಿಂದಲೇ ಅದರ ಪ್ರಧಾನ ಕಥೆ ಯಾವುದು, ಕವಿಯ ಮುಖ್ಯೋದ್ದೇಶವೇನೆಂಬುದು ನಿರ್ಣಯವಾಗುತ್ತದೆ. ಕವಿ ಸಹಜವಾಗಿ ಕ್ರಾಂತಿಮತಿಯಾದರೂ ಸನ್ನಿವೇಶ ವಾತಾವರಣ ಬದ್ಧವಾಗಿ ಸಂಪ್ರದಾಯನಿಷ್ಠನಾಗುತ್ತಾನೆ; ಸಾಮಾಜಿಕ ವಿಷಯ ಕಥಾವಸ್ತುವಾದರೂ ಪೌರಾಣಿಕ ಪ್ರಜ್ಞೆ ಭಕ್ತಕವಿಯ ಮನಸ್ಸನ್ನು ಸದಾ ಆಕ್ರಮಿಸಿಕೊಂಡಿದೆ" [ಡಾ. ದೇಜಗೌ. ರಾಮಧಾನ್ಯಚರಿತ್ರೆ ಒಂದು ಅಣಕು ಮಹಾಕಾವ್ಯ, ಕನಕ ಕಿರಣ, (ಸಂ) ಕಾ.ತ. ಚಿಕ್ಕಣ್ಣ, ಪು. ೮೫] ರಾಗಿಯ ಮಹತ್ವವನ್ನು ಎತ್ತಿಹಿಡಿಯುವ ಉದ್ದೇಶದಿಂದಲೇ ಈ ಕಥೆಯನ್ನು ಸೃಷ್ಟಿಸಿದ್ದರೂ ಸಹ ಅದಕ್ಕೆ ಪುರಾಣದ ಹಿನ್ನೆಲೆಯನ್ನು ಒದಗಿಸಿದ್ದಾರೆ. ರಾಗಿ ಮತ್ತು ಭತ್ತದ (ನರೆದಲಗ–ನೆಲ್ಲು)

ವಾಗ್ವಾದದ ಹಿಂದಿರುವ ವಿಚಾರವೇ ಈ ಕಾವ್ಯದ ಸರ್ವಸ್ವ. ಇದನ್ನು ಬೇರ್ಪಡಿಸಿದರೆ ಅದು ತನಗೆ ತಾನೆ ಒಂದು ಸ್ವತಂತ್ರ ಕೃತಿಯಾಗಬಲ್ಲುದು. ಆದರ ಅದು ಕಥಾಬಂಧಕ್ಕೆ ಅಳವಟ್ಟಿರುವುದರಿಂದ ಅದಕ್ಕೊಂದು ಅಪೂರ್ವವಾದ ಕಲಾತ್ಮಕ ಶೋಭೆ ಒದಗಿಬಂದಿದೆ.

ಕನಕದಾಸರಿಗಿರುವ ಅನನ್ಯವಾದ ಬಡವರ ಪ್ರೇಮ ಇಲ್ಲಿ ವ್ಯಕ್ತವಾಗಿದೆ ವಾಸ್ತವವಾಗಿ ರಾಮಧಾನ್ಯಚರಿತೆ ದಲಿತಧ್ವನಿಯ ಒಂದು ಸುಂದರ ರೂಪಕ, ಅಕ್ಕಿಗಿಂತ ರಾಗಿ ಶ್ರೇಷ್ಠ ಎಂದು ರಾಮನಿಂದಲೇ ಮಾನ್ಯತೆ ಪಡೆಯುವ ಅಂಶ ಮಹತ್ವದ್ದಾಗಿದೆ. ರಾಗಿ ಶ್ರೀಸಾಮಾನ್ಯರ ಆಹಾರ ಭತ್ತ ಶ್ರೀಮಂತರ ಸ್ವತ್ತು, ಅವುಗಳ ಸ್ವಾರಸ್ಯಪೂರ್ಣವಾದ ಜಗಳ ವಾದ ವಿವಾದಗಳ ಹಿಂದೆ ಅಡಗಿರುವ ಅರ್ಥ ಈ ಕಾವ್ಯದ ನಿಜಧ್ವನಿ ಎಂದು ಹೇಳಬೇಕು. ರಾಮಧಾನ್ಯ ಚರಿತ್ರೆಯ ಕಥೆ ಕನಕರ ಸ್ವಂತ ಸೃಷ್ಟಿ. ಧಾನ್ಯಗಳನ್ನು ಮೊದಲಿಗೆ ಸಾಹಿತ್ಯದಲ್ಲಿ ಮಾತನಾಡಿಸಿದ್ದು ಅವರ ವಿಶಿಷ್ಟ ಪ್ರತಿಭೆ. ಮೂಕರಿಗೆ ಮಾತು ಕೊಟ್ಟ ಕನಕರ ದ್ರಷ್ಟಾರ ಪ್ರಜ್ಞೆ ದೊಡ್ಡದೆಂದೇ ಹೇಳಬೇಕು. ರಾಗಿಯ ಮಾತಿನಲ್ಲಿ ದುಡಿಮೆಗಾರನ ಧ್ವನಿ ಇದೆ. ನೊಂದವರ ಪ್ರತಿನಿಧಿಯಾಗಿ ಅದು ಕಂಡುಬರುತ್ತದೆ ಭತ್ತದ ಮಾತಿನಲ್ಲಿ ವ್ಯವಸ್ಥೆಯ ಪರವಾದ ಘೋಷಣೆಯಿದೆ, ಸಾಮಾನ್ಯರ ತುಚ್ಛೀಕರಣವಿದೆ. ಸಿರಿವಂತಿಕೆಯ ಮದವಿದೆ, ಮಡಿವಂತಿಕೆಯ ಅಹಂಭಾವವಿದೆ. ತಾನು ಮೇಲೆಂಬ ಅಹಂಭಾವವಿದೆ. ಪುರೋಹಿತಶಾಹಿಯ ಪ್ರಚ್ಛನ್ನ ಸ್ವರೂಪ ಅಲ್ಲಿ ಎದ್ದು ಕಾಣುತ್ತದೆ. ರಾಗಿಯ ಪ್ರತಿಭಟನೆಯಲ್ಲಿ ಕ್ರಾಂತಿಯ ಸುಳುವಿದೆ. ಶ್ರೀಸಾಮಾನ್ಯನ ಜಾಗೃತಿಯಿದೆ.

ಸತ್ಯಹೀನನು ಬಡವರನು ಕ
ಣ್ಣೆತ್ತಿನೋಡೆ ಧನಾಢ್ಯರನು ಬೆಂ
ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು. ॥

ಎಂಬ ರಾಗಿಯ ಮಾತಿನಲ್ಲಿ ವಿಚಾರದ ಸತ್ಯವಿದೆ. ಇದು ಸ್ವಬಲದ ಆತ್ಮವಿಶ್ವಾಸವನ್ನೂ ಎದೆಗುಂದದೆ ಹೋರಾಡುವ ಛಲವನ್ನೂ ತೋರಿಸುತ್ತದೆ. ಭತ್ತ (ವ್ರೀಹಿ) ವಾದರೊ

ಲೋಕದಲಧಿಕ ಭೋಜನವಿದದೆಂ
ದಾಕೆವಾಳರು ಬುದರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ

ಎಂದು ನಿರಾಕರಿಸುತ್ತದೆ. ತನ್ನ ಪರವಾದ ಸಾಕ್ಷಿಯಾಗಿ 'ನಾಕನಿಳಯ'ರನ್ನೇ ಇಟ್ಟುಕೊಳ್ಳುತ್ತದೆ. ತಾನು ದೇವರ ಆಹಾರವೆಂದೂ ಬೀಗುತ್ತದೆ. ತಾನು ಬ್ರಹ್ಮ

ಸಮಾರಾಧನೆಗೆ ಅರ್ಹನಾದವನೆಂಬ ಕೊಬ್ಬು ಅದಕ್ಕಾದರೆ ಅಲ್ಲ ಅಲ್ಲ ನೀನು ಸತ್ತವರ ಪ್ರತಿಬಿಂಬರೂಪ ಎಂದು ನರೆದಲಗ ಹೀಯಾಳಿಸುತ್ತದೆ.

ಏನೇ ಅಗಲಿ ಇವುಗಳ ತಾರ್ಕಿಕ ಹೋರಾಟದ ಸಂದರ್ಭದಲ್ಲಿ ಕಂಡುಬರುವ ನಾಟಕೀಯತೆ, ಸಂಭಾಷಣೆಯ ಸೊಗಸು, ವೈಚಾರಿಕ ದೃಷ್ಟಿ ಅಪೂರ್ವವಾಗಿದೆ. ತುಂಬ ಸ್ವಾರಸ್ಯಪೂರ್ಣವಾದ ಈ ವಾಗ್‌ವಿಲಾಸದಲ್ಲಿ ವ್ಯಂಗ್ಯ ವಿಡಂಬನೆ ಮತ್ತು ಕಾಕು ನುಡಿಗಳು ತುಂಬಿವೆ. ನರೆದಲಗನ ಮಾತು ಅದರ ಮಟ್ಟಿಗೆ ಸರಿಯಾಗಿಯೇ ಇದೆ ವ್ರೀಹಿಗನ ವಾದದಲ್ಲೂ ತಪ್ಪಿಲ್ಲ. ನ್ಯಾಯಾಲಯದಲ್ಲಿ ಅತ್ಯಂತ ಸಮರ್ಥರಾದ ವಕೀಲರಿಬ್ಬರು ತಮ್ಮ ತಮ್ಮ ವಿಷಯವನ್ನು ಸಮರ್ಥನೆ ಮಾಡಿಕೊಂಡಂತೆ ಕಂಡು ಬರುತ್ತದೆ. ಇಂತಹ ಸಂದರ್ಭಗಳಲ್ಲೇ ತೀರ್ಪಿನ ಅಗತ್ಯವಿರುವುದು. ಇಲ್ಲಿ ತೀರ್ಪುಗಾರ ಸ್ವಯಂ ಶ್ರೀರಾಮಚಂದ್ರ, ಅವನಿಗೂ ಈ ಸತ್ಯವನ್ನು ಒಡನೆಯೇ ನಿರ್ಧರಿಸುವುದು ಕಷ್ಟವಾಯಿತು. ಅದಕ್ಕಾಗಿಯೇ ಆತ ಅವುಗಳನ್ನು ಪ್ರಾಯೋಗಿಕ ಪರೀಕ್ಷೆಗೆ ಒಳಗು ಮಾಡಿದ. ಇಲ್ಲಿ ಕನಕರಿಗಿರುವ ವೈಜ್ಞಾನಿಕ ದೃಷ್ಟಿ ಮನನೀಯ. ಆರು ತಿಂಗಳು ಕಳೆದರೂ ಕಂದದೆ, ಕುಂದದೆ, ಬಣ್ಣಗೆಡದೆ ತನ್ನ ಸತ್ತ್ವವನ್ನು ಉಳಿಸಿಕೊಂಡ ರಾಗಿಯನ್ನು ಶ್ರೇಷ್ಠಧಾನ್ಯ ಎಂದು ತೀರ್ಪುಕೊಟ್ಟದ್ದು ಎಲ್ಲರಿಗೂ ಸಮ್ಮತವೆ. ಇಲ್ಲಿ ಭತ್ತಕ್ಕಿಂತ ರಾಗಿ ಶ್ರೇಷ್ಠ ಆಹಾರವಾಗಿದ್ದರೂ ಮೇಲುವರ್ಗದವರಿಗೆ ಅದರ ಬಗ್ಗೆ ತಾತ್ಸಾರವಿದ್ದುದನ್ನು ತಿಳಿದಿದ್ದರು. ರಾಗಿಯ ಮಹಿಮೆಯನ್ನು ಎತ್ತಿಹಿಡಿದು ಇವರಿಗೆಲ್ಲ ಸರಿಯಾದ ಪಾಠ ಕಲಿಸುವ ದೃಷ್ಟಿಯೂ ಇದ್ದಿರಬೇಕು. ಮೇಲುನೋಟಕ್ಕೆ ತಮಾಷೆಯಂತೆ ಕಾಣುವ ಈ ಕೃತಿಯ ಒಳಹೊಕ್ಕು ನೋಡಿದಾಗ ಜಾತಿಸಮಸ್ಯೆ, ವರ್ಗ ಸಂಘರ್ಷ ಮತ್ತು ಮನುಷ್ಯ ಮಧ್ಯೆ ಬೆಳೆದ ತರತಮ ಭಾವಗಳ ಅಂತರ ಅಭಿವ್ಯಕ್ತಗೊಂಡಿದೆ.

ರಾಮಾಯಣ ಮಹಾಭಾರತದ ಕಥೆಗಳು, ಕಥಾಭಾಗಗಳು ಕನಕರ ಕೀರ್ತನೆಗಳಲ್ಲಿ ಅಂತರ್ಗತವಾಗಿವೆ. ಅವು ಅವರ ಬದುಕನ್ನು ಹಾಸುಹೊಕ್ಕಾಗಿ ತುಂಬಿಕೊಂಡಿವೆ. ಕಥೆಗಳ ಮೂಲಕವಾಗಿ ಭಗವತ್ ಸ್ಮರಣೆ ಮಾಡುವುದು ಕನಕರ ವೈಶಿಷ್ಟ್ಯ. ಇಡೀ ರಾಮಾಯಣ ಕಥೆಯನ್ನೆಲ್ಲ ಕೇವಲ ಹದಿನಾಲ್ಕು ಸಾಲುಗಳಲ್ಲೇ ಸೆರೆಹಿಡಿಯುವ ಶಕ್ತಿ ಅಪೂರ್ವವಾದುದು :

ಏನೆಂದಳೇನೆಂದಳೋ
ನಿನ್ನೊಳು ಸೀತೆ ಹನುಮಯ್ಯ ॥
ಜನಕನ ಮನೆಯಲ್ಲಿ ಜನಿಸಿ ಸುಖದಲ್ಲಿರೆ

ಧನಸು ಮುರಿದು ತರಲು ಘನ ತನ್ನ ಪದವಿಯ ಬಿಟ್ಟು
ವನವ ಸೇರಿದೆನೆಂದು ಘನತಪದಿಂದಲಿ
ವನಿತೆ ಮನದಿ ನೊಂದು ॥ ೧ ॥

ಕುರುಹಿನುಂಗುರವಾ ತರಳಾಕ್ಷಿಗೆ ಕೊಡೆ
ಬರಿದು ಮಹಾವೆಂದು ಬೇಸರದಿ
ಬೀರಿದಳೇ ಸೀತಾ ಅಶೋಕವನದಿಂದ
ನಿರುತ ಸಂತಾಪದಿಂದಲಿ ಮನದಿನೊಂದು ॥ ೨ ॥

ಸೇತುವೆಯಕಟ್ಟಿ ರಾವಣನಳಿದು ಸಂ
ಜಾತ ಲಂಕಾಧಿಪನನೋಡಿಸಿ
ಸೀತೆಯ ಸೆರೆಯ ಬಿಡಿಸಿದ್ದೇ ಧರೆ
ನಾಥಾದಿಕೇಶವಗೆ ಬಲು ಬಿರುದು ಎಂದು ॥ ೩ ॥

ಸೀತೆಯನ್ನು ಕಂಡು ಬಂದ ಹನುಮನನ್ನು ರಾಮ ಪ್ರಶ್ನಿಸುವಂತಿರುವ ಈ ಪ್ರಸಂಗದಲ್ಲಿ ರಾಮಾಯಣ ಕಥೆಯನ್ನು ಅಡಕವಾಗಿ ಹೇಳಿರುವ ಸಂಕ್ಷಿಪ್ತತೆ ಗಮನಾರ್ಹವಾದುದು.

ಸ್ತುತಿಗಳಲ್ಲಿ ದೇವರನ್ನು ಉನ್ನತಿಗೊಯ್ದು, ತನ್ನನ್ನು ಕೀಳುಗೈದುಕೊಳ್ಳುವ ಬಗೆ ವಚನಕಾರರಂತೆ ಇಲ್ಲಿಯೂ ಕಂಡುಬರುತ್ತದೆ.

ಕಂಬದಲಿ ಬಂದ ಆನಂದ ಮೂರುತಿ ನೀನು
ನಂಬಿಕಿಲ್ಲದ ಪ್ರಪಂಚಿಗನು ನಾನು
ಅಂಬರೀಷಗೆ ಒಲಿದ ಅಕ್ರೂರಸಖ ನೀನು
ಡಂಭಕರ್ಮಿಯು ನಾನು ನಿರ್ಜಿತನು ನೀನು ॥

ಹೀಗೆ ಭಜನೆ ಮಾಡುವಾಗಲೇ ಅಂಬರೀಷ, ಅಕ್ರೂರ ಮೊದಲಾದವರ ಪ್ರಸಂಗಗಳು ಕಣ್ಣ ಮುಂದೆ ಬಂದು ನಿಲ್ಲುತ್ತವೆ. ಭಕ್ತನಾದ ಕನಕ ದೇವರ ಜೊತೆಯಲ್ಲೇ ಉಳಿದ ಪ್ರಾಚೀನ ಭಕ್ತರನ್ನೂ ಸ್ಮರಿಸುವುದು ಕಂಡುಬರುತ್ತದೆ. ಆತ ಹರಿಯನ್ನು ಮಾತ್ರವಲ್ಲದೆ ಹರನನ್ನು ಕುರಿತು ಮನದುಂಬಿ ಹಾಡಿದ್ದಾನೆ.

ಶಿವ ಶಿವ ಶಿವ ಎನ್ನಿರೊ–ಮೂಜಗದವರೆಲ್ಲ
ಶಿವ ಶಿವ ಶಿವ ಎನ್ನಿರೊ ॥
ಆಗಮ ಸಿದ್ಧಾಂತ ಮೂಲದ ಜಪವಿದು (ಶಿವ) ನಿಮ್ಮ

ರೋಗದ ಮೂಲವ ಕೆಡಿಪ ಔಷಧವಿದು (ಶಿವ)
ಮನುಜ ಜನ್ಮದಿ ಹುಟ್ಟಿ ಮೈಮರೆದಿರಬೇಡಿ (ಶಿವ) ನಿಮ್ಮ
ತನುಮನ ಪ್ರಾಣವ ವ್ಯರ್ಥವ ಮಾಡದೆ (ಶಿವ)
ಶಿವ ಶಿವ ಶಿವ ಎನ್ನಿರೋ ........

ಪುರಾಣ ವೀರರನ್ನು ಸ್ತುತಿಸುವಾಗ ಈ ಕವಿ ಆಂಜನೇಯನಿಗೆ ವಿಶೇಷವಾದ ಮನ್ನಣೆಯನ್ನಿತ್ತಿರುವುದು ಕಂಡುಬರುತ್ತದೆ :

ವೀರ ರಾವಣನೊಡನೆ ಹೋರಿದ
ವೀರರಗ್ಗದ ಕಪಿಗಳವರೊಳು
ಮಾರುತನ ಮಗನೇನು ಧನ್ಯನೊ ಬ್ರಹ್ಮಪಟ್ಟದಲಿ
ಸೇರಿಸಿದೆ ನಿನ್ನಂತೆ ಕೊಡುವ ಉ
ದಾರಿ ಯಾವನು ತ್ರಿಜಗದೊಳಗಾ
ಕಾರಣದಿ ನಂಬಿದೆನು ರಕ್ಷಿಸು ನಮ್ಮನನವರತ ॥

ಭಗವನ್ನಾಮಸ್ಮರಣೆಯಲ್ಲೂ ಉತ್ತಮ ಉಪಮೆಗಳನ್ನೂ, ಪ್ರತಿಮೆಗಳನ್ನೂ ಕನಕ ಪ್ರತಿಭೆ ಸೃಷ್ಟಿಸಿದೆ. "ನಾರಾಯಣನೆಂಬ ನಾಮದ ಬೀಜವನು ನಾಲಿಗೆಯ ಕೂರಿಗೆಯ ಮಾಡಿ ಬಿತ್ತಿರಯ್ಯ" ಎಂಬ ಅನುಭಾವದ ನುಡಿ ಒಕ್ಕಲು ವೃತ್ತಿಯ ಅನುಭವವನ್ನು ಆಧರಿಸಿ–ದಿನನಿತ್ಯದ ಕಸುಬುಗಳ ಬಗ್ಗೆ ಕವಿಗಿರುವ ಅರಿವನ್ನು ತೋರಿಸುತ್ತದೆ. "ಕೂರಿಗೆ" ಎಂಬಂತಹ ಪದ ಪ್ರಯೋಗದಲ್ಲೂ ಕವಿಗಿರುವ ಜಾನಪದೀಯ ದೃಷ್ಟಿ ವ್ಯಕ್ತವಾಗಿದೆ.

ಜಗತ್ತಿನಲ್ಲಿ ದೈವವಲ್ಲದೆ ಬೇರೆ ನಮ್ಮನ್ನು ಯಾರೂ ಕಾಯುವುದಿಲ್ಲ ಎಂಬ ನಂಬಿಕೆ ಕನಕರಿಗೆ ದೃಢವಾಗಿದೆ. ಅದಕ್ಕೆ ಅನೇಕ ನಿದರ್ಶನಗಳನ್ನು ಪುರಾಣಗಳಲ್ಲೇ ಆರಿಸಿದ್ದಾರೆ. 'ತನಯ ಪ್ರಹ್ಲಾದನಿಗೆ ಪಿತ ಮುನಿದನು ಜನನಿಯೇ ರಕ್ಷಿಪಳೆಂತೆಂಬೆನೆ ಆ ಕುಂತಿತನಯ ರಾಧೇಯನಿಗೆ ಎರಡೆಣೆಸಿದ ಮೇಲೆ, ತಂದೆ ತಾಯಿಗಳು ರಕ್ಷಕರೆಲ್ಲಿ ಆಗುತ್ತಾರೆ ಎಂಬ ಭಾವ ಕನಕರದು. ಕಂಸ ತಂದೆಯನ್ನೇ ಬಂಧಿಸಿದ, ಸುಗ್ರೀವ ಅಣ್ಣನನ್ನೇ ಕೊಲ್ಲಿಸಿದ. ಆದ್ದರಿಂದ 'ತನಗೆ ದೇಹಾನು ಬಂಧುಗಳೇ ಬಂಧುಗಳೆಂಬ ಮನದಿ ನಿಶ್ಚಯವಾಗಿ ನಂಬಬೇಡ ಘನಕೃಪಾನಿಧಿ ಕೇಶವನನ್ನು ನಂಬಿದವರಿಗೆ ಇಹಪರದಿ ಸುಖ' ನಿರ್ಣಯ ಕನಕರದಾಗಿತ್ತು. ಹೀಗಾಗಿ ಅವರು ತಮ್ಮನ್ನು ದಾಸದಾಸರ ಮನೆಯ ದಾಸಾನುದಾಸ ನಾನು ಎಂದು ಕರೆದುಕೊಂಡು ಭಜಿಸಿ ಬದುಕಿಲೊ ಮನುಜ ಮನಮುಟ್ಟಿ ಶ್ರೀಹರಿಯ ಎಂದು ಕರೆಯಿತ್ತರು. ತಾನು ಶಿವಶರಣರ ಮನೆಯ

ಊಳಿಗದಾಳು ಎನ್ನುವ ಬಸವಣ್ಣನವರ ವಚನಗಳನ್ನು ಇಲ್ಲಿ ನೆನೆಯಬಹುದು.

ದೇವಸ್ತುತಿಯಲ್ಲಿ ಅವನು ಗೈದ ಪವಾಡಗಳನ್ನೂ, ದುಷ್ಟ ಶಿಕ್ಷಣ ಮತ್ತು ಶಿಷ್ಟ ರಕ್ಷಣೆಯ ಕಾರ್ಯಗಳನ್ನು ಕವಿ ನೆನೆಯುತ್ತಾರೆ. ಬಲಿಯ ಮೆಟ್ಟಿದ ಪಾದ, ಕಾಕುಶಕಟನ ತುಳಿದು ಕೊಂದ ಪಾದ, ಲೋಕೇಶನಿಗೆ ಒಲಿದು ಪೂಜೆಗೊಂಬುವ ಪಾದ, ಲೋಕಪಾವನೆ ಗಂಗೆ ಜನಿಸಿದ ಪಾದ, ಶಿಲೆಯ ಸತಿಯಳನು ಸೌಂದರ್ಯಗೊಳಿಸಿದ ಪಾದ, ಒಲಿದು ಪಾರ್ಥಗೆ ಧರೆಯನೊತ್ತಿದ ಪಾದ, ಕೊಲಿಸಿ ಕಾಳಗದಿ ಕೌರವರ ಕೆಡಹಿದ ಪಾದ ಎಂದು ಹೇಳಿ ಕೊನೆಗೆ ಗರುಡ ಶೇಷಾದಿಗಳು ಪೊತ್ತುಕೊಂಡಿಹ ಪಾದ ವರಕಾಗಿನೆಲೆಯಾದಿಕೇಶವನ ಪಾದ' ಎಂದು ಹರಿಯ ಹೆಗ್ಗಳಿಕೆಯನ್ನು ಬಣ್ಣಿಸುತ್ತಾರೆ. ಜನಪದದ ಧಾಟಿಯನ್ನೊಳಗೊಂಡಿರುವ ಡೊಳ್ಳಿನ ಹಾಡಿನಂತಹ ಕೀರ್ತನೆಗಳಲ್ಲೂ ಸಹ ಪುರಾಣ ಪ್ರಸಂಗಗಳು ಅಂತರ್ಗತವಾಗಿದೆ.

> ದೇವಿ ನಮ್ಮ ದ್ಯಾವರು ಬಂದರು ಬನ್ನಿರೆ ॥ ಪ ॥
> ಕೆಂಗಣ್ಣ ಮೀನನಾಗಿ ನಮ್ಮ ರಂಗ
> ಗುಂಗಾಡಿ ಸೋಮನ ಕೊಂದನ್ಯಾ
> ಗುಂಗಾಡಿ ಸೋಮನ ಕೊಂದು ವೇದವನು
> ಬಂಗಾರದೊಡಲಿಗಿತ್ತಾನ್ಯಾ ॥

ಕುರುಬರ ಸಂಪ್ರದಾಯದ ಆಚರಣೆಗಳಲ್ಲೂ ಪುರಾಣದ ಹಾಡುಗಳು ಬೆರತುಕೊಂಡಿರುವುದು ಕಂಡು ಬರುತ್ತದೆ.

'ಹರಿಭಕ್ತಿಸಾರ' ಕೀರ್ತನೆಗಳಿಗಿಂತ ತುಸು ಭಿನ್ನವಾಗುತ್ತದೆ. ಆತ್ಮನಿವೇದನಾ ಪರವಾದ ಪ್ರಾರ್ಥನಾಕೃತಿ ಇದಾಗಿದೆ. ಇಲ್ಲಿಯೂ ಸಹ ಭಕ್ತಿರಸ ಪ್ರಧಾನವಾದ ಹರಿ ನಾಮಸ್ಮರಣೆಗಳು ಕಂಡುಬರುತ್ತವೆ. ಅದಕ್ಕೆ ಅವಲಂಬನವಾಗಿ ರಾಮಾಯಣ, ಮಹಾಭಾರತ, ಭಾಗವತಗಳಲ್ಲಿ ಕಾಣುವ ಭಕ್ತರ ಚರಿತ್ರೆಗಳು ಒದಗಿಬರುತ್ತವೆ. ಭಕ್ತ ಭಗವಂತರ ಕಥೆಗಳು ರೂಪಿತವಾಗುವ ಹಾಗೆಯೇ ಭಗವಂತನನ್ನು ಎದುರಿಸಿದವರ ಕಥೆಗಳೂ ಅಡಕವಾಗಿವೆ, ಪ್ರಹ್ಲಾದ, ಅಜಾಮಿಳ ಧ್ರುವ ಮೊದಲಾದ ಭಕ್ತರ ಕಥೆಯನ್ನು, ಬಲಿ, ಬಾಣಾಸುರ, ಹಿರಣ್ಯಾಕ್ಷ, ಶಿಶುಪಾಲ, ಕಂಸ, ಮುಂತಾದ ರಾಕ್ಷಸ ವೀರರ ದೈವ ಸಂಬಂಧೀ ಘಟನೆಗಳನ್ನು ಈ ಕವಿ ಹರಿಭಕ್ತಿಸಾರದಲ್ಲಿ ತಂದಿದ್ದಾರೆ, ಶತಕಗಳ ವಸ್ತುವಿನ್ಯಾಸವನ್ನುಳ್ಳ ಇಲ್ಲಿನ ರಚನೆಗಳಲ್ಲಿ ಹರಿ ಸರ್ವೋತ್ತಮತ್ವ ಬಿಂಬಿತವಾಗಿದೆ. ಅಜಾಂಡವೇ ಮನೆ ನಾರಾಯಣನೇ ಅದರ ಯಜಮಾನ, ಬ್ರಹ್ಮ, ಶಿವ, ಸಿರಿ, ಶಾರದೆಯರು

ಕುಟುಂಬದ ವರ್ಗವಾಗಿ ಕಾಣುವ ಒಂದು ಪದ್ಯ ಹೀಗಿದೆ :

ಸಿರಿಯು ಕುಲಸತಿ ಸುತನು ಕಮಲಜ
ಹಿರಿಯ ಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು
ನಿರುತ ಮಾಯೆಯು ದಾಸಿ ನಿಜಮಂ
ದಿರವಜಾಂಡವು ಜಂಗಮ ಸ್ಥಾ
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ. ॥

ಇದಲ್ಲದೆ ಭಗವಂತ ಭಕ್ತಪರಾಧೀನ. ಅವರು ಏನೇ ಪಾಪಗಳನ್ನು ಮಾಡಿದರು ಅವರನ್ನು ಕ್ಷಮಿಸಿ ಕಾಯುವ ಔದಾರ್ಯ ಮೂರುತಿ ಈತ.

ಹೆತ್ತ ಮಗಳನು ಮದುವೆಯಾದವ
ನುತ್ತಮನು ಗುರುಪತ್ನಿಗಳುಪಿದ
ಚಿತ್ತಜನು ಮಾವನ ಕೃತಘ್ನನು ನಿನಗೆ ಮೈದುನನು
ಹೊತ್ತು ತಪ್ಪಿಸಿ ಕಾಮದಲಿ ಮುನಿ
ಪೋತ್ತಮನ ಮಡದಿಯನು ನೆರೆದವ
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ ॥

ಇಲ್ಲಿ ಪುರಾಣಪುರುಷರ ಗುಣಗಳ ಜೊತೆಯಲ್ಲೇ ದೋಷವನ್ನೂ ತೋರಿಸುವ ವಿಮರ್ಶಕ ಪ್ರಜ್ಞೆ ವಿಶಿಷ್ಟವಾದುದು.

ಮುಖ್ಯವಾಗಿ "ಕನದಾಸರು ಭಗವತ್ ಸಮರ್ಪಣೆ ಮಾಡಿಕೊಂಡ ಭಕ್ತರು. ಮಾತ್ರವಲ್ಲ ಪ್ರಾಚೀನ ಕಾವ್ಯ ಪುರಾಣ ಶಾಸ್ತ್ರಗಳನ್ನು ಆಳವಾಗಿ ಅಧ್ಯಯನ ಮಾಡಿದ ವಿದ್ವಾಂಸರೂ ಹೌದು. ಈ ಪುರಾಣಪ್ರಜ್ಞೆ ಅವರ ಕೀರ್ತನೆಗಳಲ್ಲಿ ದಟ್ಟವಾಗಿ ಹರಡಿಕೊಂಡಿದೆ. ಆದರೆ ಇದು ಶುಷ್ಕ ಸರಕಾಗಿ ಪ್ರದರ್ಶಿತವಾಗದೆ ಆತ್ಮೀಯ ಆರ್ದ್ರತೆಯಲ್ಲಿ ರಸಪಾಕದಲ್ಲಿ ಅದ್ದಿದ ಹೃದಯ ಮಿಡಿವ ಕಾವ್ಯವಾಗಿದೆ."

ಹಾಗೆ ನೋಡಿದರೆ ಹರಿದಾಸ ಪರಂಪರೆಯಲ್ಲಿ ಕನಕರೊಬ್ಬರೇ ಕವಿ. ಉಳಿದವರು ಕೀರ್ತನೆಕಾರರು. ಕೀರ್ತನೆಗಳನ್ನು ಮಾತ್ರವಲ್ಲದೆ ಮಹತ್ವದ ಕಾವ್ಯಗಳನ್ನೂ ರಚಿಸಿದ ಹಿರಿಮೆ ಕನಕರದು. ಪುರಾಣ ಪ್ರಜ್ಞೆಯಲ್ಲಿ ಸಾಮಾಜಿಕ ಬದುಕನ್ನು ಅಳವಡಿಸಿರುವುದು ಅವರ ಸಮಸ್ತ ಸಾಹಿತ್ಯದಲ್ಲೂ ಕಂಡು ಬಂದಿದೆ.

---

(ಎಚ್. ಜೆ. ಲಕ್ಕಪ್ಪ ಗೌಡ, ಕನಕದಾಸರ ಕೀರ್ತನೆಗಳ ಕಾವ್ಯ ಮೌಲ್ಯ, 'ಕನಕಕಿರಣ', ಸಂ. ಕಾ. ತ. ಚಿಕ್ಕಣ್ಣ, ಪು 141)

ಜನಪರನಾದ ಈ ಕವಿ ಸಮಕಾಲೀನ ಪ್ರಜ್ಞೆಯಲ್ಲಿ ಎಷ್ಟೇ ಪ್ರಸ್ತುತವೆನಿಸಿದರೂ ಅವರ ಬದುಕು ಅಂತಿಮವಾಗಿ ಫಲಿಸಿರುವುದು ಅಧ್ಯಾತ್ಮದಲ್ಲಿ. ಭಾರತೀಯ ದರ್ಶನದ ಪ್ರಕಾರ ಇದೇ ನಿಜವಾದ ಸಿದ್ಧಿ.

# ಕನಕದಾಸರ ದೃಷ್ಟಿಯಲ್ಲಿ ಯುದ್ಧ

**ಸುಧಾಕರ**

ಕನ್ನಡ ಸಾಹಿತ್ಯದಲ್ಲಿ ಕಲಿ ಹಾಗೂ ಕವಿಗಳಾಗಿದ್ದವರ ಪೈಕಿ ಕನಕದಾಸರೂ ಒಬ್ಬರು. ಆದರೆ ಕವಿಗಳಲ್ಲಿ ದಾಸರು. ದಾಸರಲ್ಲಿ ಕವಿಗಳು ಇವರೊಬ್ಬರೇ; ಅಷ್ಟೇ ಅಲ್ಲ ಕಲಿತನ, ಕವಿತನ, ಸಂತತನಗಳ ಮುಕ್ಕಣ್ಣುಳ್ಳವರೂ ಇವರೊಬ್ಬರೇ. ಆದ್ದರಿಂದ ಕನ್ನಡ ಸಾಹಿತ್ಯದಲ್ಲಿ ಕನಕದಾಸರ ಸ್ಥಾನ ಈ ನಿಟ್ಟಿನಿಂದ ನೋಡಿದರೆ ವಿಶಿಷ್ಟ, ವಿರಳ.

ಕನಕದಾಸರ ನಳಚರಿತ್ರೆಯ ವರ್ಣನೆಯ ಕೆಲಭಾಗದಲ್ಲಿ, ಮೋಹನ ತರಂಗಿಣಿಯ ಯುದ್ಧವರ್ಣನೆಯ ಕೆಲಭಾಗದಲ್ಲಿ ಕುಮಾರವ್ಯಾಸನ ಪ್ರಭಾವದ ಛಾಯೆಯನ್ನು ಕೆಲ ವಿಮರ್ಶಕರು ಗುರುತಿಸಿರುವುದುಂಟು. ಆದರೆ ಒಂದಲ್ಲ ಒಂದು ಪ್ರಭಾವಕ್ಕೊಳಗಾಗದ ಕವಿಗಳಾರಿದ್ದಾರೆ? ಪ್ರಭಾವ ದೋಷವಲ್ಲ ; ಪ್ರತಿಭಾವಂತ ಕವಿ ಪ್ರಭಾವದ ಹುಲ್ಲುಮೇದು ಅರಗಿಸಿಕೊಂಡು ಅದನ್ನು ಹಾಲಾಗಿ ನೀಡುತ್ತಾನೆ. ಆದ್ದರಿಂದ ಪ್ರಭಾವ ತೊಪ್ಪೆಯಾಗಿ ಬಿದ್ದಿದೆಯೋ ಅಥವಾ ಹಾಲಾಗಿ ಹರಿದಿದೆಯೋ ಎಂಬ ಅಂಶ ಮುಖ್ಯವಾಗುತ್ತದೆ.

ಉದಾಹರಣೆಗೆ "ಕುಡಿಮೀಸೆ ಕುಣಿದವು ಮೂಗಿನೊಳ್ ಪೊಗೆಸುತ್ತಿ । ಕಿಡಿಗಳನಕ್ಷಿ ಮುಕ್ಕುಳಿಸೆ" ಎಂಬ ಮೋಹನ ತರಂಗಿಣಿಯ ಯುದ್ಧವರ್ಣನೆಯ ಸಾಲುಗಳಲ್ಲಿ ಕುಮಾರವ್ಯಾಸನ ಪ್ರಭಾವವಿದೆ ಎಂದು ಹೇಳಬಹುದು. ಹಾಗೆಯೇ ಕುಮಾರವ್ಯಾಸನ ಮೇಲೂ ಹಿಂದಿನ ಕವಿಗಳ ಪ್ರಭಾವ ಇದೆ ಎಂಬುದನ್ನು ಮರೆಯಬಾರದು. ಉದಾಹರಣೆಗೆ ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಲ್ಲಿ ವಿಶ್ವಾಮಿತ್ರನಿಗೆ ಸಕಲ ರಾಜ್ಯವನ್ನು ಧಾರೆ ಎರೆದು ಕೊಟ್ಟ ಹರಿಶ್ಚಂದ್ರ "ಹರಣಮಂ ಬೇಡದುಳುಹಿದನು ಮುನಿ ಕರುಣಿಸಿದನೆಂದು ತಲೆದಡವಿಕೊಳುತ" ಹೊರಟ ವರ್ಣನೆ ಬರುತ್ತದೆ. ಕುಮಾರವ್ಯಾಸನ 'ಗದುಗಿನ ಭಾರತ'ದಲ್ಲೂ ಅಭಿಮನ್ಯುವಿನ ಸಾವಿನ ತರುವಾಯ ಕೌರವ ಸೈನ್ಯ "ತಲೆದಡವಿಕೊಳುತ" ಹೆಜ್ಜೆ ಇಟ್ಟ ವರ್ಣನೆ ಬರುತ್ತದೆ ; ಅಂದರೆ ತಮ್ಮ ತಲೆ ತಮ್ಮ ಶರೀರದ ಮೇಲೆ ಇದೆಯೋ ಇಲ್ಲವೋ

ಎಂಬುದನ್ನು ಖಾತ್ರಿ ಪಡಿಸಿಕೊಳ್ಳುವ ಸೂಚನೆ ಅದರಲ್ಲಿದೆ. ಇಲ್ಲಿ ರಾಘವಾಂಕನ ಅಭಿವ್ಯಕ್ತಿಚಾತುರ್ಯವನ್ನು ಕುಮಾರವ್ಯಾಸ ಬಳಸಿಕೊಂಡಿದ್ದಾನೆ. ಇದರಿಂದ ಕುಮಾರವ್ಯಾಸನಿಗೆ ಕುಂದುಂಟಾಗಿದೆಯೆ? ಇನ್ನೊಂದು ನಿದರ್ಶನ ನೋಡಿ : ನಿಮ್ಮ ಮಕ್ಕಳೆಂದು ತಿಳಿದು ಜೀವಸಹಿತ ಬಿಟ್ಟೆ, ಇಲ್ಲದಿದ್ದರೆ ಹೆಣ ಬೀಳುವವರೆಗೂ ಹೊಡೆಯುತ್ತಿದ್ದೆ ಎಂದು ಹರಿಶ್ಚಂದ್ರ ಹೇಳಿದಾಗ ವಿಶ್ವಾಮಿತ್ರ ಗರ್ಜಿಸುತ್ತಾನೆ–

ಹೊಡೆಯದಕ್ಕೇನವದಿರಂ ಹೊಡೆದ ಕೈಗಳಂ
ಕಡಿವೆ ನಿನ್ನಂ ನಚ್ಚಿ ಮಲೆತ ದೇಶವನುರುಹಿ
ಸುಡುವೆನಾ ದೇಶಕ್ಕೆ ಹಿತವಾಗಿ ಬಂದ ಮುನಿಯಂ ಮುರಿವೆನಾ ಮುನಿಯನು।
ಹಿಡಿದು ಕದನಕ್ಕೆಂದು ಬಂದಮರರಂ ಕೆಡಹಿ
ಹುಡುಕು ನೀರದ್ದುವೆನ್ನಳವನಜಿಯಾ ಮುನ್ನ
ತೊಡಕಿ ತನಗಾದ ಭಂಗಂಗಳಂ ಹೇಳನೇ ನಿನಗೆ ಕಮಲಜಕಂದನು ॥

ರಾಜನ ಕೈಗಳನ್ನು ಕಡಿದರೆ, ದೇಶದ ಪ್ರಜೆ ಮೇಲೆ ಬೀಳುತ್ತದೆ. ಆ ದೇಶವನ್ನು ಸುಟ್ಟಾಗ ಕುಲುಗುರು ವಶಿಷ್ಠ ಕೋಪಾವಿಷ್ಟನಾಗಿ ಮೇಲೇರಿ ಬರುತ್ತಾನೆ. ಅವನ ಸೊಕ್ಕನ್ನು ಮುರಿದಾಗ ದೇವತೆಗಳು ನಾಲಗೆ ಅಲ್ಲಾಡಿಸುತ್ತಾ ಬರುತ್ತಾರೆ. ಆಗ ಅವರನ್ನು ಸುಡುನೀರಿನಲ್ಲಿ ಅದ್ದಿ ಅದ್ದಿ ಎಸೆಯುತ್ತೇನೆ– ಎಂಬ ವಿಶ್ವಾಮಿತ್ರನ ಮಾತುಗಳು ಒಂದು ಘಟನೆ ಮತ್ತೊಂದು ಘಟನೆಗೆ 'ಕೊಕ್' ಕೊಡುವ ಅಥವಾ ಒಂದು ಘಟನೆ ಮತ್ತೊಂದನ್ನು ಹೆರುವ ಕೊಂಡಿಗಳುಳ್ಳ ಸರಪಣಿಯಂತಿರುವುದನ್ನು ಗಮನಿಸಬಹುದು.

ಕುಮಾರವ್ಯಾಸನ ಭಾರತದ ವಿರಾಟಪರ್ವದಲ್ಲಿ ದ್ರೌಪದಿಗೆ ಭರವಸೆ ಕೊಡುವಾಗ ಭೀಮ ಹೇಳುತ್ತಾನೆ :

ಬಸುರ ಬಗೆವೆನು ಕೀಚಕನ ನಸು
ಮಿಸುಕಿದೊಡೆ ವೈರಾಟವಂಶದ
ಹೆಸರ ತೊಡೆವೆನು ನಮ್ಮನರಿದೊಡೆ ಕೌರವ ವ್ರಜವ ।
ಕುಸುರಿದರಿವೆನು ಭೀಮ ಕಷ್ಟವ
ನೆಸಗಿದನು ಹಾಯೆಂದರಾದೊಡೆ
ಮುಸುಡನಮರಾದ್ರಿಯಲಿ ತೇವೆನು ದೇವಸಂತತಿಯ ॥

ಕೀಚಕನನ್ನು ಕೊಂದರೆ ವಿರಾಟನ ಕಡೆಯವರು ಮೇಲೇರಿ ಬರುತ್ತಾರೆ. ಅವರನ್ನು ಕೊಂದರೆ, ಪಾಂಡವರು ಅಲ್ಲಿಯೇ ಇರಬಹುದೆಂದು ಊಹಿಸಿ ಕೌರವ ದಂಡೆತ್ತಿ ಬರುತ್ತಾನೆ. ಅವರನ್ನೂ ಧ್ವಂಸ ಮಾಡಿದಾಗ ಬೇರೆ ಕೆಲಸವಿಲ್ಲದ ದೇವತೆಗಳು

ನನ್ನ ಬಗ್ಗೆ ಅಪಸ್ವರ ಎತ್ತಿದರೆ ಅವರ ಮೂತಿಗಳನ್ನು ಅರೆಬಂಡೆಯ ಮೇಲೆ ಉಜ್ಜಿಬಿಡುತ್ತೇನೆ–ಎಂಬ ಭೀಮನ ಮಾತುಗಳೂ ಸಹ, ಒಂದು ಘಟನೆ ಮತ್ತೊಂದನ್ನು ಹೆರುವ ಕೊಂಡಿಗಳುಳ್ಳ ಸರಪಣಿಯಂತಿರುವುದನ್ನು ಗಮನಿಸಬಹುದು. ಅಂದರೆ ರಾಘವಾಂಕನ ಸರಪಳಿ ಘಟನೆಗಳ ತದ್ವತ್ ಧಾಟಿಯೇ ಕುಮಾರವ್ಯಾಸನಲ್ಲಿ ನಾಟಿಗೊಂಡಂತಿದೆ. ರಾಘವಾಂಕನ ಪದ್ಯದ ಅಂತ್ಯದಲ್ಲಿ ದೇವತೆಗಳನ್ನು ಸುಡುನೀರಿನಲ್ಲಿ ಅದ್ದುವ ರೂಪಕ ಬಳಕೆಯಾಗಿದ್ದರೆ ಕುಮಾರವ್ಯಾಸನ ಪದ್ಯದ ಅಂತ್ಯದಲ್ಲಿ ದೇವತೆಗಳ ಮುಸುಡನ್ನು ತೇಯುವ ರೂಪಕ–ಸಾಣೆಕಲ್ಲು ಮತ್ತು ಗಂಧದ ಕೊರಡಿನ ರೂಪಕ–ಬಳಕೆಯಾಗಿದೆ. ಅಷ್ಟೆ ; ಧಾಟಿ ಮಾತ್ರ ಒಂದೇ.

ಅದ್ದರಿಂದ ಪ್ರಾಚೀನ ಕವಿಗಳ ಪ್ರಭಾವವಿರದ ಅರ್ವಾಚೀನ ಕವಿಗಳಿರುವುದಿಲ್ಲ. ಆದರೆ ಆ ಪ್ರಭಾವ ಗುಣವಿಶೇಷವಾಗಿ ಮೂಡಿದೆಯೇ ಇಲ್ಲವೇ ಎಂಬುದು ಮುಖ್ಯವಾಗುತ್ತದೆ. ಗುಣವಿಶೇಷವಾದಾಗ ಪ್ರಭಾವ ದೋಷವಾಗುವುದಿಲ್ಲ. ಕನಕದಾಸರಲ್ಲಿ, ಕುಮಾರವ್ಯಾಸನಲ್ಲಿ ಹೇಗೋ ಹಾಗೆ ಪ್ರಭಾವ ದೋಷವಾಗಿಲ್ಲ.

## ೨

ಮೊಗಲರ ಆಕ್ರಮಣದಿಂದ ಹಿಂದೂ ಧರ್ಮ ಸಂಸ್ಕೃತಿಗಳನ್ನು ಉಳಿಸಲೋಸುಗ ಉದಯವಾದ ವಿಜಯನಗರ ಸಾಮ್ರಾಜ್ಯದ ವೈಭವದ ದಿನಗಳಲ್ಲಿ ಬದುಕಿದ್ದವರು ಕನಕದಾಸರು. ಸಾಮಂತರಾಜರಾದ ಇವರೂ ಸಹ ಪರರಾಯರ ಆಕ್ರಮಣವನ್ನು ದಮನಮಾಡಲು ಪ್ರಾಣದ ಹಂಗುದೊರೆದು ಹೋರಾಡಿದವರೇ. ಇವರು ರಣರಂಗವನ್ನು ಹೊಕ್ಕರೆಂದರೆ "ಪೌಜು ಕನಕುಮನಕು" ಆಗುತ್ತಿತ್ತೆಂದು ತಾವೇ ಒಂದು ಹಾಡಿನಲ್ಲಿ ಹೇಳಿಕೊಂಡಿದ್ದಾರೆ. ದೇಶಪ್ರೇಮ ನರನಾಡಿಗಳಲ್ಲಿ ಧುಮ್ಮಿಕ್ಕಿ ಹರಿಯುತ್ತಿದ್ದ ಆ ಕಾಲದಲ್ಲಿ ವೀರಕ್ಕೆ ಮೊದಲ ಸ್ಥಾನ. ಹಾಗೆ ವೀರರಾಗಿ ಹೋರಾಡುವಾಗ, ಶತ್ರುಗಳಿಂದ ಪ್ರಾಣಾಂತಿಕ ಪೆಟ್ಟು ತಿಂದು, ಅಂಥ ಸಮಯದಲ್ಲಿ ದೇವರೇ ನನ್ನ ಪ್ರಾಣ ಉಳಿಸಿದನೆಂದುನಂಬಿ ದಾಸನಾದ ಪ್ರಸಂಗ ಅವರ ಕೀರ್ತನೆಯಿಂದಲೇ ತಿಳಿದು ಬರುತ್ತದೆ. ಆ ಪ್ರಾಣಾಂತಿಕ ಘಟನೆ ಹಾಗೂ ತಾವು ಕಂಡಿದ್ದ ಯುದ್ಧದ ಸಾವುನೋವು ಅವರನ್ನು ವೈರಾಗ್ಯದತ್ತ ದೂಡಿದವೆಂದು ತೋರುತ್ತದೆ. ಆ ಕಾರಣದಿಂದಲೋ ಏನೋ ಕನಕದಾಸರ ಮೋಹನ ತರಂಗಿಣಿಯ ಯುದ್ಧವರ್ಣನೆಯಲ್ಲಿ ವೀರಕ್ಕೆ ಅಗ್ರ ತಾಂಬೂಲ ಸಂದಿದ್ದರೂ,

ಸರ್ವನಾಶ ಸಂಭವಿಸುವ ಸಮಯದಲ್ಲಿ ಸಮನ್ವಯ ದೃಷ್ಟಿ ಕಂಡುಬರುತ್ತದೆ ; ಮಾನವೀಯ ಅನುಕಂಪ ದಾನವೀಯ ರಣರಂಪವನ್ನು ತಡೆ ಹಿಡಿಯುತ್ತದೆ.

ಕನಕದಾಸರ 'ಮೋಹನ ತರಂಗಿಣಿ' ಮತ್ತು ರತ್ನಾಕರನ 'ಭರತೇಶ ವೈಭವ' ಹದಿನಾರನೆಯ ಶತಮಾನದ ಎರಡು ಮಹತ್ವದ ಸಾಂಗತ್ಯ ಕೃತಿಗಳು, ಎರಡರಲ್ಲೂ ವಿಜಯನಗರ ಸಾಮ್ರಾಜ್ಯದ ಭೋಗವೈಭವಗಳು ಚಿತ್ರಣಗೊಂಡಿವೆ ; ಶೃಂಗಾರ ವೀರಗಳು ಪ್ರೇಮಕಾಮಗಳು ಎರಕಗೊಂಡಿವೆ. ಆದರೆ ಯುದ್ಧದ ಸ್ವಾನುಭವವಿರುವ ಕನಕದಾಸರ ಯುದ್ಧವರ್ಣನೆ ತಮ್ಮ ಸಮಕಾಲೀನ ಕವಿಯಾದ ರತ್ನಾಕರನ ಯುದ್ಧ ವರ್ಣನೆಗಿಂತಲೂ ಹೆಚ್ಚು ಜೀವಂತವಾಗಿ, ಶಕ್ತಿಯುತವಾಗಿ ಬಂದಿದೆ ಎಂಬುದರಲ್ಲಿ ಎರಡು ಮಾತಿಗೆ ಎಡೆಯಿಲ್ಲ, ಭರತೇಶ ವೈಭವದ 'ದಿಗ್ವಿಜಯ'ದ ಅಧ್ಯಾಯ ಯುದ್ಧಕ್ಕಿಂತ ಹೆಚ್ಚಾಗಿ 'ಪ್ರಣಯದ ದಿಗ್ವಿಜಯ'ವೇ ಆಗಿರುವುದನ್ನು ಮರೆಯುವಂತಿಲ್ಲ.

೩

ಕನ್ನಡ ಕಾವ್ಯಗಳಲ್ಲಿ ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳು ವರ್ಣಿತವಾಗಿವೆ ; ಶಸ್ತ್ರಾಸ್ತ್ರ ಯುದ್ಧಗಳೂ ಸಹ. ಕನಕದಾಸರ ಕಾವ್ಯಗಳಲ್ಲಿ ದೃಷ್ಟಿಯುದ್ಧ, ಜಲಯುದ್ಧಗಳಿಲ್ಲ ; ಮಲ್ಲಯುದ್ಧ, ಶಸ್ತ್ರಾಸ್ತ್ರಗಳ ಯುದ್ಧಗಳಿವೆ ; ಜೊತೆಗೆ 'ವಾಗ್ಯುದ್ಧ'ವೂ ಸಹ. ರಾಮಧಾನ್ಯಚರಿತೆಯಲ್ಲಿ ವ್ರೀಹಿಗೂ ನರೆದಲಗನಿಗೂ ನಡೆಯುವ ಮಾತಿನ ಸೆಣೆಸಾಟ 'ವಾಗ್ಯುದ್ಧ'ಕ್ಕೆ ಒಳ್ಳೆಯ ಉದಾಹರಣೆ.

ಶ್ರೀ ರಾಮನ ಸಮ್ಮುಖದಲ್ಲಿ ಗೌತಮ ಮಹರ್ಷಿ ನವಧಾನ್ಯಗಳಲ್ಲಿ ರಾಗಿಯೇ ಶ್ರೇಷ್ಠ ಎಂದು ಹೇಳಿದಾಗ ಅದನ್ನು ಸಹಿಸಲಾರದೆ ವ್ರೀಹಿಗ ತನ್ನ ಹೊಟ್ಟೆಯ ವಿಷವನ್ನೆಲ್ಲ ಕಕ್ಕುತ್ತಾನೆ :

ಏನೆಲವೊ ನರೆದಲಗ ನೀನು ಸ
ಮಾನೇಯೆನಗಿಲ್ಲಿ ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚುಕುಂದುಗಳ ।
ಜಾನಕಿ ಪತಿಯ ಸನಿಹದಲಿ ಕುಲ
ಹೀನ ನೀನು ಪ್ರತಿಷ್ಠ ಸುಡು ಮತಿ
ಹೀನ ನೀನೆಂದೆನುತ ಖತಿಯಲಿ ಬೈದು ಭಂಗಿಸಿದ ॥

ಲೋಕದಲಧಿಕ ಭೋಜನವಿದೆಂ
ದಾಕೆವಾಳರು ಬುಧರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ ।
ನಾಕನಿಳಯರು ಸಾಕ್ಷಿ ನಿನ್ನ ವಿ
ವೇಕಿಗಳು ಮೆಚ್ಚುವರೆ ಬಾಹಿರ
ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗೆಂದ ॥

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನ ಪರಮ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ ।
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಹೆನೆಂದನಾ ವ್ರಿಹಿಗ ॥

ಜನಪರಿಗೆ ಶಿಶುಗಳಿಗೆ ಬಾಂಧವ
ಜನರೆಡೆಗೆ ಬ್ರಹ್ಮರ ಸಮಾರಾ
ಧನೆಗೆ ವಿದ್ಯಾರಂಭ ಕಾಲಕೆ ಸಕಲ ಭೂಸುರರ ।
ಮನೆಗಳಿ ಹರಿದಿವಸದೌಪಾ
ಸನೆಗಳಲಿ ತಾ ಯೋಗ್ಯನಹುದೆಂ
ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ ತೊಲಗೆಂದ ॥

ಹೊಸ ಮನೆಯ ಪುಣ್ಯಾರ್ಚನೆಗೆ ಮಿಗೆ
ಯೆಸೆವ ಮದುಮಕ್ಕಳಿಗೆ ಸೇಸೆಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ ।
ಎಸೆವ ವಿಪ್ರರ ಫಾಲದಲಿ ರಂ
ಜಿಸುವ ಗಂಧಾಕ್ಷತೆಯಹೆನು ಭಾ
ವಿಸಲು ಲೋಕದೊಳಾರು ಸರಿಯಿಂತೆಂದನಾ ವ್ರಿಹಿಗ ॥

..................................................................

ಪರಿಮಳದ ಚಂದನದ ತರುವಿಗೆ
ಸರಿಯೆ ಒಣಗಿದ ಕಾಷ್ಠ ಗೋವದು
ಕರೆದ ಹಾಲಿಗೆ ಕುರಿಯು ಹಾಲಂತರವೆ ಭಾವಿಸಲು ।
ಪರಮ ಸಾಹಸಿ ವೀರ ಹನುಮಗೆ
ಮರದ ಮೇಲಣ ಕಪಿಯ ತಾನಂ
ತರವೆ ಫಡ ನೀನೆನಗೆ ಸರಿಯೇ ಭ್ರಷ್ಟ ತೊಲಗೆಂದ ॥

ಮೇಲರಿಮೆ ಅಥವಾ ಸರ್ವಶ್ರೇಷ್ಠತೆಯ ಪಿತ್ತ ನೆತ್ತಿಗೇರೀದ ವ್ರೀಹಿ ಒಂದೇ ಸಮ ಬಾಯಿಗೆ ಬಂದದ್ದನ್ನು ಬಡಬಡಿಸಿದಾಗ ನರೆದಲನಿಗೆ ಕೋಪ ಬ್ರಹ್ಮರಂಧ್ರಕ್ಕೇರುತ್ತದೆ 'ನುಡಿಗೆ ಹೇಸದ ಭಂಡ ನಿನ್ನೊಳು । ಕೊಡುವರೇ ಮಾರುತ್ತರವ ಕಡು । ಜಡನಲಾ ನಿನ್ನೊಡನೆ ಮಾತೇಕೆ' ಎಂದು ಮನದಲ್ಲಿ ಅಂದುಕೊಂಡರೂ ತಡೆಯಲಾರದೆ ಸಿಡಿಲಂತೆ ಗರ್ಜಿಸುತ್ತಾನೆ :

ಸತ್ವಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು ।
ಹೆತ್ತ ಬಾಣಂತಿಯರು ರೋಗಿಗೆ
ಪತ್ಯ ನೀನಹೆ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ ॥

ಸತ್ತ ದಿನದಾರಭ್ಯ ಮನುಜರು
ಮತ್ತೆ ಕರ್ಮದ ಹೊತ್ತು ಪಿಂಡವ
ನಿತ್ತು ತಪ್ಪದೆ ಮತ್ತೆ ವಾಯಸ ಕುಲವ ಕರಕರದು ।
ತುತ್ತನಿಡುವರು ಎಳ್ಳು ದರ್ಭೆಗೆ
ತೆತ್ತಿಗನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದ ॥

ಮಳೆದೆಗೆದು ಬೆಳೆಯಡಗಿ ಕ್ಷಾಮದ
ವಿಲಯಕಾಲದೊಳನ್ನವಿಲ್ಲದ
ಅಳಿವ ಪ್ರಾಣಿಗಳಾದರಿಸಿ ಸಲಹುವೆನು ಜಗವರಿಯೆ ।
ಎಲ್ಲವೊ ನೀನೆಲ್ಲಿಹೆಯೊ ನಿನ್ನಯ

ಬಳಗವದು ತಾನೆಲ್ಲಿಹುದೀ
ಹಲವು ಹುಲುಧಾನ್ಯಗಳೆನಗೆ ಸರಿದೊರೆಯೆ ಕೇಳೆಂದು ॥

ಬಲ್ಲಿದರು ಬರೆ ಬಡವರಲಿ ನಿ
ನ್ನಲ್ಲಿಯುಂಟುವುಪೇಕ್ಷೆ ನಮ್ಮಲಿ
ಸಲ್ಲದೀ ಪರಿ ಪಕ್ಷಪಾತವದಿಲ್ಲ ಭಾವಿಸಲು।
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲ ತಾ ನಿನ್ನಂತೆ ಎಲ ಕುಟಿಲಾತ್ಮ ಹೋಗೆಂದ ॥

ಇಷ್ಟೇ ಅಲ್ಲ, ವ್ರೀಹಿಯನ್ನು 'ನಪುಂಸಕ' ಎಂದೂ ಲೇವಡಿ ಮಾಡುತ್ತಾನೆ ನರೆದಲಗ. ಹೀಗೆ ಮಾತಿನ ಮೂಲಕವೇ ಜರುಗುವ ಈ ಯುದ್ಧ ವಿಶಿಷ್ಟವಾದದ್ದು. ಕೈಕಾಲಿಗೆ ಪ್ರಾಣಕ್ಕೆ ಜಖಂ ಆಗದಿದ್ದರೂ ಮನಸ್ಸಿಗೆ ಮಾನಕ್ಕೆ ಜಖಂ ಆಗುವಂಥ ಯುದ್ಧವಿದು. ಅನ್ಯಾಯ ಪಕ್ಷಪಾತ ಅಸಮಾನತೆಯ ವಿರುದ್ಧ ಝಳಪಿಸಿದ ಬಂಡಾಯದ ನಾಲಗೆ ಖಡ್ಗವಿದು.

ಬಾಯಿಯ ನಾಲಗೆ–ಖಡ್ಗದ ಜೊತೆಗೆ ಹಸ್ತದ ಲೋಹ–ಖಡ್ಗವನ್ನು ಬಳಸಿ ಯುದ್ಧ ಮಾಡುವ ವರ್ಣನೆ ಪಂಪ ರನ್ನ ಕುಮಾರವ್ಯಾಸರಲ್ಲಿ ಸಶಕ್ತವಾಗಿ ಬಂದಿರುವಂತೆ ಕನಕದಾಸರ ಮೋಹನ ತರಂಗಿಣಿಯಲ್ಲೂ ಬಂದಿದೆ. ಉದಾಹರಣೆಗೆ ಅನಿರುದ್ಧನು ಬಾಣಾಸುರನ ಕಡೆಯ ದೈತ್ಯರನ್ನು 'ಸಿಡಿದಲೆಗೊಟ್ಟು' ಮಲೆತು ನಿಂತಿದ್ದಾಗ ಎದುರಾದ ಕುಂಭಾಂಡನಿಗೆ ಹೇಳುತ್ತಾನೆ :

ನೋಡೆನ್ನ ಕೈಚಳಕವ ಬಾಯಿ ಪಂತವ
ನಾಡುವರಾವಲ್ಲವೆನುತೆ
ಹೂಡಿದ ಕೂರ್ಗಣೆಯಿಂದೆ ದೈತ್ಯನ ಮೆಯ್ಯ
ತೋಡಿದನೈದಂಬಿನಲಿ ॥

ಕುಂಭಾಂಡ ಪೆಟ್ಟಿನಿಂದ ಮೂರ್ಛೆ ಹೋದಾಗ ಉಳಿದ ರಕ್ಷಸರು ಅನಿರುದ್ಧನನ್ನು ಮುತ್ತಿ ಹೀಗೆಂದು ಹಂಗಿಸುತ್ತಾರೆ :

ಎಳೆವಾಟೆ ಬಲ್ಪಿಗೆ ಬಂದರೆ ಸೀಗೆಯ
ಮೆಳೆಯೊಳು ಮಥನವೆ ಮಗನೆ
ಇಳೆಯೊಳಗಜಿದಿರಿನ್ನೆಂದಿಗೆ ನೀ ಹುಟ್ಟಿ
ಬೆಳೆವೆ ಹೋಗೆಂದು ಸಾರಿದರು ॥

ಬಾಟಿ ನಾನಹುದು ನಿಮ್ಮವೆ ಕೊಲ್ಲದನ್ನಕ
ಬಾಟಿ ಬಿಲ್ಲಾನ್ವಿತನಾಗಿ
ಬಾಟಿ ಬಾಣಾತ್ಮ ಸಂಭವೆಯಿಲ್ಲದಾನೊರ್ವ
ಬಾಟಿನೆಂದನಿರುದ್ಧ ನುಡಿದ ॥

ಇಲ್ಲಿ ಬಾಯಿಯ ನಾಲಗೆ–ಖಡ್ಗ ಹಸ್ತದ ಲೋಹ–ಖಡ್ಗದ ಜೊತೆಜೊತೆಗೇ ಅಖಾಡಕ್ಕೆ ಇಳಿದಿರುವುದನ್ನು ಕಾಣುತ್ತೇವೆ.

ಬಾಣಾಸುರ ಕೃಷ್ಣನ ಹಲವು ಅವತಾರಗಳನ್ನು ಎತ್ತಿ ಆಡಿ, ಯುದ್ಧದಲ್ಲಿ ಹಿಮ್ಮೆಟ್ಟಿ ಮರೆಮೋಸದಿಂದ ಶತ್ರುಗಳನ್ನು ಕೊಂದೆ ಎಂದು ಹಿಯ್ಯಾಳಿಸುತ್ತಾನೆ:

ಯದುಕುಲೋತ್ತಮ ಕೇಳು ಸಮರಕೆ ಹಿಮ್ಮೆಟ್ಟಿ
ಬದುಕುವ ರಣಭಂಡರನು
ಕುದುಕುಳಿ ಜಯಲಕ್ಷ್ಮಿ ಕೂಡಿಕೊಂಬವಳಲ್ಲ
ವದು ಕಾರಣ ಪೇಟ್ದ್ದಿ ನಿನಗೆ ॥

ಆಗ ಕೃಷ್ಣನ ನಾಲಗೆ–ಖಡ್ಗದ ಏಟನ್ನು ನೋಡಿ–

ತಗಱು ಹಿಮ್ಮೆಟ್ಟಿ ಧಾರಿಣಿಯೊಳು ಬರಸಿಡಿ
ಲೊಗೆವಂತೆ ಬಂದೆಱುಗುವುದು
ತೆಗೆದೆಸೆಯಲು ಸರಲ್ಗಳು ಪೋಗಿ ಗರ್ಭವ
ಬಗೆಯದೆ ಮಾಱ್ಪುದೆ ಮರುಳೆ

ಅಡಗುವ ಶಾರ್ದೂಲ ಹಾಱುವ ಹರಿಣನ
ಕೆಡಹಿ ರೋಹಿತವನೀಂಟುವುದು
ಪೊಡವಿಯೊಳಾರದು ಗೆಲುಸೋಲವೆಂಬುದ
ಜಡಮತಿ ತಿಳಿದು ಪೇಟಿನಗೆ ॥

ಕುರಿ ಟಗರು ಹಿಂದು ಹಿಂದಕ್ಕೆ ಸರಿದು ಹೋಗುವುದು ಅತಿಯಾದ ವೇಗ ಮತ್ತು ಶಕ್ತಿಯಿಂದ ಬಂದು ಎದುರಾಳಿಯನ್ನು ಗುದ್ದುವುದಕ್ಕೆ. ಹಾಗೆಯೇ ನಾನು ಸಮರದಲ್ಲಿ ಹಿಮ್ಮೆಟ್ಟಿ ಹೋಗಿದ್ದರೆ ಅದು ವೈರಿಯನ್ನು ಮೆಟ್ಟಿ ಹಾಕುವುದಕ್ಕೇ ವಿನಾ ಅಂಜಿಕೆಯಿಂದಲ್ಲ ಎಂಬುದು ಕೃಷ್ಣನ ಉತ್ತರ.*

---

* ಡಾ. ಕೊ. ತಿ. ನ ಅವರು "ಮರುಳೆ, ಹೊಡೆದ ನನ್ನ ಬಾಣಗಳು ಸಿಡಿಲಿನಂತೆ ಅಡ್ಡ ಗಟ್ಟಿ ನಿನ್ನನ್ನು ಹಿಮ್ಮೆಟ್ಟಿಸುವವಲ್ಲದೆ ನಿನ್ನ ಗರ್ಭವನ್ನೂ ಹೊಕ್ಕು ಸೀಳಿಬಿಡುವುದು" ಎಂದು ಗದ್ಯಾನುವಾದ ಮಾಡಿ, ಮೂಲದ 'ತಗರುಪಟ್ಟಿ'ನ ಸೊಗಸು ಶಕ್ತಿಗಳು ಸೋರಿ ಹೋಗುವಂತೆ

ಮನ್ಮಥ ಶಂಬರಾಸುರನ ಕಡೆಯವರ "ಪುಸ್ತಕಗಳ ತಿರಿಕಲ್ಲಾಡಿ ಬೊಬ್ಬಿರಿ"ದಾಗ, ಅವನನ್ನು ಎದುರುತಾಕಿದವರು "ತಿರುಗದ ಹಾದಿಯ ಮೆಟ್ಟಿ"ದಾಗ ಶಂಬರಾಸುರನೇ ಯುದ್ಧಕ್ಕೆ ಬಂದು, ನಿನ್ನ ಹೂ ಬಾಣ ಹೆಂಗಸರ ಮೊಲೆಗೆ ನಾಟಬಹುದೇ ವಿನಾ ನನ್ನ ಕಲ್ಲೆದೆಗೆ ನಾಟಲಾರವು ಎಂದು ಹೀಯಾಳಿಸಿದಾಗ ಮನ್ಮಥನ ಮಾರುತ್ತರ :

ಪೇತೆ ನೀನೇನು ದೊಡ್ಡಿತು ನನ್ನ ಸಕಲ ಮು
ಯ್ಮಾತು ಕೊಂಬೊಡೆ ರುದ್ರಗರಿದು
ಮಾತುಗಾಱಿಕೆ ಬೇಡ ಹಿಡಿಯೆಂದು ಬಾಳದೆ
ತೊತೇಱಿಲೆಚ್ಚು ಬೊಬ್ಬಿರಿದ ॥

ಇಲ್ಲಿ ಬಳಕೆಯಾಗಿರುವ 'ಪೇತೆ' ಎಂಬ ಸಂಬೋಧನೆ ಗಮನಿಸಿ, ನಿಶ್ಶಕ್ತ, ಒಣಕಲ ಎಂಬ ಅರ್ಥ ಕೊಡುವ ಈ ಶಬ್ದವನ್ನು ನೇರವಾಗಿ ಜನಪದರ ನಾಲಗೆಯ ಮೇಲಿಂದ ಎತ್ತಿ ತಂದು ಅದರ ಮೂಲಕವೇ ಎದುರಾಳಿಗೆ 'ಲಾತ' ಕೊಡಿಸಿದ್ದಾರೆ. ಅದಕ್ಕೆ ಪ್ರತಿಯಾಗಿ ಶಂಬರಾಸುರ :

ಕಱಿಗೊರಲನ ಕಣ್ಣ ದಳ್ಳುರಿಯಲಿ ಬೆಂದ
ಕೊಱಿಗೊಳ್ಳಿ ನಿನಗೇಕೆ ಪಂತ
ನೆಱೆಕೂರ್ಗಣೆಯಿಂದೆ ಕಾಯ್ದುಕೊಳ್ಳೆನುತಾರ್ದು
ಪೆಱೆನೊಳಸಲೊಡೆಯಲಿಕ್ಕಿದನು ॥

ಮನ್ಮಥನನ್ನು ಮುಕ್ಕಣ್ಣನ ಕಿಡಿಗಣ್ಣಲ್ಲಿ ಬೆಂದ 'ಕೊಱಿಗೊಳ್ಳಿ' ಎಂದು ಸಂಬೋಧಿಸಿರುವ ರೀತಿ ಚುರುಕು ಮುಟ್ಟಿಸುವಂಥದು. ಕರಿಕಾದ ಕೊಳ್ಳಿ, ಕುರಿತುಕೊಂಡ ಕೊಳ್ಳಿ ಎಂದರ್ಥವಾಗುವ ಕೊರೆಗೊಳ್ಳಿ ಶಬ್ದಪ್ರಯೋಗ ಕನಕದಾಸರ ಸ್ವಂತಿಕೆ ಹಾಗೂ ಧೀಮಂತಿಕೆಯ ಪ್ರತೀಕಸಜೀವ ಸಚಿತ್ರ ವರ್ಣನಾಶಕ್ತಿಯ ದ್ಯೋತಕ.

ಇದುವರೆಗೆ ನಾಲಗೆ ಮತ್ತು ಲೋಹಗಳ ಜೋಡಿ ಶಸ್ತ್ರಗಳ ಮೂಲಕ ಮಾಡಿರುವ ಯುದ್ಧವರ್ಣನೆಯನ್ನು ನೋಡಿದೆವು. ಶಸ್ತ್ರರಹಿತ ಮಲ್ಲಯುದ್ಧವನ್ನು ಈಗ ಪರಿಶೀಲಿಸೋಣ.

---

ಮಾಡಿದ್ದಾರೆ. ಕನಕದಾಸರಿಗೆ 'ತಗರುಪಟ್ಟು' ವಂಶಪಾರಂಪರ್ಯವಾಗಿ ಗೊತ್ತು. ಡಾ. ಕೊ.ತಿ. ನ ಅವರಿಗೆ ಅದರ ಪಟ್ಟಾಗಲಿ ಪೆಟ್ಟಾಗಲಿ ತಿಳಿಯದ್ದರಿಂದ ರೂಪಕದ ಸೊಗಸನ್ನೇ 'ಚಟ್' ಆಗಿಸಿದ್ದಾರೆ. ನೋಡಿ : ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿತ ಮೋಹನ ತರಂಗಿಣಿ ಗದ್ಯಾನುವಾದ ಕೃತಿ.

'ಬತ್ತೀಸ ಖಡ್ಗಗಳ' ಯುದ್ಧದಲ್ಲಿ ದಣಿದ ಮೇಲೆ ಶಂಬರಾಸುರ ಮಾಯಾ ಯುದ್ಧಕ್ಕೆ ತೊಡಗುತ್ತಾನೆ. ಕೋಣನ ರೂಪ ತಾಳಿ ಮನ್ಮಥನತ್ತ ನುಗ್ಗುತ್ತಾನೆ. ಆಗ ಮನ್ಮಥನು ಅದನ್ನು ತುಂಡರಿಸುವ ವರ್ಣನೆ ಹೀಗಿದೆ :

ವಾರಿಜದಳಲೋಚನೆ ನೀ ಕೇಳು ರಣಮಹಾ
ಮಾರಿಯ ಮುಂದೆ ಬೊಬ್ಬಿರಿದು
ತೋರಿದು ಕೋಣನ ಪೆರ್ದಂತಿ ಕಡಿವಂತೆ ಹ
ರಾರಿ ಖಂಡಿಸಿದ ಖಂಡೆಯದಿ ॥

ಇಲ್ಲಿ 'ಪೆರ್ದಂತಿ ಕಡಿವಂತೆ' ಎಂಬುದಕ್ಕೆ ಸರಿಯಾದ ಪಾಠ 'ಪೆರ್ಬುಲಿ ಕೊಡುವಂತೆ' ಎಂದು. "ರಣಮಹಾಮಾರಿಯ ಮುಂದೆ ಕೊಬ್ಬಿದ ಕೋಣನನ್ನು ಪೆರ್ಬಲಿ ಕೊಡುವಂತೆ ಮನ್ಮಥ ಅದನ್ನು ಕಡಿದ' ಎಂದು ಕನಕದಾಸರು, ಮಾರಿಹಬ್ಬದಲ್ಲಿ ಕೋಣನನ್ನು ಬಲಿ ಕೊಡುವ ಜನಪದ ಆಚರಣೆಯ ದೃಶ್ಯ ರೂಪಕದಲ್ಲಿ ತುಂಬ ಸೊಗಸಾಗಿ ಸೆರೆಹಿಡಿದಿದ್ದಾರೆ.

ಕೊನೆಗೆ ಶಂಬರಾಸುರ ಆನೆ ರೂಪವನ್ನು ತಾಳಿದಾಗ ಮನ್ಮಥ ನರಸಿಂಹನಾಗಿ ಅದನ್ನು ಸೀಳುತ್ತಾನೆ. ಕೊನೆಗೆ ಶಂಬರಾಸುರ "ಮಲ್ಲಯುದ್ಧ" ಕ್ಕೆ ನಿಲ್ಲುತ್ತಾನೆ :

ದರ್ಪಕ ದೈತ್ಯವಲ್ಲಭನೊಳಗಿದಿರಾಂತ ।
ನಿಪ್ಪಸರದೆ ತೋಳ ಮೊದಲ
ಚಪ್ಪಳಗೊಳಿಸಿ ದಂಡೆಯ ಹೂಡಿ ನಿಂದಿರ್ದ
ವೊಪ್ಪವನೇನ ಬಣ್ಣಿಪೆನು ॥

"ಭುಜ ತಟ್ಟಿ, ದಂಡೆ ಹೊಡೆದು' ಮಲ್ಲಯುದ್ಧಕ್ಕೆ ಅಣಿಯಾಗುವ ಮನ್ಮಥನ ನಿಲುವು ಆ ಕಾಲದ ಕುಸ್ತಿಯನ್ನು ಕಣ್ಮುಂದೆ ತರುತ್ತದೆ.

ಹೊಗುವರು ಹೊರಡುವರೆಲ್ಲ ಸಿಕ್ಕಿದರಲ್ಲಿ
ಬಿಗಿವರು ಬಿನ್ನಣಿಸುವರು
ತೆಗೆವರು ಕೆಳಗು ಮೇಲಾಗುವರೊಡನೊಡ
ನೆಗೆವರು ನಿಂದು ಕಾದುವರು ॥

ಕುಸ್ತಿಯ ಪಟ್ಟುಗಳನ್ನು, ವಿವಿಧ ವರಸೆಗಳನ್ನು ಮೇಲಿನ ಮಲ್ಲಯುದ್ಧ ವರ್ಣನೆಯಲ್ಲಿ ಕಾಣಬಹುದು. ಮೇಲಾಗಿ ಹೊಗುವರು. ಹೋರಾಡುವರು, ಬಿಗಿವರು, ಬಿನ್ನಣಿಸುವರು, ತೆಗೆವರು, ಕೆಳಗು ಮೇಲಾಗುವರು, ನೆಗೆವರು ಮೊದಲಾದ ನಿರಾಭರಣ ಕ್ರಿಯಾಪದಗಳಿಂದಲೇ 'ಕುಸ್ತಿಯ ಕ್ರಿಯೆ' ಕಣ್ಮುಂದೆ ನಿಲ್ಲುವಂತೆ

ಮಾಡಿರುವ ಮೋಡಿ ಮೆಲುಕು ಹಾಕುವಂಥದು.

ಮಲ್ಲಯುದ್ಧವಲ್ಲದೆ "ಪಶುಪಕ್ಷಿಗಳ ಯುದ್ಧ"ವನ್ನು ಕನಕದಾಸರು ಮೋಹನ ತರಂಗಿಣಿಯಲ್ಲಿ ಚಿತ್ರಿಸಿದ್ದಾರೆ. ಶಿವಭಕ್ತನಾದ ಬಾಣಾಸುರನ ಬೆನ್ನಿಗೆ ಹರನಿದ್ದಾನೆ. ಆದ್ದರಿಂದ ಕೃಷ್ಣ ಬಾಣಾಸುರರ ಯುದ್ಧವಾದರೂ ಪರೋಕ್ಷವಾಗಿ ಹರಿಹರರ ಯುದ್ಧವೂ ಆಗುತ್ತದೆ. ಶಿವನ ಪಕ್ಷದ ಷಣ್ಮುಖನ ವಾಹನವಾದ ನವಿಲು ಕೃಷ್ಣನ ಪಕ್ಷದ ಪ್ರದ್ಯುಮ್ನನ ಧ್ವಜದ ಮೀನಿಗೆ ಎಗರಿದಾಗ ಕೃಷ್ಣ ಗರುಡನತ್ತ ದೃಷ್ಟಿ ಹರಿಸುತ್ತಾನೆ. ಸರಿ ಗರುಡ ನವಿಲ ಮೇಲೆ ಎರಗುತ್ತಾನೆ :

ತಡೆದರೆ ತಡೆದೊದ್ದರೊದ್ದೆಱಕ್ಕೆಯೊಳಿಟ್ಟು
ಹೊಡೆದರೆ ಹೊಡೆದು ಡೊಕ್ಕರಿಸಿ
ಕೆಡೆದರೆ ಕೆಡೆದುಗುರ್ಗಳೊಳೊತ್ತಿ ಭೀಕರ
ವಡಿದು ಹೊಯ್ದಾಡಿದವೆರಡು ॥

ಕೊನೆಗೆ ಗರುಡ ನವಿಲನ್ನು ನೆಲಕ್ಕಿಕ್ಕಿ ತಿಕ್ಕಿದಾಗ, ನಂದೀಶ ಯುದ್ಧಕ್ಕೆ ಬರುತ್ತಾನೆ. ಕೊನೆಗೆ ನಂದೀಶ ಸುಸ್ತಾದುದನ್ನು ಕಂಡು ಶಿವನೇ ಯುದ್ಧ ಸಾಕುಮಾಡೆಂದು ಸೂಚಿಸಿದಾಗ, ಕೋಪಗೊಂಡ ಗಣೇಶ ಗರುಡನ ಮೇಲೆ ತಿರುಗಿಬೀಳುತ್ತಾನೆ. ಗಣೇಶನ ವಾಹನವಾದ ಇಲಿ ಗರುಡನನ್ನು ಕಂಡು, ಅದು ತನ್ನನ್ನು ತಿಂದು ಬಿಡುತ್ತದೆಂದು ಗಣೇಶನನ್ನು ಹೊತ್ತುಕೊಂಡು ಓಡಿತಂತೆ ! ಯುದ್ಧವರ್ಣನೆಯಲ್ಲೂ ಹಾಸ್ಯವನ್ನು ಚಿಮ್ಮಿಸುವ ಯತ್ನ ಇಲ್ಲಿದೆ.

೪

ಪಂಪ ರನ್ನರು ತಮ್ಮ ಆಶ್ರಿತ ರಾಜನೊಡನೆ ಕಥಾನಾಯಕನನ್ನು ಸಮೀಕರಿಸಿ ಕಾವ್ಯ ಬರೆದಂತೆ ಕನಕದಾಸರೂ ಮೋಹನ ತರಂಗಿಣಿಯಲ್ಲಿ ವಿಜಯನಗರ ಸಾಮ್ರಾಜ್ಯದ ಅರಸನಾದ ಕೃಷ್ಣದೇವರಾಯನೊಡನೆ ಕಥಾ ನಾಯಕನಾದ ಕೃಷ್ಣನನ್ನು ಸಮೀಕರಿಸಿ ಕಾವ್ಯ ರಚಿಸಿರುವುದರಿಂದ ಪ್ರತಿಯೊಂದು ವರ್ಣನೆಯಲ್ಲೂ ವಿಜಯನಗರ ಸಾಮ್ರಾಜ್ಯದ ರೀತಿನೀತಿಗಳು ವೈಭವವೀರಗಳು ಸಹಜವಾಗಿಯೇ ಸ್ಥಾನಪಡೆದಿವೆ. ಬಾಣಾಸುರನ ಮೇಲೆ ಕೃಷ್ಣ ದಂಡೆತ್ತಿ ಹೊರಟ ಹಾಗೂ ಬೀಡುಬಿಟ್ಟ ವರ್ಣನೆಯಲ್ಲಿ ವಿಜಯನಗರದ ಅರಸನ ದಂಡಯಾತ್ರೆ ಹಾಗೂ ಶಿಬಿರಸ್ಥಾಪನೆಯ ಜೀವಂತ ವಿವರ ಅಡಗಿರುವುದನ್ನು ಕಾಣಬಹುದು. ಏಕೆಂದರೆ ಕೃಷ್ಣನ ಪಾತ್ರವನ್ನು ಹಲವಾರು ಕಡೆ 'ಕೃಷ್ಣರಾಯ' ಕೃಷ್ಣದೇವರಾಯ' ಎಂದು ಹೆಸರಿಸುವುದನ್ನು ನಾವಿಲ್ಲಿ ಮರೆಯಬಾರದು.

ಕೃಷ್ಣ ಬಾಣಾಸುರನ ಮೇಲೆ ಯುದ್ಧಕ್ಕೆ ಹೊರಟಾಗ ಚತುರ್ಬಲದ ಜೊತೆಗೆ ಇನ್ನಿತರ ಪರಿವಾರದವರ ಮಾಹಿತಿಯನ್ನು ಕನಕದಾಸರು ಕೊಟ್ಟಿದ್ದಾರೆ. ಅದು ವಿಜಯನಗರದ ಅರಸರು ಯುದ್ಧಕ್ಕೆ ಹೊರಟಾಗ ಎಷ್ಟೆಲ್ಲ ಸಿದ್ಧತೆಗಳೊಡನೆ ಹೋಗುತ್ತಿದ್ದರು ಎಂಬುದನ್ನು ಸೂಚಿಸುತ್ತದೆ.

ಹೊಂಗಳಸದ ಸತ್ತಿಗೆ ಡಾಳಿಪ ಚಮ
ರಂಗಳ ಸಂಚಿ ಸಗ್ಗಳೆಯ
ಮಂಗಳ ಕುಂಚ ಕಾಳಾಂಜಿ ಬಿಸಣಿಗೆಯ
ಪೆಂಗಳೇಜೆದರಿಕ್ಕೆಲದಿ ॥

ಅಗಣಿತ ವರ್ಣಕೇತನದಲ್ಲಿ ಬರೆದಿರ್ದ
ಖಗರಾಜ ಶಂಖಚಕ್ರಗಳು
ಸೊಗಯಿಪ ಗಜಸಿಂಹ ಪಣಿಮೀನ ಪತಗಳ
ಗಗನವ ತುಡುಕಲೆತ್ತಿದರು ॥

ಮಂಡಿಸಿದರು ಮಂತ್ರಿಗಳು ಸೇನಭಾಗರು
ಪಂಡಿತ ಪಂಚಾಂಗಿಗಳು
ದಂಡಿಗೆ ಪಲ್ಲಕ್ಕಿ ಬೊಕ್ಕಸ ಭಂಡಾರ
ಖಂಡಿತವಾಗಿ ತುಂಬಿದರು ॥

ರಾಜರು ರಕ್ಕಸಮಾಂತರು ಲಾಳಿ ಬಿ
ಲ್ಲೋಜರು ಪೆಟಲಂಬಿನವರು
ತೇಜೋಮಯ ಬಾಣಗಾರಱರೇಜೆತು ಖಗ
ರಾಜನೆಱಂಕೆಯಿಕ್ಕೆಲದಿ ॥

ಕೊಟ್ಟಿಗೆ ಕಾಮಾಟ ಕ್ರವಲುಕ ಬೆಳ್ಳೆಲೆಗರು
ಜಟ್ಟಿಗ ಗೀತಪಾತರು
ಸೆಟ್ಟಿಗ ಬಲಿ ಚನ್ನವರದರು ಘಟ್ಟಿತ
ಕಟ್ಟಿಗೆಕಾರರೇಜೆದರು ॥

ರಾಯಚೂರು ಯುದ್ಧ ಸಮಯದಲ್ಲಿ ಮೊದಲ ಬಾರಿಗೆ ಬಳಸಿದ ಪೆಟಲಂಬಿನ ಪ್ರಸ್ತಾಪ ಇರುವುದೇ ಅಲ್ಲದೆ ದಂಡಯಾತ್ರೆಯ ಸಮಯದಲ್ಲಿ ದಿನನಿತ್ಯದ ಎಲ್ಲ ಅವಶ್ಯಕತೆಗಳ ಪೂರೈಕೆಗಾಗಿ–ಯಾವ ಕೊರತೆಯೂ ಕಾಡದಂತೆ– ಕೊಟ್ಟಿಗೆ ಕಾಮಾಟಿಗರು, ಕ್ರಮುಕ ಬೆಳ್ಳೆಲೆಗರು, ಸೆಟ್ಟಿಗರು, ಚಿನ್ನವರದರು ಮೊದಲಾದವರೆಲ್ಲ ಅವರ ಬೆನ್ನಿಗಿದ್ದುದರ ವರ್ಣನೆ ಇಲ್ಲಿದೆ. ಶಿಬಿರದ ಚಿತ್ರವನ್ನು ಗಮನಿಸಿ–

ದೇಶಾಧಿಪರ ಬೆಳ್ಗೊಡೆಗಳು ನಕ್ಷತ್ರ
ರಾಶಿಯಂತೆಸೆಯೆ ಮಧ್ಯದಲಿ
ಕೇಶರಾಯನ ದೂಸ ರೋಹಿಣಿಯ ಪ್ರಾ
ಣೇಶನೆಂಬಂತೆ ರಂಜಿಸಿತು ॥

ಓರಂತೆ ಬಲರಾಮ ಸಾತ್ಯಕಿ ಕೃತವರ್ಮ
ಮಾರ ಕುಮಾರ ದೂಸಗಳು
ನಾರಾಯಣನ ಬೀಡಾರದ ಮುಂದೆ ಹ
ಜಾರ ಹೊಂಗಳಸಗಳೆತ್ತಿದ್ದುವು ॥

ಮಂಗಳ ಬೀದಿವಾಣದ ಮುಂದೆ ನಾಲ್ದೆಸೆ
ಎಂಗಡ ವೀಧಿ ವೀಧಿಯೊಳು
ಕಂಗೊಳಿಸುವ ಸೋಪಸ್ಕರ ವ್ಯವಹಾರ
ದಂಗಡಿ ಮೆರೆದುವಿಕ್ಕೆಲದಿ ॥

ವಿಜಯನಗರ ಸಾಮ್ರಾಜ್ಯದ ವೈಭವ ಯುದ್ಧ ಶಿಬಿರದಲ್ಲಿ ಮರುಹುಟ್ಟು ಪಡೆದಂತೆ, ಎಲ್ಲ ಸರಕು ಸಾಮಗ್ರಿಗಳು ದೊರಕುವಂತೆ **"ಸೋಪಸ್ಕರ ವ್ಯವಹಾರದಂಗಡಿಗಳು"** ಇಕ್ಕೆಲದಲ್ಲಿ ಮೆರೆದದ್ದರ ಚಿತ್ರಣ ನಮಗರ್ಥವಾಗಬೇಕಾದರೆ ರಾಯಚೂರು ಯುದ್ಧ ಮತ್ತು ಶಿಬಿರಗಳ ವಿವರ ನೀಡಿರುವ **"**Chronicle of Fenao Nuniz**"** ನತ್ತ ಕಣ್ಣು ಹಾಯಿಸಬೇಕು–

'All the camps were divided into regular streets. Each captain's division has its market where you found all kinds of meat such as sheep, goats, pigs, fowls, hares, patridges and other birds and this is

great abundance ; so much so that it would seem as if you were in the city of Bisnaga (ವಿಜಯನಗರ). And you found many endless kinds of rice, grains, Indian-corn vetches and other seeds that they eat. Beside these things, which are necessaries, they had another where you could find in great abundance everything that you wanted... There were craftsman also working in their streets so that you saw made there golden jewels and gewgaws and you will find all kinds of rubies and diamonds and pearls, with every other kind of precious stone for sale. There also were to be seen sellers of cloths....There were also to be seen grass and straw in infinite abundance. I do not know who could describe it so as to be believed, so barren a country is this Rachol (ರಾಯಚೂರು) and so sandy. It is a mystery how there should be an abundance of everything there in... Indeed no one whodid not understand the meaning of what he saw would ever dream that a war was going on, but would think that he was in a prosperious city...'

ಬಹುಶಃ ಇದಕ್ಕೆ ಪೂರಕವಾಗಿಯೇ ಬಂದಿದೆ, ಸಮಕಾಲೀನ ಕವಿಯಾದ ರತ್ನಾಕರನ ಭರತೇಶ ವೈಭವದ ಯುದ್ಧ ಶಿಬಿರಗಳ ಚಿತ್ರಣವೂ ಸಹ :

ಕೊಟ್ಟಿಗೆ ಕೊಲ್ಲಾರ ಕೀಲಾರ ಹೊರೆಯ ತಾ
ಳ್ದೊಟ್ಟಿಗಳ್ಪಾಸುಮಂಚಗಳು
ಪೆಟ್ಟಿಗೆ ಭಂಡಾರ ಬೊಕ್ಕಸ ಸಾಗಿ ಬಂ
ದೊಟ್ಟುಗೂಡಿದವು ಬೀಡಿನೊಳು ॥

ಪರದರು ಬೆಲೆವೆಂಗಾಳಾಡುವರ್ಪಾಡುವ
ರ್ಪರಿದು ನರ್ತಿಸೆ ಪಾಳೆಯದೊಳು
ಅರಸು ಬಿಟ್ಟಲ್ಲಿ ಪಟ್ಟಣವೆಂಬ ನುಡಿದೋರು
ತಿರಲೊಂದು ದಿನವಿದ್ದನಲ್ಲಿ ॥

..................................................

ಪೇಳೆ ಮೂವತ್ತಾರುಯೋಜನದಗಲದೊ
ಳಾಲಂಬವಿಡಿದೋಜೆವಿಡಿದು
ನೀಳನಾಲ್ವತ್ತೆಂಟು ಗಾವುದ ಸಂದಿರೆ
ಪಾಳೆಯ ಬಿಟ್ಟುದಾ ಕಟಕ ॥
ವಣಿಜರಂಗಡಿಗಳು ಹಯಶಾಲೆ ಗಜಶಾಲೆ
ಗಣಿಕಾಂಗನೆಯರ ಕೇರಿಗಳು
ಕ್ಷಣದೊಳಾದವು ವಿಶ್ವಕರ್ಮ ನಿರ್ಮಿತದ
ಪಟ್ಟಣವಲ್ತೆ ಪಾಳೆಯ ನೃಪನಾ ॥

ಇನ್ನು ಆ ಕಾಲದಲ್ಲಿ, ಯುದ್ಧದ ಬಗ್ಗೆ ಸಾವಿನ ಬಗ್ಗೆ ಕಿಂಚಿತ್ತೂ ಅಂಜಿಕೆ ಇರಲಿಲ್ಲ. ಉನ್ನತ ಧ್ಯೇಯಕ್ಕಾಗಿ ಹೋರಾಡಿ ಮಡಿಯುವುದು ಶ್ರೇಯಸ್ಕರ ಎಂಬ ನಿಲುವು ರಕ್ತದ ಕಣಕಣದಲ್ಲಿದ್ದುದನ್ನು ಕಾಣುತ್ತೇವೆ. ಕನಕದಾಸರು ಅನಿರುದ್ಧನ ಮಾತಿನ ಮೂಲಕ ಅದನ್ನು ಎರಕ ಹುಯ್ದಿದ್ದಾರೆ. ಉಷಾ ಅನಿರುದ್ಧರ ವಿವಾಹವೃತ್ತಾಂತವನ್ನು ನಾರದನು ಬಾಣಾಸುರನಿಗೆ ಹೇಳಿದ ಪ್ರಯುಕ್ತ ಅವನ ಸೈನ್ಯ ನಿನ್ನನ್ನು ಸೆರೆ ಹಿಡಿಯಲು ಬಂದಿದೆ, ನಿನ್ನ ಸಾವಿಗೆ ನಾನೇ ಕಾರಣಳಾದೆ ಎಂದು ಚಿತ್ರಲೇಖೆ ಅನಿರುದ್ಧನಿಗೆ ಹೇಳಿದಾಗ ಅವನ ಉತ್ತರ ನೋಡಿ :

ದುಕ್ಕವಿದೇಕೆ ಮಾತೃಕೆಯ ಗರ್ಭವ ಮತ್ತೆ
ಹೊಕ್ಕಡೆ ಬಿಡುವುದೆ ಪ್ರಾಪ್ತಿ
ಅಕ್ಕರ ಹಣೆಯೊಳಿರ್ದನಿತಾದಪುದೆಂದು
ನಕ್ಕನು ಮಂತ್ರಿಜೆಯೊಡನೆ

ನಳಿನೋದ್ಭವ ಕೋಟಿ ವತ್ಸರ ತನುವಿಡಿ
ದಟಿದೊಡದೇನು ವೃಥಾಯ
ಸುಟಿಗುರುಳಬಲೆಯ ತೋಳತಕ್ಕೆಯೊಳೊಂದು
ಗಳಿಗೆ ಬಾಳಲು ಮುಕ್ತಿಯಹುದು ॥

ಏಸು ಜನ್ಮದ ತಪಃಫಲವಿದು ಬಂದುದೊ
ಈ ಸೌಂದರಿಯ ಸಂಭೋಗ
ಲೇಸಿನೊಳ್ ತನುವ ತೆತ್ತಡೆಶಕ್ರಸೌಭಾಗ್ಯ[೧]
ಭಾಸುರವಹುದೆಂದ ತನಗೆ ॥
ಆವಕಾಲವ ಕಳೆದರೆ ಜೀವವುಳ್ಳನ್ನ
ಸಾವಡಸದೆ ಮಾಣ್ದಪುದೆ
ಈ ವನಿತೆಯೊಳೊಂದಿ ಸುಖವಟ್ಟು ಮಡಿದಡೆ
ಜೀವನ್ಮುಕ್ತಿಯೆಂದವನು ॥
ಅರಲಂಬನಾತ್ಮಜ ನುಡಿದ ವಾಕ್ಯವ ಕೇಳಿ
ತರಲಾಕ್ಷಿ ದುಕ್ಕದೆ ತನ್ನ
[೨]ಕೊರಳನುತ್ತರಿಸೆಂದು[2] ಪಾದ ಪದ್ಮಕೆ ಬಿದ್ದು
ಹೊರಟಿಲ್ಕೆ ನೋಡಿ ಚಿಂತಿಸಿದ ॥

ನಿನ್ನ ಸಾವನ್ನು ನಾನು ಕಣ್ಣಾರೆ ನೋಡುವ ಮೊದಲು ಅಂದರೆ ನಾನು ವಿಧವೆಯಾಗುವ ಮೊದಲು, ನಾನು ಮುತ್ತೈದೆಯಾಗಿ ಸಾಯುವಂತೆ ಕೃಪೆ ಮಾಡು ಅರ್ಥಾತ್ ನಿನ್ನ ಕೈಯಾರ ನನ್ನ ಕೊರಳನ್ನು ಕತ್ತರಿಸು ಎಂಬ ಉಷೆಯ ಮಾತಿನಲ್ಲಿ, ಪ್ರೇಮಪ್ರಾಪ್ತಿಯಾಗಿ ಯುದ್ಧದಲ್ಲಿ ಹೋರಾಡಿ ಸತ್ತರೆ ಜೀವನ್ಮುಕ್ತಿ ಎಂಬ ಅನಿರುದ್ಧನ ಮಾತಿನಲ್ಲಿ ವೀರಗುಣಸಹಜವಾದ ನಿರ್ಭೀತಿ ನಿನದಿಸುವುದನ್ನು ಕಾಣಬಹುದು.

ಯುದ್ಧಸನ್ನದ್ಧರಾಗುವ ವೀರರಿಗೆ ಸ್ತ್ರೀಯರು ಅಷ್ಟೇ ವೀರಾವೇಶದಿಂದ ನೆರವಾಗುವ ಚಿತ್ರ ವಿಶಿಷ್ಟವಾದುದು ಕನಕದಾಸರು ತಮ್ಮ ಕಾವ್ಯದಲ್ಲಿ ಆ ಮುಖವನ್ನು ಮರೆಯದ ಹಾಗೆ ಚಿತ್ರಿಸಿದ್ದಾರೆ :

---

೧. ಡಾ. ಕೊ.ತಿ.ನ. "ಶಕ್ರಸೌಭಾಗ್ಯ" ಎಂಬುದಕ್ಕೆ "ಶುಕ್ರದೆಸೆ" ಎಂದು ಗದ್ಯಾನುವಾದ ಮಾಡಿದ್ದಾರೆ. ಅದರ ನಿಜವಾದ ಅರ್ಥ ಇಂದ್ರವೈಭವ, ಇಂದ್ರಪದವಿ ಎಂದು, (ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿತ ಮೋಹನತರಂಗಿಣಿ ಗದ್ಯಾನುವಾದ ಕೃತಿ.)

೨. ಡಾ. ಕೊ.ತಿ ನ "ಕೊರಳನುತ್ತರಿಸು" ಎಂಬುದಕ್ಕೆ "ನನ್ನ ಪ್ರಾಣವನ್ನು ಉದ್ಧರಿಸು", ಎಂದು ಗದ್ಯಾನುವಾದ ಮಾಡಿದ್ದಾರೆ. ಸದ್ಯದಲ್ಲಿ ಉತ್ತರಿಸು ಎಂಬುದಕ್ಕೆ ಅರ್ಥ ಕತ್ತರಿಸು ಎಂದು ಇಂದಿಗೂ ಜನಪದರು ಸೊಪ್ಪನ್ನು ಉತ್ತರಿಸು, ಈರುಳ್ಳಿಯನ್ನು ಉತ್ತರಿಸು ಎಂದು ಬಳಸುವುದನ್ನು ಗಮನಿಸಬೇಕು. ಜನಪದ ಸತ್ತ್ವಸಮನ್ವಿತವಾದ ಕನಕದಾಸರ ಭಾಷೆಯ ಮರ್ಮ ಗೊತ್ತಿಲ್ಲದೆ ಅನನ್ವಯ ಅರ್ಥ ಕಲ್ಪಿಸಬಾರದು.

ಅರಿಗಳ ಕೆಯ್ಯ ಕೂರಸಿಧಾರೆ ಮೊನೆಗಾಯ
ಶರೀರದೊಳಗೆ ಸಂಧಿಸಲು
ಪರಿಹರಿಸುವ ಬಾಣ ಭಯವೃತ್ತಿಯ ಭಾ
ಪುರಿಯಲ್ಲಿ ಕಟ್ಟಿದಳವಳು ॥

ಕೊಟ್ಟಳು ಕೋದಂಡ ಬಾಣವ ಕಪ್ಪಿನ
ಬೊಟ್ಟನಿಕ್ಕಿದಳು ಭಾಳದಲಿ
ನೆಟ್ಟನೆ ರಣವ ಜಯಿಸು ಎಂದು ಸೇಸೆಯ
ನಿಟ್ಟಳು ಸಿರಿಮುಡಿಯಲ್ಲಿ ॥

ಅವಳಿಷ್ಟು ಮಾಡಿ ಕುಸ್ತರಿಸಲ್ಕೆ ಕಡುಮೆಚ್ಚಿ
ಧವಳ ಸರೋಜಾಯತಾಕ್ಷಿ
ಪವಳದಧರಾಮೃತದುಣಿಸು ತಂಬುಲದುಬ್ಬು
ಗವಳವನಿತ್ತಳಾಳ್ದನಿಗೆ ॥

ಚಿತ್ರಲೇಖೆ ಅನಿರುದ್ಧನ ಭಾಪುರಿಯಲ್ಲಿ ಕೂರಸಿಧಾರೆ ಮೊನೆಗಾಯದ ನಂಜುನಿವಾರಕ 'ತಾಯಿತ' ಕಟ್ಟುವುದು, ಹಣೆಗೆ ಕಪ್ಪಿನ ಬೊಟ್ಟನಿಕ್ಕುವುದು, ತಲೆಯ ಮೇಲೆ ಸೇಸೆ ಇಕ್ಕುವುದನ್ನು ಮಾಡಿದರೆ, ಉಷೆ ಹಿಂದೆ ಬೀಳದೆ ಮುತ್ತಿಟ್ಟು ತಾಂಬೂಲದ ಉಣಿಸನ್ನು ನೀಡುತ್ತಾಳೆ. ವಿಜಯನಗರ ಕಾಲದ ಸ್ತ್ರೀಯರ ವಿಶಿಷ್ಟ ವೀರ ಗುಣವನ್ನು ಇದು ಸೂಚಿಸುತ್ತದೆ.

ಅನಿರುದ್ಧನ ಉಪಟಳಕ್ಕೆ ತತ್ತರಿಸಿದ ಸೇನೆಗೆ ಅಭಯವನ್ನು ನೀಡಿ ಎದುರಾದ ಬಾಣಾಸುರನಿಗೆ ಅನಿರುದ್ಧ ಆಡುವ ಮಾತುಗಳು ಯುದ್ಧರಂಗದಲ್ಲಿಯೂ ಮಾನವೀಯ ನಡೆನುಡಿ ಸಂಸ್ಕೃತಿಗೆ ಹಿಡಿದ ಕನ್ನಡಿಯಾಗಿವೆ :

ವಿನಯದಿ ಮಾತಾಡು ಖಳರಾಯ ನಿನ್ನಯ
ತನಯಳಿಗೋಸುಗ ಬಂದ
ಮನೆಯಳಿಯನ ಕೂಡೆ ಮಚ್ಚರವೇಕೆಂದು
ನನೆಗೋಲನಾತ್ಮಜ ನುಡಿದ ॥

ಅಳಿಯ ನೀನೆಂತಾದೆ ಮಗಳನಾರಿತ್ತರು
ಶಿಳೀಮುಖದಿಂದ ಗೆಲ್ಲೆನಲು

ಬಳುಕಿಂಗೆ ಹಿರಿಯರ ಹಸ್ತ ಮುಂಚಿದ ಮೇಲೆ
ಬಳಿಕೆನ್ನ ಕೆಯ್ಯ ನೋಡೆಂದ ॥

ಯುದ್ಧದಲ್ಲಿ ಗೆದ್ದು ಅಳಿಯತನವನ್ನು ಸಂಸ್ಥಾಪಿಸು ಎಂದು ಬಾಣಾಸುರ ಸವಾಲು ಹಾಕಿದಾಗ ಅನಿರುದ್ಧ ಹಿರಿಯರು ಮೊದಲು ಕೈ ಮಾಡಿದರೆ ಆನಂತರ ನನ್ನ ಕೈಚಳಕ ತೋರಿಸುತ್ತೇನೆ ಎಂಬ ಮಾತಿನಲ್ಲಿ ಕಿರಿಯರು ಹಿರಿಯರಿಗೆ ತೋರಿಸುವ ಗೌರವ ಭಾವನೆ ಎದ್ದು ಕಾಣುತ್ತದೆ. ಯುದ್ಧರಂಗದಲ್ಲೂ ಎದ್ದು ಕಾಣುವ ಇಂಥ ಮಾನವೀಯ ನಡೆನುಡಿಗಳು ಮನಸ್ಸನ್ನು ಸೂರೆಗೊಳ್ಳುತ್ತವೆ.

ಈ ಕಡೆ ಓಪ ಆ ಕಡೆ ಅಪ್ಪ ಯುದ್ಧಕ್ಕೆ ನಿಂತಿರುವುದನ್ನು ಕಂಡು ಉಷೆ "ಇರಿದುಕೊಂಡರೆ ಹೊಟ್ಟೆ ತಿವಿದುಕೊಂಡರೆ ಕಣ್ಣು" ಎಂದು ಮರುಗುವಷ್ಟರಲ್ಲಿ ಅನಿರುದ್ಧ ಬಿಟ್ಟ ಬಾಣ ಬಾಣಾಸುರನ ತೋಳಲ್ಲಿ ಎಜ್ವ ಕೊರೆಯಿತು. ಆಗ ಬಾಣಾಸುರ ಅನಿರುದ್ಧನ ಶೌರ್‍ಯವನ್ನು ಕಂಡು ಮೆಚ್ಚುವುದು ಅವನ ಮಾನವೀಯ ಗುಣವನ್ನು ಸೂಚಿಸುತ್ತದೆ :

ಮುತ್ತುಗ ನಿಡುಗೊನೆ ನಿಕರ ಹೂವಾದಂತೆ
ನೆತ್ತರ ಬಣ್ಣ ತೋರಿಸಲು
ಚಿತ್ತಜನಾತ್ಮಸಂಭವನ ಕೀರ್ತಿಸಿದಬ
ಳೋತ್ತಮ ಕಡು ಮೆಚ್ಚಿ ನಗುತೆ ॥

ಈ ಮಾನವೀಯ ಗುಣ ಮುಂದೆ ಇನ್ನೂ ಮಡುಗಟ್ಟುತ್ತದೆ. ಬಾಣಾಸುರನ ಮಂತ್ರಾಸ್ತ್ರದಿಂದ ಅನಿರುದ್ಧ "ಮಥನಕ್ಕೆ ಮಂಡಿಯ ಹೂಡಿದಂದದಿ ಮೂರ್ಛಿತ" ನಾಗಲು ಕೂಡಲೇ ಅವನನ್ನು ಸೆರೆ ಹಿಡಿದಾಗ ಬಾಣಾಸುರನ ಮಾನವೀಯ ವರ್ಣನೆಯನ್ನು ನೋಡಿ–

ಕೊಂದಡೆ ಮಗಳಿಂಗೆ ವೈಧವ್ಯವಹುದೆಂದು
ಕಂದರ್ಪನಾತ್ಮಸಂಭವನ
ಸುಂದರಮಯ ದಿವ್ಯದೇಹವ ಕೂರ್ಗೋಲಿಂದೆ
ನೊಂದಿರೆ ಮೆಯ್ದಡವಿದನು.

ಉಪ್ಪರಿಗೆಯೊಳಿರ್ದು ನೋಡಿದಳ್ ಕುವರಿ ತ
ಮ್ಮಪ್ಪನ ಕೈಯೊಳಗಾಗಿ
ದಪ್ಪಗನಣುಗನು ಸಿಕ್ಕಿದನಾಯೆಂದು
ತೊಪ್ಪನೆ ಬಿದ್ದಳುರ್ವಿಯಲಿ ॥

ಬಾಲೆಯರುಗಳು ಬೊಬ್ಬಿಡಲು ಗೋಪುರದಗ್ರ
ಶಾಲೆಯ ರೋದನಗೇಳಿ
ಲೀಲೆಗಾರನ ಕೊಲ್ವುದಿಲ್ಲೆಂದು ದುಃಖದ
ಶೀಲೆಗೆ ಮಾತನಟ್ಟಿದನು ॥

ಇಷ್ಟೇ ಅಲ್ಲ ಅವನ ಮಾನವೀಯತೆ ಮತ್ತೂ ಪ್ರಖರವಾಗಿ ಪ್ರಕಟಗೊಳ್ಳುತ್ತದೆ :

ಅಂಗಜನಾತ್ಮಸಂಭವನ ಮೋರೆಯ ನೋಡಿ
ಕಂಗೆಡಬೇಡೆಂದು ದೈತ್ಯ
ಮಂಗಳವಸ್ತ್ರಾಭರಣ ಮಾಲ್ಯಾನು ಲೇ
ಪಂಗಳ ಕೊಟ್ಟು ಮನ್ನಿಸಿದ ॥

ಸೆಡೆಯದೆ ಸಮರಸ್ಥಳದಲಿ ದೈತ್ಯರ
ಪಡೆಯನೆಲ್ಲವ ಗೆಲ್ದುದಕೆ
ಬಿಡೆಯವಿಲ್ಲದೆ ಮೆಚ್ಚಿ ವಜ್ರಶೃಂಖಲಮೆಂಬ
ಕಡಗವ ಕಾಲ್ಗಿಡಿಸಿದನು ॥

ಯುದ್ಧ ಸರ್ವನಾಶದ ಹಂತ ಮುಟ್ಟಿದಾಗ ಅದನ್ನು ಹೇಗಾದರೂ ತಪ್ಪಿಸಬೇಕೆಂಬ ತುಡಿತ ಕನಕದಾಸರಲ್ಲಿರುವುದನ್ನು ಕಾಣಬಹುದು. ಉದಾಹರಣೆಗೆ ಯುದ್ಧದ ಒಂದು ಹಂತದಲ್ಲಿ ಶಿವ ತ್ರಿಶೂಲವನ್ನೂ ಕೃಷ್ಣ ಚಕ್ರವನ್ನೂ ಹಿಡಿದು ನಿಂತಾಗ ಆಕಾಶವಾಣಿ ಮೊಳಗುತ್ತದೆ :

ಶಿವ ತ್ರಿಶೂಲದೊಳಿಡಲುಟಿದವರಿಲ್ಲ ಕೇ
ಶವ ಚಕ್ರವಾಸ ಲೆಕ್ಕಿಸದು
ಹವಣಲ್ಲ ನಿಲ್ಲು ನಿಲ್ಲೆನುತಿರ್ವರಿಗೆ ಸ
ತ್ಯವ ಪೇಳ್ದುದಾಕಾಶವಾಣಿ ॥

ಇಲ್ಲಿ ಶಿವ ಮತ್ತು ತ್ರಿಶೂಲ ಒಂದು ಮಹಾನ್‌ಶಕ್ತಿ. ಕೃಷ್ಣ ಮತ್ತು ಚಕ್ರ ಮತ್ತೊಂದು ಮಹಾನ್‌ಶಕ್ತಿ. ಈ ಎರಡು ಶಕ್ತಿಗಳಿಗೆ ತಾಕಲಾಟ ಶುರುವಾದರೆ ಜಗತ್ತಿನ ಸರ್ವನಾಶವಾಗುತ್ತದೆ ಎಂಬ ಭಾವನೆಯಿದೆ. (ಪ್ರಸ್ತುತ ಅಮೆರಿಕ ಮತ್ತು ರಷ್ಯ ಎರಡು ಬೃಹತ್ ಅಣುಶಕ್ತಿ ಕೇಂದ್ರಿತ ರಾಷ್ಟ್ರಗಳು. ಅವು ಯುದ್ಧಕ್ಕೆ ತೊಡಗಿದರೆ ಜಗತ್ತು ಸರ್ವನಾಶದ ಹಾದಿ ಹಿಡಿಯುತ್ತದೆ ಎಂದು ಚಿಂತಿಸಿ ಆ ಘಟ್ಟಕ್ಕೆ ಎರಡು ರಾಷ್ಟ್ರಗಳು ಹೋಗದಂತೆ ತಡೆಹಿಡಿಯುವ ಸಮಷ್ಟಿ ಪ್ರಯತ್ನವನ್ನು ನಾವಿಲ್ಲಿ ಸ್ಮರಿಸಿಕೊಳ್ಳಬೇಕು.)

ಕೃಷ್ಣ ತನ್ನ ಚಕ್ರದಿಂದ ಬಾಣಾಸುರನ ೯೯೮ ತೋಳುಗಳನ್ನು ಕತ್ತರಿಸಿ ಉಳಿದೆರಡು ತೋಳುಗಳನ್ನು ಕತ್ತರಿಸಲು ಮತ್ತೆ ಚಕ್ರಕ್ಕೆ ಕೈಹಾಕಲು ಹೋದಾಗ ಶಿವ ಅಡ್ಡ ಬಂದು, ಭಕ್ತನನ್ನು ಸಮಾಧಾನಪಡಿಸಿ, ಬುದ್ಧಿವಾದ ಹೇಳುವುದರಲ್ಲಿಯೂ ಬೃಹತ್ ಶಕ್ತಿಯ ವಿರುದ್ಧ ಸಂಘರ್ಷ ಸಲ್ಲದು ಎಂಬ ಧ್ವನಿಯೇ ಇದೆ :

ಕೇಶವನೆಡೆಗೆನ್ನೆಡೆಗಾವನೊರ್ವನು
ದ್ವೇಷಬುದ್ಧಿಯ ಮಾಡಿದಡೆ
ದೋಷ ಸಂಭವಿಸುವುದೆಂದು ಧೂರ್ಜಟಿ ದೈ
ತ್ಯೇಶಗೆ ವಿಸ್ತರಿಸಿದನು.

ಸಮಕಾಲೀನ ರತ್ನಾಕರನ ಯುದ್ಧವರ್ಣನೆಗಿಂತಲೂ ಕನಕದಾಸರ ಯುದ್ಧ ವರ್ಣನೆ ಹೆಚ್ಚು ಜೀವಂತವಾಗಿ, ವೀರ್ಯವತ್ತಾಗಿ ಬಂದಿದೆ ಎಂಬುದನ್ನು ನಾವೀಗ ನೋಡಬಹುದು. ಉದಾಹರಣೆಗೆ ಶಂಬರಾಸುರನ ಈ ಮಾತುಗಳನ್ನು ಗಮನಿಸಿ:

ಸರ‍್ರನೆ ಸೀಳ್ವೆ ದಿಗ್ಗಜದ ಮಂಡೆಯಮೆಟ್ಟಿ
ಸುಱ್ರನೆ ಸುರಿವೆನೆಟ್ಟಿಗಡಲ
ತಿರ‍್ರನೆ ತಿರುಹುವೆ ಧರಣಿಯ ಮಹದಾದಿ
ಪರ್ವತವನು ಕೀಳ್ವೆ ನೋಡು ॥

ಸಱ್ರನೆ, ಸುಱ್ರನೆ, ತಿಱ್ರನೆ ಎಂಬ ಅನುಕರಣ ಶಬ್ದಗಳ ಮೂಲಕವೇ ಜೀವಂತ ಚಿತ್ರ ಕಣ್ಮುಂದೆ ಮೂಡುವಂತೆ ಮಾಡಿರುವುದು ಇಲ್ಲಿಯ ಸೊಗಸು. ಸೀಳುವಾಗ ಉಂಟಾಗುವ 'ಸರಕ್' ಎಂಬ ಸದ್ದು ಸರ‍್ರನೆ ಎಂಬುದರ ಮೂಲಕ, ಸುರಿದುಕೊಳ್ಳುವಾಗ (ತಟ್ಟೆಯಿಂದ ಪಾಯಸವನ್ನು ಕೈಯ ಮೂಲಕ ಬಾಯಿಗೆ ಸುರಿದುಕೊಳ್ಳುವುದನ್ನು ಚಿತ್ರಿಸಿಕೊಳ್ಳಿ) ಸುರಕ್ ಎಂಬ ಸದ್ದನ್ನು ಸುರ‍್ರನೆ ಎಂಬ ಶಬ್ದದ ಮೂಲಕ, ಕವಣೆಯ ಕಲ್ಲಿನಂತೆ ಗರಗರನೆ ತಿರುಗಿಸುವ ಕ್ರಿಯೆಯನ್ನು ತಿರ‍್ರನೆ ಎಂಬ ಶಬ್ದದ ಮೂಲಕ ಹೇಗೆ ಮುಷ್ಟಿಗ್ರಾಹ್ಯ ಮಾಡಿದ್ದಾರೆ ಎಂಬುದು ಮನನಾರ್ಹ.

ಇನ್ನೊಂದು ಉದಾಹರಣೆ. ಅನಿರುದ್ಧನ ವಿರುದ್ಧ ಕುಂಭಾಂಡ ಹಾಗೂ ಸೈನಿಕರು ಸೆಣಸಾಡಲು ಅಸಹಾಯಕರಾದಾಗ ಒಬ್ಬ ವೀರ ಬಾಣಾಸುರನಲ್ಲಿಗೆ ಓಡಿಬಂದು,

ಹೆಣ್ಣ ಭೋಗಿಸ ಬಂದವನಲ್ಲ ಕದನವ
ಹಣ್ಣಲೋಸುಗ ಬಂದವನು

ಚಿಣ್ಣನದಾರಿಗಂಜುವನಲ್ಲ ಕಳನಮು
ಕ್ಕಣ್ಣ ನೀ ಬಯಸಿದರೆ ಜಯಿಸು ॥

ಎಂದು ವರದಿ ಮಾಡಿದಾಗ ಬಾಣಾಸುರ ತಾನೇ ಸೈನ್ಯಸಮೇತ ಯುದ್ಧಕ್ಕೆ ಬರುತ್ತಾನೆ. ಅನಿರುದ್ಧ ಆ ರಕ್ಕಸ ಸೈನಿಕರ ರುಂಡಗಳನ್ನು ಚೆಂಡಾಡಿದ ವರ್ಣನೆ ಎಷ್ಟು ಹೊಚ್ಚ ಹೊಸತನದಿಂದ ಕೂಡಿದೆ ಎಂಬುದನ್ನು ನೋಡಿ–

ರಣಮಾರ್ಗದಿ ನಿಖಿಳಾಯುಧವೇಜಿನ
ಬಣಗುಗಳ್ ಬಂದು ತನ್ನೊಡನೆ
ಸೆಣಸಲು ಕೂರ್ಗೋಲಗಾಱ ಸುಂಕಕೆ ತಲೆ
ವಣಗೊಂಡು ಬಿಟ್ಟನೆಲ್ಲರನು ॥

ಸುಂಕಕಟ್ಟೆಯ ರೂಪಕ ಇಲ್ಲಿ ಬಳಕೆಯಾಗಿದೆ. ರಣರಂಗ ಮಾರ್ಗದ ಸುಂಕದ ಕಟ್ಟೆಯಲ್ಲಿ ರಕ್ಕಸ ವ್ಯಾಪಾರಿಗಳು (ಬಣಗು < ವಣಿಕ್ = ವ್ಯಾಪಾರಿ ಎಂಬ ಅರ್ಥವೂ ಆಗುತ್ತದೆ ಕ್ಷುಲ್ಲಕ ಎಂಬ ಅರ್ಥದ ಜೊತೆಗೆ) ತಮ್ಮ "ಆಯುಧಗಳ ಹೇರಿ"ಗೆ ಸುಂಕ ಕೊಡಲು ನಿರಾಕರಿಸಿ ತರಲೆ ಮಾಡಿದಾಗ ಅನಿರುದ್ಧ ಅವರ ತಲೆಗಳನ್ನೇ ಸುಂಕದ ಹಣವನ್ನಾಗಿ ತೆಗೆದುಕೊಂಡು ಹೇರನ್ನು ಮುಂದಕ್ಕೆ ಬಿಟ್ಟನಂತೆ ! ಇದಕ್ಕಿಂತಲೂ ಚೆನ್ನಾಗಿ, ಸಚಿತ್ರವಾಗಿ, ನವೀನವಾಗಿ ಅನಿರುದ್ಧ ಶತ್ರುಗಳ ಸಾಲು ಹೆಣ ಮಲಗಿಸಿದ್ದನ್ನು ವರ್ಣಿಸಲು ಸಾಧ್ಯವಿಲ್ಲ.

ಇನ್ನೊಂದು ಉದಾಹರಣೆ : ಬಾಣಾಸುರ ಕೃಷ್ಣನ ಮೇಲೆ, ಕುಂಭಾಂಡ ಬಲರಾಮನ ಮೇಲೆ ಮಾಯಾಯುದ್ಧಕ್ಕೆ ತೊಡಗಿದಾಗ ಯುದ್ಧ ಭಯಂಕರವಾಗುತ್ತದೆ : ಜಿಗುಪ್ಸೆ ಮೂಡಿಸುತ್ತದೆ. ಅದನ್ನು ಹೊಚ್ಚಹೊಸ ರೂಪಕದಿಂದ ವರ್ಣಿಸಿರುವ ಬಗೆಯನ್ನು ನೋಡಿ :

ತಲೆಗಳ ತುಂಡು ತೋಳ್ಗಳ ತುಂಡು ನಡುತುಂಡು
ಸಲೆ ಜಾನು ಜಂಘೆಯ ತುಂಡು
ಬೆಲೆಯಿಂದೆ ಕಟುಕರಂಗಡಿಯಂತೆ ರಣರಂಗ
ಸಲೆ ಜಿಗುಪ್ಸೆಯ ತೋರಿಸಿತು ॥

ರಣರಂಗವನ್ನು ಕಟುಕರಂಗಡಿಯ ರೂಪಕದಲ್ಲಿ ಸೆರೆ ಹಿಡಿದಿರುವ ಕನಕದಾಸರ ಸ್ವೋಪಜ್ಞತೆ ಮೆಚ್ಚುವಂಥದು. ಬಹಶಃ ಹೊಸಗನ್ನಡದಲ್ಲಿ ಆಲನಹಳ್ಳಿ ಕೃಷ್ಣ ತಮ್ಮ 'ಬೆಳಗು' ಕವನದಲ್ಲಿ ಮೂಡಲಿನ ಬಣ್ಣದೋಕುಳಿಯನ್ನು 'ಮಾಂಸದಂಗಡಿ'ಯ ರೂಪಕದಲ್ಲಿ ಸೆರೆಹಿಡಿದಿರುವುದನ್ನು ಬಿಟ್ಟರೆ ಮತ್ತಾರೂ ಹೀಗೆ ಚಿತ್ರಿಸಿಲ್ಲ. ಅಂದರೆ ಕನಕದಾಸರ ವರ್ಣನೆಗಳಲ್ಲಿ ಬಹುತೇಕ ಹಳಸಲು

ತಂಗಳುಗಳಿಗಿಂತ ಬೆಚ್ಚನೆಯ ಹಬೆಯಾಡುವ 'ಬೆಂಗಳು' (< ಬೆಂಗೂಳು) ಹೆಚ್ಚು ಎನ್ನಬೇಕು.

ಕೇಣವಿಲ್ಲದ ರೋಹಿತ ವಾರ್ಧಿಯೊಳು ಕಟ್ಟು
ಗಾಣಕ್ಕೆ ಪಾಯ್ದ ಮೀನೆನಲು
ಗೋಣರೆಗಡಿದು ಪೆರ್ನರವಾಂತು ಮಿಡುಕುವ
ಪ್ರಾಣದ ಶವಗಳೊಪ್ಪಿದವು ॥

ಗಾಳದ ರೂಪಕ ಇಲ್ಲಿ ಬಳಕೆಯಾಗಿದೆ. ಗಾಳದ ಕೊಕ್ಕೆಮುಳ್ಳು ಮೀನಿನ ಗಂಟಲಿಗೆ ಸಿಕ್ಕಿಕೊಂಡಾಗ ಬಿಡಿಸಿಕೊಳ್ಳಲು ಮೀನು ಮಿಡುಕಾಡುವಂತೆ, ರಕ್ತದ ಕಡಲಿನಲಿ ಅರೆಗಡಿದ ಕುತ್ತಿಗೆಯ ಸೈನಿಕರ ರುಂಡಗಳು, ಮುಂಡಕ್ಕೆ ಇನ್ನೂ ತಗುಲಿಕೊಂಡಿರುವ ನರದಿಂದಾಗಿ ಮಿಡುಕಾಡುತ್ತಿದ್ದುವಂತೆ, ಒಂದೇ ಸಮನೆ ವಿಲವಿಲನೆ ಒದ್ದಾಡುತಿದ್ದುವಂತೆ ! ಎಷ್ಟು ಸಚಿತ್ರವಾದ ವರ್ಣನೆ ಇದು.*

ತುಂಡು ಮುಂಡಗಳ ಮಿದುಳು ರೋಹಿತ ಕೊಬ್ಬು
ಖಂಡವ ಮನದಣಿವನಕ
ಉಂಡಜಿವೆಯನಾಂತು ಕಮುರುದೇಗಿತು ಮರು
ಳ್ತಂಡ ಶಾಕಿನಿ ಡಾಕಿನಿಯರು ॥

ಶಾಕಿನಿ ಡಾಕಿನಿಯರು ಕಟ್ಟರೆಯಾಗಿ ತಿಂದು ಕಮುರುದೇಗಿತು ಎಂಬ ವರ್ಣನೆಯೇ ಸಾಕಲ್ಲವೇ ರಣರಂಗದ ಅಗಾಧ ಮಾರಣಹೋಮವನ್ನು ಮನದಟ್ಟು ಪಡಿಸಲು !

ಒಟ್ಟಿನಲ್ಲಿ ಕನಕದಾಸರ ಯುದ್ಧವರ್ಣನೆಯಾಗಲೀ, ಬೇರೆ ವರ್ಣನೆಯಾಗಲೀ ಜನಪದ ಸತ್ತ್ವದಿಂದ ತುಂಬಿ ತುಳುಕಾಡುವಂಥವು, ಅಗಾಧ ಜನಪದ ಜೀವನಾನುಭವ ಇರದ ಓದುಗರು ಕಾವ್ಯಾಂತರ್ಗತ ಸಾರಸರ್ವಸ್ವವನ್ನು ಹೀರಿ ಹಿಗ್ಗಲಾರರು. ಉದಾಹರಣೆಗೆ ಕುಂಭಾಂಡನ ಬಾಣದಿಂದ ಅನಿರುದ್ಧ ರಕ್ತದೋಕುಳಿಯಲ್ಲಿ ಮುಳುಗಿ ಮೂರ್ಛೆ ಹೋಗುತ್ತಾನೆ. ಆಗ ಉಷಾ ಮತ್ತು ಚಿತ್ರಲೇಖೆಯರು ಹೌಹಾರಿ ಬಂದು ನೋಡುತ್ತಾರೆ. ಆಗಿನ ವರ್ಣನೆಯನ್ನು ನೋಡಿ :

* ಡಾ. ಕೊ.ತಿ.ನ. "ವಿಶಾಲವಾದ ನೆತ್ತರ ಕಡಲಿನಲ್ಲಿ ಅಡೆತಡೆಯಿಲ್ಲದೆ ಚಲಿಸುವ ಮೀನಿನಂತೆ ಅರೆಗಡಿದ ಕುತ್ತಿಗೆಯಿಂದ ನರಗಳು ಹೊರಬಿದ್ದು, ಅರೆಜೀವಗೊಂಡ ದೇಹಗಳು ತೇಲಾಡುತ್ತಿದ್ದವು" ಎಂದು ಕೆಟ್ಟದಾಗಿ ಗದ್ಯಾನುವಾದ ಮಾಡಿದ್ದಾರೆ. "ಗಾಣಕ್ಕೆ ಪಾಯ್ದ ಮೀನೆನಲು" ಎಂಬುದಕ್ಕೆ "ಅಡೆತಡೆಯಿಲ್ಲದೆ ಚಲಿಸುವ ಮೀನಿನಂತೆ" ಎಂದು "ಮಿಡುಕು" ಎಂದರೆ "ತೇಲಾಡು" ಎಂದು ವ್ಯಾಖ್ಯಾನ ಮಾಡಿರುವದಿದೆ. ಇದು ಸರಿಯಲ್ಲ. "ಗಾಳಕ್ಕೆ ಸಿಕ್ಕಿಕೊಂಡ ಮೀನು ಬಿಡಿಸಿಕೊಳ್ಳಲು ವಿಲಿವಿಲಿ ಒದ್ದಾಡುವ ಚಿತ್ರ" ಇಲ್ಲಿ ಪ್ರಸ್ತುತ.

ಗಾಯವಡೆದು ಕುಮಾರನ ಕೋಮಲವೆತ್ತ
ಕಾಯದೊಳರುಣಾಂಬು ಸುರಿಯೆ
ಆಯತಾಕ್ಷಿಯರಿರ್ವರು ನೋಡಿದರು ತಮ್ಮ
ಬಾಯ ತಾಂಬೂಲವನುಗುಟ್ಟು ॥

ಸತ್ತನೆ ಶಿವಶಿವ ದೇಸಿಗನಾದನೆಂ
ದತ್ತರಿರ್ವರು ದುಗುಡದಲಿ
ಚಿತ್ತಜನಾತ್ಮಸಂಭವ ಮೂರ್ಛೆದಿಳಿದೆ
ಚ್ಚತ್ತನೊಂದರಗಳಿಗೆಯಲಿ ॥

ನಾಲ್ಕು ಗೋಡೆಗಳ ಮಧ್ಯೆ ಗ್ರಂಥಸ್ಥ ಭಾಷೆಯ ವಿದ್ವತ್ತು ಗಳಿಸಿ ಬೀಗುವ ನಾಗರಿಕ ವಿದ್ವಾಂಸರಿಗೆ "ಆಯತಾಕ್ಷಿಯರಿರ್ವರು ನೋಡಿದರು ತಮ್ಮ ಬಾಯ ತಾಂಬೂಲವನುಗುಟ್ಟು" ಎಂಬ ವರ್ಣನೆಯ ಆಂತರ್ಯ ಅರ್ಥವಾಗುವುದೇ ಇಲ್ಲ. ದೇಹದಿಂದ ರಕ್ತ ಬುಗ್ಗೆಯಂತೆ ಚಿಮ್ಮುತ್ತಿರುವಾಗ ಹಾಗೂ ಅವನು ಮೂರ್ಛೆ ಹೋಗಿ ನಿಶ್ಚೇಷ್ಟಿತನಾದಾಗ ಉಷಾಚಿತ್ರಲೇಖೆಯರು ಅವನು ಸತ್ತುಹೋದನೆಂದೇ ಭಾವಿಸಿ ತಮ್ಮ ಬಾಯ ತಾಂಬೂಲವನ್ನು ಅವನ ಬಾಯಿಗೆ ಉಗುಳಿ ನೋಡಿದರಂತೆ ! ಸಾಮಾನ್ಯವಾಗಿ ಸತ್ತವರ ಕಣ್ಣು ಹಾಗೂ ಬಾಯಿಗೆ ಅಕ್ಕಿ ಸುರಿಯುವುದೋ ಅಥವಾ ಜಗಿದ ತಾಂಬೂಲ ಇಡುವುದೋ ಜನಪದ ಸಂಪ್ರದಾಯ. ಬಹುಶಃ ಪ್ರಾಣವನ್ನು ಬಿಡುವಾಗ ಬಾಯಿ ವಿಕಾರಗೊಳ್ಳಬಹುದು, ಕಣ್ಣು ಮೆಡರಿಸಿಕೊಳ್ಳಬಹುದು, ಅದನ್ನು ನೋಡಿದ ಮಕ್ಕಳುಮರಿ ಹೆದರಿಕೊಂಡಾವು ಎಂಬ ಉದ್ದೇಶದಿಂದ ಹಾಗೆ ಮಾಡುವ ಪ್ರವೃತ್ತಿ ಬೆಳೆದಿರಬಹುದು, "ನಿನ್ನ ಬಾಯಿಗೆ ನನ್ನ ತಂಬುಲ ಹಾಕ" ಎಂಬ ಜನಪದ ಬೈಗುಳಿಗೆ "ನೀನು ಸಾಯ" ಎಂದೇ ಅರ್ಥ. ಆದ್ದರಿಂದ ಅವನು ಸತ್ತನೆಂಬ ಅವರ ಭಾವನೆ, ಅವರು ಅವನ ಬಾಯಿಗೆ ತಾಂಬೂಲವನ್ನು ಉಗುಳುವ ಕ್ರಿಯೆಯಲ್ಲಿ ಅಭಿವ್ಯಕ್ತವಾಗಿದೆ. ಧ್ವನ್ಯರ್ಥ ಅರ್ಥವಾಗುತ್ತದೋ ಇಲ್ಲವೋ ಎಂಬ ಅನುಮಾನದಿಂದಲೇ ಕನಕದಾಸರು ವಾಚ್ಯವಾದರೂ ಆಗಲಿ ಎಂದು ಮುಂದಿನ ಪದ್ಯದಲ್ಲಿ "ಸತ್ತನೆ ಶಿವಶಿವ ದೇಸಿಗನಾದನೆಂ । ದತ್ತರಿರ್ವರು ದುಗುಡದಲಿ" ಎಂದು ಹೇಳಿರುವುದು. ಆದ್ದರಿಂದ ಜನಪದ ಜೀವನದ ನಡೆನುಡಿ ಸಂಸ್ಕೃತಿಗಳ ಕನೆಯಂತಿದೆ ಅವರ ಕಾವ್ಯ. ಯುದ್ಧ ವರ್ಣನೆಯಲ್ಲೂ ಅದು ವಿಜೃಂಭಿಸಿರುವುದು ಅವರ ಅಗಾಧ ಜೀವನಾನುಭವವನ್ನು ರುಜುವಾತುಗೊಳಿಸುತ್ತದೆ.

# ಕನಕ ಸಾಹಿತ್ಯದಲ್ಲಿ ಇಹ–ಪರಗಳ ಕಲ್ಪನೆ

**ಡಾ. ಸಿದ್ಧಯ್ಯ ಪುರಾಣಿಕ**

ದಾಸಸಾಹಿತ್ಯ ದೇಹಕ್ಕೆ ಪುರಂದರ–ಕನಕರು ಕಣ್ಣುಗಳೆರಡು. ಕನಕದಾಸರ ಬೇರೆ ವೈಶಿಷ್ಟ್ಯಗಳೂ ಇವೆ. ಅವರು ಹಾಡುಗಬ್ಬಿಗರಷ್ಟೇ ಅಲ್ಲ, ಕವಿಗಳು ಕೂಡ– ಛಂದೋವೈವಿಧ್ಯ, ವಸ್ತುವೈವಿಧ್ಯ, ವಿಚಾರವೈವಿಧ್ಯಗಳನ್ನೊಳಗೊಂಡ ಕಾವ್ಯಗಳನ್ನು ನಮಗೆ ಕೊಟ್ಟ ಕವಿಗಳು; ಶೈವ, ರಾಮಾನುಜೀಯ, ಮಾಧ್ವ ದರ್ಶನಗಳ ಸಾರವನ್ನು ಹೀರಿ ಬೆಳೆದ ಬೆಳಕಿಗರು ; ಭಕ್ತಿ ಜ್ಞಾನಗಳೆರಡಕ್ಕೂ ಪ್ರಾಶಸ್ತ್ಯ ನೀಡಿ ಅವುಗಳ ಮಧುರ ಮಿಶ್ರಣದಿಂದ ಅನನ್ಯವಾದ ಕೀರ್ತನೆಗಳನ್ನು, ಮುಂಡಿಗೆಗಳನ್ನು, ಕಾವ್ಯಗಳನ್ನು ರಚಿಸಿದ ಪ್ರತಿಭಾಶಾಲಿಗಳು; ಪಂಥ ಮೂರರಿಂದ ಪ್ರಭಾವಿತರಾಗಿಯೂ ಸ್ವತಂತ್ರಮತಿಗಳಾಗಿ ಉಳಿದ ಚಿಂತನಶೀಲರು; ತಮ್ಮ ಆತ್ಮಜ್ಞಾನದಿಂದ ತಮ್ಮ ಗುರುಗಳನ್ನು ಮೆಚ್ಚಿಸಿದ, ಆಗದವರನ್ನು ಬೆಚ್ಚಿಸಿದ ಅಚ್ಚ ಅರಿವಿನ ದೊರೆಗಳು–ಅರಮನೆಯನ್ನು ತೊರೆದು ಬುದ್ಧನಂತೆ ಅರಿವಿನ ಮನೆಯೊಡೆಯರಾದ ಮಹಾನುಭಾವರು.

ಅವರ ಸಾಹಿತ್ಯವನ್ನು ವಿವಿಧ ದೃಷ್ಟಿಯಿಂದ ವ್ಯಾಸಂಗಿಸಿ ಅವರ ವಿಚಾರಧಾರೆಯನ್ನು ಜನಮನದಲ್ಲಿ ಹರಿಸುವ ಕಾರ್ಯ ಅತ್ಯಗತ್ಯವಾದುದು. ಇಲ್ಲಿ ಅವರ ಇಹ–ಪರಗಳ ಕಲ್ಪನೆಯೇನೆಂಬುದನ್ನು ಅರಿಯಲು ಹವಣಿಸೋಣ. "ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ, ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಎಂಬ ಗೀತೋಕ್ತಿಯ ಪ್ರಭಾವ ಭಾರತೀಯರ ಮನದ ಮೇಲೆ ಎಷ್ಟು ದಟ್ಟವಾಗಿದೆಯೆಂದರೆ 'ಮರ್ತ್ಯಲೋಕವು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ' ಎಂದು ಬಸವಣ್ಣನವರು ಹೇಳಿದರೂ ಬಸವ ಪುರಾಣದಲ್ಲಿಯೇ ನಂದೀಶ್ವರ ಮರ್ತ್ಯಕ್ಕೆ ಹೋಗಲಾರೆನೆಂದು ಗೋಗರೆಯುತ್ತಾನೆ ! ಹರಿಹರನಂತೂ ಕೈಲಾಸದಲ್ಲಿ ಮಾಡಿದ ತಪ್ಪಿಗೆ ಮರ್ತ್ಯಲೋಕವೇ ಶಿಕ್ಷಾಲಯವೆಂದು ತನ್ನ ಪ್ರತಿಯೊಂದು ರಗಳೆಯಲ್ಲಿಯೂ

ಪ್ರತಿಪಾದಿಸಿದ್ದಾನೆ.[1] ಜಗನ್ಮಿಥ್ಯಾತ್ವವಾದ, ಜಗಜೀವನ ನಶ್ವರವೆಂಬ ವಾದ, ಜಗತ್ತು ಕಣ್ಣೀರಿನ ಕಣಿವೆಯೆಂಬ ವಾದ, ಜಗತ್ತು ಪಾಪಗಳ ತವರು ಎಂಬ ವಾದ ಇಲ್ಲಿ ಹುಟ್ಟುವುದೇ ಹೇಯವಾದುದೆಂಬ ಭಾವನೆಗೆ ಮಾತೃಕೆಗಳಾಗಿವೆ.

ಪಾಶ್ಚಾತ್ಯರಲ್ಲಿಯೂ ಈ ವಿಚಾರ ಸರಣಿಯಿಲ್ಲದಿಲ್ಲ. ಅಂತೆಯೇ ಕೀಟ್ಸ್ ಕವಿ ಬರೆಯಬೇಕಾಯಿತು: "The common cognomen of this world among the misguided and superstitious is a vale of tears' from which we are to be redeemed-... What a little cireumescribed straightened notion ! Call the world is you please, 'The vale of soul-making'" ಇದು ಒಪ್ಪಬಹುದಾದ ಮಾತು. ಇಂದಿನ ಯೋಗೀಶ್ವರ ಅರವಿಂದರೂ ತಮ್ಮ ಮಹಾಕಾವ್ಯ 'ಸಾವಿತ್ರಿ'ಯಲ್ಲಿ ಇದನ್ನು ಇನ್ನೂ ಉದ್ಬೋಧಕವಾಗಿ ಹೇಳಿದ್ದಾರೆ :

"Earth made a stepping stone to conquer heaven
The soul saw beyond heaven's limiting boundaries"

ಆತ್ಮವಿಕಾಸದ ಸಾಧನರಂಗ ಈ ಜಗತ್ತು.

ಬಹುಶಃ ಮಾಧ್ವಮತದೀಕ್ಷೆ ಪಡೆಯದಿದ್ದರೂ ಮಾಧ್ವಮತಕ್ಕೆ ಮನಸೋತಿದ್ದ ಕನಕದಾಸರಿಗೆ ಮಾಧ್ವಸಿದ್ಧಾಂತದ ಪ್ರಕಾರ ಜಗತ್ತು ಸತ್ಯವೆಂಬುದು ವೇದ್ಯವಾಗಿರಲೇಬೇಕು. ಅಂತೆಯೇ ಜಗತ್ತು ನಶ್ವರ, ಮಿಥ್ಯೆ, ಸಂಸಾರ ನೀರ ಮೇಲಿನ ಗುರುಳೆ, ಗಾಳಿಗೊಡ್ಡಿದ ಸೊಡರು, ಸುರಚಾಪ, ವಿದ್ಯುಲ್ಲತೆ ಇತ್ಯಾದಿ ಎಂಬ ಭಾವನೆ ಅವರ ಕೃತಿಗಳಲ್ಲಿ ಹೆಚ್ಚಾಗಿ ಕಾಣಿಸುವುದಿಲ್ಲ. 'ಇಲ್ಲಿಹನು ಅಲ್ಲಿಲ್ಲವೆಂಬೀ ಸೊಲ್ಲುಸಲ್ಲದು ಹೊರಗೊಳಗೆ ನೀನಲ್ಲದಿಲ್ಲ' (ಹರಿಭಕ್ತಿಸಾರ–೮೨) ಎಂದು ದೃಢವಾಗಿ ನಂಬಿದ್ದ ಅವರು ಸಂಸಾರದ ಅಸಾರತೆಯನ್ನು ಅಲ್ಲಲ್ಲಿ ಪ್ರಸ್ತಾಪಿಸಿದರೂ ಜೀವನದ ಗುರಿಯನ್ನು ಜೀವಿ ಮರೆಯದಿರಲೆಂಬ ಸದಾಶಯದಿಂದ ಪ್ರಸ್ತಾಪಿಸಿರುವರಾಗಲಿ ಹೇಯಭಾವನೆಯಿಂದಲ್ಲ. ಹುಟ್ಟಿದ

---

(1) ಚಾಮರಸ ತನ್ನ ಪ್ರಭುಲಿಂಗ ರೀತಿಯಲ್ಲಿ "ಭೋಗ ಭೂಮಿಯ ಭೋಗತನುವಿನ। ಲಾಗದನುಪಮಸಿದ್ಧಿ ಕರ್ಮೋ । ದ್ಯೋಗ ಭೂಮಿಯ ಕರ್ಮತನುವಿಲಲ್ಲದದಚಿಂದೆ ॥ ಯೋಗ ಯೋಗ್ಯರು ಯೋಚಿಸುತ ಭೂ–। ಭಾಗದಲಿ ಮಾನವ ಶರೀರಗ । ಳಾಗಿ ಸಾಧಿಸಿ ನಿಜವನರಿವರು ಗಿರಿಜೆ ಕೇಳೆಂದ" ॥ ಎಂದು ಪರಮೇಶ್ವರನಿಂದಲೇ ಪಾರ್ವತಿಗೆ ಹೇಳಿಸಿದರೂ, ಅನುಭಾವವಿಭುಮಾಯಿ ದೇವ ಪ್ರಭು–

ಮೇಲೆ ಅರಿವಿನ ಜನ್ಮ ಪಡೆದ ಮಾನವ 'ಎಲ್ಲಿಂದ ಬಂದೆ ಮುಂದೆತ್ತ ಪಯಣ?' ಎಂಬ ಪ್ರಶ್ನೆಯನ್ನು ತನಗೆ ತಾನೇ ಕೇಳಿಕೊಳ್ಳಬೇಕು.

"ಎಲ್ಲಿಂದ ಬಂದೆ ಮುಂದೆತ್ತ ಪಯಣ ।
ಇಲ್ಲಿ ನಿನಗೆಷ್ಟು ಅಲಸ್ಯ ಮರುಳೆ ? ॥ ಪ ॥
ಮುಂದಾವ ಪಥವ ಸೇರುವೆ ಮರುಳೆ ಸಾಕಿನ್ನು ।
ಹಿಂದೆ ನಿನ್ನವರಾರು, ಆಪ್ತರುಂಟೆ ? ॥
ಒಂದುಗೂಡಿದ ಪತ್ನಿ ಸುತರೆಲ್ಲ ವರ್ಜಿಪರು ।
ನಿಂದು ಮಾತಾಡು, ಬಳಲಿದೆ ಬರಿದೆ ಮರುಳೆ ! ॥

ಬರವಿದೇತಕೆ ? ನಿನ್ನ ಸ್ಥಳವೆಲ್ಲಿ ? ನೆಲೆಯಾಗಿ
ಇರುವ ಮಂದಿರವಾವುದೆನಗೆ ಪೇಳೊ ॥
ಧರೆಯೊಳಗೆ ವರಕಾಗಿನೆಲೆಯಾದಿ ಕೇಶವನ
ಸಿರಿಚರಣಕಮಲವನು ನೆರೆನಂಬಿ ಸುಖಿಸೊ ! ॥

ಬರವಿದೇತಕೆ ? ಪಯಣಿಸಲು ತನ್ನ ಮೂಲಕೆ ! ದಾರಿ ? ಹರಿಯ ಚರಣ ಕಮಲವನು ನೆರೆ ನಂಬಿ ಸುಖಿಸುವುದು ; "ಇರಬಂದುದಿಲ್ಲ ಸಂಸಾರ–ಇದ । ನರಿತು ಹರಿಯ ಸ್ಮರಣೆಯ ಮಾಡೊ ಮನುಜ !" "ಏನು ಇಲ್ಲದ ಎರಡು ದಿನದ ಸಂಸಾರ । ಜ್ಞಾನದಲಿ ದಾನ–ಧರ್ಮವ ಮಾಡಿರಯ್ಯ !" ಉಳಿದಂತೆ ಮಾನವನ ಬದುಕಿನಲ್ಲೇನಿದೆ ? ಹೊಟ್ಟೆಗಾಗಿ ಹೋರಾಟ.

"ಎಲ್ಲರೂ ಮಾಡುವುದು ಹೊಟ್ಟೆಗಾಗಿ–ಗೇಣು ಬಟ್ಟೆಗಾಗಿ !" ಇದು ಬದುಕಿನ ಕಠೋರ ಸತ್ಯ. ಆದರೂ ಗುರಿಯಾಗಲಿ ಸತ್ಯ. ಎಷ್ಟು ಕಷ್ಟಪಟ್ಟು ಎಷ್ಟು ರೊಟ್ಟಿ–ಬಟ್ಟೆ ಗಳಿಸಿದರೇನು ? ಸಂಗಡ ಬರುವುದಿಲ್ಲ ಇವು ಯಾವೂ.

---

"ಧರಣಿಯೆ ಪೀಠಮಂಬರಮೆ ಲಿಂಗಮಿವಿಂತಿರದೊಂದನೊಂದು ಬಿ–
ಟ್ಟಿರದಿಹಕಾರಣಂ ಸಕಲ ಜೀವರಿಗಾಲಯ ಮಾಯ್ತೊ ತಮ್ಮೊಳೊಂ–
ದಿರದಿರಲೊಂದೆಯಾಯ್ತೊ ಸರಿನೋಡೆ ವಿಶೇಷಮದೇನು ಮಿರ್ದ್ದದಿ–
ಲ್ಲೆರಡರ ಮಧ್ಯದಲ್ಲಿ ಪರಮ ಪ್ರಭುವೇ ಮಹದೈಪುರೀಶ್ವರಾ" ॥
ಎಂದು ಎಚ್ಚರಿಸಿದರೂ ಇಹದ ಕೀಳ್ಮೆ, ಪರದ ಮೇಲ್ಮೆಗಳು ಮಾಯವಾಗಲಿಲ್ಲ
ವೀರಶೈವ ಪುರಾಣಗಳಲ್ಲಿ

"ಏನು ಬರುವುದೋ ಸಂಗಡೇನು ಬರುವುದೊ ? ॥ಪ॥
ಧಾನಧರ್ಮ ಮಾಡಿ ಬಹು ನಿಧಾನಿಯೆನಿಸಿಕೊಳ್ಳೊ ಮನುಜ ॥ಅ. ಪ.॥
ಎನ್ನದೆಂದು ತನ್ನದೆಂದು ಹೊನ್ನು–ಹೆಣ್ಣು–ಮಣ್ಣಿಗಾಗಿ
ಬನ್ನಬಟ್ಟು ಬಾಯ ಬಿಡುವೆ ಬರಿದೆ ಮೋಹದಿ ।
ಸನ್ನುತದಲಿ ಪರಹಿತಾರ್ಥಮಾಡಿ ಪುಣ್ಯ ಪಡೆಯೊ ನೀನು
ಮುನ್ನ ಕ್ರೂರಫಣಿಯ ಕೂಪದಂತೆ ಕೆಡಲುಬೇಡ ಮನುಜ !"

ಆದುದರಿಂದ ಇಹಜೀವನ ದೇವರ ಧ್ಯಾನಕ್ಕಾಗಿ, ದಾನಧರ್ಮಕ್ಕಾಗಿ, ಪರ ಹಿತಾರ್ಥಕ್ಕಾಗಿ ಅಂತೆಯೇ, "ದಾನಧರ್ಮವಮಾಡಿ ಸುಖಿಯಾಗು ಮನವೆ। ಹೀನ ವೃತ್ತಿಯಲಿ ನೀ ಕೆಡಬೇಡ ಮನವೆ !"..........................................

ದಾನಧರ್ಮ ಪರರುಪಕಾರವ ಮಾಡು । ದೀನನಾಗಿ ನೀ ಕೆಡಬೇಡವೊ।

ಇದು ಸಾಧ್ಯವಾಗಬೇಕಾದರೆ ಮಾನವ ಮೊದಲು ತನ್ನ ತಾನೇ ತಿಳಿದು ನೋಡಬೇಕು–ತನ್ನ ನಿಜವನ್ನು ತಾನೇ ತಿಳಿದುಕೊಳ್ಳಬೇಕು :

"ನಾನು ನೀನು ಎನ್ನದಿರೋ ಹೀನ ಮಾನವ ।
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ–ಪ್ರಾಣಿ ॥ಪ॥
ಹೆಣ್ಣು–ಹೊನ್ನು–ಮಣ್ಣು ಮೂರು ನಿನ್ನವೇನೆಲೊ ।
ಅನ್ನದಿಂದ ಬಂದ ಕಾಯ ನಿನ್ನದೇನೆಲೊ ? ॥
ಕರ್ಣದಿಂದ ಬರುವ ಘೋಷ ನಿನ್ನದೇನೆಲೊ ? ।
ನಿನ್ನ ಬಿಟ್ಟು ಹೋಹ ಜೀವ ನಿನ್ನದೇನೆಲೊ ? ॥
ಕಾಲ–ಕರ್ಮ–ಶೀಲ–ನೇಮ ನಿನ್ನದೇನೆಲೊ ?
......................................................................
ಲೋಲ ಆದಿಕೇಶವನ ಭಕ್ತನಾಗೆಲೊ ! ॥

'ನಳಚರಿತ್ರೆ' 'ಮೋಹನ ತರಂಗಿಣಿ'ಗಳಲ್ಲಿ ಅನ್ನದಿಂದ ಬಂದ ಕಾಯ ಪ್ರೇಮವಾಗಿ ಪರಿಣಮಿಸುವುದನ್ನು ಚಿತ್ರಿಸಿದ ಕವಿ ಕನಕದಾಸ ಭಕ್ತನಾಗಿ ಕಂಡುಕೊಂಡ ಮಹಾ ಮೌಲ್ಯ ಭಕ್ತಿ, ನಾಮಜಪ.

"ಸಂಸಾರ ಸಾಗರವನುತ್ತರಿಸುವಡೆ
ಕಂಸಾರಿಯೆಂಬ ನಾಮವೊಂದೆ ಸಾಕು ಮರುಳೆ ॥ಪ॥
ಯತಿಯಾಗಬೇಡ ವೈರಾಗ್ಯವರಿತು ಸಕಲ ।

ವ್ರತವ ಮಾಡುವೆನೆಂಬ ನೇಮಬೇಡ ।
ಶ್ರುತಿ–ಸ್ಮೃತಿಗಳನಂತು ನಡೆವೆನೆನಬೇಡ ಶ್ರೀ ।
ಪತಿಯ ಶ್ರೀನಾಮವೊಂದೇ ಸಾಕು ಮರುಳೆ ! ॥

ತನುವದಂಡಿಸಿ ತುದಿಯ ಕೋಡುಗಲ್ಲಿನ ಮೇಲೆ ।
ವನಿತೆಯನು ಬಿಟ್ಟು ತಪವಿರಲು ಬೇಡ ॥
ಅನುವರಿತು ನೀರೊಳಗೆ ಬಿಡದೆ ಮುಳುಗಲುಬೇಡ ।
ವನಜಾಕ್ಷನಾಮವೊಂದೇ ಸಾಕು ಮರುಳೆ ॥

ಅರಮನೆಯನ್ನು ತೊರೆದು ವೀರವಿರಾಗಿಯಾದ ನಮ್ಮ ಕನಕಣ್ಣ ಜನರಿಗೆ ವನಿತೆಯನ್ನು ಬಿಡಲು ಹೇಳಲಿಲ್ಲ. ಯತಿಯಾಗಲು, ವೈರಾಗ್ಯವ್ರತಿಯಾಗಲು ಹೇಳಲಿಲ್ಲ–ಭಾಗವತ ಮಹಾತ್ಮ್ಯದಲ್ಲಿ ಹೇಳಿರುವಂತೆ "ಉತ್ಪನ್ನಾ ದ್ರಾವಿಡೇಚಾಹಂ ವೃದ್ಧಿ ಕರ್ಣಾಟಕೇಗತಾ" ದ್ರಾವಿಡದಲ್ಲಿ ಹುಟ್ಟಿ ಕರ್ಣಾಟದಲ್ಲಿ ವರ್ಧಿಸಿದ ಭಕ್ತಿಯನ್ನೇ ಬೋಧಿಸಿದರು. ಉಪನಿಷತ್ತಿನ 'ಉಪಾಸನೆ' ನಾರದರ 'ಅನನ್ಯತೆ', ಶಂಕರರ 'ಅನುಸಂಧಾನ', ರಾಮಾನುಜರ 'ಪ್ರಪನ್ನತೆ', ಆನಂದತೀರ್ಥರ 'ಸಾಪ್ರತಿಷ್ಠಿತ ಸ್ನೇಹ', ಶರಣರ 'ಸಾಮರಸ್ಯ', ದಾಸರ 'ದಾಸ್ಯಭಾವ', ಸಂತರ 'ಸಖ್ಯ' 'ಶರಣಾಗತಿ' ಇತ್ಯಾದಿಗಳಲ್ಲಿ ಬಿತ್ತರಗೊಂಡಿರುವ ಭಕ್ತಿಯ ಅರ್ಥಪ್ರಪಂಚ ಅಪಾರವಾದುದು. ಇದನ್ನು ಪಂಚಮ ಪುರುಷಾರ್ಥವೆಂದು ಕರೆದವರಿದ್ದಾರೆ. ಆದಿಯಿಂದ ಬಂದ ಚತುರ್ವಿಧ ಪುರುಷಾರ್ಥಗಳನ್ನು ಅಲ್ಲಗಳೆಯದೆ ಅವುಗಳಿಗೆ ಈ ಪಂಚಮ ಪುರುಷಾರ್ಥವನ್ನೂ ಸೇರಿಸಿ ಇಹಜೀವನ ಅರ್ಥಪೂರ್ಣವಾಗುವಂತೆ ಮಾಡಿದವರಲ್ಲಿ ಕನಕದಾಸರೂ ಒಬ್ಬ ಮಹಾ ಭಕ್ತ–ಜ್ಞಾನಿಗಳು.

ಇಹಜೀವನ ಸರ್ವಾಂಗ ಸುಂದರವಾಗಲು ಕನಕದಾಸರು ಇನ್ನೂ ಕೆಲವು ಅಂಶಗಳನ್ನು ವಿಶದೀಕರಿಸಿದ್ದಾರೆ. 'ರಾಮಧಾನ್ಯ ಚರಿತ್ರೆ'ಯಲ್ಲಿ "ಸತ್ಯಹೀನನು ಬಡವರನು ಕ । ಣ್ಣೆತ್ತಿ ನೋಡೆ, ಧನಾಢ್ಯರನು ಬೆಂ । ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು ॥ ಹೆತ್ತ ಬಾಣಂತಿಯರು ರೋಗಿಗ । ಪತ್ಯ ನೀನಹೆ ಹೆಣದ ಬಾಯಿಗೆ । ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ"॥ ಎಂದು ರಾಮಧಾನ್ಯದಿಂದ ಹೇಳಿಸಿ ಬಡವರನು ಕಣ್ಣೆತ್ತಿ ನೋಡದ, ಧನಾಢ್ಯರ ಬೆಂಬತ್ತಿ ನಡೆವ, ಬಾಣಂತಿಯರಿಗೆ, ರೋಗಿಗಳಿಗೆ ಆಗದ ಇಹ ಜೀವನ ನಿರರ್ಥಕವೆಂದು ಎಚ್ಚರಿಸಿದ್ದಾರೆ.

"ಹಸಿದು ಬಂದವರಿಗೆ ಅಶನವೀಯಲು ಬೇಕು
ಶಿಶುವಿಗೆ ಬಾಯ್ಬೆಣ್ಣೆಯುಣಿಸಬೇಕು
ಹಸನಾದ ಭೂಮಿಯನೆ ಧಾರೆಯೆರೆಯಲುಬೇಕು
ಪುಸಿಯಾಡದಲೆ ಭಾಷೆ ನಡೆಸಲೇಬೇಕು ॥

ಇಲ್ಲಿ ಮೊದಲ ಸಾಲಿನಲ್ಲಿ ಮಠಮಂದಿರಗಳಿಗೆ, ಎರಡನೆಯ ಸಾಲಿನಲ್ಲಿ ಯುನಿಸೆಫ್ (Unicef)ಗೆ, ಮೂರನೆಯ ಸಾಲಿನಲ್ಲಿ ಭೂಮಿದಾರರಿಗೆ, ನಾಲ್ಕನೆಯ ಸಾಲಿನಲ್ಲಿ ರಾಜಕೀಯ ನಾಯಕರಿಗೆ ಎಚ್ಚರಿಕೆಯಿದೆ.

ಇಹವನ್ನು ಕಲುಷಿತಗೊಳಿಸಿರುವ ಇನ್ನೊಂದು ದುಷ್ಟಕಲ್ಪನೆ, ಕುಲದ ಕಲ್ಪನೆ, ಕೀಳು ಮೇಲಿನ ಕಲ್ಪನೆ, ಕನಕದಾಸರು 'ನೀ ದೇಹದೊಳು ನೆಲೆಸಿರಲು ಹೊಲೆಯುಂಟೆ?' ಎಂದು ಕೇಳಿ ಅಸ್ಪೃಶ್ಯತೆಯ ಬೇರಿಗೇ ಕೊಡಲಿಯೇಟು ಕೊಟ್ಟಿದ್ದಾರೆ. ಕರಿಯರೆಂದು, ಅಂತ್ಯಜರೆಂದು, ಪಂಚಮರೆಂದು ಪರಮಾತ್ಮನ ಮಕ್ಕಳನ್ನು ಅಸ್ಪೃಶ್ಯರೆನ್ನುವುದು ಅದರಲ್ಲಿ ಇರುವ ಪರಮಾತ್ಮನಿಗೇ ಅಪಮಾನ ಮಾಡಿದಂತೆ. ಹೀಗೆನ್ನುವವರು ಪಾಪಿಗಳು. ಹೀಗೆಯೇ, 'ಬಂದದ್ದು ಮೂತ್ರ ಕುಳಿ ತಿಂದದ್ದು ಮೊಲೆ ಮಾಂಸ । ಹಿಂದೆ ಹೀಗಿರಲದಿನ್ನೇತರ ಕುಲವಯ್ಯ?' ಎಂದೂ 'ಆತ್ಮ ಯಾವ ಕುಲ ಜೀವ ಯಾವ ಕುಲ । ತತ್ವೇಂದ್ರಿಯಂಗಳ ಕುಲವ ಪೇಳಿರಯ್ಯ' ಎಂದು ಕೇಳಿ ಕುಲದ ಮೂಲಕ್ಕೆ ಕುಠಾರವನ್ನಿಕ್ಕಿದರು ಕನಕದಾಸರು. ಅವರ ಸರ್ವತ್ರ ಸಮದರ್ಶಿತ್ವ ಕೃತ್ರಿಮ ಕುಲಭೇದಗಳನ್ನು, ಸ್ಪೃಶ್ಯಾಸ್ಪೃಶ್ಯ ಭೇದಗಳನ್ನು ಒಪ್ಪೀತೆ ? ಮಾತಿನಲ್ಲಿ 'ಸರ್ವಂ ಖಲ್ವಿದು ಬ್ರಹ್ಮ', ಕೃತಿಯಲ್ಲಿ ದಲಿತ ದಮನ ವೇದಾಭ್ಯಾಸಜಡರ ವೈಶಿಷ್ಟ್ಯ !

ಕನಕದಾಸರ ಕಣ್ಣು ಇಹದಲ್ಲಿ ಎಲ್ಲೆಡೆಗೂ ಶಿವವಾದುದನ್ನೇ ಕಾಣ ಬಯಸಿದರೂ ಕೆಡುಕು, ದಾಷ್ಟ್ಯ, ದೌರ್ಜನ್ಯಗಳು ಅವರ ಕಣ್ಣಿಗೆ ಬೀಳದಿರಲಿಲ್ಲ. ಅವುಗಳಿಗೆ ಮುಖಾಮುಖಿಯಾಗಲು ಅವರು ಹಿಂಜರಿಯಲೂ ಇಲ್ಲ. 'ಮೋಸದಿ ಜೀವರ ಘಾಸಿ ಮಾಡುವವರು, ಭಾಷೆಯ ಕೊಟ್ಟು ನಿರಾಶೆ ಮಾಡಿದವರು, ನ್ಯಾಯವ ಬಿಟ್ಟನ್ಯಾಯವ ಮಾಡುವ ನಾಯಿಗಳು, ತಾಯಿ ತಂದೆಗಳ ನೋಯಿಸಿದ ಆ ನಾಯಿಗಳು, ಬಾಯಿ ಕೊಬ್ಬಿ ಬಯ್ಯುವ ದುರ್ಜನರು, ಬಾಧಿಸಿ ಬಡವರ ಅರ್ಥವನೊಯ್ವರು, ಕದ್ದು ಒಡಲ ಪೊರೆವವರು, ಹೇವವಿಲ್ಲದ ಹೆಣ್ಣು, ಸೇವೆಯರಿಯದ ಧಣಿ, ಧರ್ಮವಿಲ್ಲದ ಅರಸು, ಸೊಕ್ಕಿ ನಡೆಯವ ಭೃತ್ಯ, ಕಂಡೂ ಕರೆಯದ ನಂಟ, ದಂಡಿಗಂಜುವ ಬಂಟ, ಉಂಡಮನೆಗೆರಡ ಎಣಿಸುವಾತ, ಕೊಂಡೆಯವ ಪೇಳಿ ಕಾದಿಸುವವ, ನಂಬಿದ ಆವಿನಲಿ

ಕೇಡನೆಣಿಸುವವ, ಗುರುಸತಿಗೆ ಪರಸತಿಗೆ ಎರಡು ಎಣಿಸುವವ, ಗುರುನಿಂದೆ ಪರನಿಂದೆ ಮಾಡುವವ, ಪರಹಿತಾರ್ಥದ ಧರ್ಮ ಪಡೆಯದಾತ–ಹೀಗೆ ಎಲ್ಲ ಖುಲ್ಲರನ್ನೂ ಅವರು ಕಂಡಿದ್ದಾರೆ. ಇಷ್ಟೆಲ್ಲ ಕೆಡುಕುಗಳಿಂದ, ಕೆಡುಕರಿಂದ ಕೂಡಿದ್ದರೂ ಇಹ ಜೀವನ ಅವರಿಗೆ ಕಹಿಯೆನಿಸಲಿಲ್ಲ. 'ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡೆ ಜಗಳವೇ ಲೇಸೆಂದು.

ಹಸಿವರಿತು ತಾಯ್ ತನ್ನ ಶಿಶುವಿಗೆ
ಒಸೆದು ಮೊಲೆ ಕೊಡುವಂತೆ । ಹರಿ ಪೋಷಿಸುವನೆಂದು ನಂಬಿ, ತಲ್ಲಣಿಸದಿರು
ಕಂಡ್ಯ ತಾಳು ಮನವೆ

ಎಂದು ನೆಚ್ಚಿ, ಹಸನಾದ ಬಾಳು ಬಾಳಿ, ಭಕ್ತಿರಸವ ಸೇವಿಸಿ ಧನ್ಯನಾದರೆ ಸಾಕು ಪರದ ಚಿಂತೆ ಬೇಕಿಲ್ಲವೆಂಬುದು ಇವರ ಸಮಂಜಸ ಸಂದೇಶ.

"ಎಲ್ಲಿರುವನೋ ರಂಗ ಎಂಬ ಸಂಶಯಬೇಡ ॥ಪ॥
ಎಲ್ಲಿ ಭಕ್ತರು ಕರೆಯೆ ಅಲ್ಲಿ ಬಂದೊದಗುವನು ॥ಅ.ಪ॥

ಎಂದು ನಂಬಿದ್ದ ಕನಕದಾಸರಿಗೆ ಇಹ–ಪರವೆಂಬ ವಿಭಜನೆಯೇ ಒಪ್ಪಿಗೆಯಾಗಲಿಲ್ಲ. ಹರಿಯನ್ನು ಬೆರೆಯಲು ವೈಕುಂಠಕ್ಕೇ ಹೋಗಬೇಕಿಲ್ಲ. ತನ್ನ ಹೃದಯದಲ್ಲಿಯೇ ಹರಿಯಿರುವಾಗ ಪರಲೋಕವೊಂದರಲ್ಲಿ ಅವನಿರುವನೆಂಬುದು ಹಾಸ್ಯಾಸ್ಪದ.

"ಅಣುಮಹತ್ತಿನೊಳೆಲ್ಲ ಪರಿಪೂರ್ಣ ವಿಶ್ವಮಯ
ಗಣನೆಯಿಲ್ಲದ ಮಹಾಮಹಿಮನೆನಿಪ
ಘನ ಕೃಪಾನಿಧಿ ಕಾಗಿನೆಲೆಯಾದಿಕೇಶವನು
ನೆನೆದವರ ಮನದೊಳಿಹನೆಂಬ ಬಿರುದುಂಟಾಗಿ ॥
ಎಲ್ಲಿರುವನೋ ರಂಗ ಎಂಬ ಸಂಶಯಬೇಡ !

"ಎಲ್ಲಿ ನೋಡಿದರಲ್ಲಿ ರಾಮ–ಇದ
ಬಲ್ಲ ಜಾಣರ ದೇಹದಲ್ಲಿ ನೋಡಣ್ಣ !"

ಅವರ ಮನವೇ ಹರಿಯ ಮಂದಿರವಾಗಿದ್ದ ಕಾರಣ ಕನಕದಾಸರು ಹರಿಯೊಡನೆ ಸಲಿಗೆಯ ಸಲ್ಲಾಪ ನಡೆಸಲು ಸಮರ್ಥರಾದರು.

"ನನ್ನಿಂದ ನಾನೇ ಜನಿಸಿ ಬಂದೆನೆ ದೇವ
ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ
ನಿನ್ನದು ತಪ್ಪೋ ಎನ್ನದು ತಪ್ಪೋ ಪರಮಾತ್ಮ ?"

ಎಂದು ಕೇಳಿ ಇಂದಿಗೂ ಪ್ರಸ್ತುತವೆನಿಸುವ ಒಂದು ದೃಷ್ಟಾಂತವನ್ನು

ಕೊಟ್ಟಿದ್ದಾರೆ :

ಅಂಧಕನ ಕೈಯಲಿ ಕೋಲಿತ್ತು ಕರೆದೊಯ್ವ
ಮುಂದಾಳು ತಪ್ಪಿ ಗುಂಡಿಗೆ ಕೆಡಹಲು
ಅಂಧಕನ ತಪ್ಪೊ ಮುಂದಾಳಿನ ತಪ್ಪೊ
ಹಿಂದಾಡಬೇಡ–ಎನ್ನಲಿ ತಪ್ಪಿಲ್ಲ !"

ಎಂದು ಸಹಜ ಸಲಿಗೆಯಿಂದ, ನಿಜ ಭಕ್ತಿ ಮಾತ್ರ ನೀಡುವ ನಿರ್ಭೀತಿಯಿಂದ ಹೇಳಬಲ್ಲ ಕನಕದಾಸರು 'ಬಂದೆನಯ್ಯ ಗೋವಿಂದ ಸೆಟ್ಟಿ ನಿನ್ನ । ಹರಿವಾಣ ತೀರ್ಥ ಪ್ರಸಾದ ಉಂಟೆನಲಾಗಿ' ಎಂಬ ಕೀರ್ತನೆಯಲ್ಲಿ ತಿರುಪತಿಯಲ್ಲಿ ನಡೆವ ಧರ್ಮದ ವ್ಯಾಪಾರೀಕರಣವನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ–ಹೀಗೆ ಅವನ ಆರಾಧ್ಯ ಪರಲೋಕದಲ್ಲಿ ಎಲ್ಲಿಯೋ ಕುಳಿತು ಭಕ್ತನ ಬರವಿಗಾಗಿ ಕಾದಿರುವ ದೈವತನವಲ್ಲ, ಅವನೊಡನಿದ್ದು ಅವನನ್ನು ಸದ್ಗತಿಗೊಯ್ಯುವ ಹೊಣೆ ಹೊತ್ತ ಜವಾಬ್ದಾರೀದೈವ.

ಅಂತೆಯೇ, 'ಊರಿಗೆ ಬಂದರೆ ದಾಸಯ್ಯ ನಮ್ಮ । ಕೇರಿಗೆ ಬಾ ಕಂಡ್ಯ ದಾಸಯ್ಯ' ಎಂದವರು ಕರೆದರು ; ಬದುಕಿದೆನು ಬದುಕಿದೆನು ಭವ ನನಗೆ ಹಿಂಗಿತು । ಪದುಮನಾಭನ ಪಾದದೊಲುಮೆ ಎನಗಾಯಿತು ॥" ಎಂದು ಹಾಡಿದರು : "ಇಂದೆನ್ನ ಜೀವಕ್ಕು ಸಕಲ ಸಂಪದವಾಯ್ತು । ಮುಂದೆನ್ನ ಜನ್ಮ ಸಫಲವಾಯಿತು ॥ ತಂದೆ ಶ್ರೀ ಕಾಗಿನೆಲೆಯಾದಿ ಕೇಶವರಾಯ । ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ॥" ಎಂದು ಉದ್ಗರಿಸಿದರು. ಕನಕದಾಸರಿಗೆ ಇಹವೂ ತನ್ನಲ್ಲಿ, ಪರವೂ ತನ್ನಲ್ಲಿ.

ಇನ್ನೊಂದು ಕೀರ್ತನೆ ಗಮನಾರ್ಹವಿಲ್ಲಿ.

"ಇಷ್ಟು ದಿನ ಈ ವೈಕುಂಠ । ಎಷ್ಟುದೂರವೆನ್ನುತ್ತಿದ್ದೆ ॥ಪ॥
ದೃಷ್ಟಿಯಿಂದ ನೋಡಿದೆ ನಾ । ಸೃಷ್ಟಿಗೀಶ ಶ್ರೀರಂಗಶಾಯಿ ॥ಅ.ಪ॥
ವನ ಉಪವನಗಳಿಂದ । ಘನಸರೋವರಗಳಿಂದ ।
ಕನಕ ಗೋಪುರಗಳಿಂದ । ಘನ ಶೋಭಿತನೆ ಶ್ರೀರಂಗಶಾಯಿ ॥

ಇಂಥ ದಿವ್ಯಕೇಂದ್ರ ಇಂಥ ನಿಸರ್ಗ ಸೌಂದರ್ಯದ ಮಡಿಲಲ್ಲಿ ಮಲಗಿರುವಾಗ ಇನ್ನಾವ ವೈಕುಂಠದಾಸೆ. ಇದೇ ವೈಕುಂಠವಾಗಿ, ಪರಂಧಾಮವಾಗಿ ಕಂಡಿತವರಿಗೆ. ಇಂಥ ರಮಣೀಯ ದೇವಾಲಯಗಳೂ ನಿಸರ್ಗಸ್ವರ್ಗಗಳು ಬೇಕಾದಷ್ಟಿವೆ ಭಾರತದಲ್ಲಿ ! ಹೀಗಿರುವಾಗ 'ಭಾರತವೆ ಸ್ವರ್ಗವೈ ನಾವೆ ದೇವತೆಗಳೈ' ಎಂದು ಕನಕದಾಸರಿಗೂ ಎನ್ನಿಸಿದ್ದರೆ ಆಶ್ಚರ್ಯವಿಲ್ಲ'

# ಕನಕ ಸಾಹಿತ್ಯದಲ್ಲಿ ಭಕ್ತಿಸ್ವರೂಪ

**ಪ್ರೊ. ವಸಂತಕುಷ್ಟಗಿ**

ಸಾಹಿತ್ಯವೆಂದರೆ ಬದುಕಿನಲ್ಲಿ ಶ್ರದ್ಧೆಯನ್ನು ಹುಟ್ಟಿಸುವುದು. ತನ್ನರಿವನ್ನು ಮನುಷ್ಯನಲ್ಲಿ ಮೂಡಿಸಿ ಬದುಕನ್ನು ಮಾಡಲಪೇಕ್ಷಿಸುವಂತೆ ಮಾಡುವುದು. ಎಲ್ಲವೂ ಪರಮಾತ್ಮಮಯವಾದರೂ ಪರಮಾತ್ಮನ ಪ್ರೇರಣೆಯಿಂದಲೇ ಎಲ್ಲ ನಡೆದರೂ, ಪುರುಷಾರ್ಥಕ್ಕೆ ಮಾಹಿತಿಯನ್ನು ನೀಡಿ ಬದುಕನ್ನು ಅರಳಿಸುವುದೇ ಆಗಿದೆ. ಅದಕ್ಕೂ ಹೊರತಾಗಿ ಯಾವ ನಾಡಿನ ಸಂತ ಸಾಹಿತ್ಯವೂ ಇಲ್ಲ. ಅದರಲ್ಲಿಯೂ ಕನ್ನಡ ಸಾಹಿತ್ಯವು ಈ ವಿಷಯದಲ್ಲಿ ಚೈತನ್ಯಪೂರ್ಣ ಬಂಗಾರದ ಖಣಿಯಾಗಿದೆ. ಏಕೆಂದರೆ ಭಕ್ತಿಗಂಗೆಯು ಕನ್ನಡ ಸಾಹಿತ್ಯದ ಜೀವನದಿಯಾಗಿ ಇಲ್ಲಿ ಹರಿದದ್ದೇ ಅದಕ್ಕೆ ಕಾರಣ. ವಿಶೇಷತಃ ಶರಣರು ದಾಸರು ಭಕ್ತಿವಾಹಿನಿಯನ್ನು ಅಖಂಡವಾಗಿ ತಮ್ಮ ತಮ್ಮ ಜೀವಿತಕಾಲದಲ್ಲಿ ಪ್ರವಹಿಸುವಂತೆ ಮಾಡಿದರಲ್ಲದೆ, ಅವರು ತಮ್ಮ ಸಾಹಿತ್ಯದಿಂದ ತ್ರಿಕಾಲಗಳಲ್ಲಿಯೂ ಭಕ್ತಿಯ ಶಕ್ತಿವಾಹಿನಿಯನ್ನು ಸದಾಕಾಲ ಪ್ರವಹಿಸುವಂತೆ ಮಾಡಿದ್ದಾರೆ. ಅಂತೆಯೇ ವಿಶ್ವಮಾನವತಾವಾದಕ್ಕೆ ಕನ್ನಡನೆಲವು ತವರು ನೆಲವಾಗಿದೆ. ಜೀವಗಂಗೆಯಾಗಿದೆ.

ಈ ಭಕ್ತಿ ಎನ್ನುವುದಕ್ಕೆ ಪ್ರೀತಿ ಭೀತಿಗಳು, ಆಶ್ಚರ್ಯ ಆದರಗಳು ಮೂಲನೆಲೆಗಳು. ಏಕೆಂದರೆ ಸೃಷ್ಟಿಯಲ್ಲಿ ರಮ್ಯವಾದ ಸೊಂಪೂ, ಅದ್ಭುತರಮ್ಯವಾದ ಚೆಲುವುಗಳು ಹಾಸುಹೊಕ್ಕಾಗಿವೆ. ಇವುಗಳ ಸಂಮಿಲಿತ ಸ್ವರೂಪವೇ ಭಕ್ತಿ. ಭಯ ಅನುಕಂಪ ವಿಶ್ವಾಸಗಳಿಂದ ಭಕ್ತಿ ಪರಮಾತ್ಮ ಸ್ವರೂಪವನ್ನು ತೋರಿಸುತ್ತದೆ. ಅಂತರಂಗ ಪರಿಶೀಲನೆಯಿಂದ ಪರಿಸರದಲ್ಲಿ ಆರೋಗ್ಯದ ನಿರ್ಮಿತಿಯಾಗಿ ಪರಿಸರವೆಲ್ಲ ಪರಮಾತ್ಮವಾಗಿ ಪರಿಣಮಿಸುತ್ತದೆ. ಇಂತಹ ಪರಮಾತ್ಮತ್ವದ ದರ್ಶನಕ್ಕಾಗಿ ಸಂತ ಸಾಹಿತ್ಯವು ಹಂಬಲಿಸಿದೆ. ಅಂತರಂಗದರ್ಶನದಲ್ಲಿ ತೃಪ್ತಿಯನ್ನು ಪಡೆದು ಆನಂದವನ್ನು ನೀಡುವಲ್ಲಿ ಸಾಫಲ್ಯವಾಗಿದೆ. ಇಂಥ ಭಕ್ತಿಯ ಮೂಲವನ್ನು ಕಾಣಲು ಹೊರಟಾಗ ಥಟ್ಟನೆ ಶ್ರೀಗುರುದೇವ ರಾನಡೆ ಅವರ, "ವೇದಗಳ ಸಾನುಪ್ರದೇಶದಿಂದ ಹೊರಹೊರಟ

ಭಕ್ತಿಯ ಸೆಲೆಯು...........ಉಪನಿಷತ್ತುಗಳ ದಾರ್ಶನಿಕ ಅರಣ್ಯದಲ್ಲಿ ಅಡಗಿಕೊಂಡಿರುವುದು. ಮುಂದೆ ಭಗವದ್ಗೀತೆಯ ಕಾಲದಲ್ಲಿ ಅದು ಮರಳಿ ಹೊರಬಂದು ಸ್ಪಷ್ಟವಾದ ರೀತಿಯಲ್ಲಿ ಕಾಣಿಸಿಕೊಳ್ಳುವುದು. ಅದರಲ್ಲಿ ಹಳೆಯ ನಂಬಿಕೆಗಳು ಹೊಸರೂಪವನ್ನು ತಳೆದಿರುವುವು. ಉಪನಿಷತ್ತುಗಳಲ್ಲಿ ಕಾಣಬರುವ ಅನುಭಾವದ ಪ್ರವೃತ್ತಿಯು ಶ್ರೀ ವಾಸುದೇವ ಪಂಥದಲ್ಲಿಯೂ ಕಾಣಬರುವುದು. ಇದರಲ್ಲಿ ಆದರೆ ಭಕ್ತಿಗೆ ಪ್ರಾಧಾನ್ಯ ಬಂದಿರುವುದಷ್ಟೇ !" ಎಂಬ ಖಚಿತತೆಯ ಮಾತು ನೆನಪಾಗುತ್ತದೆ. ಈ ಮಾತನ್ನು ಬಿಡಿಸಿ, ಪ್ರಮಾಣಗಳನ್ನು ಅರಸಿ ನೋಡಿದಾಗ,

"ಅಸತ್ತಿನಿಂದ ಸತ್ಯದೆಡೆಗೆ, ಕತ್ತಲೆಯಿಂದ ಜ್ಯೋತಿಯೆಡೆಗೆ ।
ಮರಣದಿಂದ ಅಮರ ಬಾಳಿನೆಡೆಗೆ ನಡೆಯಿಸೈ ॥"

ಎಂಬಂತಹ ಪ್ರಾರ್ಥನೆಯಲ್ಲಿ ಭಕ್ತಿಭಾವವು ತುಂಬಿ ತುಳುಕಿರುವುದು ಕಾಣುತ್ತದೆ. ಶ್ವೇತಾಶ್ವತರ ಉಪನಿಷತ್ತಿನಲ್ಲಿ,

"ಯಸ್ಯದೇವೇ ಪರಾಭಕ್ತಿಃ । ಯಥಾದೇವೇ ತಥಾಗುರೌ ।
ತಸ್ಯತೇ ಕಥಿತಾಹ್ಯರ್ಥಾಃ । ಪ್ರಕಾಶಂತೇ ಮಹಾತ್ಮನಃ ॥ (VI-23)

ಎಂದು ಬರುವ ಶ್ಲೋಕದಲ್ಲಿ, 'ಭಕ್ತಿ' ಎಂಬ ಶಬ್ದವು ಪ್ರಥಮ ಸಲ ಬಂದಿರುವುದನ್ನು ಭಕ್ತಿಗೆ ಇರುವ ಮಹತ್ತನ್ನು ತೋರಿಸುತ್ತದೆ. ಮುಂದೆ ಭಗವದ್ಗೀತೆಯಲ್ಲಿ ಭಕ್ತಿಯ ನಿಚ್ಚಳಸ್ವರೂಪವು ಒಡಮೂಡಿದೆ. ಅನಂತರ ಭರತಖಂಡದಲ್ಲಿ ಪ್ರಚಲಿತವಿರುವ ಎಲ್ಲ ಭಾಷೆಗಳಲ್ಲಿ ಸಾಧುಸಂತರು, ಶರಣರು ದಾಸರು ಅದನ್ನು ಅಖಂಡವಾಗಿ ಜನಪದದೊಳಗೆ ಪ್ರಸಾರಕ್ಕೆ ತಂದು ಸಾಮಾನ್ಯರ ಜೀವನವನ್ನು ಪಾವನಗೊಳಿಸಿದರು.

ಈ ರೀತಿ ಕನ್ನಡ ನಾಡಿನಲ್ಲಿ ಶರಣರು ಭಕ್ತಿಮಾರ್ಗದಲ್ಲಿ ಅನನ್ಯವಾಗಿ ಬಾಳಿದರು. ಹರಿದಾಸರು ಅದನ್ನು ಸಂಗೀತದ ಸಾಂಗತ್ಯದಲ್ಲಿ ಇನ್ನಷ್ಟು ಸುಲಭಗೊಳಿಸಿದರು. ಇವರು ಬಾಳಿದ ಭಕ್ತಿಯೆಂದರೆ ಪರಮಾತ್ಮನಲ್ಲಿಯ ಪರಮಪ್ರೀತಿ–ಉತ್ಕಟ ಪ್ರೇಮವೇ–ಆಗಿದೆ. ಇದನ್ನೇ ಸದೃಢ ಸ್ನೇಹವೆಂದು ಒಬ್ಬರೆಂದರೆ ಮತ್ತೊಬ್ಬರು ಅಮೃತ ರೂಪ, ಶಾಂತರೂಪ ಎಂದರು. ಈ ಶಾಂತರೂಪವೇ ಪರಮಾನಂದರೂಪ. ಇಂತಹ ಅಪರೂಪವಾದ ಭಕ್ತಿಯ ಬಗೆಗಳನ್ನು ಭಕ್ತಾಗ್ರಣಿ ಪ್ರಹ್ಲಾದನು,

"ಶ್ರವಣಂ ಕೀರ್ತನಂ ವಿಷ್ಣೋಃ । ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ । ಸಖ್ಯಂ ಆತ್ಮನಿವೇದನಮ್ ॥"

ಎಂದು ಒಂಬತ್ತು ಬಗೆಗಳನ್ನು ನಿಚ್ಚಳವಾಗಿ ಹೇಳಿದ್ದಾನೆ. ಅದೆಲ್ಲ ಹರಿದಾಸ ಸಾಹಿತ್ಯದಲ್ಲಿ ಓತಪ್ರೋತವಾಗಿ ಗೆಜ್ಜೆಯೊಡನೆ ನಾದಗೈದಿದೆ. ಆರ್ತತೆಯಿಂದ ಸರ್ವಸಮರ್ಪಣೆಗೆ ಪ್ರೇರಣೆಯಾಗಿ ಪರಮಾತ್ಮತತ್ವವನ್ನು ನಿಚ್ಚಳಗೊಳಿಸಿ ಸಾನ್ನಿಧ್ಯವನ್ನು ನೀಡುತ್ತದೆ. ಈ ಭಕ್ತಿಮಾರ್ಗದಲ್ಲಿ ನಿರ್ವಂಚನೆ ಇಲ್ಲ. ಬದುಕುವ ಕಲೆ ಇದೆ. ವಿಹ್ವಲಗೊಂಡ ಮನಕ್ಕೆ ಸ್ಥೈರ್ಯವಿದೆ. ಎಲ್ಲವನ್ನೂ ಪರಮಾತ್ಮನ ತಲೆಗೆಕಟ್ಟಿ ಕುಕ್ಕರಿ ಕೂಡುವುದಲ್ಲ. ದತ್ತ ಸ್ವಾತಂತ್ರ್ಯವನ್ನು ಬಳಸಿಕೊಂಡು ಸಾಧನೆ ಮಾಡುವುದು ಆಗಿದೆ. ಇದನ್ನೇ ಪುರಂದರ–ಕನಕರು ಬಾಳಿದರು. ಮಾದರಿಯಾದರು, ಇವರು ಹರಿದಾಸ ಸಾಹಿತ್ಯದ ಯಮಳರು. ಅವರು ಮಾನವ ಜೀವನದ ಮಹತಿಯನ್ನು ತಿಳಿಸಿದ ಹರಿಕಾರರು. ಅವರು ಭಕ್ತಿ ಮಾರ್ಗದಿಂದ ಭೂಮಿಯ ಬದುಕನ್ನೇ ವೈಕುಂಠವಾಗಿಸಿದವರು. ಅದಕ್ಕಾಗಿ ತಾವು ಪಡೆದ ಅನುಭವಗಳನ್ನೆಲ್ಲ ಕೀರ್ತನೆಗಳನ್ನಾಗಿಸಿದರು.

ಕನಕದಾಸರು ಕೇವಲ ಕೀರ್ತನ ಸಾಹಿತ್ಯವನ್ನು ನಿರ್ಮಾಣಮಾಡಿದುದರ ಜೊತೆಗೆ ಅನೇಕ ಕಾವ್ಯಗಳನ್ನೂ ರಚನೆಮಾಡಿ ಕನ್ನಡ ಸಾಹಿತ್ಯ ಸಂಪತ್ತನ್ನು ಸಮೃದ್ಧಿಗೊಳಿಸಿದರು. ಆ ಕಾವ್ಯಗಳಲ್ಲಿಯೂ ಭಾಗವತ ಮನೋಧರ್ಮವೇ ಪ್ರಮುಖವಾಗಿರುವುದನ್ನು ಕಾಣಬಹುದು. ಭಾಗವತ ಮನೋಧರ್ಮವೆಂದರೆ ಹರಿಹರರಲ್ಲಿ ಭೇದವನ್ನೆಣಿಸದೇ ಇರುವುದು. ಮಾನವಕಲ್ಯಾಣಕ್ಕಾಗಿ ಹುಟ್ಟಿದ ಎಲ್ಲ ಮತಗಳ ಸಾರಗ್ರಾಹಿಯಾಗಿರುವುದು. ಈ ಮನೋಧರ್ಮದಿಂದ ವಿಶಾಲ ಹೃದಯಿಗಳಾದ ಕನಕರು, "ಕಾಂತಿಸಾಗರನಾದ, ನಾದಸಾಗರನಾದ, ಅಮೃತಸಾಗರನಾದ, ಜ್ಞಾನಬಲಕಾರುಣ್ಯ ಸಾಗರನಾದ, ಶಾಂತಿಸಾಗರನಾದ ಪರಮಾತ್ಮನನ್ನು ಸಾಕ್ಷಾತ್ಕಾರ ಮಾಡಿಕೊಂಡರು. ಇದನ್ನು ಪಡೆಯಲು ಅವರ ಸಾಧನೆ, ಭಕ್ತಿಯ ವಿವಿಧ ಪ್ರಕಾರಗಳಲ್ಲಿ ವಿಶೇಷತಃ ಆರ್ತ ಭಕ್ತಿ, ದಾಸ್ಯಭಕ್ತಿ, ಅರ್ಪಣಾ ಭಕ್ತಿಗಳ ಮುಖಾಂತರ ಪ್ರಮುಖವಾದುವು. ಈ ಮಾತನ್ನು ನಾವು ಅವರ ಎಲ್ಲ ಸಾಹಿತ್ಯ ಕೃತಿಗಳಲ್ಲಿ ಮನಗಂಡರೂ, ಅವರ ಕೀರ್ತನೆಗಳು ಮತ್ತು ಹರಿಭಕ್ತಿಸಾರ ಹೆಚ್ಚು ಸ್ಪಷ್ಟಗೊಳಿಸುತ್ತವೆ."

ಕನಕನು ಕನಕದಾಸರಾದ ಮೇಲೆ, ಇಹಲೋಕದಲ್ಲಿ ಅಲಿಪ್ತವಾಗಿ ಬದುಕುವ ಕಲೆಯನ್ನು ತಮ್ಮ ವಿವೇಕದಲ್ಲಿ ಸ್ಪಷ್ಟವಾಗಿಸಿಕೊಂಡು ನವಜಾಗೃತಿಯನ್ನೇ ಉಂಟು ಮಾಡಿದರು.

> "ಸಾಕು ಸಾಕು ಮನುಜಸೇವೆಯು ರಂಗಯ್ಯ ಇನ್ನು ॥ಪ॥
> ಸಾಕು ಸಾಕು ಮನುಜಸೇವೆ ಮಾಡಿ ದಣಿದು ನೊಂದೆ ನಾನು

ಬೇಕು ನಿನ್ನ ಪಾದ ಭಜನೆ ಲೋಕದೊಡೆಯ ರಂಗಯ್ಯ ॥ಅ.ಪ.॥
ಹೊತ್ತರೆದ್ದು ಪೋಗಿ ಪರರಚಿತ್ತವೃತ್ತಿಯನ್ನೆ ಅರಿತು
ನಿತ್ಯದಲ್ಲಿ ಹಲವು ಕೆಲಸ ಭೃತ್ಯನಂತೆ ಮಾಡಿ ರಿಕ್ತ
ಹಸ್ತದಿಂದ ಮನೆಗೆ ಸೇರುವೆ ॥ ಆಸೆಗಾಗಿ ।
ಮತ್ತೆ ಕಂಡಕಡೆಗೆ ತೊಲಗುವೆ । ಬಂದು ಅಪರ ।
ರಾತ್ರಿಯಲಿ ತಿಂದು ಒರಗುವೆ । ರಂಗಯ್ಯರಂಗ ॥೧॥

ಸ್ನಾನಮೌನ ನಿತ್ಯಸಂಧ್ಯಾನ ನೇಮಗಳನೆ ತೊರೆದು
ಹೀನನಾಗಿ ಕೆಟ್ಟಜನರ ಮನೆಗಳನ್ನು ತಿರುಗಿ ತಿರುಗಿ
ಶ್ವಾನನಂತೆ ದಿನವ ಕಳೆವೆನೊ ॥ ದುರಾಸೆಯನ್ನು ।
ಮನದಲ್ಲಿಟ್ಟುಕೊಂಡು ಕುದಿವೆನೊ । ಕೊನೆಗೂ ಎಳ್ಳು ಕಾ
ಳಿನಷ್ಟು ಸುಖವ ಕಾಣೆನೋ । ರಂಗಯ್ಯರಂಗ ॥೨॥

ಒಡಲಿನಾಸೆಗಾಗಿ ನೊಣವು ತುಡುಕಿ ಬಿದ್ದ ಜೇನಿನೊಳಗೆ
ಮಿಡುಕುವಂತೆ ಬಾಯಬಿಡುವೆ ಬಿಸುರುಹಾಕ್ಷನೆ ।
ಬಿಡಿಸೊ ಎನ್ನ ಬಂಧಪಾಶವಾ ಕಾಗಿನೆಲೆಯಾದಿಕೇಶವ ।
ಕೊಡಿಸೊ ನಿನ್ನ ಭಕ್ತರ ಸಂಗವ ।
ಒಡೆಯ ವೆಂಕಟಾದ್ರಿ ಮಾಧವ । ರಂಗಯ್ಯರಂಗ ॥೩॥

ಎಂದು, ವಿವೇಕೋದಯವಾಗದ ಮುನ್ನಿನ ಸ್ಥಿತಿಗಾಗಿ ಪಶ್ಚಾತ್ತಾಪಪಟ್ಟು ಆರ್ತಭಕ್ತಿಯಿಂದ ಅಂತರಂಗ ಪರಿಶೋಧನೆಯನ್ನು ಮಾಡಿಕೊಂಡರು. ಅನಂತರ ತಾವು ಎಡವಿದಂತೆ ಬೇರೆಯವರು ಎಡವಬಾರದು, ಪರಿಸರ ಸ್ವಚ್ಛವಾಗಿರಲು, ಪ್ರಸನ್ನವಾಗಿರಲು ಎಲ್ಲರೂ ವಿವೇಕದಿಂದ ಬದುಕಲು ತಮ್ಮ ಅನುಭವವನ್ನು ಹಂಚತೊಡಗಿದರು. ಅವರ ಒಂದು ಕೀರ್ತನೆ ;

"ಜಪವ ಮಾಡಿದರೇನು । ತಪವ ಮಾಡಿದರೇನು ॥ಪ॥
ಕಪಟಗುಣ ವಿಪರೀತ ಕಲುಷವಿದ್ದವರು ॥ಅ.ಪ.॥

ಆದಿಗುರುವರಿಯದೆ ಅತ್ತಲಿತ್ತಲು ತೊಳಲಿ
ವೇದಶಾಸ್ತ್ರಗಳೋದಿ ಬಾಯಾರಲು ॥
ಆದಿಯನು ಕಾಣದಿಂದಿರುತಿದ್ದು ಹಲವೆಂಟು ।
ವಾದ ತರ್ಕದೊಳಿದ್ದ ಭೇದವಾದಿಗಳು ॥೧॥

ನುಡಿನಡೆವ ಕಾಲದಲಿ ದಾನಧರ್ಮ ಮಾಡದೆ ।
ಅಡವಿಯೊಳು ಕೆರೆತುಂಬಿ ಬತ್ತಿದಂತೆ ॥
ಮಡದಿಮಕ್ಕಳಿಗೆಂದು ಒಡವೆ ವಸ್ತ್ರಗಳಿಸೆ ।
ಹಿಡಿಯಲಾ ಯಮನವರ ಕಟ್ಟಿಗೊಳಗಾಗಿ ॥೨॥

ಛಳಿಮಳೆ ಅತಿ ಕಾರುಗತ್ತಲೆಯೊಳಗಿದ್ದು ।
ಇಳಿಮುಳುಗಿ ನದಿಯೊಳಗೆ ಜಪವಮಾಡಿ
ಕಳವಳಿಸಿ ನೂರೆಂಟು ತೊಳಲಿ ಬಳಲಬೇಡ ।
ನಳಿನಾಕ್ಷ ಆದಿಕೇಶವನ ನೆನೆ ಮನವೆ ॥೩॥

ಎಂದು ನಿಚ್ಚಳ ಬದುಕಿನ ಮರ್ಮವನ್ನು ಹೇಳಿದುದಲ್ಲದೆ, ಶುದ್ಧನಡೆಯೇ ಭಕ್ತಿ ಎಂಬುದರ ಒಳಮಿಡಿತವನ್ನು ಸ್ಪಷ್ಟಗೊಳಿಸಿದೆ. ಇಂತಹ ಕೀರ್ತನೆಗಳಲ್ಲಿಯ ವಿವೇಕವು ನಿಚ್ಚಳ ಬದುಕಿಗೆ ಜಾಗೃತಿ–ನೀಡುವುದರಲ್ಲಿ ಸಂದೇಹವಿಲ್ಲ. ಇದರಂತೆ ಇನ್ನೊಂದು ಅಪರೂಪದ ಕೀರ್ತನೆ :

"ನಾನು ನೀನು ಎನ್ನದಿರು ಹೀನಮಾನವ ॥ಪ॥
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ ॥ಅ.ಪ.॥

ಹೆಣ್ಣು ಹೊನ್ನು ಮಣ್ಣು ಮೂರು ನಿನ್ನದೇನೆಲೋ ।
ಅನ್ನದಿಂದ ಬಂದ ಕಾಯ ನಿನ್ನದೇನೆಲೊ ॥
ಕರ್ಣದಿಂದ ಬರುವ ಘೋಷ ನಿನ್ನದೇನೆಲೊ ।
ನಿನ್ನ ಬಿಟ್ಟು ಪೋಪ ದೇಹ ನಿನ್ನದೇನೆಲೊ ॥೧॥

ಹಲವು ಜನ್ಮದಿಂದ ಬಂದಿರುವೆ ನೀನೆಲೊ ।
ಮಲದ ಗರ್ಭದಲಿ ನಿಂದಿರುವೆ ನೀನೆಲೊ ॥
ಜಲದ ದಾರಿಯಲಿ ಬಂದಿರುವೆ ನೀನೆಲೊ
ಕುಲವು ಜಾತಿಗೋತ್ರವುಳ್ಳವನು ನೀನೆಲೊ ॥೨॥

ಕಾಲ ಕರ್ಮ ಶೀಲ ನೇಮ ನಿನ್ನದೇನೆಲೊ
ಜಾಲವಿದ್ಯೆ ಬಯಲಮಾಯೆ ನಿನ್ನದೇನೆಲೊ ॥

ಕೀಲು ಜಡಿದ ತೊಗಲ ಗೊಂಬೆ ನಿನ್ನದೇನೆಲೊ ।
ಲೋಲ ಆದಿಕೇಶವನ್ನ ಭಕ್ತನಾಗೆಲೊ ॥೩॥

ಇದರಲ್ಲಿಯ ತಥ್ಯಾಂಶದ ಪ್ರಕಾರ ಭಕ್ತನೆಂಬವನಿಗೆ ಜಾತಿಮತಪಂಥಗಳೇ ಇಲ್ಲ. ಅವನು ಭಕ್ತಿಮಾರ್ಗದಲ್ಲಿ ನಡೆದರೆ ಸಾಕು ಅದು ಅವನನ್ನು ಪೂರ್ಣತ್ವದ ಕಡೆಗೆ ತಲುಪಿಸುತ್ತದೆ.

ಇಂತಹ ಕೀರ್ತನೆಗಳನ್ನು ಓದಿದಾಗ, ಹಾಡಿದಾಗ, ಈ ಭಕ್ತಿಮಾರ್ಗದಲ್ಲಿರುವ ದಿಟತ್ವವು ಕಂಡರೂ, ಪಶ್ಚಾತ್ತಾಪದ ತಳಮಳದಲ್ಲಿ ಬೆಂದು ಬೇಯದ ಮುನ್ನ ಅದು ಸ್ಪಷ್ಟವಾಗಲಾರದು. ಆದ್ದರಿಂದ ಬರಿ ಓದು ಮೊದಲ ಹಂತದಲ್ಲಿ ಒಳಗಿನ ವಿವೇಕವನ್ನು ಎಚ್ಚರಿಸುತ್ತದೆ. ಮುಂದೆ ತಿಳಿವಳಿಕೆಗೆ ಓದು ಹತ್ತಿ ಚಿಂತನದಲ್ಲಿ ಬೆಳಕು ಮೂಡಿದಾಗ ವಿಶ್ವಾಸ ಹೊಡೆದೇಳುತ್ತದೆ. ಇಂಥ ಕ್ರಿಯಾಶಕ್ತಿಯನ್ನು ಸಾಧಕನಲ್ಲಿ ತರಲು, ಕನಕರು ಕೊಡುವ ಸಮಾಧಾನ, ಕೋಟಿ ಸೂರ್ಯಪ್ರಭೆಯ ಈ ಕೆಳಗಿನ ಕೀರ್ತನೆಯಲ್ಲಿದೆ :

"ತಲ್ಲಣಿಸದಿರು ಕಂಡೆಯಾ ತಾಳು ಮನವೆ–ಸ್ವಾಮಿ ।
ನಿಲ್ಲದಲೆ ರಕ್ಷಿಸುವ ಸಂದೇಹಬೇಡ ॥ಪ॥

ಬೆಟ್ಟದಾ ತುದಿಯಲ್ಲಿ ಬೆಳೆದ ವೃಕ್ಷಂಗಳಿಗೆ ।
ಕಟ್ಟೆಕಟ್ಟುತ ನೀರ ಹೊಯ್ವರಾರು ? ॥
ಹುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ
ಕೊಟ್ಟು ರಕ್ಷಿಸುವನು ಇದಕೆ ಸಂದೇಹಬೇಡ ॥೧॥

ಅಡವಿಯೊಳಗಾಡುವ ಮೃಗಜಾತಿ ಪಕ್ಷಿಗಳಿಗೆ
ಅಡಿಗಡಿಗೆ ಆಹಾರವಿತ್ತವರದಾರು ? ॥
ಪಡೆದ ಜನನಿಯಂತೆ–ಸಾರಥಿಯಾಗಿ ತಾ ।
ಬಿಡದೆ ರಕ್ಷಿಸುವನು ಇದಕೆ ಸಂದೇಹಬೇಡ ॥೨॥

ಕಲ್ಲೊಳಗೆ ಪುಟ್ಟಿಕೂಗುವ ಮಂಡುಕಂಗಳಿಗೆ
ಅಲ್ಲಿ ಹೋಗಿ ಆಹಾರವಿತ್ತವರದಾರು ? ॥
ಬಲ್ಲಿದನು ಕಾಗಿನೆಲೆಯಾದಿ ಕೇಶವರಾಯ ।
ನಿಲ್ಲದೇ ರಕ್ಷಿಪನು ಇದಕೆ ಸಂದೇಹಬೇಡ ॥೩॥

ಇದರಲ್ಲಿ ಸೃಷ್ಟಿಯ ನಿಗೂಢಶಕ್ತಿಯ ವಿವೇಚನೆ ದರ್ಶನಾತ್ಮಕವಾಗಿದೆ. ಸತ್ಯಶೋಧಕನ ತಿಳಿವಳಿಕೆಗೆ ಮೂಡಿಬರುವ ಸತ್ಯದ ತಿರುಳೇ ಅದರಲ್ಲಿದ್ದು ಸಾಧಕನ ದಾರಿಯನ್ನು ನಿಚ್ಚಳಗೊಳಿಸಿದೆ. ಭಕ್ತಿಯ ಅಂಶದಲ್ಲಿ ತಾದಾತ್ಮ್ಯತೆ ಮತ್ತು ಬದುಕಿನ ನೆರಳು ಬೆಳಕನ್ನು ಮೀರಿದ ಆನಂದ ಪ್ರಾಪ್ತಿಗಳೇ ತುಂಬಿರುವುದನ್ನೇ ಹೊಳೆಯಿಸುತ್ತದೆ. ಇಂತಹ ಜಟಿಲ ವಿಷಯಗಳನ್ನು ಸುಂದರ ದೃಷ್ಟಾಂತಗಳಿಂದ ಸ್ಪಷ್ಟಪಡಿಸುವ ಕಲೆ ಕನಕರಿಗೆ ದೇವರಿತ್ತ ವಿಶಿಷ್ಟವರ. ಅನುಮಾನಗಳನ್ನೆಲ್ಲ ತೂಗಿ ನೋಡಿ ಹಂಸಕ್ಷೀರಗೊಳಿಸಿ ಪ್ರಮಾಣಪೂರ್ಣಶಬ್ದಗಳ ಚಲಾವಣೆ ಕನಕರಿಗೆ ಮೀಸಲಿದ್ದ ಶಕ್ತಿ, ಅಂತೆಯೇ ಭಕ್ತಿಮಾರ್ಗದಲ್ಲಿ ನಡೆಯಬೇಕಾದವನ ಮಾರ್ಗದ ಸ್ವರೂಪವನ್ನುಬದುಕಿನಲ್ಲಿ ಸಾಕ್ಷಾತ್‌ಗೊಳಿಸಿ, ಪರಮಯೋಗಿ ಯಾರು ಎಂಬುವನ್ನು ಗ್ರಹಿಸಿ ಆರ್ತಗೊಳಿಸಿಟ್ಟಂತಿದೆ. ಈ ಮುಂದಿನ ಕೀರ್ತನೆ :

ತಾನಾರು ದೇಹವಾರು–ದಿವ್ಯ– ।
ಜ್ಞಾನದಲಿ ತಿಳಿದಾತ ಪರಮಯೋಗಿ ॥ ಪ ॥
ಅಸ್ಥಿಪಂಜರದ ನರಗಳ ತೊಗಲ ಹೊದಿಕೆಯ ।
ವಿಸ್ತರಿಸಿ ಬಿಗಿದ ಮಾಂಸದ ಬೊಂಬೆಯು ॥
ಮೂತ್ರ ಮಲ ರಕ್ತಕೀವದ ಪ್ರಳಯದೊಡಲೆಂದು ।
ವಿಸ್ತರಿಸಿ ತಿಳಿದಾತ ಪರಮಯೋಗಿ ॥ ೧ ॥

ಸೂತಕಾಬ್ಧಿಯಲಿ ನವಮಾಸ ತುಂಬಿರೆ ತನ್ನ ।
ಮಾತೆಯುದರದಿ ಬಂದು ಬೆರಸಿ ಬೆಳೆದು ॥
ಪಾತಕವದೊಂದು ಮೂರುತಿಯಾದ ತನುವೆಂದು ।
ನೀತಿಯಲಿ ತಿಳಿದಾದ ಪರಮಯೋಗಿ ॥ ೨ ॥

ಘೋರ ಸಂಸಾರ ತನುವೆಂದು ತನ್ನಲಿ ತಿಳಿದು ।
ಗೇರು ಹಣ್ಣಿನ ಬೀಜದಂತೆ ಹೊರಟು ॥
ಮಾರಪಿತ ಕಾಗಿನೆಲೆಯಾದಿಕೇಶವ ಪಾದ– ।
ವಾರಿಜವ ನಂಬಿದವ ಪರಮಯೋಗಿ ॥ ೩ ॥

ಹೀಗೆ ಪರಮಾತ್ಮನಲ್ಲಿ ನಂಬಿಕೆ ಮೂಡಿ ಪರಮಯೋಗಿಯಾಗಲು ಧಾವಿಸಿದಾಗ ಮುಂದಿನ ನಡಿಗೆ ಬಲು ಸುಲಭ. ಏಕೆಂದರೆ ಅವರಿಗೆ ಎಲ್ಲ ಕಡೆಗೂ

ಪರಮಾತ್ಮನ ಸ್ಪಷ್ಟ ಚೈತನ್ಯ ಕಾಣುತ್ತದೆ. ಸುಖ ದುಃಖಗಳನ್ನು ಮೀರಿದ ಚೆಲುವು ಒಳ–ಹೊರಗೂ ಕೋರೈಸುತ್ತದೆ. ರೂಪಾಂತರ ಸೃಷ್ಟಿಯ ಅಂತರಂಗ ಗೊತ್ತಾಗುತ್ತದೆ. ಆ ಪರಿಸರದಲ್ಲಿ ತಾನು ತನ್ನ ಪ್ರಯತ್ನದ ಭೋಗದ ಪ್ರಕಾರ ಭಾರವಾಗದೆ, ಜೀವನವನ್ನು ಸುಗಮುಗೊಳಿಸಿಕೊಳ್ಳಬೇಕಾದುದನ್ನು ಕಂಡುಕೊಂಡಾಗ ಉಳಿಯುವುದೇನು ? ದೂರವಿದ್ದ ವೈಕುಂಠ ನೆಲದಲ್ಲಿಗೆ, ತಾನಿದ್ದಲ್ಲಿಗೆ ಸಾಗಿ ಬಂದಿರುತ್ತದೆ. ಅದು ಅಷ್ಟಕ್ಕೆ ನಿಲ್ಲದೆ, ದೇಹದಲ್ಲಿಯೇ ವೈಕುಂಠ ನೆಲೆಸಿಬಿಡುತ್ತದೆ. ಇಂತಹ ದಿವ್ಯಜ್ಞಾನವು ಸಾಕಾರವಾದಾಗ ಗೋಡೆ ಸೀಳಿ ಇದ್ದಲ್ಲಿಯೇ ಪರಮಾತ್ಮತ್ವದ ಬೆಳಕು ಮನದ ಕತ್ತಲೆಯನ್ನೆಲ್ಲ ನಾಪತ್ತೆ ಗೊಳಿಸಿರುತ್ತದೆ. ಆ ಸಂದರ್ಭದ ಕನಕರ ಅನುಭವದಲ್ಲಿ,

ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು ॥ ಪ ॥
ಪದುಮನಾಭನ ಪಾದದೊಲುಮೆ ಎನಗಾಯಿತು ॥ ಅ. ಪ ॥

ಹರಿತೀರ್ಥ ಪ್ರಸಾದ ಎನ್ನ ಜಿಹ್ವೆಗೊದಗಿತು ।
ಹರಿಯ ನಾಮಾಮೃತ ಕಿವಿಗೊದಗಿತು ॥
ಹರಿಯದಾಸರು ಎನ್ನ ಬಂಧು ಬಳಗಾದರು ।
ಹರಿಯ ಶ್ರೀಮುದ್ರೆ ಆಭರಣವಾಯಿತು ॥ ೧ ॥

ಮುಕುತರಾದರು ಎನ್ನ ನೂರೊಂದು ಕುಲದವರು ।
ಮುಕುತಿಮಾರ್ಗಕ್ಕೆ ಯೋಗ್ಯ ನಾನಾದೆನೊ ॥
ಅಕಳಂಕ ಶ್ರೀಹರಿ ಭಕುತಿಗೆ ಮನ ಬೆಳೆದು ।
ರುಕುಮಿಣಿಯರಸ ಕೈವಶನಾದನೆನಗೆ ॥ ೨ ॥

ಇಂದೆನ್ನ ಜೀವಕ್ಕು ಸಕಲ ಸಂಪದವಾಯ್ತು ।
ಮುಂದೆನ್ನ ಜನ್ಮ ಸಫಲವಾಯಿತು ॥
ತಂದೆ ಶ್ರೀಕಾಗಿನೆಲೆಯಾದಿಕೇಶವ ರಾಯ ।
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ॥ ೩ ॥

ಈ ರೀತಿ ಸುಭದ್ರವಾಗಿ ದೇವರು ಹೃದಯದಲ್ಲಿ ನೆಲೆಯಾಗಿ ನಿಂತ ಮೇಲೆ ಎಲ್ಲಿ ನೋಡಿದರಲ್ಲಿ ರಾಮ ರಾಮ, ಆರಾಮ. ಬಲ್ಲ ಜಾಣರು ದೇಹದಲ್ಲಿ ನೋಡಬೇಕು.

ಕಣ್ಣೇ ಕಾಮನ ಬೀಜ । ಈ ।
ಕಣ್ಣಿಂದಲೆ ನೋಡು ಮೋಕ್ಷ ಸಾಮ್ರಾಜ್ಯ ॥
ಕಣ್ಣಿನ ಮೂರುತಿ ಬಿಗಿದು । ಒಳ ।
ಗಣ್ಣಿಂದಲೆ ದೇವರ ನೋಡಣ್ಣ ॥ ೧ ॥

ಮೂಗೇ ಶ್ವಾಸ ನಿಶ್ವಾಸ । ಈ ।
ಮೂಗಿಂದಲೆ ಕಾಣೊ ಯೋಗ ಸನ್ನ್ಯಾಸ ॥
ಮೂಗನಾದರೆ ವಿಶೇಷ । ಒಳ ।
ಮೂಗಿಲಿ ನೋಡಣ್ಣ ಲೀಲಾವಿಲಾಸ ॥ ೨ ॥

ಕಿವಿಯೇ ಕರ್ಮಕೆ ದ್ವಾರ । ಈ ।
ಕಿವಿಯಿಂದಲೆ ಕೇಳೊ ಮೋಕ್ಷದ ಸಾರ ॥
ಕಿವಿಯೇ ಕರ್ಮಕುಠಾರ । ಒಳ ।
ಗಿವಿಯಲ್ಲಿ ಕಾಣೋ ನಾದದ ಬೇರ ॥ ೩ ॥

ಬೊಮ್ಮ ಮಾಡಿದ ತನು ಬಿಟ್ಟು । ವಿಶ್ವ ।
ಕರ್ಮನು ಮಾಡಿದ ಬೊಂಬೆಯನ್ನಿಟ್ಟು
ಸುಮ್ಮನೆ ಕೂಗುಗಳಿಟ್ಟು । ಅದ ।
ನಂಬುವನೆಂಬೋನೆ ಹೋಗೆ ಕಂಗೆಟ್ಟು ॥ ೪ ॥

ರೂಢಿಯೊಳಗೆ ಶುದ್ಧ ಮೂಢ । ಈ ।
ಕಾಡುಕಲ್ಲುಗಳನ್ನು ನಂಬಲು ಬೇಡ ॥
ನಾಡಾಡಿದೈವಗಳೆಲ್ಲ । ನಮ್ಮ ।
ಬಾಡದಾದಿ ಕೇಶವನೊಬ್ಬನೆ ಬಲ್ಲ ॥ ೫ ॥

ನಂಬಲುಬೇಡ ನಾಡಾಡಿ ದೈವಗಳನೆಲ್ಲ ನಂಬಬೇಡ ಎಂಬಲ್ಲಿ ಎಚ್ಚರಿಕೆ ಇದೆ. ಆ ಎಚ್ಚರಿಕೆಯಲ್ಲಿ ಪ್ರೀತಿ ಇದೆ. ಪ್ರೀತಿಯೇ ವಿಶ್ವಾಸಕ್ಕೆ ಮೂಲ. ವಿಶ್ವಾಸವೇ ಭಕ್ತಿ. ಅಂತೆಯೇ ಆ ಕಣ್ಣಿಗೆ ಒಂದೇ ದೈವ. ಅವರು ಕಂಡ ರಾಮಮಯದಲ್ಲಿ ಹರಿಹರ ಎಲ್ಲ ರಾಮರಾಮ. ದೇವರ ನಾಮ ಹಲವು. ಆದರೆ ಆ ದೇವರ ಇರುವು ಒಂದೇ ಒಂದು ಈ ಸತ್ಯಕ್ಕೆ ಇಲ್ಲಿ ಒತ್ತು. ಇದರಿಂದಾಗಿ ಹೊರಗಣ್ಣಿಗೆ,

ಹೊರತಿಳಿವಳಿಕೆಗೆ ಕಾಣುವ ಕುಲಗಳೆಲ್ಲ ನಿರ್ನಾಮವಾಗಿ ಒಂದೇ ರಾಮ, ಇದನ್ನು ಅನುಭವಿಸಿದ ತತ್‌ಕ್ಷಣ ಕನಕರು ಸಾಮಾನ್ಯರ ಪ್ರಶ್ನೆಗೆ ಕ್ರಾಂತಿದಾಯಕ ಉತ್ತರ ನೀಡಿ, ಸತ್ಯದ ಇರುವನ್ನು ಬಿಚ್ಚಿ ತೋರಿಸಿ ಸಮಾಧಾನ ನೀಡುತ್ತಾರೆ. ಅವರ ಆ ಕೀರ್ತನೆ ಸತ್ಯದ ಇರುವಿನ ಎಸಳಿನ ಸೀಗುರಿ. ಅದರ ಬಿಚ್ಚುವಿಕೆಯಲ್ಲಿ ಬ್ರಹ್ಮಾಂಡದ ಅಂತರಾಳದ ಸೊಗಸು ಬಿಚ್ಚಿ ಅರಳು.

"ಕುಲಕುಲ ಕುಲವೆನ್ನುತಿಹರೊ ।
ಕುಲವಾವುದು ಸತ್ಯ ಸುಜನರಿಗೆ ॥ ಪ ॥
ಕೆಸರೊಳು ತಾವರೆ ಪುಟ್ಟಲು ಅದ ತಂದು ।
ಕುಸುಮನಾಭನಿಗೆ ಅರ್ಪಿಸರೇನಯ್ಯ ? ॥
ಪಶುವಿನ ಮಾಂಸದೊಳುತ್ಪತ್ತಿ ಕ್ಷೀರವ ।
ವಸುಧೆಯೊಳಗೆ ಭೂಸುರರುಣ್ಣರೇನಯ್ಯ ॥ ೧ ॥

ಆ ಶೌಂಡಲ್ಯ ಪರಾಶರ ಎನಿಪನು ।
ವೇಶ್ಯೆಯ ಪುತ್ರ ವಸಿಷ್ಠ ಮುನಿ ॥
ದಾಸಿಯ ನಂದನ ನಾರದ ಎನಿಪನು ।
ಕಾಶ್ಯಪ ಪೌತ್ರನ ಕುಲ ಹೇಳಿರಯ್ಯ ॥ ೨ ॥

ಆತ್ಮನಾವಕುಲ ಜೀವನಾವ ಕುಲ ।
ತತ್ವೇಂದ್ರಿಯಗಳ ಕುಲಪೇಳಿರಯ್ಯ ॥
ಆತ್ಮನು ಕಾಗಿನೆಲೆಯಾದಿಕೇಶವನೊಲಿದ ।
ಭಕ್ತರಿಗೆ ಕುಲವಾವುದು ಹೇಳಿರಯ್ಯ ॥ ೩ ॥

ಈ ಕೀರ್ತನೆಯು ವಸುಧೆಯ ಮೂಲತತ್ತ್ವವನ್ನು ತಿಳಿಸುವ ಗಾಯತ್ರಿ. ಸ್ಪಷ್ಟ ನಿಘಂಟು. ಈ ನಿಘಂಟುವಿನ ಪರಿಚಯವಾದರೆ ಸಾಕು ಭಕ್ತಿಮಾರ್ಗದ ಕುಲ ತಿಳಿಯುತ್ತದೆ. ಭಕ್ತಿಮಾರ್ಗದ ಕುಲ ಭಕ್ತಿ ಅದು ವಲಂ. ಈ ಕುಲದವರಿಗೆ ಹುಟ್ಟಿನ ಮೂಲದ ಕುಲವಿಲ್ಲ. ಈ ಕುಲದವರಿಗೆ ಅಂತೆಯೇ ವಿಜ್ಞಾನದ ಮುಂದಿನ ಜ್ಞಾನದ ಅಸಲೂ ಪ್ರಾಪ್ತಿ. ಅದು ಸಿಕ್ಕಾಗ, ಆ ಮಾಯೆ ಒಳಗೋ ಹೊರಗೋ. ಭಕ್ತನಲ್ಲಿಯೋ ಪರಮಾತ್ಮನಲ್ಲಿಯೋ ! ಎಲ್ಲೆಲ್ಲಿಯೂ ಪರಮಾತ್ಮನೆ. ಆ ಬೆಳಕಿನ ಸೊಗಸು ತರಲ ತರಲವಾಗಿ ಅಂತರಂಗವನ್ನೇ ಮಿಡಿಯುತ್ತದೆ. ಅದನ್ನು ಕನಕರ ವಾಣಿಯಲ್ಲಿಯೇ ನೋಡಬೇಕು ;

"ಬಯಲು ಆಲಯದೊಳಗೊ ಆಲಯದೊಳಗೆ ಬಯಲೋ ।
ಬಯಲು ಆಲಯವೆರಡು ನಯದೊಳಗೊ ॥
ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ ।
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥ ೧ ॥

ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ ॥
ಜಿಹ್ವೆ ಬುದ್ಧಿಯ ಒಳಗೊ ಬುದ್ಧಿ ಜಿಹ್ವೆಯ ಒಳಗೊ
ಜಿಹ್ವೆಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥ ೨ ॥

ಕುಸುಮದೊಳು ಗಂಧವೋ ಗಂಧದೊಳು ಕುಸುಮವೋ
ಕುಸುಮಗಂಧಗಳೆರಡು ಘ್ರಾಣದೊಳಗೋ ॥
ಅಸಮಭವ ಕಾಗಿನೆಲೆಯಾದಿಕೇಶವರಾಯ ।
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ॥ ೩ ॥

ಈ ತಿಳಿವಳಿಕೆಯಲ್ಲಿ ಪೂರ್ಣತ್ವದ ಪರಮಾವಧಿ ಇದೆ. ಇಲ್ಲಿ ಭಕ್ತ ಅರ್ಜುನನ ಸಂಶಯಗಳೆಲ್ಲ ನಿವಾರಣೆಯಾಗುತ್ತವೆ. ಇದಕ್ಕೆ ಕಾರಣ ಶ್ರೀಕೃಷ್ಣನ ಭಗವದ್ಗೀತೆಯ ಒಳಸ್ಪಂದನವು ಕನಕರ ಭಕ್ತಿಗೀತೆಗಳಲ್ಲಿ ಒಳದನಿಯಾಗಿದ್ದು ಪೂರ್ಣ ಶಕ್ತಿಯೂ ಆಗಿದೆ. ಈ ಶಕ್ತಿಯು ಕನಕರ ಅನುಭಾವದ ಶಕ್ತಿಯೇ ಹೌದು. ಆದ್ದರಿಂದ ಭಕ್ತಿಯ ಮಾರ್ಗದಲ್ಲಿ ಅನನ್ಯವಾಗಿ ಸಮರ್ಪಣವಾದರೆ ಸಾಕು. ಮುಕ್ತಿ ಸಾಲೋಕ್ಯ. ಇದು ಕನಕರ ಭಕ್ತಿ ಸಾಹಿತ್ಯದ ಒಳಗುಟ್ಟು.

ಹರಿಭಕ್ತಿಸಾರದಲ್ಲಂತೂ ಮುಕ್ತಿಸಾಧನೆಗೆ ಭಕ್ತಿಯೇ ಕಾರಣ ಎಂಬುದು ಸುಸ್ಪಷ್ಟ. ಇಂತಹ ಭಕ್ತಿಮಾರ್ಗದಲ್ಲಿ ಸಾಗಿದವರಿಗೆ, ಚತುರ್ವಿಧ ಪುರುಷಾರ್ಥಗಳ ಸಾಧನೆ ತೀರ ಸರಳ. ಅದನ್ನು ಹರಿಭಕ್ತಿಸಾರವು ಇನ್ನಷ್ಟು ಸರಳಗೊಳಿಸಿದೆ. ಭಕ್ತಿ ಮಾರ್ಗದ ತಿರುಳೆಲ್ಲ ಅಲ್ಲಿ ತುಂಬಿತುಳುಕಿದೆ. ಇದನ್ನು ಒಳಹೊಕ್ಕು ನೋಡಿದಾಗ ಭಕ್ತಿಯೇ ನಿಜವಾದ ಯೋಗವೆಂಬುದು ಸ್ಪಷ್ಟವಾಗುತ್ತದೆ. ಈ ಭಕ್ತಿಯೋಗದ ಸಾಧನೆಯು ಪುಣ್ಯಕಾರ್ಯ ಮಾಡುವ ವಿವೇಕಿಗೆ ಮಾತ್ರ ಸಾಧ್ಯ. ಅದಕ್ಕಾಗಿ ಮನಸ್ಸನ್ನು ಬಲಪಡಿಸಬೇಕು. ಅದಕ್ಕೆ ಬೇಕಾಗುವ ಸಾಮಗ್ರಿ ಹರಿಭಕ್ತಿಸಾರದಲ್ಲಿ. ಆ ಸಾಮಗ್ರಿಯ ಬಲದಿಂದ ಮನಸ್ಸು ಬಲಗೊಂಡಾಗ ದುಃಖ ನಿರ್ನಾಮ. ಆಗ ಆನಂದ ಆರಾಮ. ಆ ಆರಾಮದಲ್ಲಿಯ ಕೆಲವು

ಅರಳುಗಳ ಸೊಗಸನ್ನು ನೋಡುವುದು ಈ ಸಂದರ್ಭದಲ್ಲಿ ಉಚಿತ ;

'ಹಸಿವರಿತು ತಾಯ್ತನ್ನ ಶಿಶುವಿಗೆ
ಒಸೆದು ಪಾಲ್ಗೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು
ಬಸುರೊಳಗೆ ಬ್ರಹ್ಮಾಂಡ ಕೋಟಿಯ
ಪಸರಿಸಿದ ಪರಮಾತ್ಮ ನೀನೆಂ
ದುಸುರುತಿವೆ ವೇದಗಳು ರಕ್ಷಿಸು ನಮ್ಮನನವರತ ॥

* * *

ಏನು ಮಾಡಿದರೇನು ಕರ್ಮವ
ನೀನೊಲಿಯದಿನ್ನಿಲ್ಲವಿದಕನು
ಮಾನವುಂಟೇ ಭ್ರಮರ ಕೀಟನ್ಯಾಯದಂದದಲಿ
ನೀನೊಲಿಯೆ ತೃಣಪರ್ವತವು ಪುಸಿ
ಯೇನು ನೀ ಪತಿಕರಿಸೆ ಬಳಿಕಿ
ನ್ನೇನು ಚಿಂತಿಸಲೇಕೆ ರಕ್ಷಿಸು ನಮ್ಮನನವರತ ॥

* * *

ಈಗಲೇ ಈ ದೇಹವಿನ್ನಾ
ವಾಗಲೋ ನಿಜವಲ್ಲವೆಂಬುದ
ನೀಗ ತಿಳಿಯದೆ ಮಡದಿ ಮನೆ ಮನೆವಾರ್ತೆಯೆಂದೆನುತ
ರಾಗ ಲೋಭದಿ ಮುಳುಗಿ ಮುಂದಣ
ಕಾರುಬಾರುಗಳರಿಯೆ ನಿನ್ನ ಸ
ಮಾಗಮವ ಬಯಸುವೆನು ರಕ್ಷಿಸು ನಮ್ಮನನವರತ ।

* * *

ಲೇಸಕಾಣೆನು ಜನನ ಮರಣದಿ
ಘಾಸಿಯಾದೆನು ನೊಂದೆನಕಟಾ
ಲೇಸೆನಿಸಿ ನೋಡಲು ಪರಾತ್ಪರ ವಸ್ತು ನೀನಾಗಿ
ನೀ ಸಲಹುವವನಲ್ಲವೇ ಕರು
ಣಾಸಮುದ್ರನು ನೀನಿರಲು ಕಮ
ಲಾಸನನ ಹಂಗೇಕೆ ರಕ್ಷಿಸು ನಮ್ಮನನವರತ ॥

ಹೀಗೆ ಕನಕರ ಅನುಭವವೆಲ್ಲ ಅವರ ಸಾಹಿತ್ಯದಲ್ಲಿ, ಮಾನವನ ಕಲ್ಯಾಣಕ್ಕಾಗಿ

ಕೀರ್ತನೆಯಾಗಿ ಹರಿದು ಬಾಳಿಗೊಂದು ನಂಬಿಕೆಯನ್ನೇ ನೀಡಿದೆ. ಅವರ ಸಾಹಿತ್ಯದ ಒಟ್ಟು ಅಧ್ಯಯನದಲ್ಲಿ, ಪರಮಾತ್ಮನ ಮೇಲೆ ಸಂಪೂರ್ಣ ಭಾರಹಾಕಿ, "ಎಲ್ಲರನು ಸಲಹುವನು", "ನೀನಲ್ಲದೆ ನರರು ಸ್ವತಂತ್ರರೇ" ಎಂಬಂತಹ ಭಾವದ ಮಾತುಗಳು ಕಂಡು ಬಂದು, ಆರೇನು ಮಾಡುವರು, ಆರಿಂದಲೇನಹುದು, ಎಲ್ಲ ವಿಧಿಲಿಖಿತ ಎಂಬುದನ್ನೇ ಹೇಳುತ್ತದಲ್ಲ ಎನ್ನಿಸೀತು ! ಈ ಎಲ್ಲ ಮಾತುಗಳಲ್ಲಿ ಪಲಾಯನವಾದವಿದೆಯಲ್ಲವೆಂದೆನ್ನಿಸೀತು ! ಆದರೆ ಹೀಗೆ ತಿಳಿದರೆ, ಕನಕರನ್ನು ನೋಡುವ ದೃಷ್ಟಿ ನೊಂದೀತು. ಏಕೆಂದರೆ ಕನಕರ ಇಂತಹ ಅಭಿವ್ಯಕ್ತಿಯ ಮಾತುಗಳಲ್ಲಿ 'ಎಲ್ಲರೂ ಸೋಮಾರಿಗಳಾದರೂ ಸಲಹುವನು' ಎಂಬ ಅರ್ಥವಿರುವುದಿಲ್ಲ. ಏಕೆಂದರೆ ಭಕ್ತಿಮಾರ್ಗ ಸುಲಭವೆಂದರೂ ಕೂಡ ಅದು ಹೋಗುತ್ತ ಕೊಯ್ಯುತ್ತದೆ, ಬರುತ್ತ ಕೊಯ್ಯುತ್ತದೆ. ಆದ್ದರಿಂದ ಗೀತೆಯಲ್ಲಿಯ ನಿಷ್ಕಾಮಕರ್ಮದ ತಳಹದಿಯ ಮೇಲೆ, ಸರ್ವಸಮರ್ಪಣಾ ಭಾವದಿಂದ ಕರ್ತವ್ಯಪರಾಯಣರಾಗಿದ್ದವರಿಗೆ ಮಾತ್ರ ಪರಮಾತ್ಮ ಶ್ರೀರಕ್ಷೆಯಾಗುತ್ತಾನೆ. ಸೋಮಾರಿಗಳಿಗೆ ಇಲ್ಲಿ ಬದುಕಲಿಕ್ಕೆ ಅವಕಾಶವಿರುವುದಿಲ್ಲ. ಆದರೆ ಸೋಮಾರಿಗಳಲ್ಲಿಯೂ ವಿವೇಕೋದಯವಾಗಲು ಪರಿಸರ ಪ್ರಸನ್ನತೆಯನ್ನು ಭಕ್ತಿ ಸಾಹಿತ್ಯವು ಒದಗಿಸುತ್ತದೆ. ಪ್ರೇರಣೆಯಾಗುತ್ತದೆ. ಕೆಲಸಕ್ಕೆ ಬಾರದ ತೃಣವೂ ಸಾಧನಾಬಲದಲ್ಲಿ ಶಕ್ತಿಯಾಗಿ ಪರಿಣಮಿಸುತ್ತದೆ. ಈ ಹಿನ್ನೆಲೆಯಲ್ಲಿ ಕನಕಸಾಹಿತ್ಯದಲ್ಲಿ ಭಕ್ತಿಸ್ವರೂಪ ಪೌರುಷವಾದವನ್ನು ಮೆರೆದಿದೆ. ಆತ್ಮಬಲ ಹೆಚ್ಚಿಸಿ ಸ್ವಾಭಿಮಾನವನ್ನು ಶ್ರೀಮಂತಗೊಳಿಸಿ ಬದುಕನ್ನು ನೋಡುವ ಕ್ರಿಯಾಸಂಪನ್ನತೆಯಲ್ಲಿ ಆತ್ಮೀಯತೆಯನ್ನು ಮೆರೆದಿದೆ. "ನಾನು" ಹೋಗಿಸಿ ವಾಸುದೇವನನ್ನು ಅಂಗೈನೆಲ್ಲಿಯಾಗಿಸಿ, ಭೂಮಿಯನ್ನು ವೈಕುಂಠವಾಗಿಸಿದೆ. ಈ ರೀತಿಯಲ್ಲಿ ಕನಕರ ಸಾಹಿತ್ಯದ ಭಕ್ತಿಸ್ವರೂಪವು ಜೀವವಾಹಿನಿಯಾಗಿದ್ದು ಕನಕಮೌಲ್ಯವನ್ನು ಪಡೆದು ಕನ್ನಡ ಸಾಹಿತ್ಯದ ತವನಿಧಿಯನ್ನು ಶ್ರೀಮಂತವಾಗಿಸಿದೆ. ಅರಿವಿನ ಕಣ್ಣನ್ನು ಅರಳಿಸಿದೆ.

# ಕನಕದಾಸರ ಕೃತಿಗಳು : ಧಾರ್ಮಿಕ ಮುಖ

**ಡಾ. ಸಿ. ಪಿ. ಕೃಷ್ಣಕುಮಾರ್**

ಧರ್ಮ ಎಂಬುದು ಇಂಗ್ಲಿಷಿನ 'ರಿಲಿಜಿಯನ್' ಎಂಬುದಕ್ಕಿಂತ ವ್ಯಾಪಕವಾದುದು : 'ಧೃ' ಎಂದರೆ 'ಧರಿಸು' ಎಂಬ ಧಾತುವಿನಿಂದ ಅದರ ನಿಷ್ಪತ್ತಿ. ಸೃಷ್ಟಿಗೆ, ಅಸ್ತಿತ್ವಕ್ಕೆ ಆಧಾರಭೂತವಾದದ್ದು ಧರ್ಮ. ಮತವಾದರೋ ಸಂಕುಚಿತವಾದುದು : 'Cult' ಎಂಬುದಕ್ಕೆ ಸಂವಾದಿಯಾದುದು. ಅದು ಧರ್ಮದ ಒಂದು ಅಂಗವಷ್ಟೆ.

ಧರ್ಮ ಎನ್ನುವುದು ಚೇತನವನ್ನು ಊರ್ಧ್ವಮುಖವಾಗಿಸುವ ಆಂತರಿಕ ಪ್ರೇರಣೆ ; ಪರಿಪೂರ್ಣತೆಯ ಅಭೀಪ್ಸೆ ; ಬಿಡುಗಡೆಯ ಹಂಬಲ. ದೇವರು ಧರ್ಮದ ಕೇಂದ್ರ ; ದೇವರಿಲ್ಲದೆ ಧರ್ಮವಿಲ್ಲ. (ಬಹುಶ : ಬೌದ್ಧ ಧರ್ಮವೊಂದು ಅಪವಾದ.)

ಮಾನವ ಯಾವುದನ್ನು ಪವಿತ್ರ ಭಾವನೆಯಿಂದ ನೋಡುತ್ತಾನೋ ಅದರೊಡನೆ ಇರಿಸಿಕೊಳ್ಳುವ ಸಂಬಂಧ ಎಂಬುದು ಧರ್ಮ ಶಬ್ದದ ವಿಶಾಲಾರ್ಥ. ಪೂಜೆ, ಅದಕ್ಕೆ ಕಾರಣವಾದ ಭಕ್ತಿ ಇಲ್ಲಿ ಬಹು ಮುಖ್ಯ. ಜೊತೆಗೆ ನೀತಿನಿಷ್ಠೆ ಸದಾಚಾರ, ಭೂತಾನುಕಂಪ ಇತ್ಯಾದಿಗಳೂ ಸೇರುತ್ತವೆ.

ಪಾವಿತ್ರ್ಯಭಾವನೆ ಎಲ್ಲ ಧರ್ಮಗಳ ಸಾಮಾನ್ಯಾಂಶ ಎನ್ನಲಾಗಿದೆ. ಹೀಗಾಗಿ ಎಲ್ಲ ಧರ್ಮಗಳ ತಿರುಳೂ ಒಂದೇ ಎಂದು ಹೇಳಬಹುದು.

ಮೊದಮೊದಲು ಸರಳ ಪೂಜಾವಿಧಿಗಳಷ್ಟೇ ಇದ್ದು, ಕ್ರಮೇಣ ಜಟಿಲ ಪ್ರಕ್ರಿಯೆಗಳು. ವಿಧಿಗಳು ಆಚರಣೆಗಳು ಒಂದು ಕಥೆ ಹುಟ್ಟಿಕೊಂಡವು ; ಪುರೋಹಿತಶಾಹಿಯ ಪ್ರವೇಶವಾಯಿತು. ಇನ್ನೊಂದು ಕಡೆ ಸಂಕೀರ್ಣತತ್ತ್ವ, ಸಿದ್ಧಾಂತ ರಾದ್ಧಾಂತಗಳು ಬೆಳೆದುಬಂದವು. ಈ ಆಚರಣೆ, ಸಿದ್ಧಾಂತಗಳ ಭಾಗವೇ ಮತ. ಇವು ಒಮ್ಮೊಮ್ಮೆ ಅಗತ್ಯವಾಗಬಹುದಾದರೂ ಸಾರಭೂತವಲ್ಲ; ಕೆಲವೊಮ್ಮೆ ಶ್ರೇಯಸ್ಕರವೂ ಅಲ್ಲ. ಜನಸಾಮಾನ್ಯರಿಗೆ ಇದೆಲ್ಲ ಅಗಮ್ಯ ; ಆದ್ದರಿಂದಲೇ ಧರ್ಮ ನಿಗೂಢವಾದದ್ದು ಎಂಬ ಮಾತೊಂದು ನಮ್ಮಲ್ಲಿದೆ.

ಧರ್ಮ ಮೂಲತಃ ವೈಯಕ್ತಿಕವೇ ಅಥವಾ ಸಾಮೂಹಿಕವೇ ಎಂಬುದನ್ನು ಕುರಿತು ಸಾಕಷ್ಟು ಚರ್ಚೆ ನಡೆದಿದೆ. ಧರ್ಮ, ಅಧ್ಯಾತ್ಮ ಮೂಲತಃ ವೈಯಕ್ತಿಕ ಎನ್ನಬಹುದು. "ಮನುಷ್ಯ ಏಕಾಂತದಲ್ಲಿ ಏನನ್ನು ಕುರಿತು ಚಿಂತಿಸುತ್ತಾನೋ ಅದೇ ಧರ್ಮ" ಎಂಬ ಉಕ್ತಿಯೊಂದು ಗಮನಾರ್ಹ. ಮತವಾದರೊ ಸಾಮೂಹಿಕವಾದದ್ದು.

ಈ ಹಿನ್ನೆಲೆಯಲ್ಲಿ ನೋಡಿದಾಗ, ಕನಕದಾಸರು ಮುಖ್ಯವಾಗಿ ಒಬ್ಬ ಧಾರ್ಮಿಕ ವಿಭೂತಿ ; ಮತೀಯ ಅಥವಾ ಮಠೀಯ ವ್ಯಕ್ತಿಯಲ್ಲ. ಅದರಲ್ಲಿ ಮಹಾಭಕ್ತನನ್ನು, ಅನುಭಾವಿಯನ್ನು, ಆಧ್ಯಾತ್ಮಿಕ ಚೇತನವನ್ನು ಗುರುತಿಸುತ್ತೇವೆ; ಅವರು ಜನ ಸಾಮಾನ್ಯರಿಗೆ ಧರ್ಮದ ರಹಸ್ಯವನ್ನು ಸರಳ ಸುಲಭವಾಗಿ ತಿಳಿಸಿಕೊಟ್ಟರು ; ಸರ್ವೋದಯ ದೃಷ್ಟಿಯನ್ನು ವ್ಯಕ್ತಪಡಿಸಿದರು. 'ಹರಿಭಕ್ತಿಸಾರ'ದ ಪ್ರತಿ ಪದ್ಯದಲ್ಲೂ ಅವರು ದೇವರನ್ನು ಪ್ರಾರ್ಥಿಸುವುದು "ರಕ್ಷಿಸು ನಮ್ಮನನವರತ' ಎಂದೇ ವಿನಾ "ನನ್ನನನವರತ" ಎಂದಲ್ಲ.

ಕನಕದಾಸರನ್ನು ಹರಿದಾಸರ ಪಂಕ್ತಿಯಲ್ಲಿ ಪರಿಗಣಿಸುತ್ತೇವೆ. ಇದಕ್ಕೆ ಮುಖ್ಯ ಕಾರಣವೆಂದರೆ, ಅವರ ದಾಸ್ಯಭಾವ, ದಾಸ್ಯಭಕ್ತಿ. (ಹಾಗೆ ನೋಡಿದರೆ ನವವಿಧಭಕ್ತಿ ಸಾಧನೆಯೂ ಅವರಲ್ಲಿ ಕಂಡುಬರುತ್ತದೆ.) ಆದರೂ ಹರಿದಾಸ ಪರಂಪರೆಯ ಸಾಂಪ್ರದಾಯಿಕ ಸ್ತುತಿಯಲ್ಲಿ ಕನಕದಾಸರಿಗೆ ಸ್ಥಾನವಿಲ್ಲ ಎಂದು ಹೇಳುತ್ತಾರೆ. ಇದು ಒಂದರ್ಥದಲ್ಲಿ ಸರಿ. ಏಕೆಂದರೆ ಇತರ ಹರಿದಾಸರಿಗೂ ಕನಕದಾಸರಿಗೂ ಸಾಮ್ಯಕ್ಕಿಂತ ವೈಷಮ್ಯಗಳೇ ಹೆಚ್ಚು. ಕನಕದಾಸರು ಇತರರಿಗಿಂತ ಭಿನ್ನವಾಗಿ ಒಂದು ವಿಶಿಷ್ಟವಾದ ನೆಲೆಯಲ್ಲಿ ನಿಲ್ಲುತ್ತಾರೆ. ಅವರು ಹುಟ್ಟಿನಿಂದ ಶೂದ್ರರೆಂಬ ಸಂಗತಿ ಈ ವೈಶಿಷ್ಟ್ಯಗಳ ಒಂದು ಪ್ರಮುಖ ಕಾರಣವಾಗಿದೆ.

ಕನಕದಾಸರದು ಸಮನ್ವಯಶೀಲ ವ್ಯಕ್ತಿತ್ವ. ಅವರು ಸಂತರೂ ಹೌದು. ಕವಿಯೂ ಹೌದು. ಅವರಲ್ಲಿ ಸ್ವತಂತ್ರ ನಿರಂಕುಶಮತಿ, ವೈಚಾರಿಕ ಮನೋಭಾವ, ವಿಮರ್ಶನಬುದ್ಧಿ, ಪ್ರಶ್ನಿಸುವ ಭಂಗಿ ಇತರ ದಾಸರಲ್ಲಿ ಇರುವುದಕ್ಕಿಂತ ಮಿಗಿಲಾಗಿ ಗೋಚರಿಸುತ್ತವೆ. ಆರ್ತ ಭಾವುಕ ಭಕ್ತಿಯನ್ನು ಮಾತ್ರವಲ್ಲ, ಜಿಜ್ಞಾಸುಪ್ರವೃತ್ತಿಯನ್ನೂ ಅವರಲ್ಲಿ ಎದುರುಗೊಳ್ಳುತ್ತೇವೆ. ಭಕ್ತಿಮಾರ್ಗ, ಜ್ಞಾನಮಾರ್ಗಗಳ ಮಿಲನ ಅವರ ವ್ಯಕ್ತಿತ್ವದಲ್ಲಿದೆ.

ಹರಿದಾಸ ಪರಂಪರೆಗೆ ಹಿನ್ನೆಲೆ ಮಾಧ್ವಮತ ; ದ್ವೈತ ಸಿದ್ಧಾಂತ ಮಧ್ವಮತದ ಸಾರಾಂಶವನ್ನು ಒಂದು ಹೇಳಿಕೆ ಹೀಗೆ ಸಂಗ್ರಹಿಸುತ್ತದೆ :

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯ ಜಗತ್ತತ್ತ್ವತೋ

ಭೇದೋ ಜೀವಗಣಾ ಹರೇರನುಚರಾಃ ನಿಚೋಚ್ಚ ಭಾವಂಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

(ಶ್ರೀಹರಿ ಸರ್ವೋತ್ತಮ ; ಜಗತ್ತು ಪಾರಮಾರ್ಥಿಕ ಸತ್ಯ ; ಪಂಚಭೇದವು ಪಾರಮಾರ್ಥಿಕ ಸತ್ಯ ಮತ್ತು ನಿತ್ಯ. ಜೀವಗಣಗಳು ಶ್ರೀ ಹರಿಯ ಅನುಚರರು; ನಿತ್ಯ ತಾರತಮ್ಯವುಳ್ಳವರು. ಸ್ವರೂಪ ಸುಖಾನುಭವ ಮುಕ್ತಿ ; ನಿರ್ಮಲವಾದ ಭಕ್ತಿಯು ಮುಕ್ತಿಗೆ ಸಾಧನ ; ಪ್ರತ್ಯಕ್ಷ ಅನುಮಾನ ಆಗಮಗಳು ಸಾಧಕ ಪ್ರಮಾಣಗಳು ; ಶ್ರೀ ಹರಿಯು ಆಗಮ ಮಾತ್ರವೇದ್ಯ.)

ಕನಕದಾಸರ ಕೀರ್ತನೆಗಳಲ್ಲಿ ಹರಿಸರ್ವೋತ್ತಮತ್ವದ ಪ್ರತಿಪಾದನೆಯಿದೆ. ಸ್ವರೂಪ ಸುಖಾನುಭವವೇ ಮುಕ್ತಿ, ನಿರ್ಮಲ ಭಕ್ತಿಯೇ ಮುಕ್ತಿಗೆ ಸಾಧನ ಎಂಬ ನಿಲುವು 'ಹರಿಭಕ್ತಿಸಾರ'ದಲ್ಲಿ ಕಂಡುಬರುತ್ತದೆ. ಕೀರ್ತನೆಗಳಲ್ಲಿ ಹನುಮ, ಭೀಮ, ಮಧ್ವರ ಸ್ತೋತ್ರವಿದೆ. ಇಷ್ಟರ ಹೊರತು ಮಧ್ವಮತಕ್ಕೆ ವಿಶಿಷ್ಟವಾದ ಪ್ರಮೇಯಗಳೂ ಕನಕದಾಸರ ಕೃತಿಗಳಲ್ಲಿ ಪ್ರಕಟವಾಗುವುದಿಲ್ಲ. ಹುಡುಕಿದರೆ ಇನ್ನೂ ಕೆಲವು ಸುಳಿವುಗಳು ದೊರೆಯಬಹುದಷ್ಟೆ. ಮುಖ್ಯವಾದ ಮಾತೆಂದರೆ, ಕನಕ ಕೀರ್ತನೆಗಳಲ್ಲಿ ಹರಿಹರ ಸಾಮರಸ್ಯ ಎದ್ದು ಕಾಣುತ್ತದೆನ್ನುವುದು. ಕನಕದಾಸರ ಉದಾರ ಭಾಗವತ ಮನೋಧರ್ಮಕ್ಕೆ ಇದು ಸುಸಾಕ್ಷಿಯಾಗಿದೆ.

ದಾಸನಾಗಬೇಕು ಸದಾಶಿವನ ದಾಸನಾಗಬೇಕು

*

ಆರು ಬಲ್ಲರು ಹರಿಹರಾದಿಗಳ ಮಹಿಮೆಯನು?

–ಮುಂತಾದ ಉಕ್ತಿಗಳನ್ನು ಬಗೆಯಬೇಕು. 'ಮೋಹನತರಂಗಿಣಿ'ಯಲ್ಲೂ ಹರಿಹರರ ಅಭೇದ ಅಭಿವ್ಯಕ್ತವಾಗಿದೆ. ಅಷ್ಟೇ ಅಲ್ಲ, ಆ ಕಾವ್ಯದಲ್ಲಿ ಶ್ರೀವೈಷ್ಣವ ಧರ್ಮದ ಪ್ರಭಾವವಿದ್ದು, ಪ್ರಪತ್ತಿ ಮಾರ್ಗದ ಪ್ರತಿಪಾದನೆ ತೋರಿಬರುತ್ತದೆ. 'ಹರಿಭಕ್ತಿಸಾರ'ದಲ್ಲಿಯೂ ಅದರ ಸೂಚನೆಗಳುಂಟು. 'ಮೋಹನ ತರಂಗಿಣಿ'ಯ ಆರಂಭದಲ್ಲೇ ಶ್ರೀ ರಾಮಾನುಜ ಸ್ತುತಿಯಿರುವುದನ್ನು ಲಕ್ಷಿಸಬೇಕು. ಅದು ಶೃಂಗಾರ ಕಾವ್ಯವಾದರೂ ಶ್ರೀವೈಷ್ಣವ ಸಂಪ್ರದಾಯದ ಎಳೆಗಳು ಅದರಲ್ಲಿ ಮೇಲಿಂದ ಮೇಲೆ ಮಿಂಚುತ್ತವೆ.

ಈ ಕಾರಣದಿಂದ ವೈಷ್ಣವ, ಶ್ರೀವೈಷ್ಣವ ಎರಡೂ ಮತಗಳ ಪ್ರಭಾವ ಸಂಸ್ಕಾರಗಳಿಗೆ ಕನಕದಾಸರ ವ್ಯಕ್ತಿತ್ವ ಗುರಿಯಾಗಿತ್ತೆಂದು ಖಚಿತವಾಗಿ ಹೇಳಬಹುದು ಅಷ್ಟೇ ಅಲ್ಲ, ಶೈವ, ವೀರಶೈವ ಧರ್ಮಗಳ ಪ್ರಭಾವಕ್ಕೂ ಅವರು

ತಮ್ಮನ್ನು ತೆರೆದುಕೊಂಡಿದ್ದರೆಂದು ಹೇಳಿದರೆ ತಪ್ಪಾಗಲಾರದು. ಆದರೆ ಅವರ ಕೀರ್ತನೆಗಳಲ್ಲಿ ಹಾಗೂ 'ಹರಿಭಕ್ತಿಸಾರ'ದಲ್ಲಿ ತಾತ್ತ್ವಿಕ ವಿಚಾರಗಳಿದ್ದರೂ ಯಾವುದೇ ನಿರ್ದಿಷ್ಟ ಪಂಥದ ಪ್ರತಿಪಾದನೆ ಇಲ್ಲವೆಂಬುದು ಗಣ್ಯವಾದ ಸಂಗತಿ.

ವಾಸ್ತವವಾಗಿ, ಕನಕದಾಸರು ಎಲ್ಲ ಸಂಪ್ರದಾಯಗಳ ಸಾರವನ್ನು, ಮುಖ್ಯವಾಗಿ ಭಕ್ತಿ ಪ್ರಕ್ರಿಯೆಯನ್ನು ಹೀರಿಕೊಂಡು, ಅವುಗಳನ್ನು ಮೀರಿ "ಅತ್ಯತಿಷ್ಠದ್ದಶಾಂಗುಲಂ" ಎನ್ನುವಂತೆ ಬೆಳೆದ ಚೇತನ. ಈ ಔದಾರ್ಯ ಅನುಭಾವಿಯ ಲಕ್ಷಣ. ಅನುಭಾವಿ ಮತವನ್ನು ಮೀರಿದ ಮಹಾಂತ; ಪಂಥದಿಂದ ಪಾರಾದ ಪ್ರಾಜ್ಞ. ಅನುಭಾವ (mysticism) ಎಂದರೇನು? ಒಂದು ಮಾತಿನಲ್ಲಿ ಹೇಳಬೇಕೆಂದರೆ, ತನುಭಾವ ಅಳಿಯುವುದೇ ಅನುಭಾವ. ಅದು ಪರಾಸತ್ಯದ ಅಪರೋಕ್ಷಾನುಭೂತಿ. 'Love of God' ಎಂದು ಒಬ್ಬಾತ ಅನುಭಾವವನ್ನು ಲಕ್ಷಣೀಕರಿಸಿದ್ದಾನೆ. ನಮ್ಮಲ್ಲಿರುವ 'ಪರಮಪ್ರೇಮರೂಪಾ", "ಪರಾನುರಕ್ತಿರೀಶ್ವರೆ' ಎಂಬ ಭಕ್ತಿಲಕ್ಷಣವಾಕ್ಯಗಳನ್ನು ಇಲ್ಲಿ ನೆನೆಯಬಹುದು. ಅಂತೂ ಅನುಭಾವ ಎನ್ನುವುದು ಉತ್ಕಟವಾದ ಭಗವದ್ರತಿ ;

ಅಂತಿಮವಾಗಿ ಜೀವಾತ್ಮ, ಪರಮಾತ್ಮರ ಐಕ್ಯದಲ್ಲಿ ಪರ್ಯವಸಾನಗೊಳ್ಳುವಂಥದು,

ಪ್ರಾಯಃ ಕನಕದಾಸರ ಒಂದೇ ಒಂದು ಹಾಡಿನಲ್ಲಿ ಅದ್ವೈತದ ನಿಲುವು ಕೂಡ ಪ್ರಕಾಶಗೊಂಡಿರುವುದು ತುಂಬ ಗಮನಾರ್ಹ :

ಸದರವಿಲ್ಲವೆ ನಿಜಯೋಗ, ಸಚ್ಚಿದಾನಂದ
ಗುರು ದಿಗಂಬರಯೋಗ...
...ಭೇದವು ಲಯವಾಗುವತನಕ ಬಿಡ
ದಾದಿಕೇಶವ ನಿಮ್ಮ ನೆಲೆಗಾಣದನಕ ॥

ಹರಿ–ಹರರು ಅಭಿನ್ನ ಎಂದು ಕನಕದಾಸರು ಹೇಳಲು ಸಾಧ್ಯವಾಗಿರುವುದು ಇಂಥ ನಿಲುವಿನಿಂದಲೇ ಎನಿಸುತ್ತದೆ.

ಅನುಭಾವಿ ಹೇಳತಕ್ಕದ್ದೆಲ್ಲ ಅನುಭವಮೂಲವಾದದ್ದು. ಕನಕದಾಸರಲ್ಲಿ ತಾತ್ವಿಕ ವಿಚಾರಗಳಿದ್ದರೂ ಅವು ಕೇವಲ ಬೌದ್ಧಿಕ ಅರಿವಿನಿಂದ, ಶುಷ್ಕ ತರ್ಕದಿಂದ ಬಂದವಲ್ಲ ; ಕವಿ ಸಹಜವಾದ ವಿಸ್ಮಯಮೂಲವಾದ ಅಭಿವ್ಯಕ್ತಿ ಅವರದು.

ವೇದಶಾಸ್ತ್ರ ಶಬ್ದ ತರ್ಕ ಮೀಮಾಂಸೆಗಳ
ಓದಿದವನಲ್ಲ ನಿನ್ನಯ ಭಕುತಿಗಧಿಕ
ವಾದ ಇನ್ನೊಂದೇನನುಸುರುವೆನು ॥

ಎನ್ನುವಲ್ಲಿ ಹೊರಪಡುವುದು ದಾಸರ ವಿನಯ ಮಾತ್ರವಲ್ಲ.

"ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ ?" ಎಂಬ ಸುಪ್ರಸಿದ್ಧ ಕೀರ್ತನೆಯಲ್ಲಿ, ದೇವರು ಸರ್ವವ್ಯಾಪಿ, "ಸರ್ವಂ ಖಲ್ವಿದು ಬ್ರಹ್ಮ" ಎಂಬ ವೇದಾಂತ ತತ್ತ್ವದ ವೈಶಿಷ್ಟ್ಯಪೂರ್ಣ, ಸರಸ ನಿರೂಪಣೆಯಿದೆ.

ಕನಕದಾಸರ ದುರವಗಾಹ್ಯವಾದ ಮುಂಡಿಗೆಗಳಲ್ಲಿ ಪಾಂಡಿತ್ಯ ಚಮತ್ಕಾರಗಳಿಗೆ ಪ್ರಾಶಸ್ತ್ಯವಿದ್ದರೂ, ಅವುಗಳಲ್ಲಿ ಕೆಲವಾದರೂ ಅನುಭಾವದ ಸಾಂಕೇತಿಕ ಆವಿಷ್ಕಾರಗಳು ಎಂಬುದನ್ನು ಮರೆಯಬಾರದು.

ಕನಕದಾಸರ ಧಾರ್ಮಿಕ ಜೀವನ ವಿಕಾಸದ ಒಂದು ಚಿತ್ರವನ್ನು ರೇಖಿಸುವುದು ಅಪ್ರಸ್ತುತವಾಗಲಾರದು.

ಪ್ರತಿಯೊಬ್ಬ ಸಾಧಕನ ಬದುಕಿನಲ್ಲೂ Dark Night of the Soul (ಆತ್ಮದ ಕಾಳರಾತ್ರಿ) ಎಂದು ಕರೆಯಬಹುದಾದ ಆರಂಭದ ಅವಸ್ಥೆಯೊಂದಿರುತ್ತದೆ. ಕನಕದಾಸರ ಬಾಳು ಅದಕ್ಕೆ ಹೊರತಲ್ಲ. ಮೊದಮೊದಲು ಅವರು ಸಂಸಾರಬದ್ಧರಾಗಿ ಮಾಯಾ ಮೋಹವಶರಾಗಿ ತೊಳಲುತ್ತಿದ್ದಿರಬೇಕು. ಆ ತೊಳಲಾಟವನ್ನು ತೋಡಿಕೊಂಡು ಭಗವತ್ಕರುಣೆಯನ್ನು ಯಾಚಿಸುವ ಪರಿ ಅವರ ಅನೇಕ ಹಾಡುಗಳಲ್ಲಿದೆ :

> ನೀನೆ ದಯಮಾಡಿ ಸಲಹೊ ಎನ್ನನು ಕೃಷ್ಣ
> ಕಾನನದೊಳು ಕಣ್ಣ ಮುಚ್ಚಿ ಬಿಟ್ಟಿಹರೊ ॥

ಎನ್ನುವಲ್ಲಿ ಜೀವವನ್ನು ಕವಿದ ಕಗ್ಗತ್ತಲಿನ ನಿರೂಪಣೆಯಿದೆ.

> ಘೋರ ಸಂಸಾರವೆಂದೆಂಬ ವಾರಿಧಿಯೊಳಗೆ ಬಿದ್ದು
> ಪಾರಗಾಣದಾದೆನಲ್ಲಯ್ಯ ॥

ಎಂದು ಕನಕದಾಸರು ಅಳಲುತ್ತಾರೆ.

> ಸಾಕು ಸಾಕು ಮನುಜಸೇವೆ ರಂಗಯ್ಯ
> ಬೇಕು ನಿನ್ನ ಭಜನೆ ॥

ಎಂದು ಸಂಕಲ್ಪಿಸುತ್ತಾರೆ. ತಮ್ಮ ಪಾಲಿಗೆ ಭಗವದನುಗ್ರಹದ ಬಾಗಿಲು ತೆರೆಯಲಿಲ್ಲವೆನಿಸಿದಾಗ ಹೀಗೆ ಮೊರೆಯಿಡುತ್ತಾರೆ :

> ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೆ
> ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೆ ? ॥

ಈ ತಳಮಳ, ತಲ್ಲಣಗಳ ಅವಸ್ಥೆ ಹಿಂಜರಿಯುವ ಕಾಲ ದೂರವಿಲ್ಲ.

ಈ ಸಂಸಾರ, ಸಂಪತ್ತು, ದೇಹ ಅನಿತ್ಯವೆಂಬ ಅರಿವು ಕನಕದಾಸರಿಗಾಗುತ್ತದೆ : ಅದನ್ನು ಅವರು ಅನೇಕ ರೀತಿಯಲ್ಲಿ ಅಭಿವ್ಯಕ್ತಿಸುತ್ತಾರೆ :

ಇರಬಂದುದಿಲ್ಲ ಸಂಸಾರ
ಅರಿತು ಶ್ರೀ ಹರಿಗುಣವ ಭಜಿಸುವುದು ಸಾರ ॥

*

ಈ ಸಿರಿಯ ನಂಬಿ ಹಿಗ್ಗಲು ಬೇಡ ಮನವೆ
ವಾಸುದೇವನ ಭಜಿಸೊ ಒರಟು ಜೀವನವೆ ?

*

ಡಿಂಬದಲ್ಲಿರುವ ಜೀವ ಕಂಬ ಸೂತ್ರ ಬೊಂಬೆಯಂತೆ
ಎಂದಿಗಿದ್ದರೊಂದು ದಿನ ಸಾವು ತಪ್ಪದು.... ॥

–ಇತ್ಯಾದಿ ಶರೀರದಜೇಯತೆಯನ್ನು ಕನಕದಾಸರು ಜುಗುಪ್ಸೆ ಹುಟ್ಟುವಂತೆ ಬಣ್ಣಿಸಿ ಕಡೆಗೆ ಹೀಗೆ ಸಾರುತ್ತಾರೆ :

ಎಂದಿದ್ದರೀ ಕೊಂಪೆ ಎನಗೆ ನಂಬಿಕೆಯಿಲ್ಲ
ಮುಂದರಿತು ಶ್ರೀಹರಿಯ ಭಜಿಸುವುದು ಲೇಸು ॥

ಆದರೆ ಹರಿಭಕ್ತಿಸಾರದಲ್ಲಿ ಒಂದು ಕಡೆ "ನೀನಿರಲು ದೇಹದಲಿ ಹೊಲೆಯುಂಟೆ ?" ಎಂದಿರುವುದು ದ್ವಂದ್ವಕ್ಕೆ ಎಡೆಮಾಡಿಕೊಡುತ್ತದೆ.

ದೈವಬಲ ಎಲ್ಲಕ್ಕಿಂತ ಮುಖ್ಯ ಎಂದು ಕನಕದಾಸರ ನಂಬಿಕೆ :

ಆವ ಬಲವಿದ್ದರೇನು ದೈವಬಲವಿಲ್ಲದವಗೆ ?

ಭಗವಂತನ ಮಹಿಮೆಯನ್ನೂ ತಮ್ಮ ಅಲ್ಪತೆಯನ್ನೂ ಕನಕದಾಸರು ಪರಿಪರಿಯಾಗಿ ಅರುಹುತ್ತಾರೆ :

ಏನೆಂದು ಕೊಂಡಾಡಿ ತುತಿಸಲೋ ದೇವ ?
ನಾನೇನು ಬಲ್ಲೆ ನಿನ್ನಯ ಮಹಿಮೆ ಘನವ ?
ಹರಿಮುಕುಂದನು ನೀನು ನರಜನ್ಮ ಹುಳು ನಾನು –

ಇತ್ಯಾದಿ ನಾಮ ಮಹಿಮೆಯೂ ಅನೇಕ ಕಡೆ ಕೀರ್ತಿತವಾಗಿದೆ :

ನೀರ ಮುಳುಗಲು ಯಾಕೆ ನಾರಿಯಳ ಬಿಡಲೇಕೆ ?
ವಾರಕೊಂದುಪವಾಸ ಮಾಡಲೇಕೆ ?
ನಾರಸಿಂಹನ ದಿವ್ಯನಾಮವನು ನೆನೆದರೆ
ಘೋರ ಪಾತಕವೆಲ್ಲ ತೊಲಗಿ ಹೋಗುವುದು. ॥ ಇತ್ಯಾದಿ

ಇಲ್ಲಿ ಸಂಸಾರ ತ್ಯಾಜ್ಯವಲ್ಲವೆಂದು ಹೇಳುತ್ತಾರೆ ಕನಕದಾಸರು. ಆದರೆ ಈ ನಿಲುವಿಗೂ ದೇಹ ಹೇಯುವೆಂಬ ನಂಬಿಕೆಗೂ ವಿರೋಧ ಏರ್ಪಡುವುದಿಲ್ಲವೆ ?

ಭಕ್ತಿಪಾರಮ್ಯವನ್ನು ಘೋಷಿಸುವಾಗ ಕನಕದಾಸರು :

ನಡತೆಹೀನನಾದರೇನಯ್ಯ ಜಗ–
ದೊಡೆಯನ ಭಕುತಿಯಿದ್ದರೆ ಸಾಲದೆ ? ॥

ಎನ್ನುವಷ್ಟು ದೂರ ಹೋಗುತ್ತಾರೆ. ಇಲ್ಲಿ ಭಕ್ತಿಗೆ ಒತ್ತು ; ನಡತೆಯಿಲ್ಲದಿರುವಿಕೆಯ ಪ್ರಸ್ತಾಪ ಗೌಣ. ಕೆಲವು ಹೇಳಿಕೆಗಳ ಆಶಯವನ್ನು ನಾವು ಗ್ರಹಿಸಬೇಕೆ ಹೊರತು ಅಕ್ಷರಾರ್ಥವನ್ನಲ್ಲ.

ತಮ್ಮ ದಾಸತ್ವವನ್ನಂತೂ ಕನಕದಾಸರು ಆತ್ಮಾವಹೇಳನ, ನೈಚ್ಯಾನುಸಂಧಾನ ಎನಿಸುವಷ್ಟು ಗಾಢವಾಗಿ ನಿವೇದಿಸುತ್ತಾರೆ. ತಾನು ದಾಸರ ದಾಸ ಎನ್ನುತ್ತಾರೆ:

ಬಂಟನಾಗಿ ಬಾಗಿಲು ಕಾಯ್ವೆ ಹರಿಯ
ವೈಕುಂಠದ ಸೊಂಪಿನ ದಾಸರ ಮನೆಯ ॥
* *
ಹೂವು ತರುವರ ಮನೆಗೆ ಹುಲ್ಲು ತರುವೆ
ಆವ ಪರಿಯಲಿ ಸಲಹೊ ದೇವ ಚಿನ್ಮಯನೆ ॥–

ಇತ್ಯಾದಿ. ತಮ್ಮ ಅಸ್ವತಂತ್ರ ಭಾವವನ್ನು ಕನಕದಾಸರು ಹೇಳಿಕೊಳ್ಳುವುದು ಹೀಗೆ :

ನನ್ನಿಂದ ನಾನೇ ಜನಿಸಿಬಂದೆನೆ ಕೃಷ್ಣ
ಎನ್ನ ಸ್ವತಂತ್ರವು ಲೇಶವಿದ್ದರು ತೋರು
ನಿನ್ನ ಪ್ರೇರಣೆಯಿಂದ ನಡೆದು ನುಡಿದ ಮೇಲೆ
ನಿನ್ನದೇ ತಪ್ಪೊ ಎನ್ನದೆ ತಪ್ಪೊ ಪರಮಾತ್ಮ ॥

ಕಡೆಗೆ ಸಮರ್ಪಣಭಾವ ಸಿದ್ಧಿಸುತ್ತದೆ ; ಶರಣಾಗತಿಯ ನಿಲುವಿನಲ್ಲಿ ವಿರಮಿಸುತ್ತಾರೆ, ಕನಕದಾಸರು :

ತನು ನಿನ್ನದು ಜೀವನ ನಿನ್ನದು
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ
ಸವಿನುಡಿ ವೇದ ಪುರಾಣ ಶಾಸ್ತ್ರಂಗಳ
ಕಿವಿಗೊಟ್ಟು ಕೇಳುವ ಸ್ಥಿತಿ ನಿನ್ನದು
ನವಮೋಹನಾಂಗಿಯರ ರೂಪವ ಕಣ್ಣಲಿ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ॥[೧]

---

೧. ನೋಟ ಭಗವದರ್ಪಿತವಾದಾಗ ಏನೊಂದನ್ನೂ ಕೆಟ್ಟ ದೃಷ್ಟಿಯಿಂದ ನೋಡುವುದು ಸಾಧ್ಯವಾಗುವುದಿಲ್ಲ. ಮಾಡುವ ಕರ್ಮವೆಲ್ಲ ಭಗವದರ್ಪಿತವಾದಾಗ ಕೆಟ್ಟದ್ದೇನನ್ನೂ ಮಾಡುವುದು ಸಾಧ್ಯವಾಗುವುದಿಲ್ಲ. ಇದು ಇಲ್ಲಿ ಗ್ರಹಿಸಬೇಕಾದ ಅಭಿಪ್ರಾಯ.

ಹೀಗೆಲ್ಲ ಹೇಳಿದ ಮೇಲೆ "ಪಂಚೇಂದ್ರಿಯಗಳು ನಿನ್ನವು" ಎಂದು ವಾಚ್ಯವಾಗಿಯೆ ನುಡಿಯುತ್ತಾರೆ, ಕನಕದಾಸರು. ಈ ಇಂದ್ರಿಯಗಳೂ ನಮ್ಮನ್ನು ಇಳಿಸಲೂ ಬಲ್ಲವು, ಎತ್ತಲೂಬಲ್ಲವು. ಉದಾಹರಣೆಗೆ "ಕಣ್ಣೇ ಕಾಮನ ಬೀಜ"– ಇದು ಕವಿಯಾದವನು ಮಾತ್ರ ಕೊಡಬಹುದಾದ ಸೊಗಸಾದ ರೂಪಕ–ಆದರೆ ದೇಹ ಹೊಲಸು ಎಂಬ ಭಾವನೆಗೆ ಇದು ವಿಸಂಗತವಾಗುವುದಿಲ್ಲವೆ ?

ಮುಕ್ತಿ ಆನಂದಗಳು ತಮ್ಮ ಧ್ಯೇಯವೆಂದು ಉಸುರುತ್ತಾರೆ ಕನಕದಾಸರು. ಈ ವಿಶಿಷ್ಟ ಕೀರ್ತನೆಯಲ್ಲಿ ವಾಸ್ತವ, ಆದರ್ಶಗಳ ಎರಡೂ ಸ್ತರಗಳಿವೆ.

ಎಲ್ಲರೂ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ
......ಉನ್ನಂತ ನೆಲೆಯಾದಿಕೇಶವನ ಧ್ಯಾನವನು
ಮನಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕಾಗಿ ॥

ತಮ್ಮ ಆತ್ಯಂತಿಕ ಸಿದ್ಧಿಯ ಸಾಕ್ಷಾತ್ಕಾರದ ಚಿತ್ರಗಳನ್ನು ಕನಕದಾಸರು ಅನೇಕ ಹಾಡುಗಳಲ್ಲಿ ಕೊಟ್ಟಿದ್ದಾರೆ. ಇದೊಂದು ಖ್ಯಾತ ಕೀರ್ತನೆ :

ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು
ಪದುಮನಾಭನ ಪಾದದೊಲುಮೆ ಎನಗಾಯಿತು
ಹರಿಯ ನಾಮಾಮೃತ ಕಿವಿಗೊದಗಿತು
ಹರಿಯ ದಾಸರು ಎನ್ನ ಬಂಧು ಬಳಗಾದರು
ಹರಿಯ ಶ್ರೀಮುದ್ರೆ ಆಭರಣವಾಯ್ತು ॥
ಇಂದೆನ್ನ ಜೀವಕ್ಕೆ ಸಕಲಸಂಪದವಾಯ್ತು
ಮುಂದೆನ್ನ ಜನ್ಮ ಸಾಫಲ್ಯವಾಯ್ತು
ತಂದೆ ಶ್ರೀ ಕಾಗಿನೆಲೆಯಾದಿಕೇಶವರಾಯ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ॥

"ಹರಿಯ ಶ್ರೀ ಮುದ್ರೆ ಆಭರಣವಾಯ್ತು" ಎಂಬ ಉದ್ಗಾರ ಅಗತ್ಯವಾಗಿ ಲಕ್ಷಿಸಬೇಕಾದುದು. ಮಾಧ್ವದೀಕ್ಷೆಯ ಉಲ್ಲೇಖ ಇಲ್ಲಿದೆ. ಒಂದು ಧಾರ್ಮಿಕ ವಿಧಿಯ ಹಿನ್ನೆಲೆಯಲ್ಲಿ ಇಂಥ ಸುಂದರವಾದ ಗೀತೆಯೊಂದು ಮೂಡಿರುವುದು ವಿಶೇಷ ಎನಿಸುತ್ತದೆ.

ಕನಕದಾಸರ ಸಿದ್ಧಿಯ ದೃಷ್ಟಿಯಿಂದ ಈ ಹಾಡೂ ಗಮನಾರ್ಹ :

ಇಷ್ಟು ದಿನ ವೈಕುಂಠ ಎಷ್ಟು ದೂರ ಎನ್ನುತ್ತಿದ್ದೆ
ಇಂದು ಸೃಷ್ಟಿಗೀಶ ಶ್ರೀರಂಗನನ್ನು ದೃಷ್ಟಿಯಿಂದ ನೋಡಿದೆ.....॥
ನಾಗಶಯನನ ಮೂರ್ತಿಯ ಕಂಡೆ
ಭೋಗಿಭೂಷಣ ಶಿವನು ಕಂಡೆ ॥

ಈ ಹಂತದಲ್ಲಿ ಕನಕದಾಸರಿಗೆ ಎಲ್ಲವೂ ಭಗವನ್ಮಯವಾಗಿ ಭಾಸವಾಗುತ್ತದೆ ; "ಎಲ್ಲಿ ನೋಡಿದರಲ್ಲಿ ರಾಮ" ಎಂದು ಅವರು ಮೈಮರೆತು ಹಾಡುತ್ತಾರೆ.

ಕನಕದಾಸರಲ್ಲಿ ನಮಗೆ ಅಷ್ಟಾಗಿ ಅರ್ಥವಾಗದ ಒಂದು ಅಂಶವೆಂದರೆ ಅವರ ಕರ್ಮತತ್ವ ಪುರಸ್ಕಾರ. ಈ ಉದ್ಗಾರಗಳನ್ನು ನೋಡಬಹುದು :

ಪೂರ್ವಜನ್ಮದಿ ನಾನು ಮಾಡಿದ ಕರ್ಮದಿಂ
ಉರ್ವಿಯೊಳು ಜನಿಸಿದೆನೊ ಕೃಷ್ಣ ॥

* * *

ಸರಸಿಜೋದ್ಭವನು ಹಣೆಯೊಳು ಬರೆದು ನಿರ್ಮಿಸಿದ
ತೆರನುಳಿದು ಬೇರುಂಟೆ ತಾನರಿದುದೆ ॥

* * *

ಆರಿಗಾದರು ಪೂರ್ವಕರ್ಮ ಬಿಡದು
ಅಜಭವಾದಿಗಳ ಕಾಡುತಿಹುದು ॥

ಇಷ್ಟೆಲ್ಲ ಹೇಳಿಯೂ, "ನಿರ್ಮಲ ವೈಷ್ಣವರ ವಿಧಿ ಸೋಂಕಲಹುದೆ ?" ಎಂದು ಬೇರೆ ಹೇಳುತ್ತಾರೆ.

ಕೆಲವು ವಿಷಯಗಳಲ್ಲಿ ದಿಟ್ಟ ವೈಚಾರಿಕ ಮನೋಧರ್ಮವನ್ನು ಮೆರೆದ ಕನಕದಾಸರಲ್ಲಿ ಈ ದೈವವಾದದ ಅತಿರೇಕ ತಕ್ಕಮಟ್ಟಿಗೆ ಅನಿರೀಕ್ಷಿತ. ಇಲ್ಲಿ ಇತರ ದಾಸರಿಗಿಂತ ಅವರು ಬೇರೆಯಲ್ಲ.

ನೀತಿಸಂಹಿತೆ ಧರ್ಮದ ಒಂದು ಮುಖ. ಈ ದೃಷ್ಟಿಯಿಂದ ಕನಕದಾಸರು ಸಮಾಜಕ್ಕೆ ಭಕ್ತಿ ವೈರಾಗ್ಯ ಸದಾಚಾರಗಳನ್ನು ಬೋಧಿಸಿದ್ದಾರೆ. ಇನ್ನೊಂದು ಕಡೆ ಸಮಾಜ ವಿಮರ್ಶೆ, ವಿಡಂಬನಗಳಲ್ಲೂ ತೊಡಗಿದ್ದಾರೆ. ಧರ್ಮದ ಹೆಸರಿನಲ್ಲಿ ಬೇರು ಬಿಟ್ಟಿರುವ ಅನಿಷ್ಟ ಅಂಧಶ್ರದ್ಧೆಗಳನ್ನು ಅವರು ಉಗ್ರವಾಗಿ ಖಂಡಿಸುತ್ತಾರೆ. ಈ ದಿಸೆಯಲ್ಲಿ ಮುಖ್ಯವಾದದ್ದು ಜಾತಿ, ಕುಲಗಳ ನಿರಸನ.

ಕುಲ ಕುಲ ಕುಲವೆನ್ನುತಿಹರು
ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ?

"ಆತ್ಮ ಯಾವ ಕುಲ ಜೀವ ಯಾವ ಕುಲ ?" ಎಂಬುದು ಕನಕದಾಸರ ಪ್ರಶ್ನೆ.

ಇಲ್ಲಿ ವಿದ್ವಾಂಸರೊಬ್ಬರ ಹೇಳಿಕೆ ಗಮನಾರ್ಹ : "ಕನಕದಾಸರು ಪರಮ ಭಗವದ್ಭಕ್ತರಾದ್ದರಿಂದ ಅವರಿಗೆ ಶಾಸ್ತ್ರದಲ್ಲಿ ಹೇಳಿದ ವರ್ಣಾಶ್ರಮ ವಿಭಾಗಗಳಲ್ಲಿ ಬಲವಾದ ಶ್ರದ್ಧೆಯಿತ್ತು." ಇದು ಹಾಸ್ಯಾಸ್ಪದವೆನ್ನಬೇಕು. ಭಗವದ್ಭಕ್ತಿಗೂ

ವರ್ಣಾಶ್ರಮ ವ್ಯವಸ್ಥೆಗೂ ಎಲ್ಲಿಯ ಸಂಬಂಧ?

ಕನಕದಾಸರ ಸಾರ್ವಕಾಲಿಕ ಸಂದೇಶವೊಂದನ್ನು ನೆನೆಯದಿದ್ದರೆ ಈ ಸಮೀಕ್ಷೆ ಅಪೂರ್ಣವಾದೀತು. ಅವರ ಅನನ್ಯ ದೈವಶರಣಾಗತಿಯ ನೆಲೆಯಿಂದ ಹೊಮ್ಮಿದ್ದು ಈ ಅಮೋಘ ಸಂದೇಶ :

ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವೆ ?
ಬೆಟ್ಟದಾ ತುದಿಯಲ್ಲಿ ಹುಟ್ಟಿರುವ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ ? ॥

ಕೆಲವರು ಭಾವಿಸುವಂತೆ ಇದು ನಿಷ್ಕ್ರಿಯತೆಯನ್ನು ಉಪದೇಶಿಸುವುದಿಲ್ಲ; ಪುರುಷ ಪ್ರಯತ್ನವನ್ನು ನಿರಾಕರಿಸುವುದಿಲ್ಲ. ಬೆಟ್ಟದ ತುದಿಯ ವೃಕ್ಷ ಕ್ರಿಯಾಶೂನ್ಯವಾಗಿರುವುದಿಲ್ಲ ; ಬಂಡೆಗಳ ನಡುವೆಯೂ ಬೇರುಗಳನ್ನಿಳಿಸಿ ನೀರನ್ನು ಹೀರಿಕೊಳ್ಳುತ್ತಲೆ ಇರುತ್ತದೆ. ಪ್ರಯತ್ನವನ್ನು ತೊರೆಯದೆ ಪರಮಾತ್ಮನಲ್ಲಿ ವಿಶ್ವಾಸವಿಟ್ಟಿದ್ದರೆ ಕಳವಳಕ್ಕೆ ಆಸ್ಪದವಿಲ್ಲವೆಂದು ದಾಸರ ಅಭಿಮತ.

ಹಿಂದೆಯೆ ನೋಡಿದಂತೆ ಕನಕದಾಸರಲ್ಲಿ ಕೆಲವು ಮಿತಿಗಳಿವೆ ; ದ್ವಂದ್ವಗಳಿವೆ.[೧] ಆದರೆ ಅವು ಅವರ ವೈಯಕ್ತಿಕ ಸಿದ್ಧಿಯ ಔನ್ನತ್ಯಕ್ಕೆ ಭಂಗ ತರುವಷ್ಟು ದೊಡ್ಡ ವಲ್ಲ.[೨] ಆದರೂ ಈ ವಿಸಂಗತಿಗಳೇಕೆ ಎಂಬ ಪ್ರಶ್ನೆ ಅನಿವಾರ್ಯ. ಕನಕದಾಸರನ್ನು ಎಲ್ಲೋ ಒಂದು ಕಡೆ ತಾವು ದೀಕ್ಷೆಗೊಂಡಿದ್ದ ಮಾಧ್ವಮತದ ಗುರುತ್ವಾಕರ್ಷಣಶಕ್ತಿ ಅವರಿಗರಿವಿಲ್ಲದಂತೆಯೆ ಜಗ್ಗುತ್ತಿರುವ ಹಾಗೆ ತೋರುತ್ತದೆ. ಆದ್ದರಿಂದ ಅವರಲ್ಲಿ ಮಿತಿಗಳಿದ್ದರೆ ಅವು ಮತ ವಿಧಿಸಿದ ಮಿತಿಗಳು ಎನ್ನಬೇಕಷ್ಟೆ. ಹಾಗೆ ನೋಡಿದರೆ, ವಚನ ಸಾಹಿತ್ಯದ ಧೀರ ವೈಜ್ಞಾನಿಕ ಭಂಗಿ, ಸಮಗ್ರ ಕ್ರಾಂತಿಕಾರಿ ಧೋರಣೆ ದಾಸಸಾಹಿತ್ಯದಲ್ಲಿ ನಮಗೆ ಕಾಣದೊರೆಯುವುದಿಲ್ಲ ಎಂಬುದು ಸ್ಪಷ್ಟ. ಇದಕ್ಕೆ ಆಯಾ ಸಾಹಿತ್ಯದ ತಾತ್ವಿಕ ಹಿನ್ನೆಲೆಯ ಭಿನ್ನತೆ

---

೧. ಕನಕದಾಸರ ಕೀರ್ತನೆಗಳಲ್ಲಿ ಪಾಠಸಮಸ್ಯೆಗಳಿರಬಹುದು. ಕಲಿಕಾಲದಲ್ಲಿ ಜಾತಿ, ನೀತಿಗಳು ಹೋದುವೆಂದು ವಿಷಾದಿಸುವ. ಹರಿಹರಾಭೇದವನ್ನು ಟೀಕಿಸುವ ಒಂದೆರಡು ಕೀರ್ತನೆಗಳು ಕನಕದಾಸರವೆ ಹೌದೆ ಎಂಬುದು ಗ್ರಂಥಸಂಪಾದನೆಗೆ ಬಿಟ್ಟದ್ದು.

೨. ಇಲ್ಲಿ ಒಂದು ಊಹೆ : ಈ ದ್ವಂದ್ವಗಳಿಂದ ಪಾರಾಗುವುದಕ್ಕಾಗಿ, ಕೆಲವು ಸಂಗತಿಗಳನ್ನು ಬಹಿರಂಗವಾಗಿ ಹೇಳಲಾಗದ ಉಭಯಸಂಕಟದ ನಿವಾರಣೆಗಾಗಿ, ಅವರು ಮೇಲುನೋಟಕ್ಕೆ ತಮಾಷೆ ಎನಿಸುವ, ಆದರೆ ಪ್ರಖರ ಸಾಮಾಜಿಕ ಪ್ರಜ್ಞೆಯನ್ನು ಹೊಟ್ಟೆಯಲ್ಲಿಟ್ಟುಕೊಂಡ 'ರಾಮಧಾನ್ಯಚರಿತ್ರೆ'ಯಂಥ ಸಾಂಕೇತಿಕ ಕಾವ್ಯವನ್ನು ರಚಿಸಿ ನೆಮ್ಮದಿಪಟ್ಟುಕೊಂಡಿರಬಹುದೆ?

ಕಾರಣವಿರಬಹುದು. ಏನೇ ಇರಲಿ, ಕಡೆಯದಾಗಿ ಇಷ್ಟು ಹೇಳಬಹುದು : ಒಂದೆಡೆ ಪುರಂದರದಾಸರನ್ನು ಕನಕದಾಸರು "ದಾಸರೆಂದರೆ ಪುರಂದರದಾಸರಯ್ಯಾ" ಎಂದು ಕೊಂಡಾಡಿದ್ದಾರೆ. ಇದು ಒಂದರ್ಥದಲ್ಲಿ ದಿಟ. ಇಂದು ನಾವು ಇನ್ನೊಂದರ್ಥದಲ್ಲಿ ಕನಕದಾಸರನ್ನು "ದಾಸರೆಂದರೆ ಕನಕದಾಸರಯ್ಯಾ !" ಎಂದು ಹೊಗಳಿದರೆ ತಪ್ಪಲ್ಲ.

# ಕನಕದಾಸರ ಸಂದೇಶ

ಡಾ. ಶ್ರೀಕಂಠ ಕೂಡಿಗೆ

೧

ವೈಯಕ್ತಿಕ ಜೀವನದ ಹತಾಶೆ ಹಲವು ಸಂತರನ್ನು ಜ್ಞಾನದ ಅನ್ವೇಷಕರನ್ನಾಗಿ ಮಾಡಿದ್ದು ಕುತೂಹಲಕರವಾದ ಸಂಗತಿ. ಗೌತಮ ಬುದ್ಧನಿಂದ ಹಿಡಿದು ಪುರಂದರದಾಸ, ಕನಕದಾಸ ಮುಂತಾದವರವರೆಗೆ ಇಂಥ ಪರಂಪರೆಯೊಂದು ಚಾಚಿಕೊಂಡಿದೆ. ಅಂತರಂಗದ ಆಧ್ಯಾತ್ಮಿಕ ಸೆಳೆತ ಮತ್ತು ಲೌಕಿಕದ ಸಾಮಾಜಿಕ ಅನಿಷ್ಟಗಳು ಇವರ ಮನಸ್ಸನ್ನು ಕ್ಷೋಭೆಗೊಳಿಸಿದಂತೆ ಕಾಣಿಸುತ್ತದೆ. ಕೆಲವು ಸಂತರು ಇಂಥ ತಲ್ಲಣಗಳನ್ನು ಪಾರಮಾರ್ಥಿಕತೆಗಷ್ಟೇ ಸೀಮಿತಗೊಳಿಸಿಕೊಂಡು ಮಾತನಾಡತೊಡಗಿದರೆ ಇನ್ನು ಕೆಲವರು ಅದನ್ನು ಸಮಾಜಾಭಿಮುಖವಾಗಿ ಹರಿಯಬಿಟ್ಟಿರುವುದು ವಿಶೇಷ. ವೈಯಕ್ತಿಕವೆನ್ನಿಸ ಬಹುದಾದ ಅಂತರಂಗದ ಬಿಕ್ಕಟ್ಟು ಮತ್ತು ಸಾಮಾಜಿಕ ಸ್ಪಂದನ ಸಂವೇದನೆಯ ಎರಡು ಕವಲುಗಳಿಗೆ ಕಾರಣವಾಗಿದೆ. ಜೊತೆಗೆ ಆಯಾಕಾಲದ ಧಾರ್ಮಿಕ–ರಾಜಕೀಯ ಸ್ಥಿತಿಗತಿಗಳೂ ಅವರ ಚಿಂತನೆಯ ಸ್ವರೂಪವನ್ನು ನಿರ್ದೇಶಿಸಿವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕನಕದಾಸರ ಕೃತಿಗಳಲ್ಲಿನ ಆಧ್ಯಾತ್ಮಿಕ ಹಾಗೂ ಸಾಮಾಜಿಕ ಸಂವೇದನೆಯ ಸ್ವರೂಪ ಸ್ಪಷ್ಟಪಡುತ್ತದೆ.

ದೇಹಬಲ ಮತ್ತು ದೈವಬಲಗಳ ವಿರುದ್ಧ ಸೆಳೆತಗಳಲ್ಲಿ ಅಂತಿಮವಾಗಿ ಕನಕದಾಸರು ಆಯ್ಕೆಮಾಡಿದ್ದು ಎರಡನೆಯದನ್ನೆ. ರಣರಂಗದಲ್ಲಿ ಜರ್ಜರಿತನಾಗಿ ಬಿದ್ದು ಕಾಳಗದ ಸೋಲಿನ ಅವಸ್ಥೆಯಲ್ಲಿ ಬದುಕುಳಿದದ್ದು ದೈವಬಲದ ಸಹಾಯದಿಂದಲೇ ಎಂಬ ನಂಬಿಕೆ. ಜೊತೆಗೆ ಕನಸ್ಸಿನಲ್ಲಿ ಕಾಣಿಸಿಕೊಂಡು 'ನನ್ನ ದಾಸನಾಗು' ಎಂದು ಕರೆಯುತ್ತಿದ್ದ ತಿರುಪತಿ ತಿಮ್ಮಪ್ಪನ ಆಕರ್ಷಣೆ. ಇದು ವ್ಯಕ್ತಿಯ ಜೀವನದಲ್ಲಿನ ಆಕಸ್ಮಿಕವಾದರೂ ಅಸಂಭವವಲ್ಲವೆನ್ನುವಂತೆ ಆತ್ಮಚರಿತಾತ್ಮಕ. ಈ ಬಗೆಯ ಮಾನಸಿಕ ಸ್ಥಿತಿಯ ಬಗ್ಗೆ ಕನಕದಾಸರಿಗೆ ಸಹಜವಾಗಿಯೇ ಸಾರ್ಥಕ ಭಾವವಿದೆ.

"ದೊರೆತನ ಬಿಡಿಸಿ ಮಾರ್ಗವನೆ ತೋರಿ ಪರಿಪಾಲಿಸಿದೆನ್ನ–ಹರಿಯೆ"

"ವೀರರಾಹುತಬಲದ ಭಾರವನು ತರಿದಹಂಕಾರವನು ಮುರಿದೆ ಹರಿಯೆ"

"ನೀರು ಶುಕ್ತೆಯ ಸೇರಿ ತೋರ ಮುತ್ತಾದ ಪರಿ ಸೇರಿದೆನೊ ನಿನ್ನಂಘ್ರಿ–ಹರಿಯೆ "

....ಇತ್ಯಾದಿ ಕೀರ್ತನೆಯ ಸಾಲುಗಳಲ್ಲಿ ಕನಕನಾಯಕನಾಗಿದ್ದ ವ್ಯಕ್ತಿ ಕ್ರಮಕ್ರಮವಾಗಿ 'ದಾಸ'ನಾಗಿ ಮಾರ್ಪಟ್ಟ ರೀತಿಗೆ ಆಧಾರಗಳಿವೆ.

ಕನಕದಾಸರಲ್ಲಿ ಭಕ್ತಿ, ದೈವಶ್ರದ್ಧೆ, ಭೋಗನಿರಾಸಕ್ತಿ, ಸಂಸಾರ ನಿಸ್ಸಾರತೆಯ ಅರಿವು ಮುಂತಾದ ವ್ಯಕ್ತಿನಿಷ್ಠರಚನೆಗಳು ಒಂದು ಕಡೆಯಾದರೆ, ಸಮಾಜನಿಷ್ಠರಚನೆಗಳು ಮತ್ತೊಂದು ಕಡೆಗಿವೆ. ಆಧ್ಯಾತ್ಮ ಸೆಳೆತ ಹಾಗೂ ಸ್ವಾನುಭವದ ಸಾಮಾಜಿಕ ವಾಸ್ತವತೆಯ ಭೀಕರ ಚಿತ್ರ ಅವರ ರಚನೆಗಳಲ್ಲಿ ಅಂತರ್ಗತವಾಗಿವೆ. ಪಾರಮಾರ್ಥಿಕತೆ ಹಾಗೂ ವೈಚಾರಿಕತೆಗಳು ಪರಸ್ಪರ ವಿರುದ್ಧ ಪ್ರತಿಕ್ರಿಯೆಗಳಾದರೂ ಕನಕದಾಸ ಎದುರಿಸಿದ ವಿಶಿಷ್ಟ ಪರಿಸರ ಬದುಕಿನ ಬಗೆಯ ಸೀಳುನೋಟಕ್ಕೆ ದಾರಿಯಾಯಿತೆಂದು ತೋರುತ್ತದೆ. ಕವಿಯೊಬ್ಬ ಚಾರಿತ್ರಿಕ ಸಂದರ್ಭದಲ್ಲಿ ಕೃತಿರಚನೆ ಮಾಡಿದ್ದರೂ ಅಲ್ಲಿಯೇ ಅವನು ವಿರಮಿಸದೆ ಎಷ್ಟರಮಟ್ಟಿಗೆ ತನ್ನ ಕಾಲದಾಚೆಗೆ ದಾಟಿಬರುವವನಾಗಿದ್ದಾನೆ ಎನ್ನುವುದರ ಮೇಲೆ ಅರ್ಥಪೂರ್ಣತೆ ನಿರ್ಧಾರವಾಗುತ್ತದೆ. ಧಾರ್ಮಿಕ ಚೌಕಟ್ಟಿಗೆ ಗಂಟುಬಿದ್ದಿದ್ದರೂ ಎಷ್ಟರಮಟ್ಟಿಗೆ ಜೀವನರಹಸ್ಯವನ್ನು ಪರಿಶೋಧಿಸಿದ್ದಾರೆ, ಬದುಕಿನ ಮೂಲಭೂತ ಸಮಸ್ಯೆಗಳನ್ನು ಚರ್ಚಿಸಿದ್ದಾರೆ ಎನ್ನುವುದು ಮುಖ್ಯವಾಗುತ್ತದೆ. ಉಳಿದೆಲ್ಲ ದಾಸರಿಗಿಂತ ಪುರಂದರದಾಸ ಮತ್ತು ಕನಕದಾಸರು ಈ ದೃಷ್ಟಿಯಿಂದ ಬೇರೆಯಾಗಿಯೇ ನಿಲ್ಲುತ್ತಾರೆ. ಅವರ ಕೀರ್ತನೆ, ಕಾವ್ಯಗಳಲ್ಲಿ ಸಾಂಪ್ರದಾಯಕವಾದ ಹಾಗೂ ಕಾಲಬದ್ಧವಾದ ಸಂಗತಿಗಳಿರುವಂತೆ ಕಾಲಾತೀತವಾಗಿ ನಿಲ್ಲಬಹುದಾದ ಮೌಲ್ಯ, ಸಂದೇಶಗಳೂ ಸಿಗುತ್ತವೆ.

೨

ಎಲ್ಲ ಸಂತರೂ ನಂಬುವಂತೆ ಕನಕದಾಸರೂ ಭಗವಂತನ ಸರ್ವಾಂತರ್ಯಾಮಿತ್ವ, ಸರ್ವಶಕ್ತಗುಣದ ಬಗ್ಗೆ ಅಪಾರ ನಂಬಿಕೆ ಹೊಂದಿದ್ದಾರೆ. ಭಕ್ತನನ್ನು ಎಂಥ ಸಂಕಷ್ಟ ಕಾಲದಲ್ಲೂ ಕೈಬಿಡುವುದಿಲ್ಲ ಎಂಬ ವಿಶ್ವಾಸವನ್ನು ಸ್ವಾನುಭವದ ಹಿನ್ನೆಲೆಯಲ್ಲಿ ರೂಪಿಸಿಕೊಂಡಿದ್ದಾರೆ. ಇಂಥ ನಂಬಿಕೆಯ ಎರಕದಲ್ಲಿ ಅವರ ಕೀರ್ತನೆಗಳು ಮೈದಾಳುತ್ತವೆ. ಸಂದೇಶಗಳು ಹುಟ್ಟುತ್ತವೆ. ಕನಕದಾಸರೂ ಸೇರಿದಂತೆ ಎಲ್ಲ ದಾಸರು ತಮಗೂ ಭಗವಂತನಿಗೂ, ಭಗವಂತನಿಗೂ ಲೋಕಕ್ಕೂ ಇರುವ ಸಂಬಂಧವನ್ನು ಹಲವು ಸಾದೃಶಗಳಲ್ಲಿ, ಸಾಮತಿಗಳಲ್ಲಿ

ವರ್ಣಿಸಿದ್ದಾರೆ. ಭಗವದ್‌ಭಕ್ತಿಯ ಅನನ್ಯತೆ ಮತ್ತು ಪೌರಾಣಿಕ ಆಶೋತ್ತರಗಳನ್ನು ಪ್ರಶ್ನಿಸದೆ ಒಪ್ಪಿಕೊಂಡ ಸಂಪ್ರದಾಯಶೀಲತೆ ಇವರಲ್ಲಿ ಕಾಣಿಸುತ್ತದೆ. ಇಂಥ ಸಾಂಪ್ರದಾಯಿಕ ವಿಚಾರಸರಣಿ ವೈಚಾರಿಕ ನೆಲೆಯನ್ನು ಸ್ಪರ್ಶಿಸುವುದಿಲ್ಲ. ಬದಲಾಗಿ ನಂಬಿಕೆಯು ಲೋಕದಲ್ಲಿ ವಿರಮಿಸುತ್ತದೆ ಎನ್ನಬಹುದು.

ದೇವತಾಸ್ತುತಿ, ಭಗವಂತನ ಹಿರಿಮೆ, ಭಕ್ತರಕ್ಷಣೆಯಲ್ಲಿ ಅವನು ವಹಿಸಿದ ಪಾತ್ರ ಕನಕದಾಸರ ಕೀರ್ತನೆಗಳ ವಸ್ತು. ದಾಸದಾಸರ ಮನೆಯ ದಾಸಿಯರ ಮಗ ನಾನು" ಎಂಬ ಸರ್ವಸಮರ್ಪಣ ಭಾವ. "ಹರಿಮುಕುಂದನು ನೀನು ನರಜನ್ಮ ಹುಳು ನಾನು, ಪರಮಾತ್ಮನು ನೀನು ಪಾಮರನು ನಾನು" ಎಂಬ ಸ್ವಯಂನಿಂದನೆಯಲ್ಲಿನ ನೈಚ್ಯಾನುಸಂಧಾನ ಕಾಣಿಸುತ್ತದೆ. ಸಂಸಾರ ಜಂಜಡದಿಂದ ಕೂಡಿದೆ. ಅದರಲ್ಲಿ ಬೆರೆತೂ ಬೆರೆಯದಂತೆ ಗೇರುಹಣ್ಣಿನಲ್ಲಿರುವ ಬೀಜದಂತೆ ಇರಬೇಕು. ಸಂಸಾರ ಸಾಗರ ದಾಟಲು ಕಂಸಾರಿಯ ನಾಮಸ್ಮರಣೆಯೊಂದಿದ್ದರೆ ಸಾಕು, ಒಲಿಯುತ್ತಾನೆ. ಸಂಸಾರ ಶಾಶ್ವತವಲ್ಲ, ಅದು ನೀರಮೇಲಿನ ಗುಳ್ಳೆ. ಆದ್ದರಿಂದ ಸಂಸಾರದಲ್ಲಿರುವಷ್ಟು ದಿನ ಕೈಲಾದ ದಾನ ಧರ್ಮ ಮಾಡಬೇಕು. ಸಾವನ್ನು ಪ್ರತಿಯೊಬ್ಬರೂ ಒಂಟಿಯಾಗಿಯೇ ಎದುರಿಸಬೇಕು. ಬಂಧು ಬಳಗ, ಪತ್ನಿ–ಪುತ್ರ ಯಾರಿದ್ದರೂ ಅವರು ಸಹಾಯಕ್ಕೆ ಬರುವುದಿಲ್ಲ. ಎಲ್ಲಾ ಕೆಲಸದ ಕಾರ್ಯಗಳನ್ನು 'ಕೃಷ್ಣಾರ್ಪಣ' ಎಂಬ ಧೋರಣೆಯಿಂದ ಮಾಡಿ ನೆಮ್ಮದಿಯಿಂದ ಬದುಕಬೇಕು. ಆದಿಕೇಶವನನ್ನು ನಂಬಿದರೆ ಮಾತ್ರ ಇಹ–ಪರ ಸುಖ. ಆದ್ದರಿಂದ "ಭಜಿಸಿ ಬದುಕೆಲೊ ಮನುಜ' ಎಂಬ ನಿಲುವು ಅವರದು. 'ತಲ್ಲಣಿಸದಿರು ಕಂಡ್ಯ ತಾಳು ಮನವೇ । ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ' ಎಂಬ ನಂಬಿಕೆಗೆ ತಕ್ಕುದಾದ ಯೋಗ್ಯ ಆಧಾರವನ್ನು ಅವರು ರೂಪಿಸಿದ್ದಾರೆ. ಬೆಟ್ಟದ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ ನೀರು ಎರೆದವರು, ಕಲ್ಲಿನೊಳಗೆ ಹುಟ್ಟಿ ಕೂಗುವ ಕಪ್ಪೆಗೆ ಆಹಾರವೀಯುವವರು ಯಾರೆಂದು ಪ್ರಶ್ನಿಸಿ ತಮ್ಮ ಹಾಗೂ ಕೇಳುಗರ ನಂಬಿಕೆಯನ್ನು ಸಾಧಾರವಾಗಿ ದೃಢಗೊಳಿಸಿದ್ದಾರೆ. 'ಆರು ಬಾಳಿದರೇನು? ಆರು ಬದುಕಿದರೇನು? ನಾರಾಯಣನ ಸ್ಮರಣೆ ನಮಗಿಲ್ಲದನಕ' ಎಂದು ಹಾಡುವುದರ ಮೂಲಕ ಭಗವಂತನ ಸ್ಮರಣೆಯಿಲ್ಲದ ಬದುಕು ವ್ಯರ್ಥವೆಂದು ಘಂಟಾಘೋಷವಾಗಿ ಸಾರಿದ್ದಾರೆ. ಜ್ಞಾನಸಾಧನೆ ಮಾಡಿ ದೈವಸಾಕ್ಷಾತ್ಕಾರದಾನಂದವನ್ನು ಪಡೆಯಬೇಕೆಂಬ ಹಂಬಲ ತೋರಿದ್ದಾರೆ. ಬದುಕಿಗಾಧಾರವಾದ ಸಮಸ್ತವೂ ಭಗವಂತನ ಸೃಷ್ಟಿ. ಮನುಷ್ಯ ಒಂದು ತೊಗಲುಗೊಂಬೆಯಂತೆ ; ದೇವರಿಂದ ಆಡಿಸಲ್ಪಡುವವನು. ಆದ್ದರಿಂದ ಲೋಕದ

ಸರ್ವವೂ ಭಗವದಾಧೀನ. 'ತನು ನಿನ್ನದು ಜೀವವು ನಿನ್ನದೊ । ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ.' ಪ್ರತಿವ್ಯಕ್ತಿಯ ಕರ್ಮ ಅವನನ್ನು ನಿಯಂತ್ರಿಸುತ್ತದೆ, 'ಬಡತನವು ಸಾಕೆಂದು ಸಿರಿತನವ ಬಯಸಿದರೆ । ಪಡೆದದ್ದು ಪೂರ್ವದಲಿ ಬೆನ್ನ ಬಿಡದು'. 'ಬರೆದ ಅಕ್ಷರವ ತೊಡೆಯಲಾಪೆಯಾ ರಂಗ' ಎಂದು ವಿಧಿ ಅಥವಾ ಹಣೆಬರಹಕ್ಕೆ ಕೈಚೆಲ್ಲುತ್ತಾರೆ. ಅಂತಿಮವಾಗಿ ವೈಕುಂಠ ದರ್ಶನವಾದಾಗ 'ಇಷ್ಟುದಿನ ಈ ವೈಕುಂಠ ದೂರವೆನ್ನುತ್ತಿದ್ದೆ । ಈಗ ಹತ್ತಿರವಾಯಿತಲ್ಲ' ಎಂಬ ಧನ್ಯತಾಭಾವ ಹುಟ್ಟುತ್ತದೆ.

ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಕೆಳಸ್ತರದಿಂದ ಬಂದ ಕನಕದಾಸರಿಗೆ ತಮ್ಮ ಪರಿಸರದಲ್ಲಿ ಜರುಗುತ್ತಿದ್ದ ಆರಾಧನೆ, ಕೀರ್ತನೆ, ಭಜನೆಗಳಲ್ಲಿ ಅವರ ಪೂರ್ವಾಶ್ರಮದ ಜಾನಪದ ಮನಸ್ಸು ಹಿಂದೆ ಸರಿಯುತ್ತಿದ್ದಿರಬೇಕು. ಕೆಲವೊಮ್ಮೆ ಆರೋಪಿತ ಶಿಷ್ಟಪ್ರಜ್ಞೆಯನ್ನು ಧಿಕ್ಕರಿಸಿ ಜಾನಪದ ಸಂಸ್ಕಾರ ಮುನ್ನುಗ್ಗಿ ಬಂದಿರುವುದಕ್ಕೆ ಅವರ ಕೀರ್ತನೆಗಳಲ್ಲಿಯೇ ಹಲವು ನಿದರ್ಶನಗಳು ಸಿಗುತ್ತವೆ. ಮನುಷ್ಯನ ಸರ್ವಕೇಡುಗಳಿಗೂ ಅಜ್ಞಾನವೇ ಮೂಲ ಎಂದರು ದಾಸರು. ಇದು ಎಲ್ಲಾ ಜ್ಞಾನಿಗಳು ಹೇಳಿದ್ದೆ, ಒಪ್ಪಬೇಕಾದದ್ದೆ, ಆದರೆ ಜನ್ಮಾಂತರ ಕರ್ಮವೂ ಇದನ್ನು ಹೊಂದಿಕೊಂಡಿರುತ್ತದೆ ಎಂಬುದು ಕನಕದಾಸರ ಅಭಿಮತ. ಇದನ್ನು ನಿವಾರಿಸಿಕೊಳ್ಳಲು ಶ್ರೀಹರಿಯ ದಾಸನಾಗುವುದೊಂದೆ ಸರಿಯಾದ ದಾರಿ–ಎನ್ನುವ ಸಂದೇಶ ಪುನರುಕ್ತವಾಗುವಷ್ಟರಮಟ್ಟಿಗೆ ಪದೇ ಪದೇ ಬರುತ್ತದೆ. ಧಾರ್ಮಿಕ ದೃಷ್ಟಿಕೋನದಿಂದ ಈ ಅಂಶ ಸತ್ಯವಿದ್ದಿರಬಹುದು. ವೈಚಾರಿಕವಾಗಿ ಆಲೋಚಿಸಿದರೆ ಈ ನಂಬಿಕೆಗೆ ಅರ್ಥವಿಲ್ಲ. ಆ ಕಾಲದ ಆಧ್ಯಾತ್ಮಿಕ ಸೆಳೆತದ ಪ್ರಭಾವ ಎಂಥದಿತ್ತೆಂಬುದು ಇದರಿಂದ ವೇದ್ಯವಾಗುತ್ತದೆ. ಕೀಳುಕುಲದ ಪ್ರತಿನಿಧಿಯಾಗಿ ಬಂದ ಕನಕದಾಸರೇನೊ ಆಧ್ಯಾತ್ಮಕ ನೌಕೆಯಲ್ಲಿ ಸಾಧನೆಯ ಗುರಿಮುಟ್ಟಿ ಸಾರ್ಥಕತೆಯನ್ನು ಪಡೆದುಕೊಂಡರು. ಆದರೆ ಇದೇ ಪರಿಸ್ಥಿತಿ ಕನಕದಾಸರು ಹುಟ್ಟಿಬಂದ ಕುಲದ ಎಲ್ಲರಿಗೂ ಸಾಧ್ಯವಾಗಲಿಲ್ಲ ಎಂಬುದನ್ನು ನೆನಪಿಸಿಕೊಂಡರೆ ಅವರ ಆಧ್ಯಾತ್ಮಕತೆಯ ಮಿತಿ ತಾನಾಗಿಯೇ ವೇದ್ಯವಾಗುತ್ತದೆ. ಇಂಥದೊಂದು ಕನಕದಾಸರ ಆಯ್ಕೆಯ ಗೊಂದಲ ರಾಮಾನುಜ ಮತ್ತು ಮಾಧ್ವ ತತ್ವಗಳಲ್ಲಿ ಕೆಲವು ಕಾಲ ತೂಗಾಡಿ ಅಂತಿಮವಾಗಿ ಸಮನ್ವಯ ಮಾರ್ಗದಲ್ಲಿ ಆಸಕ್ತವಾದಂತೆ ಕಾಣಿಸುತ್ತದೆ. ಕನಕದಾಸರ ಈ ದೈವ ಸಾರ್ವಭೌಮತ್ವ ಅವರ ಕಾಲದ ವೈಜ್ಞಾನಿಕ ಅರಿವಿನಿಂದ ನಿಯಂತ್ರಿತವಾದದ್ದೆಂದು

ಹೇಳಬಹುದು.

'ತರುಣಿಯಂಜದಿರಂದಿರು ವಿಧಿ
ಬರೆದ ಬರಹವಿದೆನುತ ವೃಕ್ಷದ
ತರಗೆಲೆಯ ಹಾಸಿನಲಿ ಮಲಗಿಸಿ ಸತಿಯನೀಕ್ಷಿಸುತ ।
ನರರತುಲ ಮಂಚದಲಿ ಪವಡಿಸಿ
ಪರಮಸುಖವಿಹ ಸತಿಗೆ ವಿಧಿಯಿದು
ಹರಹರಾಯೆನುತರಸ ಕಂಬನಿದುಂಬಿದನು ಮರುಗಿ ॥

(ನಳಚರಿತ್ರೆ. ೫-೧೫)

'ಬಡತನವು ಸಾಕೆಂದು ಸಿರಿತನವ ಬಯಸಿದರೆ । ಪಡೆದದ್ದು ಪೂರ್ವದಲಿ ಬೆನ್ನ ಬಿಡದು' ಎಂಬ ಕರ್ಮಸಿದ್ಧಾಂತ ಹಾಗೂ ಆ ವಿಧವಾದ ಕುಲದ ಸಾಮಾಜಿಕ ಪ್ರಜ್ಞೆಯಿಂದ ನಿಯಂತ್ರಿತವಾಗುತ್ತದೆ.

ನಳಚರಿತ್ರೆಯಂಥ ಪ್ರೇಮಕಥೆ ಪ್ರಧಾನವಾದ ಕಾವ್ಯದಲ್ಲಿಯೂ ದೈವಸ್ಮರಣೆ ತೆರೆಮರೆಗೆ ನಿಂತು ಸಂಕಷ್ಟದಲ್ಲಿದ್ದವರಿಗೆ ಸಮಾಧಾನವನ್ನು ನೀಡುತ್ತದೆಂಬ ನಂಬಿಕೆಯನ್ನು ಕಾವ್ಯಾತ್ಮಕವಾಗಿ ಬಿತ್ತರಿಸಲಾಗಿದೆ. ನಳನಿಗೆ ಅರಣ್ಯದಲ್ಲಿ ಕಾರ್ಕೋಟಕದ ಕಚ್ಚಿ ಅವನ ದೇಹ ವಿಕೃತವಾದಾಗ 'ಪನ್ನಗಾರಿಧ್ವಜನ ಕೃಪೆ ತನಗೆ ತಪ್ಪಿ'ತೆಂದು ಮರಗುವಂತೆ ಮಾಡುವಲ್ಲಿ ಈ ಧೋರಣೆ ಅಂತರ್ಗತವಾಗಿದೆ. ಜೊತೆಗೆ ಸಾಮಾಜಿಕವಾಗಿಯೂ ವ್ಯಕ್ತಿಯೊಬ್ಬನ ನೈತಿಕ ಪತನದಿಂದ (ಜೂಜು) ಇತರರೂ ದುಃಖ ಪರಂಪರೆಯನ್ನು ಹೇಗೆ ಅನುಭವಿಸಬೇಕಾಗುತ್ತದೆಂಬ ತತ್ವವನ್ನು ಎತ್ತಿಹಿಡಿಯಲಾಗಿದೆ. ನಳದಮಯಂತಿಯರ ಸಮಾಗಮ, ಶೀಲ ಪರಿಶುದ್ಧತೆಯ ಮೂಲಕ ಪ್ರೀತಿಯೇ ದಾಂಪತ್ಯದ ರಕ್ಷಾಕವಚವೆಂಬ ಅಮರ ಸಂದೇಶವನ್ನು ಎತ್ತಿ ಹಿಡಿದಿದ್ದಾರೆ. ದುರ್ವ್ಯಸನಗಳಿಂದ ಆಗುವ ಹಾನಿ, ವಿಧಿ ಹೂಡುವ ಆಟ, ಅದನ್ನು ದೈವರಕ್ಷಣೆಯ ಆಶ್ರಯದಲ್ಲಿ ಗೆದ್ದು ಬರಬಹುದೆಂಬ ಸಂದೇಶವನ್ನು ತಿಳಿಗನ್ನಡದ ಭಾಮಿನಿ ಷಟ್ಪದಿ ಕಾವ್ಯ 'ನಳಚರಿತ್ರೆ'ಯಲ್ಲಿ ಸಾರಿದ್ದಾರೆ.

ದಾಸಸಾಹಿತ್ಯದ ಸ್ಫೂರ್ತಿಯ ನೆಲೆ ವಚನಸಾಹಿತ್ಯವಾದರೂ, ವಚನ ಸಾಹಿತ್ಯಕ್ಕಿಂತ ಭಿನ್ನವಾದ ಹರಿ-ಹರ ಅಭೇದ ಕಲ್ಪನೆಯನ್ನು ಕನಕದಾಸರಲ್ಲಿ ಕಾಣುತ್ತೇವೆ. ಈ ಮನೋಭಾವಕ್ಕೆ ಆ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಒತ್ತಾಸೆಗಳು ಕಾರಣವಾಗಿರಬಹುದು. ಮಹಮದೀಯರ ದಾಳಿ ಹಾಗೂ ತನ್ನ ಉಳಿವಿಗಾಗಿ ರೂಪಿಸಿಕೊಳ್ಳಬೇಕಾಗಿದ್ದ ಸಂಘಟನೆ,

ಸರ್ವಧರ್ಮಸಮನ್ವಯ ದೃಷ್ಟಿ ಅಂದಿನ ವಿಜಯನಗರ ಸಾಮ್ರಾಜ್ಯದ ಹಿನ್ನೆಲೆಗಿತ್ತು. ಜೊತೆಗೆ ಕನಕದಾಸರ ಕೌಟುಂಬಿಕ ಪರಿಸರದಲ್ಲಿಯೇ ದೈವ ಸಮನ್ವಯದ ಮಾನಸಿಕ ಪರಿಸರ ರೂಪುಗೊಂಡಿದ್ದಿರಬೇಕು. ಮನೆತನದ ಶೈವಮೂಲವಾದ ಹಾಲುಮತ, ಪುತ್ರಪ್ರಾಪ್ತಿಯಾಗಲೆಂದು ಕನಕದಾಸನ ತಂದೆ ಆಶ್ರಯಿಸಿದ ತಿರುಪತಿ ತಿಮ್ಮಪ್ಪನ ವೈಷ್ಣವ ಮೂಲ ಭಕ್ತಿ ಪರಸ್ಪರ ಸಮನ್ವಯಗೊಂಡಿರಬೇಕು. ಮುಂದೆಯೂ ಕನಕದಾಸರು ರಾಮಾನುಜ ಹಾಗೂ ಮಾಧ್ವಮತದಿಂದ ಆಕರ್ಷಿತರಾದಾಗಲೂ ಶೈವಧರ್ಮದ ಬಗ್ಗೆ ತಾತ್ಸಾರ ತಾಳಲಿಲ್ಲ. ಯಾವ ಮತವನ್ನು ತಿರಸ್ಕರಿಸದೆ, ಯಾವ ದೇವರನ್ನು ಬಹಿಷ್ಕರಿಸದೆ ವಿಷ್ಣು, ಶಿವರಲ್ಲಿ ಭೇದವೆಣಿಸದ ಸಮನ್ವಯ ಪರಂಪರೆಯೊಂದನ್ನು ರೂಪಿಸಿಕೊಂಡು ಆತ್ಮಸಾಕ್ಷಾತ್ಕಾರ ಪಡೆದರು. ಅವರು ಬರೆದ 'ಹರಿಭಕ್ತಿಸಾರ' ಮತ್ತು 'ಮೋಹನ ತರಂಗಿಣಿ' ಕೃತಿಗಳಲ್ಲಿ ಶೈವ–ವೈಷ್ಣವ ಸಮನ್ವಯದ ಗುರಿಯನ್ನೇ ಪ್ರಧಾನ ಆಶಯವಾಗಿ ಹೊಂದಿವೆ ಎನ್ನಬಹುದು.

ಸಿರಿಯು ಕುಲಸತಿ ಸುತನು ಕಮಲಜ
ಹಿರಿಯ ಸೊಸೆ ಶಾರದೆ ಸಹೋದರಿ
ಗಿರಿಜೆ ಮೈದುನ ಶಂಕರನು ಸುರರೆಲ್ಲ ಕಿಂಕರರು
ನಿರುತ ಮಾಯೆಯು ದಾಸ ನಿಜಮಂ
ದಿರವಜಾಂಡವು ಜಂಗಮಸ್ಥಾ
ವರ ಕುಟುಂಬಿಗ ನೀನು ರಕ್ಷಿಸು ನಮ್ಮನನವರತ ॥
(ಹರಿಭಕ್ತಿಸಾರ, ಪದ್ಯ ೨೫)

ಹೆಚ್ಚಾಗಿ ನಮ್ಮ ಪ್ರಾಚೀನ ಧಾರ್ಮಿಕ ಕಾವ್ಯಗಳಲ್ಲಿ ಅನ್ಯಧರ್ಮವನ್ನು ಅವಹೇಳನ ಮಾಡುವ, ಕವಿ ತಾನು ಒಪ್ಪಿಕೊಂಡ ಧರ್ಮದ ಪರವಾಗಿ ನಿಂತು ಸಮರ್ಥಿಸುವ ಮನೋಭಾವನೆ ಹೆಚ್ಚಾಗಿ ಕಾಣಿಸುತ್ತದೆ. ಇದಕ್ಕೆ ಅಪವಾದವೆನ್ನುವಂತೆ ಕವಿ 'ಮೋಹನ ತರಂಗಿಣಿ'ಯಲ್ಲಿ ಹರಿಗೆ ತೋರುವ ಸರಿಸಮಾನ ಭಕ್ತಿಯನ್ನು ಹರನಿಗೂ ತೋರಿದ್ದಾರೆ. ಬಾಣಾಸುರನ ಶಿವಪೂಜೆಯ ಸಂದರ್ಭ ಈ ಮನೋಭಾವಕ್ಕೆ ಒಳ್ಳೆಯ ಆಧಾರವಾಗಿದೆ :

ಹಡೆದ ತಾಯಿಲ್ಲ ತಾಯುಳ್ಳೊಡೆ ತಲೆ ಹೀಗೆ
ಜಡೆಗಟ್ಟಿಕೊಂಡು ಮಾಸಿಹುದೆ
ಮಡದಿಯರೆಲ್ಲ ಮಂಡೆಯ ಹಿಕ್ಕನೊಡೆವರೆ
ನ್ನೊಡೆಯ ಕೋ ಎನುತೆ ನೀರೆರೆದ ॥

ವಿಸ್ತರಗೆಯ್ದು ನೋಡುವರೆ ಬ್ರಹ್ಮಾಂಡ ಸ
ಮಸ್ತ ನಿನ್ನೊಳಗಡಗಿಹುದು
ಪ್ರಸ್ತವಿದೇನು ಕಾರಣ ಸ್ವಾಮಿ ನೀನೆನ್ನ
ಹಸ್ತಾಬ್ಜದೊಳಗೆ ಮಂಡಿಸಿದೆ ॥

ಬಾಣಾಸುರನ ಶಿವವಾತ್ಸಲ್ಯ ನೋಡಿದರೆ ಹಾಗೂ ಅವನು ಪೂಜಿಸುವುದು ಸ್ಥಾವರಲಿಂಗವಲ್ಲ ; ಇಷ್ಟಲಿಂಗ ಎಂಬುದನ್ನು ಲಕ್ಷಿಸಿದರೆ ಕನಕದಾಸರ ಸಮನ್ವಯ ಸಂಸ್ಕಾರದ ಸ್ವರೂಪ ಸ್ಪಷ್ಟಪಡುತ್ತದೆ, ಕಾಮದಹನದ ಪ್ರಸಂಗ ಮತ್ತು ಹರಿಹರನ ನಡುವಿನ ಯುದ್ಧಚಿತ್ರಗಳಲ್ಲಿ ಇದೇ ಧೋರಣೆ ಕೆಲಸ ಮಾಡಿದೆ. ಅವೆರಡು ಸೇನೆಗಳ ನಡುವೆ ಯುದ್ಧ ನಡೆದರೂ ಯಾರೂ ಬೀಳುವುದಿಲ್ಲ, ಯಾರೂ ಸೋಲುವುದಿಲ್ಲ. ಹರಿ–ಹರರಿಬ್ಬರೂ ಸಮರಾಗಿಯೇ ಉಳಿಯುತ್ತಾರೆ. ಭಾರತದಂಥ ಧರ್ಮನಿರಪೇಕ್ಷ ಸಂಸ್ಕೃತಿಯಲ್ಲಿ ಕನಕದಾಸರಂಥವರ ಧರ್ಮಸಮನ್ವಯ ತತ್ವ ಹಾಗೂ ಸಂದೇಶ ಎಲ್ಲ ಕಾಲಕ್ಕೂ ಅನುಸರಣ ಯೋಗ್ಯವಾದುದೇ ಆಗಿದೆ.

ಕನಕದಾಸರನ್ನು ತೀವ್ರವಾಗಿ ಕಾಡಿದ್ದು ಕುಲ ಮತ್ತು ಅದರ ಹಿನ್ನೆಲೆಯ ಸಾಮಾಜಿಕ ಸಂಬಂಧಗಳು. ಸಮಾಜದ ಕೆಳಸ್ತರದಿಂದ ಬಂದ ಕನಕದಾಸರಿಗೆ ಕುಲದ ಮತ್ತು ಹುಟ್ಟಿನ ನೋವು ಒಂದು ಅಮೂರ್ತ ವಿಚಾರವಾಗಿರುವುದಕ್ಕಿಂತ ಹೆಚ್ಚಾಗಿ ಅದೊಂದು ಸಾಮಾಜಿಕ 'ತಲ್ಲಣ'ದ ವಿಷಯವಾಯಿತು. ಹುಟ್ಟಿನ ಕಾರಣಕ್ಕಾಗಿ ಹಲವರ ತಾತ್ಸಾರ, ಕುಚೋದ್ಯಗಳಿಗೆ ಮನನೊಂದ ಕನಕದಾಸರು

ಕುಲ ಕುಲವೆನ್ನುತಿಹರೊ
ಕುಲವಾವುದು ಸತ್ಯಸುಜನರಿಗೆ
.............................................
ಆತನೊಲಿದ ಮ್ಯಾಲೆ ಯಾತರ ಕುಲವಯ್ಯ ॥

ಎಂದು ಮಾರ್ಮಿಕವಾಗಿ ಹೇಳಿಕೊಂಡಿರುವುದು ಪರಿಚಿತವೇ ಆಗಿದೆ. ಕುಹಕಿಗಳು ಮತ್ತು ಮತಾಂಧರು ಅವರ ಜಾತಿಯನ್ನು ಪದೇ ಪದೇ ನೆನಪುಮಾಡಿಕೊಟ್ಟು ಪ್ರಶ್ನಿಸಿದಾಗೆಲ್ಲಾ ಅತ್ಯಂತ ನೋವಿನಿಂದ

ಯಾತರವನೆಂದುಸುರಲಿ । ಜಗ ।
ನ್ನಾಥ ಮಾಡಿದ ಒಂದು ನರರೂಪವಯ್ಯ ॥

ಎಂದು ಹೇಳುವುದರ ಮೂಲಕ ತಾನು ಇತರರಂತೆ 'ಮನುಷ್ಯಜಾತಿ' ಎಂಬ ಮಾನವೀಯ ಸಂದೇಶ ಸಾರಿದ್ದಾರೆ. 'ತೀರ್ಥವನು ಪಿಡಿದವರೆಲ್ಲ

ತಿರುನಾಮಧಾರಿಗಳೆ ! ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ" ಎಂಬ ಕೀರ್ತನೆಯಲ್ಲಿ ಬಾಹ್ಯಾಚರಣೆಯ ಭ್ರಮೆ, ಭಕ್ತಿಯ ಡಂಭಾಚಾರವನ್ನು ಬಯಲಿಗೆಳೆದಿದ್ದಾರೆ. ಹೊಲೆತನ, ಮಡಿ, ಎಂಜಲು ಮುಂತಾದ ರೂಢಿಗತ ಅಭಿಪ್ರಾಯಗಳನ್ನು ತಮ್ಮ ವೈಚಾರಿಕತೆಯ ಒರೆಗೆ ಹಚ್ಚಿದ್ದಾರೆ. ಮಾನವರೆಲ್ಲ ಪರಮಾತ್ಮನ ಅಂಶವೇ ಆಗಿರುವುದರಿಂದ ಅವರೆಲ್ಲಾ ಸಮಾನರೆಂದು ಉದ್ಘೋಷಿಸಿದ್ದಾರೆ. ಮನುಷ್ಯ ಬಹಿರಂಗದಲ್ಲಿ ಎಷ್ಟೇ ಉದಾರಿಯಾಗಿದ್ದರೂ ಆತ ತನ್ನ ಆಳದಲ್ಲೆಲ್ಲೊ ಸ್ವಾರ್ಥಿಯಾಗಿರುತ್ತಾನೆ. ಆ ಸ್ವಾರ್ಥವನ್ನು ಮೀರುವುದರಲ್ಲೇ ಮನುಷ್ಯನ ಉದ್ಧಾರದ ಹಾದಿ ಇದೆ ಎಂಬ ನಿತ್ಯಸತ್ಯವನ್ನು 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಮತ್ತು ಗೇಣು ಬಟ್ಟೆಗಾಗಿ ತುತ್ತು ಹಿಟ್ಟಿಗಾಗಿ' ಎಂಬ ಕೀರ್ತನೆಯಲ್ಲಿ ಎತ್ತಿ ಹಿಡಿದಿದ್ದಾರೆ.

'ಕಣಿಯ ಹೇಳಬಂದೆ ನಾನು' ಎಂಬ ಹಾಡಿನಲ್ಲಿ ಕ್ಷುದ್ರದೇವತೆಯ ಉಪಾಸನೆ, ಪ್ರಾಣಿಬಲಿ, ಶಾಸ್ತ್ರಶುಷ್ಕತೆಯನ್ನು ಪ್ರಶ್ನಿಸಿದ್ದಾರೆ. 'ಕ್ಷೀಣ ಶಾಸ್ತ್ರಾರ್ಥವ ಪರಿಗ್ರಹಿ' ಸುತೆ ಕುರಿಕೋಣಗಳ ತಲೆ ಚೆಂಡನಾಡಿ ಪ್ರಾಣಹತ್ಯವ ಮಾಳ್ಪುದಾವ ಸತ್ಕರ್ಮ. 'ಅಪುತ್ರಸ್ಯ ಗತಿರ್ನಾಸ್ತಿಃ' ಎಂಬ ಪಾರಂಪರಿಕೆಯ ನಂಬಿಕೆಯ ಔಚಿತ್ಯವನ್ನು ಪ್ರಶ್ನಿಸಿದ್ದಾರೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕನಕದಾಸರ ಸಾಮಾಜಿಕ ವಿಮರ್ಶೆ ಹೆಚ್ಚು ನಿಷ್ಠುರವೂ, ನೈತಿಕ ಧೈರ್ಯದಿಂದ ಕೂಡಿದ್ದಾಗಿದೆ.

ಭತ್ತ–ರಾಗಿಗಳ ಜಗಳದ ಸರಳಕಥೆಯನ್ನು ತುಳಿತಕ್ಕೊಳಗಾದ ಜನತೆಯ ಸಾಮಾಜಿಕ ಪ್ರತಿಭಟನೆಯ ಧ್ವನಿಯಾಗಿ ರೂಪಿಸಿರುವ ಹಿನ್ನೆಲೆಯನ್ನು ನೋಡಿದಾಗ ಕನಕದಾಸರ ಸಾಮಾಜಿಕ ಚಿಂತನೆಯ ಸ್ವರೂಪ ಸ್ಪಷ್ಟಪಡುತ್ತದೆ. ಕನಕದಾಸರ ಆತ್ಮ ಚರಿತ್ರಾತ್ಮಕ ಕೃತಿ ಹೇಗೊ ಹಾಗೆ, ವರ್ಗ ಹೋರಾಟವನ್ನು ವಿವರಿಸುವ ಕೃತಿಯೂ ಆಗಿದೆ. ಕೆಳಜಾತಿ–ಮೇಲುಜಾತಿ, ಬಡವ–ಶ್ರೀಮಂತ, ಕೆಳವರ್ಗದ, ಎಚ್ಚರ ಪ್ರತಿಭಟನೆಗೆ ಸಂಬಂಧಿಸಿದ ಈ ಕಾವ್ಯದಲ್ಲಿ ಪುರೋಗಾಮಿ ಮನಸ್ಸುಗಳು ಆಶ್ಚರ್ಯಪಡಬಹುದಾದ ಜಾತಿವಿನಾಶದ ಸ್ಫೋಟಕ ವಸ್ತುವನ್ನು ಕನಕದಾಸ ಅಡಗಿಸಿಟ್ಟಿದ್ದಾನೆ. ಸಮಾನತಾ ಸಮಾಜದ ಕನಸು ನನಸಾಗುವಿಕೆಯ ಮುಂಗಾಣ್ಕೆಯ ಈ ಕೃತಿ 'ರೂಪಕ' ರೀತಿಯಲ್ಲಿ ಪ್ರಕಟಗೊಂಡಿರುವ ತಂತ್ರ ಆಶ್ಚರ್ಯ ಹುಟ್ಟಿಸುತ್ತದೆ. ಅವಕಾಶಹೀನರ, ಜನಸಾಮಾನ್ಯರ ವಿಜಯದ ಧ್ವಜಪತಾಕೆ ಹೊತ್ತ ಈ ಕಾವ್ಯ ವಾಚ್ಯ ಶೈಲಿಯಲ್ಲಿ ಪ್ರಕಟಗೊಂಡಿದ್ದರೆ ಕನಕದಾಸ ಎದುರಿಸಬೇಕಾದ ಸಾಮಾಜಿಕ ಬಿಕ್ಕಟ್ಟಿನ ಸ್ವರೂಪವೇ ಬೇರೆಯಾಗುತ್ತಿತ್ತೆಂದು ತೋರುತ್ತದೆ. ಇದರ ಅರಿವಿದ್ದೊ ಏನೊ ಕವಿ 'ರೂಪಕ ಶೈಲಿ'ಯನ್ನು

ಆಶ್ರಯಿಸಿರಬೇಕೆಂದು ಊಹೆಮಾಡಲು ಸಾಧ್ಯವಿದೆ. ಒಟ್ಟಾರೆ ಜನ ಸಾಮಾನ್ಯರೂ ಬದುಕಬೇಕು, ಅವರೂ ಇತರರಂತೆ ಮೇಲೆ ಬರಬೇಕೆನ್ನುವ ಆರೋಗ್ಯಕರ ಜೀವನ ಸಂದೇಶವನ್ನು ಕನಕದಾಸ 'ರಾಮಧಾನ್ಯ ಚರಿತೆ'ಯ ಮೂಲಕ ನೀಡಿದ್ದಾರೆ ಎನ್ನಲಡ್ಡಿ ಇಲ್ಲ.

ಕನಕದಾಸರ ಪಾರಮಾರ್ಥಿಕ ಜೀವನಮೌಲ್ಯ ಹಾಗೂ ಸಂದೇಶಗಳ ಮಿತಿ ಏನೇ ಇರಲಿ. ಕಾಲ ದೇಶ ಪರಿಸರದ ಬದ್ಧತೆಯಲ್ಲೂ ಕಾಲಾತೀತವಾಗಿ ನಿಲ್ಲುವ ಜೀವನ ಸಂದೇಶಗಳನ್ನು, ಮೌಲ್ಯಗಳನ್ನು ನೀಡಿದ್ದಾರೆ.

# ಕನಕದಾಸರು : ಕೆಲವು ಚಿಂತನೆಗಳು

ಡಾ : ಜಿ. ಎಸ್. ಶಿವರುದ್ರಪ್ಪ

ಚರಿತ್ರೆಯ ಗತಿ ಯಾವಾಗಲೂ ಪ್ರಗತಿಗಾಮಿಯಾಗಿರುತ್ತದೆ ಎಂದು ಹೇಳಲು ಬಾರದು. ಸಾಂಪ್ರದಾಯಿಕವಾದ ಹಾದಿಯನ್ನು ತಿರಸ್ಕರಿಸಿ, ತನ್ನ ಕಾಲವನ್ನೂ ಮೀರಿ ಅದ್ಭುತವಾದ ಪ್ರಗತಿಪರ ಮನೋಧರ್ಮಕ್ಕೆ ಹೊರಳಿದ ಚರಿತ್ರೆ, ಇದಕ್ಕಿದ್ದ ಹಾಗೆ ಮತ್ತೆ ಹಿಮ್ಮರಳಿ ಸಂಪ್ರದಾಯಕ್ಕೇ ಜೋತುಬೀಳುವ ಸಂದರ್ಭಗಳೂ ಉಂಟು. ಕನ್ನಡ ಸಾಹಿತ್ಯ ಪರಂಪರೆಯ ಒಂದು ಹಂತದಲ್ಲಿ ಕಾಣಿಸಿಕೊಂಡ ವಚನ ಚಳುವಳಿ ಹಾಗೂ ಆನಂತರದ ಹರಿದಾಸ ಚಳುವಳಿ ಈ ಮಾತಿಗೆ ನಿದರ್ಶನವಾಗಿದೆ.

ವಚನ ಚಳುವಳಿಗಾಗಲಿ ಹರಿದಾಸ ಚಳುವಳಿಗಾಗಲೀ ಮೂಲ ಪ್ರೇರಣೆ ಒಂದೇ : ಅದು ಧರ್ಮಶ್ರದ್ಧೆ. ಹಾಗೂ ಅದರ ಅಂಗವಾದ ಭಕ್ತಿ. ಒಂದಕ್ಕೆ ಹರಭಕ್ತಿ ಮೂಲ ದ್ರವ್ಯವಾದರೆ ಇನ್ನೊಂದಕ್ಕೆ ಹರಿಭಕ್ತಿ. ಆದರೆ ವಚನಕಾರರಾಂದೋಲನ ಸಂಪ್ರದಾಯವನ್ನು ಪ್ರಶ್ನಿಸಿದಷ್ಟು, ಪ್ರತಿಭಟಿಸಿದಷ್ಟು ಮತ್ತು ವೈಚಾರಿಕವಾದಷ್ಟು, ದಿಟ್ಟತನವನ್ನು ಹರಿದಾಸ ಚಳುವಳಿ ತೋರಿಸಲಿಲ್ಲ. ವೈದಿಕ ಧರ್ಮದ ತಿರುಳಾದ ವರ್ಣಾಶ್ರಮ ಧರ್ಮವನ್ನು, ಪರಿಶುದ್ಧವಾದ ವಿಷ್ಣುಭಕ್ತಿಯ ತಳಹದಿಯ ಮೇಲೆ ನಿಲ್ಲಿಸಿದ ಮಧ್ವಾಚಾರ್ಯರ ಸಿದ್ಧಾಂತದ ಪ್ರತಿಪಾದನೆಯನ್ನು ಉದ್ದೇಶವಾಗಿ ಉಳ್ಳ ಈ ಹರಿದಾಸ ಚಳುವಳಿ 'ಭಕ್ತಿ'ಯ ಮೇಲೆ ಒತ್ತುಕೊಡುವ ಕಾರಣದಿಂದ, 'ವರ್ಣಾಶ್ರಮ ಧರ್ಮ'ದ ಚೌಕಟ್ಟಿನಲ್ಲಿಯೆ ಒಂದಷ್ಟು ಉದಾರತೆಯನ್ನು ತಂದಿತಾದರೂ, ತನಗಿಂತ ಹಿಂದಿನ ಶರಣ ಚಳವಳಿಯಂತೆ, ವರ್ಣಾಶ್ರಮ ಧರ್ಮದ ಕಲ್ಪನೆಯನ್ನೆ ಮುರಿದು, ವ್ಯಕ್ತಿವ್ಯಕ್ತಿಗಳ ನಡುವಣ ತಾರತಮ್ಯವನ್ನು ತಿರಸ್ಕರಿಸಿ ಸಮಾನತೆಯನ್ನು ಪ್ರತಿಪಾದಿಸುವಷ್ಟು ಪ್ರಗತಿಗಾಮಿಯಾಗಲಿಲ್ಲ. ಇಂಥ ಒಂದು ಸಂದರ್ಭದಲ್ಲಿ, ಬಹುಮಟ್ಟಿಗೆ ಪ್ರತಿಷ್ಠಿತ ಸಾಮಾಜಿಕ ವರ್ಗದವರಿಂದ ರೂಪುಗೊಂಡ ಈ ಆಂದೋಲನದಲ್ಲಿ, ಅಪ್ರತಿಷ್ಠಿತ ಸಾಮಾಜಿಕ ಸ್ತರದಿಂದ ಬಂದು ಸೇರಿಕೊಂಡ ಕನಕದಾಸರಂಥವರು, ಅಂದಿನ

ಇತರ ಪ್ರಮುಖ ಹರಿದಾಸರೊಂದಿಗೆ ಅಥವಾ ಕೀರ್ತನಕಾರರೊಂದಿಗೆ ಹೆಗಲೆಣೆಯಾಗಿ ನಿಂತದ್ದು ಒಂದು ಆಶ್ಚರ್ಯವೇ ಸರಿ. ಅಷ್ಟೇ ಅಲ್ಲ, ಈ ಪ್ರತಿಷ್ಠಿತರ ಆಂದೋಲನದ ನಡುವೆ, ಅಪ್ರತಿಷ್ಠಿತ ವರ್ಗದ ಈ ಭಕ್ತ ತನ್ನ ವ್ಯಕ್ತಿ ವಿಶಿಷ್ಟತೆಗಾಗಿ ಎದುರಿಸಬೇಕಾಗಿ ಬಂದ ಸವಾಲುಗಳೂ ಸಂಘರ್ಷಗಳೂ ಸ್ವಾರಸ್ಯವಾಗಿವೆ.

ಕನಕದಾಸರ ವಿಶಿಷ್ಟತೆ ಇರುವುದು ಅವರು ದಾಸರಲ್ಲಿ (ಕೀರ್ತನಕಾರರಲ್ಲಿ) ಕವಿಗಳು ಎಂಬ ಸಂಗತಿಯಲ್ಲಿ. ಇದೇ ದಾಸ ಪರಂಪರೆಯ ಇತರರಿಂದ ಅವರನ್ನು ಪ್ರತ್ಯೇಕಿಸುವ ಲಕ್ಷಣವಾಗಿದೆ. ಅವರು ತಮ್ಮ ಕೀರ್ತನೆಗಳ ಮೂಲಕ ಅಂದಿನ ಹರಿದಾಸ ಪರಂಪರೆಯಲ್ಲಿ ಸುಭದ್ರವಾದ ಸ್ಥಾನವನ್ನು ಗಳಿಸಿಕೊಂಡಂತೆಯೇ, ತಮ್ಮ ಕಾವ್ಯ ನಿರ್ಮಿತಿಯಿಂದ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೂ ವಿಶಿಷ್ಟವಾದ ಸ್ಥಾನವನ್ನು ಗಳಿಸಿಕೊಂಡಿದ್ದಾರೆ. ಎರಡನೆಯದಾಗಿ, ಕೀರ್ತನಕಾರರಾದ ಅವರು, ಆ ಸಂಪ್ರದಾಯದ ಇತರರಂತೆ ಕೇವಲ 'ಮಾಧ್ವಭಕ್ತಿ' ಹಾಗೂ 'ಸಿದ್ಧಾಂತ'ಗಳಿಗೆ ಕಟ್ಟುಬೀಳದೆ, ಒಂದು ಉದಾರವಾದೀ ಧಾರ್ಮಿಕ ನಿಲುವನ್ನು ಪ್ರಕಟಿಸುತ್ತಾರೆ. ತಾವು 'ಕುರುಬರು' ಎಂಬ ಬಗ್ಗೆ ಯಾವುದೇ ಕೀಳರಿಮೆ ಇಲ್ಲದೆ, ತಮ್ಮ ಭಕ್ತಿಯ ನಿಲುವನ್ನು–

> ನಾವು ಕುರುಬರು ನಮ್ಮ ದೇವರು ಬೀರಯ್ಯ
> ಕಾವ ನಮ್ಮಜ್ಜ ನರಕುರಿಯ ಹಿಂಡುಗಳ ॥

ಎಂಬಂಥ ರೂಪಕದಲ್ಲಿ ಹೇಳಬಲ್ಲವರಾಗಿದ್ದಾರೆ. ಭಕ್ತ ಭಗವಂತನ ಸಂಬಂಧವನ್ನು, ಕುರಿ ಕುರುಬ ರೂಪಕದಲ್ಲಿ ಹೇಳುವುದು ಕನಕದಾಸರಂಥವರಿಗೆ ಮಾತ್ರ ಸಾಧ್ಯ : ಈ ಬಗೆಯ ಅವೈದಿಕ ಪರಂಪರೆಯ ಪ್ರತೀಕಗಳನ್ನು ಬೇರೆಯವರು ಕೊಡಲಾರರು. ವೈದಿಕ ಸಂಪ್ರದಾಯದ ಕೀರ್ತನಕಾರರ ಅಭಿವ್ಯಕ್ತಿ ಏನಿದ್ದರೂ 'ಗೋವು' 'ಗೋಪಾಲಕ'ನ ರೂಪಕದ ಮೂಲಕ ಸಾಧ್ಯ. ಕನಕದಾಸರು, ಈ ಕೀರ್ತನೆಯಲ್ಲಿ ಈ ರೂಪಕವನ್ನು ವಿಸ್ತರಿಸುವ ಕ್ರಮವೂ ತುಂಬ ಸ್ವಾರಸ್ಯವಾಗಿದೆ ; ಅವರ ಶೂದ್ರತ್ವಕ್ಕೆ ಸಾಕ್ಷಿಯಾಗಿದೆ. ಹಾಗೆಯೇ 'ದೇವೀ ನಮ್ಮ ದ್ಯಾವರು ಬಂದರು ಬನ್ನಿರೇ ನೋಡಬನ್ನಿರೇ' ಎಂಬ ಧಾಟಿಯ ಮತ್ತು ಗ್ರಾಮ್ಯ ಭಾಷೆಯಲ್ಲಿ ಅವರು ಬರೆದ ಇನ್ನೂ ಹಲವು ಕೀರ್ತನೆಗಳನ್ನು ನೋಡಿದಾಗ ಮತ್ತು ರಾಮಧಾನ್ಯ ಚರಿತೆಯ ವಸ್ತು ನಿರ್ವಹಣೆಯನ್ನು ಗಮನಿಸಿದಾಗ, ಕನಕದಾಸರು ಅಂದಿನ ಅಪ್ರತಿಷ್ಠಿತ ಸಾಮಾಜಿಕ ಸ್ತರದಿಂದ ಬಂದ ಏಕೈಕ ಕೀರ್ತನಕಾರರು ಎಂಬುದು ಖಚಿತವಾಗುತ್ತದೆ.

ಇದರಿಂದಾಗಿ ಅವರು ವೈಚಾರಿಕವಾಗಿ ಹಾಗೂ ಸಾಮಾಜಿಕವಾಗಿ ಎದುರಿಸಬೇಕಾಗಿ ಬಂದ ಬಿಕ್ಕಟ್ಟುಗಳು ಹಾಗೂ ಸಂಘರ್ಷಗಳು ಕಡಿಮೆಯೇನಲ್ಲ. ಇವು ಅವರ ಕೀರ್ತನೆಗಳಲ್ಲಿ ಮತ್ತು ಅವರನ್ನು ಕುರಿತ ಐತಿಹ್ಯಗಳಲ್ಲಿ ಕಾಣಿಸಿಕೊಂಡಿವೆ. ಒಂದೆಡೆ

ಕನಕದಾಸನ ಮೇಲೆ ದಯಮಾಡಲು ವ್ಯಾಸ
ಮುನಿ ಮಠಿಕರೆಲ್ಲ ದೂರುತಿಹರೋ ॥

ಎಂಬ ಪುರಂದರದಾಸರ ಕೀರ್ತನೆಯು ದಾಖಲೆಯಲ್ಲಿ ಗುರುವ್ಯಾಸರಾಯರು 'ಶೂದ್ರ' ಎಂದು ಕನಕದಾಸರ ಮೇಲೆ ವಿಶೇಷ ಪ್ರೀತಿ ತೋರಿಸಿದ ಕಾರಣದಿಂದ, ಅಂದಿನ ಸಂಪ್ರದಾಯಸ್ಥ ಬ್ರಾಹ್ಮಣರು ತೋರಿದ ಪ್ರತಿಕ್ರಿಯೆಯ ಚಿತ್ರವೊಂದು ಬಿಚ್ಚಿಕೊಳ್ಳುತ್ತದೆ. ಇಂಥ ಸಂದರ್ಭದಲ್ಲಿಯೇ

ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರು ಬಲ್ಲಿರಾ ? ॥
ಆತ್ಮಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ ॥
ಆತ್ಮಾಂತರಾತ್ಮ ನೆಲೆಯಾದಿ ಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ ? ॥

ಎಂದು ಪ್ರಶ್ನೆ ಮಾಡುವುದರ ಮೂಲಕ ತಮ್ಮ ಪ್ರತಿಭಟನೆಯನ್ನು ದಾಖಲು ಮಾಡುತ್ತ, ತಮ್ಮ ವ್ಯಕ್ತಿತ್ವದ ಪರಿಚಯ ಮಾಡಿಕೊಡುತ್ತಾರೆ.

ಅವರ ಬಗ್ಗೆ ಪ್ರಚಲಿತವಾದ ಒಂದೆರಡು ದಂತಕತೆಗಳು ಅವರು ಏರಿದ ಎತ್ತರವನ್ನು ಸೂಚಿಸುತ್ತವೆ. ಬಾಳೆಯ ಹಣ್ಣನ್ನು ಯಾರೂ ಇಲ್ಲದೆಡೆ ತಿಂದು ಬನ್ನಿ ಎಂದು ಗುರುಗಳು ತಮ್ಮ ಶಿಷ್ಯರಿಗೆ ಹೇಳಿದಾಗ, ಆ ಹಣ್ಣನ್ನು ತಿನ್ನದೆ ತಮ್ಮ ಮುಂದೆ ಬಂದ ಶಿಷ್ಯ ಕನಕದಾಸನ ತಿಳಿವಳಿಕೆಯನ್ನು ಗುರು ವ್ಯಾಸರಾಯರು ಮೆಚ್ಚಿಕೊಂಡದ್ದಾಗಲಿ, ಯಾರು ಮೊದಲು ವೈಕುಂಠಕ್ಕೆ ಹೋಗಬಲ್ಲರು ಎಂದು ಕನಕದಾಸನನ್ನು ಗುರುಗಳು ಪ್ರಶ್ನಿಸಿದಾಗ 'ನಾನು ಹೋದರೆ ಹೋಗಬಹುದು' ಎಂಬ ಉತ್ತರದ ಮೂಲಕ ಕನಕದಾಸರು ಸೂಚಿಸಿದ ಅಹಂ ನಿರಸನದ ಸಂಗತಿಯಾಗಲಿ ಕನಕದಾಸರ ತತ್ವಜ್ಞಾನಕ್ಕೆ ಸಾಕ್ಷಿಯಾಗಿವೆ. ಉಡುಪಿಯ 'ಕನಕನ ಕಿಂಡಿ'ಯ ಪ್ರಸಂಗವಂತೂ, ಸಾಮಾಜಿಕವಾಗಿ ಅಂದಿನ ಪ್ರತಿಷ್ಠಿತ ವರ್ಗದವರ ಧೋರಣೆಗೆ ಅರ್ಥವತ್ತಾದ ಒಂದು ಪ್ರತೀಕವಾಗಿದೆ. ವಚನ ಚಳುವಳಿಯ ಸಂದರ್ಭದಲ್ಲಿ ಈ ಬಗೆಯ

ಧೋರಣೆಯನ್ನು ಪ್ರತಿಭಟಿಸಲೆಂದೇ, ಶರಣರು ದೇವಸ್ಥಾನಗಳನ್ನು ನಿರಾಕರಿಸಿದರು ಮತ್ತು ಕನಕದಾಸರಂಥವರು, ವಚನಕಾರರ ಚಳುವಳಿಯ ಸಂದರ್ಭದಲ್ಲಿ ಬದುಕಿದ್ದರೆ, ಈ ಬಗೆಯ ಪ್ರಸಂಗಗಳೆ ಉದ್ಭವಿಸುತ್ತಿರಲಿಲ್ಲವೆಂಬ ಸಂಗತಿಯನ್ನು ನೆನೆದರೆ, ಈ ಎರಡು ಕಾಲಮಾನಗಳ ನಡುವಣ ವ್ಯತ್ಯಾಸದ ಸ್ವರೂಪ ಸ್ವಯಂ ಸ್ಪಷ್ಟವಾಗುತ್ತದೆ.

ಇಂಥ ಪರಿಸರದ ನಡುವೆಯೂ ಕನಕದಾಸರು ತಮ್ಮ ದಾರಿಯನ್ನು ತಾವೇ ಕಂಡುಕೊಂಡವರು. ಒಂದು ಕೀರ್ತನೆಯಲ್ಲಿ –:

ಎಲ್ಲಾರು ಮಾಡುವುದು ಹೊಟ್ಟೆಗಾಗಿ
ಗೇಣು ಬಟ್ಟೆಗಾಗಿ–ತುತ್ತು ಹಿಟ್ಟಿಗಾಗಿ

ಎಂದು ಲೋಕಜೀವನವನ್ನು ವಾಖ್ಯಾನ ಮಾಡುತ್ತಾ, ಅದೇ ಕೀರ್ತನೆಯ ಕೊನೆಯ ಚರಣಗಳಲ್ಲಿ–

ಉನ್ನತಕಾಗಿನೆಲೆಯಾದಿ ಕೇಶವನ ಧ್ಯಾನವನ್ನು
ಮನ ಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕ್ಕಾಗಿ

ಎನ್ನುತ್ತಾರೆ. ಈ ಕೀರ್ತನೆಯ ಮೊದಲ ಚರಣಗಳ ಮೂಲಕ ವಿವರಿತವಾಗುವ ಲೋಕ ಜೀವನ ಹಾಗೂ ಕೊನೆಯ ಚರಣಗಳ ಮೂಲಕ ಸೂಚಿತವಾಗುವ ಉದ್ದೇಶ, ಈ ಎರಡೂ ಮನುಷ್ಯನ ಅಸ್ತಿತ್ವದ ಅಂದರೆ 'ಇರುವ' ಹಾಗೂ ನಿಜವಾಗಿ 'ಇರಬೇಕಾದ' ಎರಡು ನೆಲೆಗಳನ್ನು ಹೆಸರಿಸುತ್ತದೆ.

ಮೊದಲ ನೆಲೆಯಿಂದ ಅಂದರೆ 'ಹೊಟ್ಟೆಗಾಗಿ', 'ಗೇಣು ಬಟ್ಟೆಗಾಗಿ' ಬದುಕುವ ಹಂತದಿಂದ 'ಮುಕ್ತಿಗಾಗಿ ಆನಂದಕ್ಕಾಗಿ' ಬದುಕುವ ಹಂತಕ್ಕೆ ಏರಬೇಕಾದರೆ ಇರುವ ಸಾಧನವೆಂದರೆ 'ಉನ್ನತ ಕಾಗಿನೆಲೆಯಾದಿ ಕೇಶವನ ಧಾನ್ಯವನ್ನು ಮನಮುಟ್ಟಿ' ಮಾಡುವ ಧರ್ಮಶ್ರದ್ಧೆ ಅಥವಾ ಶಕ್ತಿ. ಈ ನೆಲೆಯಲ್ಲಿಯೆ ವ್ಯಕ್ತಿ ಬೇರೊಂದು ಅಧಿದೈವಕ್ಕೆ ದಾಸನಾಗುತ್ತಾನೆ. ಹೀಗೆ ತನಗಿಂತ ದೊಡ್ಡದಾದ ದೈವಕ್ಕೆ 'ದಾಸ'ನಾಗುವುದು ಅಥವಾ ಶರಣಾಗುವುದೆಂದರೆ ವಾಸ್ತವವನ್ನು ಹಾಗೂ ವಾಸ್ತವದ 'ಅಧೀನತೆ'ಗಳನ್ನು ಮೀರುವುದು. ಈ 'ಅಧೀನತೆ'ಗಳನ್ನು ಮೀರುವುದರಿಂದ ಒದಗುವ ದಿಟ್ಟತನ, ಪ್ರತಿಭಟನೆಯ ಕೆಚ್ಚು, ಸಂಪ್ರದಾಯ ವಿರೋಧೀ ಧೋರಣೆಗಳು, ಸ್ವಾತ್ಮವಿಮರ್ಶೆ ಮತ್ತು ಲೋಕವಿಮರ್ಶೆ, ಸಾಮಾನ್ಯ ಜನದೊಂದಿಗೆ ಬೆರೆಯುವ ಹಾಗೂ ಅವರಿಗೆ ಅರ್ಥವಾಗುವ ಭಾಷೆಯ ಮೂಲಕ ಪರಮಾರ್ಥವನ್ನು ತಿಳಿಸುವ ಲಕ್ಷಣಗಳು ವ್ಯಕ್ತಿತ್ವದೊಳಕ್ಕೆ ಮೈಗೂಡಿಕೊಳ್ಳುತ್ತವೆ. ಅಂದಿನ ಭಕ್ತಿಪಂಥದ ಕೊಡುಗೆಯಾದ ಈ ಎಲ್ಲ ಲಕ್ಷಣಗಳೂ ಕನಕದಾಸರ ವ್ಯಕ್ತಿತ್ವದಲ್ಲಿ ಮೇಳವಿಸಿವೆ.

# ವ್ಯಾಸರಾಯರು, ಪುರಂದರದಾಸರು ಮತ್ತು ಕನಕದಾಸರು

**ಎನ್. ಶ್ರೀನಿವಾಸ ಉಡುಪ**

ಭಾರತೀಯರ ಸಾಂಸ್ಕೃತಿಕ ಬದುಕಿಗೆ ಭಕ್ತಿಯೇ ಬೆನ್ನೆಲುಬು. ಲೌಕಿಕ ಜೀವನದಲ್ಲಿ ಭಕ್ತಿಯೆಂಬುದು ವ್ಯಕ್ತಿಯ ಪಾಲಿಗೆ ಒಂದು ಕ್ಷೇಮಭಾವನೆಯನ್ನು ಒದಗಿಸುವ ಕೃಪಾರಕ್ಷೆ ; ಪಾರಲೌಕಿಕದೃಷ್ಟಿಯಲ್ಲಿ ಭಕ್ತಿ ಮನುಷ್ಯನನ್ನು ಭಗವಂತನ ಸಾನ್ನಿಧ್ಯಕ್ಕೆ ಕರೆದೊಯ್ಯುವ ಕರುಣಾಳು ಬೆಳಕು. ಭಕ್ತಿಯ ತುರೀಯ ಸ್ತರವನ್ನು ತಲುಪಿದ ಭಕ್ತ 'ತೃಪ್ತ'ನಾಗುತ್ತಾನೆ. 'ಸ್ತಬ್ಧ' ನಾಗುತ್ತಾನೆ. 'ಆತ್ಮಾರಾಮ' ನಾಗುತ್ತಾನೆ– ಎಂದು ನಾರದೀಯ ಭಕ್ತಿಸೂತ್ರ ಭಕ್ತಿಯನ್ನು ಕೀರ್ತಿಸುತ್ತದೆ. ಆದ್ದರಿಂದಲೇ ಭಾರತೀಯ ಸಂತರೆಲ್ಲರೂ ಭಕ್ತಿಕೀಲಿಯನ್ನು ಹಿಡಿದು, ಭಗವಂತನ ಎದೆಯ ಕದವನ್ನು ತೆರೆದು, ಅವನೊಂದಿಗೆ ಹೃದಯಸಂವಾದ ನಡೆಸಲು ಪ್ರಯತ್ನಿಸಿ ಸಫಲರಾದವರು. ಶ್ರವಣ, ಕೀರ್ತನ ಇತ್ಯಾದಿ ನವವಿಧ ಭಕ್ತಿಮಾರ್ಗಗಳನ್ನು ಭಾಗವತ ಪ್ರಸ್ತಾಪಿಸುತ್ತದೆ. ಬಂಗಾಳದಲ್ಲಿ ಒಂದು ಕಾಲದಲ್ಲಿ ಪ್ರಖರವಾಗಿ ಬೆಳಗಿದ ಚೈತನ್ಯಪಂಥ ಭಕ್ತಿಗೆ ರಸದ ಸ್ಥಾನವನ್ನೇ ಕಲ್ಪಿಸಿಕೊಟ್ಟಿತು. ಶಾಂತ, ದಾಸ್ಯ, ಸಖ್ಯ, ಮಧುರ ಮತ್ತು ವಾತ್ಸಲ್ಯಗಳೆಂಬ 'ಪಂಚಭಾವ'ಗಳಲ್ಲಿ ಭಕ್ತಿಯ ನೆಲೆಯನ್ನು ಕಂಡುಕೊಂಡ ಈ ಪಂಥದವರು ಮಧುರ ಭಾವವನ್ನೇ ಆರಿಸಿಕೊಂಡರು. ದಕ್ಷಿಣ ಭಾರತದಲ್ಲಿ ಸುಮಾರು ಹನ್ನೆರಡನೆಯ ಶತಮಾನದಲ್ಲಿ ಹಚ್ಚಲಾದ ಭಕ್ತಿಯ ಹಣತೆ ಕರ್ಣಾಟಕದ ಹರಿದಾಸರ ಕೈಯಲ್ಲಿ ಉಜ್ವಲವಾಗಿ ಬೆಳಗುವ ದೀವಿಗೆಯಾಯಿತು. ಇದರ ಬೆಳಕಿನಲ್ಲಿ ಹರಿದಾಸರು ತಮ್ಮ ಒಳಹೊರಗನ್ನು ಶೋಧಿಸಿಕೊಂಡರು ; ಸಮಾಜದ ಓರೆ–ಕೋರೆಗಳನ್ನೂ, ಅಶುಚಿ–ಅರಕೆಗಳನ್ನೂ ತೋರಿಸಿಕೊಟ್ಟರು ; ಎಲ್ಲಕ್ಕೂ ಮಿಗಿಲಾಗಿ ಲೌಕಿಕ ಜೀವನದಿಂದ ಪಾರಮಾರ್ಥಿಕ ಎತ್ತರಕ್ಕೇರುವ ದಾರಿಯನ್ನು ನಿರ್ದೇಶಿಸಿದರು. ಹೀಗೆ ಮಾಡುವಾಗ ಕನ್ನಡ ಸಾಹಿತ್ಯವಾಹಿನಿಗೆ ಭಕ್ತಿ ಸಾಹಿತ್ಯದ ಶಾಖೆಯೊಂದು ಕೀರ್ತನೆ, ಸುಳಾದಿ, ಉಗಾಭೋಗ ಮುಂತಾದ ಸುಂದರ ಸುಳಿಗಳೊಡನೆ ಬಂದು ಸೇರುವಂತೆ ಮಾಡಿದರು. ಪರಂಪರೆಯ ಪ್ರಕಾರ,

ವೇದೋಪನಿಷತ್ತುಗಳಲ್ಲಿನ ಗಹನ ತತ್ತ್ವಗಳನ್ನು ಸಾಮಾನ್ಯಜನರಿಗೆ ದೊರಕಿಸಿಕೊಡುವ ಸಲುವಾಗಿ ಶುಕಮುನಿಗಳು ಭಾಗವತವನ್ನು ರಚಿಸಿದರು. ಹೀಗೆಯೇ "ಜನಸಾಮಾನ್ಯರು ಭಕ್ತಿಯಿಂದ ಹಾಡಲು ಸಾಧ್ಯವಾಗುವಂತೆ, ತತ್ತ್ವವಿಚಾರಗಳನ್ನು ಅರಿಯುವಂತೆ, ಭಾಗವತ ಜೀವನದ ಹರ್ಷವನ್ನು ಸವಿಯುವಂತೆ" ಹರಿದಾಸರು ತಿಳಿಯಾದ ಕನ್ನಡದಲ್ಲಿ ಪದ ಪದ್ಯಗಳಲ್ಲಿ ರಚಿಸಿದರು. ಆಳ್ವಾರರು ಶ್ರೀ ರಾಮಾನುಜರ ವಿಶಿಷ್ಟಾದ್ವೈತ ತತ್ತ್ವವನ್ನು ತಮಿಳುನಾಡಿನ ಮನೆಮನೆಗಳಿಗೆ ಆಡುಮಾತಿನಲ್ಲಿ ತಲುಪಿಸಿದಂತೆ, ಕರ್ನಾಟಕದ ಹರಿದಾಸರು ಮಧ್ವಾಚಾರ್ಯರ ದ್ವೈತಸಿದ್ಧಾಂತವನ್ನು ಕನ್ನಡ ನಾಡಿನ ಮನೆಮನೆಗೆ ತಲುಪಿಸುವ ಪ್ರಯತ್ನ ಮಾಡಿದರು. ಹೀಗೆ ಮಾಡುವುದರ ಜೊತೆಗೇ, ಪಂಡಿತರ ಪಾಲಿಗೇ ಮಿಸಲಾಗಿದ್ದ ಸಾಹಿತ್ಯವನ್ನು–ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಮಾಡಿದಂತೆ ಸಾಮಾನ್ಯರ ಹತ್ತಿರಕ್ಕೆ ತರುವ ಕೆಲಸವನ್ನೂ ಮಾಡಿದರು.

* * *

ಕರ್ನಾಟಕದಲ್ಲಿ ಹರಿದಾಸ ಪರಂಪರೆ ಮಧ್ವಾಚಾರ್ಯರಿಂದಲೇ ಆರಂಭವಾಯಿತೆಂದು ನಂಬುವವರಿದ್ದಾರೆ. ಆದರೆ ಶ್ರೀಪಾದರಾಜರೇ ವಾಸ್ತವವಾಗಿ ಈ ಪರಂಪರೆಯ ಆದ್ಯಪ್ರವರ್ತಕರು ಎಂಬುದು ವಿದ್ವಾಂಸರ ಅಭಿಪ್ರಾಯ. ಶ್ರೀಪಾದರಾಜರ ಸಂನ್ಯಾಸಿ ಶಿಷ್ಯ ವ್ಯಾಸರಾಯರು ಹರಿದಾಸ ಪರಂಪರೆಗೆ ಕ್ರಿಯಾಪೂರ್ಣ ಚಾಲನೆ ಕೊಟ್ಟವರೆಂಬುದು ಐತಿಹಾಸಿಕ ಸತ್ಯ.

"ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।
ನಮಃ ಪುರಂದರರಾರ್ಯಾಯ ವಿಜಯಾರ್ಯಾಯ ತೇ ನಮಃ॥"

ಎಂಬ ಶ್ಲೋಕದಲ್ಲಿ ದಾಸಪರಂಪರೆಯ ದಿಗ್ಗಜಗಳಾದ ಶ್ರೀಪಾದರಾಜರು, ವ್ಯಾಸರಾಯರು, ಪುರಂದರದಾಸರು ಹಾಗೂ ವಿಜಯದಾಸರು ಹೆಸರುಗಳನ್ನು ಸೇರಿಸಲಾಗಿದೆ. ಶ್ರೀಪಾದರಾಜರಿಂದ ಹರಿದಾಸ ಪಂಥ ಬಲಗೊಳ್ಳಲು ನಿಜವಾದ ಪ್ರೇರಣೆ ದೊರಕಿತು. ಈ ಪಂಥದ ಚುಕ್ಕಾಣಿಯನ್ನು ಕೈಯಲ್ಲಿ ಹಿಡಿದು, ಅದನ್ನು ಸಮರ್ಥವಾಗಿ ಪ್ರವರ್ತಿಸಿದವರು ವ್ಯಾಸತೀರ್ಥರು ; ಅದಕ್ಕೊಂದು ಅಪೂರ್ವ ಜನಪ್ರಿಯತೆಯನ್ನು ಒದಗಿಸಿದವರು ಪುರಂದರದಾರು ; ಸ್ವಲ್ಪಕಾಲ ಗುಪ್ತಗಾಮಿನಿಯಾಗಿದ್ದ ಹರಿದಾಸವಾಹಿನಿಗೆ ಹೊಸ ತೇಜಸ್ಸನ್ನು ನೀಡಿ, ಪುನರುಜ್ಜೀವನಗೊಳಿಸಿದವರು ವಿಜಯದಾಸರು. ಹೀಗೆ ದಾಸವಾಙ್ಮಯ ವಿಕಾಸಕ್ಕೆ ಕಾರಣರಾದ 'ದಾಸ ಚತುಷ್ಟಯ'ದಲ್ಲಿ ವ್ಯಾಸತೀರ್ಥರದು ವಿಶಿಷ್ಟಸ್ಥಾನ.

ವ್ಯಾಸತೀರ್ಥರಲ್ಲಿ ಪಾಂಡಿತ್ಯದ ಜೊತೆಗೆ ಹರಿದಾಸರಲ್ಲಿರಬೇಕಾದ ಭಾವ ಶ್ರೀಮಂತಿಕೆಯೂ ಇತ್ತೆಂಬುದಕ್ಕೆ ಅವರ ಶಿಷ್ಯವಾತ್ಸಲ್ಯವೇ ಸಾಕ್ಷಿ. ಜನಸಾಮಾನ್ಯರೊಂದಿಗೆ ಬೆರೆಯಲೇಬೇಕಾದ ಅಗತ್ಯ ಅವರಿಗೇನೂ ಇರಲಿಲ್ಲ. ವಿಜಯನಗರ ಸಾಮ್ರಾಟ ಕೃಷ್ಣದೇವರಾಯನಿಗೆ ಗುರುವಾಗಿದ್ದು, ಅವನಿಂದ ಹಲವಾರು ಬಿರುದುಗಳನ್ನು ಪಡೆದವರು ವ್ಯಾಸರಾಯರು. ಧಾರ್ಮಿಕ ಪ್ರಪಂಚ, ಲೋಕವ್ಯವಹಾರ–ಈ ಎರಡರಲ್ಲೂ ಉಜ್ವಲ ಯಶಸ್ಸುಗಳಿಸಿದ ಸವ್ಯಸಾಚೀ ಶಕ್ತಿ ಅವರದ್ದು. ಆದರೂ ಅವರು ಕೀರ್ತಿಶನಿಯ ಕಾಟಕ್ಕೆ ಬಲಿಯಾಗಲಿಲ್ಲ ; ಪಾಂಡಿತ್ಯ–ಪ್ರಸಿದ್ಧಿಗಳ ಗೋಪುರದಲ್ಲಿ ಕುಳಿತುಕೊಂಡು, ನೆಲವನ್ನು ಮರೆತುಬಿಡುವ ಪ್ರವೃತ್ತಿ ಅವರದಾಗಿರಲಿಲ್ಲ. ಭಕ್ತಿ ಮಂದಾಕಿನಿಯನ್ನು ಶ್ರೀಸಾಮಾನ್ಯನ ಗುಡಿಸಿಲಿನವರೆಗೂ ತರಬೇಕೆಂಬ ಭಗೀರಥ ಪ್ರಜ್ಞೆ ಅವರದ್ದು, ಸ್ವತಃ ಯತಿಗಳಾದರೂ ಪರಂಪರೆಯ ಕುರುಡು ಹಿಡಿತದಿಂದ ಬಿಡಿಸಿಕೊಂಡು ಹೊರಬರುವುದರಲ್ಲಿ ಯಶಸ್ವಿಗಳಾದ ಕ್ರಾಂತಿಕಾರರು ವ್ಯಾಸರಾಯರೆಂದರೆ ತಪ್ಪಲ್ಲವೇನೋ. ಅವರಿಗೆ ವ್ಯಕ್ತಿಗಳ ಜಾತಿ, ಅಂತಸ್ತು ಮುಖ್ಯವಾಗಿರಲಿಲ್ಲ. ಯೋಗ್ಯತೆಗೇ ಅವರು ಮನ್ನಣೆ ನೀಡಿದರು. ಆದ್ದರಿಂದಲೇ "ಅವರು ವೈದಿಕರ ಆಡಂಬರ, ಕುಹಕಗಳಿಗೆ ಮಣಿಯದೆ, ಪಂಡಿತರೂ ವೈದಿಕರೂ ಅಲ್ಲದ ಪುರಂದರದಾಸರನ್ನು" ಶಿಷ್ಯರನ್ನಾಗಿ ಸ್ವೀಕರಿಸಿದರು. ಮಾತ್ರವಲ್ಲ, ಅವರ ಹಿರಿಮೆಯನ್ನು ಮುಕ್ತಮನಸ್ಸಿನಿಂದ ಕೊಂಡಾಡಿದರು. ಜಾತಿಯಲ್ಲಿ ಕುರುಬರಾಗಿದ್ದ ಕನಕದಾಸರ ಪ್ರತಿಭೆ, ವ್ಯಕ್ತಿತ್ವಗಳನ್ನು ಗುರುತಿಸಿ, ಅವರನ್ನು ತಮ್ಮ ಕರುಣೆಯ ಪರಿಧಿಯಲ್ಲಿ ಸೇರಿಸಿಕೊಂಡರು. ಗೊಡ್ಡು ಆಚಾರ, ಅರ್ಥಹೀನ ಮಡಿವಂತಿಕೆ ಇತ್ಯಾದಿಗಳಿಂದ ಜಡ್ಡುಗಟ್ಟಿದ್ದ ಅಂದಿನ ಸಮಾಜದಲ್ಲಿ ವ್ಯಾಸರಾಯರ ಈ ಸಾಹಸದ ಹಿಂದೆ ಅದೆಂಥ ಧೀಮಂತಿಕೆ, ಹೃದಯವಂತಿಕೆ, ದೂರದೃಷ್ಟಿ ಇದ್ದೀತೆಂದು ಊಹಿಸಿದರೆ ನಿಜಕ್ಕೂ ವಿಸ್ಮಯವಾಗುತ್ತದೆ.

ವ್ಯಾಸರಾಯರು ಸಂಸ್ಕೃತ ಕನ್ನಡ–ಎರಡೂ ಭಾಷೆಗಳಲ್ಲಿ ಗ್ರಂಥರಚನೆ ಮಾಡಿದ್ದರು. ನ್ಯಾಯಾಮೃತ, ತರ್ಕತಾಂಡವ, ತಾತ್ಪರ್ಯಚಂದ್ರಿಕಾ–ಮುಂತಾದ ಜಟಿಲವಾದ ಬ್ರಹ್ಮಸೂತ್ರವನ್ನು ತಿಳಿಗನ್ನಡದಲ್ಲಿ ಸಾಮಾನ್ಯನಿಗೂ ಅರ್ಥವಾಗುವಂತೆ ವಿವರಿಸಲು ಪ್ರಯತ್ನಿಸಿದರು. ಇದು ಅವರ ಸಾಹಸಪ್ರವೃತ್ತಿಯನ್ನಲ್ಲದೆ, ನಿಜವಾದ ಸಂನ್ಯಾಸಿಗಿರಬೇಕಾದ ಬಹುಜನ ಹಿತ, ಬಹುಜನ ಸುಖವನ್ನು ಕುರಿತಾದ ಕಳಕಳಿಯನ್ನೂ ತೋರಿಸುತ್ತದೆ. ಬ್ರಹ್ಮಸೂತ್ರದ ಮೊದಲನೇ ಸೂತ್ರವನ್ನು ಅವರು ಜಿಜ್ಞಾಸುವಿಗೆ ಜ್ಞಾನಕಾರಣ, ಜ್ಞಾನಿಗೆ ಅಪರೋಕ್ಷ ಕಾರಣ, ಅಪರೋಕ್ಷಿಗೆ

ಅಧಿಕಾನಂದ ಕಾರಣ, ಮುಕ್ತಿಗೆ ತಾನೇ ಫಲರೂಪ ಸಿರಿಕೃಷ್ಣನ ಪಾದಸೇವೆ, ಇದರ ತೂಕಕ್ಕೆ ಸಾಕೇ ಕೈವಲ್ಯ ?' ಎಂದು ವಿವರಿಸಿ, ಭಕ್ತಿಯ ಶ್ರೇಷ್ಠತೆಯನ್ನು ಸೂಚಿಸಿ, ದಾಸಪರಂಪರೆಗೆ ಸಮರ್ಥವಾದ ಬುನಾದಿಯನ್ನು ಒದಗಿಸಿಕೊಟ್ಟರು.

ಒಂದು ಅರ್ಥದಲ್ಲಿ, ವ್ಯಾಸರಾಯರು ಪಾಂಡಿತ್ಯ–ಭಕ್ತಿಗಳ ನಡುವಣ ಸಮನ್ವಯಕ್ಕಾಗಿ ಶ್ರಮಿಸಿದವರು. ಅವರ ಶಿಷ್ಯವರ್ಗದಲ್ಲಿ ವಿಜಯೀಂದ್ರ ತೀರ್ಥರು, ಗೋವಿಂದ ಒಡೆಯರು, ನಾರಾಯಣ ಯತಿಗಳು ಮೊದಲಾದ ಪ್ರಕಾಂಡ ಪಂಡಿತರಿದ್ದರು ; ಪುರಂದರದಾಸರು, ಕನಕದಾಸರು, ವೈಕುಂಠದಾಸರು ಮೊದಲಾದ ಹರಿದಾಸರೂ ಇದ್ದರು. 'ವ್ಯಾಸಕೂಟ' 'ದಾಸಕೂಟ'ಗಳೆನ್ನ ಬಹುದಾದ ಈ ಎರಡೂ ಗುಂಪುಗಳು ಪರಸ್ಪರ ಕಲೆತು ಜ್ಞಾನ ಮತ್ತು ಭಕ್ತಿಗಳ ಅರ್ಥಮಹತ್ವಗಳನ್ನು ವಿನಿಮಯ ಮಾಡಿಕೊಂಡು 'ಪೂರ್ಣಪ್ರಜ್ಞ' ರಾಗಲು ಅನುವು ಮಾಡಿಕೊಟ್ಟವರು ವ್ಯಾಸರಾಯರು. ಹೀಗಾಗಿ ಅವರ ಪ್ರಭಾವ ಪಂಡಿತಮೇಲೆ ಆದಷ್ಟೇ ತೀವ್ರವಾಗಿ, ಸಾಮಾನ್ಯರ ಪ್ರತಿನಿಧಿಗಳಾಗಿದ್ದ ದಾಸರ ಮೇಲೂ ಆಯಿತು. ಮುಖ್ಯವಾಗಿ ಪುರಂದರದಾಸ, ಕನಕದಾಸರ ಮೇಲೆ ವ್ಯಾಸರಾಯರು ಬೀರಿದ ಪ್ರಭಾವ ಹರಿದಾಸ ಸಾಹಿತ್ಯದ ಇತಿಹಾಸದಲ್ಲಿ ದಾಖಲಿಸಲೇಬೇಕಾದ ಸಂಗತಿ. ಪುರಂದರದಾಸರನ್ನು ಕುರಿತಾದ ಒಂದು ಪ್ರಸಿದ್ಧ ಕೀರ್ತನೆಯಲ್ಲಿ 'ದಾಸರೆಂದರೆ ಪುರಂದರದಾಸರಯ್ಯಾ ಎಂದು ನಿರ್ಮಾತ್ಸರ್ಯದಿಂದ, ಮುಕ್ತ ಮನಸ್ಸಿನಿಂದ ವ್ಯಾಸರಾಯರು ಹೊಗಳಿರುವುದು ಭಕ್ತಿಪಂಥಕ್ಕೆ ಅವರು ನೀಡಿದ ಮನ್ನಣೆಗೆ ಸಾಕ್ಷಿ. ಅವರ ಪ್ರಕಾರ ಪುರಂದರ ದಾಸರು ನಿಜವಾದ ದಾಸರು ; ಏಕೆಂದರೆ–

'ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ
ಮಾತುಮಾತಿಗೆ ಬಿಡದೆ ವರ್ಣಿಸುತಲಿ
ಗೀತನರ್ತನದಿ ಶ್ರೀಕೃಷ್ಣನ್ನ ಪೂಜಿಸುವ
ಪೂತಾತ್ಮದಾಸ ಪುರಂದರದಾಸರಯ್ಯಾ' ॥

ಹೀಗೆಂದು ಪುರಂದರದಾಸರ ಬಗೆಗಿನ ತಮ್ಮ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳುವುದರ ಜೊತೆಗೆ, ನಿಜವಾದ ಹರಿದಾಸರಿಗೆ ಇರಲೇಬೇಕಾದ ಗುಣಗಳ ಪಟ್ಟಿಯನ್ನೂ ಕೊಡುತ್ತಾರೆ ವ್ಯಾಸರಾಯರು. ನೀತಿಪ್ರಜ್ಞೆ, ತೀವ್ರಭಕ್ತಿ, ಗೀತ ನರ್ತನಗಳ ಮೂಲಕ ಭಗವಂತನ ಆರಾಧನೆ–ಇವೆಲ್ಲಕ್ಕೂ ಆಧಾರವಾಗಿರುವ ಆತ್ಮಪಾವಿತ್ರ್ಯತೆ ಇತ್ಯಾದಿ ಹರಿದಾಸರಾದವರಿಗೆ ಅಗತ್ಯವಾಗಿರಬೇಕಾದ ಗುಣಗಳನ್ನು ಕುರಿತು ಉಳಿದ ಹರಿದಾಸರ ಗಮನವನ್ನು

ಸೆಳೆಯುವುದೂ ಈ ಪ್ರಶಂಸೆಯ ಹಿಂದಿರುವ ಮತ್ತೊಂದು ಉದ್ದೇಶ, ಭಕ್ತಿಯ ಸೋಗು ಹಾಕಿ, ಜನಗಳನ್ನು ವಂಚಿಸುವಾತ ಹರಿದಾಸನಲ್ಲವೆಂದು ಅವರು ಪದೇಪದೇ ಸಾರುತ್ತಾರೆ–'ಗೂಟನಾಮವನಿಟ್ಟು, ಕೋವಿದನು ತಾನೆನುತ ಬೂಟಿಕೆಯ' ಮಾಡುವವವನೂ, 'ಅಂಬುಜೋದ್ಭವಪಿತನ ಆಗಮಗಳನರಿಯದೇ ತಂಬೂರಿ ಮೀಟಿದವನೂ', 'ಮಾಯಾ ಸಂಸಾರದಲ್ಲಿ ಮಮತೆ ಹೆಚ್ಚಾಗಿಟ್ಟು ಗಾಯನವ' ಮಾಡುವವನೂ ಹರಿದಾಸನಾಗಲು ಸಾಧ್ಯವೇ ಇಲ್ಲವೆಂದು ವ್ಯಾಸರಾಯರು ನಿಖರವಾಗಿ ಹೇಳುತ್ತಾರೆ ; ಮಾತ್ರವಲ್ಲ, ಅಂಥ ಆಷಾಢಭೂತಿಗಳನ್ನು ಸ್ಪಷ್ಟವಾಗಿ ಗುರುತಿಸಲು ಅನುಕೂಲವಾಗುವಂತೆ ಆದರ್ಶ ಹರಿದಾಸರಾದ ಪುರಂದರದಾಸರ ರಚನೆಗಳನ್ನು ಭಾರತೀಯ ದರ್ಶನದ ಕೆನೆಯಂತಿರುವ ಉಪನಿಷತ್ತುಗಳಿಗೆ ಸಮೀಕರಿಸಿ 'ಪುರಂದರೋಪನಿಷತ್' ಎಂದು ಕರೆದವರೂ ವ್ಯಾಸರಾಯರೇ.

ಪುರಂದರದಾಸರಷ್ಟೇ ವ್ಯಾಸರಾಯರಿಗೆ ಪ್ರಿಯರಾದ ಇನ್ನೊಬ್ಬ ಶಿಷ್ಯರು ಕನಕದಾಸರು. ಕನಕ ಪುರಂದರರಿಬ್ಬರೂ ದಾಸಸಾಹಿತ್ಯದ ಅಶ್ವಿನೀ ದೇವತೆಗಳು ಎಂಬ ಮಾತು ಅರ್ಥಪೂರ್ಣ. ಕನಕರು ಕೇವಲ ದಾಸರಲ್ಲ ; ಕವಿಗಳೂ ಕೂಡ. ಸಮಾಜದ ಕೆಳವರ್ಗದಿಂದ ಬಂದ ಕನಕದಾಸರು ವ್ಯಾಸರಾಯರ ಪರಮಶಿಷ್ಯರಾದರು ; ಪುರಂದರದಾಸರ ಆತ್ಮೀಯ ಮಿತ್ರರಾದರು ; ದಾಸಶ್ರೇಷ್ಠರೆನ್ನಿಸಿಕೊಂಡರು. ಇದು ಕನಕದಾಸರ ವ್ಯಕ್ತಿತ್ವದ ಆಯಾಮಗಳನ್ನು ಸೂಚಿಸುವುದಲ್ಲದೆ ದಾಸಕೂಟದ ವಿಶಾಲ ಮನೋಧರ್ಮದ ದ್ಯೋತಕವೂ ಆಗಿದೆ.

'ಕನಕದಾಸನ ಮೇಲೆ ದಯ ಮಾಡಲು ವ್ಯಾಸ
ಮುನಿ ಮಠದ ಜನರೆಲ್ಲ ದೂರಿಕೊಂಬುವರೋ ॥'

ಎಂದು ಪ್ರಾರಂಭವಾಗುವ ಪುರಂದರದಾಸರ ಕೀರ್ತನೆಯಲ್ಲಿ ವ್ಯಾಸರಾಯರು ಕನಕಣ್ಣನ ಬಗೆಗೆ ಇರಿಸಿದ್ದ ವಾತ್ಸಲ್ಯ, ಕನಕದಾಸರ ಮಹಿಮೆಯನ್ನರಿಯದ ಮಠದ ಜನರ ಸಣ್ಣತನ–ಇತ್ಯಾದಿಗಳ ಪ್ರಸ್ತಾಪ ಬರುತ್ತದೆ. ಕನಕದಾಸರನ್ನು ಕುರಿತಾದ ಪ್ರಸಿದ್ಧ ಸಂಗತಿ 'ಬಾಳೆಹಣ್ಣಿನ ಪ್ರಸಂಗವೂ' ಈ ಕೀರ್ತನೆಯಲ್ಲಿ ಬರುತ್ತದೆ. ವ್ಯಾಸತೀರ್ಥರ ಕೈಮುಷ್ಠಿಯಲ್ಲಿದ್ದ ವಸ್ತುವನ್ನು ದೇವರ ಮೂರ್ತಿಯೆಂದು ಕನಕದಾಸರೊಬ್ಬರೇ ಗುರುತಿಸಲು ಸಾಧ್ಯವಾದ ಘಟನೆಯ ಉಲ್ಲೇಖವೂ ಇಲ್ಲಿದೆ. ಒಟ್ಟಿನಲ್ಲಿ ಕನಕನ ಮಹಿಮೆಯೇ ವಸ್ತುವಾಗಿರುವ ಈ ಕೀರ್ತನೆಯಲ್ಲಿ ಗುರು ವ್ಯಾಸರಾಯರ 'ಶಿಷ್ಯಾನುಸಂಧಾನ'ದ ಚಿತ್ರವೂ ಮುಖ್ಯವಾಗುತ್ತದೆ.

ಶಿಷ್ಯವತ್ಸಲರಾದ ಗುರುವನ್ನು ಕುರಿತು ಶಿಷ್ಯರು ಕೃತಜ್ಞರಾಗಿರುವುದು ಆಶ್ಚರ್ಯವೇನಲ್ಲ. ಪುರಂದರದಾಸರು ಅನೇಕ ಕೃತಿಗಳಲ್ಲಿ ನೇರವಾಗಿಯೋ, ಸೂಚ್ಯವಾಗಿಯೋ ವ್ಯಾಸರಾಯರನ್ನು ಸ್ಮರಿಸಿಕೊಳ್ಳುತ್ತಾರೆ (ಕನಕದಾಸರು ತಮ್ಮ ಕೃತಿಗಳಲ್ಲಿ ಎಲ್ಲಿಯೂ ವ್ಯಾಸರಾಯರನ್ನು ನೆನಪಿಸಿಕೊಂಡಿಲ್ಲವೆಂಬುದು ಸ್ವಲ್ಪ ಅಚ್ಚರಿಯ ವಿಚಾರವೇ. ಮೇಲೆ ಉಲ್ಲೇಖಿಸಿದ 'ಕನಕದಾಸನ ಮೇಲೆ ದಯಮಾಡಲು ವ್ಯಾಸ' ಎಂದು ಪ್ರಾರಂಭವಾಗುವ ಕೀರ್ತನೆಯನ್ನು ಕನಕದಾಸರ ರಚನೆಯೆಂದು ಭಾವಿಸುವವರೂ ಇದ್ದಾರೆ.) 'ವ್ಯಾಸರಾಯ ಸುಳಾದಿ'ಯೆಂದೇ ಪ್ರಸಿದ್ಧವಾಗಿರುವ ಸುಳಾದಿಯೊಂದರಲ್ಲಿ ಪುರಂದರದಾಸರು

ವ್ಯಾಸರಾಯರ ಚರಣ ಕಮಲ ದರುಶನವೆನಗೆ
ಯೇಸು ಜನ್ಮದ ಸುಕೃತ ಫಲದಿ ದೊರಕಿತೊ ಎನ್ನ
ಸಾಸಿರ ಕುಲಕೋಟಿ ಪಾವನ್ನವಾಯಿತು
ಶ್ರೀಶನ ಭಜಿಸುವದಕಧಿಕಾರಿ ನಾನಾದೆ
ದೋಷವಿರಹಿತನಾದ ಪುರಂದರ ವಿಠಲನ್ನ
ದಾಸರ ಕರುಣವು ಯೆನಮ್ಯಾಲೆ ಇರಲಾಗಿ ॥'

–ಎಂದು ತುಂಬಿದ ಮನಸ್ಸಿನಿಂದ ತಮ್ಮ ಗುರು ವ್ಯಾಸರಾಯರಿಗೆ ಕೃತಜ್ಞತೆ ಧನ್ಯತೆಗಳ ಭಾವಾಂಜಲಿ ಸಲ್ಲಿಸಿದ್ದಾರೆ.

* * *

ಗುರುಗಳಾದ ವ್ಯಾಸರಾಯರ ಪ್ರಭಾವ ಪುರಂದರ ಕನಕರ ರಚನೆಗಳಲ್ಲಿ ಕಂಡು ಬರುವುದು ಅಸಹಜವೇನಲ್ಲ. ಹಿಂದೆಯೇ ಪ್ರಸ್ತಾಪಿಸಲಾಗಿರುವ 'ದಾಸರೆಂದರೆ ಪುರಂದರದಾಸರಯ್ಯಾ' ಎಂದು ಪ್ರಾರಂಭವಾಗುವ ಕೀರ್ತನೆಯಲ್ಲಿ ವ್ಯಾಸರಾಯರು ಉದರನಿಮಿತ್ತವಾಗಿ ದಾಸರ ವೇಷ ಹಾಕಿ, ಜನಗಳನ್ನು ವಂಚಿಸುವ ಕಪಟಿಗಳ ಚಿತ್ರವನ್ನು ಕೊಟ್ಟಿದ್ದಾರೆ. ಕನಕ ಪುರಂದರರಿಬ್ಬರೂ ಸಮಾಜವನ್ನು ವ್ಯಾಸರಾಯರಿಗಿಂತಲೂ ನಿಕಟವಾಗಿ, ತೀರಾ ಹತ್ತಿರದಿಂದ ಕಂಡವರು. ಅಲ್ಲಿನ ಸಣ್ಣತನ, ಪಿಸುಣತನ, ಕಾಪಟ್ಯಗಳ ಪರಿಚಯ ಅವರಿಬ್ಬರಿಗೆ ಚೆನ್ನಾಗಿಯೇ ಇತ್ತು. ಹೀಗಾಗಿ ವ್ಯಾಸರಾಯರಂತೆಯೇ ಅವರೂ ಸಮಾಜದಲ್ಲಿನ ಉಪಾಯ ವೇದಾಂತಿಗಳನ್ನೂ, ಉದರ ವಿರಾಗಿಗಳನ್ನೂ ಕಟುವಾಗಿ ಟೀಕಿಸಿದ್ದಾರೆ. :

'ಪಾತಕನ ತೆರನಂತೆ ಪದಗಳನು ತಾ ಬೊಗಳಿ
ಕೂಟ ಜನರನು ಸಂತೋಷಪಡಿಸಿ

ಗೂಟನಾಮಗಳಿಟ್ಟು ಕೊಟ್ಟರಿಯೆ ತಾನೆನುತ
ಬೂಟಕವ ಮಾಡಲವ ಹರಿದಾಸನೇ ?

–ಎಂದು ವ್ಯಾಸರಾಯರು ಪ್ರಶ್ನಿಸಿದರೆ, ಪುರಂದರದಾಸರು

'ಬೂಟಕತನದಲ್ಲಿ ಬಹುಳ ಭಕುತಿ ಮಾಡಿ
ದಿಟನೀತ ಸರಿಯಾರಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ
ಊಟದ ಮಾರ್ಗದ ಜ್ಞಾನವಿಲ್ಲದೆ...
ಉದರ ವೈರಾಗ್ಯವಿದು, ನಮ್ಮ ಪದುಮನಾಭನಲಿ ಲೇಶಭಕುತಿಯಿಲ್ಲ'

ಎನ್ನುತ್ತಾರೆ,

ಕನಕದಾಸರಂತೂ ಅತ್ಯಂತ ಸ್ಪಷ್ಟವಾಗಿ 'ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ? ಸಾರ್ಥಕವಿಲ್ಲದವರೆಲ್ಲ ಭಾಗವತರೆ ?' ಎಂದು ಪ್ರಶ್ನಿಸುವುದಲ್ಲದೆ :

'ಪಟ್ಟೆ ನಾಮವ ಬಳಿದು, ಪಾತ್ರೆ ಕೈಯಲಿ ಪಿಡಿದು
ಗುಟ್ಟಿನಲಿ ಜಪಿಸುವ ಗುರುತರಿಯದೆ
ಕೆಟ್ಟ ಕೂಗನು ಕೂಗಿ ಹೊಟ್ಟೆಯನು ಹೊರೆವಂಥ
ಹೊಟ್ಟೆಗುಡುಮಗಳೆಲ್ಲ ಪರಮ ವೈಷ್ಣವರೆ?

ಎಂದು ಸಮಾಜದಲ್ಲಿನ ವಂಚಕರನ್ನೂ ಆಷಾಢಭೂತಿಗಳನ್ನೂ ಉಗ್ರವಾಗಿ ತರಾಟೆಗೆ ತೆಗೆದುಕೊಂಡಿದ್ದಾರೆ.

ಈ ಮೂರೂ ಕೀರ್ತನೆಗಳಲ್ಲಿ ಕಂಡು ಬರುವ ವಸ್ತು, ಭಾಷೆ, ಛಂದಸ್ಸುಗಳಲ್ಲಿ ಇರುವ ಸಾದೃಶ ಕುತೂಹಲಕಾರಿಯಾಗಿದೆ. ಗುರುವ್ಯಾಸರಾಯರ ಸಾಮಾಜಿಕ ದೃಷ್ಟಿಕೋನವನ್ನು ಶಿಷ್ಯರಿಬ್ಬರೂ ಇನ್ನಷ್ಟು ತೀಕ್ಷ್ಣವಾಗಿ ಬೆಳೆಸಿಕೊಂಡು ಬಂದಿರುವುದು ಈ ಉದಾಹರಣೆಗಳಿಂದ ಸುಸ್ಪಷ್ಟ.

ಹರಿದಾಸರಾದವರು ಸಮಾಜದ ಒಳಗೇ ಇರಬೇಕಾದುದು ಅನಿವಾರ್ಯ. ಸಮಾಜದಲ್ಲಿನ ಒಳಿತು ಕೆಡುಕುಗಳನ್ನು ಗಮನಿಸಿ, ಶುಭದ ಕಡೆಗೇ ಸಾಮಾಜಿಕರನ್ನು ನಡೆಸುವ ಹೊಣೆ ಹರಿದಾಸರದ್ದು. ನೀತಿಯನ್ನು ಕುರಿತಾದ ತಿಳಿವಳಿಕೆ, ಲೋಕಜೀವನದಲ್ಲಿ ಧರ್ಮದ ಸ್ಥಾನ–ಇತ್ಯಾದಿಗಳನ್ನೂ, ಭಕ್ತಿಯ ಮಹತ್ವವನ್ನೂ, ಕೀರ್ತನೆಗಳ ಮೂಲಕ ಮಾತ್ರವಲ್ಲದೆ, ಸ್ವಂತ ಆಚಾರದ ಮೂಲಕವಾಗಿಯೂ ಜನರ ಗಮನಕ್ಕೆ ತರಬೇಕಾದುದು ದಾಸರ ಜವಾಬ್ದಾರಿಯಾಗಿತ್ತು. "ಬೇರೆ ಬೇರೆ ವೃತ್ತಿಗಳ, ಪ್ರವೃತ್ತಿಗಳ ಜನರೊಂದಿಗೆ

ಬೆರತು, ಊರೂರು ತಿರುಗಿ, ಜನರಲ್ಲಿ ಒಂದಾಗಿ, ಅವರವರ ಹವ್ಯಾಸಗಳಲ್ಲಿ ತೊಡಗಿರುತ್ತಲೇ ಅವರಿಗೆ ಭಕ್ತಿಯ ಸ್ವಾರಸ್ಯವನ್ನು ಮನಗಾಣಿಸುವುದು ದಾಸರ ಕರ್ತವ್ಯ." (ಎಸ್. ಕೆ. ರಾಮಚಂದ್ರರಾವ್–ಪುರಂದರ ಸಾಹಿತ್ಯದರ್ಶನ, ಸಂಪುಟ: ಮೂರು) ಪುರಂದರದಾಸರೂ, ಕನಕದಾಸರೂ ಈ ಕಾಯಕವನ್ನು ವ್ರತವನ್ನಾಗಿ ಸ್ವೀಕರಿಸಿದವರು. ಸಹಜವಾಗಿಯೇ ಅವರಿಗೆ ಸಮಾಜದ ಎಲ್ಲ ಮುಖಗಳ ದರ್ಶನವಾಯಿತು. ಈ ಜಗತ್ತಿಗೆ ಅಂಟಿಕೊಂಡು, ಇಲ್ಲಿಯ ಸುಖ ಸೌಲಭ್ಯಭೋಗ ಭಾಗ್ಯಗಳೇ ನಿತ್ಯಸತ್ಯ ಎಂದು ಭಾವಿಸುವ ಜನಗಳ ಮಧ್ಯೆಯೇ ಬದುಕಿ, ಅವರನ್ನು ಇದರಾಚೆಗೂ ಇರುವ ಸತ್ಯದ ಕಡೆಗೆ ತಿರುಗಿಸುವ ಕೆಲಸ ಸುಲಭವೇನಲ್ಲ. ವ್ಯಾಸರಾಯರೇ ಒಂದು ಕಡೆ ಲೋಕ ಜೀವನವನ್ನು ಕುರಿತು:

'ಮಾಯೆಯೆಂಬ ದುಷ್ಟರಾಯ
ಮಾನವೆಂಬ ಬಿನುಗು ಮಂತ್ರಿ
ಇಂದ್ರಿಯಗಳೆಂಬ ತಿರಿದೋಡುವ ಪರಿವಾರ....'

ಇವುಗಳಿಂದ ಆವೃತವಾದ ಸಾಮಾನ್ಯರ ಪಾಡನ್ನು ಕಂಡು ಕನಿಕರಿಸಿದ್ದಾರೆ. ಇಂಥ ಜನಗಳನ್ನು ಕುರಿತೇ ಪುರಂದರದಾಸರು "ಮಾನವ ಜನ್ಮ ದೊಡ್ಡದು, ಇದ ಹಾನಿಮಾಡಲಿ ಬೇಡಿ ಹುಚ್ಚಪ್ಪಗಳಿರಾ" ಎಂಬ ಎಚ್ಚರಿಕೆಯ ಕಹಳೆಯನ್ನೂದಿದ್ದಾರೆ. ಇದು ದಾಸರ ಜನಪದರ, ಜೀವನದ ದೃಷ್ಟಿಗೊಂದು ತೋರ್‌ಬೆರಳು. " ಎಂಬ ಮಾತನ್ನು ಸ್ವಾಮಿ ವಿವೇಕಾನಂದರು ಅನೇಕ ಬಾರಿ ತಮ್ಮ ಶ್ರೋತೃಗಳಿಗೆ ನೆನಪು ಮಾಡಿಕೊಡುತ್ತಿದ್ದರಂತೆ. ಅಸಂಖ್ಯ ಸಾಧ್ಯತೆಗಳಿರುವ ಮಾನವ ಜನ್ಮ ವ್ಯರ್ಥವಾಗಬಾರದೆಂಬ ತೀವ್ರ ಕಳಕಳಿಯಿಂದ ಪುರಂದರದಾಸರು ಹೀಗೆನ್ನುತ್ತಾರೆ ;

'ಕಣ್ಣು ಕೈ ಕಾಲ್ ಕಿವಿ ನಾಲಿಗೆ ಇರಲಿಕೆ
ಮಣ್ಣು ಮುಕ್ಕಿ ಮರಳಾಗುವರೆ ?
ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ
ಉಣ್ಣದೆ ಉಪವಾಸ ಇರುವರೆ ಖೋಡಿ ? ॥

ಕಾಲನ ದೂತರು ಕಾಲ್ ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೆ ?
ಧಾಳಿಬಾರದ ಮುನ್ನ ಧರ್ಮವ ಗಳಿಸಿರೊ
ಸುಳ್ಳಿನ ಸಂಸಾರ ಸುಳಿಗೆ ಸಿಕ್ಕಲು ಬೇಡಿ ॥"

ಕನಕದಾಸರೂ ತಮ್ಮ ಅನೇಕ ಕೀರ್ತನೆಗಳಲ್ಲಿ ಈ ರೀತಿಯ ಎಚ್ಚರ

ಹೇಳುವ ಪ್ರಹರಿಯ ಕೆಲಸವನ್ನು ಮಾಡಿರುವುದನ್ನು ನಾವು ಕಾಣಬಹುದು. ಉದಾಹರಣೆಗೆ :

'ಕಟ್ಟಲಿಲ್ಲ ಬಿಚ್ಚಲಿಲ್ಲ ಕಷ್ಟಪಟ್ಟು ಬಾಳಲಿಲ್ಲ
ಸುಟ್ಟು ಸುಟ್ಟು ಸುಣ್ಣದರಳು ಆಯಿತೀ ಕಾಯ
ಬಿಟ್ಟು ಹೋಗುವಾಗ ತೊಟ್ಟ ಬಟ್ಟೆ ನಿನಗೆ ಹೊಂದಲಿಲ್ಲ
ದೃಷ್ಟಿನೋಟ ಕಟ್ಟಕಡೆಗೆ ಬಟ್ಟೆಬಯಲಾಗುತಿದೆ ॥
ಗರುವದೋರಿ ನಿಂದ ನೀನು ಬರಿದೆ ಕಾಲ ಕಳಿದೆ ಮುಂ–
ದರಿದು ನೋಡು ನರರ ತನುವು ದೊರಕಲರಿಯದು....॥'

ಅಪರೂಪವಾಗಿ ಸಿಕ್ಕಿದ ಮನುಷ್ಯ ಶರೀರದ ಎಲ್ಲ ಸಾಮರ್ಥ್ಯ–ಸಾಧ್ಯತೆಗಳನ್ನು ಮಾನವ ದುಡಿಸಿಕೊಳ್ಳಬೇಕು. ಆದರೆ ಇದಕ್ಕೆ ಬರುವ ವಿಘ್ನಗಳು ಅದೆಷ್ಟೋ ! ನಮ್ಮ ಅಂತರಂಗದ ಒಳಗೇ ನಮ್ಮ ಶತ್ರುಗಳು ಅವಿತುಕೊಂಡಿದ್ದಾರೆ; ಜ್ಞಾನರತ್ನವನ್ನು ಅಪಹಾರ ಮಾಡಲು ಹೊಂಚು ಹಾಕುತ್ತಿರುವ ಚೋರರು ಅವರು. ಆದ್ದರಿಂದ ವಿವೇಕಿಯಾದವನು ಅನವರತ ಎಚ್ಚರವಾಗಿರಬೇಕು.

[ಅಂತರ್ವಸನ್ತಿ ಷಟ್ ಚೋರಾ : ದುರ್ಜಯಾ ಲೋಕ ವಿಶ್ರುತಾ
ಜ್ಞಾನ ರತ್ನಾಪಹಾರಾಯ ತಸ್ಮಾತ್ ಜಾಗ್ರತ, ॥]

ಉತ್ಸರ್ಗಮುಖಿಯಾದ ಮನುಷ್ಯ ಅನ್ನಮದ, ಅರ್ಥಮದ, ವೈಭವದ ಮದ, ರೂಪಮದ, ಪ್ರಾಯಮದ–ಇತ್ಯಾದಿ ಮದಗಳನ್ನು ಗೆಲ್ಲಬೇಕು ; ಸತಿಮೋಹ, ಸುತಮೋಹ–ಮುಂತಾದ ಸಾಂಸಾರಿಕ ಮೋಹಗಳನ್ನು ಕಡಿದುಕೊಳ್ಳಬೇಕು, ಆಗಮಾತ್ರ ಬದುಕಿನಲ್ಲಿ ಕೃತಕೃತ್ಯತೆಯ ಅನುಭವವನ್ನು ದಕ್ಕಿಸಿಕೊಳ್ಳಬಹುದೇನೋ. ಇದು ಪುರಂದರ ಕನಕರಿಬ್ಬರ ಅಭಿಪ್ರಾಯವೂ ಹೌದು. ಪುರಂದರದಾಸರು ಪ್ರಶ್ನಿಸುತ್ತಾರೆ –

'ಆರು ಹಿತವರು ನಿನಗೆ–ಮೂರು ಮಂದಿಯೊಳಗೆ
ನಾರಿಯೋ, ಧಾರುಣಿಯೋ, ಬಲುಧನದ ಸಿರಿಯೋ ?'

ದಾಸರ ಈ ಪ್ರಶ್ನೆಯ ಹಿಂದೆ ಸಾಂಸಾರಿಕ ಜೀವನ ಹೇಯವೆಂಬ ನೇತ್ಯಾತ್ಮಕ ದೃಷ್ಟಿಯಿದೆಯೆಂದು ಭಾವಿಸಲಾಗದು. ಸ್ವತಃ ಪುರಂದರ ಕನಕದಾಸರಿಬ್ಬರೂ ಸಂಸಾರಿಗಳೇ. ವ್ಯಾಸಕೂಟಕ್ಕೆ ಸೇರಿದ ಯತಿಗಳಲ್ಲ. ಆದರೆ ಬದುಕಿನಲ್ಲಿ ಯಾವುದಕ್ಕೆ ಹೆಚ್ಚು ಮನ್ನಣೆ ಕೊಡಬೇಕೆಂಬ ಮೌಲ್ಯಪ್ರಜ್ಞೆ, ಶಾಶ್ವತ–ಅಶಾಶ್ವತೆಯನ್ನು ಕುರಿತಾದ ತಾರತಮ್ಯ ಜ್ಞಾನ–ಇವುಗಳ ಬಗೆಗೆ ಲೋಕದ ಜನರನ್ನು ಎಚ್ಚರಿಸುವುದೇ ಇಲ್ಲಿನ ಆಶಯ ಸಾಮಾನ್ಯರಾದ ನಾವು 'ಮುನ್ನ

ಶತಕೋಟಿ ರಾಯರುಗಳು ಆಳಿದ ಈ ನೆಲವನ್ನು' ನಮ್ಮದು ಎಂದು ಶಾಸನ ಬರೆಯುತ್ತೇವೆ. ಅಲ್ಲಿ 'ಬಿನ್ನಣದ ಮನೆಕಟ್ಟಿ' ಅದೇ ಸ್ಥಿರವೆಂಬ ಭ್ರಾಂತಿಯಲ್ಲಿ ಈ ನೆಲಕ್ಕೆ ಕಟ್ಟುಬಿದ್ದು, ಎತ್ತರಕ್ಕೆ ಏರುವ ಅವಕಾಶದಿಂದ ವಂಚಿತರಾಗುತ್ತೇವೆ. ಆದ್ದರಿಂದ 'ನಾರಿ', 'ಧಾರುಣಿ', 'ಸಿರಿ' ಈ ಮೂವರೂ ನಮ್ಮ ದಾಸರಾಗಿರಬೇಕೇ ಹೊರತು, ಅರಸರಾಗಿರಬಾರದು. ಇದೇ ಅರ್ಥದಲ್ಲಿಯೇ ಕನಕದಾಸರು, ಸ್ವಲ್ಪ ವಾಚ್ಯವಾಗಿಯೇ –

'ಹೆಣ್ಣು ಹೊನ್ನು ಮಣ್ಣು ಮೂರು ತನ್ನಲಿದ್ದು ಕಾಣಲಿಲ್ಲ
ಅಣ್ಣ ತಮ್ಮ ತಾಯಿ ತಂದೆ ಬಯಸಲಾಗದು
ಅನ್ನ ವಸ್ತ್ರ ಭೋಗಿಯಾಗಿ ತನ್ನ ಸುಖವ ಕಾಣಲಿಲ್ಲ
ಮಣ್ಣುಪಾಲು ಆದಮೇಲೆ ಆರಿಗಾಹೋದು ?'

ಎಂದು ಮಾನವ ಬದುಕಿನಲ್ಲಿ ಯಾವುದಕ್ಕೆ ಪ್ರಾಶಸ್ತ್ಯ ಕೊಡಬೇಕೆಂದು ಮೌಲ್ಯ ನಿರ್ದೇಶನ ಮಾಡುತ್ತಾರೆ. ಲೌಕಿಕ ಜೀವನದಲ್ಲಿ ವ್ಯಕ್ತಿಯ ಬಾಳು ಹೇಗಿರಬೇಕೆಂಬುದನ್ನು ಪುರಂದರದಾಸರು 'ಗೇರು ಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ ಮೀರಿಯಾಸೆ ಮಾಡದಲೆ' ಇದ್ದು 'ಈಸಬೇಕು, ಇದ್ದು ಜೈಸಬೇಕು'– ಎಂದು ಬೋಧಿಸುತ್ತಾರೆ.

* * *

ವಚನಕಾರರಂತೆಯೇ ಹರಿದಾಸರನ್ನೂ ತೀವ್ರವಾಗಿ ಕಾಡಿದ ಒಂದು ಅಂಶವೆಂದರೆ ಸಾಮಾಜಿಕ ಅಸಮಾನತೆ. ಜಾತಿ ಎಂಬ ಶಾಪ ಎಲ್ಲಕ್ಕೂ ನಮ್ಮ ಜನವನ್ನು ಕಾಡುತ್ತಲೇ ಬಂದಿದೆ. ಶಂಕರ, ರಾಮಾನುಜ, ಬಸವ, ಮಧ್ವಾಚಾರ್ಯ, ಗಾಂಧೀಜಿ, ಅಂಬೇಡ್ಕರ್ ಈ ಎಲ್ಲರೂ ಜಾತಿಯ ಪಿಡುಗನ್ನು ಮೂಲೋತ್ಪಾಟನೆ ಮಾಡುವ ಪ್ರಯತ್ನವನ್ನು ತಮ್ಮ ತಮ್ಮ ಮಿತಿಯಲ್ಲಿ ಮಾಡಿದರೂ, ಅದು ಮತ್ತೆ ಮತ್ತೆ ತಲೆಯೆತ್ತುತ್ತಲೇ ಇದೆ. ವ್ಯಾಸರಾಯರು ತಮ್ಮ ಶಿಷ್ಯವರ್ಗಕ್ಕೆ ಕನಕದಾಸರನ್ನೂ ಸೇರಿಸಿಕೊಂಡಾಗ ಕುಲೀನರೆನ್ನಿಸಿಕೊಂಡವರು ಪ್ರತಿಭಟಿಸಿದರು. ವ್ಯಾಸರಾಯರು ಕನಕದಾಸರ ವ್ಯಕ್ತಿತ್ವದ ಶ್ರೇಷ್ಠತೆಯನ್ನು ಪ್ರಾಯೋಗಿಕವಾಗಿ ತೋರಿಸಿಕೊಟ್ಟು, ತಮ್ಮ ಕುಲೀನ ಶಿಷ್ಯರ ಬಾಯಿ ಮುಚ್ಚಿಸಬೇಕಾಯಿತು. 'ಕುಲ' ಎನ್ನುವ ಪರಿಕಲ್ಪನೆಯನ್ನು ಶೋಧಿಸಿ, ಅದರ ನಿಜವಾದ ಅರ್ಥವನ್ನು ಜನಕ್ಕೆ ತಿಳಿಸುವ ಕೆಲಸವನ್ನು ಮಾಡಬೇಕಾದ ಅನಿವಾರ್ಯ ಸ್ಥಿತಿ ಶಿವಶರಣರ ಕಾಲದಲ್ಲಿದ್ದಂತೆ, ಹರಿದಾಸರ ಕಾಲದಲ್ಲಿಯೂ ಇತ್ತು. ಪುರಂದರ ಕನಕರಿಬ್ಬರೂ ಕುಲಪರಿಕಲ್ಪನೆಯ ವಿಶ್ಲೇಷಣೆ ಮಾಡಿದ್ದಾರೆ.

'ಹೊಲಯು ಹೊರಗಿಹನೆ, ಊರೊಳಗಿಲ್ಲವೆ ?' ಎಂದು ಪ್ರಾರಂಭವಾಗುವ ಪುರಂದರದಾಸರ ಕೀರ್ತನೆಯಲ್ಲಿ 'ಹೊಲಯ' ಎನ್ನುವ ಪದ ಜಾತಿಸೂಚಕವಲ್ಲ, ಗುಣಸೂಚಕವಾದುದು ಎಂಬುದು ಸ್ಪಷ್ಟವಾಗಿಯೇ ಇದೆ. ಅವರ ಪ್ರಕಾರ– 'ಹೇಳಿದ ಶಾಸ್ತ್ರವನ್ನು ತಿಳಿಯದವ', ಇದ್ದೂ 'ದಾನಧರ್ಮವ ಮಾಡದವ', 'ಹುಸಿಯಾಡುವವ', 'ಉಂಡಮನೆಗೆರಡು ಬಗೆಯುವವ' ಇಂಥವರೆಲ್ಲರೂ ಹೊಲೆಯರು. ಪುರಂದರರು 'ಬ್ರಾಹ್ಮಣನೆಂದರೆ ಬ್ರಹ್ಮನ ತಿಳಿದವನು' ಎಂಬ ವ್ಯಾಖ್ಯೆಯನ್ನು ಕೊಟ್ಟು ಜಾತಿ ಎಂಬುದು ಹುಟ್ಟಿನಿಂದ ಬಂದುದಲ್ಲ ಎಂಬುದನ್ನು ಸೂಚಿಸಿದ್ದಾರೆ. ಇದೇ ವಿಚಾರವನ್ನು ಇನ್ನಷ್ಟು ತೀವ್ರವಾಗಿ :

'ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ
ಗಣಗಣ ಗಂಟೆ ಬಾರಿಸುವರಯ್ಯಾ
ತನುವಿನ ಕೋಪವು ಹೊಲೆಯಲ್ಲವೇ ?
ಪರಧನ ಪರಸತಿ ಹೊಲೆಯಲ್ಲವೇ ?
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ
ಇದಕೇನೋ ಮದ್ದೋ ಪುರಂದರ ವಿಠಲ ?'

–ಎಂದು ಮಡಿವಂತರೆನ್ನಿಸಿಕೊಂಡವರ ಮನಸ್ಸನ್ನು ಚುಚ್ಚಿ ಜಾತಿ ತತ್ವವನ್ನು ಕುರಿತು ಮರುಚಿಂತನೆ ನಡೆಸುವಂತೆ ಮಾಡಿದ್ದಾರೆ.

ಹುಟ್ಟಿನಿಂದ ಮೇಲ್ವರ್ಗಕ್ಕೆ ಸೇರಿದ ವ್ಯಾಸರಾಯರಾಗಲೀ, ಪುರಂದರದಾಸರಾಗಲೀ, ಜಾತಿಪದ್ಧತಿಯಿಂದಾಗುವ ನೋವಿನ ಅನುಭವಕ್ಕೆ ನೇರವಾಗಿ ಒಡ್ಡಿಕೊಂಡವರಲ್ಲ. ಆದರೆ ಕನಕದಾಸರಿಗೆ ಈ ನೋವು ಸ್ವಂತ ಅನುಭವವೇ ಆಗಿತ್ತು. ಕುಲಜರೆನ್ನಿಸಿಕೊಂಡವರು ಸಮಾಜದ ಕೆಳವರ್ಗವನ್ನು ಕುರಿತು ತೋರಿಸುವ ತೀವ್ರ ತಿರಸ್ಕಾರ ಎಂಥ ನೋವಿನ ಸಂಗತಿ ಎಂಬುದು ಕನಕದಾಸರಿಗೆ ಸ್ವಾನುಭವದ ಸಂಗತಿಯಾಗಿತ್ತು. ಸಮಾಜದಲ್ಲಿ ಮೇಲು ವರ್ಗಕ್ಕೆ ಸೇರಿದವರು ಕೆಳಗಿನ ಜನರನ್ನು ಹೀನಾಯವಾಗಿ ಕಾಣುವುದರ ವಿರುದ್ಧ ಕನಕದಾಸರು ತಮ್ಮ ಪ್ರತಿಭಟನೆಯನ್ನು ತಮ್ಮ ಅಣಕುಕಾವ್ಯ 'ರಾಮಧಾನ್ಯಚರಿತ್ರೆ' ಯಲ್ಲಿ ಸಾಕಷ್ಟು ತೀವ್ರವಾಗಿಯೇ ಅಭಿವ್ಯಕ್ತಿಸಿದ್ದಾರೆ. ಈ ಕಾವ್ಯದಲ್ಲಿ ನಾವು ನೋಡುವ ರಾಗಿಯ ಪ್ರತಿಭಟನೆ ದಲಿತವರ್ಗದವರ ಪ್ರತಿಭಟನೆಯೇ ಆಗಿದೆ.

ತಮ್ಮ ಅನೇಕ ಕೀರ್ತನೆಗಳಲ್ಲೂ ಕನಕದಾಸರು 'ಕುಲ'ದ ಕಲ್ಪನೆಯನ್ನು ಕೆದಕುತ್ತಾರೆ. ಇದರ ಹಿಂದೆ ವೈಯಕ್ತಿಕ ನೋವಿನ ಅಂಶವಿರುವುದರ ಜೊತೆಗೆ

ಸಾಮಾಜಿಕ ಸುಧಾರಣಾ ಪ್ರವೃತ್ತಿಯೂ ಕೆಲಸಮಾಡಿದೆ. 'ಕುಲ ಕುಲ ಕುಲವೆನ್ನುತಿಹರೊ । ಕುಲವಾವುದು ಸತ್ಯಜನರಿಗೆ?' ಎಂಬ ಪ್ರಶ್ನೆಯಲ್ಲಿರುವ ಕಳಕಳಿ ಗಮನಾರ್ಹವಾದುದು, ತಾವರೆ ಕೆಸರಲ್ಲಿ ಹುಟ್ಟಿದರೂ ಪೂಜಾಯೋಗ್ಯವಾಗುತ್ತದೆ ; ಹಸುವಿನ ಕೆಚ್ಚಲಲ್ಲಿ ಬರುವ ಹಾಲನ್ನು 'ಭೂಸುರ'ರೆನ್ನಿಸಿಕೊಂಡವರು ಪವಿತ್ರವೆಂದು ಭಾವಿಸಿ, ಉಪಯೋಗಿಸುತ್ತಾರೆ. ಅಷ್ಟು ಮಾತ್ರವಲ್ಲ, ಪರಾಶರ, ವಸಿಷ್ಠ, ನಾರದ ಮೊದಲಾದ ಪ್ರಸಿದ್ಧ ಋಷಿಗಳು ಹುಟ್ಟಿನಿಂದ ಬ್ರಾಹ್ಮಣರೇನಲ್ಲ–ಹೀಗೆ ಬೇರೆ ಬೇರೆ ಉದಾಹರಣೆಗಳ ಮೂಲಕ ಕನಕದಾಸರು ಮನುಷ್ಯನ ಪಾಲಿಗೆ ಶ್ರೇಷ್ಠತೆ ಬರುವುದು ಹುಟ್ಟಿದ ಕುಲದಿಂದಲ್ಲ, ಅಂತಃಸ್ಸತ್ವದಿಂದ, ಆಚಾರದಿಂದ ಎಂಬುದನ್ನು ಸಮರ್ಥಿಸುತ್ತಾರೆ. ಆತ್ಮನಾವಕುಲ, ಜೀವನಾವ ಕುಲ, ತತ್ವೇಂದ್ರಿಯಗಳ ಕುಲ ಪೇಳಿರಯ್ಯ ?' ಇದು ಕೇವಲ ಕನಕದಾಸರೊಬ್ಬರ ಪ್ರಶ್ನೆಯಲ್ಲ ; 'ಮನುಷ್ಯ ಜಾತಿ' ತಾನೊಂದೆ ವಲಂ' ಎಂದು ಘೋಷಿಸಿದ ಆದಿಕವಿ ಪಂಪನಂಥವರೂ ಕರ್ಣನ ಬಾಯಲ್ಲಿ ಇಂಥದೇ ಮಾತನ್ನು ಆಡಿಸುವುದನ್ನು ನಾವು ಕಾಣಬಹುದು. ಆತ್ಮ, ಜೀವ, ಇಂದ್ರಿಯಗಳು ಕುಲದ ಕಲ್ಪನೆಗೆ ಅತೀತವಾದುವು, ಆದ್ದರಿಂದ ದೇಹಕ್ಕೆ ಮಾತ್ರ ಜಾತಿಯ ಮೇಲ್ಮೆ ಕೀಳ್ಮೆಗಳನ್ನು ಅಂಟಿಸುವುದು ಅನೈಸರ್ಗಿಕವಾಗುತ್ತದೆ. ಇನ್ನೊಂದು ಕೀರ್ತನೆಯಲ್ಲಿ ಕನಕದಾಸರು ಹಾಡುತ್ತಾರೆ–'ಯಾತರವನೆಂದುಸುರಲಿ, ಜಗನ್ನಾಥ ಮಾಡಿದ ಒಂದು ನರರೂಪವಯ್ಯ' ; ಇಲ್ಲಿಯೂ ಕುಲದ ಕಲ್ಪನೆಯನ್ನೇ ಕುರಿತಾದ ನೋವಿದೆ. ಚಿಂತನೆಯೂ ಇದೆ. ತಾನು ದೇವರ ಮಗ 'ಜಗನ್ನಾಥಮಾಡಿದ ಒಂದು ನರರೂಪ' ಎಂದು ಹೇಳುವುದರ ಮೂಲಕ, ತನ್ನ ಜಾತಿ ಮಾನವ ಜಾತಿ, ಭಗವಂತನೇ ತನ್ನ ತಂದೆ ; ಹೀಗಾಗಿ ಹುಟ್ಟಿನ ಮೂಲಕ ಕೀಳಾಗಲು ಸಾಧ್ಯವಿಲ್ಲ–ಎಂಬುದನ್ನು ಧ್ವನಿಪೂರ್ವಕವಾಗಿ ಅವರು ತೋರಿಸಿದ್ದಾರೆ. 'ಈ ದೇಹದಲಿ ನೀ ನೆಲಸಿರಲು ಹೊಲೆಯುಂಟೆ'? ಎಂಬ ಮಾತೂ ಹರಿಭಕ್ತಿಸಾರದಲ್ಲಿ ಬರುತ್ತದೆ. ಭಗವಂತನ ವಾಸಸ್ಥಾನವಾದ ದೇಹ ಹುಟ್ಟಿನ ಕಾರಣಕ್ಕಾಗಿ ಕೀಳಾಗಲಾರದು ಎಂಬುದನ್ನು ಇದು ಸಮರ್ಥಿಸುತ್ತದೆ.

* * *

ಹರಿದಾಸ ಸಾಹಿತ್ಯದ ಎಲ್ಲ ಹಂತಗಳಲ್ಲಿಯೂ ಕಾಣುವ ಸಮಾನ ಸಂಗತಿಯೆಂದರೆ. ಆತ್ಮನಿವೇದನೆ, ಸ್ತೋತ್ರ, ಉಪದೇಶ, ತತ್ತ್ವಚಿಂತನೆ ಮುಂತಾದ ವಿಷಯವ್ಯಾಪ್ತಿಯಲ್ಲಿ ಬರುವ ಭಕ್ತಿ ನಿರ್ಭರ ರಚನೆಗಳೂ. 'ಹರಿ' ಎಂಬ ಪರಾಶಕ್ತಿಯಲ್ಲಿ ಅಚಲ ಶ್ರದ್ಧೆಯನ್ನಿರಿಸಿ, ಆತ್ಮೀಕರಿಸಿಕೊಂಡು, ಅದಕ್ಕೆ ತಮ್ಮನ್ನೇ

ಅರ್ಪಿಸಿಕೊಳ್ಳುವ ಸಂಪೂರ್ಣ ಸಮರ್ಪಣಾಭಾವ, ಶರಣ್ಯತೆ ಹರಿದಾಸರೆಲ್ಲರ ಕೃತಿಗಳ ಸಮಾನ ಲಕ್ಷಣ. ಮನಸ್ಸು, ಮಾತು, ಕೃತಿಗಳೆಲ್ಲದರಲ್ಲಿಯೂ ಭಗವದನುಸಂಧಾನ ನಡೆಯುತ್ತಿರಬೇಕೆಂಬುದು ಹರಿದಾಸರು ಸ್ವೀಕರಿಸಿದ ವ್ರತ. ವ್ಯಾಸರಾಯಸ್ವಾಮಿಗಳು "ಅಂತರಂಗದಲಿ ಹರಿಯ ಕಾಣದವ ಹುಟ್ಟುಗುರುಡನೋ" ಎಂದು ಮರುಗಿದರು : "ಹರಿದಾಸರ ಸಂಗ, ಗುರುಕರುಣೆಗಳಿಗೆ ಪ್ರತಿಯಿಲ್ಲ" ಎಂಬ ವಿಶ್ವಾಸ ಅವರದ್ದು. "ಹರಿಯ ಹೆಸರಿಂದ ಬದುಕುವ ದಾಸನಾನು, ಸಿರಿಕೃಷ್ಣ ದಾಸರ ದಾಸ ನಾನು" ಎಂಬ ವಿನಯದ ದಾರಿಯನ್ನು ತಮ್ಮ ಶಿಷ್ಯರಿಗೆ ಹಾಕಿಕೊಟ್ಟರು :

"ಆಳು ನಾ ನಿನ್ನಳು ನಿನ್ನಾಳು ನಾನು
ನೀನು ತಂದೆ, ನಿನ್ನ ಕಂದ
ಶರಣ್ಯ ನಾ ನಿನ್ನ ಶರಣಾಗತನು .. .. "

ಎಂದು 'ಅಹಂಕಾರ' 'ಮಮಕಾರ'ಗಳನ್ನು ಭಕ್ತಿಯಜ್ಞದಲ್ಲಿ ಆಹುತಿ ನೀಡಿ, 'ಕೃಷ್ಣಾರ್ಪಣ' ಎಂದರು. ಪುರಂದರ ಕನಕದಾಸರ ಕೃತಿಗಳಲ್ಲಿ ಈ ಭಾವ ಬಹಳ ಕಡೆ ಸ್ಥಾಯಿಯಾಗಿ ಕಾಣಿಸಿಕೊಳ್ಳುತ್ತದೆ. ಪುರಂದರದಾಸರು ;

"ನಿನ್ನ ಪಾದಾಂಬುರುಹ ಭಜಿಸುವುದೆ ಸೌಭಾಗ್ಯ
ನಿನ್ನ ನಿರ್ಮಾಲ್ಯಗಳೆ ಭೋಗದ್ರವ್ಯ
ನಿನ್ನ ಕಥೆ ಕೇಳುವುದೆ ಮಂಗಳ ಸುವಾದ್ಯಗಳು
ನಿನ್ನಂಥ ಅರಸೆನೆಗೆ ಪುರಂದರ ವಿಠಲ" ॥

ಎನ್ನುವುದರ ಜೊತೆಗೆ

'ಅನಾಥನು ನಾನು ಬಂಧು ನೀನು
ಹೀನನು ನಾನು ದಯಾವಂತ ನೀನು
ಧ್ಯಾನಮಂತ್ರನು ನೀನು ಧ್ಯಾನಿಸುವೆನು ನಾನು
ಜ್ಞಾನಗಮ್ಯನು ನೀನು ಅಜ್ಞಾನಿ ನಾನು" ॥

ಎಂದೂ ಹೇಳಿ ಭಗವಂತನ ಸರ್ವಜ್ಞತ್ವ, ಸರ್ವಶಕ್ತಿತ್ವ, ಕಾರುಣ್ಯ ಮೊದಲಾದ ಕಲ್ಯಾಣ ಗುಣಗಳನ್ನು, ತಮ್ಮಲ್ಲಿರುವ ಅಲ್ಪಶಕ್ತಿತ್ವ, ಅಸ್ವಾತಂತ್ರ್ಯ, ದೈನ್ಯ ಇವುಗಳೊಂದಿಗೆ ವೈದೃಶ್ಯ ರೂಪದಲ್ಲಿ ಪರಿಭಾವಿಸಿಕೊಂಡಿದ್ದಾರೆ. ಇದಕ್ಕೆ ಸಂವಾದಿಯಾಗಿ ಕನಕದಾಸರೂ :

"ಏನೆಂದು ಕೊಂಡಾಡಿ ತುತಿಸಲೋ ದೇವ
ನಾನೇನು ಬಲ್ಲೆ ನಿನ್ನಯ ಮಹಿಮೆ ಘನವ"

ಎಂದು ಪೀಠಿಕೆ ಹಾಕಿ

"ಹರಿಮುಕುಂದನು ನೀನು. ನರಜನ್ಮ ಹುಳು ನಾನು
ಪರಮಾತ್ಮನು ನೀನು, ಪಾಮರನು ನಾನು
ಗರುಡಗಮನನು ನೀನು, ಮರುಳು ಪಾಪಿಯು ನಾನು
ಪರಂಜ್ಯೋತಿಯು ನೀನು ತಿರುಕನು ನಾನು ॥"

–ಎಂದು ಭಗವಂತನ ಹಿರಿಮೆ ಗರಿಮೆಗಳನ್ನು ಗುರುತಿಸುವುದರೊಂದಿಗೆ ಮನುಷ್ಯರಾದ ತಮ್ಮ ಅಲ್ಪತನವನ್ನು ನಿವೇದಿಸಿದ್ದಾರೆ. "ದಾಸದಾಸರ ಮನೆಯ ದಾಸಿಯರ ಮಗ ನಾನು ಸಾಸಿರನಾಮದೊಡೆಯ ರಂಗಯ್ಯನ ಮನೆಯ" ಎಂಬ ಮಾತುಗಳಲ್ಲಿ ಕನಕದಾಸರು ಪ್ರದರ್ಶಿಸಿದ ವಿನಯಶೀಲತೆ, ಅಹಂಕಾರ ನಿರಸನ, ವ್ಯಾಸರಾಯರು ಹೇಳಿದ "ಆಳು ನಾ ನಿನ್ನಾಳು, ನಿನ್ನಾಳು ನಾನು..." ಎಂಬುದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿದೆ.

ಹರಿ ವಿಶ್ವವ್ಯಾಪಕನೆಂಬ ಸತ್ಯವನ್ನು ಹರಿದಾಸರೆಲ್ಲರೂ ಒಪ್ಪಿಕೊಂಡಿದ್ದಾರೆ. ವ್ಯಾಸರಾಯರು ತಮ್ಮ ಕೀರ್ತನೆಯೊಂದರಲ್ಲಿ :

"ಎಲ್ಲಿ ನೀ ನಿಲ್ಲಿಸಿದರೆನಗೇನು ಭಯವಿಲ್ಲ
ಬಲ್ಲೆನೋ ವಿಶ್ವವ್ಯಾಪಕನೆಂಬುದ"

ಎಂದಿದ್ದಾರೆ. ಪುರಂದರದಾಸರು ಪ್ರಸಿದ್ಧವಾದ ಕೀರ್ತನೆಯೊಂದರಲ್ಲಿ "ಸಕಲಗ್ರಹಬಲ ನೀನೆ ಸರಸಿಜಾಕ್ಷ ; ನಿಖಿಲ ವ್ಯಾಪಕ ನೀನೇ ವಿಶ್ವರಕ್ಷ" ಎಂದು ಸಾರಿ, ಭಗವಂತ ಕಾಲದೇಶಗಳಿಗೆ ಅತೀತನಾದವನು, ವಿಶ್ವದ ಎಲ್ಲ ಚಟುವಟಿಕೆಗಳ ಹಿಂದಿರುವ ಸೂತ್ರಧಾರನಾದವನು ಎಂಬುದನ್ನು ಪ್ರತಿಪಾದಿಸಿದ್ದಾರೆ. ಕಾಲದೇಶಗಳನ್ನು ವ್ಯಾಪಿಸಿ ವಿರಾಡ್ರೂಪಿಯಾಗಿರುವ ಭಗವಂತ ಭಕ್ತಿಗೆ ಮಾರುಹೋಗಿ, ಭಕ್ತನ ಹೃದಯದ ಗುಡಿಯಲ್ಲಿ ನೆಲಸಿದಾಗ ಭಕ್ತನಿಗೆ ಆಗುವ ಆನಂದ ಅದೆಂಥದೋ ! ಇಂಥ ಅನುಭವದ ಪ್ರವಾಹಕ್ಕೆ ತಮ್ಮನ್ನು ಒಡ್ಡಿಕೊಂಡ ಕನಕದಾಸರು :

"ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು
ಪದುಮನಾಭನ ಪಾದದೊಲುಮೆ ಎನಗಾಯಿತು"

ಎಂದು ಅಂತಃಕರಣ ತುಂಬಿ, ಧನ್ಯತೆಯ ಉದ್ಗಾರ ಎತ್ತಿದ್ದಾರೆ. ಈ ಅನುಭವದ ತುರೀಯ ಸ್ಥಿತಿಯ ಮುಂದೆ, ಉಳಿದೆಲ್ಲ ಐಹಿಕ ವಿಚಾರಗಳೂ ಸೊನ್ನೆ. ದಾಸರೆನ್ನುತ್ತಾರೆ :

"ಇಂದೆನ್ನ ಜೀವಕ್ಕೆ ಸಕಲ ಸಂಪದವಾಯ್ತು

ಮುಂದೆನ್ನ ಜನ್ಮ ಸಫಲವಾಯಿತು.
ತಂದೆ ಶ್ರೀ ಕಾಗಿನೆಲೆಯಾದಿ ಕೇಶವರಾಯ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ॥"

ನಿಜಕ್ಕೂ ದಾಸರಪಾಲಿಗೆ 'ಇದು ಭಾಗ್ಯ', ಇದಕ್ಕಿಂತ ಬೇರೆ ಭಾಗ್ಯವಿಲ್ಲ!

* * *

ಹೀಗೆ ವ್ಯಾಸರಾಯರು, ಪುರಂದರದಾಸರು ಮತ್ತು ಕನಕದಾಸರಲ್ಲಿ ಹೋಲಿಕೆಗೆ ಸಿಗುವ ಅನೇಕ ಅಂಶಗಳಿವೆ. ಮೇಲೆ ಹೇಳಿದ ಸಂಗತಿಗಳಲ್ಲದೇ ಮುಖ್ಯವಾಗಿ ಪ್ರಸ್ತಾಪಿಸಲೇಬೇಕಾದುದು ಕೃಷ್ಣಲೀಲೆಯನ್ನು ಕುರಿತ ಕೃತಿಗಳು. ಭಾಗವತ ದಶಮಸ್ಕಂಧದಲ್ಲಿ ಬರುವ ಕೃಷ್ಣನ ಭುವನಮೋಹಕ ಮೂರ್ತಿಯ ಬಾಲಲೀಲೆಯನ್ನು ಹರಿದಾಸರೆಲ್ಲರೂ ಭಾವಪೂರ್ಣವಾಗಿ ತಮ್ಮ ಕೀರ್ತನೆಗಳಲ್ಲಿ ಚಿತ್ರಿಸಿದ್ದಾರೆ. ವ್ಯಾಸರಾಯರ–"ಕಣ್ಣಿಗೆ ಕಟ್ಟಿದಂತಿದೆ, ಬಣ್ಣದ ಕೊಳಲ ಭಾವಿಸಿ ನೋಡಬಾರದೆ" ಎಂಬ ಕೀರ್ತನೆ. "ಆಡಿದನೋ ರಂಗ ಅದ್ಭುತದಿಂದಲಿ ಕಾಳಿಂಗನ ಫಣಿಯಲಿ" ಎಂಬ ಪುರಂದರದಾಸರ ಪದ, "ಸೈಯವೇ ಇದು ಸೈಯೆ ಗೋಪಿ।ಸೈಯೆ ಗೋಪಿ ನಿನ್ನ ಮಗನಿಗೆ ಒಳ್ಳೆಬುದ್ಧಿಕಲಿಸಿದೆ ನೋಡು" ಎಂಬ ಗೋಪಿಯರ ದೂರಿನ ರೂಪದಲ್ಲಿರುವ ಕನಕದಾಸರ ಕೀರ್ತನೆ– ಇತ್ಯಾದಿಗಳು ಅತ್ಯಂತ ರಸಸ್ಯಂದಿಯಾದವು. ಕೃಷ್ಣಲೀಲೆಯನ್ನು ಕುರಿತ ಕೀರ್ತನೆಗಳಿಗೆ ಇವು ಕೇವಲ ಒಂದೆರಡು ಉದಾಹರಣೆಗಳು ಮಾತ್ರ. ಕನಕದಾಸರು ಪುರಂದರದಾಸರಷ್ಟು ಹೆಚ್ಚಿನ ಪ್ರಮಾಣದಲ್ಲಿ ಇಂಥ ಕೀರ್ತನೆಗಳನ್ನು ರಚಿಸಿಲ್ಲ. ಆದರೆ 'ಮೋಹನ ತರಂಗಿಣಿ' ಯಂಥ ಕಾವ್ಯವನ್ನೇ ಬರೆದು ಕನಕದಾಸರು ಶ್ರೀಕೃಷ್ಣನ ಮಹಿಮೆಯನ್ನು ಪರೋಕ್ಷವಾಗಿ ಹಾಗೂ ಪ್ರತ್ಯಕ್ಷವಾಗಿ ಪ್ರತಿಪಾದಿಸಿದ್ದಾರೆ. ತಮ್ಮ ಕಾವ್ಯದ ಮಹತ್ವವನ್ನು ಅವರು ಹೇಳಿಕೊಂಡಿರುವ ರೀತಿಯೇ ಚೆನ್ನು ; ಅವರ ಪ್ರಕಾರ 'ಮೋಹನ ತರಂಗಿಣಿ' ಎಂಬುದು :

"ಹರಿಶರಣರಂಪೆಚ್ಚು ಬುಧಜನರಿಗೆ ಮೆಚ್ಚು
ದುರಿತವನಕೆ ಕಾಳ್ಕಿಚ್ಚು
ವಿರಹಿಗಳಿಗೆದೆಗಿಚ್ಚು ವೀರರ್ಗೆ ಪುಚ್ಚು ಕೇ
ಳ್ವರಿಗಿದು ತನಿಬೆಲ್ಲದಚ್ಚು ॥"

* * *

ಕೊನೆಯದಾಗಿ ಕನಕದಾಸರೊಬ್ಬರನ್ನು ಕುರಿತೇ ಪ್ರತ್ಯೇಕವಾಗಿ ಕೆಲವು ಮಾತುಗಳನ್ನು ಹೇಳಬೇಕೆನಿಸುತ್ತದೆ. ವ್ಯಾಸರಾಯರು ಪೋಷಿಸಿ, ಬೆಳಸಿದ ಭಕ್ತಿ

ವೃಕ್ಷಕ್ಕೆ ಪುರಂದರ ಕನಕರು ಎರಡು ಮುಖ್ಯ ಶಾಖೆಗಳು. ನಿಜ, ಭಕ್ತಿಸಾಹಿತ್ಯದ ಇತಿಹಾಸದಲ್ಲಿ ಅವರಿಬ್ಬರ ಹೆಸರಿಗೂ ಸಮಾನ ಗೌರವವಿರುವುದೂ ಸತ್ಯ. ಆದರೆ ಪುರಂದರದಾಸರಿಗಿಂತ ಕನಕದಾಸರು ಅದೆಷ್ಟೋ ವಿಷಯಗಳಲ್ಲಿ ಭಿನ್ನರಾಗಿದ್ದರೆಂಬ ಮಾತೂ ಅಷ್ಟೇ ಸತ್ಯ. ಶ್ರೀ ಜಿ. ಎಸ್. ಶಿವರುದ್ರಪ್ಪನವರು ಸರಿಯಾಗಿಯೇ ಗುರುತಿಸಿರುವಂತೆ 'ಪುರಂದರದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲಿ ಕಾವ್ಯಗುಣ ಒಂದು ಕೈ ಮಿಗಿಲಾಗಿಯೂ ಇರುವಂತೆ ತೋರುತ್ತದೆ. ಅದಕ್ಕೆ ಕಾರಣ ಕನಕದಾಸರು ಪ್ರಧಾನತಃ ಕವಿಗಳು ಎನ್ನುವುದೇ ಆಗಿದೆ... ಕನಕದಾಸರಲ್ಲಿ ಕಂಡುಬರುವ ಆಶ್ಚರ್ಯ, ಜಿಜ್ಞಾಸೆ, ಕಲ್ಪಕತೆಗಳು ಬೇರೆಯವರಲ್ಲಿ ವಿರಳವೆಂದೇ ಹೇಳಬಹುದು" (ಜಿ ಎಸ್. ಶಿವರುದ್ರಪ್ಪ, ಪರಿಶೀಲನ'). ತಮ್ಮ ಕಾಲದ ಹರಿದಾಸರಿಗಿಂತ ಕೇವಲ ಭಿನ್ನವಾಗಿ ಕೀರ್ತನೆಗಳನ್ನಷ್ಟೇ ರಚಿಸದೆ, ಕಾವ್ಯಗಳ ರಚನೆಯ ಸಾಹಸಕ್ಕೂ ಕೈಹಾಕಿ, ಸಾಕಷ್ಟು ಯಶಸ್ವಿಗಳಾದವರು ಕನಕದಾಸರು. ಅದರಲ್ಲೂ 'ರಾಮಧಾನ್ಯ ಚರಿತ್ರೆ' ಯಂತಹ 'ಅನ್ಯೋಕ್ತಿ' (Allegory) ಪ್ರಕಾರದ ಕಾವ್ಯವನ್ನು ಕನಕದಾಸರು ತಮ್ಮ ಕಾಲದಲ್ಲಿ ಬರೆದರೆಂಬುದನ್ನು ಗಮನಿಸಿದಾಗ ಅವರ ಅನನ್ಯತೆ, ಸ್ವೋಪಜ್ಞತೆಗಳ ಬಗೆಗೆ ಬೆರಗು ಉಂಟಾಗುತ್ತದೆ. ಇನ್ನೊಂದು ಮಾತೆಂದರೆ ಬದುಕಿನ ಅಗ್ನಿದಿವ್ಯಗಳನ್ನು ಹಾದು ಬಂದ ಕನಕದಾಸರು ಬಹುಶಃ ಕೊನೆಯವರೆಗೂ ಶೋಧಕ ಪ್ರವೃತ್ತಿಯುನ್ನೂ, ಬಾಳಿನ ನಿಜವನ್ನು ಕುರಿತಾದ 'ಹುಡುಕಾಟದ' ಮನೋಧರ್ಮವನ್ನೂ ಉಳಿಸಿಕೊಂಡೇ ಬಂದಿದ್ದರು. ಅವರು "ನೀ ಮಾಯೆಯೊಳಗೋ, ನಿನ್ನೊಳು ಮಾಯೆಯೋ ?" ಎಂದು ಕೇಳುವ ಪ್ರಶ್ನೆ, "ಬೀಜವೃಕ್ಷದೊಳಾಯ್ತು, ವೃಕ್ಷಕೆ ಬೀಜವಾರಿಂದಾಯ್ತು ?" ಎನ್ನುವ ಮತ್ತೊಂದು ಪ್ರಶ್ನೆ–ಎಲ್ಲವೂ ಅವರ ಚಿಂತನಶೀಲತೆಯನ್ನೂ ಬಾಳಿನ ನಿಗೂಢತೆಯ ಬಗೆಗಿನ ಬೆರಗಿನೊಂದಿಗಿರುವ ಕುತೂಹಲವನ್ನೂ ತೋರಿಸುತ್ತವೆ. ('ನೀ ಮಾಯೆಯೊಳಗೋ...' ಕೀರ್ತನೆಯನ್ನು ಓದಿದಾಗ ಆಧುನಿಕರಿಗೆ ಬ್ಲೇಕ್ ಕವಿಯ 'Tyger' ಪದ್ಯ ನೆನಪಾದರೆ ಆಶ್ಚರ್ಯವಲ್ಲ.) ಒಟ್ಟಿನಲ್ಲಿ ಕನಕದಾಸರು ಹರಿದಾಸರಲ್ಲಿ ಕವಿ, ಕವಿಗಳಲಿ ಅನುಭಾವಿ ; ಇದೇ ಅವರ ವಿಶಿಷ್ಟತೆ. ಪಂಚೇಂದ್ರಿಯಗಳ ಮೂಲಕ ದೊರೆಯುವ ಸಂವೇದನೆಯ ದಾರಿಯಲ್ಲಿಯೇ ನಡೆದು. ಅದರಾಚೆಗೆ ಇರುವ ಸತ್ಯಕ್ಕೆ ಕೈಚಾಚಿದವರು ಕನಕರು. 'ಇಹದ ತಳಹದಿಯಿಂದ ದಿಟದ ದರ್ಶನವರಳಿ, ಹಂಬಲಿಸಿ' ಹಾಡಿದ ಹಾಡು ಕನಕರದ್ದು!

## ಗ್ರಂಥಋಣ


೧. ಪುರಂದರ ಸಾಹಿತ್ಯದರ್ಶನ–ಸಂಪುಟ ೧ ರಿಂದ ೪ ; ಸಂಪಾದಕರು: ಪ್ರೊ. ಎಸ್. ಕೆ. ರಾಮಚಂದ್ರರಾವ್, ಪ್ರಕಾಶಕರು : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೨. ಜನಪ್ರಿಯ ಕನಕ ಸಂಪುಟ–ಸಂಪಾದಕರು : ಪ್ರೊ. ದೇ. ಜವರೇಗೌಡರು ಮತ್ತು ಇತರರು ; ಪ್ರಕಾಶಕರು ; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು.

೩. ಹರಿದಾಸ ಹೃದಯ–ಡಾ. ಜಿ. ವರದರಾಜರಾವ್ ; ಪ್ರಕಾಶಕರು : ಶಾರದಾಮಂದಿರ, ಮೈಸೂರು.

೪. ಕರ್ಣಾಟಕದ ಹರಿದಾಸರು–ಡಾ. ಎಚ್. ಕೆ. ವೇದವ್ಯಾಸಾಚಾರ್ಯ : ಪ್ರಕಾಶಕರು : ಶ್ರೀಪರಿಮಳ ಸಂಶೋಧನ ಮತ್ತು ಪ್ರಕಾಶನ ಮಂದಿರ, ನಂಜನಗೂಡು.

೫. ಕವಿ ಕನಕದಾಸರು–ಕಟ್ಟಿ ಶೇಷಾಚಾರ್ಯ. ಪ್ರಕಾಶಕರು : ಎಸ್. ಜಿ. ಕಟ್ಟಿ, ಬೆಳಗಾವಿ.

೬. ಕನಕಕಿರಣ–ಸಂಪಾದಕರು : ಕಾ. ತ. ಚಿಕ್ಕಣ್ಣ ; ಕಾಳಿದಾಸ ಸಾಂಸ್ಕೃತಿಕ ಸಂಘ, ವಿಜಯನಗರ, ಬೆಂಗಳೂರು.

೭. ದಾಸಸಾಹಿತ್ಯದ ಹಾದಿಯಲ್ಲಿ–ವಸಂತ ಕುಷ್ಟಗಿ ; ಶ್ರೀ ಬತ್ತೇರೇಶ ಪ್ರಕಾಶನ, ಕಲ್ಬುರ್ಗಿ.

೮. ಹರಿದಾಸ ಸಾಹಿತ್ಯ ಸಮೀಕ್ಷೆ – ಸಂಪಾದಕರು : ಡಾ । ಜಿ. ವರದರಾಜ ರಾವ್; ಪ್ರಕಾಶಕರು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

೯. ವಿಜಯದಾಸರು ಮತ್ತು ಅವರ ಕೃತಿಗಳು–ಎನ್. ಗೋಪಾಲ ಕೃಷ್ಣ ಉಡುಪ ; ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಡಿಸೆಂಬರ್ 62, ಜೂನ್ 63, ಡಿಸೆಂಬರ್ 63.

೧೦. ದಾಸಮಾನಸ–ಪ್ರಕಾಶನ : ಪುರಂದರದಾಸರ ೫೦೦ನೇ ಹುಟ್ಟು ಹಬ್ಬ ಕೀರ್ತನಕಾರರ ಸಮ್ಮೇಳನ ಸಮಿತಿ, ಹಾದಿಗಲ್ಲು, ಶಿವಮೊಗ್ಗ ಜಿಲ್ಲೆ.

೧೧. ಕೀರ್ತನಕಾರರು–ಎಚ್. ಎಸ್. ವೆಂಕಟೇಶಮೂರ್ತಿ. ಪ್ರಕಾಶಕರು ; ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

# ಕನಕ ಮತ್ತು ಪುರಂದರರ ಕೀರ್ತನೆಗಳು

ಜಿ. ಜಿ. ಮಂಜುನಾಥನ್

ಕನಕದಾಸರು (೧೫೦೮–೧೬೦೬) ಮತ್ತು ಪುರಂದರದಾಸರು (೧೪೮೦–೧೫೬೪) ಹರಿದಾಸ ಸಾಹಿತ್ಯದ ಎರಡು ಕಣ್ಣು. ಕಣ್ಣು ಎರಡಾದರೂ ನೋಟ ಒಂದೇ ಇರುವಂತೆ ಈ ಮಹನೀಯರು ಸಾಧಿಸಿದ ಸಾಧನೆಗಳು ಒಂದೇ ಮಟ್ಟದ್ದಾಗಿದ್ದು ಮಹತ್ತ್ವದ್ದಾಗಿವೆ. ವ್ಯಾಸರಾಯರ ಚರಣಕಮಲ ದರ್ಶನವೆನಗೇಸುಜನ್ಮದ ಸುಕೃತಫಲದಿ ದೊರಕಿತೊ (ಪೂಜಾ. ೬)* ಎಂದು ಪುರಂದರದಾಸರು ವ್ಯಾಸರಾಯರನ್ನು ಸ್ತುತಿಸಿದ್ದಾರೆ. ಕನಕದಾಸರನ್ನು ಕುರಿತು– ಕನಕದಾಸನ ಮೇಲೆ ದಯಮಾಡಲು ವ್ಯಾಸಮುನಿ ಮಠಿಕರೆಲ್ಲರು ದೂರುತಿಹರೊ (ಸಂ ೧೨೧) ಎಂದು ಕೀರ್ತನೆಯನ್ನು ರಚಿಸಿದ್ದಾರೆ. ಕನಕದಾಸರ ಕೀರ್ತನೆಗಳಲ್ಲೆಲ್ಲೂ ವ್ಯಾಸರಾಯರ ಉಲ್ಲೇಖವಿಲ್ಲ. 'ಮಗುವು ಕಾಣಿರಯ್ಯ ಮಾಯದ ಮಗುವು ಕಾಣಿರಯ್ಯ ಸುಗುಣ ವಾದಿರಾಜರೆ ಮೂಜಗವನು ತನ್ನುದರದೊಳಿಟ್ಟು' (ಕ. ಕೀ. ೧೨೦) ಎನ್ನುವ ಕೀರ್ತನೆಯಲ್ಲಿ ವಾದಿರಾಜರನ್ನು, 'ತಿರಿದುಂಬದಾಸರ ಕೈಯ ಕಪ್ಪವ ಕಟ್ಟಿಸಿಕೊಂಡೆ ತಿರುಮಲಾಚಾರ್ಯ ಶ್ರೀಗುರುವೆ ಬಲ್ಲ' (ಕ.ಕೀ. ೨೦೫) ಎನ್ನುವಲ್ಲಿ ತಿರುಮಲಾಚಾರ್ಯ ಗುರುಗಳನ್ನು

---

* ಇಲ್ಲಿ ಕೊಟ್ಟಿರುವ ಸಂಕೇತಗಳ ವಿವರ ಹೀಗಿದೆ–

೧. ಕನಕದಾಸರ ಕೀರ್ತನೆಗಳು (ಕ. ಕೀ) ಸಂ ಪಂಡಿತರತ್ನಂ ವಿದ್ಯಾವಾರಿಧಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರೀ ಮತ್ತು ಡಾ. ಕೆ. ಎಂ. ಕೃಷ್ಣರಾವ್ ಎಂ.ಎ.ಪಿ.ಎಚ್.ಡಿ. ಪ್ರಕಾಶಕರು. ರಾಜ್ಯಸಮಿತಿ ಶ್ರೀಕನಕದಾಸರ ನಾಲ್ಕನೆಯ ಶತಮಾನೋತ್ಸವ ಮೈಸೂರು ಸರ್ಕಾರ, ಬೆಂಗಳೂರು – ೧೯೬೫

೨. ಶ್ರೀ ಪುರಂದರದಾಸರ ಸಾಹಿತ್ಯ, ಸಂ. ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚರಾಯರು. ಶ್ರೀ ಪುರಂದರದಾಸರ ೪೦೦ನೆಯ ವರ್ಷದ ಉತ್ಸವ ಮಂಡಲ, ಧಾರವಾಡ. ೧. ಪೂಜಾತತ್ತ್ವ (ಪೂಜಾ) ೨. ಆರ್ತಭಾವ (ಆರ್ತ) ೩. ಮಾಹಾತ್ಮ್ಯಜ್ಞಾನ–('ಮಾಹಾ') ೪. ಕೃಷ್ಣಲೀಲಾ (ಕೃಷ್ಣ) ೫. ಲೋಕನೀತಿ (ಲೋಕ) ೬. ಸಂಕೀರ್ಣ (ಸಂ).

ನೆನೆದಿದ್ದಾರೆ. ವ್ಯಾಸರಾಯರನ್ನು ಪ್ರಹ್ಲಾದನ ಅವತಾರ, ಪುರಂದರರನ್ನು ನಾರದರ ಅವತಾರ ಎನ್ನುವ ಭಾವನೆ ಪ್ರಚಲಿತವಿರುವಂತೆಯೇ ಕನಕದಾಸರನ್ನು ಯಮಧರ್ಮನ ಅವತಾರ ಎನ್ನುವ ಭಾವನೆಯಿದೆ. ಈ ಮಾತಿಗೆ ಪೂರಕವಾಗಿ ಕನಕದಾಸರ–'ಯಮನು ಮುನ್ನೆ ಮಾಂಡವ್ಯ ಶಾಪದಿಂದೆರಡು ಜನುಮ ಶೂದ್ರಯೋನಿಯೊಳಗೆ ಪುಟ್ಟಿದನು ಮೊದಲ ಜನುಮ ವಿದುರನಾಗಿ ಕುರುಬರ ಕುಲದಲ್ಲಿ ಜನಿಸಿದೆನಗೀ ಜನುಮದಲ್ಲಿ ಮುಕ್ತಿ ಎಂತು ಎಂಬೆ' (ಕ ಕೀ 90) ಎನ್ನುವ ಕೀರ್ತನೆ ನಿಲ್ಲುತ್ತದೆ.

ಪುರಂದರದಾಸರು ಮತ್ತು ಕನಕದಾಸರು ಹರಿದಾಸದೀಕ್ಷೆಯನ್ನು ಸ್ವೀಕರಿಸುವುದಕ್ಕೆ ಕಾರಣವಾದ ಸಂದರ್ಭಗಳು ಪರಂಪರಾಗತವಾದ ನಂಬಿಕೆಗೆ ಪಾತ್ರವಾಗಿದ್ದು ಹೀಗಿವೆ. ಪುರಂದರ ವೈರಾಗ್ಯಭಾವನೆಯು ಸ್ಫುಟಗೊಳ್ಳಲು ಅವರ ಹೆಂಡತಿಯ ಮೂಗುತಿಯ ಪ್ರಸಂಗ ಕಾರಣವೆಂದು ಭಾವಿಸಲಾಗಿದ್ದು ಇದಕ್ಕೆ ಆಧಾರವಾಗಿ–ಆದದ್ದೆಲ್ಲಾ ಒಳಿತೇ ಆಯಿತು ನಮ್ಮ ಶ್ರೀಧರನ ಸೇವೆಯ ಮಾಡಲು ಸಾಧನಸಂಪತ್ತಾಯಿತು ಎನ್ನುವ ಕೀರ್ತನೆ ನಿಲ್ಲುತ್ತದೆ. ಅಂತೆಯೇ ಕನಕದಾಸರು ಯುದ್ಧರಂಗದಲ್ಲಿ ಗತಾಸುವಾಗಿ ಬಿದ್ದಿದ್ದಾಗ ಹರಿ ಬಂದು ಸಲಹಿದನೆಂದೂ ಅದರಿಂದ ಅವರಿಗೆ ವೈರಾಗ್ಯ ಮೂಡಿತೆಂದೂ ನಂಬಲಾಗಿದೆ. ಇದಕ್ಕೆ ಆಧಾರವಾಗಿ–ಹರಿ ನಿನ್ನ ಪದಕಮಲ ಕರುಣದಿಂದಲಿ ಎನಗೆ ದೊರಕಿತೀ ಗುರುವೆ ಹರಿಯೆ (ಕ.ಕೀ. ೯೨) ಎನ್ನುವ ಕೀರ್ತನೆಯ ಭಾಗವಾದ 'ಅರಿಗಳು ದಂಡೆತ್ತಿ ಬರಲು ನಾನವರೊಡನೆ ಪರಿಪರಿ ಹೋರುತಿರಲು ದುರುಳರೆನ್ನನು ಜೈಸಿ ಹರಿದಟ್ಟಿ ಬಂದೆನ್ನ ಧರೆಗುರುಳಿಸಿದರೊ ಹರಿಯೆ...ದೊರೆತನವ ಬಿಡಿಸಿ ಸುಸ್ಥಿರ ಮಾರ್ಗವನೆ ತೋರಿ ಪರಿಪಾಲಿಸಿದೆಯೆನ್ನ ಹರಿಯೆ' ಎನ್ನುವ ಮಾತು ನಿಲ್ಲುತ್ತದೆ.

ಪುರಂದರದಾಸರು ಬ್ರಾಹ್ಮಣರೆಂದೂ ಚಿನಿವಾರವೃತ್ತಿಯ ವೈಶ್ಯರೆಂದೂ ಊಹೆಗಳಿವೆ. ಆದರೆ ಕಮಲಾಪುರದ ಶಾಸನದಲ್ಲಿ ಬರುವ–

ಧೀಮಾನ್ ಲಕ್ಷ್ಮಣದಾಸಾಖ್ಯಃ ಶ್ರೀಪುರಂದರದಾಸಜಃ
ವಸಿಷ್ಠಗೋತ್ರಜೋ ವೃತ್ತಿದ್ವಯಮತ್ರೈಹಿಯಾಜುಷಃ ॥

ವಸಿಷ್ಠಾನ್ವಯ ಸಂಭೂತಃ ಶ್ರೀಪುರಂದರದಾಸಜಃ
ದ್ವಜೋ ಹೇಬಣದಾಸಾಖ್ಯೋ ಯಾಜುಷೋತ್ರದ್ವಿವೃತ್ತಿಕಃ ॥

ವಸಿಷ್ಠಗೋತ್ರ ಸಂಭೂತಃ ಶ್ರೀಪುರಂದರದಾಸಜಃ
ಧೀಮಾನ್ ಮಧ್ವಪದಾಸಾಖಯೋಽಯಾಜುಷೋತ್ರದ್ವಿವೃತ್ತಿಕಂ ॥*

ಎನ್ನುವ ಉಲ್ಲೇಖದಿಂದ ಅವರು ಬ್ರಾಹ್ಮಣರೆಂದು ಭಾವಿಸಬಹುದಾಗಿದೆ. ಕನಕದಾಸರನ್ನು ಕುರಿತು ಕುರುಬ, ಕಬ್ಬಲಿಗ, ಬೇಡಜಾತಿಗೆ ಸೇರಿದವರೆಂದು ವಿದ್ವಾಂಸರು ಬಗೆ ಬಗೆಯಾಗಿ ಪ್ರತಿಪಾದಿಸಿದ್ದಾರೆ. ಕುರುಬಜಾತಿಗೆ ಸೇರಿದವರೆನ್ನಲು–ಕುರುಬರ ಕುಲದಲ್ಲಿ ಜನಿಸಿದೆನಗೀ ಜನುಮದಲ್ಲಿ ಮುಕ್ತಿ ಎಂತು ಎಂಬೆ (ಕ. ಕೀ. ೯೦), ನಾವು ಕುರುಬರು ನಮ್ಮ ದೇವರೊ ಬೀರಯ್ಯ (ಕ.ಕೀ. ೧೩.೮) ಎನ್ನುವ ಕೀರ್ತನೆಗಳು ಆಧಾರವಾಗಿವೆ. ಕನಕದಾಸನು ಕಬ್ಬಲಿಗನು ಎಂದು ಅಣಕಿಸಿ ನುಡಿಬೇಡಿರಣ್ಣ (ಮಹಾ ೧೭) ಎನ್ನುವ

ಪುರಂದರದಾಸರ ಮಾತಿನಿಂದ ಅವರನ್ನು ಕಬ್ಬಲಿಗನೆಂದು ಭಾವಿಸಬಹುದಾಗಿದೆ, ಬೆಟಗೇರಿ ಕೃಷ್ಣಶರ್ಮರು ಮತ್ತು ಬೆಂಗೇರಿ ಹುಚ್ಚರಾಯರು ತಾವು ನಡೆಸಿದ ಕ್ಷೇತ್ರಕಾರ್ಯದಿಂದ ಬೇಡರವರ್ಗಕ್ಕೆ ಸೇರಿದ ದಾಸಜಾತಿಯವರಿರಬೇಕೆಂದು ಮಾಹಿತಿಗಳನ್ನು ಒದಗಿಸಿದ್ದಾರೆ. ಆದರೆ ಕನಕದಾಸರೇ ರಚಿಸಿರುವರೆಂದು ಭಾವಿಸಲಾಗಿರುವ–ಕುರುಬರ ಕುಲದಲ್ಲಿ ಜನಿಸಿದೆನಗೀ ಜನುಮದಲ್ಲಿ ಮುಕ್ತಿ ಎಂತು ಎಂಬೆ ಎನ್ನುವ ಮಾತು ಪ್ರಕ್ಷಿಪ್ತವಾಗಿಲ್ಲದಿದ್ದಲ್ಲಿ ಅವರು ಕುರುಬರಜಾತಿಗೆ ಸೇರಿದವರೆಂದು ಭಾವಿಸಬಹುದಾಗಿದೆ.

ಪುರಂದರದಾಸರು ವ್ಯಾಸರಾಯರಿಂದ ದೀಕ್ಷೆ ಪಡೆದದ್ದು ನಿಜವಾದರೂ ಅವರಿಗೆ ರಾಮಾನುಜ ಪುಣೀತ ಶ್ರೀವೈಷ್ಣವ ಧರ್ಮದ ಪರಿಚಯವಿದ್ದಿತೆನ್ನುವುದಕ್ಕೆ–ಕದವನಿಕ್ಕಿದಳಿದೆಕೊ ಗಯ್ಯಾಳೀ ಮೂಳಿ ಕೀರ್ತನೆಯಲ್ಲಿ ಭಾರತ ರಾಮಾಯಣ ಪಾಂಚರಾತ್ರಾಗಮ ಸಾರಸತ್ತ್ವದ ಬಿಂದು ಕಿವಿಗೆ ಬಿದ್ದೀತೆಂದು (ಸಂ. ೧೧೭) ಎನ್ನುವ ಮಾತು ನಿಲ್ಲುತ್ತದೆ. ಆದುದರಿಂದ ಪುರಂದರದಾಸರು ಕರ್ನಾಟಕದಲ್ಲಿ ಪ್ರಚಲಿತವಿದ್ದ ಭಾಗವತ ಧರ್ಮದ ಅನುಯಾಯಿಗಳಾಗಿದ್ದು ಅನಂತರ ಮಧ್ವಮತವನ್ನು ಸ್ವೀಕರಿಸಿರಬಹುದು. ಕನಕದಾಸರು ಆರಂಭದಲ್ಲಿ ಶ್ರೀವೈಷ್ಣವಧರ್ಮದ ಅನುಯಾಯಿಗಳಾಗಿದ್ದುದಕ್ಕೆ ರಾಮಾನುಜ ಮತೋದ್ಧಾರಕ ತಾಮಸಗುಣಪಾಶ ಗಿರಿವಜ್ರದಂಡ ಎನ್ನುವ ಕೀರ್ತನೆಯಲ್ಲಿ ಬರುವ ಹರಹರ ಎಂಬ ಶೈವರ ಏಳ್ನೂರು ಶಿರಗಳನರಿದನು ನಮ್ಮ ತಾತಯ್ಯ–ಎನ್ನುವಲ್ಲಿ

* 'ಎಪಿಗ್ರಾಫಿಯ ಇಂಡಿಕ. ಸಂಪುಟ ३೧, ಸಂಚಿಕೆ ३, ಶ್ಲೋಕ ೧೭೮–೧೮೦.

ತಾತಾಚಾರ್ಯರನ್ನು ಸ್ಮರಿಸಿರುವುದು, ವಂದಿಸಿರುವುದು ಕಾರಣವಾಗುತ್ತದೆ. ಅನಂತರದ ಕಾಲದಲ್ಲಿ ಕನಕದಾಸರು ವಾದಿರಾಜರ ಶಿಷ್ಯತ್ವವನ್ನು ವಹಿಸಿ ಮಧ್ವಮತದ ಅನುಯಾಯಿಗಳಾಗಿದ್ದಾರೆ. ಹನುಮಂತ, ಭೀಮ, ಆನಂದತೀರ್ಥರು ಹೀಗೆ ಪರಂಪರೆಯಾಗಿಬರುವ ಮಧ್ವಮತದ ಸಿದ್ಧಾಂತಕ್ಕೆ ಅನುಗುಣವಾಗಿಯೋ ಪುರಂದರ ಮತ್ತು ಕನಕರು ಮಧ್ವಾಚಾರ್ಯರನ್ನು ನೆನೆದಿದ್ದಾರೆ. ಪುರಂದರದಾಸರು, ಕೂಸನು ಕಂಡಿರಾ–ಮುಖ್ಯಪ್ರಾಣನ ಕಂಡಿರಾ (ಪೂಜಾ. ೩೫) ಎನ್ನುವ ಕೀರ್ತನೆಯಲ್ಲಿ ಹನುಮಂತ, ಭೀಮರ ಅನಂತರ ಮಧ್ವಾಚಾರ್ಯರನ್ನು

ಮಾಯಾವಾದಿಗಳ ಗೆದ್ದಿತು ಕೂಸು
ಮಧ್ವಮತವನ್ನುದ್ಧರಿಸಿತು ಕೂಸು
ಮುದ್ದು ಶ್ರೀ ಪುರಂದರವಿಠಲನ ದಯದಿಂದ
ಉಡುಪಿಯಲ್ಲಿ ಬಂದು ನಿಂತಿತು ಕೂಸು ॥ ೩ ॥

ಎಂದು ಮುಂತಾಗಿ ಸ್ತುತಿಸಿದ್ದರೆ ಕನಕದಾಸರು–ಪರಮಪದವೀವ ಗುರುಮುಖ್ಯ ಪ್ರಾಣ (ಕ, ಕೀ. ೧೦) ಎನ್ನುವ ಕೀರ್ತನೆಯಲ್ಲಿ–

ಕಲಿಯುಗದಲ್ಲಿ ತುರೀಯಾಶ್ರಮವನೆ ಧರಿಸಿ
ಕಲುಷರಾದ ಮಾಯಿಗಳ ಸೋಲಿಸಿ
ಬಲವಾದ ಮಧ್ವಮತವನ್ನು ಬಲಿದೆಂದೆನಿಸಿ ಕಾಗಿ
ನೆಲೆಯಾದಿಕೇಶವನೆ ವರದೈವವೆನಿಸಿ ॥ ೩ ॥

ಎನ್ನುವಂತಹ ಕೀರ್ತನೆ (ಕ. ಕೀ. ೧೩) ಗಳನ್ನು ರಚಿಸಿದ್ದಾರೆ.

ಭಕ್ತನು ದೈವಸಾಕ್ಷಾತ್ಕಾರವನ್ನು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂಬ ನವವಿಧ ಭಕ್ತಿಗಳ ಮೂಲಕ ಪಡೆಯಬಹುದೆಂದು ಭಾರತೀಯ ಧರ್ಮಪರಂಪರೆ ಭಾವಿಸುತ್ತದೆ. ಅಂತೆಯೇ ಮಧ್ವಮತದವರೂ ಕೂಡ ಅದನ್ನು ಅಂಗೀಕರಿಸಿದ್ದಾರೆ. ಪುರಂದರದಾಸರು–ಹರಿಯ ಒಂಬತ್ತು ಭಕ್ತಿಯ ಬಲ್ಲ ಧೀರ, ಮರಳಿ ಸಂಸ್ಕೃತಿಯ ದಾರಿಗೆ ಹುಟ್ಟಿ ಬಾರ (ಮಾಹಾ೧) ಎನ್ನುವ ಕೀರ್ತನೆಯಲ್ಲಿ ನವವಿಧಭಕ್ತಿಯ ಸ್ವರೂಪವನ್ನು ವಿವರ ವಿವರವಾಗಿ ವರ್ಣಿಸಿ ಕಡೆಯಲ್ಲಿ–

ಹರಿಕಥಾಶ್ರವಣವು ಹರಿನಾಮಸಂಕೀರ್ತನೆ
ಹರಿಸ್ಮರಣೆ ಹರಿಪಾದ ಸೇವನ
ಹರಿಪೂಜನ ವಂದನ ದಾಸ್ಯ ಸಖ್ಯತ್ವ

ಹರಿಗಾತ್ಮ ಅರ್ಪಣ ಮುಕ್ತಿಪಥತತ್ವ
ಪುರಂದರವಿಟ್ಠಲ ಪರಮಾತ್ಮಸಿದ್ಧ
ಗುರುಮಧ್ವಮತ ಶ್ರುತಿ ಸ್ಮೃತಿಯೊಳು ಶುದ್ಧ ॥ (ಮಹಾ ೧–೧೧)

ಎಂದು ಪ್ರತಿಪಾದಿಸಿದ್ದಾರೆ. ಅಲ್ಲದೆ ಈ ಸಿದ್ಧಾಂತಕ್ಕನಗುಣವಾಗಿ ಕೀರ್ತನೆಗಳನ್ನು ರಚಿಸಿದ್ದಾರೆ. ಉದಾಹರಣೆಗೆ ಎಲ್ಲಿ ಹರಿಕಥಾ ಪ್ರಸಂಗವೊ ಅಲ್ಲಿ ಗಂಗೆ ಯಮುನೆ ಗೋದಾವರಿ ಸರಸ್ವತಿ ಸಿಂಧು ಮುಂತಾದ ಎಲ್ಲ ತೀರ್ಥಗಳೂ ನೆಲೆಸುತ್ತವೆ ಎನ್ನುವಲ್ಲಿ ಹರಿಕಥಾ ಪ್ರಸಂಗದ ಮಹತ್ವವನ್ನು, ಸುಜನರಿಗೆ–ಜಯ ಜಯ ಹರಿಯೆಂಬುದೆ ಸುದಿನ ತಾರಾಬಲ, ಚಂದ್ರಬಲ, ದೈವಬಲ, ಪುರಂದರವಿಠ್ಠಲನ ಬಲ ಎನ್ನುವಲ್ಲಿ ದಾಸ್ಯಭಾವದ ವಿವರ ಮುಂತಾದವು ಲಭ್ಯವಾಗುತ್ತವೆ. ಅದೇ ರೀತಿ ಕನಕದಾಸರು ಕೂಡ ನವವಿಧ ಭಕ್ತಿಮಾರ್ಗದಲ್ಲಿ ತಮ್ಮ ಸಾಧನೆಯನ್ನು ನಡೆಸಿದ್ದಾರೆ. ಈಶ ನಿನ್ನ ಚರಣಭಜನೆ ಆಸೆಯಿಂದ ಮಾಡುವೆನು (ಕ. ಕೀ. ೯೮) ಎನ್ನುವ ಕೀರ್ತನೆಯಲ್ಲಿ–ಜನನಿಜನಕ ನೀನೆ ಎಂದು ಎನುವೆನಯ್ಯ ದೀನಬಂಧು, ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು, ಸಾಧುಸಂಗ ಕೊಟ್ಟು ನಿನ್ನ ಪಾದಭಜನೆ ಇತ್ತು ಎನ್ನ ಭೇದಮಾಡಿ ನೋಡದಿರು, ಚಾರು ಚರಣ ತೋರಿ ಎನಗೆ ಪಾರುಗಾಣಿಸಯ್ಯ ಮುಂತಾಗಿ ಸ್ತುತಿಸುವಲ್ಲಿ ನವವಿಧ ಭಕ್ತಿಯ ಚೌಕಟ್ಟನ್ನು ಕಾಣಬಹುದಾಗಿದೆ. ಅಲ್ಲದೆ ನಾರಾಯಣ ಎಂಬ ನಾಮದ ಬೀಜವನು ನಾಲಿಗೆಯ ಕೂರಿಗೆಯ ಮಾಡಿ ಬಿತ್ತಿರಯ್ಯ (ಕ. ಕೀ.–೬೨, ಹರಿನಾಮ ಸಂಕೀರ್ತನೆ) ನೆನೆಯೊ ಎಲೆ ಮನವೆ ನವನೀತಕೃಷ್ಣನ (ಕ.ಕೀ. ೮೭. ಹರಿನಾಮಸ್ಮರಣೆ) ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವ (ಕ. ಕೀ. ೧೦೬ ಪಾದಸೇವನ), ಬಂದೆವಯ್ಯ ಗೋವಿಂದಸೆಟ್ಟಿ, (ಕ ಕೀ. ೩೮) ಹೇ ಫುಲ್ಲವದನೆ ನಿಲ್ಲಲಾರೆನು (ಕ. ಕೀ. ೧೩೪), ತೋರೆ ಬೇಗನೆ ಸಖಿ (ಕ. ಕೀ. ೧೭೯). ಮುಂತಾದ ಕೀರ್ತನೆಗಳಲ್ಲಿ ಸಖ್ಯಭಾವವನ್ನು ಕಾಣಬಹುದುದಾಗಿದೆ. ತನು ನಿನ್ನದು ಜೀವನ ನಿನ್ನದು (ಕ. ಕೀ. ೩೮ ಅರ್ಪಣ), ನೀನುಪೇಕ್ಷೆಯ ಮಾಡೆ ಬೇರೆ ಗತಿಯಾರೆನಗೆ ನಿಗಮಗೋಚರ ಮುಕುಂದ (ಕ. ಕೀ, ೬೩ ದಾಸ್ಯ) ಮುಂತಾದ ಕೀರ್ತನೆಯನ್ನು ನೋಡಬಹುದು. ಹೀಗೆ ಪುರಂದರ ಮತ್ತು ಕನಕರು ತಮ್ಮ ಭಕ್ತಿಮಾರ್ಗಸಾಧನೆಗೆ ನವವಿಧ ಭಕ್ತಿಯನ್ನು ಸೋಪಾನವನ್ನಾಗಿ ಮಾಡಿಕೊಂಡಿದ್ದಾರೆ. ಈ ಸಾಧನೆಯಲ್ಲಿ ಗುರುವಿನ ಮಾರ್ಗದರ್ಶನ ಅತ್ಯವಶ್ಯಕವಾದುದೆನ್ನುವುದನ್ನು ತಿಳಿಸುವ ಕೀರ್ತನೆಗಳನ್ನು ಇಬ್ಬರೂ ರಚಿಸಿದ್ದಾರೆ.

ಪುರಂದರರ ಪ್ರಕಾರ ಗುರುವಿನ ಉಪದೇಶವಿಲ್ಲದ ಜ್ಞಾನ, ಸ್ನಾನ, ಧ್ಯಾನ, ಜಪ, ತಪ, ಮಂತ್ರಗಳು ಉರಗನ ಉಪವಾಸದಂತೆ (ಪೂಜಾ. ೬) ವ್ಯರ್ಥವಾದದ್ದು. ಅಲ್ಲದೆ :

ಅಂಕಿತವಿಲ್ಲದ ದೇಹ ನಿಷೇಧ
ಅಂಕಿತವಿಲ್ಲದ ಕಾವ್ಯ ಶೋಭಿಸದು
ಅಂಕಿತವಿಲ್ಲದೆ ಇರಬಾರದೆಂದು ಚ
ಕ್ರಾಂಕಿತವನು ಮಾಡಿ ಎನ್ನಂಗಕೆ
ಪಂಕಜನಾಭ ಪುರಂದರವಿಠ್ಠಲನ
ಅಂಕಿತವೆನಗಿತ್ತ ಗುರುವ್ಯಾಸಮುನಿರಾಯ ॥

ಎಂದು ತಿಳಿಸಿದ್ದಾರೆ. ಗುರುವಿನ ಒಲುಮೆಯು ಆಗುವ ತನಕ ದೊರೆಯದಣ್ಣ ಮುಕುತಿ (ಮಹಾ ೩೮) ಎನ್ನುವ ಕೀರ್ತನೆಯಲ್ಲಿ ಗುರುವಿನ ಮಹಾತ್ಮೆಯನ್ನು ತಿಳಿಸಿದ್ದಾರೆ. ಇದೇ ಬಗೆಯ ಅಭಿಪ್ರಾಯವನ್ನು :

ಆದಿಗುರುವರಿಯದೆ ಅತ್ತಲಿತ್ತಲು ತೊಳಲಿ
ವೇದಶಾಸ್ತ್ರಗಳನೋದಿ ಬಾಯಾರಲು
ಆದಿಯನು ಕಾಣದಿಂದಿರುತ್ತಿದ್ದು ಹಲವೆಂಟು
ವಾದತರ್ಕದೊಳಿದ್ದ ಭೇದವಾದಿಗಳು ॥ (ಕ. ಕೀ. ೧೦೫)

ಎನ್ನುವಲ್ಲಿ ಕನಕದಾಸರು ಗುರುವಿನ ಅವಶ್ಯಕತೆಯನ್ನು ತಿಳಿಸಿದ್ದಾರೆ. ಅಷ್ಟೇ ಅಲ್ಲದೆ– ತನ್ನ ಗುರುವನ್ನು ನೆನೆಯಬೇಕಣ್ಣ (ಕ. ಕೀ ೧೫೧) ಎಂದು ತಿಳಿಸಿದ್ದಾರೆ.

ಗುರುಮುಖೇನ ಸಾಧನೆಗೆ ತೊಡಗಿದ ದಾಸರು ಮಧ್ವಮತದ ಹರಿಸರ್ವೋತ್ತಮತ್ವವನ್ನು ಒಪ್ಪಿಕೊಂಡು ತಾರತಮ್ಯ ಸ್ತೋತ್ರದ–ವಂದೇ ವಿಷ್ಣುಂ ನಮಾಮಿ ಶ್ರಿಯ ಮಥಚ ಭವಂ ಬ್ರಹ್ಮ ವಾಯು ಚ ವಂದೇ ಎನ್ನುವ ತಾರತಮ್ಯಭೇದವನ್ನು ಅಂಗೀಕರಿಸಿದ್ದಾರೆ. ಪುರಂದರದಾಸರು ಈ ಸೂತ್ರಕ್ಕೆ ಅನುಗುಣವಾಗಿ :

ಸತ್ಯ ಜಗತಿದು ಪಂಚಭೇದವು ನಿತ್ಯ ಶ್ರೀಗೋವಿಂದನ
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ॥

ಎನ್ನುವ ಕೀರ್ತನೆಯನ್ನು ರಚಿಸಿದ್ದಾರೆ. ಹರಿಸರ್ವೋತ್ತಮತ್ವದ ಚೌಕಟ್ಟಿನಲ್ಲಿಯೇ ವಿನಾಯಕ, ರುದ್ರ, ಶೇಷ, ಭಾರತಿ, ಶಾರದ, ವಾಯು, ರಮಾದೇವಿಯರನ್ನು ಕುರಿತು ಹಾಡಿದ್ದಾರೆ. ಕನಕದಾಸರೂ ಕೂಡ ಸರಸ್ವತಿ,

ಹನುಮಂತ, ಭೀಮ ಮುಂತಾದವರನ್ನು ಕುರಿತು ಕೀರ್ತನೆಗಳನ್ನು ರಚಿಸಿರವುದಲ್ಲದೆ ಶನೀಶ್ಚರ, ಸದಾಶಿವ ಮುಂತಾದವರ ಬಗ್ಗೆಯೂ ಕೀರ್ತನೆಗಳನ್ನು ರಚಿಸಿರುವುದುಂಟು. ಆವ ಬಲವಿದ್ದರೇನು ದೈವಬಲವಿಲ್ಲದವಗೆ ಶ್ರೀವಾಸುದೇವನ ಬಲ ನಿಜವಾಗಿ ಇಲ್ಲದನಕ ಎಂದು ಆರಂಭಿಸಿ ಶಿಶುಪಾಲ, ಹಿರಣ್ಯಾಕ್ಷ, ರಾವಣ, ಬಾಣ ಮುಂತಾದವರಿಗೆ ಈಶ್ವರನ ಬಲವಿದ್ದು ಏನು ತಾನೇ ಪ್ರಯೋಜನವಾಯಿತು. ಅವರೆಲ್ಲ ನಾಶವಾದರೆಂದು ಕನಕದಾಸರು ತಿಳಿಸಿದ್ದಾರೆ. ಪುರಂದರದಾಸರು :

> ಹೊಯ್ಯೆಲೊ ಡಂಗುರವ–ಜಗ
> ದಯ್ಯನಯ್ಯ ಶ್ರೀಹರಿ ಅಲ್ಲದಿಲ್ಲವೆಂದು ॥ (ಮಾಹಾ ೧೪೩)

ಎಂದು ಸಾರಿದರೆ ಕನಕದಾಸರು ಕೊರವಂಜಿಯ ಹಾಡಿನ ರೂಪದಲ್ಲಿ:

> ಕಣಿಯ ಹೇಳಬಂದೆ ನಾರಾಯಣನಲ್ಲದಿಲ್ಲವೆಂದು ॥ಪ॥
> ಸಿಕ್ಕ ಬಣಗು ದೈವದ ಗೊಡವೆ ಬೇಡ ನರಕ ತಪ್ಪದು ॥ಅ॥

ಎಂದು ಹೇಳುತ್ತ ಎಕ್ಕನಾತಿ, ಕಾಟ, ಜಕ್ಕಿ, ಬೈರೇದೇವರು, ಮಾರಿ, ಮಸಣಿ, ಚೌಡಿ, ಮೈಲಾರಿ, ಗುತ್ತಿಯ ಎಲ್ಲಮ್ಮ ಮುಂತಾದ ದೇವತೆಗಳನ್ನು ಪೂಜೆಮಾಡಬೇಡಿ, ಕೈಯಲ್ಲಿನ ಹೊನ್ನನ್ನು ಹಣವನ್ನು ಕಳೆದುಕೊಳ್ಳಬೇಡಿ. ಕೋಣ ಕುರಿಗಳ ಬಲಿಕೊಡಬೇಡಿ. ಪೊಳ್ಳುದೈವದ ಗೊಡವೆ ಬೇಡಿ. ಬಾಡದಾದಿಕೇಶವನ ಬಿಡದೆ ಭಜಿಸಿರೊ ಎಂದು ಹೇಳಿದ್ದಾರೆ (ಕ. ಕೀ. ೧೪೨)

ಹರಿಸೇವೆ ಮಾಡುವಲ್ಲಿ ಕನಕ–ಪುರಂದರ–ವ್ಯಾಸರಾಯರಂಥ ಜನರು ಇದ್ದುದು ನಿಜವಾದರೂ ಹೊಟ್ಟೆಯ ಪಾಡಿಗಾಗಿ ಡಂಭಕತನಕ್ಕಾಗಿ ನಡೆಸಿದವರೇ ಬಹಳ. ಪುರಂದರ ದಾಸರು ತಮಗೇ ಅನ್ವಯವಾಗುವಂತೆ ರಚಿಸಿದ ಕೀರ್ತನೆಯೊಂದರಲ್ಲಿ :

> ದಾಸನೆಂತಾಗುವೆನು ಧರೆಯೊಳಗೆ ನಾನು
> ವಾಸುದೇವನಲಿ ಲೇಶ ಭಕುತಿಯ ಕಾಣೆ ॥ಪ॥
> ಗೂಟನಾಮವ ಹೊಡೆದು ಗುಂಡು ತಂಬಿಗೆ ಹಿಡಿದು
> ಗೋಟಂಚು ಧೋತರ ಮಡಿಯನುಟ್ಟು
> ದಾಟುಗಾಲಿಡುತ ನಾ ಧರೆಯೊಳಗೆ ಬರಲೆನ್ನ
> ಬೂಟಕತನ ನೋಡಿ ಭ್ರಮಿಸದಿರಿ ಜನರೆ ॥ ಲೋಕ ೧೭ ॥

ಎಂದಿದ್ದರೆ ಕನಕದಾಸರು–ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೆ ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ (ಕ. ಕೀ. ೧೨೬) ಎನ್ನುವ

ಕೀರ್ತನೆಯಲ್ಲಿ–

ಪಟ್ಟೆನಾಮವ ಬಳೆದು ಪಾತ್ರೆ ಕೈಯಲಿ ಪಿಡಿದು
ಗುಟ್ಟಿನಲಿ ರಹಸ್ಯವ ಗುರುತರಿಯದೆ
ಕೆಟ್ಟ ಕೂಗನು ಕೂಗಿ ಬಗುಳಿ ಬಾಯಾರುವಂಥ
ಹೊಟ್ಟೆಗುಡಮ್ಯಗಗಳೆಲ್ಲ ಶ್ರೀವೈಷ್ಣವರೆ ಕೃಷ್ಣ ॥

ಎಂದು ಪ್ರಶ್ನಿಸಿದ್ದಾರೆ. ಇಂತಹ ಡಾಂಭಿಕರು ನಡೆಸುವ ಪೂಜೆಯನ್ನು ಕುರಿತು ಪುರಂದರದಾಸರು ವಿಡಂಬಿಸುತ್ತ ಇವರು ದೇವರ ಸೇವೆಗಾಗಿ ಪೂಜೆ ಮಾಡುವುದಿಲ್ಲ. ಇವರು ನಡೆಸುವ ಪೂಜೆ ಸ್ವಾರ್ಥಕ್ಕಾಗಿ ಎನ್ನುವುದನ್ನು–ಉದರ ವೈರಾಗ್ಯವಿದು (ಆರ್ತ ೪೬) ಎನ್ನುವ ಕೀರ್ತನೆಯಲ್ಲೂ ಹಸಿವಾಯಿತೇಳು ದೇವರ ತೊಳೆ ಎಂಬರು ಹಸನಾಗಿ ಮನಮುಟ್ಟಿ ಪೂಜೆಯಮಾಡರು (ಲೋಕ ೭೫) ಎನ್ನುವ ಉಗಾಭೋಗದಲ್ಲಿಯೂ ತಿಳಿಸಿದ್ದಾರೆ.

ಮಡಿ, ಹೊಲೆ ಮತ್ತು ಕುಲಗಳು ವ್ಯಕ್ತಿಗತವಾಗಿರುತ್ತವೆಯೇ ಹೊರತು ಬೇರಲ್ಲ ಎನ್ನುವ ನಿಲುವು ಇವರದು. ಪುರಂದರದಾಸರು ಈ ಅಭಿಪ್ರಾಯವನ್ನು:

ಮಡಿಮಡಿಯೆಂದು ಮುಮ್ಮಾರು ಹಾರುವೆ
ಮಡಿಯೆಲ್ಲಿ ಬಂದಿತೊ ಬಿಕನಾಶೀ ॥ಪ॥
ಮಡಿಯು ನೀನೆ–ಮೈಲಿಗೆ ನೀನೆ
ಸುಡಲಿ ನಿನ್ನ ಮಡಿ ಬಿಕನಾಶಿ ॥ಅ॥ಪ॥ (ಲೋಕ ೭೧)

ಎನ್ನುವ ಕೀರ್ತನೆಯಲ್ಲಿ ಬಟ್ಟೆಯನ್ನು ನೀರಲ್ಲಿಟ್ಟು ಒಣಗಿಸಿ ಉಟ್ಟರೆ ಅದು ಮಡಿಯಲ್ಲ, ಹೊಟ್ಟೆಯೊಳಗಿನ ಕಾಮಕ್ರೋಧಗಳ ಬಿಟ್ಟರೆ ಅದು ಮಡಿಯೆಂದು ತಿಳಿಸಿದ್ದಾರೆ. ಗುರುಹಿರಿಯರನ್ನು ಹರಿದಾಸರನ್ನು ನೆನೆದು ಚರಣಕ್ಕೆರಗಿ ಭಯಭಕ್ತಿಯಿಂದ ಪುರಂದರವಿಟ್ಠಲನ ನೆರೆನಂಬುವುದು ಉತ್ತಮ ಮಡಿಯೆಂದಿದ್ದಾರೆ. ಹೀಗೆಯೇ ಹೊಲೆಯೆನ್ನುವುದು ಹೊಲೆಗೇರಿಯಲ್ಲಿಲ್ಲ, ಅವನು ಊರೊಳಗೆ ಇಲ್ಲವೆ ಶಾಸ್ತ್ರವಿದರು ಹೇಳಿ ಎಂದಿದ್ದಾರೆ. ಮುಂದುವರೆದು ಕುಲದ ಬಗ್ಗೆ ಹೇಳುವಾಗ–ಆವಕುಲವಾದರೇನು ಭಾವಜ್ಞಾನ ತಿಳಿದವನಿಗೆ ಮತ್ತೆ (ಲೋಕ ೮೯) ಎನ್ನುವ ಭಾವವನ್ನು ವ್ಯಕ್ತಪಡಿಸಿದ್ದಾರೆ.

ಕನಕದಾಸರಿಗೆ ಮಡಿ ಅಥವಾ ಹೊಲೆಯೆನ್ನುವ ಮಾತುಗಳಿಗಿಂತ ಕುಲ ಎನ್ನುವ ಮಾತು ಮುಖ್ಯವಾದದ್ದು. ಏಕೆಂದರೆ ಶೂದ್ರವರ್ಗದಲ್ಲಿ ಜನಿಸಿದ ಕನಕದಾಸರು ಮಠೀಯರಿಂದ ತುಂಬ ನೋವನ್ನು ಅನುಭವಿಸಿದಂತೆ ಕಾಣುತ್ತದೆ, ಪುರಂದರದಾಸರು ಕನಕದಾಸರನ್ನು ಕುರಿತು ರಚಿಸಿರುವ

ಕನಕದಾಸನ ಮೇಲೆ ದಯಮಾಡಲು ವ್ಯಾಸ
ಮುನಿ ಮಠಿಕರೆಲ್ಲರು ದೂರುತಿಹರೊ ॥ಪ॥
ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕವಾಯಿತು ಇವರ ಸನ್ಯಾಸಿತನವೆಲ್ಲ
ಪೂರ್ತ್ಯಾಗಲೆಂದು ಯತಿ ನಗುತಲಿಹನು ॥ ಕ. ಕೀ. ೨೩೮)

ಎನ್ನುವ ಮಾತು ಮೇಲಿನ ಹೇಳಿಕೆಗೆ ಪೂರಕವಾಗಿ ನಿಲ್ಲುತ್ತದೆ. ಸ್ವಸಾಮರ್ಥ್ಯದಿಂದ, ತಮ್ಮ ಜೀವಿತದಲ್ಲಿ ಸಾಧಿಸಿದ ಅನುಭಾವದಿಂದ ಕನಕದಾಸರು ಗಟ್ಟಿಯಾಗಿ ನಿಂತು ಇದನ್ನೆಲ್ಲ ಸಹಿಸಿದಂತೆ ಕಾಣುತ್ತದೆ. ಕನಕದಾಸರು ಕುಲದ ಬಗ್ಗೆ ಎರಡು ಕೀರ್ತನೆಗಳನ್ನು ರಚಿಸಿದ್ದು :

ಕುಲ ಕುಲ ಕುಲವೆನ್ನುತಿಹರು ॥ ಪ ॥
ಕುಲವ್ಯಾವುದು ಸತ್ಯಸುಖವುಳ್ಳ ಜನರಿಗೆ ॥ ಅ ಪ ॥ (ಕ. ಕೀ. ೭೭)

ಎನ್ನುವ ಕೀರ್ತನೆಯಲ್ಲಿ ಕೆಸರಿನಲ್ಲಿ ಹುಟ್ಟಿದ ತಾವರೆಯನ್ನು ತಂದು ಬಿಸಜನಾಭನಿಗೆ ಅರ್ಪಿಸಲಿಲ್ಲವೆ ? ಹಸುವಿನ ಮಾಂಸದಲ್ಲಿ ಉತ್ಪತ್ತಿಯಾದ ಹಾಲನ್ನು ಬ್ರಾಹ್ಮಣರು ಊಟಮಾಡಲಿಲ್ಲವೆ ? ಮೃಗಗಳ ಮೈಯಲ್ಲಿ ಹುಟ್ಟಿದ ಕಸ್ತೂರಿಯನ್ನು ಭೂಸುರರು ತೆಗೆದು ಪೂಸುವುದಿಲ್ಲವೆ ? ನಾರಾಯಣ ಯಾವ ಕುಲದವನು ? ಈಶ್ವರ ಯಾವ ಕುಲದವನು ಎಂದು ಪ್ರಶ್ನಿಸುತ್ತ :

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿ ಕೇಶವ
ಆತನೊಲಿದ ಮೇಲೆ ಯಾತರ ಕುಲವಯ್ಯ ॥

ಎಂದಿದ್ದಾರೆ. ಕುಲಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರ (ಕ.ಕೀ. ೧೬೨) ಎನ್ನುವ ಕೀರ್ತನೆಯಲ್ಲಿ ಕಾಗಿನೆಲೆಯಾದಿಕೇಶವರಾಯನ ಚರಣ ಕಮಲವ ಕೀರ್ತಿಸುವನೆ ಕುಲಜ ಎನ್ನುವ ನಿಲುವನ್ನು ತಾಳಿದ್ದಾರೆ. ಇವರ ಕುಲವನ್ನು ಪ್ರಶ್ನಿಸಿದವರಿಗೆ, ಕುರಿತು ಮಾತನಾಡಿದವರಿಗೆ ಏಕಾಂತದಲ್ಲಿ ಬಾಳೆಯ ಹಣ್ಣನ್ನು ತಿನ್ನುವ ಪ್ರಸಂಗ, ಈತನೀಗ ವಾಸುದೇವನು ಎಂದು ಹೇಳಿ ವ್ಯಾಸರಾಯರ ಕೈಯಲ್ಲಿದ್ದ ಸಾಲಿಗ್ರಾಮವನ್ನು ಕುರಿತ ಪ್ರಸಂಗ, ವೈಕುಂಠಕ್ಕೆ ಯಾರು ಹೋಗಬಹುದು ಎಂದು ವ್ಯಾಸರಾಯರು ಪ್ರಶ್ನಿಸಿದಾಗ ನಾನು ಹೋದರೆ ಹೋಗಬಹುದು ಎಂದು ಉತ್ತರಿಸಿದ ಪ್ರಸಂಗಗಳು

ಪೇಚನ್ನುಂಟುಮಾಡಿರಲು ಸಾಕು.

ಭಕ್ತಿಸಾಧನೆಯಲ್ಲಿ ಪೂಜೆಗೆ ತೊಡಗಿದ ದಾಸರು ಶ್ರೀಹರಿಗೆ ಸೋಪಚಾರ ಪೂಜೆಯನ್ನು ನಡೆಸುವುದುಂಟು. ಪುರಂದರದಾಸರು ಜನ್ಮತಃ ಬ್ರಾಹ್ಮಣರಾಗಿದ್ದು ಷೋಡಶೋಪಚಾರ ಪೂಜೆಯನ್ನು ನಡೆಸುತ್ತಾರೆ. ಮಾನಿನಿ ಸಿರಿಯರಸ ನಿನ್ನ ನಾಮವನ್ನೆ ನೆನೆವೆನಯ್ಯ (ಪೂಜಾ ೧೨೨), ಎಂತು ನಿನ್ನ ಪೂಜೆ ಮಾಡಿ ಪೂಜಿಸುವೆನೋ (೧೨೩), ಹೇಗೆ ಅರ್ಚಿಸಲಿ ಮೆಚ್ಚಿಸಲಿ ನಿನ್ನ ನಾಗಶಯನ (೧೨೪). ಒಲ್ಲನೋ ಹರಿ ಕೊಳ್ಳನೋ ಎಲ್ಲ ಸಾಧನವಿದ್ದು ತುಲಸಿ ಇಲ್ಲದ ಪೂಜೆ (೧೨೫) ಧೂಪಾರತಿಯ ನೋಡುವ ಬನ್ನಿ–ನಮ್ಮ ಗೋಪಾಲಕೃಷ್ಣನ ಪೂಜೆಯ ಸಮಯದಿ (೧೨೬), ಏಕಾರತಿಯನೆತ್ತುವ ಬನ್ನಿ (೧೨೭), ನೈವೇದ್ಯವ ಕೊಳ್ಳೋ ನಾರಾಯಣಸ್ವಾಮಿ ದಿವ್ಯ ಷಡುರಸಾನ್ನವನಿಟ್ಟೆನೆ (೧೨೮), ಫಲಾಹಾರವನು ಮಾಡೋ ಪರಮ ಪುರುಷ (೧೩೧), ಹೀಗೆ ಪೂಜಾಕೈಂಕರ್ಯವನ್ನು ಸಾಂಗವಾಗಿ ವರ್ಣಿಸಿದ್ದಾರೆ. ಕನಕದಾಸರಲ್ಲಿಯಾದರೋ ಈ ಬಗೆಯ ಭಾವನೆಗಳನ್ನುಳ್ಳ ಕೀರ್ತನೆಗಳಿಲ್ಲ. ಅವರಲ್ಲಿ :

ಭಜಿಸಿ ಬದುಕೆಲೊ ಮಾನವ
ಅಜಭವೇಂದ್ರಾದಿಗಳು ವಂದಿಸುವ ಪಾದವನು ॥ (ಕ. ಕೀ. ೨೯)

* * *

ನಾರಾಯಣ ಎನ್ನಿ ನಾರದವರದನ
ನಾರಾಯಣ ಎನ್ನಿರೊ ವೇದ
ಪಾರಾಯಣನಾಗಿ ಕರಿಯ ಕಾಯ್ದಾತನ
ನಾರಾಯಣ ಎನ್ನಿರೊ ॥ (ಕ. ಕೀ. ೨೭)

ಎನ್ನುವಂತಹ ರಚನೆಗಳು ಕಂಡುಬರುತ್ತವೆ. ಪುರಂದರದಾಸರು ಸಿರಿಲೋಲನ ನೆನೆಕಾಣೊ ನಾಲಗೆ (ಪೂಜಾ ೮೧), ಗೋವಿಂದನ ನಾಮವ ಮರೆಯದಿರಿರೊ (ಪೂಜಾ ೮೨), ಶ್ರೀ ನರಹರಿ ನಾರಾಯಣ ಎನ್ನಿರೊ (ಪೂಜಾ ೮೩) ಎಂದರೆ ಕನಕದಾಸರು ಮುಂದುವರಿದು–ಎಂತಹುದೊ ನಿನ್ನಯ ಭಕುತಿ ಎನಗೆ ಶ್ರೀಕಾಂತ ನಿನ್ನಯ ಒಲುಮೆಯಿಲ್ಲದ ಮೂಢಾತ್ಮನಿಗೆ (ಕ. ಕೀ. ೪೦) ಎಂದು ತಮ್ಮ ಅಳಲನ್ನು ತೋಡಿಕೊಂಡಿರುವುದಲ್ಲದೆ ಮನುಜಸೇವೆಯನ್ನು ಮಾಡಿ ದಣಿದು ನೊಂದೆ ಲೋಕದೊಡೆಯ ರಂಗರಾಯ ನಿನ್ನ ಪಾದಭಜನೆ ಬೇಕು ಎಂದು ಆರ್ತರಾಗಿ ಬೇಡಿಕೊಂಡಿದ್ದಾರೆ.

ಭಗವಂತನನ್ನು ಪೂಜಿಸುವಾಗ ವಾತ್ಸಲ್ಯಭಾವದಿಂದ ಪುರಂದರ ಕನಕರು

ಪೂಜಿಸಿದ್ದಾರೆ, ಭಗವಂತನನ್ನು ಕುರಿತು ಇಬ್ಬರೂ ಮಗುವೆಂದು ಭಾವಿಸಿ ಲಾಲಿಪದ ಜೋಗುಳದ ಹಾಡುಗಳನ್ನು ರಚಿಸಿದ್ದಾರೆ. ಪುರಂದರದಾಸರು– ಲಾಲಿ ಲಾಲಿ ನಮ್ಮ ಹರಿಯೆ ಲಾಲಿ ಸುರನರರಿಗೆ ಒಲಿದು ಕರುಣವ ಬೀರುವ ದೊರೆಯೆ ಲಾಲಿ (ಪೂಜಾ ೧೬೪) ಎನ್ನುವ ಕೀರ್ತನೆಯಲ್ಲಿ ದಶಾವತಾರವನ್ನು ವಸ್ತುವಾಗಿಟ್ಟುಕೊಂಡು ಭಗವಂತನನ್ನು ಸ್ತುತಿಸಿದ್ದಾರೆ. ದೇವಕಿಯುದರಸಂಜಾತನೆ ತ್ರುವಿ ಕಾಮನಪಿತ ಕಮಲಾಕ್ಷನೆ ತ್ರುವಿ (ಪೂಜಾ ೬೫) ಎಂದೂ ಮುಂದಿನ ಚರಣದಲ್ಲಿ ಮಧುರೆಯೊಳುದಿಸಿದ ಮಹಿಮನೆ ಜೋ ಜೋ ಮುಂತಾಗಿ ಕೃಷ್ಣನ ದಶಾವತಾರ ಮತ್ತು ವಿಷ್ಣುವಿನ ಲೀಲೆಗಳನ್ನು ಕುರಿತು ಹಾಡಿದ್ದುಂಟು. ತೂಗಿರೆ ರಂಗನ ತೂಗಿರೆ ಕೃಷ್ಣನ ತೂಗಿರೆ ಅಚ್ಚುತಾನಂತನ (ಪೂಜಾ ೧೬೬) ಎಂದು ತೂಗಿದುದುಂಟು. ತೋಳು ತೋಳು ತೋಳು ಕೃಷ್ಣ ತೋಳನ್ನಾಡೈ ಎಂದು ಆಡಿಸಿದುದುಂಟು. ಕನಕದಾಸರು ಲಾಲಿ ಪಾವನಚರಣ ಲಾಲಿ ಅಘಹರಣ ಲಾಲಿ ವೆಂಕಟರಮಣ ಲಲಿತ ಕಲ್ಯಾಣ (ಕ. ಕೀ. ೨೩೬) ಮುಂತಾಗಿ ಹಾಡಿದ್ದಾರೆ.

ಭಕ್ತ ಭಗವಂತನಲ್ಲಿ ಸತಿಪತಿ ಭಾವ ಮತ್ತೊಂದು ಘಟ್ಟ. ಪುರಂದರ ಮತ್ತು ಕನಕದಾಸರಲ್ಲಿ ಈ ಬಗೆಯ ರಚನೆಗಳು ಸಾಕಷ್ಟು ಸಿಗುತ್ತವೆ.

ಮನಸು ನಿನ್ನ ಮೇಲೆ ಬಹಳ ಕಾಲ
ಅನುಕೂಲಿಸದೊ ಗೋಪಾಲ ॥ ಪ ॥
ನಿನ ಕೂಡೆ ಈಗ ಕೂಡುವೆನೆಂದರೆ ಮನೆ
ಜನರೆಲ್ಲರು ಕೂಡಲೀಸರೊ ಕೃಷ್ಣ ॥ಅ.ಪ॥ (ಕೃಷ್ಣ. ೮೩)

ಎಂದು ಪುರಂದರದಾಸರು ಹಾಡಿದ್ದರೆ ಕನಕದಾಸರು–

ತೋರೆ ಬೇಗನೆ ಸಖಿ ತೋರಮುತ್ತಿನಹಾರ
ಭಾರವಾಗಿದೆ ಎನಗೆ ॥ (ಕ. ಕೀ. ೭೯)

* * *

ಇಂದು ನೀ ಕರೆದುತಾರೆ ಸಖಿಯೆ ಶ್ರೀ ಗೋ
ವಿಂದನ ಮುನಿಯುವಾರೆ ॥ (ಕ. ಕೀ. ೭೫)

ಎಂದು ಹಾಡಿದ್ದಾರೆ. ಇವರ ಕೀರ್ತನೆಗಳಲ್ಲಿ ವಿಪ್ರಲಂಭ ಶೃಂಗಾರ ವಿರುವಂತೆಯೇ ಸಂಭೋಗಶೃಂಗಾರವೂ ಉಂಟು. ಆದರೆ ಅವು ಭಕ್ತ ಭಗವಂತನ ಸತಿಪತಿ ಭಾವವಾದುದರಿಂದ ದೈವೀಪರಿಸರದಲ್ಲಿರುವುದರಿಂದ ಯಾವ ಬಗೆಯ ಜುಗುಪ್ಸೆಯನ್ನು ಉಂಟುಮಾಡುವುದಿಲ್ಲ. ಕೃಷ್ಣನ ತುಂಟತನದಿಂದ ಗೋಕುಲದಲ್ಲಿ

ಇರಲಾಗುವುದಿಲ್ಲವೆಂದ ಗೋಪಿಯರೇ ಕೃಷ್ಣನು ಬಿಲ್ಲಹಬ್ಬಕ್ಕೆ ಮಧುರೆಗೆ ಹೊರಟುನಿಂತಾಗ ಪರಿಪರಿಯಿಂದ ಗೋಳಾಡಿದುದುಂಟು. ಈ ರೀತಿ ಅನೇಕ ಬಗೆಯ ಕೀರ್ತನೆಗಳನ್ನು ರಚಿಸಿದ ದಾಸರು ತಮ್ಮ ಕೀರ್ತನೆಗಳಲ್ಲಿ ವಾವೆಪದಗಳನ್ನು ರಚಿಸಿದ್ದುಂಟು. 'ವಾವೆಯೆಲ್ಲಿಹುದಯ್ಯ ವೈಕುಂಠಪತಿಗೆ ದೇವ ಭಾರ್ಗವನಾಗಿ ಮಾತೆಯ ಶಿರವ ಕಡಿದ' (ಮಾಹಾ ೧೦೦) ಎನ್ನುವಲ್ಲಿ ಪರಶುರಾಮನು ತನ್ನ ತಾಯಿಯ ಶಿರವನ್ನು ಕಡಿದ ಪ್ರಸಂಗ ಉಲ್ಲೇಖವಾಗಿದೆ. ಕೃಷ್ಣನನ್ನು ವಾವೆಯಿಂದ ಸ್ತುತಿಸಿದ ಕೀರ್ತನೆಯೊಂದು ಹೀಗಿದೆ:

ಅತ್ತೆಯ ವರಿಸಿಯೆ ಮತ್ತೆ ಅಳಿಯಗಾದ ಪುತ್ರಿಯ ತಂದವನ
ಉತ್ತಮವಾಗಿಹ ಮಗಳ ಸನ್ನಿಧಿಯಲ್ಲಿ ನಿತ್ಯದೊಳಿರುತಿಪ್ಪನ
ಬತ್ತಲೆಯಾಗಿಹ ಸತಿಯಳ ಸತ್ಯಕ್ಕೆ ಪುತ್ರನೆಂದೆನಿಸಿದನ
ಹತ್ತಿರ ಕರೆದೊಯ್ದು ಪುರಂದರ ವಿಠಲನ ನಿತ್ಯದಿ ತೋರೆನಗೆ ॥

(ಮಾಹಾ ೮೫)

ಎಂದಿದ್ದಾರೆ. ಬಾರೊ ಮುನಿಸೇತಕೆ ಭಾವಜನಯ್ಯ (ಕೃಷ್ಣ ೮೫) ಎನ್ನುವ ಕೀರ್ತನೆಯು ಗೋಪಿಯೊಬ್ಬಳು ಮುನಿದ ಕೃಷ್ಣನನ್ನು ಸಂತೈಸುವ ಭಾವದಲ್ಲಿ ರಚಿತವಾಗಿದ್ದು ಹೀಗೆ ಮುಂದುವರೆದಿದೆ. ಇಲ್ಲಿನ ಯಾವುದೇ ಸಂಬಂಧವನ್ನು ತೆಗೆದುಕೊಂಡರೂ ಕೃಷ್ಣನಿಗೆ ಅನ್ವಯವಾಗುವಂತಿದ್ದು ಹೀಗಿದೆ :

ಮಾವನಳಿಯನೆ ಬಾರೊ ಭಾವತನಯನೆ ಬಾರೊ
ಮಾವನ ಮಡದಿಯ ಮಗಳಸೊಸೆಯಗಂಡ ॥ ೧ ॥
ಅತ್ತಿಗೆ ಮೈದುನನೆ ಬಾರೊ ಅತ್ತಿಗೆಯ ಮಗಳಗಂಡ
ಮತ್ತೆ ಮೇಲೆ ಅತ್ತಿಗೆಯ ಮಗಳ ಮುದ್ದಾಡುತ ॥ ೨ ॥
ಅಂಬುಜನಯನನೆ ಬಾರೊ ಆದಿಮೂಲನೆ ಬಾರೊ
ಕಂಬದಿಂದೊಡೆದು ಬಂದ ಪುರಂದರವಿಠಲಯ್ಯ ॥ ೩ ॥

ಕನಕದಾಸರಲ್ಲಿಯೂ ಈ ಬಗೆಯ ವಾವೆಪದಗಳ ರಚನೆ ಕಂಡುಬರುತ್ತದೆ. ಗೋಪಿಯರು ವಿರಹಪೀಡಿತರಾಗಿ ಕೃಷ್ಣನನ್ನು ಹಂಬಲಿಸಿದ ಸಂದರ್ಭದಲ್ಲಿ ಇವು ಬರುವುದುಂಟು. ಇಲ್ಲೆಲ್ಲ ಶೃಂಗಾರರಸ ಪ್ರಧಾನವಾಗಿರುತ್ತದೆ. ರಂಗಬಾರೋ ರಂಗಯ್ಯ ಬಾರೋ ॥ ಪ ॥ (ಕ. ಕೀ. ೧೧೦) ಎನ್ನುವ ಕೀರ್ತನೆಯಲ್ಲಿ– ನೀ ಬಾರದಿದ್ದರೆ ಎನ್ನ ಪ್ರಾಣವುಳಿಯದೋ ಎಂದು ವಿರಹದಗ್ಧಳಾದ ಗೋಪಿಕಾಸ್ತ್ರೀಯೊಬ್ಬಳು ಆದಿಕೇಶವರಾಯನನ್ನು ಸಂಬೋಧಿಸಿ ಹೀಗೆ ಆಹ್ವಾನಿಸುತ್ತಾಳೆ :

ಅತ್ತಿಗೆ ಮೈದುನ ಬಾರೊ
ಅತ್ತೆಯ ಮಗಳ ಗಂಡ
ಅತ್ತಿಗೆ ಮೇಲತ್ತಿಗೆಯ ನಾದಿನಿ ಸೊಸೆಯಗಂಡ ॥ ೧ ॥
ಮಾವನ ಅಳಿಯ ಬಾರೋ
ಮಾವನ ಬೀಗನ ತನುಜ
ಮಾವನ ಮಡದಿಯ ಮಗಳ ತಂಗಿಯ ಗಂಡ ॥ ೨ ॥

ಹೀಗೆ ಯಾವುದೇ ಕೋನದಿಂದ ನೋಡಿದರೂ ವಾವೆ ವರಸೆಗಳು ಒಂದಕ್ಕೊಂದು ಪೂರಕವಾಗಿ ನಿಂತು ಒಂದೇ ಗುರಿಯುತ್ತ ಸಾಗುವುದನ್ನು ಕಾಣಬಹುದು. ಬಾ ರಂಗ ಎನ್ನ ಮನಕೆ ಭಾವಜನಯ್ಯ (ಕ. ಕೀ. ೧೯೫) ಮರೆಯದೆ ನೆನೆ ಚಿನ್ಮಯನ (ಕ. ಕೀ. ೧೯೭) ಮುಂತಾದ ವಾವೆಪದಗಳು ಆನಂತರದ ಸಾಹಿತ್ಯದಲ್ಲಿ ಪುಂಖಾನುಪುಂಖವಾಗಿ ರಚಿತವಾಗಿವೆ.

ಪುರಂದರ ಮತ್ತು ಕನಕರ ಕೀರ್ತನೆಗಳಲ್ಲಿ ಸಮಸ್ಯಾಪೂರ್ಣವಾದ ಅನೇಕ ರಚನೆಗಳನ್ನು ಕಾಣಬಹುದಾಗಿದೆ. ಕನಕದಾಸರು ಇಂತಹ ರಚನೆಗಳನ್ನು ಮುಂಡಿಗೆ (ಕ. ಕೀ. ೨೨೦) ಬೆಡಗು (ಕ. ಕೀ. ೨೧೬), ಉಭಯಾರ್ಥ (ಕ. ಕೀ. ೨೨೩), ನುಡಿಕೆ (ಕ. ಕೀ. ೨೧೮), ಎನ್ನುವ ಹೆಸರುಗಳಿಂದ ಕರೆದಿದ್ದಾರೆ. ದಶಾವತಾರ, ಕೃಷ್ಣಲೀಲೆ. ಜೀವದ ಸ್ವರೂಪ, ಸೃಷ್ಟಿ ರಹಸ್ಯ ಮುಂತಾದ ಸಂಗತಿಗಳು ಈ ಬಗೆಯ ಕೀರ್ತನೆಗಳಲ್ಲಿ ಎಡೆಪಡೆದಿವೆ. ಕನಕ–ಪುರಂದರರ ಈ ಬಗೆಯ ಕೀರ್ತನೆಗಳಲ್ಲಿ :

ಭೂಮಿ ಆಕಾಶ ಪೊತ್ತೊ ಆಕಾಶ ಭೂಮಿಯ ಪೊತ್ತೊ
ಭೂಮಿಯು ಮುಂದೊ ಆಕಾಶ ಮುಂದೊ ಸ್ವಾಮಿ ॥೧॥

* * *

ಬೀಜವೃಕ್ಷವು ಪೊತ್ತೊ ವೃಕ್ಷ ಬೀಜವು ಪೊತ್ತೊ
ಬೀಜವು ಮುಂದೊ ವೃಕ್ಷವು ಮುಂದೊ ಸ್ವಾಮಿ॥ (ಕ.ಕೀ. ೨೧೪–೩)

ಮುಂತಾದ ಸಾರ್ವಕಾಲಿಕ ಸೃಷ್ಟಿರಹಸ್ಯದ ಸಮಸ್ಯೆಗಳಿರುವಂತೆಯೇ ಪುರಂದರದಾಸರ ಸುಲಭವಲ್ಲವೊ ಮಹಾನಂದ ತನ್ನೊಳಗೆ ತಿಳಿಯಬೇಕು ಗುರುದಯದಿಂದ (ಸಂಕೀರ್ಣ ೯೩) ಬಲ್ಲವನಾದರೆ ಈ ತಳ್ಳಿಬೇಡ ಅಲ್ಲದ ಪಥ ಇದರಾಸೆಯ ಬಿಡು (ಸಂಕೀರ್ಣ ೯೪ ಮತ್ತು ೯೫–೧೦೧) ಮುಂತಾದ ಕೀರ್ತನೆಗಳು ಕನಕದಾಸರ ಮುಂಡಿಗೆಗಳಿಗೆ ಸಮಾನಾಂತರವಾಗಿದ್ದು ವೇದಾಂತಬೋಧೆಯನ್ನು ಅತ್ಯಂತ ಕುತೂಹಲಕರವಾಗಿ ನಡೆಸಿಕೊಂಡು

ಹೋಗಿವೆ. ಇಂದಿನ ಪೀಳಿಗೆಗೆ ಇವು ಕಬ್ಬಿಣದ ಕಡಲೆಗಳಾಗಿದ್ದರೂ ಇವುಗಳನ್ನು ಅರ್ಥಮಾಡಿಕೊಳ್ಳಬಲ್ಲ ವ್ಯಾಖ್ಯಾನಿಸಬಲ್ಲ ಪರಂಪರೆಯೊಂದು ಕರ್ನಾಟಕದಲ್ಲಿದ್ದಿತೆಂದು ಭಾವಿಸಬಹುದಾಗಿದೆ.

ನಮ್ಮ ಪರಂಪರೆಯಲ್ಲಿ ಪುನರ್ಜನ್ಮದ ನಂಬಿಕೆ ಉಳಿದು ಬೆಳೆದುಬಂದಿದೆ. ಈ ಜನ್ಮದ ಎಲ್ಲ ಸಂಗತಿಗಳಿಗೂ ಕರ್ಮ ಕಾರಣವಾದುದೆಂದು ಭಾವಿಸುವವರಿದ್ದಾರೆ. ಇಂದಿಗೂ ಪ್ರಾಕ್ತನ ಕರ್ಮ, ಪೂರ್ವಕರ್ಮ, ಹಣೆಬರೆಹ, ವಿಧಿಬರೆದ ಬರೆಹ ಮುಂತಾದ ಮಾತುಗಳಿವೆ ಆ ಸಿದ್ಧಾಂತವನ್ನು ಕನಕ-ಪುರಂದರರು ಕೂಡ ಒಪ್ಪಿಕೊಂಡಿದ್ದಾರೆ. ಪುರಂದರದಾಸರು-ನಾ ಮಾಡಿದ ಕರ್ಮ ಬಲವಂತವಾದರೆ ನೀ ಮಾಡುವುದೇನೋ ದೇವಾ (ಆರ್ತ ೩೧), ಆರೇನ ಮಾಡುವರು ಆರಿಂದಲೇನಹುದು ಪೂರ್ವಜನ್ಮದ ಕರ್ಮವಿಧಿ ಬೆನ್ನಬಿಡದು (ಆರ್ತ ೩೦), ಆರೇನ ಮಾಡುವರು ಭುವನದೊಳಗೆ ಪೂರ್ವ ಜನ್ಮದ ಕರ್ಮ ಪಣೆಯಲ್ಲಿ ಬರೆದುದಕೆ (ಆರ್ತ ೨೭)-ಮುಂತಾದ ಕೀರ್ತನೆಗಳಲ್ಲಿ ಈ ಬಗ್ಗೆ ಅವರಿಗಿರುವ ಮನೋಧರ್ಮವನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಕನಕದಾಸರು ಕೂಡ-ಆರಿಗಾದರು ಪೂರ್ವಕರ್ಮ ಬಿಡದು ಅಜಭವಾದಿಗಳ ಕಾಡುತಿಹುದು (ಕ.ಕೀ. ೪೯), ತನ್ನ ಪ್ರಾಪ್ತಿಯ ಫಲವ ತಾನರಿಯದೆ ಇನ್ನು ನುಡಿವುದು ಮೂರ್ಖತನವಲ್ಲವೆ (ಕ.ಕೀ. ೫೪) ಒಲ್ಲೆನೆಂದರಾಗುವುದೆ ಅಲ್ಲಿ ಪಡೆದು ಬಂದುದನೆಲ್ಲವನ್ನುಂಡು ತೀರಿಸಬೇಕು ಹರಿಯೇ (ಕ.ಕೀ. ೬೪) ಮುಂತಾದ ಕೀರ್ತನೆಗಳಲ್ಲಿ ಹಿಂದಿನ ಜನ್ಮದ ಫಲದಿಂದ ಹೀಗಾಯಿತು ಎಂದು ಹೇಳಿದ್ದಾರೆ. ಮುಂದಿನ ಜನ್ಮದ ಒಳಿತಿಗಾಗಿ ಈ ಜನ್ಮದಲ್ಲಿ ಸದಾಚಾರದಲ್ಲಿ ನಡೆ, ಧಾನಧರ್ಮಗಳನ್ನು ಮಾಡು, ಹರಿನಾಮಸಂಕೀರ್ತನೆ ಮಾಡು, ದಾಸರ ದಾಸನೆಂದೆನಿಸಿಕೋ ಎನ್ನುವಂತಹ ಸದಾಚಾರದ ಮಾತುಗಳನ್ನು ದಾಸರುಗಳೂ ಆಡಿದ್ದಾರೆ. ಪುರಂದರದಾಸರ-ದಾನವೇ ಭೂಷಣವು ಎರಡು ಹಸ್ತಂಗಳಿಗೆ ಮಾನವೇ ಭೂಷಣವು ಮಾನವರಿಗೆ (ಆರ್ತ ೧೫೧-೨), ಅರ್ಥವಾರಿಗೆ ಪುತ್ರರಾರಿಗೆ ಮಿತ್ರ ಬಾಂಧವರಾರಿಗೆ ಕರ್ತುಯಮನವರೆಳೆದು ಒಯ್ಯಲು ಅರ್ಥಪುತ್ರರು ಕಾಯ್ವರೆ, ಮಂಚ ಬಾರದು ಮಡದಿ ಬಾರಳು ಸಂಚಿತಾರ್ಥದ ದ್ರವ್ಯ ಬಾರದು ಮುಂಚೆ ಮಾಡಿರಿ ಧರ್ಮವ (ಆರ್ತ ೪೪-೧, ೨) ಎನ್ನುವ ಮಾತುಗಳಿಗೆ ಸಂವಾದಿಯಾಗಿ ಕನಕದಾಸರು-

ಏನು ಬರುವುದೋ ಸಂಗಡೇನು ಬರುವುದೋ ॥ಪ॥

ದಾನಧರ್ಮ ಮಾಡಿ ಬಹುನಿಧಾನಿಯೆನಿಸಿಕೊಳ್ಳೊ ಮನುಜ (ಕ.ಕೀ.೬೬)

ಎನ್ನುವ ಕೀರ್ತನೆಯಲ್ಲಿ ಯಮನದೂತರು ಬಂದು ಎಳೆಯುವಾಗ ಹೆಂಡತಿ, ಮಕ್ಕಳು, ಮಂಡೆತುಂಬ ಬಂಧು ಬಳಗ ಇವರಲ್ಲಿ ಯಾರು ಕಂಡು ಬಿಡಿಸಿಕೊಳ್ಳುತ್ತಾರೆ. ಬತ್ತಲಿಂದ ಬಂದು ಬತ್ತಲೆ ಹೋಗುತ್ತಾರೆ. ಆದುದರಿಂದ-ಪರಮಗುರು ಚೆನ್ನಾದಿ ಕೇಶವಚರಣ ಭಜಿಸಿ ಚಂಚಲವಳಿದು ವರವ ಪಡೆದು ಹೊಂದು ಮುಕುತಿ ಎಂದು ಮಾರ್ಗದರ್ಶನ ನೀಡಿದ್ದಾರೆ.

ಪ್ರಪಂಚದ ನಶ್ವರತೆಯನ್ನು ದೇಹದ ಅನಿತ್ಯತೆಯನ್ನು ಬಲ್ಲ ಪುರಂದರದಾಸರು ಮತ್ತು ಕನಕದಾಸರು ಆ ನಿಟ್ಟಿನಲ್ಲಿ ಕೂಡ ಕೀರ್ತನೆಗಳನ್ನು ರಚಿಸಿದ್ದಾರೆ. ಪುರಂದರ ದಾಸರು ಗಾಳಿಗಿಕ್ಕಿದ ದೀವಿಗೆಯಂತೆ ಈ ದೇಹ ನಿತ್ಯವಲ್ಲ ನಿತ್ಯವಲ್ಲ ಅನಿತ್ಯ (ಆರ್ತ-೫೮೦) ಎಂದಿದ್ದರೆ, ಕನಕದಾಸರು ಏನು ಇಲ್ಲದ ಎರಡು ದಿನದ ಸಂಸಾರವೆಂದಿದ್ದಾರೆ. ಡಿಂಬದಲ್ಲಿರುವ ಜೀವ ಕಂಬ ಸೂತ್ರಗೊಂಬೆ (ಕ.ಕೀ. ೫೮) ಯಾದುದರಿಂದ ಶರೀರ ಮೋಹವನ್ನು ತೊರೆಯಬೇಕು ಎಂಬುದು ಕನಕದಾಸರ ನಿಲುವು. ರೋಗರುಜಿನಗಳಿಗೆ ಆಗರವಾದ ಈ ಶರೀರ ಭಕ್ತಿಸಾಧನೆಯಲ್ಲಿ ಅಡ್ಡಿ ಆತಂಕ ಎಂದು ಭಾವಿಸಿದುದುಂಟು. ಪುರಂದರದಾಸರು-ಈ ಶರೀರದ ಭ್ರಾಂತಿ ಇನ್ನೇಕೆ ಮನವೆ ವಾಸುದೇವನ ನೆನೆದು ಸುಖಿಯಾಗು ಮನವೆ (ಆರ್ತ. ೩೭) ಎನ್ನುವ ಕೀರ್ತನೆಯಲ್ಲಿ ಕಾಲು ಜವಗುಂದಿದುವು, ದೃಷ್ಟಿಗಳು ಹಿಂಗಿದುವು, ಜವ್ವನ ಜಾರಿ ಜರೆಯೊದಗಿತು, ಕಾಲಕರ್ಮಾದಿಗಳು ಕೂಡಿದ ಕ್ಷಣದಲ್ಲಿ ಬೀಳುವ ಈ ತನುವಿನಲ್ಲಿ ಇನ್ನೇಕೆ ಆಸೆ ಎಂದಿದ್ದಾರೆ. ನೀರಬೊಬ್ಬುಳಿಯಂತೆ ನಿತ್ಯವಲ್ಲ ಈ ದೇಹ ಎನ್ನುವ ಪುರಂದರ ನಿಲುವನ್ನೇ ಅಂಗೀಕರಿಸಿದ ಕನಕದಾಸರು-ತಲ್ಲಣಿಸದಿರು ಕಂಡ್ಯ ತಾಳು ಮನವೆ ಎಲ್ಲರನು ಸಲಹುವನು ಶ್ರೀನಿವಾಸ ಎನ್ನುವ ಕೀರ್ತನೆಯಲ್ಲಿ ಬೆಟ್ಟದ ತುದಿಯ ಮರಕ್ಕೆ ನೀರೆರೆದವರು ಯಾರು, ಕಲ್ಲಿನೊಳಗೆ ಹುಟ್ಟಿ ಕೂಗುವ ಕಪ್ಪೆಗೆ ಆಹಾರವೀಯುವವರು ಯಾರು-ಆದುದರಿಂದ ಯೋಚಿಸಬೇಡ ಬಲ್ಲಿದ ಆದಿಕೇಶವರಾಯ ಎಲ್ಲರನು ಸಲಹುವನು ಎಂದಿದ್ದಾರೆ. ಪುರಂದರದಾಸರ ಚಿಂತೆ ಏತಕೊ-ಬಯಲು ಭ್ರಾಂತಿ ಏತಕೊ ಎನ್ನುವ ಕೀರ್ತನೆಯಲ್ಲಿ ಇದೇ ಬಗೆಯ ಭಾವನೆಗಳು ಮೂಡಿಬಂದಿವೆ. ಇಂತಹ ಭದ್ರವಾದ ಬೆಲೆಗಟ್ಟಿನ ಮೇಲೆ ಸಾಧನೆಗೆ ತೊಡಗಿದ ದಾಸರು ತೀರ್ಥಯಾತ್ರೆಗಳನ್ನು ನಡೆಸಿದುದುಂಟು. ಪುರಂದರದಾಸರು ಕರ್ನಾಟಕದಲ್ಲಿ ಮಾತ್ರವಲ್ಲದೆ ಆಸೇತುಹಿಮಾಚಲ ತೀರ್ಥಯಾತ್ರೆ ಮಾಡಿ ಅಲ್ಲಿನ ದೇವತೆಗಳಿಗೆ ಸೇವೆ ಸಲ್ಲಿಸಿದುದಕ್ಕೆ ಅವರ ಕೀರ್ತನೆಗಳಲ್ಲಿ ಆಧಾರಗಳು ಸಿಗುತ್ತವೆ, ಆರಿಗೆ

ವಧುವಾದೆ ಅಂಬುಜಾಕ್ಷಿ ಕ್ಷೀರಾಬ್ಧಿ ಕನ್ನಿಕೆ ಮಹಾಲಕುಮಿ (ಪೂಜಾ. ೨) ಎನ್ನುವ ಕೀರ್ತನೆ ಅಂತಹ ಕೀರ್ತನೆಗಳಲ್ಲಿ ಒಂದು. ಇಲ್ಲಿ ಬರುವ ಕ್ಷೇತ್ರಗಳನ್ನು ಹೀಗೆ ಪಟ್ಟಿ ಮಾಡಬಹುದಾಗಿದೆ–ಶರಧಿ ಬಂಧನ ರಾಮಮೂರುತಿ–ರಾಮೇಶ್ವರ, ಅನಂತ ಪದ್ಮನಾಭ–ತಿರುವನಂತಪುರ, ಎರಡು ಹೊಳೆಯ ರಂಗಪಟ್ಟಣ–ಶ್ರೀರಂಗಪಟ್ಟಣ, ಬೇಲೂರು ಚೆನ್ನಗರಾಯ, ಉಡುಪಿಯ ಕೃಷ್ಣ, ಪಂಢರಪುರವಿಠಲ, ಬದರೀನಾರಾಯಣ, ಬಿಂದುಮಾಧವ–ಕಾಶಿ, ಪುರುಷೋತ್ತಮ–ಜಗನ್ನಾಥಪುರಿ, ವೆಂಕಟೇಶ–ತಿರುಪತಿ, ಕಂಚಿ ವರದರಾಜ, ಮುಷ್ಣದ ಆದಿವರಾಹ, ಶ್ರೀರಂಗನಾಯಕ–ಶ್ರೀರಂಗ, ರಾಜಗೋಪಾಲ–ಮನ್ನಾರುಗುಡಿ ಹೀಗೆ ಹಲವಾರು ಕ್ಷೇತ್ರಗಳ ಉಲ್ಲೇಖ ಅವರ ಕೀರ್ತನೆಗಳಲ್ಲಿ ಕಂಡುಬರುತ್ತವೆ.

ಕನಕದಾಸರು ಪುರಂದರದಾಸರಷ್ಟು ವ್ಯಾಪಕವಾಗಿ ಪ್ರವಾಸ ಮಾಡಿದುದಕ್ಕೆ ಅವರ ಕೀರ್ತನೆಗಳಲ್ಲಿ ಸಾಕಷ್ಟು ಆಧಾರ ಸಿಗುವುದಿಲ್ಲ. ಕನಕದಾಸರು ಕಾಗಿನೆಲೆ (ಕ.ಕೀ.೨), ಬಾಡ (೧೨೮) ಕದರಮಂಡಲಗಿ (೧೮) ತಿರುಪತಿಯ ನಾಮಾಂತರಗಳಾದ ಶೇಷಾಚಲ (೨೨) ತಿರುಪತಿ (೨೭) ಶೇಷಗಿರಿ (೩೮) ಕನಕಾದ್ರಿ (೪೦) ಉರಗಗಿರಿ (೨೩೨)ಗಳು, ಮುತ್ತತ್ತಿ (೭) ವೇಲಾಪುರ (೭೯) ಶ್ರೀರಂಗಪಟ್ಟಣ (೮) ವಿಜಯನಗರ (೧೪೨) ಮೇಲುಕೋಟೆಯ ನಾಮಾಂತರಗಳಾದ ಯದುಶೈಲ (೧೪೬) ಯಾದವಗಿರಿ (೨೦)ಗಳು, ಕದಳಿ (೧೪೯) ಬಂಕಾಪುರ (೧೯೪) ತಿರುಕೋವಲೂರು (೨೩೦) ಬಿಳಿಗಿರಿಯವಾಸ (= ಬಿಳಿಗಿರಿರಂಗನ ಬೆಟ್ಟ, ೨೩೧) ಎನ್ನುವ ಕ್ಷೇತ್ರಗಳಲ್ಲಿ ಪ್ರವಾಸ ಮಾಡಿದುದಾಗಿ ಅವರ ಕೀರ್ತನೆಗಳಿಂದ ತಿಳಿದುಬರುತ್ತದೆ. ಈ ಆಧಾರಗಳನ್ನು ನೋಡಿದಾಗ ಕನಕದಾಸರು ಉಡುಪಿಗೆ ಹೋಗಿದ್ದರೆ ಎನ್ನುವುದು ಪ್ರಶ್ನಾರ್ಹವಾಗಿಯೆ ಉಳಿಯುತ್ತದೆ.

ಕನಕದಾಸರು ವ್ಯಾಪಕವಾಗಿ ತೀರ್ಥಯಾತ್ರೆ ಮಾಡದಿರುವುದಕ್ಕೆ–

ಕಾಶಿ ವಾರಣಾಸಿ ಕಂಚಿ ಕಾಳಹಸ್ತಿ ರಾಮೇಶ್ವರ
ದೇಶ ದೇಶ ಸುತ್ತಿದರೆ ಫಲವೇನೊ ಈ ಛಲವೇನೊ ॥ (ಕ.ಕೀ. ೧೦೪)

ಮತ್ತು–ನೂರೆಂಟು ತಿರುಪತಿಯ ಯಾತ್ರೆಯನು ಮಾಡುವುದ ನಾನೊಲ್ಲೆ (ಕ. ಕೀ. ೨೦೮) ಎನ್ನುವ ಅವರ ನಿಲುವೇ ಕಾರಣವೆಂದು ಭಾವಿಸಬಹುದಾಗಿದೆ. ಪುರಂದರದಾಸರಾಗಲಿ ಕನಕದಾಸರಾಗಲಿ ಪರಮಾತ್ಮನ ಮೂಲರೂಪಕ್ಕೂ ಅವತಾರ ರೂಪಕ್ಕೂ ಅಭೇದವೆನ್ನುವ ದ್ವೈತಶಾಸ್ತ್ರದ ಮುಖ್ಯ

ಪ್ರಮೇಯವನ್ನು ಪ್ರತಿಪಾದಿಸಿದ್ದಾರೆ. ಹಾಗಾಗಿಯೇ ಪುರಂದರದಾಸರು ಬೇರೆ ಬೇರೆ ಕ್ಷೇತ್ರಗಳಲ್ಲಿರುವ ಪರಮಾತ್ಮನ ಅವತಾರ ರೂಪಗಳೊಂದಿಗೆ ಮದುವೆಯಾದೆಯ ಎಂದು ಲಕ್ಷ್ಮಿಯನ್ನು ಪ್ರಶ್ನಿಸಿರುವುದು.

ಎಲ್ಲ ಕಡೆಯೂ ಪರಮಾತ್ಮನನ್ನು ಕಂಡ ದಾಸರು–ಎಲ್ಲಿರುವನೋ ರಂಗನೆಂಬ ಸಂಶಯಬೇಡ ಎಲ್ಲಿ ಭಕುತರು ಕರೆಯೆ ಅಲ್ಲಿ ಬಂದೊದಗುವನು (ಕ. ಕೀ. ೧೫೬ ಮತ್ತು ಆರ್ತ ೯೩) ಎಂದು ಹಾಡಿದ್ದಾರೆ. ಈ ಕೀರ್ತನೆ ಪುರಂದರದಾಸರು ಮತ್ತು ಕನಕದಾಸರು ಇಬ್ಬರ ಹೆಸರಿನಲ್ಲಿಯೂ ಇರುವುದು ಕಾಕತಾಳೀಯವಾದರೂ, ಪಾಠ ಕರ್ತೃನಿರ್ಣಯದ ತೊಡಕೆನಿಸಿದರೂ ಈ ಇಬ್ಬರು ದಾಸರ ಸಾಧನೆಯ ಬೆಳವಣಿಗೆಯ ದೃಷ್ಟಿಯಿಂದ ಸಮುಚಿತವಾಗಿಯೆನ್ನಬಹುದು. ಆದುದರಿಂದಲೇ ಪುರಂದರದಾಸರು ಒಂದೇ ಕೂಗಳತೆ ಭೂ ವೈಕುಂಠ ಸಂದೇಹವಿಲ್ಲವು ಸಾಧುಸಜ್ಜನರಿಗೆ (ಆರ್ತ. ೧೨೪) ಎಂದು ಹೇಳಿದುದಲ್ಲದೆ ಮುಂದುವರೆದು–ಇಲ್ಲೇ ವೈಕುಂಠ ಕಾಣಿರೊ । ಸಿರಿವಲ್ಲಭನಂಘ್ರಿಯ ನೆರೆನಂಬಿದವರಿಗೆ (ಮಾಹಾ. ೨) ಎಂದು ಸಾರಿದ್ದೂ ಉಂಟು. ಕನಕದಾಸರು–ಇಷ್ಟು ದಿನ ಈ ವೈಕುಂಠ ಎಷ್ಟು ದೂರವೆನ್ನುತ್ತಿದ್ದೆ–ದೃಷ್ಟಿಯಿಂದ ನೋಡಿದೆ ನಾ ಸೃಷ್ಟಿಗೀಶ ಶ್ರೀರಂಗಶಾಯಿ (ಕ. ಕೀ. ೪೮) ಎನ್ನುವ ಕೀರ್ತನೆಯಲ್ಲಿ ವನಉಪವನಗಳಿಂದ, ಘನಸರೋವರಗಳಿಂದ, ಕನಕಗೋಪುರಗಳಿಂದ ಕೂಡಿದ ವೈಕುಂಠದ ವರ್ಣನೆಯಿದೆ. ವಜ್ರವೈಡೂರ್ಯ ತೊಲೆಗಳನ್ನು, ಮಹಾದ್ವಾರವನ್ನು, ನಿರ್ಜರದ ಋಷಿಗಳನ್ನು ಕನಕದಾಸರು ಕಂಡಿದ್ದಾರೆ. ರಂಭೆ ಊರ್ವಶಿಯರ ಮೇಳವನ್ನು ತುಂಬುರು ನಾರದರನ್ನು ಕೂಡ ದಾಸರು ಕಂಡದ್ದುಂಟು. ಅಷ್ಟೇ ಅಲ್ಲದೆ ನಾಗಶಯನ ಮೂರುತಿಯನ್ನು, ಭೋಗಿಭೂಷಣಸಖನನ್ನು, ಭಾಗವತರ ಸಮ್ಮೇಳನವನ್ನು ಆ ವೈಕುಂಠದಲ್ಲಿ–ಅಚ್ಯುತ ಸುಳಿದ ಎನ್ನ ಕಣ್ಣಮುಂದೆ ಅವ್ವ (ಮಾಹಾ. ೧೨೫) ಎನ್ನುವ ಕೀರ್ತನೆಯಲ್ಲಿ ಸಾರಿದ್ದಾರೆ. ನಿಗಮ ಆಗಮ ಪುರಾಣಗಳ ಸಾರ ಸರ್ವಸ್ವವನ್ನೆಲ್ಲ ಬಲ್ಲ ಪುರಂದರ–ಕನಕದಾಸರು ಪರಮಾತ್ಮನನ್ನು ಅಣೋರಣೀಯಾನ್ ಮಹತೋ ಮಹೀಯಾನ್ (ಭಗವದ್ಗೀತೆ ೮–೯) ಎನ್ನುವ ಸ್ವರೂಪದಲ್ಲಿ ಕಂಡಿದ್ದಾರೆ. ಪುರಂದರರು–

ಅಣುವಿಂಗಣುವಿಂಗಣುವಿಂಗೆ
ಅಣುವಿಂಗಣುವಿಂಗಣುವು ಗಡಾ
ಮಹತ್ತು ಮಹತ್ತು ಮಹತ್ತು ಮಹತ್ತಿಗೆ

ಮಹತ್ತು ಮಹತ್ತು ಮಹತ್ತು ಗಡಾ
ಮಹತ್ತಾದ ಅಪರಿಮಿತ ಗಡಾ ॥
ಅಣೋರಣೀಯಾನ್ ಮಹತೋ ಮಹೀಯಾನ್
ಗುಣಗಣಭರಿತ ಪುರಂದರವಿಠಲ (ಮಾಹಾ. ೧೩೦-೨)

ಎಂದು ಹೇಳಿದುದಲ್ಲದೆ-ಅಘಟಿತಘಟಿತ ಅಚಿಂತ್ಯಾದ್ಭುತ ಮಹಿಮ ಸ್ವಗತಭೇದ ವಿವರ್ಜಿತ ಪುರಂದರ ವಿಠಲನ (ಮಾಹಾ. ೧೪೦) ದರ್ಶನವನ್ನು ಮಾಡಿದ್ದಾರೆ. ಇದೇ ರೀತಿ ಕನಕದಾಸರು ತಮ್ಮ ದರ್ಶನದಲ್ಲಿ-ಅಣುಮಹತ್ತಾದಿ ದೇವ-ಅಣೋರಣೀಯಾನ್ಮಹಿತೋ ಮಹಿಯಾನಖಿಳ ಗುಣಭರಿತ ಪರಮಪಾವನ ಚರಿತನನ್ನು ಕಂಡಿದ್ದಾರೆ.

ಹೀಗೆ ಪುರಂದರದಾಸರು ಮತ್ತು ಕನಕದಾಸರು ಸಾಧಿಸಿದ ಲೌಕಿಕ ಮತ್ತು ಪಾರಮಾರ್ಥಿಕ ಸಿದ್ಧಿಗಳು ಒಂದೇ ದಾರಿಯಲ್ಲಿ ಸಾಗಿ ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವಲ್ಲಿ ಯಶಸ್ವಿಯಾಗಿರುವುದನ್ನು ಕಾಣಬಹುದಾಗಿದೆ. ತಮ್ಮ ವೈಯಕ್ತಿಕ ಉದ್ಧಾರ ಮಾತ್ರವಲ್ಲದೆ ತಮ್ಮ ಸುತ್ತಮುತ್ತಣ ಸಮಾಜವನ್ನು ಮಹತ್ತಿನ ಕಡೆಗೆ ತಿರುಗಿಸಿದುದಲ್ಲದೆ ಅವರು ಕೂಡ ಮೋಕ್ಷಗಾಮಿಗಳಾಗುವಂತೆ ಮಾಡಿದುದು ಇವರಿಬ್ಬರ ವೈಶಿಷ್ಟ್ಯವಾಗಿದ್ದು ಕನ್ನಡ ಸಾಹಿತ್ಯದ ಮಹತ್ತ್ವದ ಸಂದರ್ಭವೂ ಆಗಿದೆ.

# ಕನಕದಾಸರ ಕೀರ್ತನೆಗಳ ಕಳವು

**ಡಾ. ಹಂಪನಾ**

ಕನ್ನಡದ ಕೀರ್ತನಸಾಹಿತ್ಯವನ್ನು ಸತ್ವಶಾಲಿಯಾಗಿಸಿದ ಬಹುಪಾಲು ಹಿರಿಮೆ ಕನಕದಾಸರಿಗೆ ಸಲ್ಲುತ್ತದೆ. ಅವರ ಹಾಡುಗಳಲ್ಲಿ ಕಾವ್ಯವೂ ಧರ್ಮವೂ ನೀತಿಯೂ ಸಾಮಾಜಿಕತೆಯೂ ಬಂಡಾಯಪ್ರಜ್ಞೆಯೂ ಹಾಸುಹೊಕ್ಕಾಗಿ ಹೆಣೆದುಕೊಂಡಿವೆ. ಕಾವ್ಯದ ಭಾವ ನಿರ್ಭರತೆ, ಪ್ರತಿಭೆ–ಸ್ಫೂರ್ತಿ, ಶಿಲ್ಪ, ಕಲಾವಂತಿಕೆ ಮೊದಲಾದ ಗುಣಗಳು ಅವರ ಎಷ್ಟೋ ಹಾಡುಗಳಲ್ಲಿ ಕಂಡುಬರುತ್ತವೆ. ಕನಕದಾಸರ ಉಪಲಬ್ಧ ಕೀರ್ತನೆಗಳು ಸಾಕಷ್ಟಿವೆಯೆಂಬುದು ಗಣಿತದ ಮಾತು ; ಈ ಸಂಖ್ಯಾದೃಷ್ಟಿಯನ್ನು ಬಿಟ್ಟು ಕೇವಲ ಸಾಹಿತ್ಯದ ಆಧಾರದಿಂದಷ್ಟೇ ನೋಡುವಾಗಲೂ ಅವರ ಹಾಡುಗಳಿಗಿರುವ ಹಿನ್ನೆಲೆ, ಹಿರಿಮೆ ಮತ್ತು ಮಹಿಮೆ ಏನೆಂಬುದನ್ನು ಸಾಹಿತ್ಯಕಾರರು ಗುರುತಿಸಿದ್ದಾರೆ. ಇದುವರೆಗೆ ವಿಮರ್ಶಕರು ಹೆಚ್ಚಾಗಿ ಗುರುತಿಸಿ ಚರ್ಚಿಸಿ ತೀರ್ಮಾನಗಳಿಗೆ ತಲಪದೆ ಇರುವ ಒಂದು ಮುಖ್ಯ ವಿಷಯದತ್ತ ಈ ಸಂಪ್ರಬಂಧದ ಪ್ರಯತ್ನ ಹರಳುಗೊಂಡಿದೆ.

ಕನಕದಾಸರ ಕೀರ್ತನೆಗಳನ್ನು ಉಳಿದ ಕೀರ್ತನಕಾರರ ಕೀರ್ತನೆಗಳೊಂದಿಗೆ, ತೌಲನಿಕವಾಗಿ ನೋಡತೊಡಗಿದಾಗ ಕೆಲವು ಸಮಾನ ಹಾಡುಗಳು ಕಂಡುಬಂದಿವೆ. ಸಮಕಾಲೀನ ಹಿರಿಯ ಕೀರ್ತನಕಾರರಾದ ಕನಕದಾಸ ಮತ್ತು ಪುರಂದರದಾಸ ಇವರ ಕೀರ್ತನೆಗಳಿಗಷ್ಟೇ ಈ ತುಲನಾತ್ಮಕ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಒಂದೇ ಪ್ರಕಾಶನದ ವತಿಯಿಂದ ಪ್ರಕಟವಾಗಿರುವ ಇವರಿಬ್ಬರ ಹಾಡುಗಳಿರುವ ಸಂಕಲನ ಪುಸ್ತಕಗಳನ್ನು ಆರಿಸಿಕೊಂಡು ಈ ತೌಲನಿಕ ಸಮೀಕ್ಷೆ ಕೈಗೊಂಡಿದ್ದೇನೆ. ನಾನು ಪ್ರಧಾನವಾಗಿ ಅವಲಂಬಿಸಿರುವ ಆ ಎರಡು ಪುಸ್ತಕಗಳ ವಿವರಗಳು : ಅ. ಶ್ರೀ ಕನಕದಾಸರ ಹಾಡುಗಳು : ಸಂ. ಕೃಷ್ಣಶರ್ಮ ಬೆಟಗೇರಿ ಮತ್ತು ಹುಚ್ಚೂರಾವ ಬೆಂಗೇರಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೨

ಆ. ಪುರಂದರದಾಸರ ಹಾಡುಗಳು : ಸಂ. ಕಾವ್ಯಪ್ರೇಮಿ, ಸಮಾಜ

ಪುಸ್ತಕಾಲಯ, ಧಾರವಾಡ, ೧೯೭೬.

ಈ ಎರಡು ಸಂಕಲನಗಳಿಗಿಂತ ಇನ್ನೂ ಉತ್ತಮವೂ ಅಧಿಕೃತವೂ ಗಮನಾರ್ಹವೂ ಎನಿಸುವ ಅನ್ಯಾನ್ಯ ಸಂಪಾದಿತ ಕೃತಿಗಳಿರಬಹುದಾದರೂ ಪ್ರಸ್ತುತ ಪರಿಶೀಲನೆಗೆ ಈ ಆವೃತ್ತಿಗಳು ಸಾಕು.

ಈ ಇಬ್ಬರು ಪ್ರಮುಖ ದಾಸವರೇಣ್ಯರ ಕೀರ್ತನೆಗಳಲ್ಲಿ ಅನೇಕ ಸಾದೃಶ್ಯಗಳಿವೆ. ತೀರ ಆಕಸ್ಮಿಕ ಹಾಗೂ ಆನುಷಂಗಿಕವೆನಿಸುವ ಸಾದೃಶ್ಯಗಳನ್ನು ಕೈಬಿಟ್ಟು, ಕೇವಲ ಪ್ರಧಾನವಾಗಿ ಪರಿಗಣಿಸಬೇಕಾದ ಸಮಾನ ಹಾಡುಗಳನ್ನು ಪ್ರಸ್ತಾಪಿಸುವ ಔಚಿತ್ಯವಿದೆ. ಕೀರ್ತನೆಗಳ ಆರಂಭದ ಪಾದದಲ್ಲಿ, ಅಂದರೆ ಪಲ್ಲವಿ ಅನುಪಲ್ಲವಿಗಳಲ್ಲಿ ಮಾತ್ರ ಸಾಮ್ಯವಿದ್ದು ನಂತರದ ಸಾಲುಗಳಲ್ಲಿ, ಅಂದರೆ ಚರಣಗಳಲ್ಲಿ ಬೇರಾವ ಸಂಬಂಧವನ್ನೂ ಸ್ಥಾಪಿಸಿಕೊಳ್ಳದ ಇತರ ಕೆಲವು ಕೀರ್ತನೆಗಳನ್ನು ಈ ವಿವೇಚನೆಯ ಕಕ್ಷೆಯಿಂದ ಆಚೆಗಿರಿಸಿದ್ದೇನೆ. ಉದಾಹರಣೆಗಳು : ಅಣು ಮಹತ್ತಾದಿ ದೇವ ಎಂಬ ಕನಕದಾಸರ ಹಾಡಿಗೆ (ಪು. 78) ಹೊಂದಿಕೊಂಡಂತೆ, ಪುರಂದರರ ಸುಳಾದಿ–ಅಣುವಾಗಬಲ್ಲ ಮಹತ್ತಾಗಬಲ್ಲ (ಪು. 183) ಇದೆ. ಆರು ಹಿತವರು ಎಂದು ನಂಬಬೇಡ (ಪು. 37) ಎಂಬುದು ತಟ್ಟನೆ ಆರು ಹಿತವರು ನಿನಗೆ ಈ ಮೂವರೊಳಗೆ (ಪು. 163) ಎಂಬ ಹಾಡನ್ನು ನೆನಪಿಸುತ್ತದೆ : ಇದರಲ್ಲಿ ನಾರಿಧಾರುಣಿ ಬಲುಧನದ ಸಿರಿಯೆಂಬ ಮೂರೂ ಹಿತವಲ್ಲವೆಂಬ ಪುರಂದರರ ರಚನೆಯ ಆಶಯಕ್ಕೆ ಸಂವಾದಿಯಾಗಿ ತಂದೆ ತಾಯಿ ಮಗ–ಈ ಮೂರೂ ಜನ, ಆಪತ್ತು ಬಂದಾಗ ರಕ್ಷಿಸುವುದಿರಲಿ, ಸ್ವಯಂ ತಾವೇ ಆಪತ್ತಿಗೆ ಮೂಲ ಕಾರಣರಾದರೆಂಬುದನ್ನು ಕನಕದಾಸರ ಪ್ರತಿಪಾದನೆ ದೃಷ್ಟಾಂತಪೂರ್ವಕ ತೋರಿಸುತ್ತದೆಂಬ ಅಂಶವೂ ಪರಿಭಾವನೀಯ.

ಈತನೀಗ ವಾಸುದೇವನು (ಪು. 83) ಎಂಬ ಕನಕದಾಸರ ಬರವಣಿಗೆಗೆ ಪುರಂದರರ 'ಕಣ್ಣಾರೆ ಕಂಡೆನಚ್ಯುತನ' (ಪು. 41) ಎಂಬುದರಲ್ಲಿರುವುದು ಭಾವಸಾಮ್ಯವೆ ಹೊರತು, ಕೀರ್ತನೆಯ ಶಬ್ದ ಶರೀರ ಉದ್ದಕ್ಕೂ ಬೇರೆ ಆಗಿದೆ. ಇದರಂತೆ ನಂಬಬೇಡಿ ಸಿರಿಯು ತನ್ನದೆಂದು (ಪು. 140) ಮತ್ತು ನೆಚ್ಚದಿರು ಸಂಸಾರ ನೆಲೆಯಲ್ಲವೀ ಕಾಯ ಎಂಬ ಕನಕದಾಸರ ಹಾಡುಗಳಲ್ಲಿರುವ ಆದಿವಾಕ್ಯ ಸಾದೃಶ್ಯ, ಪುರಂದರರ ನಂಬದಿರು ಈ ದೇಹ ನಿತ್ಯವಲ್ಲ' (ಪು. 50) ಎಂಬಲ್ಲಿ ಸುವ್ಯಕ್ತವಾಗಿದ್ದರೂ ಇಲ್ಲಿ ವೈದೃಶ್ಯಗಳೂ ಇವೆ. ಹೀಗೆಯೇ ಮರೆಯದಿರು ಮರುಳು ಮನುಜಾ (ಪು. 39), ಸಾಲದೆ ನಿನ್ನದೊಂದು

ದಿವ್ಯನಾಮ (ಪು. 202) ಮತ್ತು ಸಾಕು ಸಾಕು ಮನುಜ ಸೇವೆಯು (ಪು. 47) ಎಂಬ ಕನಕದಾಸರ ಹಾಡುಗಳು ಪುರಂದರರ ಮರೆವರೇನೋ ಹರಿಯಾ (ಪು. 153), ಸ್ಮರಣೆ ಒಂದೇ ಸಾಲದೆ ಗೋವಿಂದನ (ಪು. 30), ಸಾಕು ಸಾಕಿನ್ನು ಸಂಸಾರ ಸುಖವು (ಪು. 53)–ಎಂಬುದನ್ನು ಫಕ್ಕನೆ ಜ್ಞಾಪಿಸುತ್ತವೆ. ಆದರೆ ಇವನ್ನು ಅಕ್ಕಪಕ್ಕ ತಕ್ಕಡಿಯ ತಟ್ಟೆಯಲ್ಲಿಟ್ಟು ತೂಗಿದರೆ ರಚನಾತ್ಮಕ ಅಂತರಗಳಿರುವುದು ವೇದ್ಯವಾಗುತ್ತದೆ.

ಆದುದರಿಂದ, ಇದುವರೆಗೆ ಹೆಸರಿಸಿ ಸಮೀಕ್ಷಿಸಿದಂಥ ಇನ್ನೂ ಹತ್ತಾರು ಹಾಡುಗಳಲ್ಲಿರುವ, ಸಾದೃಶ್ಯ–ವೈದೃಶ್ಯಗಳು ನಮ್ಮನ್ನು ಯಾವ ನಿಶ್ಚಯದ ನೆಲೆಗೂ ತಲುಪಿಸುವುದಿಲ್ಲ. ಇವುಗಳನ್ನು ಹಿಡಿದು ನಡೆಸುವ ಜಿಜ್ಞಾಸೆಯಿಂದ ಕೈಗೊಳ್ಳಬಹುದಾದ ಯಾವುದೇ ತೀರ್ಮಾನ, ತೀರ ಏಕಪಕ್ಷೀಯವಾಗಿ, ಅಪಾಯಕಾರಿಯಾಗಬಹುದು, ಅದಕ್ಕಾಗಿ ಇಂಥ ಸಡಿಲ ನಿದರ್ಶನಗಳನ್ನು ತಾತ್ಕಾಲಿಕವಾಗಿ ಕೈ ಬಿಟ್ಟು, ಇನ್ನೂ ಗಟ್ಟಿಯಾದ ಆಧಾರಗಳನ್ನು ಹುಡುಕ ಬೇಕಾಗುತ್ತದೆ. ಸ್ವಾರಸ್ಯವೆಂದರೆ ಅಂಥ ಪ್ರಬಲ ಆಧಾರಗಳೂ ಪರಾಮರ್ಶೆಗೆ ದೊರೆತಿವೆ. ಆ ಬಗೆಯ ಏಕಮೂಲ ನಿಷ್ಪನ್ನ ಕೀರ್ತನೆಗಳ ವಿಶ್ಲೇಷಣೆಗೆ ತೊಡಗುವ ಮೊದಲು, ಇಲ್ಲಿಯೇ ಉಲ್ಲೇಖಿಸಿ ವಿವರಿಸಬೇಕಾದ ಇನ್ನೊಂದು ವಿಚಾರವಿದೆ. ಕನಕದಾಸರ 'ದೇವಿ ನಮ್ಮ ದ್ಯಾವರು ಬಂದರು ಬನ್ನಿರೆ' (ಪು. 85) ಎಂಬುದೂ ಪುರಂದರರ 'ದೇವ ಬಂದ ನಮ್ಮ ಸ್ವಾಮಿ ಬಂದಾನೊ' (ಪು. 81) ಎಂಬುದೂ ಒಂದೇ ಮೂಲದಿಂದ ಬಂದ ಕಲ್ಪನೆಯೊಂದರ ಎರಡು ಕವಲುಗಳು. ಒಂದರಲ್ಲಿ ಕನ್ನಡ ಮಾತುಗಳೊಳಗೆ ಹತ್ತು ಅವತಾರಗಳ ಕಂಡರಣೆ ; ಇನ್ನೊಂದರಲ್ಲಿ ಸಂಸ್ಕೃತ ಶಬ್ದಗಳ ಬಳಕೆಯಿಂದ ದಶಾವತಾರದ ಪ್ರಸ್ತಾಪ–ಇಷ್ಟೇ ವ್ಯತ್ಯಾಸ. ಇವೆರಡೂ ಹಾಡುಗಳ ಜೀವನಾಡಿ ಹಿಡಿದು ನೋಡಿದರೆ, ಒಂದಕ್ಕೊಂದು ತೆಕ್ಕೆ ಹಾಕಿಕೊಂಡಿರುವ ರೀತಿಯನ್ನು ಪೃಥಕ್ಕರಿಸಿದರೆ, ಯಾವುದೊ ಒಂದು ಇನ್ನೊಂದಕ್ಕೆ ಆಕರವಾಗಿರುವ ಸಾಧ್ಯತೆಯನ್ನು ಸುಲಭವಾಗಿ ತಳ್ಳಿಹಾಕುವಂತಿಲ್ಲ. [ಪುಟಗಳ ಸಂಖ್ಯೆ ಪರಿಮಿತಿಯಲ್ಲಿರಲೆಂಬ ಕಾರಣಕ್ಕಾಗಿ ಈ ಎರಡು ಕೀರ್ತನೆಗಳನ್ನೂ, ಇದುವರೆಗೆ ಪ್ರಸ್ತಾಪಿಸಿದ ಯಾವೊಂದು ಹಾಡನ್ನೂ ಇಲ್ಲಿ ಉದಾಹರಿಸದೆ ಕೇವಲ ಅವು ಅಚ್ಚಾಗಿರುವ ಪುಸ್ತಕಗಳ ಪುಟಸಂಖ್ಯೆಯನ್ನು ನಮೂದಿಸಿದ್ದೇನೆ]. ಕನಕದಾಸರಲ್ಲಿ ಕನ್ನಡ ನುಡಿಯ ಹಾಗೂ ದೇಸಿಯ ಚೆಲುವು ಸೂಸಾಡಿದೆ : ಇದನ್ನು ಶಿಷ್ಟದ ಎರಕಕ್ಕೆ ಹಾಕಿ ತೆಗೆದ ಪರಿಷ್ಕಾರ ರೂಪ ಆಮೇಲೆ ರೂಪಗೊಂಡಿರಬಹುದೆಂಬ

ಸಂಶಯಕ್ಕೆ ಎಡೆಯಿದೆ. ಕೀರ್ತನ ಸಾಹಿತ್ಯ ತಜ್ಞರು ಈ ವಿಚಾರವಾಗಿ ಇನ್ನಷ್ಟು ಕೂಲಂಕಷವಾಗಿ ಅಭ್ಯಸಿಸಬೇಕಾದ ಅಗತ್ಯವಿದೆ.

ಈಗ ತಕ್ಷಣಕ್ಕೆ ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾದ ಕೆಲವು ಸಮಾನ ಕೀರ್ತನೆಗಳನ್ನಷ್ಟೇ ಇಲ್ಲಿ ಕೆಳಗೆ ಉದಾಹರಿಸಿದ್ದೇನೆ :

1. ರಾಗ–ಮಧ್ಯಮಾವತಿ ತಾಳ–ಆಟ

ಅ) ಆರು ಸಂಗಡ ಬಾಹೋರಿಲ್ಲ–ಸಿರಿ
ನಾರಾಯಣನ ಸ್ಮರಣೆ ನೆರೆ ಬಾಹೋದಲ್ಲದೆ ॥ಪ॥

ಹೊತ್ತು ನವಮಾಸ ಪರ್ಯಂತ ಗರ್ಭದೊಳು
ಅತ್ಯಂತ ನೋವು ಬೇನೆಗಳಿಂದಲಿ
ಹೆತ್ತು ತುಪ್ಪವನಿಕ್ಕಿ ಸಲಹಿದ ತಾಯ್ತಂದೆ
ಅತ್ತು ಕರೆದುಳಿವರು ಮತ್ತೆ ಬೆನ್ನಲಿ ಬಾಹರೆ ॥ ೧ ॥

ಮನೆಮಕ್ಕಳಿವರೆನ್ನ ತನುವಿಗೊಡೆಯರೆಂದು
ಘನವಾಗಿ ಬಲು ನಂಬಿ ನೆಚ್ಚುತಿಹರು
ಅನುಮಾನವಾಗಿ ಜೀವನ ತೊಳಲಿದಾಕ್ಷಣದಿ
ಮನೆಯೊಳೊಂದರಗಳಿಗೆ ನಿಲ್ಲಿಸಿಕೊಳ್ಳರೊ ॥ ೨ ॥

ಸುತ್ತ ಮುತ್ತಲು ಕುಳಿತಿದ್ದ ಬಂಧುಜನರು
ಹೊತ್ತು ಹೋಯಿತೇಳಿರೇಳೆಂಬರು
ಒತ್ತಿದ ಕಸಕಿಂತ ಕಡುಕಷ್ಟದೀ ದೇಹ
ಹೊತ್ತೊಯ್ದು ಅಗ್ನಿಯೊಳು ಬಿಸುಟಿ ಬಾಹರೊ ॥ ೩ ॥

ಧರೆಮಿತ್ರ ಬುಧಜನರ ಅಗ್ನಿಸಾಕ್ಷಿಯ ಮಾಡಿ
ಕರವಿಡಿದು ಧಾರೆಯನೆರಸಿಕೊಂಡ
ತರುಣಿ ತನ್ನಿನಿಯನ ಮುಟ್ಟಲಂಜಿ ದೂರದಲಿ
ಪೊರೆವರು ತನಗಾರು ಹೇಳೆಂಬಳು ॥ ೪ ॥

ಹರಣ ಹಿಂಗದ ಮುನ್ನ ಹರಿಯ ಸೇವೆಯ ಮಾಡು
ಪರಲೋಕ ಸಾಧನವನು ಮಾಡು

ಕರುಣಿ ಕೃಪಾಳು ಕಾಗಿನೆಲೆಯಾದಿಕೇಶವನ
ಚರಣ ಕಮಲವ ನಂಬಿ ಸುಖಿಯಾಗು ಮನವೇ ॥ ೫ ॥

(ಪು. 16-17)

ಆ) ರಾಗ–ಮಧ್ಯಮಾವತಿ ತಾಳ–ಆಟ

ಆರು ಬಾರರು ಸಂಗಡಲೊಬ್ಬರು
ನಾರಾಯಣದ ದಿವ್ಯನಾಮ ಒಂದಲ್ಲದೆ ॥ ಪ ॥
ಹೊತ್ತು ನವಮಾಸ ಪರಿಯಂತ ಗರ್ಭದಲಿ
ಅತ್ಯಂತ ನೋವು ಬೇನೆಗಳ ತಿಂದು
ತುತ್ತು ಬುತ್ತಿಯ ಕೊಟ್ಟು ಸಲಹಿದ ತಾಯಿಯು
ಅತ್ತು ಕಳುಹುವಳಲ್ಲದೆ ಸಂಗಡ ಬಾರಳು ॥ ೧ ॥

ಮನೆ ಮಕ್ಕಳಿವರೆನ್ನ ತನುವು ಒಡವೆ ಎರಡು
ಘನವಾಗಿ ನಂಬಿರೆ ನನ್ನವೆಂದು
ಅನುಮಾನವೇತಕೆ ಜೀವ ಹೋದ ಬಳಿಕ
ಘನ ಹೊತ್ತು ಮನೆಯಲಿ ಇರಿಸಿಕೊಳ್ಳರೊ ದೇವ ॥ ೨ ॥

ಆತ್ಮ ಬಳಲಿದಾಗ ಬಂಧುಗಳು ಬಂದು
ಹೊತ್ತು ಹೊರಗೆ ಸಾಕು ಎಂತೆಂಬರು
ಹೊತ್ತುಕೊಂಡು ಹೋಗಿ ಅಗ್ನಿಯಲ್ಲಿ ಬಿಸುಟಿ
ಮತ್ತೆ ಬೆನ್ನನು ತಿರುಗದಲೆ ಬಾಹೊರಲ್ಲದೆ ॥ ೩ ॥

ನೆರೆದಿದ್ದ ಪುರಜನ ವಿಪ್ರರಗ್ನಿಯ ಸಾಕ್ಷಿ
ಕರವಿಡಿದು ಕೈಧಾರೆ ಎರಸಿಕೊಂಡು
ತರುಣಿ ತನ್ನಯ ಗಂಡನನು ಮುಟ್ಟಲಮ್ಮದೆ
ನೆರೆ ಏನುಗತಿ ಗತಿ ತನಗೆ ಹೇಳಲಮ್ಮಳಲ್ಲದೆ ॥ ೪ ॥

ಹರಣ ಹೋಗದ ಮುನ್ನ ಹರಿಯ ಸೇವೆಯ ಮಾಡಿ
ಪರಲೋಕ ಸಾಯುಜ್ಯ ಪಡೆದುಕೊಂಡು
ಕರುಣಿ ಕೃಪಾಳು ಶ್ರೀಪುರಂದರ ವಿಠಲನ
ನೆರೆ ನಂಬಿ ಭಜಿಸಿ ನೀ ಸುಖಿಯಾಗೊ ಮನುಜಾ ॥ ೫ ॥

(ಪು. 89-90)

ಇವೆರಡೂ ಹಾಡುಗಳೂ ಒಂದೇ ಮೂಲದ ನಕಲುಗಳು ; ಒಂದು ಇನ್ನೊಂದರ ನಿಜ ಪ್ರತಿ. 'ಅ'ದಲ್ಲಿರುವ ಚರಣಗಳು 'ಆ'ದಲ್ಲೂ ಇದೆ, ಪಲ್ಲವಿಯೂ ಅಷ್ಟೆ. ರಾಗ ಮತ್ತು ತಾಳ ಕೂಡ ಎರಡರಲ್ಲೂ ಸಮಾನ. 'ಅ'ದಲ್ಲಿ ಆಡು ಮಾತಿನ ಗತ್ತೂ, 'ಆ'ದಲ್ಲಿ ಶಿಷ್ಟದ ಒತ್ತೂ ಇದೆ. ಚರಣಗಳ ಆನುಪೂರ್ವಿ 'ಆ'ದಲ್ಲಿ (ಸಂಖ್ಯೆ) ಅದಲು ಬದಲು ಆಗಿದೆ ; ಎರಡನೆಯ ಚರಣ ಮೂರನೆಯದೂ, ನಾಲ್ಕನೆಯದು ಎರಡನೆಯದೂ ಆಗಿದೆ. ಅಲ್ಲದೆ 'ಅ'ದಲ್ಲಿ ಶೈಲಿಯ ಶೈಥಿಲ್ಯವೂ, ಆಧುನಿಕ ಕನ್ನಡದ ರಚನೆಯೂ ವ್ಯಕ್ತಗೊಂಡಿದ್ದು ಇದರಲ್ಲಿ ಅನ್ಯರ ಕೈವಾಡವಿರುವ ಗುಮಾನಿಗೆ ಅವಕಾಶವಾಗಿದೆ. 'ಆ'ದಲ್ಲಿ ಎಷ್ಟೇ ಶಿಷ್ಟಪರ ರಚನೆಗೆ ಒಲವು ತೋರಿದ್ದರೂ 'ಅ'ದ ಪಲ್ಲವಿ ಮತ್ತು ಮೂರನೆಯ ಚರಣಾಂತ್ಯದ 'ಬಾಹೋರಲ್ಲದೆ' ಎಂಬುದು ನಿಶ್ಚಯವಾಗಿಯೂ 'ಅ'ದ ಎರವಲು ಮಾತಷ್ಟೇ ಅಲ್ಲ, ಇಡೀ 'ಆ'ದ ಶಿಲ್ಪಕ್ಕೆ 'ಅ'ದ ನಕಾಶೆಯೇ ಮೂಲವೆಂಬ ಸುಳಿವು ಕೊಡುವ ಮಾತೂ ಆಗಿದೆ.

೨. ಅ. ರಾಗ–ಸೌರಾಷ್ಟ್ರ ತಾಳ–ಏಕ

ಎಲ್ಲರೂ ಮಾಡುವುದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ಪ ॥
ನೆಲ್ಲುಗಳ ಕುಟ್ಟಿಕೊಂಡು ಬಿದುರುಗಳ ಹೊತ್ತುಕೊಂಡು
ಕೂಲಿಗಳ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೧ ॥
ನಾಲಕು ವೇದ ಪುರಾಣ ಶಾಸ್ತ್ರ ಪಂಚಾಂಗ ಹೇಳಿಕೊಂಡು
ಕಾಲ ಕಳೆಯುವುದೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೨ ॥
ಬಡಿದು ಬಡಿದು ಕಬ್ಬಿಣವ ಕಾಸಿ ತುಬಾಕಿ ಮಾಡಿ
ಹೊಡೆವ ಗುಂಡು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥ ೩ ॥
ಚಂಡಭಟರೆಲ್ಲ ಮುಂದೆ ಕತ್ತಿ ಹರಿಗೆಯ ಪಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ.. ॥ ೪ ॥
ದೊಡ್ಡ ದೊಡ್ಡ ಕುದುರೆಯನೇರಿ ನೇಜೆ ಹೊತ್ತು ರಾಹುತನಾಗಿ
ಹೊಡೆದಾಡಿ ಸಾಯುವುದು... ॥ ೫ ॥
ಕುಂಟೆ ಕೂರಿಗೆಯಿಂದ ಹೆಂಟೆ ಮಣ್ಣ ಹದ ಮಾಡಿ
ರಂಟೆ ಹೊಡೆದು ಬೆಳೆಸುವುದು... ॥ ೬ ॥
ಕೆಟ್ಟತನದಿಂದ ಕಳ್ಳತನವನ್ನೆ ಮಾಡಿ
ಕಟ್ಟಿ ಹೊಡಿಸಿಕೊಂಬುವುದು... ॥ ೭ ॥
ಸನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ

ನಾನಾ ವೇಷ ಕೊಂಬುವುದು... ॥ ೮ ॥
ಉನ್ನತ ಕಾಗಿನೆಲೆ ಆದಿಕೇಶವನ
ಅನುದಿನ ನೆನೆವುದು ಭಕ್ತಿಗಾಗಿ ಪರಮ ಮುಕ್ತಿಗಾಗಿ... ॥ ೯ ॥

ಪು. 160-161

ಆ. ರಾಗ–ಹುಸೇನಿ ತಾಳ–ಆದಿತಾಳ

ಎಲ್ಲರು ಮಾಡುವದು ಹೊಟ್ಟೆಗಾಗಿ । ಗೇಣು ಬಟ್ಟೆಗಾಗಿ ॥ ಪ ॥
ಸಿರಿ । ವಲ್ಲಭನ ಭಜಿಸುವದು ಮುಕ್ತಿಗಾಗಿ ॥ ಅ.ಪ ॥
ಪಲ್ಲಕ್ಕಿಯ ಹೊರವದು ಹೊಟ್ಟೆಗಾಗಿ ದೊಡ್ಡ
ಮಲ್ಲರೊಡನಾಡುವದು...
ಸುಳ್ಳಾಗಿ ಪೊಗಳುವದು...ಸಿರಿ
ವಲ್ಲಭನ ಧ್ಯಾನವು ಮುಕ್ತಿಗಾಗಿ... ॥ ೧ ॥

ದೊರೆತನ ಮಾಡುವದು...ಕರಿ
ತುರಗವೇರುವದು...
ದುರಿತವ ಮಾಡುವದು...ಸಿರಿ
ಹರಿಯ ಭಜಿಸುವದು ಮುಕ್ತಿಗಾಗಿ... ॥ ೨ ॥

ಬೆಟ್ಟ ಹೊರುವದು...
ಗಟ್ಯಾಗಿ ಕೂಗುವದು...
ದಿಟ್ಟವಾಗಿ ನಮ್ಮ ಶ್ರೀಪುರಂದರ
ವಿಠ್ಠಲನ್ನ ಧ್ಯಾನವು ಮುಕ್ತಿಗಾಗಿ.... ॥ ೩ ॥
(ಪು. 46)

ಇವೆರಡು ಹಾಡುಗಳಲ್ಲಿ ಸಾದೃಶ್ಯವೂ ಸಮನಾಗಿ ಹೆಣೆದು ತೆಕ್ಕೆ ಹಾಕಿಕೊಂಡಿವೆ. 'ಅ'ದಲ್ಲಿ ದ್ವಿಪದಿಯೂ 'ಆ'ದಲ್ಲಿ ಚತುಷ್ಪದಿಯೂ ಇದೆ. ರಾಗ ತಾಳಗಳೂ ಬೇರೆಯಾಗಿವೆ. 'ಆ'ದಲ್ಲಿ ಒಂದು ಅನುಪಲ್ಲವಿ ಹೆಚ್ಚಾಗಿದೆ. ಎರಡರ ಅಂತಿಮ ಆಶಯ ಒಂದೇ ಗುರಿಯತ್ತ ಹುರಿಗೊಂಡಿದೆ ; ಆದರೆ ವಿವರಣೆಯಲ್ಲಿ ಕೆಲವು ಅಂತರಗಳುಂಟಾಗಿವೆ. 'ಅ'ದಲ್ಲಿರುವ ವಿಸ್ತಾರವನ್ನು 'ಆ'ದಲ್ಲಿ ಸಂಗ್ರಹಿಸಲಾಗಿದೆ. 'ಅ'ದಲ್ಲಿ ಇಡೀ ಕೀರ್ತನೆಯ ಕಡೆಯಲ್ಲಿರುವ 'ಪರಮ ಮುಕ್ತಿಗಾಗಿ' ಎಂಬುದನ್ನು 'ಆ'ದಲ್ಲಿ ಪ್ರತಿ (ಮೂರೂ) ಚರಣದ ಅಂತ್ಯದಲ್ಲಿ

ಕಳಶವಾಗಿಟ್ಟಿದೆ. 'ಅ'ದಲ್ಲಿರುವ ಭಾವತೀವ್ರತೆಯ ಮಿಂಚು 'ಆ'ದಲ್ಲಿಲ್ಲ : ಬೆಟ್ಟ ಹೊರುವುದು' ಎಂಬ ಮಾತು ಜಾಳು ಜಾಳಾಗಿದೆ, ಆಲೋಚನಾ ಸರಣಿಯ ಒಟ್ಟು ಬೆಳವಣಿಗೆ–ಸರಪಣಿಗತಿಯಲ್ಲಿ ಸಾಂಗತ್ಯ ಸೌಷ್ಠವ ಸಾಲದೆನಿಸುತ್ತದೆ.

೩. ಅ. ರಾಗ–ನಾಂಟಿ ತಾಳ–ಝಂಪೆ

ನಂಬು ನಾರಾಯಣನ ನಂಬೊ ನರಹರಿಯ
ನಂಬಿದ ಭಕ್ತರ ಕುಟುಂಬ ಸಾರಥಿಯ ॥ ಪ ॥
ಬಲಿ ನಂಬಿ ಪಾತಾಳ ಲೋಕಕರಸಾದನದೆ
ಕುಲದ ಪ್ರಹ್ಲಾದನು ನಿಜವ ಕಂಡ
ಕಲಿ ವಿಭೀಷಣ ನಂಬಿ ಲಂಕೆಯಲಿ ಸ್ಥಿರವಾದ
ಛಲದ ಪಾರ್ಥನು ನಂಬಿ ವಿಶ್ವರೂಪವ ಕಂಡ ॥ ೧ ॥

ಅಂಬರೀಷನು ನಂಬಿ ವೈಕುಂಠವೇರಿದನು
ಹಂಬಲಿಸಿ ಶಶಿಧರನು ಉರಿಯ ಗೆದ್ದ
ಕುಂಭಿನೀ ದೇವಿ ತಾ ಬಂಧನವ ಕಳೆದಳು
ಅಂಬುಜಾಕ್ಷಿ ದ್ರೌಪದಿಯು ಮಾನುಳುಹಿಕೊಂಡಳು ॥ ೨ ॥

ಅತಿಭಕುತರಿಗೆ ಮೆಚ್ಚಿ ಗತಿಮೋಕ್ಷವಿತ್ತನು
ಮತಿಭ್ರಷ್ಟ ಅಜಮಿಳನ ಉದ್ಧಾರ ಮಾಡಿದ
ಕ್ಷಿತಿಯೊಳಗೆ ಕಾಗಿನೆಲೆಯಾದಿ ಕೇಶವನಾದ
ಪತಿತ ಪಾವನ ಪರಮ ಪುರುಷೋತ್ತಮನನು ॥ ೩ ॥

(ಪು. ೫೮–೫೯)

ಆ. ರಾಗ–ಯಮುನಾ ಕಲ್ಯಾಣಿ ತಾಳ–ಆಟ

ನಂಬಿ ಕೆಟ್ಟವರುಂಟೆ ಕೃಷ್ಣಯ್ಯನ
ನಂಬಲಾರದೆ ಕೆಟ್ಟುದು ॥ ಪ ॥
ಅಂಬುಜನಾಭನ ಪಾದವ ನೆನೆದರೆ
ಇಂಬುಗೊಡದೆ ದುಃಖ ಹರಿಸುವ ಶ್ರೀಕೃಷ್ಣ ॥ಅ.ಪ॥
ಬಲಿಯ ಪಾತಾಳಕಿಳುಹಿ ಭಕ್ತಬಾ
ಗಿಲವ ಕಾಯುವೆ ನಾನೆಂದ

ಛಲದೊಳು ಅಸುರರ ಶಿರಗಳ ತರಿದು ತಾ
ನೊಲಿದು ವಿಭೀಷಣಗೆ ಪಟ್ಟಗಟ್ಟಿದ ಕೃಷ್ಣ ॥ ೧ ॥

ತರಳ ಪ್ರಹ್ಲಾದಗೊಲಿದು ಉಗುರಿನಿಂದ
ಹಿರಣ್ಯನುದರ ಸೀಳಿದ
ಕರಿರಾಜಗೊಲಿದು ನೆಗಳು ನುಂಗುತಿರಲಾಗ
ಶಿರವ ತರಿದು ಕಷ್ಟಪರಿಹರಿಸಿದ ಕೃಷ್ಣ ॥ ೨ ॥

ಪಾಂಡವರಿಗೊಲಿದು ಕೌರವರನು
ತುಂಡು ಛಿದ್ರವ ಮಾಡಿದ
ಗಂಡರೈವರ ಮುಂದೆ ದ್ರೌಪದಿ ಕೂಗಲು
ಕಂಡು ಕರುಣದಿ ಕಾಯ್ದ ಪುರಂದರ ವಿಠಲ ॥ ೩ ॥

(ಪು. ೭೯)

ಈ ಬಗೆಯ ಹಾಡುಗಳು ಕೂಡ ಕೆಲವು ಸವಾಲುಗಳನೊಡ್ಡುತ್ತವೆ. ಏಕಪ್ರಕಾರವಾದ ಭಾವದ ಬೆಳವಣಿಗೆಯಲ್ಲಿರುವ, ಸಾಮತಿಗಳ ಆಯ್ಕೆಯಲ್ಲಿರುವ ಒಟ್ಟು ತಾತ್ಪರ್ಯ ಹೊಂದಾಣಿಕೆಯನ್ನು ಅರ್ಥೈಸುವ ಬಗೆ ಹೇಗೆ ಎಂಬುದು ಮುಖ್ಯ ಪ್ರಶ್ನೆ. ಎರಡರಲ್ಲೂ ಇರುವ ಮೂರು ಚರಣಗಳ ಲೆಕ್ಕದಲ್ಲಿ ಏರುಪೇರುಗಳಿಲ್ಲ ; ಈ ಸರಿಸಮಾನತೆ ಏನೋ ತೀರ ಆಕಸ್ಮಿಕವಾಗಿರ ಬಹುದೆನಿಸದೆ, ಪರಸ್ಪರ ಪ್ರಭಾವವನ್ನು ಸೂಚಿಸುತ್ತದೆ. ಶಬ್ದಗಳೂ ಪ್ರಾಸಸ್ಥಾನವೂ ವ್ಯತ್ಯಾಸವಾಗಿರುವಂತೆ ತೋರುತ್ತದೆಯಾದರೂ ಉದ್ದೇಶದಲ್ಲಿ ದೂರಾನ್ವಯಗಳಿಲ್ಲ. ಬಲಿ, ಪ್ರಹ್ಲಾದ, ವಿಭೀಷಣ, ದ್ರೌಪದಿ-ಇವರ ದೃಷ್ಟಾಂತಗಳು ಎರಡರಲ್ಲೂ ಬಂದಿವೆ. ರಾಗ ತಾಳ ಎರಡಕ್ಕೂ ಪ್ರತ್ಯೇಕವಾಗಿ ನಮೂದಾಗಿವೆ: 'ಆ'ದಲ್ಲಿ ಅನುಪಲ್ಲವಿಯೊಂದು ಚಿಗುರಿದೆ.

೪. ಅ. ರಾಗ-ಕಾಂಭೋದಿ ತಾಳ-ಝಂಪೆ

ಪೂರ್ವಜನ್ಮದಲಿ ನಾ ಮಾಡಿದಾ ಭವದಿಂದ
ಉರ್ವಿಯೊಳು ಜನಿಸಿದೆನೊ ಕೃಷ್ಣಾ ॥ ಪ ॥
ಕಾರುಣ್ಯ ನಿಧಿಯೆನ್ನ ಕಾಯಬೇಕಯ್ಯ ಹರಿ
ವಾರಿಜನಾಭನೇ ಮುದ್ದು ಕೃಷ್ಣ ॥ಅ.ಪ.॥
ಹುಟ್ಟಿದಂದಿಂದಿಗೂ ಸುಖವ ನಾ ಕಾಣದಲೆ

ಕಷ್ಟನಾದೆನು ಕೇಳೊ ಕೃಷ್ಣಾ
ತೊಟ್ಟಿಲಿನ ಶಿಶು ತಾಯ ಬಿಟ್ಟತೆರನಂತೆ ಕಂ
ಗೆಟ್ಟು ಸೊರಗಿದೆನಯ್ಯ ಕೃಷ್ಣಾ
ಮುಟ್ಟಲಮ್ಮರು ಎನ್ನ ಸತಿಸುತರು ಬಾಂಧವರು
ಅಟ್ಟಿ ಎಳೆಯುತ್ತಿಹರೊ ಕೃಷ್ಣಾ
ಕಷ್ಟ ದಾರಿದ್ರ್ಯವನು ಪರಿಹರಿಸದಿರೆ ದೂರು
ಮುಟ್ಟುವುದು ನಿನಗಯ್ಯ ಕೃಷ್ಣಾ ॥ ೧ ॥

ಕಾಶಿಯಾ ವಾಸವನು ಬಯಸಿ ಬಹುದಿನದಿಂದ
ಆಸೆಯೊಳಗಿದ್ದೆನಯ್ಯ ಕೃಷ್ಣಾ
ಗಾಸಿಯನು ಮಾಡದಲೆ ದೋಷವನು ಪರಿಹರಿಸೊ
ಸಾಸಿರದ ನಾಮದಾ ಕೃಷ್ಣಾ
ಹೇಸಿಕೆಯೊಳಿರ್ದ ಸಂಸಾರವೆಂಬುವ ಮಾಯ
ಪಾಶದಿಂದಲಿ ಬಿಗಿವರೇ ಕೃಷ್ಣಾ
ಕಂಸಮರ್ದನನೆ ನೀ ಕಾಯಬೇಕಯ್ಯ ಹರಿ
ವಾಸುದೇವನೆ ಮುದ್ದು ಕೃಷ್ಣಾ ॥ ೨॥

ಲೋಕದೊಳಗೆನ್ನನು ಪೋಲ್ವ ಪಾಪಿಗಳನ್ನು
ನೀ ಕಂಡು ಬಲ್ಲೆಯಾ ಕೃಷ್ಣಾ
ಸಾಕಿನ್ನು ಎನಗೊಂದು ಗತಿಯ ತೋರಿಸಿ ಸದ್ವಿ
ವೇಕಿಯನೆ ಮಾಡಯ್ಯ ಕೃಷ್ಣಾ

ರಾಕೇಂದುಮುಖಿಯ ದ್ರೌಪದಿಯ ಮಾನವ ಕಾಯ್ದೆ
ಆಕೆಗಕ್ಷಯವಿತ್ತೆ ಕೃಷ್ಣಾ ಪಿ
ನಾಕಿಸಖನಾದಿ ಕೇಶವನೆ ಉಡುಪಿಯ ವಾಸ
ಸಾಕಿ ಸಲಹೈ ಎನ್ನ ಕೃಷ್ಣಾ ॥ (ಪು. ೭–೮)

ಆ. ರಾಗ–ಕಾಂಭೋದಿ ತಾಳ–ಝಂಪೆ
ಪೂರ್ವಜನ್ಮದಲಿ ನಾ ಮಾಡಿದ ಪಾಪದಿಂ

ದುರ್ವಿಯೊಳು ಜನಿಸಿದೆನೊ ಕೃಷ್ಣ ॥ ಪ ॥
ಕಾರುಣ್ಯ ನಿಧಿಯೆನ್ನ ಕಾಯಬೇಕಯ್ಯ ಹರಿ
ವಾರಿಜನಾಭ ಶ್ರೀಕೃಷ್ಣ ॥ ಅ.ಪ ॥
ಹುಟ್ಟಿದಂದಿಂದಿಗೂ ಸುಖವೆಂಬುದನು ಅರಿಯೆ
ಕಷ್ಟಪಡುತಿಹೆನಯ್ಯ ಕೃಷ್ಣ
ದಟ್ಟದಾರಿದ್ರ್ಯವನು ಪರಿಹರಿಸದಿರೆ ದೂರು
ತಟ್ಟುವದು ನಿನಗಯ್ಯ ಕೃಷ್ಣ ॥ ೧ ॥
ಕಾಸಿನಾ ಆಸೆಯನು ಮಾಡಿಬಹುದಿನದಿಂದ
ಆಯಾಸದೊಳಗಿರುತಿಹೆನೊ ಕೃಷ್ಣ
ಆಸೆಯನು ಬಿಡಿಸಿ ಮಿಗೆ ದೋಷವನು ಪರಿಹರಿಸೊ
ಸಾಸಿರ ನಾಮದ ಶ್ರೀಕೃಷ್ಣ ॥ ೨ ॥
ಮುಟ್ಟಲಂಜುವರು ಬಂಧುಗಳು ಕಂಡರೆ ಎನ್ನ
ಅಟ್ಟಿ ಕೊಲುತಿಹರಯ್ಯ ಕೃಷ್ಣ
ತೊಟ್ಟಿಲ ಶಿಶು ಬಾಯ ಬಿಡುವ ತೆರನಂತೆ ಕಂ
ಗೆಟ್ಟು ಶೋಕಿಸುವೆನೋ ಕೃಷ್ಣ ॥ ೩ ॥
ತಂದೆತಾಯಿಯು ಇಲ್ಲ ಬಂಧುಬಳಗವು ಇಲ್ಲ
ಇಂದೆನಗೆ ಗತಿಯೇನೊ ಕೃಷ್ಣ
ಮಂದರಧರ ಶ್ರೀಪುರಂದರ ವಿಠಲ ನೀ
ಬಂದು ನೆಲೆಯಾಗಯ್ಯ ಕೃಷ್ಣ ॥ ೪ ॥

ಪುಟ–೬೧)

ಈ ಸಮಾನ ಕೀರ್ತನೆಯಲ್ಲೂ ಛಂದಸ್ಸು, ರಾಗ, ಮತ್ತು ತಾಳಗಳಲ್ಲಿ ಏಕರೂಪತೆಯಿದೆ : ಪಲ್ಲವಿ ಅನುಪಲ್ಲವಿಗಳಲ್ಲೂ ವ್ಯತ್ಯಾಸಗಳಿಲ್ಲ. ಐದೈದು ಮಾತ್ರೆಗಳ ಓಟ ಎರಡೂ ಕಡೆ ಪ್ರಧಾನವಾಗಿದೆ. ಛಂದಸ್ಸಿನ ಲಕ್ಷಣದಿಂದ ಸಾಂಗತ್ಯಕ್ಕೆ ಸಂಗತವಾಗಿದೆ ಅಲ್ಲಲ್ಲಿ. ವಿಷ್ಣು ಗಣದ ಬದಲು ರುದ್ರಗಣ ಕಂಡುಬರುತ್ತದೆ ; ಅಂಶಗಣದ ಬದಲು ಮಾತ್ರಾಗಣಘಟಿತ ಸಾಂಗತ್ಯವೆಂದೂ ಹೇಳಬಹುದು. ಕನಕದಾಸರ ಹಾಡಿನಲ್ಲಿ ಮೂರು ಚರಣಗಳೆಂದು ಸಂಪಾದಕರು ಸೂಚಿಸಿದ್ದಾರೆ: ದ್ವಿತೀಯಾಕ್ಷರ ಪ್ರಾಸದ ಆಧಾರ ಬಲದಿಂದ ಅವರು ಹಾಗೆ ಗ್ರಹಿಸಿರಬಹುದು. ಆದರೆ ಅವನ್ನು ಎಂಟೆಂಟು ಸಾಲುಗಳ ಮೂರು ಚರಣಗಳೆಂದು ತಿಳಿಯುವುದಕ್ಕಿಂತ ನಾಲ್ಕು ಪಾದಗಳ ಆರು ಚರಣಗಳೆಂದೇ

ಪರಿಗಣಿಸುವುದು ಉಚಿತ. 'ಆ'ದಲ್ಲಿ ನಾಲ್ಕು ಪಾದಗಳ ನಾಲ್ಕೇ ಚರಣಗಳಿವೆ; 'ಆ'ದಲ್ಲಿರುವ ಎರಡನೆಯ ಚರಣದ ಎರಡನೆಯ ಸಾಲು 'ಆಯಾಸದೊಳಗಿರು ......' ಎಂಬುದರಲ್ಲಿನ ಆರಂಭದ ದೀರ್ಘ ಸ್ವರಾಕ್ಷರವಾದ ಆ ವನ್ನು ಅದರ ಹಿಂದಿನ (ಅಂದರೆ ಮೊದಲನೆಯ) ಸಾಲಿನ ಕಡೆಯಲ್ಲಿಡಬೇಕು, ಹಾಗೆ ಮಾಡಿದರೆ ಆಗ ಪ್ರಾಸ ಪರಿಪಾಲನೆ ಸರಿಯಾಗುತ್ತದೆ ; ಈಗಿರುವಂತೆ ಪ್ರಾಸೋಲ್ಲಂಘನೆಯಾಗಿದೆ–ಇದು ಪ್ರಾಯಃ ಸಂಪಾದಕರ ಕಣ್ ತಪ್ಪಿನಿಂದಾಗಿರಬಹುದು. 'ಅ' ಮತ್ತು 'ಆ' ಗಳಲ್ಲಿ ಮೊದಲ ಮೂರು ಪದ್ಯ (ಚರಣ)ಗಳಲ್ಲಿ ಶೇಕಡ ತೊಂಬತ್ತರಷ್ಟು ಸಾಮ್ಯವಿದೆ: 'ಅ' ದಲ್ಲಿರುವ ಕಡೆಯ ಮೂರು ಪದ್ಯಗಳನ್ನು 'ಆ'ದಲ್ಲಿ ಸಂಗ್ರಹಿಸಿ ಒಂದೇ ಪದ್ಯಕ್ಕಿಳಿಸಲಾಗಿದೆ; ಹೀಗೆ ಸಂಕ್ಷೇಪಿಸುವಾಗ ಕಂಸಮರ್ದನ ಹಾಗೂ ದ್ರೌಪದಿಯ ಮಾನವಕಾಯ್ದ ಪ್ರಸ್ತಾಪ ಜಾರಿ ಹೋಗಿದೆ. ಅಥವಾ ಇದರ ತದ್ವಿರುದ್ಧ ದಿಕ್ಕಿನಲ್ಲಿ ಈ ಕೀರ್ತನೆಯ ಪ್ರಭಾವ ಪ್ರಕ್ರಿಯೆ ಸಂಭವಿಸಿದ್ದರೆ, 'ಆ'ದಲ್ಲಿ ಇರದಿದ್ದ ಈ ಎರಡು ಹೊಸ ಸಂಗತಿಗಳ ಸೇರ್ಪಡೆಯಿಂದ 'ಆ'ದಲ್ಲಿ ಇನ್ನೆರಡು ಪದ್ಯಗಳೂ ಹುಟ್ಟಿಕೊಂಡಿವೆ. ಹೀಗಾಗಿ ಇವೆರಡರಲ್ಲಿ ಯಾವ ಹಾಡು ಯಾವ ಹಾಡಿಗೆ ಮೂಲವಾಗಿದೆಯೆಂಬ ಪ್ರಶ್ನೆಗೆ ಆದಿಕೇಶವನೂ, ಪುರಂದರವಿಠಲನೂ ಉತ್ತರ ಕಂಡುಕೊಳ್ಳಲು ಬೆಳಕು ತೋರಿಸಬೇಕಾಗಿದೆ ; ಆ ಬೆಳಕು ಮುಂದಿನ ಕೀರ್ತನೆಯಲ್ಲಿರುವ ತೊಡಕನ್ನು ನಿವಾರಿಸಿಕೊಳ್ಳುವುದಕ್ಕೂ ಬೇಕಾಗಿದೆ ;

೫. ಅ. ರಾಗ–ಸೌರಾಷ್ಟ್ರ ತಾಳ–ಆಟ

ವರ ಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು । ಈ
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು ॥ ಪ ॥
ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು । ಬಹು
ಕೋಪಿಗಳಿದ್ದಲ್ಲಿ ಅನುಭಾವ ಗೋಷ್ಠಿಯ ಮಾಡಬಾರದು ॥ ೧ ॥

ಅಡಸತ್ತ ಮಡಕೆಗೆ ಜೋಡಿಸಿ ಒಲೆಗುಂಡ ಹೂಡಬಾರದು । ಬಹು
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು ॥ ೨ ॥

ಹರಿಯ ನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು । ತಾ
ಪರರನು ಬೈದು ಪಾತಕಕೆ ಮುನ್ನೊಳಗಾಗಬಾರದು ॥ ೩ ॥

ಮಡದಿ ನುಡಿಯ ಕೇಳಿ ಜಗಳಕೊಬ್ಬರ ಕೂಡೆ ಹೋಗಬಾರದು । ಬಾ
ಯ್ಬಡುಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರು ॥ ೪ ॥

ಮುಂದೆ ಭಲೆ ಎಂದು ನಿಂದಿಪರನ್ನು ಕೂಡಬಾರದು । ನಮ್ಮ
ತಂದೆ ಬಾಡದಾದಿ ಕೇಶವನ ಸ್ಮರಣೆಯ ಬಿಡಬಾರದು ॥ ೫ ॥

[–ಜನಪ್ರಿಯ ಕನಕ ಸಂಪುಟ ; (ಸಂ) ದೇಜಗೌ ಮೊದಲಾದವರು.
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೮, ಪುಟ ೯೦)

ಆ. ರಾಗ–ಸೌರಾಷ್ಟ್ರ ತಾಳ–ಆಟ
ವರ ಕವಿಗಳಿದ್ದಲ್ಲಿ ನರಕವಿಗಳ ಕೊಂಡಾಡಬಾರದು–ಇಂಥ
ಧರಣಿಯ ಕಲ್ಲಿಗೆ ಸ್ಥಿರವೆಂದು ಪೂಜೆಯ ಮಾಡಬಾರದು ॥ ಪ ॥
ಅಡಿಹೊದ ಮಡಕೆಗೆ ಜೋಡಿಸಿ ಒಲೆಗುಂಡ ಹೂಡಬಾರದು
ಬಡತನ ಬಂದರೆ ನಂಟರ ಬಾಗಿಲ ಸೇರಬಾರದು ॥ ೧ ॥

ಮಡದಿಯ ನುಡಿಕೇಳಿ ಬಡವರು ಜಗಳಕ್ಕೆ ಹೋಗಬಾರದು । ಬಹಳ
ಬಡತನ ಬಂದವಳ ಕೈಯಿಂದ ಅಡಿಗೆಯ ಉಣ್ಣಬಾರದು ॥ ೨ ॥

ಪಾಪಿಗಳಿದ್ದಲ್ಲಿ ರೂಪುಳ್ಳವಸ್ತುವ ತೋರಬಾರದು । ಕಡು
ಕೋಪಿಗಳಿದ್ದಲ್ಲಿ ಅನುಕೂಲಗೋಷ್ಠಿ ಮಾತಾಡಬಾರದು ॥ ೩ ॥

ಪರರ ನಿಂದಿಸಿ ಪರಬ್ರಹ್ಮರೂಪೇಂದ್ರನ ಜರೆಯಬಾರದು
ವರದ ಶ್ರೀಪುರಂದರ ವಿಠಲನ ಸ್ಮರಣೆಯ ಮರೆಯಬಾರದು ॥ ೪ ॥
(ಪುಟ ೧೨೯–೧೩೦)

ಪ್ರಸ್ತುತ ಕೀರ್ತನೆಯ ಚರಣಗಳು ಸಮಾನವಾಗಿದ್ದರೂ, ಅಲ್ಲಲ್ಲಿ ಒಂದೆರಡು ಶಬ್ದಗಳ ಬದಲಾವಣೆಯು ಹೊರತು, ಚರಣಗಳ ಸಂಖ್ಯಾನುಕ್ರಮಣಿಕೆಯಲ್ಲಿ 'ಅ' ಮತ್ತು 'ಆ' ಗಳ ನಡುವೆ ತಲೆಕೆಳಗು ಆಗಿವೆ; 'ಅ' ದಲ್ಲಿ ೨, ೪, ೧, ೩ ನೆಯ ಚರಣಗಳು 'ಆ'ದಲ್ಲಿ ೧, ೨, ೩, ೪

ಎಂಬ ಕ್ರಮದಲ್ಲಿವೆ ; ಅಥವಾ ಇದನ್ನೇ ವಿಲೋಮವಾಗಿಯೂ ಹೇಳಬಹುದು. ಸಾರಾಂಶದಲ್ಲೇನೂ ವ್ಯತ್ಯಾಸಗಳಿಲ್ಲ, ಛಂದಸ್ಸು, ಅರ್ಥ–ಭಾವ, ಆಶಯ, ರಾಗ–ತಾಳ, ಚರಣಗಳ ಅಳತೆ–ಒಟ್ಟಾರೆ ಎಲ್ಲದರಲ್ಲೂ ಒಂದು ಇನ್ನೊಂದರ ಪ್ರತಿರೂಪವೆಂಬಂತಿವೆ. ಮಾತುಗಳಲ್ಲಿ ಕಾಣುವ ಬದಲಾವಣೆಗಳೂ; ಇದ್ದಲ್ಲಿ–ಮುಂದೆ, ವಿದ್ಯೆ ತೋರಬಾರದು–ಕೊಂಡಾಡಬಾರದು, ಶರಣೆಂದು–ಸ್ಥಿರವೆಂದು, ಅಡಿಸತ್ತ–ಅಡಿಹೋದ, ಒಬ್ಬರ ಕೂಡೆ–ಬಡವರ, ಬಾಯ್ ಬಡುಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರದು–ಬಡತನ ಬಂದವಳ ಕೈಯಿಂದ ಅಡಿಗೆಯ ಉಣ್ಣಬಾರದು, ಅನುಭಾವಗೋಷ್ಠಿ–ಅನುಕೂಲಗೋಷ್ಠಿ–ಇವು ಎದ್ದು ಕಾಣುತ್ತವೆ; ಜತೆಗೆ'ಅ'ದಲ್ಲಿರುವ ಮೂರನೆಯ ಚರಣ 'ಆ'ದಲ್ಲಿ ಇಲ್ಲ. ಒಂದರಲ್ಲಿ ಇರುವ ಚರಣ ಇನ್ನೊಂದರಲ್ಲಿಯೂ ಇಲ್ಲದಿರುವ ಅಥವಾ ತದ್ವಿರುದ್ಧವಾದ ಕ್ರಿಯೆ ಬೇರೆ ಕೀರ್ತನೆಗಳಲ್ಲಿಯೂ ಘಟಿಸಿರುವುದನ್ನು ಈಗಾಗಲೇ ನೋಡಿದ್ದೇವೆ. ಹೀಗೆ ಒಂದೊ ಎರಡೊ ಚರಣ ಸೇರಿಸಿದ್ದೇಕೆ ಅಥವಾ ಕೈಬಿಟ್ಟಿದ್ದೇಕೆ ಎಂಬ ಪ್ರಶ್ನೆಯೂ ಈ ಜಿಜ್ಞಾಸೆಯಲ್ಲಿ ಮೌಲಿಕವಾಗುತ್ತದೆ : ಶಬ್ದಗಳೂ ಸಾಲುಗಳೂ ಸೇರಿದ್ದರಿಂದ ಇಲ್ಲವೆ ಜಾರಿದ್ದರಿಂದ ಕೀರ್ತನೆಯ ಅರ್ಥಪ್ರತೀತಿಗೆ ಆಗಿರುವ ಲಾಭಾಲಾಭವನ್ನೂ ಚಿಂತಿಸಬೇಕಾಗುತ್ತದೆ–ಇದು ಈ ದಿಕ್ಕಿನಲ್ಲಿ ಆಳವಾಗಿ ಅಧ್ಯಯನ ಕೈಗೊಳ್ಳುವವರು ಅವಶ್ಯ ಪರಿಭಾವಿಸಿ, ಸ್ಫೋಟಿಸಿ ಉತ್ತರ ಕಂಡುಕೊಳ್ಳಬೇಕಾದ ಅಂಶಗಳಲ್ಲೊಂದು.

೬. ಅ. ರಾಗ–ಶಂಕರಾಭರಣ ತಾಳ–ಆಟ

ಹಣ್ಣು ಕೊಂಬುವ ಬನ್ನಿರಿ–ಹರಿದಾಸರು
ಹಣ್ಣು ಕೊಂಬುವ ಬನ್ನಿರಿ ॥ ಪ ॥
ಚೆನ್ನಬಾಲಕೃಷ್ಣನೆಂಬ । ಕನ್ನೆಗೊನೆ ಬಾಳೆಹಣ್ಣು ॥ ಅ.ಪ ॥
ಸುತ್ತೇಳು ಲೋಕದಿ ಸುರರು ಬಿತ್ತಿದ ಹಣ್ಣು
ಭಕ್ತರ ಬಾಯೊಳು ನೆನೆವ ಹಣ್ಣು
ಅರ್ತಿಯುಳ್ಳವರೆಲ್ಲ ಕೊಳ್ಳಿ ಬೇಕಾದರೆ
ನಿತ್ಯ ಮಾಧವನೆಂಬ ಅಚ್ಚಮಾವಿನ ಹಣ್ಣು ॥ ೧ ॥

ಅಜನ ಪಡೆದ ಹಣ್ಣು ಗಜವ ಕಾಯ್ದ ಹಣ್ಣು
ನಿಜಮುನಿಗಳಿಗೆ ತೋರಿಸಿದ ಹಣ್ಣು
ತ್ರಿಜಗವಂದಿತ ಪಾಲ್ಗಡಲೊಡೆಯನ ಹಣ್ಣು
ಸುಜನ ಭಕ್ತರೆಲ್ಲ ಕೊಳ್ಳಬನ್ನಿರಿ ಹಣ್ಣು ॥ ೨ ॥

ತುರುವ ಕಾಯ್ದ ಹಣ್ಣು ಉರುಗನ ತುಳಿದಾ ಹಣ್ಣು
ಕರದರೆ ಕಂಬದೊಳು ಓಯೆಂಬ ಹಣ್ಣು
ಮರುಗುವ ಧ್ರುವನಿಗೆ ಪಟ್ಟಗಟ್ಟಿದ ಹಣ್ಣು
ಕರುಣಾಳು ಕಾಗೆನೆಲೆಯಾದಿ ಕೇಶವನ ಹಣ್ಣು ॥ ೩ ॥

(ಪುಟ. ೧೮೩–೧೮೪)

ಆ) ರಾಗ–ಬಿಲಹರಿ ತಾಳ–ಆಟ

ಹಣ್ಣು ಬಂದಿದೆ ಕೊಳ್ಳಿರೊ ಹರಿದಾಸರು
ಹಣ್ಣು ಬಂದಿದೆ ಕೊಳ್ಳಿರೊ ॥ ಪ ॥
ಚಿನ್ನ ಬಾಲಕೃಷ್ಣನೆಂಬ
ಚೆನ್ನಾದ ಬಾಳೆಯ ॥ ಅ.ಪ ॥
ಕೊಳೆತು ಹೋಗುವದಲ್ಲ ಹುಳಿತು ನಾರುವದಲ್ಲ
ಕಳೆದು ಬೀಸಾಡಿಸಿ ಕೊಳುವದಲ್ಲ
ಅಳತೆಗೊಂಬುದಲ್ಲ ಗಿಳಿಕಚ್ಚಿ ತಿಂಬುದಲ್ಲ
ಒಳಿತಾದ ಶ್ರೀಹರಿ ಎಂಬ ಮಾವಿನ ಹಣ್ಣು ॥ ೧ ॥

ಅಜನ ಪಡೆದ ಹಣ್ಣು ಗಜವ ಸಲಹಿದ ಹಣ್ಣು
ತ್ರಿಜಗದಿ ಮುನಿಗಳಿಗೆ ತೋರಿದ ಹಣ್ಣು
ತ್ರಿಜಗವಂದಿತ ಪಾದವೆಂಬ ಮಾವಿನ ಹಣ್ಣು
ಸುಜನಾನಂದಿಯರು ನೀವು ಕೊಳ್ಳಿ ಬನ್ನಿ ॥ ೨ ॥

ತುರುವ ಕಾಯ್ವ ಹುಣ್ಣು ಉರುಗನ ತುಳಿದಾ ಹಣ್ಣು
ಕರೆದರೆ ಕಂಬದಿಂದ ಬಂದ ಹಣ್ಣು
ಮರುಗುವ ಧ್ರುವನ ಉನ್ನತನ ಮಾಡಿದ ಹಣ್ಣು
ಪುರಂದರ ವಿಠಲನೆಂಬ ಹಣ್ಣು ಕೊಳ್ಳ ಬನ್ನಿ ॥ ೩ ॥

(ಪುಟ. ೨೭)

ಇಲ್ಲಿ ಕೆಲವು ವ್ಯತ್ಯಾಸಗಳು ಸಂಭವಿಸಿವೆ : ರಾಗ ಒಂದರಲ್ಲಿ ಶಂಕರಾಭರಣ, ಇನ್ನೊಂದರಲ್ಲಿ ಬಿಲಹರಿ ಇದ್ದರೂ ತಾಳ ಸಮಾನವಾಗಿದೆ. ಸಂಗೀತಶಾಸ್ತ್ರವಿಶಾರದರು ಈ ಕೀರ್ತನೆ ಯಾವ ರಾಗಕ್ಕೆ ಉಚಿತವಾಗಿ.

ಶುದ್ಧವಾಗಿ ಹೊಂದಿಕೊಳ್ಳುತ್ತದೆಂಬುವನ್ನು ಹೇಳಬಲ್ಲರು ; ಆ ಬಗ್ಗೆ ನಾನು ಏನನ್ನೂ ಹೇಳಲಾರೆ. ಆದರೆ ಸಾಹಿತ್ಯ ದೃಷ್ಟಿಯಿಂದ ಮಾತ್ರ ನೋಡಿದಾಗ, ಒಂದೇ ಓದಿಗೆ, ಧಾರಾಳವಾಗಿ ಹೇಳಬಹುದಾದ ಮಾತೆಂದರೆ 'ಆ' ದ ಕೀರ್ತನಶಿಲ್ಪದಲ್ಲಿ ಶೈಥಿಲ್ಯಗಳಿವೆ, ಮಾವಿನಹಣ್ಣು, ತ್ರಿಜಗ ಎಂಬ ಶಬ್ದ ಎರಡೆರಡು ಸಲ ಬಂದಿರುವುದಕ್ಕೆ ಔಚಿತ್ಯವಿಲ್ಲ; ದೈವವನ್ನು (ಕೃಷ್ಣನನ್ನು) ಒಂದು ಹಣ್ಣೆಂದು ರೂಪಕವಾಗಿಸಿ ಪುನರುಕ್ತಿ ಮಾಡುತ್ತಾ ಹೊರಟಿರುವುದು ಬೇರೆ–ಅದರ ಅರ್ಥ, ಔಚಿತ್ಯ ಸ್ವಾರಸ್ಯಗಳಿವೆ ; ಇಡೀ ಕೀರ್ತನೆ ನಿಂತಿರುವ ಕೇಂದ್ರವೇ ಅದು ಹಿಂದಿನ ಉದಾಹೃತ ಕೀರ್ತನೆಗಳಲ್ಲಿ ಗುರುತಿಸಿರುವ ಹಾಗೆ ಇಲ್ಲಿಯೂ ಕೆಲವು ಶಬ್ದಗಳು ಸ್ಥಳಾಂತರಗೊಂಡಿವೆ : ಈ ಬಗೆಯ ಒಂದು ಕಡೆ ಬಳಸಿರುವ ನುಡಿಗಳನ್ನು ಬೇರೊಂದು ಮಾತಿನಿಂದ ಪಲ್ಲಟಿಸಿರುವಿಕೆಯಿಂದ ನಿರೂಪಣೆಯಲ್ಲಿ ಯಾವ ಬದಲಾವಣೆಯೂ ಫಲಿಸಿಲ್ಲ; ಇವೆರಡೂ ಹಾಡುಗಳು ಒಂದೇ ಬುದ್ಧಿ–ಭಾವದ ಸೃಷ್ಟಿಯೆಂಬ ವಾಸ್ತವಾಂಶ ಮರೆಯಾಗಿಲ್ಲ. ಇನ್ನು ಮತ್ತೆ ಇಡೀ ಕೀರ್ತನೆ 'ಹೂವ ತರುವರ ಮನೆಗೆ ಹುಲ್ಲು ತರುವೆ' ಎಂಬುದು. ಇದರಲ್ಲಿ ಎರಡೂ ಕಡೆ ರಾಗ ನಿರ್ದೇಶನ ಕಾಂಭೋದಿಯೇ ಆಗಿದ್ದರೂ ತಾಳದಲ್ಲಿ (ಒಂದು ಕಡೆ ಆಟ, ಇನ್ನೊಂದು ಕಡೆ ಝಂಪೆ) ಮತ್ತು ಇಡೀ ಕೀರ್ತನ ಶರೀರದಲ್ಲಿ ಅಂತರ ತುಂಬ ಇದೆ ; ಆದರೆ ಹಾಡಿನ ಒಟ್ಟು ಆಂತರ್ಯ ಒಂದೇ ಎನಿಸಿದೆ. ಇದೇ ರೀತಿಯಾಗಿ 'ಈತನೀಗ ವಾಸದೇವನು' ಮತ್ತು 'ಈತ ಮುಖ್ಯ ಪ್ರಾಣನಾಥ' ಎಂಬ. ಕ್ರಮವಾಗಿ ಈ ಇಬ್ಬರ, ಕೀರ್ತನೆಗಳ ಆದಿಯಲ್ಲಿರುವ ಸಾಮ್ಯ ಅನಂತರದ ಚರಣಗಳಲ್ಲಿ ಕಾಣದೆ ಹೋದರೂ, ಒಟ್ಟು ಆಶಯ ಒಂದೇ ಮೂಲಕ್ಕೆ ದುಡಿಯುವಂತಿದೆ. ಹೀಗೆ, ಈ ಪಟ್ಟಿಯನ್ನು ಇನ್ನಷ್ಟೂ ಉದಾಹರಣೆಗಳನ್ನಿತ್ತು ಪುಷ್ಟಿಗೊಳಿಸಲು, ಸಾಕಷ್ಟು ಗ್ರಾಸ ಸಿಗುತ್ತದೆಂಬೊಂದು ಸೂಚನೆಯನ್ನು ಮುಂದಿನ ಅನ್ವೇಷಕರ ಮಡಿಲಿಗೆ ಹಾಕಬಹುದು. ಈ ನಿದರ್ಶನಗಳನ್ನು ನಿಲ್ಲಿಸಿ, ಸಮಾರೋಪ ರೂಪದ ಕೆಲವು ತೀರ್ಮಾನಗಳಿಗೆ ತೊಡಗುವುದಕ್ಕೆ ಮುಂಚೆ ಇನ್ನೊಂದು ಉದಯರಾಗವನ್ನು ಪ್ರಸ್ತಾಪಿಸಬೇಕಾಗಿದೆ: ಈ ಕಡೆಗೆ ನನ್ನ ಗಮನ ಸೆಳೆದು ಮಾಹಿತಿ ಕೊಟ್ಟವರು ಡಾ. ಕಮಲಾ ಹಂಪನಾ.

ಡಾ. ಕಮಲಾ ಹಂಪನಾ ಅವರು ತಮ್ಮ ನಿಬಂಧ "ತುರಂಗ ಭಾರತ: ಒಂದು ಅಧ್ಯಯನ"ದಲ್ಲಿ, ಪರಮದೇವ ಕವಿಯು ತನ್ನ ಕಾವ್ಯದಲ್ಲಿ ಅಳವಡಿಸಿಕೊಂಡಿರುವ, ಪುರಂದರದಾಸರ ಹೆಸರಿನಲ್ಲೂ ಅಚ್ಚಾಗಿರುವ, ಒಂದು ಉದಯರಾಗದ ಆಕರದತ್ತ ಗಮನ ಸೆಳೆದಿದ್ದಾರೆ : ಅದು 'ದ್ರೌಪದೀ

ಮಾನಸಂರಕ್ಷಣ' ಎಂಬ ಹೆಸರಲ್ಲಿದೆ, ೧೫ ಷಟ್ಪದಿ ಪದ್ಯಗಳಿವೆ. ಇದು ಕೆಲವು ಹಸ್ತಪ್ರತಿಗಳಲ್ಲಿ 'ಮಂಗಳಂ ಶ್ರೀಯರಸ ಪುರಂದರ ವಿಠಲಗೆ' ಎಂದೂ, ಕೆಲವದರಲ್ಲಿ 'ಮಂಗಳಂ ಸಿರಿಕಾಗಿನೆಲೆಯಾದಿಕೇಶವಗೆ' ಎಂದೂ ಕಡೆಯ ನುಡಿಯಲ್ಲಿದ್ದು ಸಂಶೋಧಕರ ಆಖೈರು ತೀರ್ಮಾನಕ್ಕೆ ಇನ್ನೂ ದಾರಿ ಕಾಯುತ್ತಿದೆ. ಪುರಂದರರ ಹಾಡುಗಳ ಸಂಕಲನದಲ್ಲಿ, ಇದು ಅವರ ರಚನೆಗೆ ಸೇರಿದ್ದೆಂಬಂತೆ, ಈ ಉದಯರಾಗ ಪದ್ಧತಿಯ ಪ್ರಕರಣವೂ ಸೇರ್ಪಡೆಯಾಗಿದೆ; ಹಲವು ಸಂಪಾದಕರುಗಳ ಆವೃತ್ತಿಗಳಲ್ಲಿ ಹೀಗೆ ಸೇರಿಕೊಂಡು ಇದು ಪುರಂದರರದೇ ಇರಬೇಕೆಂಬ ಪ್ರತೀತಿ ನಿಂತುಬಿಟ್ಟಿದೆ. ಪರಮದೇವ ಕವಿಯೂ ಇದನ್ನು ಪುರಂದರರಿಂದಲೇ ಎತ್ತಿಹಾಕಿದ್ದಾನೆಂದು ತಾವು ಮೊದಲು ಭಾವಿಸಿ ಬರೆದುದಾಗಿಯೂ, ಈಗ ಈ ಹಾಡು ಕನಕದಾಸರದೇ ಬಂದು ತಮಗೆ ಖಾತ್ರಿಯಾದದ್ದು ಹಿಂದೆ ತಳೆದ ನಿಲುಮೆಯನ್ನು ಪೂರ್ತಿ ಬದಲಾಯಿಸಿ ಕೊಂಡಿರುವುದಾಗಿಯೂ ಡಾ. ಕಮಲಾ ಹಂಪನಾ ಸ್ಪಷ್ಟಪಡಿಸಿದ್ದಾರೆ. ಆದರೆ ಈ ವಿಚಾರದಲ್ಲಿ ಕರ್ನಾಟಕ ಸರ್ಕಾರದ 'ಪುರಂದರ ಸಾಹಿತ್ಯ ದರ್ಶನ' (೧೯೮೫) ಸಂಪುಟ ನಾಲ್ಕರಲ್ಲಿ (ಪುಟ 22) 'ಇದನ್ನು ಕನಕದಾಸರದ್ದೆಂದೂ ಹೇಳುವುದಿದೆ' ಎಂದು ಅಡ್ಡಗೋಡೆಯ ಮೇಲೆ ದೀಪವಿಡಲಾಗಿದೆ. ಆದರೆ ಬಿ. ಶಿವಮೂರ್ತಿಶಾಸ್ತ್ರಿಗಳು ಇದು ಕನಕದಾಸರ ರಚನೆಯೆಂದು ಕಡಾಖಂಡಿತವಾಗಿ ಹೇಳಿದ್ದಾರೆ.

ಈ ದಿಕ್ಕಿನಲ್ಲಿ ಚಿಂತನೆಯನ್ನು ಮಸೆದು ನಿಲ್ಲಿಸಿದ ಆದ್ಯರಲ್ಲಿ ಬೆಟಗೇರಿ ಕೃಷ್ಣಶರ್ಮರನ್ನು ಮೊದಲು ನೆನೆಯಬೇಕು. ಇದರ ಸಂಬಂಧವಾಗಿ ಅವರ ಹೇಳಿಕೆ ಹೀಗಿದೆ : "ಪುರಂದರದಾಸರ–ಕನಕದಾಸರ ಕೆಲವೊಂದು ಗೀತಗಳು ಪರಸ್ಪರ ಅಂಕಿತಗಳನ್ನು ಬದಲಿಸಿಕೊಂಡು ಮುದ್ರಿತವಾಗಿವೆ. ಇವುಗಳ ನಿಜವಾದ ಕರ್ತೃಗಳಾರೆಂಬುದನ್ನು ನಿರ್ಣಯಿಸುವುದಕ್ಕೆ ಪ್ರಾಚೀನ ಹಸ್ತಪ್ರತಿಗಳೇ ನಮಗೆ ಸಹಕಾರ ನೀಡಬಲ್ಲವು. ಆ ಸಹಕಾರವನ್ನು ಉಪಯೋಗ ಮಾಡಿಕೊಂಡು ದರಿಂದಲೇ ಈ ಸಂಕಲನದಲ್ಲಿ, ಪುರಂದರದಾಸರವೆಂದು ನಂಬುಗೆಗೆ ಪಾತ್ರವಾಗಿ, ಇದರಲ್ಲಿ ಅಚ್ಚಾಗಿವೆ. ಇದಕ್ಕೆ ಮುಖ್ಯವಾದ ಉದಾಹರಣೆಯನ್ನು ಹೇಳಬೇಕೆಂದರೆ, ದ್ರೌಪದೀ ಮಾನಸಂರಕ್ಷಣೆಯ ಉದಯರಾಗದ ದೀರ್ಘಕವನ ಅಥವಾ ಖಂಡಕಾವ್ಯ. ಇದು ಎಲ್ಲ ಹಸ್ತಪ್ರತಿಗಳಲ್ಲಿಯೂ ಕನಕದಾಸರ ಅಂಕಿತದಿಂದಲೇ ಕೂಡಿರುವುದು". ('ಕನಕದಾಸರ ಭಕ್ತಿ ಗೀತಗಳು' : ಸಮಾಜ ಪುಸ್ತಕಾಲಯ, ಧಾರವಾಡ, 1965, ಪುಟ V) ಈ ಅಂಶವನ್ನು, ಅದೇ ಪುಸ್ತಕದಲ್ಲಿ

ಮುಂದುವರಿಸಿ, ಇನ್ನೊಂದು ಕಡೆ ಮತ್ತೆ ಪ್ರಸ್ತಾಪಿಸುತ್ತ ಹೇಳಿರುವ ಮಾತುಗಳಿವು: "ಈ ಸಂಕಲನದಲ್ಲಿ ಪ್ರಕಟವಾಗಿರುವ 'ವಾಸುದೇವಾಯ ನಮೋ' ಎಂಬ ದ್ರೌಪದಿಯ ಮಾನರಕ್ಷಣೆಯ ಕೃತಿಯೂ ಒಂದು ಖಂಡಕಾವ್ಯದಂತಿದೆ. ಕುಮಾರವ್ಯಾಸ ಕವಿಯ ಈ ಕಥಾಭಾಗದೊಂದಿಗೆ ಕನಕದಾಸರ ಈ ಕೃತಿಯನ್ನು ಹೋಲಿಸಿ ನೋಡಿದರೆ, ಕನಕದಾಸರು ಕುಮಾರವ್ಯಾಸ ಕವಿಯ ಕೃತಿಯಿಂದ ಪ್ರಭಾವಿತರಾಗಿದ್ದಾರೆಂಬುದು ಕಂಡು ಬಾರದಿರದು" (–ಅದೇ– : ಮುನ್ನುಡಿ, ಪುಟ XXVII-XXVIII).

ಕೆಲವು ಅಂಶಗಳು ಇಲ್ಲಿ ಸ್ಪಷ್ಟಗೊಳ್ಳಬೇಕಾಗಿವೆ. ಬೆಟಗೇರಿಯವರ ಪ್ರಾಂಜಲ ವಿವೇಚನೆ ಸ್ತುತ್ಯಾರ್ಹವಾದುದು. ಅವರು ಕನಕದಾಸರ ಹಾಡುಗಳನ್ನೂ, ಪುರಂದರದಾಸರ ಹಾಡುಗಳನ್ನೂ ಶ್ರದ್ಧೆಯಿಂದ ಸಂಪಾದಿಸಿ ಪ್ರಕಟಿಸಿದ್ದಾರೆ : ಉಪಲಬ್ಧ ಹಸ್ತಪ್ರತಿಗಳಲ್ಲಿ ಕೆಲವನ್ನು ಆಧರಿಸಿ ಪಾಠಪರಿಷ್ಕರಣ ಮಾಡಿದ್ದಾರೆ. ಕನಕದಾಸರವೆಂದು ಅಚ್ಚಾಗಿರುವ ಕೆಲವು ಹಾಡುಗಳು ಅವರವಲ್ಲವೆಂದು ತಿಳಿದು, ಅಂತಹ, ಅಂದರೆ ಅವರವಲ್ಲದ ಕೀರ್ತನೆಗಳನ್ನು ತಮ್ಮ ಸಂಕಲನದಲ್ಲಿ ಸೇರಿಸಿಲ್ಲವೆಂದು ಸ್ಪಷ್ಟವಾಗಿ ಅರಿಕೆ ಮಾಡಿದ್ದಾರೆ (ಅದೇ– : ಪುಟ. IV). ಅಷ್ಟೇ ಅಲ್ಲದೆ ಸಂಪಾದಕರಾಗಿ ಅವರು ಗಂಟೆ ಹೊಡೆದಂತೆ ಹೀಗೆ ಹೇಳಿದ್ದಾರೆ : "ಕನಕದಾಸರವಲ್ಲದ ಹಾಡುಗಳನ್ನು ಈ ಸಂಕಲನದಲ್ಲಿ ಒಂದನ್ನೂ ತೆಗೆದುಕೊಂಡಿಲ್ಲ" (ಅದೇ ಮುನ್ನುಡಿ ಪುಟ. XXIX). ಹೀಗೆ ಹೊಣೆಯನ್ನು ಹೊತ್ತು ಅವರು ಹೊರತಂದ ಕನಕದಾಸರ ಹಾಡುಗಳ ಕಟ್ಟಿನಲ್ಲಿ ಇದುವರೆಗೆ ನಾನು ಉದಾಹರಿಸಿದ ಹಾಡುಗಳು, ವರಕವಿಗಳ ಮುಂದೆ– ಎಂಬುದನ್ನು ಬಿಟ್ಟು, ಸೇರ್ಪಡೆಯಾಗಿವೆ : ಅದರಿಂದ ಆ ಕೀರ್ತನೆಗಳೆಲ್ಲ ಕನಕದಾಸರ ರಚನೆಯೆಂದು ಅವರು ಪರಿಶೀಲಿಸಿ ಕೈಗೊಂಡು ನಿರ್ಣಯವಾಗಿ, ಒಪ್ಪಿದ್ದಾರೆ. ಹೀಗಿದ್ದೂ ಇಂದಿಗೂ ಆ ಹಾಡುಗಳು ಪುರಂದರದಾಸರ ಹಾಡುಗಳೆಂದೇ ಹೊಸ ಪ್ರಕಟಣೆಗಳಲ್ಲಿ ರಾರಾಜಿಸುತ್ತ ಮುಂದುವರಿಯುತ್ತಿರುವುದೇಕೆ? ಸಂಪಾದಕರಾಗಿ ಅಷ್ಟು ಜವಾಬ್ದಾರಿಯಿಂದ ಕಾರ್ಯನಿರ್ವಹಿಸಿದ ಬೆಟಗೇರಿಯವರು ಕೂಡ, 'ಪುರಂದರದಾಸರವೆಂದು (–ಅದೇ: ಪುಟ. V) ಮೊಗಂ ಆಗಿ ಹೇಳಿದರೇ ಹೊರತು, ಆ ಒಗಟು ಬಿಡಿಸಿ ಇಂತಿಂತಹ ಹಾಡುಗಳೇ ಅವು ಎಂದು ಢಣಾಡಂಗುರವಾಗಿ ಹೇಳಲಿಲ್ಲ. ನಾನು ಈ ಸಂಪ್ರಬಂಧದಲ್ಲಿ ಆ ಕೆಲಸ ಮಾಡಿ, ಎಲ್ಲವನ್ನೂ ಹುಡುಕಿ ತೆಗೆದು ಉದಾಹರಿಸಿದ್ದು ಇದೇ ಕಾರಣಕ್ಕಾಗಿ.

ಈಗ ಮುಖ್ಯವಾದ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಶೋಧನ ಕಾರ್ಯ ನಡೆಯಬೇಕಾಗಿದೆ. ಪುರಂದರದಾಸರ ಕೀರ್ತನೆಗಳನ್ನು ಕನಕದಾಸರ ಹಾಡನ್ನಾಗಿಸುವ ಅಥವಾ ಅದರ ತದ್ವಿರುದ್ಧ ಪ್ರಕ್ರಿಯೆಗಳಲ್ಲಿ ಹೆಚ್ಚು ಸಾಧ್ಯತೆ, ಸಂಭಾವ್ಯತೆ ಇರುವುದು ಯಾವುದು ? ಮೂಲ ಅಥವಾ ಮೊದಲ ರಚನೆ ಯಾರದು ಅಥವಾ ಯಾವುದು ? ಒಬ್ಬರ ಅಂಕಿತವನ್ನು ತೆಗೆದು ಇನ್ನೊಬ್ಬರ ಅಂಕಿತವನ್ನಿಟ್ಟು ಈ ಅದಲು ಬದಲು ಮಾಡುವ ಕೆಲಸ ಯಾವಾಗ ಆರಂಭವಾಯಿತು ? ಯಾರಿಂದ, ಯಾಕಾಗಿ ಈ ಕರ್ತೃತ್ವ ವ್ಯತ್ಯಾಸ ತೋರಿಸುವ ಕೆಲಸ ನಡೆಯಿತು–? ಈ ಬಗೆಯ ಮೂಲಭೂತವಾದ ಸಂಶಯಗಳು ಸಂಶೋಧಕರನ್ನು ಕಾಡುತ್ತವೆ. ಈ ಬಗ್ಗೆ ವಿವೇಚಿಸುವವರೆಲ್ಲ ನೆನಪಿಸುವ ಒಂದು ಸಂಗತಿಯಿದೆ ; ಪುರಂದರ–ಕನಕದಾಸ ಇಬ್ಬರೂ ಶ್ರೇಷ್ಠ ಸಂತರು, ದಾಸವ ರೇಣ್ಯರು ; ಪರಮಜ್ಞಾನಿಗಳಾದ ಪುರಂದರ ಕನಕದಾಸರಲ್ಲಿ ಕೃತಿಚೋರತನ ಕಲ್ಪಿಸುವುದು ನಮ್ಮ ಅಜ್ಞಾನವಾದೀತು. ಈ ಅಶ್ವಿನೀದೇವತೆಗಳ ವಿಚಾರವಾಗಿ ಇಂಥ ಆರೋಪ ಮಾಡುವುದಿರಲಿ, ಹಾಗೆ ಆಲೋಚಿಸುವುದು ಕೂಡ ಅಪರಾಧವಾಗಬಹುದು. ಏಕೆಂದರೆ ಅವರಿಬ್ಬರಲ್ಲೂ ಅಂಥ ಪ್ರತಿಭಾ ದಾರಿದ್ರ್ಯವಿರಲಿಲ್ಲ ; ಕ್ಷಣದಲ್ಲಿ, ನಿಂತ ನಿಲುವಿನಲ್ಲಿ, ಹೊಸ ಕೀರ್ತನೆ ಕಟ್ಟಿ ಹಾಡುವ ಸ್ಫೂರ್ತಿ ಪ್ರತಿಭಾಶಕ್ತಿಗಳಿದ್ದುವು : ಇವರಲ್ಲಿ ಒಬ್ಬರು ಇನ್ನೊಬ್ಬರ ಕೀರ್ತನೆಗಳನ್ನು, ಕೇವಲ ಅಂಕಿತವನ್ನು ಬದಲಾಯಿಸಿಕೊಳ್ಳುವುದರ ಮೂಲಕ, ಅಲ್ಲೊಂದು ಇಲ್ಲೊಂದು ಮಾತೊ ಸಾಲನ್ನೊ ವ್ಯತ್ಯಾಸಗೊಳಿಸಿ, ತಮ್ಮದನ್ನಾಗಿಸಿಕೊಂಡರೆಂದು ತಿಳಿಯುವುದಕ್ಕೆ ಹಿಂಜರಿಕೆಗೆ ಇದೇ ಪ್ರಧಾನವಾದ ಕಾರಣ. ಎರವಲು ಸರಕಿನ ಬಂಡವಾಳದಿಂದ ಬಾಳಬೇಕಾದ ದಿವಾಳಿತನ, ಬಡತನ ಇಬ್ಬರಲ್ಲೂ ಇರಲಿಲ್ಲ.

ಸುಮಾರು ಹದಿನೇಳನೆಯ ಶತಮಾನದಲ್ಲೇ ಈ ಕೀರ್ತನೆಗಳನ್ನು ಹೀಗೆ ಕಲಸು ಮೇಲೋಗರ ಮಾಡುವ ಕೆಲಸ ಆರಂಭವಾಗಿದೆಯೆಂದು ತೋರುತ್ತದೆ. ಇದನ್ನು ಇನ್ನಷ್ಟು ನಿರ್ದಿಷ್ಟಗೊಳಿಸಲು, ಈಗ ಲಭ್ಯವಿರುವ ತಾಳೆಗರಿಯ ಪ್ರಾಚೀನ ಹಸ್ತಪ್ರತಿಗಳನ್ನು ಆಧರಿಸಿದರೆ, ಸಾಧ್ಯವಿದೆ ; ಮೊಟ್ಟಮೊದಲು ಯಾವ ಹಾಡನ್ನು ಹೀಗೆ ಬದಲಾಯಿಸಲಾಯಿತೆಂಬುದನ್ನೂ ಇಂಥ ಅಧ್ಯಯನದಿಂದ ಬಹಿರಂಗಗೊಳಿಸಬಹುದು. ಓಲೆಗರಿ, ಕಾಗದದ ಪ್ರಪ್ರಾಚೀನ ಹಸ್ತಪ್ರತಿಗಳ ಸಹಾಯದಿಂದಲೇ ಸೂರಿಗಳು ನಿರ್ಧರಿಸಿ ಹೇಳಬೇಕಾದ ಅಂಶಗಳು ಎರಡು. ಒಂದು, ಎಲ್ಲಿಯವರೆಗೆ ಕೀರ್ತನೆಗಳು ಸಂಕರಗೊಳ್ಳದೆ ಯಥಾಸ್ಥಿತಿಯಲ್ಲಿದ್ದುವು? ಎರಡು, ಯಾವಾಗ ಈ ಕೆಲಸ, ಕರ್ನಾಟಕದ ಯಾವ ಭಾಗದ ಹಸ್ತಪ್ರತಿಗಳಲ್ಲಿ

ಪ್ರಾರಂಭವಾಯಿತು ಮತ್ತು ಇದಕ್ಕೆ ಬಲಿಯಾದ ಮೊದಲ ಕೀರ್ತನೆಗಳು ಯಾವುವು? ಇದು ಶುದ್ಧಾಂಗವಾಗಿ, ವಸ್ತುನಿಷ್ಠ ಪರಾಮರ್ಶೆಯಿಂದ ಪತ್ತೆಯಾಗಬೇಕಾದ ಕೆಲಸ, ಆ ದಿಕ್ಕಿನಲ್ಲಿ ಹೆಜ್ಜೆಯಿರಿಸಿದ ಆದ್ಯರು ಬೆಟಗೇರಿಯವರು; ಅದರಿಂದ, ಅವರು ಆಧರಿಸಿದ ಪ್ರತಿಗಳ ಸ್ವರೂಪ, ಕಾಲ– ಇದನ್ನೂ ಗಣನೆಗೆ ತಂದುಕೊಳ್ಳಬೇಕು.

ಈ ಸಮಸ್ಯೆಗೆ ಹಸ್ತಪ್ರತಿಗಳನ್ನು ಜಾಲಾಡಿ, ಜಾತಕ ಬಿಡಿಸಿ ನೋಡುವುದೊಂದೇ ಪರಿಹಾರವಲ್ಲ. ಇದಕ್ಕೆ ಸಾಮಾಜಿಕ, ಆರ್ಥಿಕ ಶೈಕ್ಷಣಿಕ, ಧಾರ್ಮಿಕ ಮುಖಗಳೂ ಇವೆ. ಪುರಂದರರೂ ಕನಕದಾಸರೂ ಸಮಕಾಲೀನರಾದ ವಿಭೂತಿಪುರುಷರು. ಪುರಂದರರು ಶೂದ್ರರೂ; ವೈಶ್ಯಕುಲ ಸಂಜಾತರಾಗಿದ್ದು ಆಮೇಲೆ ದಾಸರಾದ ಮಹಾಜ್ಞಾನಿ. ಕನಕದಾಸರೂ ದಲಿತರ ಅಂಚಿನಲ್ಲಿರುವ ಶೂದ್ರರು ; ಕುರುಬರಾಗಿದ್ದು ದಾಸರಾದರು ಅವರಿಬ್ಬರೂ ಹುಟ್ಟಿಬಂದ ಜಾತಿಕುಲದ ಹಿನ್ನೆಲೆಯಲ್ಲಿ ಪುರಂದರ ದಾಸರಿಗೆ ಅವರ ಕಾಲದ ದಾಸ ಪರಿವಾರದೊಳಗೂ ದೇವಾಲಯಗಳಲ್ಲೂ ಸುಲಭ ಪ್ರವೇಶ ದೊರೆಯಿತು, ಕನಕದಾಸರು ಪಟ್ಟ ಬವಣೆಗೆ ಇಂದಿಗೂ ಕನಕನಕಿಂಡಿ ವ್ಯಥೆಯ ಕಥೆಯನ್ನು ಹೇಳುತ್ತಿದೆ. ಸಾಮಾಜಿಕವಾಗಿ ಇವರಿಬ್ಬರೂ ಶೂದ್ರರು ; ಆರ್ಥಿಕವಾಗಿ ಕುರುಬರು ಹಿಂದುಳಿದವರು, ಶೈಕ್ಷಣಿಕವಾಗಿಯಂತೂ ಇಂದಿಗೂ ತುಂಬ ಕೆಳಗಿರುವ ಜನಾಂಗ. ಇವೆಲ್ಲದರ ಪರಿಣಾಮವಾಗಿ ದಾಸರ ಸಮುದಾಯದಲ್ಲಿ ಇವರಿಗಿದ್ದ ಸ್ಥಾನಮಾನಗಳ ಚಿತ್ರಣ ಮಸಕು ಮಸುಕಾಗಿಯಾದರೂ ಕಂಡುಬರುತ್ತದೆ.

ಈ ಇಬ್ಬರು ದಾಸರಿಗೆ ಇದ್ದ ಸೃಜನ ಸಾಮರ್ಥ್ಯ, ಇವರು ರಚಿಸಿದ ಕೃತಿಗಳು, ಬರವಣಿಗೆಯ ಹಿನ್ನೆಲೆಗಳನ್ನು ನೋಡಿದಾಗ ಕನಕದಾಸರು ಹುಟ್ಟುಕವಿಯೆಂಬುದು ನಿಶ್ಚಿತವಾಗುತ್ತದೆ. ಅವರ ಕಾವ್ಯಗಳನ್ನು ಒತ್ತಟ್ಟಿಗೆ ಸರಿಸಿ, ಕೇವಲ ಕೀರ್ತನಗಳನ್ನೇ ತನಿಯಾಗಿ ತೆಗೆದು ನೋಡಿದಾಗಲೂ, ಇಲ್ಲಿಯೂ ಉಳಿದ ಕೀರ್ತನಕಾರರದಕ್ಕಿಂತ, ಕನಕದಾಸರ ಹಾಡುಗಳಲ್ಲೇ ಕಾವ್ಯಾಂಶ ಅಧಿಕವೆಂಬುದು ಸಾಹಿತ್ಯ ವಿಮರ್ಶಕರು ಒಪ್ಪುವ ಮಾತು. ಹೀಗಿರುವಾಗ ಅವರು ಪುರಂದರದಾಸರ ಕೀರ್ತನೆಗಳನ್ನು ಅಲ್ಲಿ ಇಲ್ಲಿ ತಿದ್ದಿ ತಮ್ಮದನ್ನಾಗಿಸಿ ಕೊಳ್ಳುವುದೆಂಬುದು ಅಸಂಭಾವ್ಯ ; ಮೇಲುವರ್ಗದವರ ಹಾಡುಗಳನ್ನು ಒಂದು ಸಿದ್ಧ ಮಾದರಿಯಾಗಿಟ್ಟುಕೊಂಡು ರಚಿಸುವಾಗ ಪ್ರಭಾವ ಗಾಢತರವಾಗಿ ಆಗಿರಬಹುದಲ್ಲವೆ ಎಂಬ ಪ್ರಶ್ನೆಯೂ ಕೇವಲ ತರ್ಕದ ಸ್ತರದಲ್ಲೇ ನಿಲ್ಲಬಹುದು.

ಈ ಇಬ್ಬರು ಯೋಗಪುರುಷರೂ ಹೀಗೆ ಒಬ್ಬರಿಂದೊಬ್ಬರು

ಕೀರ್ತನೆಗಳನ್ನು ಕಳವು ಮಾಡುವ ಪ್ರವೃತ್ತಿಗೆ ದೂರವಾಗಿ, ಅತೀತರಾಗಿ ಉಳಿದರೆ ಇನ್ನು ಕದ್ದವರು ಯಾರು? ಇದು ಚಿಂತನೀಯವೆ. ನನಗೆ ತೋರುವ ಉತ್ತರವೆಂದರೆ, ಈ ಬಗೆಯಲ್ಲಿ ಕೀರ್ತನೆಗಳ ಅದಲು ಬದಲು ಕೆಲಸ ಮಾಡಿದವರು ಸಂಪ್ರತಿಕಾರರೇ ಇರಬೇಕೆಂಬುದು. ಅಂದರೆ ಹಸ್ತಪ್ರತಿಗಳನ್ನು ಸಿದ್ಧಪಡಿಸುವ, ಅಕ್ಷರ ವಿದ್ಯೆ ಬಲ್ಲ ಕೆಲವೇ ಕೆಲವು ಸ್ಥಾಪಿತ ಹಿತಾಸಕ್ತಿಗಳವರು, ತಾವು ತುಂಬ ಜಾಣರೆಂದು ಬುದ್ಧಿಯೋಡಿಸಿದ್ದರಿಂದ ಸಂಭವಿಸಿದ ಕೆಲಸವಿದು. ಹಾಗೆ ತಿದ್ದುವಾಗಲೂ ಒಂದು ಮಾನಸಿಕ ಪ್ರಕ್ರಿಯೆ ಸಂಭವಿಸಿದೆ : ಪುರಂದರದಾಸರ ಹಾಡುಗಳನ್ನು ತಿದ್ದುವ ಧಾರ್ಷ್ಟ್ಯ, ಮುಟ್ಟುವ ಧೈರ್ಯ ಎಲ್ಲಿಂದ ಬರಬೇಕು? ಆದರೆ ಕನಕದಾಸರ ಹಾಡುಗಳ ಅಂಕಿತವನ್ನು ತಿದ್ದಿ ಬದಲಾಯಿಸುವುದಕ್ಕೆ ಅವರಿಗೆ ಕೆಲವು ಅನುಕೂಲಗಳಿದ್ದುವು : ಕನಕದಾಸರು ಹುಟ್ಟಿ ಬೆಳೆದು ಬಾಳಿ ಬಂದ ವರ್ಗಸಮುದಾಯಕ್ಕೆ ಅಕ್ಷರದ ಬಾಗಿಲೂ, ಮೇಲುಜಾತಿಯವರ ಮನೆ–ಮಂದಿರ–ಮಠಗಳ ಬಾಗಿಲೂ ಮುಚ್ಚಿದ್ದುವು ಅವರ ವಿಚಾರದಲ್ಲೊಂದು ಅಸಡ್ಡೆ, ಅವರು ತಮ್ಮವರನ್ನೆಲ್ಲ ಮೀರಿ ಮೀರಿಸಿ ಹೈಮಾಚಲೋನ್ನತವಾಗಿ ಬೆಳೆದರೆಂಬ ಅಸಹನೆ ಒಂದು ಹಿಡಿಮಂದಿಯಲ್ಲಿ ಹೆಡೆಯಾಡುತ್ತಿತ್ತು. ಈ ನಗ್ನ ಸತ್ಯವನ್ನೊಪ್ಪಿಕೊಳ್ಳಲು ಯಾವ ಹಿಂಜರಿಕೆಯೂ ಇರಬೇಕಾಗಿಲ್ಲ, ವಾಸ್ತವವಾಗಿ ಇಡೀ ದಾಸಸಾಹಿತ್ಯವೆಂದು ಯಾವ ಕೀರ್ತನಾದಿ ಸಾಹಿತ್ಯರಾಶಿಯನ್ನು ನಿರ್ದೇಶಿಸುತ್ತೇವೆಯೊ ಅದು, ಪುರಂದರ–ಕನಕರ ಹಾಡು/ ಕೃತಿಗಳನ್ನು ಹೊರತು ಪಡಿಸಿದರೆ ಉಳಿಯುವುದಾದರೂ ಏನು ? ಬರೀ ಎಲುಬಿನ ಗೂಡು, ಅದರಲ್ಲೂ ಗಟ್ಟಿ ಕಾಳುಗಳಿರುವುದು ಹೆಚ್ಚಾಗಿ ಕನಕದಾಸರಲ್ಲಿಯೇ. ಹೀಗಾಗಿ ಅವರ ಒಂದೊಂದೇ ಹಾಡನ್ನು ಲಪಟಾಯಿಸಿ, ಅವರ ಹೊಳಪನ್ನು ತಗ್ಗಿಸುವ, ಅತ್ತ ಅವರ ಕೃತಿರಾಶಿಯಿಂದ ಕದ್ದ ಕಳವಿನ ಮಾಲನ್ನು ಸೇರಿಸಿ ಇನ್ನೊಂದು ಕಡೆ ಬೆಳಕು ಹಾಯಿಸುವ ವ್ಯವಸ್ಥಿತ ಸನ್ನಾಹದಲ್ಲಿ, ಹುನ್ನಾರದಲ್ಲಿ ಒಬ್ಬಿಬ್ಬರಾದರೂ ನಿರತರಾಗಿರದ ಹೊರತು ಈಗ ನಾವು ಕಾಣುವ ವ್ಯತ್ಯಾಸಗಳು ಘಟಿಸುತ್ತಿರಲಿಲ್ಲ.

ಶೈಲಿಯ ದೃಷ್ಟಿಯಿಂದಲೂ, ಕಾವ್ಯನಿರ್ವಹಣೆಯ ಆಧಾರದಿಂದಲೂ, ಪ್ರಸ್ತಾಪಿತ ವಸ್ತು–ವಿಷಯದ ಬಲದಿಂದಲೂ ಇದುವರೆಗೆ ಈ ಸಂಪ್ರಬಂಧದಲ್ಲಿ ಉದಾಹರಿಸಿ ಚರ್ಚಿಸಿದ ಹಾಡುಗಳಷ್ಟೂ ಕನಕದಾಸರವೇ ಎಂಬುದು ನನ್ನ ಖಚಿತ ಅಭಿಪ್ರಾಯವಾಗಿದೆ. ನನ್ನ ಗ್ರಹಿಕೆ ತಪ್ಪೆಂದು ವಿದ್ವಾಂಸರು ಸಾಧಾರವಾಗಿ ತೋರಿಸಿ ಸ್ಥಾಪಿಸಿದಲ್ಲಿ ಅವರ ಅಭಿಪ್ರಾಯಕ್ಕೆ ಗೌರವಾದರ ತೋರಿಸಲು ತಯಾರಿದ್ದೇನೆ.

# ಕನಕದಾಸರ ಕಾಲದ ರಾಜಕೀಯ–ಸಾಮಾಜಿಕ–ಧಾರ್ಮಿಕ ಹಿನ್ನೆಲೆ

**ಕೊ. ವ್ಯಾ. ರಮೇಶ**

ಪ್ರಖ್ಯಾತ ಸಂಚಾರಿ ಹಾಡುಕವಿ, ದಾಸ ಸಾಹಿತಿ ಕಾಗಿನೆಲೆಯ ಕನಕದಾಸರು ಬಾಳಿ ಬದುಕಿದ ದಶಕಗಳು ಭಾರತದ ಹಾಗೂ ಕರ್ನಾಟಕದ ಇತಿಹಾಸದ ಒಂದು ವಿಷಮಾವಸ್ಥೆಯ ಸಂಧಿಕಾಲಕ್ಕೆ ಸೇರಿದವು. ಆ ವೇಳೆಗೆ ಕರ್ನಾಟಕವು ತನ್ನ ಪ್ರಾದೇಶಿಕ ಏಕತೆಯನ್ನು ಕಳೆದುಕೊಂಡಿತ್ತಾದರೂ, ವಿಜಯನಗರವು ಕ್ಷಾತ್ರಶಕ್ತಿಯ ದೃಷ್ಟಿಯಿಂದ ಮೇಲುತೋರ್ಕೆಗಾದರೂ ಭಾರತದ ಬಲಿಷ್ಠತಮ ಸಾಮ್ರಾಜ್ಯವಾಗಿ ಮೆರೆದ ದಿನಗಳವು. ಇಂದಿನವರೆಗೂ ಇತಹಾಸಕಾರರೆಲ್ಲರೂ ಆ ಸಾಮ್ರಾಜ್ಯದ ಪ್ರಭು ಮಂತ್ರೋತ್ಸಾಹ ಶಕ್ತಿಗಳನ್ನು ಸರ್ವತೋಮುಖ ಔನ್ನತ್ಯವನ್ನು ಏಕಪಕ್ಷೀಯವಾಗಿ ಒಂದೇ ಸಮನೆ ಹಾಡಿ ಹೊಗಳುತ್ತ ಬಂದಿರುವರು. ಆದರೆ ಈ ಎಲ್ಲ ಪ್ರಶಂಸೆಗಳೂ ಆ ಸಾಮ್ರಾಜ್ಯದ ಇತಿಹಾಸಕ್ಕೆ ಸಂಬಂಧಿಸಿದ ಶಾಸನಗಳ, ವಿದೇಶೀ ಯಾತ್ರಿಕರ ಬರಹಗಳ, ಇತರ ಐತಿಹಾಸಿಕ ದಾಖಲೆಗಳ, ಸ್ಮಾರಕಗಳ ಮೇಲುನೋಟದ ಅಧ್ಯಯನದಿಂದ ಹೊರಬಿದ್ದಿರುವ ಶಬ್ದಾರ್ಥನಿರೂಪಣೆಗಳಷ್ಟೆ. ಈ ಐತಿಹಾಸಿಕ ಪುರಾವೆಗಳ ಆಳವಾದ ವಾಸ್ತವಿಕ ಅಧ್ಯಯನದಿಂದ ಮನವರಿಕೆಯಾಗುವ ಗೂಢಾರ್ಥಗಳಿಂದ ರೂಪ ತಾಳುವ ವಿಜಯನಗರ ಸಾಮ್ರಾಜ್ಯದ ಐತಿಹಾಸಿಕ ಚಿತ್ರಣವೇ ಬೇರೆ ರೀತಿಯದು. ನಿಜ ಸಂಗತಿ ಎಂದರೆ, ಅಂದಿನ ಅರಸುಗಳೂ, ಅಧಿಕಾರಿವರ್ಗದವರೂ, ಸಿರಿವಂತರೂ, ಜನಸಾಮಾನ್ಯರೂ ಕೂಡ ಒಂದು ರೀತಿಯ ಮಹತ್ತೋನ್ಮಾದಕ್ಕೆ ಬಲಿಯಾಗಿ, ಅವರುಗಳ ದೈನಂದಿನ ನಡೆವಳಿಕೆಗಳಲ್ಲಿ ಕಪಟಾಚರಣೆಯ, ಡಾಂಭಿಕ ಪ್ರದರ್ಶನದ ಸೋಗು ಹಿಂದೆಂದಿಗಿಂತಲೂ ಹೆಚ್ಚಾಗಿ ಬೆರೆತು ಹೋಗಿತ್ತು. ಕ್ರಿ. ಶ. ೧೩೩೬ರಲ್ಲಿ ಸ್ಥಾಪನೆಗೊಂಡ ವಿಜಯನಗರವು, ಕೆಲವೇ ದಶಕಗಳ ನೈತಿಕ ಸಾಧನೆಗಳ ನಂತರ, ಅದರಲ್ಲೂ ಮುಖ್ಯವಾಗಿ ಕನಕದಾಸರ ಕಾಲಕ್ಕೆ ತನ್ನ ಅಂತಃಸತ್ತ್ವವನ್ನು

ಕಳೆದುಕೊಂಡಿತ್ತು. ವಿಜಯನಗರ ಯುಗವು ರಾಜಕೀಯ, ಸಾಮಾಜಿಕ, ಧಾರ್ಮಿಕ ಜನಜೀವನದ ನಮ್ಮ ಇಂದಿನ ದಾರುಣ ಪರಿಸ್ಥಿತಿಯ ಉಪಕ್ರಮ ಕಾಲವಿತ್ತೆಂದರೆ ಅದು ತಪ್ಪಾಗಲಾರದು. ಅಂದಮೇಲೆ ಕನಕದಾಸರು ತಮ್ಮ ಕೃತಿ-ಕೀರ್ತನೆಗಳ ಮೂಲಕ ಅಂದಿನ ಅವರ ಸಮಾಜವನ್ನು ಪೀಡಿಸುತ್ತಿದ್ದ ಅಪಮೌಲ್ಯಗಳನ್ನು ಕುರಿತ ಆಪಾದನೆಗಳ ಒಂದು ಉದ್ದ ಪಟ್ಟಿಯನ್ನೆ ನೀಡಿರುವುದರಲ್ಲಿ ಅಚ್ಚರಿಯೇನೂ ಇಲ್ಲ. ನಾಲ್ಕೂ ಜಾತಿಯವರೂ, ಆ ನಾಲ್ಕು ಜಾತಿಗಳಿಂದ ಹೊರಗಿರಿಸಲ್ಪಟ್ಟವರೂ, ಕಳ್ಳಕಾಕರೂ, ಸನ್ಯಾಸಿ, ಜಂಗಮರೂ ಕೂಡ 'ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ, ತುತ್ತು ಹಿಟ್ಟಿಗಾಗಿ' (೨೭)[1] ಮಾತ್ರವೆ ಕಾರ್ಯ ಪ್ರವೃತ್ತರಾಗಿರುವರೆಂದು ಆಪಾದಿಸುವ ಕನಕದಾಸರು

'ಸತ್ಯಧರ್ಮಗಳೆಲ್ಲ ಎತ್ತಪೋದವೊ ಕಾಣೆ
ಉತ್ತಮರ ಜೀವನಕೆ ದಾರಿಯಿಲ್ಲ' (೧೨. ೧) ಎಂದೂ
'ಮಾತಾಪಿತೃಗುರು ದೈವ ದ್ರೋಹದಿ
ಭೂತಳವು ನಡನಡುಗುತಿಹುದು' (೪೯. ೨) ಎಂದೂ
'ಕತ್ತಲಾಯಿತು ಕಲಿಯ ಮಹಿಮೆ' (೪೯. ೧) ಎಂದೂ

ಹಲುಬಿರುವುದು ವಿಜಯನಗರ ಸಾಮ್ರಾಜ್ಯದ ಯಥಾವತ್ತಾದ ಇತಿಹಾಸವನ್ನು ಬಲ್ಲವರಿಗೆ ಉತ್ಪ್ರೇಕ್ಷೆಯೆನಿಸದು. ಇವು ನಿರಾಶಾವಾದಿಯೊಬ್ಬನ ಹೇಳಿಕೆಗಳಂತೂ ಅಲ್ಲ. ಅಷ್ಟೇ ಅಲ್ಲದೆ, ಅಂದಿನ ಜನತೆಯನ್ನು ತಪ್ಪು ದಾರಿಗೆಳೆದ ಸಾಮಾಜಿಕ-ಆರ್ಥಿಕ ಒತ್ತಡಗಳನ್ನು ಐತಿಹಾಸಿಕ ದೃಷ್ಟಿಯಿಂದ ಗುರುತಿಸಿದ ಹೆಮ್ಮೆ ಕನಕದಾಸರದ್ದಾಗುತ್ತದೆ. ಇಂತಹ ಆಪಾದನೆಗಳ ಹಿನ್ನೆಲೆಯಲ್ಲಿ, ಕನಕದಾಸರ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿಯ ಆಗುಹೋಗುಗಳ ಪರಿಚಯ ಮಾಡಿಕೊಳ್ಳೋಣ. ಇಲ್ಲಿ ನಾನು ಹೇಳಬೇಕಾದ ಮಾತೊಂದಿದೆ, ಸ್ವದೇಶಾಭಿಮಾನೀ ಇತಿಹಾಸಕಾರರ ಇಲ್ಲಿಯವರೆಗೂ ವಿಜಯನಗರ ಸಾಮ್ರಾಜ್ಯದ ಮೇಲೆ ಹೇರಿಬಂದಿರುವ ಹೊಗಳಿಕೆಗಳೆಲ್ಲವನ್ನೂ ಅಲ್ಲಗಳೆಯುವ ಉದ್ದೇಶ ನನ್ನದಲ್ಲ. ಅದೇ ವೇಳೆಗೆ, ನಾನು ನಿರೂಪಿಸಲಿರುವ ನಿರುತ್ಸಾಹೀ ಐತಿಹಾಸಿಕ ಚಿತ್ರಣವನ್ನು ಒರೆಗಲ್ಲಾಗಿರಿಸಿ ಅಂತಹ ಪ್ರಶಂಸಾತ್ಮಕ ಇತಿಹಾಸವನ್ನು[2] ತಿದ್ದಿ

---

1 ಈ ಲೇಖನದಲ್ಲಿ ಬಳಸಿರುವ ಕನಕದಾಸರ ಕೃತಿಗಳ ಉದ್ಧರಣಗಳೆಲ್ಲವನ್ನೂ ಸುಬೋಧ ಎಂ. ರಾಮರಾವ್ ಸಂಪಾದಿಸಿರುವ 'ಹರಿದಾಸ ಕೀರ್ತನ ತರಂಗಿಣಿ' ಭಾಗ೨ (ಸುಬೋಧ ಮುದ್ರಣಾಲಯ, ಬೆಂಗಳೂರು, ೧೯೩೭)ರಿಂದ ಆರಿಸಿಕೊಂಡಿರುವೆನು.

ನೋಡಿದೆವೇ ಆದರೆ ಕನಕದಾಸರ ಕಾಲದ ವಾಸ್ತವ ಇತಿಹಾಸವನ್ನು ನಾವು ತಿಳಿಯುವಂತಾದೀತು. ಇನ್ನು, ವಿಜಯನಗರ ಕಾಲದ ರಾಜಕೀಯ–ಸಾಮಾಜಿಕ–ಧಾರ್ಮಿಕ ಜೀವನವನ್ನು ಮತ್ತು ಅದರ ಮೇಲಿನ ಆರ್ಥಿಕ ಒತ್ತಡಗಳನ್ನು ಬೇರೆ ಬೇರೆಯಾಗಿ ಪ್ರತಿಪಾದಿಸುವುದು ಅಸಾಧ್ಯ. ಏಕೆಂದರೆ ದಿನನಿತ್ಯದ ಚಟುವಟಿಕೆಗಳಲ್ಲಿ ಈ ಎಲ್ಲ ಕ್ಷೇತ್ರಗಳ ಮೇಲೂ ಪ್ರಭಾವ ಬೀರುವಂತಹ ಹಿತಾಹಿತಗಳ, ಸತ್ಯಾಸತ್ಯಗಳ, ಧರ್ಮಾಧರ್ಮಗಳ, ಗುಣಾವಗುಣಗಳ, ವಮೌಲ್ಯಾಪವಮೌಲ್ಯಗಳ ನಿಷ್ಕರ್ಷೆಯಲ್ಲಿ ವಿಜಯನಗರದವರು ಉಭಯಸಂಕಟಕ್ಕೀಡಾಗಿದ್ದರು.

ಆ ವೇಳೆಗಾಗಲೆ ಉತ್ತರ ಭಾರತದ ಎಲ್ಲೆಡೆಗಳಲ್ಲೂ ವಿಜಯಪತಾಕೆ ಹಾರಿಸಿದ್ದ ಮಹಮ್ಮದೀಯರ ಹಸ್ತಕ್ಷೇಪದಿಂದ ಸನಾತನ ಧರ್ಮವನ್ನು ಉಳಿಸಿಕೊಳ್ಳುವ ಮುಖ್ಯ ಧ್ಯೇಯವೇ ಕ್ರಿ. ಶ. ೧೪ನೆಯ ಶತಮಾನದ ಮಧ್ಯಭಾಗದಲ್ಲಿ ವಿಜಯನಗರವು ಬೃಹತ್ಸಾಮ್ರಾಜ್ಯವಾಗಿ ಬೆಳೆಯಲು ಕಾರಣವಿತ್ತೆಂಬುದು ಸರ್ವವಿದಿತ. ಸಾಮ್ರಾಜ್ಯದ ಮೊದಲ ಎರಡು ಅರಸುಗಳೂ ಆ ಧ್ಯೇಯದಿಂದಲೆ ಪ್ರೇರಿತರಾಗಿ, ಬಾಹ್ಯಾಡಂಬರಕ್ಕೆ ಬಲಿಯಾಗದೆ, ತಮ್ಮನ್ನು 'ಮಹಾಮಂಡಲೇಶ್ವರ'ರೆಂದಷ್ಟೇ ಕರೆದುಕೊಂಡಂತಹ ನಿಗರ್ವಿಗಳಿದ್ದರು, ಆದರೆ ಅವರ ನಂತರದ ಅರಸುಗಳು, ಸಿಂಹಾಸನವು ಸುಭದ್ರವಾಯಿತೆಂಬ ಧೈರ್ಯದಲ್ಲಿ ತಮ್ಮನ್ನು 'ಮಹಾರಾಜಾಧಿರಾಜ' 'ರಾಜಪರಮೇಶ್ವರ' ಎಂದು ಮುಂತಾಗಿ ವೈಭವದಿಂದ ಬಣ್ಣಿಸಿಕೊಳ್ಳತೊಡಗಿದರು. ಸೈನ್ಯಬಲವು ಹೆಚ್ಚಿದಂತೆ ಸಾಮ್ರಾಜ್ಯ ಸ್ಥಾಪನೆಯ ಮೂಲಕಾರಣನ್ನು ಬದಿಗಿಟ್ಟು, ಮೇಲಿಂದ ಮೇಲೆ ಹಾನಿಕಾರಕ ಯುದ್ಧಗಳನ್ನು ಹೂಡಿದರು ; ದಿಗ್ವಿಜಯ ಪ್ರಯಾಣಗಳನ್ನು ಕೈಗೊಂಡರು : ರಾಜ್ಯ ವಿಸ್ತರಣೆಯ ಸಲವಾಗಿ ಸ್ವಧರ್ಮೀಯರ ಮೇಲೆ ಯುದ್ಧ ಮಾಡಿದರು; ನೆರೆಹೊರೆಯವರ ರಾಜ್ಯ, ಭಂಡಾರಗಳನ್ನು ಸ್ವಾಧೀನಪಡಿಸಿಕೊಂಡರು ; ಕೆಲವೊಮ್ಮೆ ತಮ್ಮ ಅನೈತಿಕವರ್ತನೆಯಿಂದ ಸಾಮ್ರಾಜ್ಯದ ಮೇಲೆ ಪರರ ಆಕ್ರಮಣವನ್ನು ಆಹ್ವಾನಿಸಿದ್ದರು. ಇಂತಹ ನಿಷ್ಪ್ರಯೋಜಕ ಸಾಹಸ ಪ್ರವೃತ್ತಿಯನ್ನು ಖಂಡಿಸುವ ಸಲುವಾಗಿಯೇ ಇರಬೇಕು ಕನಕದಾಸರು

'ಗಳಿಸದಿರು ಸೀಮೆಯನು ಗಳಿಸದಿರು ದ್ರವ್ಯವನು
ಗಳಿಸದಿರು ನೀ ದುರಿತ ರಾಸಿಗಳನು' (೧೦. ೧)–ಎಂದಿರುವುದು.

ಈ ರೀತಿ ಸಾಮ್ರಾಜ್ಯದ ಭಂಡಾರವು ತುಂಬಿದಂತೆ ವಿಜಯನಗರದ ಅರಸು ಮನೆತನಗಳ ದಾಯಾದಿಗಳೂ ಉನ್ನತಸ್ಥಾನಗಳಲ್ಲಿದ್ದ ಅಧಿಕಾರಿಗಳೂ,

ಸಾಮಂತರೂ ಲೋಭ, ಮೋಹ, ಅಧಿಕಾರಲಾಲಸೆಗೆ ತುತ್ತಾದುದು ಸಹಜವೇ ಆಗಿದೆ. ಸಂಗಮ, ಸಾಳುವ, ತುಳುವ ವಂಶಜರ ಆಳಿಕೆಯ ಅವಧಿಯಲ್ಲಿ ವಿಜಯನಗರದ ಅರಮನೆಯ ಒಳಗೂ ಹೊರಗೂ ಮೇಲಿಂದ ಮೇಲೆ ನಡೆದುಹೋದ ಒಳಸಂಚುಗಳ, ರಾಜಹತ್ಯೆ, ಶಿಶುಹತ್ಯೆಗಳ, ಸಿಂಹಾಸನದ ದುರಾಕ್ರಮಣಗಳ, ಸ್ವಜನಪಕ್ಷಪಾತದ ಘಟನೆಗಳು ವಿಜಯನಗರದ ಇತಿಹಾಸವನ್ನು ಬಲ್ಲವರಿಗೆ ಸುಪರಿಚಿತವಷ್ಟೆ. ಹೀಗೆ ಅಕ್ರಮವಾಗಿ ಸಿಂಹಾಸನಾರೂಢರಾದ ಚಕ್ರವರ್ತಿಗಳೂ, ಸಾಮಂತ ಅರಸುಗಳೂ ತಮ್ಮ ಸ್ಥಾನಮಾನಗಳನ್ನು ಉಳಿಸಿಕೊಳ್ಳುವ ಸಲುವಾಗಿ ಸಾಮ್ರಾಜ್ಯದ, ಜನತೆಯ ಹಿತವನ್ನು ಕಡೆಗಣಿಸಿ, ರಾಜಧರ್ಮವನ್ನು ಕೈಬಿಟ್ಟು ವರ್ತಿಸಿರುವ ನಿದರ್ಶನಗಳು ವಿಜಯನಗರದ ಇತಿಹಾಸದಲ್ಲಿ ಹಲವಿವೆ. ಇಂತಹ ಅನಿಷ್ಟ ಘಟನೆಗಳು ನಡೆದ ಕಾಲಕ್ಕೆ ಸೇರಿದ ಕನಕದಾಸರು

'ಧರ್ಮವಿಲ್ಲದ ಅರಸು ಮುರಿದ ಕಾಲಿನ ಗೊರಸು' (೧೪–೨)

ಎನ್ನುತ್ತಾರೆ.

ಸಂಚುಗಾರರ ಸಹಾಯದಿಂದ ಆಕ್ರಮಿಸಿಕೊಂಡ ಸಿಂಹಾಸನವನ್ನು ಉಳಿಸಿಕೊಳ್ಳಲು ಈ ಅರಸುಗಳು ಆ ಸಂಚುಗಾರರನ್ನು ತೃಪ್ತಿಪಡಿಸುವುದು ಅನಿವಾರ್ಯವಿತ್ತು. ಅಂತಹ ಸ್ವಾರ್ಥಪರ ಪರೋಪಜೀವಿಗಳ ದುರಾಡಳಿತದಿಂದಾಗಿ ಸಾಮ್ರಾಜ್ಯದ ಸಿಂಹಾಸನವಂತೂ ಸಂಚುಗಾರರ ಆಡುಂಬೊಲವೇ ಆಯಿತು. ಈ ಹಿನ್ನೆಲೆಯಲ್ಲಿ

'ಸೇರಿ ದ್ರೋಹವ ಮಾಳ್ಪ ಕ್ರೂರಕರ್ಮಿಗಳ ಮತ
ಪೂರೈಸಿ ಕೊಡುವರರಸುಗಳೆಲ್ಲರು' (೧೨.೭)

ಎಂಬ ಕನಕದಾಸರ ಆಪಾದನೆಯು ವಿಜಯನಗರ ಸಿಂಹಾಸನದ ಇತಿಹಾಸದ ಸಾರೋಕ್ತಿಯೇ ಹೌದು. ಹೀಗೆ ಅರಸು ಮನೆತನಗಳವರ ಅಸಹಾಯಕ ಪರಿಸ್ಥಿತಿಯನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಂಡ ಅನೇಕ ವ್ಯಕ್ತಿಗಳ ಗುಂಪುಗಳ ಪರಿಚಯವನ್ನು ವಿಜಯನಗರ ಇತಿಹಾಸವು ನಮಗೆ ಒದಗಿಸಿರುತ್ತದೆ. ದುರ್ಬಲರಾದ ಅರಸುಗಳ ಪರಾವಲಂಬನೆಯ ಅಸಹಾಯಕ ಸ್ಥಿತಿಯಿಂದ ಲಾಭ ಪಡೆಯುತ್ತಿದ್ದ ಈ ಸಂಚುಗಾರರನ್ನು ಕುರಿತು ಕನಕದಾಸರು

'ಆಳಿದೊಡೆಯಂಗೆರಡು ಬಗೆಯುವಾತಗೆ ಒಳ್ಳೆ
ಮಾಳಿಗೆಯ ಮನೆ ತುರುವು ಧನಧಾನ್ಯವು (೧೨. ೫)

ಎಂದಿರುವುದು ಅಂದಿನ ಉಚ್ಚ ಮಟ್ಟದ ಅಧಿಕಾರಿಗಳನೇಕರಿಗೆ

ಅನ್ವಯಿಸುತ್ತದೆಂಬುದನ್ನು ವಿಜಯನಗರ ಇತಿಹಾಸದ ಪುಟಗಳು ಸಾರಿಹೇಳುತ್ತವೆ.

ಸಾಮ್ರಾಜ್ಯವು ವಿಸ್ತಾರಗೊಂಡಂತೆ ಅಧಿಕಾರವರ್ಗವೂ ವಿಸ್ತಾರಗೊಂಡುದುದು ಸಹಜವೇ ಆಗಿದೆ. ಇದರಿಂದಾಗಿ, ಅನೇಕ ಸ್ವಾಮಿನಿಷ್ಠರಲ್ಲದ, ಸ್ವಾರ್ಥಪರ ವ್ಯಕ್ತಿಗಳು ಆಡಳಿತದ ಎಲ್ಲ ಸ್ತರಗಳಲ್ಲೂ, ರಾಜಧಾನಿಯಲ್ಲೂ ನಗರಗಳಲ್ಲೂ, ಹಳ್ಳಿಗಳಲ್ಲೂ ನೇಮಕಗೊಂಡು, ಅವರುಗಳು ಅನ್ಯಾಯವಾಗಿ ಹೇರುತ್ತಿದ್ದ ಕರತೆರಿಗೆಗಳ ಭಾರವನ್ನು ಹೊರಲಾರದೆ ಊರಿಗೆ ಊರೆ ಮನೆಗಳನ್ನು ತೊರೆದು ಬೇರೆಡೆಗಳಿಗೆ ವಲಸೆ ಹೊರಟಂತಹ ಹಲವು ಘಟನೆಗಳನ್ನು ಆ ಕಾಲದ ಶಾಸನಗಳು ಪ್ರಸ್ತಾಪಿಸುತ್ತವೆ. ಇಂತಹ ಅನರ್ಹ ಅಧಿಕಾರಿಗಳು ಸಮಾಜಕಂಟಕ ಶಕ್ತಿಗಳ ಪ್ರೋತ್ಸಾಹಕರಿದ್ದರೆಂಬುದನ್ನು

'ಕಳುವಿನ ಒಡವೆಯ ಒಡೆಯಗೆ ಪಾಲೀವ
ಕಳು ಭಂಟ ಕನ್ನವ ಕೊರೆಯುತ್ತಿರೆ
ಕಳವು ಮಾಡಿದನೆಂದು ಹಿಡಿದೆಳೆತಂದರೆ
ತಳವಾರನೇನು ಮಾಡುವನೊ ಕೇಳೆಲೊ ಹರಿ' (೪೨. ೨)

ಎಂಬ ಕನಕದಾಸರ ನುಡಿಯಿಂದ ನಾವು ತಿಳಿಯಬಹುದಾಗಿದೆ.

ಸನಾತನ ಧರ್ಮದ ಸಂರಕ್ಷಣೆಗೆಂದೇ ನಿರ್ಮಾಣಗೊಂಡ ವಿಜಯನಗರ ಸಾಮ್ರಾಜ್ಯದ ಆಳರಸನೂ ಅವರ ಅನುಯಾಯಿಗಳೂ ಹಿಂದೂ ಧರ್ಮದ ಮೂಲಭೂತಸ್ವರೂಪವಾದ ವರ್ಣ (ಜಾತಿ) ಧರ್ಮದ ಪೋಷಣೆಯ ಕಡೆಗೆ ವಿಶೇಷ ಗಮನ ಹರಿಸಿದ್ದರು, ವಿಜಯನಗರದ ಚಕ್ರವರ್ತಿಗಳನ್ನು ಆ ಕಾಲದ ಶಾಸನಗಳಲ್ಲಿ 'ಹಿಂದೂರಾಯ ಸುರತ್ರಾಣ'ರೆಂದೂ 'ಸಕಲವರ್ಣಧರ್ಮಾಶ್ರಮಂಗಳನೂ ಪ್ರತಿಪಾಲಿಸುತಿಹ'ವರೆಂದೂ, ಅವರ ಅಧಿಕಾರಿಗಳಲ್ಲಿ ಕೆಲವರನ್ನು 'ವೇದಮಾರ್ಗಪ್ರತಿಷ್ಠಾಚಾರ್ಯ', 'ಉಪನಿಷನ್ಮಾರ್ಗ ಪ್ರತಿಷ್ಠಾಗುರು', 'ಉಪನಿಷನ್ಮಾರ್ಗ ಪ್ರವರ್ತನಾಚಾರ್ಯ' ಎಂದೂ ಬಣ್ಣಿಸಲಾಗಿದೆ.

ಆದರೆ ವರ್ಣ (ಜಾತಿ) ಧರ್ಮವನ್ನು ಪೋಷಿಸುವಲ್ಲಿ ವಿಜಯನಗರದವರು ಅನುಸರಿಸಿದ ಕ್ರಮಗಳು ಹಿಂದಿನ ಕಾಲದ ಪದ್ಧತಿಗಳ ಅತ್ಯಧಿಕ ಪ್ರಮಾಣದ ಅನುಕರಣೆಗಳೇ ಆಗಿದ್ದ ಕಾರಣ, ಕೆಲವೊಂದು ಬೇರೂರಿದ ಸಾಮಾಜಿಕ ಅಸಮತೆಗಳು ಆ ಕಾಲದಲ್ಲಿ ಇನ್ನಷ್ಟು ಪ್ರಬಲವಾಗಿ ಬೆಳೆದವು. ಉದಾಹರಣೆಗೆ– ವಿಜಯನಗರ ಯುಗದಲ್ಲಿ ಬ್ರಾಹ್ಮಣರಿಗಾಗಿ ರಾಜಾಶ್ರಯದಲ್ಲಿ ಸೃಷ್ಟಿಗೊಂಡ ಅಗ್ರಹಾರಗಳೂ, ಬ್ರಹ್ಮಸ್ವಗಳೂ ಸಾವಿರಾರು. ಇವೆಲ್ಲವನ್ನೂ ದತ್ತಿಯಾಗಿ ನೀಡುವಲ್ಲಿ ವೇದವೇದಾಂಗಪಾರಂಗತರಾದ, ಷಟ್ಕರ್ಮನಿರತರಾದ, ಅಂದಿನ

ನಂಬಿಕೆಯಂತೆ ಸಮಾಜದ ಒಳಿತಿಗಾಗಿ ಯಜನ ಯಾಜನಾದಿ ಕ್ರಿಯೆಗಳನ್ನು ನೆರವೇರಿಸಿಕೊಂಡು ಬರುತ್ತಿದ್ದ ಬ್ರಾಹ್ಮಣರನ್ನೆ ಪ್ರತಿಗ್ರಹಿಗಳನ್ನಾಗಿ, ಆರಿಸುತ್ತಿದ್ದರು. ಆದರೆ ಅಂತಹ ದತ್ತಿಗಳನ್ನು 'ಆಚಂದ್ರಾರ್ಕಸ್ಥಾಯಿ' ಯಾಗಿ ಪುತ್ರ ಪೌತ್ರ ಪಾರಂಪರ್ಯ'ವಾಗಿ ನೀಡುವಾಗ, ಆ ಪ್ರತಿಗ್ರಹಿಗಳ ವಂಶಜರೂ ಅಷ್ಟೇ ಸುಶಿಕ್ಷಿತರಾಗಿ, ಅಂತಹದೇ ವೈದಿಕ ಕ್ರಿಯೆಗಳನ್ನು ಮುಂದುವರಿಸಿಕೊಂಡು ಹೋಗುವಂತವರಾಗಿ ಇರಬೇಕೆಂಬ ನಿಬಂಧನೆಯುನ್ನು ವಿಧಿಸುವ ಜಾಗರೂಕತೆಯನ್ನು ದಾನಿಗಳಾರೂ ವಹಿಸಲಿಲ್ಲ. ಪರಿಣಾಮವಾಗಿ, ಮೂಲ ದಾನಗಳನ್ನು ಪಡೆದವರ ವಂಶಜರಿಗೆ ಬೇಷರತ್ ಭೂಸ್ವತ್ತಿನ ಸೌಲಭ್ಯವು ದೊರೆತು, ಅವರುಗಳು ಹೆಚ್ಚಿನ ಸಂಪಾದನೆಗಾಗಿ ಇತರ ಜಾತಿಯವರ ಕಾರ್ಯಕ್ಷೇತ್ರಗಳಲ್ಲೂ ಕೈಹಾಕುವುದು ಸುಲಭ ಸಾಧ್ಯವಾಯಿತು, ಹಿಂದೆಂದಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ವಿಜಯನಗರ ಯುಗದ ಬ್ರಾಹ್ಮಣರು ಸೈನಿಕ , ವರ್ತಕ ವೃತ್ತಿಗಳಲ್ಲಿ ಉನ್ನತ ಸ್ಥಾನಗಳನ್ನು ಗಳಿಸಿಕೊಂಡಿದ್ದರೆಂಬುದು ಶಾಸನಗಳಿಂದ ತಿಳಿದು ಬರುವ ಸಂಗತಿ. ಇದರಿಂದಾಗಿ ಸಾಮಾಜಿಕ ಅಸಮತೆಗಳು ಇನ್ನಷ್ಟು ತೀವ್ರಗೊಂಡು, ಅಸಂತುಷ್ಟರೂ ವಂಚಿತರೂ ಇಂತಹ ಅನ್ವಯ ಭೋಜ್ಯವಾದ ಅಗ್ರಹಾರಗಳ, ಬ್ರಹ್ಮಸ್ವಗಳ ಭೂಮಿಯನ್ನು ಸೆಳೆದು ತಮ್ಮದಾಗಿಸಿಕೊಳ್ಳುವ ಪ್ರವೃತ್ತಿಯು ಹೆಚ್ಚಿತು. ಇಂತಹ ಪ್ರತಿಕ್ರಿಯೆಯಿಂದ ಬೇಸತ್ತ ವಿಜಯನಗರ ಕಾಲದ ದಾನಿಗಳು ಹೇಳ ಹೇಸುವ ಶಾಪವಚನಗಳನ್ನು ದಾನ–ಶಾಸನಗಳ ಕೊನೆಯಲ್ಲಿ ಬರೆಸಿದರು ; ನೋಡಿ ಹೇಸುವ ಚಿತ್ರಗಳನ್ನು ಕೆತ್ತಿಸಿ ದತ್ತಿಗಳನ್ನು ಅಪಹರಿಸುವವರನ್ನು ಶಪಿಸಿದರು.

'ವೇದವಿಪ್ರರು ತಮ್ಮ ವೃತ್ತಿಸ್ವಾಸ್ಥ್ಯವ ಕಳೆದು
ಆಧಾರವಿಲ್ಲದೆ ತಿರಿದು ತಿಂಬುವರು' (೧೨.೪)

ಎನ್ನುವ ಕನಕದಾಸರೂ ಕೂಡ

'ಭೂಸುರಸ್ವದ ಹ್ರಾಸ ಮಾಡಿದ ಫಲ
ಏಸೇಸು ಜನುಮಕ್ಕೆ ಬಿಟ್ಟೀತೆ' (೪೮–೧)

ಎಂದು ತಮ್ಮದೇ ಶಾಪವನ್ನು ಸೇರಿಸಿರುವರು. ಅವರ ಈ ಮೇಲಿನ ಎರಡು ನುಡಿಗಳೂ ಕನಕದಾಸರೂ ಕೂಡ ತಮ್ಮ ಸಹಜೀವಿಗಳಂತೆಯೆ ಆ ಕಾಲದಲ್ಲಿ ಪ್ರಬಲವಾಗಿದ್ದ ಸಂದಿಗ್ಧತೆಗೂ, ನ್ಯಾಯಾನ್ಯಾಯಗಳನ್ನು ನಿಷ್ಕರ್ಷಿಸಲಾರದ ಉಭಯ ಸಂಕಟಕ್ಕೂ ತುಸು ಮಟ್ಟಿಗಾದರೂ ತುತ್ತಾಗಿದ್ದರೆಂಬುದನ್ನು ಸೂಚಿಸುತ್ತವೆ ಎಂಬುದು ನನ್ನ ವೈಯಕ್ತಿಕ ಅನಿಸಿಕೆ.

'ವೇದ ಶಾಸ್ತ್ರ ಪಂಚಾಂಗ ಓದಿಕೊಂಡು ಪರರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ, ಗೇಣುಬಟ್ಟೆಗಾಗಿ' (೨೭. ೧)

ಎಂದು ಅವರು ಇನ್ನೊಂದು ಕೃತಿಯಲ್ಲಿ ಹೇಳಿರುವ ಐತಿಹಾಸಿಕ ಯಾಥಾರ್ಥ್ಯವು ನನ್ನ ಅನಿಸಿಕೆಗೆ ಪುಷ್ಟಿನೀಡುವಂತಹದು.

ವರ್ಣ (ಜಾತಿ) ಧರ್ಮಕ್ಕೆ ದೊರೆತ ಅತಿ ಪ್ರೋತ್ಸಾಹ, ವಾಣಿಜ್ಯ ಕ್ಷೇತ್ರದಲ್ಲಿಯ ಅದೃಷ್ಟಪೂರ್ವ ಪ್ರಮಾಣದ ಬೆಳವಣಿಗೆ, ಹಣಕಾಸಿನ ಚಲಾವಣೆಯ ಹೆಚ್ಚಳ, ಅತಿಯಾಗಿ ಬೆಳೆದುನಿಂತ ಅಧಿಕಾರಿ–ಆಡಳಿತವರ್ಗ, ಬಿಡುವಿಲ್ಲದ ಹೋರಾಟಗಳು, ಬೃಹತ್ಸೈನ್ಯ–ಇವೆಲ್ಲವೂ ತಂದೊಡ್ಡಿದ ಆರ್ಥಿಕ ಒತ್ತಡಗಳಿಂದ ತತ್ತರಿಸಿ ವಿಜಯನಗರ ಯುಗದ ಸಮಾಜವು ಹಿಂದೆಂದಿಗಿಂತಲೂ ಹೆಚ್ಚಿನ ಸಂಖ್ಯೆಯ ಜಾತಿ, ಉಪಜಾತಿಗಳ ಹುಟ್ಟಿನಿಂದ ಭಿನ್ನಭಿನ್ನವಾಗಿ ಹೋಗಿದ್ದನ್ನು ಶಾಸನಗಳು ನಿರೂಪಿಸುತ್ತವೆ. ಅಧಿಕಾರಿ–ಆಡಳಿತ ಸೂಚಕ ಅಂಕಿತಗಳೂ, ವೃತ್ತಿ–ವರ್ತಕ ಸೂಚಕ ಅಂಕಿತಗಳೂ ಜಾತಿವಾಚಕ ಶಬ್ದಗಳಾಗಿ, ಉಪನಾಮಗಳಾಗಿ ಅಂತಿಮ ರೂಪತಾಳಿದ್ದು ಆ ಕಾಲದಲ್ಲೆ. ತಂತಮ್ಮ ಸ್ವಾರ್ಥಗಳನ್ನು ಸಾಧಿಸಿಕೊಳ್ಳುವ ಸಲುವಾಗಿ ಅಂದಿನ ಜನರೆಲ್ಲರೂ 'ಕುಲದ ನೆಲೆಯೇನೆಂದು' (೩೬.ಪ) ತಿಳಿದವರಲ್ಲವಾದರೂ 'ಕುಲಕುಲ ಕುಲವೆಂದು' ಹೊಡೆದಾಡುತ್ತಿದ್ದರೆಂಬುದು ಶಾಸನಗಳಿಂದ ನೇರವಾಗಿ ತಿಳಿದುಬಾರದಿದ್ದರೂ ಕನಕದಾಸರಿಂದ ನಮಗೆ ತಿಳಿದುಬಂದಿದೆ.

ಹಿಂದೂ ಧರ್ಮವನ್ನು ಸಂರಕ್ಷಿಸುವಲ್ಲಿ ಸಾಮ್ರಾಜ್ಯದ ಎಲ್ಲ ಪ್ರಜೆಗಳ ಸಹಕಾರವೂ ಅಗತ್ಯವಿದ್ದ ಕಾರಣ, ವಿಜಯನಗರದ ಅರಸುಗಳೂ ಅಧಿಕಾರಿಗಳೂ ಪ್ರಜೆಗಳ ಆಸಕ್ತಿಯನ್ನು ತಮ್ಮ ಧರ್ಮದ ಕಡೆಗೆ ಪರಿಣಾಮಕಾರಿಯಾಗಿ ಸೆಳೆಯುವ ಸಲುವಾಗಿ ಹಿಂದೂ ಧರ್ಮಕ್ಕೆ ಬಾಹ್ಯಾಡಂಬರದ ಹೊದಿಕೆಯನ್ನು ಹೊದಿಸುವಲ್ಲಿ ನಿರತರಿದ್ದರು. ಆ ಕಾಲದಲ್ಲಿ ನಿರ್ಮಾಣಗೊಂಡ ಅಸಂಖ್ಯಾತ ಬೃಹದ್ದೇವಾಲಯಗಳೂ, ಸಾವಿರ ಕಂಬದ ಮಂಟಪಗಳೂ, ಬಾನೆತ್ತರದ ರಾಜಗೋಪುರಗಳೂ ಈ ಬಾಹ್ಯಾಡಂಬರದ ದ್ಯೋತಕಗಳೇ ಆಗಿದ್ದವು. ಅದ್ದೂರಿಯ ರಾಜವೈಭವಗಳನ್ನೂ, ರಾಜಧಾನಿಯಲ್ಲೂ ಸಾಮ್ರಾಜ್ಯದ ಎಲ್ಲ ದೇವಾಲಯಗಳಲ್ಲೂ ನಡೆಯುತ್ತಿದ್ದ ಅದ್ದೂರಿಯ ಹಬ್ಬೋತ್ಸವಗಳನ್ನೂ ಆಡಳಿತವರ್ಗದವರು ಸೃಷ್ಟಿಸಿದ್ದೂ ಅದೇ ಉದ್ದೇಶದಿಂದಲೆ. ವಿಜಯನಗರ ಸಾಮ್ರಾಜ್ಯದ ಈ ವಿಸ್ಮಯಕಾರೀ ಬಾಹ್ಯಾಡಂಬರದ ನೈಜ ಚಿತ್ರಣವು ನಮಗೆ ವಿದೇಶೀ ಯಾತ್ರಿಕರ ಬರಹಗಳು, ಶಾಸನಗಳ ಅಧ್ಯಯನದಿಂದ ತಿಳಿದುಬಂದಿದೆ.

ಈ ಲೇಖನದಲ್ಲಿ ನಾನು ವಿಜಯನಗರ ಸಾಮ್ರಾಜ್ಯದ ಹಿರಿಮೆಯನ್ನು ಕುರಿತ ಇತರ ಇತಿಹಾಸಕಾರರ ಹೊಗಳಿಕೆಯ ಮಾತುಗಳನ್ನ ಕಡೆಗಣಿಸಿ, ಆ ಸಾಮ್ರಾಜ್ಯದ ಅಳಿವಿಗೆ ಕಾರಣವಾದ ದೋಷದೌರ್ಬಲ್ಯಗಳನ್ನೆ ಎತ್ತಿತೋರಿಸಿರುವುದಕ್ಕೆ ಮುಖ್ಯವಾದೊಂದು ಕಾರಣವಿದೆ. ಕನಕದಾಸರ ಸಮಕಾಲೀನ ರಾಜಕೀಯ–ಸಾಮಾಜಿಕ–ಧಾರ್ಮಿಕ ಚಿತ್ರಣಕ್ಕೆ ಐತಿಹಾಸಿಕ ದಾಖಲೆಗಳ ಗೂಢಾರ್ಥವು ಪುಷ್ಟಿ ನೀಡುವುದನ್ನು ನಿರೂಪಿಸುವುದೇ ನನ್ನ ಉದ್ದೇಶವಿತ್ತು. ಅಲ್ಲದೆ. ಅಂದಿನ ಮೆರುಗಿನ ಬಾಹ್ಯಾಡಂಬರಗಳು ಕೇವಲ ತತ್ಕಾಲೋಚಿತವಾದುದಾಗಿದ್ದರೆ, ನಾನು ಪ್ರತಿಪಾದಿಸಿರುವ ಐತಿಹಾಸಿಕ ದೋಷಲೋಪಗಳ ಸೂತ್ರವು ಮಾಯದೆ ನಮ್ಮ ಕಾಲಕ್ಕೂ ಇಳಿದು ಬಂದಿದ್ದು, ಕಲಿಯ ಮಹಿಮೆಯ ಬಗ್ಗೆ ಕನಕದಾಸರ ಹೇಳಿಕೆಗಳನ್ನು ದೃಢೀಕರಿಸಿದೆ; ನಮ್ಮ ಇಂದಿನ ರಾಜಕೀಯ–ಸಾಮಾಜಿಕ–ಧಾರ್ಮಿಕ ದೌರ್ಬಲ್ಯಗಳು ಕನಕದಾಸರ ಕಾಲದಷ್ಟಾದರೂ ಹಳೆಯವು ಎಂಬುದನ್ನು ತೋರಿಸಿಕೊಟ್ಟಿದೆ.

## ಆಧಾರ ಗ್ರಂಥಗಳು :


೧. Robert sewell : A *Forgotten Empire (London, 1900)*

೨. ಕೆ.ವಿ. ರಮೇಶ್ : ಕರ್ನಾಟಕ ಶಾಸನ ಸಮೀಕ್ಷೆ (ಬೆಂಗಳೂರು, 1971)

೩. 'ಎಪಿಗ್ರಾಫಿಯಾ ಇಂಡಿಕಾ'ದ ಸಂಪುಟಗಳು

೪. 'ಎಪಿಗ್ರಾಫಿಯಾ ಕರ್ನಾಟಿಕಾ'ದ ಸಂಪುಟಗಳು

೫. ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷೆನ್ಸ್, ಸಂಪುಟ ೭ ಮತ್ತು ೯, ಭಾಗ ೨

# ಕೊಡೇಕಲ್ಲ ಬಸವಣ್ಣನ ಸಂಪ್ರದಾಯ ಮತ್ತು ಕನಕದಾಸ

**ಡಾ. ಬಸವಲಿಂಗ ಸೊಪ್ಪಿಮಠ**

ಕಾಲಜ್ಞಾನದೊಡನೆ ಥಟ್ಟನೆ ನೆನಪಾಗುವ ಹೆಸರು ಕೊಡೇಕಲ್ಲ ಬಸವಣ್ಣನದು. ಕಲಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ಒಂದು ಗ್ರಾಮ ಕೊಡೇಕಲ್ಲು. ಇಲ್ಲಿ ಕೊಡೇಕಲ್ಲ ಬಸವಣ್ಣನ ದೇವಸ್ಥಾನವಲ್ಲದೆ ಆತನ ಸಂಪ್ರದಾಯದವರ ಮಠ ಹಾಗೂ ದೇವಾಲಯಗಳಿವೆ. ಈ ಮಠ ಹಾಗೂ ದೇವಾಲಯಗಳಲ್ಲಿ ಕೊಡೇಕಲ್ಲ ಬಸವಣ್ಣ ಹಾಗೂ ಆತನ ಪುತ್ರಸಂತತಿ/ ಶಿಷ್ಯಸಂತತಿಯವರ ಸಾಹಿತ್ಯರಚನೆಗಳನ್ನು ಹಸ್ತಪ್ರತಿ ರೂಪದಲ್ಲಿ ಪೆಟ್ಟಿಗೆಯಲ್ಲಿಟ್ಟು ನಿತ್ಯವೂ ಪೂಜಿಸಿಕೊಂಡು ಬರಲಾಗುತ್ತಿದೆ. ಹೀಗಾಗಿ ಅನ್ಯರ ಕೈಗೆಟುಕದಂತೆ ಕೇವಲ ಪೂಜಾವಸ್ತುವಾಗಿ ಉಳಿದಿದ್ದ ಈ ಒಟ್ಟು ಸಾಹಿತ್ಯವನ್ನು ಆಧರಿಸಿ 'ಕೊಡೇಕಲ್ಲ ಬಸವಣ್ಣ : ಒಂದು ಅಧ್ಯಯನ' ಎಂಬ ಶೀರ್ಷಿಕೆಯಡಿಯಲ್ಲಿ ಡಾ. ಎಂ. ಎಂ. ಕಲಬುರ್ಗಿಯವರ ಮಾರ್ಗದರ್ಶನದಲ್ಲಿ ಕಳೆದ ವರ್ಷ ನಾನು ಸಂಶೋಧನಾಧ್ಯಯನವನ್ನು ಪೂರೈಸಿದೆ. ತತ್‌ಫಲವಾಗಿ ಈವರೆಗೆ ದಂತಕತೆಯಾಗಿದ್ದ ಕೊಡೇಕಲ್ಲ ಬಸವಣ್ಣ ಈಗ ಮಧ್ಯಕಾಲೀನ ಕರ್ನಾಟಕದ ಐತಿಹಾಸಿಕ ಪುರುಷನಾಗಿದ್ದಾನೆ. ಹಿಂದು-ಮುಸ್ಲಿಂ ಸಂಘರ್ಷಕಾಲದಲ್ಲಿ ಅವೆರಡೂ ಮತಗಳ ಸಮನ್ವಯವನ್ನು ಬೋಧಿಸುತ್ತಲೇ, ಕೈಮೀರಿ ನಿಂತ ಮುಸಲ್ಮಾನರ ಉಪಟಳವನ್ನು ರಾಜಕೀಯ ಹೋರಾಟದ ಮೂಲಕ ನಿಯಂತ್ರಿಸಲೆತ್ನಿಸಿದ 'ವೀರಬಸವಂತ'ನಾಗಿದ್ದಾನೆ. 'ಅಮರ ಕಲ್ಯಾಣ' ಎಂಬ ಶರಣ ಸಂಘಟನೆಯನ್ನು ಕೊಡೇಕಲ್ ಬೆಟ್ಟಪ್ರದೇಶದಲ್ಲಿ ಹುಟ್ಟು ಹಾಕುತ್ತಲೇ, 'ಅಮರಗನ್ನಡ' ಎಂಬ ವಿಶಿಷ್ಟ ಲಿಪಿ (ಹನ್ನೊಂದು ರೀತಿಯ)ಯಲ್ಲಿ ತನ್ನ ಪ್ರತಿಭಾನ್ವಿತ ಮಕ್ಕಳೊಂದಿಗೆ ತಾನೂ ಕಾಲಜ್ಞಾನ ಮಾತ್ರವಲ್ಲದೆ ಅನೇಕ ಅನುಭಾವಗೀತೆಗಳನ್ನು, ಲಘುಕಾವ್ಯಗಳನ್ನು, ವಚನಗಳನ್ನು ಬರೆದಿದ್ದಾನೆ ; ಬಸವಾದಿ ಶಿವಶರಣರ ವಚನಗಳನ್ನು ಸಂಪಾದಿಸಿದ್ದಾನೆ. ನಾಥಪಂಥದ ಯೋಗತಳಹದಿಯ ಮೇಲೆ ತನ್ನ ಆರೂಢವೆಂಬ ಅದ್ವೈತ ಮತವನ್ನು ಕಟ್ಟಿ

ಬೆಳೆಸಿದ್ದಾನೆ. ಹೀಗೆ ರಾಜಕೀಯ, ಧರ್ಮ, ಸಾಹಿತ್ಯ ಜಗತ್ತಿನಲ್ಲಿ ತನ್ನದೇ ವಿಶಿಷ್ಟ ಹೆಜ್ಜೆಗಳನ್ನು ಮೂಡಿಸಿದ ಕೊಡೇಕಲ್ಲ ಬಸವಣ್ಣನ ಸಂಪ್ರದಾಯದಲ್ಲಿ ದಾಸಶ್ರೇಷ್ಠನಾದ ಕನಕದಾಸನ ಹೆಸರು ಕೇಳಿಬರುತ್ತಿರುವುದು ಕುತೂಹಲಕಾರಿಯಾಗಿದೆ. ಕನಕದಾಸನ ಊರಾದ ಕಾಗಿನೆಲೆಯಲ್ಲಿ ಕೊಡೇಕಲ್ಲ ಬಸವಣ್ಣನ ಪುತ್ರ ಸಂಗಪ್ಪಯ್ಯ ಅರ್ಥಾತ್ ಸಂಗಮೇಶ್ವರನ ಸಮಾಧಿ ಗದ್ದುಗೆ ಇರುವುದು ಇನ್ನೂ ಕುತೂಹಲಕಾರಿಯಾಗಿದೆ.[1]

ಕನಕದಾಸನಿಗೆ ಸಂಬಂಧಿಸಿ ಕೊಡೇಕಲ್ಲು ಮತ್ತಿತರ ಶಾಖಾಮಠಗಳಲ್ಲಿ ಪ್ರಬಲವಾಗಿ ಪ್ರಚಲಿತವಿರುವ ಜನವದಂತಿ ಹೀಗಿದೆ :

ಕನಕದಾಸನಿಗೆ 'ಮುಂಡಿಗೆ'ಯೊಂದರ ಅರ್ಥ ಬಿಡಿಸುವ ವ್ಯಕ್ತಿಯ ಅಗತ್ಯ ಬಿತ್ತು. ಕೊಡೇಕಲ್ಲ ಬಸವಣ್ಣನ ಹಿರಿಯ ಮಗ ರಾಚಪ್ಪಯ್ಯ ಇದನ್ನು ಬಿಡಿಸಬಲ್ಲರೆಂದು ಕಿವಿಗೆ ಬಿದ್ದು ಕನಕದಾಸ ಕೊಡೇಕಲ್ಲಿಗೆ ಬಂದ. ಕೊಡೇಕಲ್ ಊರ ಹೊರವಲಯದಲ್ಲಿ ಒಬ್ಬ ದನಕರು–ಕುರಿಗಳನ್ನು ಮೇಯಿಸುತ್ತ ನಿಂತಿದ್ದ. ರಾಚಪ್ಪಯ್ಯನ ವಿಚಾರವಾಗಿ ಆತನನ್ನು ಕೇಳಿದ ಕನಕದಾಸ. ಅದಕ್ಕೆ ಆ ಕುರುಬ 'ನಾವು ಕುರುಬರು ನಮ್ಮ ದೇವರೆ ಬೀರಯ್ಯ' ಎಂದು ಪದಹಾಡುತ್ತ ತನ್ನಲ್ಲಿಯೇ ಮಗ್ನನಾದ. ಕನಕದಾಸ ಊರೊಳಗೆ ಬಂದ. ಯಾರೋ ಆತನಿಗೆ ರಾಚಪ್ಪಯ್ಯನ ಮನೆ ತೋರಿಸಿದರು. ಮನೆಯಲ್ಲಿ ರಾಚಪ್ಪಯ್ಯ ಇರಲಿಲ್ಲ ; ಆತನ ತಂದೆ ಕೊಡೇಕಲ್ಲ ಬಸವಣ್ಣ ಹಾಗೂ ಇಬ್ಬರು ತಮ್ಮಂದಿರು (ಸಂಗಪ್ಪಯ್ಯ, ಗುಹೇಶ್ವರ) ಇದ್ದರು. ಅವರು ಕನಕದಾಸನನ್ನು ಒಳಕರೆದು ಆದರಿಸಿ ರಾಚಪ್ಪಯ್ಯ ಈಗ ಬರುತ್ತಾನೆ' ಎಂದರು. ಸಾಯಂಕಾಲದ ವೇಳೆಗೆ ರಾಚಪ್ಪಯ್ಯ ಹೊರಗಿನಿಂದ ಬಂದ. ಕನಕದಾಸನಿಗೆ ಆಶ್ಚರ್ಯ ಕಾದಿತ್ತು. ಬಂದಾತ ಬೇರಾರೂ ಆಗಿರದೆ ಊರ ಹೊರಗೆ ತಾನು ಕಂಡು ಮಾತನಾಡಿಸಿದ 'ಕುರುಬ'ನಾಗಿದ್ದ. ಮರುಳನಂತೆ ತೋರಿದ ಆಧ್ಯಾತ್ಮಿಕ ಕುರುಬನಾಗಿದ್ದ.

ಕನಕದಾಸನಿಗೆ ಬಿಡಿಸಲಾಗದ ಮುಂಡಿಗೆಯ ವಿಷಯ ತಿಳಿದು, ಅದನ್ನು ಬಿಡಿಸಲು ತಾನು ಹೋಗುವದಾಗಿ ರಾಚಪ್ಪಯ್ಯ ಸಿದ್ಧನಾದಾಗ ಅವನ ತಮ್ಮ ಸಂಗಪ್ಪಯ್ಯ ತಾನೇ ಹೋಗುವುದಾಗಿ ನುಡಿದ. ಹಾಗೆ ಅಂದು ಕನಕದಾಸನೊಂದಿಗೆ ಊರು ತೊರೆದ ಸಂಗಪ್ಪಯ್ಯ ಪುನಃ ಕೊಡೇಕಲ್ಲಿಗೆ ಮರಳಲಿಲ್ಲ ; ಕಾಗಿನಲೆಯಲ್ಲಿಯೇ ಸಮಾಧಿಸ್ಥನಾದ.

೧. ಈ ಲೇಖನ ರೂಪುಗೊಳ್ಳುವಲ್ಲಿ ನನಗೆ ಮಾರ್ಗದರ್ಶನ ಮಾಡಿದ ನನ್ನ ಗುರುಗಳಾದ ಡಾ. ಎಂ. ಎಂ. ಕಲಬುರ್ಗಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

–ಇಷ್ಟು ಕೊಡೇಕಲ್ ಸ್ಥಳಪುರಾಣ. ಇದರ ಸತ್ಯಾಸತ್ಯತೆಯನ್ನು ಪರಿಶೀಲಿಸಬೇಕು. ಕನಕದಾಸನಿಗೆ ಎದುರಾದ 'ಮುಂಡಿಗೆಯ' ಸಮಸ್ಯೆ ಯಾವುದು ? ಈ ಆಹ್ವಾನ ನೀಡಿದರಾರು ? ತಿಳಿಯದು. ಆದರೆ ಮುಂಡಿಗೆಯ ಅರ್ಥ ಬಿಡಿಸುವ ಸಾಮರ್ಥ್ಯ ರಾಚಪ್ಪಯ್ಯನಲ್ಲಿದೆ ಎಂದು ಕನಕದಾಸ ಕೊಡೇಕಲ್ಲಿಗೆ ಬಂದದ್ದು ಮಹತ್ವದ್ದಾಗಿದೆ. ರಾಚಪ್ಪಯ್ಯನಲ್ಲಿ ಆ ಸಾಮರ್ಥ್ಯ ಸಹಜವಾಗಿಯೇ ಇತ್ತು ಎನ್ನಲು ಅವನೇ ಬರೆದ ಹನ್ನೆರಡು ಕಾವ್ಯಗಳಲ್ಲಿ ಉಪಲಬ್ಧವಿರುವ ಎಂಟು ಕಾವ್ಯಗಳು ಜೀವಂತ ಸಾಕ್ಷಿಯಾಗಿವೆ. ಕನಕದಾಸನ ಕಣ್ಣಿಗೆ ಕುರುಬನಾಗಿ ಕಂಡ ರಾಚಪ್ಪಯ್ಯ ಹಾಡಿದ 'ನಾವು ಕುರುಬರು' ಪದ್ಯ ಈಗ ಕನಕದಾಸನ ಹೆಸರಿನಲ್ಲಿ ಪ್ರಚಲಿತವಿದ್ದರೂ ಅದರ ನಿಜವಾದ ಕರ್ತೃ ರಾಚಪ್ಪಯನೇ ಆಗಿದ್ದಾನೆ ಎನ್ನಲು ಆಧಾರಗಳಿವೆ.

ಕನಕದಾಸ ಕೊಡೇಕಲ್ಲಿಗೆ ರಾಚಪ್ಪಯ್ಯನನ್ನು ಕೇಳಿಕೊಂಡು ಬಂದಿದ್ದರೂ ಆತನೊಂದಿಗೆ ಊರು ಬಿಟ್ಟಾತ ರಾಚಪ್ಪಯ್ಯನಲ್ಲ, ಆತನ ತಮ್ಮ ಸಂಗಪ್ಪಯ್ಯ. ಕೊಡೇಕಲ್ ಸಾಹಿತ್ಯ–ಸಂಪ್ರದಾಯದಲ್ಲಿ ಸಾಕ್ಷಾತ್ ಚನ್ನಬಸವಣ್ಣನೆಂದು ಕೀರ್ತಿತನಾದ ಈತ ಜ್ಞಾನಿಯೂ ಹೌದು, ತಂದೆಯಂತೆ ಯುದ್ಧವೀರನೂ ಹೌದು.[1] ಈತ ಕನಕದಾಸನೊಂದಿಗೆ ಊರು ಬಿಟ್ಟಿದ್ದಕ್ಕೆ ಸಾಕ್ಷಿಯಾಗಿ ಈಗಲೂ ಕಾಗಿನೆಲೆಯಲ್ಲಿ ಈತನ ಹೆಸರಿನ ದೇವಾಲಯವಿರುವುದು (ಕೊಡೇಕಲ್ ಬಸವಣ್ಣನಂತೆ ಮುಸ್ಲಿಂ ವಿನ್ಯಾಸವುಳ್ಳ ದೇವಾಲಯ). ಈತನ ಉತ್ಸವಕ್ಕೆ ಕಾಗಿನೆಲೆಗೆ ಸು. ೩೦೦ ಕಿ. ಮೀ. ದೂರದ ಕೊಡೇಕಲ್ ಭಕ್ತರು ಬರುವುದು ಇದೆ. ಈ ಹಿನ್ನೆಲೆಯಲ್ಲಿ ಕೊಡೇಕಲ್ ಜನವದಂತಿ ಅನ್ವಯ ಕನಕದಾಸ ಕೊಡೇಕಲ್ಲಿಗೆ ಬಂದದ್ದು, ಸಂಗಪ್ಪಯ್ಯನೊಂದಿಗೆ ಆತ ಕಾಗಿನೆಲೆಗೆ ಹಿಂದಿರುಗಿದ್ದು ಐತಿಹಾಸಿಕ ಘಟನೆ ಎನಿಸುತ್ತದೆ ಇದಕ್ಕೆ ಪೂರಕವಾಗಿ ಕೊಡೇಕಲ್ ಬಸವಣ್ಣ–ಕನಕದಾಸ–ಸಂಗಪ್ಪಯ್ಯರ ಕಾಲವೂ ಹೊಂದಿಕೊಳ್ಳುತ್ತಿರುವುದು ಗಮನಿಸುವಂತಿದೆ. ಕನಕದಾಸನ ಕಾಲ ಸುನಿಶ್ಚಿತವಿದೆ. ವಿಜಯನಗರದ ಅರಸು ಕೃಷ್ಣದೇವರಾಯನ ಕಾಲದಲ್ಲಿ ಈತನಿದ್ದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿಲ್ಲ. ಕೊಡೇಕಲ್ಲ ಬಸವಣ್ಣನ ಕಾಲವಾದರೂ ಇದೇ ಆಗಿದೆ ಎನ್ನಲು ಈತನಿಂದ ನಾಲ್ಕು

---

೧. 'ಅಪ್ರಮಾಣ ಕೂಡಲ ಸಂಗಮದೇವ' ಅಂಕಿತದ ವಚನಕಾರ ಬಾಲಸಂಗಯ್ಯ. ಈತನೇ ಎನ್ನಲು ನನ್ನ ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧ (ಕ. ವಿ.ವಿ. ಗೆ ಅರ್ಪಿತ) 'ಕೊಡೇಕಲ್ಲ ಬಸವಣ್ಣ : ಒಂದು ಅಧ್ಯಯನ'ವನ್ನು ನೋಡಬಹುದು.

ತಲೆಮಾರು ಈಚೆಗೆ ಬದುಕಿದ್ದ, ಈತನ ವಂಶಸ್ಥನೇ ಆದ ವೀರಸಂಗಯ್ಯ ಬರೆದ 'ನಂದಿಯಾಗಮ ಲೀಲೆ' ಎಂಬ ಕಾವ್ಯವೇ (ಕ್ರಿ. ಶ. ೧೫೪೯) ಪ್ರಮುಖ ಆಧಾರವಾಗಿದೆ. ಕಲ್ಯಾಣ ಬಸವಣ್ಣನೊಂದಿಗೆ ಕೊಡೇಕಲ್ ಬಸವಣ್ಣ ವಿಜಾಪುರದ ದೊರೆ ಯೂಸುಫ್ ಅಲಿ ಆದಿಲ್‌ಶಹನನ್ನು ಕೊಡೇಕಲ್ ಬೇಡರ ಹನುಮನಾಯಕನೊಂದಿಗೆ ಎದುರಿಸಿ ಗೆದ್ದ ವಿವರಗಳಿವೆ. ಯೂಸುಫ್ ಅಲಿ ಆದಿಲಶಹ (ಕ್ರಿ. ಶ. ೧೫೧೦) ವಿಜಾಪುರವನ್ನು ಆಳುತ್ತಿರುವಾಗ ವಿಜಯನಗರದಲ್ಲಿ ಕೃಷ್ಣದೇವರಾಯ ಅರಸನಾಗಿದ್ದ, ಈ ಕೃಷ್ಣದೇವರಾಯನ ಕಾಲದಲ್ಲಿಯೇ ಕನಕದಾಸ ಇದ್ದುದ್ದು. ಈ ಹಿನ್ನೆಲೆಯಲ್ಲಿ ಕನಕದಾಸನ ಕಾಲದಲ್ಲಿಯೇ ಕೊಡೇಕಲ್ ಬಸವಣ್ಣ ಇದ್ದು ಪ್ರಾಯಶಃ ವಯಸ್ಸಿನಲ್ಲಿ ಕನಕದಾಸನಿಗಿಂತ ಹಿರಿಯನಿದ್ದಿರಬೇಕು ; ಕನಕದಾಸ–ಸಂಗಪ್ಪಯ್ಯ–ರಾಚಪ್ಪಯ್ಯ ಹೆಚ್ಚೂ ಕಡಿಮೆ ಸಮವಯಸ್ಕರಿರಬೇಕು. ವಿಜಾಪುರದ ಆದಿಲ್‌ಶಾಹನ ವಿರುದ್ಧ ಕೊಡೇಕಲ್ಲ ಬಸವಣ್ಣ ಬೆಂಬಲಿಸಿದ ಬೇಡರ ಹನುಮನಾಯಕ ಸುರಪುರದ ಬೇಡರ ವಂಶಜನಾಗಿದ್ದು, ಕೊಡೇಕಲ್ ಬೆಟ್ಟಪ್ರದೇಶಗಳಲ್ಲಿ ಈತನ ಕುರುಹುಗಳಿವೆ

ಕೊಡೇಕಲ್ ಬಸವಣ್ಣನ ಮತಸಂಪ್ರದಾಯ ಆರೂಢ ಪಂಥದ ಅದ್ವೈತವೆಂದು ಹಿಂದೆ ಕಾಣಿಸಲಾಗಿದೆ. ಇವರ ಈ ಅದ್ವೈತಕ್ಕೂ ಕನಕದಾಸನ ದ್ವೈತಮಾರ್ಗಕ್ಕೂ ಯಾವ ಸಂಬಂಧವೂ ಇಲ್ಲ. ಅಂದರೆ ಕೊಡೇಕಲ್ಲ ಬಸವಣ್ಣನ ಸಂಪ್ರದಾಯದಲ್ಲಿ ಕನಕದಾಸ ಕಾಣಿಸಿಕೊಳ್ಳಲು ಮತಧರ್ಮದ ಸಮಾನ ಆಕರ್ಷಣೆ ಕಾರಣವಾಗಿಲ್ಲ, ಹಾಗಾದರೆ ಧರ್ಮ–ಅಧ್ಯಾತ್ಮಗಳಿಗೆ ಹೊರತಾದ ಯಾವ ಸಂಬಂಧ ಕೊಡೇಕಲ್–ಕಾಗಿನೆಲೆಯ ಈ ವ್ಯಕ್ತಿಗಳನ್ನು ಬೆಸೆಯಿತು ? ಎಂದು ಕೇಳುವಂತಾಗುತ್ತದೆ. ನನಗೆ ತೋರುವಂತೆ, ಕನಕದಾಸ ದಾಸಕೂಟದತ್ತ ಆಕರ್ಷಿತನಾಗುವ ಪೂರ್ವದಲ್ಲಿಯೇ ಕೊಡೇಕಲ್ ಸಂಬಂಧವನ್ನು ಉಳ್ಳವನಾಗಿದ್ದ ಎನಿಸುತ್ತದೆ. ದಾಸಕೂಟದತ್ತ ಒಲಿಯುವ ಮುಂಚಿನ ಕನಕದಾಸನ ಜೀವನವೆಂದರೆ ಎಲ್ಲರೂ ಬಲ್ಲಂತೆ ದೊರೆತನದ ರಾಜಕೀಯ ಜೀವನ. ಬಹುಪಾಲು ವಿದ್ವಾಂಸರು ಅಭಿಪ್ರಾಯಪಡುವಂತೆ ಈತ ಜಾತಿಯಿಂದ ಕುರುಬನಾಗಿರಲಿಲ್ಲ. ಬೇಡನಾಗಿದ್ದ. ಕೊಡೇಕಲ್ ಬಸವಣ್ಣನಿಂದ ರಾಜಕೀಯ ಬೆಂಬಲ ಪಡೆದ ವ್ಯಕ್ತಿ ಕೊಡೇಕಲ್ ಹನುಮನಾಯಕ ಬೇಡ ಜನಾಂಗದವನೇ ಆಗಿರುವುದು. ಈ ಬೇಡರ ರಾಜಕೀಯ ಸಂಘಟನೆಯ ಮೂಲಕ ಮುಸ್ಲಿಂ ಪ್ರಭುತ್ವವನ್ನು ಧಿಕ್ಕರಿಸಹೊರಟ ಕೊಡೇಕಲ್ ಬಸವಾದಿಗಳ ರಾಜಕೀಯ ಚಟುವಟಿಕೆಗಳು ಅವರವರ ಸಾಹಿತ್ಯದಲ್ಲಿ ಸ್ಫುಟವಾಗಿ ವರ್ಣಿಗೊಂಡಿರುವುದು–ಇದನ್ನು ನೆನೆದರೆ ಕನಕದಾಸ ಕೊಡೇಕಲ್ಲಿಗೆ ಬಂದುದು,

ಸಂಗಪ್ಪಯ್ಯ ಕಾಗಿನೆಲೆಗೆ ಕನಕದಾಸನ ಹಿಂದೆ ಹೋದುದು ರಾಜಕೀಯ ಉದ್ದೇಶದಿಂದಲೇ ಇರುವಂತಿದೆ. ಕೊಡೇಕಲ್ ಬೇಡರ ಪಾಳಯಕ್ಕೆ ಬಾಡದ ಬೇಡರ ಪಾಳೆಯಗಾರ ಕನಕದಾಸನ ಸೈನ್ಯಶಕ್ತಿಯನ್ನು ತಂದುಕೊಳ್ಳಲು ಇರಬಹುದು. ಈ ಸಂದರ್ಭದಲ್ಲಿ, ಊರಿಗೆ ಮರಳದೆ ಕಾಗಿನೆಲೆಯಲ್ಲಿ ದೇಹವಿಟ್ಟ ಸಂಗಪ್ಪಯ್ಯನ ಅಂತ್ಯ ವಿಚಾರಾರ್ಹವಾಗಿದೆ–ಕೊಡೇಕಲ್–ಕಾಗಿನೆಲೆ ಸ್ಥಳಪುರಾಣಗಳ ಹೇಳಿಕೆಯ ಪ್ರಕಾರ, ಸಂಗಪ್ಪಯ್ಯನ ಕುದುರೆ ಕಾಗಿನೆಲೆಯಲ್ಲಿ 'ಘೋಷಾದವರ' ಮನೆಯೊಳಗೆ ನುಗ್ಗಿತಂತೆ ; ತಕ್ಷಣ ಜನವೆಲ್ಲ ಒಳಹೋಗಿ ನೋಡಲಾಗಿ ಸಂಗಪ್ಪಯ್ಯ 'ಮಾಯ'ವಾಗಿದ್ದನಂತೆ. ಇಲ್ಲಿ 'ಘೋಷಾದವರ ಮನೆ' ಮುಸಲ್ಮಾನರ ನಿವಾಸವನ್ನು ಹೇಳುತ್ತಿದ್ದು, ಸಂಗಪ್ಪಯ್ಯ ಇಲ್ಲಿ 'ಮಾಯ'ವಾದದ್ದು ಆತ ಮುಸಲ್ಮಾನರ ಕೈಗೆ ಸಿಕ್ಕು ಮಡಿದದ್ದನ್ನು ಹೇಳುತ್ತಿರುವಂತೆ ಕಾಣುತ್ತದೆ. ಈ ಸಂಗಪ್ಪಯ್ಯನನ್ನು ಒಳಗೊಂಡು ಇಡೀ ಕೊಡೆಕಲ್ ಬಸವಾದಿಗಳ ವೀರಸಂಘಟನೆ ತನ್ನ ಕೊನೆಕೊನೆಯ ದಿನಗಳಲ್ಲಿ ಸಂಪೂರ್ಣ ಮುಸ್ಲಿಂ ರಾಜಶಕ್ತಿಯ ವಿರೋಧಿಯಾಗಿ ಹೋರಾಡಿದುದನ್ನು ಕೊಡೇಕಲ್ ಸಾಹಿತ್ಯ ಅದರಲ್ಲೂ ಕಾಲಜ್ಞಾನ ಸಾಹಿತ್ಯ ಏರುಧ್ವನಿಯಲ್ಲಿ ಸಾರುವುದನ್ನು ಲಕ್ಷಿಸಿದರೆ, ಒಂದು ಹಂತದಲ್ಲಿ ಮುಸಲ್ಮಾನರ ಕೈ ಮೇಲಾಗಿ ಸಂಗಪ್ಪಯ್ಯ ಕಾಗಿನೆಲೆಯಲ್ಲಿ ಕೊನೆಯಾಗಬೇಕಾದ ದುರಂತ ಸಂಭವಿಸಿದ್ದು ಚಾರಿತ್ರಿಕವೆಂದೇ ತೋರುತ್ತದೆ. ಕೊಡೇಕಲ್ ಸಾಹಿತ್ಯದಲ್ಲಿ ವರ್ಣಿತವಾದ ಆತನ ವೀರೋಚಿತ ವರ್ತನೆಗಳು ಈ ದುರ್ಘಟನೆಗೆ ಪುಷ್ಟಿಯೊದಗಿಸುತ್ತವೆ. ಈ ದುರಂತ ಕೊಡೇಕಲ್ ಬಸವಣ್ಣ, ಹನುಮನಾಯಕರನ್ನು ಆವರಿಸಿದ್ದಕ್ಕೆ ಆಧಾರಗಳಿವೆ. ಹೀಗಿರುವಾಗ ಇವರಿಗೆ ಹತ್ತಿರದವನಾಗಿದ್ದ ಕನಕ (ದಾಸ) ನಾಯಕ, ತನ್ನೊಂದಿಗೆ ಬಂದು ತನ್ನ ಪ್ರದೇಶ (ಕಾಗಿನೆಲೆ)ದಲ್ಲಿ ದೇಹವಿಟ್ಟ ಸಂಗಪ್ಪಯ್ಯನನ್ನು ಕಳೆದುಕೊಂಡ ಕನಕನಾಯಕ ರಾಜಕೀಯ ಮೌನ ಧರಿಸಿದ್ದನೆಂದು ಹೇಳುವುದು ಹೇಗೆ ಸಾಧ್ಯ ? ಕನಕದಾಸನೇ ರಚಿಸಿದ 'ಸಾಲದೆ ನಿನ್ನದೊಂದು ದಿವ್ಯನಾಮ' ಎಂಬ ಹಾಡಿನಲ್ಲಿ ಬರುವ ಒಂದು ನುಡಿ ಹೀಗಿದೆ :

"ರಣದೊಳಗೆ ದೇಹವ ಖಂಡ ತುಂಡವ ಮಾಡಿ
ರಣವನುತ್ತರಿಸಿ ಮರಣವ ತೋರಿದೆ ॥
ಪ್ರಣವಗೋಚರನಾಗಿ ಲೀಲೆಯಿಂದಲಿ ಬಂದು
ಹೆಣಕೆ ಪ್ರಾಣವನು ತಂದಿತ್ತ ಮಹಾತುಮನೆ ॥"

ಕನಕದಾಸ ಯುದ್ಧವೊಂದರಲ್ಲಿ ಮಾರಣಾಂತಿಕ ಗಾಯವಡೆದು ಬಿದ್ದ

ಸನ್ನಿವೇಶವೊಂದು ಇಲ್ಲಿ ಉಕ್ತವಾಗಿದೆ. ಕನಕದಾಸನ ರಾಜಕೀಯ ಜೀವನದ ಅಂತ್ಯವೂ, ಅವನ ಹರಿದಾಸ ಬದುಕಿನ ಆರಂಭವೂ ಆದ ಈ ಸಂಕ್ರಮಣ ಸಂದರ್ಭದಲ್ಲಿಯೇ ಸಂಗಪ್ಪಯ್ಯ ಮಡಿದ ಹಾಗಿದೆ. ಇಲ್ಲಿಂದ ಮುಂದೆ ಕನಕದಾಸನದು ಲೋಕೋತ್ತರ ಲಕ್ಷ್ಯದ ಅನುಭಾವಿಯ ಬದುಕು ಈ ಬದುಕಿನಲ್ಲಿ ರಚನೆಗೊಂಡ ಅವನ ಹಾಡುಗಳಲಿ ಕೊಡೇಕಲ್ ಬಸವಣ್ಣ–ರಾಚಪ್ಪಯ್ಯ–ಸಂಗಪ್ಪಯ್ಯ ಅನುಕ್ತರಾಗಿಯೇ ಉಳಿದದ್ದು ಒಂದು ಕೊರತೆಯೇ ಆಗಿದೆ.

'ನಾವು ಕುರುಬರು ನಮ್ಮ ದೇವರೆ ಬೀರಯ್ಯ' ಎಂದು ಆರಂಭವಾಗುವ ಹಾಡು ಕನಕದಾಸನ ಹೆಸರಿನಲ್ಲಿ ಈಗ ದೊರೆಯುತ್ತಿದ್ದರೂ ಮೂಲತಃ ಅದರ ಕರ್ತೃ ಕೊಡೇಕಲ್ ಬಸವಣ್ಣನ ಹಿರಿಯ ಮಗ ರಾಚಪ್ಪಯ್ಯ ಎಂದು ಹಿಂದೆಯೇ ಕಾಣಿಸಲಾಗಿದೆ. ಕನಕದಾಸ ಕೊಡೇಕಲ್ಲಿಗೆ ಬಂದಾಗ ರಾಚಪ್ಪಯ್ಯನಿಂದ ರಚನೆಗೊಂಡು ಹೇಗೋ ಈತನ ಕೈಸೇರಿ ಕಾಗಿನೆಲೆಗೆ ಬಂದ ಈ ಹಾಡು ('ನಾವು ಕುರುಬರು') ಮುಂದೆ ಕನಕದಾಸನ ಭಕ್ತರ ಕೈಸೇರಿ ಅಷ್ಟಿಷ್ಟು ಮೈಬದಲಿಸಿಕೊಂಡು 'ಕಾಗಿನೆಲೆಯಾದಿ ಕೇಶವ'ನ ಮುದ್ರಿಕೆ ಹೊತ್ತಿದೆ ; ಕನಕದಾಸ 'ಕುರುಬ' ಜಾತಿಯವನು ಎಂಬ ಅವಾಸ್ತವ ನಂಬಿಕೆಗೆ ಪರೋಕ್ಷವಾಗಿ ಕಾರಣವಾಗಿದೆ. ಈ ಹಾಡಿನ ಕರ್ತೃ ರಾಚಪ್ಪಯ್ಯನೇ ಎನ್ನಲು ಕೆಳಗಿನ ಕಾರಣಗಳನ್ನು ಕೊಡಬಹುದು :

೧) ಈ ಹಾಡಿನ ಬೇರೆ ಬೇರೆ ಪಾಠಗಳು ಕನಕದಾಸನ ಹೆಸರಿನಲ್ಲಿ ಪ್ರಚಲಿತದಲ್ಲಿವೆ.[1]

೨) ರಾಚಪ್ಪಯ್ಯ ತನ್ನ ಮಿಕ್ಕ ಹಾಡುಗಳಿಗೆ ಬಳಸಿರುವ 'ರಾಚ' ಅಂಕಿತ ರಾಚಪ್ಪಯ್ಯನ ಹಾಡಿನಾಂತ್ಯದಲ್ಲಿದ್ದು ಸುಸಂಗತವಾಗಿದೆ.

೩) ಆದಾನ–ಪ್ರದಾನಗಳನ್ನೇನೂ ಅನ್ಯಸಾಹಿತ್ಯದಿಂದ ಮಾಡಿಕೊಂಡಿರದ ಕೊಡೇಕಲ್ ಸಂರಕ್ಷಿತ ಹಸ್ತಪ್ರತಿ ಸಾಹಿತ್ಯ ಕಟ್ಟಿನಲ್ಲಿ ರಾಚಪ್ಪಯ್ಯನ ಉಳಿದ ಸಾಹಿತ್ಯ ರಚನೆಗಳೊಂದಿಗೇ ಈ ಹಾಡಾದರೂ ದೊರೆಯುತ್ತಿದ್ದು ಇದನ್ನು ಪ್ರಾಚೀನದಿಂದಲೂ ಹಾಡಿಕೊಂಡು ಬಂದಿರುವ ಕೊಡೇಕಲ್ ಬಸವಣ್ಣನ

---

೧. ನೋಡಿ : 'ಕನಕದಾಸರ ಗೀತೆಗಳು, 'ಸಂ : ವಸಂತ ಕುಷ್ಟಗಿ, ಪು. ೪೫ ; 'ಜನಪ್ರಿಯ ಕನಕ ಸಂಪುಟ', ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರಕಾರ, ಬೆಂಗಳೂರು, ಪು ೩೦

ಸಂಪ್ರದಾಯದ ಪಾರಂಪರಿಕ ಭಕ್ತವರ್ಗ ಈಗಲೂ ಕೊಡೇಕಲ್‌ನಲ್ಲಿ ಇದೆ.

೪) ಕನಕದಾಸ ಕೊಡೇಕಲ್ಲಿಗೆ ಬಂದು ರಾಚಪ್ಪಯ್ಯನನ್ನು ಕಂಡದ್ದು ಐತಿಹಾಸಿಕ ಘಟನೆ ಎನ್ನಲು, ಈ ಸಂದರ್ಭದಲ್ಲಿ ರಾಚಪ್ಪಯ್ಯನಿಂದ ರಚಿತವಾದ ಈ ಹಾಡು ಕನಕದಾಸನ ಕೈ ಸೇರಿರಬೇಕು ಎಂದು ಭಾವಿಸಲು ಪ್ರಬಲ ಆಧಾರವಾಗಿ ರಾಚಪ್ಪಯ್ಯನ ತಮ್ಮ ಸಂಗಪ್ಪಯ್ಯನ ಸಮಾಧಿ ಈಗಲ್ಲೂ ಕಾಗಿನೆಲೆಯಲ್ಲಿ ಇದೆ.

೫) ಬಂಧದ ಸೃಷ್ಟಿಯಿಂದ ಕನಕದಾಸನ ಹೆಸರಿನಲ್ಲಿರುವ ಈ ಹಾಡು ಶಿಥಿಲವಾಗಿದ್ದರೆ, ರಾಚಪ್ಪಯ್ಯನಲ್ಲಿ ಸುಸಂಬದ್ಧವಾಗಿದೆ.

ಇವೇ ಮೊದಲಾದ ವಿಚಾರಗಳ ಸಮರ್ಥನೆಗೆ, ಈ ಹಾಡಿನ ಮೊದಲನೆಯ ಹಾಗೂ ಕೊನೆಯ ನುಡಿಗಳನ್ನು ರಾಚಪ್ಪಯ್ಯ ಮತ್ತು ಕನಕದಾಸರಲ್ಲಿ ಈಗ ನೋಡಬಹುದು :

"ಮರವೆ ನರಕುರಿ ಹಿಂಡು ತನುವಿಂಧ್ಯದೊಳು ಮೇಯು
ತಿರಲಾಂತಕನೆಂಬ ಯಮದೂತ ತೋಳ
ಮರವ್ಯಾಧಿ ವಿಘ್ನ ಮರಮುರಿದು ತಿನುತಿರಲತ್ತ
ಕುರಿ ಸತ್ತುದರಿವುಂಟು ಹರನು ಪ್ರಭುಗೌಡನಿಗೆ"

–ರಾಚಪ್ಪಯ್ಯ

"ಅರುಹೆಂಬ ನರಗುರಿಯು ತೆರೆಯೆಂಬ ಜಾವಲಿಯು
ಮರವೆಯಲಿ ಯಮನೆಂಬ ತೋಳ ತುಡಕಿ
ಅರುಹಿನಾ ಮರೆಯಲ್ಲಿ ಕುರಿಯ ಮುರಿವುದು ಕಂಡು
ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ"[1]

–ಕನಕದಾಸ

'ನಾವು ಕುರುಬರು ನಮ್ಮ ದೇವರು ಬೀರಯ್ಯ' ಎಂದು ಆರಂಭವಾಗುವ ಹಾಡಿನ ಮೊದಲನೆಯ ನುಡಿಯ ಈ ಎರಡು ಪಾಠಗಳಲಿ ರಾಚಪ್ಪಯ್ಯನ ರಚನೆಯಲ್ಲಿ ಅರ್ಥ ಗಾಂಭೀರ್ಯ, ಧ್ವನಿಪೂರ್ಣತೆ, ಉಚಿತ ಪದಬಳಕೆ ಇದ್ದರೆ, ಕನಕದಾಸನಲ್ಲಿ ಅವು ಇಲ್ಲದಿರುವುದು ತಂತಾನೆ ದೃಗ್ಗೋಚರವಾಗುವಂತಿದೆ.

೧. ಕನಕದಾಸರ ಗೀತೆಗಳು, ಸಂ ; ವಸಂತ ಕುಷ್ಟಗಿ, ಪು. ೪೫

'ತನುವಿಂಧ್ಯ'ದಲ್ಲಿ ಮೇಯುತ್ತಿರುವ ನರಕುರಿಗಳನ್ನು 'ಮರವೆ ನರಕುರಿ ಹಿಂಡು' ಎಂದು ರಾಚಪ್ಪಯ್ಯ ವರ್ಣಿಸಿರುವುದು ಸರಿಯಾಗಿದೆಯೇ ವಿನಾ 'ಅರುಹೆಂಬ ನರಗುರಿಯು' ಎಂದು ಕನಕದಾಸನಲ್ಲಿರುವುದು ಸರಿಯಾಗಿಲ್ಲ ಮಾತ್ರವಲ್ಲ ಅರ್ಥವಿರೋಧವೂ ಅಸಂಬದ್ಧವೂ ಆಗಿವೆ. 'ಕುರಿ' ನರನ ಪ್ರತೀಕವಾಗಿರುವ ಹಾಗೆ ಅವನ ಮರವೆಯ ಸಂಕೇತವೂ ಆಗಿದೆ. ಇದರ ನಾಶದರಿವು ('ಕುರಿಸತ್ತುದರಿವು) 'ಪ್ರಭುಗೌಡ'ನಿಗೆ (ರಾಚಪ್ಪಯ್ಯನ ತಂದೆ) ಕೊಡೇಕಲ್ ಬಸವನ 'ಅಮರಕಲ್ಯಾಣ' ಸಂಘಟನೆಯ ಅಲ್ಲಮಪ್ರಭುವೆಂದು ಕೊಡೇಕಲ್ ಸಾಹಿತ್ಯದಲ್ಲಿ ಕೀರ್ತಿತನಾಗಿರುವ ಪರಮಾನಂದ ಪ್ರಭು[1] ಇರುವುದು ಸರಿಯಾಗಿಯೇ ಇದೆ.

"ಪಿತನು ಪ್ರಭುಗೌಡ ಸಂಗತಿ ಮಾತೆ ಬಸವಗೊಂಡ  
ಸುತರು ಅವರ ಗಣಂಗಳೆಂಬ ಬಳಗ ಬಹಳ  
ರತಿಸಲೆಮ್ಮವರು ಸಾಕಿದರು ನಾ ಒಡಹುಟ್ಟಿ  
ಅತಿಶಯದಿ ಹೆಸರಿಟ್ಟರೆನಗೆ ರಾಚನೆಂದು"

– ರಾಚಪ್ಪಯ್ಯ

"ಮೂರು ಲೋಕಕೆ ಗೌಡ ಸಂಗತಿ ಇಹರು ಮಂತ್ರಿ  
ಮೂರು ಲೋಕದ ಜನರು ಭಜಿಸುತಿಹರು  
ಮಾರಪಿತ ಕಾಗಿನೆಲೆಯಾದಿ ಕೇಶವನಂಘ್ರಿ–  
ವಾರಿಜನ ನೆರೆನಂಬದವನೆ ಕುರುಬ"

– ಕನಕದಾಸ

ಇವು 'ನಾವು ಕುರುಬರು' ಹಾಡಿನ ಅಂತ್ಯನುಡಿಯ ಎರಡು ಪಾಠಗಳು. ಇಲ್ಲಿ ರಾಚಪ್ಪಯ್ಯ ತನ್ನ ತಂದೆಗೆ ಪರಮಗುರುವಿನ ಸ್ಥಾನದಲ್ಲಿರುವ ಪ್ರಭು ಅರ್ಥಾತ್ ಪರಮಾನಂದ ಪ್ರಭುವನ್ನು, 'ಪಿತ'ನಾದ 'ಪ್ರಭುಗೌಡ'ನೆಂದು ಕರೆಯುತ್ತ, ತಂದೆ ಕೊಡೇಕಲ್ ಬಸವಣ್ಣನನ್ನು 'ಮಾತೆ' 'ಬಸವಗೊಂಡ' ಎಂದಿದ್ದಾನೆ. ಹೀಗೆ ಪ್ರಭು–ಬಸವರ ಕಲ್ಯಾಣಕಾಲದ ಸಖ್ಯ. ಅಮರಕಲ್ಯಾಣದ ಪರಮಾನಂದ ಪ್ರಭು–ಕೊಡೇಕಲ್ ಬಸವರ ಗುರು–ಶಿಷ್ಯ ಸಂಬಂಧವಾಗಿ ಸಾಂಕೇತಿಕಗೊಳ್ಳುತ್ತಲೇ ಸತಿ–ಪತಿ ಭಾವದ (ಗುರು 'ಪತಿ' ಶಿಷ್ಯ 'ಸತಿ') ಧ್ವನಿಪೂರ್ಣತೆಯುನ್ನೂ ಗಳಿಸಿಕೊಂಡಿದೆ. ಈ ಈರ್ವರ 'ಸುತ'ರಾಗಿ

---

೧. ಉತ್ತರ ಕರ್ನಾಟಕದಲ್ಲಿ ಪರಮಾನಂದ ಗುಡ್ಡ (ದೇವದುರ್ಗ ತಾಲೂಕು,) ಹೆಬ್ಬಾಳ (ಸುರಪುರ ತಾಲ್ಲೂಕು), ಚಾಂದಕವಟೆ (ಸಿಂದಗಿ ತಾಲ್ಲೂಕು) ಮೊದಲಾದ ಕಡೆಗಳಲ್ಲಿ ಈ ಪರಮಾನಂದ ಪ್ರಭುವಿನ ದೇವಾಲಯಗಳಿವೆ.

ಅಮರಕಲ್ಯಾಣದ 'ಅಮರ ಗಣಂಗಳು' ಇದ್ದಾರೆ. ಇವರ ಶರಣಸಂತಾನದಲ್ಲಿ ಬೆಳೆದು ಬಂದ 'ರಾಚ'ನಾದ ತಾನಿದ್ದಾನೆ. ರಾಚಪ್ಪಯ್ಯ ಈ ರೀತಿ ಚಾರಿತ್ರಿಕವೂ ಆಧ್ಯಾತ್ಮಿಕ ಧ್ವನಿಪೂರ್ಣವೂ ಆದ ಈ ಹಿನ್ನೆಲೆ ಕನಕದಾಸನಲ್ಲಿ ಸಂಪೂರ್ಣ ಮಾಯವಾಗಿರುವುದು ಈ ಹಾಡು ಮೂಲತಃ ರಾಚಪ್ಪಯ್ಯನದು ಎಂಬುದನ್ನು ದೃಢಪಡಿಸುತ್ತದೆ.

ಹೀಗೆ ಕೊಡೇಕಲ್ ಸಾಹಿತ್ಯ ಹಾಗೂ ಸಂಪ್ರದಾಯಗಳಲ್ಲಿ ಕನಕದಾಸನ ಪೂರ್ವೀ ಬದುಕಿನ ಸಂದರ್ಭಗಳು ಸಮಾವೇಶವಾಗಿದ್ದು ಈ ನಿಟ್ಟಿನಲ್ಲಿ ಇನ್ನೂ ಸಂಶೋಧನೆಯ ಅಗತ್ಯವನ್ನು ಸಾರುತ್ತಲೇ ಇವೆ.

# ಕನಕಸೂಕ್ತಿ ಸಂಚಯ

**ಸಿ. ಕೆ. ಪರಶುರಾಮಯ್ಯ**

ಯಾರಾದರು ಒಂದು ಸಂದರ್ಭಕ್ಕೆ ಹೊಂದುವಂತಹ ಮಾತನಾಡಿದಾಗ ನಾವು ಸಾಮಾನ್ಯವಾಗಿ 'ಬಂಗಾರದಂತಹ ಮಾತು' 'ಚಿನ್ನದಂತಹ ನುಡಿ'– ಎನ್ನುತ್ತೇವೆ. ಏಕೆಂದರೆ, ಆ ಮಾತು ಆ ಸಂದರ್ಭದ ಆಶಯವನ್ನು ಅಷ್ಟೊಂದು ಚೆನ್ನಾಗಿ ಮನದಟ್ಟು ಮಾಡಿರುತ್ತದೆ. ಹತ್ತಾರು ವಾಕ್ಯಗಳಲ್ಲಿ ಹೇಳಬೇಕಾದ ವಿಷಯ ಒಂದೆರಡು ನುಡಿಗಳಲ್ಲಿ ಅಡಕವಾಗಿರುತ್ತದೆ. ಆದ್ದರಿಂದಲೇ ಅಂತಹ ಮಾತುಗಳನ್ನು ನಾವು "ನುಡಿಮುತ್ತು" ಎಂದೂ ಕರೆಯುತ್ತೇವೆ. ವಿಶೇಷ ಹೊಳಪಿನಿಂದ ಶೋಭಿಸುವ ಈ ಮಾತುಗಳು ಸಾರ್ವಕಾಲಿಕವಾದ ಸತ್ಯವನ್ನು, ಜೀವನಮೌಲ್ಯವನ್ನು ಸಂದೇಶಿಸುತ್ತವೆ, ಉಪದೇಶಿಸುತ್ತವೆ.

ಇಂತಹ ಬನಿಯಾದ, ಇನಿದಾದ ನುಡಿಗಳು ಎಲ್ಲ ಸಾಧಕರ, ಕವಿಗಳ, ಅನುಭಾವಿಗಳ ಕೃತಿಗಳಲ್ಲೂ ಹಾಸುಹೊಕ್ಕಾಗಿವೆ. ಇವು ಅವರ ಹೃದಯದಿಂದ ಹೂ ಅರಳಿದಂತೆ, ಬೆಳುದಿಂಗಳು ಚೆಲ್ಲಿದಂತೆ, ಮಳೆ ಸುರಿದಂತೆ ಹೊಮ್ಮಿಬರುತ್ತವೆ. ಭಾವ–ಭಾಷೆಗಳ ಸುಂದರ ಹೊಂದಾಣಿಕೆಯಿಂದ ಹೊರಬರುವ ಈ ನುಡಿಮುತ್ತುಗಳು ಮಾನವನ ಬದುಕಿಗೆ ಸ್ಪೈರಣೆ–ಸಮಾಧಾನಗಳನ್ನು ನೀಡುತ್ತವೆ.

ಕನ್ನಡನಾಡಿನ ಸಂತ ಶ್ರೇಷ್ಠರಲ್ಲೊಬ್ಬರಾದ ಕನಕದಾಸರ ಕೃತಿಗಳಲ್ಲಿ ಇಂತಹ ನುಡಿಗಳು 'ಕನಕಸೂಕ್ತಿ'ಯಾಗಿ ಪ್ರಸಿದ್ಧವಾಗಿವೆ. ಈ ಸೂಕ್ತಿಗಳು ಸಹಜಮೌಲ್ಯ ಮತ್ತು ಪ್ರಭೆಯಿಂದ ತುಂಬಿ 'ಕನಕ' ಶಬ್ದದ ಅರ್ಥವನ್ನು ಸಾರ್ಥಕಗೊಳಿಸಿವೆ. ಕರ್ನಾಟಕದ ಹರಿದಾಸ ಪರಂಪರೆಯಲ್ಲಿ ವ್ಯಾಸ–ಪುರಂದರದಾಸರನ್ನೊಳಗೊಂಡು ಹಲವಾರು ಹರಿದಾಸರು ಕೀರ್ತನೆಗಳನ್ನು ರಚಿಸಿ ಹೆಸರಾಗಿದ್ದಾರೆ. ಕನಕದಾಸರೂ ಕೀರ್ತನೆಗಳನ್ನು ರಚಿಸಿದ್ದಾರೆ. ಆದರೆ, "ಕನಕದಾಸರು ದಾಸರಲ್ಲಿ ಕವಿಗಳು ; ಅದೇ ಅವರ ವೈಶಿಷ್ಟ್ಯ. ಕನಕದಾಸರನ್ನು ಬಿಟ್ಟರೆ ದಾಸ ಪರಂಪರೆಯಲ್ಲಿ ಉಳಿದೆಲ್ಲರೂ ಪ್ರಧಾನವಾಗಿ ಕೀರ್ತನಕಾರರು : ಕವಿಗಳಲ್ಲ. ಎಂದರೆ, ಅವರ

ಕೀರ್ತನೆಗಳಲ್ಲಿ ಕಾವ್ಯತ್ವವಿಲ್ಲವೆಂದು ಅರ್ಥವಲ್ಲ. ಆದರೆ ಅವರಲ್ಲಿ ಕನಕದಾಸರಲ್ಲಿಯಂತೆ ಸ್ಥಾಯಿಯಾದ ಕಾವ್ಯ ಪ್ರಜ್ಞೆ ಇಲ್ಲ ಎಂದು ಮಾತ್ರ ಅರ್ಥ. ಕನಕದಾಸರಲ್ಲಿಯಾದರೋ ಒಂದು ವೇಳೆ ಅವರು ದಾಸಕೂಟಕ್ಕೆ ಸೇರಿ ಕೀರ್ತನೆಗಳನ್ನು ರಚಿಸಬೇಕಾದಂತಹ ಪ್ರಸಂಗಕ್ಕೆ, ಪರಂಪರೆಗೆ ಒಳಗಾಗದೆ ಹೋಗಿದ್ದರೂ ಅವರಲ್ಲಿನ ಕವಿಪ್ರಜ್ಞೆ ಕಾವ್ಯರೂಪದಲ್ಲಿ, ತನ್ನ ಅಭಿವ್ಯಕ್ತಿಯನ್ನು ಕಂಡುಕೊಳ್ಳದೆ ಇರುತ್ತಿರಲಿಲ್ಲ. ಹೀಗಾಗಿ ಕನಕದಾಸರ ವ್ಯಕ್ತಿತ್ವ ದಾಸ ಪರಂಪರೆಯ ಭಕ್ತಿಪ್ರಜ್ಞೆಗೆ ಒಳಗಾದರೂ. ಅವರ ಭಕ್ತಿಭಾವ ಕಾವ್ಯಪ್ರಜ್ಞೆಗೆ ಮೂಲ ಭಿತ್ತಿಯಾಗಿ ಪರಿಣಮಿಸಿತು. ಆದಕಾರಣ ಅವರು ಕೇವಲ ಕೀರ್ತನಕಾರರಾಗಿ ಮಾತ್ರವಲ್ಲದೆ, ಕನ್ನಡದ ಕವಿಗಳ ಸಾಲಿನಲ್ಲಿಯೂ ನಿಲ್ಲಬಲ್ಲವರಾಗಿದ್ದಾರೆ... ಕನಕದಾಸರು ತಮ್ಮ ಸುತ್ತಣ ಜೀವನದ ಬಗ್ಗೆ ಹೇಗೆ ಜೀವಂತಪ್ರಜ್ಞೆಯುಳ್ಳವರಾಗಿದ್ದರೋ ಅಷ್ಟರ ಮಟ್ಟಿಗೆ ತಮ್ಮ ಸುತ್ತಣ ಜನಭಾಷೆಯ ಬಗೆಗೆ ಎಚ್ಚರವನ್ನು ಕಾಯ್ದುಕೊಂಡಿದ್ದವರು. ಆದುದರಿಂದಲೇ ಅವರ ಕೃತಿಗಳ ಶೈಲಿ ಬಹುಮಟ್ಟಿಗೆ ದೇಶೀಯತೆಯ ಲಕ್ಷಣಗಳನ್ನು ತುಂಬಿಕೊಂಡಿದೆ. ಅವರ ಶೈಲಿಯಲ್ಲಿ 'ನಾಡೊಳಗುಳ್ಳ ಜಾಣಜಾಣೆಯರೊಡನಾಡುವ ಸವಿಮಾತುಗಳನ್ನು "ಪಾಡುಗಬ್ಬ"ವಾಗಿ ವಿಸ್ತರಿಸುವ ಜಾಣ್ಮೆ ಕಂಡುಬರುತ್ತದೆ. ಅವರಲ್ಲಿ ಕೇವಲ ಸುಶಿಕ್ಷಿತ ಸಮಾಜದ ಭಾಷೆ ಮಾತ್ರವಲ್ಲ; ಅಶಿಕ್ಷಿತ ಸಮಾಜದ ಭಾಷೆಯೂ ಯಥಾವತ್ತಾಗಿ ಬಂದಿದೆ"–ಎಂಬ ಪ್ರೊ. ಜಿ.ಎಸ್. ಶಿವರುದ್ರಪ್ಪನವರ ಸಮತೂಕದ ನುಡಿಗಳು ಸಂತ ಕವಿ ಕನಕದಾಸರ ವ್ಯಕ್ತಿತ್ವ ಮತ್ತು ಕವಿತ್ವದ ಹಿರಿಮೆಯನ್ನು ನಿರೂಪಿಸುತ್ತವೆ.

ಕನಕದಾಸರ ಸೂಕ್ತಿಸೌರಭವನ್ನು, ಉಕ್ತಿಸ್ವಾರಸ್ಯವನ್ನು ಮೂರು ರೀತಿಯಲ್ಲಿ ಗುರುತಿಸಬಹುದು. ಮೊದಲನೆಯದು, ಅವರು 'ಮೋಹನ ತರಂಗಿಣಿ', 'ನಳಚರಿತ್ರೆ' ಮತ್ತು 'ರಾಮಧಾನ್ಯ ಚರಿತ್ರೆ' ಕಾವ್ಯಗಳಲ್ಲಿ ಕವಿಯಾಗಿ ತೋರಿಸುವ ಪ್ರತಿಭಾವಿಲಾಸ. ಎರಡನೆಯದು, 'ಕೀರ್ತನೆಗಳು', 'ಹರಿಭಕ್ತಿಸಾರ' ಕೃತಿಗಳಲ್ಲಿ ಹಾಗೂ ಮುಂಡಿಗೆಗಳಲ್ಲಿ ಸಾಧಕನಾಗಿ ತೋರಿರುವ ಅನುಭಾವಸಂಪತ್ತು. ಮೂರನೆಯದು, ಶ್ರೀ ವ್ಯಾಸರಾಯರು ಪಂಡಿತರ ಸಮ್ಮುಖದಲ್ಲಿ ಇರಿಸಿದ ಪ್ರಶ್ನೆಗಳಿಗೆ ಉತ್ತರರೂಪವಾಗಿ ನಿವೇದಿಸಿದ ಮಾರ್ಮಿಕವಾದ ಅರ್ಥದಿಂದ ಕೂಡಿದ ನುಡಿಗಟ್ಟುಗಳು. ಮೇಲಿನ ಈ ಮೂರೂ ಸಂದರ್ಭಗಳಲ್ಲಿ ಕನಕದಾಸರು ಒಬ್ಬ ಸಂತಕವಿಯಾಗಿ, ಶ್ರೇಷ್ಠ ದಾರ್ಶನಿಕರಾಗಿ ನಿಲ್ಲುತ್ತಾರೆ.

ಕನಕದಾಸರ ಸೂಕ್ತಿಗಳಲ್ಲಿ ಎದ್ದುಕಾಣುವ ವಿಶೇಷವೆಂದರೆ, ಸರಳತೆ ಮತ್ತು

